# ಜಯಕರ್ನಾಟಕ

ಸಂಪುಟ ೧೫

ಸಂಚಿಕೆ ೭

JULY 1937

ANNAS SIX

ಶ್ರದ್ಧಾನಂದರ ಬಲಿದಾನ



ESTD. 1906

## CANARA BANK LIMITED

SCHEDULED MEMBER OF THE RESERVE BANK OF INDIA AND BOMBAY CLEARING HOUSE

ಕ್ಯಾನರಾ ಬ್ಯಾಂಕ್ ಲಿಮಿಟೆಡ್

| | |
|---|---|
| Subscribed Capital | Rs. 600,000 |
| Paid-up Capital | ,, 3,33,240 |
| Reserve Fund | ,, 4,50,000 |
| Deposits | ,, 79,64,000 |
| Total Working Capital | ,, 97,25,000 |

30 OFFICES AT-Fort Bombay, Mandvi Bombay, Bangalore, Chikmagalur, Hubli, Davangere, Mangalore, Udipi, Cochin, Calicut, Dharwar etc. etc.

CC-0. Jangamwadi Math Collection. Digitized by eGangotri




ಮೈಸೂರು ಚಂದನ ಸಾಬೂನು ನಿಮ
ಮೈಬಣ್ಣಕ್ಕೆ ಅಂದವನ್ನೂ ಕಾಂತಿ
ಯನ್ನೂ ಕೊಡುತ್ತದೆ.

**ಮೈಸೂರು ಚಂದನದ ಸಾಬೂನಿನಿಂದ** ಅ
ಕಾಂತಿಯು ಹೊಸದಾಗುವುದಲ್ಲದೆ, ಆಹ್ಲಾದಕರವೆನಿ
ವಂತೆ ನುಣುಪಾದುದೂ ನಿರಾಮಯವೂ ಆಗುವ
ಅದರ ಸಮೃದ್ಧವಾದ ಬೆಳ್ನನೆಯ ಬುರುಗು ರೋ
ರಂಧ್ರಗಳನ್ನೆಲ್ಲಾ ಹೊಕ್ಕು ಮೈದೊಗಲಿನ ಅಶು
ಯನ್ನೆಲ್ಲಾ ಕಳೆಯುವುದು. ಯಾ ಕೆಂದ

**ಮೈಸೂರು ಚಂದನದ ಸಾಬೂನು** ಜಗ
ಸಿದ್ಧವಾದ ಮೈಸೂರು ಚಂದನ ತೈಲದಿಂದ ತಯಾ
ಸಲ್ಪಟ್ಟದೆ. ಇದಕ್ಕಾಗಿಯೇ ಲಲನೆ ರು ಈ
ಸುಗಂಧಮಯ ಸಾಬೂನನ್ನೇ ಇ ಂದಿಗೂ
ಉಪಯೋಗಿಸುವರು;—ತಮ್ಮ ಲಾವ ವನ್ನು
ಅದು ಕಾಪಾಡುವುದೆಂದು ಅವರು ಬಲ್ಲರು.

**ಎಲ್ಲೆಲ್ಲಿಯೂ ದೊರೆಯುತ್ತದೆ.**

ಗವರ್ನ್‌ಮೆಂಟ್
ಸೋಪ್ ಫ್ಯಾಕ್ಟರಿ,
ಬೆಂಗಳೂರು.

MYSORE SANDAL SOAP

ಈ ಪತ್ರಿಕೆಯನ್ನು ಮಾಧವ ನಾರಾಯಣ ಮಂಗಳವೇಡೇಕರ, ಇವರು ಧಾರವಾಡದ ... ಮುದ್ರಣಾಲಯದಲ್ಲಿ ಮುದ್ರಿ
... ಪಾಂಡುರಂಗ ಬೆಳಗಾಂವಕರ ಇವರು ಧಾರವಾಡದ ...

CC-0. Jangamwadi Math Collection. Digitized by eGangotri

# ಜಯ ಕರ್ನಾಟಕ

೧೫ನೆಯ ಸಂಪುಟ—ಉತ್ತರಾರ್ಧ

V. 15. 2

( ೧೯೩೭ನೆಯ ಜೂಲೈ—ಡಿಸೆಂಬರ )

1937

ಸಂಪಾದಕರು:

ಶ್ರೀ. ಬೆಳಗಾವಿ ರಾಮಚಂದ್ರರಾಯರು ಬಿ. ಎ.

ಧಾರವಾಡ

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI.
Acc. No. 3670 4833

ವಾರ್ಷಿಕ ಚಂದಾ ರೂ. ೪—೮—೦ (ಹಿಂದುಸ್ತಾನ); ರೂ. ೭—೮—೦ (ಪರದೇಶ)

CC-0. Jangamwadi Math Collection. Digitized by eGangotri

ಸಂಪುಟ ೧೫ ೧೯೩೭ನೆಯ ಇಸ್ವಿ

# ಪರಿವಿಡಿ

ಸಂಚಿಕೆ ೭—೧೨ ಜುಲೈ—ಡಿಶೆಂಬರ



033m44
G7.15.2



JAGADGURU VISHWARADHYA
SIMHASAN JNANAMANDIR
LIBRARY
Jangamawadi Math, Varanasi
Acc. No. 4833

CC-0. Jangamwadi Math Collection. Digitized by eGangotri

ಕತೆ-ಹರಟೆ-ನಾಟಕಗಳು



ವೀಣಾವಿತಾನ



೫ ಜ್ಞಾನ-ವಿಜ್ಞಾನ



CC-0. Jangamwadi Math Collection. Digitized by eGangotri

## ಸಾಹಿತ್ಯಗೋಷ್ಠಿ



## ವಿವಿಧ



## ವಿಚಾರವೇದಿಕೆ



CC-0. Jangamwadi Math Collection. Digitized by eGangotri

## ಜನಪದಸಾಹಿತ್ಯ



## ಚಿತ್ರಗಳು



CC-0. Jangamwadi Math Collection. Digitized by eGangotri

## ನಮ್ಮ ಬಳಗ



CC-0. Jangamwadi Math Collection. Digitized by eGangotri



CC-0. Jangamwadi Math Collection. Digitized by eGangotri

# ಜಯಕರ್ನಾಟಕ

## ಚಂದಾದಾರರಲ್ಲಿ

**ವಾರ್ಷಿಕ ಚಂದಾ (ಅಂಚೆಯವೆಚ್ಚ ಸೇರಿ) ಒಳದೇಶ ೪-೮-೦; ಪರದೇಶ ೬-೦-೦**

**ಅರ್ಧವಾರ್ಷಿಕ—ಒಳದೇಶ ೨-೪-೦; ಪರದೇಶ ೨-೮-೦; ಬಿಡಿ ಸಂಚಿಕೆ ೦-೬-೦; ವ್ಹಿ.ಪಿ.ವೆಚ್ಚ ಬೇರೆ.**

'ಜಯಕರ್ನಾಟಕ'ವು ಪ್ರತಿತಿಂಗಳ ಮೊದಲನೆಯ ತಾರೀಖಿಗೆ ಪ್ರಕಟವಾಗುವುದು. ಬೇಕಾದ ಸಂಚಿಕೆಯಿಂದ ಚಂದಾದಾರರಾಗಲು ಬರುವುದು. ಚಂದಾಹಣವನ್ನು ಮುಂಚಿತವಾಗಿಯೇ ಕಳಿಸಬೇಕು. ಇಲ್ಲವೆ ವ್ಹಿ. ಪಿ. ಯಿಂದ ತರಿಸಿಕೊಳ್ಳಬಹುದು. ಚಂದಾ ಅವಧಿ ಮುಗಿಯುವ ಮೊದಲು ಒಂದು ತಿಂಗಳು ಚಂದಾದಾರರಿಗೆ ತಿಳಿಸಲಾಗುವುದು. ಪತ್ರಿಕೆ ಬೇಡವಾದವರು ಹಾಗೆ ತಿಳಿಸಬೇಕು. ಇಲ್ಲದಿದ್ದಲ್ಲಿ ಮುಂದಿನ ವರ್ಷದ ಚಂದಾ ಹಣಕ್ಕಾಗಿ ವ್ಹಿ. ಪಿ. ಯನ್ನು ಕಳಿಸಲಾಗುವುದು. ಬೇಡವಾದವರು ಮುಂಚಿತ ತಿಳಿಸುವುದರ ಅಗತ್ಯದ ಕಡೆಗೆ ಚಂದಾದಾರರ ಲಕ್ಷ್ಯವನ್ನು ಎಳೆಯುತ್ತೇವೆ. ಯಾಕೆಂದರೆ ಅದರಿಂದ ವ್ಯರ್ಥ ವ್ಹಿ. ಪಿ. ವೆಚ್ಚಕ್ಕೆ ಗುರಿಯಾಗುವುದು ನಮಗೆ ತಪ್ಪುವುದು. ಪತ್ರಿಕೆ ಬಾರದಿದ್ದವರು ಆ ತಿಂಗಳ ೧೫ನೆಯ ತಾರೀಖಿನೊಳಗೆ ತಿಳಿಸಬೇಕು. ಮುಂದಿನ ತಕರಾರುಗಳಿಗೆ ನಾವು ಹೊಣೆಗಾರರಲ್ಲ.

## ಜಾಹೀರಾತುದಾರರಲ್ಲಿ

ಜಯಕರ್ನಾಟಕವು ಕರ್ನಾಟಕದಲ್ಲೆಲ್ಲ ಸಂಚರಿಸುವುದಲ್ಲದೆ, ಪರಪ್ರಾಂತ-ಪರದೇಶಗಳಲ್ಲಿಯೂ ಹೋಗುವುದರಿಂದ, ವ್ಯಾಪಾರ ವ್ಯವಹಾರಗಳ ಪ್ರಚಾರಕ್ಕೆ ಉತ್ತಮ ಮಾಧ್ಯಮ.

ಜಾಹೀರಾತುದಾರರು ೨೫% ಹಣವನ್ನು ಮುಂಗಡ ಕಳಿಸಲೇ ಬೇಕು. ಒಂದೇ ಸಲ ಪ್ರಕಟನೆ ಕೊಡಲಪೇಕ್ಷಿಸುವವರು ಇಡಿಯ ಹಣವನ್ನು ಕಳಿಸಬೇಕು. ೨೦ನೆಯ ತಾ. ನ ಒಳಗಾಗಿ, ಜಾಹೀರಾತು ಕಾರ್ಯಾಲಯಕ್ಕೆ ತಲುಪಬೇಕು.

### ಪ್ರಕಟನೆಯ ದರಗಳು

| | ವರ್ಷ. | ೬ ತಿಂಗಳು. | ೩ ತಿಂಗಳು. | ೧ ಸಾರೆ. |
|---|---|---|---|---|
| ಒಂದು ಪುಟಕ್ಕೆ | ೧೮೦ ರೂ. | ೯೫ ರೂ. | ೫೦ ರೂ. | ೨೦ ರೂ. |
| ಅರ್ಧ ಪುಟಕ್ಕೆ | ೯೫ ,, | ೫೦ ,, | ೩೦ ,, | ೧೨ ,, |
| ೧\|೪ ಪುಟಕ್ಕೆ | ೫೦ ,, | ೩೦ ,, | ೨೦ ,, | ೬ ,, |
| ೧\|೮ ಪುಟಕ್ಕೆ | ೩೦ ,, | ೨೦ ,, | ೧೨ ,, | ೪ ,, |

ವಿಶೇಷ ಸ್ಥಳ ಬೇಕಾದಲ್ಲಿ ಮತ್ತು ಹೆಚ್ಚಿನ ವಿವರಗಳಿಗಾಗಿ ಬರೆದು ತಿಳಿದುಕೊಳ್ಳಬೇಕು.

## ಬರೆಹಗಾರರಲ್ಲಿ

(೧) ತಮ್ಮ ಲೇಖನವು ಸ್ವೀಕೃತ-ಅಸ್ವೀಕೃತ ಎಂಬ ಬಗ್ಗೆ ತಿಳಿದುಕೊಳ್ಳಲು ಬಯಸುವ ಬರೆಹಗಾರರು, ತಮ್ಮ ಲೇಖನದೊಡನೆ ಅಂಚೆಯ ವೆಚ್ಚಕ್ಕಾಗಿ ಮೂರು ಬಿಲ್ಲೆಗಳ ಟಿಕೀಟೊಂದನ್ನು ಇಡಬೇಕು. (೨) ತಮ್ಮ ಲೇಖನಗಳನ್ನು ಮರಳಿ ಬಯಸುವವರು ಅದಕ್ಕೆ ತಗಲುವ ಅಂಚೆವೆಚ್ಚದಷ್ಟು ಟಿಕೀಟುಗಳನ್ನು ಅದರೊಂದಿಗೆ ಇಡಬೇಕು. (೩) ಲೇಖನಗಳನ್ನು ಒಂದೇ ಮಗ್ಗಲಿಗೆ ಸುವಾಚ್ಯವಾದ ಅಕ್ಷರಗಳಲ್ಲಿ ಬರೆಯಬೇಕು. ಸಾಕಷ್ಟು ಮಾರ್ಜಿನ್ ಬಿಡಬೇಕು. (೪) ಲೇಖನದ ಹಸ್ತಪ್ರತಿಯು ಜ. ಕ. ದ ನಾಲ್ಕು ಪುಟಗಳನ್ನು ಸಾಮಾನ್ಯವಾಗಿ ಮಿಕ್ಕಬಾರದು. (೫) ಜಯಕರ್ನಾಟಕಕ್ಕೆ ಬರುವ ಲೇಖನಗಳು ಜಯಕರ್ನಾಟಕಕ್ಕೆಂದೇ ಇರಬೇಕು. ಇಲ್ಲಿ ಪ್ರಕಟವಾಗುವ ಮೊದಲು ಇನ್ನೆಲ್ಲಿಯೂ ಪ್ರಕಟವಾಗಿರಬಾರದು. ಆ ಮೇಲೂ ಬೇರೆಕಡೆ ಪ್ರಕಟವಾಗುವ ಪಕ್ಷದಲ್ಲಿ ಸಂಪಾದಕರ ಅನುಮತಿಯನ್ನು ಪಡೆಯಬೇಕು. (೬) ಜಯಕರ್ನಾಟಕಕ್ಕೆಂದು ಬಂದ ಲೇಖನವು ಉದ್ಧೃತ ಇಲ್ಲವೆ ಅನ್ಯಭಾಷೆಯಿಂದ ಪರಿವರ್ತಿತವಿದ್ದಲ್ಲಿ ಮೂಲವನ್ನು ಉಲ್ಲೇಖಿಸಬೇಕು.

## ಸಾಮಾನ್ಯ

ಚೆಕ್ಕುಗಳು, ಮನಿಯಾರ್ಡರುಗಳು, ಬೇರೆ ಬಗೆಯ ಹಣದ ವ್ಯವಹಾರ ಇವನ್ನು ಮತ್ತು ಲೇಖನಾದಿಗಳ ಪತ್ರವ್ಯವಹಾರವನ್ನು "ಸಂಪಾದಕ ಜಯಕರ್ನಾಟಕ, ಧಾರವಾಡ" ಇವರ ಹೆಸರಿನಲ್ಲಿಯೂ, ಜಾಹೀರಾತಿನ ಪತ್ರವ್ಯವಹಾರವನ್ನು "ಕಾರ್ಯದರ್ಶಿ, ಜ. ಕ. ಪ್ರಕಟನಾವಿ ಭಾಗ" ಇವರ ಹೆಸರಿನಲ್ಲಿಯೂ, ಬೇರೆ ಕಾರ್ಯಾಲಯದ ವ್ಯವಹಾರವನ್ನು "ವ್ಯವಸ್ಥಾಪಕ"ರ ಹೆಸರಿನಲ್ಲಿಯೂ ನಡೆಯಿಸಬೇಕು.

**ಜಯಕರ್ನಾಟಕ ಕಾರ್ಯಾಲಯ, ಧಾರವಾಡ**

CC-0. Jangamwadi Math Collection. Digitized by eGangotri

# ಪರಿವಿಡಿ



———

CC-0. Jangamwadi Math Collection. Digitized by eGangotri

ಬಿಡುವಿನ
ಹೊತ್ತನ್ನು
ಆನಂದದಲ್ಲಿ
ಕಳೆಯಲು




ಮತ್ತು




ನಿಮ್ಮ
ಮನೆಯಲ್ಲಿ
ಅಗತ್ಯ
ಬೇಕು.








ಇದಲ್ಲದೆ ಮುಂಬಯಿಯಲ್ಲಿ ದೊರೆಯುವ ಬೇರೆ ಎಲ್ಲ ಬಗೆಯ ಮಾಲನ್ನು ಅಲ್ಪ ಕಮಿಶನ್ನಿನ ಮೇಲೆ,

ಅಗ್ಗವಾಗಿ ಕೊಂಡುಕೊಂಡು ಅತ್ಯಂತ ಜಾಗರೂಕತೆಯಿಂದ ಮತ್ತು ಹೊತ್ತಿಗೆ ಸರಿಯಾಗಿ ಕಳಿಸುತ್ತೇವೆ.

ಹೆಚ್ಚಿನ ವಿವರಗಳಿಗಾಗಿ ಹೊಸ ದೊಡ್ಡ ೧೦೦ ಪುಟಗಳ ಸಚಿತ್ರ ಮರಾಠಿ ಕ್ಯಾಟಲಾಗನ್ನು, ೨ ಆಣೆಯ ಅಂಚೇಚೀಟಿ ಕಳಿಸಿದಲ್ಲಿ ಉಚಿತವಾಗಿ ಕಳಿಸಲಾಗುವುದು.

## ಗೋಪಾಳ ಸಖಾರಾಮ ಮತ್ತು ಕಂಪನಿ,

೩೯೭-೯೯ ಕಾಳಬಾದೇವಿ ರೋಡ
ಮುಂಬಯಿ ನಂ. ೨.

## The Guardian of India Insurance Co. Ltd.

**BOMBAY** ★ **MADRAS**

### ೧೯೩೭ರಲ್ಲಿ ಸಂಪಾದಿಸಿದ ವಿಮಾವ್ಯವಹಾರ

### ರೂ. ೪೭,೦೦,೦೦೦

**ಉತ್ತರ ಕರ್ನಾಟಕದಲ್ಲೆಲ್ಲ ನಿಶ್ಚಿತ ವೇತನದ ಮೇಲೆ ಆರ್ಗನೈಜರರಾಗಿ ಕೆಲಸ ಮಾಡುವವರು ಬೇಕಾಗಿದ್ದಾರೆ.**

ಈ ತಿಂಗಳಲ್ಲಿ ಮುಖ್ಯ ಕಾರ್ಯಾಲಯದ ಮ್ಯಾನೇಜರರು ಕರ್ನಾಟಕದಲ್ಲಿಯೂ ದಕ್ಷಿಣಹಿಂದುಸ್ತಾನದಲ್ಲಿಯೂ ಸಂಚಾರ ಮಾಡತಕ್ಕವರಿದ್ದಾರೆ. ಕಂಪನಿಯ ಪರವಾಗಿ ಕೆಲಸಮಾಡಲಿಚ್ಛಿಸುವವರು, ಮುಂಚಿತವಾಗಿ ಬರೆದು ಕೇಳಿಕೊಂಡು, ಮ್ಯಾನೇಜರರನ್ನು ಕಂಡು ಮಾತನಾಡಿಕೊಳ್ಳಬಹುದು.

ಹೆಚ್ಚಿನ ವಿವರಗಳಿಗಾಗಿ ಕೆಳಗಿನ ವಿಳಾಸಕ್ಕೆ ಬರೆಯಿರಿ:—

**The Guardian of India Insurance Co., Ltd.**
Patel House, Church-gate Street
Fort, BOMBAY



CC-0. Jangamwadi Math Collection. Digitized by eGangotri




# ಜಯ ಕರ್ನಾಟಕ.

| ಸಂಪುಟ | ಈಶ್ವರಸಂವತ್ಸರದ ಜ್ಯೇಷ್ಠ ಬಹುಳ ಸಪ್ತಮಿ | ಸಂಚಿಕೆ |
| --- | --- | --- |
| ೧೫ | ೧—೭—೧೯೩೭ | ೭ |


# ಮಹಾನುಭಾವ ಬಸವಣ್ಣನವರ ಸಂದೇಶ

## ೯

 "ಕಿವಿಯಾರೆ ಕೇಳಿದ ಶಿವಶರಣ" 

ಇದೊಂದು ಹೊಸಮಾದರಿಯ ಲೇಖನ. ಭಾರತದಲ್ಲಿ ಬೇರೆ ಬೇರೆ ತತ್ತ್ವಜ್ಞಾನಿಗಳು ಹುಟ್ಟಿ, ದೇಶ–ಕಾಲ–ಪರಿಸ್ಥಿತಿಗನುಸಾರವಾಗಿ ತಮ್ಮ ಕಾಲದ ಜನತೆಯ ಮನಸ್ಸನ್ನು ತಿದ್ದಲು ಹವಣಿಸಿದರು. ಸತ್ಯದಲ್ಲಿ ಎರಡು ಬಗೆ: ತ್ರಿಕಾಲದಲ್ಲಿಯೂ ಇರುಗುತ್ತಿರುವಂತಹ ಸನಾತನ ಸತ್ಯ; ಅಡಸಿದ ಆಪತ್ತಿಯನ್ನು ದಾಂಟುವುದಕ್ಕಾಗಿ ದೇಶ–ಕಾಲ–ಪರಿಸ್ಥಿತಿಯನ್ನನುಸರಿಸಿ ಸ್ವೀಕರಿಸಿದ ಸಾಂದರ್ಭಿಕ ಸತ್ಯ. ಸಾಂದರ್ಭಿಕ ಸತ್ಯವನ್ನು ಸನಾತನ ಸತ್ಯವೆಂದು ಭಾವಿಸುತ್ತಿರುವುದರಿಂದಲೇ ಭಾರತೀಯ ಸಮುದಾಯವಿಂದು ಪ್ರಗತಿಯನ್ನು ಕಾಣದೆ ಬಿದ್ದುಕೊಂಡಿದೆ.

ವೈಶಾಖ ಶುದ್ಧ ದ್ವಿತೀಯೆ; ರಾತ್ರಿ ೧೧ ಗಂಟೆಯಾಗಿದೆ. ಬಸವಜಯಂತಿಯ ಕಾರ್ಯಕಲಾಪಗಳನ್ನು ಮುಗಿಸಿಕೊಂಡು, ಚಿಕ್ಕಮಠದ ಅಂಗಳದಲ್ಲಿ ಶ್ರೀಗುರುಮೂರ್ತಿಯು, ಗಾಳಿಗೆ ಮೈಯೊಡ್ಡಿ ಗದ್ದುಗೆಯ ಮೇಲೆ ವಿಶ್ರಮಿಸುತ್ತಲಿದೆ. ಶ್ರೀಪಾದಂಗಳ ಅಡಿಯಲ್ಲಿ—ಹಾವುಗೆಗಳ ಅಕ್ಕಪಕ್ಕದಲ್ಲಿ ನಾನು ಮತ್ತು ಇನ್ನೊಬ್ಬ ಭಕ್ತನು, ಸೇವಾಭಾವದಿಂದ ಗುರುಗಳಲ್ಲಿ ನೆಟ್ಟ ನೋಟವುಳ್ಳವರಾಗಿ, ಏನಪ್ಪಣೆ ಕೊಡಿಸುವರೊ—ಎಂಬ ಲವಲವಿಕೆಯಿಂದ ಎದುರುನೋಡುತ್ತಲಿದ್ದೇನೆ.

ಸ್ವಾಮಿಗಳು ಆಗ ಆಗ ಭಾವಾವೇಶದಿಂದ ಮೆಯ್ಮರೆಯುವುದನ್ನು ನಾನು ಈ ಮೊದಲು ಎಷ್ಟೋಸಲ ಕಂಡಿದ್ದೇನೆ. ಆದರೆ ಇಂದಿನಷ್ಟು ಅವರು ಭಾವನಿರ್ಭರರಾದುದನ್ನು ಈ ಮೊದಲು ಎಂದೂ ನೋಡಿರಲಿಲ್ಲ. ಸ್ವಾಮಿಯವರ ವಯಸ್ಸು ಚಿಕ್ಕದು. ಮೂವತ್ತೈದರ ಸುಮಾರು ಇರಬಹುದು. ಆದರೂ ಶಿವಯೋಗದಲ್ಲಿ ಇವರನ್ನು ಸರಿಗಟ್ಟುವವರು ಬೇರೆ ಯಾರೂ ಇಲ್ಲ. 'ಗುಹೇಶ್ವರ' ನು ಇವರ ಇಷ್ಟಲಿಂಗ. ಅತೀವ ಏಕಾಂತ ಪ್ರೀತಿ. ಆದುದರಿಂದಲೆ ಇವರ ಕೀರ್ತಿಸುಗಂಧವು ಹೊರಗೆ ಹರಡಿಲ್ಲ. ವೀರಶೈವದ ತತ್ತ್ವಜಿಜ್ಞಾಸುಗಳಾದ

CC-0. Jangamwadi Math Collection. Digitized by eGangotri

ಕೆಲವರನ್ನು ಬಿಟ್ಟರೆ, ಇವರ ಯೋಗ್ಯತೆಯ ನಿಜವಾದ ಕಲ್ಪನೆಯಿದ್ದವರು ಬಹಳ ಸ್ವಲ್ಪಜನ. ಬೆಂಗಳೂರಿನ ಎಂ. ಆರ್. ಶ್ರೀನಿವಾಸ ಮೂರ್ತಿಗಳೆಂಬವರು, ತಾವು ಬರೆದ 'ಭಕ್ತಿಭಂಡಾರಿ ಬಸವಣ್ಣನವರು' ಎಂಬ ಪುಸ್ತಕವನ್ನು ಅಚ್ಚು ಹಾಕಿಸುವ ಮೊದಲು ನಮ್ಮ ಗುರುಗಳ ಕಣ್ಣಿಗೆ ಹಾಕಿ, ಅವರ ಸಲಹೆಗಳ ಲಾಭವನ್ನು ಪಡೆದುದುಂಟು. ಸ್ವಾಮಿಗಳು ಪ್ರಸಿದ್ಧಿಗೆ ಹೇಸಿಕೊಳ್ಳುವವರಾದುದರಿಂದ, ತಮ್ಮ ಹೆಸರನ್ನು ಮುನ್ನುಡಿಯಲ್ಲಾಗಲಿ, ಬೇರೆ ಯಾವ ಬಗೆಯಿಂದಾಗಲಿ, ಜನರೆದುರಿಗೆ ತರಲಾಗದೆಂಬ ಕಟ್ಟಪ್ಪಣೆಯನ್ನಿತ್ತಿರುವರು. ಪಾಪ! ಶ್ರೀನಿವಾಸಮೂರ್ತಿಗಳಿಗೆ ಅದನ್ನು ಕಾಣಿಸುವುದಕ್ಕೆ ಅಸಾಧ್ಯವಾಗಿಹೋಯಿತು.

ನಮ್ಮ ಗುರುಮೂರ್ತಿಯು ತುಂಬ ಸುಪ್ರಸನ್ನವಾಗಿದ್ದಾಗ ಸ್ವಲ್ಪ ಎದೆ ಗಟ್ಟಿಮಾಡಿಕೊಂಡು ಕೇಳಿದ್ದೇನೆ: "ಮಹಾಸ್ವಾಮಿಯವರೆ, ಶಿವಯೋಗರಹಸ್ಯವು ತಮಗೆ ಅಂಗೈನೆಲ್ಲಿ; ಷಟ್‌ಸ್ಥಲದ ಅನುಭಾವದಲ್ಲಿ ತಾವು ಅತ್ಯುಚ್ಚಸ್ಥಾನದಲ್ಲಿದ್ದವರು, ಹೀಗಿದ್ದು ಸಂಸಾರದ ಹಳ್ಳದಲ್ಲಿ ಮುಗ್ಗರಿಸಿ ಬೀಳುತ್ತಲಿರುವ ಬಳ್ಳಿಗುರುಡರಿಗೆ ದಾರಿತೋರಲು ತಾವು ಮುಂದೆ ಬಾರದೆ, ಈ ಚಿಕ್ಕಮಠದ ಗವಿಯಲ್ಲಿ 'ಸ್ವ'-ಸ್ಥರಾಗಿರಲು ಕಾರಣವೇನೆಂಬುದನ್ನು ಅಪ್ಪಣೆಕೊಡಿಸಿ, ಭಕ್ತನ ತಿಳಿಗೇಡಿತನವನ್ನು ಹೋಗಲಾಡಿಸುವ ಕೃಪೆ ಮಾಡಬಹುದೆ?"

ಆಗ ಮಹಾಸ್ವಾಮಿಗಳು ಅಮೃತವಾಣಿಯಿಂದ ಒಡನುಡಿದರು: "ಅಯ್ಯಾ, ಹೊತ್ತು ನೋಡಿ ಮಾತನಾಡಬೇಕು; ಹದನೋಡಿ ಬಿತ್ತಬೇಕು. ಮನೆಯಲ್ಲಿ ಬೇಕಾದಷ್ಟು ಬೀಜದ ಚೀಲಗಳಿವೆಯೆಂದು ಹಾಳು-ಮಾಳಗಳ ಮೇಲೆ ಸೂರೆಮಾಡಿದರೆ ಬರುವ ಫಲವೇನಯ್ಯಾ? ಯಾವುದಕ್ಕೂ ಕಾಲವು ಬೇಕು. ವೀರಶೈವವು ಶಾಶ್ವತಧರ್ಮ; ವಿಶ್ವಧರ್ಮ. ಅದರ ತತ್ತ್ವಗಳ ಬೆಳಕಿನಿಂದಲೆ ಜಗತ್ತಿನ ಸಮಸ್ಯೆಗಳೆಲ್ಲ ಬಿಡತಕ್ಕವುಗಳಿವೆ. ಈಗಿನ ಈ 'ಸೋಶಾಲಿಝಂ' 'ಕಮ್ಯುನಿಝಂ' 'ಫ್ಯಾಸಿಝಂ' ಮೊದಲಾದ 'ಇಝಂ'ಗಳೂ, ಜಾತಿಮತಗಳ ಹಾಕಾಟ, ಕಿಕ್ಕಾಟಗಳೂ ಮಾಯವಾಗಬೇಕಾದರೆ, ವೀರಶೈವದ ನಿಜವಾದ ತತ್ತ್ವಗಳ ಪ್ರಚಾರವಾಗಬೇಕು. ಜಗತ್ತಿನಲ್ಲಿ ಶಾಂತಿ-ಸೌಖ್ಯಗಳು ನೆಲೆಗೊಳ್ಳಬೇಕಾಗಿದ್ದರೆ ಇದೊಂದೇ ಹಾದಿಯೆಂದು ನನ್ನ ಮನವರಿಕೆಯಾಗಿದೆ. ನಾನು ಇದರ ಸಿದ್ಧಿಗಾಗಿಯೆ ಹಗಲಿರುಳೂ ತಪಿಸುತ್ತಲಿದ್ದೇನೆ.

"ಮನೆಗೆದ್ದು ಮಾರುಗೆದೆಯಬೇಕು. ಮೊದಲು ನನ್ನ ಸಿದ್ಧತೆ; ಆದಾಗಿದೆಯೆಂದು ಮನವರಿಕೆಯಾಗುತ್ತಲೆ ನನ್ನವರೆಂಬವರ ಸಿದ್ಧತೆ. ನಾನೀಗ ಈ ಎರಡನೆಯ ಕೆಲಸಕ್ಕೆ ಕೈಯಿಕ್ಕಬಹುದೇನೋ....ಎಂಬ ವಿಚಾರದಲ್ಲಿದ್ದೇನೆ. ನನ್ನ ವೀರಶೈವಸಮಾಜವೇ ಇನ್ನೂ ತನ್ನ ಅಹಂಕಾರ, ದುರಭಿಮಾನಗಳನ್ನು ತೊರೆದು ಮುಂದಡಿಯಿಡಲು ಸಿದ್ಧವಾಗಿರದಿದ್ದರೆ, ವೀರಶೈವ ತತ್ತ್ವಜ್ಞಾನದ ಮೇಲ್ಮೆಯನ್ನು ನಾನಾವ ಬಾಯಿಂದ ಜಗತ್ತಿಗೆ ಸಾರಲಿ? ನನ್ನ ವೀರಶೈವರು ಜಗತ್ತಿನಲ್ಲಿ ಶ್ರೇಷ್ಠತರಗತಿಯವರು, ಜಗತ್ತಿನಲ್ಲಿ ಶ್ರೇಷ್ಠವಿಚಾರಿಗಳೆನಿಸುವವರಾದರೆ, ಈ ವೀರಶೈವ ತತ್ತ್ವಜ್ಞಾನಕ್ಕೂ ತಾನೆ ಮನ್ನಣೆಯು ದೊರೆಯುವ ಹಾಗಿದೆ. ಹೆರವರಿಗೆ ತಾನು ವೀರಶೈವನೆನಿಸಿಕೊಳ್ಳಲಿಕ್ಕೆ ಹೆಮ್ಮೆಯುಂಟಾಗಬೇಕು.... ಹೀಗೆ ನಮ್ಮವರು ಆಚಾರದಲ್ಲಿ—ವಿಚಾರದಲ್ಲಿ—ಉಚ್ಚಸ್ಥಿತಿಗೆ ಬಂದುದಾದರೆ, ಹೇಗೆ ತಾನೆ ನಮ್ಮ ಧರ್ಮವು ಲೋಕಪ್ರಿಯವಾಗದಿದ್ದೀತು. ವೀರಶೈವ ತತ್ತ್ವಜ್ಞಾನದ ಅನುಷ್ಠಾನದಿಂದ — ಅದನ್ನು ಪ್ರಪಂಚದಲ್ಲಿ ಅರಿತು ಆಚರಿಸುವುದರಿಂದ ಇಂತಹದೊಂದು ಸಮಾಜವು ಉನ್ನತಸ್ಥಿತಿಗೆ ಬಂದಿದೆಯೆಂಬುದನ್ನು ನಾನು ಬೆರಳಿಟ್ಟು ತೋರಿಸುವಂತೆ — ಜಗತ್ತಿನ ಕೈಗನ್ನಡಿಯಾಗುವಂತೆ — ನನ್ನ ಸಮಾಜವು ಉಚ್ಚಸ್ಥಿತಿಗೆ ಬರಬೇಕೆಂದು ನನ್ನ ಹಂಬಲವಿದೆ. ಮೇಲ್ಮೆಗೆ ಬರಬೇಕಾಗಿದ್ದರೆ ತನ್ನೊಳಗಿನ ಕೀಳ್ಮೆಯನ್ನು ತೊಡೆದು ಹಾಕಬೇಕಾದುದು ಮೊಟ್ಟಮೊದಲನೆಯ ಕೆಲಸ; ಆ ಕೆಲಸವನ್ನು ಮಾಡುವುದು ಬೆಂಕಿಯೊಡನಾಟವಿದ್ದಂತೆ. ಯಾರೇ ಆಗಲಿ, ಹೊಗಳಿದರೆ ಹಿಗ್ಗಿನಿಂದ ಕೇಳುವರು; ಆದರೆ 'ನಿಮ್ಮಲ್ಲಿ ಇಂತಹ ಕುಂದು-ಕೊರತೆಗಳಿವೆ. ಅವನ್ನಿಷ್ಟು ತಿದ್ದಿಕೊಳ್ಳಿ!' ಎಂದು ಹೇಳಹೋದರೆ ಕಿಡಿಕಿಡಿಗೊಳ್ಳುವರು. ಕಂಡುದನ್ನಾಡಿದರೆ ಕೆಂಡದಂತಹ ಸಿಟ್ಟು. ಈಗ ನನಗೆ ಬಂದಿರುವುದು ಇದೇ ಸಂಕಟ! ಹಿಡಿದರೆ ಕಚ್ಚುವುದು; ಬಿಟ್ಟರೆ ಓಡುವುದು. ನಮ್ಮಲ್ಲಿ ಕೆಲವು ಜನ ಶರಣರು ಸಂದೇಶಗಳನ್ನು ಜನರಿಗೆ ಹೇಳಿ, ಅವರನ್ನು ಜಾತಿಯ ದುರಭಿಮಾನದ ಕೊಳಚೆಯಲ್ಲಿ ಕೆಡಹುತ್ತಲಿದ್ದಾರೆ! ವೀರಶೈವ ಧರ್ಮದ ಬಗ್ಗೆ ತಾನು ತುಂಬ ಅಭಿಮಾನಿಯೆಂದು ತೋರಿಸಿಕೊಳ್ಳುವುದಕ್ಕೆ, ನಮ್ಮಲ್ಲಿರುವ ದೋಷಗಳನ್ನೂ ಗುಣಗಳೆಂದೇ ಸಾಧಿಸುವ ಹಟವಾದಿತನವು ಎಲ್ಲೆಲ್ಲಿಯೂ ಕಂಡುಬರುತ್ತಲಿದೆ. ಹೀಗಾದರೆ ನಾವು ಸುಧಾರಿಸುವ ಬಗೆಯಾವುದಯ್ಯಾ?

CC-0. Jangamwadi Math Collection. Digitized by eGangotri

" ಅಂದು ಶ್ರೀನಿವಾಸಮೂರ್ತಿಗಳು ತಮ್ಮ ಪುಸ್ತಕದ ವಿಚಾರದಲ್ಲಿ ಮಾತನಾಡಲು ಬಂದಾಗ ಆದ ಸಂಭಾಷಣೆಯನ್ನು ನೀನು, ಕೇಳಿರಬೇಕಲ್ಲವೆ? ಅವರು ಒಬ್ಬ ಸ್ವಾಮಿಗಳೆಂತಿದ್ದಾರಯ್ಯಾ. ನಮ್ಮ ತತ್ತ್ವಜ್ಞಾನವು ನಾಳೆ ವಿಶ್ವಧರ್ಮವಾಗಬಲ್ಲುದೆಂಬುದಕ್ಕೆ ಶ್ರೀನಿವಾಸಮೂರ್ತಿ, ದಿವಾಕರ ರಂಗರಾಯರಂತಹ ಆಧುನಿಕ ವಿದ್ವಾಂಸರು, ಮೇಲಾಗಿ ಮಾಧ್ವರು, ಇವರೇ ಸಾಕ್ಷಿಯಾಗಿದ್ದಾರೆ. ನಮ್ಮ ತತ್ತ್ವಜ್ಞಾನವು ಇವರ ಮನಸ್ಸನ್ನು ಸೆಳೆದಿದೆಯೆಂಬ ಸಂಗತಿಯೆ ವೀರಶೈವ ತತ್ತ್ವಜ್ಞಾನದ ಶ್ರೇಷ್ಠತೆಯನ್ನು ತೋರಿಸುವುದಕ್ಕೆ ಸಾಕಾಗಿದೆ. ಗುಣಗಳೊಡನೆ ನಮ್ಮಲ್ಲಿ ಇರುವ ಕೊರತೆಗಳನ್ನೂ ಇವರು ಬಲ್ಲರು. ಆದರೆ ಅವನ್ನು ಬಹಿರಂಗವಾಗಿ ಉಸುರುವುದು ಅವರಿಗೆ ಕಷ್ಟವಾಗಿದೆ. ಮೊನ್ನೆ ಗುಹೇಶ್ವರನ ದರ್ಶನಕ್ಕೆ ಬಂದಾಗ ರಂಗರಾಯರೂ, ಅಂದು ಶ್ರೀ. ಮೂರ್ತಿಯವರೂ ಹೇಳಿದುದರ ಸಾರಾಂಶವಿಷ್ಟು: " ವೀರಶೈವ ಧರ್ಮದೊಳಗಿನ ಅಲ್ಪಸ್ವಲ್ಪ ಮಾತುಗಳನ್ನು ಮಾರ್ಪಡಿಸಿದರೆ ಅದು ಇಂದಿಲ್ಲ ನಾಳೆ ವಿಶ್ವಧರ್ಮವಾಗುವ ಯೋಗ್ಯತೆಯುಳ್ಳದ್ದಾಗುವ ಹಾಗಿದೆ. ನಾವು ಅವುಗಳನ್ನು ಹೇಳಿದರೆ ನಮ್ಮನ್ನು ತಪ್ಪುತಿಳಿದುಕೊಳ್ಳುವ ಸಂಭವವುಂಟು. ವೀರಶೈವರ ಧಾರ್ಮಿಕ ಸುಧಾರಣೆಗಳಿಗೆ ವೀರಶೈವರೇ ಸೊಂಟಕಟ್ಟಿ ನಿಲ್ಲುವವರೆಗೆ ಆಗದು. "

" ಅಯ್ಯಾ! ನಿನಗೆ ಗೊತ್ತಿದೆ, ನಾನೀಗ ಎದುರುನೋಡುತ್ತಿರುವುದು ಗುರ್ವಾಜ್ಞೆಯನ್ನು. ಪ್ರಭುದೇವರೂ ಬಸವಣ್ಣನವರೂ ನನಗೆ ಹರಸಿ ಅಪ್ಪಣೆಯನ್ನಿತ್ತಿದ್ದಾರೆ. ಯಾವ ಎಡರುಗಳನ್ನೂ ಲೆಕ್ಕಿಸದೆ, ನನ್ನ ಮುಂದಿನ ಕಾರ್ಯವನ್ನು ಕೈಕೊಳ್ಳಲು ನಾನು ಸಿದ್ಧನಿದ್ದೇನೆ. ನಾನು ಸಿದ್ಧಪಡಿಸುತ್ತಲಿರುವ ಆಕಾಶವಾಣಿಯ ( ರೇಡಿಯೊ ) ಯಂತ್ರದೊಳಗಿನ ಹೊಸ ಏರ್ಪಾಟವು ಕೈಗೂಡಿದರೆ, ಪರಶಿವನು ನನ್ನನ್ನು ನಿಮಿತ್ತ ಕಾರಣಮಾಡಿ, ಜಗತ್ತಿಗೊಂದು ಮಹಾಪ್ರಸಾದವನ್ನು ದಯೆಪಾಲಿಸಿದಂತಾಗುವುದಿದೆ. ಬರಲಿರುವ ಬಸವಜಯಂತಿಯೊಳಗಾಗಿಯಾದರೂ ಈ ಯಂತ್ರಸಿದ್ಧಿಯು ನನಗೆ ದೊರೆತರೆ, ನನ್ನ ಮುಂದಿನ ಮಾರ್ಗವು ಹೆಚ್ಚು ಸುಕರವಾಗತಕ್ಕುದಿದೆ."

ನಮ್ಮ ಗುರುಮೂರ್ತಿಗೆ ಈ ತಮ್ಮ ಕಾರ್ಯದಲ್ಲಿರುವ ನೆಚ್ಚಿಕೆಯು—ಆತ್ಮವಿಶ್ವಾಸವು—ಕನಿಕನಿತಲ್ಲ. ಆಕಾಶವಾಣಿ (ರೇಡಿಯೊ) ಯಂತ್ರದ ಸಹಾಯದಿಂದ, ಮನುಷ್ಯನು ತನ್ನ ಹಳ್ಳಿಯ ಮನೆಯಲ್ಲಿಯೆ ಕುಳಿತು ಕಲಕತ್ತಾ, ಮುಂಬೈ, ದಿಲ್ಲಿ, ನಾನಕಿಂಗ, ಟೋಕಿಯೊ, ಲಂಡನ್, ನ್ಯೂಯಾರ್ಕ ಮೊದಲಾದ—ಬೇಕಾದಷ್ಟು ದೂರದ ಹಾಡುಗಾರಿಕೆ ಮಾತು-ಕತೆಗಳನ್ನು ದಿನಾಲು ಕೇಳುವ ಏರ್ಪಾಟಾಗಿದೆ: ಅದರಂತೆ ಮಂಗಳನ ಲೋಕ, ಕೈಲಾಸ ಮೊದಲಾದ ಕಡೆಗಳಲ್ಲಿ ನಡೆವ ಸಂಗತಿಗಳನ್ನೂ ಕೇಳಲಿಕ್ಕೆ ದೊರೆಯಬಾರದೇಕೆ? ಈಗಿನ ಆಕಾಶವಾಣಿಯ ಯಂತ್ರದಲ್ಲಿ ಒಂದಿಷ್ಟು ಮಾರ್ಪಾಟಗಳನ್ನು ಮಾಡಿದರೆ, ತಮ್ಮ ಈ ಪ್ರಯೋಗವು ಯಶಸ್ವಿಯಾಗಲೇಬೇಕೆಂದು ದೃಢವಾದ ಶ್ರದ್ಧೆಯು ನಮ್ಮ ಮಹಾಸ್ವಾಮಿಗಳಿಗೆ.

ಮಹಾಸ್ವಾಮಿಗಳು ಪೂರ್ವಾಶ್ರಮದಲ್ಲಿ ಇಂಟರ್ ಸೈನ್ಸಿನ ವರೆಗೆ ಓದಿದವರು. ಈ ಬಗೆಯ ಲೋಕೋಪಯುಕ್ತವಾದ ಹೊಸಶೋಧಗಳನ್ನು ಮಾಡಿ, ಶಿವನುಕೊಟ್ಟ ಬುದ್ಧಿಯನ್ನು ಲೋಕಕಲ್ಯಾಣಕ್ಕಾಗಿ ವಿನಿಯೋಗಿಸಬೇಕೆಂಬ ಹಂಬಲವು ಕಾಲೇಜಿನಲ್ಲಿದ್ದಾಗಿನಿಂದಲೂ ಅವರಲ್ಲಿತ್ತು. ಆದರೆ ನಡುವೆ ( ಇವರ ಹಿಂದಿನ ) ನಮ್ಮ ಪಟ್ಟದದೇವರು ಮಹಾಸಮಾಧಿಸ್ಥರಾದ್ದರಿಂದ, ಅವರ ಕೊನೆಯ ಇಚ್ಛೆಯ ಮೇರೆಗೆ ಇವರನ್ನು ಮನವೊಲಿಸಿ ತಂದು ದೀಕ್ಷೆಯನ್ನು ಕೊಟ್ಟದಾಯ್ತು. ಹಿಂದಿನ ಪಟ್ಟದ ದೇವರು ಆಂಗ್ಲವಿದ್ಯೆಯ ಸಂಪರ್ಕವಿಲ್ಲದವರಾಗಿದ್ದರೂ ಅವರು ಬಹಳ ಉದಾರದೃಷ್ಟಿಯುವರಾಗಿದ್ದರು. " ಇನ್ನು ಮುಂದೆ ನಮ್ಮ ವೀರಶೈವ ಧರ್ಮವು ಜಗನ್ಮಾನ್ಯತೆಯನ್ನು ಪಡೆಯುವುದಿದ್ದರೆ ನಮ್ಮ ಪೀಠಸ್ಥರೆಲ್ಲರೂ ಜಗತ್ತಿನ ಎಲ್ಲ ಧರ್ಮಗಳ ತುಲನಾತ್ಮಕ ಅಭ್ಯಾಸಮಾಡಿದವರಾಗಿರಬೇಕು. ಭೌತಿಕಶಾಸ್ತ್ರಗಳ ಸ್ಥೂಲ ಪರಿಚಯವಾದರೂ ಅವರಿಗೆ ಅವಶ್ಯಕ, " ಎಂಬ ಅಭಿಪ್ರಾಯದವರಾಗಿದ್ದುದರಿಂದಲೆ, ನಮ್ಮ ಈಗಿನ ಗುರುಗಳನ್ನು ಅವರು ಪಟ್ಟಕ್ಕೆ ಆರಿಸಿಕೊಂಡುದು.

ಹೆಸರು ಚಿಕ್ಕಮಠವಾದರೂ ಅದು ಬೇಕಾದ ಹಾಗೆ ವಿಶಾಲವಾಗಿತ್ತು. ಅದರ ಒಂದೆರಡು ದೊಡ್ಡ ಓವರಿಗಳಲ್ಲಿ, ನಮ್ಮ ಈಗಿನ ಗುರುಗಳು ತಮ್ಮ ಹೊಸ ಶೋಧಗಳನ್ನು ಮಾಡತಕ್ಕ ಸಂಶೋಧನದ ಪ್ರಯೋಗಶಾಲೆಗಳನ್ನು ಏರ್ಪಡಿಸಿದ್ದರು. ನಿತ್ಯದ ಶಿವಯೋಗಸಾಧನೆಯು ಮುಗಿದಬಳಿಕ ಅವರು ಶಿಷ್ಯರಿಗೆ ಹೇಳಬೇಕಾದ ಪಾಠಗಳನ್ನು ತೀರಿಸಿಕೊಂಡು, ಉಳಿದ ವೇಳೆಯನ್ನೆಲ್ಲ ಬಹುತರವಾಗಿ ಈ ಪ್ರಯೋಗಶಾಲೆಗಳಲ್ಲಿಯೇ ಕಳೆಯುತ್ತಿದ್ದರು.

ಇಂದು ಮಹಾಸ್ವಾಮಿಯವರು ನಮಗೆ ತಮ್ಮ ಆಕಾಶವಾಣಿಯ ಹೊಸಯಂತ್ರದ ಸಹಾಯದಿಂದ, ಕೈಲಾಸದಲ್ಲಿ ನಡೆದ ಮಾತು-ಕತೆಗಳನ್ನು ಕೇಳಿಸಲು ಪ್ರಯತ್ನಪಡುವೆನೆಂದು ಅಪ್ಪಣೆಕೊಡಿಸಿದ್ದರು. ಅದುದರಿಂದಲೆ ನಾವು

CC-0. Jangamwadi Math Collection. Digitized by eGangotri

ಅವರನ್ನು ಔತ್ಸುಕ್ಯದಿಂದ ನಿರೀಕ್ಷಿಸುತ್ತಲಿದ್ದೆವು. ಈ ಬಸವ ಜಯಂತಿಯ ನೋಡಲು ಅಕ್ಷಯಮಹಾದೇವಿಯ (ಚೈತ್ರ ಶುದ್ಧ) ಹುಣ್ಣಿವೆಗೆ, ಸ್ವಾಮಿಯವರು ಏಕಾಂತದಲ್ಲಿ ತಮ್ಮಷ್ಟಕ್ಕೆ ತಾನೇ ಈ ಯಂತ್ರವನ್ನು ಹಚ್ಚಿ, ಕೈಲಾಸದ ವಾರ್ತಾತರಂಗಗಳನ್ನು ಕೇಳಿದ್ದರಂತೆ. 'ಇಂದು ಅವನ್ನು ನಮಗೂ ಕೇಳುವ ಭಾಗ್ಯವು ದೊರೆಯುವುದಲ್ಲ! ನಾವು ಎಷ್ಟು ಧನ್ಯರು!' ಎಂಬ ವಿಚಾರಗಳಿಂದ ಮನಸ್ಸು ಹಿಗ್ಗಿನ ಓಕುಳಿಯಾಡುತ್ತಲಿತ್ತು.

ಅಷ್ಟರಲ್ಲಿ ಗುರುಮೂರ್ತಿಯು ಆತ್ಮಾನುಸಂಧಾನದಿಂದ ಎದ್ದು, ನನಗೆ ಕೈಸನ್ನೆಮಾಡಿ ಪ್ರಯೋಗಶಾಲೆಯತ್ತ ನಡೆಯಲು ಆಜ್ಞಾಪಿಸಿತು. ನಾವು ಅಲ್ಲಿ ಹೋಗಿ ಉಚಿತಾಸನಗಳಲ್ಲಿ ಕುಳಿತೆವು. ಆ ಪ್ರಯೋಗ ಶಾಲೆಯೊಳಗಿನ ಪ್ರಸನ್ನಗಂಭೀರವಾದ ವಾತಾವರಣವನ್ನು ಅನುಭವಿಸಿಯೆ ಅರಿತುಕೊಳ್ಳಬೇಕು. ಶಬ್ದಗಳಿಂದ ಹೇಳಲು ಸಾಧ್ಯವಿಲ್ಲ. ನಾವು ಒಳಗೆ ಕಾಲಿಟ್ಟೊಡನೆಯೆ ಮೈಯ ನಾಡಿನ ಅರಿವು ಹರಿದು, ಮನಸಿನ ನಾಡಿನಲ್ಲಿ—ಹಿಗ್ಗಿನ ನೆಲೆವೀಡಿನಲ್ಲಿ ಹೊಕ್ಕ ಅನುಭವವು ಉಂಟಾಯಿತು. ಮಹಾಸ್ವಾಮಿಗಳು ನಲಿವನ್ನೆ ಹೊರಹೊಮ್ಮಿಸುತ್ತಲಿರುವ ಕಂಗಳಿಂದ ನಮ್ಮನ್ನು ನೋಡುತ್ತ, ಹತ್ತಿರ ಒಂದು ನೆತ್ತಿಯನ್ನು ತಟ್ಟಿ, 'ಕೇಳಿ ಭೋ ಒಳಗಿವಿಗಳಿಂದ' ಎಂದು ಎಳನಗೆಯ ಮಿದುಮಾತಿನಲ್ಲಿ ಅಪ್ಪಣೆಕೊಡಿಸಿದ್ದಾಯಿತು. ನಮ್ಮೆದುರು ಹೃದಯಾಕಾರದ ಸೂಕ್ಷ್ಮವಾದ ಯಂತ್ರವಿದ್ದುದನ್ನು ಕಂಡೆವು. ಆ ಹೃದಯಾಕಾಶದೊಳಗಿಂದ ಅದ್ಭುತವಾದ ವಾಣಿಯು ಹೊರಡಲಾರಂಭಿಸಿತು. ಆ ಅನನುಭೂತವಾದ ಆನಂದವನ್ನು ಅನುಭವಿಸುತ್ತಿರುವಾಗ ಮೈ ಜುಂಮೆಂದಿತು; ಕಂಗಳ ಹಿಗ್ಗಿನ ಒರತೆಯು ಒಸರಲಾರಂಭಿಸಿತು. ಕೈಲಾಸದ ಮಾತುಗಳನ್ನು ಕೇಳುತ್ತಿರುವುದು ಇದೇನು ಕನಸೊ ನನಸೊ ಎಂಬ ಭ್ರಾಂತಿಯುಂಟಾಗುತ್ತಿತ್ತು. ಆದರೆ ಅದನ್ನು ಕೇಳುತ್ತಿದ್ದವನು ನಾನೊಬ್ಬನೆ ಅಲ್ಲ; ಮಹಾಸ್ವಾಮಿಗಳೂ ಅಲ್ಲದೆ ನನ್ನಂತಹ ಇನ್ನೊಬ್ಬನೂ ಅಲ್ಲಿಯೆ ಆ ದಿವ್ಯವಾದ ಆನಂದದಲ್ಲಿ ಓಲಾಡುತ್ತಿದ್ದರು; ಅಮೃತಮಯವಾದ ಆಕಾಶವಾಣಿಯನ್ನು ಕೇಳುತ್ತಿದ್ದರು. ಆದರಿಂದ ಇದನ್ನು ಸುಳ್ಳೆನ್ನುವ ಧೈರ್ಯವು ನನಗಿಲ್ಲ.

- ವಸಂತ ಋತುವಾದರೂ ಸಣ್ಣ ಸಣ್ಣ ಮೋಡಗಳು ಅಲ್ಲಿ ಇಲ್ಲಿ ಓಡಾಡುತ್ತಿರುವುದರಿಂದ, ಯಂತ್ರವು ನಡುನಡುವೆ ಫಕ್ಕನೆ 'ಕರರರ....ಕರ್ರ' ಎಂಬ ಶಬ್ದಮಾಡಿ, ನಮ್ಮ ಸವಿಯೂಟದಲ್ಲಿ ಹರಳನ್ನು ಎರಚುತ್ತಲಿತ್ತು. ಈ ವಿಘ್ನದೊಡನೆ ಇನ್ನೊಂದು ಮಾತು—ಆಕಾಶವಾಣಿಯನ್ನು ಕೇಳುವಾಗ—ತಡೆಹಾಕುತ್ತಲಿತ್ತು. "ಎಂತಹ ಅದ್ಭುತರಮ್ಯ ಪ್ರಸಂಗವನ್ನು ನಾನು ಅನುಭವಿಸುತ್ತಲಿರುವೆನಲ್ಲ" ಎಂಬ ವಿಮರ್ಶಕಬುದ್ಧಿಯು ತಲೆಯೆತ್ತಿ, ಅಖಂಡಾನಂದಕ್ಕೆ ಅಡ್ಡಿಯನ್ನು ಒಡ್ಡುತ್ತಲಿತ್ತು. ಆದರೂ ಗುರುಗಳ ಪ್ರಭಾವದಿಂದ ಈ ತೊಂದರೆಗಳನ್ನು ಹೇಗೂ ನೀಗಿದೆನು. ಆ ದಿವ್ಯ ವಾಕ್ಸುಧೆಯನ್ನು ಕಿವಿಯಾರೆ ಕೇಳಿದೆನು.

ಅದನ್ನು ನನ್ನ ಉಳಿದ ಪ್ರಾಪಂಚಿಕ ಭಕ್ತರಿಗಾಗಿ, ವೀರಶೈವಾಭಿಮಾನಿಗಳಿಗಾಗಿ ಹೇಳಬೇಕೆಂದು ಜೀವವು ಒಂದೇಸವನೆ ಚಡಪಡಿಸುತ್ತಲಿದೆ. ಆದರೆ ಮಾಡಲೇನು? ಮೂಕನ ಕನಸಿನಂತಾಗಿದೆ ನನ್ನ ಗತಿ. ಆಕಾಶವಾಣಿಯಲ್ಲಿ ಅಂದು ಕೇಳಿದ ಮಾತುಗಳನ್ನೆಲ್ಲ ಯಥಾವತ್ತಾಗಿ ಬರೆವ ಸಾಮರ್ಥ್ಯವು ನನಗೆ ಇದ್ದಿದ್ದರೆ! ಅಯ್ಯೊ, ನನಗೆ ಬಂದಂತೆ ತೊದಲ್ನುಡಿಗಳಿಂದ ಶಕ್ಯವಿದ್ದಷ್ಟು ಉಸುರುವೆನು:

"ಕರ್.... ಕರ್.... ಬಸವಣ್ಣಾ, ಅವುದಕ್ಕೂ ನಿನ್ನ ಗಡಿಬಿಡಿ. ಅವತಾರ ತಾಳುವ ಹಂಬಲವೇಕೈಯಾ ನಿನಗೆ?" (ಈ ಪ್ರಶ್ನೆಯನ್ನು ಮಾಡಿದವರಾರೋ ತಿಳಿಯಲಿಲ್ಲ. ಆದರೂ ಇದು ಪ್ರಭುದೇವರ ಅಧಿಕಾರವಾಣಿಯಿರಬೇಕು).

**ಬಸವಣ್ಣನವರು:** "ಅಯ್ಯಾ! ಪ್ರಭುವೆ, ನಿನ್ನ ನೇತೃತ್ವದಲ್ಲಿ ಆರಂಭಿಸಿದುದನ್ನು ಪರಿಪೂರ್ಣಗೊಳಿಸಬರಬೇಕಾಗಿದೆ ನಾನು. ನೀನೂ ನನ್ನೊಡನೆ ಬಾರದೆ ಅದು ಸಾಧ್ಯವಿಲ್ಲ. ನಾನಾಗ ಉಸುರಿದುದೊಂದು; ವೀರಶೈವರು ಈಗ ಅದರ ಅರ್ಥ ಮಾಡುತ್ತಿರುವುದಿನ್ನೊಂದು. ಅಲ್ಲದೆ ಪ್ರಭುವೆ, ನೀನು ಅಡಿಗಡಿಗೆ ಎಚ್ಚರಿಸಿದರೂ ನನ್ನ ವಿಚಿತ್ರಪರಿಸ್ಥಿತಿಯು ನನ್ನಿಂದ ಕೆಲವು ಸಂಗತಿಗಳನ್ನು ಮಾಡಿಸಿತು. ನಾನು ಜನ್ಮದಿಂದ ಹಾರುವನಾಗಿದ್ದು ವೀರಶೈವ ದೀಕ್ಷೆಯಿಂದ ನನ್ನ ಜನ್ಮವನ್ನು ಸಾರ್ಥಕ ಮಾಡಿಕೊಂಡೆ. ಶೈವಾಚಾರದಲ್ಲಿ ಅತಿಭಕ್ತಿಯನ್ನು ವ್ಯಕ್ತಮಾಡ ಹೋಗಿ, ನನ್ನ ಅನುಯಾಯಿಗಳನ್ನು ಅತಿವಾದಿಗಳನ್ನಾಗಿ ಮಾಡಿದೆ. ಅವ್ಯಕ್ತವಾಗಿರುವ ಅನಂತ ಸೌಂದರ್ಯವು ವ್ಯಕ್ತವಾಗಬೇಕಾದಾಗ, ಸಾಂತವಾಗಿ, ಅಳತೆಕಟ್ಟಿನಲ್ಲಿ ಸಿಕ್ಕಿಬೀಳಬೇಕಾಗುತ್ತದೆ. ಆದುದರಿಂದಲೆ ವೀರಮಾಹೇಶ್ವರರು, ಗಣಂಗಳು ಧರ್ಮತತ್ತ್ವಗಳನ್ನು ಬೋಧಿಸುವಾಗ ಶುದ್ಧಸತ್ಯವು ಸೋಪಾಧಿಕವಾಯ್ತು. ಈ ಉಪಾಧಿಗಳು ಹೆಚ್ಚುತ್ತ ಹೆಚ್ಚುತ್ತ ಈಗ ಅದು ಕಳೆಗೆಡುವ ಅವಸ್ಥೆಗೆ ಬಂದಿದೆ. ಸತ್ಯವು ವಿಕೃತ-ಸ್ವರೂಪಗೊಳ್ಳುತ್ತಲಿದೆ.

CC-0. Jangamwadi Math Collection. Digitized by eGangotri

ಆದುದರಿಂದಲೆ ನಾನು ನಿನ್ನೊಡನೆ ಭೂಲೋಕಕ್ಕೆ ಇಳಿಯಬೇಕೆಂದು ಹಾತೊರೆಯುತ್ತಲಿರುವುದು, ಪ್ರಭುವೆ !

“ಶಿವಸ್ವರೂಪದಲ್ಲಿ ದೇವದೇವನನ್ನು ಆರಾಧಿಸಲು ನಾನು ಹೇಳಿದ್ದುದು ನಿಜ. ಶಿವನೆಂದರೆ ಪರಮಮಂಗಲಕರನೆಂದು ಅರ್ಥವು. ಮಂಗಲಸ್ವರೂಪದಲ್ಲಿ ದೇವನಿದ್ದಾನೆ. ಜಗನ್ಮಂಗಲಕ್ಕಾಗಿ ದುಡಿಯುವುದೆ ನಿಜವಾದ ಶಿವಾರಾಧನೆ; ಅದುವೆ ನಿಜವಾದ ಗಣಾರಾಧನೆ. ಗಣಸ್ವರೂಪದಲ್ಲಿ— ಸಂಘಸ್ವರೂಪದಲ್ಲಿ — ಶಿವನನ್ನು ಕಾಣಲು ನಾನು ಉಪದೇಶಿಸಿದೆ. ಆದರೆ ಇದೆಲ್ಲದುದರ ಅಪಾರ್ಥಮಾಡಿ, ಈಗ ವಿಚಿತ್ರವ್ಯಾಪಾರಗಳೆ ನಡೆವುದನ್ನು ಕಂಡು, ನನಗೆ ಕೈಲಾಸದಲ್ಲಿರುವುದಕ್ಕೆ ಮನಸ್ಸಿಲ್ಲದಾಗಿದೆ ದೇವ! ಗುಹೇಶ್ವರನೆಂದು ಕೂಟಸ್ಥನಾದ ಪರಮ-ಆತ್ಮನನ್ನು ನೀನು ಇಷ್ಟಲಿಂಗವನ್ನಾಗಿ ಮಾಡಿಕೊಂಡುದಾಯ್ತು. ಕೂಡಲದಲ್ಲಿ—ಕೂಟದಲ್ಲಿ ಎಂದರೆ ಸಂಗಮದಲ್ಲಿ—ಸಂಘಶಕ್ತಿಯಲ್ಲಿ ಅಂಶರೂಪದಿಂದ ಪರಶಿವನಿರುವುದರ ಅರಿವು ಮಾಡಿಕೊಡುವುದಕ್ಕೆ ಕೂಡಲಸಂಗಮನೆಂಬ ಸಂಕೇತದಿಂದ ನಾನು ಅರ್ಚಿಸಿದೆನು. ಆದರೆ ಇದರ ಗುಟ್ಟು ಮುಂದಿನವರಿಗೆ ಗೊತ್ತಾಗಲಿಲ್ಲವಲ್ಲ!

“ಪ್ರಭುವೆ, ನನ್ನ ಶುದ್ಧ ವಿಚಾರಗಳಿಗೆ ಮಾನವದೇಹದ ಪರಿಣಾಮವಾಗಿ, ನಾನೇ ಮಾಡಿದ ಕೆಲವು ತಪ್ಪುಗಳುಂಟು. ಅವನ್ನು ನಿತ್ತರಿಸಿ ಬರಬೇಕಾಗಿದೆ. ನಮ್ಮ ಜನಗಳ ಹುಚ್ಚುಮಬ್ಬನ್ನು ಕಡಿಮೆಮಾಡಬೇಕಾಗಿದೆ. ಆದರೆ ಬಾಹ್ಯಲಿಂಗಧಾರಣೆಯ ಆಗ್ರಹವನ್ನು ನಾನು ತಾಳಿದೆ ! ‘ ಕಿವಿಯೊಳಗಿಂದ ಹುಟ್ಟುವನೆ ಕರ್ಣನು ? ’ ಎಂದು ನಗೆಯಾಡಿದೆ; ಆದರೆ ‘ ಪ್ರಸಾದದಿಂದ ’ ಹುಟ್ಟುವರೆಂಬ ಮಾತನ್ನು ನಂಬುವುದಕ್ಕೆ ಹೇಳಿದೆ. ಬ್ರಹ್ಮಜ್ಞಾನದಿಂದ ಬ್ರಾಹ್ಮಣ್ಯವು ಬರತಕ್ಕುದೆ ಹೊರತು ಜನ್ಮದಿಂದ, ಜಾತಿಯಿಂದ ಬ್ರಾಹ್ಮಣನು ತಾನೆಂದು ಹೇಳುವ ನೆಣಗೊಬ್ಬಿನ ಹಾರುವರನ್ನು ಕಂಡು, ನನಗೆ ಆ ವರ್ಗದವನೆಂದು ಹೇಳಿಕೊಳ್ಳಲು ಹೇಸಿಕೆಯಾಯ್ತು. ಧೀರ-ವೀರರಾಗಿ ತಮ್ಮ ಜೀವನವನ್ನೆ ಪರಶಿವನ ಅಡಿಯಲ್ಲಿ ಮೀಸಲಾಗಿರಿಸಿದವರೇ ವೀರಶೈವರೆಂದೂ ಇಂತಹರು ಜಾತಿಬ್ರಾಹ್ಮಣರಿಗಿಂತ ಸಾವಿರಾರು ಪಾಲಿಗೆ ಮಿಗಿಲೆಂದೂ ನಾನು ಸಾರಿದೆ. ಮನುಷ್ಯನೆಂಬುದೊಂದೆ ಜಾತಿ. ಅದರಲ್ಲಿ ಹೆಣ್ಣು-ಗಂಡು ಎಂದು ಎರಡು ಒಳಬಣಗಳು. ಎಲ್ಲರೂ ಸಮಾನಸ್ಕಂಧರು. ಶಿವಶರಣರು ಮಾತ್ರ ದೇವಮಾನವರು; ಅತಿಮಾನವರು. ಇಲ್ಲಿ ಜಾತಿ-ಕುಲಗಳ ಕೀಳುನುಡಿಗೆ ಎಡೆಯಿಲ್ಲ. ಆದುದರಿಂದಲೆ, ಪ್ರಭುವೆ, ನಿನ್ನಡಿಯಲ್ಲಿ ಹಾರುವನೆನಿಸಿದ ನಾನು, ಮಡಿವಳರು, ಮಾದರು, ಢೋರರು ಮೊದಲಾದ ಹದಿನೆಂಟು ಜಾತಿಯವರೊಡನೆ ಸೇರಿ, ಜಗತ್ತಿಗೆ ಮೇಲ್ಪಂಙ್ತಿಯನ್ನು ಹಾಕಿಕೊಡಬೇಕೆಂದು ‘ ಕೂಡಲ — ಸಂಗಮ ’ ನನ್ನು ಆರಾಧಿಸಿದೆ. ಆದರೆ ಇಂತಹ ವಿಶಾಲದೃಷ್ಟಿಯು ಮಾಯವಾಗಿ, ಈಗ ವೀರಶೈವವೂ ಜಾತಿಯಿಂದ ನಿರ್ಣಯಿಸಲ್ಪಡತಕ್ಕ ಧರ್ಮವಾಗಿಬಿಟ್ಟದೆ ! ದೇಹವೆ ದೇಗುಲ, ಶಿರವೆ ಹೊನ್ನಕಳಸವೆಂದು ತಿಳಿಹೇಳಿ, ಎದೆಯ ಗರ್ಭಗುಡಿಯಲ್ಲಿ ಮಂಗಳಕರನನ್ನು—ಶಿವನನ್ನು ಆರಾಧಿಸುವುದಕ್ಕೆ ಹೇಳಿದ್ದೆ. ಇಂತಹನೆ ನಿಜವಾದ ವೀರಶೈವನು; ಲಿಂಗವಂತನು. ಆದರೆ ಈಗ ಅಗ್ಗದ ಲಿಂಗವೊಂದನ್ನು ತಂದು ಬಿಗಿದುಕೊಂಡೊಡನೆಯೆ, ಲಿಂಗವಂತರಾದೆವೆಂದು ಭಾವಿಸುವ ಮರುಳರ ತಂಡವೆ ಹೆಚ್ಚಾಗಿದೆ. ಎದೆಯಲ್ಲಿ ಪರಜಾತಿ-ಪರಸಮಾಜಾದಿಗಳ ಬಗ್ಗೆ ದ್ವೇಷ-ಅಸೂಯೆ-ಹೊಟ್ಟೆಕಿಚ್ಚಿನ ವಿಚಾರಗಳನ್ನು ತುಂಬಿಕೊಂಡು, ಅಲ್ಲಿಯೆ ಮಂಗಳಸ್ವರೂಪನಾದ ಶಿವನನ್ನು ಸ್ಥಾಪಿಸುವುದೆಂದರೆ ಅದೇನು ಅವ್ಯಾಪಾರೇಷು ವ್ಯಾಪಾರವೊ ತಿಳಿಯದು.

“ಪ್ರಭುವೆ, ಈ ಕೊಳೆಯನ್ನೆಲ್ಲ ತೊಳೆದು ಬರಬೇಕಾಗಿದೆ. ನೀನೂ ಭೂಲೋಕಕ್ಕೆ ಚಿತ್ತೈಸಬೇಕು. ಹೀಗೆಯೆ ಬಿಟ್ಟರೆ ಜಗತ್ತು ಇನ್ನೂ ಅನಿಷ್ಟಕ್ಕೆ ಗುರಿಯಾಗಲಿಕ್ಕಿಲ್ಲವೆ ?.... ....ಕರ್....ಕರರ್—ಕರ್ರ....”

( ಮತ್ತೆ ಕೆಲಹೊತ್ತಿನ ಮೇಲೆ )

“ಬಸವಣ್ಣಾ, ನೀನು ಬಹಳ ಕೋಮಲಾಂತಃಕರಣಿಯಾಗಿದ್ದೀಯೆ. ನಿನ್ನ ಈ ಬಗೆಯ ಪ್ರೇಮವೇ ಮೋಹವಾಗಿ, ನಿನ್ನ ನೋಟದಲ್ಲಿ ಕುಂದಕವನ್ನು ತಂದು ಬಿಡುವುದು. ಬಸವಣ್ಣಾ, ನೀನೇ ಭೂಲೋಕದಲ್ಲಿ ಈಗ ಗಾಂಧಿಯೆಂಬ ಹೆಸರಿನಿಂದ ಅಂಶಾವತಾರವನ್ನು ತಾಳಿ, ಜಗದ್ವಿಚಾರದಲ್ಲಿ ಪರಿವರ್ತನೆಯನ್ನು ನಡೆಯಿಸಿಲ್ಲವೆ ? ನನ್ನ ಗಣಗಳಲ್ಲಿ ಹಲಕೆಲವರು ಭೂಮಿಯಮೇಲೆ ಬೇರೆ ಬೇರೆ ರೂಪದಿಂದ ಹುಟ್ಟಿ, ನಿನಗೆ ( ಗಾಂಧಿಗೆ ) ಸಹಾಯಕರಾಗಿ ಕೆಲಸ ನಡೆಯಿಸಿದುದನ್ನು ಅರಿಯೆಯೊ? ನಮ್ಮಿಬ್ಬರ ಪೂರ್ಣಾವತಾರದ ಕಾಲವು....( ....ಕರ್ ಕರರ್.... )....ಷ್ಕ್ಕೆ ಬರಲಿದೆ. ಅವಸರ ಬೇಡ. ಅದರ ಪೂರ್ವಸಿದ್ಧತೆಯು ನಡೆಯುತ್ತಲಿದೆ ನಡೆಯಲಿ. ಗುರುವರ್ಗದಲ್ಲಿಯೂ ಹೊಸನೋಟದ ತರುಣರ ಸ್ಪರ್ಧೆಯಾಗುತ್ತಲಿರುವುದು ಶುಭಲಕ್ಷಣವು. ವೀರಶೈವರನ್ನು ಸುಮ್ಮನೆ ಹೊಗಳುವ ಸ್ವಾರ್ಥಿಗಳು, ಸುಧಾರಕ ದೃಷ್ಟಿಯ ಈ ತರುಣರಿಗೆ ಅಡಿಗಡಿಗೆ ಅಡ್ಡಿ-

CC-0. Jangamwadi Math Collection. Digitized by eGangotri

ಮಾಡದೆ ಬಿಡರು. ಸ್ವಾರ್ಥಿಗಳು ತಮ್ಮ ಹೊಟ್ಟೆಯ ಪಾಡಿಗಾಗಿ, ಅಥವಾ ತಮ್ಮ ಅನಾಚಾರಗಳನ್ನು ಮುಚ್ಚಿಕೊಳ್ಳುವುದಕ್ಕಾಗಿ ಇಲ್ಲವೆ ಕೀರ್ತಿಯ ಆಶೆಗಾಗಿ, ವೀರಶೈವಾಚಾರದಲ್ಲಿ ಈಗ ತಲೆದೋರಿರುವ ಹೀನಾಂಶವನ್ನೂ ಗುಣಾಂಶವೆಂದೇ ಎತ್ತಿಹಿಡಿದು ಕೂಗಿಕೊಳ್ಳುವರು; ಕೂಗಿಕೊಳ್ಳಲಿ! ಆದರೆ ಇವರ ಕಾಲವು ಸಮೀಪಿಸಿದೆ. ನಿನ್ನ ಅಂಶಾವತಾರಿಯೂ ಮತ್ತು ಶೃಂಗಿ ಭಂಗಿ ಮೊದಲಾದ ಗಣಗಳೂ ಸೇರಿ, ದಿವ್ಯಮಾನವಜೀವನದ ಆದರ್ಶದಿಂದ ಕೈಕೊಂಡಿರುವ ಕಾರ್ಯವು ಯಶಸ್ವಿಯಾಗಲೆ ಬೇಕು. ಜಗನ್ಮಂಗಲಕ್ಕಾಗಿ ಜೀವನವನ್ನು ಸವೆಸುತ್ತಲಿರುವ ಈ ವರ್ಗದವರೆ ನಿಜವಾದ ವೀರಶೈವರೆಂದು ನಂಬು, ಬಸವಣ್ಣಾ.... ಕರ್.... ಕರರ್...."

ಆಕಾಶವಾಣಿಯು ತೀರಕಟ್ಟಾಯಿತು. ಏಕೆಂದು ನೋಡುತ್ತಿರುವಾಗ ಹೊರಗೆ ಮುಗಿಲಲ್ಲಿ ಮೋಡಗಳು ಮುಸುಕಿಕೊಂಡುದು ಕಂಡುಬಂದಿತು. ಸಮಾಜದಲ್ಲಿ ದುರಭಿಮಾನ ಅಸಹಿಷ್ಣುತೆಯ ಮೋಡಗಳು ಕವಿದಿರುವವರೆಗೆ, ಈ ಬಗೆಯ ಸಂದೇಶಗಳು ಹೃದಯಾಕಾಶದಿಂದ ಕೇಳಬರುವುದೆ ಕಷ್ಟ.

ಓಂ ಓಂ ಓಂ


ದಿ ಬಾಂಬೇ ಬರೋಡಾ ಲಾಯಿಫ್ ಎಶ್ಯುರನ್ಸ ಕಂ. ಲಿ., ಬರೋಡಾ

ಸ್ಥಾಪನಾ: ೧೯೨೫

ಸುಲಭ ವಿಮಾ ಕಂತುಗಳು ಸರ್ವ ಸೌಕರ್ಯವುಳ್ಳ ಕರಾರುಗಳು

ಹೆಚ್ಚಿನ ಮಾಹಿತಿಗಾಗಿ ಕೆಳಗಿನ ವಿಳಾಸಕ್ಕೆ ಬರೆದು ಕೇಳಿರಿ.

ಕೆ. ವ್ಹಿ. ಹುಲಸೋಗಿ ಬಿ.ಎ. ಎಜನ್ಸಿ ಮ್ಯಾನೇಜರ್ ಕ್ಯಾಂಪ್—ಹುಬ್ಬಳ್ಳಿ

ಕೆ. ಎಚ್. ಜೈನಾಪೂರ ಆರ್ಗನೈಝರ್ ನರಗುಂದ



ಕಲಿಯುಗ

ಕಾಮವಿಜ್ಞಾನ, ಆರೋಗ್ಯವಿಜ್ಞಾನ, ಸಮಾಜವಿಜ್ಞಾನಗಳಿಗೆ ಮೀಸಲಾದ, ಕನ್ನಡಸಾಹಿತ್ಯದ ಇತಿಹಾಸದಲ್ಲೀ

ಪ್ರಥಮ ಮಾಸಪತ್ರಿಕೆ

★

ಸಂಪಾದಕರು:
ಆಯುರ್ವೇದವಿದ್ವಾನ್
ಡಾ|| ಎಂ. ಗೋಪಾಲಕೃಷ್ಣರಾಯರು

ವಾರ್ಷಿಕ ಚಂದಾ ೧|| ರೂ. ಬಿಡಿಸಂಚಿಕೆ ೨ ಆಣೆ

ಕಲಿಯುಗ ಕಾರ್ಯಾಲಯ, ಧಾರವಾಡ.



ಕಲಾಸಿಂಧು ಮುದ್ರಣಾಲಯ

ನಮ್ಮಲ್ಲಿ ಹಿಂದೀ, ಸಂಸ್ಕೃತ, ಮರಾಟಿ, ಕನ್ನಡ, ಇಂಗ್ಲಿಷುಗಳಲ್ಲಿ ಪುಸ್ತಕಮುದ್ರಣವೂ ಎಲ್ಲಬಗೆಯ ಜಾಬ್ ಕೆಲಸವೂ ಅಚ್ಚುಕಟ್ಟಾಗಿ, ಅಂದವಾಗಿ ಆಗುವುದು. ಮತ್ತು ನಿಯಮಿತ ವೇಳೆಯಲ್ಲಿ ಕೊಡಲ್ಪಡುವುದು.

ಜಯಕರ್ನಾಟಕ ಪತ್ರಿಕೆಯು ಇಲ್ಲಿಯೇ ಅಚ್ಚಾಗುವುದು.

ಪ್ರಾಮಾಣಿಕ ವ್ಯವಹಾರ, ಯೋಗ್ಯವಾದ ದರ.


CC-0. Jangamwadi Math Collection. Digitized by eGangotri

# ಪಂಪ ಮಹಾಕವಿಯ ಸಾಹಸ್ರಕ ಸ್ಮಾರಕವು

ಶ್ರೀ. ದೇಸಾಯಿ ಪಾಂಡುರಂಗರಾಯರು ಬಿ. ಎ. (ಆನರ್ಸ್) ಧಾರವಾಡ



ಕ್ರಿ. ಶಕದ ೧೯೪೧ನೆಯ ವರ್ಷಕ್ಕೆ ಪಂಪನ ಕೃತಿರತ್ನಗಳಿಗೆ ಸಾವಿರ ವರ್ಷಗಳು ತುಂಬುವುವು. ಪಂಪನೂ ಅವನ ಕೃತಿಗಳೂ ಕನ್ನಡಿಗರ ಅಭಿಮಾನಕ್ಕೆ ಕೋಡುಮೂಡಿಸುವಂತಹವು. ಸಾವಿರ ವರ್ಷದ ಸ್ಮಾರಕೋತ್ಸವವನ್ನು ಮಾಡಬಹುದಾದ ಸುಯೋಗವು ನಮ್ಮ ತಲೆಮಾರಿನವರಿಗೆ ಬರಲಿದೆ. ಎಲ್ಲರೂ ಅದರಲ್ಲಿ ಭಾಗವಹಿಸಿ, ವಿಜೃಂಭಣೆಯಿಂದ ನೆರವೇರಿಸುವುದು ನಮ್ಮ ಕರ್ತವ್ಯವಾಗಿದೆ.



ನಾಡು-ನಾಡಿಗೂ ಜನ-ಜನಾಂಗಕ್ಕೂ ಕವಿಗಳೆನ್ನು-ವವರು ಇದ್ದೇ ಇರುವರು. ಆದರೆ ಮಹಾಕವಿಯು ದೊರೆಯುವುದು ಮಾತ್ರ ಅಪರೂಪ. ದೇಶಕಾಲಗಳ ಕಟ್ಟಳೆಗಳನ್ನು ಕಿತ್ತೊಗೆದು, ವಿಶ್ವವಂದ್ಯರಾಗಿ ಅನಂತ ಯುಗಗಳ ವರೆಗೆ ಬಾಳಿಬದುಕಿದ ಅಮರ ಮಹಾಕವಿಗಳು ಈ ಪ್ರಪಂಚದಲ್ಲಿ ಕೈಬೆರಳುಗಳ ಮೇಲೆ ಎಣಿಸುವಷ್ಟಾದರೂ ದೊರೆಯುವರೊ ಇಲ್ಲವೊ! ಒಬ್ಬ ಕಾಲಿದಾಸ! ಒಬ್ಬ ಶೆಕ್ಸ್‌ಪಿಯರ್! ಒಬ್ಬ ಹೋಮರ್!

ಕನ್ನಡವು ಪ್ರಪಂಚದ ಪುರಾತನವಾದ ರಾಷ್ಟ್ರಗಳ-ಲ್ಲೊಂದು. ಕನ್ನಡವು ಪ್ರಪಂಚದಲ್ಲಿ ಉನ್ನತೋನ್ನತವಾದ ಕಲಾಜೀವನವನ್ನು ಜೀವಿಸಿದ ಜನಾಂಗವು. ಕನ್ನಡವು ಧರ್ಮದ ಬೀಡು. ಕನ್ನಡವು ಕಲಿತನದ ಹಾಡು. ಕನ್ನಡ ನುಡಿಯಲ್ಲಿ ಒಂದು ಇಂಪುಂಟು. ಕನ್ನಡ ಸಾಹಿತ್ಯದಲ್ಲಿ ಒಂದು ಸೊಂಪುಂಟು. ಕನ್ನಡ ಸಾಹಿತ್ಯವನ್ನು ಮೇಲು-ಗೊಳಿಸಿದ ಕವಿಗಳಲ್ಲಿ ವರಕವಿಯು ಪಂಪನು. ಕನ್ನಡದ ಆದಿಕವಿಯು ಪಂಪನು. ಕನ್ನಡದ ಆದ್ಯಕವಿಯು ಪಂಪನು. ಕನ್ನಡದ ಮಹಾಕವಿಯು ಪಂಪನು. ಕನ್ನಡಿಗನು ಹೆಮ್ಮೆ-ಯಿಂದ ಪ್ರಪಂಚಕ್ಕೆ ನೀಡಬಹುದಾದ ಉತ್ತಮೋತ್ತಮ ಕವಿಗಳಲ್ಲಿ ಉತ್ತಮನಾದ ಮಹಾಕವಿಯು ಪಂಪನು. ನಮ್ಮ ಪಂಪನು ಪ್ರಪಂಚದ ಮಹಾಕವಿಗಳ ರತ್ನಮಾಲಿಕೆಗೆ ಸೇರಲರ್ಹವಾದ ಮಾಣಿಕವಲ್ಲವೆ!

ಮೊನ್ನೆ ಇಲ್ಲಿಯ (ಧಾರವಾಡ) ಕರ್ನಾಟಕ ಇತಿಹಾಸ ಸಂಶೋಧಕ ಮಂಡಲದಲ್ಲಿ ಪಂಪಭಕ್ತರಾದ ಶ್ರೀ. ಪಾರಿಶ್ವಾಡರೊಡನೆ ಮಾತುಗಳು ನಡೆದುವು. ಕರ್ನಾಟಕವು ವಿಜಯನಗರ ಸಾಮ್ರಾಜ್ಯಸ್ಥಾಪನೆಯ ಆರುನೂರನೆಯ ನೆನೆವರಿಕೆಯನ್ನು ನೆರವೇರಿಸಿದುದಾಯಿತು. ಕರ್ನಾಟಕವು ತನ್ನ ಆದಿಕವಿಯ, ತನ್ನ ಮಹಾಕವಿಯ, ಕನ್ನಡದ 'ವಾಗ್ವಿಭವೋನ್ನತಿಯನ್ನು ನೆಗಳ್ಚಿದ, 'ಪಸರಿಪ ಕನ್ನಡಕ್ಕೆ ಒಬ್ಬನೆ ಒಡೆಯ'ನಾದ 'ಸುಭಗ ಕವಿ' ಶೇಖರನ, ಪಂಪನ, ಸಾವಿರ ವರುಷದ ನೆನೆವರಿಕೆಯನ್ನು ಏಕೆ ನೆರವೇರಿಸಬಾರದು?

ಕರ್ನಾಟಕವು ಒಂದು ಮಾತಿನಲ್ಲಿ ಭಾಗ್ಯಶಾಲಿ! ಕಾಲಿದಾಸನ ದೇಶಕಾಲಗಳು—ಜೀವನದ ಮುಖ್ಯ ಸಂಗತಿ-ಗಳೂ ಕೂಡ—ತಿಳಿಯುವ ವಿಷಯದಲ್ಲಿ ಇನ್ನೂ ಕಾದಾಟ ನಡೆದಿರುವಾಗ, ಪಂಪನ ಬಗೆಗೆ ನಿಶ್ಚಿತವಾದ ಕೆಲವಂಶ-ಗಳನ್ನು ಧಾರಾಳವಾಗಿ ನಾವು ಸಾರಿ ಹೇಳಬಲ್ಲೆವು. ಪಂಪನು ಹುಟ್ಟಿದುದು ಎಂದು? ತನ್ನ ಕೃತಿಗಳನ್ನು ರಚಿಸಿದುದು ಎಂದು....? ಎಂಬುದನ್ನು ನಿರ್ದೇಶಿಸಬಲ್ಲೆವು. ಪಂಪನ ಜೀವಮಾನದ ಇನ್ನೂ ಎಷ್ಟೋ ವೃತ್ತಾಂತಗಳನ್ನು ವಿಶದವಾಗಿ ವಿವರಿಸಬಲ್ಲೆವು. ಪಂಪನು ತನ್ನ ಆದಿ ಪುರಾಣದಲ್ಲಿಯೂ ಭಾರತದಲ್ಲಿಯೂ ಹೇಳಿದುದರಿಂದ ತಿಳಿ-ಯುವಂತೆ, ಕೃತಿಗಳನ್ನು ಕ್ರಿ. ಶ. ೯೪೧ರಲ್ಲಿ ರಚಿಸಿದನು. ಇಂದಿಗೆ ನಾಲ್ಕು ವರ್ಷಕ್ಕೆ ಬರುವ ೧೯೪೧ನೆಯ ಇಸ್ವಿಗೆ

CC-0. Jangamwadi Math Collection. Digitized by eGangotri

ಈ ಘಟನೆಗೆ ಸಾವಿರ ಸಂವತ್ಸರಗಳು ಆಗುವುವು. ಪಂಪನು ಹುಟ್ಟಿದುದು ಕ್ರಿ. ಪ. ೯೦೨ರಲ್ಲಿ. ಪಂಪನ ಹುಟ್ಟಿದ ಹಬ್ಬಕ್ಕಿಂತ ಪಂಪನ ಕಾವ್ಯಗಳ ಹುಟ್ಟಿನ ಹಬ್ಬವು ಕನ್ನಡಿಗರಿಗೆ, ಕನ್ನಡ ಸಾಹಿತಿಗಳಿಗೆ ಹೆಚ್ಚು ಸಂಸ್ಮರಣೀಯವಾಗಿದೆ. ಆದುದರಿಂದ **ಪಂಪಮಹಾಕವಿಯ ಸಾಹಸ್ರಕ—ಸ್ಮಾರಕೋತ್ಸವವು ೧೯೪೧ರಲ್ಲಿ ನಡೆಯುವುದೇ ಯುಕ್ತವಾದುದು.**

ಈ ಸ್ಮಾರಕೋತ್ಸವವು ಕೇವಲ ಸಾಹಿತ್ಯಾತ್ಮಕವಾಗಬೇಕೆಂಬುದು ನಿರ್ವಿವಾದವಾದ ವಿಷಯವೆ. ಈ ಪಂಪಮಹೋತ್ಸವವು ಇದುವರೆಗಿನ ಇಂತಹ ಎಲ್ಲ ಉತ್ಸವಗಳಿಗಿಂತ ಒಂದು ನೂತನತೆಯಿಂದ ಕಳೆಗೊಳ್ಳಬೇಕು. ಕೃಷ್ಣೆಯಿಂದ ಕಾವೇರಿಯ ವರೆಗೆ ಹಬ್ಬಿದ ಕರ್ನಾಟಕದ ಎಲ್ಲ ಸಾಹಿತ್ಯಸಂಘಗಳೂ ಇದರಲ್ಲಿ ಜಾಗರೂಕತೆಯಿಂದ ಭಾಗವಹಿಸುವಂತೆ ಏರ್ಪಡಿಸತಕ್ಕುದು. ಈ ಕಾರ್ಯಕ್ಕಾಗಿ ತಕ್ಕ ಸಮಯದಲ್ಲಿ ಒಂದು ಕೇಂದ್ರ ಸಮಿತಿಯು ನಿರ್ಮಾಣವಾಗಿ, ಅದು ಯಥೋಚಿತವಾದ ಕಾರ್ಯದಲ್ಲಿ ನಿರತವಾಗಬೇಕು.

ಈ ಕಾರ್ಯದ ಅಗ್ರೇಸರತ್ವವನ್ನು ಯಾವ ಭಾಗದವರು ಸ್ವೀಕರಿಸಬೇಕು ? ಪಂಪನು ಅಖಿಲ ಕರ್ನಾಟಕದ ಮಹಾಕವಿಯು. ವಿಶಾಲಕರ್ನಾಟಕಕ್ಕೆ ವಂದನೀಯತಮನಾದ ಆದಿಕವಿಯು. ಇಲ್ಲಿ ಪ್ರಾಂತಿಕಭೇದಗಳಿಗೆ ಎಡೆಯೆ ಇಲ್ಲ. ಆತನು ಎಲ್ಲರಿಗೂ ಅಷ್ಟೇ ! ಉತ್ತರ ಕರ್ನಾಟಕದವರಿಗಾಗಲಿ, ಮಧ್ಯಕರ್ನಾಟಕದವರಿಗಾಗಲಿ, ದಕ್ಷಿಣ ಕರ್ನಾಟಕದವರಿಗಾಗಲಿ ಎಲ್ಲರಿಗೂ ಆತನು ತನ್ನವನೆ. ಎಲ್ಲ ಕನ್ನಡಿಗರೂ ಆತನ ಬಗೆಗೆ ಅಭಿಮಾನಾತಿಶಯವನ್ನೆ ತಳೆಯುವರು. ಆದರೆ ಇದರಲ್ಲಿಯೂ ಒಂದು ವಿಶೇಷವನ್ನು ಹೇಳಬೇಕಾದರೆ, ಪಂಪನ ಬಗೆಗೆ ನಿಜಾಮ್ ಕರ್ನಾಟಕದವರು ಹೆಚ್ಚಿನ ಅಭಿಮಾನಾದರಗಳನ್ನು ತೋರಿಸಿದರೆ ಅನುಚಿತವಾಗದು. ಏಕೆಂದರೆ, ಈಚೆಯ ಸಂಶೋಧನೆಗಳಿಂದ ಪಂಪನ ಜನ್ಮಭೂಮಿಯು, ಜೀವನಭೂಮಿಯು ನಿಜಾಮುರಾಜ್ಯವು ಎಂದು ಸಿದ್ಧವಾಗಿದೆ. ಆದುದರಿಂದ ಮಲಗಿದ್ದ ನಿಜಾಮ್ ಕನ್ನಡಿಗರು ಈ ನೆವದಿಂದಲಾದರೂ ಎಚ್ಚತ್ತು, ಮುಂದುವರಿದು, ಪಂಪನ ಸ್ಮಾರಕೋತ್ಸವವನ್ನು ಅಪೂರ್ವವಾದ ಒಂದು ವಿಜೃಂಭಣೆಯಿಂದ ನೆರವೇರಿಸಲು ಉದ್ಯುಕ್ತರಾಗಬೇಕೆಂದು ನನ್ನ ಆಶೆ, ಆಗ್ರಹ. ಈ ಉತ್ಸಾಹವು, ಈ ಶಕ್ತಿಯು, ಈ ಅಭಿಮಾನವು ನಿಜಾಮ್ ಕನ್ನಡಿಗರಲ್ಲಿ ಇದೆ—ಎಂಬುದು ಕೆಲವು ಬಾರಿ ಸಿದ್ಧವಾಗಿದೆ. ಅವರು ಏಳಬೇಕು ಮಾತ್ರ. ಎದ್ದು ಕುಸಿಯದಂತೆ ಒಂದೇ ಸಮನೆ ಕಾರ್ಯನಿರತರಾಗಬೇಕು ಮಾತ್ರ. ಇಂತಹ ಪಂಪ ಸ್ಮಾರಕೋತ್ಸವ ಸಮಿತಿಯೊಂದು ಸ್ವಲ್ಪ ಕಾಲದಲ್ಲಿಯೆ ನಿಜಾಮನ ರಾಜ್ಯದಲ್ಲಿ ಸ್ಥಾಪಿತವಾಗಬೇಕೆಂದು ಬಯಸಿದರೆ, ಅಸಮಂಜಸವಾಗಬಹುದೆ ? ನಿಜಾಮ್ ಕನ್ನಡಿಗರು ತಮ್ಮಲ್ಲಿ ಹುಟ್ಟಿ ಬಾಳಿ ಬೆಳಗಿದ ಈ ಕನ್ನಡ ಸಾಹಿತ್ಯವೀರನನ್ನು ಉದಾಸೀನ ಮಾಡುವಷ್ಟು ನಿಸ್ಸತ್ತ್ವರಾಗಿರುವರೆ ?

ಈ ಉತ್ಸವಕಾಲಕ್ಕೆ ನಾವು ಮಾಡತಕ್ಕ ಸಾಹಿತ್ಯಕಾರ್ಯಗಳು ಅನೇಕವಿವೆ. ಅದರಲ್ಲಿ ಪ್ರಧಾನವಾದುದು ಸ್ಮಾರಕಗ್ರಂಥವೆಂಬುದಂತೂ ನಿಶ್ಚಯವೇ. ಅದಕ್ಕೂ ಪೂರ್ವದಲ್ಲಿ ನಾವು ಪಂಪನ ಋಣವನ್ನು ತೀರಿಸಬೇಕಾದುದು ಇನ್ನೂ ಎಷ್ಟೋ ಇದೆ. ಪಂಪನ ಕೃತಿಗಳ ಬಗೆಗೂ, ಆವನ ಜೀವನದ ಹೆಚ್ಚಿನ ಸಂಗತಿಗಳ ಬಗೆಗೂ ಇನ್ನೂ ಸಂಶೋಧನೆಯು ನಡೆಯಬೇಕಾಗಿದೆ. ಅದರಲ್ಲಿ ಆತನ ಜನ್ಮಭೂಮಿಯನ್ನು ಕುರಿತು ಒಂದೆರಡು ಮಾತುಗಳನ್ನು ನಾನಿಲ್ಲಿ ಹೇಳುವೆನು.

ಪಂಪನ ಜನ್ಮಭೂಮಿಯೂ ಆತನ ಪೋಷಕನಾದ ಅರಿಕೇಸರಿಯ ಆಸ್ಥಾನವೂ 'ಪುರಿಗೆರೆ' ಎಂದರೆ ಲಕ್ಷ್ಮೇಶ್ವರವು ಎಂಬುದು ಇದುವರೆಗಿನ ತಿಳಿವಳಿಕೆ. ಈ ಇದನ್ನು ನಂಬಿ, ಒಂದು ಪಂಪೋತ್ಸವವು ಕೂಡ ಲಕ್ಷ್ಮೇಶ್ವರದಲ್ಲಿ ಕೆಲವರ್ಷಗಳ ಹಿಂದೆ ನಡೆಯಿತು....ಎಂದು ತಿಳಿಯುತ್ತದೆ. ಇದು ಸತ್ಯಕ್ಕೆ ವಿರುದ್ಧವಾದುದು. 'ಅರಿಕೇಸರಿಯ ರಾಜ್ಯವು ಪುರಿಗೆರೆಯಲ್ಲಿ ಎಂದರೆ ಲಕ್ಷ್ಮೇಶ್ವರದಲ್ಲಿ ಇರಲೇ ಇಲ್ಲ. ಅದು ತೀರ ಉತ್ತರದಲ್ಲಿ ವೇಂಗಿನಾಡಿನಲ್ಲಿ ಇತ್ತು' ಎಂಬುದು, ಕೆಲ ವರ್ಷಗಳ ಹಿಂದೆ ಪ್ರಕಾಶಕ್ಕೆ ಬಂದ ಪರಭಣಿಯ ತಾಮ್ರಶಾಸನದಿಂದ ಸಿದ್ಧವಾಗಿದೆ. ಅಲ್ಲದೆ ಪಂಪಭಾರತದಲ್ಲಿಯ ಹೇಳಿಕೆಯಿಂದಲೂ ಇದೇ ಮಾತು ಬಲಪಡುತ್ತದೆ. ಈ ವಿಷಯವನ್ನು ಪುಣೆಯ ಭಾರತ ಇತಿಹಾಸ ಸಂಶೋಧಕ ಮಂಡಳದ ಶ್ರೀ. ಖರೆಯವರ ಲೇಖನದ ಸಹಾಯದಿಂದ ನಾನು ವಿಶದವಾಗಿ ಕೆಲಕಾಲದ ಹಿಂದೆ ಪ್ರಸ್ತಾಪಿಸಿದ್ದೆನು (ಜಯಕರ್ನಾಟಕ ೧೯೩೩ನೆಯ ಡಿಸೆಂಬರ್ ಮತ್ತು ೧೯೩೪ನೆಯ ಮೇ). ಈ ಮಾತಿಗೆ ಇನ್ನಿಷ್ಟು ಪೋಷಕವಾದ ಪ್ರಮಾಣಗಳನ್ನು ಶೇಖರಿಸಿ, "ಪಂಪನು ನಿಜಾಮುರಾಜ್ಯದವನು, ಈಗಿನ ನೈಜಾಮ್ ಆಂಧ್ರನಾಡಿನವನು" ಎಂಬುದನ್ನು ಸಿದ್ಧಾಂತಿಸಿದ್ದೆನು (ಪ್ರಾಚೀನ ಕರ್ನಾಟಕ, ಸಂಪುಟ ೨ ಸಂಚಿಕೆ ೧). ಹೀಗಿದ್ದು ಈ ವಿಷಯದ ಕಡೆಗೆ ಸಾಹಿತಿಗಳು

CC-0. Jangamwadi Math Collection. Digitized by eGangotri

ಸಾಕಷ್ಟು ಗಮನವನ್ನು ಕೊಡದೆ ಇದ್ದುದು ಶೋಚನೀಯವಾಗಿದೆ. ಗಣ್ಯರಾದ ಕೆಲವು ಸಾಹಿತಿಗಳು ಪಂಪನನ್ನು ಕುರಿತು ಮಾತನಾಡುವಾಗ, ಇನ್ನೂ ಹಳೆಯ ಮಾತುಗಳನ್ನೆ ಅವಚಿಕೊಂಡು ಸಾಗಿದುದನ್ನು ನಾನು ಹಲವು ಸಲ ನೋಡಿದ್ದೇನೆ. ಹೀಗಾಗುವುದು ಸರಿಯಲ್ಲ. ಸತ್ಯಶೋಧಕರು ಅಸತ್ಯವೆಂದು ತೋರಿಬಂದ ವಿಷಯದ ಬಗೆಗೆ ಪಕ್ಷಪಾತವನ್ನು ಮಾಡಲಾಗದು.

ಪಂಪನು ಈಗಿನ ನೈಜಾಮ್ ಆಂಧ್ರದವನು—ಎಂದು ಸ್ಥೂಲವಾಗಿ ಸಿದ್ಧವಾಗಿದ್ದರೂ, ಆತನ ಸ್ಥಲ ನಿಶ್ಚಯವನ್ನು ಸಮರ್ಪಕವಾಗಿ ಮಾಡುವಲ್ಲಿ ಇನ್ನೂ ಸಂಶೋಧನೆಗೆ ಸಾಕಷ್ಟು ಎಡೆಯಿದೆ. ಸಂಶೋಧಕರು ಈ ವಿಷಯದತ್ತ ಹೆಚ್ಚಾದ ಲಕ್ಷ್ಯವಿತ್ತು ಸಂಶೋಧನೆಯನ್ನು ನಡೆಯಿಸಬೇಕು. ಹೈದರಾಬಾದದ ಆಚೆಯ ಕರೀಮನಗರ, ನಲಗೊಂಡ ಮೊದಲಾದ ಜಿಲ್ಲೆಗಳಲ್ಲಿ ಕೂಲಂಕಷವಾದ ಶೋಧನೆಯು ನಡೆದರೆ, ಫಲನಿಷ್ಪತ್ತಿಯಾದೀತೆಂದು ನನ್ನ ನಂಬುಗೆ. ಈ ಕಾರ್ಯವನ್ನು ಕೈಕೊಳ್ಳಬೇಕೆಂಬ ಕೆಲಕಾಲದ ನನ್ನ ಸಂಕಲ್ಪವು ಇದುವರೆಗೆ ಈಡೇರದೆ ಇದ್ದುದಕ್ಕೆ ವಿಷಾದಪಡುತ್ತೇನೆ!

ಪಂಪನ ಕಾಲದಲ್ಲಿ ಈ ನಾಡು ಅಚ್ಚಗನ್ನಡವಾಗಿರಬೇಕೆಂಬುದು ನಿರ್ವಿವಾದವಾಗಿದೆ. ಈಗ ಇಲ್ಲಿ ಕನ್ನಡಕ್ಕೆ ನಿಲ್ಲಲು ಎಡೆಯಿಲ್ಲ. ಈ ನಾಡಿಗೆ ಸಮೀಪವಿದ್ದು, ಕನ್ನಡಿಗರ ಬೀಡಾದ ಸ್ಥಳವೆಂದರೆ ಹೈದ್ರಾಬಾದ್ ನಗರಿ. ಈ ನಗರಿಯವರೇ ಪಂಪನಭಿಮಾನದಿಂದ ಪ್ರೇರಿತರಾಗಿ, ಪಂಪಮಹೋತ್ಸವಕ್ಕೆ ಮುಂದುವರಿಯುವುದು ಸಮರ್ಪಕವೆಂದು ಸೂಚಿಸದಿರಲಾರೆನು. ಈ ಉತ್ಸವದ ಪೂರ್ವದಲ್ಲಿ ಮೇಲೆ ಸೂಚಿಸಿದುವೇ ಮೊದಲಾದ ಸಂಶೋಧನಾದಿ ಕಾರ್ಯಗಳು ನಡೆಯಬೇಕು. ಪಂಪನನ್ನು ಕುರಿತು ಯಥಾರ್ಥವಾದ ಹೆಚ್ಚಿನ ಸುದ್ದಿಗಳು ಪ್ರಕಾಶಪಡಬೇಕು.

ಯಾರೇ ಮುಂದುವರಿಯಲಿ; ಪಂಪನ ನೆನೆವರಿಕೆಯನ್ನಂತೂ ಕನ್ನಡಿಗರು ಮಾಡಲೇ ಬೇಕಲ್ಲವೇ? ಬಹುಭಾಗ್ಯದಿಂದ ದೊರೆತ ಪಂಪನಂತಹ ಮಹಾಕವಿಯ ಸ್ಮಾರಕದ ಈ ಪ್ರಸಂಗವನ್ನು ಕನ್ನಡಿಗರು ಹುಸಿಯಾಗಿಸುವರೆ? ಯಾವ ನಾಡಿನವರೂ ಹೆಮ್ಮೆಪಡುವಂತಹ ಈ ಕವಿ ಪರಮೇಷ್ಠಿಗೆ ತಮ್ಮ ಕೃತಜ್ಞತೆಯ ಕುಸುಮಾಂಜಲಿಯನ್ನು ಅರ್ಪಿಸಿ ಧನ್ಯರಾಗದಂತಹ ಅಭಾಗಿಗಳೇ ಕನ್ನಡಿಗರು?

ಜಯವಾಗಲಿ ಜಯವಾಗಲಿ ಪಂಪಕವಿಕುಲಮಣಿಗೆ !

SHREENIVAS & Co.



ARTISTS & DESIGNERS.

Beau... & Faithful - Reproductions BY OUR PERFECT LINE, HALF-TONE & COLOUR PROCESS.

-THE PREMIER- Karnataka PHOTO ENGRAVERS.



- Malamaddi, DHARWAR.

CC-0. Jangamwadi Math Collection. Digitized by eGangotri

# ಜಯಕರ್ನಾಟಕ

## ಚಂದಾದಾರರಲ್ಲಿ

ವಾರ್ಷಿಕ ಚಂದಾ (ಅಂಚೆಯವೆಚ್ಚ ಸೇರಿ) ಒಳದೇಶ ೪-೮-೦; ಪರದೇಶ ೭-೦-೦
ಅರ್ಧವಾರ್ಷಿಕ—ಒಳದೇಶ ೨-೪-೦; ಪರದೇಶ ೩-೮-೦; ಬಿಡಿ ಸಂಚಿಕೆ ೦-೬-೦; ವ್ಹಿ.ಪಿ.ವೆಚ್ಚ ಬೇರೆ.

'ಜಯಕರ್ನಾಟಕ'ವು ಪ್ರತಿತಿಂಗಳ ಮೊದಲನೆಯ ತಾರೀಖಿಗೆ ಪ್ರಕಟವಾಗುವುದು. ಬೇಕಾದ ಸಂಚಿಕೆಯಿಂದ ಚಂದಾದಾರರಾಗಲು ಬರುವುದು. ಚಂದಾಹಣವನ್ನು ಮುಂಚಿತವಾಗಿಯೇ ಕಳಿಸಬೇಕು. ಇಲ್ಲವೆ ವ್ಹಿ. ಪಿ. ಯಿಂದ ತರಿಸಿಕೊಳ್ಳಬಹುದು. ಚಂದಾ ಅವಧಿ ಮುಗಿಯುವ ಮೊದಲು ಒಂದು ತಿಂಗಳು ಚಂದಾದಾರರಿಗೆ ತಿಳಿಸಲಾಗುವುದು. ಪತ್ರಿಕೆ ಬೇಡವಾದವರು ಹಾಗೆ ತಿಳಿಸಬೇಕು. ಇಲ್ಲದಿದ್ದಲ್ಲಿ ಮುಂದಿನ ವರ್ಷದ ಚಂದಾ ಹಣಕ್ಕಾಗಿ ವ್ಹಿ. ಪಿ. ಯನ್ನು ಕಳಿಸಲಾಗುವುದು. ಬೇಡವಾದವರು ಮುಂಚಿತ ತಿಳಿಸುವುದರ ಆಗತ್ಯದ ಕಡೆಗೆ ಚಂದಾದಾರರ ಲಕ್ಷ್ಯವನ್ನು ಎಳೆಯುತ್ತೇವೆ. ಯಾಕೆಂದರೆ ಅದರಿಂದ ವ್ಯರ್ಥ ವ್ಹಿ. ಪಿ ವೆಚ್ಚಕ್ಕೆ ಗುರಿಯಾಗುವುದು ನನುಗೆ ತಪ್ಪುವುದು. ಪತ್ರಿಕೆ ಬಾರದಿದ್ದವರು ಆ ತಿಂಗಳ ೧೫ನೆಯ ತಾರೀಖಿನೊಳಗೆ ತಿಳಿಸಬೇಕು. ಮುಂದಿನ ತಕರಾರುಗಳಿಗೆ ನಾವು ಹೊಣೆಗಾರರಲ್ಲ.

## ಜಾಹೀರಾತುದಾರರಲ್ಲಿ

ಜಯಕರ್ನಾಟಕವು ಕರ್ನಾಟಕದಲ್ಲೆಲ್ಲ ಸಂಚರಿಸುವುದಲ್ಲದೆ, ಪರಪ್ರಾಂತ-ಪರದೇಶಗಳಲ್ಲಿಯೂ ಹೋಗುವುದರಿಂದ, ವ್ಯಾಪಾರ ವ್ಯವಹಾರಗಳ ಪ್ರಚಾರಕ್ಕೆ ಉತ್ತಮ ಸಾಧ್ಯವು.

ಜಾಹೀರಾತುದಾರರು ೨೫% ಹಣವನ್ನು ಮುಂಗಡ ಕಳಿಸಲೇ ಬೇಕು. ಒಂದೇ ಸಲ ಪ್ರಕಟನೆ ಕೊಡಲಪೇಕ್ಷಿಸುವವರು ಇಡಿಯ ಹಣವನ್ನು ಕಳಿಸಬೇಕು. ೨೦ನೆಯ ತಾ. ನ ಒಳಗಾಗಿ, ಜಾಹೀರಾತು ಕಾರ್ಯಾಲಯಕ್ಕೆ ತಲುಪಬೇಕು.

### ಪ್ರಕಟನೆಯ ದರಗಳು

| | ವರ್ಷ. | ೬ ತಿಂಗಳು. | ೩ ತಿಂಗಳು. | ೧ ಸಾರೆ. |
|---|---|---|---|---|
| ಒಂದು ಪುಟಕ್ಕೆ | ೧೮೦ ರೂ. | ೯೫ ರೂ. | ೫೦ ರೂ. | ೨೦ ರೂ. |
| ಅರ್ಧ ಪುಟಕ್ಕೆ | ೯೫ ,, | ೫೦ ,, | ೩೦ ,, | ೧೨ ,, |
| ೧/೪ ಪುಟಕ್ಕೆ | ೫೦ ,, | ೩೦ ,, | ೨೦ ,, | ೭ ,, |
| ೧/೮ ಪುಟಕ್ಕೆ | ೩೦ ,, | ೨೦ ,, | ೧೨ ,, | ೪ ,, |

ವಿಶೇಷ ಸ್ಥಳ ಬೇಕಾದಲ್ಲಿ ಮತ್ತು ಹೆಚ್ಚಿನ ವಿವರಗಳಿಗಾಗಿ ಬರೆದು ತಿಳಿದುಕೊಳ್ಳಬೇಕು.

## ಬರೆಹಗಾರರಲ್ಲಿ

(೧) ತಮ್ಮ ಲೇಖನವು ಸ್ವೀಕೃತ-ಅಸ್ವೀಕೃತ ಎಂಬ ಬಗ್ಗೆ ತಿಳಿದುಕೊಳ್ಳಲು ಬಯಸುವ ಬರೆಹಗಾರರು, ತಮ್ಮ ಲೇಖನದೊಡನೆ ಅಂಚೆಯ ವೆಚ್ಚಕ್ಕಾಗಿ ಮೂರು ಬಿಲ್ಲೆಗಳ ಟಿಕೀಟೊಂದನ್ನು ಇಡಬೇಕು. (೨) ತಮ್ಮ ಲೇಖನಗಳನ್ನು ಮರಳಿ ಬಯಸುವವರು ಅದಕ್ಕೆ ತಗಲುವ ಆಂಚೆವೆಚ್ಚದಷ್ಟು ಟಿಕೀಟುಗಳನ್ನು ಅದರೊಂದಿಗೆ ಇಡಬೇಕು. (೩) ಲೇಖನಗಳನ್ನು ಒಂದೇ ಮಗ್ಗಲಿಗೆ ಸುವಾಚ್ಯವಾದ ಅಕ್ಷರಗಳಲ್ಲಿ ಬರೆಯಬೇಕು. ಸಾಕಷ್ಟು ಮಾರ್ಜಿನ್ ಬಿಡಬೇಕು. (೪) ಲೇಖನದ ಹಸ್ತಪ್ರತಿಯು ಜ. ಕ. ದ ನಾಲ್ಕು ಪುಟಗಳನ್ನು ಸಾಮಾನ್ಯವಾಗಿ ಮಿಕ್ಕಬಾರದು. (೫) ಜಯಕರ್ನಾಟಕಕ್ಕೆ ಬರುವ ಲೇಖನಗಳು ಜಯಕರ್ನಾಟಕಕ್ಕೆಂದೇ ಇರಬೇಕು. ಇಲ್ಲಿ ಪ್ರಕಟವಾಗುವ ಮೊದಲು ಇನ್ನೆಲ್ಲಿಯೂ ಪ್ರಕಟವಾಗಿರಬಾರದು. ಆ ಮೇಲೂ ಬೇರೆಕಡೆ ಪ್ರಕಟವಾಗುವ ಪಕ್ಷದಲ್ಲಿ ಸಂಪಾದಕರ ಅನುಮತಿಯನ್ನು ಪಡೆಯಬೇಕು. (೬) ಜಯಕರ್ನಾಟಕಕ್ಕೆಂದು ಬಂದ ಲೇಖನವು ಉದ್ಧೃತ ಇಲ್ಲವೆ ಅನ್ಯಭಾಷೆಯಿಂದ ಪರಿವರ್ತಿತವಿದ್ದಲ್ಲಿ ಮೂಲವನ್ನು ಉಲ್ಲೇಖಿಸಬೇಕು.

## ಸಾಮಾನ್ಯ

ಚೆಕ್ಕುಗಳು, ಮನಿಯಾರ್ಡರುಗಳು, ಬೇರೆ ಬಗೆಯ ಹಣದ ವ್ಯವಹಾರ-ಇವನ್ನು ಮತ್ತು ಲೇಖನಾದಿಗಳ ಪತ್ರವ್ಯವಹಾರವನ್ನು "ಸಂಪಾದಕ ಜಯಕರ್ನಾಟಕ, ಧಾರವಾಡ" ಇವರ ಹೆಸರಿನಲ್ಲಿಯೂ, ಜಾಹೀರಾತಿನ ಪತ್ರವ್ಯವಹಾರವನ್ನು 'ಕಾರ್ಯದರ್ಶಿ, ಜ. ಕ. ಪ್ರಕಟನಾ ವಿಭಾಗ' ಇವರ ಹೆಸರಿನಲ್ಲಿಯೂ ಬೇರೆ ಕಾರ್ಯಾಲಯದ ವ್ಯವಹಾರವನ್ನು "ವ್ಯವಸ್ಥಾಪಕ" ರ ಹೆಸರಿನಲ್ಲಿಯೂ ನಡೆಯಿಸಬೇಕು.

ಜಯಕರ್ನಾಟಕ ಕಾರ್ಯಾಲಯ, ಧಾರವಾಡ

CC-0. Jangamwadi Math Collection. Digitized by eGangotri

# ಒಂದು ನೃತ್ಯೋತ್ಸವ

ಶ್ರೀಮಾನ್ ಮಂ. ಆ. ದೊರೆಸ್ವಾಮಿ ಐಯಂಗಾರ್ಯರು ಎಂ. ಎ. ಬಿ. ಎಲ್. ಮೈಸೂರು.



ಸೈನಿಕರೊಡನೆ ನೃತ್ಯಕ್ಕೆ ಹೋಗಲಾಗದೆಂದು ತಾಯಿ ಎಷ್ಟೆಷ್ಟೊ ಬೆದರಿಕೆಯನ್ನೊಡ್ಡಿದಳು. ಆದರೂ ಅವಳು ಹೋದಳು. ಕಣ್ಣು ಮನಸ್ಸುಗಳನ್ನು ಸೆಳೆದ ಸುಂದರನೊಬ್ಬನನ್ನು ನೃತ್ಯದಲ್ಲಿ ಜೊತೆಗಾರನನ್ನಾಗಿ ಪಡೆದಳು. ಆದರೆ ಆಕೆಯ ದುರ್ವಿಧಿ; ಕೈಯಲ್ಲಿ ಹಿಡಿದ ತುತ್ತು ಬಾಯವರೆಗೆ ಬರಲಿಲ್ಲ !



ಪ್ರಿಯಸಖಿ, ನಾನು ನಿರಾಶಾರೋಗದಿಂದ ಹಾಸಿಗೆ ಹಿಡಿದು ಹೋಗಿದ್ದೇನೆ. ಇನ್ನು ಮುಂದಕ್ಕೆ ನಾನು ಯಾವ ನೃತ್ಯದಲ್ಲೂ ಭಾಗಿಯಾಗುವುದಿಲ್ಲ. ನಾನು ಒಂದು ಕನ್ಯಾ-ವಿಹಾರಕ್ಕೆ ಸೇರಿಕೊಂಡೋ ಅಥವಾ ವಿವಾಹಮಾಡಿ-ಕೊಂಡೋ ಇಲ್ಲವೆ ಇನ್ನಾವುದಾದರೂ ವಿಧದಲ್ಲಿಯೋ ನನ್ನ ಜೀವನವನ್ನು ಕಳೆದುಕೊಂಡು ಬಿಡುತ್ತೇನೆ. ನನಗೆ ಎಂತಹ ಸಂಗತಿ ಸಂಭವಿಸಿತು, ಬಲ್ಲೆಯಾ ? ಅದು ಎಷ್ಟು ಭೀಕರ ! ಅಂತಹ ಸಂಗತಿಯನ್ನು ನೀನು ಕಾದಂಬರಿ--ಕಥೆಯಲ್ಲಿ ಸಹ ಓದಲಾರೆ.

ಹಂಗೇರಿಯ ಸೇನೆಯು, ಬ್ರಾನ್‌ಯಿಸ್ಕೋ ಯುದ್ಧವಾದ ಮೇಲೆ—ಕಳೆದವಾರ ಈ ಮಾರ್ಗವಾಗಿ ಹೋಯಿತೆಂದು ನೀನು ಕೇಳಿರಬಹುದು. ಅದು ಬರುತ್ತದೆಂಬ ಸಮಾಚಾರ ಬಂದೊಡನೆಯೆ ಇಲ್ಲಿ ಅತ್ಯಂತ ಕಳವಳವೂ ಗಲಭೆಯೂ ಎದ್ದಿತು. ಸೇನೆಯವರು ಊರಿಗೆ ಬೆಂಕಿಹಚ್ಚಿ, ಸೂರೆಮಾಡಿ, ನಮ್ಮನ್ನೆಲ್ಲಾ ಕೊಂದುಬಿಡುತ್ತಾರೆಂದು ನಾವೆಲ್ಲರೂ ನಿರ್ಧರಿಸಿದೆವು. ಅಮ್ಮನಂತೂ....ಅವರು ಮಾಡತಕ್ಕ ಹಾವಳಿ ಇಷ್ಟಿಷ್ಟೆಂದು ತಿಳಿಯುವುದೇ ಅಶಕ್ಯವೆಂದು ಹೇಳುತ್ತಿದ್ದಳು. ಅವರು ನನ್ನನ್ನು ಎತ್ತಿಕೊಂಡು ಹೋಗಬಹುದಾದ್ದರಿಂದ, ನಾನು ನನ್ನ ಮುಖವನ್ನು ಉಗುರುಗಳಿಂದ ಪರಚಿಕೊಂಡು ವಿಕಾರಪಡಿಸಿಕೊಳ್ಳಬೇಕೆಂದವಳು ಅಪೇಕ್ಷಿಸಿದಳು. ನೀನು ಇಂತಹ ಮಾತನ್ನು ಎಂದಾದರೂ ಕೇಳಿರುವೆಯಾ ?

ಸರಿ, ಸ್ವಲ್ಪದರಲ್ಲಿಯೆ ಸೇನೆಯು ವಾದ್ಯದೊಡನೆ ಊರಿಗೆ ಬಂದಿತು. ಊರವರೊಡನೆ ಅಪ್ಪನು ಅದನ್ನು ಎದುರ್ಗೊಳ್ಳಲು ಹೋದನು. ಸೈನಿಕರನ್ನು ನೋಡಲು ನಮ್ಮ ಆಳುಗಳೆಲ್ಲರೂ ಓಡಿದರು. ಅಮ್ಮನು ಮಾತ್ರ ಎಲ್ಲೂ ಗೋಚರಿಸಲಿಲ್ಲ. ಹಿಂದಣ ದಿವಸದಿಂದಲೂ ಅವಳು ಅವಿತುಕೊಳ್ಳಲು ಸ್ಥಳಹುಡುಕುತ್ತ, ನಾನು ಕೂಗಿ ಹುಡುಕಿದರೂ ಉತ್ತರ ಹೇಳದೆ ಮರೆಯಾಗಿದ್ದಳು. ಆಕಸ್ಮಾತ್ತಾಗಿ ಅವಳನ್ನು ಒಂದು ಅಲಮಾರಿನಲ್ಲೋ ಗೂಡಿನಲ್ಲೋ ನಾನು ಕಂಡದ್ದೇ ಆದರೆ, ಅವಳ ರಹಸ್ಯಸ್ಥಾನವನ್ನು ಬಯಲು ಮಾಡಿದೆನೆಂದು ನನ್ನನ್ನು ಆಕ್ಷೇಪಿಸುತ್ತಿದ್ದಳು.

ಮನೆಯಲ್ಲಿ ನಾನೊಬ್ಬಳೇ ಆಗಿಬಿಟ್ಟಿದ್ದೆನಾಗಿ ಒಂದು ವೇಳೆ ಸೇನೆಯವರು ಮನೆಗೆ ಬಂದರೆಂದರೆ, ನನ್ನನ್ನೇ ತಿಂದು ಬಿಡುವುದಕ್ಕೆ ಪ್ರತಿಯಾಗಿ ಮತ್ತೇನಾದರೂ ತಿನ್ನಲು ಕಣ್ಣಿಗೆ ಬಿದ್ದರೆ ನನ್ನನ್ನು ಉಳುಹಿಸುವರೆಂದು ಭಾವಿಸಿ, ಮನೆಯಲ್ಲಿದ್ದ ತಿಂಡಿ-ತೀರ್ಥ-ಪಾನಗಳನ್ನೆಲ್ಲಾ ತಣಿಗೆ ಹಾಕಿ ಬಡಿಸಿ ಸಿದ್ಧಮಾಡಿಟ್ಟೆನು. ಅವರು ಕೇಳಿದ್ದನ್ನೆಲ್ಲಾ ಶಾಂತವಾಗಿ ಕೊಡುತ್ತಾ ಬಂದರೆ, ಅವರನ್ನು ನೋಡಿ ನಾನು ಭಯಪಟ್ಟಿಲ್ಲವೆಂದು ಅವರು ಕಂಡುಕೊಳ್ಳುವರು—ಎಂದು ನಿಶ್ಚೈಸಿದೆನು. ಬೀದಿಯಿಂದ ಸ್ವಲ್ಪದರಲ್ಲಿಯೇ ಆರ್ತನಾದವು ಹಬ್ಬುವುದೆಂದು ನಾನು ನಿರೀಕ್ಷಿಸುತ್ತಾ ಕಾದಿದ್ದೆನು.

ಕಡೆಗೆ ನಮ್ಮ ಮನೆಯ ಅಂಗಳದಲ್ಲಿ ಕಾಲುಗಳ ಸಪ್ಪಳವೂ ಖಡ್ಗಗಳ ಕಟಕಟ ಧ್ವನಿಯೂ ಕೇಳಿಸಿತು. ಆದರೆ

CC-0. Jangamwadi Math Collection. Digitized by eGangotri

ಯಾವ ಪೈಗುಳಾಟದ ಸದ್ದೂ ಕೇಳಿಸಲಿಲ್ಲ. ಅದಕ್ಕೆ ಪ್ರತಿಯಾಗಿ ನನ್ನ ಕೊಠಡಿಯ ಬಾಗಿಲನ್ನು ಗಂಭೀರವಾಗಿ ತಟ್ಟುವ ಸದ್ದು ಹೊರಟಿತು. ನನ್ನ ಗಾಬರಿಯಲ್ಲಿ ನಾನು 'ಒಳಗೆ ಬನ್ನಿ!' ಎಂದು ಹೇಳಲು ಅಶಕ್ತಳಾಗಿದ್ದೆನು. ಅದರಿಂದ ಅವರು ನನ್ನ ಬಾಗಿಲನ್ನು ಒಡೆದುಕೊಂಡು ಒಳಗೆ ನುಗ್ಗಿದರೆಂದು ಊಹಿಸಬೇಡ. ಪುನಃ ಅವರು ಮರ್ಯಾದೆಯಿಂದ ಬಾಗಿಲನ್ನು ತಟ್ಟಿದರು. ನಾನು ನನ್ನ ಭೀತಸ್ವರದಲ್ಲಿ ಒಳಗೆ ಬರಬಹುದೆಂದು ಅನುಮತಿಕೊಡುವವರೆಗೂ ಅವರು ಹೊರಗೇ ಇದ್ದರು. ಅಮ್ಮನು ವರ್ಣಿಸುತ್ತಿದ್ದಂತೆ ಚರ್ಮದ ಕುಲ್ಲಾವಿಯಿಂದಾವೃತವಾದ ಚೌಕದಲೆಯಿಂದಲೂ, ನಡುವಿನವರೆಗೂ ಚಾಚಿಕೊಂಡಿದ್ದ ದಾಡಿಯಿಂದಲೂ ಕರಡಿಯ ತೊಗಲಿನ ಹೊದ್ದಿಕೆಯಿಂದಲೂ, ಕೊಳ್ಳಿಯನ್ನು ಸಾಗಿಸಲು ಬೆನ್ನಿನ ಮೇಲೆ ಹಾಕಿದ್ದ ದೊಡ್ಡ ಚೀಲದಿಂದಲೂ, ದೇಹದ ಎಲ್ಲಾ ಭಾಗಗಳಲ್ಲೂ ಸಿಕ್ಕಿಸಲ್ಪಟ್ಟಿರುವ ಅಸ್ತ್ರ-ಶಸ್ತ್ರಗಳಿಂದಲೂ ಕೂಡಿದ, ನಾಯಿಮೊಗದ ಆರು ಮಂದಿ ತಾರ್ತರರು ಒಳಕ್ಕೆ ನುಗ್ಗುವುದು ಖಂಡಿತವೆಂದು ನಾನು ಭಾವಿಸುತ್ತಿದ್ದೆನು. ಆದರೆ ಇತರ ಮನುಷ್ಯರಂತೆಯೇ ನಾಜೂಕಾಗಿ ವೇಷಭೂಷಣಗಳನ್ನು ಧರಿಸಿದ್ದ ಇಬ್ಬರು ಯುವಕಸೇನಾಧಿಕಾರಿಗಳು, ಒಬ್ಬನು ಗೌರವರ್ಣದವನು— ಮತ್ತೊಬ್ಬನು ಶ್ಯಾಮಲವರ್ಣದವನು — ಒಳಕ್ಕೆ ಬಂದುದನ್ನು ನೋಡಿ, ನಾನು ಎಷ್ಟು ಆಶ್ಚರ್ಯಪಟ್ಟಿರಬೇಕು.... ನೀನೇ ಊಹಿಸು!

ಇಬ್ಬರೂ ಸುಂದರರಾಗಿದ್ದರು. ಅವರು ಮಾಡಿದ ಮೊದಲನೆಯ ಕೆಲಸವು ತಮ್ಮಿಂದ ನನಗೆ ಆಗಿರಬಹುದಾದ ತೊಂದರೆಗೆ ಮನ್ನಣೆಯನ್ನು ಬೇಡಿಕೊಂಡುದು. ನಾನು ನನಗೆ ತೊಂದರೆ ಏನೂ ಇಲ್ಲವೆಂದೂ, ಅವರು ಬಯಸಿದುದನ್ನು ಒದಗಿಸಲು ಸಿದ್ಧಳಾಗಿರುವೆನೆಂದೂ ಹೇಳಿದೆನು. ಶ್ಯಾಮಲಾಂಗದ ಯುವಕನಿಗೆ ನನ್ನ ಭೋಜನಸಿದ್ಧತೆಯನ್ನು ನೋಡಿ ಕಿರುನಗೆ ಬಂದಿತು. ಈ ಸಿದ್ಧತೆಯನ್ನೆಲ್ಲಾ ನಾನು ಅವನಿಗಾಗಿಯೆ ಮಾಡಿರಬಹುದೆಂದು ಅವನು ಭಾವಿಸುತ್ತಿರಬೇಕೆಂದು ತಿಳಿದು, ನನಗೆ ತುಂಬಾ ನಾಚಿಕೆಯಾಯಿತು. ಅವನ ಜತೆಗಾರನು ನಾನು ಸಹಾಯಮಾಡುತ್ತೇನೆಂದು ಹೇಳಿದುದಕ್ಕೆ ಮರ್ಯಾದೆಯಿಂದ ವಂದಿಸಿ, ಮಲಗಿ ವಿಶ್ರಾಂತಿಪಡೆಯುವುದಕ್ಕೆ ತಮ್ಮಿಬ್ಬರಿಗೂ ಒಂದು ಕೊಠಡಿಯನ್ನು ತೋರಿಸಿಕೊಟ್ಟರೆ ಸಾಕೆಂದೂ, ಆರು ವಾರಗಳಿಂದ ತಾವು ಹಾಸಿಗೆಯನ್ನು ಕಂಡಿಲ್ಲವೆಂದೂ, ಎರಡು ದಿನಸಗಳಿಂದ ಮಲಗಿಯೇ ಇಲ್ಲವೆಂದೂ ತಿಳಿಸಿದನು.

ಪಾಪ! ಅವರನ್ನು ನೋಡಿ ನನಗೆ ತುಂಬ ಮರುಕವುಂಟಾಯಿತು; ಆರು ವಾರದಿಂದ ಹಾಸಿಗೆಯೇ ಇಲ್ಲವಂತೆ!

"ಕುರ್ಚಿಯ ಮೇಲೆ ಕುಳಿತೋ ಅಥವಾ ಡೇರೆಯ ಹಾಸಿಗೆಯಲ್ಲೋ, ಆರು ವಾರ ಮಲಗುವುದು ತುಂಬಾ ಕಷ್ಟಕರವಾಗಿದ್ದಿರಬೇಕು" ಎಂದೆನು. ಅದಕ್ಕೆ ಅವರಿಬ್ಬರೂ ನಕ್ಕು, "ಬರೀ ನೆಲದ ಮೇಲೆ—ಹಿಮದ ಮೇಲೆ— ಆಕಾಶದ ಕೆಳಗೆ ಮಲಗುತ್ತಿದ್ದೆವು" ಎಂದರು. ನಮ್ಮ ಆಳುಗಳು ಕೂಡ ಹಿಮಕಾಲದಲ್ಲಿ, ಮನೆಯಿಂದ ಹೊರಗೆ ಮಲಗುವುದಾಗಿದ್ದರೆ ಸತ್ತುಹೋಗುತ್ತಿದ್ದರು.

ನಾನು ಅವರನ್ನು ಕರೆದುಕೊಂಡು, ನಮ್ಮ ಮನೆಯಲ್ಲಿ ಅತ್ಯುತ್ಕೃಷ್ಟವೆನ್ನಿಸಿದ್ದ ಕೊಠಡಿಗೆ ಹೋದೆನು. ಅಲ್ಲಿ ಎರಡು ಹಾಸಿಗೆಗಳು ಇದ್ದುವು. ಮನೆಯಲ್ಲಿ ಆಳುಗಳಾರೂ ಇರಲಿಲ್ಲವಾದ್ದರಿಂದ ಹಾಸಿಗೆಗಳನ್ನು ನಾನೇ ಹಾಸುವುದಕ್ಕೆ ಪ್ರಯತ್ನಿಸಿದೆನು. ಅವರು ಅದಕ್ಕೆ ಒಪ್ಪದೆ ತಾವೇ ಅದನ್ನು ಮಾಡಿಕೊಳ್ಳುವುದಾಗಿ ಹೇಳಿದರು. ನಾನು ಅವರನ್ನು ಅಲ್ಲಿ ಬಿಟ್ಟು ನನ್ನ ಕೊಠಡಿಗೆ ಹಿಂತಿರುಗಿದೆನು.

ಹಾಗೆ ಮಾಡಿದ ಒಂದೆರಡು ನಿಮಿಷಗಳಲ್ಲಿಯೇ ಅವರನ್ನು ಬಿಟ್ಟು ಬಂದಿದ್ದ ಕೊಠಡಿಯಿಂದ "ಅಯ್ಯೋ ಬನ್ನಿ! ಕೊಲೆ! ಕಳ್ಳರು!" ಇತ್ಯಾದಿ ಕೂಗುಗಳೂ ಭಯಂಕರವಾದ ಚೀತ್ಕಾರವೂ ಕೇಳಬಂದುವು. ಧ್ವನಿಯು ನನ್ನ ಪರಿಚಯವಾದ್ದಾಗಿದ್ದಿತಾದರೂ ನನ್ನ ಕಳವಳದಲ್ಲಿ ಅದು ಯಾರದೆಂಬುದು ನನ್ನ ನೆನಪಿಗೆ ಬರಲಿಲ್ಲ. ಭಯದಿಂದ ನಡುಗುತ್ತ ನಾನು ನಿಂತಲ್ಲಿಯೇ ನಿಂತಿದ್ದೆನು. ಆ ಧ್ವನಿಯು ಕ್ರಮವಾಗಿ ನಾನಿದ್ದ ಸ್ಥಳಕ್ಕೆ ಬಂದಿತು. ಬಂದವಳು ನನ್ನ ಅಮ್ಮನು. ಅವಳ ಸ್ಥಿತಿಯು ಭಯಂಕರವಾಗಿತ್ತು. ಅವರ ಉಡುಪೆಲ್ಲಾ ಮುದುಡಿಹೋಗಿತ್ತು; ತಲೆಯ ಮೇಲಿನ ಟೊಪ್ಪಿಗೆಯು ಮುಖವನ್ನೂ ಕಣ್ಣನ್ನೂ ಮುಚ್ಚಿಕೊಂಡಿತ್ತು; ಒಂದು ಕಾಲಿನ ಪಾದುಕೆಯು ಕಳೆದುಹೋಗಿತ್ತು; ಒಲೆಯಿಂದ ಬೆಂದುಬಂದವರಂತೆ ಮುಖವೆಲ್ಲಾ ಕೆಂಪಗಾಗಿ ಬಿಟ್ಟಿತ್ತು. ಏನಾಯಿತು ಎಂದು ತಿಳಿಯಲು ನನಗೆ ಬಹಳ ಹೊತ್ತು ಹಿಡಿಯಿತು. ನಾನು ನಮ್ಮ ಅತಿಥಿಗಳನ್ನು ಕರೆದುಕೊಂಡು ಹೋಗಿ ಬಿಟ್ಟಿದ್ದ ಕೊಠಡಿಯಲ್ಲಿ, ಅವರಿಗೆ ತೋರಿಸಿದ ಒಂದು ಹಾಸಿಗೆಯ ಅಡಿಯಲ್ಲಿ ಅಮ್ಮನು ಅವಿತುಕೊಂಡಿದ್ದಳಂತೆ. ದಣಿದು ಸತ್ತಿದ್ದ ಸೇನಾಧಿಕಾರಿಯು ಹಾಸಿಗೆಯನ್ನು ಬಿಚ್ಚಿದ್ದೇ ತಡ, ಅದರಲ್ಲಿ ಬಿದ್ದುಕೊಂಡನಂತೆ. ಅಮ್ಮನು ಕೂಗಿಕೊಂಡು ರಂಪಹಚ್ಚಿದಳು. ಬಹುಪ್ರಯತ್ನದಿಂದ ನಾನು ಅವಳನ್ನು ತಿಳಿಹೇಳಿ, ಈ ಸೇನಾಧಿಕಾರಿಗಳು

CC-0. Jangamwadi Math Collection. Digitized by eGangotri

ನಮ್ಮನ್ನು ಕೊಂದು ಸುಲಿಯಲು ಬಂದಿಲ್ಲವೆಂದು ನಂಬಿಕೆ ಹುಟ್ಟಿಸಿದೆನು. ಅಮ್ಮನು 'ಇನ್ನು ಮುಂದೆ ಅನಿತುಕೊಳ್ಳು-ವುದಿಲ್ಲ'—ಎಂದು ಧೈರ್ಯಮಾಡಿದಳು. ಅವಳು ಊದು-ರೋಗದ ಚಿಕಿತ್ಸೆಗಾಗಿ, ಚೆನ್ನಾಗಿ ಬೆವರಲು ಹಾಸಿಗೆಯ ಕೆಳಗೆ ಮಲಗಿದ್ದಳೆಂದು, ನಾನು ಆ ಸೇನಾಧಿಕಾರಿಗಳಿಗೆ ತಿಳಿಯ ಹೇಳುವುದಾಗಿ ಹೇಳಿ ಸಮಾಧಾನಮಾಡಿದೆನು.

ನಮ್ಮ ಅತಿಥಿಗಳಿಗೆ ಇನ್ನೂ ನಿದ್ರೆ ಹತ್ತಿತೋ ಇಲ್ಲವೋ, ಅವರನ್ನು ಹುಡುಕಿಕೊಂಡು ಒಬ್ಬ ಚಾರನು ಬಂದನು. ಅವರು ದಣಿದು ನಿದ್ರಿಸುತ್ತಿರುವುದರಿಂದ 'ನೀನು ಅವರನ್ನು ಈಗ ನೋಡಲಿಕ್ಕಾಗುವುದಿಲ್ಲ' ಎಂದು ನಾನು ಹೇಳಿದೆನು. ಅವರು ಮಲಗಿದ್ದ ಸ್ಥಳವನ್ನು ಕೇಳಿ ತಿಳಿದುಕೊಂಡು, ಒಡನೆಯೇ ಅಲ್ಲಿಗೆ ಹೋದನು. ಅಧಿಕಾರಿಗಳು ಇವನ ಅಕೃತ್ಯಕ್ಕಾಗಿ ಇವನನ್ನು ಕಡಿದು ಚೆಲ್ಲದಿರಲಾರರು.... ಎಂದು ನಾನು ಎಣಿಸುತ್ತಿದ್ದಾಗ, ಅವರಿಬ್ಬರೂ ಪೂರ್ಣವಾಗಿ ಉಡುಪನ್ನು ಧರಿಸಿ, ಚಾರನ ಜತೆಯಲ್ಲಿ ಅವಸರದಿಂದ ಹೊರಟುಹೋದರು. ಅವರ ಮೇಲಿನ ಅಧಿಕಾರಿಯು ಅವರನ್ನು ಕರೆಯಕಳುಹಿದ್ದನಂತೆ.

ಸೈನಿಕಜೀವನವು ಎಂತಹ ವಿಚಿತ್ರವಾದುದು ! ಜನರು ಸ್ವಲ್ಪವೂ ಎದುರುಬೀಳದೆ ವಿಧೇಯಿಸುವುದಾದರೂ ಹೇಗೆ! ನಾನು ಎಂದಿಗೂ ಸೈನಿಕಳಾಗಲಾರೆನು. ಏಕೆಂದರೆ, ನನಗೆ ಕೊಡತಕ್ಕ ಆಜ್ಞೆಯ ಕಾರಣವನ್ನು ನನಗೆ ಪೂರ್ವ-ಭಾವಿಯಾಗಿಯೇ ತಿಳಿಸಬೇಕೆಂದು ನಾನು ಬಯಸತಕ್ಕಂಥ-ವಳು.

ಅರ್ಧಗಂಟೆಯೊಳಗಾಗಿ ಸೇನಾಧಿಕಾರಿಗಳಿಬ್ಬರೂ ನಿದ್ದೆ-ಗಿದ್ದೆಯ ಯೋಚನೆಯೇ ಇಲ್ಲದೆ, ಹರ್ಷಚಿತ್ತರಾಗಿ ಹಿಂತಿರುಗಿಬಂದರು. ಅವರು ನನ್ನನ್ನೂ ಅಮ್ಮನನ್ನೂ ಕರೆದು, ಆ ರಾತ್ರಿ ತಮ್ಮ ಸೇನಾಧಿಕಾರಿ ಮಂಡಲದವರು ಒಂದು ನೃತ್ಯೋತ್ಸವವನ್ನು ಏರ್ಪಡಿಸಿರುವುದಾಗಿಯೂ ಅದಕ್ಕೆ ತಮ್ಮಿಬ್ಬರಿಗೂ ಆಹ್ವಾನವಿರುವುದೆಂದೂ ಸಂಭ್ರಮ-ದಿಂದ ತಿಳಿಸಿದರು. ಆ ಉತ್ಸವದಲ್ಲಿ ನಾನು ತಮ್ಮಿಬ್ಬರೊ-ಡನೆಯೂ ಹಲವು ಬಾರಿ ನೃತ್ಯವಾಡಬೇಕೆಂದು ಕೇಳಿ-ಕೊಂಡರು. ನಾನು ಒಪ್ಪಿಕೊಂಡೆನು. ಅವರು ನಿದ್ರೆಯ ಚಿಂತೆಯನ್ನು ಬಿಟ್ಟು, ರಾತ್ರಿಯ ಉತ್ಸವದ ವಿಚಾರವಾಗಿ ಮಾತಾಡುತ್ತ ಕುಳಿತರು.

ಅಮ್ಮನು ರಾತ್ರಿಯ ಉತ್ಸವಕ್ಕೆ ಹೋಗಲು ಇಲ್ಲದ ವಿಘ್ನಗಳನ್ನೆಲ್ಲಾ ತಂದೊಡ್ಡಿದಳು. ನೃತ್ಯಕ್ಕೆ ತಕ್ಕ ಉಡುಪು ನನಗೆ ಇಲ್ಲವೆಂದು ಅಡ್ಡಿತೆಗೆದಳು. 'ನನ್ನ ಬಿಳಿಯ ಉಡುಪು ಸಾಕಾಗುತ್ತದೆ' ಎಂದು ನಾನು ಹೇಳಿದೆ. 'ಅದು ಹಳೆಯ ಮಾದರಿ' ಎಂದು ಅವಳು ಆಕ್ಷೇಪಿಸಿದಳು. ಕಂಠಪ್ರದೇಶ-ದಲ್ಲಿ, ಸೀನೆಗೆ ಗುರುತಾದ ಬಣ್ಣದ ಒಂದು ವಸ್ತ್ರವನ್ನು ಮೇಲುಹೊದ್ದಿಕೆಯಾಗಿ ಧರಿಸಿಕೊಂಡರೆ ಯಾವ ತರದ ಉಡುಪೂ ಸರಿಹೋಗುತ್ತದೆಂದು ಶ್ಯಾಮಲಾಂಗದ ಸೇನಾಧಿ-ಕಾರಿಯು ಹೇಳಿದನು. 'ನನ್ನ ಕಾಲು ನೋಯುತ್ತದೆ' ಎಂದು ಅಮ್ಮನು ಮತ್ತೆ ಎತ್ತಿದಳು. "ನೀನು ನೃತ್ಯ-ವಾಡಲು ಯಾವ ಆವಶ್ಯಕತೆಯೂ ಇಲ್ಲ" ಎಂದು ನಾನು ಹೇಳಿಬಿಟ್ಟೆನು. ಈ ಮಾತಿಗೆ ಅಧಿಕಾರಿಗಳು ಮರ್ಯಾದೆ-ಗಾಗಿ ನಗದೆ ಇದ್ದರು. ಅಮ್ಮನು ಸಹ ಅವರು ಹೋಗುವ ವರೆಗೂ ಸುಮ್ಮನಿದ್ದು, "ಮಗು, ನಿನಗೆ ಸ್ವಲ್ಪವೂ ಬುದ್ಧಿ ಇಲ್ಲ. ಅಪಾಯವನ್ನು ನೀನಾಗಿ ಇದಿರ್ಗೊಂಡು ಹಾಳು-ಮಾಡಿಕೊಳ್ಳುತ್ತಿರುವೆಯಲ್ಲಾ !" ಎಂದು ಕೋಪದಿಂದ ಹೇಳಿದಳು. ನಾನು ಪ್ರತಿಸಲ ನೃತ್ಯೋತ್ಸವಕ್ಕೆ ಹೋಗು-ವಾಗಲೂ ಮೈಗೆ ನೆಗಡಿಯಾಗುತ್ತದೆಂದು ಅಮ್ಮನು ಆಕ್ಷೇಪಿಸುತ್ತಿದ್ದಳು. ಈಗಲೂ ಅದಕ್ಕಾಗಿಯೇ ಅವಳು ಹೇಳುತ್ತಾಳೆಂದು ಎಣಿಸಿ, ನಾನು ನೆಗಡಿಯಾಗದಂತೆ ನೋಡಿಕೊಳ್ಳುವುದಾಗಿ ಹೇಳಿದೆನು. "ನಿನಗೆ ಸ್ವಲ್ಪವೂ ಜ್ಞಾನವಿಲ್ಲ; ಈ ಉತ್ಸವವನ್ನು ಅವರು ಸುಮ್ಮಾನಕ್ಕಾಗಿಯೇ ಮಾಡುತ್ತಿರುವುದು ? ಇದೆಲ್ಲಾ ಬರಿಯ ಕುಟಿಲತನ. ಈ ಸೇನಾಧಿಕಾರಿಗಳು ಊರಿನ ಹುಡುಗಿಯರನ್ನೆಲ್ಲಾ ಒಟ್ಟಿಗೆ ಸೇರಿಸಿ ಎತ್ತಿಕೊಂಡು ಹೋಗಲು ಮಾಡಿರುವ ಉಪಾಯ!" ಎಂದು ಅಮ್ಮನು ಒತ್ತಿ ಹೇಳಿದಳು. "ಯುದ್ಧಕಾಲದಲ್ಲಿ ಅವರು ವಿವಾಹವಾಗಕೂಡದಲ್ಲವೇ ?" ಎಂದು ನಾನು ನಗುತ್ತ ಉತ್ತರಕೊಟ್ಟೆನು. ಅಮ್ಮನು ನನ್ನನ್ನು ಮತ್ತಷ್ಟು ಬಯ್ದು ಹೊರಟುಹೋದಳು. ನಾನು ಸಂಜೆಯ ವರೆಗೆ ನನ್ನ ಉಡುಪನ್ನು ಸರಿಪಡಿಸಿ, ಶೃಂಗಾರ-ಮಾಡಿಕೊಳ್ಳುವುದರಲ್ಲಿಯೇ ವೇಳೆಯನ್ನು ಕಳೆದೆನು.

ನಮ್ಮ ಅತಿಥಿಗಳಾಗಿದ್ದ ಸೇನಾಧಿಕಾರಿಗಳಿಬ್ಬರೂ ಬಂದು ನಮ್ಮನ್ನು ನೃತ್ಯಮಂದಿರಕ್ಕೆ ಕರೆದುಕೊಂಡು ಹೋದರು. ಅವರು ನನ್ನ ಶೃಂಗಾರವನ್ನು ಮೆಚ್ಚಿ, ನನ್ನೆದುರಿಗೇ ನನ್ನನ್ನು ವರ್ಣಿಸಿ ಹೊಗಳಲಾರಂಭಿಸಿದರು. ನಾಚಿಕೆಯನ್ನು ಮುಚ್ಚಲು ನಾನು ಅವರ ಮಾತಿಗೆ ನಗುತ್ತಾ ಇದ್ದೆನು.

ನೃತ್ಯಶಾಲೆಯಲ್ಲಿ ಚೌಕುದಲೆಯ ಉಗ್ರಪುರುಷರು ತುಂಬಿರುವರೆಂದು ನಾನು ಎಣಿಸುತ್ತಾ ಹೋದೆನು. ಅಲ್ಲಿದ್ದ ಸಕಲ ಅಧಿಕಾರಿಗಳೂ ನಮ್ಮ ಅತಿಥಿಗಳಂತೆಯೆ ಸುಂದರರೂ ಸಭ್ಯರೂ ಯೋಗ್ಯರೂ ಆಗಿದ್ದರು. ಇಂತಹ ಮನುಷ್ಯರು

CC-0. Jangamwadi Math Collection. Digitized by eGangotri

ನಿರಾತಂಕವಾಗಿ ರಕ್ತವನ್ನು ಚೆಲ್ಲುವುದೆಂದರೆ ಹೇಗೆ ಸಾಧ್ಯ.

ಅಲ್ಲಿದ್ದವರಲ್ಲೆಲ್ಲಾ ಒಬ್ಬ ಅಧಿಕಾರಿಯು ಅತ್ಯಂತ ಸುಂದರ ಪುರುಷನಾಗಿ, ನಮ್ಮೂರಿನ ಸಕಲ ಯುವತಿಯರನ್ನೂ ಮುಗ್ಧರನ್ನಾಗಿ ಮಾಡಿದ್ದನು. ಅವನ ಶರೀರವಂತೆಯೇ ಅವನ ನಡೆನುಡಿಗಳೂ, ನೃತ್ಯವೂ ಅತಿ ಮನೋಹರವಾಗಿದ್ದುವು. ಅವನನ್ನು ನೋಡಿ ನಾನಂತೂ ಪರವಶಳಾಗಿಹೋದೆನು. ನಾನು ಹೀಗಿದ್ದಾಗ ಅವನು ಹಠಾತ್ತಾಗಿ ನನ್ನ ಬಳಿಬಂದು, ಮುಂದಣ ಸರದಿಗೆ ತನ್ನನ್ನು ನೃತ್ಯದಲ್ಲಿ ಪಾಲುಗಾರನನ್ನಾಗಿ ಸೇರಿಸಿಕೊಳ್ಳಬೇಕೆಂದು ನನ್ನನ್ನು ಬೇಡಿಕೊಂಡನು. ಆಗ ನನ್ನ ಸ್ಥಿತಿ ಹೇಗಿದ್ದಿರಬಹುದು !

ನನ್ನ ಮುಂದಣ ಸರದಿಗೆ ಮತ್ತೊಬ್ಬನು ಪಾಲುಗಾರನಾಗಿರಲು ನಾನು ವಚನಕೊಟ್ಟಿದ್ದೆನು. 'ಯಾವನಾದರೂ ಒಬ್ಬ ಚಾರನು ಆಗಲೇ ಬಂದು, ಅವನನ್ನು ಯಾವುದಾದರೂ ಯುದ್ಧಕಾರ್ಯಕ್ಕಾಗಿ ಎಲ್ಲಿಗಾದರೂ ಕರೆದುಕೊಂಡು ಹೋಗಬಾರದೇ!' ಎಂದು ನಾನು ತುಂಬ ಹಾರೈಸಿದೆನು. "ಅದಕ್ಕೆ ಮುಂದಣ ಸರದಿಯಾದರೂ ನನ್ನದಾಗಿರಲಿ" ಎಂದು ಆ ಶುಭಾಂಗನು ಕೇಳಿದನು. ನಾನು ಅದಕ್ಕೆ ಏನು ಉತ್ತರಕೊಟ್ಟೆನೋ ತಿಳಿಯದು. ಕನಸಿನಲ್ಲಿ ಮನಸ್ಸೀ ಹಾರಾಡುತ್ತಿರುವವರಂತೆ, ನಾನು ಆಗ ಪರವಶಳಾಗಿದ್ದೆನು. ಸ್ವಲ್ಪ ಹೊತ್ತಾದ ಮೇಲೆ "ನನಗೆ ವಚನಕೊಟ್ಟಿದ್ದನ್ನು ನೀನು ಒಂದು ವೇಳೆ ಮರೆಯಬಹುದು" ಎಂಬ ಮಾತು ಅವನಿಂದ ಹೊರಟಿತು. ನಾನು ಮನಸ್ಸನ್ನು ಬಿಗಿ ಹಿಡಿಯದೆ ಹೋಗಿದ್ದರೆ "ನನ್ನನಾದರೂ ಮರೆಯುತ್ತೇನಲ್ಲದೆ ನಿನ್ನನ್ನು ಮರೆಯಲಾರೆ" ಎಂದು ಹೇಳಿಬಿಡುತ್ತಿದ್ದೆನು. ಹೇಗೋ ಕಷ್ಟದಿಂದ "ನಿನ್ನನ್ನು ಮರೆಯುವುದಿಲ್ಲ" ಎಂದು ಹೇಳಿದೆನು. "ನನ್ನ ಗುರುತು ನಿನಗೆ ಇಲ್ಲ" ಎಂದು ಅವನು ಪುನಃ ಮಾತುಬಳೆಯಿಸಿದನು. ಏನು ಮಾತು ! ನೂರಾರು ಮಂದಿಯಲ್ಲಿ — ಸಾವಿರಾರು ಜನದಲ್ಲಿ — ಪ್ರಥಮದೃಷ್ಟಿಯಲ್ಲಿಯೇ ಅವನನ್ನು ಗುರುತಿಸುತ್ತಿದ್ದೆನು. ನಾನು ಏನೂ ಹೇಳದೆ, ನನ್ನ ವಕ್ಷಸ್ಥಲದಿಂದ ಒಂದು ಗುಲಾಬಿ ಮೊಗ್ಗನ್ನು ಕಿತ್ತು ಅವನಿಗೆ ಕೊಟ್ಟು, "ಇದರಿಂದ ನಿನ್ನನ್ನು ಗುರುತಿಸುತ್ತೇನೆ." ಎಂದು ಹೇಳಿದೆನು. ಆತನು ಆ ಪುಷ್ಪವನ್ನು ಮೇಲಕ್ಕೆತ್ತಿ ಮುತ್ತಿಟ್ಟನು

ಆ ಸುಂದರ ಪುರುಷನು ನೃತ್ಯದಲ್ಲಿ ಸೇರದೆ ಒಂದು ಕಡೆ ಕುಳಿತುಕೊಂಡನು. ಈ ಸರದಿಯ ನೃತ್ಯವು ಎಷ್ಟು ಹೊತ್ತಿಗೆ ಮುಗಿಯುವುದೊ !.... ಎಂದು ನಾನು ತವಕಪಡುತ್ತಿದ್ದೆನು. ಈ ಮಧ್ಯೆ ನಮ್ಮೂರಿಗೆ ಬಂದಿದ್ದ ಸೇನೆಯ ಮುಖ್ಯಾಧಿಕಾರಿಯು ನನಗೆ ಗಂಟುಬಿದ್ದನು. ಇವನು ಜರ್ಮನ್ ಕುಲದವನಾದ್ದರಿಂದ ಹಂಗೇರಿ ಭಾಷೆಯನ್ನು ಅತಿವಿಕಾರವಾಗಿ ಆಡುತ್ತಿದ್ದನು. ಸಾಲದುದಕ್ಕೆ ತೀರ ಕಿವುಡನಾಗಿದ್ದನು. ಅವನ ರೂಪವು ಅತಿ ಘೋರವಾಗಿತ್ತು. ಅವನು ಹೇಳಿದುದು ನನಗೆ ತಿಳಿಯುತ್ತಿರಲಿಲ್ಲ; ನಾನು ಹೇಳಿದುದು ಅವನಿಗೆ ಕೇಳಿಸುತ್ತಿರಲಿಲ್ಲ.

ಕಡೆಗೆ ಮುಂದಣ ಸರದಿಯ ನೃತ್ಯವು ಪ್ರಾರಂಭವಾಯಿತು. ಕಮನೀಯ ರೂಪನಾದ ನನ್ನ ಪಾಲುಗಾರನು ನೃತ್ಯಕ್ಕೆ ನನ್ನನ್ನು ರಂಗಮಧ್ಯಕ್ಕೆ ಕರೆದುಕೊಂಡು ಹೋದನು. ನಮ್ಮಿಬ್ಬರನ್ನೂ ನೋಡಿ ಮಗ್ಗುಲಲ್ಲಿದ್ದ ಯಾರೋ "ಇಬ್ಬರಿಗೂ ವರಸಾಮ್ಯ ಎಷ್ಟು ಚೆನ್ನಾಗಿ ಒಪ್ಪುತ್ತದೆ!"-ಎಂದು ಮೆಲ್ಲಗೆ ಮಾತಾಡಿಕೊಂಡರು. ಆಗ ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವನು ನನ್ನ ಕೈಹಿಡಿದುಕೊಂಡು ಇದ್ದನು. ಆಗ ಅವನ ರಕ್ತವು ನನ್ನ ಮೈಯಲ್ಲೂ ನನ್ನದು ಅವನ ಮೈಯಲ್ಲೂ ಹರಿಯುತ್ತಿರುವಂತೆ ನನಗೆ ತೋರುತ್ತಿತ್ತು.

ಸಂಗೀತವು ಪ್ರಾರಂಭವಾದೊಡನೆಯೆ ನಾವು ನೃತ್ಯಕ್ಕೆ ತೊಡಗಬೇಕು. ಅಷ್ಟರಲ್ಲಿಯೆ ಬೀದಿಯಲ್ಲಿ ಕುದುರೆಗಳ ಗೊರಸಿನ ಶಬ್ದವೂ ಊರಾಚೆ ಫಿರಂಗಿಯ ಶಬ್ದವೂ ಕೇಳಬಂದು, ನೃತ್ಯಮಂದಿರದ ಗವಾಕ್ಷಗಳೆಲ್ಲಾ ಕಂಪಿಸತೊಡಗಿದುವು. ಒಬ್ಬ ಸೇನಾಧಿಕಾರಿಯು ಧೂಳಿನಿಂದ ಮುಚ್ಚಿ ಒಳಕ್ಕೆ ಬಂದು, ಶತ್ರುಗಳು ತಮ್ಮ ಪಾಳೆಯವನ್ನು ಮುತ್ತಿದ್ದಾರೆಂದು ತಿಳಿಸಿದನು.

ಇದನ್ನು ಕೇಳಿ ಸೇನೆಯ ಮುಖ್ಯಾಧಿಕಾರಿಯು ಸಂತೋಷದಿಂದ ಕೈಗಳನ್ನುಜ್ಜುತ್ತಾ, "ಅವರು ಯಾವಾಗ ಬರುತ್ತಾರೆಂದು ನಾವು ಕಾದಿದ್ದೆವು. ನಮ್ಮ ರಮಣಿಯರು ನಮ್ಮನ್ನು ಸ್ವಲ್ಪ ಹೊತ್ತು ಮಾತ್ರ ಬಿಟ್ಟು ಕೊಡುವುದಾದರೆ ಕೂಡಲೇ ಹಿಂತಿರುಗುವೆವು. ಅದುವರೆಗೂ ನೀವೆಲ್ಲರೂ ವಿಶ್ರಮಿಸಿಕೊಳ್ಳಿ" ಎಂದು ಹೇಳಿ, ಯುದ್ಧಯೋಗ್ಯವಾದ ಆಯುಧಗಳನ್ನೂ ಉಡುಪನ್ನೂ ಧರಿಸಲು ಪ್ರಾರಂಭಿಸಿದನು. ನೃತ್ಯಶಾಲೆಯಲ್ಲಿದ್ದ ಸೇನಾಧಿಕಾರಿಗಳೆಲ್ಲರೂ ಹಾಗೆಯೇ ಮಾಡಿ, ಅತ್ಯುತ್ಸಾಹದಿಂದ ಯುದ್ಧಕ್ಕೆ ಹೊರಟರು. ನನ್ನ ಪಾಲುಗಾರನು ಈ ಕಾರ್ಯದಲ್ಲಿ ಎಲ್ಲರಿಗಿಂತಲೂ ಮುಂದಾಳಾಗಿದ್ದನು. ಅವನು ಕೈಯಲ್ಲಿ ನನ್ನ ಗುಲಾಬಿಮೊಗ್ಗನ್ನು ಬಿಡದೆ ಹಿಡಿದಿದ್ದನು. ಅವನ ರೂಪವನ್ನು ನೋಡಿ ನಾನು ಇದುವರೆಗೂ ಮುಗ್ಧಳಾಗಿದ್ದೆನು. ಆಗ

CC-0. Jangamwadi Math Collection. Digitized by eGangotri

ಅವನ ಯುದ್ಧವೇಷವನ್ನು ನೋಡಿದ ಮೇಲಂತೂ ಅವನಲ್ಲಿ ನನಗುಂಟಾದ ಮೋಹಕ್ಕೂ ಉತ್ಸಾಹಕ್ಕೂ ಪಾರವೇ ಇರಲಿಲ್ಲ. ನಾನೂ ಅವನ ಜತೆಯಲ್ಲಿಯೆ ಯುದ್ಧಕ್ಕೆ ಹೋಗಿ, ಅವನ ಪಕ್ಕದಲ್ಲಿದ್ದು ಅವನಂತೆಯೇ ಶತ್ರುಗಳ ಮೇಲೆ ನುಗ್ಗಬೇಕೆಂದು ನನ್ನ ಮನಸ್ಸು ತವಕಿಸಲಾರಂಭಿಸಿತು. ಅವನು ನನ್ನ ಪುಷ್ಪವನ್ನು ತನ್ನ ಪಾಗಿನಲ್ಲಿ ಸಿಕ್ಕಿಸಿಕೊಂಡು, ಹಿಂತಿರುಗಿ ನೋಡುತ್ತಾ ಅಲ್ಲಿಯ ಜನಸಂದಣಿಯಲ್ಲಿ ಯಾವುದನ್ನೋ ಅರಸತೊಡಗಿದನು. ಸ್ವಲ್ಪದರಲ್ಲಿಯೆ ನಮ್ಮಿಬ್ಬರ ದೃಷ್ಟಿಗಳೂ ಕೂಡಿದುವು. ಅನಂತರ ಅವನು ಹೊರಟುಹೋದನು. ಆಗ ನೃತ್ಯಮಂದಿರವೇ ನನಗೆ ಶೂನ್ಯವಾಗಿ ಕಾಣಿಸಿತು.

ನಾವೆಲ್ಲರೂ ಅಲ್ಲಿಯೆ ಇದ್ದೆವು. ಸೇನಾಪತಿಯು ತಾನು ಹಿಂತಿರುಗುವವರೆಗೂ ಯಾರೂ ಅಲ್ಲಿಂದ ಹೊರಗೆ ಹೋಗಕೊಡದೆಂದು ವಿಧಿಸಿದ್ದನು. ಬರುಬರುತ್ತಾ ಫಿರಂಗಿಯ ಗುಂಡುಗಳ ಶಬ್ದವು ದೂರವಾಗುತ್ತ ಬಂದಿತು. ಇದರಿಂದ ನಮ್ಮ ಸೈನಿಕರು ಶತ್ರುಗಳನ್ನು ಜಯಿಸಿ ಓಡಿಸಿರಬೇಕೆಂದು ನಾವು ಊಹಿಸಿದೆವು. ಸ್ವಲ್ಪ ಹೊತ್ತಿನಲ್ಲಿಯೆ ಸೇನಾಧಿಕಾರಿಗಳು ಜಯಶೀಲರಾಗಿ ಹಿಂತಿರುಗಿ, ನೃತ್ಯಕ್ಕೆ ತಂತಮ್ಮ ಪಾಲುಗಾರರನ್ನು ಅರಸಲಾರಂಭಿಸಿದರು. ಅವರಲ್ಲಿ ಕೆಲವರು ತಮ್ಮ ಉಡುಪಿನಲ್ಲಿ ಯಾವುದನ್ನೋ ಒರಸಿದರು; ಅದು ಮಣ್ಣೋ ಅಥವಾ ರಕ್ತವೋ ಗೊತ್ತಾಗಲಿಲ್ಲ. ಹಿಂದೆ ನೃತ್ಯವನ್ನು ಎಲ್ಲಿ ಬಿಟ್ಟುಹೋಗಿದ್ದರೋ ಅಲ್ಲಿಂದ ಅದನ್ನು ಪುನಃ ಪ್ರಾರಂಭಿಸಿದರು.

ಹೊರಗೆ ಹೋಗಿದ್ದವರಲ್ಲಿ ನನ್ನ ಪಾಲುಗಾರನೂ, ಸೇನಾಪತಿಯೂ ಮಾತ್ರ ಹಿಂತಿರುಗಿರಲಿಲ್ಲ. ನಾನು ಬಾಗಿಲಲ್ಲೇ ನೆಟ್ಟುಹೋದ ದೃಷ್ಟಿಯಿಂದ ಇದ್ದೆನು. ಕಡೆಗೆ ಸೇನಾಪತಿಯು ಬಂದನು. ಸುತ್ತಲೂ ನೋಡುವಾಗ ನನ್ನನ್ನು ಕಂಡು ಹತ್ತಿರ ಬಂದು "ರಮಣಿ, ನಿನ್ನ ಪಾಲುಗಾರನು ನಿನ್ನೊಡನೆ ನೃತ್ಯವಾಡಲು ಬಾರದೆ ನಿಲ್ಲಬೇಕಾದುದಕ್ಕೆ ನಿನ್ನಲ್ಲಿ ಮನ್ನಣೆಯನ್ನು ಬೇಡಿಕೊಳ್ಳುತ್ತಾನೆ. ಅವನಿಗೆ ಮನಸ್ಸಿದ್ದರೂ ಬರಲಾರದೆ ಹೋಗಿದ್ದಾನೆ. ಶತ್ರುಗಳು ಅವನ ಕಾಲಿಗೆ ಗುಂಡು ಹೊಡೆದಿರುವುದರಿಂದ, ಮಂಡಿಗೆ ಮೇಲಕ್ಕೆ—ತೊಡೆಯವರೆಗೂ—ಅವನ ಕಾಲನ್ನು ಈಗ ಕತ್ತರಿಸಿ ತೆಗೆದು ಬಿಡಬೇಕಾಗಿದೆ" ಎಂದು ತಿಳಿಸಿದನು.

ಪ್ರಿಯಸಖಿ, ಇನ್ನುಮುಂದೆ ನಾನು ಎಂದೆಂದೂ ನೃತ್ಯಕ್ಕೆ ಸೇರುವುದಿಲ್ಲ! ನನ್ನ ಮನಸ್ಸು ತೀರ ಇಳಿದು ಹೋಗಿದೆ! ನಾನು ತುಂಬ ಅಸ್ವಸ್ಥಳಾಗಿದ್ದೇನೆ.*

* ಹಂಗೆರಿ ದೇಶದ ಕಾದಂಬರಿಕಾರರಲ್ಲಿ, ಜಗತ್ತಿನಲ್ಲಿ ಸರ್ವತ್ರ ಪ್ರಖ್ಯಾತಿಯನ್ನು ಸಂಪಾದಿಸಿರುವವನು 'ಮೌರಸ್ ಜೋಕಾಯ್' (Maurus Jokai: 1825–1904) ಎಂಬಾತನು. ಮೇಲಿನದು ಅವನ ಕಥೆಗಳಲ್ಲಿಯ ಒಂದು ಪ್ರಸಿದ್ಧವಾದ ಲೇಖನವಾಗಿದೆ. ಒಬ್ಬ ತರುಣಿಯು ಮತ್ತೊಬ್ಬ ತರುಣಿಗೆ ಕಾಗದ ಬರೆಯುವ ರೂಪದಲ್ಲಿ ಬಂದ ದೊಡ್ಡ ಸೌಧವನ್ನು ಕಟ್ಟಿದ್ದಾನೆ. ಅವನ ಲೇಖನಗಳು ನೋಡುವುದಕ್ಕೆ ಸರಳವಾಗಿದ್ದರೂ ಅವುಗಳಲ್ಲಿ ರಸವೂ ಗಹನಾಭಿಪ್ರಾಯವೂ ತುಂಬಿವೆ.

ಡಾಕ್ಟರ್ ಮಹಿಷಿ ಇವರ ಅನುಭವಸಿದ್ಧ ಔಷಧಿಗಳು
ಅಶೋಕಾ ಕಾರ್ಡಿಯಲ್
ಇದು ಸ್ತ್ರೀಯರ ಮುಟ್ಟಿನ ಹಾಗು ಗರ್ಭಾಶಯದ ಎಲ್ಲ ವಿಕಾರಗಳಿಗೆ ಸಿದ್ಧೌಷಧಿಯು.
ವ್ಹಾಯಬರನಮ್ ಕಂಪೌಂಡ್
ಇದರ ಯೋಗದಿಂದ ಬಂಜೆತನದ ದೋಷಗಳು ನಾಶವಾಗಿ ಗರ್ಭಧಾರಣೆಯಾಗುವುದು. ಗರ್ಭವತಿಯರು ೩ನೆಯತಿಂಗಳಿನಿಂದ ಇದನ್ನು ಸಾಧಿಸಿದಲ್ಲಿ ಗರ್ಭವು ಬಲಪಡುವುದು. ಅಲ್ಲದೆ ಹಳೆಯುಳಿಯುವ ಭೀತಿಯು ಇಲ್ಲದಂತಾಗುವುದು. ಸುಖಪ್ರಸೂತಿಯಾಗುವುದು.
ಸೂಚನೆ:— ಈ ಔಷಧಿಗಳ ಹಾಗು ಇನ್ನೂ ಕೆಲವು ಔಷಧಿಗಳ ಸಂಪೂರ್ಣ ಮಾಹಿತಿಗಾಗಿ, ಇಂದೇ ನಮ್ಮ ಕ್ಯಾಟಲಾಗಿಗೆ ಬರೆಯಿರಿ.
ಮ್ಯಾನೇಜರ್,
ಸ್ವಾಸ್ಥ್ಯನಿಲಯ ಫಾರ್ಮಸಿ, ಧಾರವಾಡ

CC-0. Jangamwadi Math Collection. Digitized by eGangotri

# ಬಳ್ಳಿಯ ತುದಿಯಲಿ ತೊನೆಯುವ ಹೂವೆ!

ಶ್ರೀ. ಟಿ. ಎಸ್. ಶ್ರೀನಿವಾಸ ಮೂರ್ತಿ ಮೈಸೂರು

೧

"ಬಳ್ಳಿಯ ತುದಿಯಲಿ ತೊನೆಯುವ ಹೂವೇ!
ಒಲವೇಂ, ನಲವೇಂ, ನಿನ್ನದಿದು ?
ಒಂದೇ ಗಳಿಗೆಯ ಬಾಳಿಗಿದೇತಕೆ
ನಲಿವೈ, ಒಲಿವೈ, ಕುಣಿಕುಣಿದು ?

ಕಾಣೆಯ, ಹೊಂಚಿದೆ ನೆರೆಯೊಳ್ಮೃತ್ಯು ?
ಬಿಸಿಲಿಗೆ ಸೊರಗಿಳೆಗುರುಳುವ ಹೊತ್ತು
ಕಾದಿದೆ; ಬರುತಿಹ ವಿಟನಿನ್ನೆಡೆಗೆ;
ನಿನ್ನನೊಯ್ಯೆ ತನ್ನಿನಿಯಳ ಮುಡಿಗೆ!"

೨

"ನಿನ್ನೆಡೆ ಪಂಡೆಯನೆನ್ನೊಳು ಸುರಿಯಲು,
ಮನುಜನೆ, ಏತಕೆ ಹೊಂಚುತಿಹೆ?
ಗೆಲವರಿಯದ ಹೇಡಿಯೆ ನೀ ನಲಿವರ
ಕಂಡರದೇತಕೆ ಕರುಬುತಿಹೆ?

ಬಾಳಿದು ಒಂದೇ ಗಳಿಗೆಯದೆಂದು
ಅಳುತಿರೆ, ಸೊಗ ದೊರೆಯುವುದೇ ಬಂಧು?
ನಲವೇ ನಾಕದ ನೆಲೆಯದು, ಮಿತ್ರ!
ಚಣಮಾದರು ನಲಿಯದೆ ಇರೆ ವ್ಯರ್ಥ!"

೩

"ಹಾಡುವ, ಹಾರಾಡುವ, ನಲಿದಾಡುವ
ಖಗವೇ, ನಿನ್ನಯ ಸೊಗವೇನು ?
ನಾಕದ ಬಿನದದ ಇಂಪಿನ ಪೆಂಪಿನ
ನಿನ್ನೀ ಹಾಡಿನ ಹುರುಳೇನು ?

ಹರಡಿದೆ ನೆಲದಲಿ ಬೇಡನ ಜಾಲ!
ತಲೆಯೆಡೆ ಡೇಗೆಯು; ಕಾಲನ ಶೂಲ!
ಬಾಲನ ಕೈಲಿದೆ ಕವಣೆಯ ಕಲ್ಲು!
ಮಡಿವುದರೊಳಗಿದೆ ನಿನ್ನಯ ಸೊಲ್ಲು!"

೪

"ಜನಿಯಿಸಿದಗೆ ಸಾವೆಂದಿಗು ತಪ್ಪದು,
ಸಾವಿಂಗಳುತಿರೆ ಸೊಗವುಂಟೆ ?
ಬಾಳೊಳು ಸಲಹಿದ ಈಶನ ಕೃಪೆ ತಾಂ
ಸಾವೊಳು ಸಲಹದೆ ಇಹುದುಂಟೆ ?

ಜನ್ಮವಿತ್ತ ಪರಶಿವನಂ ನುತಿಸಿ,
ಬುವಿಯಿಾ ಬಾಳನು ನೀಗುವೆ ರಮಿಸಿ!
ಮೃತ್ಯು ಸಮೀಪಿಸೆ ಒಲಿದಾಲಿಂಗಿಪೆ;
ಪರಮೇಶನ ಕೃಪೆ ನಂಬುತೆ ಚುಂಬಿಪೆ!"

೫

"ಮಲರಲಿ ಪೊರೆಯುವ ಜೇನುಂಬುಳುಗಳೆ,
ಏನಿದು ನಿಮ್ಮಾ ಸಂತಸವು ?
ಮುಂಗಾರ್ಕಾಲದ ಬಿರುಮಳೆಯಿಟ್ಟೆಯು
ಇರಿಯಲು ಕಾದಿದೆ ಮರುಚಣವು!

ಮುಂಗಾರ್ ಸೆಳೆತಕೆ ರೆಕ್ಕೆಯು ಮುದುರಿ
ಮಡಿಯುವಿರಲೆ ನೀವ್, ಮೇಣ್ ನೆಲಕುದುರಿ?
ಆಗೆಲ್ಲಿರ್ಪುದು ನಿಮ್ಮಯ ಮೊರೆತ ?
ಚಣವೊಂದಕೆ ಏತಕೆ ಈ ಮೆರೆತ ?"

೬

"ಬದುಕೋ? ಸಾವೋ? ಈಶನ ಇಚ್ಛೆಗೆ
ನಲಿದೊಲಿವುದೆ ನಮ್ಮಯ ಪೂಣ್ಕೆ!
ಅಳಲದೆ ವಿಧಿನಿಯಮಕೆ ಮಣಿದೊಲಿವುದೆ
ಪರಮೇಶಗೆ ಸಲಿಸುವ ಕಾಣ್ಕೆ!

ಪರಮಾತ್ಮಗೆ ನಾವೇನ್ ಹಗೆಯಲ್ಲ:
ಪೊರೆವ ಮುರಿವ ಧರ್ಮವನವ ಬಲ್ಲ!
ನಮಗೇತಕೆ ಸಲ್ಲದ ಚಿಂತೆಗಳು?
ಬಾಳ್ವಿನಿದಪ್ಪೊಡೆ ಗತಿ ನಗೆಮುಗುಳು!"

CC-0. Jangamwadi Math Collection. Digitized by eGangotri

೭

" ಅಲರೇ ! ಅಳಿಯೇ ! ಖಗವೇ ! ನಗವೇ !
ನಿಮ್ಮಯ ಬಾಳ್ಕೆಯೆ ಸಾರ್ಥಕವು!
ಹಿರಿದಾದರು ನಮ್ಮಾ ಮಾನವತೆಯು
ಗೆಲವಿಲ್ಲದಕೆ; ನಿರರ್ಥಕವು !
ಇರುವುದೆಮಗೆ ವೇದವು, ವೇದಾಂತ;
ಜ್ಞಾನಕರಂಡಗಳನಂತನಂತ !
ಆದರು, ಗೆಲವೆಂಬುದ ನಾವ್ ಕಾಣೆವು !
ನಿಮ್ಮನೊಲಿಸಿತೂ ನಲಿಯುಲಿಕರಿಯೆವು !

೮

ವೇದ, ಶಾಸ್ತ್ರ, ವಿಜ್ಞಾನಗಳೆಮ್ಮವು
ವೇದಿಕೆಯಲ್ಲಿಯ ವಾಣಿಗಳು;
ಜೀವನದನುಭೂತಿಯೊಳವು ಇಲ್ಲವು
ಋಷಿಗಳ ತಪದಾ ವಾಣಿಗಳು !
ಪ್ರಕೃತಿಯಮ್ಮನಾ ಓ, ಸಿರಿಸುತರೆ !
ನಿಮ್ಮಾನಂದವ—ಓ, ಸೋದರರೆ !—
ಕಲಿಸಿರೆಮಗೆ ಗುರುತನದಲಿ ನಿಂದು;
ಬಾಳನಾಗಿಸಿರಿ ಸೌಖ್ಯದ ಸಿಂಧು !

---

# ತೊಟ್ಟಿಲ ಹಾಡು

ಶ್ರೀ. ಕೆ. ಎಸ್. ನರಸಿಂಹಸ್ವಾಮಿ ಬೆಂಗಳೂರು.

೧

ಅತ್ತಿತ್ತ ನೋಡದಿರು,
ಅತ್ತು ಗೋಳಾಡದಿರು,
ನಿದ್ದೆ ಬರುವಳು ಹೊದ್ದು ಮಲಗು ಮಗುವೆ;
ಸುತ್ತಿ ಹೊರಳಾಡದಿರು,
ಮತ್ತೆ ಹಟ ಹೂಡದಿರು !
ನಿದ್ದೆ ಬರುವಳು ಕದ್ದು ಮಲಗು ಮಗುವೆ !

ಮಲಗು ಚೆಲ್ವಿನ ತೆರೆಯೆ,
ಮಲಗು ಒಲ್ಮೆಯ ಸೆರೆಯೆ
ಮಲಗು ತೊಟ್ಟಿಲ ಸಿರಿಯೆ ದೇವರಂತೆ;
ಮಲಗು ಮುದ್ದಿನ ಗಿಣಿಯೆ,
ಮಲಗು ಮುತ್ತಿನ ಮಣಿಯೆ
ಮಲಗು ಚಂದಿರನೂರ ಹೊಗುವೆಯಂತೆ.

ಜೋ ಜೋ ಜೋ—ಎಂದು ತೊಟ್ಟಿಲನು
ತೂಗುವೆನು ಮಲಗೆನ್ನ ತುಂಟ ಮಗುವೆ !
ಜೋ ಜೋ ಜೋ—ಎಂದು ತೊಟ್ಟಿಲನು
ತೂಗುವೆನು ಮಲಗೆನ್ನ ಜಾಣಮಗುವೆ !

೨

ತಾರೆಗಳ ಜರತಾರಿಯಂಗಿ ತೊಡಿಸುವರಂತೆ
ಚಂದಿರನ ತಂಗಿಯರು ನಿನ್ನ ಕರೆದು;
ಹೂವ ಮುಡಿಸುವರಂತೆ ಹಾಲ ಕುಡಿಸುವರಂತೆ
ವೀಣೆನುಡಿಸುವರಂತೆ ಸುತ್ತ ನೆರೆದು.
ಮಕ್ಕಳಿಲ್ಲದ ಅಕ್ಕ-ತಂಗಿಯರ ನಗುವಾಗಿ
ಚಿಕ್ಕಂದವಾಡಿ ಬಾ ಚಿಕ್ಕಮಗುವೆ;
ದೂರದೂರದ ಬನದ ಹೂದಡದ ಕೊಳಗಳಲಿ
ನೀರಾಟವಾಡಿ ಬಾ ಧೀರ ಮಗುವೆ.
ಜೋ ಜೋ ಜೋ............

೩

ಬಣ್ಣ ಬಣ್ಣದ ಕನಸು ಕರಗುವುದು ಬಲುಬೇಗ
ಹಗಲು ಬರುವನು ಬೆಳ್ಳಿಮುಗಿಲ ನಡುವೆ.-
ಚಿನ್ನದಂಬಾರಿಯಲಿ ನಿನ್ನ ಕಳುಹುವರಾಗ
ಪಟ್ಟದಾನೆಯ ಮೇಲೆ ಪುಟ್ಟಮಗುವೆ !
ಬೆಳಗಾಗ ನಿನ್ನ ಬಳಿ ಬಂದು ' ಕಂಡಾ ' ಎಂದು
ಕೂಗುವೆನು ಪಚ್ಚೆಗಣ್ದೆರೆವೆಯಂತೆ;
ನಿನ್ನ ನುಡಿಯಲಿ ನೀನೆ ಕಂಡ ಕನಸೆಲ್ಲವನು
ಅವರ ಕಿವಿಗಿಂಪಾಗಿ ನುಡಿವೆಯಂತೆ.-
ಜೋ ಜೋ ಜೋ............

CC-0. Jangamwadi Math Collection. Digitized by eGangotri

# ಕರ್ನಾಟಕ ಭಕ್ತ ವಿಜಯ

**ದ್ವಿತೀಯ ಭಾಗ** ರೂ. ೨-೮-೦

೪೫೦ ಪುಟಗಳ ಅಮೌಲ್ಯಗ್ರಂಥ
ಗ್ರಂಥಕರ್ತರು: ಬೇಲೂರು ಕೇಶವದಾಸರು.

## ಇತರ ಗ್ರಂಥಗಳು

| | |
|---|---|
| ಕರ್ನಾಟಕ ಭಕ್ತ ವಿಜಯ ಭಾಗ ೧ | ರೂ. ೨-೮-೦ |
| ಕನ್ಯಕಾ ಪುರಾಣ | ರೂ. ೧-೦-೦ |
| ಶ್ರೀರಾಘವೇಂದ್ರ ವಿಜಯ | ರೂ. ೦-೮-೦ |

ದೊರೆಯುವ ಸ್ಥಳ

೧. ಸುಬೋಧ ಪ್ರಕಟನಾಲಯ, ಚಾಮರಾಜ ಪೇಟೆ ಬೆಂಗಳೂರು ನಗರ

೨. ಬೇಲೂರು ಕೇಶವದಾಸರು ಚಾಮರಾಜಪುರಂ ಮೈಸೂರು.



ಮೈಸೂರು, ಮದರಾಸು, ಬೊಂಬಾಯಿ
ಸರ್ಕಾರಗಳಿಂದ ಶಾಲೆಗಳ ಪುಸ್ತಕಭಾಂಡಾರ-
ಗಳಿಗೆ ಮಂಜೂರಾಗಿರುವ

# 'ರಂಗಭೂಮಿ'

ನಾಟ್ಯವಿಷಯಗಳಿಗೆ ಮೀಸಲಾದ
ಒಂದೇ ಒಂದು ಸುಂದರ ಮಾಸಪತ್ರಿಕೆ

ಕರ್ಣಾಟಕದ ಪ್ರಸಿದ್ಧ ವಿದ್ವಾಂಸರ ಸುರಸ ಲೇಖನಗಳು, ನಾಟ್ಯಸಂಬಂಧವಾದ ದೃಶ್ಯಕೃತಿಗಳು, ಸಣ್ಣ ಕಥೆ-ನಾಟಕ-ಏಕಾಂಕ 'ನಾಟಕ ಇವೇ ಮೊದಲಾದುವನ್ನು ಒಳಗೊಂಡ ವಿಶೇಷಸಂಚಿಕೆ, ಚಂದಾದಾರರಾಗುವವರಿಗೆ ಉಚಿತವಾಗಿಯೇ ದೊರೆಯುತ್ತದೆ.

—ಈಗಲೇ ಚಂದಾದಾರರಾಗಿರಿ—
ವಾರ್ಷಿಕ ಚಂದಾ ೩-೮-೦

ಜಾಹೀರಾತುಗಳನ್ನು ಕೊಡುವ ವರ್ತಕರಿಗೆ ಅಧಿಕಲಾಭ. ಹೆಚ್ಚಿನ ವಿಷಯಗಳಿಗೆ—

ಬಿ. ಎಸ್. ಅಯ್ಯಂಗಾರ್
ವ್ಯವಸ್ಥಾಪಕ
"ರಂಗಭೂಮಿ" ಬೆಂಗಳೂರು



**ನಿಮ್ಮ ಎಲ್ಲ ಬಗೆಯ ಹಳೆಯ ರೋಗಗಳಿಗೂ**
ಆಹಾರವಿಜ್ಞಾನ, ದಾಂಪತ್ಯವಿಜ್ಞಾನ, ಸಂತಾನ ವಿಜ್ಞಾನಾದಿ ವೈಜ್ಞಾನಿಕ ಗ್ರಂಥಕರ್ತರಾದ ವೈದ್ಯಭಾನು ಶ್ರೀ. ಡಿ. ಕೆ. ಭಾರದ್ವಾಜ ಎಂ. ಡಿ. (ಆಯುರ್ವೇದ) ಅವರ ಚಿಕಿತ್ಸೆಯನ್ನು ಪಡೆದು ಸುಖವಾಗಿರಿ.

ಬಿಳಿಯ ತೊನ್ನಿಗೆ (ಲ್ಯೂಕೋಡರ್ಮಾ) ಹೊರಲೇಪನೌಷಧ ೫ ದಿನಗಳಿಗೆ — ೨—೦—೦

ದೃಷ್ಟಿಮಾಂದ್ಯ, ಇರುಳುಗಣ್ಣು, ಪರೆಬರುತ್ತಿರುವುದು ಮೊದಲಾದ್ದಕ್ಕೆ ೧ ತಿಂಗಳಿಗಾಗುವಷ್ಟು ನಯನಾಂಜನ — ೧—೦—೦

ರಕ್ತಶುದ್ಧಿ, ಮಲಶುದ್ಧಿ, ಆರೋಗ್ಯರಕ್ಷಣೆಗಾಗಿ 'ಅಮೃತ' ಪಾನ. ಕಾಫಿಯಂತೆ ಉಪಯೋಗಿಸಬಹುದು. ಸುಮಾರು ೫೦ ಕಪ್ಪುಗಳಿಗಾಗುವಷ್ಟು ೧ ಸೇರು ಚೂರ್ಣ. — ೧—೦—೦

ಗಜಕರ್ಣ, ತದ್ದು ಮೊದಲಾದುವುಗಳಿಗೆ ರಾಮಬಾಣ—೧ ಔನ್ಸು. — ೧—೦—೦

ಎಲ್ಲದಕ್ಕೂ ಅಂಚೆವೆಚ್ಚ ಬೇರೆ ಬೇರೆ ೦-೭-೦ ಆಗುವುದು. ಹೆಚ್ಚು ಮಾಹಿತಿಗೆ, ರೋಗವಿವರವನ್ನು ಸ್ಟಾಂಪಿಟ್ಟು ಅಥವಾ ರಿಪ್ಲೈಕಾರ್ಡುಬರೆದು ತಿಳಿಯಿರಿ:

**ಶ್ರೀರಾಮಕೃಷ್ಣ ಚಿಕಿತ್ಸಾಲಯ,**
**ಬಸವನಗುಡಿ, ಬೆಂಗಳೂರು ಸಿಟಿ.**



# ಶರಣಸಂದೇಶ

ನೀವು ಹಿಂದುಗಳೋ ?
ಹಾಗಾದರೆ ಜಾಗ್ರತೆ ಚಂದಾದಾರರಾಗಿರಿ !
ಇದು ವಿಚಾರಕ್ರಾಂತಿಯ ವಾರಪತ್ರಿಕೆ

ಸಂಪಾದಕರು:

ಶ್ರೀ. ಹರ್ಡೇಕರ ಮಂಜಪ್ಪನವರು

ಹಿಂದೂಸಮಾಜಸುಧಾರಣೆ, ಹಿಂದೂ ಸಂಘಟನೆ, ಧಾರ್ಮಿಕ ಸತ್ಯಸಿದ್ಧಾಂತಗಳ ಪ್ರತಿಪಾದನೆ, ಶ್ರೀ ಬಸವಾದಿ ಪ್ರಮಥರ ತತ್ತ್ವಪ್ರಸಾರಣೆ ಮತ್ತು ರಾಜಕೀಯ ಗುಣದೋಷ ವಿಮರ್ಶನೆ ಇವೇ ಈ ಪತ್ರಿಕೆಯ ಪಂಚಪ್ರಾಣ.

ಮ್ಯಾನೇಜರ್, ಶರಣಸಂದೇಶ
ಪೋ. ಆಲಮಟ್ಟಿ, ಜಿ. ವಿಜಾಪೂರ


CC-0. Jangamwadi Math Collection. Digitized by eGangotri

# ಹೋಳಿ–ಮೇಳ

ಲೇಖಕರು: ಶ್ರೀ. ಎಚ್. ಸಿದ್ಧನಾಥರು

**ಹರಿದ್ವಾರದ ಗುರುಕುಲವೆಂದರೆ ಭಾರತದ ತರುಣರನ್ನು ಆದರ್ಶಭಾರತೀಯರನ್ನಾಗಿ ಮಾಡಬೇಕೆಂದು ಹೊರಟ ಸಂಸ್ಥೆ. ಉತ್ತರ ಭಾರತದ ಪ್ರತಿಯೊಂದು ಹಳ್ಳಿ–ಪಟ್ಟಣಗಳ ಜನಸಮುದಾಯವೂ ಗುರು–ಕುಲದ ಪದವೀಧರರಿಂದ ಪ್ರಯೋಜನವನ್ನು ಪಡೆಯುತ್ತಿದೆ. ಭಾರತೀಯರ ಮನಸ್ಸಿನಲ್ಲಿ ನೆಲೆಗೊಂಡಿದ್ದ ‘ಗುಲಾಮ್‌ಗಿರಿ’ಯ ಬೀಜವನ್ನೇ ಕಿತ್ತು–ಹಾಕಬೇಕೆಂಬ ಗುರಿಯನ್ನು ಗುರುಕುಲದ ಶಿಕ್ಷಣಕ್ರಮವು ಇಟ್ಟುಕೊಂಡಿದೆ.**

ವಸಂತವು ಬಂದಿತೆಂದರೆ ತೀರಿತು, ಅದು ಹರಿದ್ವಾರ-ಪ್ರಕೃತಿಯ ಸೌಂದರ್ಯವನ್ನೆಲ್ಲ ತನ್ನ ಹಿಂದೆಯೇ ಕರೆತರು-ವುದು. ಎತ್ತ ನೋಡಿದರೂ ರಮ್ಯವೇ ರಮ್ಯ ಹಳೆಯದು



ಹಳೆಯ ಗುರುಕುಲದ ಉಗ್ರಾಣದ ಮುಂದೆ—ವೈಸರಾಯರಾಗಿದ್ದ ಲಾರ್ಡ್ ಚೇಮ್ಸ್‌ಫೋರ್ಡರು

ಉದುರಿ ಹೊಸದು ಚಿಗುರುವುದು ವಸಂತದಲ್ಲಿ. ಮರ-ಗಿಡ-ಗಳೂ, ಬಳ್ಳಿ-ಕಂಟಿಗಳೂ ತಮ್ಮ ಜೀವನದ ಒಂದು ಅಂಕ-ವನ್ನು ಮುಗಿಯಿಸಿ, ಮತ್ತೊಂದು ಅಂಕಕ್ಕೆ ಕೈಹಾಕುವುದು ಆವಾಗಲೇ. ಚಿಗುರುವ ಎಲೆ, ಮೂಡುವ ಮೊಗ್ಗೆ, ಅರಳುವ ಹೂವು. ಸುಯ್ಯುವ ಗಾಳಿಗೆ ಸುತ್ತಲೂ ವ್ಯಾಪಿಸಿದ ಅವುಗಳ ಸುವಾಸನೆಯು, ಬೇಡವೆಂದರೂ ಮೂಗಿನಲ್ಲಿ ತೂರುತ್ತಿರುತ್ತದೆ. ಪ್ರಕೃತಿಯ ಪ್ರತಿಪ್ರಾಣಿಗಳಲ್ಲಿಯೂ ಹೊಸ ಕಳೆ, ಹೊಸ ಹುರುಪು, ಹೊಸ ಉತ್ಸಾಹ—ಉಲ್ಲಾಸ ತಾವಾಗಿಯೇ ಹೊರಸೂಸುವುವು ಈ ವಸಂತದಲ್ಲಿ.

CC-0. Jangamwadi Math Collection. Digitized by eGangotri

ಗುರುಕುಲದ ಕೆಲವು ಜನ ಪದವೀಧರರೊಂದಿಗೆ



ಶ್ರೀಶ್ರದ್ಧಾನಂದ ಸ್ವಾಮಿಗಳವರು

CC-0. Jangamwadi Math Collection. Digitized by eGangotri

ಪ್ರಕೃತಿಯ ಸೌಂದರ್ಯಕ್ಕೆ—ಅದೂ ವಸಂತದಲ್ಲಿ—ಹರಿದ್ವಾರವು ಆಗರವೆಂದು ಹೇಳಬಹುದು. ಸುತ್ತಲೂ ಎತ್ತರವಾದ ಬೆಟ್ಟ-ಗುಡ್ಡ. ಅವುಗಳಲ್ಲಿಯೇ ಹುಟ್ಟಿ ಬೆಳೆದು ಅವುಗಳಿಗಿಂತಲೂ ನೇರವಾಗಿ ಮೇಲೇರಿದ ವಿವಿಧ ವೃಕ್ಷಗಳು; ಇವುಗಳನ್ನು ಇಳಿದು ತುಳಿದು, ಹರಿದು ಮುರಿದು, ಹೋರಾಟದಲ್ಲಿ ಜಯಪಡೆದು, ಗೆಲುವಿನ ಹುಮ್ಮಸ್ಸಿನಲ್ಲಿಯೇ ಜಿಗಿದು ನೆಗೆದು, ಅಪ್ಪಳಿಸಿ ಕುಪ್ಪಳಿಸಿ, ಹಾರಿ ಹಾರಿ ಹರಿಯುತ್ತಿರುವ ಆ ಗಂಗೆ. ಗೆದ್ದ ತಾಯನ್ನು ಸ್ವಾಗತಿಸಲು ತಮ್ಮ ಸ್ವಂತದ ಎತ್ತರ ಮುರಿತಗಳನ್ನೇ ಮರೆತು, ಬಾಗಿ ಬಳುಕಿ ಸುಳಿಗಾಳಿಗೆ ದನಿಗೂಡಿಸುವ ಆ ದೇವದಾರುವೃಕ್ಷಗಳು. ಈಜಲಾರದೆ ಸೋತು, ಹೇಸಿ ಬೇಸತ್ತು, ಕಡೆಗೆ "ಗಂಗೆಯೇ ಗತಿ" ಎಂಬ ಎಂತಹ ಕಡು ದುರದೃಷ್ಟನಿಗಾದರೂ, ಅಲ್ಲಿ ಹೋಗಿ ಸ್ವಲ್ಪ ಕುಳಿತು, ಪ್ರಕೃತಿಯಲ್ಲಿ ನಡೆಯುವ ಸೃಷ್ಟಿ-ಚಾತುರ್ಯವನ್ನು ನಿರೀಕ್ಷಿಸಿದಲ್ಲಿ, ಎಂದೂ ಕಂಡರಿಯದ ಸವಿಗನಸು, ಹೊಸದಾದ ಹುಮ್ಮಸ್ಸು, ಮನದಣಿಯುವ ಸುಖ, ಕುಂದದಿರುವ ಶಾಂತಿ ದೊರೆಯದಿರದು. 'ಜಗತ್ತು ಮಿಥ್ಯೆ! ಮಾಯೆ!' ಎಂಬ ಎಂತಹ ನಿರಾಶಾವಾದಿಗಾದರೂ "ಇಹವು ಸ್ವರ್ಗವಾಗದಿದ್ದರೂ ಸ್ವರ್ಗಸುಖವನ್ನು ಇಲ್ಲಿಯೂ ಪಡೆಯಬಹುದು" ಎಂಬ ಕಳೆಯುಳ್ಳ ಆಶೆಯು ಅಂಕುರಿಸುವುದು.



ಸ್ವಾಮಿ ಶ್ರದ್ಧಾನಂದಜಿಯವರು ಬಲಿದಾನಾವಸ್ಥೆಯಲ್ಲಿ

ಜಾತ್ರೆ-ಪರಿಷೆಗಳಲ್ಲಿ— ಸ್ವಾಗತಸಮಯಗಳಲ್ಲಿ— ತಾ ಮುಂದೆ ನಾ ಮುಂದೆಂದು ಹಿರಿಯರ ತುಳಿತದಿಂದ ಪಾರಾಗಿ, ಹರ್ಷಮುಖದೊಡನೆ ಮುಂದಿನ ರಂಗವನ್ನಲಂಕರಿಸುವ ಎಳ ಮಕ್ಕಳಂತೆ, ಆ ಹೆಮ್ಮರಗಳನ್ನು ಆಶ್ರಯಿಸಿರುವ ಮಲ್ಲಿಗೆ-ಜಾಜಿ-ಸಂಪಿಗೆಯ ಕಿರಿಯ ತರುಲತೆಗಳು. ಬಿಳಿದು-ಹಳದಿ-ಕೆಂಪು-ಹಸಿರು ಮುಂತಾದ ನಾಲ್ವಣ್ಣಗಳಿಂದ ಕೂಡಿದ ಪುಷ್ಪವೃಷ್ಟಿಯನ್ನು ಗಂಗೆಯಲ್ಲಿ ಸುರಿಸುವ ಆ ನೋಟ, ರಮಣೀಯ! ಮನೋಹರ!

ಜೀವನದಲ್ಲಿ ಅಲೆಗಳ ಸೆಳೆತಕ್ಕೆ ಸಿಕ್ಕಿ ಕಟು ಅನುಭವ-ಗಳೆಂಬ ಕಸುಗಾಯಿಗಳನ್ನು ಕಡಿದು, ಸಂಸಾರಸಾಗರದಲ್ಲಿ

ಆದುದರಿಂದಲೇ ಏನೋ,ಹಿಂದೂ ಧರ್ಮಗ್ರಂಥಗಳಲ್ಲಿ—ಪುರಾಣ ಪುಸ್ತಕಗಳಲ್ಲಿ—ಸಮುದ್ರತೀರಗಳೂ, ನದಿಯ ದಂಡೆಗಳೂ ಗುಡಿಗುಂಡಾರಗಳೂ ಪವಿತ್ರವೆಂದು ಮನ್ನಿಸಲ್ಪಟ್ಟಿವೆ. ಇದಕ್ಕೆ ಉದಾಹರಣೆಗಳೆಂದರೆ: ಮಹಾತ್ಮ ಬುದ್ಧನು ಮಾನವಕುಟುಂಬಕ್ಕೆ ಸುಖಶಾಂತಿಯ ಹಾದಿಯನ್ನು ತೋರಿಸಿದುದು, ರಾಜಮಂದಿರದ ಮೇಲುಪ್ಪರಿಗೆಯಿಂದಲ್ಲ; ರಾಜ್ಯಮದದ ದಂಡನೆ-ಮಂಡನೆಗಳಿಂದಲ್ಲ; ಖಡ್ಗ-ಕಠಾರಿ-ಗಳ ಆರಿತ-ಹಿರಿತಗಳಿಂದಲ್ಲ, ಸಕಲ ಸಾಮ್ರಾಜ್ಯವನ್ನೂ ಸರ್ವೈಶ್ವರ್ಯವನ್ನೂ ಭೋಗವಿಲಾಸಗಳನ್ನೂ ತ್ಯಾಗಮಾಡಿ, ನೆಲವನ್ನೇ ಹಾಸಿಗೆಯನ್ನಾಗಿ ಆಕಾಶವನ್ನೇ ಹೊದ್ದಿಕೆ-

CC-0. Jangamwadi Math Collection. Digitized by eGangotri

ಯನ್ನಾಗಿ ಮಾಡಿ, ನದಿಯ ತೀರದಲ್ಲಿ ವೃಕ್ಷದಡಿಯಲ್ಲಿಯ ನೆಳಲನ್ನೇ ತನ್ನ ವಸತಿಯನ್ನಾಗಿಸಿ, ಆದೆಷ್ಟೋ ವರ್ಷದ ತಪಶ್ಚರ್ಯದಿಂದ, ಗೋಸ್ವಾಮಿ ತುಲಸೀದಾಸನು ಹೆಗ್ಗಳಿಕೆ ಪಡೆದ ತನ್ನ ರಾಮಾಯಣವನ್ನು ಬರೆದುದು, ವಿಲಾಸ-ಗೃಹದಲ್ಲಿ—ತನ್ನ ಪತ್ನಿಯು ತೊಡೆಯ ಮೇಲಲ್ಲ; ಅಖಂಡ ಬ್ರಹ್ಮಚರ್ಯವ್ರತವನ್ನು ಧರಿಸಿ, ಸರಳವಾದ ಮತ್ತು ಪವಿತ್ರವಾದ ಜೀವನವನ್ನೇ ತನ್ನ ವೃತ್ತಿಯನ್ನಾಗಿಟ್ಟು-ಕೊಂಡು, ಆದೆಷ್ಟೋ ವರ್ಷಗಳವರೆಗೆ ಗಂಗಾತೀರದಲ್ಲಿ ಶಕ್ತಿಸಂಪನ್ನರನ್ನಾಗಿ ಮಾಡಿ, ದಿವ್ಯಜ್ಞಾನಾಮೃತವನ್ನು ನೀಡಿ, ಜಗತ್ತಿಗೆ ಸುಖಶಾಂತಿಗಳ ಸಂದೇಶ ಬೀರಲು, ಕಳುಹಿಸುತ್ತಿರುತ್ತಾಳೆ. ಯಾವ ಉಸಿರಿನಿಂದ ನಾವಿಂದು ಜೀವಿಸುತ್ತಿರುವೆವೋ ಆ ಸರ್ವಜ್ಞಾನಭಾಂಡಾರವು, ಒಂದಾನೊಂದು ಕಾಲದಲ್ಲಿ ಪ್ರಕೃತಿದೇವಿಯು ತನ್ನ ಉಪಾಸಕರ ದ್ವಾರದಿಂದ ನಮಗೆ ಕೊಟ್ಟಿರುವ ಸಾಲ. ಇಂದು ಮತ್ತೂ ಮಾನವ ಕುಟುಂಬವು ದುಃಖ ಅಶಾಂತಿ-ಗಳಿಗೆ ತುತ್ತಾಗಿರುವುದೆಂದರೆ, ನಮ್ಮ ಅಸ್ವೈಜ—ಅಸಹಜ—



ಚಿಕ್ಕಪುಟ್ಟ ಬ್ರಹ್ಮಚಾರಿಗಳು ಲೇಜೀಮ್ ಕಲಿಯುತ್ತಿರುವರು.

ಧ್ಯಾನಾರೂಢನಾಗಿ ಕುಳಿತು ಗಳಿಸಿದ ತಪಶ್ಚರ್ಯದ ಪ್ರತಿ-ಫಲದಿಂದ. ಪೂಜ್ಯ ವಿದ್ಯಾರಣ್ಯರೂ ಅಳಿಯುತ್ತಿದ್ದ ಹಿಂದೂ ಧರ್ಮ-ಸಂಸ್ಕೃತಿಗಳನ್ನು ಉಳಿಸಲು ತಕ್ಕ ಶಕ್ತಿಸಾಮರ್ಥ್ಯ-ಗಳನ್ನು ಸಂಪಾದಿಸಿ, ವೈಭವದ ವಿಜಯನಗರ ಸಾಮ್ರಾಜ್ಯ-ವನ್ನು ಸ್ಥಾಪಿಸಿದುದಾದರೂ, ಪಂಪಾತೀರದಲ್ಲಿಯ ಆದೆಷ್ಟೋ ವರ್ಷಗಳವರೆಗಿನ ತಪಸ್ಸಿನ ಪ್ರತಿಫಲದಿಂದ. ಹೀಗೆ ಒಂದಲ್ಲ ಎರಡಲ್ಲದ — ನೂರಾರು — ಉದಾಹರಣೆಗಳು ನಮಗೆ ದೊರೆಯುತ್ತಿವೆ.

ಪ್ರಕೃತಿದೇವಿಯು ತನ್ನ ಸಲ್ಮೆಯ ಮಕ್ಕಳನ್ನು ಆಗಾಗ ತನ್ನೆಡೆಗೆ ಕರೆದು, ಸಾಕಿ ಸಲುಹಿ, ಸೌಂದರ್ಯದ ಹಾಲುಣಿಸಿ ಅಪ್ರಾಕೃತಿಕ ಜೀವನದ ದ್ವಾರ ಅವಳ ಮೇಲೆ ಎತ್ತಿರುವ ಗದೆಯ ಪ್ರತಿಫಲವಲ್ಲದೆ ಮತ್ತೇನು ?

ಗಂಗೆಯ ದಂಡೆ; ಅದರ ಮೇಲೆ ತನ್ನ ಹರಿಗಳನ್ನು ಸುತ್ತಲೂ ಹರಹಿ, ಬಿಸಿಲಲ್ಲಿ ನರಳಿಬಂದವರಿಗೆ ನೆರಳಿತ್ತು ಸಂತೈಸುವ ಒಂದು ಬಿಲ್ವವೃಕ್ಷ. ಅದರ ಆಶ್ರಯದಲ್ಲಿಯೇ ಒಂದು ಪುಟ್ಟ ಕುಟೀರ. ಒಂದು ವ್ಯಕ್ತಿ ಆಸನಾರೂಢವಾಗಿ ಅದರಲ್ಲಿ ಕುಳಿತಿದೆ. ಧೃಷ್ಟಪುಷ್ಟ ದೇಹ, ನೀಳವಾದ ತೋಳು, ಮುಡಿಗಟ್ಟಿದ ತೊಡೆ, ಹರವಾದ ಎದೆ, ವಿಶಾಲ ಹಣೆ, ಮಿಂಚಿನ ತೇಜಸ್ಸಿನಿಂದ ಪ್ರಕಾಶಿಸುವ ನಯನ, ದವಡೆ-ಯಿಂದ ಎದೆಯ ವರೆಗೆ ಹರಡಿದ ದಾಡಿ. ಇವುಗಳಿಗೆ

CC-0. Jangamwadi Math Collection. Digitized by eGangotri

ತಕ್ಕಂತೆ ಒಪ್ಪ ಹಾಕಿದ ಮುಖಮುದ್ರೆ. ನೋಡಲಿಕ್ಕೆ ಕೇವಲ ಸಂನ್ಯಾಸಿಯಂತೆ ಕಾಣುತ್ತಿದ್ದರೂ,ಆಳವಾದ ವಿಚಾರವೊಂದನ್ನು ಬಿಡಿಸಲು ತೊಡಗಿದ್ದಂತೆ ವ್ಯಕ್ತವಾಗುತ್ತಿತ್ತು.

"ಭಾರತಾಂಬೆ. ಅವಳ ನಡು, ತೊಡೆ, ಕೈ, ಕಾಲುಗಳು ಬಲವಾದ ಸರಪಳಿಗಳಿಂದ ಬಿಗಿಯಲ್ಪಟ್ಟಿವೆ. ಎತ್ತಲೂ ಮಿಸುಗುವಂತಿಲ್ಲ. ಕೆಂಪಡರಿದ ಕಣ್ಣು,ಕೆಂಜಡರಿದ ಮೂಗು, ಬಾಡಿದ ಮುಖ,ಕೆದರಿದ ತಲೆಗೂದಲು. ಅಸ್ತವ್ಯಸ್ತ ದೇಹದ ಒಂದು ಚಿತ್ರ. ಭಾರತಶಕ್ತಿ-ಸಂಸ್ಕಾರ-ಸಂಸ್ಕೃತಿಗಳು ಅಂಧಕಾರ ಕವಿದು, ಪ್ರಳಯದ ಹೆಗ್ಗಾಳಿಯು ಬೀಸಿ, ಅದರಲ್ಲಿ ಸಿಕ್ಕು ಸರ್ವರೂ ಗೋಳಿಡುವ ಕೊನೆಯ ಭೀಕರ ದೃಶ್ಯ...." ಹೀಗೆ ಒಂದರ ತರುವಾಯ ಮತ್ತೊಂದು,ಮೂಕ ಚಿತ್ರಪಟದಂತೆ ಆ ಯೋಗಿಯ ಚಿತ್ತಪಟಲದಲ್ಲಿ ತೋರಿ ಮರೆಯಾಗುತ್ತಲೇ "ಹೋಳಿ! ಹೋಳಿ!! ಈ ತನು-ಮನ, ಎನ್ನ ಜೀವನ, ಭಾರತದ ಅಭ್ಯುದಯಕ್ಕಾಗಿ ಹೋಳಿ!!!" ಎಂಬ ಅಂತರಾಳದ ಒಳನುಡಿಯೊಂದು ಸ್ವಾಮಿಯ ಹೃದಯದಿಂದ ಹೊರಬಿದ್ದು, ಸುತ್ತಣ ವಾತಾವರಣದಲ್ಲಿ



ಚಿಕ್ಕಮಕ್ಕಳು ಲಾಠಿಯನ್ನು ತಿರುವುತ್ತಿರುವುದು.

ಪರಕೀಯರ ಆಡಳಿತದ ದಾಳಿಯಲ್ಲಿ ಸಿಕ್ಕು ಚಡಪಡಿಸಿ ಪುಡಿಪುಡಿಯಾಗುತ್ತಿರುವುವು. ಭಾರತೀಯರು ಪರರ ಭಾಷೆ-ವೇಷ-ಭೂಷಣಗಳಿಗೆ ಮರುಳಾಗಿ,ಭಾರತದ ನಾಗರಿಕತೆಯನ್ನು ಮರೆಯುತ್ತಿರುವರು. ಭಾರತತರುಣರು ನಿರ್ವೀರ್ಯರಾಗಿ,ನಿಸ್ತೇಜರಾಗಿ, ಶೌರ್ಯ-ಧೈರ್ಯ ವಿಹೀನರಾಗಿ,ಸ್ವಾಭಿಮಾನಶೂನ್ಯರಾಗಿ,ನಡೆಯಿಸುವ ಹೇಡಿಜೀವನ. ಭರತಖಂಡದಲ್ಲಿ ಬಡಬಗ್ಗರ — ಭಿಕ್ಷುಕರ — ರೋಗಿ-ಸೋಮಾರಿಗಳ ಗುಂಪು ಹೆಚ್ಚಿ, ಕೊರೆದ ಹೊಟ್ಟೆ, ಹರಿದ ಬಟ್ಟೆ, ನವೆದ ಎಲುಬು ಚರ್ಮಗಳಿಂದ ಮುಲಮುಲಾಡುತ ಮನೆಮನೆ ತಿರುಗುವ ಮತ್ತೊಂದು ಚಿತ್ರ. ಕಡೆಗೆ ಗಾಢವಾದ ಬೆರೆತು, ಗಾಳಿಯನ್ನು ಕೂಡ ಮಿಂಚಿ ಮುಂದೋಡಿತು.

ಮತ್ತೊಮ್ಮೆ ಭಾರತದ ಇತಿಹಾಸವನ್ನು ಬರೆಯುವ ಸುಯೋಗ ಬಂದರೆ, ಸ್ವಾಮಿ ಶ್ರದ್ಧಾನಂದರು ಒಂದು ಪ್ರತ್ಯೇಕ ಪರ್ವವನ್ನೇ ಅಲಂಕರಿಸುತ್ತಾರೆ. ಅವರ ಜೀವನ ಚರಿತ್ರೆಯನ್ನು ಸ್ವಲ್ಪ ಅವಲೋಕಿಸಿದಲ್ಲಿ, ಮನುಷ್ಯನಲ್ಲಿ ಎಂತೆಂತಹ ಶಕ್ತಿಯು ಉಲ್ಬಣತೆ—ಕಾರ್ಯ ಕುಶಲತೆ— ಉಂಟೆಂಬುದನ್ನು ಮನಗಾಣಬಹುದು. ಪರರ ದಾಳಿಯಲ್ಲಿ ಸಿಕ್ಕು, ಅಳಿವಿನ ಕಡೆಗೆ ಮುಖಮಾಡಿದ್ದ ಹಿಂದೂ ಧರ್ಮ-ಸಂಸ್ಕೃತಿ-ಸಂಘ ಸಂಸ್ಕಾರ, ಆರ್ಯರ ನಾಗರಿಕತೆ ಇವುಗಳನ್ನು ಉಳಿಯಿಸಲು ತಮ್ಮ ಪ್ರಾಣವನ್ನೇ ಧಾರೆಯೆರೆದ

CC-0. Jangamwadi Math Collection. Digitized by eGangotri

ಸ್ವಾಮಿ ದಯಾನಂದ ಸರಸ್ವತಿಯವರ ಬರಿಯದಾದ ಸ್ಥಾನವನ್ನು ತುಂಬಿತೋರಿಸಿದ ಸ್ವಾಮಿ ಶ್ರದ್ಧಾನಂದರು ಉದಯಿಸದಿದ್ದರೆ, ಇಷ್ಟರಲ್ಲಿ ನಾವು ಯಾವ ಕುತ್ತದ ಹುತ್ತವನ್ನು ಮುಟ್ಟುತ್ತಿದ್ದೆವೆಂಬುದನ್ನು ಹೇಳಲು ಬರುವಂತಿಲ್ಲ. ಅವರು ತಮ್ಮ ಜೀವನದಲ್ಲಿ ಅನೇಕ ಮಹತ್ಕಾರ್ಯಗಳನ್ನು ಮಾಡಿದ್ದು, ಅದರಲ್ಲಿ ಗುರುಕುಲವಿಶ್ವವಿದ್ಯಾಲಯವೂ ಒಂದು.ಅವರು ತಮ್ಮ ಸ್ವಹಸ್ತದಿಂದಲೇ ಅದರ ಬೀಜ ನೆಟ್ಟು, ಸಾಕಿ ಸಲುಹಿ, ನೀರು ಹಾಕಿ ಬೆಳೆಯಿಸಿದವರು. ಜಗತ್ತಿನ ದೃಷ್ಟಿಯಿಂದ ಅಳಿಸಿ ಹೋಗಿದ್ದ ಭಾರತದ ಶಿಕ್ಷಣಪದ್ಧತಿಯನ್ನು ಮತ್ತೊಮ್ಮೆ ಎತ್ತಿ ತೋರಿಸಿದವರು ಸ್ವಾಮಿ-ಶ್ರದ್ಧಾನಂದರು.

ಇಂದು ಹರಿದ್ವಾರದ ಸಿಲ್ದಾಣದಲ್ಲಿಳಿದು 'ಇಲ್ಲಿ ನೋಡುವುದೇನು?' ಎಂದು ಯಾರಾದರೂ ಕೇಳುಕೇಳುತ್ತಲೇ "ನೋಡುವುದೇನು? ಮಾಡುವುದು ಗಂಗಾಸ್ನಾನ--ನೋಡುವುದು ಗುರುಕುಲ ಕಾಂಗ್ಡಿ" ಎಂದು ಎದುರಿಗಿದ್ದವರ ಬಾಯಿಂದ ತಟಕ್ಕನೆ ತಾನಾಗಿಯೆ ಹೊರಬೀಳುವುದು.

ಗುರುಕುಲದಲ್ಲಿಯ ಚಿಕ್ಕಮಕ್ಕಳ ಆಟಪಾಟ, ನಡೆನುಡಿ, ಆರೋಗ್ಯದ ಧೃಷ್ಟಪುಷ್ಟ ದೇಹ, ಸೌಂದರ್ಯದಿಂದ ಕೂಡಿದ ಮುಖಮುದ್ರೆ, ಸೌಮ್ಯಸದ್ವಿನಯದಿಂದ ಸಹಜವಾಗಿ ಹೊರಸೂಸುವ ಆ ಬಾಲರ ನಗೆ—ಇವುಗಳನ್ನು ನೋಡು-ನೋಡುತ್ತಲೇ, ಸನ್ಯಾಸಿಗೆ ಕೂಡ ಪ್ರೇಮದಿಂದ ಕೂಡಿದ ಸಮ್ಮೋಹವು ಉದ್ಭವಿಸಿ, ತಾನೂ ಗೃಹಸ್ಥನಾಗಬಾರದೇಕೆ? ತನಗೂ ಸಂತಾನವಾಗಿ, ಅವುಗಳನ್ನು ಇಲ್ಲಿಗೆ ಕಳುಹಿಸಬಾರದೇಕೆ? ....ಎಂದವನು ಹಳಹಳಿಸದಿರನು. ಅಲ್ಲಿಯ ಪ್ರೌಢ ವಿದಾರ್ಥಿಗಳ ಸರಳ ಸದ್ವಿನಯ, ಪವಿತ್ರ ಜೀವನವನ್ನು ನೋಡಿ, ಕಾಮಜೀವನಕ್ಕೆ — ಭೋಗವಿಲಾಸಗಳಿಗೆ — ಬಲಿಬಿದ್ದ ತರುಣನು ತನ್ನ ಹಿಂದಿನ ಕರ್ಮಕ್ಕಾಗಿ ಕಡು ಪಶ್ಚಾತ್ತಾಪಪಡದಿರನು. ಹಿಂದೂ ಧರ್ಮ ಸಂಸ್ಕೃತಿಗಳ ಎಂತಹ ಬದ್ಧ ವಿರೋಧಿಯಾದರೂ, ಅಲ್ಲಿ ಹೋಗಿ ನಿರೀಕ್ಷಿಸಿದಲ್ಲಿ "ಹಿಂದೂ ಧರ್ಮದ ಮರ್ಮ-ಸಂಸ್ಕಾರ-ಸಂಸ್ಕೃತಿ-ಆರ್ಯರ ನಾಗರಿಕತೆ ಇವೆಲ್ಲ ಹೀಗಿರುವುವಾದರೆ,ಆ ಹಿಂದೂ ಧರ್ಮ ನನ್ನದು; ಅದರ ಮೊದಲನೆಯ ಅನುಯಾಯಿ ನಾನು; ಅದರ ನಮ್ರ ಸೇವಕನಾಗುವ ಹಕ್ಕು ನನಗಿರಲಿ!" ಎಂಬ ಉದ್ಗಾರವು—ತಾನಾಗಿಯೇ ಹೊರಬೀಳುವುದು. ಗುರುಕುಲದ ಜನಕನನ್ನು ಕೊಲೆಮಾಡಿದ ಆ ಕೊಲೆಗಡುಕನೇ ಇಂದು ಬಂದು ನೋಡಿದಲ್ಲಿ "ಅಲ್ಲಾ" ಎಂದು ತಾನು ಮಾಡಿದ ಪಾಪಕ್ಕೆ ಪಶ್ಚಾತ್ತಾಪಪಟ್ಟು, ಖುದಾನನ್ನು ಮೊರೆಹೋಗದೆ ಇರನು.

ಉತ್ತರಭಾರತದಲ್ಲಿ ಗುರುಕುಲದ ಪದವೀಧರರಿಲ್ಲದ ಊರುಕೇರಿಗಳಿಲ್ಲ. ಅವರು ನಡೆಯಿಸದ ಪ್ರೆಸ್-ಪತ್ರಿಕೆಗಳಿಲ್ಲ. ದುಡಿಯದ ರಂಗಗಳಿಲ್ಲ; ಸೇರದ ಸಂಘ-ಸಂಸ್ಥೆಗಳಿಲ್ಲ; ಬರೆಯದಿರುವ ವಿಷಯ-ಪುಸ್ತಕಗಳಿಲ್ಲ; ಅಲ್ಲಿ ತಯಾರಾದ ಔಷಧಗಳಿಲ್ಲದ ಔಷಧಾಲಯಗಳಿಲ್ಲ; ಅಲ್ಲಿ ತೇರ್ಗಡೆ ಹೊಂದಿದ ವೈದ್ಯನಿಲ್ಲದ ಆಸ್ಪತ್ರೆ ಇಲ್ಲ; ಅದರ ಹೆಸರನ್ನು ಕೇಳದ ಭಾರತೀಯನಿಲ್ಲ....ಎಂದು ಹೇಳಿದಲ್ಲಿ ಅತಿಶಯದ ಉಕ್ತಿಯೇನೂ ಅಲ್ಲ.

ಏಳೆಂಟು ವರ್ಷಗ ಶಿಶುವನ್ನು ಬಗಲಲ್ಲಿ ತೆಗೆದುಕೊಂಡು, ಸಾಕಿಸಲಹಿ ಉಡಿಯಲ್ಲಿ ಪೋಷಿಸಿ, ಶಾರೀರಿಕ, ಮಾನಸಿಕ, ಬೌದ್ಧಿಕ, ಆಧ್ಯಾತ್ಮಿಕ ಶಕ್ತಿಗಳನ್ನು ಬೆಳೆಯಿಸಿ, ಜೀವನವನ್ನು ರಮ್ಯವನ್ನಾಗಿಸಿ, ಸೌಂದರ್ಯಮಯವನ್ನಾಗಿಮಾಡಿ, ಬಿಸಿನೆತ್ತರ ಹೊಸಹುರುಪು, ಉತ್ಸಾಹ-ಉಲ್ಲಾಸಗಳಿಂದ ತುಂಬಿತುಳುಕುವ ನವಯುವಕರನ್ನು ತಯಾರಿಸಿ, ಜನತಾ-ಜನಾರ್ದನನ ಸೇವೆಗೆ ಹುರಿಮಾಡಿ, ಹೊರಗೆ ಕಳುಹುವ ಸಂಸ್ಥೆಯೆಂದರೆ, ಗುರುಕುಲದ ಹೊರತು ಮತ್ತೊಂದಿದೆಯೆಂಬುದರ ಬಗ್ಗೆ ಸಂಶಯವೇ ಸರಿ. ಗುರುಕುಲವು ತನ್ನ ಜೀವನದಲ್ಲಿ ಸರಕಾರದ ಸಲಹೆ-ಸಹಾಯಗಳಿಗೆ ಕೈಯೊಡ್ಡುವುದಿಲ್ಲವೆಂದು ಶಪಥತೊಟ್ಟಿದೆಯೇನೊ! ಸರಕಾರದ ಕೈಪಾಡಕ್ಕೆ ದೂರದಿಂದಲೇ ಶರಣುಹೊಡೆದಿದೆ. ಆದರೂ ಆಡಳಿತದಲ್ಲಿಯೂ ವಿದ್ಯಾಪದ್ಧತಿಯಲ್ಲಿಯೂ ಕಾರ್ಯಕುಶಲತೆಯಲ್ಲಿಯೂ ಸರಕಾರವನ್ನೂ ಬೆಪ್ಪುಕಚ್ಚಿಸುತ್ತಿದೆ. ಈ ವಿಶ್ವವಿದ್ಯಾಲಯವು ಹುಟ್ಟಿದಂದಿನಿಂದ ಇಂದಿನವರೆಗೆ, ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೂ, ಅದರ ಪದವೀಧರರಲ್ಲಿ ನಿರುದ್ಯೋಗದ ಬಾಯಿಗೆ ತುತ್ತಾದವರು ದೊರೆಯುವುದು ಅಸಂಭವ.

ಗುರುಕುಲದಲ್ಲಿ ದೊರೆಯುವ ಶಿಕ್ಷಣಪದ್ಧತಿಯನ್ನು ಕುರಿತು ವ್ಯಕ್ತಪಡಿಸಿದ ಹಲವು ಜನ ಆಂಗ್ಲ ಮತ್ತು ಹಿಂದೀ ಮೇಧಾವಿಗಳ ಅಭಿಪ್ರಾಯಗಳನ್ನು ನೋಡಿದರೆ, ಅದರ ಆಳವನ್ನು ತಕ್ಕಮಟ್ಟಿಗಾದರೂ ಅಳೆಯಬಹುದು.

ಮಹಾತ್ಮಾ ಗಾಂಧಿಯವರು: "A truly national self-governing & self-governed institution." ರಾಮ್ಸೆ ಮೆಕ್ಡೊನಾಲ್ಡ್:— "The most momentous thing in Indian education that has been done since Macaulay sat down to put his opinion into the minute in 1835."

CC-0. Jangamwadi Math Collection. Digitized by eGangotri

ಸರ್ ಮಿಕಾಲ್ ಸಾಡ್ಲರ್:— The experiment of imparting higher education through the Vernaculars has been pre-eminently successful in Gurukul.

ಸರ್ ಅಶುತೋಷ:— Gurukul—the only national institution in India.

ಲಾರ್ಡ್ ಮೆಸ್ಟನ್:— The Gurukul—an ideal University.

ಸಂಯುಕ್ತ ಪ್ರಾಂತದ ಸರಕಾರವು ಆಯುರ್ವೇದ ವೈದ್ಯ ಶಿಕ್ಷಣ ಸಂಸ್ಥೆಗಳನ್ನು ಪರೀಕ್ಷಿಸಲು ಏರ್ಪಡಿಸಿದ ಕಮಿಷನನ್ನು ತನ್ನ ವರದಿಯಲ್ಲಿ ಹೀಗೆ ಹೇಳಿರುವುದು:—

"The Ayurvedic College, Gurukul, enjoys a good reputation of being a first-rate College. Its well qualified staff, its reformed methods of teaching, its equipments, its collections of good books and its dynamic outlook are esteemable."

ಪಂಡಿತ ಮದನ ಮೋಹನ ಮಾಳವೀಯರವರು:— "A unique illustration of self-reliance of higher Indian manhood" ಎಂದಿರುವರು.

ಪ್ಯಾರಿಸ್ಸದ ಫ್ರೆಂಚ್ ಯುನಿವರ್ಸಿಟಿಯ ಪ್ರೊಫೆಸರರಾದ ಪಾಲರೂ ಮತ್ತು ಲಂಡನದ ಎಕನಾಮಿಕ್ಸ ಕಾಲೇಜದ ಪ್ರಿನ್ಸಿಪಾಲರಾದ ಮಿ. ಸಿಡ್ನೆ ವೆಲ' M.P. ಅವರೂ ಹೇಳಿರುವುದು ಹೀಗೆ:—

"The Gurukul is an Indian College to imitate and follow."

ಸರ್ ಜೇಮ್ಸ ಮೆಸ್ಟನ್—ಸ. ಪ್ರಾ. ಮಾಜಿ ಗವರ್ನರ್:— "I have been more than rewarded by visiting one of the most wonderful, interesting and stimulating institutions. Here we have a band of ascetics devoted to their duty and working in the wilderness, following the traditions of the ancient Rishis combined with the most modern scientific methods and working practically for nothing, and a set of students of strong physique and obedient, loyal, faithful and devoted, extra-ordinarily happy and extra-ordinarily well. One thing that I have noticed here is that, while in our school and college, unfortunately, I am sorry to say, one out



ಕಿರಿಯ ಬಾಲಕರು ಗುರುಕುಲದ ತೋಟದಲ್ಲಿ ಸ್ವಯಂಸ್ಫೂರ್ತಿಯಿಂದ ಕೆಲಸ ಮಾಡುತ್ತಿರುವುದು

CC-0. Jangamwadi Math Collection. Digitized by eGangotri

of three boys has spectacles, here we have one in twenty."

ಅಮೇರಿಕೆಯ ಶಿಕ್ಷಣ ಶಾಖೆಯಲ್ಲಿ ನುರಿತ ಮೇಧಾವಿ ಮಿ. ಮೈರ್‌ನ್ ವೆಲ್ಪಸ್ ಅವರು ಗುರುಕುಲದಲ್ಲಿ ಎರಡು ತಿಂಗಳು ಇದ್ದು, ಇಲ್ಲಿಯದನ್ನೆಲ್ಲಾ ನಿರೀಕ್ಷಿಸಿ ಪಾಯನೀರ ಪತ್ರಿಕೆಯಲ್ಲಿ ಈ ರೀತಿ ಬರೆಯುತ್ತಾರೆ:—

"No man can live for a time in the atmosphere of this school without feeling full confidence that the men who receive its training will be of genuine worth and integrity, whose work in the world is certain to advance the welfare of their countrymen and of mankind. My observation long ago convinced me that in a training of that sort, which this school is pre-eminently qualified to give, lies for the present the only hope, so far as human prescience can determine, for the development in India of that manly and elevated character which alone can achieve a future for the country commensurate with its glorious past."

ಪ್ರತಿವರ್ಷವೂ ಗುರುಕುಲದಲ್ಲಿ ಒಂದು ಸಮಾರಂಭವು ನಡೆಯುತ್ತಿದೆ. ಅದಕ್ಕೆ "ಗುರುಕುಲ ಮೇಳ" ವೆಂದು ಹೆಸರು. ಅದು ನಡೆಯುವುದು ಹೋಳಿ ಹುಣ್ಣಿಮೆಯ ದಿವಸ. ಸ್ವಾಮಿಶ್ರದ್ಧಾನಂದರು ಭಾರತದ ಅಭ್ಯುದಯಕ್ಕಾಗಿ ತಮ್ಮನ್ನು ತಾವೇ ಹೋಳೀ ಮಾಡಲು ನಿರ್ಧರಿಸಿದ ಜ್ಞಾಪಕಾರ್ಥವಾಗಿಯೇ ಈ ಮೇಳವೆಂದು ಹೇಳಬಹುದು. ಅದೇ ಕಾಲದಲ್ಲಿಯೇ ಗುರುಕುಲವಿಶ್ವವಿದ್ಯಾಲಯದ ಪದವೀಧರರನ್ನು ಬೀಳ್ಕೊಳ್ಳುವ ಸಮಾರಂಭವು ಕೂಡ ಜರುಗುವುದು. ಅದರಲ್ಲಿ ಭಾಗವಹಿಸಲು ಭಾರತದ ಮೇಧಾವಿ-



ಎಳೆಮಕ್ಕಳು ತಕ್ಲಿಯ ಮೇಲೆ ನೂಲನ್ನು ತೆಗೆಯುತ್ತಿರುವರು.

ಮುಂದಾಳುಗಳನೇಕರು ಆಹ್ವಾನಿಸಲ್ಪಟ್ಟಿರುತ್ತಾರೆ. ಉತ್ತರ ಭಾರತದಲ್ಲಿಯ ಹಳ್ಳಿಹಳ್ಳಿಯ ಜನರೂ ಬಂದು, ಅದರಲ್ಲಿ ಭಾಗವಹಿಸುತ್ತಾರೆ. ಅದಕ್ಕೆ ಉದಾಹರಣೆಯೆಂದರೆ, ಹಿಂದೊಮ್ಮೆ ಸರಕಾರವು ಲೋಕಮಾನ್ಯ ತಿಲಕರನ್ನು ಪಂಜಾಬಿನಲ್ಲಿ ಕಾಲಿಡಕೂಡದೆಂದು ಕಟ್ಟಪ್ಪಣೆಕೊಟ್ಟಾಗ, ಸ್ವಾಮಿ ಶ್ರದ್ಧಾನಂದರು ಲೋಕಮಾನ್ಯರನ್ನು ಕುರಿತು "ನೀವು ಗುರುಕುಲಮೇಳಕ್ಕೆ ಬಂದುದಾದರೆ ನಿಮ್ಮ ಸಂದೇಶವು ಪಂಜಾಬದ ಕೇರಿಕೇರಿಗೂ ತಲ್ಪುವುದು "ಎಂದು

CC-0. Jangamwadi Math Collection. Digitized by eGangotri

ವಿನಂತಿ ಮಾಡಿಕೊಂಡಿದ್ದರಂತೆ. ಅದೇ ಉದ್ದೇಶದಿಂದಲೋ ಏನೊ ವಿಶ್ವವಿದ್ಯಾಲಯದ ಪ್ರಿನ್ಸಿಪಾಲರಾದ ಸಾಧುವರ್ಯ ಆಚಾರ್ಯ ದೇವಶರ್ಮಾಜಿಯವರು, ಗಡಿನಾಡ ಗಾಂಧಿಯವರನ್ನು ಈ ವರ್ಷದ ಸಮಾರಂಭಕ್ಕೆ ಆಹ್ವಾನಿಸಿದ್ದರು; ಅದೇನೇ ಇರಲಿ !

ವ್ಯಕ್ತಿರೂಪರಾದ ಸ್ವಾಮಿ ಶ್ರದ್ಧಾನಂದರೇನೋ ನಮ್ಮ ಕಣ್ಮರೆಯಾದರು; ಆದರೆ ಅವರ ಜೀವನತತ್ತ್ವವು ಮಾತ್ರ ನಮ್ಮಸ್ವತ್ತಾಗಿ ಉಳಿದಿದೆ. ಸ್ವಲ್ಪದರಲ್ಲಿಯೇ ಹೇಳುವುದಾದರೆ, ಅವರು ತಮ್ಮ ಜೀವನವನ್ನೇ ತೈಲವನ್ನಾಗಿಸಿ, ಮೇಧಾಶಕ್ತಿಯನ್ನೇ ಬತ್ತಿಯನ್ನಾಗಿಸಿ, ಪ್ರಾಣವನ್ನೇ ಹೋಳಿಮಾಡಿ ಒಂದು ಜ್ಯೋತಿಯನ್ನು ಹೊತ್ತಿಸಿದ್ದಾರೆ. ಅದರ ಪ್ರಕಾಶದಲ್ಲಿಯೇ, ಕಳೆದ ದಾರಿಯನ್ನು ನಾವು ಮತ್ತೊಮ್ಮೆ ಕಂಡು ಹಿಡಿಯಲವಕಾಶವಾಗಿದೆ. ಭಾರತದಲ್ಲಿ ಕವಿದಿರುವ ನಿಶೆಯು ನಶಿಸಬೇಕಾದರೆ, ಇಂತಹ ಎಷ್ಟು ಹೋಳಿಗಳಾಗಬೇಕು ? ಆ ಜ್ಯೋತಿಯ ಬೆಳಕಿನಲ್ಲಿ ಕೂಡುವ ಮೇಳಗಳಿಗೇನು ಕಡಿಮೆ ?

### ಕನ್ನಡಿಗರ ಅಭಿಮಾನಧನ

ವಿಜಯನಗರ ಸಾಮ್ರಾಜ್ಯದ ಬಗ್ಗೆ ಮತ್ತು ಅದರ ಸ್ಮಾರಕೋತ್ಸವದ ಬಗ್ಗೆ ಹಲವು ಕನ್ನಡಿಗರೇ ಮೂಗು ಮುರಿಯುತ್ತಿರುವುದು ಕಂಡುಬಂದಿದೆ. ಸಾಮ್ರಾಜ್ಯದ ಸ್ಮಾರಕೋತ್ಸವದ ದಿನ, ಇಡಿಯ ಗುರುಕುಲವಿಶ್ವವಿದ್ಯಾಲಯಕ್ಕೆ ರಜೆ. ಸ್ಮಾರಕೋತ್ಸವದ ಗೌರವಸೂಚನೆಗೆ ಅಂದಿನ ಸಾಯಂಕಾಲ, ಪ್ರಿನ್ಸಿಪಾಲರ ಅಧ್ಯಕ್ಷತೆಯಲ್ಲಿ ಸಭೆ ಸೇರಿ, ಹಲವು ಪ್ರೊಫೆಸರರು ಮತ್ತು ವಿದ್ಯಾರ್ಥಿಗಳು 'ಈ ಸಾಮ್ರಾಜ್ಯವು ಹಿಂದೂ ಸಂಸ್ಕೃತಿಯನ್ನು ಎತ್ತಿಹಿಡಿಯಲು ಹೇಗೆ ಅವತರಿಸಿತು ಮತ್ತು ಹೇಗೆ ಕಾದಾಡಿತು ? ' ಎಂಬುದನ್ನು ವರ್ಣಿಸಿದರು. ಸಭೆಯ ಸಹಾನುಭೂತಿಯ ಠರಾವನ್ನು ಸ್ಮಾರಕೋತ್ಸವದ ಕಾರ್ಯಾಲಯಕ್ಕೆ ಕಳುಹಿಸಲಾಯಿತು. " ವಿಜಯನಗರ ಸಾಮ್ರಾಜ್ಯದ ಬಗ್ಗೆ ನಾನು ಹೆಚ್ಚಿನ ಸಾಹಿತ್ಯವನ್ನು ಓದಲು ಅವಕಾಶವಾಗಿಲ್ಲ; ಆದರೂ ಅದರಲ್ಲಿ ನನಗೆ ಹೆಚ್ಚಿನ ಗೌರವವಿದೆ. ಅದು ಹಿಂದೂ ಸಂಸ್ಕೃತಿಯನ್ನು ಎತ್ತಿಹಿಡಿಯಲು ಅವತರಿಸಿದ ಒಂದು ದೊಡ್ಡ ಸಾಮ್ರಾಜ್ಯ!" ಎಂದು ಗುರುಕುಲದ ಆಚಾರ್ಯರಾದ ಸಾಧುವರ್ಯ ಶ್ರೀದೇವಶರ್ಮಾಜಿಯವರು ನನ್ನ ಮುಂದೊಮ್ಮೆ ಎಂದರು.

(ಜಯಕರ್ಣಾಟಕದಲ್ಲಿ ' ನನ್ನದೂ ಒಂದು ಮಾತು ' ಎಂದು ಇದನ್ನು ಬರೆದುದಲ್ಲ. ಕನ್ನಡಿಗರಿಗೆ ಗುರುಕುಲದ ಪರಿಚಯವಾಗಬೇಕು.... ಈ ಸಂಸ್ಥೆಯಿಂದ ಶಕ್ಯವಿರುವ ಸದುಪಯೋಗವನ್ನು ಕನ್ನಡಿಗರು ಪಡೆದುಕೊಳ್ಳಬೇಕು.... ಎಂದು. ಕರ್ಣಾಟಕದಲ್ಲಿಯೂ ಇಂತಹ ಸಂಸ್ಥೆಯೊಂದು ಅವತರಿಸಿದರೆ, ಹುಟ್ಟುಗುರುಡನಿಗೆ ಕಣ್ಣು ಬಂದಂತೆ. ಹೆಚ್ಚಿನ ವಿವರ ಬೇಕಾದವರು ಗುರುಕುಲ ವಿಶ್ವವಿದ್ಯಾಲಯದ ಮುಖ್ಯ ಅಧಿಷ್ಠಾತರವರೊಡನೆ ( Governer ) ಪ್ರತ್ಯವ್ಯವಹಾರ ಮಾಡಬಹುದು).




## ಜಯಕರ್ನಾಟಕ ಪುಸ್ತಕಾಲಯ

### ಧಾರವಾಡ

ಕಾರ್ತಿಕ ಶುದ್ಧ ಪ್ರತಿಪದೆಯ ಸುಮುಹೂರ್ತದಲ್ಲಿ ಪ್ರಾರಂಭವಾಗಿದೆ. ನಮ್ಮಲ್ಲಿ **ಜಯಕರ್ನಾಟಕ ಗ್ರಂಥಮಾಲೆಯ** ಮತ್ತು **ಜಯಕರ್ನಾಟಕ** ಕಾರ್ಯಾಲಯದ ಎಲ್ಲ ಪ್ರಕಟನೆಗಳೂ ದೊರೆಯುವುವಲ್ಲದೆ, **ಶ್ರೀ. ಬೆಟಗೇರಿ ಕೃಷ್ಣಶರ್ಮ** ( ಆನಂದಕಂದ ), **ಶ್ರೀ. ಶಂ. ಬಾ. ಜೋಶಿ, ಶ್ರೀ. ಮಾಸ್ತಿ, ಶ್ರೀ. ಗೊರೂರ, ಶ್ರೀ. ದೇವುಡು, ಶ್ರೀ. ಶಂಕರಭಟ್ಟರು, ಶ್ರೀ. ಡಿ. ವಿ. ಜಿ., ಶ್ರೀ. ಸಿ. ಕೆ. ವೆಂಕಟರಾಮಯ್ಯ** ಮೊದಲಾದವರ ಎಲ್ಲಾ ಗ್ರಂಥಗಳೂ

**' ಜ್ಞಾನಯಾತ್ರೀ ಗ್ರಂಥಮಾಲೆ 'ಯ**

ಎಲ್ಲಾ ಹಿಂದೀ ಪ್ರಕಟನೆಗಳೂ ದೊರೆಯುತ್ತವೆ. ಅಲ್ಲದೆ ಕರ್ನಾಟಕದ ಯಾವುದೇ ಭಾಗದ ಪುಸ್ತಕ–ಪ್ರಕಟನೆಗಳೂ ನಮ್ಮಲ್ಲಿ ಸಿಗುತ್ತವೆ.




CC-0. Jangamwadi Math Collection. Digitized by eGangotri

# ಯುನೈಟೆಡ್ ಕರ್ನಾಟಕ ಇನ್ಶ್ಯುರನ್ಸ್ ಕಂ. ಲಿಮಿಟೆಡ್

## ಪ್ರಧಾನ ಕಾರ್ಯಾಲಯ—ಧಾರವಾಡ.

**ಕಳೆದ ಆರು ವರ್ಷಗಳಿಂದಲೂ ಬೆಳೆದು ಬಲಗೊಂಡು ನಿಂತು, ಸರಕಾರದ ಪಂಚವಾರ್ಷಿಕ ವಿಮರ್ಶೆಯಲ್ಲಿ ಜಯಶೀಲವಾಗಿರುವ ಕರ್ನಾಟಕದ ಜೀವವಿಮಾ ಕಂಪನಿ ● ● ●**



**ಈ ಕಂಪನಿಯ ಬಗ್ಗೆ ಜನರಿಗೆ ವಿಶೇಷ ಅಭಿಮಾನವೆನಿಸಲು ಕಾರಣಗಳೇನೆಂದರೆ: ● ● ●**

ಕಂಪನಿಯ ಹಣಕ್ಕೆ ಸರಕಾರದ ಆಧಾರಪತ್ರಗಳ ಮೂಲಕ ಸಂಪೂರ್ಣ ಸುರಕ್ಷಿತತೆಯಿದೆ. ಪಾಲಿಸಿದಾರರ ಹಕ್ಕಿನ ಹಣವನ್ನು ಸಲ್ಲಿಸುವುದರಲ್ಲಿ ತೊಂದರೆ-ತಡೆಗಳೇ ಇಲ್ಲ. ಏಜಂಟರ ಮತ್ತು ಪ್ರಧಾನ ಕಾರ್ಯಾಲಯದ ವ್ಯವಹಾರದಲ್ಲಿ ಸಮಯಶೀಲತೆಯಿದೆ. ಕನಿಷ್ಠ ವೆಚ್ಚದಿಂದ ವಿಶಿಷ್ಟ ಲಾಭವನ್ನು ಕೊಡುವ ವಿಮಾಯೋಜನೆಗಳಿವೆ. ಈ ಕಂಪನಿಯ ಏಳ್ಗೆಯಲ್ಲಿ ಕರ್ನಾಟಕದ ಆರ್ಥಿಕೋನ್ನತಿಯ ಬಲವಾದ ಆಧಾರವಿದೆ.

ಅಲ್ಲದೆ ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಇದರ ಪಾಲುಗಾರರಿದ್ದು, ಇದು ಕನ್ನಡ ನಾಡಿನ ಪ್ರಾತಿನಿಧಿಕ ಸಂಸ್ಥೆಯಾಗಿದೆ. ಆದುದರಿಂದ ಕನ್ನಡದ ಗೆಲವನ್ನು ಬಯಸುವವರು 'ಯುನೈಟೆಡ್ ಕರ್ನಾಟಕ'ದ ಪಾಲಿಸಿಯನ್ನಾಗಲಿ ಪಾಲುಗಳನ್ನಾಗಲಿ ಪಡೆಯಬೇಕು; ವಿಶೇಷವಿವರಕ್ಕೆ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಮುಳಗಿ ಬಂಧುಗಳು<br>
ಧಾರವಾಡ ಜಿಲ್ಹೆಯ ಚೀಫ್ ಏಜಂಟರು<br>
ಗದಗು



ಎಮ್. ಗೋವರ್ಧನರಾವ್<br>
ಮ್ಯಾನೇಜರ್<br>
ಯು. ಕ. ಇ. ಕಂ. ಲಿ., ಧಾರವಾಡ

# ಶ್ರೀರಾಮ ಸಿಲ್ಕ್ ಥ್ರೋಯಿಂಗ ಫ್ಯಾಕ್ಟರಿ, ಬೆಂಗಳೂರು ಸಿಟಿ.

ಅತ್ಯುತ್ತಮವಾದ

**ಮೈಸೂರು ಫಿಲೇಚರ್ ರೇಷ್ಮೆ ಸೀರೆಗಳೂ**

ಕಿರಿಗೆಗಳೂ ಖಣಗಳೂ ಮುಗುಟಗಳೂ ಸೆಲ್ಲೆಗಳೂ ಸಾದಾ ಸಿಲ್ಕುಗಳೂ ನಮ್ಮ ಕಾರ್ಖಾನೆಯಲ್ಲೇ

**ಶುದ್ಧ ಸ್ವದೇಶೀ ರೇಷ್ಮೆಯಿಂದ**

ಹೊಸ ಹೊಸ ಮಾದರಿಯ ಅಂಚುಗಳಿಂದಲೂ, ಮನಮೆಚ್ಚಿಸುವ ವಿವಿಧಬಣ್ಣಗಳಿಂದಲೂ, ನಾಜೂಕಾಗಿ ನಯವಾಗಿ ತಯಾರಾಗುತ್ತವೆ.

ಅಲ್ಲದೆ ನಮ್ಮಲ್ಲಿ ದಿನವಹಿ ಉಪಯೋಗಿಸುವ ತರತರದ ಪೂನಾ ಮಡಿಸೀರೆಗಳೂ ಅತಿ ಸುಲಭ ಬೆಲೆಯಲ್ಲಿ ದೊರೆಯುತ್ತವೆ.

ನಮ್ಮ ಸೀರೆಗಳು ಹಗುರಾಗಿದ್ದು, ದಿನವಹಿ ಒಗೆಯುವುದಕ್ಕೆ ತುಂಬ ಅನುಕೂಲವಾಗಿವೆ.

ಬಾಳಿಕೆಗೂ, ಖಾತ್ರಿಯಾದ ಬಣ್ಣಕ್ಕೂ ಹೆಸರುವಾಸಿಯಾಗಿವೆ.

ಷೋ ರೂಂ ಮತ್ತು ಸೇಲ್ಸ್ ಡಿಪೋ:

೭ನೇ ಬೀದಿ, ಚಾಮರಾಜಪೇಟೆ — ೪೯೧, ದೊಡ್ಡಪೇಟೆ — ಬೆಂಗಳೂರು ಸಿಟಿ

MADRAS SALES DEPOT: Pycrofts Road, Triplicane


CC-0. Jangamwadi Math Collection. Digitized by eGangotri

# ಬಾಳಿನ ಹುರುಳು-ತಿರುಳುಗಳು

ಸಂಗ್ರಾಹಕರು: ಶ್ರೀ. ಬಿ. ಪಾರ್ಥಸಾರಥಿರಾಯರು

ಅಮರತ್ವವನ್ನು ಕೊಡಬಲ್ಲ ಅಮೃತಕುಂಭವೂ, ಎಲ್ಲ ಆಶೆ–ಆಕಾಂಕ್ಷೆಗಳನ್ನು ಪೂರಯಿಸಬಹುದಾದ ಕಲ್ಪವೃಕ್ಷವೂ ಕಲ್ಪನೆಯ ಹುಚ್ಚಾಟವೆಂದು ಹೇಳಿದೊಡನೆಯೆ ಮುಖ ಕೆಂಪಗೆ ಮಾಡುವ ಸನಾತನ ಸಂಪ್ರದಾಯಪ್ರಿಯರು, ಈ ಹೊಸಕಾಲದ ಗಡಿಬಿಡಿಯಲ್ಲಿ ಸೇರಿಕೊಂಡು, ಅವಿರತವಾದ ಉದ್ಯೋಗಕ್ಕೆ ಕೈಗೊಟ್ಟು ಹೊರಟರೆ—ಅವರ ಕ್ರೋಧವೂ ನಿರಾಶಾವಾದವೂ ಖಂಡಿತವಾಗಿ ತೊಲಗಿ ಹೋಗುವುದು.

## ಮುಮ್ಮಾತು

ಅಮೇರಿಕೆಯ ವಿಲ್ ಡ್ಯೂರಂಟ್ ಅವರು ಪ್ರತಿಭಾಶಾಲಿಗಳಾದ ಲೇಖಕರು; ತತ್ತ್ವಜಿಜ್ಞಾಸೆಯುಳ್ಳವರು. ಮಾನವಜೀವನದ ಹುರುಳೇನೆಂಬ ಬೆಲೆಯುಳ್ಳ ಪ್ರಶ್ನೆಯನ್ನು ಹಾಕಿ ಕಾಗದ ಬರೆದು—ಇಂದಿನ ಜಗತ್ತಿನಲ್ಲಿ ತಮ್ಮತಮ್ಮ ಕರ್ತವ್ಯಜಾಗೃತಿಯಿಂದ ಜೀವನದ ಒಂದು ಮಟ್ಟವನ್ನು ಮುಟ್ಟಿದವರೆಂದು ತಿಳಿಯಲಾಗುವ—ಅನೇಕ ಮಹಾಪುರುಷರಿಂದ ಇವರು ಉತ್ತರವನ್ನು ತರಿಸಿಕೊಂಡು, 'On the Meaning of Life' ಎಂಬ ಹೆಸರಿ ಗ್ರಂಥವೊಂದರಲ್ಲಿ ಸಂಗ್ರಹಿಸಿರುವರು. ಅದೇ ಗ್ರಂಥದಲ್ಲಿ ಕೊನೆಗೆ ವಿಲ್ ಡ್ಯೂರಂಟ್ ಅವರು ತಮ್ಮ ಸ್ನೇಹಿತರೊಬ್ಬರಿಗೆ ಬರೆದಂತಿದ್ದ ಪತ್ರವೊಂದನ್ನೂ ಪ್ರಕಟಿಸಿ, ಜೀವನದ ತಿರುಳಿನ ವಿಷಯವಾಗಿರುವ ತಮ್ಮ ವಿಚಾರಗಳನ್ನೂ ತಿಳಿಸಿರುವರು. ಅವರ ವಿಚಾರಗಳು ಎಷ್ಟೊಂದು ಬೆಲೆಬಾಳುವಂತಹವಿವೆಯೆಂಬುದನ್ನು ಓದಿನೋಡಿಯೆ ಮನಗಾಣಬೇಕು.

೧೯೩೦ನೆಯ ಇಸ್ವಿಯಲ್ಲಿ, ಜೀವನಕ್ಕೆ ಬೇಸತ್ತ ಅನೇಕ ಜನ ಅಮೇರಿಕನ್ ತರುಣರು ಆತ್ಮಹತ್ಯೆಗೆ ಸಿದ್ಧರಾಗಿ "ಬದುಕಿರುವುದರಲ್ಲಿ ಯಾವ ಸ್ವಾರಸ್ಯವೂ ನಮಗೆ ಕಾಣುವುದಿಲ್ಲ. ತಾವು ಅನೇಕ ವಿಷಯುಗಳನ್ನು ತಿಳಿದವರಾದುದರಿಂದ ದಯೆಯಿಟ್ಟು ಹೇಳಿ! ಬಾಳಿನಲ್ಲಿ ಏನಾದರೂ ಹುರುಳಿದೆಯೇ?" ಎಂಬರ್ಥದ ಪತ್ರಬರೆದು, ಡ್ಯೂರಂಟ್ ಅವರನ್ನು ಕೇಳಿದರು. ಆಗ ಡ್ಯೂರಂಟರು "ಬಾಳಿನಲ್ಲಿ ಬೇಕಾದಷ್ಟು ಹುರುಳಿದೆ, ತಿರುಳಿದೆ. ಅದಕ್ಕೆ ಬೇಸತ್ತು ಆತ್ಮಘಾತಕ್ಕೆ ಸಿದ್ಧರಾಗುವುದೆಂದರೆ ಹುಚ್ಚುತನವೇ ಸರಿ" ಎಂಬ ಮುಖ್ಯ ಮಾತನ್ನು, ಬೇರೆಬೇರೆಯವರಿಗೆ ಬೇರೆಬೇರೆ ಪ್ರಕಾರದ ಪ್ರಮಾಣಗಳಿಂದ ಸಿದ್ಧಗೊಳಿಸಿ ಪತ್ರಬರೆದರು. ಇವೆಲ್ಲ ಪತ್ರಗಳಲ್ಲಿಯೂ ಸೂತ್ರಿತವಾಗಿರುವ ವಿಚಾರಗಳನ್ನು ಗ್ರಂಥದ ಕೊನೆಯ ತಮ್ಮ ಪತ್ರದಲ್ಲಿ ವಿಲ್ ಡ್ಯೂರಂಟ್ ಅವರು ಸಂಗ್ರಹಿಸಿರುವರು. ಬಾಳಿನಲ್ಲಿಯ ಬೇರೆಬೇರೆ ಆಶೆ-ಆಕಾಂಕ್ಷೆಗಳ ಅತೃಪ್ತಿಯ ಮೂಲಕ ನಿರಾಶೆಯಿಂದ ತಳಮಳಿಸುತ್ತಿರುವ ನಮ್ಮ ತರುಣರು 'On the Meaning of Life' ಎಂಬ ಗ್ರಂಥವನ್ನು ಇಡಿಯಾಗಿ ಓದಿ ತಿಳಿದುಕೊಳ್ಳಬೇಕಾದುದು ತುಂಬ ಆವಶ್ಯಕ. ಕೊನೆಯ ಪಕ್ಷ ಡ್ಯೂರಂಟ್ ಅವರ ಪತ್ರವೊಂದನ್ನಾದರೂ ಓದಿಯೆ ತೀರಬೇಕು. ಎಂತಲೆ ಅದನ್ನು ಇಲ್ಲಿ ಕನ್ನಡಿಸಿ ಕೊಡಲಾಗಿದೆ.

## ವಿಲ್ ಡ್ಯೂರಂಟ್ ಅವರ ಓಲೆ

"ಅಜ್ಞಾತನಾದ ನನ್ನ ಪ್ರಿಯಮಿತ್ರಾ!

ನೀನು ಬರೆದು ತಿಳುಹಿದ ನಿನ್ನ ಆತ್ಮಹತ್ಯೆಯ ವಿಚಾರವು ನನಗೆ ಗೊತ್ತಾಯಿತು. ಹೀಗೆ ನಿರ್ಣಯಿಸುವುದಕ್ಕೆ ಯಾವ ಸಂಗತಿಗಳು ಕಾರಣವಾದುವೆಂದು ನೀನು ಬರೆದಿರುವೆಯೊ ಅವೆಲ್ಲ ವಿಚಾರಾರ್ಹವಾದುವುಗಳೆಂದು, ಒಮ್ಮೆಲೆ ಎನಿಸುವುದು ಸಹಜ! ಯಾವನೇ ಒಬ್ಬ ಮನುಷ್ಯನು ತನ್ನ ಸ್ವಂತದ ಪ್ರಾಣವನ್ನು, ಸ್ವಂತಕ್ಕಾಗಿ ಬಲಿಯನ್ನು ತೆಗೆದುಕೊಳ್ಳುವ ಮಾತೇ ಮನುಷ್ಯ ಜೀವಿತದ ವೈಯರ್ಥ್ಯವನ್ನು ನಿರ್ಣಯಿಸುವುದಕ್ಕೆ ಸಾಕಾಗಿದೆ. ಅಂತಹ ಮನುಷ್ಯನು ಕೀಳರಲ್ಲಿಯ ಕೀಳನೆ ಆಗಿದ್ದರೂ, ಮಾನವ ಜೀವನವನ್ನು

CC-0. Jangamwadi Math Collection. Digitized by eGangotri

ಸೂಕ್ಷ್ಮದೃಷ್ಟಿಯಿಂದ ನೋಡುತ್ತಿರುವ ಪಂಡಿತರ ಲಕ್ಷ್ಯವನ್ನವನು ಸೆಳೆಯದೆ ಇರನು. ನಮ್ಮ ಅಮೇರಿಕೆಯಲ್ಲಿ ಆತ್ಮಹತ್ಯೆಯ ಪ್ರಮಾಣವು ವಿಪರೀತ ಬೆಳೆಯುತ್ತಲಿದೆ. ಕಳೆದ ೨೫ ವರ್ಷಗಳಲ್ಲಿ ಸುಮಾರು ಮೂರು ಲಕ್ಷ ಜನರು ಆತ್ಮಹತ್ಯೆಯನ್ನು ಮಾಡಿಕೊಂಡುದರ ಬಗ್ಗೆ ಪ್ರಮಾಣಗಳಿವೆ. ಪ್ರತಿದಿನವೂ ಘಟಿಸುತ್ತಿರುವ ಆತ್ಮಹತ್ಯೆಯನ್ನು ಕಣ್ಣೆದುರು ತಂದುಕೊಂಡಲ್ಲಿ, ಜನರಿಗೆ ತಮ್ಮ ಬದುಕಿನ ವಿಚಾರದಲ್ಲಿ ಇಷ್ಟೊಂದು ಬೇಸರವೇಕೆ ಬಂದಿರಬಹುದೆಂಬುದನ್ನು ಕೂಲಂಕಷವಾಗಿ ಯೊಚಿಸಿ ನೋಡಬೇಕೆಂದೆನಿಸುತ್ತದೆ. ಮನುಷ್ಯನು ಮರಣಾಧೀನನಾಗುವುದೆಂದರೆ ಅದೊಂದು ದೊಡ್ಡ ವಿಷಯವಲ್ಲ. ಹುಟ್ಟಿದವನು ಎಂದಾದರೊಂದು ದಿನ ಸಾಯುವವನೇ! ಹುಟ್ಟು-ಸಾವುಗಳೆರಡೂ ನೈಸರ್ಗಿಕ ಘಟನೆಗಳು; ನಿಜವಾಗಿ ನೋಡಿದರೆ ಅವುಗಳಿಗೆ ಅಷ್ಟೊಂದು ಮಹತ್ತ್ವವನ್ನೇ ನಾವು ಕೊಡಲಾಗದು. ಆದರೆ ಮನುಷ್ಯನಿಗೆ ಸಾವು ಬರುವುದೆಂದರೆ ಬೇರೆ; ಮನುಷ್ಯನೇ ಸಾವನ್ನು ತಂದುಕೊಳ್ಳುವುದೆಂದರೆ ಬೇರೆ. ಮೊದಲನೆಯ ಮಾತು ಕ್ರಮಪ್ರಾಪ್ತವಾದುದು, ಸ್ವಾಭಾವಿಕವಾದುದು. ಎರಡನೆಯದು ಮಾತ್ರ ಅಸ್ವಾಭಾವಿಕ—ಅಸಾಮಾನ್ಯ; ಎಂತಲೆ ಅದರ ಕಾರಣವನ್ನು ಕುರಿತು ವಿಚಾರಮಾಡಬೇಕಾದುದು ತೀರ ಆವಶ್ಯಕವಾಗಿದೆ.

ಜೀವನ ಮತ್ತು ಜ್ಞಾನಗಳ ಫಲಶ್ರುತಿಯ ವಿಚಾರದಲ್ಲಿ ನೀನು ತುಂಬ ವ್ಯಾಪಕ ದೃಷ್ಟಿಯಿಂದ ವಿಮರ್ಶೆ ಮಾಡಿರಬಹುದೆಂದು, ನಿನ್ನ ಬರೆವಣಿಗೆಯಿಂದ ನನಗೆನಿಸುತ್ತದೆ. ಅಲ್ಲದೆ ನಿನ್ನ ವಿಚಾರಸರಣಿಯೂ ಸರಳವಾದುದಾಗಿದೆ. ಎಂತಲೆ ನಿನ್ನ ಕಾಗದವು ನನ್ನ ಮನಸ್ಸನ್ನು ತನ್ನ ಕಡೆಗೆ ಸೆಳೆದುಕೊಂಡುಬಿಟ್ಟಿದೆ. ಆದರೆ ನೀನೀಗ ನನ್ನ ನಾಲ್ಕು ಮಾತುಗಳನ್ನು ಕೇಳಿಕೊಳ್ಳಬೇಕೆಂದು ವಿನಂತಿಯಿದೆ ನಿನಗೆ. ಯಾವನೋ ಒಬ್ಬ ಮನುಷ್ಯನು ತೇಮ್ಸನದಿಯಲ್ಲಿ ಹಾರಿ ಜೀವಕಳೆದುಕೊಳ್ಳಲು ಹೊರಟಾಗ, ಪೋಲೀಸನೊಬ್ಬನು ಅವನನ್ನು ತಡೆದು ಬುದ್ಧಿಹೇಳಲು ತೊಡಗಿದನಂತೆ; ಆದರೆ ಮಾತುಮಾತನಾಡುತ್ತಿರುವಾಗಲೆ ಪೋಲೀಸನಿಗೂ ಆತನ ಮಾತು ಸತ್ಯವೆಂದು ಕಂಡು, ಕೊನೆಗೆ ಇಬ್ಬರೂ ಸೇರಿಯೆ ನದಿಯಲ್ಲಿ ಹಾರಿಕೊಂಡರಂತೆ. ಹೀಗೆ ಕತೆಯೊಂದನ್ನು ಹೇಳುತ್ತಿರುವುದನ್ನು ನಾನು ಕೇಳಿದ್ದೇನೆ. ಮಾನವಜೀವನದ ತಿರುಳು-ಹುರುಳುಗಳನ್ನು ಕುರಿತು ನಿನ್ನೊಡನೆ ಚರ್ಚೆ ಮಾಡು-ಮಾಡುತ್ತ 'ಬದುಕಿರುವುದಕ್ಕಿಂತ ಸಾಯುವುದೇ ಒಳ್ಳೆಯದು' ಎಂದು ಹೇಳುವ ಸಂದರ್ಭವು ನನಗೆ ಕೂಡ ಬರಬಹುದು. ಸರಿ! ಬಂದರೆ ಬರಲಿ, ಅದನ್ನೂ ಸ್ವಾಗತಿಸೋಣ!

ಮನುಷ್ಯನ ಬಾಳಿಗೆ ಬೆಲೆಯನ್ನು ಕಟ್ಟುವುದಾದಲ್ಲಿ ಅದನ್ನು ಲೋಕವು ಸಾಪೇಕ್ಷವಾಗಿಯೆ ಕಟ್ಟುವುದೆಂಬುದನ್ನು ನಾವು ಖಂಡಿತವಾಗಿಯೂ ನೆನಪಿನಲ್ಲಿಟ್ಟುಕೊಂಡಿರಬೇಕು. ನನ್ನ ಭಾವನೆ ಮಾತ್ರ ಇದಕ್ಕಿಂತ ಬೇರೆಯಾಗಿದೆ. ಯಾವ ವಸ್ತುವನ್ನೆ ತೆಗೆದುಕೊಂಡರೂ ಅದಕ್ಕೊಂದು ನಿರಪೇಕ್ಷವಾದ ಬೆಲೆಯಿರುವುದೆಂದು ನನ್ನ ಭಾವನೆಯು ಜಿನುಗುತ್ತಿರುವುದು. ದುರ್ಬಲವಾದ ಮನುಷ್ಯಬುದ್ಧಿಗೆ ಈ ಜಿನುಗಾಟದ ಅರ್ಥವು ಸರಿಯಾಗಿ ತಿಳಿಯಲಾರದು. 'ವಿಶ್ವ' 'ಜೀವಿತ' 'ಅನಂತ' 'ಸೃಷ್ಟಿ' 'ವಿಲಯ' ಇತ್ಯಾದಿ ಶಬ್ದಗಳನ್ನು ಹಿಡಿದು, ನಾವು ಎಷ್ಟೆಷ್ಟೋ ಲಾಗ ಹೊಡೆಯುತ್ತಿರುತ್ತೇವೆ; ಆದರೆ ಅದೇ ವೇಳೆಯಲ್ಲಿ ನಮ್ಮ ತಿಳಿವಳಿಕೆಯು, ಒಳದನಿಯಲ್ಲಿ ಖಂಡಿತವಾಗಿ ಹೀಗೆ ಹೇಳುತ್ತಿರುತ್ತದೆ: "ಯಾವುದು ನಮಗೆ ತಿಳಿದಿಲ್ಲವೊ, ಮುಂದೆ ಕೂಡ—ಎಂದೂ— ತಿಳಿಯಬಹುದೆಂದು ಎನಿಸುತ್ತಿಲ್ಲವೊ, ಅಂತಹ ವಿಷಯವನ್ನು ಉಗ್ಗಡಿಸುವುದಕ್ಕಾಗಿ ನಾವೇ ನಿರ್ಮಾಣಮಾಡಿಕೊಂಡ ನಿರರ್ಥಕ ಶಬ್ದಗಳಿವು" ಎಂದು.

ಮುಖ್ಯ ಮಾತೆಂದರೆ: ನಮ್ಮನಮ್ಮ ಜ್ಞಾನವು ಸಂಪೂರ್ಣ ಸತ್ಯವಾದುದೆಂದು ಭಾವಿಸದೆ, ಏನಾದರೊಂದು ಎಲ್ಲೆಕಟ್ಟು ಹಾಕಿಯೆ ಅದನ್ನು ನಾವು ಸ್ವೀಕರಿಸುತ್ತಿರಬೇಕು. ಎಂತಲೆ ನಮ್ಮ ಮನಸ್ಸಿನಲ್ಲಿ ಮೂಡಿನಿಲ್ಲುತ್ತಿರುವ ನಿರಾಶಾವಾದವೆಂಬುದೂ ನಮ್ಮ ಜ್ಞಾನದೊಂದು ಪ್ರಕಾರವೇ ಆದುದರಿಂದ, ಇನ್ನೇನನ್ನೂ ಯೋಚಿಸದೆ ಒಮ್ಮೆಲೆ ಅದರ ಸೆಳವಿನೊಂದಿಗೆ ಹರಿದುಹೋಗುವುದರಲ್ಲಿಯೂ ಯಾವ ಸ್ವಾರಸ್ಯವೂ ಇರದು. "ಈ ನಮ್ಮ ಭೂಲೋಕದ ಮಹತ್ತ್ವವು ಶೂನ್ಯಕ್ಕಿಂತ ಹೆಚ್ಚಿಗೆ ಇಲ್ಲ" ಎಂದು ಜ್ಯೋತಿರ್ವಿದರು ಹೇಳಿದಷ್ಟಕ್ಕೆ ನಾವು ಬೆಚ್ಚಿಬೀಳಬೇಕಾದ ಕಾರಣವೇನು? ಅಬಾಧಿತ ಸಮ್ಯಗ್‌ಜ್ಞಾನದ ಮೂಲವು ಅವರಿಗಾದರೂ ಎಲ್ಲಿ ಸಿಕ್ಕಿದೆ? ಈ ಭೂಗೋಲದ ಉತ್ಪತ್ತಿ-ವಿಲಯಗಳನ್ನು ಕುರಿತು ನಿಶ್ಚಿತ ಸಿದ್ಧಾಂತವನ್ನು ಮಾಡಲಿಕ್ಕೆ ಅವರಿಗಾದರೂ ಎಲ್ಲಿ ಸಾಧ್ಯವಿದೆ? ಮಿಕ್ಕವರಂತೆಯೆ ಅವರೂ ತರ್ಕದ ತಗರುಗಾಳೆಗವನ್ನೇ ಆಡುವವರಲ್ಲವೇ? ಭೂಗರ್ಭವಿಜ್ಞಾನಿಗಳೂ, ವನಸ್ಪತಿ ವಿಜ್ಞಾನಿಗಳೂ, ಪ್ರಾಣಿಶಾಸ್ತ್ರಜ್ಞರೂ—ಎಲ್ಲರೂ ಮಾತಿನ ಮಲ್ಲರೆ! ಹೀಗಿರುವಾಗ ಅವರ ಸಿದ್ಧಾಂತವನ್ನು ಕೇಳಿ ನಾವೆಲ್ಲ ತಲೆತಿರುಗಿಸಿಕೊಳ್ಳುವುದೂ, ಕಾರಣವಿಲ್ಲದೆ ಜಗತ್ತನ್ನು ಬಿಟ್ಟು

CC-0. Jangamwadi Math Collection. Digitized by eGangotri

ಹೋಗಲು ಸಿದ್ಧರಾಗುವುದೂ ಎಂದರೆ, ಇದೇನು ಬುದ್ಧಿವಂತರ ಲಕ್ಷಣವಲ್ಲ ! ಶಾಸ್ತ್ರಗಳ ಸಿದ್ಧಾಂತಗಳ ವಿಚಾರದಲ್ಲಿ ನಾವು ಯಾವಾಗಲೂ ಸಾಶಂಕರಾಗಿರುವುದನ್ನು ಕಲಿತುಕೊಳ್ಳಬೇಕಾಗಿದೆ.

ಶಾಸ್ತ್ರಜ್ಞರಿಗೆ ನಡುನಡುವೆ ಒಂದೊಂದು ಸಲ, ಸರ್ವಜ್ಞತೆಯ ಸೋಗನ್ನು ಹಾಕಿಕೊಂಡು ಮಾತನಾಡಬೇಕೆಂಬ ಹುರುಪು ಬರುವುದು. ಅಂತಹ ಸಂದರ್ಭದಲ್ಲಿ ನಾವು ಅವರ ಮಾತುಗಳ ಕಡೆಗೆ ಲಕ್ಷವನ್ನೇ ಕೊಡಲಾಗದು. ಅವರ ಈ ಬಾಯ ಬಡಬಡಿಕೆಗಿಂತಲೂ ಅವರು ನಿರ್ಮಾಣಮಾಡಿದ ಉಗಿಯ ಯಂತ್ರ—ವಿದ್ಯುದ್ಯಂತ್ರ—ವಿಮಾನ ಮೊದಲಾದ ಪ್ರತ್ಯಕ್ಷ ಕೃತಿಗಳ ವಿಚಾರದಲ್ಲಿಯೆ ನಾವು ಹೆಚ್ಚು ವಿಶ್ವಾಸವನ್ನು ತಾಳುತ್ತಿರಬೇಕು. ವಿಮಾನದಲ್ಲಿ ಕುಳಿತು ರಾತ್ರಿಯ ವೇಳೆಯಲ್ಲಿ ನ್ಯೂಯಾರ್ಕ್ ನಗರದ ಮೇಲೆ ಒಂದುಸಲ ಸುತ್ತುಹೊಡೆದು ಬಂದು, ಮಾನವನು ಎಷ್ಟೊಂದು ಸಾಹಸಸಾಮರ್ಥ್ಯಗಳನ್ನು ತೋರಿಸಬಲ್ಲನೆಂಬುದನ್ನು ಅನುಭವಕ್ಕೆತಂದುಕೊಳ್ಳಬೇಕು. ವೇಗದಲ್ಲಿಯೂ ಸಾಹಸದಲ್ಲಿಯೂ ಇರುವ ಸೊಗಸು-ಸವಿಗಳನ್ನು ಮನವಾರೆ ಸವಿದು, ತಣಿಯಬೇಕು. ಶಾಸ್ತ್ರಜ್ಞರು ಮಾಡಿತೋರಿಸಿದ ಪ್ರತ್ಯಕ್ಷ ಪರಾಕ್ರಮಗಳನ್ನು ನಾವು ಆನಂದದಿಂದ ಸ್ವಾಗತಿಸಬೇಕು; ಆದರೆ ಅವರ ಶಾಸ್ತ್ರಗಳು ಕೊನೆಯ ಸತ್ಯವನ್ನು ಕಂಡುಹಿಡಿದ ಸೋಗನ್ನು ಹಾಕಿ, ಬರೀ ಮಾತನಾಡಲು ತೊಡಗಿದುವೆಂದರೆ, ಕೇಳಿ ಮನಸ್ಸಿನೊಳಗೇ ನಕ್ಕುಬಿಡಬೇಕು. ಮಂಗನ ವಂಶಜನಾದ ಮನುಷ್ಯನು ತನ್ನ ಕಲ್ಪಕತೆಯ ನೆರವಿನಿಂದ ಇನ್ನೂ ಏನೇನು ಮಾಡಿ ತೋರಿಸಬಲ್ಲನೊ! ಮನುಷ್ಯನ ಕಲ್ಪಕತೆಗೆ ಎಲ್ಲೆಯೆ ಇಲ್ಲ. ಖಗೋಲದಲ್ಲಿ ತೇಲುವ ತಾರೆಗಳಿಂದ ತಾರೆಗೆ ಸಂಕವನ್ನು ಕಟ್ಟಿ, ರಾಜಮಾರ್ಗಗಳನ್ನು ನಿರ್ಮಿಸಿ ವಿಹರಿಸುವ ಮಾನವರನ್ನು ಕಾಣಬಹುದಾದ ದಿನವೂ ಬರಬಹುದಾಗಿದೆ. ಕಠಿನಸೆರೆಯ ಶಿಕ್ಷೆಯಾದವರನ್ನು ಅಂದಮಾನಕ್ಕಲ್ಲದೆ ಅಂತರಿಕ್ಷದಲ್ಲಿಯ ಯಾವುದಾದರೊಂದು ಗ್ರಹಲೋಕಕ್ಕೆ ಕಳುಹಬಹುದಾದ ಬೆಳಗನ್ನೂ ಲೋಕವು ಕಾಣಬಹುದಾಗಿದೆ. ಮನುಷ್ಯನಿಗೆ ಮರಣದ ವಿಷಯದಲ್ಲಿ ಮಮತೆಯಿದ್ದರೆ—ಸತ್ಯಸಂಶೋಧನದಲ್ಲಿ ತನ್ನದೊಂದು ಕೃತಿಯನ್ನು ಎಣಿಸುವಂತಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ—ಯಾವುದಾದರೊಂದು ವಿಲಕ್ಷಣ ಸಾಹಸದ ಕಾರ್ಯವನ್ನು ಮಾಡುತ್ತ ಮಾಡುತ್ತ ಅವನು ಮಡಿಯಬೇಕು; ಈ ಬಗೆಯ ಸಾವಿನಿಂದ ಮಾನವಜನ್ಮವು ಸಾರ್ಥಕತೆಯನ್ನು ಹೊಂದುವುದು. ಜ್ಞಾನ ವೇದಾಂತಗಳಿಗೆ ಗಾಬರಿಗೊಂಡು, ಜೀವವನ್ನು ಕಳೆದುಕೊಳ್ಳುವುದರಲ್ಲಿ ಯಾವ ಬಗೆಯ ಸ್ವಾರಸ್ಯವೂ ಇರದು.

ಮಾನವ ಸಂಸ್ಕೃತಿಯ ಪ್ರಗತಿಯೆಂಬುದು ಭ್ರಾಂತಿಮೂಲಕವಾದುದೇನು ಹಾಗಾದರೆ? ಈ ಪ್ರಶ್ನೆಯ ಉತ್ತರವು 'ಪ್ರಗತಿ'ಯೆಂಬ ಪದಕ್ಕೆ ನಾವು ಹಚ್ಚಬಹುದಾದ ಅರ್ಥವನ್ನು ಅವಲಂಬಿಸಿಕೊಂಡಿದೆ. ಅಖಂಡವೂ ನಿರ್ಮಲವೂ ನಿರಪವಾದಿಯೂ ಆಗಿದ್ದ ಪ್ರಗತಿಯನ್ನು ನಾವು ಕಾಣಲೇ ಅರಿವು; ಮುಂದಾದರೂ ಕಾಣುವ ಸಂದರ್ಭ ನಮಗೆ ಎಂದೂ ಬಾರದು. ಸಮುದ್ರದ ಉಕ್ಕೇರಿತದಿಂದುಂಟಾಗುವ ಅಲೆಗಳು, ದಂಡೆಯ ಒಂದು ಭಾಗಕ್ಕೆ ಅಪ್ಪಳಿಸಿ ಒಡೆಯುತ್ತಿರುವುವು; ಅದೇ ವೇಳೆಯಲ್ಲಿಯೆ ಇನ್ನೊಂದು ಭಾಗದ ಕಡೆಗೆ ತೆರೆಗಳಿನ್ನೂ ಸಾಗಿಬರುತ್ತಿರುವುವು. ಮತ್ತೊಂದು ಭಾಗದಲ್ಲಿ ದಂಡೆಗೆ ಅಪ್ಪಳಿಸಿ ಒಡೆದ ತೆರೆಗಳು ಮರಳಿ ಹೋಗುತ್ತಿರುವುವು; ಅಲ್ಲದೆ ಉಕ್ಕೇರಿತದ ಅಲೆಗಳು ಹತ್ತುಹತ್ತು ಸಲ ರಭಸದಿಂದ ಮುಂದೆ ನುಗ್ಗುವುವು; ಹತ್ತುಹತ್ತು ಸಲ ಅದೇ ರಭಸದಿಂದ ಹಿಂದಕ್ಕೆ ಸರಿಯುವುವು. ಆಗ ಇವು ತಾವು ಹೋಗಬೇಕಾಗಿದ್ದ ದಂಡೆಯ ಪ್ರದೇಶದ ಅರ್ಧಮರ್ಧ ಅಂತರವನ್ನು ಮಾತ್ರ ಕ್ರಮಿಸಬಲ್ಲವು. ಮಾನವಸಂಸ್ಕೃತಿಯ ಪ್ರಗತಿಯನ್ನೂ ಈ ಸಮುದ್ರದ ಅಲೆಗಳಾಟಕ್ಕೆ ಹೋಲಿಸಬಹುದು. ಉಕ್ಕೇರಿದ ಸಮುದ್ರದ ಅಲೆಯೊಂದು ಮುಂದೆ ನುಗ್ಗಿ, ತನ್ನ ಪರಮಾವಧಿಯನ್ನು ತಲ್ಪಿದಾಗ ಒಡೆದು ಚೂರುಚೂರಾಗುವಂತೆಯೆ, ಮಾನವಸಂಸ್ಕೃತಿಯ ಒಂದು ವಿಶಿಷ್ಟ ಅವಸ್ಥೆಯು ಪರಮೋತ್ಕರ್ಷಕ್ಕೆ ಏರಿತೆಂದರೆ ಅದೂ ನಷ್ಟವಾಗಿ, ಆ ಸಂಸ್ಕೃತಿಯು ಹಬ್ಬಿಸಿದ ಸಂತೆಯು ಬಯಲಾಗಿಹೋಗುವುದೂ ಖಂಡಿತವೇ ಆಗಿದೆ. ಆದರೆ ಸಂಸ್ಕೃತಿಯ ಒಂದೊಂದು ಅವಸ್ಥೆಯಲ್ಲಿ ಒಂದೊಂದು ಬಗೆಯಿಂದ ಮೆರೆದ ಮಾನವ ಪರಾಕ್ರಮವು ಹೀಗೆ ಲೋಪವಾಗುತ್ತ ಬಂದಿದೆಯೆಂಬ ಕಾರಣದಿಂದ, 'ಸಂಸ್ಕೃತಿಯೆಂಬುದೆಲ್ಲ ಹುಚ್ಚಾಟ' ಎಂದು ಹೇಳುವುದು ಹುಚ್ಚತನವೆನಿಸುವುದು. ಸೂರ್ಯನು ಮತ್ತೆ ಮತ್ತೆ ಮುಳುಗಿ ಮರೆಯಾಗುವುದು ಸಹಜ; ಆದರೆ ಅವನು ಇಲ್ಲದ ವೇಳೆಯಲ್ಲಿ 'ಸೂರ್ಯನೆಂಬುದೇ ಸುಳ್ಳು!' ಎಂದು ಹೇಳಿದರೆ ಅದು ನಗೆಬರುವ ಮಾತಲ್ಲವೇ? ನಮ್ಮ ಸ್ಥಿತಿಯಿಂದು ಹಲವು ರೀತಿಯಲ್ಲಿಯೂ ಅನುಕಂಪನೀಯವಾಗಿ ಕಾಣುತ್ತಿರಬಹುದು; ಆದರೂ ಸರ್ವಸಾಮಾನ್ಯವಾಗಿ ನೋಡಿದರೆ, ಇಂದಿನ ಮನುಷ್ಯನು ಹಿಂದಿನವನಿಗಿಂತ ಹೆಚ್ಚಾಗಿ ಸಂಪನ್ನನೂ, ಬಲಶಾಲಿಯೂ, ಬುದ್ಧಿಶಾಲಿಯೂ

CC-0. Jangamwadi Math Collection. Digitized by eGangotri

ಇದ್ದಾನೆಂಬುದನ್ನು ಸಾಕೆಷ್ಟು ಪ್ರಮಾಣಗಳಿಂದ ಸಿದ್ಧ ಮಾಡಿ ತೋರಿಸಬಹುದು. ನಿರಾಶೆಯಿಂದ ಗಾಬರಿಗೊಳ್ಳುತ್ತಿರುವುದರ ಕಾರಣವನ್ನು ನಾವು ಸರಿಯಾಗಿ ಕಂಡುಹಿಡಿಯುತ್ತಿಲ್ಲ. ಇಂದಿನ ಒಬ್ಬ ಸಾಮಾನ್ಯನನ್ನು ಒಮ್ಮೆಲೆ ಹಿಂದಿನ ಕಾಲದ ವಿಭೂತಿಪುರುಷನೊಂದಿಗೆ ನಿಲ್ಲಿಸಿ, ತುಲನೆ ಮಾಡಿನೋಡಿ, ನಾವು ಬೆಚ್ಚಿಬೀಳುತ್ತೇವೆ. ಪ್ಲೇಟೋ, ಅರಿಸ್ಟಾಟಲ್ ಮೊದಲಾದವರಂತಹ ದೊಡ್ಡ ದೊಡ್ಡ ವ್ಯಕ್ತಿಗಳು ಹಿಂದಿನ ಕಾಲದಲ್ಲಿ ಆಗಿಹೋದರೇನೋ ಸರಿ! ಆದರೆ ಪ್ಲೇಟೋನಂತಹ ಒಬ್ಬ ಜಾಣನು ಇದ್ದ ಅಥೆನ್ಸ್ ರಾಜ್ಯದಲ್ಲಿ, ಆಗ ಸಾವಿರಾರು ಜನ ಮೂರ್ಖರೂ—ದುಷ್ಟರೂ ಇದ್ದೇ ಇದ್ದರಲ್ಲವೇ? ಪ್ಲೇಟೋನ ಕಾಲದಲ್ಲಿ ಲಂಚ-ಕೈಯಾಸೆಗಳಿದ್ದುವು, ಬಲುಮೆ - ಒತ್ತಾಯಗಳಿದ್ದುವು, ಸ್ತ್ರೀಯರ ಕೀಳುತನ-ಅನಾಚಾರಗಳೂ ಇದ್ದುವು. ಇದನ್ನೆಲ್ಲ ಒಳಗಣ್ಣೆದುರು ತಂದು ವಿಮರ್ಶೆಮಾಡಿದಲ್ಲಿ, ಕಾಲದೊಂದಿಗೆ ಮನುಷ್ಯನೂ ಹೆಚ್ಚುಹೆಚ್ಚಾಗಿ ಸಂಸ್ಕಾರಹೊಂದುತ್ತ ಬಂದಿದ್ದಾನೆಂದೆನ್ನಬಹುದಾಗಿದೆ.

ಮನುಷ್ಯನು ನೀತಿಭ್ರಷ್ಟನಾಗಿದ್ದಾನೆಂದು ಅಥವಾ ಹಾಗೆ ಆಗುತ್ತ ನಡೆದಿದ್ದಾನೆಂದು ಕೂಗಾಡುವುದರಲ್ಲಿ ಏನೂ ಹುರುಳಿಲ್ಲ. ಏಕೆಂದರೆ ಇಂದಿನವರ ರೀತಿ-ನೀತಿಗಳನ್ನು ಹಿಂದಿನವರ ರೀತಿನೀತಿಗಳ ಮಾನದಂಡದಿಂದ ಅಳೆಯುವುದು ತಪ್ಪು ! ಮನುಷ್ಯನ ಜೀವನವು ಕೃಷಿಕರ್ಮಪ್ರಧಾನವಾಗಿರುವಂದಿನ ಕಲ್ಪನೆಗಳನ್ನು, ಇಂದಿನ ಯಂತ್ರಯುಗದಲ್ಲಿ—ಪಟ್ಟಣವಾಸದ ಪರಿಸ್ಥಿತಿಪ್ರಸಾರದ ಕಾಲದಲ್ಲಿ—ತಂದು ಬೆಲೆಗೆ ಹಚ್ಚಿದರೆ, ಅಂದಿನ ಬೆಲೆಯನ್ನವು ಹೇಗೆ ಪಡೆಯಬೇಕು ?- ಮೂವತ್ತು - ಮೂವತ್ತು ವರ್ಷಗಳವರೆಗೂ ಅವಿವಾಹಿತರಾಗಿರುವವರೂ ಪಟ್ಟಣವಾಸದ ಸೊಬಗು - ಸವಿಗಳಲ್ಲಿಯೂ ಲೀಲೆ - ವಿಲಾಸಗಳಲ್ಲಿಯೂ ಇಪತ್ನಾಲ್ಕು ಗಂಟೆ ವ್ಯವಹರಿಸುವವರೂ, ಸಹಜವಾಗಿಯೆ ಪರಸ್ಪರರ ಸಲುಗೆ-ಸಹವಾಸವಾಸಗಳನ್ನು ದೊರಕಿಸಬಲ್ಲವರೂ ಆದ ಇಂದಿನ ಸ್ತ್ರೀಪುರುಷರು, ಪುರಾಣಕಾಲದ—ಒಕ್ಕಲಿಗರೂ ದನಗಾಹಿಗಳೂ ಅನುಸರಿಸುತ್ತಿದ್ದ—ರೀತಿನೀತಿಗಳನ್ನು ಅನುಸರಿಸಬೇಕೆಂದು ಹಟಹಿಡಿಯುವುದು ಹಾಸ್ಯಾಸ್ಪದವಲ್ಲದೆ ಇನ್ನೇನು ? 'ಹೊತ್ತುಹೊತ್ತಿಗೆ ಹೊಸ ಪರಿಯ ಸಿಂಗರ ಬೇಕು.' ಅದರಂತೆಯೆ ಹೊಸಹೊಸ ಕಾಲದಲ್ಲಿ ಹೊಸಹೊಸ ನೀತಿ-ನಿಯಮಗಳು ಮುಂದೆ ಬರುತ್ತಿರಬೇಕಾದುದು ಯುಕ್ತಿಯುಕ್ತವಾದುದು. ನನ್ನ ನೆರೆಹೊರೆಯಲ್ಲಿ ಬದುಕಿ ಬಾಳುತ್ತಿದ್ದ ಹೆಂಗುಸರನ್ನೂ ಗಂಡುಸರನ್ನೂ ನಾನು ಆಗಾಗ ಸೂಕ್ಷ್ಮವಾದ—ಚಿಕಿತ್ಸಕ ದೃಷ್ಟಿಯಿಂದ ನೋಡುತ್ತಿರುತ್ತೇನೆ. ಹೀಗೆ ನೋಡುತಿರುವಾಗೆಲ್ಲ 'ಇಂದಿನ ಸ್ತ್ರೀಪುರುಷರು, ಹಿಂದಿನ ಕಾಲದವರಿಗಿಂತ ತುಂಬ ನಿರ್ಮಲರೂ ಶೀಲಸಂಪನ್ನರೂ ಆಗಿರುವರು' ಎಂಬ ಮಾತು ಹೆಚ್ಚುಹೆಚ್ಚಾಗಿ ನನ್ನ ಹೃದಯದಲ್ಲಿ ನೆಲೆಗೊಳ್ಳುತ್ತಿರುವುದು. ಇಂದಿನ ವಾಙ್ಮಯದಲ್ಲಿಯೂ ಚಿತ್ರಪಟಗಳಲ್ಲಿಯೂ ತುಂಬಿಕೊಂಡಿದ್ದ ಅಶ್ಲೀಲತೆಯ ಮಾನದಿಂದ ಅಳೆದು ನೋಡಿದರೆ, ನಮ್ಮ ಸ್ತ್ರೀಪುರುಷರ ಆಚರಣೆಯು ಅಷ್ಟೇನೂ ತಾಳಗೆಟ್ಟಿಲ್ಲವೆಂದು ಎನಿಸುವುದು. ವಾಙ್ಮಯ-ಚಿತ್ರಪಟಗಳಲ್ಲಿ ಕಾಣುವ ಅಶ್ಲೀಲತೆಯ ಮೀಮಾಂಸೆಯು ಅದೊಂದು ಬೇರೆ ಬಗೆಯದೇ ಆಗಿದೆ. ನಮ್ಮ ಪೂರ್ವಜರು ಹತ್ತಿಪ್ಪತ್ತು ಜನ ಹೆಂಡಿರ 'ಜನಾನ್‌ಖಾನೆ'ಯನ್ನು ಇಟ್ಟುಕೊಂಡಿರುತ್ತಿದ್ದರು; ಅಲ್ಲದೆ ದ್ವಂದ್ವಯುದ್ಧವನ್ನು ಮಾಡಿ ಒಬ್ಬರನ್ನೊಬ್ಬರು ಹೆಣಹಾಕಿಬಿಡುತ್ತಿದ್ದರು. ಅವರ ಆ ನಡೆವಳಿಗಳಲ್ಲಿದ್ದಂತಹ ಮನೋರಂಜಕತೆಯು ಇನ್ನೊಂದು ರೂಪದಲ್ಲಿ ನಮಗೆ ನೋಡಲು ದೊರೆಯಬೇಕೆಂದು, ನಮ್ಮ ಇಂದಿನ ಕಥೆ—ಕಾದಂಬರಿಗಳಲ್ಲಿಯೂ, ಚಿತ್ರಪಟಗಳಲ್ಲಿಯೂ, ಕೊಲೆ-ಸುಲಿಗೆ-ಕಳವು-ಹಾದರಗಳನ್ನು ತುಂದು ತುಂಬಿಬಿಡುತ್ತಾರೆ.... ನಮ್ಮ ಸಾಹಿತಿಗಳು; ಚಿತ್ರಕಾರರು!

ನಾನೀಗ ಹೇಳಿದುದೆಲ್ಲದರ ಮಥಿತಾರ್ಥವು ಏನೆಂಬುದು ಗೊತ್ತಾಯಿತೇ ? ಪ್ರಿಯಮಿತ್ರಾ, ನೀನು ಯಾವ ಮಾತುಗಳಿಗಾಗಿ ಗಾಬರಿಗೊಂಡಿರುವೆಯೋ—ಬೇಸತ್ತು ಆತ್ಮಹತ್ಯೆಗೆ ಅನುಗೊಂಡಿದ್ದೀಯೋ—ಅವೆಲ್ಲ ನೀನು ತಿಳಿದುಕೊಂಡಂತೆ ಇಲ್ಲ. ಮನುಷ್ಯನ ಬಾಳಿನಲ್ಲಿ ಏನಾದರೂ ಅರ್ಥವಿದೆಯೆಂದೂ, ಅದಕ್ಕೆ ಏನಾದರೂ ಉದ್ದೇಶವಿದೆಯೆಂದೂ, ನಿರಪೇಕ್ಷ ದೃಷ್ಟಿಯಿಂದ—ಖಂಡಿತವಾಗಿ—ಯಾರಾದರೂ ಹೇಳಬಹುದೇನು ?—ಇಲ್ಲ ! ವ್ಯಕ್ತಿಯು ಮರಣರಹಿತವಾಗಿರುವುದೇನು ?—ಇಲ್ಲ ! ಯಾವುದೇ ಒಂದು ದೇಶದ ಸಂಸ್ಕೃತಿಯು ಅವಿಚ್ಛಿನ್ನವಾಗಿ ಉಳಿಯುವುದೇನು ?—ಇಲ್ಲ ! ಇವೆಲ್ಲ ಸಿದ್ಧಾಂತಗಳನ್ನೂ ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಇವುಗಳಿಗೆ ನಾನೆಂದೂ ಬೆಚ್ಚುವುದಿಲ್ಲ; ಗಾಬರಿಗೊಳ್ಳುವುದಿಲ್ಲ. ನನಗೆ ಇವು ಮೈಗೊಂಡುಹೋದುದರಿಂದ, ಈ ಸಿದ್ಧಾಂತಗಳು ನನಗೆ ತೊಡಕಿನವಾಗಿ ಎನಿಸುವುದಿಲ್ಲ. ಇವುಗಳಿಂದ ನಾನು ಮನುಷ್ಯಜೀವನದ ಎಲ್ಲೆಯನ್ನು ತಿಳಿದುಕೊಳ್ಳುವೆನಿಷ್ಟೆ ! ಆ ಎಲ್ಲೆಗಳಿಂದ ಬಳಸಿಕೊಂಡಿದ್ದ ನನ್ನ ವೈಯಕ್ತಿಕಜೀವನದಲ್ಲಿಯೂ ಮಾನವಜಾತಿಯ

CC-0. Jangamwadi Math Collection. Digitized by eGangotri

ಸಾಮುದಾಯಿಕ ಜೀವನದಲ್ಲಿಯೂ ನಾವು ಉದ್ದೇಶವನ್ನು ಕಂಡುಕೊಳ್ಳಬಹುದಿಷ್ಟೇ ಅಲ್ಲ; ಸಮಾಧಾನವನ್ನು ಕೂಡ ಸಾಕಷ್ಟು ಕಂಡುಕೊಳ್ಳಬಹುದು. ಅಮರತ್ವವನ್ನು ಕೊಡಬಲ್ಲ ಅಮೃತಕುಂಭವೂ ಆಶೆ-ಆಕಾಂಕ್ಷೆಗಳನ್ನು ಪೂರಯಿಸಬಹುದಾದ ಕಲ್ಪವೃಕ್ಷವೂ ಕಲ್ಪನೆಯ ಹುಚ್ಚಾಟವೆಂದು ಹೇಳಿದೊಡನೆಯೆ....ಮುಖ ಕೆಂಪಗೆ ಮಾಡುವ ಸನಾತನ ಸಂಪ್ರದಾಯಪ್ರಿಯರು, ಈ ಹೊಸಕಾಲದ ಗಡಿಬಿಡಿಯಲ್ಲಿ ಸೇರಿಕೊಂಡು, ಅವಿರತವಾದ ಉದ್ಯೋಗಕ್ಕೆ ಕೈಗೊಟ್ಟು ಹೊರಟರೆ, ಅವರ ಕ್ರೋಧವೂ ನಿರಾಶಾವಾದವೂ—ಖಂಡಿತವಾಗಿ—ತೊಲಗಿಹೋಗುವುವು. ನಿಷ್ಫಲವಾದ ಸವಿಗನಸುಗಳನ್ನು ನೆನೆನೆನೆದುಕೊಂಡು ಅಳುತ್ತ ಕುಳಿತುಕೊಳ್ಳಲಿಕ್ಕೆ—ಇಂದಿನ ಓಡಾಟದ ಜಗತ್ತಿನಲ್ಲಿ—ಹೊತ್ತೇ ಇಲ್ಲ. ಈಶ್ವರನ ಅಸ್ತಿತ್ವದ ಕಥೆಯೂ ಅಮರತ್ವಪ್ರಾಪ್ತಿಯ ಕಥೆಯೂ ಸುಳ್ಳೆಂದು ನಿರ್ಣಯವಾದರೂ ಇಂದಿನ ತರುಣ ಸ್ತ್ರೀಪುರುಷರು ಬಿಸುಸುಯ್ಯಲಾರರು.

ಬಾಳಿನ ಬೆಲೆಯನ್ನು ತಿಳಿಯಬೇಕಾದರೆ ಬಾಳಿನ ಒರೆಗಲ್ಲಿಗೇ ಅದನ್ನು ತಿಕ್ಕಿನೋಡಬೇಕಲ್ಲದೆ ಮತ್ತಾವ ಉಪಾಯವನ್ನೂ ಹುಡುಕುವ ಕಾರಣವಿಲ್ಲ. ಜೀವಿಸಿರುವುದರ ನಿಜವಾದ ಅರ್ಥವು ಜೀವಿಸಿರುವುದರಿಂದಲೆ ತಿಳಿಯುವುದು. ಮನುಷ್ಯನ ಜೀವಿಸಿರುವಾಗಿನ ಬಗೆಬಗೆಯ ಪ್ರೇರಣೆಗಳಲ್ಲಿಯೂ, ಆ ಪ್ರೇರಣೆಗಳ ಉಪಶಾಂತತೆಯಲ್ಲಿಯೂ, ನಿಜವಾದ ಸಮಾಧಾನ-ಸ್ವಾರಸ್ಯಗಳು ಹುದುಗಿಕೊಂಡಿವೆ. ನಮ್ಮ ಮೈಯಲ್ಲಿ ಆರೋಗ್ಯ-ತಾರುಣ್ಯಗಳ ಹುಮ್ಮಸು ಹರಿದಾಡುತ್ತಿರುವುದು. ಇದರ ಪ್ರಯೋಜನವೇನೆಂದು ಕೇಳಿದರೆ ಏನು ಹೇಳಬೇಕು? ಈ ಹುಮ್ಮಸಿನಿಂದ ಯಾವುದಾದರೂ ಮಹತ್ತ್ವದ ಕಾರ್ಯವು ಆಗಬೇಕಾಗಿರುವುದಂತೂ ಸರಿಯೆ! ಹಾಗೆ ಮಹತ್ತ್ವದ ಕಾರ್ಯವಾಗಲಿಲ್ಲವೆಂದು ಭಾವಿಸಿದರೂ ಆ ಹುಮ್ಮಸಿಗೆ ಸ್ವಯಂಸಿದ್ಧವಾದ ಗೌರವವೂ ಆನಂದವೂ ಇದ್ದೇ ಇರುವುದು. ಅಸಾಧ್ಯವಾದ ರೋಗದಿಂದ ಹಣ್ಣುಹಣ್ಣಾಗಿಹೋದ ಮನುಷ್ಯನೊಬ್ಬನು ಆತ್ಮಹತ್ಯೆಗೆ ಸಿದ್ಧನಾದರೆ, ಕೊನೆಯ ಕಾಲದಲ್ಲಿ ಹೇಳಬಹುದಾದ ನಾಲ್ಕು ಮಂತ್ರಗಳನ್ನು ಹೇಳಿ, ನಾನವನನ್ನು ಸಂತೋಷದಿಂದ ಬೀಳ್ಕೊಡುತ್ತೇನೆ. ಕೊಳೆತ ಹುಳಿತ ಜೀವಗಳನ್ನು ತಡೆದುನಿಲ್ಲಿಸಬೇಕೆಂಬ ಇಚ್ಛೆ ನನಗೆ ಸ್ವಲ್ಪವೂ ಇಲ್ಲ. ಆದರೆ ಆರೋಗ್ಯಶಾಲಿಗಳೂ, ನಾಲ್ಕಾರು ಮೈಲು ಸಹಜವಾಗಿ ನಡೆಯಬಹುದಾದ ಕಾಲ ಕಸುವಿನವರೂ, ಉಂಡ ಊಟವನ್ನು ಸರಿಯಾಗಿ ಅರಗಿಸಿಕೊಳ್ಳಬಲ್ಲ ಹಸಿವೆಯುಳ್ಳವರೂ ಆತ್ಮಹತ್ಯೆಯ ವಿಚಾರವನ್ನು ತಲೆಯಲ್ಲಿ ತರಬೇಕೆ?....ಛೀ ಛೀ! ಅಂತಹರು ಎಂದೂ ತಿಣುಕಲಾಗದು, ನರಳಲಾಗದು. ಮುಂಜಾವದಲ್ಲಿ ಏರುವ ಸೂರ್ಯನ ಹೊಂಬಿಸಿಲಲ್ಲಿ ಲೋಕವೆಲ್ಲವೂ ಮಿಾಯುತ್ತಿರುವುದನ್ನು ನೋಡಿದೊಡನೆಯೆ, ಅವರು ಉಬ್ಬಿ ಕೇಕೆ ಹೊಡೆಯಬೇಕು; ತಮ್ಮ ಉದ್ಯೋಗಕ್ಕೆ ತೊಡಗಬೇಕು!

ಬದುಕಿರುವೆವೆಂಬ ಭರವಸೆಯಲ್ಲಿಯೂ, ಆರೋಗ್ಯದ ಕೊಬ್ಬಿನಲ್ಲಿಯೂ, ಪಂಚೇಂದ್ರಿಯಗಳ — ಸ್ನಾಯುಗಳ ಅಲುಗಾಟದಲ್ಲಿಯೂ ದೊರೆಯುವ ಅವಿದಿತವಾದ ಆನಂದವೇ ಮಾನವ ಜೀವನದ ಹುರುಳು-ತಿರುಳುಗಳೆಂದು ಸಹಜವಾಗಿ ಹೇಳಿಬಿಡಬಹುದು. ದೊಡ್ಡವರಿಗಿಂತ ಚಿಕ್ಕಮಕ್ಕಳು ಹೆಚ್ಚು ಆನಂದವೃತ್ತಿಯವರಾಗಿರುವುದಕ್ಕೆ, ಆತ್ಮಭಾವನೆಗಿಂತಲೂ ದೇಹಭಾವನೆಯು ಅವರಲ್ಲಿ ಜಾಗೃತವಾಗಿರುವುದೇ ಕಾರಣವಾಗಿದೆ. ಅವರ ಒಳಗಿನ ಮನಸ್ಸು 'ಮೊದಲು ಬದುಕಿನ ವಿಚಾರ, ಬಳಿಕ ವೇದಾಂತದ ವಿಚಾರ!' ಎಂದು ತಿಳಿದುಕೊಂಡಿರುತ್ತದೆ. ತಮ್ಮ ಕೈಕಾಲುಗಳ ಕಾರ್ಯದ ಕೊನೆಯ ಅರ್ಥವೇನೆಂಬುದನ್ನು ಅವರೆಂದೂ ವಿಚಾರಮಾಡುವುದಿಲ್ಲ. ದೊಡ್ಡವರೆನ್ನಿಸಿಕೊಳ್ಳುವ ನಾವು ನಮ್ಮ ಕೈಕಾಲುಗಳನ್ನು ದುಡಿಯುವುದರಲ್ಲಿ ತೊಡಗಿಸಿದರೆ, ಮಕ್ಕಳಂತೆ ನಾವೂ ಯಾವಾಗಲೂ ಆನಂದದಿಂದಲೂ — ನಿಶ್ಚಿಂತೆಯಿಂದಲೂ ಇರಬಹುದು. ಗೋಲ್ಫಿನ ಆಟದಲ್ಲಿ ಸಾಕಷ್ಟು ಕೈಕಾಲುಗಳನ್ನು ಆಡಿಸಬೇಕಾಗುತ್ತದೆ; ಚೆಂಡನ್ನು ಹುಡುಕುವುದಕ್ಕಾಗಿ ಎಷ್ಟೋ ಮೈಲುಗಳನ್ನು ಓಡಾಡಬೇಕಾಗುತ್ತದೆ. ಇದಿಷ್ಟೇ ಪ್ರಯೋಜನವಿದ್ದರೂ, ಆ ಆಟವನ್ನು ಹುಡುಕಿ ತೆಗೆದವನನ್ನು ನಾನು ಮನಃಪೂರ್ವಕವಾಗಿ ಗೌರವಿಸದಿರೆನು.

ನಮ್ಮ ಜೀವನದಲ್ಲಿ ಯಾವಾಗಲಾದರೊಮ್ಮೆ ಬರುವ ಆನಂದೋಲ್ಲಾಸದ ಕ್ಷಣಗಳ—ಅವು ತೀರ ಸ್ವಲ್ಪವೇ ಇರಲಿ!—ಹೊರತು, ಬೇರೆ ಸೊಗಸು-ಸೌಂದರ್ಯಗಳು ಇರಲಾರವೆಂದು ಹೇಳಿದರೂ ನನಗೆ ಸ್ವಲ್ಪವೂ ವ್ಯಸನವೆನಿಸದು. ಆ ತೀರ ಸ್ವಲ್ಪ ಕ್ಷಣಗಳ ಸಲುವಾಗಿಯೆ ತಾವು ಬದುಕಿರಬೇಕೆಂದು ಪ್ರತಿಯೊಬ್ಬನಿಗೂ ಎನಿಸಬೇಕು. ಮುಂಗಾರುಮಳೆಯ ಸೆಳೆತದಲ್ಲಿ ದಾರಿನಡೆಯಬೇಕು; ಬಿರುಗಾಳಿಯನ್ನು ಎದುರಿಸಿ ನಡೆಯಬೇಕು; ಮಂಜಿನ ಗಡ್ಡೆಯ ಮೇಲೆ ನಡೆದಾಡಬೇಕು; ಬೆಟ್ಟದ ಕೋಡನ್ನೇರಿ

CC-0. Jangamwadi Math Collection. Digitized by eGangotri

ನಿಂತು, ಮುಳುಗುತ್ತಿರುವ ನೇಸರನ್ನೂ ರಾತ್ರಿಯು ನಾಡನ್ನು ನುಂಗುತ್ತಿರುವುದನ್ನೂ ನೋಡಬೇಕು. ಬದುಕಿ-ರುವುದರಲ್ಲಿ ಪ್ರೀತಿಯುಂಟಾಗುವುದಕ್ಕೆ ಇವಿಷ್ಟು ಸಾಧನಗಳು ಸಾಲವೇನು? ನಾವೆಲ್ಲ ಕೊನೆಗೆ ಸಾಯಬೇಕಾಗಿದೆ; ಇಷ್ಟೇ ಅಲ್ಲವೇ? ಅವಶ್ಯವಾಗಿ ಸಾಯೋಣ; ಸತ್ತೇ ಬಿಡೋಣ! ಆದರೆ ಸಾಯುವ ವರೆಗಾದರೂ ಸೂರ್ಯೋ-ದಯದ ದಿವ್ಯಸೌಂದರ್ಯವೂ ಚುಕ್ಕಿಗಳ ಬಳಗದ ಮಿರುಗಿನ ಸೈಸಿರಿಯೂ ಮನವಾರೆ ನೋಡಿ ನಲಿಯಲು ದೊರೆಯುವುದಲ್ಲವೇ! ಆಯಿತು, ಇದಕ್ಕಿಂತ ಹೆಚ್ಚಿಗಿನ್ನೇನು ಬೇಕು?

ನಿಸರ್ಗವು ಕೊನೆಗೆ ನನ್ನನ್ನು ನಾಶಮಾಡಲಿರುವುದು. ಮಾಡಿಕೊಳ್ಳಲಿ. ಯಾರು ಬೇಡವೆನ್ನುತ್ತಾರೆ! ನಿಸರ್ಗಕ್ಕೆ ಹಾಗೆ ಮಾಡಬಹುದಾದ ಅಧಿಕಾರವೇ ಇದೆ. ನನ್ನನ್ನು ಹುಟ್ಟಿಸಿದುದು ನಿಸರ್ಗವೇ ಅಲ್ಲವೇ? ನನ್ನ ಪಂಚೇಂದ್ರಿಯ-ಗಳಲ್ಲಿ ಉಸಿರನ್ನು ತುಂಬಿ, ನೂರಾರು ಸುಖಸಂವೇದನೆಗಳನ್ನು ಅನುಭವಿಸಲು ಹಚ್ಚಿದುದೂ ನಿಸರ್ಗವೇ ಅಲ್ಲವೇ? ಕೊಟ್ಟುದೇ ಮರಳಿ ಕಟ್ಟಿಕೊಂಡು ಹೊರಟರೆ, ನಾನೇಕೆ ಕುಟ್ಟಿಕೊಂಡು ಅಳಬೇಕು? ನಾನೇಕೆ ತಡೆಯೊಡ್ಡಬೇಕು? ನಿಸರ್ಗದ ಅಭಿನಂದನೆಯನ್ನು ಹೇಗೆ—ಎಷ್ಟು ಮಾಡ-ಬೇಕೆಂದು ನನಗೆ ಎನಿಸಬೇಕು....ನಿಜವಾಗಿ ಇದರಿಂದ. ಏಕೆಂದರೆ ಪಂಚೇಂದ್ರಿಯಗಳ ಮುಖಾಂತರ ಎಷ್ಟೆಷ್ಟೋ ಸೌಖ್ಯವನ್ನು ನಾನು ಸುಲಿದು ಸೂರೆಮಾಡುತ್ತಿದ್ದೇನೆ. ಈ ಕೈ, ಈ ನಾಲಗೆ, ಈ ನೋಟ, ಈ ಕಿವಿ, ಅಬ್ಬಾ! ಸೃಷ್ಟಿ-ಯಲ್ಲಿಯ ಸೌಂದರ್ಯ-ಸೌಖ್ಯಗಳ ಸಂಪತ್ತೆಲ್ಲವನ್ನೂ ನನ್ನದನ್ನಾಗಿಸಿಕೊಳ್ಳಲಿಕ್ಕೆಂದು, ನಿಸರ್ಗವು ಎಷ್ಟೊಂದು ಸಾಧನಗಳನ್ನು ನನ್ನ ಅಧೀನಕ್ಕೆ ಕೊಟ್ಟಿದೆ....ನೋಡು!"

(ಮುಂದುವರಿಯುವುದು)




# ಡೋಂಗರೆ ಇವರ ಬಾಲಾಮೃತವು

## ಇದ್ದದ್ದಾದರೂ ಏನು?

(೧) ಅದು ಅಶಕ್ತ ಮತ್ತು ರೋಗಿಷ್ಠ ಮಕ್ಕಳನ್ನು ಬೇಗ ವಾಸಿಪಡಿಸುತ್ತದೆ.

(೨) ಅದರಲ್ಲಿ ಎಲುಬುಗಳನ್ನು ಗಟ್ಟಿಗೊಳಿಸುವ ಎಲ್ಲ ಸತ್ತ್ವಾಂಶಗಳೂ ಇವೆ.

(೩) ಅದು ಚಿಕ್ಕಮಕ್ಕಳಿಗೆ ಉತ್ಕೃಷ್ಟ—ಪೌಷ್ಟಿಕ ಔಷಧಿಯಾಗಿದೆ.

(೪) ಅದು ಕೆಮ್ಮಿನ ಕೆಟ್ಟ ವಿಕಾರವನ್ನು ಗುಣಪಡಿಸುವದಲ್ಲದೆ, ಹಲ್ಲು ಬರುವ ಹೊತ್ತಿನಲ್ಲಿ ಮಕ್ಕಳಿಗೆ ಉಪಯುಕ್ತವಾಗಿದೆ.

ಎಲ್ಲೆಲ್ಲಿಯೂ ಸಿಗುತ್ತದೆ.


CC-0. Jangamwadi Math Collection. Digitized by eGangotri

# "ಕಣ್ಣಮಣಿ ಬಾರನೇತಕೆ ಇಂದು?"

ಶ್ರೀ ಪರಮೇಶ್ವರ

( ಜಪಸಾರಳು ಜೀವನದ ಕಡೆಯಲ್ಲಿ ಅನುಭವಿಸಿದ ಒಂದು ವಿರಹೋದ್ರೇಕದ ಹಗಲುಗನಸು. )

" ಬೊಂಬೆಗಾರರ ಘೋರ ಸಂಗ್ರಾಮ ಸಮಯದಲಿ,
ಸಿಕ್ರಿಯರಮನೆಯಲ್ಲಿ ಕಾಲಕಳೆಯುತಲಿದ್ದೆ.
ಬಿಸಿಲ ಧಗೆ ಸಿಕ್ರಿಯನು ಸೀದಿತ್ತು; ಗಾಳಿ ಬಲು
ಬಿರುಸಾಗಿ ಬೀಸಿತ್ತು; ನೀರವತೆಯಾಳಿತ್ತು.
ಬವರ ಬವಣೆಗೆ ಬಳಲಿ ಮೈಮರೆದು ಮಲಗಿದೆನು.
ತಿಳಿವಿನಿಂದೆದ್ದಾಗ ಮಂಜು ಬೀಳುತಲಿತ್ತು.
ನನ್ನ ಕರುಳನು ಹೊಕ್ಕು ಕುಳಿರು ನಡುಗಿಸಿತೆದೆಯ.
ಕಾಹಿನವರನ್ನುಳಿದು ತೋಟದೆಡೆ ಸಾಗಿದೆನು—
ಎಲ್ಲಿ ಹೋಗುವೆನೆಂಬ ಗೊತ್ತು-ಗುರಿ ಇಲ್ಲದಲೆ
ತಿರುಗಿದೆನು ತೋಟದಲಿ. ವಿಕಸಿತಾರಾಮದಲಿ
ಸಂಜೆಸಮಯವು ತುಂಬ ಇಂಬಾಗಿ ಎಸೆದಿತ್ತು.
ಬಿಳಿಯರಳು-ನೈದಿಲೆಗಳರಳಿ ನೀರ್ಗನ್ನಡಿಯೊ-
ಳೆಸೆದು ಮಿನುಗಿದುವಲ್ಲಿ ಬಾನತಾರೆಗಳಂತೆ.
ನಾನು ನಡೆದಂತೆಲ್ಲ ಗರುಕೆಚಿಗುರುಗಳೆನ್ನ
ಅಡಿಯುಗುರ ಚುಂಬಿಸುತ ಹರುಷದಲಿ ಹಿಗ್ಗಿದುವು.
ನಡೆದು ಮುಂದಿನ ಸ್ಫಟಿಕಮಂಚದಲಿ ಮಂಡಿಸಿದೆ.

* * * *

" ಹೆಣ್ಣಾಗಿ ಬಾಳೆತ್ತಿ ನವೆಯುವುದದೆನಿತು ಕಟು ?
ಎಂದಾನು ಕೂಗಿದೆನು—ಮರಳಿಸುರಿಗಾಡಿನಲಿ.
ನೀಳ್ಗೊರಳ ಸೀಳ್ದನಿಯೊಳೊಂಟೆಯದು ಹೊರೆಹೊತ್ತ
ಸಂಕಟದೊಳೊರಲುವಂದದಲಂದು ಕೂಗಿದೆನು.
ಪುರುಷಜನ್ಮಿಯು ಬಂದು ಹೆಣ್ಣಿನೊಲವಿನ ವಿಮಲ
ಮಾನವನು ಕಾಪಿಡುವನದನು ಉಪಭೋಗಿಸಲು;
ಆದರಾ ಹೆಣ್ಣೊಡಲ ರಕ್ತದಲಿ ಕುದಿಯುತಿಹ
ಬೆಂಕಿಯನ್ನವನರಿತು ಆರಿಸಲು ಬರುವನೇ!
ಹೆಂಗುಸೊಬ್ಬಳು ಸೊರಗಿ ಏಕಾಂತದಲಿ ಕೊರಗೆ,
ಅವನದನು ದುರದೃಷ್ಟವೆಂದುಸುರಿ ಜಾರುವನು.
ಮತ್ತೊಮ್ಮೆ ಅವಳೊಲವನವನು ಆಶಿಸಿ ಬರಲು
ಅದರ ಬೆಲೆ ಏನೆಂದು ಹೇಳುವನೆ? ಪುರುಷಜ-
ನ್ಮಿಯ ಕ್ಷಣಿಕ ಸುಖಸಾರಕಾಹುತಿಯು ತಾನಾಗಿ
ನಿಲ್ಲುವಳು ಹೆಣ್ಣಾಗಿ ಬಾಳೆತ್ತಿ ಬಂದಿಲ್ಲಿ.

* * * *

" ಇಂತಿಂತು ಒಡಲುರಿಯ ತವಿಸಿ ಸಂತವಿಸುತ್ತ
ನಾನು ನೀರಿನ ಕಡೆಗೆ ಬಗ್ಗಿದೆನು ಬಲುಬಳಲಿ.
ದುಗುಡದಾಗರದಿಂದ ಶೋಕಸಾಗರದೆಡೆಗೆ
ಹುಟ್ಟಿ ಹರಿದಿಹ ಹೊನಲು ನನ್ನ ಎದುರಿನೊಳಿತ್ತು.
ನೀರ ತೆಗೆತೆಗೆದೊತ್ತಿ, ಬೆಮರಮಣಿಗಳನಳಿಸಿ
ನಾನು ಹಣೆಯನು ತೊಳೆದು ಶುಚಿಯಾದೆ. ಆದರೂ
ಇನ್ನೊಮ್ಮೆ ಶುಚಿಗೊಳಿಸಲಾರದವೊಲಿತ್ತು ಹಣೆ!
ಎನ್ನೆದೆಯ ಚುಚ್ಚಿತ್ತು ಅವನೊಲವ ನೆನಹುಕಣೆ!
ಅವನ ಕಟ್ಬಾಳ್ತನದ ಕೀರ್ತಿಗೆನ್ನೆದೆ ಎಳಸಿ,
ಅವನಾತ್ಮಶುದ್ಧತೆಯ ಶಾಂತಿಗೆನ್ನೆದೆ ಬಯಸಿ,
ಹರಿದಿತ್ತು ಅವನ ಬಳಿ. ಬವಣೆಯಲಿ ಬಲುಬಳಲಿ
ನನ್ನ ಎದೆ ಕುಸಿದಿತ್ತು. ಗಾಳಿ ಗಂಧದ ಹೊತ್ತು
ಬಲು ಭಾರವಾಗಿತ್ತು. ನೀರು ಮೊರೆದಳುತಿತ್ತು.
ಕ್ರೂರ ಕಾಂತಿಯ ಹರಡಿ ಬಾನಿನುಡು ಚುಚ್ಚಿತ್ತು.

* * * *

" ನಾನಲ್ಲೆ ಮೈಮರೆಯೆ, ಮರೆತ ಜೋಂಪಿನೊಳಾನು
ಕನಸೊಂದ ಕಂಡಿದ್ದೆ—ದೆಹಲಿಯರಮನೆಯಲ್ಲಿ
ಪುರುಷಸಿಂಹವು ಒಂದು ಕತ್ತನೊಲಿದಾಡಿಸುತ
ಮೆಲ್ದನಿಯಿನಡಿಯಿಡುತ, ಗತಿಗೊಪ್ಪುವಂದದಲಿ
ಆಗಾಗ ಗರ್ಜಿಸುತ, ದೇಹವನು ತೂಗಿಸುತ
ಬಾಗಿಸುತ, ಕಣ್ಣುಗಳ ತಿರುತಿರುಹಿ ನೋಡಿಸುತ
ಗಾಂಭೀರ್ಯದಿಂದಿದ್ದುದನು ಕಂಡೆ. ಪುರುಷಸಿಂ—
ಹವು ನೋಡೆ, ಸಂಗ್ರಾಮಸಿಂಹವಾಗಿತ್ತಮಮ!

CC-0. Jangamwadi Math Collection. Digitized by eGangotri

ಬೊಮ್ಮವನು ಬಿರಿದಂತೆ ಬಾಯ್ದೆರೆದು ಕೂಗುತ್ತ,
ದಾಡೆಗಳ ಮಸೆಯುತ್ತ ಬಾಲವನು ಮಿಳ್ಳಿಸುತ,
ಕೆಂಗಣ್ಣ ಕಿಡಿಯುಗುಳಿ ಮೂಗಿನಿಂ ಘೂರ್ಮಿಸುತ
ಶತ್ರುನಾಶವ ಗೈದು ಮಾಯವಾಯಿತ್ತೆಲ್ಲೊ !

"ಒಡನೆ ಕಂಡುದು ಕಣ್ಗೆ ಮರಳಸುರಿಗಾಡೊಂದು;
ಸಿಂಹ-ಸಿಂಹಿಣಿ ಕೂಡಿ ಸುಖಿಸಿದುವು ತಾವಲ್ಲಿ.
ಕಣ್ಣೆಗೆತ್ತಲು ಮರಳು. ಕಿವಿಗೆ ಮರಳಿನ ಗಾಳಿ.
ಮೇಲೆ ಬಹುದೂರದಲಿ ಮಸುಕೆ ತಳೆದಿಹ ಬಾನು.
ಕೆಳಗೆ ಒಂದೇ ಒಂದು ಅಂಜೂರ ಮರವಿಹುದು
ಅದರ ತುದಿಯಾದರೂ ಮುಗಿಲ ಸಮಕೇರಿಹುದು.
ಅವುಗಳಿಗೆ ತಮ್ಮೆದುರ ಜಗವೆ ಇನಿತರೊಳಿತ್ತು !
ಆದರೂ ಎನಿತೊಂದು ಶಾಂತಿಯಲಿ ಸುಖಿಸಿದುವು !
ಕಾಶ್ಮೀರದಲಿ ಬೆಟ್ಟ ಬೆಟ್ಟದಟ್ಟಿಗೆ ಕೂಡಿ
ಮಲಗುವವೊಲಾ ಸಿಂಹ ಸಿಂಹಿಣಿಯ ಕೂಡಿತ್ತು.

* * * *

"ಏನಿತ್ತೊ ದೇವನರ್ಥವು ಇದಕೆ ನಾನರಿಯೆ !
ಸೃಷ್ಟಿಯಲಿ ಏಕಾಂಗಿ ನಾನೊರುವಳೇ ಎಂದು
ಮರುಗಿದೆನು. ಹಿಂದೀಯರೆದುರೆನ್ನ ಗೌರವವ
ಬೆಳಗಲಿಹ ನನ್ನ ರಕ್ಷಾಬಂಧಿ ಬರಲಿಲ್ಲ.
ಶುದ್ಧ ಬಿಳಿಮಂಜಿನಲಿ ಹೊಳೆವ ಮಾಣಿಕದಂತೆ
ಹೊಳೆವೆನ್ನ ಕಣ್ಣಮಣಿ ಬಾರನೇತಕೆ ಇಂದು........!"

[ ಮೊಗಲದೇವಿ ( ಷಹಜಹಾನನ ಪ್ರಿಯಕುವರಿ ಜಹನಾರಳ ಆತ್ಮವೃತ್ತ ) ಎಂಬ ಕವನದಲ್ಲಿ, ಜಹನಾರಳು ತನ್ನ ರಕ್ಷಾಬಂಧಿ ( ರಜಪೂತ ವಂಶದ ಕ್ಷತ್ರಿಯನು. ಜಹನಾರಳ ಪ್ರೀತಿಪಾತ್ರ ). ಬಾರದಿರಲು ತೆಗೆದ ಉದ್ಗಾರದಿಂದ ಉದ್ಧೃತವಿದು. ]

---

ಭಿಷಗ್ರತ್ನ ಆಯುರ್ವೇದವಿದ್ವಾನ್ ಬಿ. ವಿ. ಪಂಡಿತರ
ಶ್ರೀಕರ ಕಸ್ತೂರಿಮಾತ್ರೆ
ಮಕ್ಕಳ ಮತ್ತು ದೊಡ್ಡವರ ಸಮಸ್ತ ಶೀತ ವಾತ ರೋಗಗಳಿಗೂ ಸಂಜೀವನ
ಬಾಲಸಂಜೀವಿನಿ
ಮಕ್ಕಳಿಗೆ ಸುಖವಾಗಿ ಭೇದಿಮಾಡಿಸಿ ಅಜೀರ್ಣ ಜ್ವರಗಳನ್ನು ನಿಲ್ಲಿಸುತ್ತೆ
ಸದ್ವೈದ್ಯ ಶಾಲಾ ನಂಜನಗೂಡು

CC-0. Jangamwadi Math Collection. Digitized by eGangotri

# ಹಿರಣ್ಯಗರ್ಭ

ಶ್ರೀಮಾನ್ "ದೇವನೀಮಠ"

**ಉತ್ತರಕನ್ನಡ ಜಿಲ್ಲೆಯು ಕನ್ನಡಿಗರ ಸಂಸ್ಕೃತಿ–ಸಂಪ್ರದಾಯಗಳಿಗೆ ತವರುಮನೆ. ಅಲ್ಲಿಯ ಸಂಸ್ಕೃತಿಯ ಪ್ರದರ್ಶನವು ಈ ಕತೆಯಲ್ಲಿ ಸಾಕಷ್ಟಿದೆ. ಎಲೆಯ ರಾಮಪ್ಪ 'ತಿರುಗಣೆ ಜಟ್ಗ'ದ ಮುಖಾಂತರ ಹಣವನ್ನು ಪಡೆದುದು ಕೌತುಕವನ್ನುಂಟುಮಾಡ–ದಿದ್ದರೂ ಕತೆಗಾರಿಕೆಯು ಅಲ್ಲಿಯವರೆಗೂ–ವಾಚಕರನ್ನು ಕುತೂಹಲಿಗಳನ್ನಾಗಿ ಮಾಡಿಯೆ ಕರೆದುಕೊಂಡು ಹೋಗುತ್ತದೆ.**

ಮಳೆಗಾಲದಲ್ಲಿ ಮಳೆಬರುವುದು ಸಹಜವಾದರೂ, ನಾಗರಪಂಚಮಿಯ ದಿನ ನಾಗರಕಲ್ಲು ತೊಳೆಯಲಿಕ್ಕೆ ಮಳೆ ಬರಲೇ ಬೇಕೆಂದು ಹಳ್ಳಿಯವರ ಸಿದ್ಧಾಂತ. ಈ ದಿನ ಮಳೆಯು ಜೋರಾಗಿದ್ದಿತು. ಗುಡುಗು-ಮಿಂಚುಗಳಿಂದ ಪ್ರಕೃತಿಯೆಲ್ಲವೂ ನಾಗಿಯ ಹೊಟ್ಟೆಯ ಹಾಗೆ ಭೀಷಣ-ವಾಗಿದ್ದಿತು.

ನಾಗಿಯದೂ ಒಂದು ಸಂಸಾರ. ಹರಕು-ಮುರುಕು ಗುಡಿಸಲ ಹಾಗೆ, ಅವಳ ಸಂಸಾರವೂ ಹರಕು-ಮುರುಕು. ದೊಡ್ಡ ಮಳೆ–ಗಾಳಿಗೆ ಗುಡಿಸಲು ಹಾರಿಹೋಗುವುದು. ಬಡತನದ ಬೇಗೆಯು ಹೆಚ್ಚಾದರೆ ಅವಳ ಸಂಸಾರವೂ ನಾಮಶೇಷವಾಗುವುದು. ಇಂದು ಬೆಳಗಿನಿಂದಲೂ ಹೊಟ್ಟೆಗೆ ಏನೂ ಇಲ್ಲ. ಸುರಿಮಳೆಯಲ್ಲಿ ಪಕ್ಷಿಗಳು ದೊಡ್ಡಮರವನ್ನೋ, ತಮ್ಮ ಗೂಡನ್ನೋ ಆಶ್ರಯಿಸಿ, ಕಣ್ಣೆರಡನ್ನೂ ಪಿಳಿಪಿಳಿ ಬಿಡುವಂತೆ....ಬಾಗಿಲ ಬಳಿಯಲ್ಲಿ ನಾಗಿಯು, ಶರೀರವನ್ನು ಮುರುಟಿಸಿಕೊಂಡು ನಿರಾಶಾದೃಷ್ಟಿಯಿಂದ ಮೂಕಳಾಗಿ ಕುಳಿತಿದ್ದಳು. ಹೀಗೆಯೆ ಎಷ್ಟೋ ಹೊತ್ತಾಯಿತು. ಬಡವರ ಮಧ್ಯಾಹ್ನ (೩ ಘಂಟೆ)ವೂ ಕಳೆದುಹೋಯಿತು. "ಮಕ್ಕಳು ಹಸಿದಿವೆ" ಎಂದುಕೊಂಡು, ಮೆಲ್ಲಗೆದ್ದು ಒಳಗೆ ಬಂದಳು. ಪಾತ್ರೆಯಲ್ಲೆಲ್ಲ ಮತ್ತೊಮ್ಮೆ ಕೈಹಾಕಿದಳು. ಹೀಗೆ ಎಷ್ಟು ಬಾರಿ ನೋಡಿಯಾಗಿತ್ತೋ ಏನೋ? ಆದರೂ ಆಶೆಯಿಂದ ಮತ್ತೆ ನೋಡಿದಳು. ಯಾವಾಗಲೂ ಅದು ಒಂದೇ ಉತ್ತರ ಹೇಳುತ್ತಿತ್ತು. "ಇಲ್ಲ, ನಿಜವಾಗಿ ನನ್ನೊಳಗೇನೂ ಇಲ್ಲ". "ಸುಟ್ಟ ಪಾತ್ರೆ ಯಾವಾಗಲೂ ಹೀಗೇ" ಎಂದು ಬಯ್ದು ಒಲೆಯ ಬಳಿಗೆ ಹೋದಳು. ಮೈಯಲ್ಲಿ ಸ್ವಲ್ಪ ಚಳಿಚಳಿಯಾದ ಹಾಗಾಯಿತು. ಚಳಿ ಕಾಸಿದಹಾಗಾ-ಯಿತು, ನೀರು ಕುದಿಸಿದಹಾಗಾಯಿತು....ಎಂದು ಪಾತ್ರೆಯಲ್ಲಿ ಒಂದಿಷ್ಟು ನೀರಿಟ್ಟು ಬೆಂಕಿಯನ್ನು ಒಟ್ಟಿದಳು.

ಹೊರಗೆ ಆಡುತ್ತಿದ್ದ ಮಕ್ಕಳಿಗೆ, ಅವ್ವನು ಗಂಜೀ ಬೇಯಿಸುವುದು ಹೇಗೋ ಗೊತ್ತಾಯಿತು. ಆಟದ ಗುಂಗಿ–ನಲ್ಲಿ ಇದುವರೆಗೂ ಅವರು ಹಸಿವನ್ನು ಮರೆತಿದ್ದರು. ಇನ್ನು ತಡೆಯಲಾಗುವುದೇ? "ಅವ್ವಾ! ಅವ್ವಾ! ಗಂಜೀ ಬಡ್ಸೇ" ಎಂದು ತಾಯಿಯನ್ನು ಮುತ್ತಿಗೆಹಾಕಿದರು. ಎಲ್ಲರೂ ಅಳುತ್ತ ಗುಲ್ಲುಮಾಡಿದರು. ನಾಗಿಯು ಕನಿಕರದ ದನಿ-ಯಿಂದ "ಮಕ್ಕಳೇ! ಇದು ಗಂಜಿಯಲ್ಲ. ಬರಿಯೆ ನೀರು" ಎಂದು ಸಂತೈಸಿದರೂ ಅವರು ಕೇಳುವರೇ?

"ತಾನು, ಅಪ್ಪಾ ರಾಶೀ ಉಣ್ತಾರೆ. ನಮಗೆಲ್ಲ ತುಚು ತುಚು!" ಎಂದು ಬಟ್ಟಲು ತೆಗೆದುಕೊಂಡೋಡಿಬಂದರು.

ಮುದ್ದು ಮಕ್ಕಳ ಮಾತಿಗೆ ನಾಗಿಗೆ ಕಣ್ಣೀರು ಬಂತು. "ನನ್ಕಂದ, ನಿಮಗಿಲ್ಲದ್ದು ನಮ್ಮ ಸುಡುಗಾಡು ಹೊಟ್ಟೆಗೇ? ನಾವು ಸತ್ತಾದರೂ ನಿಮಗೆ ಹಾಕ್ತ್ರಪ್ಪ! ಏನ್ಮಾಡಲಿ? ಒಂದು ಅಕ್ಕೀಕಾಳೂ ಮನೇಲಿಲ್ಲ. ಹಪ್ಪೆರೊಟ್ಟೀ ಮಾಡೋದಿರ್ಲಿ, ಅಂಬಿಲೀನೂ ಕಾಣೆ. ಸೋವಿಮಾ! ಊರ್ಗೆಲ್ಲ ಹೋಳಿಗೆ ತುಪ್ಪ ತಿನ್ಸೆ್ತ. ನಾವೇನು ತಿನ್ಬೇಕು ಮಣ್ಣು? ಇದೇನು ನಿನ್ನಪರಪಂಚ?" ಎಂದು ದೇವರಲ್ಲಿ ಗೋಳಿಟ್ಟಳು ನಾಗಿ. ಮಕ್ಕಳೇನು ಬಲ್ಲರು! ತಾಯಿಯು ಅಳುವಾಗ

CC-0. Jangamwadi Math Collection. Digitized by eGangotri

ತಾವೂ ಅತ್ತರು. ಆದರೆ "ಹಸಿವು, ಹೊಟ್ಟೆಯುರಿ. ಬಡ್ಸೆ! ಬಡ್ಸೆ!" ಎಂಬುದನ್ನು ಬಿಡಲಿಲ್ಲ.

ರಾಮಪ್ಪನು ಊರೆಲ್ಲ ತಿರುಗಿ ಬಂದನು. ನಾಗಿಯು ಗಂಡನು ಬಂದುದನ್ನು ನೋಡಿ ಮಕ್ಕಳನೆಲ್ಲ ಹೊರಗಟ್ಟಿದಳು. ಅವರೆಲ್ಲರೂ ಅವನನ್ನು ಮುತ್ತಿಗೇ ಹಾಕಿ "ನೋಡಪ್ಪಾ! ಅವ್ವೆ ಬಡಚೂದಿಲ್ಲಂತೆ" ಎಂದು ಹೊಟ್ಟೆ ಹೊಟ್ಟೆ ಬಡಕೊಂಡರು. ಮೊದಲೇ ಬಳಲಿದ ರಾಮಪ್ಪನ ಹೃದಯವು ಈಗ ಪೂರಾ ಒಡೆದು ಚೂರಾಯಿತು. "ತನ್ನ ಮಕ್ಕಳು ನಾಗರಪಂಚಮಿಯ ಹಬ್ಬದಲ್ಲಿಯೂ ಹೊಟ್ಟೆತುಂಬ ಕೂಳು ಕಾಣಲಿಲ್ಲ!" ಎಂದು ನೆನಸಿಕೊಳ್ಳುವಾಗ, ಪಳಪಳ ಕಣ್ಣೀರು ಹರಿಯಿತು. "ಉಸ್ಸೇ" ಎಂದು ನೆಲದ ಮೇಲೆ ಬಿದ್ದನು.

ನಾಗಿಯು ಒಂದು ಗಳಿಗೆಯ ಮೇಲೆ ಮೆಲ್ಲಗೆ ಬಂದು "ಅಕ್ಕೀ ತಂದಿರಾ?" ಎಂದಳು. ರಾಮಪ್ಪನು ತೀರಾ ನಿರ್ವಿಣ್ಣನಾಗಿದ್ದನು. ಏನು ಹೇಳಲೂ ತಿಳಿಯದೆ "ಸುಡುಗಾಡು ಅಕ್ಕಿ!" ಅಂದನು.

"ಅಕ್ಕೀ ತಂದ್ರೋ ಕೇಳಿದರೆ!"

"ನಿಮ್ಮನೇ ಹಾಳಾಗಲಿ! ಅಕ್ಕಿ ಕೊಡ್ತೋರ್ಯಾರು?"

"ಅಕ್ಕೀ ಕೇಳ್ದ್ರೆ ಸಿಟ್ಟು ಯಾಕ್ಮಾಡ್ತೀರಿ."

"ಸಿಟ್ಮಾಡ್ದೆ ನಾನೇನ್ ಸಾಯ್ಲಿ! ತಂದಿದ್ರೆ ಆಗಲೇ ಹೊತಾಕ ಬಿಡ್ತಿದ್ದೆ."

ಗಂಡ ಹೆಂಡಿರಿಬ್ಬರೂ ಶಾಂತರಾದ ಮೇಲೆ, ನೆರೆಹೊರೆಯಲ್ಲಿ ಅಕ್ಕಿಗಾಗಿ ಬಹು ಯತ್ನಿಸಿದರು. ಕೊನೆಗೂ ನಾಗರಪಂಚಮಿಯು ಅವರ ನಿರಶನ ವ್ರತದಲ್ಲಿಯೆ ಸಮಾಪ್ತಿಯಾಯಿತು. ರಾಮಪ್ಪನಿಗೆ ಇದು ಹೊಸ ಅನುಭವವಲ್ಲ; ಅವನ ದಾರುಣವಾದ ದುಃಖೇತಿಹಾಸದಲ್ಲಿ ಇದೊಂದು ಅರ್ಧ ಪುಟವಿಷ್ಟೆ!

* * *

ಹೆಂಡದ ರಾಮಪ್ಪನು ಹೋಗಿ ಎಲೆಯ ರಾಮಪ್ಪನಾದ. ಅವನಿಗೆ ಹೆಂಡದ ರಾಮಪ್ಪನೆಂದು ಹೆಸರುಹಾಕಿದವರಾರೋ? ಅದು 'ಕುಡಿಯಲು ನೀರಿಲ್ಲದವಳಿಗೆ ಗಂಗಾಭವಾನಿ' ಎಂದರೆ ಹೇಗೋ ಹಾಗೆ. ರಾಮಪ್ಪನು ಕುಡಿಯುವ ಜಾತಿಯವ. ಆದರೂ ಕುಡುಕನೆಂಬ ಹೆಸರಿಗೆ ಅರ್ಹನಲ್ಲ. ಅವನು ಹೆಂಡಕುಡಿಯುವುದು ಯಾವಾಗ? ಬಡತನದ ಜೀವನವು ಹಿಂಡಿಹಿಪ್ಪೆಯಾದಾಗ—ಭವಿಷ್ಯತ್ತಿನ ಭಯಂಕರ ದೃಶ್ಯವನ್ನು ಕಂಡು, ವರ್ತಮಾನದ ಬಾಳುವೆಯು ತತ್ತರಿಸುವಾಗ; ಯಾಕೆ? ಬಡತನ; ಅದರ ದೆಸೆಯಿಂದ ಜೀವ ನಿರ್ವಹಿಸಲು ಆಗುವ ಶ್ರಮ, ಇಷ್ಟು ಶ್ರಮಮಾಡಿದರೂ ಮುಗಿಸಲಾಗದ ಹೆಂಡಿರು-ಮಕ್ಕಳ ಗೋಳುಗಳು —ಈ ಯಮಯಾತನೆಗಳನ್ನು ಒಂದು ಕ್ಷಣಕಾಲವಾದರೂ ಮರೆಯುವುದಕ್ಕಾಗಿ; ಮರೆತು ಎಚ್ಚರದಪ್ಪಿ ಬಿದ್ದು, ಕ್ರೂರವಾದ ಬಡತನವನ್ನು ಸಹಿಸುವ ಚೈತನ್ಯವನ್ನು ಮತ್ತೆ ಹೊಂದುವುದಕ್ಕಾಗಿ! ಅದೂ ಹಬ್ಬಕ್ಕೊಮ್ಮೆ—ಹಾಡಿಗೊಮ್ಮೆ. ಅವನು ಹಾಗೆಲ್ಲ ಕೆಟ್ಟ ಚಾಳಿಯವನಾಗಿದ್ದರೆ ಈ ನಾಲ್ವತ್ತೈದು ವರ್ಷದ ಸಂಸಾರದಲ್ಲಿ ಎಂದೋ ಅವನ ಕುಟುಂಬವು ಮಣ್ಣುಪಾಲಾಗುತ್ತಿತ್ತು. ರಾಮಪ್ಪನು ಸತ್ಯವಂತ, ಅದರಿಂದಲೇ ಭೂಮಿಯಲ್ಲಿ ಬದುಕಿಕೊಂಡ. ಅವನು ದಿನವೂ ತುಲಸಿಯ ಕಟ್ಟೆಯೆದುರು ನಿಂತು ನಾಮ ಹಾಕುವಾಗ, ದೇವರಿಗೆ ಹೇಳಿಕೊಳ್ಳುವುದಿಷ್ಟು: "ಉಳೋದು ಬಿತ್ತೋದು ನನ್ನ ಇಚ್ಛೆ, ಆಗೋದು ಹೋಗೋದು ನಿನ್ನ ಇಚ್ಛೆ!"

ಕೂಲಿಯಿಂದ ಜೀವನವು ಸಾಗದ ಹಾಗಾದ ಮೇಲೆ, ರಾಮಪ್ಪನು ಎಲೆಯ ವ್ಯಾಪಾರವನ್ನು ಕೈಕೊಂಡಿದ್ದ. ವಿದೇಶೀಯ ಚಟಗಳು ಬರುವುದಕ್ಕಿಂತ ಮುಂಚೆ, ಎಲೆಅಡಿಕೆ ಹಾಕಿಕೊಳ್ಳುವುದೆ ನಮ್ಮ ಜನರ ಪ್ರಮುಖ ವ್ಯಸನವಾಗಿತ್ತು. ಈಗದು ನಾಮಶೇಷವಾಗಿರದಿದ್ದರೂ, ಆಗಿನ ಎಲೆಯ ವ್ಯಾಪಾರವು ಹೆಚ್ಚು ಅಬ್ಬರದ್ದಾಗಿತ್ತು. ರಾಮಪ್ಪನು ಎಲೆ ಅಡಿಕೆ ಎರಡನ್ನೂ ಮಾರುತ್ತಿದ್ದರೂ ಅವನಿಗೆ ಎಲೆಯ ರಾಮಪ್ಪನೆಂಬುದೇ ರೂಢಿ. ಸಂಜೆಯ ಮುಂದೆ ಎಲ್ಲ ಹೆಗ್ಗಡೆಯರ (ತೋಟಗರ) ಮನೆಮನೆಗೆ ತಿರುಗುವನು. ಅವರೆಲ್ಲರೂ ಅವನ ಗಿರಾಕಿಗಳಿದ್ದರು. ನಾಗಬಳ್ಳಿ, ಜೇನಬಳ್ಳಿ—(ಇದೊಂದು ಎಲೆಬಳ್ಳಿಯ ಜಾತಿ) ಎಲೆಗಳನ್ನು ಕೊಯ್ದು, ಕಟ್ಟುಮಾಡಿ, ಅಡಿಕೆಯ ಹಾಳೆಗಳಲ್ಲಿ ಕಟ್ಟಿಡುತ್ತಿದ್ದರು. ನೂರುನೂರು ಎಲೆಗೆ ಒಂದೊಂದು ಕಟ್ಟು. ಇಂಥ ಕಟ್ಟುಗಳನ್ನು ಒಬ್ಬೊಬ್ಬರು ನೂರೋ ಐವತ್ತೋ ಎಂದು ದಿನಕ್ಕೆ ಲೆಕ್ಕದಂತೆ ಕೊಡುತ್ತಿದ್ದರು. ರಾಮಪ್ಪನು ಒಬ್ಬರ ಹಣವನ್ನೂ ಮುಳುಗಿಸಿದವನಲ್ಲ. ಅವನ ಪ್ರಾಮಾಣಿಕತೆಯೆ ವ್ಯಾಪಾರದ ಉತ್ಕರ್ಷಕ್ಕೆ ಮೂಲವಾಗಿತ್ತು. ಇವನ ಹೊರತು ಆ ಊರಲ್ಲಿ ಎಲೆಯ ವ್ಯಾಪಾರದವರು ಮತ್ತೂ ಎಷ್ಟೋ ಜನರಿದ್ದರು. ಅವರು "ಎಲೆ ಕೊಡ್ತೀರಾ! ಎಲೆ?" ಎಂದು ಕೇಳುತ್ತ ಬಂದರೆ ತೋಟಗರೆಲ್ಲರೂ ಒಂದೇ ಉತ್ತರ ಹೇಳುತ್ತಿದ್ದರು. "ಇಲ್ಲ ನಾವು ಮತ್ತೆ ಯಾರಿಗೂ ಕೊಡೂದೇ ಇಲ್ಲ. ನಾವು ಎಲೆ ಕೊಡುವದೊಂದು ರಾಮಪ್ಪನಿಗೆ. ಅವನಿಗೂ

CC-0. Jangamwadi Math Collection. Digitized by eGangotri

ನಮಗೂ ಗಂಟು. ಬಡವ....ಬಡವನಾದರೇನಾಯ್ತು. ಒಬ್ಬರ ದುಡ್ಡು ತಿನ್ನುವವನಲ್ಲ! ಖರೇ ಮನುಷ್ಯ! ಎಂಟೆಂಟು ದಿನಕ್ಕೇ, ಬಂದ ನಮ್ಮ ಲೆಕ್ಕಾ ಪೂರ್ಗು ಬಿಟ್ಟ. ನಾವು ಅವನ ಗುಣನೋಡಿ ಕಟ್ಟಿಗೆ ನಾಕು-ನಾಕೆಲೆ ಹೆಚ್ಚಿಗೆ ಹಾಕ್ಕೊಡ್ತೇವೆ."

ರಾಮುಪ್ಪನು ತಾನು ತಂದ ಎಲ್ಲ ಎಲೆಗಳನ್ನು ಸಾಲಾಗಿ ಹಾಕಿ, ಮೇಲೆ ಕೆಳಗೆ ಹುಲ್ಲು-ಕರಡಗಳನ್ನು ಹೊದಿಸಿ, ಮೇಲೆ ಅಡಿಕೆಯ ಹಾಳೆಗಳನ್ನು ಮುಚ್ಚಿ, ಒಂದು ಬಿಮ್ಮಗಿನ ಹೊರೆ ಬಿಗಿವಿಡುತ್ತಿದ್ದನು. ಕೋಳಿ ಕೂಗುವ ಮುನ್ನ ಎದ್ದು, ಒಂದಿಷ್ಟು ತಂಗುಳನ್ನ ಊಟಮಾಡಿ, ಎಲೆಹೊರೆಯನ್ನು ತಲೆಯ ಮೇಲಿಟ್ಟು ಹೊರಡುತ್ತಿದ್ದನು. ಅವನು ಗೇರಸೊಪ್ಪೆಯಿಂದ ಘಟಕಳಕ್ಕೆ ಹೋಗಬೇಕಾಗಿತ್ತು. ಗೇರಸೊಪ್ಪೆಯು ಮೊದಲೊಮ್ಮೆ ರಾಜಧಾನಿಯೆನಿಸಿಕೊಂಡು ಮಹಾವೈಭವದಿಂದ ಮೆರೆದ ಪಟ್ಟಣ. ಅರಬ್ಬೀ ಮೂರರಿಗೆ ಮೆಣಸಿನಕಾಳು ಮೊದಲಾದುವುಗಳನ್ನು ಒದಗಿಸಿ ಕೊಡುವ ಒಂದು ಪ್ರಖ್ಯಾತವಾದ ಬಂದರ. ಈಗದು ಕಾಲನ ಕರಾಲ ದಂಷ್ಟ್ರದಲ್ಲಿ ಸಿಕ್ಕಿ, ಪತಿಯನ್ನು ಕಳೆದುಕೊಂಡ ಸತಿಯಂತೆ ಪ್ರಾಚೀನ ವೈಭವದಿಂದ ಹೀನವಾಗುತ್ತ, ಬಲು ಅಮಂಗಲವಾಗಿಕೊಂಡು, ಬೇಸಗೆಯಲ್ಲಿ ಬರಿಯದಾಗುತ್ತಲಿರುವ ನದಿಯಂತೆ ತನ್ನ ವಿಸ್ತೀರ್ಣತೆಯನ್ನು ಕಳೆದುಕೊಂಡು ಹಾಳು ಕೊಂಪೆಯಾಗಿದೆ. ರಾಮುಪ್ಪನು ಹೋಗುವಾಗೆಲ್ಲ ತನ್ನ ಸಂಸಾರದ ಹಾಗೆ ಹಾಳುಸುರಿಯುವ ಗುಡಿ-ಗೋಪುರಗಳನ್ನು ತುಳಿದುಕೊಂಡು ಹೋಗುತ್ತಿದ್ದನು. ಹಾದಿಯುಲ್ಲೆಲ್ಲ ಅಲ್ಲಲ್ಲಿ ಜೈನರ ಬಸ್ತಿಗಳು ಸಿಕ್ಕುತ್ತಿದ್ದುವು. ಚಿತ್ರ-ವಿಚಿತ್ರವಾಗಿ ಶಿಲ್ಪಕೆಲಸಮಾಡಿರುವ ಕರಿಯಕಲ್ಲುಗಳು ಉದ್ದವಾಗಿ ಬಿದ್ದು, ಕರ್ಣಾಟಕದ ದೌರ್ಭಾಗ್ಯಕ್ಕಾಗಿ ರೋದಿಸುತ್ತಿದ್ದುವು. ಶಾಸನ-ಶಿಲಾಲೇಖ-ಧ್ವಜಸ್ತಂಭಗಳು "ಕನ್ನಡಿಗರೇ ಇಲ್ಲಿ ಬನ್ನಿ! ನಿಮ್ಮ ಪೂರ್ವದ ವೈಭವಗಳನ್ನು ಕಿವಿಯಲ್ಲಿ ಕೇಳಿಸುತ್ತೇವೆ" ಎಂದು ಕರುಣಾವಿಶಿಷ್ಟವಾಗಿ ಮೂಕಸನ್ನೆಯಿಂದ ಕರೆಯುತ್ತಿವೆಯೋ?—ಎಂಬಂತೆ, ಕೈಯೆತ್ತಿ ನಿಂತಿದ್ದುವು. ರಾಮುಪ್ಪನು ಇದನ್ನೆಲ್ಲ ನೋಡುವನೇ? ನೋಡಿದರೂ ಅವನಿಗೆ ತಿಳಿಯುವುದೇ? ತಿಳಿದು ಇತಿಹಾಸಜ್ಞರಿಗೆ ಹೇಳಬಲ್ಲನೇ? ಇಲ್ಲ. ಅವನು ಹಳ್ಳಿಯ ಒಕ್ಕಲಿಗ; ಅವನ ಹೃದಯದ ಭಾವನೆಯೆಲ್ಲವೂ ಬೇರೊಂದು ರೂಪುಗೊಂಡಿತ್ತು. ಅವನ ದೃಷ್ಟಿಯೂ ಅವನ ಭಾಷೆಯೂ ಬೇರೆಬೇರೆ. ಮಾಸ್ತಿ, ಜಟ್ಗ, ಬೀರರು, ರಣಮಾಸ್ತಿ, ಚಂಡಬೀರ್ರು, ಕಡಬ, ದೆವ್ವದ ಮನೆ, ರಣಗೊಲೆ ಹೀಗೆ ಒಂದೊಂದು ಕಲ್ಲಿನಲ್ಲಿ ಒಂದೊಂದು ದೇವತೆಯ ಭಾವನೆ. ಅವೆಲ್ಲವೂ ಅವನ ಸಹಾಯದ ದೆವ್ವಗಳಂತೆ. ಅವಕ್ಕೆಲ್ಲ ಹಣ್ಣು-ಕಾಯಿ, ಪೂಜೆ-ಉಪಾರ..(ಬೇಯಿಸಿದ ಅನ್ನ), ಲಿಂಬೇಹಣ್ಣು-ಎಲೇಸಟ್ಟಿಗಳನ್ನು ಒಪ್ಪಿಸಿದರೆ ತನಗೆ ದೆವ್ವದ ಕಾಟವಿಲ್ಲೆಂದು ನಂಬಿದ್ದನು. ತಲೆಯ ಮೇಲೆ ಹೊರೆಯಿರುವಾಗಲೇ ಕಂಡದೇವರಿಗೆಲ್ಲಾ ಕೈಮುಗಿಯುತ್ತಿದ್ದನು, ಜಟ್ಗನಿಗೆ ಲಿಂಬೇಹಣ್ಣಿಡುತ್ತಿದ್ದನು. ಮಾಸ್ತಿಗೆ ಕುಂಕುಮ ಹೊಯ್ಯುತ್ತಿದ್ದನು; ಕಡಬನಿಗೆ ವೀಳ್ಯದೆಲೆಯನ್ನು ಕಾಣಿಕೆಯಾಗಿಡುವನು. ಹಾದಿಯುದ್ದಕ್ಕೂ ಸಿಕ್ಕಿದ ದೇವರಿಗೆಲ್ಲ ತನ್ನ ಹೃದಯ ನಿವೇದನೆಯನ್ನು—ಬಾಳಿನಗೋಳಿನ—ಕತೆಯನ್ನು ಅರುಹುತ್ತಿದ್ದನು. ಉತ್ತರರಾಮಚರಿತ್ರೆಯಲ್ಲಿ ಭವಭೂತಿಯು ಬಣ್ಣಿಸಿದ್ದಂತೆ, ಸೀತೆಯ ಅಪಾರ ದುಃಖರಾಶಿಯನ್ನು ನೋಡಿಕೊಂಡು (ರೋದಿತಿ ಗ್ರಾವಾ) ಸಾಮಾನ್ಯವಾದ ಕಲ್ಲು ಅತ್ತರೆ, ಇಲ್ಲಿ ರಾಮುಪ್ಪನು ದೇವಭಾವನೆಯನ್ನಿಟ್ಟ ಕಲ್ಲುಗಳು ಅಳಲಾರವೇ? ಕಲ್ಲು ಅಳುವುದು ಹೌದು. ಜಗತ್ತಿನಲ್ಲಿರುವ ಚೈತನ್ಯವು ಅವುಗಳಲ್ಲಿಯೂ ಇರುವಾಗ, ಅವು ಪರರಿಗಾಗಿ ಅಳುವುವು; ನಮಗದು ಕಾಣಿಸಲಿಕ್ಕಿಲ್ಲ.

ರಾಮುಪ್ಪನು ಹೀಗೆ ಹೆದರುತ್ತ ಹೋಗುವುದಕ್ಕೆ ಮತ್ತೊಂದು ಕಾರಣವಿದ್ದಿತು. ಆ ಅಡವಿಯಲ್ಲಿ ದೆವ್ವಗಳಂತೆ ಕಳ್ಳರ ಭಯವೂ ಹೆಚ್ಚು. ಒಬ್ಬಿಬ್ಬರು ಹೋಗುವ ದಾರಿಯಲ್ಲ. ನಾಲ್ಕಾರು ಜನರು ಕೂಡಿಹೋಗುವ ಭಯಂಕರ ಸ್ಥಳ. ಸಂಗಡಿಗರೆಲ್ಲ "ರಾಮುಪ್ಪನ ಎಲೆಯ ವ್ಯಾಪಾರವು ತಮಗಿಂತ ಹೆಚ್ಚುವುದಲ್ಲಾ" ಎಂಬ ಹೊಟ್ಟೆಯುರಿಯಿಂದ, ಅವನನ್ನು ವಂಚಿಸಿ ಹೋಗುತ್ತಿದ್ದರು. ರಾಮುಪ್ಪನು ಬೇಕಾದರೆ ಒಂಟಿಗನಾಗಿ ಹೋಗಬೇಕು, ಇಲ್ಲವಾದರೆ ಹಸಿವೆಯಲ್ಲಿ ಬಿದ್ದು ಮನೆಯಲ್ಲಿ ಸಾಯಬೇಕು. ರಾಮುಪ್ಪನು ನಿರ್ವಾಹವಿಲ್ಲದೆ, ಕಟ್ಟಡವಿಯಲ್ಲಿ ದೇವರ ಮೇಲೆ ಭಾರಹಾಕಿ ಹೋಗುತ್ತಿದ್ದನು.

* * *

ಪ್ರಾಮಾಣಿಕತೆಯೇ ವ್ಯಾಪಾರದ ಮೂಲ ಬಂಡವಾಳವಾಗಿದ್ದರೆ, ಸರಳವ್ಯವಹಾರದಿಂದ ವ್ಯಾಪಾರಕ್ಕೆ ಕಳೆಯೇರುತ್ತಿದ್ದರೆ, ವ್ಯಾಪಾರಸ್ಥನ ಹೃದಯವು ಗಿರಾಕಿಯ ಹೃದಯದೊಡನೆ ಬೆಳೆಯುವುದರಿಂದ ವ್ಯಾಪಾರದ ಪುರೋಭಿವೃದ್ಧಿಯಾಗುತ್ತಿದ್ದರೆ, ಘಟಕಳ ಪೇಟೆಯಲ್ಲಿ ಎಲೆಯ ರಾಮುಪ್ಪನ ವ್ಯಾಪಾರವೇ ಹೆಸರಾಯಿತು. ರಾಮುಪ್ಪನೆಂದರೆ ಎಲ್ಲರಿಗೂ ಕೈಮುಂದು. ಉಳಿದವರೆಲ್ಲ ದೊಡ್ಡ ದೊಡ್ಡ ಜೂಳಿಯಿಟ್ಟು-

CC-0. Jangamwadi Math Collection. Digitized by eGangotri

ಕೊಂಡು " ಹಾ! ಬರ್ರಾ! ಎಲೆ ತಕ್ಕೊಂಡು ಹೋಗಿ. ಚಲೋ ಎಲೆ!" ಎಂದು ಕೈಮಾಡಿ ಕರೆದರೂ ಯಾರೂ ಹೋಗುವವರಿಲ್ಲ. ಎಲ್ಲರೂ ಅವರಿಗೆ ತಮ್ಮ ಬೆನ್ನಿನಿಂದಲೇ ಉತ್ತರಕೊಟ್ಟು, ದೂರದಲ್ಲಿದ್ದರೂ "ಎಲೆಯ ರಾಮಪ್ಪ ಎಲ್ಲಿ ಕುಂತಿದ್ದಾನೆ?" ಎಂದು ಅರಸಿಕೊಂಡು ಅವನಿದ್ದಲ್ಲಿಯೇ ಹೋಗಿ ಮುತ್ತುವರು. ರಾಮಪ್ಪನದು ಎಲ್ಲರಲ್ಲಿಯೂ ಒಂದೇ ಮಾತು; ಒಂದೇ ದರ. ಹೆಂಗಸರು, ಹುಡುಗರು ಬಂದರೆಂದು ಹೆಚ್ಚಿಗೆ ಎತ್ತಿಹಾಕುವವನಲ್ಲ. ಸಾವುಕಾರರೆಂದು ದಾಕ್ಷಿಣ್ಯಕ್ಕೆ ಕಡಿಮೆ ಹೇಳುವವನಲ್ಲ. ಹಾದಿಯ ಮೇಲೆ ತಿರುಗುವ ಎಷ್ಟೋ ಜನ ಬಡವರು ರಾಮಪ್ಪನಿಂದ ಒಂದೆರಡು ಕವಳದ ಎಲೆ ಬೇಡಿಕೊಂಡು ಹೋಗುತ್ತಿದ್ದರು. ಹೀಗೆ ನೂರಾರು ಎಲೆಗಳು ದಿನಕ್ಕೆ ಅವನಿಂದ ದಾನವಾಗುತ್ತಿದ್ದುವು. ಶ್ರೀಮಂತರೆಲ್ಲರೂ ಆಳುಗಳ ಕೈಯಲ್ಲಿ ದುಡ್ಡು ಕೊಟ್ಟು "ಹೋಗು ರಾಮಪ್ಪನ ಎಲೇನೇ ತಕ್ಕೊಂಡು ಬಾ ಬೇರೇದು ಬೇಡ" ಎಂದು ಖಂಡಿತವಾಗಿ ಹೇಳುತ್ತಿದ್ದರು. ಕೊನೆ-ಕೊನೆಗೆ ರಾಮಪ್ಪನು ಇಷ್ಟು ಸ್ನೇಹವನ್ನು ಸಂಪಾದಿಸಿಕೊಂಡ: ಅವನು ಪೇಟೆಗೆ ಬಾರದೇ ಇದ್ದ ದಿನ, ಅವನ ಗಿರಾಕಿಗಳೆಲ್ಲ ಹೇಗಾದರೂ ತಮ್ಮ ಗರಜನ್ನು ಕಳೆದುಕೊಂಡು, ಮಾರನೆಯ ದಿನ ಅವನು ಬಂದ ಮೇಲೆಯೇ ಎಲೆ ತೆಗೆದುಕೊಳ್ಳಬೇಕು.

ಹೀಗಿರುವಾಗ ರಾಮಪ್ಪನ ಸತ್ಯವನ್ನು ಅಳೆಯುವ ಒಂದು ಚಮತ್ಕಾರದ ಸಂಗತಿಯು ಘಟಿಸಿತು. ಒಂದು ದಿನ ಬೆಳಗಿನಲ್ಲಿ ಮೂರುತಾಸು ಹೊತ್ತು ಬಂದಿರಬಹುದು. ಕೆಲವು ಒಕ್ಕಲಗಿತ್ತಿಯರೊಡನೆ ರಾಮಪ್ಪನು ಎಲೆಯ ವ್ಯಾಪಾರಮಾಡುತ್ತಿದ್ದ. ಆಗ ಬಾಚಿದ ಕ್ರೋಪಿನ ಒಬ್ಬ ಬಿಳಿಯ ಹುಡುಗನು ಬಂದ. ಅವನೇನು ರಾಮಪ್ಪನನ್ನೇ ಅರಸಿಕೊಂಡು ಬಂದವನಲ್ಲ. ಏನೋ ಎಲೇ ಬೇಕಾಗಿತ್ತು; ಇಲ್ಲಿ ಜನರು ಹೆಚ್ಚಿಗೇ ಕೂಡಿದ್ದರು. ಅದಕ್ಕಾಗಿ ಇಲ್ಲಿಗೇ ಬಂದು ಸೇರಿದ. ರಾಮಪ್ಪನೊಡನೆ "ಇಲ್ಲಿ ಒಂದು ಕಟ್ಟು ಎಲೇ ಕೊಡಿ!" ಎಂದು ಅವಸರವಾಗಿ ಕೇಳಿದ. ರಾಮಪ್ಪನೂ ಗಡಿಬಿಡಿಯಲ್ಲಿದ್ದ. ಈ ಕೈಯಲ್ಲಿ ಎಲೆ ಕೊಟ್ಟ; ಆ ಕೈಯಲ್ಲಿ ದುಡ್ಡು ಸಂಚಿಗೆ ಹಾಕಿದ. ಎಲೆ ತೆಗೆದುಕೊಂಡವನು ಕೂಡಲೇ ಹೊರಟು ನಡೆದ. ರಾಮಪ್ಪನು ಮತ್ತೊಂದು ಗಳಿಗೆಯ ಮೇಲೆ ನೋಡುತ್ತಾನೆ, "ಓಹೋ! ಎಂತಹ ಮೋಸ" ಅರ್ಧಾಣೆಗೆ ಬದಲು ಒಂದು ರೂಪಾಯಿ ಕೊಟ್ಟಿದ್ದನು. ಇದು ಮೋಸವೇ? ರಾಮಪ್ಪನ ದೃಷ್ಟಿಯಿಂದ ಇದು ಮೋಸವೇ ಆಗಿತ್ತು. "ಅರ್ಧಾಣೆ ಬದಲು ಒಂದು ರೂಪಾಯಿ ತೆಗೆದುಕೊಂಡು ಪಾಪಿಯಾದೆನಲ್ಲಾ!" ಎಂದುಕೊಳ್ಳುತ್ತ, ತನ್ನ ವ್ಯಾಪಾರವನ್ನಲ್ಲಿಗೇ ಬಿಟ್ಟು ಅವನನ್ನರಸುತ್ತ ಹೊರಟ. ಎಲ್ಲೆಲ್ಲೆಲ್ಲಾ ತಿರುಗಿದ ಮೇಲೆ ಕಡೆಗೆ "ಅವನು ಇಂಜನಿಯರರೊಬ್ಬರ ಡ್ರಾಯ್ವರನಂತೆ" ಎಂಬುದು ಗೊತ್ತಾಯಿತು.

ರಾಮಪ್ಪನು ಹೋಗುವಾಗ ಆ ಆಫೀಸರು ಬಾಗಿಲ ಬಳಿ ಆರಾಮಕುರ್ಚಿಯಲ್ಲಿ ತೂಗಾಡುತ್ತಿದ್ದರು. ಅವರಿಗೆ ರಾಮಪ್ಪನ ಪರಿಚಯವು ತುಸು ಇತ್ತು. ಮಾರ್ಕೆಟ್ಟಿನಲ್ಲಿ ಅವನನ್ನು ನೋಡಿದ್ದರು....ಆದರಿಂದ

"ಏನೋ ರಾಮಪ್ಪ" ಎಂದರು.

ರಾಮಪ್ಪನು ಮೆಲ್ಲಗೆ "ಸೋಮಿ ಎಲೇ........" ಎಂದ.

"ಎಲೆ ಇಂದು ಬೇಡ; ತರಿಸಿದ್ದೇನೆ."

"ಅಲ್ಲ. ನನ್ನ ಹತ್ತರ ಎಲೆ ತಕ್ಕೊಂಡು ಬಂದ್ರು; ನಿಮ್ಮ ಮೋಟರ್ ನಡಿಸೋರಂತೆ."

"ಏನು, ದುಡ್ಡು ಕೊಡಲಿಲ್ಲವೇ ಕಳ್ಳಸೂಳೇಮಗ?"

"ಅಲ್ಲ ಸೋಮಿ! ಒಂದಕ್ಕೆ ಹತ್ತು ಕೊಟ್ರು. ಏನ್ಹೇಳಲಿ. ಅರ್ಧಾಣೆಗೆ ಬದಲಾಗಿ ರೂಪಾಯಿ ಕೊಟ್ರು. ತಕ್ಕೊಳ್ಳಿ! ನಿಮ್ಮ ರೂಪಾಯಿ. ನನ್ನ ಕಾಸುಮಾತ್ರ ಕೊಡಿ."

"ನೀನೇಯಪಾ! ಕಲಿಯುಗದ ಧರ್ಮರಾಜ! ಎಂಥ ಮನುಷ್ಯನೋ ನೀನು; ಬೇಡ ರಾಮಪ್ಪ! ಈ ರೂಪಾಯಿ ನೀನೇ ತೆಗೆದುಕೊಂಡು ಹೋಗು" ಏನು ಹೇಳಿದರೂ ರಾಮಪ್ಪನು ಒಪ್ಪಲಿಲ್ಲ. "ನನ್ಕಷ್ಟಾ ನೋಡಿ ಸೋಮಿ ಕೊಡಬೇಕು, ನಾನು ತಿನ್ನಬೇಕು" ಎಂದ. ಕೊನೆಗೂ ಎಲೆರಾಮಪ್ಪನು ಆಫೀಸರರಿಂದ ತೆಗೆದು ಕೊಂಡುದು ಆರೇಕಾಸು—ತನ್ನ ಎಲೆಯ ಬೆಲೆಮಾತ್ರ. ಒಂದು ಕಾಸನ್ನೂ ಹೆಚ್ಚಿಗೆ ತೆಗೆದು ಕೊಳ್ಳಲಿಲ್ಲ. ಆಫೀಸರು ಅವನ ನಡತೆಗೆ ಬೆರಗಾಗಿ ಹೇಳಿದರು: "ಅಹಹಾ! ಈ ಹಳ್ಳಿಗನ ಸೌಜನ್ಯವೆಂತಹದು!"

ಇದಾದ ಮೇಲೆ ರಾಮಪ್ಪನಿಗೆ ಪೇಟೆಯಲ್ಲಿ ಗಿರಾಕಿಗಾಗಿ ಕಾದುವ ಪ್ರಸಂಗವು ತಪ್ಪಿಹೋಯಿತು, ಶ್ರೀಮಂತರೆಲ್ಲರೂ ಕೂಡಿ "ದಿನ ನಮ್ಮೊಬ್ಬೊಬ್ಬರಿಗೆ ಇಂತಿಷ್ಟು ಕಟ್ಟು ಮುಟ್ಟಿಸು" ಎಂದು ನಿಯಮಿಸಿದರು.

* * *

ಹೀಗೆ ಐದು ವರ್ಷವಾಯಿತು. ರಾಮಪ್ಪನ ಬಡತನವೇನು ಹಿಂಗಲಿಲ್ಲ. ಆದರೆ ಕುಡಿದ ಅಂಬಲಿಯೊಂದು ಸೋರದ ಹಾಗಾಯಿತು. ಉಪವಾಸದ ದಿವಸಗಳು ಹೆಚ್ಚಿಗೆ ಬರಲಿಲ್ಲ. ಇಂದಿನ ಯೋಚನೆಯಾಯಿತು. ಮುಂದೆ? ಮುಂದಿನ ಚಿಂತೆ ಬಂದೊಡನೆಯೇ ರಾಮಪ್ಪನು ಕುಡಿದು ಬೀಳುವನು. ನಾಲ್ಕೆಂಟು ಸಣ್ಣಸಣ್ಣ ಮಕ್ಕಳು. ಹಿರಿಯರು

CC-0. Jangamwadi Math Collection. Digitized by eGangotri

ಎಲ್ಲರೂ ಹೆಣ್ಣುಮಕ್ಕಳು. ಕಿರಿಯವನೊಬ್ಬ ಹುಡುಗ. ನಾಲ್ಕು ವರ್ಷ ಮಾತ್ರವಾಗಿತ್ತು. ಇನ್ನು ಅವನು ದೊಡ್ಡವನಾಗಿ ದುಡಿಯಬೇಕು, ರಾಮಪ್ಪನು ಕುಳಿತು ತಿನ್ನಬೇಕು. ಸಾಧ್ಯವೇ ? ರಾಮಪ್ಪನಿಗೆ ಈಗಲೇ ಕೈಕಾಲುಗಳು ಸೋತುಹೋಗಿದ್ದುವು. ಐವತ್ತು ವರ್ಷವಾದ ಮಾತ್ರಕ್ಕೆ ಹಳ್ಳಿಗರಿಗೇನು ಪರಮಾಯುಷ್ಯವಾಗಲಿಲ್ಲ. ಆದರೆ ದಾರಿದ್ರ್ಯದ ಬೆಂಕಿಯಿಂದ ರಾಮಪ್ಪನ ಶಕ್ತಿಯು ಬೆಂದುಹೋಗಿತ್ತು. ಅವನಿನ್ನು ಬಡತನದೊಡನೆ ಹೋರಾಡಲಾರ. ಅಷ್ಟು ದೊಡ್ಡ ಹೊರೆ ಹೊತ್ತುಕೊಂಡು ಅಡವಿಯಲ್ಲಿ ಹೋಗುವುದು ಅವನಿಂದ ಅಶಕ್ಯ. ಪೂರಾ ತ್ರಾಣಗುಂದಿದ್ದನು. "ಮುಂದೇನು ? ಸಂಸಾರವನ್ನು ಸಾಗಿಸುವದು ಹೇಗೆ ? ಹೆಂಡಿರು-ಮಕ್ಕಳನ್ನು ಯಾರು ಹೊರೆಯುವರು ? ನಮಗೇನು ಆಸ್ತಿಯಿದೆಯೇ ? ಗಂಟಿದೆಯೇ? ಕುಳಿತು ತಿಂದರೆ ....ಇಲ್ಲ ಸಾಧ್ಯವಿಲ್ಲ. ದುಡಿಯಬೇಕು? ಹೇಗೆ ದುಡಿಯಲಿ?" ಎಂಬ ಯೋಚನೆಯನ್ನು ಮನಸ್ಸಿಗೆ ತಗಲಿಸಿಕೊಂಡುದರಿಂದ, ಇದ್ದ ಶಕ್ತಿಯೂ ಮಣ್ಣುಪಾಲಾಯಿತು. ಇನ್ನು ಅವನು ಹಣ್ಣಾಗಲು ಜಾಗವುಳಿಯಲಿಲ್ಲ.

ಒಂದು ದಿನ ರಾಮಪ್ಪನು ಹೊರೆಹೊತ್ತುಕೊಂಡು ಹೋಗುವಾಗ, ಕಣ್ಣಿಗೆ ಕತ್ತಲು ಕವಿಯಿತಂತೆ; ತಲೆಯೆಲ್ಲ ತಿರುಗಿತಂತೆ. ಮುಂದೆ ಹೋಗಲು ಸಾಧ್ಯವಿಲ್ಲದೆ ಅಲ್ಲೇ ಒಂದು ಕಟ್ಟೆಯ ಮೇಲೆ ಹೊರೆಯಿಳಿಸಿ ಬಿದ್ದುಕೊಂಡ. ಕೆಲಹೊತ್ತಿನಲ್ಲಿ ಅವನ ಚಿಂತೆಯು ಗಾಢನಿದ್ರೆಯಲ್ಲಿ ರೂಪಾಂತರವಾಯಿತು.

ಅಲ್ಲಿಯೆ ಮುಂದೆ 'ತಿರುಗಣಿ ಜಟ್ಗ'ವಿತ್ತು. ತಿರುಗಣಿ ಜಟ್ಗವೆಂದರೆ ಸಾಮಾನ್ಯವಲ್ಲ. ಅದು ಮನುಷ್ಯರನ್ನೇ ಆಹುತಿ ತೆಗೆದುಕೊಳ್ಳುವ ಭಯಂಕರ ಜಟ್ಗ. ಇಡಿಯೆ ಸೀಮೆಯಲ್ಲಿ ಅದರ ಪ್ರಸಿದ್ಧಿಯಿತ್ತು. ದೂರದಿಂದೆಲ್ಲ ಪೂಜೆ-ಪುರಸ್ಕಾರ, ಹರಕೆ-ಹಾಡುಗಳು ಬರುತ್ತಿದ್ದುವು. ಹೆಣ್ಮಕ್ಕಳ ಮೈ-ಕೈ ಸುಖವಾಗಿರಬೇಕಾದರೆ, ವರ್ಷಕ್ಕೊಂದು ಬಾಳೆಹಣ್ಣು ಕೊನೆ, ಅರಿಸಿಣ ಕುಂಕುಮ, ಹೂ-ಸಿಂಗಾರ ಒಪ್ಪಿಸಲೇಬೇಕು. ಏನಿಲ್ಲವೆಂದರೂ ಇಲ್ಲಿ ವರ್ಷಕ್ಕೆ ನೂರಾರು ಕುರಿ-ಕೋಳಿಗಳು ಕೊಲ್ಲಿಸಿಕೊಳ್ಳುತ್ತಿದ್ದುವು. ಜಾಣರು (ಮಾಂತ್ರಿಕರು) ತಮ್ಮ ಮಂತ್ರಶಕ್ತಿಯಿಂದ ಸಹಾಯದ ದೆವ್ವಗಳನ್ನು ಬಂಧಿಸಿಡುವುದು ಇಲ್ಲಿಯೇ. ಒಕ್ಕಲಿಗರಂತೂ ತಿರುಗಣಿ ಜಟ್ಗವೆಂದರೆ ಗಡಗುಟ್ಟಿ ನಡುಗುವರು. ಇಲ್ಲಿ ಯಾರೂ ಒಬ್ಬೊಬ್ಬರೇ ತಿರುಗುವುದಿಲ್ಲ. ಪೂಜಾರಿಯಾದರೂ ನಾಲ್ಕೈದು ಜನರೊಡನೆ ಮಧ್ಯಾಹ್ನಕಾಲದಲ್ಲಿ ಬಂದು, ಪೂಜೆಮಾಡಿ ಹಾಗೇ ನಡೆದುಬಿಟ್ಟ.

ತಿರುಗಣಿ ಜಟ್ಗದಲ್ಲಿ ಒಂದು ವೈಶಿಷ್ಟ್ಯವಿತ್ತು. ಅದು ಎಲ್ಲದರ ಹಾಗೆ ಒಂದು ಅಂಕಡೊಂಕು ಕಲ್ಲಲ್ಲ. ಪಾಷಾಣವನ್ನು ಸಾಣೆಹಿಡಿದು ನುಣುಪಾಗಿಮಾಡಿದ ಹಾಗಿತ್ತು. ನಾಲ್ಕರಿಂದ ಏಳಡಿ ಎತ್ತರದ ಇಂತಹ ಐವತ್ತು ಅರುವತ್ತು ಶಿಲೆಯ ಕಂಬಗಳು ಗುಂಪಾಗಿದ್ದುವು. "ತಿರುಗಣಿ" ಎಂಬ ಶಬ್ದಾರ್ಥಕ್ಕೂ ಇದಕ್ಕೂ ಸಂಬಂಧವಿದೆಯೇ? ಇಲ್ಲವೆ? ಯಾರಿಗೂ ಗೊತ್ತಿಲ್ಲ; ಇದರ ವಿಷಯದಲ್ಲಿ ವಿಧವಿಧದ ದೆವ್ವದ ಸುದ್ದಿಗಳು ಮಾತ್ರ ಊರ ತುಂಬಾಗುತ್ತಿದ್ದುವು.

ರಾಮಪ್ಪನು ಮಧ್ಯಾಹ್ನದಲ್ಲಿ ಮಲಗಿದವ ಸಂಜೆಗೆ ಎದ್ದ. ಆಗ ಒಂದು ಅರ್ಧತಾಸು ಹೊತ್ತು ಇರಬಹುದು. 'ಇಷ್ಟು ಹೊತ್ತಿನವರೆಗೂ ತಾನು ಹೇಗೆ ಮಲಗಿದೆ ?' ಎಂಬುದು ಅವನಿಗೆ ಆಶ್ಚರ್ಯ. ಆ ಆಶ್ಚರ್ಯದ ಮೊದಲ ನೋಟಕ್ಕೆ ತಿರುಗಣಿ ಜಟ್ಗದ ದೃಶ್ಯವು ಮತ್ತಿಷ್ಟು ಕಣ್ಣಿಗೆ ಹಬ್ಬವನ್ನುಂಟುಮಾಡಿತು. ಆಗ ಅವನಿಗೊಂದು ವಿಲಕ್ಷಣ ಯೋಚನೆ ಬಂತು. "ತಿರುಗಣಿ ಜಟ್ಗವೆಂದರೆ ಇದರ ಅರ್ಥವೇನಿರಬಹುದು? " ಎಂದು. ಜಟ್ಗಕ್ಕೆ ತಿರುಗಣಿಯಿರುವುದೇ ? ಇರಬಹುದೇ ? ಹಾಗಿರುವುದು ಸಾಧ್ಯವೇ ?" ಹೀಗೆ ಪ್ರಶ್ನೆಯ ತೊಡಕನ್ನು ಹಿಂದುಮುಂದಾಗಿ ವಿಮರ್ಶಿಸುತ್ತಿರುವಾಗ, ಬಾಲ್ಯದ ಕೆಲವು ಭಾವನೆಯು ಅವನಿಗೊಂದು ರೂಪುಕೊಟ್ಟಿತು. ಚಿಕ್ಕಂದಿನಲ್ಲಿ ಅಜ್ಜಿಯು "ತಿರುಗಣಿ ಕುದುರೆ" "ತಿರುಗಣಿ ಗೂಡುದೀಪ" ಇವುಗಳ ಸುದ್ದಿಯನ್ನು ಕತೆಯಲ್ಲಿ ಹೇಳುತ್ತಿದ್ದಳು. ಅವೆಲ್ಲವೂ ತಿರುಗುತ್ತಿದ್ದುವು. ಹಾಗಾದರೆ ಈ ಜಟ್ಗವು ತಿರುಗಬಾರದೇಕೆ ? ಇದನ್ನು ತಿರುಗಿಸಲು ಎಲ್ಲಿಯಾದರೂ ಕೀಲು ಇರಬಾರದೇಕೆ ? ರಾಮಪ್ಪನ ಹೊಸ ಆಶೆಯು ತರಂಗ-ತರಂಗವಾಗಿ ಹೃದಯವನ್ನೆಲ್ಲಾ ಕಲಕಿತು. ಅವನು ತನ್ನಾಶೆಯನ್ನು ಕೃತಿಯಲ್ಲಿ ತರಲು ಹವಣಿಸಿದನು. ಅದು ಬಗ್ಗನೆ ಸಾಧ್ಯವಾಗಲಿಲ್ಲ. ಹಿಂದುವಾದ ರಾಮಪ್ಪನು ಜಟ್ಗವನ್ನು ಕೀಳುವುದೆಂದರೆ, ಒಂಟಿಗನಾದ ಕಳ್ಳನು ಹಗಲಿನಲ್ಲಿ ರಾಜನ ರತ್ನಭಾಂಡಾರವನ್ನೊಡೆಯುವುದು ಎಷ್ಟು ಕಷ್ಟವೋ-ಅಷ್ಟು ಕಷ್ಟದ ಮಾತಾಗಿತ್ತು. ಕಡೆಗವನ ಭಾವನಾಲಹರಿಯು ಹೃದಯದ ಕಟ್ಟನ್ನೊಡೆದ ಮೇಲೆ, ತಾನೇನು ಮಾಡುವನೆಂಬ ಅರಿವಿಲ್ಲದೆ, ಜಟ್ಗದ ಬಳಿಗೆ ಬಂದು ಬಗ್ಗನೆ ಒಂದು ಕಂಬವನ್ನು ತಿರುಗಿಸಿದನು. ಅದು ನೆಲದಿಂದ ಒಂದಡಿ ಎತ್ತರದಲ್ಲಿ, ರಾಮಪ್ಪನ ಕೈಕಸುವಿಗೆ "ಗಿರ್ರನೆ" ತಿರುಗಿತು. ಅವನು ಇಲ್ಲಿಯೇ 'ಮಲಸುತ್ತ'

CC-0. Jangamwadi Math Collection. Digitized by eGangotri

ಇರುವುದೆಂದು ಗೊತ್ತುಮಾಡಿದನು. ಕ್ರಮವಾಗಿ ತಿರುಗಿಸಲು ಮೇಲ್ಭಾಗವು ಬೇರೆಯಾಯಿತು. ಒಳಗೆ ಕೈಹಾಕಿ ನೋಡಿದನು. ಬರಿಯೆ ಪೊಳ್ಳು. ಮತ್ತೇನಿಲ್ಲ. ಹೀಗೆ ಮೂರು ನಾಲ್ಕು ಕಂಭವಾಯಿತು. ಈ ಹೊಸ ಶೋಧದದಲ್ಲಿರುವಾಗಲೆ ಅವನ ದೃಷ್ಟಿಯು,ಅದನ್ನು ಸೂಕ್ಷ್ಮವಾಗಿ ನಿರೀಕ್ಷಿಸುವುದರಲ್ಲಿ ಹೋಯಿತು. ಮಧ್ಯದಲ್ಲಿದ್ದ ಸಣ್ಣ ಕಂಬವು, ಕೈಯಾಡಿಮುದರಿಂದ ಹೆಚ್ಚಾಗಿ ನುಣುಪಾಗಿತ್ತು. ರಾಮಪ್ಪನಿಗೆ ಏನು ಕಂಡಿತೋ ಏನೋ ! ಮೆಲ್ಲಗೆ ಬಂದು, ಅದನ್ನು ಸಾವಧಾನವಾಗಿ ತಿರುಗಿಸಿದನು. ಒಳಗೆ ನೋಡುತ್ತಾನೆ—ನಾಣ್ಯದ ರಾಶಿ—ಹರಳುಕಲ್ಲುಗಳಂತೆ. ಚಿನ್ನವು ಬಂಗಾರದೊಡನೆ ಕೂಡಿಕೊಂಡಿತ್ತು. ಆಗ ರಾಮಪ್ಪನಿಗೆ ಎಷ್ಟು ಆನಂದವಾಗಬೇಕು ? ಅವನು ಅದು ಅಲ್ಲಿ ಹೇಗೆ ಬಂದಿತೆಂಬುದನ್ನು ಯೋಚಿಸಲಿಲ್ಲ. ದೇವರು ತನಗಾಗಿ "ಹಿರಣ್ಯಗರ್ಭ" ವನ್ನು ಇಲ್ಲಿ ಉಂಟುಮಾಡಿದನು....ಎಂದು ತಿಳಿದನು.

* * *

ಭಟಕಳದಲ್ಲಿ ರಾಮಪ್ಪನ ಹೊಸಮನೆಯನ್ನು ನೋಡಲು ಹಲವರು ಬಂದು ಹೋಗುತ್ತಿದ್ದಾರೆ. ಅಷ್ಟು ದೊಡ್ಡ—ವಿಶಾಲವಾದ—ವೈಭವದ ಮನೆಯು ಭಟಕಳ ಪೇಟೆಯಲ್ಲಿಯೇ ಇಲ್ಲ. ಎಲೆಯ ರಾಮಪ್ಪನು ರತ್ನದ ರಾಮಪ್ಪನಾದ. ರಾಮಪ್ಪನಿಗೆ ಈ ಐಶ್ವರ್ಯವು ಹೇಗೆ ಬಂತು ? ಎಂಬುದು ಒಂದೆರಡು ವರ್ಷದ ವರೆಗೆ ಯಾರಿಗೂ ತಿಳಿಯಲಿಲ್ಲ. ಗುಟ್ಟು ಗೊತ್ತಾದ ಮೇಲೆ ಹಲವರು 'ತಿರುಗಣಿ ಜಟ್ಗ'ವನ್ನು ತಿರುಗಿಸಿ ಕೈನೋವುಮಾಡಿಕೊಂಡರು. ಫಲವೇನು ? ಎಲ್ಲರಿಗೂ ಸಿಗು ಎಂದರೆ ಸಿಗುತ್ತದೆ ? ಯಾವ ಕಲ್ಲಿನಲ್ಲಿ ಯಾವ ರತ್ನವಿದೆಯೋ, ಯಾರಿಗೆ ಸಿಕ್ಕಬೇಕೋ! ಯಾರೇನು ಬಲ್ಲರು !

'ಜಟ್ಗ' ಎಂದರೆ ಜಟ್ಟಿಗ ಎಂಬುದರ ಗ್ರಾಮ್ಯರೂಪ. ಜಟ್ಟಿಗರ ಸ್ಮಾರಕಾರ್ಥವಾಗಿ ಹುಗಿದ ಕಲ್ಲುಗಳೇ ಮುಂದೆ 'ಜಟ್ಗ'ವಾಯಿತು. ಅಥವಾ ಇಲ್ಲಿ ಇನ್ನೊಂದು ಶಂಕೆಯುಂಟಾಗಿ 'ಹೀಗೂ ಇರಬಹುದೇ ?' ಎನ್ನಿಸುತ್ತದೆ: ಹಿರಿಯರು ಸಂಪತ್ತನ್ನು ಹೂಳಿಟ್ಟು, ಮೇಲೊಂದು ಕಲ್ಲನ್ನು ಜಡಿಯುತ್ತಿದ್ದರು. ಜಡಿದ ಕಲ್ಲಿನಲ್ಲಿಯೇ ಸಂಪತ್ತನ್ನೂ ಹೂಳಿಡುತ್ತಿದ್ದರು. ಅದೇ ಮುಂದೆ 'ಜಡ್ದ ಕಲ್ಲು' 'ಜಟ್ಕದ ಕಲ್ಲು' 'ಜಟ್ಕ' ಎಂದು ರೂಪಾಂತರವಾಯಿತೇನೋ !

---


ಕೂದಲಿಗೆ ಪುಷ್ಟಿ ! ನಿದ್ರೆಗೆ ಉತ್ತೇಜನ !! ಕಣ್ಣುಗಳಿಗೆ ಆರೋಗ್ಯ !!!

**ಕುಂತಲ—ವಿಕಾಸ ತೈಲ**

ಆಯುರ್ವೇದ ಶಾಸ್ತ್ರಪದ್ಧತಿಯಿಂದ ಸಿದ್ಧಪಡಿಸಿದುದು.

ಈ ತೈಲವನ್ನು ಉಪಯೋಗಿಸುವದರಿಂದ ಅಕಾಲದಲ್ಲಿ ಬರುವ ನರೆಗೂದಲುಗಳು ಪೂರ್ಣವಾಗಿ ಕಪ್ಪಾಗುವವು. ಕೂದಲು ಉದುರುವುದು ತೀವ್ರ ನಿಲ್ಲುವದು. ಮತ್ತು ಪುನಃ ದಟ್ಟಾಗಿ ಬೆಳೆಯುವದು. ಸಾವಿರಾರು ಜನರು ಉಪಯೋಗಿಸಿ ಮನಗಂಡಿದ್ದಾರೆ. ಅನೇಕ ಡಾಕ್ಟರರೂ ಶಾಸ್ತ್ರಜ್ಞರೂ ಶಿಫಾರಸು ಮಾಡಿದ್ದಾರೆ.

೪ ಔಂಸಿನ ೧ ಬಾಟ್ಲಿಗೆ ೦—೧೨—೦. ಪೋಷ್ಟಿನಿಂದ ಮುಂಗಡ ೧-೦-೦ ಮಾತ್ರ.

ವರ್ತಕರಿಗೆ ವಿಪುಲ ಕಮಿಶನ್.

ಮಾಧವ ಫಾರ್ಮಾಸ್ಯುಟಿಕಲ್ ಆ್ಯಂಡ ಪರಫ್ಯೂಮರಿ ವರ್ಕ್ಸ್, ಧಾರವಾಡ


CC-0. Jangamwadi Math Collection. Digitized by eGangotri

# ಹೂಗಳಲ್ಲಿ ಕಾಣುವ ಕೆಲವು ವಿಚಿತ್ರ ವಿಷಯಗಳು

ಲೇಖಕ: ಶ್ರೀ. ಬಿ. ಸಂಜುಂಡಪ್ಪ, ತ್ಯಾಮಗೊಂಡ್ಲು.



ಜೀವಿಗಳಿಗೆ ಸಹಜವಾದ ಹುಟ್ಟು, ಸಾವು, ಬೆಳವಣಿಗೆ, ಸಂತಾನೋತ್ಪತ್ತಿಗಳು ಸಸ್ಯಗಳಲ್ಲಿಯೂ ಕಂಡುಬರುತ್ತವೆ. ಸಸ್ಯಗಳ ಸಂತಾನೋತ್ಪತ್ತಿಗೆ ಸಂಬಂಧಿಸಿದ ಸಂಗತಿಗಳನ್ನು ಈ ಲೇಖನ-ದಲ್ಲಿ ವಿವರಿಸಲಾಗಿದೆ. ಸ್ತ್ರೀಪುರುಷರ ರಜಸ್ಸು-ವೀರ್ಯಗಳ ಸಂಯೋಗದಿಂದಲೇ ಪ್ರಾಣಿಗಳಲ್ಲಿ ಪಿಂಡೋತ್ಪತ್ತಿಯಾಗುವಂತೆ ಸಸ್ಯಗಳಲ್ಲಿಯೂ ಆವೆರಡರ ಸಂಯೋಗದಿಂದಲೇ ಬೀಜೋತ್ಪತ್ತಿಯಾಗುವುದು.



ನಿಸರ್ಗದೇವತೆಯ ಮಡಿಲಿನಲ್ಲಿ ಅಡಗಿರುವ ಅನೇಕ ತತ್ತ್ವಗಳೂ ವೈಚಿತ್ರ್ಯಗಳೂ ವಿಜ್ಞಾನಸೂರ್ಯನ ಕಿರಣಗಳ ಬೆಳಕಿನಲ್ಲಿ, ಈಗೀಗ ಸ್ಪಷ್ಟವಾಗಿ ಕಾಣಬರುತ್ತಿವೆ. ಇದರಿಂದ ಚೇತನಾಚೇತನ ವಸ್ತುಸ್ವರೂಪದ ತಿಳಿವಳಿಕೆಯು ದಿನೇದಿನೇ ಹೆಚ್ಚು ಹೆಚ್ಚಾಗಿ ತಿಳಿಯುತ್ತಿದೆ. ಚೇತನವಸ್ತು-ಗಳಾದ ಸಸ್ಯಗಳ ವಿಷಯವನ್ನಿಷ್ಟು ಇಲ್ಲಿ ಹೇಳಲು ಪ್ರಯತ್ನಿ-ಸಲಾಗಿದೆ.

ಸಸ್ಯಗಳು ಜೀವವುಳ್ಳವು—ಎಂದು ಎಲ್ಲರೂ ಬಲ್ಲರು. ಆದುದರಿಂದ ಜೀವವುಳ್ಳ ಪ್ರಾಣಿಗಳು ಪ್ರದರ್ಶಿಸುವ ಎಲ್ಲಾ ಕಾರ್ಯಗಳನ್ನೂ ಸಸ್ಯಗಳು ಪ್ರದರ್ಶಿಸಬೇಕಷ್ಟೆ. ಅಂತೆಯೇ ಜೀವಿಸಹಜವಾದ ಹುಟ್ಟು, ಸಾವು, ಬೆಳೆವಣಿಗೆ ಮತ್ತು ಸಂತಾನೋತ್ಪತ್ತಿ— ಈ ಗುಣಗಳು, ಅವುಗಳಲ್ಲಿಯೂ ಕಂಡುಬರುತ್ತವೆ. ಇತರ ಚರಪ್ರಾಣಿಗಳಿಗೂ ಸಸ್ಯಗಳಿಗೂ ಕೆಲವು ರೀತಿಗಳಲ್ಲಿ ವ್ಯತ್ಯಾಸಗಳು ಕಾಣಬರುವುವಾದರೂ, ಅವುಗಳ ಜೀವನಕ್ರಮಗಳು ಪರಸ್ಪರ ಹೋಲುತ್ತವೆ. ಪ್ರಾಣಿಗಳಲ್ಲಿ, ಅವುಗಳ ಜೀವನಮಾರ್ಗದಲ್ಲಿ, ಸನ್ನಿವೇಶ ಕಾಲವನ್ನನುಸರಿಸಿ ಅನೇಕ ಮಾರ್ಪಾಡುಗಳಾಗುವುವು. ಸಸ್ಯಗಳ ಜೀವನಮಾರ್ಗದಲ್ಲಿಯೂ ಸನ್ನಿವೇಶಕಾಲಗಳಿಗೆ ತಕ್ಕಂತೆ ಅನೇಕ ಮಾರ್ಪಾಡುಗಳಾಗುವುವು. ಆದರೆ ನಾವು ಪ್ರಾಣಿಗಳ ರೀತಿಯನ್ನು ನೋಡಿರುವಷ್ಟು ಹೆಚ್ಚಾಗಿ ಈ ಸಸ್ಯಗಳನ್ನು ನೋಡಿರುವುದಿಲ್ಲ; ಅವುಗಳನ್ನು ನೋಡಿದಾಗ ಅವು ನಮ್ಮ ಕಣ್ಣಿಗೆ ಆಶ್ಚರ್ಯಕರ ವಿಷಯಗಳಾಗಿಯೇ ಕಾಣುತ್ತವೆ. ಪ್ರಕೃತದಲ್ಲಿ— ಸಂತಾನೋತ್ಪತ್ತಿ ( Re-production )ಯ ವಿಷಯದಲ್ಲಿ—ಸಸ್ಯಗಳು ಹೇಗೆ ಇತರ ಚರಪ್ರಾಣಿಗಳಂತೆಯೇ ಹೆಚ್ಚು ಗಮನಾರ್ಹವಾಗಿವೆ-ಯೆಂಬುದನ್ನು ಮಾತ್ರ ಪರಿಶೀಲಿಸೋಣ.

ಬಹುಭಾಗ ಸಸ್ಯಗಳಲ್ಲಿ ಸಂತಾನೋತ್ಪತ್ತಿಗೆ ಸಂಬಂಧಪಟ್ಟ ವಸ್ತುಗಳು ಹೂಗಳು. ಹೂಗಳಲ್ಲಿರುವ ಅವಯವ-ಗಳನ್ನು ಮುಖ್ಯವಾಗಿ ಎರಡು ಭಾಗವಾಗಿ ವಿಂಗಡಿಸ-ಬಹುದು. ಅನಾವಶ್ಯಕವಾದ (Non-Essential) ಭಾಗ-ಗಳು, ಆವಶ್ಯಕವಾದ ( Essential ) ಭಾಗಗಳು ಎಂದು. ಹೂವಿನ ಪಾತ್ರದಳಗಳು ( Sepals ), ಮತ್ತು ಹೂವಿನ ರೇಕು ಅಥವಾ ಎಸಳುಗಳು (Petals)—ಇವು ಅನಾವಶ್ಯಕ ಭಾಗಗಳು. ಪರಾಗಕೋಶ ( Pollen Box ) ಮತ್ತು ಶಲಾಕಾಗ್ರ ( Stigma ) ಶಲಾಕೆ ( Style ), ಗಳಿಂದ ಕೂಡಿದ ಅಂಡಾಶಯ ( Ovary ) ಇವು ಆವಶ್ಯಕವಾದ ಭಾಗಗಳು. ಇವೆರಡೂ ಸಂತಾನೋತ್ಪತ್ತಿಯ ಕಾರ್ಯದಲ್ಲಿ ಅತಿ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಆವಶ್ಯಕ ಭಾಗಗಳನ್ನು ಹೊರಗಿನಿಂದಾಗತಕ್ಕ ತೊಂದರೆಯಿಂದ ಕಾಪಾಡುವುವು ಪಾತ್ರದಳಗಳು ಮತ್ತು ಹೂವಿನ ರೇಕು-ಗಳು. ಪರಾಗಕೋಶವು ವಿಚಿತ್ರ ಆಕೃತಿಯದು; ಅದರಲ್ಲಿ-ರುವ ಪರಾಗಧೂಳಿಯು ಅತಿ ಸೂಕ್ಷ್ಮವಸ್ತುಗಳಿಂದಾಗಿರು-ವಂತಹದು. ಪರಾಗವು (Pollen) ಪುರುಷ ಕಣ; ಇದು ಅಂಡಾಶಯದಲ್ಲಿರುವ ಸ್ತ್ರೀಕಣ ( Ovule ) ದೊಂದಿಗೆ

CC-0. Jangamwadi Math Collection. Digitized by eGangotri

ಸೇರಿ ಸಮರಸವಾದಾಗಲೇ ಬೀಜಗಳು ಉತ್ಪತ್ತಿಯಾಗ-ತಕ್ಕುದು.

ಸ್ತ್ರೀ-ಪುರುಷರ ರಜಸ್ಸು-ವೀರ್ಯಗಳ ಸಂಯೋಗದಿಂದಲೇ ಪ್ರಾಣಿಗಳಲ್ಲಿ ಪಿಂಡೋತ್ಪತ್ತಿಯಾಗುವಂತೆ, ಸಸ್ಯಗಳಲ್ಲಿಯೂ ಅವೆರಡರ ಸಂಯೋಗದಿಂದಲೇ ಬೀಜೋತ್ಪತ್ತಿಯಾಗುವು-ದೆಂಬುದು ಸಿದ್ಧಾಂತ. ಅಲ್ಲದೆ ಹಾಗೆ ಸಂಯೋಗವಾಗುವ ಸ್ತ್ರೀ-ಪುರುಷ ಕಣಗಳು ಬೇರೆ ಬೇರೆ ಸಸ್ಯಗಳವಾದರೆ— ಹಾಗೆ ಉಂಟಾಗುವ ಬೀಜವು ಉತ್ತಮ ವರ್ಗಕ್ಕೆ ಸೇರಿದು-ದಾಗುತ್ತದೆ. ಇಂತಹ ಸಂಯೋಗಕ್ಕೆ ಕೆಲವು ಸಂದರ್ಭ-ಗಳಲ್ಲಿ ಅನುಕೂಲ ಕಡಮೆ. ಏಕೆಂದರೆ ಬಹುಸಸ್ಯಗಳ ಪರಾಗಕಣ ( Pollen ) ಗಳಿಗೆ ಸ್ವತಃ ಚಲನಶಕ್ತಿ-ಯಿರುವುದಿಲ್ಲ. ಆದುದರಿಂದ ಅವುಗಳು ತಾವಿದ್ದೆಡೆಯಿಂದ ಶಲಾಕಾಗ್ರಕ್ಕೆ ಸೇರಬೇಕಾದರೆ, ಬೇರೆ ಸಹಾಯಕರು ಬೇಕೇ-ಬೇಕು. ಆದರೆ ಈ ಪರಾಗವು ಶಲಾಕಾಗ್ರಕ್ಕೆ ಸೇರಲು ಮುಖ್ಯವಾಗಿ ಎರಡು ಮಾರ್ಗಗಳುಂಟು. ಮೊದಲನೆಯದು: ಪರರ ಸಹಾಯದಿಂದ ಪರಾಗವು ಬೇರೊಂದು ಹೂವಿನ ಶಲಾಕಾಗ್ರವನ್ನು ಸೇರುವುದು (Cross-Pollination); ಎರಡನೆಯದು:—ಪರಾಗವು ಪರರ ಸಹಾಯವಿಲ್ಲದೆ, ತಾನೇ ತನ್ನ ಹೂವಿನಲ್ಲಿರುವ ಶಲಾಕಾಗ್ರವನ್ನು ಸೇರುವುದು (Self-Pollination). ಇವೆರಡರಲ್ಲಿ ಮೊದಲನೆಯದು ಬಹಳ ಸಸ್ಯವರ್ಗಗಳಲ್ಲಿ ಕಂಡುಬರುತ್ತದೆ; ಅಲ್ಲದೆ ಪ್ರಶಸ್ತ-ವಾಗಿಯೂ ಕಾಣುತ್ತದೆ.

ಒಂದು ಹೂವಿನ ಶಲಾಕಾಗ್ರವು ಮತ್ತೊಂದು ಹೂವಿನ ಪರಾಗಕಣವನ್ನು ಹೇಗೆ ಸಂಗ್ರಹಿಸುತ್ತದೆಂಬ ವಿಷಯ-ವನ್ನು ತಿಳಿಯುವುದು ಅವಶ್ಯಕ. ಪರಾಗಕಣವನ್ನು ಬೇರೊಂದೆಡೆಗೊಯ್ಯಲು ಪರರ ಸಹಾಯವು ಬೇಕೇ ಬೇಕೆಂಬ ವಿಷಯವನ್ನು ಹಿಂದೆಯೇ ತಿಳಿಸಿದೆ. ಹೀಗೆ ಸಹಾಯಮಾಡತಕ್ಕ ವಸ್ತುಗಳು ಗಮನಾರ್ಹವಾದುವೇ ಸರಿ. ಈ ಕೆಲಸವನ್ನು ಮಾಡತಕ್ಕುವು ಮುಖ್ಯವಾಗಿ ಎರಡು—ಗಾಳಿ ಮತ್ತು ಭ್ರಮರವೇ ಮೊದಲಾದ ಇತರ ಕೀಟಕಗಳು; ಕೆಲವು ಸಂದರ್ಭಗಳಲ್ಲಿ ನೀರು ಕೂಡ ಈ ಕೆಲಸವನ್ನು ಮಾಡುತ್ತದೆ.

ಗಾಳಿಯ ಸಹಾಯದಿಂದ ಪರಾಗವನ್ನು ಪಡೆಯತಕ್ಕ ಹೂಗಳು ( Wind-pollinated flowers ), ಗಾಳಿಯು ಬೇರೆ ಹೂಗಳಿಂದ ಪರಾಗವನ್ನು ತೂರಿಕೊಂಡು ಬರುವ ಸಮಯವನ್ನು ನಿರೀಕ್ಷಿಸಬೇಕಾಗುತ್ತದೆ. ಆದುದರಿಂದ ಇಂತಹ ಯೋಗವನ್ನು ಕಳೆದುಕೊಳ್ಳದಿರುವುದಕ್ಕಾಗಿ ಆ ಹೂಗಳ ಶಲಾಕಾಗ್ರವು ( Stigma ) ಅನೇಕ ರೀತಿಯಿಂದ ಮಾರ್ಪಾಡಾಗಿರುತ್ತದೆ. ಶಲಾಕಾಗ್ರವು ವಿಶಾಲವಾಗಿ ವಿಸ್ತರಿಸುವುದರಿಂದ, ಅದು ಗಾಳಿಯಲ್ಲಿ ತೂರಿಬರುವ ಪರಾಗಕಣವನ್ನು ಸುಲಭವಾಗಿ ಗ್ರಹಿಸುತ್ತದೆ. ಅಲ್ಲದೆ ಅಂತಹ ಹೂಗಳಲ್ಲಿ ಪರಾಗವು ಹೆಚ್ಚು ಪ್ರಮಾಣದಲ್ಲಿ ಉತ್ಪತ್ತಿಯಾಗಬೇಕು. ಏಕೆಂದರೆ:— ಹಾಗೆ ಗಾಳಿಯಲ್ಲಿ ತೂರಿಬರುವ ಪರಾಗಧೂಳಿಯಲ್ಲಿ ಸ್ವಲ್ಪಭಾಗ ಮಾತ್ರ ಶಲಾಕಾಗ್ರದ ಮೇಲೆ ಬೀಳಬಹುದು; ಉಳಿದುದೆಲ್ಲಾ ನಷ್ಟ ವಾಗಬಹುದು. ಹೀಗಾಗತಕ್ಕ ನಷ್ಟವನ್ನು ತಪ್ಪಿಸುವುದ-ಕ್ಕಾಗಿಯೇ ಅನೇಕ ಸಂದರ್ಭಗಳಲ್ಲಿ ಹೂಗಳು ಎಲೆಗಳಿಂದ ಪ್ರತ್ಯೇಕಿಸಲ್ಪಟ್ಟು ಹೊರಗೆ ಚಾಚಿಕೊಂಡಿರುತ್ತವೆ; ಹೀಗಿರುವುದರಿಂದ ಪರಾಗವು ಇತರ ಹೂಗಳ ಶಲಾಕಾಗ್ರ-ದೊಂದಿಗೆ ಸೇರುವುದಕ್ಕೆ ತಕ್ಕ ಅನುಕೂಲವೂ ಉಂಟು. ಕೆಲವು ಸಸ್ಯಗಳಲ್ಲಿ ಹೂಬಿಡುವ ಋತುವಿನಲ್ಲಿ ಎಲೆಗಳು ಉದುರಿಹೋಗುವುದೂ ಈ ಉದ್ದೇಶದಿಂದಲೇ. ಇಂತಹವು-ಗಳ ಪರಾಗಕಣಗಳು ಗಾಳಿಯಲ್ಲಿ ಸುಲಭವಾಗಿ ಹಾರಿ-ಹೋಗಲು ತಕ್ಕಂತೆ ನುಣುಪಾಗಿಯೂ, ಹಗುರಾಗಿಯೂ ಒಣಗಿದಂತೆಯೂ ಇರುತ್ತವೆ. ಹಿಂದೆ ತಿಳಿಸಿದಂತೆ ಅವುಗಳ ಶಲಾಕಾಗ್ರವೂ ಕವಲುಕವಲಾಗಿಯೂ, ಗೊಂಚಲು-ಗೊಂಚಲಾಗಿಯೂ, ವಿಸ್ತೃತವಾಗಿಯೂ ಇರುತ್ತದೆ. ಆದರೂ ಗಾಳಿಯಿಂದ ಪರಾಗಚಲನೆಯಾಗುವುದು ಅಷ್ಟೊಂದು ಲಾಭದಾಯಕವಾಗಿ ಕಂಡುಬರುವುದಿಲ್ಲ. ಏಕೆಂದರೆ ಈ ಬಗೆಯ ಕಾರ್ಯದಲ್ಲಿ ಬಹುಭಾಗ ಪರಾಗಧೂಳಿಯು ಪ್ರಯೋಜನಕ್ಕೆ ಬಾರದೆ ಹಾಳಾಗುವ ಸಂಭವವಿದೆ. ಆದರೆ, ಪರಾಗವು ಜೀವರಸ ( Protoplasm ) ದಿಂದಾದುದು; ಜೀವರಸವು ಕೃತಕವಾದ ವಸ್ತುವಲ್ಲ. ಆದರೂ ಈ ಬಗೆಯ ಕಾರ್ಯವು ಪ್ರಕೃತಿಯಲ್ಲಿ ಸ್ವಾಭಾವಿಕವಾಗಿ ಕಂಡುಬಂದಿದೆ.

ಇನ್ನು, ಭ್ರಮರಾದಿ ಕೀಟಕ ( insects ) ಗಳಿಂದ ಶಲಾಕಾಗ್ರವು ಹೇಗೆ ಪರಾಗವನ್ನು ಗ್ರಹಿಸುವುದೆಂಬ ವಿಚಾರವನ್ನು ತಿಳಿಯುವುದು ಅವಶ್ಯಕವಾಗಿದೆ. ಭ್ರಮರಾದಿ ಕೀಟಕಗಳಿಂದಾಗತಕ್ಕ ಕಾರ್ಯವೂ ಸುಗಮವಾಗಿ ನಡೆ-ಯಲು, ಅದಕ್ಕೆ ತಕ್ಕ ಅನುಕೂಲತೆಗಳು ಬೇಕು. ಹೂಗಳಿಗೆ ಕ್ರಿಮಿ-ಕೀಟಾದಿಗಳನ್ನು ಆಕರ್ಷಿಸಲು ತಕ್ಕ ಸಲಕರಣೆಗಳು ಬೇಕು. ಹೂವು ಪರಾಗವನ್ನೂ ಮಧು (Honey or Nectar) ವನ್ನೂ ಕೊಡುತ್ತದೆ; ಭ್ರಮರಾದಿಗಳನ್ನು ಆಕರ್ಷಿಸುವುದಕ್ಕೆ ಇದೇ ಸಾಕು; ಏಕೆಂದರೆ ಅವುಗಳ ಉದರಪೋಷಣೆಗೆ ಬೇಕಾದ ವಸ್ತುಗಳವೇ. ಆದರೆ

CC-0. Jangamwadi Math Collection. Digitized by eGangotri

ಹೂಗಳಲ್ಲಿ ಮಧುವಿದೆ ಎಂಬ ವಿಷಯ ಅವುಗಳಿಗೆ ತಿಳಿಯುವುದು ತಾನೇ ಹೇಗೆ? ಮಧುವು ಎಲ್ಲಿದೆ-ಎಂಬ ವಿಷಯವನ್ನು ಹೂಗಳೇ ತೋರ್ಪಡಿಸಿಕೊಳ್ಳುತ್ತವೆ; ಅವುಗಳಿಗಿರುವ ವಿವಿಧ ಬಣ್ಣಗಳ ವೈಚಿತ್ರ್ಯವೇ ಮಧುವನ್ನು ತೋರ್ಪಡಿಸತಕ್ಕ ಕುರುಹು.

ಒಟ್ಟಿನಲ್ಲಿ, ಹೂಗಳಿಗಿರುವ ವರ್ಣವೈಚಿತ್ರ್ಯ (Diversity of Colours) ಮತ್ತು ಅವುಗಳ ಆಕಾರವೂ, ಅಲ್ಲದೆ, ಅವುಗಳ ವಿವಿಧವಾದ ಕಂಪೂ (fragrance) ಕೀಟಕಗಳನ್ನಾಕರ್ಷಿಸಲು ತಕ್ಕ ಸಾಧನೆಗಳೆಂದು ಹೇಳಿದ ಹಾಗಾಯಿತು. ಕೆಲವು ಹೂಗಳ ಎಸಳುಗಳು (Petals) ದೊಡ್ಡುವಾಗಿಯೂ ಸ್ಪಷ್ಟವಾಗಿ ಕಾಣಿಸುವಂತೆಯೂ ಇರುತ್ತವೆ. ಒಂದು ಪಕ್ಷ ಹೂಗಳು ಸಣ್ಣವಾಗಿದ್ದರೆ, ಅಂತಹ ಸಂದರ್ಭಗಳಲ್ಲಿ ಕೀಟಕಗಳನ್ನಾಕರ್ಷಿಸುವುದಕ್ಕೆ, ಅಂತಹ ನೂರಾರು ಸಣ್ಣ ಹೂಗಳು (tube-flowers) ಒತ್ತಟ್ಟಿಗೆ ಗುಂಪಾಗಿ ಸೇರುತ್ತವೆ. ಇದರ ಸುತ್ತಲೂ ಅಗಲವಾದ ದಳಗಳುಳ್ಳ ಹೂಗಳು (ray-florets) ಸುತ್ತಲೂ ಸುತ್ತುಕೊಂಡಿರುವುವು. ಇಂತಹದನ್ನು ಸಂಯುಕ್ತ ಪುಷ್ಪಸಮೂಹ (Head-inflorescence) ವೆಂದೆನ್ನಬಹುದು—(ಉದಾಹರಣೆ: ಸೂರ್ಯಕಾಂತಿ ಹೂ, ಚೆಂಡು ಮಲ್ಲಿಗೆ ಹೂ ಮುಂತಾದುವು). ಕೆಲವು ಸಸ್ಯಗಳಲ್ಲಿ ಹೂವಿನ ಎಸಳುಗಳಿಗೆ ಪ್ರತಿಯಾಗಿ, ಅವುಗಳ ಪುಷ್ಪಪಾತ್ರ (Sepals) ಗಳೇ ಬಣ್ಣಗಳಿಂದ ಕೂಡಿ ಆಕರ್ಷಿಸುವ ಸಾಧನಗಳಾಗುತ್ತವೆ.

ವರ್ಣವೈಚಿತ್ರ್ಯ ಮತ್ತು ಮಧುರವಾದ ಕಂಪು—ಇವೆರಡು ಮಾತ್ರ ಭ್ರಮರಾದಿ ಕೀಟಕಗಳನ್ನು ಆಕರ್ಷಿಸುವ ಸಾಧನಗಳೆಂದು ನಾವು ಭಾವಿಸಬಾರದು. ಭ್ರಮರಾದಿಗಳು ಹೂಗಳನ್ನು ತಪ್ಪದೆ ಸಂದರ್ಶಿಸಬೇಕಾದರೆ, ಅವಕ್ಕೆ ಅತ್ಯುಪಯುಕ್ತವಾದ ಇನ್ನೂ ಒಂದು ವಸ್ತುವಲ್ಲಿರಬೇಕು. ಹಿಂದೆ ತಿಳಿಸಿದಂತೆ ಕೆಲವು ಕೀಟಕಗಳಿಗೆ ಮಧುವೂ ಕೆಲವಕ್ಕೆ ಪರಾಗಧೂಳಿಯೂ ಆಹಾರ. ಇವೆರಡೂ ಹೂಗಳಲ್ಲಿವೆ. ಇವುಗಳ ಆಶೆಯಿಂದಲೇ ಕೀಟಕಗಳು ಹೂಗಳನ್ನು ಸಂದರ್ಶಿಸುವುವು. ಇವುಗಳನ್ನು ಕೀಟಕಗಳು ಶೇಖರಿಸಲು ಬಂದಾಗಲೇ, ಪರಾಗವು ಶಲಾಕಾಗ್ರಕ್ಕೆ ಬಂದು ಸೇರುವುದು. ಇದನ್ನು ಹೀಗೆ ವಿಸ್ತರಿಸಬಹುದು:— ಒಂದು ಕೀಟಕವು ಒಂದು ಹೂವಿನಲ್ಲಿಗೆ ಆಹಾರಕ್ಕಾಗಿ ಹೋಗಿದ್ದಾಗ, ಆ ಹೂವಿನ ಪರಾಗಧೂಳಿಯು ಅದರ ಮೈಮೇಲೆ ಬೀಳುವುದು. ಆ ಕೀಟಕವು ಬೇರೊಂದು ಹೂವಿನೆಡೆಗೆ ಬಂದಾಗ, ಅದರ ಮೈಮೇಲಿನ ಪರಾಗಕಣಗಳು ಆ ಹೂವಿನ ಶಲಾಕಾಗ್ರದ ಮೇಲೆ ಬೀಳುವುದು. ಪರಾಗಚಲನೆಯ ಈ ಕಾರ್ಯವು ಕೀಟದ ಅರುಹಿಗೇ ಬಾರದು. ಇದು ಪ್ರಕೃತಿಯಲ್ಲಿ ಸ್ವಾಭಾವಿಕವಾಗಿ ನಡೆಯುತ್ತಲೇ ಇರುತ್ತದೆ. ಇದರಿಂದ ಕೀಟಕಕ್ಕೆ ವಿಧವಿಧವಾದ ಹೂಗಳಿಂದ ಬಗೆಬಗೆಯ ಆಹಾರವನ್ನು ಶೇಖರಿಸುವ ಯೋಗವುಂಟಾಗುವುದು; ಅಲ್ಲದೆ, ಒಂದು ಹೂವಿನಿಂದ ಮತ್ತೊಂದು ಹೂವಿಗೆ ಪರಾಗಚಲನೆಯಾಗಿ, ಬೀಜಗಳ ಉತ್ಪತ್ತಿಗೆ ಅನುಕೂಲವುಂಟಾಗುವುದು. ಈ ಬಗೆಯ ಕಾರ್ಯದಿಂದ ಸಸ್ಯಕ್ಕೂ ಕೀಟಕಕ್ಕೂ ಎರಡಕ್ಕೂ ಪ್ರಯೋಜನವುಂಟು. ಒಂದಕ್ಕೆ ಆಹಾರಸಂಚಯ; ಮತ್ತೊಂದಕ್ಕೆ ಸಂತಾನಲಾಭ. ಪ್ರಕೃತಿಯಲ್ಲಿ ಪ್ರಾಣಿವರ್ಗಕ್ಕೂ ಸಸ್ಯವರ್ಗಕ್ಕೂ ಇರತಕ್ಕ ಈ ಪರಸ್ಪರ ಸಂಬಂಧವನ್ನು ನೋಡಿದರೆ ಆಶ್ಚರ್ಯವಾಗದಿರದು.

ಈ ವಿಷಯವನ್ನು ಮುಂದುವರಿಸುವುದಕ್ಕೆ ಮೊದಲು, ಭ್ರಮರಾದಿಗಳು ಮತ್ತು ಹೂಗಳು ಮೇಲೆ ಹೇಳಿದ ಕಾರ್ಯವನ್ನು ಸುಗಮವಾಗಿ ನಡೆಯಿಸುವುದಕ್ಕೆ ಹೇಗೆ ಮಾರ್ಪಾಡಾಗಿವೆಯೆಂಬ ವಿಷಯವನ್ನು ತಿಳಿಯೋಣ. ಹೂಗಳನ್ನು ಪ್ರವೇಶಿಸತಕ್ಕುವು ಮುಖ್ಯವಾಗಿ: ಜೇನುಹುಳುಗಳು(bees), ಬಣ್ಣದ ಚಿಟ್ಟೆಗಳು (butterflies), ಪತಂಗಗಳು(moths). ಈ ಕೀಟಕಗಳೆಲ್ಲಕ್ಕೂ ಮಧುವನ್ನು ಹೀರತಕ್ಕ ಉಪಕರಣ(Proboscis)ಗಳಿರುತ್ತವೆ. ಬಣ್ಣದ ಚಿಟ್ಟೆ ಮತ್ತು ಪತಂಗಗಳಿಗಿರುವ ಈ ಉಪಕರಣಗಳು, ಉದ್ದವಾಗಿ ಸುರುಳಿ ಸುತ್ತಿಕೊಂಡಿರುತ್ತವೆ. ಹೂಗಳ ವಾಸನೆಯನ್ನು ಕಂಡುಹಿಡಿಯಲು ಅವುಗಳಿಗೆ ತಕ್ಕ ಪ್ರಾಣಶಕ್ತಿಯೂ ಇರುತ್ತದೆ. ಸುವಾಸನೆಯನ್ನು ಬೀರುವ ಹೂಗಳು ಸಾಧಾರಣವಾಗಿ ರಾತ್ರಿಯ ಹೊತ್ತಿನಲ್ಲಿ ಅರಳುತ್ತವೆ. ಇಂತಹ ಹೂಗಳಿಗೆ ಪತಂಗಗಳೇ ಸಾಧಾರಣವಾಗಿ ಬರತಕ್ಕುವು. ಹೂಗಳಿಂದ ಹೊರಹೊರಡುವ, ಜಾಗ್ರತೆಯಾಗಿ ಆರಿ ಹೋಗುವ ಬಗೆಬಗೆಯ ತೈಲಗಳು (Volatile oils) ವಾಯುವಿನಲ್ಲಿ ಪಸರಿಸಿ, ಸುವಾಸನೆಯುಂಟಾಗುವುದೆಂದು ಸಸ್ಯಶಾಸ್ತ್ರಜ್ಞರು ನಿಶ್ಚಯಿಸಿದ್ದಾರೆ. ಕೆಲವು ಕೀಟಕಗಳು ಬಹುದೂರದಿಂದಲೂ ವಾಸನೆಯನ್ನು ಗುರುತಿಸಬಲ್ಲವು.

ಹೂಗಳ ರೇಕುಗಳು ನೋಡುವುದಕ್ಕೆ ಅಂದವಾಗಿಯೂ, ಮೃದುವಾಗಿಯೂ ಮತ್ತು ಮನಸ್ಸಿಗೆ ಆನಂದವನ್ನುಂಟುಮಾಡುವಂತೆಯೂ ಇರುವುದರಿಂದ, ಅವು ಪ್ರಾಣಿಗಳನ್ನು ಬಹು ಜಾಗ್ರತೆಯಾಗಿ ಆಕರ್ಷಿಸುತ್ತವೆ. ಎಲೆ-ಬಳ್ಳಿಗಳಿಂದ ಬೇರೆಯಾಗಿ, ಅವು ಸ್ಪಷ್ಟವಾಗಿ ಕಾಣಲೆಂದೇ ಹಸಿರು

CC-0. Jangamwadi Math Collection. Digitized by eGangotri

ಮತ್ತು ಕಪ್ಪು ಬಣ್ಣವವುಗಳಿಗಿರುವುದಿಲ್ಲ. ದಳಗಳ ಜೀವ-ಕೋಶ (Cells)ಗಳಲ್ಲಿ ಹುದುಗಿರುವ ಬೇರೆಬೇರೆ ಬಣ್ಣದ ಕಣ (pigments or plastids) ಗಳಿಂದ, ಅವುಗಳು ಬೇರೆಬೇರೆ ಬಣ್ಣಗಳಿಂದ ಕಾಣುತ್ತವೆ. ರಾತ್ರಿಯಲ್ಲಿ ವಿಕಸಿಸುವ ಅನೇಕ ಹೂಗಳು ಹಳದಿ ಅಥವಾ ಬಿಳಿಯ ಬಣ್ಣದುವಾಗಿರುತ್ತವೆ. ಸಂಜೆಮಲ್ಲಿಗೆಯು ( Mirabilis ) ಸಂಜೆಯ ಹೊತ್ತಿನಲ್ಲಿ ಬಿರಿಯುವುದು; ಬಿರಿದು ಕಂಪನ್ನು ಬೀರುವುದು. ಸೂರ್ಯನು ಮುಳುಗಿದ ಸ್ವಲ್ಪಹೊತ್ತಿನಲ್ಲಿಯೇ ಬಿಳುಪು, ಹಳದಿ ಮತ್ತು ಕೆಂಪುಬಣ್ಣಗಳ ಹೂಗಳು ಕಾಣಿಸಿಕೊಳ್ಳುವುವು; ಕೀಟಕಗಳನ್ನು ಆಕರ್ಷಿಸುವುವು. ಅನೇಕ ಕೀಟಕಗಳು ಒಂದೊಂದು ಕಾಲದಲ್ಲಿ ಒಂದೊಂದು ಬಗೆಯ ಹೂಗಳನ್ನೇ ಹೊಗುವುವು. ಒಂದೇ ಹೂವಿನಲ್ಲಿ ಕೆಲವು ದಳಗಳು ಕೀಟಕಗಳನ್ನು ಆಕರ್ಷಿಸುವುವು; ಇನ್ನು ಕೆಲವು ದಳಗಳು ಕೀಟಕಗಳು ಬಂದು ಕುಳಿತುಕೊಳ್ಳಲು ತಕ್ಕಂತೆ ಮಾರ್ಪಾಟಾಗಿರುತ್ತವೆ. ಕೀಟಕಗಳು ರೆಕ್ಕೆ-ಗಳಂತಿರುವ ದಳಗಳ ಮೇಲೆ ಕುಳಿತೊಡನೆಯೇ ಅವುಗಳು ಭಾರದಿಂದ ಕೆಳಕ್ಕೆ ಹೋಗುವುವು; ಕೂಡಲೇ ಶಲಾಕಾ-ಗ್ರವೂ ಹೊರಗೆ ಚಾಚುವುದು. ಉದಾಹರಣೆಗಾಗಿ ತುಂಬೆ (Leucas Aspera)ಯ ಹೂವನ್ನು ತೆಗೆದುಕೊಳ್ಳೋಣ. ಭ್ರಮರವು ಮಧುವಿಗಾಗಿ ಬಂದು ಇದರ ಕೆಳರೆಕ್ಕೆಯ ಮೇಲೆ ಕುಳಿತಾಗ, ಶಲಾಕಾಗ್ರವೂ ಪರಾಗಕೋಶವೂ ಮೇಲಿನ ದಳದ ಹೊದಿಕೆಯಿಂದ ಹೊರಚಾಚಿ, ಆ ಮಧುಪದ ಮೈಯನ್ನು ಸ್ಪರ್ಶಿಸುವುವು. ಆ ಮಧುಪದ ಮೈಮೇಲಿರುವ ಬೇರೆ ಹೂವಿನ ಪರಾಗಕಣಗಳು ಆ ಹೂವಿನ ಶಲಾಕಾಗ್ರ-ದಿಂದ ಗ್ರಹಿಸಲ್ಪಡುವುವು. ಮತ್ತು ಆ ಹೂವಿನ ಪರಾಗ-ಕಣಗಳು ಆ ಕೀಟದ ಮೈಮೇಲೆ ಬೀಳುವುವು. ಕೀಟವು ಎದ್ದು ಹೋದಕೂಡಲೆ ಅವುಗಳು ಪುನಃ ಮೊದಲಿನ ಸ್ವರೂಪವನ್ನೇ ಹೊಂದುವುವು. ಇನ್ನೂ ಕೆಲವು ಹೂಗಳಲ್ಲಿ, ಹೀಗೆ ಒಂದು ಸಲ ಹೊರಚಾಚಲ್ಪಟ್ಟ ಶಲಾಕಾಗ್ರ-ಪರಾಗಕೋಶಗಳು ಪುನಃ ಪುನಃ ಮೊದಲಿನಂತೆ ಹೊದಿಕೆಗಳಿಂದ ಮುಚ್ಚಲ್ಪಡದೆ, ದಳಗಳು ಉದುರಿಹೋಗುವುವು. ಇಂತಹ ಹೂಗಳಿಗೆ ಭ್ರಮರವು ಒಂದು ಸಲ ಬಂದರೆ ಸಾಕು, ಬೀಜೋತ್ಪತ್ತಿಗೆ ಅನುಕೂಲವಾಗುವುದು. ಪತಂಗವು ರಾತ್ರಿಯಲ್ಲಿ ಅರಳುವ ಬಿಳಿಹೂಗಳನ್ನು ಸಂದರ್ಶಿಸುತ್ತದೆಂದು ಹಿಂದೆ ಹೇಳಿದೆ. ಅಂತಹ ಸಂದರ್ಭಗಳಲ್ಲಿ ಹೂಗಳಿಗೆ ಯಾವ ಮಾರ್ಪಾಡಿನ ಆವಶ್ಯಕತೆಯೂ ಇರುವಂತೆ ಕಾಣುವುದಿಲ್ಲ. ಸಾಮಾನ್ಯವಾಗಿ ಪತಂಗಗಳು ಇಂತಹ ಹೂವಿನ ಹತ್ತಿರದಲ್ಲಿ ಅವುಗಳಿಗೆ ಸೋಂಕುವಂತೆ ಹಾರಾಡುತ್ತಿರುತ್ತವೆ; ಆಗಲೇ ಪರಾಗ-ಸ್ಪರ್ಶವಾಗುವುದು.

ಗಾಳಿಯಿಂದ ಚಲನೆಯಾಗುವ ಪರಾಗದಂತೆ, ಕೀಟದ ಸಹಾಯದಿಂದ ಚಲನೆಯಾಗುವ ಪರಾಗವೂ ಕೆಲವು ಮಾರ್ಪಾಟುಗಳನ್ನುಂಟಾಗಿರುವುದು ಗಮನಾರ್ಹವಾದ ವಿಷಯ. ಕೀಟಗಳಿಂದ ಚಲನೆಯಾಗುವ ಪರಾಗವು ಗಾಳಿಯಿಂದ ಚಲನೆಯಾಗುವ ಪರಾಗದಷ್ಟು ಹೆಚ್ಚು ಪ್ರಮಾಣದಲ್ಲಿ ಉತ್ಪತ್ತಿಯಾಗುವುದಿಲ್ಲ ಮತ್ತು ಹಗುರಾ-ಗಿರುವುದಿಲ್ಲ. ಕೀಟದಿಂದ ಚಲನೆಯಾಗುವ ಪರಾಗ-ಕಣಗಳು ಸಾಮಾನ್ಯವಾಗಿ ಒರಟಾದ ಹೊದಿಕೆಯುಳ್ಳವಾಗಿ ಅಂಟಿಕೊಳ್ಳುವಂತಿರುತ್ತವೆ. ಇದರ ಶಲಾಕಾಗ್ರವೂ ಮೊದಲನೆಯದರಂತೆ ವಿಶಾಲವಾಗಿರಬೇಕಾದುದಿಲ್ಲ.

ಪರಾಗಚಲನೆಗೆ ಗಾಳಿ ಮತ್ತು ಕೀಟಕಗಳಂತೆ ಕೆಲ-ವೆಡೆಗಳಲ್ಲಿ ನೀರೂ ಸಹಾಯಕವಾಗಿರುವುದು. ಉದಾಹರಣೆ-ಗಾಗಿ ನೀರಿನಲ್ಲಿ ಬೆಳೆಯತಕ್ಕ "ವಾಲಿಸ್‌ನೇರಿಯ" ( Vallisnaria Spiralis) ಎಂಬ ಸಸ್ಯವನ್ನು ತೆಗೆದು-ಕೊಳ್ಳೋಣ. ಇದರಲ್ಲಿ ಸ್ತ್ರೀಸಂಬಂಧವಾದ ಶಲಾಕೆಯುಳ್ಳ ಹೂ (pistilate flower) ಬಿಡುವ ಗಿಡವೇ ಬೇರೆ; ಬರೀ ಪರಾಗವನ್ನು ಕೊಡುವ ಹೂ ( Staminate flower ) ಬಿಡುವ ಸಸ್ಯವೇ ಬೇರೆ. ಈ ಎರಡು ಜಾತಿಯ ಸಸ್ಯಗಳೂ ನೀರಿನ ತಳಭಾಗದಲ್ಲಿ ಬೆಳೆಯುತ್ತವೆ. ಪರಾಗ ಪುಷ್ಪವು ಬಲಿತ ಕೂಡಲೆ, ಅದು ತೊಟ್ಟಿನಿಂದ ಕಳಚಿ-ಕೊಂಡು ನೀರಿನ ಮೇಲ್ಭಾಗಕ್ಕೆ ಬಂದು ತೇಲುತ್ತಿರುತ್ತದೆ. ಅಷ್ಟರಲ್ಲಿ ಶಲಾಕಾಪುಷ್ಪವು ಉದ್ದವಾದ ನಾಳದಿಂದ ನೀರಿನಿಂದ ಮೇಲ್ಭಾಗಕ್ಕೆ ಬಂದು ತೇಲಾಡುತ್ತಿರುತ್ತದೆ. ನೀರಿನ ಅಲೆಗಳಿಂದ ಪರಾಗವು ತಗ್ಗಾಗಿರುವ ಶಲಾಕಾಗ್ರದ[illegible] ಬೀಳುವುದು. ಈ ಸಸ್ಯದ ಪರಾಗಕಣಗಳು ನುಣುಪಾಗಿ-ರುವುವಲ್ಲದೆ, ಗಾಳಿಯಿಂದ ಚಲನೆಯಾಗುವ ಪರಾಗದಂ[illegible] ಹೆಚ್ಚು ಪ್ರಮಾಣದಲ್ಲಿ ಉತ್ಪತ್ತಿಯಾಗುತ್ತವೆ.

ಗಾಳಿ, ಕೀಟಗಳು ಮತ್ತು ನೀರು—ಇವುಗಳ ಸಹಾಯ[illegible] ವಿಲ್ಲದೆಯೇ ಪರಾಗ ಚಲನೆಯಾಗುವುದು ಕೂಡ ಅನೇ[illegible] ಸಸ್ಯಗಳಲ್ಲಿ ಕಂಡುಬಂದಿದೆ. ಇಂತಹ ಸಸ್ಯಗಳಲ್ಲಿ ಪರ[illegible] ಚಲನೆಯು ಸ್ವಸಹಾಯದಿಂದಲೇ ನಡೆಯುತ್ತದೆ. ಹು[illegible] ಜಾತಿಗೆ ಸೇರಿದ ಕೆಲವು ಸಸ್ಯಗಳಲ್ಲಿಯೂ, ವರ್ಷ[illegible] ಬದುಕುವ ಕೆಲವು ಸಸ್ಯ (Annuals) ಗಳಲ್ಲಿಯೂ, ಇ[illegible] ಕೆಲವು ಸಸ್ಯಗಳಲ್ಲಿ ಈ ಪದ್ಧತಿಯು ರೂಢಿಯಲ್ಲಿದೆ. ದಾಸ[illegible] ಗಿಡದ ಜಾತಿಗೆ ಸೇರಿದ "ಹೈಬಿಸ್‌ಕಸ್ ಮೈಕ್ರಾಂಥ[illegible]

CC-0. Jangamwadi Math Collection. Digitized by eGangotri

ಎಂಬುದರ ಹೂವಿನಲ್ಲಿ ಶಲಾಕಾಗ್ರವು ಪರಾಗಕೋಶಗಳಿಗಿಂತಲೂ ಎತ್ತರದಲ್ಲಿರುತ್ತದೆ; ಅಲ್ಲದೆ ಅದು ಸಣ್ಣಸಣ್ಣ ಭಾಗಗಳಾಗಿ ಒಡೆದಿರುತ್ತದೆ. ಪ್ರತಿಭಾಗವೂ ಕೆಳಗಡೆಗೆ ಬಗ್ಗಿ, ಅದೇ ಹೂವಿನ ಪರಾಗಕೋಶಗಳನ್ನು ಸ್ಪರ್ಶಿಸಿ, ಪರಾಗವನ್ನು ಗ್ರಹಿಸುತ್ತದೆ. ಸಂಜೆಮಲ್ಲಿಗೆ ಹೂವಿಗೆ ಕೀಟಾದಿಗಳು ಬಾರದೇ ಹೋದ ಪಕ್ಷದಲ್ಲಿ, ಇಂತಹ "ಸ್ವಯಂ ಪರಾಗಗ್ರಹಣ" ( Self-Pollination ) ಕಾರ್ಯವು ನಡೆಯುತ್ತದೆ. ಸೂರ್ಯಕಾಂತಿ (Helianthus) ಯ 'ಸಂಯುಕ್ತಪುಷ್ಪಸಮೂಹ' ದಲ್ಲಿ ಮೂರು ಬಗೆಯ ಹೂಗಳಿರುತ್ತವೆ. ಅದರಲ್ಲೊಂದು ಬಗೆಯ ಹೂವಿನಲ್ಲಿ ಶಲಾಕಾಗ್ರವು ಎತ್ತರದಲ್ಲಿದ್ದು, ಎರಡು ಭಾಗವಾಗಿರುತ್ತದೆ. ಮೊದಮೊದಲು ಶಲಾಕೆಯು ಬೆಳೆಯತೊಡಗಿದಾಗ, ಅದು ಪರಾಗಕೋಶಗಳ ಮಧ್ಯೆಯಿರುವ ಇಕ್ಕಟ್ಟಾದ ರಂಧ್ರದಿಂದ ಮೇಲಕ್ಕೆ ಬರುತ್ತ, ಅದರ ತುದಿಯಲ್ಲಿ ಸುತ್ತುಮುತ್ತಲಿಂದಲೂ ಪರಾಗಕಣಗಳನ್ನು ಹೊತ್ತುಕೊಂಡು ಬರುತ್ತದೆ. ಶಲಾಕೆಯು ಬೆಳೆದು ಬಂದಾಗ ಅದರ ಅಗ್ರಭಾಗವು ಎರಡು ಭಾಗವಾಗಿ ಒಡೆಯುತ್ತದೆ. ಇತರ ಪುಷ್ಪಗಳ ಪರಾಗಕಣಗಳು ದೊರೆಯದಿದ್ದಲ್ಲಿ, ಕವಲೊಡೆದು ಶಲಾಕಾಗ್ರಭಾಗಗಳು ಕೆಳಗಡೆಗೆ ಬಗ್ಗಿ ಸುರುಳಿಯಂತಾಗಿ, ಅದೇ ಹೂವಿನ ಪರಾಗಕೋಶಗಳನ್ನು ಸ್ಪರ್ಶಿಸಿ, ಪರಾಗವನ್ನು ಗ್ರಹಿಸುತ್ತವೆ. 'ಯಕ್ಕ ಗ್ಲೋರಿಯೋಸ ( Yucca gloriosa) ಎಂಬ ಒಂದು ಬಗೆಯ ಸಸ್ಯವಿದೆ. ಇಲ್ಲಿ ಸ್ವಯಂ ಪರಾಗ ಸಂಯೋಗದಿಂದಲೇ ಬೀಜೋತ್ಪತ್ತಿಯಾಗುವುದಾದರೂ, ಅದರ ಪರಾಗವನ್ನು ಅಂಡಾಶಯಕ್ಕೆ ತರುವುದಕ್ಕೆ "ಪ್ರೊನೂಬ" (Pronuba) ಎಂಬ ಪತಂಗದ ಸಹಾಯವು ಬೇಕು. ಈ ಪತಂಗವು ಬಾರದಿದ್ದಲ್ಲಿ, ಈ ಸಸ್ಯದಲ್ಲಿ ಬೀಜಗಳ ಉತ್ಪತ್ತಿಯೇ ಇಲ್ಲ. ಈ ಪತಂಗವು ಆ ಸಸ್ಯದ ಪರಾಗವನ್ನು ಹೊತ್ತುತಂದು, ಅಂಡಾಶಯವನ್ನು ಕೊರೆದು ಭೇದಿಸಿಕೊಂಡು, ಅದರ ಒಳಹೊಕ್ಕು ಅಲ್ಲಿ ಮೊಟ್ಟೆಗಳನ್ನಿಡುತ್ತದೆ. ಪರಾಗದ ಸಂಯೋಗದಿಂದ ಅಂಡಾಶಯದಲ್ಲಿ ಬೀಜಗಳು ಉತ್ಪತ್ತಿಯಾಗುತ್ತವೆ. ಆದರೆ ಮೊಟ್ಟೆಯೊಡೆದು ಬೆಳೆದ ಪತಂಗದ ಮರಿಗಳು (larvæ) ಅಲ್ಲಿರುವ ಅನೇಕ ಬೀಜಗಳನ್ನು ತಿಂದುಬಿಡುತ್ತವೆ. ಹಾಗೆ ತಿಂದು ಕಳೆದುಳಿದ ಬೀಜಗಳಿಂದಲೇ ಆ ಸಸ್ಯದ ಸಂತಾನೋತ್ಪತ್ತಿಯಾಗುವುದು.

'ಸ್ವಯಂಪರಾಗಗ್ರಹಣ'ದಿಂದಾಗತಕ್ಕ ಬೀಜವು ಉತ್ತಮವಾದುದಲ್ಲವೆಂಬ ವಿಷಯವನ್ನು ಹಿಂದೆಯೇ ತಿಳಿಸಿದೆ. ಇಂತಹ 'ಸ್ವಯಂಪರಾಗ ಗ್ರಹಣ'ವು ಸಾಧ್ಯವಾಗದಿರುವಂತೆ ಅನೇಕ ಮಾರ್ಪಾಟುಗಳಾಗಿರುವುದನ್ನೂ ನಾವು ಅಲ್ಲಲ್ಲಿ ಕಾಣಬಹುದು. ಕೆಲವು ಹೂಗಳಲ್ಲಿ ಪರಾಗಕೋಶವು ಶಲಾಕಾಗ್ರದಿಂದ ದೂರವಾಗಿರುವಂತೆ ಹೊರಗಡೆಗೆ ತಿರುಗಿಕೊಂಡಿರುವುದುಂಟು. ಕೆಲವು ಸಂದರ್ಭಗಳಲ್ಲಿ ಶಲಾಕಾಗ್ರವೂ ಪರಾಗಕೋಶವೂ ಯಾವರೀತಿಯಲ್ಲೂ ಒಂದಕ್ಕೊಂದು ಸಂಪರ್ಕವಾಗದಂತಿರುವುವು. ಕೆಲವು ಸಸ್ಯಗಳಲ್ಲಿ ಶಲಾಕಾಗ್ರವು ಮೊದಲು ಬೆಳೆಯುವುವು (protogynous); ಇದಾದ ಬಹುದಿನದ ಮೇಲೆ ಪರಾಗ ಕೋಶಗಳು ಬಲಿಯುವುವು. ಇನ್ನು ಕೆಲವು ಸಸ್ಯಗಳಲ್ಲಿ ಪರಾಗಕೋಶವು ಮೊದಲು ಬಲಿತು ( protandrous ) ಪರಾಗಕಣಗಳನ್ನು ಹೊರಸೂಸುವುದು; ಆಗ ಶಲಾಕಾಗ್ರವು ಇನ್ನೂ ಎಳೆಯದಾಗಿಯೇ ಇರುವುದು. 'ಆರಿಸ್ಟೊಲೋಕಿಯ' ( Aristolochia ) ಎಂಬ ಒಂದು ಸಸ್ಯದ ಉದಾಹರಣೆಯನ್ನಿಲ್ಲಿ ಕೊಡಬಹುದಾಗಿದೆ. ಇದರ ಹೂ ಬಹು ವಾಸನೆಯುಳ್ಳದ್ದು; ಬಹುದೂರದಿಂದ ನೊಣವನ್ನು ಆಕರ್ಷಿಸುತ್ತದೆ. ಇದರ ಹೂವು ಭಿತ್ತಿಯಂತಿದೆ; ಅದಕ್ಕೆ ಒಂದು ನಾಳವಿದೆ. ನೊಣವು ನಾಳದ ಕೇಸರಸಮೂಹದಿಂದ ಆಕರ್ಷಿತವಾಗಿ, ಅದರ ಒಳಭಾಗಕ್ಕೆ ಪ್ರವೇಶಿಸುತ್ತದೆ. ಬಲಿತಿರುವ ಅದರ ಶಲಾಕಾಗ್ರವು ನೊಣದಿಂದ ತರಲ್ಪಟ್ಟ ಪರಾಗವನ್ನು ಗ್ರಹಿಸುತ್ತದೆ. ಆದರೆ ಆ ಹೂವಿನ ಪರಾಗಕೋಶವಿನ್ನೂ ಬಲಿತಿರುವುದಿಲ್ಲ. ಹೂವಿನ ನಾಳದ ಒಳಭಾಗದಲ್ಲಿರುವ ಸಣ್ಣ ಸಣ್ಣ ಕೇಸರಗಳು ಒಳಭಾಗಕ್ಕೆ ಚಾಚಿಕೊಂಡಿರುವುದರಿಂದ, ಇವು ಒಳಗೆ ಪ್ರವೇಶಿಸಿದ ನೊಣವನ್ನು ಪುನಃ ಹೊರಗೆ ಬರಲು ಅವಕಾಶಕೊಡುವುದಿಲ್ಲ; ಅದರಿಂದ ನೊಣವು ಅಲ್ಲಿಯೇ ನಿಲ್ಲಬೇಕಾಗುವುದು. ಅಷ್ಟು ಹೊತ್ತಿಗೆ ಆ ಹೂವಿನ ಪರಾಗಕೋಶಗಳು ಬಲಿತು, ಬಿರಿದ್ದು ಪರಾಗಕಣಗಳನ್ನು ಹೊರಸೂಸುವುವು. ಆ ಸಮಯಕ್ಕೆ ಸರಿಯಾಗಿ ನಾಳದಲ್ಲಿ ಕೇಸರಸಮೂಹವು ನಶಿಸಿಹೋಗುವುದು. ಪರಾಗದಿಂದಾವೃತದಾದ ನೊಣವು ಹೊರಗೆ ತಪ್ಪಿಸಿಕೊಳ್ಳುವುದು. ಇಂತಹ ಸಂದರ್ಭಗಳಲ್ಲಿ 'ಸ್ವಯಂಪರಾಗಗ್ರಹಣ' ಕಾರ್ಯಕ್ಕೆ ಸ್ವಲ್ಪವೂ ಅವಕಾಶವಿರುವುದಿಲ್ಲ.

### ಬೀಜೋತ್ಪತ್ತಿ; ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಕಾಣಬಹುದಾದ ವೈಚಿತ್ರ್ಯಗಳು.

ಸಸ್ಯಗಳ ಜೀವನದಲ್ಲಿ ಅತಿ ಮುಖ್ಯವಾದ, ಸಂತಾನೋತ್ಪತ್ತಿಯ ಬಹು ಮುಖ್ಯಾಂಶಗಳನ್ನು ಮಾತ್ರ ಇನ್ನು

CC-0. Jangamwadi Math Collection. Digitized by eGangotri

ವಿವೇಚಿಸಬೇಕಾಗಿದೆ. ಪರಾಗಗ್ರಹಣವಾದನಂತರ ಅದಕ್ಕೂ ಬೀಜಕಣ ( Ovule ) ಕ್ಕೂ ಯಾವ ರೀತಿ ಸಂಯೋಗವಾಗುತ್ತದೆಂಬ ವಿಷಯವನ್ನು ನೋಡಬೇಕಾಗಿದೆ.

ಪರಾಗಕೋಶವನ್ನು ಅಡ್ಡವಾಗಿ ಕೊಯ್ದು, ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ನೋಡಿದರೆ, ನಮಗೆ ಅನೇಕ ವಿಷಯಗಳು ಗೋಚರಿಸುವುವು. ಇದರ ನಾಲ್ಕು ಮೂಲೆಗಳಲ್ಲಿಯೂ ಇರತಕ್ಕ ಜೀವಕೋಶಗಳು ಬೆಳೆದಂತೆಲ್ಲಾ, ಮೂಲೆಗೊಂದರಂತೆ ನಾಲ್ಕು ಗುಂಪು ವಿಚಿತ್ರವಾದ ಜೀವಕೋಶ ( Pollen mother-cells ) ಗಳಾಗುವುವು. ಇವುಗಳು ಬೆಳೆದು ರೂಪಾಂತರಹೊಂದಿ ಪರಾಗಕಣಗಳಾಗುವುವು. ಈ ಪರಾಗಕಣಗಳು ಬೆಳೆದು, ಬಲಿತಮೇಲೆ, ಪರಾಗಕೋಶದ ಮೇಲ್ಪೊರೆಯ ಮತ್ತು ಸುತ್ತಣ ಜೀವಕೋಶಗಳ ಸಂಕುಚಿತವರ್ತನೆಗಳಿಂದ ಪರಾಗಕೋಶವು ಬಿರಿಯುವುದು. ಹೀಗೆ ಬಿರಿತ ಮೇಲೆ ಒಳಗಿನ ಪರಾಗಕಣಗಳು, ಹೊರಸೂಸಿ ಪರಾಗಕೋಶದ ಮೇಲ್ಭಾಗದಲ್ಲಿ ಧೂಳಿಯಂತೆ ನಿಲ್ಲುವುವು. ಪ್ರತಿ ಪರಾಗಕಣಕ್ಕೂ ಎರಡು ವಿಧವಾದ ಹೊದಿಕೆ ( coats ) ಗಳಿವೆ. ಒಳಗಿನ ಹೊದಿಕೆ (intine) ಯು ನುಣುಪಾಗಿ, ತೆಳುವಾಗಿರುತ್ತದೆ; ಹೊರಗಣದು ( exine ) ಒರಟಾದ ಹೊದಿಕೆಯಿಂದ ಕೂಡಿದೆ. ಪರಾಗದ ಒಳಭಾಗದಲ್ಲಿರುವ ಜೀವಾಣು ( nucleus ) ವು ಎರಡು ಭಾಗವಾಗಿ, ಒಂದು ಭಾಗವು ಪರಾಗನಾಳ ಪೋಷಕದ ಜೀವಾಣು ( tube nucleus ) ವಾಗಿಯೂ, ಮತ್ತೊಂದು ಭಾಗವು 'ಸಂತಾನೋತ್ಪಾದಕ ಜೀವಾಣು' ( Generative nucleus ) ವಾಗಿಯೂ ಆಗುತ್ತದೆ. ಈ ಜೀವಾಣುವಿನಲ್ಲಿ ಸಂತಾನೋತ್ಪಾದನೆಯ ಶಕ್ತಿಯು ಅಧಿಕವಾಗಿರುವುದರಿಂದ, ಇದು ಪರಾಗಕಣದ ಸಾರಭೂತವಾಗಿರುತ್ತದೆ.

ಇದರಂತೆಯೇ ಬೀಜಾಶಯದ ರಚನೆಯೂ ವಿಚಿತ್ರವಾಗಿಯೇ ಇರುವುದು. ಶಲಾಕೆಯು ಬೀಜಾಶಯದಿಂದ ಮೇಲಕ್ಕೆ ನಾಳರೂಪವಾಗಿ ಹೊರಟು, ಶಲಾಕಾಗ್ರದಲ್ಲಿ ಕೊನೆಗಂಡಿದೆ. ಅಂಡಾಶಯದ ಒಳಭಾಗದಲ್ಲಿ ಬೀಜದ ಪೋಷಣೆ ಬೆಳವಣಿಗೆಗಳ ಆಧಾರವಸ್ತು ( placenta ) ಇದೆ. ಈ ಪೋಷಣೀಯ ವಸ್ತುವು ಅಂಡಾಶಯದಿಂದ ಹೊರಟು, ಶಲಾಕೆಯ ಮಧ್ಯನಾಳದ ಮೂಲಕ ಶಲಾಕಾಗ್ರದಲ್ಲೆಲ್ಲಾ ಪಸರಿಸಿದೆ. ಅಂಡಾಶಯದ ಒಳಭಾಗದಲ್ಲಿ ಬೀಜಕಣಗಳು ( ovules ) ಉತ್ಪತ್ತಿಯಾಗುತ್ತವೆ. ಈ ಬೀಜಕಣಗಳು ಬೆಳೆದಂತೆಲ್ಲಾ ಪ್ರತಿಯೊಂದಕ್ಕೂ ಎರಡು ಹೊದಿಕೆಗಳು (integuments)—ಒಂದರಮೇಲೊಂದರಂತೆ ಬೆಳೆಯುತ್ತವೆ. ಆದರೆ ಬೀಜಕಣದ ಮೇಲ್ಭಾಗದಲ್ಲಿ ಮಾತ್ರ ಒಂದು ರಂಧ್ರ ( micropyle ) ವಿರುವುದು. ಬೀಜಕಣವು ಬಲಿತಂತೆಲ್ಲಾ ಅದರೊಳಗಣ ಜೀವಕೋಶಗಳು ಬಹುಜಾಗ್ರತೆಯಾಗಿ ವಿಭಾಗವಾಗಿ, ಒಂದು ಪಿಂಡಭಿತ್ತಿ ( Embryo-Sac ) ಯುತ್ಪನ್ನವಾಗುವುದು. ಆ ಪಿಂಡಭಿತ್ತಿಯು ಬೆಳೆದು, ಅದರ ಜೀವಾಣುವು ದ್ವಿಭಾಗವಾಗುವುದು. ಹೀಗೆ ಭಾಗವಾದ ಪ್ರತಿಯೊಂದು ಜೀವಾಣುವೂ ಆ ಭಿತ್ತಿಯ ಒಂದೊಂದು ಕೊನೆ ( pole ) ಗೆ ತೆರಳುವುದು. ಪ್ರತಿ ಜೀವಾಣುವೂ ಪುನಃ ಎರಡು ದ್ವಿಭಾಗಗಳಿಂದ ನಾಲ್ಕು ಜೀವಾಣುಗಳಾಗಿ ಪರಿಣಮಿಸುವುದು. ಅನಂತರ ಪ್ರತಿಯೊಂದು ಕೊನೆಯಿಂದ ಒಂದೊಂದು ಜೀವಾಣುವು ಭಿತ್ತಿಯ ಮಧ್ಯಭಾಗಕ್ಕೆ ಬಂದು, ಸಂಯೋಗವಾಗಿ 'ಪೋಷಿಣೀ ಜೀವಾಣು ( Primary Endosperm) Nucleus )' ವಾಗುವುದು. ಮೇಲಿನ ಕೊನೆಯಲ್ಲಿರುವ ಇನ್ನುಳಿದ ಮೂರರಲ್ಲಿ ಒಂದು ಜೀವಾಣುವು ದೊಡ್ಡದಾಗಿ ಬೆಳೆದು, ಬಣ್ಣವೇರುವುದು.— ಇದಕ್ಕೆ 'ಅಂಡಕಾರಕ ಜೀವಾಣು' ( Egg Nucleus ) ವೆಂದು ಹೆಸರು. ಅಲ್ಲಿ ಇನ್ನುಳಿದ ಎರಡು ಜೀವಾಣುಗಳು ಬೆಳೆದು ಉದ್ದವಾಗಿ ಅಲ್ಲಿಯೇ ನಿಲ್ಲುವುವು. ಮತ್ತೊಂದು ಕೊನೆಯಲ್ಲಿರುವ ಮೂರು ಜೀವಾಣುಗಳು ಕೋಶಗಳನ್ನು ಮಾಡಿಕೊಂಡು ಅಲ್ಲಿಯೇ ನಿಲ್ಲುವುವು. ಇಷ್ಟಾಗುವುದರೊಳಗಾಗಿ ಪಿಂಡಭಿತ್ತಿಯು ಸಂಪೂರ್ಣವಾಗಿ ಬೆಳೆದಿರುವುದೆಂದು ಹೇಳಬಹುದು. ಅದರ ಸುತ್ತಲೂ ಇರುವ ಅನೇಕ ಜೀವಕೋಶಗಳು ಒಟ್ಟಾಗಿ ಸೇರಿ, ಪಿಂಡಭಿತ್ತಿಗೆ ಆಹಾರವನ್ನೊದಗಿಸುವುವು.

ಹೀಗೆ ಬೆಳೆದ ಬೀಜಕಣವು ಪರಾಗಕಣದ ಸಂಯೋಗವಿಲ್ಲದೆ ಬೀಜವಾಗಿ ಬೆಳೆಯಲಾರದು. ಶಲಾಕಾಗ್ರದಲ್ಲಿ ಉತ್ಪನ್ನವಾಗುವ ಒಂದು ಬಗೆಯ ದ್ರವದಿಂದ ಪರಾಗಕಣವು ಒಡೆದು, ಅದರಿಂದ ಒಂದು ನಾಳವು ( pollen tube ) ಹೊರಡುವುದು. ಈ ನಾಳವು ಅದರಲ್ಲಿರುವ 'ನಾಳಪೋಷಕ ಜೀವಾಣು' ( tube nuclens ) ವಿನಿಂದ ಪೋಷಿಸಲ್ಪಡುತ್ತದೆ. ಪರಾಗನಾಳವು ಶಲಾಕೆಯ ಮಧ್ಯದಲ್ಲಿರುವ ಇಕ್ಕಟ್ಟಾದ ಮಾರ್ಗದಿಂದ ಇಳಿದು, ಅಂಡಕೋಶದಲ್ಲಿರುವ ಅಂಡಕಣದ ಮೇಲಿನ ರಂಧ್ರದಲ್ಲಿ ಹೋಗುವುದು. ಅಷ್ಟರಲ್ಲಿ ಪರಾಗನಾಳದ ಕೊನೆಯಲ್ಲಿರುವ 'ಸಂತಾನೋತ್ಪಾದಕ ಜೀವಾಣು' ( Generative nucleus ) ವು ಇಬ್ಭಾಗ-

CC-0. Jangamwadi Math Collection. Digitized by eGangotri

ವಾಗುವುದು. ರಂಧ್ರವನ್ನು ಹೊಗುವಾಗ, ಸನ್ನಿವೇಶಕ್ಕೆ ತಕ್ಕಂತೆ ಸಣ್ಣದಾದ ನಾಳದ ತುದಿಯು ಪಿಂಡಭಿತ್ತಿಯನ್ನು ಮುಟ್ಟುತ್ತಲೇ ವಿಕಸಿತವಾಗುವುದು. ಅಲ್ಲಿರುವ ಎರಡು ಕೋಶಾವೃತವಾದ ಜೀವಾಣುಗಳ ಮಧ್ಯೆ ಇರುವ ಇಕ್ಕಟ್ಟಾದ ಸೂಕ್ಷ್ಮರಂಧ್ರದ ಮೂಲಕ, ಆ ನಾಳದ ತುದಿಯು ಪಿಂಡಭಿತ್ತಿಯನ್ನು ಪ್ರವೇಶಿಸುವುದು. ಹೀಗಾದ ಸ್ವಲ್ಪ ಹೊತ್ತಿನಲ್ಲಿಯೇ ಪರಾಗನಾಳದ ತುದಿಯು ಮಾರ್ಪಾಡಾಗಿ ಬಿರಿಯುವುದು. ಹೀಗೆ ಬಿರಿತಕೂಡಲೆ ಅದರ ಒಳಗಿರುವ 'ಉತ್ಪಾದಕ ಜೀವಾಣು' ಗಳೆರಡೂ ಬಹು ರಭಸದಿಂದ ಅಂಡಭಿತ್ತಿಯೊಳಕ್ಕೆ ಎಸೆಯಲ್ಪಡುವುವು. ಅವುಗಳಲ್ಲೊಂದು 'ಪೋಷಿಣೀ ಜೀವಾಣು' (Endosperm Nucleus) ವಿನೊಂದಿಗೆ ಸಂಯೋಗವಾಗುವುದು; ಮತ್ತೊಂದು 'ಅಂಡಕಾರಕ ಜೀವಾಣು' (Egg Nucleus) ವಿನೊಂದಿಗೆ ಸಂಯೋಗವಾಗುವುದು—ಈ ಎರಡನೆಯ ಸಂಯೋಗದಿಂದಾದುದೇ ಬೀಜವಾಗತಕ್ಕದ್ದು. 'ಪೋಷಿಣೀ ಜೀವಾಣು' ವಿನ ಸಂಯೋಗದಿಂದಾದುದು ಹಾಗುಂಟಾದ ಬೀಜಕ್ಕೆ ಪೋಷಕವಸ್ತುವಾಗುವುದು.

ಸಸ್ಯಗಳಲ್ಲಿಯು ಕೂಡ ಬೀಜೋತ್ಪತ್ತಿಯಾಗಬೇಕಾದರೆ ಸ್ತ್ರೀ ಮತ್ತು ಪುರುಷ ಸಂಬಂಧವಾದ ಜೀವಕಣಗಳು ಅತ್ಯಾವಶ್ಯಕವೆಂಬುದು ಈಗ ಸ್ಪಷ್ಟವಾದ ಹಾಗಾಯಿತು. ಸಸ್ಯಗಳಲ್ಲಿರುವ ಈ ಬಗೆಯ ವರ್ತನೆಯು, ಜೀವಿಗಳೆಂದೆನಿಸಿಕೊಳ್ಳುವ ಎಲ್ಲ ವಸ್ತುಗಳಲ್ಲಿಯಂತೆಯೇ ಇದೆ. ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಕಾಣಬಹುದಾದ ಈ ವೈಚಿತ್ರ್ಯವು, ಸಸ್ಯಜೀವನದಲ್ಲಿ ಅತಿ ಮಹತ್ತ್ವದ ಕಾರ್ಯವಾಗಿದೆ. ವಿಜ್ಞಾನಶಾಸ್ತ್ರವು ಜನಮನದಲ್ಲಿ ಹರಡಿದಂತೆಲ್ಲಾ, ಅದರ ಬೆಲೆಯನ್ನು ಜನತೆಯು ಅರಿದಂತೆಲ್ಲಾ ಪ್ರಕೃತಿಯ ವಿಚಿತ್ರ ಕಲಾಕೌಶಲವು ಹೆಚ್ಚು ಹೆಚ್ಚಾಗಿ ಗ್ರಹಿಸಲ್ಪಡುವುದು.



ಗಜಕರ್ಣ, ಹುರುಕು, ತದ್ದು, ನಡ ಮುಂತಾದ ಚರ್ಮರೋಗಗಳಿಂದ ಪೀಡಿತ ಜನರಿಗೆ ಒಂದೇ ಉಪಾಯವು.

ರಜಿಸ್ಟರ್ಡ



ಗುಣ ಬರದಿದ್ದರೆ ಹಣ ತಿರುಗಿ ಕೊಡುವೆವು. ಬಾಟಲಿಯು ಬೆಲೆ ೪ ಆಣೆ.

ಸ್ಟಾರ್ ಕಂಪನಿ, ಬೆಳಗಾಂವಿ.



CC-0. Jangamwadi Math Collection. Digitized by eGangotri

# EVIDENCE OF SECURITY & STABILITY

IT PAYS YOU TO REPRESENT

## THE BOMBAY LIFE ASSURANCE Co., Ltd. Estd. 1910

*Apply to:*

## KOCHIKAR BROS.

**Madras Branch Secretaries**

BRANCHES AT:

P. B. 337, Mount Road, Madras
Visveswarapuram Circle, Bangalore City
Soumyalayam Puthiyara, Calicut
Car Street-Mangalore
Udipi, S. India
Charni Road-Bombay No. 4

FIGURES THAT SPEAK FOR THEMSELVES

1935 ACCOUNTS

## Assets Rs. 80,66,600

| | |
|---|---|
| Total Asset Over | Rs. 80,00,000 |
| Life Fund Over | Rs. 68,00,000 |
| Premium Income Over | Rs. 22,54,000 |
| Interest Income | Rs. 3,16,000 |
| Claims Paid | Rs. 5,75,000 |
| Total Claims Paid Over | Rs. 38,50,000 |
| Total Business In Force Over | Rs. 4,42,51,000 |

*Total Business* IN FORCE **4,42,51,200**

## ಪ್ರಬುದ್ಧ ಕರ್ಣಾಟಕ

ವಿನಾಯಕನ ಹಬ್ಬ, ದೀಪಾವಳಿಯ ಹಬ್ಬ, ಸಂಕ್ರಾಂತಿಯ ಹಬ್ಬ, ಕಾಮನ ಹಬ್ಬ, ಈ ಪ್ರಸಿದ್ಧವಾದ ಹಬ್ಬಗಳ ಹೊತ್ತಿಗೆ ಪ್ರಬುದ್ಧಕರ್ಣಾಟಕವು ವರ್ಷಕ್ಕೆ ನಾಲ್ಕು ಸಲ ಹೊರಡುತ್ತದೆ. ಕವನ, ಕತೆ, ಪ್ರಬಂಧ, ವಿಮರ್ಶೆ, ಚರಿತ್ರೆ, ವಿಜ್ಞಾನಶಾಸ್ತ್ರ, ಸಾಹಿತ್ಯ-ಕಲೆಗಳನ್ನು ಕುರಿತು ಲೇಖನಗಳು ಈ ಮೊದಲಾದುವನ್ನು ಪ್ರಕಟಿಸಿ, ನಮ್ಮ ಜನರಿಗೆ ಆಧುನಿಕ ಮತ್ತು ಪ್ರಾಚೀನ ಸಂಸ್ಕೃತಿಗಳ ಪರಿಚಯವನ್ನು ಮಾಡಿಕೊಡುವುದೇ ಈ ಪತ್ರಿಕೆಯ ಉದ್ದೇಶ. ನಮ್ಮ ನಾಡಿನ ಶ್ರೇಷ್ಠಸಾಹಿತಿಗಳೂ ವಿದ್ವಾಂಸರೂ ಇದರ ಲೇಖಕವರ್ಗದಲ್ಲಿ ಸೇರಿದ್ದಾರೆ.

| | | |
|---|---|---|
| ಚಂದಾದಾರರಿಗೆ | ರೂ. | ೨-೮-೦ |
| ವಾಚನಾಲಯ ಮುಂತಾದ ಸಂಸ್ಥೆಗಳಿಗೆ | ,, | ೩-೦-೦ |
| ವಿದ್ಯಾರ್ಥಿಗಳಿಗೆ ಮಾತ್ರ | ,, | ೧ ೮-೦ |

ಚಂದಾಹಣವನ್ನು ಮೈಸೂರು ವಿಶ್ವವಿದ್ಯಾಲಯದ ರೆಜಿಸ್ಟ್ರಾರರವರಿಗೆ ಪಾವತಿಮಾಡಬೇಕು. ಪತ್ರವ್ಯವಹಾರವನ್ನೆಲ್ಲಾ ಈ ಕೆಳಗಿನ ವಿಳಾಸದೊಂದಿಗೆ ನಡೆಯಿಸಬೇಕು.

ಸಂಪಾದಕ, ಪ್ರಬುದ್ಧ ಕರ್ಣಾಟಕ
ಯುನಿವರ್ಸಿಟಿ ಲೈಬ್ರರಿ, ಮೈಸೂರು

ಡಾ. ಜೀ. ಬೀ. ಯವರ

## ಸುಗಂಧ ನಶ್ಯದ ಪುಡಿ

ಲೋಕಪ್ರಸಿದ್ಧವಾದ ಈ ಸುಗಂಧನಶ್ಯದ ಪುಡಿಯಿಂದ ಪಿನಸಿ ಒಂಟಿತಲೆನೋವು ಮುಂತಾದ ವ್ಯಾಧಿಗಳು ಪರಿಹಾರವಾಗುವವು. ಕಂಠಕ್ಕೆ ಮೇಲ್ಪಟ್ಟ ೯೭ ವ್ಯಾಧಿಗಳು ಅಡಗಿ, ಜ್ಞಾಪಕಶಕ್ತಿ ಬೆಳೆಯುವದು. ಮೂರು ಬಟ್ಟಿನ ನಶ್ಯದ ಸಂಗಡ ಈ ಸುಗಂಧ ನಶ್ಯದ ಪುಡಿಯಲ್ಲಿ ಒಂದು ಚಿಟಿಕೆಯನ್ನು ಬೆರಸಿದರೆ ಎಲ್ಲವೂ ಪರಿಮಳವಾಗುವದು. ಅನೇಕರು ಕುಟುಂಬ ಔಷಧವಾಗಿ ಉಪಯೋಗಿಸುತ್ತಾರೆ. ಮಾದರಿ ಸೀಸೆ ಪುಕ್ಕಟೆ ಕಳಿಸಲಾದೀತು.





ಬುಡ್ಡಿ ೧ಕ್ಕೆ ರೂ. ೦-೪-೦
ವ್ಹಿ. ಪಿ. ಚಾರ್ಜ ೮ ಆಣೆ

**ಗುರುಬಸವ ಆ್ಯಂಡ ಕಂಪನಿ, ಲಿಮಿಟೆಡ್**
ಪೋಸ್ಟ್ ಬಾಕ್ಸ್ ೮೧೦, ಮದರಾಸು


CC-0. Jangamwadi Math Collection. Digitized by eGangotri

ಸಣ್ಣ ಕತೆ

# ಹೋಟಲಿನ ಮಾಣಿ

ಬರೆದವರು ಶ್ರೀ. ನಾ. ಸು. ಅಡಬಡ್ಡಿ ಎರಡನೆಯ ಎಲ್. ಎಲ್. ಬಿ. ಕೊಲ್ಲಾಪೂರ



**"ಸತ್ಯವು ಒಮ್ಮೊಮ್ಮೆ ಕಟ್ಟುಕತೆಗಿಂತಲೂ ಕಟುವಾಗಿದೆ"**

ದೈವ—ಅದೃಷ್ಟ....ಎಂದು ಹೇಳಿದರೆ ನಗುವವರು ಬಲು ಜನರು; ಆದರೆ ಪುಟ್ಟಮಾಣಿಯಂತಹ ಹತ್ತುವರ್ಷದ ಹುಡುಗನ ಸ್ವಯಂಕೃತವಾದ ಅಪರಾಧವೇನಿರಬಹುದು? × × ಅವರೂ ಉಪಕಾರ ಮಾಡಬೇಕೆಂದು ಕೈಯಿಂದಾದ ನೆರವನೆಲ್ಲ ಮಾಣಿಗೆ ಕೊಟ್ಟರು. ಕೊನೆಗೂ ತನ್ನ ತಾಯಿಯ ಮುಖ ಮಾಣಿಗೆ ಸಿಕ್ಕಲಿಲ್ಲ. ಇನ್ನೊಬ್ಬರ ಕೈನೋಡುವ ಸಂದರ್ಭ ತಪ್ಪಲಿಲ್ಲ.



ಜಗನ್ನಿಯಂತನು ನಮ್ಮನಮ್ಮಗಳನ್ನು ಇಟ್ಟ ಸ್ಥಾನಗಳಲ್ಲಿ ನಮಗೆ ಅಸಂತೋಷ ಬಹಳ. ಉಚ್ಚವರ್ಗವನ್ನು ನೋಡುವ ಒಂದೇ ಒಂದು ಕುತೂಹಲದಿಂದ, ಅದಕ್ಕಾಗಿ ಆಸೆಪಟ್ಟುಕೊಂಡು, ಅನೇಕ ಬಗೆಯ ಸಾಹಸಗಳನ್ನು ಮಾಡಿ, ನೇರವೇರಿದರೆ ಅದಕ್ಕಿಂತಲೂ ಮುಂದಕ್ಕೆ ನೋಡಿಕೊಂಡು ಹೆಣಗಾಡೋಣ, ಇಲ್ಲದೆ ಹೋದರೆ ಸೃಷ್ಟಿಕರ್ತನನ್ನು ವಿಧವಿಧವಾಗಿ ನಿಂದಿಸಿ ಸಂತಾಪಮಾಡಿಕೊಳ್ಳೋಣ; ಹೀಗೆ ಜೀವನದಲ್ಲಿಯೇ ನಿರಾಶೆತಾಳಿಕೊಂಡು, ನೂರು ವರುಷಗಳಿಗಿಂತ ಅದೆಷ್ಟೋ ರೀತಿಯಲ್ಲಿ ಕಡಮೆಯಾಗಿರುವ ಈ ಆಯುಷ್ಯವನ್ನು ನೂಕಿಕೊಂಡು ಹೋಗಿಬಿಡುವುದರಲ್ಲಿ ಆದಾವ ನ್ಯಾಯವಿದೆಯೋ ತಿಳಿಯಲಾರದ ಸಂಗತಿಯು. ಆಗಲಿ! ಈ ಒಣ ವೇದಾಂತಕ್ಕೆ ಹೊರಟುಬಿಟ್ಟರೆ ನಮ್ಮಗಳ ಅಂತಃಕರಣವನ್ನು ಕಲಕಿಸುವ ಕತೆ ಹಿಂದೆ ಉಳಿದುಬಿಟ್ಟೀತು.

ಕಳೆದ ವಾರದಲ್ಲಿ ಅದೊಂದು ರಾತ್ರಿ ಊಟಕ್ಕೆ ಹೋಗಿರುವಾಗ, ನಮ್ಮ ದಿನದ ಮಾಣಿ—ಮಗು ಹತ್ತುವರುಷಕ್ಕೆ ಮಿಕ್ಕದವ—ನಮಗೆ ದಿನಾಲು ಎಲೆಬಡಿಸುವವ—ದುಕ್ಕದ ಉಬ್ಬಸ ತಾಳಲಾರದೆ, ಬಿಕ್ಕಿಬಿಕ್ಕಿ "ಉಪ್ಪು ಬೇಕೇನಿಮಗೆ?" ಎಂದೆನ್ನುತ್ತಿದ್ದ. ಅವನು ನಮ್ಮ ಊಟದ ಮನೆಯ ಮಾಲೀಕನ ಮಗನೆಂದೇ ನನ್ನ ತಿಳಿವಳಿಕೆ ಎಂದಿನಿಂದಲೂ. ಆದರೂ ನಾನು ಕೇಳಿನೋಡಿದೆ. "ಯಾಕಪ್ಪಾ ಮಾಣೀ! ದುಕ್ಕ ತುಂಬಿಹೋಗಿದೆ; ಬಿಕ್ಕುತ್ತೀಯಾ?" ಎಂದೆ. "ಹೌದು ರಾಯರೇ! ಆ .... ಪಾಟೀಲರಾಯರು .... ಎಲೆಬಡಿಸುವುದಕ್ಕೆ.... ತಡ ಆಯಿತಂತೆ.... ಕೆನ್ನೆಗೆ ಹೊಡೆದರು .... ಅಮ್ಮ .... ನನ್ನ ಅಮ್ಮ.... ಈ ಊರಿನಲ್ಲಿ ಇಲ್ಲ ನೋಡಿರಿ!" ಬಿಕ್ಕಲಾರಂಭಿಸಿದ. ನನಗೇನೂ ತಿಳಿಯದಾಯಿತು. ನಾನೂ ಅಮ್ಮನಿಲ್ಲದ ಮಗು; ಆದರೆ ನನಗಿಂತಲೂ ಈತ ಚಿಕ್ಕವ. ಮೇಲೆ ಈ ನೀಗಲಾರದ ಉದ್ಯೋಗ ಹೊಟ್ಟೆಯ ಪಾಡಿಗಾಗಿ. ಏಕೋ ಜೀವಕ್ಕೆ ನೋವಾಯಿತು. ಊಟವಾಗಿ ಮರಳಿಬರುವಾಗ "ಎಲೋ! ಮಾಣೀ....ನನ್ನ ಜೊತೆಯಲ್ಲಿ ನಮ್ಮ ಕೋಣೆಗೆ ಬಾರೋ—ಈ ದಿನ ಭವಾನಿಯ ಪ್ರಸಾದ—ಪೇಢೆ ತಂದಿಟ್ಟಿದ್ದೇನೆ." ಎಂದು ಹೇಳಿ, ಆ ಮಗುವನ್ನು ಬಲವಂತಮಾಡಿ ನನ್ನ ಕೋಣೆಗೆ ಕರೆತಂದೆನು. ಕೋಣೆ ಸೇರಿದ ಬಳಿಕ ಆತನಿಗೆ ತಿನ್ನುವುದಕ್ಕೆ ಪ್ರಸಾದಕೊಟ್ಟು, ಕುಳಿತುಕೊಳ್ಳುವುದಕ್ಕೆ ಹೇಳಿದೆನು. ಮಗು ತಿನ್ನುವುದನ್ನು ಕೊಟ್ಟರೆ ಹಿಗ್ಗಿ ಕುಣಿವುದಷ್ಟೇ! ಹಾಗೆಯೆ ನಮ್ಮ ಮಾಣಿ. ಕೋಣೆಯಲ್ಲಿರುವ ಬೇರೆಬೇರೆ ಫೋಟೋಗಳನ್ನು ನೋಡಿದ; "ಏನು ರಾಯರೇ ನೀವು ಎಲ್ಲದರಲ್ಲಿ ಇದ್ದೀರಾ!" ಎಂದ. "ನನ್ನದೊಂದು ಇಂತಹದು ಇಲ್ಲನೋಡಿರಿ; ನಾವು ಬಡವರು" ದೊಡ್ಡದೊಂದು

CC-0. Jangamwadi Math Collection. Digitized by eGangotri

ಉಸಿರು ಎಳೆದ. ಸಿರಿವಂತ ಗೆಳೆಯರಲ್ಲಿ ಹೋಗಿದ್ದಾಗ ಅವರ, ಅವರ ಧರ್ಮಪತ್ನಿಯರ, ಅವರ ತಂದೆ-ತಾಯಿಗಳ 'ಲಾಯಿಫ್ ಸಾಯಿಜ್ ಆಯಿಲ್ ಪೇಂಟಿಂಗ್'ಗಳನ್ನು ನೋಡಿ, ನಾನೂ ಅನೇಕ ಸಲ ಉಸಿರುತೆಗೆದಿದ್ದೇನೆ-ಎಂದು ಮನಸ್ಸಿನಲ್ಲಿ ಅಂದುಕೊಂಡೆ. ಬಳಿಕ ಮಾಣಿ ಮೇಜಿನ ಮೇಲಿಟ್ಟಿದ್ದ ಚಿಕ್ಕ ಕನ್ನಡಿಯಲ್ಲಿ ಮುಖನೋಡಿಕೊಂಡ. ಮೈಯಲ್ಲಿದ್ದ ಗಂಜೀಫ್ರಾಕು ಅಲ್ಲಲ್ಲಿ ಹರಿದುಹೋಗಿತ್ತು. ಅದನ್ನು ಅದರಲ್ಲಿ ಕಂಡ. "ರಾಯರೇ ಬಟ್ಟೆ ಪೂರ್ತಿ ಹರಿದುಹೋಗಿದೆ ನಮ್ಮಮ್ಮ ಇದ್ದಿದ್ದರೆ ಕೊಡಿಸಬಹುದಾಗಿತ್ತು" ಎಂದ. ಬಹು ಹೊತ್ತು ಕಾದುಕೊಂಡಿದ್ದ ನನಗೆ ಕೇಳುವುದಕ್ಕೆ ಅನುಕೂಲವಾಯಿತು "ಯಾಕೋ ಮಾಣೀ! ಗೋವಿಂದಪ್ಪ ನಿನ್ನ ತಂದೆಯಲ್ಲವೇನೊ.... ನಿಮ್ಮಮ್ಮ ಸತ್ತಿದ್ದಾಳೋ....?" ನಾನು ಇನ್ನೂ ಕೇಳುತ್ತಿದ್ದಾಗಲೇ "ಸತ್ತಿದ್ದಾಳೆ ಅಂದ್ರೆ ಏನು ರಾಯರೇ!" ಎಂದ. "ಅಲ್ಲ. ನಿಮ್ಮ ಅಮ್ಮಾ ತೀರಿಕೊಂಡಿದ್ದಾಳೇ ಅಂತ!" "ಛೇ! ಅದಿಲ್ಲ ರಾಯರೇ, ಅವಳು ನಮ್ಮೂರು—ನಮ್ಮೂರು ದೊಡ್ಡಕೆರೆಯಲ್ಲಿದ್ದಾಳೆ. ನನ್ನ ತಾತ ನಾರಾಣಬಟ್ಟರೂ ಅಲ್ಲಿದ್ದಾರೆ." "ಹಾಗಿದ್ದರೆ ಅವರನ್ನು ಬಿಟ್ಟು ನೀನು ಒಂಟಿಗನೇ ಇಲ್ಲಿಗೆ ಹೇಗೆ ಬಂದೆಯೋ? ಗೋವಿಂದಪ್ಪ ನಿನಗೆ ಹತ್ತುಗಡೆಯಾಗಬೇಕೇನು?" "ಇಲ್ಲಾರಿ. ನಂಗೆ ನಾರಾಣಬಟ್ಟರು ಉಡಿಪಿಯೊಳಗೆ ಜೆಲ್ಲಾವೆ ಅಫೊಕೇಟರ ಮನೆಯೊಳಗೆ ಪೂಜೆ ಮಾಡಿಕೊಂಡು ಇರಲಿಕ್ಕೆ ಇಟ್ಟಿದ್ದರು. ಅಲ್ಲಿಗೆ ನಮ್ಮ ಮಾವ-ಮದಸೂದನ ಭಟ್ಟರು ಬಂದರು. 'ಇಲ್ಲಿ ಬೇಡ. ಒಂದೇ ರೂಪಾಯಿ ಕೊಡತಾರೆ; ಅಲ್ಲಿ ಕೊಲ್ಲಾಪೂರಿನಲ್ಲಿ ಕಾನಾವಳಿಯಲ್ಲಿ ನಿನಗೆ ನಾಕು ರೂಪಾಯಿ ಸಂಬಳ ಕೊಡತಾರೆ. ನಿಮ್ಮ ತಾತಗೆ 'ಹೇಳಿದೇನೆ' ಅಂತಾ ಹೇಳಿ ನನಗೆ ಇಲ್ಲಿ ಕರೆತಂದರು." ತುಸು ತಡೆದ. ನಾನು ಏನನ್ನೋ ಕೇಳಬೇಕೆನ್ನುವುದರಲ್ಲಿ ಮತ್ತೆ ಪ್ರಾರಂಭಿಸಿದ: "ಅದರೆ ಇದೀಗ ಗೋವಿಂದಪ್ಪ ಎರಡು ರೂಪಾಯಿ ಕೊಡತೇನೆ ಅಂತಾನೆ—ನಂಗೆ ಊರು ಬಹಳ ನೆನಸತಾ ಇದೆ" ಎಂದ. "ನಿನ್ನ ತಂದೆ ನಾರಾಣಬಟ್ಟರು ಏನು ಮಾಡುತಾರೆಯೋ?" "ರೂಪಾಯಿ ತರತಾರೆ—ಅಕ್ಕೀ ತರತಾರೆ" "ಅಲ್ಲೋ, ನಿಮಗೆ ತೋಟ ಇದೆಯೋ?" "ಏನೂ ಇಲ್ಲಾರಿ; ಬಹು ಬಡವರು ನಾವು." ಇದನ್ನು ಹೇಳುತ್ತಿರುವಾಗ ಹುಡುಗನ ಕಣ್ಣಲ್ಲಿ ನೀರು ತುಂಬಿ ಬಂತು. ನನ್ನ ಅಂತಃಕರಣಕ್ಕೆ ಬಹು ಕಳವಳವಾಯಿತು. ಹೀಗೆ ಒಂದು ನಿಮಿಷ ಈ ಬಡತನದ ಭೀಕರ ಚಿತ್ರ ಕಣ್ಣೆದುರಿಗೆ ಬಂದು ಹತಾಶನಾದೆ. ಕೊನೆಗೆ 'ಆಗಲಿ ದೇವರಿಷ್ಟ' ಎಂದು ಮನಸಿನಲ್ಲಿ ಅಂದುಕೊಂಡೆ. ಒಂದು ವಿಚಾರ ಹೊಳೆಯಿತು. "ಅಲ್ಲೋ ಮಾಣೀ, ಟರ್ಮು ಮುಗಿಯಿತು—ನಮ್ಮ ರಂಗಣ್ಣೋರು ಮರಳಿ ತಮ್ಮೂರಿಗೆ ಹೋಗುತ್ತಿದ್ದಾರೆ. ನೀನೂ ಅವರ ಜೊತೇಲಿ ಹೋಗುತ್ತೀಯಾ? ಕಳಿಸಿಕೊಡತೇನೆ!" ತಕ್ಷಣ "ಅವರ ಊರು ಯಾವುದು?" ಎಂದ ನಮ್ಮ ಮಾಣಿ. "ಅವರದು ಕುಂದಾಪುರ ಕಾಣೋ!" "ಹಾಗೇ! ನಮ್ಮ ದೊಡ್ಡಕೆರೆ ಅಲ್ಲಿಗೆ ಸಮೀಪ ಇದೆ. ಕುಂದಾಪುರದಲ್ಲಿ ನಮ್ಮ ಮಾವ—ಮದಸೂದನ ಭಟ್ಟರು ಇದ್ದಾರೆ. ರಾಯರೇ, ಕಳಿಸಿರಿ ನಮ್ಮ ಅಮ್ಮ.... ನನ್ನನ್ನು ಕಳ್ಸೋದಿಲ್ಲ ಅಷ್ಟು ದೂರ-ಚಿಕ್ಕಮಗು....ಎಂದು ನಮ್ಮ ಮಾವಗೆ ಹೇಳಿದಳಂತೆ. ನಮ್ಮ ಮಾವಾ ಹೇಳಿದರು; ನನ್ನ ತಾತ ಒಬ್ಬನೇ ಒಪ್ಪಿದನಂತೆ. ನಮ್ಮ ಅಮ್ಮ ನನ್ನ ಬಿಟ್ಟು ಇರೋಕಿಲ್ಲ್ರೀ" ಎಂದು ಆಶೆಪಟ್ಟುಕೊಂಡವನಂತೆ ಸುಮ್ಮಗೆ ನಿಂತುಕೊಂಡ. "ಅಲ್ಲೋ ಮಾಣಿ ಗೋವಿಂದಪ್ಪ ನಿನ್ನ ಕಳಿಸಲಿಕ್ಕೆ ಒಪ್ಪದಿದ್ದರೆ ಹೇಗೋ?" "ಇಲ್ಲಾರಿ. ಇಂದು ತಾನೇ ಸಂಜೆಗೆ ಕಾಗದ ಬಂದಿದೆ. ನಮ್ಮಮ್ಮ ನನ್ನ ಕರಸೇ ತೀರರಿ ಅಂತಾ ನನ್ನ ತಾತನಿಗೆ ಹೇಳತಿದ್ದಾಳಂತೆ. ಅವಳಿಗೆ ಮೈಯಲ್ಲಿ ಖಾಯಿಲೆ ಆಗಿದೆಯಂತೆ; ಅದಕ್ಕೆ ಗೋವಿಂದಪ್ಪ ಯಾರನ್ನಾದರೂ ಜೊತೆಮಾಡಿ ಕಳಿಸ ತೇನೆ ತಡೆ—ಅಂತಾನೆ." ಆಗಲೇ ಪಕ್ಕದ ಕೋಣೆಯಲ್ಲಿದ್ದ ನನ್ನ ಗೆಳೆಯ—ರಂಗಣ್ಣೋರನ್ನು ಕೂಗಿದೆ. ನಡೆದ ಸಮಾಚಾರವನ್ನೆಲ್ಲ ಅವರಿಗೆ ತಿಳುಹಿಸಿ, ಮರುದಿವಸ ಮಧ್ಯಾಹ್ನದ ಗಾಡಿಯಿಂದ ತಮ್ಮ ಜೊತೆಯಲ್ಲಿ ನಮ್ಮ ಮಾಣಿಯನ್ನೂ ಕುಂದಾಪುರದ ವರೆಗೆ ಕರೆದೊಯ್ದು, ಅವರ ಮಾವ ಮಧುಸೂದನಭಟ್ಟರ ಮನೆಯಲ್ಲಿ ಬಿಡುವಂತೆ ಹೇಳಿ ಒಪ್ಪಿಸಿದೆ. ಪರೀಕ್ಷೆಯ ಗಲಭೆಯಲ್ಲಿ ಓದಿಕೊಳ್ಳಲಿಕ್ಕೆ ತೊಡಗಿಕೊಂಡ ನಾನು, ಏನೋ ತುಸು ಕರ್ತವ್ಯವನ್ನೇ ಮಾಡಿದೆನೆಂದು ಭಾವಿಸಿಕೊಂಡು ಸಮಾಧಾನ ತಾಳಿಕೊಂಡೆ; ರಾತ್ರಿಕಳೆಯುವ ವರೆಗೂ ಹಾಸಿಗೆಯಲ್ಲಿ ನಮ್ಮ ಪುಟ್ಟಮಾಣಿಯ ವಿಚಾರ. "ಬಹು ಬಡವರು ನಾವು" ಎಂದು ಹೇಳಿದ ಅವನ ರೀತಿ—ದೈನ್ಯವಾಣಿ—ಕಿವಿಯಲ್ಲಿ ಗಡಿಯಾಳದ ಟಿಕ್‌ಟಿಕ್ಕಿನ ಹಾಗೆ, ಕ್ಷಣಕ್ಕೆ ಸಾವಿರ ಸಲ ಹೇಳುತ್ತಿತ್ತು. "ಬೆಳಗು ಬರಲಿ, ಆತನಿಗೊಂದು ಅಂಗಿ ತಂದುಕೊಡಬೇಕು" ಎಂದಂದುಕೊಂಡೆ. ಹಾಗೆ ನಿದ್ರೆ ಬಂತು.

* * *

CC-0. Jangamwadi Math Collection. Digitized by eGangotri

ಮಾರನೆಯ ಬೆಳಗು ಎದ್ದ ಬಳಿಕ ತಿಂಡಿತೀರ್ಥಗಳನ್ನು ತೀರಿಸಿಕೊಂಡು, ಹಾಗೆಯೇ ಗೋವಿಂದಪ್ಪನಲ್ಲಿಗೆ ಹೋಗಿ, ನನ್ನ ಗೆಳೆಯ ರಂಗಣ್ಣೋರ ಜೊತೆಯಲ್ಲಿ ಮಧ್ಯಾಹ್ನದ ಗಾಡಿಯಿಂದ ಅಂದು ಮಾಣಿಯನ್ನು ಕಳುಹಿಸಿಕೊಡುವಂತೆ ಏರ್ಪಾಡುಮಾಡಿ, ಮುಂದೆ ಪೇಟೆಯಲ್ಲಿ ಹೋಗಿ, ಮಾಣಿಗೆ ಹೊಂದಿಕೆಯಾಗುವ ಒಂದು ತಯಾರಿಸಿದ ಅಂಗಿಯನ್ನು ಕೊಂಡುಕೊಂಡು ಮರಳಿ ಬಂದೆ. ಮಧ್ಯಾಹ್ನ ನನ್ನ ಜೊತೆಯಲ್ಲಿಯೇ ಮಾಣಿಯನ್ನು ಊಟಕ್ಕೆ ಕುಳ್ಳಿರಿಸಿಕೊಂಡು, ಮಕ್ಕಳೊಡನೆ ಮಾತನಾಡಬೇಕಾದ ವಿಚಾರ ತೀರಿಸಿ, ಸ್ಟೇಶನ್ನಿನ ವರೆಗೂ ಕಳುಹಿಸುವುದಕ್ಕೆ ಹೋದೆ. ಗಾಡಿಬಿಡುವುದಕ್ಕೆ ಮೊದಲು ಮಾಣಿ " ಹೋಗಿಬರುವೆ ರಾಯರೇ ನಮಸ್ಕಾರ ! " ಎಂದು ಕರಜೋಡಿಸಿದ. ಗಾಡಿ ಹೊರಟಿತು. ನಾನೂ ಕೋಣೆಗೆ ಹೊರಳಿದೆ. ದಾರಿಯುದ್ದಕ್ಕೂ ಆತನ ಸಂತೋಷದ ಮುಖವನ್ನು ನೆನಪಿಗೆ ತಂದುಕೊಂಡು, ಕಳೆದ ದಿನದ ಆತನ ದುಃಖದ ಮುಖವನ್ನು ಮರೆಯುವುದಕ್ಕೆ ಮನಸ್ಸು ಮಾಡಿದೆ. 'ಹೇಗೂ ಕರುವನ್ನು ಗೋವಿನ ಹತ್ತಿರ ಬಿಡುವುದಕ್ಕೆ ಯತ್ನಿಸಿದ್ದೇನೆ ' ಎಂಬ ಸಂತೋಷವನ್ನು ತಂದುಕೊಂಡೆ.

* * *

ನಮ್ಮ ಮಾಣಿ ಊರಿಗೆ ಹೋಗಿ ಇಂದಿಗೆ ಆರುದಿವಸವಾಯಿತು. ಬೆಳಗು ಹತ್ತುಗಂಟೆಯಿಂದ ಹತ್ತೂವರೆಯವರೆಗೂ ಟಪಾಲಿನವನನ್ನು ಕಾಯುವ ಸಂಗತಿ, ವಿದ್ಯಾರ್ಥಿಗಳ ನಿತ್ಯದ ಸಂಗತಿಗಳಲ್ಲಿ ಒಂದು. ಹಾಗೆ ಪೋಸ್ಟಿನವನನ್ನು ಕಾಯುತ್ತಿದ್ದಾಗಲೆ ಒಂದು ಕಪ್ಪದು-ನನ್ನ ವಿಳಾಸಕ್ಕೆ ಬರೆದುದು ಬಂತು. ಯಾವ ಊರಿನದು ? ಎಂದು ಪೋಸ್ಟಿನವರ ಮುದ್ರೆ ನೋಡಿದೆ. 'ಕುಂದಾಪುರ' ಎಂದಿತ್ತು. ''ಓಹೋ! ಮಾಣಿಯ ಸಮಾಚಾರ. ರಂಗಣ್ಣೋರು ಕಾಗದ ಬರೆದಿರಬೇಕು '' ಎಂದು ಹೀಗೆ ಗುಣುಗುಡುತ್ತಾ ಕಾಗದ ಒಡೆದೆ; ಓದುವುದಕ್ಕೆ ಆರಂಭಿಸಿದೆ........ಕಾಗದ ಮುಗಿಯಿತು. ಎಲ್ಲವೂ ಕನಸಿನಲ್ಲಿ ಸಹ ಕಾಣದ ಸಂಗತಿ. ಮಗುವನ್ನು ಪರದೇಶಿಯಾಗಿ ಮಾಡಿ, ಇಲ್ಲಿ ಸಿಕ್ಕುತ್ತಿದ್ದ ಹೊಟ್ಟೆತುಂಬ ಊಟವೂ ಸಿಕ್ಕದಂತೆ ಮಾಡಿದ ಆ ಕಟುಕ ವಿಧಿಯ ವಿಚಿತ್ರ ರಚನೆ! ನಾನು ಮೊದಲು ಮಗುವಿಗೆ ಕೇಳಿರುವ " ನಿಮ್ಮ ಅಮ್ಮ ಸತ್ತಿದ್ದಾಳೆಯೇ ? " ಎಂಬುದೇ ಇಂದು ವಿಧಾತನ ಸೃಷ್ಟಿಕ್ರಮದಲ್ಲಿ ನಿಜವಾಗಿ ಹೋಗಬೇಕೇ ? " ಛೀ " ಎಂದು ಹೇಳಿದ ಆ ಮಗುವಿನ ಅಂದಿನ ಉತ್ತರಕ್ಕೆ ಇಂದು ಏನು ಉತ್ತರ? ರಂಗಣ್ಣೋರ ಓಲೆಯನ್ನು ಮತ್ತೆಮತ್ತೆ ನೋಡಿದೆ. " ಗೆಳೆಯರಿಗೆ ನಲುಮೆಯ ವಂದನೆ: ನಿಮ್ಮ ಮಾಣಿಯನ್ನು ಇಲ್ಲಿಗೆ ಕರೆದು ತಂದ ದಿನವೇ ಮಧುಸೂದನಭಟ್ಟರಿಗೆ ಹೇಳಿಕಳುಹಿಸಿದೆ. ಅವರು ದೊಡ್ಡ ಕೆರೆಗೆ ಹೋಗಿದ್ದಾರೆಂದೂ—ಅವರ ತಂಗಿ ಅಂದರೆ ನಿಮ್ಮ ಮಾಣಿಯ ತಾಯಿ—ಮೊನ್ನೆ ತಾನೇ ತೀರಿಕೊಂಡಳೆಂದೂ, ಅದೇ ಅಸಹ್ಯವೇದನೆಯಲ್ಲಿ ಮಾಣಿಯ ತಂದೆ ನಾರಾಯಣಭಟ್ಟರು ಮನೆಯಲ್ಲಿಶವವು ಇನ್ನೂ ಇರುವಾಗಲೇ ಎಲ್ಲಿಯೋ ಹೋಗಿಬಿಟ್ಟವರು....ಇನ್ನೂ ಸಿಕ್ಕಲಿಲ್ಲವೆಂತಲೂ, ಊರಿನವರು ಎಲ್ಲ ಕೆರೆಬಾವಿಗಳನ್ನು ಸುತ್ತಾಡಿ ನೋಡಿದರೂ ಭಟ್ಟರ ಸುಳಿವೇ ಕಾಣದೆಂತಲೂ—ಉಡುಪಿಯಿಂದ ಜಿಲ್ಲಾ ಪೊಲೀಸು ಆಫೀಸಿನ ಇನ್‌ಸ್ಪೆಕ್ಟರಿಂದ 'ಭಟ್ಟರು ಅಲ್ಲಿಗೆ ಬರಲಿಲ್ಲ'ವೆಂಬ ಕಾಗದ ಬಂದಿದೆಯೆಂತಲೂ—ಇನ್ನೂ ಅನೇಕ ಸಂಗತಿಗಳಿಗೆ ಮಧುಸೂದನಭಟ್ಟರ ಹೆಂಡತಿ, ಹೋಗಿರುವ ನಮ್ಮ ಆಳುಮಗನಿಗೆ ಹೇಳಿಕಳುಹಿಸಿದರು. ಅದರ ಪರಿಷ್ಕಾರಕ್ಕಾಗಿ ನಾನು ನಿನ್ನೆಯೇ ಬೆಳಗು ಅವರ ಮನೆಗೆ ಹೋಗಿ, ಅವರನ್ನು ಕಂಡುಬಂದೆನು. ಎಲ್ಲವೂ ನಿಜ. ಇಂತಹ ವಿಚಾರ ಸುಳ್ಳಾಗದು. ನನ್ನ ಜೊತೆಯಲ್ಲಿ ನಿಮ್ಮ ಮಾಣಿಯನ್ನು ತಂದ ವಿಚಾರ ಅವರಿಗೆ ತಿಳುಹಿಸಲಿಲ್ಲ. ಮಾಣಿ 'ನನ್ನನ್ನು ಮಾವನಲ್ಲಿ ಕಳುಹಿಸಿರಿ; ಎಂದು ಮುಂಜಾವಿನಿಂದಲೂ ದುಂಬಾಲು ಬಿದ್ದಿದ್ದಾನೆ. ಅವನನ್ನು ಕಂಡರೆ ನನಗೆ ಅದೆಷ್ಟೋ ನೋವಾಗುತ್ತದೆ. ನಮ್ಮ ಮನೆಯಲ್ಲಿಯೇ ಇದ್ದು ಬಿಡಲಿ. ಅವನೊಬ್ಬ ನನ್ನ ತಮ್ಮ....ಎಂದೆಂದುಕೊಂಡಿದ್ದೇನೆ. ಬಡವನ ವಿಚಾರ ಸರಿಯಾಗಿಯೇ ತಿಳುಹಿಸಿ. ನಲುಮೆ ಇರಲಿ. ಇತಿ

| ಕುಂದಾಪುರ. | ನಿಮ್ಮ ಗೆಳೆಯ |
|---|---|
| ೪–೩–೧೯೩೭ | ರಂಗಣ್ಣ |



CC-0. Jangamwadi Math Collection. Digitized by eGangotri

# SUSHEELA & Co., KOLLEGAL (S. INDIA)

## 1000 ರೂಪಾಯಿಗಳ ಬಹುಮಾನ

ಪ್ರತಿ ಎರಡು ಕೂಪರ್ಗಳಿಗೂ ಒಂದು ಕೂಪರ್ ಉಚಿತ.

ಉತ್ತರಗಳನ್ನು ಸ್ವೀಕರಿಸುವ ಕಡೇ ದಿನ ೧೬-೮-೧೯೩೭. ಫಲಿತಾಂಶವನ್ನು ಪ್ರಕಟಿಸುವ ದಿನ ೨೦-೮-೧೯೩೭. ಮೂರು ಕೂಪರ್ಗಳೂ ಸರಿಯಾಗಿ ಕಳುಹಿಸಿದವರಿಗೆ ೫೦೦ ರೂ; ಒಂದು ಕೂಪರ್ ತಪ್ಪುಳ್ಳವರಿಗೆ ೨೦೦ ರೂ; ಎರಡು ಕೂಪರ್ ತಪ್ಪುಳ್ಳವರಿಗೆ ೧೦೦ ರೂ. ಇತರ ಬಹುಮಾನಗಳು. ಮೂರು ಕೂಪರ್ಗಳೂ ಸರಿಯಾಗಿ ಕಳುಹಿಸಿದ ಪ್ರಥಮಸ್ತ್ರೀಗೆ ೧೦೫ ರೂ; ಹೆಚ್ಚಾಗಿ ಕೂಪರ್ಗಳನ್ನು ಕಳುಹಿಸಿದವರಿಗೆ ೭೫ ರೂ.

| | | | | |
|---|---|---|---|---|
| | | | | |
| | | | | |
| | | 17 | | |
| | | | | |
| | | | | |

**ಸುಶೀಲ ಅಂಡ್ ಕೋ., ಕೊಳ್ಳೆಗಾಲ**

ಈ ಸ್ಪರ್ಧೆಯ ನಿಯಮಗಳಿಗೆ ಬದ್ಧನಾಗಿದ್ದೇನೆ.

ಹೆಸರು ..................

ವಿಳಾಸ ..................

..................

ಪೋಸ್ಟಲ್ ಮನಿಯಾರ್ಡರ್ ನಂಬರು ..................

ಸ್ಟಾಂಪುಗಳು .................. ತಾರೀಖು .................. 1937

ಉತ್ತರಗಳನ್ನು ಕಂಡುಹಿಡಿಯುವ ಕ್ರಮ:— ಎಲ್ಲಾ ಕಡೆಗಳಿಂದಲೂ ಮೇಲಿಂದ, ಅಡ್ಡವಾಗಿ, ಮೂಲೆಗಳಿಂದ 85 ಬರುವಂತೆ, ಒಂದು ಸಲ ಉಪಯೋಗಿಸಿದ ಸಂಖ್ಯೆಯನ್ನು ತಿರುಗಿ ಅದೇ ಚದರದಲ್ಲಿ ಉಪಯೋಗಿಸದೆ ಶಾಯಿಯಲ್ಲಿ ಬರೆದು ಕಳುಹಿಸಬೇಕು

### ನಿಬಂಧನೆಗಳು

ಪ್ರವೇಶ ಧನ ಕೂಪರ್ಗೆ ೦—೮—೦ ಆಣೆ. ಪ್ರವೇಶ ಧನವನ್ನು ಪೋಸ್ಟೇಜ್ ಸ್ಟಾಂಪುಗಳ ರೂಪದಲ್ಲಾಗಲಿ, ಮಣಿಯಾರ್ಡರ್ ಅಥವಾ ಪೋಸ್ಟಲ್ ಆರ್ಡರ್ ಮೂಲಕವಾಗಲಿ ಕಳುಹಿಸಬೇಕು. ಉತ್ತರಗಳು ೧೬—೮—೧೯೩೭ ರೊಳಗೆ ನಮ್ಮ ಕೈಸೇರ ಬೇಕು. ಈ ಸ್ಪರ್ಧೆಗೆ ಸಂಬಂಧವಾಗಿ ಕಳುಹಿಸಿದ ಹಣವನ್ನು ಯಾವ ಕಾರಣದಿಂದಲೂ ವಾಪಸುಮಾಡಲಾಗುವುದಿಲ್ಲ ಮತ್ತು ಯಾವ ಪತ್ರವ್ಯವಹಾರಕ್ಕೂ ಅವಕಾಶವಿಲ್ಲ. ಉತ್ತರಗಳ ಸಂಖ್ಯಾನುಸಾರ ಬಹುಮಾನದ ಮೊತ್ತವನ್ನು ಹೆಚ್ಚುಕಡಿಮೆ ಮಾಡಲಾಗುವುದು. ಒಂದಕ್ಕಿಂತ ಜಾಸ್ತಿಯಾಗಿ ಉತ್ತರಗಳು (ಎಲ್ಲಾ) ಬಂದಲ್ಲಿ ಬಹುಮಾನಗಳನ್ನು ಸಮವಾಗಿ ಹಂಚಲಾಗುವುದು. ಮೇನೇಜರ ತೀರ್ಮಾನವೇ ಕಡೇ ತೀರ್ಮಾನ. ತಮ್ಮ ವಿಳಾಸದೊಡನೆ ೦—೧—೦ ಆಣೆ ಸ್ಟಾಂಪು ಕಳಹಿಸಿದವರಿಗೆ ಫಲಿತಾಂಶವನ್ನು ಕಳುಹಿಸಲಾಗುವುದು. ಮೇಲ್ಕಂಡ ಷರತ್ತುಗಳನ್ನು ಒಪ್ಪುವವರು ಮಾತ್ರ ಸ್ಪರ್ಧೆಗಳಿಗೆ ಉತ್ತರಗಳನ್ನು ಕಳುಹಿಸಬೇಕು.

ಮ್ಯಾನೇಜರ್,

**ಸುಶೀಲ ಅಂಡ್ ಕೋ, ಕೊಳ್ಳೇಗಾಲ**

**ಎಷ್ಟು ಹಳೆಯ ಉನ್ಮಾದರೋಗವಾದರೂ, ಎಷ್ಟೇ ಭಯಂಕರವಾಗಿದ್ದರೂ, ಖಂಡಿತ ಗುಣ**




ಹೊಂದುವುದರಲ್ಲಿ ಸಂಶಯವೇ ಇಲ್ಲ. ಅನುಮಾನದಿಂದ ಪ್ರಯೋಜನವಿಲ್ಲ. ಪ್ರತ್ಯಕ್ಷಕ್ಕೆ ಬೇರೆ ಪ್ರಮಾಣವೇಕೆ? **ಒಂದೇ ಒಂದು ವಾರದೊಳಗೆ ಗುಣ ಕಂಡು ಬರುವದು.** ಇದರ ಸೇವನೆಯಿಂದ ಅಪಸ್ಮಾರ, ಹಿಸ್ಟೀರಿಯಾಗಳೂ ಸಂಪೂರ್ಣ ಗುಣ ಹೊಂದುವವು. ೧ ವಾರದ ಔಷಧಕ್ಕೆ ಕ್ರಯ ರೂ. ೩—೮—೦

**ಸ್ವಪ್ನೇಂದ್ರಿಯ ಸ್ತಂಭನ:—** ಸ್ವಪ್ನೇಂದ್ರಿಯ, ಮೂತ್ರದಲ್ಲಿ ವೀರ್ಯಸ್ರಾವ ಮೊದಲಾದ ಯುವಕರ ರೋಗಗಳು ಇದರಿಂದ ಖಂಡಿತ ನಿರ್ಮೂಲವಾಗುವವು. ಎರಡು ವಾರಗಳ ಔಷಧಕ್ಕೆ ರೂ. ೩. ಕೆಟಲಾಗಿಗೆ ಬರೆಯಿರಿ. ಏಜಂಟರು ಬೇಕು.

**ಮಾಳ ನಾರಾಯಣಭಟ್ಟ, ಸಿದ್ಧೌಷಧ ಭವನ, ಪೋಸ್ಟು ವಿಟ್ಲ. ದ. ಕನ್ನಡ.**


CC-0. Jangamwadi Math Collection. Digitized by eGangotri



೧೮. **ಹಳ್ಳಿಯ ಸಮಾಜ** ( ಅನುವಾದಿತ ಕಾದಂಬರಿ )
ಅನುವಾದಕರು: ಶ್ರೀ. ಆರ್. ವ್ಯಾಸರಾಯರು ಬೆಂಗಳೂರು.
ಪ್ರಕಾಶಕರು: ಮನೋಹರಗ್ರಂಥಮಾಲೆ ಧಾರವಾಡ. ಬೆಲೆ—೧೪—೦.

ಶ್ರೀಶರಚ್ಚಂದ್ರ ಚಟ್ಟೋಪಾಧ್ಯಾಯರೆಂದರೆ ವರ್ತಮಾನ ಬಂಗಾಲವನ್ನು ಮೇಲಕ್ಕೆತ್ತುತ್ತಿರುವ ಮಾಟಗಾರರು. ತಮ್ಮ ಕಥೆ-ಕಾದಂಬರಿಗಳಿಂದ ಬಂಗಾಲದ ಸಮಾಜವನ್ನೆ ಬಡಿದೆಬ್ಬಿಸುತ್ತಲಿದ್ದಾರೆ; ಇಷ್ಟೇ ಅಲ್ಲ, ತಮ್ಮ ಕಲಾಪ್ರತಿಭೆಯಿಂದ ಅನ್ಯಪ್ರಾಂತೀಯರನ್ನೂ ಅನ್ಯದೇಶೀಯರನ್ನೂ ಆಕರ್ಷಿಸಿಕೊಂಡುಬಿಟ್ಟಿದ್ದಾರೆ. ಇವರ ಕಾದಂಬರಿಗಳನ್ನು 'ಕಲೆಗಾಗಿ ಕಲೆ' ಎನ್ನುವವರೂ ಮೆಚ್ಚಬಹುದಾಗಿದೆ; 'ಜೀವನಕ್ಕಾಗಿ ಕಲೆ' ಎನ್ನುವವರೂ ಮೆಚ್ಚಬಹುದಾಗಿದೆ. ಇವರು ಆಯ್ದ ಸಾಮಾಜಿಕ ಕಥಾವಸ್ತುಗಳು ಬುದ್ಧಿಯನ್ನು ತಿದ್ದುತಿರುವಾಗಲೆ, ಪಾತ್ರಪರಿಪೋಷಣೆಯ ಸೊಗಸು ಹೃದಯವನ್ನು ಅರಳಿಸುತ್ತಿರುತ್ತದೆ. ಪ್ರಚಾರಾತ್ಮಕ ಸಾಹಿತ್ಯವನ್ನು ನಿರ್ಮಾಣಮಾಡುವವರು, ಸಾಹಿತ್ಯಕಲೆಯ ರಸಪಾಕವನ್ನು ಹದಗೆಡಿಸುವುದು ಹೆಚ್ಚು. ಆನಂದಕ್ಕಾಗಿ ಸಾಹಿತ್ಯವನ್ನು ನಿರ್ಮಾಣಮಾಡುವವರು, ಜೀವನವನ್ನು ಕಡೆಗಣಿಸಿ ಕನಸಿನ ಬೆನ್ನನ್ನು ಹತ್ತುವುದು ಹೆಚ್ಚು. ಇವೆರಡರ ಮಧುರಮಿಲನವನ್ನು ಶ್ರೀಮಾನ್ ಶರಚ್ಚಂದ್ರರ ಕಾದಂಬರಿಗಳಲ್ಲಿ ನಾವು ಕಾಣಬಹುದಾಗಿದೆ.

ಕನ್ನಡದಲ್ಲಿ — ಇದೊಂದನ್ನು ಸೇರಿಸಿದರೆ — ಶ್ರೀ ಶರಚ್ಚಂದ್ರರ ಆರು ಕಾದಂಬರಿಗಳು — ಇದುವರೆಗೆ — ಅನುವಾದಿತವಾಗಿ ಪ್ರಕಟವಾದಂತಾಯಿತು. ಶ್ರೀಶರಚ್ಚಂದ್ರರ ವಾಙ್ಮಯಪ್ರೇಮಿಗಳಾದ ಶ್ರೀ. ಆರ್. ವ್ಯಾಸರಾಯರೆ ಈಮೊದಲು **'ಸತಿ'** **'ಬಿಡುಗಡೆ'**, **'ಬ್ರಾಹ್ಮಣರ ಹುಡುಗಿ'** ಎಂಬ ಮೂರು ಸುಂದರ ಕಾದಂಬರಿಗಳನ್ನು ಅನುವಾದಿಸಿ ಪ್ರಕಟಿಸಿರುವರು. ಇದೀಗ ಅವರ ನಾಲ್ಕನೆಯ ಅನುವಾದದ ಪ್ರಕಟನೆ.

ಈ ಅನುವಾದಕರು ಅನುಸರಿಸಿದ ರೀತಿಯೊಂದೆಂದರೆ: ಮೂಲದಲ್ಲಿಯ ಬಂಗಾಲದ ಸಮಾಜವನ್ನು, ಪ್ರತಿಯೊಂದರಲ್ಲಿಯೂ ಕರ್ಣಾಟಕ ಸಮಾಜವನ್ನಾಗಿ ಮಾರ್ಪಡಿಸಿರುವುದು. ಭಾರತೀಯರ ಜೀವನದ ಸಿದ್ಧಿಯೆಲ್ಲ ಒಂದೆ ಬಗೆಯದಾದರೂ, ದೇಶ-ಕಾಲಭೇದದಿಂದ ಇವರ ಸಾಧನ-ಸಂಸ್ಕೃತಿಗಳು ಬೇರೆಬೇರೆಯಾಗಿರುವುವು. ಎಂತಲೆ ಬಂಗಾಲಿಗಳ ರೀತಿ-ನೀತಿಗಳಲ್ಲಿಯೂ ಕರ್ಣಾಟಕರ ರೀತಿ-ನೀತಿಯಲ್ಲಿಯೂ—ಒಂದೇ ಸಂಸ್ಕೃತಿಯವರಾಗಿದ್ದರೂ—ಸಾಕಷ್ಟು ವ್ಯತ್ಯಾಸಗಳು ಕಂಡುಬರುವುವು. ಶರಚ್ಚಂದ್ರರು ಗುರಿಯಾಗಿಟ್ಟುಕೊಂಡು ಚಿತ್ರಿಸಿದುದು ಬಂಗಾಲಿಗಳ ನಡೆ-ನುಡಿಯನ್ನು — ಬುದ್ಧಿ-ಹೃದಯವನ್ನು. ಇವುಗಳನ್ನು ಚಿತ್ರಿಸುವ ಕಾರ್ಯದಲ್ಲಿ ಅವರು ಸಂಪೂರ್ಣ ಯಶಸ್ವಿಗಳಾಗಿದ್ದಾರೆ. ಆದರೆ ಅವರ ಕತೆಯಲ್ಲಿಯೆ ಬಂದು, ಅವರು ಆಡಿಸಿದ ಮಾತುಗಳನ್ನೇ ಆಡುತ್ತ, ಕರ್ಣಾಟಕಸ್ಥರು ನಮ್ಮ ಒಳಗಣ್ಣೆದುರು ಬಂದುನಿಂತಾಗ, ಕಥೆಯ ಬೆಳೆವಣಿಗೆಯೂ ಪಾತ್ರಪರಿಪೋಷಣೆಯೂ ಅಸ್ವಾಭಾವಿಕವಾಗಿ ತೋರದಿರವು. ಅನುವಾದದಲ್ಲಿಯೂ ಮೂಲದಲ್ಲಿಯ ಬಂಗಾಲಿ ಜನರನ್ನೆ ತಂದುಬಿಟ್ಟಿದ್ದರೆ—ಪ್ರಸ್ತುತ ಅನುವಾದಕರು— ಶ್ರೀಶರಚ್ಚಂದ್ರರ ಕಲೆಯ ಪರಿಚಯವನ್ನು ಆಭಾಸವಿಲ್ಲದಂತೆ ಕನ್ನಡಿಗರಿಗೆ ಮಾಡಿತೋರಿಸಬಹುದಾಗಿದ್ದಿತು. ಬಂಗಾಲಿ ಜನರ ರೀತಿ-ನಡೆವಳಿಕೆಗಳನ್ನು ನಾವು ಚೆನ್ನಾಗಿ ಅರ್ಥ-ಮಾಡಿಕೊಂಡು, ಅವರ ಜೀವನವನ್ನು ಗ್ರಹಿಸಬಲ್ಲೆವಾದರೂ, ಕನ್ನಡಿಗರು ಬಂಗಾಲಿಗಳಂತೆ ನುಡಿದು-ನಡೆದಾಡುವುದರಲ್ಲಿ ಔಚಿತ್ಯವನ್ನು ಕಾಣದೆ, ಮೂಲದ ಕಲಾವೈಭವದ ಸೊಗಸನ್ನು ಕಳೆದುಕೊಳ್ಳುವೆವು.

ಈ ಗ್ರಂಥವು ಶ್ರೀಶರಚ್ಚಂದ್ರರ 'ಪಲ್ಲೀ ಸಮಾಜ' ಎಂಬ ಕಾದಂಬರಿಯ ಅನುವಾದವು. ಬಂಗಾಲಿ ಸಾಹಿತ್ಯದಲ್ಲಿ ಇದರ ಸ್ಥಾನವು ತುಂಬ ಮೇಲಿನ ತರಗತಿಯದು. ಶರಚ್ಚಂದ್ರರ ಕಲೆಯ ಸುಂದರಕೃತಿಯಿದೆಂಬ ಖ್ಯಾತಿ ಎಲ್ಲೆಲ್ಲಿಯೂ ಇದೆ. ಮೂಲವನ್ನೋದಿ ನೋಡಿದವರಿಗೆ ಆ ಖ್ಯಾತಿಯ ಸತ್ಯತೆಯೂ ಕಂಡುಬರಬಹುದಾಗಿದೆ.

ಈ ಕಾದಂಬರಿಯ ಕಥಾವಸ್ತುವನ್ನು ಸ್ವಲ್ಪಮಾತುಗಳಲ್ಲಿ ಸಂಗ್ರಹಿಸಿ ಹೇಳುವುದೆಂದರೆ ಯಾರಿಗೂ ಸಾಧ್ಯವಿಲ್ಲ. ಪ್ರತಿಯೊಂದು ಪಾತ್ರದ ಪ್ರತಿಯೊಂದು ವಾಕ್ಯವೂ ಕತೆಯನ್ನು ಮುಂದೆ ಮುಂದೆ ಒಯ್ಯುತ್ತದೆಂದ ಮೇಲೆ, ನಾಲ್ಕು ಮಾತುಗಳಲ್ಲಿ ೧೭೬ ಪುಟದ ಕತೆಯನ್ನು ಅಡಗಿಸುವುದು

CC-0. Jangamwadi Math Collection. Digitized by eGangotri

ಹೇಗೆ? ಆದರೂ ಇಷ್ಟು ಹೇಳಬಹುದು: "ರಮೇಶನೆಂಬೊಬ್ಬ ಸುಶಿಕ್ಷಿತ ತರುಣ ತನ್ನ ಹಳ್ಳಿಗೆ ಬಂದು, ಹಳ್ಳಿಯ ಜನರ ದುರವಸ್ಥೆಯನ್ನು ಕಂಡು, ಅವರನ್ನು ಮೇಲಕ್ಕೆತ್ತಲು ತನು-ಮನ-ಧನದಿಂದ ಸಿದ್ಧನಾಗುವನು. ಹಳ್ಳಿಗರ ಅಜ್ಞಾನದಿಂದಲೆ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದ ಆ ಹಳ್ಳಿಯ ಮುಂದಾಳು—ರಮೇಶನ ದಾಯಾದಿವೇಣಿಯು—ಹೊಟ್ಟೆಯಕಿಚ್ಚಿನಿಂದ ಅವನನ್ನು ನಾನಾರೀತಿಯಿಂದ ಕಾಡುವನು. ಕೊನೆಗೆ ಸುಳ್ಳು ಆರೋಪವನ್ನೊಡ್ಡಿ ಅವನನ್ನು ಸೆರೆಮನೆಗೆ ಕೂಡ ಕಳುಹುವನು. ಈ ಮುಂದಾಳಿನ ಹೆದರಿಕೆಗಾಗಿ, ಆ ತರುಣನಿಂದ ಬೇಕಾದಷ್ಟು ನೆರವನ್ನು ಪಡೆದ ಸಾಮಾಜಿಕರೂ—ಗೋವಿಂದಗಂಗಾಳಿ, ಭುಜಂಗಾಚಾರಿ ಮೊದಲಾದವರು—ವೇಣಿಗೇ ಸಹಾಯಕರಾಗುವರು. ರಮೇಶನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ರಮೆಯೂ ಸಾಮಾಜಿಕ ಆಪತ್ತಿಗೆ ಹೆದರಿ, ಅನಿವಾರ್ಯವಾಗಿ, ವೇಣಿಯ ಕಾರ್ಯದಲ್ಲಿ ಸಹಕಾರಿಯಾಗುತ್ತಾಳೆ. ರಮೇಶನ ಉದ್ಧಾರಕಾರ್ಯವು ಸಾಮಾನ್ಯ ಜನತೆಯ ಸಹಾನುಭೂತಿಯನ್ನು ಸೆಳೆದುಕೊಂಡು ಯಶಸ್ವಿಯಾಗಿ ನಿಲ್ಲುತ್ತದೆ. ವಿರೋಧಿಗಳನ್ನು ತಲೆಬಾಗಿಸಲು ಹಚ್ಚುತ್ತದೆ." ಇದಿಷ್ಟೇ ಕತೆ. ಇದಿಷ್ಟನ್ನೇ ಕೇಳಿದವರಿಗೆ ಇದೊಂದು ಸುಖಾಂತ ಕಥಾವಸ್ತುವೆಂದೆನಿಸಬಹುದಾಗಿದೆ; ಆದರೆ ಕತೆಯ ಪ್ರಾರಂಭದಿಂದಲೂ ಬೆಳೆಯುತ್ತ ಬಂದಿದ್ದ ವೇಣಿಯ ತಾಯಿಯ ಮಾತೃಹೃದಯದ ವ್ಯಥೆಯ ಚಿತ್ರವೂ, ರಮೇಶ-ರಮೆಯರ ಭಗ್ನಹೃದಯದ ನಿರಾಶೆಯ ಚಿತ್ರವೂ, ಕತೆಯನ್ನು ವಿಷಾದಾಂತವನ್ನಾಗಿಸಿವೆ. ಕತೆಯನ್ನು ಓದಿ ಮುಗಿಸಿದವರೆಲ್ಲರೂ, ನೊಂದ ಎದೆಯಿಂದ ನಿಟ್ಟುಸಿರನ್ನು ಕರೆಯದೆ ಇರರು. ಹಳ್ಳಿಯ ದುರವಸ್ಥೆಯ ಬಹಿರಂಗ, ರಮೇಶ-ರಮೆ-ದೊಡ್ಡಮ್ಮ ಇವರ ಹೃದಯಸ್ಥಿತಿಯ ಅಂತರಂಗ....ಇವೆರಡೂ ಈ ಕಾದಂಬರಿಯ ದೇಹ-ಜೀವಗಳಂತಿವೆ. ದೇಹ ಗೋಚರವಾಗುವಂತಹದು; ವರ್ಣನೀಯ! ಜೀವ ಅಗೋಚರವಾದುದು, ಅವರ್ಣನೀಯ! ದೇಹದ ಮಾತು ಶ್ರುತ, ಜೀವದ ಮಾತು ಅಶ್ರುತ. ಒಂದು ಬುದ್ಧಿಗೆ ಅನ್ನ; ಇನ್ನೊಂದು ಭಾವನೆಗೆ ಅನ್ನ. ಎಂತಲೆ ಶರಚ್ಚಂದ್ರರ ಈ ಬಗೆಯ ಕೃತಿಗಳು ಉಪಯುಕ್ತತಾವಾದಿಗಳಿಗೂ ಇಷ್ಟವೆನಿಸುವುವು. ಭಾವುಕರಿಗೂ ಇಷ್ಟವೆನಿಸುವುವು.

ಪಾತ್ರಗಳ ವಿಚಾರವಾಗಿ ಹೇಳುವುದೆಂದರೆ: ಈ ಕಾದಂಬರಿಯಲ್ಲಿ ಒಂದೆ ಸಲ ಮುಖವಿಟ್ಟು, ಒಂದೆ ಮಾತನಾಡಿ ಹೋದ ವ್ಯಕ್ತಿಯೂ ತನ್ನ ಅಂತಃಸ್ವರೂಪದ ಕಲ್ಪನೆಯನ್ನು ವಾಚಕರಿಗೆ ಉಂಟುಮಾಡಿಕೊಡದೆ ಇರದು. (ಉದಾ: ಧರ್ಮದಾಸ, ಹಲಧರ; ವನಮಾಲಿ ಪಾಠಕ; ಮುಂಜಯ್ಯ, ಬಲವಂತ, ಅಕಬರ, ಹಳೆಯ ಮೊದಲಾದವರು). ವೇಣೀಮಾಧವ, ಗೋವಿಂದಗಂಗಾಳಿ, ಭುಜಂಗಾಚಾರಿ, ಅವನ ಮಗಳು, ಚಿಕ್ಕಿ ಇವರೆಲ್ಲರ ಎದೆಯ ಕೊಳಕು ತನ್ನ ವಾಸ್ತವತೆಯನ್ನು ಸರಿಯಾಗಿ ತೋರಿಸಿ, ವಾಚಕರ ಕೋಪ-ಶಾಪಗಳಿಗೆ ಕಾರಣವಾಗದೆ ಬಿಡದು. ರಮೇಶ, ರಮೆ, ದೊಡ್ಡಮ್ಮ ಇವರ ದೊಡ್ಡತನವು ಪರಿಚಿತರನ್ನು ಆತ್ಮೀಯರನ್ನಾಗಿಸಿಕೊಳ್ಳದೆ ಬಿಡದು. ಅಲ್ಲಲ್ಲಿ ಬಂದ ಸಾಮಾಜಿಕಚಿತ್ರಗಳಂತೂ (ಕಿರಾಣಿಯಂಗಡಿ, ಸೀಗೆಕಾಯಿಯ ಪಾಲು, ಹಳ್ಳಿಯ ಶಾಲೆ, ಮುಹಮ್ಮದೀಯರ ಸಾಮುದಾಯಿಕ ಜೀವನ, ಹಿಂದುಗಳ ಒಡಕು ಸಮಾಜ) ಬೆರಗುವಡಿಸದೆ—ನಿಟ್ಟುಸಿರಿಕ್ಕಿಸದೆ ಇರವು.

ಕಾದಂಬರಿಯ ಸೊಗಸು ಇಷ್ಟರ ಮಟ್ಟಿಗಿದ್ದರೂ, ಅನುವಾದದ ರೀತಿಯೂ ದುದ್ರಣದೋಷಗಳೂ ಸೇರಿ, ಅದನ್ನು ನುಂಗಿ ನೀರುಕುಡಿದು ಬಿಟ್ಟಿವೆ. ಮೈಸೂರು ದೇಶದ ಮಾಧ್ವಸಮಾಜದ ಮನೆಮಾತಿನ ರೀತಿಯನ್ನು ಹೆಚ್ಚಾಗಿ ಅನುಸರಿಸಿದುದರಿಂದ, ಉತ್ತರ ಕರ್ನಾಟಕದ ಬಹು ಜನ ವಾಚಕರು ಅನುವಾದದ ಭಾಷೆಯ ಬೆನ್ನನ್ನೇ ಹತ್ತಲಾರರು. ಬಹಳ ಕಡೆಗೆ ಅನುವಾದದ ಭಾಷೆ ಆಭಾಸದ ಕೊನೆಯನ್ನು ಮುಟ್ಟಿದೆ. ಕೆಲವು ಉದಾಹರಣೆಗಳನ್ನು ನೋಡಿ:—

(೧) "ಜಪದಲ್ಲಿ ನಿರತಳಾದ ಚಿಕ್ಕಿಯ ಕಿವಿಯ ಕುಹರದಲ್ಲಿ ಈ ಅತ್ಯಂತ ರುಚಿಕರವಾದ ಜಗಳದ ಆಲೋಚನೆ ತಲುಪಿದ ಮಾತ್ರದಿಂದಲೆ ಜಪವನ್ನು ಜಾರಿಸಿ ಅವಳು ಎದ್ದು ಬಂದಳು." (ಪು. ೨)

(೨) "ರಮೇಶ ಬುದ್ಧಿಭ್ರಷ್ಟನಂತೆ ಕಟ್ಟಿಗೆಯಾಗಿ ನೋಡುತ್ತ ನಿಂತನು." (ಪು. ೮)

(೩) "....ಧರ್ಮದಾಸನು ಇನ್ನೂ ಉತ್ತಮವಾಗಿ ಹೇಳುವ ಪ್ರಯತ್ನದಲ್ಲಿ ತುಂಬಿ ತುಳುಕುತ್ತಿದ್ದನು." (ಪು. ೯)

(೪) "....ಮತ್ತು ನನ್ನ ಜೊತೆಯಲ್ಲಿ ನಿಮ್ಮ ದೊಡ್ಡಣ್ಣನ ಹತ್ತರ ಒಂದು ಸಲ ಹೋಗೋಣು ಬಾ ನಡೆ."

(೫) "....ಇವರು ಶಿಕ್ಷಣ ಮತ್ತು ಅಭ್ಯಾಸದ ದೋಷದಿಂದ ಅಸಂಕೋಚವಾಗಿ ಎಷ್ಟೇ ದೊಡ್ಡ ಹೇಯಮಾತನ್ನಾದರೂ ಅಂದುಬಿಡುವರು...." (ಪು. ೩೨)

(೬) "ನನ್ನೊಡನೆ ಇವರಾರಿಗೂ ಯೋಗವಿಲ್ಲ...." (ಪು. ೩೭)

CC-0. Jangamwadi Math Collection. Digitized by eGangotri

(೭) "ಆದರೆ ಅಮ್ಮ ಲಕ್ಷ್ಮಿ ತಲೇ ಮೇಲಿರಲಿ; ಪರದೇಶಕ್ಕೆ ಮಾತ್ರ ಯಾರಾದರೂ ಹೋದಿಗೀದೀರಿ!"

(೮) "ಇದೇ ಚಿಕ್ಕಿಯೆ ಅಂದು ಬೆಳಿಗ್ಗೆಯೂ ಮನೆಯಲ್ಲಿ ರೇಗಿ ಕಾರಿಹೋದ ವಿಷದಿಂದ ವಿಶ್ವೇಶ್ವರಿಯ ಮೈ ರಕ್ತಮಾಂಸಗಳಿಂದ ಆದುದೆಂತಲೊ, ಕಟ್ಟಿಗೆಯಿಂದ ಆದುದಲ್ಲವೆಂತಲೊ ಅಥವಾ ಅವಳು ಈಗಾಗಿನ ಕಾಲದವಳಲ್ಲವೆಂತಲೊ ಸುಟ್ಟು ಬೂದಿಗುಡ್ಡೆಯಾಗಲಿಲ್ಲ"(ಪು. ೫೭)

(೯) "ಅವನ ಈ ಅಭಾವನೀಯವಾದ ಸಂಪೂರ್ಣ ಅಪ್ರತ್ಯಾಸಿತ ಉಗ್ರತೆಯಿಂದ ಭುಜಂಗ ದಿಗಿಲಿನಿಂದ ಸುಡಿದನು. (ಪು. ೬೧)

ಸರಿ; ಸಾಕಿನ್ನು! ಯಾವ ಪುಟವನ್ನು ತೆಗೆದರೂ ಒಂದೆರಡಾದರೂ ಇಂತಹ ಉದಾಹರಣೆಗಳು ಸಿಕ್ಕದಿರುವುದಿಲ್ಲ. ಬಂಗಾಲದಲ್ಲಿ ಬಳಸಲಾಗುತ್ತಿರುವ 'ಕಾಂಡ' 'ಮನೋಯೋಗ' 'ಚೇಷ್ಟೆ' 'ಷಡ್ಯಂತ್ರ' ಮೊದಲಾದ ಸಂಸ್ಕೃತಶಬ್ದಗಳು, ಆ ಅರ್ಥದಲ್ಲಿ ಕನ್ನಡಿಗರಿಗೆ ಅಪರಿಚಿತ. ಆದರೂ ಅವುಗಳನ್ನು ಇದ್ದುದಿದ್ದಂತೆ ಬಳಸಲಾಗಿದೆ. ಅನುವಾದಿತವಾಕ್ಯಗಳು ತುಂಬ ಉದ್ದವಾಗಿವೆಯಲ್ಲದೆ, ವಿರಾಮಚಿಹ್ನೆಗಳ ಜೋಡಣೆಯು ಸರಿಯಾಗಿ ಇರದುದರಿಂದ ಓದುವುದಕ್ಕೆ ಅಡ್ಡಿಯೊದವಿಸುತ್ತವೆ. ಅಚ್ಚಿನ ದೋಷಗಳಂತೂ ಮೇರೆಮೀರಿಹೋಗಿವೆ. ಕನ್ನಡದಲ್ಲಿ ಪ್ರಕಟವಾಗುವ ಪುಸ್ತಕಗಳು ಶುದ್ಧವಾಗಿರಬೇಕೆಂಬುದನ್ನು ಲೇಖಕರೂ, ಅನುವಾದಕರೂ, ಪ್ರಕಾಶಕರೂ, ಮುದ್ರಕರೂ ಯಾವಾಗಲೂ ಲಕ್ಷ್ಯದಲ್ಲಿಟ್ಟುಕೊಂಡು ನಡೆದಲ್ಲಿ, ಹಣ ವೆಚ್ಚಮಾಡಿ.ಪ್ರಕಟಿಸುತ್ತಿರುವ ಗ್ರಂಥಗಳ ಉಪಯೋಗವು ಒಳ್ಳೆಯದಾಗುವುದು. ಇವರಲ್ಲಿ ಯಾರಾದರೂ—ಒಬ್ಬರೆ ಒಬ್ಬರು ತಮ್ಮ ಕರ್ತವ್ಯವನ್ನು ಮರೆತು ನಡೆದರೂ ಗ್ರಂಥದಲ್ಲಿ ಕೊರತೆ ಬಂದು ಸೇರುವುದು. ಪ್ರಸ್ತುತ ಗ್ರಂಥದ ವಿಚಾರದಲ್ಲಿ ಎಲ್ಲರೂ ತಮ್ಮ ತಮ್ಮ ಕರ್ತವ್ಯವನ್ನು ಮರೆತು ನಡೆದಂತಿರುವುದರಿಂದ, ಇದೊಂದು ಕೊರತೆಯ ಮುದ್ದೆಯಾಗಿ ಕುಳಿತಿರುವುದು. ಶ್ರೀಶರಚ್ಚಂದ್ರರಂತಹ ಶ್ರೇಷ್ಠ ಸಾಹಿತಿಗಳ ಕೃತಿಯು ಈ ರೂಪದಿಂದ ಕನ್ನಡಿಗರ ಕೈಗೆ ಸಿಕ್ಕುವುದೆಂದರೆ ಸ್ವಲ್ಪವೂ ಉಚಿತವೆನಿಸದು. ಆದರೆ ಒಂದು ಮಾತು: ಇದು ಇಷ್ಟೊಂದು ಕೊರತೆಯಿಂದ ಕೂಡಿಕೊಂಡಿದ್ದರೂ,ಇಂತಹದರಲ್ಲಿಯೂ ಮೂಲ ಲೇಖಕರ ಕಲೆಯ ಸೌಂದರ್ಯವನ್ನು ಅಲ್ಲಲ್ಲಿ ನಾವು ಕಾಣದಿರಲಾರೆವು. ಒಳ್ಳೆಯ ಅನುವಾದವು ದೊರೆಯುವವರೆಗೆ, ಬಂಗಾಲಿಯನ್ನರಿಯದ ಕನ್ನಡ ವಾಚಕರು ತಕ್ಕಮಟ್ಟಿಗೆ ಇದರಿಂದ ಪ್ರಯೋಜನವನ್ನು ಪಡೆಯಬಹುದಾಗಿದೆ.

ಬೆಟಗೇರಿ ಕೃಷ್ಣಶರ್ಮ

**ಗೋಮುಖವ್ಯಾಘ್ರ**: (ಏಕಾಂಕ ನಾಟಕ) ಬರೆದವರು– ಅ. ನ. ಕೃಷ್ಣರಾಯರು. ಕ್ರಾ. ⅛ ಪುಟ ೩೪+೪. ಬೆಲೆ–೪ ಆಣೆ.

ಅಗಾಧ ಜೀವನವನ್ನು ಅಂಗೈ ಹಿಡಿತದಲ್ಲಿ ಆಯ್ದುಕೊಂಡು, ಅದರ ಹುರುಳು-ತಿರುಳುಗಳನ್ನು ಏಕಾಗ್ರವಾಗಿ ರೂಪಕೊಟ್ಟು ನಿರೂಪಿಸುವ ಕೈವಾಡ-ಕಣ್ಣೋಟಗಳು ಏಕಾಂಕ ನಾಟಕಕಾರನಲ್ಲಿ ಅಡಗಿರಬೇಕು. ರಾವುಗನ್ನಡಿಯ ಮುಖಾಂತರವಾಗಿ ಪಡಿಮೂಡಿಸಲ್ಪಟ್ಟ ಸೂರ್ಯನಬಿಂಬವು, ಅಲ್ಪಮಾತ್ರವಾದರೂ ತೀಕ್ಷ್ಣವಾಗಿರುತ್ತದೆ; ಉಜ್ವಲವಾಗಿರುತ್ತದೆ. ಹಾಗೆಯೆ ಏಕಾಂಕನಾಟಕದ ಜೀವನದ ಘಟನಾವಳಿ. ನೂರಾರು ದಿವಸದ ಪ್ರಪಂಚವು ಅರ್ಧ ತಾಸಿನ ಅವಧಿಯಲ್ಲಿ ಯಾವರೀತಿಯಲ್ಲಿ ಪರ್ಯವಸಾನ ಹೊಂದಿತೆಂಬುದನ್ನು 'ಗೋಮುಖವ್ಯಾಘ್ರ'ದಿಂದ ಕಂಡುಕೊಳ್ಳಬಹುದು. ಶಾಮಸುಂದರ—ಇಂದಿರೆ, ರಂಗನಾಥ—ಪದ್ಮ ಇವೆರಡು ದಾಂಪತ್ಯಗಳ ಜೀವನದಲ್ಲಿ, ಅನ್ಯೋನ್ಯ ಪ್ರೀತಿಯಿಲ್ಲ—ಅನ್ಯ-ಅನ್ಯರಲ್ಲಿ. ಉಶೃಂಖಲ ಜೀವನವನ್ನು ಸವಿಯಬೇಕೆಂಬ ಇಂದಿರೆಯ ರಾಜಸವೃತ್ತಿಗೆ, ಭಾವನಾ ಪ್ರಪಂಚಲೋಲನಾದ ಶಾಮಸುಂದರನ ಸಾತ್ತ್ವಿಕ ಸ್ವಭಾವವು ಒಗ್ಗುವುದಿಲ್ಲ. ಅಂತೆಯೆ ಇಂದಿರೆಯು ರಂಗನಾಥನ ತೋಳತಕ್ಕೆಯನ್ನಾಶ್ರಯಿಸಿದಲ್ಲಿ, ಉದಾರಹೃದಯದ ಶಾಮನಿಗೆ ಸಂತೃಪ್ತಿಯಿದೆ. ಇಂದಿರೆಯ ಸುಖಕ್ಕೆ ಅಡ್ಡಬರಬಾರದೆಂದೇ ದೈವವಶಾತ್ (ದುರ್ದೈವವಶಾತ್?) ಶಾಮಸುಂದರನಿಗೆ ಜೇಲಿನ ವಾರಂಟು ಬರುತ್ತದೆ. ಇಂದಿರೆಯನ್ನು ರಂಗನಾಥನು ಕಾಮುಕವೃತ್ತಿಯಲ್ಲಿ ಕೂಡಿದರೂ, ಪದ್ಮಳು ಮಾತ್ರ, ಶಾಮನನ್ನು ಕೊನೆವರೆಗೂ ಗುರು-ಹಿರಿಯನೆಂದೇ ಕಾಣುವಳು.

ಕೆಲವೆಡೆಗೆ ಮಾತ್ರ ಇಂದಿರೆಯ ಪಾತ್ರವು ನಂಬಲು ಆಶ್ಚರ್ಯವಾಗುವಷ್ಟು ಕಾಠಿಣ್ಯಕ್ಕೆಳಿದಿದೆ. "ದೇವ್ರಂತೆ ದೇವ್ರು! ನನ್ನ ಭಾಗ್ಯದ ದೆವ್ವ!" ಎಂದು ಆಕೆ ಗಂಡನನ್ನು ಶಪಿಸುವುದು! ಗಂಡನಾದ ಶಾಮನ ಉದಾರವೃತ್ತಿಯೂ ಕೂಡ ಅಷ್ಟೇ—ಷಂಢನೆನ್ನುವಮಟ್ಟಿಗೂ—ಆಶ್ಚರ್ಯಕರವಾಗಿದೆ. ಇಷ್ಟೊಂದು ನೀಚ, ಅಷ್ಟೇ ಉಚ್ಚ ದಂಪತಿಗಳನ್ನು, ಜೀವನದ ಸಮಾಜದಲ್ಲಿ ಕಾಣುವುದು ಎಷ್ಟೇ ಅಸಾಧ್ಯವಾದರೂ, ನಾಟಕಕಾರನಿಗೆ ಅದು ಅಸಾಧ್ಯವಲ್ಲ. "ಜೀವನದ ವಿಪರ್ಯಾಸವನ್ನು ತಿದ್ದಿದ" ಈ ಬಿಂಬವು

CC-0. Jangamwadi Math Collection. Digitized by eGangotri

ತುಸು ಅತಿಯಾಗಿ ತಿದ್ದಿದಂತೆ ಎನಿಸುತ್ತದೆ. ಕಲೆಯು ಜೀವನದಿಂದ ಎಷ್ಟೇ ದೂರವಾಗಿದ್ದರೂ ಜೀವನಕ್ಕೆ ಹೊರ-ತಾಗಿಲ್ಲ—ಎನ್ನುವಂತಿರಬೇಕು. ಆದರೂ ನಾಟಕಕಾರರು ಜೀವನವನ್ನು ಬೆದಕಿ, ಸಮಸ್ಯೆಗನ್ನು ಕೆದಕಿ ಪಟ್ಟ 'ಸತ್ಯಾನ್ವೇಷಣೆ'ಯು ಶ್ಲಾಘನೀಯವೇ.

—ನಾ. ಕು.

**ಭಾರತೀಯ ನವಜನ್ಮ**: ಮೂಲ/ಲೇಖಕರು ಶ್ರೀಅರವಿಂದ ಘೋಷರು. ಅನುವಾದಕರು:- ಶ್ರೀ. ದ. ರಾ. ಬೇಂದ್ರೆ ಎಂ. ಎ. ಕ್ರಾ. ೭ ದ ಪುಟಗಳು- ೪೪+೧೪. ಬೆಲೆ ಹನ್ನೆರಡಾಣೆ. ಪ್ರಕಾಶಕರು:- ಅರವಿಂದ ಗ್ರಂಥಮಾಲಾ, ಹಲಸಂಗಿ.

ಕಳೆದ ಹದಿನಾರು ವರುಷಗಳಿಂದ ಪಾಂಡೀಚೇರಿಯಲ್ಲಿ ಆಶ್ರಮಸ್ಥರಾಗಿ, ಯೋಗಸಾಧನೆಯಲ್ಲಿಯೆ ನಿರತರಾಗಿ, ಸ್ವರ್ಗ-ಮರ್ತ್ಯ-ಪಾತಾಲಗಳ ವಿದ್ಯಮಾನಗಳನ್ನು ಅರಿತುಕೊಳ್ಳುವ ಅಂತಶ್ಶಕ್ತಿಯನ್ನು ಬೆಳಗಿಸಿಕೊಂಡಿರುವ ಶ್ರೀಅರವಿಂದ ಘೋಷರೆಂದರೆ ಭಾರತೀಯರಿಗೆ ದೇವದೂತರಿದ್ದಂತೆ. "ಈ ಅಧೋಗತಿಗಿಳಿದ ಜನಾಂಗವನ್ನು ಉದ್ಧರಿಸುವ ಬಲವು ನನ್ನ ಕಾಲೊಳಗಿದೆ........ಪರಮೇಶ್ವರನು ಈ ಮಹಾವ್ರತವನ್ನು ನೆರವೇರಿಸುವ ಸಲುವಾಗಿಯೇ ನನ್ನನ್ನು ಭೂತಲಕ್ಕೆ ಕಳುಹಿಸಿರುವನು." ಎಂದು ಅವರು, ತಮ್ಮ ಸಹಧರ್ಮಿಣಿಗೆ ಬರೆದ ಪತ್ರದಲ್ಲಿ ಉಸಿರಿದ್ದಾರೆ. ಶ್ರೀಕೃಷ್ಣನ ಬಾಲಲೀಲೆಯಂತೆಯೆ ಶ್ರೀಅರವಿಂದರ ಜ್ಞಾನಲೀಲೆಯು ಆಶ್ಚರ್ಯ-ವೈಚಿತ್ರ್ಯಗಳ ಆಗರವಾಗಿದೆ. ಅವರ ಜೀವನಚರಿತ್ರೆಯನ್ನು ಅರಿಯುವುದೆಂದರೆ ಒಬ್ಬ ಮಹಾಮಹಿಮನ ಜೀವನವನ್ನು ಅರಿತಂತೆ. ಅವರು ಯೋಗಪುರುಷರು. ಆಧುನಿಕ ಮಹರ್ಷಿಗಳು. ಯೋಗ-ಸಾಮ್ರಾಜ್ಯದ ಭೋಗಿಗಳು. ಧ್ಯಾನಸಮಾಧಿಯ ಕಾಂತಿ-ಸ್ಪರ್ಶದಿಂದ ಆನಂದವನ್ನು ಪಡೆದಂತಹರು. ಅರವಿಂದರ ಕೀರ್ತಿಪರಿಮಳವು ಅರಳಿ ಹಬ್ಬಿದುದು ಜ್ಞಾನಸೂರ್ಯನ ಪ್ರೇರಣೆಯಿಂದಲೆ.

ಭರತಖಂಡದಲ್ಲಿ ಸಾಂಸ್ಕೃತಿಕ ವಿಚಾರವನ್ನು ನಿರ್ದೇಶಿ-ಸುವ ಈ "ಭಾರತೀಯ ನವಜನ್ಮ" ವು ರಾಜಕಾರಣಕ್ಕೆ ಎಳ್ಳಷ್ಟೂ ಸಂಬಂಧಿಸಿಲ್ಲ. ಸಾಮಾಜಿಕ ನ್ಯಾಯನೀತಿ-ಗಳನ್ನು ಒಳಗೊಂಡಿಲ್ಲ. ಭಾರತದ ಆರ್ಷೇಯವಾದ ಆಧ್ಯಾತ್ಮಿಕತೆಯನ್ನಿಷ್ಟೆ ಪರಿಶೀಲಿಸಿ ವಿಶದಗೊಳಿಸುತ್ತದೆ. ೧೯೦೮ರಲ್ಲಿ ಶ್ರೀವಾಸುದೇವನ ಸಾಕ್ಷಾತ್ಕಾರದಿಂದಲೇ ಶ್ರೀಅರವಿಂದರಿಗೆ ಭಗವತ್ಸಂದೇಶವುಂಟಾಗಿ 'ಭಾರತದ ಉನ್ನತಿಯು ಅದರ ಸನಾತನ ಆಧ್ಯಾತ್ಮದಲ್ಲಿದೆ' ಎಂಬ ಸೂತ್ರದ ಸಂದರ್ಶನವಾಯಿತು. ಅಂತೆಯೇ ಅವರು ಅಂದಿನಿಂದ ಭಾರತೀಯರಿಗೆ ನವಜನ್ಮವು ಬರಬೇಕಾದರೆ 'ಪೂರ್ಣಯೋಗ' ದ ಸಾಧನೆ ಬೇಕೆಂದು ಸಾರಹತ್ತಿದರು. 'ಅಧ್ಯಾತ್ಮದ ಅಭಿವೃದ್ಧಿ' ಯಿಂದಲೇ ಭರತಖಂಡದ ಅಭಿವೃದ್ಧಿಯೆಂಬುದನ್ನು 'ಭಾರತೀಯ ನವಜನ್ಮ' ದಲ್ಲಿ ನಿರೂಪಿಸಿದರು.

'ತಲೆತುರಿಸಹಚ್ಚಿ' ತಲೆಕೆಡಿಸಿದರೂ ಕೊನೆಗೆ ತಲೆ-ದೂಗಿಸುವಂತಹ ಶ್ರೀಅರವಿಂದರ ಶೈಲಿಯನ್ನು, ಶ್ರೀ. ಬೇಂದ್ರೆಯವರಿಂದ ಹದಗೊಂಡ ಕನ್ನಡಶೈಲಿಯು ಚೆನ್ನಾಗಿ ಕನ್ನಡಿಸಿದೆಯೆಂದೇ ಹೇಳಬೇಕು. ಮೂಲದ ಉದ್ದುದ್ದ ವಾಕ್ಯರಚನೆಗಳೂ . ಅನೇಕಾನೇಕ ವಿರಾಮಗಳೂ ಅನುವಾದದಲ್ಲಿ ಸಾಧ್ಯವಾದಮಟ್ಟಿಗೂ ನಿಯತ ವಾಕ್ಯಗಳಾಗಿ ಪರಿಣಮಿಸಿವೆ. ಮೂಲದ ವಿಷಯನಿರೂಪಕ ಶಕ್ತಿಯು ಅನುವಾದದಲ್ಲಿಯಾದರೂ ಅಚ್ಚಳಿಯದೆ ಬಂದಿರುವುದು. ಒಂದೆರಡು ಕಡೆ ಮಾತ್ರ—ವಿಷಯವು ತೀರ ಆಧ್ಯಾತ್ಮಿಕತೆಗೆ ಇಳಿದಲ್ಲಿ—ಶೈಲಿಯು ನಸು ಮಸಕಾಗಿ, ವಿಷಯ ಕೊಂಚ ಕಠಿನವೆನಿಸುವದು. ಅರವಿಂದ ಗ್ರಂಥಮಾಲೆಯಲ್ಲಿ ಇಂತಹ ನವಜನ್ಮಕರವಾದ ಸಹಸ್ರದಲ ಕಮಲವನ್ನು ಪವಣಿಸಿದು-ದುದಕ್ಕಾಗಿ, ಪ್ರಕಾಶಕರಿಗೂ ಅನುವಾದಕರಿಗೂ ನಾವು ಉಪಕೃತರು.

—ನಾ. ಕು.

೭೪ **ದೇವದಾಸಿ** ಲೇಖಕರು: ಶ್ರೀ. ಬನವಾಸಿ ರಾಮಚಂದ್ರಯ್ಯ ಪ್ರಾಥಮಿಕಶಾಲಾ ಉಪಾಧ್ಯಾಯ ತಲಗುಂದ; ಸೊರಬ ತಾಲ್ಲೂಕು: ಬೆಲೆ ೦—೪—೦

ಇಂದಿನ ನಮ್ಮ ಹೊಸ ಹೊಸ ಕತೆಗಾರರಿಗೆ, ಚಲನ ಚಿತ್ರದಲ್ಲಿಯ ಅಗ್ಗದ ಕತೆಗಳು ತುಂಬ ಸಹಾಯಮಾಡುತ್ತ-ಲಿವೆ. 'ನಾಯಕ, ನಾಯಕಿ, ದುರ್ನಾಯಕ; ನಾಯಕನು ವಿಗುಣದಿಂದ ಕೂಡಿದ್ದರೂ ಹೆಚ್ಚು ಸದ್ಗುಣಿಯು; ಎಂತಲೆ ನಾಯಕಿಯು ಅವನನ್ನು ಪ್ರೀತಿಸುವಳು; ನಾಯಕಿಯನ್ನು ಆಶಿಸುತ್ತಿದ್ದ ದುರ್ನಾಯಕನು ನಾಯಕ-ನಾಯಕಿರನ್ನು ಕಾಡುವನು. ಕೊನೆಗೆ ಅವರಿಬ್ಬರಿಗೂ ಒಳ್ಳೆಯದಿನ ಬರಲು ದುರ್ನಾಯಕನು ಪಶ್ಚಾತ್ತಾಪದಿಂದ ಶರಣುಹೋಗುವನು.' ಇದಿಷ್ಟು ಮೂಲಸೂತ್ರವನ್ನು ಹಿಡಿದು, ಯಾವ ಪ್ರಕಾರದ ಹದ-ಹಿಡಿತಗಳೂ ಇಲ್ಲದೆ, ತಮಗೆ ಬೇಕಾದ ಹಾಗೆ ಕತೆ-ಯನ್ನು ಬೆಳೆಯಿಸಿಕೊಳ್ಳುವರು. ಪ್ರಸ್ತುತ ಗ್ರಂಥವಲ್ಲಿಯೂ ನಾಯಕನು ನಾರಾಯಣನೆಂಬೊಬ್ಬ ಸಿರಿವಂತನ ಮಗ. ದುರ್ನಾಯಕನು ರಾಮಚಂದ್ರು ಎಂಬ ಹೆಸರಿನ—ಆ

CC-0. Jangamwadi Math Collection. Digitized by eGangotri

ಸಿರಿವಂತನ ಕಾರಖಾನೆಯ ಕಾರ್ಯದರ್ಶಿ, ತರುಣ. ಇಬ್ಬರೂ ತಮ್ಮ ತಮ್ಮ ರೀತಿಯಲ್ಲಿ 'ಸುಶೀಲೆ' ಎಂಬೊಬ್ಬ ಸೂಳೆಯನ್ನು ಪ್ರೀತಿಸುತ್ತಿರುವರು. ಸೂಳೆಯ ನಿಜವಾದ ಪ್ರೀತಿ ನಾರಾಯಣನಮೇಲಿದೆಯೆಂದು ತಿಳಿದೊಡನೆಯೆ ರಾಮಚಂದ್ರನು ಏನೇನೋ ಹುಚ್ಚಾಟಗಳನ್ನು ಮಾಡಿ, ನಾರಾಯಣನನ್ನು ತೊಂದರೆಯಲ್ಲಿ ನೂಕಲು ಹವಣಿಸುವನು. ಕೊನೆಗೆ ಸುಶೀಲೆ-ನಾರಾಯಣರ ಪ್ರೀತಿಯನ್ನೊಪ್ಪಿ ಪಶ್ಚಾತ್ತಾಪದಿಂದ ಕ್ಷಮೆ ಬೇಡುವನು. ಇದಿಷ್ಟು ಕತೆ ನಡೆದಿರಬಹುದೆಂದು ಎನಿಸಿದರೂ, ಕತೆಗಾರರು ಈ ಘಟನೆಗೆ ಕಲ್ಪಿಸಿದ ಕಾರಣಪರಂಪರೆಗಳು ಒಂದೂ ಔಚಿತ್ಯಪೂರ್ಣವಾಗಿಲ್ಲ. ನಾಯಕ-ಉಪನಾಯಕರಿಬ್ಬರೂ ಬಿ.ಎ. ನಿಲಯದ ಪದವೀಧರರಂತೆ; ರಾಮಚಂದ್ರನಂತೂ ಒಂದು ಕಾಲೇಜಿನಲ್ಲಿ ಪ್ರೊಫೆಸರಾಗಿ ಇದ್ದವನು. ಆದರೆ ಅವರಿಬ್ಬರ ಅಸ್ವಾಭಾವಿಕ ಚಿತ್ರಗಳನ್ನು ನೋಡುತ್ತ ಹೋದಲ್ಲಿ, 'ಕಾಲೇಜಿನ ಮುಖಪರಿಚಯವಾದರೂ ಅವರಿಗೆ ಆಗಿರಬಹುದೇ?' ಎಂಬ ಭಾವನೆಯುಂಟಾಗದೆ ಇರದು ಯಾರಿಗೂ. ಕತೆ-ಕಾದಂಬರಿಗಳನ್ನು ಬರೆಯಬೇಕೆನ್ನುವವರು ಯಾವಾಗಲೂ ಒಂದು ಮಾತನ್ನು ಲಕ್ಷ್ಯದಲ್ಲಿ ಇಟ್ಟುಕೊಂಡಿರಬೇಕು: ತಾವು ತಂದು ರೂಪಿಸಬೇಕಾದ ಪಾತ್ರಗಳೂ ಸಂನಿವೇಶಗಳೂ ತಮ್ಮ ನಿರೀಕ್ಷಣೆಯ ಹೊರಗಿನವಿರಬಾರದು — ಒಂದು; ಪ್ರಪಂಚದ ವಿವಿಧಭಾಗದ ಪರಿಚಯವನ್ನು ಮಾಡಿಕೊಂಡೇ ಲೆಕ್ಕಣಿಕೆ ಕೈಯಲ್ಲಿ ತೆಗೆದುಕೊಳ್ಳಬೇಕು ಒಂದು. ಎರಡೂ ಇರದಿದ್ದ ಸಾಹಿತ್ಯದಲ್ಲಿ ಜೀವನವೂ ಇರದು; ಜೀವವೂ ಇರದು.

ಸೂಳೆಯಾದ ಸುಶೀಲೆಯನ್ನು ನಾಯಕ–ದುರ್ನಾಯಕರಿಬ್ಬರೂ ಪ್ರೀತಿಸುವುದಕ್ಕೆ ಲೇಖಕರು ಬಣ್ಣಿಸುವ ರೂಪದ ಹೊರತು ಅವಳಲ್ಲಿ ಯಾವ ಆದರ್ಶಗುಣಗಳಿದ್ದುವೋ ಏನೋ! ಚೆನ್ನಾಗಿ ಹಾಡುತ್ತಿದ್ದಳಂತೆ; ಸರಿ; ಇದೊಂದು ಗುಣ! ಆದರೆ ಚೆನ್ನಾಗಿ ಹಾಡುವ ಚೆಲುವೆಯಾದ ಸೂಳೆಯನ್ನು ಬಯಸಿ ಬಾಯ್ಬಿಡುತ್ತ ಅಲೆಯುವ ನಾಯಕ ನಾರಾಯಣನು, ವಾಚಕರಿಂದ ಸಹಾನುಭೂತಿಯನ್ನು ಏಕೆ ಅಪೇಕ್ಷಿಸಬೇಕು ?

ಲೇಖಕರು ಪ್ರಾಥಮಿಕಶಾಲೆಯ ಶಿಕ್ಷಕರು; ಅವರು ವಿದ್ಯಾರ್ಥಿಗಳಿಗೆ ವ್ಯಾಕರಣದ ಪಾಠವನ್ನೂ ಹೇಳುತ್ತಿರಬಹುದು. ಆದರೂ ತಮ್ಮ ಕಾದಂಬರಿಯ ಭಾಷೆಯಲ್ಲಿ ವ್ಯಾಕರಣದೋಷಗಳನ್ನು ಗಮನಕ್ಕೆ ತಂದಂತೆಯೆ ತೋರುವುದಿಲ್ಲ. ಉದಾ:

"ದಿವಾನಖಾನೆಯಲ್ಲಿ ಎರಡು ವ್ಯಕ್ತಿಗಳು ನಿಶ್ಶಬ್ದವಾಗಿ ಕುಳಿತಿದ್ದರು." ( ಪುಟ ೧ ).

"ರಾಮಚಂದ್ರನಿಗೆ ನನ್ನ ಫ್ಯಾಕ್ಟರಿಯ ಮ್ಯಾನೇಜರನ್ನಾಗಿ ಮಾಡಬೇಕೆಂದು ನನ್ನ ಮನಸ್ಸಿನಲ್ಲಿರುತ್ತದೆ." ( ಪುಟ ೬ ).

"ಅವನು ಸಂಘಟಿತ ತರುಣನು. ಫ್ಯಾಕ್ಟರಿಯು ಸಿಕ್ಕುವುದು ದುರ್ಲಭ." ( ಪುಟ ೭ )

ಇಂತಹ ವಾಕ್ಯಗಳಲ್ಲದೆ 'ವಿನಯತೆ' 'ಶಾಂತತ್ವ' 'ಹಾಸ್ಯತ್ವ' 'ವಿನಹ' ಮೊದಲಾದ ತಪ್ಪು ಪದಪ್ರಯೋಗಗಳೂ ಸಾಕಷ್ಟು ದೊರೆಯುವುವು.

ಈ ಲೇಖಕರು ಈ ಮೊದಲೆ 'ಎಲ್‌ ಎಲ್‌. ಬಿ., ಎಂಬ ಕಾದಂಬರಿಯನ್ನು ಬರೆದು ಪ್ರಕಟಿಸಿರುವರು. ಈ ಇದನ್ನು ಪ್ರಕಟಿಸುವುದಕ್ಕೆ ಶ್ರೀಮಾನ್ ಗಿಂಡೀ ಶಿವಪ್ಪಗೌಡರಿಂದ ಸಂಪೂರ್ಣ ಸಹಾಯವನ್ನು ಪಡೆದಿರುವರು. ಮುಂದೆಯೂ ಇಂತಹ ಸಹಾಯ ಪಡೆದು, ಬೇರೆ ಗ್ರಂಥಗಳನ್ನು ಪ್ರಕಟಿಸಬಹುದು. ಕನ್ನಡಿಗರ ಹಣವು ಒಳ್ಳೆಯ ಗ್ರಂಥಕ್ಕಾಗಿಯೆ ವೆಚ್ಚವಾಗಲೆಂಬ ಆಂತರ್ಯದ ಆಶೆಯಿಂದ—ಅನಿವಾರ್ಯವಾಗಿ—ಕೆಲವು ಖಂಡಿತಮಾತುಗಳನ್ನು ಆಡಿದುದಕ್ಕಾಗಿ ಲೇಖಕರು ವಿಪರೀತವೇನನ್ನೂ ಭಾವಿಸಲಾಗದು. ಕನ್ನಡಿಗರಿಗೀಗ ಬರೆದುದೆಲ್ಲವೂ ಬೇಕಾಗುವ ಕಾಲವು ಹೋಗಿ, ಬರೆದುದರಲ್ಲಿ ಆಯ್ದುಕೊಳ್ಳುವ ಕಾಲ ಬಂದಿದೆ. ಎಂತಲೇ ಲೇಖಕರು ತಮ್ಮ ಗ್ರಂಥಗಳನ್ನು ಪ್ರಕಟಿಸುವಾಗ ಬಹಳವಾಗಿ ವಿಚಾರಿಸಿ ಪ್ರಕಟಿಸುತ್ತಿರಬೇಕು.

ಕುಂಜವಿಹಾರಿ

೮೫ **ಉಡುಗೊರೆ** ಸಂಪಾದಕರು: ಶ್ರೀಮತಿ ಆರ್. ಕಲ್ಯಾಣಮ್ಮ; ಶ್ರೀಮಾನ್ ಟಿ. ಎಂ. ಆರ್. ಸ್ವಾಮಿ. ಬೆಂಗಳೂರಿನ ಕನ್ನಡಿಗರ ಕಣಜದ ೧ನೆಯ ಕಾಳು. ಬೆಲೆ ೦—೨—೦.

ಇದರಲ್ಲಿ ಚಿಕ್ಕಮಕ್ಕಳಿಗೆ ಉಪಯುಕ್ತವಾದ ಗದ್ಯಪದ್ಯದ ಬೇರೆ ಬೇರೆ ೧೬ ತುಂಡುಗಳಿವೆ. ಇವುಗಳಲ್ಲಿಯ ಎರಡು ಚಿಕ್ಕ ನಾಟಕಗಳಿವೆ. ಚಿಕ್ಕಮಕ್ಕಳಿಗೆ ಓದುವ ರುಚಿಯನ್ನು ಹೆಚ್ಚಿಸಲಿಕ್ಕೂ, ಅವರನ್ನು ಬಹುಶ್ರುತರನ್ನಾಗಿಸಲಿಕ್ಕೂ, ಹಿಂಡುಹಿಂಡಾಗಿ ಮಕ್ಕಳ ಸಾಹಿತ್ಯವು ಪ್ರಕಟವಾಗಬೇಕಾಗಿದೆಯೇನೋ ಸರಿ! ಆದರೆ ದೊಡ್ಡವರಿಗಾಗಿ ಅಲ್ಲವೆಂದು—ಮನಸ್ಸಿಗೆ ಬಂದ ವಿಷಯವನ್ನೆತ್ತಿ, ಬಾಯಿಗೆ ಬಂದ ಭಾಷೆಯಲ್ಲಿ ಬರೆದು ಬಿಟ್ಟು, ದಪ್ಪಕ್ಷರದಲ್ಲಿ ಪ್ರಿಂಟುಮಾಡಿದಷ್ಟಕ್ಕೆ ಕೆಲಸವಾಗದು. ಮಕ್ಕಳಿಗಾಗಿ ನಿರ್ಮಾಣವಾಗುವ

CC-0. Jangamwadi Math Collection. Digitized by eGangotri

ಸಾಹಿತ್ಯ ಅವರ ನಾಲಗೆಯಲ್ಲಿ ಕುಣಿಯಬೇಕು; ಕಿವಿಯನ್ನು ಸೆಳೆದುಕೊಳ್ಳಬೇಕು; ಮನಸ್ಸನ್ನು ರಂಜಿಸಬೇಕು; ಬುದ್ಧಿಗೊಂದು ಹೊಸವಿಷಯವನ್ನು ಸುಲಭರೀತಿಯಲ್ಲಿ ಪರಿಚಯ ಮಾಡಿಕೊಡಬೇಕು. ಆ ರೀತಿಯಿಂದ ನೋಡಿದರೆ ಇದರಲ್ಲಿಯ 'ಕೈಬಾಚಿ' ಎಂಬ — ಶ್ರೀಮಾನ್ ಹೊಯಿಸಳರ — ನಾಟಕವು ಚೆನ್ನಾಗಿದೆ. 'ಹೊಸಮಂತ್ರಿ' ಅಡ್ಡಿಯಿಲ್ಲ. 'ಅತ್ತೆ-ಸೊಸೆ' ಎಂಬುದರಲ್ಲಿಯ ನಗೆ, ಮಕ್ಕಳ ಮನಸ್ಸನ್ನು ಮೀರಿದುದು. 'ಟಾಮಿ! ನನ್ನ ಮುದ್ದುಟಾಮಿ' ಎಂಬುದರಲ್ಲಿ ಮಕ್ಕಳ ಮನಸ್ಸನ್ನು ಹಿಡಿದುಕೊಳ್ಳಬಹುದಾದ ಕತೆಗಾರಿಕೆಯಿಲ್ಲ. ಇದರಲ್ಲಿದ್ದ ಕವಿತೆಗಳನ್ನು ಬರೆದವರು ಶ್ರೀಮಾನ್ ರಾಜರತ್ನಂ ಅವರ 'ತುತ್ತೂರಿ' 'ಕಡಲೆಪುರಿ' ಗಳನ್ನು ನೋಡಿರಬಹುದು. ಅವುಗಳಲ್ಲಿಯ ಅನೇಕ ಕವಿತೆಗಳೊಂದಿಗೆ ತುಲನೆಮಾಡಿ ನೋಡಿಕೊಂಡರೆ, ತಮ್ಮ ಕವಿತೆಗಳಲ್ಲಿ ಯಾವ ಬಗೆಯ ಸುಧಾರಣೆಗಳಾಗಬೇಕಿವೆಯೆಂಬುದು ಸ್ಪಷ್ಟವಾಗಿ ಗೊತ್ತಾಗಬಹುದು. ಬರಿಯೆ ಮಕ್ಕಳನ್ನು ನಗಿಸಬೇಕೆಂಬುದೊಂದೆ ಗುರಿಯನ್ನಿಟ್ಟು ಬರೆಯುವುದೂ ಸಾಮಾನ್ಯ ಮಾತಲ್ಲ; ತಮ್ಮ ಜೀವನದ ಪ್ರಾತಿನಿಧ್ಯವನ್ನು ಕಾಣದ ಸಾಹಿತ್ಯದಲ್ಲಿ, ದೊಡ್ಡವರಂತೆಯೆ ಚಿಕ್ಕವರೂ ಸ್ವಾರಸ್ಯವನ್ನು ಕಾಣರು. ಅವರನ್ನು

"ಅಡುಗೆಯ ಮನೆಯಲಿ ಗೋಡೆಯಲಿ
ತೂಗಿದ ಬಿದಿರಿನ ಗೂಡೆಯಲಿ
ಸರಸರವಾಗಿದೆ ಕೋಡಬಳೆ
ನೋಡುತ ಕುಳಿತಿದೆ ಗೋಡೆಮೊಳೆ!"

ಎಂಬ 'ಚುಟಕ' ರಂಜಿಸಿದಷ್ಟು

"ಗೆಜ್ಜೆ ಕಾಲು ಕುಣಿಸುತ್ತ
ಗಲಕು ಗಲಕು ಎನಿಸುತ್ತ
ಗಾಲಿ ಮೇಲೆ ಉರುಳುತ್ತ
ಬಾ—ಬಾ—ಬಾ—ಬಸವಣ್ಣ!"

ಎಂಬ ಪದ್ಯವು ರಂಜಿಸದು.

"ಕುಟುಕು ಕುಟುಕು ಕಾಲನಿಟ್ಟು
ಕುಂಟ ನಡೆದನು
ಗುಟುಕು ಗುಟುಕು ಸದ್ದುಮಾಡಿ
ನೀರುಕುಡಿದನು."

ಎಂಬ ಕತೆಯಷ್ಟು "ಹೊಟೇಲು ಹುಡುಗ ಮೋಟಪ್ಪ"ನ ಕತೆಯು ಕಿವಿಗಳನ್ನು ಸೆಳೆದುಕೊಳ್ಳದು.

ಮುದ್ರಣವು ಮುದ್ದಾಗಿ ಮಕ್ಕಳ ಕಣ್ಣನ್ನು ಮೆಚ್ಚಿಸಿಕೊಳ್ಳಬಹುದಾಗಿದೆ. ರಕ್ಷಾಪತ್ರದ ಮೇಲಿನ ಸೂರ್ಯನ ಚಿತ್ರವು ಸುಂದರವಾಗಿದೆ. ಕನ್ನಡಿಗರ ಕಣಜದ ಮುಂದಿನ ಕಾಳುಗಳು ಸಾಕಷ್ಟು ಜೀವಸತ್ತ್ವವನ್ನು ತುಂಬಿಕೊಂಡು ಹೊರಡುವುವೆಂದು ನಮ್ಮ ಹಾರಯಿಕೆ!

—ಕುಂಜವಿಹಾರಿ

೬೩ **ಮಣಿ.** ಬರೆದವರು: ಶ್ರೀ. ಕೆ. ನಂಜುಂಡರಾಯರು. ಆಗಡಿಯ ಶ್ರೀ ಶೇಷಾಚಲ ಗ್ರಂಥಮಾಲೆಯ ಪ್ರಕಟನೆ. ಬೆಲೆ ೦-೬-೦.

ಇದೊಂದು ಚಿಕ್ಕ ಕಾದಂಬರಿಯೆಂದು ಲೇಖಕರೂ ಪ್ರಕಾಶಕರೂ ಹೇಳಿರುವರು. ಲೇಖಕರು ತಮ್ಮ 'ವಿಜ್ಞಾಪನೆ' ಯಲ್ಲಿ "....ಗುಣ ಪ್ರಾಧಾನ್ಯವೇ ವಿನಃ ಜಾತಿ, ಮತ ಇತ್ಯಾದಿಗಳು ಪ್ರಾಧಾನ್ಯವಲ್ಲವೆಂಬುದನ್ನು ತೋರಿಸಲು ಚಿತ್ರಿಸಿರುವ ವಿಷಯದ ಸಾರಾಂಶವೇ ಈ ಕಾದಂಬರೀ ಸ್ವರೂಪವು." ಎಂದು ಹೇಳಿರುವರು. ಪ್ರಕಾಶಕರು ತಮ್ಮ 'ಎರಡು ಮಾತು' ಗಳಲ್ಲಿ "ನಮ್ಮ ಗ್ರಂಥಮಾಲೆಯ ವಾಚಕರಿಗೆ ಇವರ ಈ ಕೃತಿಯು ರುಚಿಸಬಹುದೆಂದು ಬಗೆದು ನಾವು ಇದನ್ನು ಪ್ರಕಟಿಸಿರುವೆವು." ಎಂದು ಹೇಳಿರುವರು. ತಮ್ಮ ಗ್ರಂಥಮಾಲೆಯ ವಾಚಕರ ರುಚಿ-ಅಭಿರುಚಿಗಳನ್ನು ನಮಗಿಂತಲೂ ಈ ಗ್ರಂಥಮಾಲೆಯ ಪ್ರಕಾಶಕರು ಬಹಳ ದಿನಗಳಿಂದಲೂ—ಸಾಕಷ್ಟು—ಅರಿತವರಾಗಿರುವರು.

ಈ ಕಥೆಯ ಲೇಖಕರು ತಮ್ಮ ಗುರಿಯನ್ನು ಸಾಧಿಸುವುದಕ್ಕಾಗಿ, ಪುರಾಣಕಾಲದ ದೇವತೆಗಳನ್ನೂ ರಾಕ್ಷಸರನ್ನೂ ತಂದು, ಮನುಷ್ಯರ ವೇಷತೊಡಿಸಿ, ಕಥಾಪಾತ್ರಧಾರಿಗಳನ್ನಾಗಿಸಿ ಓಡಾಡಿಸಿದಂತೆ ಮಾಡಿರುವರು. ಬರೆದ ರೀತಿ 'ವಿಕ್ರಮರಾಜನ ಕಥೆಗಳು' 'ವೇತಾಳ ಪಂಚವಿಶೀ' 'ಬತ್ತೀಸಪುತ್ತಳಿಯ ಕಥೆಗಳು' ಎಂಬ—ಕನ್ನಡವಾಙ್ಮಯದ ಬರಗಾಲದಲ್ಲಿಯ—ಗ್ರಂಥಗಳ ರೀತಿಯನ್ನು ಮೀರಿ ಹೋಗಿಲ್ಲ. ಅಲ್ಲಿ ಕಾಣಬಹುದಾದ ಕೊತವಾಲನ ಸ್ಥಳವನ್ನು ಇಲ್ಲಿ ರಾಧಾಚರಣನೆಂಬ ಗುಪ್ತಪೋಲೀಸನು ಆಕ್ರಮಿಸಿದ್ದಾನಿಷ್ಟೇ! ಇಪ್ಪತ್ತನೆಯ ಶತಮಾನದ ಫೌಂಟನ್ ಪೆನ್ನುಗಳು ಈ ಜಾತಿಯ ಕತೆಗಳನ್ನು ಬರೆಯುವುದೂ, ಮುದ್ರಣಾಲಯಗಳು ಇವುಗಳನ್ನು ಮುದ್ರಿಸುವುದೂ ಅನೇಕರಿಗೆ ಆಶ್ಚರ್ಯಕರವಾಗಿ ಕಾಣದಿರದು.

—ವಿಜಯೇಂದ್ರ

CC-0. Jangamwadi Math Collection. Digitized by eGangotri

**೬೭ (೩೬) ನಾಣ್ಣುಡಿ.** ಲೇಖಕರು: ಶ್ರೀಮಾನ್ ಕುಲಕರಣಿ ಪ್ರಲ್ಹಾದ ಬೆಳಗಾಂವಿ. ಬೆಲೆ ೦—೫—೦.

ಇತಿಹಾಸವೈಭವವಿದ್ದ ಜನಾಂಗದ ಮಾತಿನಲ್ಲಿ'ನಾಣ್ಣುಡಿ' ಗಳ ಸಂಪತ್ತೂ ಸಾಕಷ್ಟಿರುವುದು. ಈ ಸಂಪತ್ತು ಸಮಾಜದ ಸಂಸ್ಕೃತಿಪರಂಪರೆಗೆ ಕೈಗನ್ನಡಿಯಾಗಿರುವುದು. ಎಷ್ಟೋ ನಾಣ್ಣುಡಿಗಳ ಹಿಂದೆ, ನಾಡಿನ ಅಂದಂದಿನ ರಾಜಕೀಯ-ಸಾಮಾಜಿಕ ಜೀವನವು ಹುದುಗಿಕೊಂಡಿರುವುದು. ಇನ್ನೆಷ್ಟೋ ಗಾದೆಗಳ ಹಿಂದೆ ಜನತೆಯ ಹೃದಯ-ಮನಸ್ಸುಗಳು ಅಡಗಿಕೊಂಡಿರುವುವು. ಕೆಲವು ನಾಣ್ಣುಡಿಗಳು ಬರಿಯೆ ನೀತಿಗಾಗಿ ನಿಂತಿದ್ದರೆ, ಇನ್ನು ಕೆಲವು ನೀತಿಯ ಕತೆಗಳ ಹೃದಯಗಳಾಗಿ ನಿಂತಿರುವುವು. ಕನ್ನಡದಲ್ಲಿಯ ನಾಡು-ನಾಡುಗಳಲ್ಲಿಯೂ — ಹಳ್ಳಿ-ಹಳ್ಳಿಗಳಲ್ಲಿಯೂ — ಊರುಕೇರಿಗಳಲ್ಲಿಯೂ—ಅಸಂಖ್ಯವಾಗಿ ಹಬ್ಬಿಹರಡಿಕೊಂಡಿದ್ದ ನಾಣ್ಣುಡಿ[ಗಾದೆ] ಗಳನ್ನು ಸಂಗ್ರಹಿಸಿ, ಸೂಕ್ಷ್ಮರೀತಿಯಿಂದ ಅಭ್ಯಾಸಮಾಡಿದಾಗಲೆ, ಕನ್ನಡಜನತೆಯ ಸಂಸ್ಕೃತಿಯ ನಿಜವಾದ ಹಜ್ಜೆಗಳ ಪರಿಚಯವು ನಮಗಾಗುವುದು. ನಾಣ್ಣುಡಿಗಳನ್ನು ಸಂಗ್ರಹಿಸಿ ಪ್ರಕಟಿಸುವ ಮೂರುನಾಲ್ಕು ಪ್ರಯತ್ನಗಳು ಈ ಮೊದಲೆ ಆಗಿವೆಯಾದರೂ, ಅವು ಸಾಗರವನ್ನು ಮೊಗೆಯಿಂದ ಮೊಗೆಯಲು ಮಾಡಿದ ಯತ್ನದಂತಾಗಿವೆ. ಅವುಗಳನ್ನು ಸಂಗ್ರಹಿಸುವ ಕೆಲಸ ಒಬ್ಬಿಬ್ಬರಿಂದಲೇ ಸಾಧ್ಯವಿಲ್ಲ. ಸುಶಿಕ್ಷಿತ ಕನ್ನಡಿಗರೆಲ್ಲರೂ ಅದನ್ನು ಕೆಲವೊಂದು ದಿನ ತಮ್ಮ ದಿನಚರಿಯ ಕೆಲಸವನ್ನಾಗಿಸಿಕೊಂಡು ಹೆಣಗಬೇಕು. ಶ್ರೀಮಾನ್ ಕುಲಕರಣಿ ಪ್ರಲ್ಹಾದರಾಯರ ಈ ಪುಟ್ಟ ಗ್ರಂಥವು, ತಮಗೆ ದೊರೆತ ಕೆಲವೊಂದು ನಾಣ್ಣುಡಿಗಳ ಸಂಗ್ರಹವನ್ನು ಅಭ್ಯಾಸಿಸಿ ಬರೆದ ಒಂದು ಪ್ರಬಂಧವನ್ನೊಳಗೊಂಡುದಾಗಿದೆ. ೧ ಹೆಸರು, ೨ ಲಕ್ಷಣ, ೩ ಉತ್ಪತ್ತಿ, ೪ ಮಹತ್ತ್ವ, ೫ ಅರ್ಥವಿಪರ್ಯಾಸ, ೬ ಕೊನೆಯ ಮಾತು ಎಂದು ಪ್ರಬಂಧವನ್ನು ಆರುಭಾಗಗಳಲ್ಲಿ ವಿಭಾಗಿಸಲಾಗಿದೆ. ಕನ್ನಡ ಸಂಸ್ಕೃತಿಯನ್ನು ಅಭ್ಯಾಸಿಸಲೆಳಸುವವರು ಅವಶ್ಯವಾಗಿಯೂ ಈ ಪುಸ್ತಕವನ್ನು ಓದಿಕೊಳ್ಳಬೇಕು. ಪ್ರಾಥಮಿಕ ಶಿಕ್ಷಕರ ಟ್ರೆನಿಂಗ್‌ಸ್ಕೂಲ್-ಕಾಲೇಜುಗಳ ವಿದ್ಯಾರ್ಥಿಗಳಿಗೆ ಇದನ್ನು ಪಠ್ಯಪುಸ್ತಕವಾಗಿ ಇರಿಸಿದರೆ ಅನುಕೂಲವಾದೀತು. ' ಗಾದೆಯು ಮಾತು ವೇದಕ್ಕೆ ಸಮಾನ' ' ಮಾತಿಗೆ ಮೊದಲು ಗಾದೆ ಊಟಕ್ಕೆ ಮೊದಲು ಉಪ್ಪಿನಕಾಯಿ ' ಎಂದು ' ನಾಣ್ಣುಡಿ 'ಗಳನ್ನು ಕಲಿಸಬೇಕಾದ ಶಿಕ್ಷಕರಿಗೆ, ನಾಣ್ಣುಡಿಗಳ ಎಲ್ಲ ವಿಚಾರ ಗೊತ್ತಿರಬೇಕಲ್ಲವೇ?

—ಗೋಪಾಲಕೃಷ್ಣ

**ದಮ್ಮು ಪೂರ್ಣ ಗುಣವಾಗುವ**
**ಉಪಾಯವನ್ನೇ ಕೈಕೊಳ್ಳಬೇಕು**



ಕೆಮ್ಮು ಮತ್ತು ಕಫವಿಕಾರವಿದ್ದವರು 'ಎಫಿಡಮ' ಮುಂತಾದ ತಾತ್ಕಾಲಿಕ ಆರಾಮವೆನಿಸುವ ಔಷಧಗಳನ್ನು ಎಂದೂ ಉಪಯೋಗಿಸಬಾರದು. ಈ ಔಷಧಗಳು ರೋಗವನ್ನು ಪೂರ್ಣ ಗುಣಪಡಿಸಲು ನಿರುಪಯೋಗಿಗಳೆಂಬದು ನಿಶ್ಚಿತವು. ಮತ್ತು ಇಂಥ ಔಷಧಗಳು ಶ್ವಾಸನಲಿಕೆಯಲ್ಲಿಹೆಚ್ಚಿಗೆ ನೋವುಂಟುಮಾಡಿ ರೋಗವನ್ನು ಶಾಶ್ವತಮಾಡುತ್ತವೆ

ರೋಗಲಕ್ಷಣವನ್ನು ಪೂರ್ಣ ವಿಚಾರ ಮಾಡಿ, ರೋಗಿಗೆ ಬೇಗನೆ ಮತ್ತು ಸಾವಧಾನವಾಗಿ ಪೂರ್ಣ ಗುಣ ಮಾಡುವ ಔಷಧವೇ ನಿಜವಾದ ಉಪಾಯವು. ಮತ್ತು ಇದೇ ದೃಷ್ಟಿಯಿಂದ ಡಾ. ಪುರೋಹಿತ ಇವರ

' ಶ್ವಾಸಹಾರಿ ಪ್ಲೇನ್ ' ಮತ್ತು
' ಶ್ವಾಸಹಾರಿ ಕಾಂಪಾವುಂಡ್ '

ಈ ಎರಡೂ ಔಷಧಗಳು ದಮ್ಮುವಿಕಾರವನ್ನು ಪೂರ್ಣ ಗುಣಪಡಿಸುವ ದಿವ್ಯೌಷಧಿಯಲ್ಲಿ ಅಗ್ರೇಸರವೆನಿಸಿವೆ. ದಮ್ಮು ಶ್ವಾಸ, ಮುಂಜಾನೆಯ ಠಸಕಿ, ಗಂಟಲು ಕೆರೆಯುವ ಹಳೇ ಕೆಮ್ಮು ಮತ್ತು ಫುಪ್ಪುಸದ ಯಚ್ಚಾವತ್ ರೋಗಗಳನ್ನು ಗುಣಪಡಿಸಲು "ಶ್ವಾಸಹಾರಿ ಪ್ಲೇನ್"ಉಪಯೋಗಿಸಬೇಕು. ಆಮ್ಲಪಿತ್ತವಿದ್ದವರು " ಶ್ವಾಸಹಾರಿ ಕಂಪೌಂಡ್" (ಕೆಂಪು ಪ್ಯಾಕಿಂಗ್ ) ಉಪಯೋಗಿಸುವದು ಹೆಚ್ಚು ಲಾಭಕರವು.

ಬಹುತರವಾಗಿಎಲ್ಲ ಶಹರಗಳಲ್ಲಿ ಕೆಮಿಸ್ಟ್‌ಸ್ಟೋರ್ಸ ಮತ್ತು ಅಂಗಡಿಗಳಲ್ಲಿ ಈ ಔಷಧಗಳು ರೂ. ೨, ೩-೮-೦ ಮತ್ತು ೫-೦-೦ ಹೀಗೆ ಬೇರೆ ಬೇರೆ ಬೆಲೆಯ ೩ ಪ್ಯಾಕು ಮಾರಲಿಕ್ಕೆ ಸಿಗುತ್ತವೆ.

ಮುಂಬಯಿ ಎಜಂಟ್—
ಮೆ. ಓರಿಯಂಟಲ್ ಮೆಡಿಕಲ್
ಸ್ಟೋರ್ಸ್, ಪ್ರಿನ್ಸೆಸ್ ಸ್ಟ್ರೀಟ್, ಮುಂಬೈ




ಡಾ ಪುರೋಹಿತ ಫಾರ್ಮಸಿ, ಕೊಲ್ಹಾಪುರ.

CC-0. Jangamwadi Math Collection. Digitized by eGangotri

# ಸಾದರಸ್ವೀಕಾರ

## ಗ್ರಂಥಗಳು

೧೦೯ **ವಿಜಯನಗರ ಸಾಮ್ರಾಜ್ಯ** [ ಸಚಿತ್ರ ಇತಿಹಾಸ]: ಲೇಖಕರು: ಶ್ರೀಮಾನ್ ಪಾಂ. ಭೀ. ದೇಸಾಯಿ ಬಿ. ಎ. [ಆನರ್ಸ್], ಕರ್ಣಾಟಕ ಇತಿಹಾಸ ಸಂಶೋಧನ ಮಂಡಳ ಧಾರವಾಡ. ಪ್ರಕಾಶಕರು: ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವಮಂಡಲ ಧಾರವಾಡ; ಕ್ರಾ. ಅ ೨೮+೩೬೦ ಪುಟಗಳು. ಬೆಲೆ ಸಾದಾ ೧-೧೨-೦, ಕ್ಯಾಲಿಕೊ ೨—೪—೦.

೧೧೦ **ಕರ್ಣಾಟಕ ಭಕ್ತವಿಜಯ** [ ವೈಷ್ಣವ ದಾಸರ ಚರಿತ್ರೆಗಳು ಎರಡನೆಯ ಭಾಗ ]. ಲೇಖಕರು: ಹರಿಕಥಾ ವಿದ್ವಾನ್ ಬೇಲೂರು ಕೇಶವದಾಸರು, ಮೈಸೂರು. ಕ್ರಾ. ಅ. ೬+೩೩೪+೬ ಪುಟಗಳು. ಬೆಲೆ ೨-೮-೦.

೧೧೧ **ಅರುಣೋದಯ** [ಐತಿಹಾಸಿಕ ಲಘುನಾಟಕ] ಲೇಖಕರು ಶ್ರೀ. ಗುರುರಾಜ ಕೃಷ್ಣರಾವ ದೇಶಪಾಂಡೆ, ಹುನಗುಂದ. ಪ್ರಕಾಶಕರು 'ರಾಧಾಮೋಹನಮೇಳೆ' ಶುಕ್ರವಾರ ಪೇಟೆ, ಧಾರವಾಡ. ಕ್ರಾ. ಅ. ೨೪ ಪುಟ. ಬೆಲೆ ೦-೨-೬

೧೧೨ **ಕನ್ನಡ ಕೈಪಿಡಿ** [ ಒಂದನೆಯ ಸಂಪುಟದ ಎರಡನೆಯ ಆವೃತ್ತಿ ]. ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ. ಡೆಮಿ ಅ. ೪೪೬ ಪುಟಗಳು, ಕ್ಯಾಲಿಕೊ ಬಂಧನ. ಬೆಲೆ ೧—೧೨—೦.

೧೧೩ **Magnificent Nysore:** [ ಸಚಿತ್ರ ಪರಿಚಯ ]. ಮಹಾರಾಷ್ಟ್ರದ ಪ್ರಸಿದ್ಧ ಸಾಹಿತಿಗಳಾದ ಶ್ರೀ. ಎನ್. ಸಿ. ಕೇಳಕರ್ ಅವರ ಮುನ್ನುಡಿಯಿದೆ. ಮೈಸೂರು ಸಂಸ್ಥಾನದ ವಿವಿಧ ವಿಷಯಗಳನ್ನು—ಸುಂದರ ಚಿತ್ರಗಳೊಂದಿಗೆ—ಪರಿಚಯಮಾಡಿಕೊಡುವುದಕ್ಕೆ ತುಂಬ ಅನುಕೂಲವಾಗಿದೆಯಿದು. ಪುಸ್ತಕವೆಲ್ಲವೂ ಆರ್ಟ್ ಪೇಪರಿನಲ್ಲಿಯೆ ಮುದ್ರಿತವಾಗಿದೆ. ಪರಪ್ರಾಂತೀಯರಿಗೂ ಪರದೇಶೀಯರಿಗೂ ಮಾದರಿಯ ಮೈಸೂರನ್ನು ಗುರುತುಮಾಡಿಕೊಡುವುದಕ್ಕೆ ಶ್ರೀಮಾನ್ ವೈ ಜಿ. ಕೃಷ್ಣಮೂರ್ತಿಯವರು ಮಾದರಿಯ ಪ್ರಯತ್ನವನ್ನೇ ಮಾಡಿರುವರು. ಈ ಹಸ್ತ-ಪುಸ್ತಕವನ್ನು ಪ್ರಕಟಿಸಿ. ಸುಮಾರು ೭೦-೭೧ರಷ್ಟು ಹಾಫ್ ಟೋನ್ ಚಿತ್ರಗಳಿವೆ. ಕ್ರಾ. ¼ದ ೬೮ ಪುಟಗಳು. ಬೆಲೆ?

## ಪತ್ರಿಕೆಗಳು

೧೧೪ **ವೀರವಾಣಿ** [ ಮಾಸಪತ್ರಿಕೆ ]. ಸೊಲ್ಲಾಪುರದಲ್ಲಿ ಇದೇ ಜ್ಯೇಷ್ಠಶುದ್ಧ ಪಂಚಮಿಯ ದಿನ ಮೊದಲನೆಯ ಸಂಚಿಕೆಯು ಹೊರಟಿದೆ. ಶ್ರೀಮಾನ್ ಸ. ಭೂ. ಲೋಕನಾಥಶಾಸ್ತ್ರಿ ಮೂಡಬಿದರೆ ಅವರು; ಶ್ರೀಮಾನ್ ಧರಣೇಂದ್ರ ಕುಮಾರ ಶಾಸ್ತ್ರಿಗಳು ಮುಂಬಯಿ ಅವರು. ಸೊಲ್ಲಾಪುರದ ಕಲ್ಯಾಣಪಾವರ್‌ಪ್ರೆಸ್ಸಿನ ಸಂಚಾಲಕರಾದ ಶ್ರೀಮಾನ್ ವ್ಹಿ. ಪಿ. ಶಾಸ್ತ್ರಿಗಳವರು ಇದರ ಪ್ರಕಾಶಕರು. "ಧರ್ಮವೀರ, ದಾನವೀರ, ಜಿನವಾಣೀ ಭೂಷಣ, ವಿದ್ಯಾಭೂಷಣ" ಶೇಠ್ ರಾವಜೀ ಸಖಾರಾಮ ದೋಶಿಯವರ ಉದಾರಾಶ್ರಯದಿಂದ ಈ ಮಾಸಪತ್ರಿಕೆಯು ಉದಯಹೊಂದಿದೆ. ಪ್ರಕಾಶಕರು ತಮ್ಮ ಸ್ವವಿಷಯದಲ್ಲಿ: 'ಇದರಲ್ಲಿ ಜಗದುದ್ಧಾರಕ ಜೈನಧರ್ಮಾನುಕೂಲ ಮತ್ತು ತದವಿರುದ್ಧ ಆಧ್ಯಾತ್ಮಿಕ, ಸಾಮಾಜಿಕ, ಸಾಹಿತ್ಯಿಕ, ಐತಿಹಾಸಿಕ ಲೇಖನಗಳು, ಜೈನ-ಜೈನೇತರ ವಿದ್ವಾಂಸರಿಂದ ಬರೆಯಲ್ಪಟ್ಟು ಪ್ರಕಟವಾಗುವುವು....' ಎಂದು ಹೇಳಿರುವರು. ಸದ್ಯದ ಸಂಚಿಕೆಯನ್ನು ನೋಡಿದರೆ, ಇದರಲ್ಲಿ ಕಾಣುವ ಲೇಖಕವರ್ಗವೆಲ್ಲ ಮಂಗಳೂರತ್ತಕಡೆಯದಾಗಿದ್ದಂತೆ ತೋರುವುದು. ಲೇಖಕವರ್ಗ ಎಲ್ಲಿಯದಾಗಿದ್ದರೇನು ? ಸೊಲ್ಲಾಪುರದ ಕನ್ನಡ ಭಾಗದಲ್ಲಿ ಕನ್ನಡಭಾವನೆಯನ್ನು ಜಾಗೃತಗೊಳಿಸಿದರೆ ಸಾಕು. ವೀರವಾಣಿಯ ಚಿರಜೀವಿತ್ವಕ್ಕೂ ಅಲ್ಲಿಯ ಜನರ ಕನ್ನಡ ಭಾವನೆಯ ಜಾಗೃತಿಯೇ ಆವಶ್ಯಕವೆಂಬುದನ್ನು ಅದರ ಸಂಚಾಲಕರು ಎಂದೂ ಮರೆಯಲಾಗದು. ಡೆಮಿ ಅ. ೩೨ ಪುಟ. ವಾರ್ಷಿಕ ವರ್ಗಣಿ ಚಂದಾದಾರರಿಗೆ ೧-೮-೦; ಪೋಷಕರಿಗೆ ೫-೦-೦.

೧೧೫ **ಸಮಾಜಸ್ವಾಸ್ಥ್ಯ** [ ೧೦ನೆಯ ವರ್ಷದ ಹನ್ನೆರಡನೆಯ ಸಂಚಿಕೆ ]. ಸಂಪಾದಕರು: ಶ್ರೀ ರ. ಧೋ. ಕರ್ವೆ ಎಂ. ಎ. ಪುಣೆ. ಪತ್ರಿಕೆ ಹೊರಟು ಹತ್ತು ವರ್ಷಗಳು ಮುಗಿದುವೆಂಬ ಉತ್ಸಾಹದಲ್ಲಿ ಈ ಸಂಚಿಕೆಯನ್ನು ಪ್ರತಿ ಸಂಚಿಕೆಗಿಂತ ಇಮ್ಮಡಿಯಷ್ಟನ್ನಾಗಿ ತೆಗೆದಿರುವರು. ಎಂದಿನಂತೆಯೆ ಲೇಖನ-ಕತೆ-ಪತ್ರಗಳು ಅಡಕವಾಗಿವೆಯಲ್ಲದೆ ಕೆಲವು ಅನಾಚ್ಛಾದಿತ ಸ್ತ್ರೀಯರ ಹಾಫ್‌ಟೋನ್ ಚಿತ್ರಗಳು ಹೆಚ್ಚಾಗಿವೆ. ಈ ಸಂಚಿಕೆಯ ಬೆಲೆಯು ೦-೪-೦.

CC-0. Jangamwadi Math Collection. Digitized by eGangotri

# ಜ್ಞಾನವಿಜ್ಞಾನ

ಮುಸೋಲಿನಿಯ ನ್ಯಾಯನಿಷ್ಠುರತೆ — ಕಾಲರಾ — ಕಳ್ಳರ ತುಬ್ಬುಗಾರ,
'ಡಿ' ವಿಟ್ಯಾಮಿನ್ನಿನ ಪ್ರಯೋಜನ—ನಗ್ನತೆಯ ಇತಿಹಾಸ....ಕೊಂಡಾಟ,
— ತಮಿಳುನಾಡಿನಲ್ಲಿಯ ಸಹಶಿಕ್ಷಣದ ಪ್ರಾಚೀನತೆ —

### ಮುಸೊಲಿನಿಯ ನ್ಯಾಯನಿಷ್ಠುರತೆ

ಇಂಗ್ಲಿಷ್ ಮಹಿಳೆಯೊಬ್ಬಳು ಇಟಲಿಯಲ್ಲಿ—ಮೂವ-ತ್ತೈದು ಪೌಂಡುಗಳನ್ನು ಕೊಟ್ಟು—ಗಡಿಯಾರವೊಂದನ್ನು ಕೊಂಡುಕೊಂಡಳು. ಬಳಿಕ ಆಕೆ ತನ್ನ ದೇಶಕ್ಕೆ ಮರಳಿದ ಬಳಿಕ ಆ ಗಡಿಯಾರವನ್ನು, ಲಂಡನ್ನಿ-ನಲ್ಲಿಯ ವರ್ತಕನಿಗೊಬ್ಬನಿಗೆ ತುಂಬ ಹೆಮ್ಮೆಯಿಂದ ತೋರಿಸುತ್ತಿರಲು, ಆ ವರ್ತಕನು 'ಈ ಗಡಿಯಾರದ ಬೆಲೆ ತೀರ ಹೆಚ್ಚೆಂದರೆ ಒಂದು ಪೌಂಡು' ಎಂದು ಹೇಳಿದನು. ಕೇಳಿ ಆಕೆ ಬೆಚ್ಚಿಬಿದ್ದಳು.

ಆಕೆ ಸುಮ್ಮಗೆ ಕುಳಿತುಕೊಳ್ಳಲಿಲ್ಲ; ಕೂಡಲೆ ನೇರವಾಗಿ ಮುಸೊಲಿನಿಗೊಂದು ಕ್ರೋಧಯುಕ್ತವಾದ ಕಾಗದ ಬರೆ-ದಳು. ಅದರಲ್ಲಿ ಅವಳು ತನ್ನನ್ನು ಮೋಸಗೊಳಿಸಿದ ಕತೆಯನ್ನೆಲ್ಲ ವಿವರಿಸಿ, ಕೊನೆಗೆ 'ಇಂತಹ ಜನರನ್ನು ಆಳುವುದರಲ್ಲಿ ಯಾವ ಘನವಂತಿಕೆಯೋ!' ಎಂದು ತನ್ನದೊಂದು ಮೂದಲಿಕೆಯ ಮಾತನ್ನೂ ಗೀಚಿಬಿಟ್ಟಳು.

ಮುಂದೆ ಹದಿನೈದು ದಿನಗಳಿಗೇ, ನಡೆದ ಸಂಗತಿಯ ಬಗೆಗೆ, ಪ್ರತ್ಯಕ್ಷ ಮುಸೊಲಿನಿಯ ಕಡೆಯಿಂದ ಕ್ಷಮಾ-ಯಾಚನೆಯ ಕಾಗದ ಬಂದಿತಲ್ಲದೆ 'ಇದೊಂದೆ ಒಂದು ಉದಾಹರಣೆಯಿಂದ ನನ್ನ ಎಲ್ಲ ದೇಶಬಾಂಧವರ ವಿಚಾರ-ದಲ್ಲಿಯೂ ತಪ್ಪುತಿಳಿವಳಿಕೆಯನ್ನು ಮಾಡಿಕೊಳ್ಳಲಾಗದು' ಎಂದವಳಿಗೆ ವಿನಂತಿಯನ್ನು ಮಾಡಿಕೊಂಡಿದ್ದ ಮುಸೊಲಿನಿ. ಕಾಗದದ ಜೊತೆಯಲ್ಲಿಯೆ ಮುಸೊಲಿನಿಯ ಅಂಕಿತವುಳ್ಳ ೩೪ ಪೌಂಡುಗಳ ಚೆಕ್ಕೂ ಇದ್ದಿತು.

ಇದಾದ ಕೆಲವು ದಿನಗಳ ಮೇಲೆ, ಆ ಹೆಣ್ಣುಮಗಳಿಗೆ ಇಟಲಿಯಿಂದ ಇನ್ನೊಂದು ಕಾಗದ ಬಂದಿತು. ಆ ಕಾಗದವು ಇನ್ನಾರದೂ ಇಲ್ಲ; ಅವಳನ್ನು ಮೋಸಗೊಳಿಸಿದ ಗಡಿಯಾರದ ವ್ಯಾಪಾರಿಯದು. "ಸರಕಾರವು ತನ್ನ ಅಂಗಡಿಯನ್ನು 'ಜಪ್ತ' ಮಾಡಿತು; ದಂಡವನ್ನೂ ವಿಧಿಸಿತು. ಈಗ ತನಗೆ ಆರುತಿಂಗಳ ಶಿಕ್ಷೆವಿಧಿಸುವ ವಿಚಾರವನ್ನು ನಡೆಯಿಸಿದೆ. ದಯೆಯಿಟ್ಟು ತಾವು ನಡುವೆಬಿದ್ದು ಹೇಳಿ, ತನ್ನನ್ನುಳಿಸಬೇಕು" ಎಂದವನು ಆ ಕಾಗದದಲ್ಲಿ ಬರೆದು ತಿಳಿಸಿದ್ದನು.

ಸಹ್ಯಾದ್ರಿ

### ಕಾಲರಾ

ಕಾಲರಾ ಬಾಯಿಲೆಯು ಒಬ್ಬರಿಂದ ಮತ್ತೊಬ್ಬರಿಗೆ ಹರಡುವ ಅಂಟುಜಾಡ್ಯ. ವಾಂತಿ, ಭೇದಿ ಹೆಚ್ಚಾಗಿ ಆಗುವುದು, ಮೂತ್ರವಾಗು-ವುದು ನಿಂತುಹೋಗುವಿಕೆ, ಮಾಂಸಖಂಡಗಳಲ್ಲಿ ನೋವು, ಇವೇ ಈ ಜಾಡ್ಯದ ಮುಖ್ಯಚಿಹ್ನೆಗಳು.

'ಕಾಮ ಬ್ಯಾಸಿಲಸ್' ಎಂಬ ಸೂಕ್ಷ್ಮಕ್ರಿಮಿಗಳು ಆಹಾರ, ನೀರು, ಹಾಲು ಮತ್ತು ಇತರ ಪಾನೀಯಪದಾರ್ಥ ಗಳ ಜೊತೆಗೆ ದೇಹದೊಳಗೆ ವ್ಯಾಪಿಸುವುದರಿಂದ, ಕಾಲರಾ ಬಾಯಿಲೆಯು ಪ್ರಾಪ್ತವಾಗುವುದು. ಈ ಕ್ರಿಮಿಗಳು ರೋಗಿಯ ಮಲದಲ್ಲಿ ಮತ್ತು ವಾಂತಿಯಲ್ಲಿ ಯಥೇಚ್ಛ ವಾಗಿರುತ್ತದೆ.

ಕಾಲರಾ ಕ್ರಿಮಿಗಳು ದೇಹದಲ್ಲಿ ವ್ಯಾಪಿಸಿದನಂತರ, ಒಂದೆರಡು ಘಂಟೆಗಳಿಂದ ಐದಾರು ದಿನಗಳೊಳಗಾಗಿ ಬಾಯಿಲೆಯ ಚಿಹ್ನೆಗಳು ಕಾಣಿಸಿಕೊಳ್ಳುವುವು. ಭೇದಿ ಯಾಗುವುದಕ್ಕೆ ಪ್ರಾರಂಭವಾಗಿ, ಜಾಗ್ರತೆಯಾಗಿ ಅಕ್ಕಿಯ ಗಂಜಿಯೋಪಾದಿಯಲ್ಲಿ ಬೆಳ್ಳಗೆ, ಮೇಲಿಂದ ಮೇಲೆ ಭೇದಿ ಯಾಗುವುದು. ವಿಶೇಷವಾಗಿ ವಾಂತಿಯಾಗುವುದು, ಜಲಬಾಧೆಯು ನಿಂತುಹೋಗುವುದು, ಕಣ್ಣುಗಳು ಗುಳಿ

CC-0. Jangamwadi Math Collection. Digitized by eGangotri

ಬೀಳುವುವು. ಕೆನ್ನೆಗಳು ಬತ್ತಿಹೋಗುವುವು. ನಾಲಗೆಯು ಒಣಗುವುದು ಮತ್ತು ಮಾಂಸಖಂಡಗಳಲ್ಲಿ ನೋವು ಕಾಣಿಸಿಕೊಳ್ಳುವುದು.

**ಕಾಲರಾ ಬಾಯಿಲೆಯು ಹರಡುವ ಮಾರ್ಗಗಳು:—**

ಕಾಲರಾ ಕ್ರಿಮಿಗಳಿಂದ ಕೂಡಿದ ನೀರನ್ನು ಜನರು ಕುಡಿಯುವುದರಿಂದ, ಈ ಬಾಯಿಲೆಯು ಬೇಗ ಪ್ರಾಪ್ತವಾಗುವುದು. ವಾಂತಿ, ಮಲ ಇವುಗಳಿಂದ ಕೊಳೆಯಾದ ರೋಗಿಯ ಬಟ್ಟೆ-ಬರೆಗಳನ್ನು ನೀರಿನಲ್ಲಿ ಒಗೆಯುವುದೇ ನೀರು ಕೆಡುವುದಕ್ಕೆ ಮುಖ್ಯ ಕಾರಣ.

ಕಾಲರಾ ಕ್ರಿಮಿಗಳಿಂದ ಕೂಡಿದ ಆಹಾರ, ನೀರು, ಹಾಲು ಮತ್ತು ಇತರ ಪಾನೀಯ ಪದಾರ್ಥಗಳನ್ನು ಸೇವಿಸುವುದರಿಂದ ಈ ಬಾಯಿಲೆಯು ಹರಡುವುದು. ರೋಗಿಯನ್ನು ಉಪಚರಿಸುವವರು ತಮ್ಮ ಕೈಗಳನ್ನು ಸರಿಯಾಗಿ ತೊಳೆದುಕೊಳ್ಳದೆ ಆಹಾರಪದಾರ್ಥಗಳನ್ನು ಮುಟ್ಟುವುದರಿಂದ ಅವು ಕೆಟ್ಟುಹೋಗುವುವು.

ನೊಣಗಳ ಮೂಲಕ ಈ ಬಾಯಿಲೆಯು ಹರಡುವ ಸಂಭವವುಂಟು. ನೊಣಗಳು ರೋಗಿಯ ಮಲಮೂತ್ರಗಳ ಮೇಲೆ ಕೂತು, ಅನಂತರ ಆಹಾರಪದಾರ್ಥಗಳ ಮೇಲೆ ಕೂತುಕೊಳ್ಳಬಹುದು.

ಕಾಲರಾ ಬಾಯಿಲೆಯು ನಿವಾರಣೀಯವಾದುದು. ಕೆಳಗೆ ಕೊಟ್ಟಿರುವ ನಿಯಮಗಳಿಗೆ ಅನುಸಾರವಾಗಿ ನಡೆದುಕೊಳ್ಳುವುದರಿಂದ ಇದು ಸಾಧ್ಯ.

೧ ಕಾಲರಾ ಬಾಯಿಲೆ ಪ್ರಾಪ್ತವಾಗಿರುವ ಕಾಲದಲ್ಲಿ, ವಾಂತಿ-ಭೇದಿಯಾಗುವುದಕ್ಕೆ ಪ್ರಾರಂಭವಾದಕೂಡಲೆ, ಆರೋಗ್ಯಾಧಿಕಾರಿಗಳಿಗೆ ಸಮಾಚಾರವನ್ನು ತಿಳಿಸಬೇಕು.

೨ ರೋಗಿಯನ್ನು ಪ್ರತ್ಯೇಕವಾಗಿರಿಸಿ, ಮನೆಯವರಾರೂ ರೋಗಿಯ ಹತ್ತಿರ ಬರದಂತೆ ನೋಡಿಕೊಳ್ಳಬೇಕು.

೩ ರೋಗಿಯು ಉಪಯೋಗಿಸಿದ ಪಾತ್ರೆಗಳನ್ನು ಮತ್ತೆ ಯಾರೂ ಉಪಯೋಗಿಸಬಾರದು.

೪ ರೋಗಿಯ ಮಲಮೂತ್ರವನ್ನು ಒಂದು ಪಾತ್ರೆಯಲ್ಲಿ ಶೇಖರಿಸಿ, ಹುಲ್ಲು ಮತ್ತು ಸೀಮೆಯೆಣ್ಣೆಹಾಕಿ ಸುಟ್ಟುಬಿಡಬೇಕು.

೫ ರೋಗಿಯ ಬಟ್ಟೆಬರೆ, ಪಾತ್ರೆ ಪದಾರ್ಥಗಳನ್ನು, ಕೆರೆ, ಕುಂಟೆ, ಭಾವಿ, ನದಿ, ಹಳ್ಳಗಳಲ್ಲಿ ತೊಳೆಯಬಾರದು.

೬ ಆಹಾರಪದಾರ್ಥಗಳಿಗೆ ನೊಣಗಳು ಬಂದು ಮುತ್ತದಂತೆ ಮುಚ್ಚಳವಿರುವ ಪಾತ್ರೆಗಳಲ್ಲಿ ಅವುಗಳನ್ನು ಮುಚ್ಚಿಡಬೇಕು.

೭ ಯಾವಾಗಲೂ ಬಿಸಿಯಾಗಿರುವ ಆಹಾರ ಪದಾರ್ಥಗಳನ್ನೇ ಉಪಯೋಗಿಸಬೇಕು. ಹಾಲು, ನೀರು ಮುಂತಾದ ಪಾನೀಯಗಳನ್ನು ಚೆನ್ನಾಗಿ ಕಾಯಿಸಿ, ಆರಿಸಿ ಕುಡಿಯಬೇಕು.

೮ ಮನೆಯನ್ನು ಒಳಗೂ, ಹೊರಗೂ ಚೊಕ್ಕಟವಾಗಿಟ್ಟುಕೊಂಡಿರಬೇಕು. ಗೊಬ್ಬರ, ಮುಂತಾದ ಕಶ್ಮಲ ಪದಾರ್ಥಗಳನ್ನು ಸುಟ್ಟುಬಿಡಬೇಕು.

೯ ಊಟಮಾಡುವುದಕ್ಕೆ ಮುಂಚೆ ಕೈಕಾಲುಗಳನ್ನು ಚೆನ್ನಾಗಿ ತೊಳೆದುಕೊಳ್ಳಬೇಕು.

೧೦ ಅಂಗಡಿಯಲ್ಲಿ ತೆರೆದಿಡಲ್ಪಟ್ಟ ಹಣ್ಣು-ಹಂಪಲ ಮತ್ತು ಮಿಠಾಯಿ ಮುಂತಾದ ತಿಂಡಿ ಪದಾರ್ಥಗಳನ್ನು ತಿನ್ನಬಾರದು.

೧೧ ಮನೆಯಲ್ಲಿ ಕೂಡಲೇ ಎಲ್ಲರಿಗೂ ಇನಾಕ್ಯುಲೇಷನ್ ಮಾಡಿಸಬೇಕು.

—ಮೈಸೂರು ಆರೋಗ್ಯ.

ಯುರೋಪು ಕಳ್ಳರನ್ನು ಕೂಡ ಮಂಕುಮಾಡಿಸಿಬಿಟ್ಟಿದೆ. ಇಂದಿನ ವೈಜ್ಞಾನಿಕ ಪ್ರಗತಿಯ ವಿಲಕ್ಷಣವಾದ ಪರಿಣಾಮದ ಮೂಲಕ, ನೂರಕ್ಕೆ ಎಪ್ಪತ್ತು

**ಕಳ್ಳರ ತುಬ್ಬುಗಾರ** ರಷ್ಟು ಕಳ್ಳತನಗಳು ಕಳ್ಳರಿಗೇ ಮುಳುವಾಗಲು ತೊಡಗಿವೆ. ಕಳ್ಳನೊಬ್ಬನು ಕತ್ತಲೆಯಲ್ಲಿ ಮನೆಯೊಳಕ್ಕೆ ನುಗ್ಗಿ, ಅಲ್ಲಿಯ ಪದಾರ್ಥಗಳಿಗೆ ಕೈಹಚ್ಚಿದೊಡನೆಯೆ, ಮನೆಯಲ್ಲಿಟ್ಟಿದ್ದ ಯಂತ್ರವು ಯಜಮಾನತಿಯನ್ನು ಎಚ್ಚರಗೊಳಿಸುತ್ತದೆ. ಪೋಲೀಸರಿಗೆ ವರದಿಯನ್ನೂ ತಲ್ಪಿಸುತ್ತದೆ. ಮನೆಯಲ್ಲಿ ದೀಪಹೊತ್ತಿಸುವುದಲ್ಲದೆ, ಕಳ್ಳನ ಛಾಯಾಚಿತ್ರವನ್ನೂ ತೆಗೆದುಕೊಂಡುಬಿಡುವುದು. ಇನ್ನೊಂದೆಂದರೆ ಕಣ್ಣೀರು ಸುರಿಸಲು ಹಚ್ಚುವಂತಹ ವಿಷವಾಯುವನ್ನು ಕಳ್ಳನಿಗೆ ಕುಡಿಸುವುದು. ಈ ಯಂತ್ರದ ಮೂಲಕ ಪಾಪ.... ಕಳ್ಳನ ನೂರು ವರ್ಷಗಳು ಅಂದೆಯೆ ತುಂಬುವುವು.

ಮನೆಗೆ ಬೆಂಕಿಹತ್ತಿದುದನ್ನು ತಿಳುಹುವಂತಹ ಇನ್ನೊಂದು ಯಂತ್ರದ ರಚನೆಯಾಗಿದೆ. ಬೆಂಕಿಹತ್ತಿದ ಮರುನಿಮಿಷದಲ್ಲಿಯೆ ಆ ಯಂತ್ರವು ಅಗ್ನಿನಿವಾರಕಗೃಹಕ್ಕೆ ಟೆಲಿಫೋನನ್ನು ಕಳುಹುತ್ತದೆ. ಮನೆಯ ಯಜಮಾನನಿಗೆ ವರ್ತಮಾನವನ್ನು ತಲ್ಪಿಸುತ್ತದೆ. ಬಳಿಕ ಸ್ಪಷ್ಟವಾದ ಶಬ್ದಗಳಲ್ಲಿ, ಮನುಷ್ಯರಂತೆ ಕೂಗಿ ಕೂಗಿ ಮಾತನಾಡಲು ತೊಡಗುತ್ತದೆ. ಕಳ್ಳನು ಎಂತಹನೇ ಇರಲಿ; ಹಣದ ಪೆಟ್ಟಿಗೆಯಿಂದ ೨೦ ಫೂಟಿನ ಅಂತರದೊಳಕ್ಕೆ ಸುಳಿಯುವಂತಿಲ್ಲ.

CC-0. Jangamwadi Math Collection. Digitized by eGangotri

ಸುಳಿದೊಡನೆಯೆ ಆ ಯಂತ್ರವು ಕೂಗಿಕೊಳ್ಳುವುದು. ಹಣದ ಚೀಲಗಳ ಸಂರಕ್ಷಣೆಯು ಬಗೆಗೂ ಇದೇ ಬಗೆಯ ಯುಕ್ತಿಯನ್ನು ಕಂಡುಹಿಡಿಯಲಾಗಿದೆ. ಯಾವನಾದರೂ ಕಳ್ಳನೊಬ್ಬನು ಹಣದ ಚೀಲಗಳನ್ನು ತೆಗೆದುಕೊಂಡು ಹೊರಟೊಡನೆಯೆ, ಚೀಲಗಳಿಂದ ಒಂದರಹಿಂದೆ ಒಂದರಂತೆ ಸ್ಫೋಟಗಳಾಗತೊಡಗುವುವು, ಅಲ್ಲದೆ ಕಳ್ಳನು ಓಡಿಹೋಗುತ್ತಲಿದ್ದ ದಾರಿಯು ಒಮ್ಮೆಲೆ ಗೊತ್ತಾಗುವಂತೆ, ಹೊಗೆಯ ಚಕ್ರಗಳುಂಟಾಗಲಾರಂಭಿಸುವುವು. ನಮ್ಮ ಹಿಂದುಸ್ಥಾನದ ಕಳ್ಳರು ಮಾತ್ರ ಇದುವರೆಗೂ ಭಾಗ್ಯಶಾಲಿಗಳಾಗಿಯೆ ಉಳಿದಿದ್ದಾರೆ.

—ಚಿತ್ರಮಯಜಗತ್

**'ಡಿ' ವಿಟ್ಯಾಮಿನ್ನಿನ ಉಪಯುಕ್ತತೆ**

ಅನೇಕ ವರ್ಷಗಳ ಸಂಶೋಧನೆಯಿಂದ ಈ ಜೀವಸತ್ತ್ವವನ್ನು ಕಂಡುಹಿಡಿಯಲಾಗಿದೆ. ಕೆಲಕೆಲವು ಜಿಗಟು ಪದಾರ್ಥಗಳಲ್ಲಿ 'ಅರ್ಗೊಸ್ಟೆರೋಲ್' (Ergosterol)' ಎಂಬ ಹೆಸರಿನ ಪದಾರ್ಥವೊಂದಿರುವುದು. ಸೂರ್ಯನ 'ಅಲ್ಟ್ರಾವಾಯೊಲೆಟ್' ಕಿರಣಗಳ ಸಂಯೋಗದಿಂದ, ಅದರಲ್ಲಿ'ಡಿ' ವಿಟ್ಯಾಮಿನ್ನು ನಿರ್ಮಾಣವಾಗುವುದು. ನಮ್ಮ ದೇಹದ ಚರ್ಮದ ಒಳಭಾಗದಲ್ಲಿರುವ ಕೊಬ್ಬಿನಲ್ಲಿ ಈ ಜೀವಸತ್ತ್ವವಿರುವುದು. ಬಹಳ ಹೊತ್ತಿನ ವರೆಗೆ ಮೈಮೇಲೆ ಬಿಸಿಲು ಬಿದ್ದಿರುವಂತೆ ಏರ್ಪಾಡು ಮಾಡುವುದರಿಂದ 'ಡಿ' ವಿಟ್ಯಾಮಿನ್ನು ಸಿದ್ಧವಾಗುವುದು. 'ಅಲ್ಟ್ರಾವಾಯೋಲೆಟ್' ಯಂತ್ರದ ರೀತಿಯೂ ಇದೇ ತೆರನಾಗಿರುವುದು. ಕಾಡ್‌ಲಿವ್ಹರ್ ಆಯಿಲ್, ಬೆಣ್ಣೆ, ತತ್ತಿ, ಟೊಮ್ಯಾಟೊ, ಕೆಂಪುಗಜ್ಜರಿ, ಹಾಲು, ಗೊಂಜೋಳಗೋದಿಗಳ ನುಚ್ಚು, ಸೊಪ್ಪಿನ ಪಲ್ಲೆಯಗಳು ಇವೆಲ್ಲವುಗಳಿಂದಲೂ, ಮೇಲೆ ಹೇಳಿದ ಯಂತ್ರವು 'ಡಿ' ವಿಟ್ಯಾಮಿನನ್ನು ಹೊರಡಿಸುತ್ತದೆ.

ಈ ವಿಟ್ಯಾಮಿನ್ನು ನಮ್ಮ ಶರೀರಕ್ಕೆ ಅತ್ಯಂತ ಅವಶ್ಯಕವಾದುದು. ಶರೀರದಲ್ಲಿಯ ಜೀವಾಣು [ಸೆಲ್] ಗಳಿಗೆ ಕ್ಯಾಲ್ಶಿಯಮ್ ಮತ್ತು ಫಾಸ್ಫರಸ್‌ಗಳನ್ನು ಯೋಗ್ಯಪ್ರಮಾಣದಲ್ಲಿ ಒದವಿಸಿಕೊಡುವುದೇ ಇದರ ಮುಖ್ಯವಾದ ಕೆಲಸ. ನಮ್ಮ ದೇಹದಲ್ಲಿ 'ಡಿ' ವಿಟ್ಯಾಮಿನ್ನು ಕಡಿಮೆಯಾಯಿತೆಂದರೆ, ಎಲುವುಗಳಿಗೂ ಹಲ್ಲುಗಳಿಗೂ ಸುಣ್ಣದ [ಕ್ಯಾಲ್ಶಿಯಂ] ಪೂರಯಿಕೆಯು ಕಡಿಮೆಯಾಗುವುದು. ಇದರಿಂದ ಎಲುವುಗಳು ಮೆದುಗೊಂಡು ಬಲಹೀನವಾಗುವುವು. ಕ್ಯಾಲ್ಶಿಯಮ್ಮಿನ ಕೊರತೆಯಿಂದ ಇನ್ನೂ ಎಷ್ಟೆಷ್ಟೋ ಬೇನೆಗಳು ಬಂದೊದಗುವುವು 'ರಿಕೆಟ್ಸ್'' ಆಸ್ಟ್ರಿಯೊ ಮಲೇರಿಯಾ [ಎಲುವು ಮಿದುವಾಗುವುದು]' ತಕ್ಕಕಾಲದಲ್ಲಿ ಹಲ್ಲು ಬಾರದಿರುವುದು, ಮೈಯಲ್ಲಿ ರಕ್ತವು ವೇಗವಾಗಿ ಹರಿಯುವುದು—ಇವೇ ಮೊದಲಾದುವು ಮುಖ್ಯವಾದುವುಗಳು.

ನಮ್ಮ ದೇಶಗಳಲ್ಲಿಯ ದೊಡ್ಡದೊಡ್ಡ ಪಟ್ಟಣಗಳಲ್ಲಿ, ಚಿಕ್ಕಮಕ್ಕಳಿಗೆ 'ಡಿ' ವಿಟ್ಯಾಮಿನ್ನು ತೀರ ಕಡಿಮೆ ಪ್ರಮಾಣದಿಂದ ಸಿಕ್ಕುವುದು. ಇದಕ್ಕೆ ಹಲವು ಕಾರಣಗಳಿರುವುವು. ಸೂರ್ಯದರ್ಶನವಿಲ್ಲದ, ಕೊಳಕಾದ ಮಲಿನ ಹವೆಯಲ್ಲಿ ವಸತಿಮಾಡಿಕೊಂಡಿರುವುದು ಮೊದಲನೆಯ ಕಾರಣವು. ಸಾಕಷ್ಟು ಹಾಲು ದೊರೆಯದಿರುವುದೂ, ದೊರೆತ ಹಾಲು ಕೀಳುತೆರದ್ದಿರುವುದೂ ಎರಡನೆಯ ಕಾರಣವು. ಹೊಸಹೊಸ ಹಣ್ಣುಗಳು, ಹಸಿಯ ಕಾಯಿಪಲ್ಲೆಯ ಇವುಗಳ ಅಭಾವವು ಮೂರನೆಯ ಕಾರಣ. ಬರಿಯೆ ಬಡಜನರ ಹುಡುಗರಷ್ಟೇ ಅಲ್ಲ; ಎಂತೆಂತಹ ಹಣವಂತರ ಹುಡುಗರೂ 'ಡಿ' ವಿಟ್ಯಾಮಿನ್ನಿನ ಕೊರತೆಯಿಂದ ದುಃಖವನ್ನು ಅನುಭವಿಸುತ್ತಿರುತ್ತವೆ. ಇಂತಹ ಹುಡುಗರನ್ನು ಒಮ್ಮೆಲೆ ಗುರುತಿಸಲಿಕ್ಕೆ ಬರುವುದು.

'ಡಿ' ಜೀವಸತ್ತ್ವದ ಕೊರತೆಯುಳ್ಳ ಹುಡುಗರಿಗೆ ಹಲ್ಲು ಬಹುದಿನಗಳ ವರೆಗೆ ಬಾರದೆ ಇರುವುದು; ಬೇಗನೆ ನಡೆದಾಡಲಿಕ್ಕೂ ಆಗದು; ಶರೀರದ ಬೆಳೆವಣಿಗೆ ನಿಂತುಹೋಗುವುದು; ತಲೆಯು ದೊಡ್ಡದಾಗುವುದು; ಕೈ ಕಾಲು ಬಡಕಲಾಗುವುವು; ಹಸ್ತ-ಪಾದಗಳ ಮೇಲಿನ ನರಗಳು ದೊಡ್ಡವಾಗುವುವು; ಇಂತಹ ಹುಡುಗರನ್ನು ನಡೆದಾಡಲಿಕ್ಕೆ ಹಚ್ಚಿದರೆ ಕೈಕಾಲುಗಳು ಸೊಟ್ಟಗೆ ಆಗುವುವಲ್ಲದೆ ನಡುವು ಕೂಡ ಸೊಟ್ಟಗಾಗುವುದು. ಬೆನ್ನಹುರಿಯು ಹೊರಕ್ಕೆ ಕಾಣುವುದು. ಒಮ್ಮೊಮ್ಮೆ ಇಂತಹ ಹುಡುಗರಿಗೆ 'ಎ' ವಿಟ್ಯಾಮಿನ್ನಿನ ಕೊರತೆಯೂ ಕಂಡುಬರುವುದು. ಈ ಹುಡುಗರಿಗೆ ಅದೇ ಹಿಂಡಿದ ಹಾಲು, ಕಾಡ್‌ಲಿವ್ಹರ್ ಆಯಿಲ್, ಹಣ್ಣುಹಂಪಲ ಇವುಗಳನ್ನು ಅವಶ್ಯವಾಗಿ ಕೊಡಬೇಕು. ಬರಿಮೈಯಿಂದ ಸ್ವಲ್ಪ ಕಾಲದ ವರೆಗೆ ಬೆಳಗಿನ ಬಿಸಿಲಲ್ಲಿ ತಿರುಗಾಡಿಸುತ್ತಿರುವುದೂ ಒಳ್ಳೆಯದು. 'ಅಲ್ಟ್ರಾವಾಯೊಲೆಟ'ನ ಉಪಾಯ ಮಾಡುವುದಕ್ಕೆ ಸಾಧ್ಯವಿದ್ದರೆ ಇನ್ನೂ ಚೆನ್ನಾಗುವುದು. ಕಾಡ್‌ಲಿವ್ಹರ್ ಆಯಿಲಿನಿಂದ ಮೈಯನ್ನು ಆಗಾಗ ಮರ್ದಿಸುತ್ತಿರುವುದರಿಂದಲೂ ಪ್ರಯೋಜನವಾಗುವುದು. ಕೆಲವೊಂದು ಹನಿಗಳನ್ನು ಕುಡಿಸುವುದರಿಂದ, 'ಎ' ಮತ್ತು 'ಡಿ' ವಿಟ್ಯಾಮಿನು

CC-0. Jangamwadi Math Collection. Digitized by eGangotri

ಗಳೆರಡರ ಪೂರಯಿಕೆಯೂ ಆಗುವಂತಹ ಕೆಲವು ಔಷಧಿಗಳೂ ಇತ್ತೀಚೆಗೆ ದೊರೆಯುತ್ತಲಿವೆ.

"ಚಾಂದ್ (ಹಿಂದಿ)"

**ನಗ್ನತೆಯ ಇತಿಹಾಸ,—ಕೊಂಡಾಟ**

ಗ್ರೀಸ್ ದೇಶದಲ್ಲಿ ಸ್ಪಾರ್ಟಾದಲ್ಲಿಯೂ ಬೇರೆ ಕಡೆಗಳಲ್ಲಿಯೂ — ಪೂರ್ವಕಾಲದಲ್ಲಿ — ಯುವಕ-ಯುವತಿಯರು ಒಂದೆ ಎಡೆಯಲ್ಲಿ ಸೇರಿ, ನಗ್ನಾವಸ್ಥೆಯಲ್ಲಿಯೆ ಕೆಲವೊಂದು ವ್ಯಾಯಾಮ, ಜಿದ್ದು ನರ್ತನಗಳನ್ನು ನಡೆಯಿಸುವ ಪದ್ಧತಿಯಿದ್ದಿತು. ಪ್ರಸಿದ್ಧ ತತ್ತ್ವಜ್ಞಾನಿಯಾದ ಪ್ಲೇಟೋನಿಗೆ ಕೂಡ ಈ ನಡತೆ ಒಪ್ಪಿಗೆಯಾಗಿದ್ದಿತಲ್ಲದೆ, ಕೊನೆಯ ವರೆಗೂ ಆತನ ಮನಸ್ಸು ಇದರ ವಿಚಾರದಲ್ಲಿ ಮಾರ್ಪಡಲಿಲ್ಲ. ಈ ನಡತೆಯಿಂದ ಕಾಮವಾಸನೆಯ ಅನಾವಶ್ಯಕ ತೀಕ್ಷ್ಣತೆಯು ಕಡಿಮೆಯಾಗುವುದೆಂದು ಆತನ ಅಭಿಪ್ರಾಯ. ಇದೇ ಗುರಿಯನಿಟ್ಟುಕೊಂಡೇ 'ದೇಹದ ಅಂಗಾಂಗಗಳ ಆಕಾರವೂ ವ್ಯಕ್ತವಾಗಿ ಕಾಣುವಂತಹ ಉಡಿಗೆತೊಡಿಗೆಗಳನ್ನು ಹಾಕಿಕೊಂಡ ತರುಣ-ತರುಣಿಯರನ್ನು, ಒಂದೆಡೆಯಲ್ಲಿಯೆ ವ್ಯವಹರಿಸಲಿಕ್ಕೆ ಬಿಡುವುದರಲ್ಲಿ ಯಾವ ತಡೆಯೂ ಇರಲಾಗದು' ಎಂದವನು ಒಪ್ಪಿಗೆ ಕೊಟ್ಟಿರುವನು.

ರೋಮದಲ್ಲಿಯ ಪರಿಸ್ಥಿತಿಯು ಮಾತ್ರ ಇದಕ್ಕೆ ವಿಪರೀತವಾಯಿತು. ಅಲ್ಲಿ ರಂಗಭೂಮಿಯ ಮೇಲಿನ ನಟ-ನಟಿಯರು ದಿಗಂಬರರಾಗಿರುತ್ತಿದ್ದರಾದರೂ, ಅವರ ತರಗತಿಯು ಕೀಳೆಂದು ಪರಿಗಣಿಸಲಾಗುತ್ತಿತ್ತು. ಕ್ರೈಸ್ತಧರ್ಮಿಯರಿಗೆ ರೋಮನ್‌ಜನರ ಯಾವ ನಡೆನುಡಿಗಳು ಸೇರುತ್ತಿರಲಿಲ್ಲವಾದರೂ, ನಗ್ನತೆಯು ಕೀಳೆಂಬ ರೋಮನ್ನರ ವಿಚಾರವು ಮಾತ್ರ ಅವರಲ್ಲಿ ಸೇರಿಕೊಂಡಿತು. ಇದರ ಕಾರಣವು ಸಹಜವಾಗಿ ಕಂಡುಬರುವಂತಹದಾಗಿದೆ. ಅವರ ಧರ್ಮದಂತೆ ಕಾಮವಾಸನೆಯು ಕೀಳುತರಗತಿಯದಾದುದರಿಂದ, ನಗ್ನದೇಹವೂ ಕೀಳುತರಗತಿಯದೆನಿಸಿತು; ಅದಕ್ಕಾಗಿಯೆ ಮೈಯನ್ನು ಮುಚ್ಚಿಕೊಂಡಿರುವುದು ಆವಶ್ಯಕವೆಂದು ಕಂಡಿತು. ಆದರೆ ಮೈಯನ್ನು ಮುಚ್ಚುವುದರಿಂದ ಕಾಮವಾಸನೆ ಕಡಿಮೆಯಾಗುವುದಿಲ್ಲವಿಷ್ಟೇ ಅಲ್ಲ, ಅದು ಮತ್ತಿಷ್ಟು ಹೆಚ್ಚುವುದೆಂಬುದು ಅವರಿಗೆ ಗೊತ್ತಾಗಲಿಲ್ಲ. ಕಾಮವಿಕಾರದಿಂದ ಯಾರು ತಪಿಸುತ್ತಿರುವರೋ ಅವರು ಔಷಧಿಯೆಂದು ಸೂಕ್ಷ್ಮದೃಷ್ಟಿಯಿಂದ ನಗ್ನಶರೀರವನ್ನು ನೋಡುತ್ತಿರಬೇಕೆಂದು ಅನೇಕರ ಮತವಿದೆ.

'ವೇಷಭೂಷಣದಿಂದಲೆ ಕಾಮವಾಸನೆಯು ಹೆಚ್ಚುತ್ತದಲ್ಲದೆ ನಗ್ನತೆಯಿಂದಲ್ಲ' ಎಂಬುದರ ವಿಷಯದಲ್ಲಿ ಮತಭೇದವಿರಕೂಡದು. ಆಫ್ರಿಕಾ, ಮಾದಾಗಾಸ್ಕರ್ ಮೊದಲಾದ ಪ್ರದೇಶಗಳನ್ನು ತಿರುಗಿಬಂದ ಸ್ಕಾಟ್ ಇಲಿಯೆಟ್ ಎಂಬ ಹೆಸರಿನ ಪ್ರವಾಸಿಯು 'ವಸ್ತ್ರದಿಂದಲೆ ಕಾಮುಕತೆಯು ಬೆಳೆಯುವುದು' ಎಂದು ಬರೆದಿರುವನು. ವಸ್ತ್ರವು ಕಡಿಮೆಯಾಗಿದ್ದಷ್ಟು ಕಾಮವಾಸನೆಯು ಕಡಿಮೆಯಾಗಿರುವುದು. ಪುರುಷ ಚಿತ್ರಕಾರರೆದುರು ಬೆತ್ತಲೆಯಾಗಿ ಕುಳಿತುಕೊಳ್ಳಬೇಕಾದ ಸಂದರ್ಭಪ್ರಾಪ್ತವಾದ ಸ್ತ್ರೀಯರ ಅನುಭವವೇನೆಂದರೆ: 'ಸಂಪೂರ್ಣ ಬೆತ್ತಲೆಯಾಗಿ ಕುಳಿತಿರುವಷ್ಟು ಕಾಲದ ವರೆಗೂ ತಮಗೆ ಪುರುಷರ ಕಾಮವಾಸನೆಯ ಬಗೆಗೆ ಹೆದರಿಕೆಯಿರುವುದಿಲ್ಲ....' ಎಂದು. ರುಫೆಲ್ಸ್ ಎಂಬ ಹೆಸರಿನ ಚಿತ್ರಕಾರನೊಬ್ಬನು ಒಬ್ಬ ಹೆಂಗುಸಿನ ವಿಚಾರದಲ್ಲಿ ಬರೆದಿರುವುದೇನೆಂದರೆ: "ಅವಳು ಚಿತ್ರಗೃಹದಲ್ಲಿ ಬಂದೊಡನೆಯೆ ಒಮ್ಮೆಲೆ ಬಟ್ಟೆಗಳನ್ನು ಬಿಚ್ಚಿಹಾಕುವಳು. 'ಮನಸ್ಸಿನಲ್ಲಿ ಎಂತಹ ವಿಚಾರಗಳು ಬರಬಹುದೆಂಬುದರ ವಿಚಾರದಲ್ಲಿ ಗಂಡಸರಿಗೆ ಜವಾಬ್ದಾರಿಯಿರುವುದಿಲ್ಲ; ಸಂಪೂರ್ಣ ಬೆತ್ತಲೆಯಾಗಿ ಬಿಟ್ಟರೆ ಅವರು ಕಾಮಾತುರರಾಗುವುದಿಲ್ಲ' ಎಂದವಳು ಹೇಳುತ್ತಿದ್ದಳು." ಕಾಮವಾಸನೆಯನ್ನು ಇಲ್ಲದಂತೆ ಮಾಡಬೇಕೆಂದು ಯಾರಾದರೂ ಅಪೇಕ್ಷಿಸುತ್ತಿದ್ದರೆ, ಅವರು ನಗ್ನತೆಗೆ ತಡೆಹಾಕುವುಕ್ಕಿಂತ ವಸ್ತ್ರಗಳಿಗೆ ತಡೆಹಾಕುವದು ಆವಶ್ಯಕವಾದುದು.

ಕ್ರೈಸ್ತಧರ್ಮವು ನಗ್ನತೆಗೆ ತಡೆಯನ್ನೊಡ್ಡಿದರು ಅದನ್ನು ವಿರೋಧಿಸುವ ಜನರು ಆಗಾಗ ತಲೆಯೆತ್ತುತ್ತ ಬಂದಿದ್ದಾರೆ. ಕ್ರಿ. ಶ. ಎರಡನೆಯ ಶತಮಾನದಲ್ಲಿ, 'ಆ್ಯಡಾಮಾಯಿಟ್' ಪಂಥದ ಜನರು, ಪ್ರಾರ್ಥನಾಕಾಲದ ನಗ್ನರಾಗಿಯೆ ಇರುತ್ತಿದ್ದರು. ಹದಿಮೂರನೆಯ ಶತಮಾನದಲ್ಲಿ ಜರ್ಮನಿಯಲ್ಲಿಯೂ, ಆ ಮೇಲೆ ಫ್ರಾನ್ಸಿನಲ್ಲಿಯು ಇಂತಹದೊಂದು ಪಂಥವು ಮುಂದೆ ಬಂದಿದ್ದಿತು; ಪಂಥದವರು ಅನುಭವಿಸಿದ ಸಂಕಟವು ಅಷ್ಟಿಷ್ಟಲ್ಲ. ಆ ಮಧ್ಯಯುಗದಲ್ಲಿ ಯುರೋಪ್ ದೇಶಗಳಲ್ಲಿ ನಗ್ನತೆಯ ಸಾಕಷ್ಟು ಪ್ರಚಾರದಲ್ಲಿ ಬಂದಿದ್ದಿತು. ಸಾರ್ವಜನಿಕ ಸ್ನಾನಗೃಹಗಳಿಗೆ, ಸ್ತ್ರೀಪುರುಷರಿಬ್ಬರೂ ಒಂದೆ ಕಾಲದಲ್ಲಿ ಹೋಗುತ್ತಿದ್ದರು. 'ಆಲ್ವಿನ್ ಶುಲ್ಝ್' ಅವರು "ಉ[illegible] ವರ್ಗದ ಹೆಂಗಸರೂ ಗಂಡಸರೂ ಇಂತಹ ಸ್ನಾನಗೃಹಗ[illegible] ಬೆತ್ತಲೆಯಾಗಿಯೆ ಇರುತ್ತಿದ್ದರು. ಬರಿಯೆ ತಲೆಗೊ[illegible] ಟೊಪ್ಪಿಗೆಯಾಗಲಿ, ಕೊರಳಿಗೊಂದು ಮಾಲೆಯಾ[illegible]

CC-0. Jangamwadi Math Collection. Digitized by eGangotri

ಇರುತ್ತಿದ್ದಿತು." ಎಂದು ಬರೆದಿರುವರು. ಅದೇ ಕಾಲದ ಇನ್ನೊಬ್ಬ ಲೇಖಕನೂ ಸಾರ್ವಜನಿಕ ನಗ್ನತೆಯನ್ನು ಕುರಿತು ನಿಷೇಧವನ್ನು ಪ್ರಕಟಿಸಿರುವನೆಂದ ಬಳಿಕ, ಆ ಕಾಲದಲ್ಲಿ ನಗ್ನತೆಯ ಪ್ರಚಾರವು ಸಾಕಷ್ಟಿದ್ದಿತೆಂಬುದರಲ್ಲಿ ಸಂದೇಹವೇನೂ ಇಲ್ಲ.

ಹದಿನಾರನೆಯ ಶತಮಾನದಲ್ಲಿ ಫ್ರಾನ್ಸಿನ ಹೆಂಗುಸರು ಸ್ನಾನದ ಸಮಯದಲ್ಲಿ, ತಮಗೆ ಬೇಕಾದವರನ್ನು—ನಿಸ್ಸಂಕೋಚಭಾವದಿಂದ — ಹತ್ತಿರವಿರಗೊಡುತ್ತಿದ್ದರು. ಈ ಶತಕದ ಕೊನೆಯ ಭಾಗದಲ್ಲಿ ಚಿತ್ರಿಸಿದ ಇಂತಹ ಸ್ತ್ರೀಯರ ಬೆತ್ತಲೆಯ ಚಿತ್ರಗಳೂ ಸಿಕ್ಕುತ್ತವೆ. ಆದರೆ ಅವು ವಾಸ್ತವಚಿತ್ರಗಳಲ್ಲ. ಹತ್ತೊಂಬತ್ತನೆಯ ಶತಮಾನದಲ್ಲಿ ಮಾತ್ರ ನಗ್ನತೆಯ ಧಾರ್ಮಿಕ ಆಕ್ಷೇಪಣೆಯು ನಷ್ಟವಾಗಿ, ಅದೊಂದು ಕೇವಲ ಶಿಷ್ಟಸಂಪ್ರದಾಯವಾಗಿ ಉಳಿಯಿತು. ಈ ಮಾತಿನಿಂದ ನಗ್ನತೆಯನ್ನು ಎಲ್ಲರೂ ಕ್ಷಮ್ಯವಾಗಿ ಭಾವಿಸಿದರೆಂದು ಯಾರೂ ತಿಳಿದುಕೊಳ್ಳಲಾಗದು. ಪರಿಸ್ಥಿತಿಯು ತಿರುಗಿ ಇದಕ್ಕೆ ವಿಪರೀತವಾಗಿಯೇ ಪರಿಣಮಿಸಿತು. ಯುರೋಪಿಯನ್ ಮಿಶನರಿಗಳು ಎಲ್ಲೆಲ್ಲಿ ತಮ್ಮ ಕ್ರೈಸ್ತಧರ್ಮದ ದೀಕ್ಷೆಯನ್ನು ಕೊಟ್ಟರೋ, ಅಲ್ಲಿ ಎಲ್ಲ ಕಡೆಗಳಲ್ಲಿಯೂ — ಎಷ್ಟೇ ಉಷ್ಣ ಪ್ರದೇಶವಾಗಿದ್ದರೂ—ತಮ್ಮ ಯುರೋಪಿನ ಉಡಿಗೆ-ತೊಡಿಗೆಗಳ ಹೊರೆಯನ್ನೇ ಹೊರಿಸಿದರು. ಇದರ ವಿಷಯಕ್ಕೆ 'ಫಿಜೀ' ದೇಶದ ಹಳೆಯ ಗವರ್ನರನೊಬ್ಬನು ಬರೆದಿರುವನೇನೆಂದರೆ:— "ನಾನು ಕೆಲವು ಹಳ್ಳಿಗಳನ್ನು ಸುತ್ತಿದೆನು. ಅಲ್ಲಿ 'ಖಮೀಸ'ನ್ನೂ 'ಪಾಟಲೂನ'ನ್ನೂ ಧರಿಸದಿರುವುದೂ ಅನೇಕ ಸಂದರ್ಭಗಳಲ್ಲಿ ಕೋಟು—ನೆಕ್ಟಾಯ್—ಬೂಟುಗಳನ್ನು ಹಾಕಿಕೊಳ್ಳದಿರುವುದೂ, ಧಾರ್ಮಿಕ ಅಪರಾಧವೆಂದು ತಿಳಿಯಲಾಗುತ್ತಿದ್ದಿತಲ್ಲದೆ, ಅದಕ್ಕಾಗಿ ದಂಡನೆಯನ್ನೂ ವಿಧಿಸಲಾಗುತ್ತಿದ್ದಿತು. ಈ ಸಭ್ಯತೆಯ ಕಲ್ಪನೆಯು ನೈಸರ್ಗಿಕವಾದುದಲ್ಲ, ಇಷ್ಟೇ ಅಲ್ಲ; ಈ ಉಡುಗೆತೊಡಿಗೆಯ ಸಂಪ್ರದಾಯವು ಜನರ ಮೇಲೆ ಒತ್ತಾಯಮಾಡುವುದು."

'ಮದುವೆಯ ಕಾಲದಲ್ಲಿ ವಧೂವರರಿಬ್ಬರೂ ಮೋಸಹೋಗದಂತೆ, ಪರಸ್ಪರರ ನಗ್ನಶರೀರವನ್ನು ಪರಸ್ಪರರು ನೋಡಬೇಕಾದುದು ಆವಶ್ಯಕ' ಎಂದು ಸರ್ ಟಾಮಸ್ ಮೂರ್ ಅವರು 'ಯುಟೋಪಿಯಾ' ಎಂಬ ತಮ್ಮದೊಂದು ಗ್ರಂಥದಲ್ಲಿ ಬರೆದಿದ್ದಾರೆ. ಈ ಕಾಲ್ಪನಿಕ ದೇಶದಲ್ಲಿ ವಧುವು ಕುಮಾರಿಯಿರಲಿ, ವಿಧವೆಯಾಗಿರಲಿ, ಅವಳನ್ನು ನಗ್ನಸ್ಥಿತಿಯಲ್ಲಿಯೆ ಭವಿಷ್ಯತ್‌ಪತಿಗೆ ತೋರಿಸುವ ರೂಢಿಯಿದ್ದಿತು. ಹಾಗೆಯೆ ವಧುವಿಗೂ ಮದುಮಗನ ನಗ್ನದೇಹವನ್ನು ನೋಡಬಹುದಾದ ಸಂದರ್ಭವನ್ನು ಒದಗಿಸಿಕೊಡಲಾಗುತ್ತಿದ್ದಿತು. "ಈ ರೂಢಿಯನ್ನು ಕೇಳಿ ನಾವು ನಗೆಯಾಡಿದೆವು; ಟೀಕೆಮಾಡಿದೆವು. ನಮ್ಮ ರೀತಿಯನ್ನು ಕಂಡು ಅಲ್ಲಿಯವರು ಆಶ್ಚರ್ಯಗೊಂಡರು. ಏಕೆಂದರೆ: ಮಿಕ್ಕ ದೇಶಗಳಲ್ಲಿಯೆಲ್ಲ ಕುದುರೆಯಂತಹ ಸಣ್ಣ ಬೆಲೆಯ ಪ್ರಾಣಿಯನ್ನು ತೆಗೆದುಕೊಳ್ಳಬೇಕಾದರೂ ಜನರು ಎಷ್ಟೊಂದು ಲಕ್ಷ್ಯಪೂರ್ವಕವಾಗಿ ಪರೀಕ್ಷಿಸಿನೋಡುವರು. ಮೂಲತಃ ಬೆತ್ತಲೆಯಾಗಿರುವುದಾದರೂ, ಅದರ ಥಡಿಯನ್ನು ಇಳಿಸಿ, ಅಲ್ಲಿಯೇನಾದರೂ ದೋಷಗಳು ಮುಚ್ಚಿಕೊಂಡಿವೆಯೇ?.... ಎಂಬುದನ್ನು ನೋಡುವರು. ಎಲ್ಲಿಯೂ ದೋಷಗಳಿಲ್ಲವೆಂಬುದರ ಬಗ್ಗೆ ಖಂಡಿತವಾಗುವ ಹೊರತು ಕುದುರೆಯನ್ನು ತೆಗೆದುಕೊಳ್ಳರು. ಆದರೆ ಯಾವುದರಲ್ಲಿ ಜನ್ಮದ ಸುಖ-ದುಃಖದ ಪ್ರಶ್ನೆಯೇ ತಲೆಯೆತ್ತಿ ನಿಂತಿರುವುದೋ ಅಂತಹ ಮದುವೆಯ ಸಂದರ್ಭದಲ್ಲಿ, ಮದುಮಗಳನ್ನು ಆರಿಸುವಾಗ, ಅದೇ ಜನರೇ ಎಷ್ಟೊಂದು ಅಲಕ್ಷ್ಯವನ್ನು ತೋರಿಸುವರಲ್ಲ! ಮದುಮಗಳ ದೇಹವೆಲ್ಲವೂ ಮುಚ್ಚಿಹೋಗಿರುವುದರಿಂದ, ಬರಿಯೆ ಮುಖವನ್ನು ನೋಡಿ ಮದುವೆಯಾಗುವರು; ಆ ಮೇಲೆ ಯಾವುದಾದರೂ ದೊಡ್ಡ ದೋಷವೊಂದು ಕಂಡುಬಂದಲ್ಲಿ ಮನಸ್ಸು ಹೇಸಿಕೊಳ್ಳಲಾರದೇ?" ಅದಕ್ಕಿಂತ ಮೊದಲೇ ಒಬ್ಬರನ್ನೊಬ್ಬರು ಸಂಪೂರ್ಣವಾಗಿ ಪರೀಕ್ಷಿಸುವ ನಿಯಮವನ್ನು ಹಾಕುವುದು ಒಳ್ಳೆಯದಲ್ಲವೇ?

ಕಲೆ-ಆರೋಗ್ಯಗಳಿಗಾಗಿ ನಗ್ನತೆಯು ಆವಶ್ಯಕವೆಂಬ ವಿಚಾರವು ೧೯ನೆಯ ಶತಮಾನದ ಪ್ರಾರಂಭದಿಂದಲೂ ಕಂಡುಬರುವುದು. 'ಬೆತ್ತಲೆಯ ದೇಹವನ್ನು ನೋಡುತ್ತಿರುವುದರಿಂದ, ಅನಾವಶ್ಯಕ ಕಾಮಾತುರತೆಯು ಕಡಿಮೆಯಾಗುವುದು' ಎಂಬುದಾಗಿ 'ಸೇನಾಂಕುರು (೧೮೦೬)' ಎಂಬ ಫ್ರೆಂಚ್ ಲೇಖಕನೊಬ್ಬನು ಬರೆದಿರುವನು. ಜಾನ್‌ಸನ್ನನ ಚರಿತ್ರೆಯಲ್ಲಿ, ಸ್ಕಾಚ್ ನ್ಯಾಯಾಧೀಶನೊಬ್ಬನು ಆರೋಗ್ಯದ ಸಲುವಾಗಿ—ಬೆಳಗಿನ ವೇಳೆಯಲ್ಲಿ—ತನ್ನ ಕೋಣೆಯಲ್ಲಿಯೆ—ಬರಿಬೆತ್ತಲೆಯಿಂದ ತಿರುಗಾಡುತ್ತಿದ್ದನೆಂಬುದನ್ನು ಉಲ್ಲೇಖಿಸಲಾಗಿದೆ. ಆ ನ್ಯಾಯಾಧೀಶನು ತನ್ನ ಹೆಣ್ಣುಮಕ್ಕಳನ್ನು ಕೂಡ, ಉಪ್ಪರಿಗೆಯ ಚಂದ್ರಶಾಲೆಯಲ್ಲಿ ಬೆತ್ತಲೆಯಾಗಿ ತಿರುಗಾಡಲು ಹಚ್ಚುತ್ತಿದ್ದನಂತೆ. ಬೆಂಜಾಮಿನ್ ಫ್ರ್ಯಾಂಕ್ಲಿನ್ನಿಗೆ ಬೆತ್ತಲೆಯಾಗಿಯೆ ಕೆಲಸಮಾಡುವ ರೂಢಿಯಿದ್ದಿತಂತೆ. ಒಂದು ದಿನ ಲಕ್ಷ್ಯವಿಲ್ಲದೆ ಅವನು

CC-0. Jangamwadi Math Collection. Digitized by eGangotri

ಹಾಗೆಯೆ ಕಿರುಮನೆಯಿಂದ ಹೊರಕ್ಕೆ ಬರಲು, ಒಕ್ಕಲಗಿತ್ತಿಯು ನೋಡಿ ಬೆಚ್ಚಿಬಿದ್ದಳಂತೆ.

ಬೆತ್ತಲೆಯಾಗಿರುವವರು ಹೆಚ್ಚು ಗಟ್ಟಿಮುಟ್ಟಾಗಿರುವರೆಂಬುದರಲ್ಲಿ ಸಂದೇಹವೇ ಇಲ್ಲ. ಐರ್ಲೆಂಡಿನಲ್ಲಿ ೧೮ನೆಯ ಶತಮಾನದ ವರೆಗೂ ಸ್ತ್ರೀ-ಪುರುಷರಿಬ್ಬರೂ ಒಂದೆ ಒಂದು ಸಡಿಲಾದ ನಿಲುವಂಗಿಯನ್ನು ತೊಟ್ಟುಕೊಂಡಿರುತ್ತಿದ್ದರಂತೆ. ಆದುದರಿಂದಲೇ ಅವರು ಚೆನ್ನಾಗಿ ಧೃಷ್ಟಪುಷ್ಟರಾಗಿರುತ್ತಿದ್ದರು. ಬೆತ್ತಲೆಯಾಗಿರುವ ಕಾಡುಜನರೂ ಗಟ್ಟಿಮುಟ್ಟಾಗಿರುವರು. ವಸ್ತ್ರಗಳನ್ನು ಉಪಯೋಗಿಸಲಾರಂಭಿದ ಮೇಲೆ ಮಾತ್ರ, ಅನೇಕ ರೋಗಗಳ ಹಬ್ಬುಗೆಯಾಗುವುದು. ಪ್ರಕೃತಿಯು ಕೆಡುವುದು.

ಸಮಾಜಸ್ವಾಸ್ಥ್ಯ [ ಡಾ. ಹೆವಲಾಕ್ ಅವರ ಅಭಿಪ್ರಾಯ. ]

ಸ್ತ್ರೀಪುರುಷರ ಸಹಶಿಕ್ಷಣಪದ್ಧತಿಯು, ಎಲ್ಲಕ್ಕೂ ಮೊದಲು ವಿದೇಶಗಳಲ್ಲಯೆ ಪ್ರಚಾರದಲ್ಲಿದ್ದಿತೆಂದೂ, ಭಾರತೀಯರಿಗೆ ಅದು ತೀರ

**ತಮಿಳು ನಾಡಿನಲ್ಲಿಯ** ಹೊಸದೆಂದೂ ಬಹುಜನರ **ಸಹಶಿಕ್ಷಣದ ಪ್ರಾಚೀನತೆ** ಕಲ್ಪನೆಯಿದೆ. ಆದರೆ ಈ ಪದ್ಧತಿಯನ್ನು ಎಲ್ಲರಿಗಿಂತ ಮೊದಲು ಪ್ರಚಾರದಲ್ಲಿ ತಂದ ಅಲೌಕಿಕವಾದ ಶ್ರೇಯಸ್ಸು ತಮಿಳುಜನಾಂಗಕ್ಕೆ ಸಲ್ಲುವುದು. ಪೂರ್ವಕಾಲದಲ್ಲಿ ಅಸ್ಸೀರಿಯಾ, ಮೆಸನೆ, ಬಾಬಿಲೋನಿಯಾ ಮೊದಲಾದ ಕೆಲವು ಸ್ಥಳಗಳಲ್ಲಿ, ಹೂವಿನ ಕಿರೀಟಗಳನ್ನು ಧರಿಸಿದ ಪೂಜಾರಿಣಿಯರು ಗಂಡುಸರೊಂದಿಗೆ ಸೇರಿ, ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಣಹೊಂದುತ್ತಿದ್ದರೆಂದು ಇತಿಹಾಸವು ಹೇಳುತ್ತಿದೆ; ಆದರೆ ಇದರ ಸತ್ಯತೆಯನ್ನು ಎಲ್ಲಿಯ ವರೆಗೆ ನಂಬಬೇಕೆಂಬುದು ನಮಗೆ ತಿಳಿಯದ ವಿಷಯ. ಏಕೆಂದರೆ ಸಾಹಿತ್ಯಸೇವೆಯ ಕಾರ್ಯದಲ್ಲಿ ಎಲ್ಲರಿಗಿಂತ ಮೊದಲು ಪುರುಷರೊಂದಿಗೆ ಸ್ತ್ರೀಯರು ಸಹಕರಿಸಿದುದೆಂದರೆ ತಮಿಳುನಾಡಿನಲ್ಲಿಯೆ. ಎರ್ನಾಕುಲಮ್‌ದಿಂದ ಸುಮಾರು ೨೦ಮೈಲುಗಳ ಅಂತರದ ಮೇಲಿರುವ ತಿರುವಾಂಚಿಕ್ಕುಲಮ್ ಎಂಬಲ್ಲಿ ಸಹಶಿಕ್ಷಣವು—ತೀರ ಮೊದಲಿನ ಕಾಲದಲ್ಲಿಯೆ—ಪ್ರಚಾರದಲ್ಲಿದ್ದಿತು. ಈ ಪಟ್ಟಣಕ್ಕೆ ಪೂರ್ವಕಾಲದಲ್ಲಿ ' ವಾಂಚಿ ' ಎಂಬ ಹೆಸರಿದ್ದಿತು.

ಕ್ರಿಸ್ತಶಕ ಮೊದಲನೆಯ ಶತಮಾನದಲ್ಲಿಯೆ ರಚಿತವಾದ ತಮಿಳುಭಾಷೆಯ ಸಂಘಸಾಹಿತ್ಯದಲ್ಲಿ, ಹಲವು ಕಡೆಗೆ ಈ ' ವಾಂಚಿ 'ಯ ಹೆಸರಿನ ಉಲ್ಲೇಖವಿದೆ ' ಶಿಲಪ್ಪಾಧಿಕಾರಂ ' ಎಂಬ ಕಾವ್ಯದ ನಾಯಕನಾದ ' ಕೋವಲಮ್ ' ಎಂಬವನೂ, ಮಾಧವಿಯ ಮಗಳಾದ ಮಣಿಮೇಖಲೆಯೂ ಹನ್ನೆರಡು ವರ್ಷಗಳ ಪರ್ಯಂತ, ವಿದ್ಯಾಶಾಲೆಯಲ್ಲಿ ಕಲೆಯನ್ನು ಅಭ್ಯಾಸಿಸುತ್ತಿದ್ದರು. ವಾಂಚಿಯಲ್ಲಿ ದೊಡ್ಡದೊಂದು ವಿಶ್ವವಿದ್ಯಾನಿಲಯವಿದ್ದಿತೆಂದೂ, ಅಲ್ಲಿ ಬೇರೆ ಬೇರೆ ಕಲೆಗಳನ್ನು ಕಲಿಯುವವರಿಗೆ ಬೇರೆಬೇರೆ ಏರ್ಪಾಡುಗಳಿದ್ದುವೆಂದೂ " ಚೋಳರ ಚಿತ್ರಕಲೆಯೂ ತಮಿಳರ ನಾಗರಿಕತೆಯೂ " ಎಂಬ ಸಂಶೋಧಕ ಗ್ರಂಥದಿಂದ ಗೊತ್ತಾಗುವುದು. ಈ ವಿಶ್ವವಿದ್ಯಾಲಯದ ಆಧೀನದಲ್ಲಿದ್ದ ಕಲಾಶಾಲೆಗಳಲ್ಲೆಲ್ಲ ಸಹಶಿಕ್ಷಣವು ರೂಢವಾಗಿದ್ದಿತು. ವಸತಿಗೃಹಗಳ ವ್ಯವಸ್ಥೆಯೂ ಇದ್ದಿತು.

ಪ್ರಸಿದ್ಧ ಇತಿಹಾಸಜ್ಞರಾದ ಹೆವಲ್ ಅವರು ತಮ್ಮ ಗ್ರಂಥದಲ್ಲಿ ಹೀಗೆಂದು ಬರೆದಿರುವರು:—

" ಬಹಳ ಹಳೆಯ ಕಾಲದಲ್ಲಿಯೆ ಹಿಂದುಸ್ತಾನದ ಸಾಹಿತ್ಯವು ಶೈಶವಾವಸ್ಥೆಯನ್ನು ದಾಟ ಮುಂದುವರಿದಿದ್ದಿತು. ಸಂಪೂರ್ಣ ಏಶಿಯಾಖಂಡದಲ್ಲಿ,ಸಾಹಿತ್ಯವೃದ್ಧಿಯ ಕಾರ್ಯದಲ್ಲಿ ಅಗ್ರಗಣ್ಯವೆಂಬ ಮರ್ಯಾದೆಯೂ, ಪೂರ್ವಕಾಲದ ಎಲ್ಲ ವಿಶ್ವವಿದ್ಯಾಲಯಗಳ ಶಿಕ್ಷಣಕ್ರಮದಲ್ಲಿಯೂ ನಿಯಮಬದ್ಧತೆಯನ್ನು ಒದಗಿಸಿಕೊಟ್ಟ ಶ್ರೇಯಸ್ಸೂ, ಹಿಂದುಸ್ತಾನಕ್ಕೆ ಮಾತ್ರ ಸಲ್ಲತಕ್ಕುದು. ಪ್ರಾಚೀನಭಾರತವು ಮಾಡಿದ ಪ್ರಚಂಡವಾದ ಸಾಹಿತ್ಯಸೇವೆಯ ಕಲ್ಪನೆಯನ್ನು ನಾವು ಕನಸಿನಲ್ಲಿ ಕೂಡ ಮಾಡಲಾರೆವು. "

ಆ ಕಾಲದಲ್ಲಿ ಶಿಲ್ಪ, ಚಿತ್ರ, ಕೈಗಾರಿಕೆ,ಗಣಿತ, ಖಗೋಲ, ವೈದ್ಯಕ ಮೊದಲಾದ ಹಲವು ಕಲೆಗಳನ್ನು ಕಲಿಸುವಂತಹ ಕಲಾಶಾಲೆ(ಕಾಲೇಜು)ಗಳಿದ್ದುವು. ನಾಲಂದದ ವಿಶ್ವವಿದ್ಯಾನಿಲಯದಲ್ಲಿ ವೇದಾಂತ-ಧರ್ಮಗಳನ್ನು ಅಧ್ಯಯನ ಮಾಡುವ ವರ್ಗಗಳೇ ನೂರಕ್ಕಿಂತ ಹೆಚ್ಚಿಗೆ ಇದ್ದುವು. ಅದರಂತೆಯೆ ಕಾಂಚಿ, ತಕ್ಷಶಿಲಾ, ಸಾರನಾಥ, ಕಾಶಿ ಮೊದಲಾದ ನಗರಗಳಲ್ಲಿಯೂ ವಿ. ವಿ. ನಿಲಯಗಳಿದ್ದುವು.

—ಸ್ವದೇಶಮಿತ್ರನ್ (ತಮಿಳು)



CC-0. Jangamwadi Math Collection. Digitized by eGangotri

# ★ ಸಾಹಿತ್ಯಗೋಷ್ಠಿ ★

## ‘ಕನ್ನಡ ನುಡಿಯ ಹುಟ್ಟು’ನ್ನು ಓದಿ:—

ಎಸ್. ಕೆ. ಕುಲಕರ್ಣಿ ಬಿ. ಎ. ( ಆನರ್ಸ್ )

‘ ಕಣ್ಮರೆಯಾದ ಕನ್ನಡ’ ವನ್ನು ಕನ್ನಡಿಗರ ಕಣ್ಮುಂದೆ ಇರಿಸಿ, ‘ ಮಹಾರಾಷ್ಟ್ರದಮೂಲ ’ ವನ್ನು ಪರಿಶೋಧಿಸಿ, ‘ಕರ್ನಾಟಕದ ವೀರಕ್ಷತ್ರಿಯ’ರ ಕುಲಪರಿಚಯವನ್ನು ಮಾಡಿಕೊಟ್ಟು, ‘ ಕನ್ನಡನುಡಿಯ ಹುಟ್ಟು’ನ್ನು ಪುನರ್ದಿ-ಶಿಸಿದ ಶ್ರೀಮಾನ್. ಶಂ. ಬಾ. ಜೋಶಿಯವರ ‘ಹಂಗಿಗರು’ ನಾವು. ಅವರನ್ನರಿಯದಿರುವುದು ಕನ್ನಡವನ್ನೆ ಅರಿಯ-ದಿರುವುದು. ( ಆದರೆ ಕನ್ನಡಿಗರಲ್ಲದವರೂ ಅವರನ್ನರಿತವ-ರುಂಟು—ಆ ಮಾತು ಬೇರೆ. )

ಕಳೆದ ವರುಷ ಶ್ರೀ. ಶಂ. ಬಾ. ಅವರ ‘ ಕರ್ನಾಟಕದ ವೀರಕ್ಷತ್ರಿಯರ ’ ಮುನ್ನುಡಿಯನ್ನು ನಾನು ಓದಿದಾಗ, ಪಳಗಿ ಹದಗೊಂಡ ಅವರ ಕನ್ನಡಶೈಲಿಯ ‘ ಒಳ್ಗಂಪಿ ’ನ ಮೋಹಕತೆಗೆ ಮರುಳಾಗಿ, ಅವರ ವಿಷಯನಿರೂಪಣೆಯ ಚತುರತೆಗೂ, ಚಾಣ್ಮೆಗೂ, ಬೆಡಂಗಿಗೂ, ಥೋರಣೆಗೂ— ‘ ಪದವಿಯಿಲ್ಲ ’ ದಿದ್ದರೂ — ಪ್ರತಿಭೆಗೂ ತಲೆಬಾಗಿಸಿದೆ. ಆದನ್ನೋದಿ ಕೃತಕತ್ಯನಾದೆ. ಆಗ ನಾನು “ ಕರ್ನಾಟಕ ವಿದ್ಯಾಲಯಪತ್ರಿಕೆ ”ಯ ಕನ್ನಡ ಸಂಪಾದಕನಾಗಿದ್ದೆ. ಹೇಗಾದರೂ ಮಾಡಿ ಶ್ರೀ.ಶಂ.ಬಾ. ಅವರ ಬರೆಹವೊಂದನ್ನು ನಮ್ಮ ಪತ್ರಿಕೆಗೆ ಕುಂದಣಿಸಬೇಕೆಂಬ ಲವಲವಿಕೆ ನನ್ನಲ್ಲಿ ಮೊಳೆಯಿತು. ಅವರು ಪ್ರಸ್ತುತಕೃತಿಗೆ ಪ್ರಸ್ತಾವನೆಯಂತಿದ್ದ ‘ ಕನ್ನಡದ ಕೊರತೆಗಳು ’ ಎಂಬ ಕೈವಾಡದ ಬರೆಹವನ್ನು ಒದಗಿಸಿ, ನನ್ನನ್ನು ಉಪಕೃತನನ್ನಾಗಿ ಮಾಡಿದರು. ‘ಕನ್ನಡ ನುಡಿಯ ಹುಟ್ಟು ’ ಹೊರಬರುತ್ತಲೆ, ನನ್ನ ಮೇಲಿನ ಅವರ ಉಪಕೃತಿಯು ಇಮ್ಮಡಿಸಿತು. ಏಕೆಂದರೆ— ನನಗೊಂದು ಾಣಿಕೆಯ ಪ್ರತಿಯನ್ನು ಕೊಟ್ಟುದಂತೂ ಸರಿಯೆ— ನ್ನಡದ ಏಳ್ಗೆಗಾಗಿ—ಅವರು, ಕೈಗೊಂಡ ‘ ನೋಂಪಿ ’, ವರ ಕೈವಾರದ ಎದೆಗಾರಿಕೆ, ಅವರಿಂದಾದ ಕನ್ನಡದ ೀವೆ ಇವೆಲ್ಲವೂ ಪ್ರಕೃತಗ್ರಂಥದಿಂದ ‘ ಕನ್ನಡಿಸಿ ’ದಂತಾಗಿ ಂಡುಬಂದುವು.

ಇದ್ದಷ್ಟು ಕನ್ನಡ ಶಬ್ದಸಂಪತ್ತಿಯನ್ನು ಮನನಮಾಡಿ-ಕೊಳ್ಳುವ ತ್ರಾಣವಿಲ್ಲದ ಕನ್ನಡಿಗರು, ಕನ್ನಡ ಶಬ್ದಸಂಪತ್ತಿ-ಯನ್ನು ಹೆಚ್ಚಿಸುವ ಗುಟ್ಟಿನ ಹಾದಿಯನ್ನು ಹುಡುಕಿ-ಕೊಟ್ಟುದಕ್ಕಾಗಿ ಶ್ರೀ. ಶಂ. ಬಾ. ಅವರನ್ನು ಶಪಿಸುತ್ತಿರ-ಬೇಕು. ಶಪಿಸಲಿ! ಈ ‘ಕವಿಗಳ ಕೈಗನ್ನಡಿ’ ಅಂಥವರಿಗಾಗಿ ಅಲ್ಲ; ‘ ಧ್ಯಾನಸಮಾಧಿಯಲ್ಲಿ ಮಗ್ನರಾಗಿ, ವಾಚಕರ ಎದೆ-ಗೊಳುವಂತೆ ಜನಜೀವನವನ್ನು ಸಾಹಿತ್ಯದರ್ಪಣದಲ್ಲಿ ಮೂಡಿಸುವುದಕ್ಕಾಗದೆ ಮಿಡುಕುತ್ತಿರುವ ಕನ್ನಡಸಾಹಿತಿ-ಗಳಿಗಾಗಿ, ಕನ್ನಡದ ಕೈವಾರಿಗಳಿಗಾಗಿ ’.

ವ್ಯಾಕರಣವು ವಾಙ್ಮಯೋತ್ಪತ್ತಿಗೆ ತಡೆಯನ್ನು ಮಾಡ-ಬಾರದು, ಚಾಲನೆಯನ್ನು ಕೊಡಬೇಕು. ಕಟ್ಟುಪಾಡುಗಳನ್ನು ಹೊಡಬಾರದು, ‘ ಎಡರುತೊಡರು ’ ಗಳನ್ನು ತೊಡೆದು ಹಾಕಬೇಕು. ಇಂತಹ ವ್ಯಾಕರಣದ ಕೊರತೆಯೊಂದನ್ನು ‘ ಕನ್ನಡನುಡಿಯ ಹುಟ್ಟು ’ ಹೋಗಲಾಡಿಸುವಂತಾಗಿದೆ. ಇದೀಗ ಕನ್ನಡದಲ್ಲಿ, ‘ಓದಬೇಕು; ಬರೆಯಬೇಕು’ ಎಂಬ ಹುಮ್ಮಸವು ತಲೆದೋರುತ್ತಿರುವಾಗ, ಆ ‘ ಹಂಬಲಿ ’ಗರಿಗೆ ಹಾದಿಯನ್ನು ತೋರುವುದು.... ಈ ‘ನಿರುಕ್ತ ’ವು. ‘ಭಾವಕ್ಕೆ ತಕ್ಕ ಪದಗಳನ್ನು ಸಿದ್ಧಪಡಿಸಿಕೊಳ್ಳುವ ಹದವು ’ ಕನ್ನಡ-ದಲ್ಲಿ ಇದೆ....ಎಂಬ ಅರಿವು ಇಲ್ಲದ ಕನ್ನಡಿಗರಿಗೆ, ಎಷ್ಟು ಬಗೆಯಾಗಿ ಹಾಗೆ ಮಾಡಿಕೊಳ್ಳಬಹುದೆಂಬ ವಿಷಯವನ್ನು ಚಿತ್ತರಿಸಿದೆ ಇದರಲ್ಲಿ. ಪರಭಾಷೆಗಳಿಂದಲೆ ಎರವು—ನೆರವು-ಗಳನ್ನು ಪಡೆದು ಬದುಕಿಬಂದ ಕನ್ನಡವು, ಜೀವವನ್ನು ಮಾತ್ರ ಹಿಡಿದುಕೊಂಡಿದೆ. ಸ್ವಂತದ ಶಬ್ದಸಂಪತ್ತಿ ಇದ್ದೂ ಇಲ್ಲದಂತಾಗಿ ಬಡವಾಗಿದೆ ಕನ್ನಡವು. ನಾಡಿನೊಡನೆ ನುಡಿಯೂ ತನ್ನ ಪೂರ್ವವೈಭವದ ಮಂಗಲಸೂತ್ರವನ್ನು ಕಳೆದುಕೊಳ್ಳಬೇಕೆಂದರೆ, ಕನ್ನಡಿಗರ ಅದೃಷ್ಟವೇ ಸರಿ. ಆದರೆ ಇದು ಅದೃಷ್ಟವಲ್ಲ—ಆಲಸ್ಯತನ, ದೈವವಲ್ಲ— ದುರ್ಬಲತೆಯೆಂದು ಈ ಗ್ರಂಥವು ಚುಚ್ಚಿ ಹೇಳುವಂತಿದೆ. ನಮ್ಮ ಪೂರ್ವದ ಕವಿಗಳು ಕೆಲವರು, ಸಂಸ್ಕೃತಗೀರ್ವಾಣ ಭಾಷೆಯಿಂದ ಕನ್ನಡವಾಙ್ಮಯಕ್ಕೆ ಅಮರತ್ವವನ್ನು ತರ-ಬೇಕೆಂದು ಹೊರಟು, ಕನ್ನಡಸಾಹಿತ್ಯವನ್ನು ಕೊಂದು-

CC-0. Jangamwadi Math Collection. Digitized by eGangotri

ಬಿಟ್ಟರು. ಅದಕ್ಕೆ ಅಮರತ್ವವು ದೊರೆಯಲಿಲ್ಲ; ದಾರಿದ್ರ್ಯವು ದೊರೆಯಿತು. ಸಂಸ್ಕೃತದ ನೆರವು ಕನ್ನಡದ ಕೊರಲ ಉರುಲಾಯಿತು. ಸಂಸ್ಕೃತ ಸಮ್ಮಿಶ್ರಣವು ಕನ್ನಡದಲ್ಲಿ, ನಯಸೇನನು ಹೇಳುವಂತೆ, ಘೃತವನ್ನೂ ತೈಲವನ್ನೂ ಬೆರಸಿದಂತಾಯಿತು. ಕೆಲಮಟ್ಟಿಗೆ ಸಂಸ್ಕೃತದಿಂದ ಕನ್ನಡದ 'ಮೇಲ್ಮೆ' ಹೆಚ್ಚಿದರೂ,ಹೆಚ್ಚಾಗಿ ಕನ್ನಡದ ಕೀಳ್ಮೆಗೇ ಅದು ಕಾರಣವಾಯಿತು. ಅಂತೆಯೆ ಈಗ ಕನ್ನಡದ 'ಅಚ್ಚತನ'ವು ಹೋಗಿ 'ಹೆಸರುಗನ್ನಡ'ವೂ ಹುಸಿಗನ್ನಡವೂ ಉಳಿದಿದೆ. ಈ ಹುಸಿಗನ್ನಡದಿಂದ ಹೊಸಗನ್ನಡವು ಉದಿಸಬೇಕಾಗಿದೆ-ಯೀಗ. ಈ ಹೊಸಗನ್ನಡವನ್ನು ಬೆಳೆಯಿಸುವ ಬಗೆಯನ್ನು ಕನ್ನಡನುಡಿಯ ಹುಟ್ಟನಿಂದ ಅರಿತುಕೊಳ್ಳಬಹುದಾಗಿದೆ.

ಕೇಶಿರಾಜನ ಶಬ್ದಮಣಿದರ್ಪಣವು,೧೨ನೆಯ ಶತಮಾನ-ದಲ್ಲಿ ಹರಿಹರ-ರಾಘವಾಂಕರಿಂದ ಶಿಥಿಲಗೊಂಡ ಕನ್ನಡ ವ್ಯಾಕರಣದ ಮಟ್ಟನ್ನು,ಮತ್ತೆ ತಡೆಯಬೇಕೆಂದೆ ಮತ್ತಷ್ಟು ನಿಕೃಷ್ಟಗೊಂಡಂತಾಗಿದೆ. ಏಕೆಂದರೆ ನಾಗವರ್ಮನು ಸಮಾಸದ ವಿಷಯದಲ್ಲಿ,

"ಬೆರಸಿಸವುಸಂಸ್ಕೃತಂಗಳ್ ! ಬರೆ ಕನ್ನಡದೊಳಗೆ ಸಮುತೆ-ಯಿಂದಂ ಸಲ್ಗುಂ॥"

ಎಂದು ಹೇಳಿದ್ದರೂ ಕೇಶಿರಾಜನು ಸಮಸಂಸ್ಕೃತ ಶಬ್ದದ ಭಾವವನ್ನು ಚೆನ್ನಾಗಿ ಅರಿತುಕೊಳ್ಳದೆ, ಸಂಸ್ಕೃತಾವ್ಯಯಗಳೊಡನೆ ಕನ್ನಡ ಶಬ್ದಗಳನ್ನು ಬೆರಸಬಾರದೆಂದಿದ್ದ ನಿಯಮವನ್ನು, ಸಮಸಂಸ್ಕೃತಗಳಿಗೂ ಅನ್ವಯಿಸಿಬಿಟ್ಟನು. ಅಂತೆಯೆ "ಪೊಡವೀಶ" "ಕೂರಸಿ" "ಒಳ್ಗವಿ" ಮೊದಲಾದ ಕೆಲವು ಸಮಸಂಸ್ಕೃತದ ಸೊಗಸಾದ ಸಮಾಸಗಳನ್ನು ಅಪವಾದದ ಮಾಲಿಕೆಗೆ ಸೇರಿಸಿದನು. ಕೇಶಿರಾಜನನ್ನನುಸರಿಸಿದ ಭಟ್ಟಾಕಳಂಕನಾದರೂ ಇದನ್ನೇ ತೀಡಿದನು. ಹೀಗಾಗಿ ಕನ್ನಡ ಪದಪ್ರಯೋಗವು ತಡೆಯೊಡ್ಡಿದಂತಾಗಿ ಸಂಕೋಚಗೊಂಡಿತು. 'ಮೃದಂಗಸಂಗೀತಕಾದಿ ಮಧುರರವಂಬೋಲ್' ನುಡಿಗೊಡುವ ಸಮಸಂಸ್ಕೃತ ಪ್ರಯೋಗವು, ದೋಷಕಲಂಕಿತವಾಯಿತು, ಕೇಶಿರಾಜನ ಸಂಕ್ರಾಂತಿಯಿಂದ.

ವ್ಯಾಕರಣದ ಉದ್ದೇಶವು ಭಾಷೆಗೆ ಅಚ್ಚುಕಟ್ಟುತನವನ್ನು ಒದಗಿಸುವುದು. ಭಾಷೆಯ ಗಾತ್ರವು ಪುಷ್ಟಿಗೊಂಡು ಬೆಳೆಬೆಳೆದಂತೆ ವ್ಯಾಕರಣದ ಕಟ್ಟುನಿಟ್ಟುಗಳೂ ದೃಷ್ಟಿ-ಗಮ್ಯಗಳೂ ವಿಶಾಲಗೊಳ್ಳಬೇಕಾಗುತ್ತವೆ. ಭಾವ-ಪ್ರಧಾನರಾದ ವಚನಕಾರರಿಗೆ ಮೊದಲಿನ ವ್ಯಾಕರಣದ ನಿಯಮಗಳು ತಡೆಯಾಗಹತ್ತಿದುವು. ವ್ಯಾಕರಣವು ಶಿಥಿಲವಾದರೂ ಚಿಂತೆಯಿಲ್ಲ, ಹೃದಯಭಾವವು ಅರ್ಥವತ್ತಾಗಿ ವ್ಯಕ್ತವಾದರೆ ಸಾಕೆಂದು, ವ್ಯಾಕರಣವನ್ನು ಅವರು ಕಡೆಗಣಿಸಿ, 'ಱ,ೞ'ಗಳ ಪ್ರಭೇದಗಳನ್ನು ಬಿಟ್ಟುಕೊಟ್ಟುದಲ್ಲದೆ, ಪ ಕಾರಕ್ಕೆ ಹ ಕಾರವನ್ನೂ 'ಬೆಡಂಗು' ಎಂಬಲ್ಲಿ 'ಬೆಡಗು' ಎಂದೂ 'ಬೆರಲ್' ಎಂಬಲ್ಲಿ 'ಬೆರಳು' ಎಂದೂ ಪ್ರಯೋಗಿಸಲಿಕ್ಕೆ ಹತ್ತಿದರು. ಕರ್ತೃ ಕ್ರಿಯಾಪದಗಳ ಸ್ಥಾನಗಳನ್ನು ಬೇಕಾದ ಹಾಗೆ ಮಾರ್ಪಡಿಸಿಕೊಂಡರು. ಕ್ರಿಯಾ-ಪದಗಳನ್ನು ನಾಮಪದಗಳಂತೆಯೂ ಉಪಯೋಗಿಸಹತ್ತಿದರು. ಒಂದು ರೀತಿಯಿಂದ ಈ ಪ್ರತಿಭಟನೆಯು ಭಾಷೆಯ ಉಚ್ಛ್ರಾಯಕ್ಕೂ ಕಾರಣವಾಯಿತೆನ್ನಬೇಕು. ಭಾಷೆಯು ನಿಂತ ನೀರಿನಂತೆ ಸ್ಥಿತಿರೂಪವಾಗಿ ಉಳಿಯದೆ—ಪ್ರವಹಿಸಿ ಬೆಳೆದು, ಪ್ರಗತಿಯನ್ನು ಹೊಂದಬೇಕೆಂಬುದಕ್ಕೆ ಮೇಲಿನ ಸಂಗತಿಯು ಪೋಷಕವಾಗಿದೆ.

ಪರಜನಾಂಗದ ಸಂಪರ್ಕ—ವ್ಯಾಪಾರಗಳಿಂದ, ನಮ್ಮ ಸಂಸ್ಕೃತಿಯ ಮೇಲೆ ಅವ್ಯಕ್ತವಾಗಿಯಾದರೂ ಪರಿಣಾಮವುಂಟಾಗಿ, ನಮಗೆ ತಿಳಿಯದಂತೆ ನಮ್ಮ ಸಂಸ್ಕೃತಿಯು ಪ್ರಗತಿಹೊಂದುವುದು. ಹಾಗೆಯೆ ಸಂಸ್ಕೃತಿಯ ಅಂಗವಾದ ಭಾಷಾ—ಸಾಹಿತ್ಯದ ವಿಷಯವೂ ಕೂಡ. 'ಇಸ್ಕೂಲು'—'ಲಾಂದರು'—'ಹುಕುಮು' 'ನಾಜೂಕು' 'ನಜರು' ಮೊದಲಾದ ಪರಭಾಷಾಶಬ್ದಗಳು ನಮ್ಮ ಬಳಕೆಯಲ್ಲಿ ಬಂದುಹೋಗಿವೆ. 'ಸ್ಕೂಲ್' ಎಂದಿದ್ದುದನ್ನು 'ಇಸ್ಕೂಲು' ಎಂಬುದಾಗಿ ಕನ್ನಡದಲ್ಲಿ ಮಾರ್ಪಡಿಸಿಕೊಳ್ಳಲಾಯಿತು. ಪೂರ್ವದ ಕನ್ನಡದಲ್ಲಿ ಅನೇಕಾನೇಕ ಸಂಸ್ಕೃತ ಶಬ್ದ-ಗಳನ್ನು,ಕನ್ನಡದಲ್ಲಿ ಮಾರ್ಪಡಿಸಿಕೊಂಡು 'ತದ್ಭವ' ಎಂದು ಕರೆಯಲಾಯಿತು. ಹೀಗೆ ಅನ್ಯಭಾಷೆಯಿಂದ ಎರವಲಾಗಿ ತೆಗೆದುಕೊಂಡರೂ ಸ್ವಕೀಯವಾಗಿ ಮಾಡಿಕೊಳ್ಳುವ ಸಾಧನ ಕನ್ನಡಕ್ಕಿದೆ. ಈ ಸಾಧನದ ಉಪಯೋಗವು ಈಗ ಬಲ-ವತ್ತರವಾಗಿ ಆಗಬೇಕಾಗಿದೆ. "ಆದರೆ ಕನ್ನಡದೊಡನೆ ಒಂದುಗೂಡದೆ, ತಮ್ಮದೊಂದು ಸ್ವತಂತ್ರ ವ್ಯಕ್ತಿತ್ವವನ್ನು ಕಾಯ್ದುಕೊಳ್ಳುವ ಶಬ್ದಗಳ ಬಗ್ಗೆ ಬಲು ಎಚ್ಚರದಿಗಿರಬೇಕು. ಏಕೆಂದರೆ ಅಂತಹವುಗಳ ಸಂಖ್ಯೆಯು ಹೆಚ್ಚಾಗಿ ಕನ್ನಡವು ಮತ್ತೆ ರೂಪಾಂತರವನ್ನು ತಾಳುವ ಗಂಡಾಂತರವು ಬಾರದೆ ಇರದು." ಎಂಬುದನ್ನು ಗಮನಿಸತಕ್ಕುದಾಗಿದೆ. ಸದ್ಯದಲ್ಲಿ ಕನ್ನಡಭಾಷೆಗೆ ಶಬ್ದಸೌಷ್ಠವವನ್ನೊದವಿಸುವ ಸಾಧನಗಳನ್ನು ಹೀಗೆ ವಿವರಿಸಬಹುದು:—

೧ ಅನ್ಯಭಾಷಾಶಬ್ದಗಳನ್ನು 'ತದ್ಭವ'ರೂಪವಾಗಿ 'ಅನನ್ಯ'ಗೊಳಿಸುವುದು.

CC-0. Jangamwadi Math Collection. Digitized by eGangotri

೨ ನೃಪತುಂಗ ನಾಗವರ್ಮರು ಹೇಳಿದ ಸಮಸಂಸ್ಕೃತ ಪ್ರಯೋಗಗಳನ್ನು ಮತ್ತೆ ಬಳಕೆಗೆ ತರುವುದು.

ಇವಲ್ಲದೆ—

೩ ಕಾವ್ಯಶಾಸನಗಳಲ್ಲಿಯ ಶಬ್ದನಿಧಿಯನ್ನು ಅಗಿದು, ಅವನ್ನೂ ಈಗಿನ ಸ್ಥಿತಿಗತಿಗೆ ಒಗ್ಗುವಂತೆ 'ನೇರ್ಪಡಿಸಿ'ಕೊಳ್ಳುವುದು. ಉದಾ:—ಕನ್ನಡಿಸು-ಕೊಡಿಗೆ ('ಕೊಡು' ಶಬ್ದದಿಂದ) ನೆತ್ತರ ಕೊಡಿಗೆ.

೪ ಇಂದಿನ ಹಳ್ಳಿಗರಿಗೆ ಮಾರುಹೋದ ಪೂರ್ವದ ಸೊಗಸುಗನ್ನಡ ಶಬ್ದಗಳನ್ನೂ ಉಪಯೋಗಿಸುವುದು. ಉದಾ:-- ತೆರಪು (ಅವಕಾಶ) ಪಸವು (ಹಸವು)

೫ ಪ್ರತ್ಯಯಗಳನ್ನು ಹಚ್ಚಿ ನಾಮಪದಗಳನ್ನು ಮಾಡಿಕೊಳ್ಳುವುದು. ಉದಾ:—
ಮಡಿವಳ, ಕುಟಿಗ, ಕೈದುಗಾರ, ಹೊಲಬು ಇತ್ಯಾದಿ

೬ ಇಂಗ್ಲಿಷಿನಂತೆ Positive-Negative ಶಬ್ದಗಳನ್ನು ಪ್ರತ್ಯಯ ಹಚ್ಚಿ ಸಿದ್ಧಿಸುವುದು:—ಬಯಲು-—ನಿರ್ವಯಲು, ಬೆರಗು—ನಿಬ್ಬೆರಗು.

ಮೇಲಿನ ಎಲ್ಲ ಹಂಚಿಕೆಗಳನ್ನು ಶ್ರೀ. ಶಂ. ಬಾ. ಜೋಶಿಯವರು ಸೋದಾಹರಣವಾಗಿ ಸ್ಪಷ್ಟಗೊಳಿಸಿದ್ದಾರೆ. ಇವರ ವಿಷಯನಿರೂಪಣರೀತಿಯು ಕಾವ್ಯವನ್ನೋದಿದಂತೆ—ಯುಕ್ತ ಉಪಮೆಗಳಿಂದಲೂ, ಶಕ್ತಶೈಲಿಯಿಂದಲೂ ಕೂಡಿದೆ. ಇವರ ಕೈಯಲ್ಲಿ ಶಾಸ್ತ್ರೀಯ ವ್ಯಾಕರಣವು ಸರಸ ಕಲೆಯಾಗಿದೆ. ಅಂತೆಯೆ ಕೇಶಿರಾಜನ ಶಬ್ದಮಣಿದರ್ಪಣಕ್ಕೂ ಇದಕ್ಕೂ ಅದೆಷ್ಟೋ ವ್ಯತ್ಯಾಸ. ಆದರೂ ಹೊಸ ವಿಧದ ಅಭಿಪ್ರಾಯಗಳನ್ನು ಸ್ಥಾಪಿಸಹೋದಲ್ಲಿ, ಕೆಲ ಸಾರೆ ವಾಚಕರ ಪೃಚ್ಛೆಗೆ ಅವಕಾಶ ದೊರೆಯುವಂತಾಗಿದೆ. ಉದಾಹರಣಾರ್ಥವಾಗಿ:—

೧ ಸಮಾಸಗಳಲ್ಲಿ ೬ನೆಯ ನಿಯಮವು ೭ನೆಯ ನಿಯಮಕ್ಕೆ ವಿರುದ್ಧವೆನಿಸುವಂತಾಗಿದೆ. (ಪುಟ ೨೬) ೬ನೆಯದರಲ್ಲಿ ಸಮಾಸದ ಪರಪದವು ಸಾಮಾನ್ಯವಾಚಿ ಎಂದರೆ ಮುಖ್ಯಪದವಿರುತ್ತದೆಂದು ಹೇಳಿ, ೭ನೆಯದರಲ್ಲಿ "ಸಮಾಸಗಳಲ್ಲಿರುವ ಪದಗಳ ಮುಖ್ಯಾಮುಖ್ಯತೆಯ ಮೇಲಿಂದ ಅವುಗಳಲ್ಲಿ ನಾಲ್ಕು ಪ್ರಕಾರಗಳನ್ನು ಕಲ್ಪಿಸಿದ್ದಾರೆ." ಎಂದು ಹೇಳಲಾಗಿದೆ.

೨ 'ಅವ್ಯಯೀಭಾವ ಅಥವಾ ಅಂಶಿ' ಎಂಬುದು ಸರಿಯಾದ ಪರ್ಯಾಯವಲ್ಲ. (ಪುಟ. ೨೭)

೩ ಕನ್ನಡ ಸಮಾಸಗಳನ್ನು ಸಂಪೂರ್ಣವಾಗಿ ಬಿಟ್ಟುಬಿಡಲಾಗಿದೆ. ಬಿಟ್ಟುದರ ಕಾರಣವನ್ನು ಸೂಚಿಸಿಲ್ಲ. ಆದರೆ ೧೦ನೆಯದರಲ್ಲಿ (ಪುಟ ೨೯.) ಚಿನ್ನದುಂಗುರ, 'ಬಾಳೆಯಗಿಡ' ಎಂಬುವು ಗಮಕಸಮಾಸಕ್ಕೆ ದೃಷ್ಟಾಂತಗಳಾಗಿವೆ. ಅಲ್ಲದೆ—"ಕಳ್ಳರಿಂದ ಅಂಜಿಕೆ= ಕಳ್ಳರಂಜಿಕೆ" (ಪುಟ ೩೧) ಆಗುವುದು. ಆದರೆ "ಚೋರರ ಭಯ=ಚೋರಭಯ(ಪುಟ ೩೪)"ಏಕೆ?

೪ ಪುಟ. ೧೯೯ರಲ್ಲಿ 'ತಿರೆ' ಇದು ಶಬ್ದಾನುಕೃತಿಯೆಂದು 'ತಿರ್ರನೆ ತಿರುಗುವುದು ತಿರೆ' ಎಂದು ಹೇಳಿದೆ. ಆದರೆ ಎಲ್ಲಕ್ಕೂ ಪೂರ್ವದಲ್ಲಿ ಸೂರ್ಯನೆ ಪೃಥ್ವಿಯ ಸುತ್ತಲು ತಿರುಗುವನೆಂಬ ಭಾವನೆ ಇದ್ದಿತಂತಲ್ಲ? ಅಲ್ಲದೆ ಸ್ಥಿರಾ=ಸ್ಥಿರೆ=ತಿರೆ ಎಂಬಂತಿದ್ದುದು ತಿರ್ರನೆ 'ತಿರುಗು'ವುದು 'ತಿರೆ' ಹೇಗೆ? ಏಕಾಕಾಂತವೆಲ್ಲಿಂದ ಬಂದಿತು?

೫ ತೊಡೆ=ತೊಳೆ (ಪು. ೮೦) ಆದರೆ ತೊಡೆ ಎಂಬುದು ಸವರು-ತೊಡೆದುಹಾಕು (wipe off). ಎಂಬರ್ಥ ಕೊಡುತ್ತಿದ್ದರೆ. 'ತೊಳೆ' ಎಂಬುದು ಸ್ವಚ್ಛಮಾಡು ಎಂಬರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ.

(೬) Denotation ಮತ್ತು Connotation (ಪು ೧೧೫) ಇವುಗಳ ಅರ್ಥವನ್ನು 'ವಿಶೇಷಾರ್ಥ' ಮತ್ತು 'ಸಾಮಾನ್ಯಾರ್ಥ' ಎಂದು ಮಾಡುವು ಅಷ್ಟೊಂದು ಸಮಂಜಸವಲ್ಲ. Denotation ಇದು ಏನಾದರೊಂದನ್ನು ನಿರ್ದೇಶಿಸುತ್ತದೆ—(Denotes). Connotation ಇದು ಏನಾದರೊಂದನ್ನು ವಿಶೇಷಿಸುತ್ತದೆ— (Connotes).

ಏನಾದರೂ ದೋಷಗಳನ್ನು ಹುಡುಕಲೇ ಬೇಕೆಂದು 'ಅರೆದು-ಒರೆದು' ನೋಡಿದರೆ ಮಾತ್ರ ಇಷ್ಟೊಂದು ಸಿಗುವುವು. ಆದರೆ ಇಂತಹ ಮಹತ್ತರ ಸಾಹಿತ್ಯಕೃತಿಯಲ್ಲಿ ಅಣುವಿನಂತೆ ಇನಿಸೊಂದು ಪೃಚ್ಛೆಗಳೇಳುವುದು ಎಳ್ಳಷ್ಟು ಬಾಧಕವಲ್ಲ. ಕನ್ನಡದ ಗಂಧವನ್ನರಿಯದ ಕನ್ನಡ ಶಾಲೆ-ಕಾಲೇಜಿನ ವಿದ್ಯಾರ್ಥಿಗಳು, ಅವಶ್ಯವಾಗಿ ಇದನ್ನು ಒಮ್ಮೆಯಾದರೂ ಓದಿ ಆನಂದಪಟ್ಟು, ಅಭಿಮಾನ ತಾಳಬೇಕೆಂದು ನಮ್ಮ ಆಗ್ರಹದ ಬಿನ್ನಹ. ಶ್ರೀಮಾನ್ ಶಂ. ಬಾ. ಜೋಶಿಯವರ 'ಕನ್ನಡ ನುಡಿಯ ಹುಟ್ಟು' ನಿಜವಾಗಿಯೂ ಕನ್ನಡಸಾಹಿತ್ಯಕ್ಕೆ ಒಂದು ಕೈಗನ್ನಡಿ, ಕನ್ನಡಿಗರಿಗೆ ಒಂದು ಕೈಪಿಡಿ. ಕನ್ನಡ ಭಾಷಾಪರಂಪರೆಯಲ್ಲಿ ಇದು ಕ್ರಾಂತಿಯನ್ನು ಎಸಗಲೇಬೇಕು.

CC-0. Jangamwadi Math Collection. Digitized by eGangotri

## ನಮ್ಮ ಹಳೆಯ ಕಾವ್ಯಗಳೊಳಗಿನ
# ಜನಜೀವನ ಚಿತ್ರ

ಶ್ರೀಮಾನ್ ಬಿ. ಪಾರ್ಥಸಾರಥಿರಾಯರು

ವಿ. ಸೂ:— ಕುಮಾರವ್ಯಾಸನ ಭಾರತದ ಆದಿಪರ್ವದ ಹದಿನೇಳನೆಯ ಸಂಧಿಯಲ್ಲಿ, ಪಾಂಡವರೂ ಕೌರವರೂ ಚಿಕ್ಕವರಾಗಿರುವಾಗ ಕೂಡಿ ಆಡಿದ ಮಕ್ಕಳಾಟದ ಸುಂದರ ಜೀವನವೊಂದು ಚಿತ್ರಿತವಾಗಿದೆ. ಅದನ್ನಿಲ್ಲಿ— ಎಲ್ಲರ ಕಣ್ಣೂ ಕಾಣಲೆಂದು—ವಿವರಣೆ ಸಹಿತವಾಗಿ ಕೊಟ್ಟಿದ್ದೇನೆ.

### ಹುಡುಗರಾಟ

ಕೇಳು ಜನಮೇಜಯ ಮಹೀಶ್ವರ !
ಬಾಲಕರು ನೂರಾರು ಮೆರೆವರು
ಬಾಲಕೇಳೀ ವ್ಯಸನಿಗಳು ಹೊರ-
ವಳಯವಲಿ ಪುರದ—
ಆಳಿನೇರಿಕೆ, ಹಿಡಿಗವಡೆ, ಗುರಿ-
ಯಾಳು, ಚಂಡಿನ ಹೊಣಕೆ, ಚಿಣಿಕೋ-
ಲಾಳು, ಚಿಸಿವೆಂಡಿನಲಿ—ದಂಡೆಯ-
ಹಾರುಗುಪ್ಪೆಯಲಿ.

ಜನಮೇಜಯ ರಾಜನೇ ಕೇಳು; ಚಿಣ್ಣಾಟದ ಗೀಳು ಹತ್ತಿದ ನೂರುಜನ ಕೌರವರೂ, ಐವರು ಪಾಂಡವರೂ, ಕರ್ಣನೂ ಸೇರಿ, ಪಟ್ಟಣದ ಹೊರಬಯಲಲ್ಲಿ ಬೇರೆ ಬೇರೆಯ ಆಟಗಳನ್ನಾಡುತ್ತಿದ್ದರು. ಆ ಆಟಗಳಾವು-ವೆಂದರೆ:— ಆಳಿನೇರಿಕೆ=ಒಬ್ಬರ ಮೇಲೊಬ್ಬರು ಹತ್ತಿ ತಿರುಗುವುದು; ಹಿಡಿಗವಡೆ=ಕೈಯಲ್ಲಿ ಕವಡೆಯನ್ನು ಮುಚ್ಚಿ-ಹಿಡಿದಾಡುವ ಸರಿಬೆಸದಾಟ; ಗುರಿಯಾಳುಚಂಡಿನ ಹೊಣಕೆ=ಒಬ್ಬರನ್ನೊಬ್ಬರು ಗುರಿಯಾಗಿಟ್ಟುಕೊಂಡು ಹೊಡೆದಾಡುವ ಚಂಡಿನಾಟ; ಚಿಣಿಕೋಲಾಳು;ಚಿಸಿವೆಂಡು= ಚಿಕ್ಕಚಿಕ್ಕ ಬೆಂಡುಗಳನ್ನು ತೆಗೆದುಕೊಂಡು ಬಗೆಬಗೆಯ ಆಟಗೆಗಳನ್ನು ಅನುಗೊಳಿಸುವುದು; ದಂಡೆಯ=ಸಾಮು-ತೆಗೆಯುವುದು; ಹಾರುಗುಪ್ಪೆ=ಬಯಲಲ್ಲಿ ಸಾಲಾಗಿ ಮರಳಿನ ಗುಂಪಿಗಳನ್ನು ಹಾಕಿ, ಒಂದರಿಂದ ಇನ್ನೊಂದಕ್ಕೆ ಹಾರುತ್ತ ಹೋಗುವಾಟ.

ಗುಡುಗು, ಗುತ್ತಿನ ಚಂಡು, ಗುಮ್ಮನೆ
ಬಡಿವ ಕತ್ತಲೆ ಗುದ್ದು, ಗಂಭದ
ಗಡಣೆ, ಕಣುಮುಚ್ಚಾಟ, ಸವಗಲಿ,
ಹಲ್ಲಿಯಾಟಗಳ—
ಕೆಡೆಹು-ಕುಟ್ಟು, ವಿವಾದಿಯಾದವ-
ಗಡ ವಿನೋದದಲಾಡಿದರು ಸಂ-
ಗಡದಲೈವರು ನೂರ್ವರವರಿ-
ತ್ತಂಡವೊಂದಾಗಿ.

ಐವರು ಪಾಂಡವರೂ ನೂರು ಜನ ಕೌರವರೂ ಬೇರೆಬೇರೆ ಎರಡು ಸಂಗಡಗಳನ್ನು ಮಾಡಿಕೊಂಡು, ಇತ್ತಂಡದವರೂ ಒಂದುಗೂಡಿ, ಇನ್ನೂ ಅನೇಕ ಆಟಗಳ-ನ್ನಾಡುತ್ತಿದ್ದರು. ಅವಾವುವೆಂದರೆ:—

ಗುಡುಗು = ಹುಡುತಿತ್ತಿಯಾಟ; ಗುತ್ತಿನ ಚಂಡು= ಚಂಡನ್ನು ಒಂದು ಸ್ಥಳದಲ್ಲಿ ಒಂದು ಸಂಗಡದವರು ಅಡಗಿ-ಸಿಡುವುದು....ಇನ್ನೊಂದು ಸಂಗಡದವರು ಹುಡುಕುವುದು; ಗುಮ್ಮನೆ ಬಡಿವ ಕತ್ತಲೆಗುದ್ದು = ಒಬ್ಬರಿಗೊಬ್ಬರಿಗೆ ಗೊತ್ತಾಗದಂತೆ ಕಳವಿನಿಂದಲೆ ಬಂದು ಗುದ್ದಿ ಮರೆಯಾಗು-ವಾಟ; ಗಂಭದ ಗಡಣೆ=ಒಬ್ಬೊಬ್ಬರು ಒಂದೊಂದು ಕಂಬವನ್ನು ಹಿಡಿದು ನಿಂತು, ಎಲ್ಲರೂ ಒಮ್ಮೆಲೆ ಓಡಿ ಕಂಬ-ಗಳನ್ನು ಸುತ್ತುಹಾಕಿ ಬರುವ ಆಟ; ಕಣುಮುಚ್ಚಾಟ; ಸವಗಲಿ=ತಿಳ್ಳಿ ಅಥವಾ ಸರಿಗೆರೆಯಾಟ; ಹಲ್ಲಿಯಾಟ= ಕುಂಟುಹಲಿಪೆಯಾಟ; ಕೆಡೆಹು-ಕುಟ್ಟು=ಒಬ್ಬರನ್ನೊಬ್ಬರು ಕೆಡಹಿ ಚೆನ್ನಾಗಿ ಗುದ್ದುವುದು.ಇವೇ ಮೊದಲಾದ ಜಗಳಾಟ-ಗಳನ್ನೂ ವಿನೋದದಾಟಗಳನ್ನೂ ಆಡಿದರು.

### ಭೀಮನ ಕಿಡಿಗೇಡಿತನ

ಇದರೊಳೊಬ್ಬನೆ ಭೀಮನನಿಬರ
ಸದೆವ ತಾ; ಸೋತೊಡೆ ವಿಭಾಡಿಸಿ
ಕೆದರುವನು; ಗೆದ್ದೋಡಿದರೆ ಬೆಂ-
ಬತ್ತಿ ಹಿಡಿದೆಳೆದು—
ಸದೆದು ಬಿಡುವನು; ಮುನ್ನ ಭೀಷ್ಮಂ-
ಗೊದರಿ ದೂರುವನಿವನು. ಮುಗುಳೊಂ-
ದೊದಗಿ ಸಂಗಡವಿಹರು ತಾವೊಂ-
ದಾಗಿ ಮರುಕೊಳಿಸಿ.

ಇವರೆಲ್ಲರಲ್ಲಿಯೂ ಭೀಮಸೇನನು ಎಲ್ಲರನ್ನೂ ಚೆನ್ನಾಗಿ ಥಳಿಸುವನು. ಪ್ರತಿಪಕ್ಷಿಗಳು ಸೋತರಂತೂ ಸರಿಯೆ; ಗೆದ್ದು ಓಡಿದರೂ ಬೆನ್ನುಹತ್ತಿ ಓಡಿ, ಹಿಡಿದು ಎಳೆದು ತಂದು, ಸದೆದು ಸೋಲಿಸಿಬಿಡುವನು. ಮತ್ತೆ ಎಲ್ಲರಿಗಿಂತ ಮೊದಲು, ತಾನೇ ಓಡಿಹೋಗಿ ಅಳುತ್ತ ಕೂಗುತ್ತ ಭೀಷ್ಮರಿಗೆ ದೂರುಹೇಳುವನು. ಮರಳಿಯೂ ಎಲ್ಲರೂ ಒಂದಾಗಿ ಸೇರುವರು; ಆಟವಾಡುವರು.

CC-0. Jangamwadi Math Collection. Digitized by eGangotri

ಕೆಣಕಿ ಧುರ್ಯೋಧನನ ನೆತ್ತಿಯ-
ನಣೆದು ಹಾಯ್ವನು ನಿಮ್ಮ ನೂರ್ವರ
ಬಣಗುಗಳಿಗೆಡಗಾಲ ತೊಡರಿದೆ
ಬನ್ನಿ ನೀವೆನುತ;
ಗುಣವನುಡಿದೋಂದಾಗಿ ಕೆಳೆಗೊಂ-
ಡಣಕಿಸುತ ವೈಮುರೆಸಿ, ಮುರಿಯಲಿ
ಹಣಿದು ಹರಿವನು ಭೀಮನಾ ದು-
ರ್ಯೋಧನಾದಿಗಳ.

ಆಡುತಿರುವಾಗಲೆ ಭೀಮಸೇನನು ದುರ್ಯೋಧನನನ್ನು ಬೇಕಾಗಿಯೆ ಕೆಣಕಿ, ನೆತ್ತಿಯನ್ನು ಕುಕ್ಕುವನು, ಅಲ್ಲದೆ 'ನಿಮ್ಮ ನೂರುಮಂದಿಗೂ ನನ್ನ ಎಡಗಾಲಿನ ಏಟು ಒಂದೆ ಸಾಲುವಂತಿದೆ ಬನ್ನಿ' ಎಂದು ಏಡಿಸುವನು. ಮತ್ತೆ ಒಳ್ಳೆಯ ಮಾತನಾಡುತ್ತ ಬಂದು, ವ್ಯಂಗ್ಯವಾದ ಮಾತುಗಳಿಂದ ದುರ್ಯೋಧನಾದಿಗಳನ್ನು ವೈಮುರೆಯಿಸಿ, ಅವರಿಗೆ ಗೊತ್ತಾಗದಂತೆಯೆ ಚೆನ್ನಾಗಿ ಚಚ್ಚಿ ಓಡಿಹೋಗುವನು.

ಹೇಳುವರು ಯಮಜಂಗೆ ನಿನ್ನವ-
ನೂಳಿಗವ ನಿಲಿಸೆಂದು, ಪಾರ್ಥಗೆ
ಹೇಳುವರು; ಬಳಿಕವರು ಭೀಮನ
ಕರೆದು ಬೇಡೆನಲು,
ಕೇಳುವನು 'ಹೂಂ' ಎಂದು; ತನ್ನಯ
ಸೋಲದಲಿ ಜೆನ್ನೊಡ್ಡಿ ತಾ ಮೇ-
ಲಾಳನೇರಿಸಿ ಹರಿದು ಕೆಡುಹುವ
ಕಲ್ಲುಗುಂಡಿನಲಿ.

ಆಗ ಕೌರವರು 'ಭೀಮಸೇನನ ಕಾಟವನ್ನು ನಿಲ್ಲಿಸುವುದಕ್ಕೆ ಹೇಳಿರಿ'ಎಂದು ಧರ್ಮನಿಗೆ ಹೇಳುವರು-ಅರ್ಜುನನಿಗೂ ಹೇಳುವರು. 'ಹಾಗೆ ಮಾಡಬೇಡ' ಎಂದು ಧರ್ಮಾರ್ಜುನರು ಹೇಳಿದಾಗ 'ಸರಿ! ಆಗಲಿ!' ಎಂದು ಭೀಮಸೇನನು ಒಪ್ಪಿಕೊಳ್ಳುವನು. ಬಳಿಕ ಆಟವಾಡುತ್ತಿರುವಾಗ, ತಾನೇ ಸೋತಿದ್ದೇನೆಂದು ಹೇಳಿ, ಬೇಕಾಗಿಯೆ ಸೋಲನ್ನೊಪ್ಪಿಕೊಂಡು, ಕೌರವರನ್ನು ಜೆನ್ನಮೇಲೆ ಏರಿಸಿಕೊಂಡು ಓಡುತ್ತ ಹೋಗಿ, ಕಲ್ಲುಗುಂಡುಗಳಿದ್ದ ಸ್ಥಳದಲ್ಲಿ ಕೆಡಹಿಬಿಡುವನು.

ಅಳುತ ಧೃತರಾಷ್ಟ್ರಂಗೆ—ಭೀಮನು
ಕಳೆದ ಹಲುಗಳ ತೋರಿ, ಮೊಳಕಾಲ್-
ಗಳಲಿ ಘಾಯವ ನೋಡಿರೈ ನೀ
ವೆಂದು ದೂರುವರು:

ಕೆಳೆಯನವನೆಮಗಲ್ಲ ಕಾಲನೆ!
ಇಳೆಯಲುಳಿವಿಲ್ಲೆನುತ ಕೌರವ
ಹೊಳಲ ಹೊರೆಯಿಕೆ ಬಾರೆನೆಂದೊಡೆ
ನಮ್ಮ ಕರೆದೊಯ್ದ.

ಬಳಿಕ ಕೌರವರೆಲ್ಲರೂ ತಂದೆಯ ಬಳಿಗೆ ಹೋಗಿ, ಭೀಮನಿಂದಾದ ತೊಂದರೆಯೆಲ್ಲವನ್ನೂ ತೋರಿಸಿ 'ಇವನು ನಮಗೆ ಗೆಳೆಯನಲ್ಲ; ವೈರಿ! ನಾವು ಒಲ್ಲೆವೆಂದು ಹೇಳಿದರೂ ಕೇಳದೆ ಪಟ್ಟಣದ ಹೊರಕ್ಕೆ ಆಡಲೆಂದು ಕರೆದುಕೊಂಡು ಹೋದ' ಎಂದು ದೂರುಹೇಳುವರು. ಇಷ್ಟರಲ್ಲಿಯೆ ಭೀಮಸೇನನು ಏನು ಮಾಡುವನು. ಗೊತ್ತೊ?

ಮುಳ್ಳಮೊನೆಯಲಿ ಚಿಗುರಿ ನೆತ್ತರ
ಚೆಲ್ಲಿ, ಹುಡಿಯಲಿ ಹೊರಳಿ, ತಾ ಬಂ-
ದಲ್ಲಿ ಧೃತರಾಷ್ಟ್ರಂಗೆ ಭೀಷ್ಮಂ-
ಗಳುತ ದೂರುವನು.
'ಒಲ್ಲೆನೆಂದೊಡೆ ನನ್ನ ಕರೆವರು
ಖುಲ್ಲರೆಲ್ಲರು; ನಿಮ್ಮ ಮಕ್ಕಳ—
ದೆಲ್ಲರಿಗೆ ನಾನೊಬ್ಬನಾಪೆನೆ?'
ಎಂಬನನಿಲಜನು.

ತನ್ನನ್ನು ತಾನೇ ಮುಳ್ಳಿನಿಂದ ಚುಚ್ಚಿ ಗಾಯವಡೆದು ನೆತ್ತರ ಹರಿಸಿಕೊಂಡು, ಹುಡಿಯಲ್ಲಿ ಬಿದ್ದು ಹೊರಳಾಡಿ, ಧೃತರಾಷ್ಟ್ರ-ಭೀಷ್ಮರಿದ್ದಲ್ಲಿಗೆ ಬಂದು ಅಳುತ್ತಳುತ್ತ 'ನಾನು ಒಲ್ಲೆನೆಂದರೂ ನನ್ನನ್ನು ಆಟಕ್ಕೆ ಕರೆಯುತ್ತಾರೆ; ಇವರೆಲ್ಲರೂ ಕೆಟ್ಟವರು, ಸುಳ್ಳುಹೇಳುತ್ತಾರೆ; ನೂರುಮಂದಿಯೆದುರು ನಾನು ಒಬ್ಬನೇ ಏನ ಮಾಡಬಲ್ಲೆ?' ಎಂದು ಭೀಮಸೇನನು ತಾನೂ ದೂರಿಡುವನು.

* * *

ಭೀಮಸೇನನ ಕಿಡಿಗೇಡಿತನವನ್ನು ಹೊರಕ್ಕೆ ಹಾಕುವ ಇನ್ನೂ ಹಲವು ಪದ್ಯಗಳಿವೆ; ಮೇಲಿನ ಪದ್ಯಗಳನ್ನು ಮೆಚ್ಚಿದವರು ಮೂಲವನ್ನು ಓದಲು ಮನಸ್ಸು ಮಾಡಿಯೆ ಮಾಡುವರು. ಓದಲಿ! ಕುಮಾರವ್ಯಾಸನ ಪ್ರತಿಭೆಯನ್ನು ಎಲ್ಲೆಲ್ಲಿಯೂ ಹರಡಲಿ!

## ಅಂತರರಾಷ್ಟ್ರೀಯ ಸಾಹಿತಿಗಳ ಕೂಟ

ಪಿ. ಇ. ಎನ್. ಕ್ಲಬ್ಬಿನ ಅಂತರರಾಷ್ಟ್ರೀಯ ಕಾಂಗ್ರೆಸ್ಸಿನ ಹದಿನೈದನೆಯ ಸಭೆಯು ಈ ಸಾರಿ ಪ್ಯಾರಿಸ್ ನಗರದಲ್ಲಿ ಕೂಡುವುದು. ಈ ಸಭೆಯು, ಜೂನ್ ೨೧ ರಿಂದ ೨೭ನೆಯ ತಾರೀಖಿನ ವರೆಗೆ ನಡೆಯುವುದಿದ್ದು, ಸುಮಾರು ನಲವತ್ತು

CC-0. Jangamwadi Math Collection. Digitized by eGangotri

ರಾಷ್ಟ್ರಗಳ ಸುಪ್ರಸಿದ್ಧ ಲೇಖಕರೂ ಗ್ರಂಥಕರ್ತರೂ ಅಲ್ಲಿಗೆ ಬರಲಿರುವರು.

ಈ ಕ್ಲಬ್ಬಿನ ಹಿಂದುಸ್ಥಾನ್ ಶಾಖೆಯ ಪರವಾಗಿ ಶ್ರೀಮತಿ ಸೋಫಿಯಾ ವಾಡಿಯಾರವರು, ೧೯೩೫ ಮತ್ತು ೧೯೩೬ರಲ್ಲಿ ಬಾರ್ಸಿಲೋನ್ ಮತ್ತು ಬೋನಸ್ ಆಯರಿಶ್‌ಗಳಲ್ಲಿ ಕೂಡಿದ್ದ ಕಾಂಗ್ರೆಸ್ಸಿಗೆ ಹೋಗಿದ್ದರು. ಈ ಸಲದ ಕಾಂಗ್ರೆಸ್ಸಿಗೆ ಡಾ. ಅಮಿತ ಸಿ. ಚಕ್ರವರ್ತಿ ಡಿ. ಫಿಲ್‌ರವರು ಹೋಗಿದ್ದಾರೆ.

ಡಾ. ಚಕ್ರವರ್ತಿಯವರು, ಪಿ. ಇ. ಎನ್. ಕ್ಲಬ್ಬಿನ ಹಿಂದುಸ್ಥಾನ್ ಶಾಖೆಯ ಅಧ್ಯಕ್ಷರಾದ ಡಾ. ರವೀಂದ್ರನಾಥ ಟಾಗೋರರಿಗೆ ಸಾಹಿತ್ಯವಿಚಾರದಲ್ಲಿ ಕಾರ್ಯದರ್ಶಿಗಳಾಗಿದ್ದರು. ಕವಿವರ್ಯ ಟಾಗೋರರೊಂದಿಗೆ ಅವರು ಯುರೋಪ್, ಅಮೇರಿಕೆ, ಇರಾಣ್ ಮತ್ತು ಇರಾಕಗಳಲ್ಲಿ ಪ್ರವಾಸ ಮಾಡಿರುವರು. ಇದಲ್ಲದೆ ಸಾಹಿತ್ಯ ಮತ್ತು ಸಾಂಸ್ಕೃತಿಕ ವಿಚಾರದಲ್ಲಿ ಸುಪ್ರಸಿದ್ಧ ಉಪನ್ಯಾಸಕರೆಂದು ಖ್ಯಾತಿಪಡೆದಿರುವರು. ಇವರ ಹೆಸರು ಯುರೋಪ್, ಅಮೇರಿಕೆಗಳಲ್ಲಿ ಸುಪ್ರಸಿದ್ಧವಿರುವುದು. ಮಹಾಯುದ್ಧದಿಂದೀಚೆಗೆ ಪ್ರಚಾರದಲ್ಲಿರುವ ಆಧುನಿಕ ಇಂಗ್ಲಿಷ್ ಕವನಗಳ ಬಗ್ಗೆ ಇವರು ಪ್ರಾವೀಣ್ಯವನ್ನು ಪಡೆದಿರುವರು. ಈ ಸಂಬಂಧದಲ್ಲಿ ಇವರು ಬರೆದ ಪುಸ್ತಕವೊಂದು ಸದ್ಯದಲ್ಲಿಯೇ ಪ್ರಕಟವಾಗಲಿರುವುದು.

ಮುಂಬಯಿಯಲ್ಲಿ ಪ್ರಕಟವಾಗುತ್ತಿರುವ "ಚಿತ್ರಾ" ವಾರಪತ್ರಿಕೆಯ ಸಂಪಾದಕರಾದ ಶ್ರೀ. ಎ. ಎ. ಕಾಣೇಕರರೂ ಕಾಂಗ್ರೆಸ್ಸಿನ ಸಭೆಗೆ ಹೋಗಿಬರುವರು.

ಪಿ. ಇ. ಎನ್. ಕ್ಲಬ್ಬಿನ ಹಿಂದುಸ್ಥಾನ್ ಶಾಖೆಯ ಕಾರ್ಯಕಾರಿ ಮಂಡಲಿಯ ಸದಸ್ಯರಾದ ಶ್ರೀ. ಆರ್. ಪಿ. ಮಸಾನಿಯವರು, ಜೂನ್ ತಿಂಗಳ ಕೊನೆಯಲ್ಲಿ ಯುರೋಪನ್ನು ಸಂದರ್ಶಿಸಲಿರುವುದರಿಂದ, ಕಾಂಗ್ರೆಸ್ಸಿಗೆ ಹೋಗಲು ಅವರಿಗೆ ಸಾಧ್ಯವಾಗುವುದಿಲ್ಲ. ಆದರೂ ಅವರು ಫ್ರಾನ್ಸ್, ಸ್ವಿಝರ್‌ಲಂಡ್, ಇಂಗ್ಲಂಡ್. ಆಸ್ಟ್ರಿಯ ಮತ್ತು ಹಾಲಂಡ್‌ಗಳಲ್ಲಿರುವ ಪಿ. ಇ. ಎನ್. ಶಾಖೆಗಳಿಗೆ ಭೆಟ್ಟಿಕೊಟ್ಟು ಬರುವರು.

ಕಾಂಗ್ರೆಸ್ಸಿನ ಉದ್ಘಾಟನವು ಫ್ರೆಂಚ್ ರಿಪಬ್ಲಿಕಿನ ಅಧ್ಯಕ್ಷರಾದ ಲೆಬ್ರುನರಿಂದ ನೆರವೇರುವುದು; ಅನಂತರ ಪ್ರತಿನಿಧಿಗಳು ಚಾರ್ಟರ್ಸ್, ವರ್ಸಾಯ, ಪಿ. ಇ. ಎನ್. ಹಾವುಸ್, ಲಾಯರ್ ಮತ್ತು ನಾರ್ಮಂಡಿಗಳಿಗೆ ಹೋಗಿ ಬರುವರು.

ಕಾಂಗ್ರೆಸ್ಸಿನಲ್ಲಿ ಅನೇಕ ಮಹತ್ತ್ವದ ವಿಷಯಗಳು ಚರ್ಚೆಯಾಗಲಿರುವುವು. ಈ ಕೆಳಗೆ ಕಂಡ ವಿಷಯಗಳನ್ನು ಬೇರೆ ಬೇರೆ ಸಮಿತಿಗಳು ವಿಚಾರಮಾಡಿ, ಕಾಂಗ್ರೆಸ್ಸಿನ ಸಭೆಯ ಅಂತ್ಯದಲ್ಲಿ ತಮ್ಮ ತಮ್ಮ ವರದಿಗಳನ್ನೊಪ್ಪಿಸುವುವು.

(೧) ಈಗಿನ ಕಾಲದ ಸಾಹಿತ್ಯಕ್ಕೆ ಒಂದು ನಿರ್ದಿಷ್ಟ ಶೈಲಿಯಿರುವುದೇ?

(೨) ಬೇರೆ ಬೇರೆ ಭಾಷೆಗಳಲ್ಲಿರುವ ಗ್ರಂಥಗಳ ಭಾಷಾಂತರಮಾಡುವುದನ್ನು ಬಿಟ್ಟು, ಉಳಿದ ಯಾವ ಉಪಾಯಗಳಿಂದ ಜಗತ್ತಿನಲ್ಲೆಲ್ಲ ಒಂದೇ ಸಂಸ್ಕೃತಿಯ ಪ್ರಸಾರಮಾಡಲು ಸಾಧ್ಯವಿದೆ? ಬೇರೆ ಬೇರೆ ಸಾಹಿತ್ಯಗಳ ವಿಮರ್ಶೆಯನ್ನು ಅದಲು ಬದಲು ಮಾಡುವುದು ಹೇಗೆ? ಮತ್ತು ಆಂತರರಾಷ್ಟ್ರೀಯ ವಿಮರ್ಶಕರ ಸಂಘವನ್ನು ಪ್ರಚಾರದಲ್ಲಿ ತರುವುದೆಂತು?

(೩) ಇಂದಿನ ಮತ್ತು ಮುಂದಿನ ಸಾಹಿತ್ಯದಲ್ಲಿ ಸಾಮೂಹಿಕಭಾವವನ್ನು ತರುವ ಉಪಾಯಗಳನ್ನು ಕಂಡುಹಿಡಿಯುವುದು.

(೪) ಆಧುನಿಕ ಜಗತ್ತಿನಲ್ಲಿ ಕಾವ್ಯದ ಭವಿಷ್ಯವೇನು?

—ಸಂಯುಕ್ತಕರ್ನಾಟಕದಿಂದ



CC-0. Jangamwadi Math Collection. Digitized by eGangotri

# ಕನ್ನಡದ ಮುನ್ನಡೆ

**ಕನ್ನಡ ಸಾಹಿತ್ಯ-ಸಂಸ್ಕೃತಿಗಳ ಪ್ರಚಾರ-ಪ್ರಸಾರ**

**ಕೊಪ್ಪಳದ ಸೆಂಟ್ರಲ್ ಬ್ಯಾಂಕಿನಲ್ಲಿ** ಇದುವರೆಗೆ ಇಂಗ್ಲಿಷ್-ಉರ್ದುಗಳಲ್ಲಿ ಮಾತ್ರ ಲೆಕ್ಕಪತ್ರದ ವ್ಯವಹಾರ-ವಿದ್ದಿತು. ಜನತೆಯ ಸೌಕರ್ಯವನ್ನರಿತು ಅಲ್ಲಿಯ ಕನ್ನಡದ ಅಭಿಮಾನಿಗಳು ಪ್ರಯತ್ನಿಸಿದುದರಿಂದ ಇನ್ನು ಮೇಲೆ, ಅಲ್ಲಿಯ ಎಲ್ಲ ವ್ಯವಹಾರವು ಕನ್ನಡದಲ್ಲಿ ನಡೆಯಬೇಕೆಂದು ಗೊತ್ತಾಯಿತು. ರೆಜಿಸ್ಟ್ರಾರ್ ಅವರ ಅನುಮತಿಯೂ ದೊರೆತಿದೆ. ಅಲ್ಲದೆ ಅಲ್ಲಿಯ ವಿದ್ಯಾಶಾಲೆಗಳಲ್ಲಿಯ ಕನ್ನಡಕ್ಕಿರುವ ಮೊದಲಿನ ಸ್ಥಾನವು ಇದ್ದೇ ಇದೆಯೆಂದು ಅಧಿಕಾರಿಗಳು ಕ. ಸಾ. ಪರಿಷತ್ತಿನವರಿಗೆ ಬರೆದು ತಿಳಿಸಿರುವರು.

**ಕರ್ನಾಟಕ ವಣಿಕ್‌ಸಂಘದವರ** ಇದುವರೆಗಿನ ಪ್ರಯತ್ನದಿಂದ, ಎಂ. ಎಸ್. ಎಂ. ರೇಲ್ವೆ ಕಂಪನಿಯವರು ತಮ್ಮ ವೇಳಾಪತ್ರಿಕೆಯನ್ನು ಕನ್ನಡದಲ್ಲಿಯೂ ಪುಸ್ತಕ-ರೂಪದಿಂದ ಮುದ್ರಿಸಿ ಪ್ರಕಟಿಸಿದ್ದಾರೆ. ಒಂದಾಣೆ ಬೆಲೆಗೆ ಎಲ್ಲ ಸ್ಟೇಷನ್ನುಗಳಲ್ಲಿಯೂ ದೊರೆಯುವ ಏರ್ಪಾಡನ್ನು ಮಾಡಿದ್ದಾರೆ.

**ಕನ್ನಡಕಂದ ಮಾಸಪತ್ರಿಕೆಯನ್ನು**, ಇನ್ನು ಮೇಲೆ ಶ್ರೀಮಾನ್ ಮಲ್ಲಾರಿ ಮೇವುಂಡಿಯವರು ಸಂಪಾದಕರಾಗಿ ನಡೆಯಿಸಲಿರುವರು. ಪ್ರತಿಯೊಬ್ಬ ಕನ್ನಡಕಂದನೂ ಅದನ್ನು ಪ್ರೀತಿಸುವಂತಾಗಲೆಂದು ನಮ್ಮ ಹಾರಯ್ಕೆ!

**ಮೈಸೂರು ಸಂಸ್ಥಾನದ** ಎಲ್ಲ ಹೈಸ್ಕೂಲುಗಳಲ್ಲಿಯೂ ಸೈನ್ಸ್ ಮತ್ತು ಐಚ್ಛಿಕ ವಿಷಯಗಳನ್ನು ಕನ್ನಡದಲ್ಲಿಯೆ ಕಲಿಸಬೇಕೆಂದು ವಿದ್ಯಾಖಾತೆಯ ಮುಖ್ಯಾಧಿಕಾರಿಗಳು ಮನವಿಮಾಡಿಕೊಂಡುದಕ್ಕೆ, ಸರಕಾರದಿಂದ ಒಪ್ಪಿಗೆ ದೊರೆತುದು ಸಂತೋಷದ ಸಂಗತಿ.

**ಕುಡಚಿಯಲ್ಲಿ** ಜರುಗಿದ ದಕ್ಷಿಣ ಸಂಸ್ಥಾನಗಳ ಪ್ರಜಾ ಪರಿಷತ್ತಿನಲ್ಲಿ, ಎಲ್ಲ ಸಂಸ್ಥಾನಗಳಲ್ಲಿಯೂ ಅಲ್ಲಲ್ಲಿಯ ಬಹುಜನರ ಭಾಷೆಯೇ ಶಿಕ್ಷಣದ ಭಾಷೆಯೂ ರಾಜಕೀಯ ವ್ಯವಹಾರದ ಭಾಷೆಯೂ ಆಗಿರಬೇಕೆಂದು ಗೊತ್ತುವಳಿ ಪಾಸಾಗಿದೆ. ಕನ್ನಡಿಗರಿಗೆ ಅವಶ್ಯಕವಾದ ಗೊತ್ತುವಳಿಯಿದು. ಉತ್ತರ ಕರ್ನಾಟಕ ಸಂಸ್ಥಾನಗಳಲ್ಲಿಯ ಕನ್ನಡಿಗರು ಇದರ ಉಪಯೋಗವನ್ನು ಮಾಡಿಕೊಂಡು, ಕನ್ನಡ-ತನವನ್ನು ಕಾಯ್ದುಕೊಳ್ಳಬೇಕು.

**ಸಂಘ-ಸಂಸ್ಥೆಗಳ ಚಟುವಟಿಕೆಗಳು**

**ಮುಂಬಯಿ ಕರ್ನಾಟಕ ಸಂಘದ** ವಾರ್ಷಿಕೋತ್ಸ-ವವು, ೬-೬-೩೭ನೆಯ ದಿನ ಜಗದ್ಗುರು ಶ್ರೀಶಂಕರಾಚಾರ್ಯ (ಡಾ. ಕುರ್ತಕೋಟಿ) ಅವರು ಅಧ್ಯಕ್ಷತೆಯಲ್ಲಿ ನೆರವೇರಿತು. ಧಾರವಾಡದ ಶ್ರೀಮಾನ್ ಮುದವೀಡು ಕೃಷ್ಣರಾಯರೂ ಶ್ರೀಮಾನ್ ಟಿ. ಟಿ. ಶರ್ಮರೂ ಆಮಂತ್ರಿತರಾಗಿದ್ದರು. ಶ್ರೀ. ಶರ್ಮರವರು ದಿವಂಗತರಾದ ನಾಟಕಶಿರೋಮಣಿ ವರದಾಚಾರ್ಯರ ಛಾಯಾಚಿತ್ರದ ಅನಾವರಣವನ್ನು ಮಾಡಿದರು.

**ಚಿಕ್ಕೋಡಿಯಲ್ಲಿ** ಕರ್ನಾಟಕಸಂಘದ ಕಾರ್ಯಕಾರಿ ಸಮಿತಿಯ ಹೊಸ ಆಯ್ಕೆಯಾಗಿದ್ದು, ಈ ವರ್ಷ ಕನ್ನಡ ಜಾಗೃತಿಯ ಕೆಲಸವನ್ನು ಹೆಚ್ಚು ರಭಸದಿಂದ ಮಾಡ-ಬೇಕೆಂದು ನಿರ್ಣಯಿಸಿರುವರು. ಚಿಕ್ಕೋಡಿಯ ಮುಂದಾಳು-ಗಳಲ್ಲಿ ಮರಾಟಿಗೆ ಮೋಹಿತರಾದವರೇ ಬಲುಮಂದಿ. ಎಂತಲೇ ಅದನ್ನೀಗ ಕರ್ನಾಟಕ ಭಾಗವು ಅಹುದೋ ಅಲ್ಲವೋ ಎನ್ನುವಂತೆ ಮಾಡಿಬಿಟ್ಟಿದ್ದಾರೆ. ಕರ್ನಾಟಕ ಸಂಘ ಆ ಪರಿಸ್ಥಿತಿಯನ್ನು ಅಡಗಿಸಲೆಂದು ನಮ್ಮ ಆಶೆ

**ಮುನ್ನಡೆ—ಅಭಿನಂದನೆ**

**ಬಾಗಿಲುಕೋಟೆಯ** ವಿದ್ಯಾದಾನ ಸಮಿತಿಯ ನ್ಯೂ ಇಂಗ್ಲಿಷ್ ಸ್ಕೂಲಿನಲ್ಲಿ ಅಧ್ಯಾಪಕರಾಗಿ ಕೆಲಸಮಾಡುತ್ತಿದ್ದ ಶ್ರೀ. ವಿ. ಜಿ. ಹಣಮಸಾಗರ ಬಿ. ಎ; ಬಿ. ಟಿ. ಅವರು ಕಲ್‌ಬುರ್ಗೆಯ ಇಂಟರ್ ಮಿಾಜಿಯೆಟ್ ಕಾಲೇಜಿಗೆ ಕನ್ನಡ ಲೆಕ್ಚರರ್ ಆಗಿಹೋದರು. ಬಾಗಿಲುಕೋಟೆಯಲ್ಲಿಯ ಪ್ರತಿಯೊಂದು ಚಟುವಟಿಕೆಯಲ್ಲಿಯೂ ಇವರು ಕೇಂದ್ರ ಮಂಡಲದಲ್ಲಿರುವವರು. ಕಲ್‌ಬುರ್ಗೆಯಲ್ಲಿದ್ದು ಮಾಡ-ಬೇಕಾಗಿದ್ದ ಕನ್ನಡದ ಕೆಲಸವೂ ಬಹಳವಿರುವುದೆಂಬುದನ್ನು ನಮ್ಮ ಮಿತ್ರರು ಮರೆಯದಿರಲಿ!

**ಶ್ರೀಮಾನ್ ವಿ. ಕೆ. ರಾವ್** ಅವರು ಮಂಗಳೂರವರು. ಗಣಿತಶಾಸ್ತ್ರದ ಹೆಚ್ಚಿನ ಅಭ್ಯಾಸಕ್ಕಾಗಿ ಕೆಂಬ್ರಿಜ್ ವಿಶ್ವವಿದ್ಯಾನಿಲಯಕ್ಕೆ ಹೋಗಿದ್ದರು. ಮೊನ್ನೆಮೊನ್ನೆ ನಡೆದ ಪರೀಕ್ಷೆಯಲ್ಲಿ ಉತ್ತಮ ಯಶಸ್ವಿಗಳಾಗಿ 'ರ್‍ಯಾಂಗ್ಲರ್' ಪದವಿಯನ್ನು ಸಂಪಾದಿಸಿದ್ದಾರೆ. ಕನ್ನಡಿಗ ರ್‍ಯಾಂಗ್ಲರು-ಗಳಲ್ಲಿ ಇವರು ಮೂರನೆಯವರು. ಮದರಾಸ್ ಯುನಿ-ವರ್ಸಿಟಿಯ ಶಿಕ್ಷಣಕ್ರಮವನ್ನು ಮುಗಿಸಿ ಇಂಗ್ಲಂಡಿಗೆ ಹೋದಬಳಿಕ 'ಸಿಡ್ನಿ ಸಸೆಕ್ಸ್ ಕಾಲೇಜಿ' ನಲ್ಲಿವರು ಓದುತ್ತಿದ್ದರು.

**ಉದಾರ ದಾನ**

**ಸೊಲ್ಲಾಪುರದ** ಪ್ರಸಿದ್ಧ ಶ್ರೀಮಂತರಾದ ಶ್ರೀಮಾನ್ ಬಂಡೆಪ್ಪ ರೇವಣಸಿದ್ಧಪ್ಪ ಝುಂಝೋಯವರು, ತಮ್ಮ ಮಗನ ಮದುವೆಯ ಕಾಲದಲ್ಲಿ ಬೇರೆಬೇರೆ ೧೩೫ ಸಂಸ್ಥೆಗಳಿಗೆಲ್ಲ ಸೇರಿ, ೬೮೧ ರೂಪಾಯಿಗಳನ್ನು ಸಲ್ಲಿಸಿರುವರು. ಮಿಕ್ಕ ಶ್ರೀಮಂತರಿಗೆ ಅನುಕರಣೀಯವಾದ ಕಾರ್ಯವಿದು.

CC-0. Jangamwadi Math Collection. Digitized by eGangotri

# ★ ಕಂಬನಿ-ಶ್ರದ್ಧಾಂಜಲಿ ★

### ದಿವಂಗತ ಪೀರ್ ಅವರು

ಶ್ರೀಮಾನ್ ಸಿಂಹರ 'ಸಂಸಾರನೌಕಾ' ನಾಟಕವು, ಶ್ರೀ. ಪೀರ್ ಅವರ ಸುಂದರನ ಪಾತ್ರಾಭಿನಯದಿಂದ ಅಖಿಲ ಕರ್ಣಾಟಕದ ಮನಸ್ಸನ್ನೇ ಸೆಳೆದುಕೊಂಡಿತು. ಚಂದ್ರಕಲಾ ನಾಟಕಮಂಡಲಿಯವರಾಡುವ 'ಸಂಸಾರನೌಕೆ' ಯನ್ನು ನೋಡಿದವರ ಹೃದಯದಲ್ಲಿ, ಪೀರ್ ಅವರು ಮನೆಮಾಡಿಕೊಳ್ಳದೆ ಬಿಟ್ಟಿಲ್ಲ. ಧಾರವಾಡದ ರಸಿಕವರ್ಗ-ವಂತೂ ಅವರ ಅಭಿನಯಕ್ಕೆ ತಲೆದೂಗಿ, ಅನೇಕ ರೀತಿ-ಯಿಂದ ಮನ್ನಣೆಗಳನ್ನು ಸಲ್ಲಿಸಿತು.

ನಟರಲ್ಲಿರಬೇಕಾದ ಔಚಿತ್ಯದ ಕಲ್ಪನೆ ಪೀರ್ ಅವರಲ್ಲಿ ಸಾಕಷ್ಟಿದ್ದಿತು. ಅಭಿನಯದ ಅನುಭವದಿಂದ ನಾಟಕ-ನಾಟಕಶಾಸ್ತ್ರಗಳ ಪರಿಚಯವನ್ನೂ ಅವರು ಪಡೆದಿದ್ದರು. ಸಾಹಿತ್ಯದ ಸಂಸ್ಕಾರವೂ ಇಲ್ಲದೆ ಇರಲಿಲ್ಲವೆಂಬುದನ್ನು ಅವರ ಪರಿಚಿತರೆಲ್ಲರೂ ಚೆನ್ನಾಗಿ ಬಲ್ಲರು. ಕರುಣಾನಾಯಕನಾದ ಸುಂದರನ ಪಾತ್ರವನ್ನು ಅಭಿನಯಿಸಿ ತೋರಿಸುವು-ದರಲ್ಲಿಯ ಅವರ ಕೌಶಲ್ಯವನ್ನೇ ಶಾಂತನಾಯಕನಾದ ಬುದ್ಧನ ಪಾತ್ರವನ್ನೂ, ಸರಸನಾಯಕನಾದ ಷಹಾಜಹಾನನ ಪಾತ್ರವನ್ನೂ ಅಭಿನಯಿಸುವುದರಲ್ಲಿ ಕಾಣಬಹುದಾಗಿದ್ದಿತು. ಕರ್ಣಾಟಕ ರಂಗದೇವತೆಯು ತನ್ನ ಉಜ್ವಲಭವಿಷ್ಯವನ್ನು ಪೀರ್ ಅವರಲ್ಲಿ ಕಂಡು, ಆಶೆಯಿಂದ ನಿರೀಕ್ಷಿಸುತ್ತಿದ್ದಳು. ನಿಯತಕರ್ಮವೊಂದನ್ನೇ ಅರಿತ ಕಾಲನಿಗೆ ಕನ್ನಡಿಗರ ಆಶಾಂಕುರವನ್ನು ತುಳಿಯುತ್ತಿರುವುದರ ಅರಿವೆಲ್ಲಿ? ಕಳೆದ ತಿಂಗಳ ೧೬ನೆಯ ತಾರೀಖಿನ ದಿನ ಪೀರ್ ಅವರನ್ನು ನಮ್ಮ ಕಣ್ಣಿಗೆ ಕಾಣದಂತೆ ಮಾಡಿದನು. ಅವರ ಅಭಿನಯವನ್ನು ಒಂದೇ ಒಂದು ನಿಮಿಷ ನೋಡಿದ ಯಾವ ಕನ್ನಡಿಗನೂ ನಿಟ್ಟುಸಿರಿಕ್ಕಿ, ಕಂಬನಿಗರೆಯದೆ ಇರಲಾರನು.

ಮರಣಕ್ಕೆ ಏನಾದರೂ ಕಾರಣವೊಂದು ಬೇಕಲ್ಲವೇ! ಪೀರ್ ಅವರನ್ನು ನುಂಗಿದುದು ಅದೆಂತಹ ವಿಷಪೂರಿತ-ವಾದ ಮಲೆಜ್ವರವೊ! ಹಿಡಿದುದು ಬಿಡಲಿಲ್ಲ; ಆಯುಷ್ಯದ ಕೊನೆಯ ದಿನವನ್ನೆ ತಂದು ಒದವಿಸಿತು. ಇನ್ನು ಅವರ ಸ್ಥಾನವನ್ನು ತುಂಬಿತೋರಿಸುವ ಕನ್ನಡ ನಟನೊಬ್ಬನು ಮುಂದೆಬಂದರೆ, ದಿವಂಗತರ ಆತ್ಮಕ್ಕೆ ನಿಜವಾಗಿಯೂ ಶಾಂತಿದೊರೆತೀತು. ಸಿದ್ಧಿಗಾಗಿ ಹವಣಿಸು-ವವರು ನಡುವೇ ದೇಹತ್ಯಾಗ ಮಾಡಿದರೆ, ಹಿಂದೆ ಉಳಿದವರು ನಾವು ಅವರ ಬಗೆಗೆ ಎಷ್ಟೊಂದು ಶಾಂತ್ಯಭ್ಯರ್ಥನೆ ಮಾಡಿಕೊಂಡರೂ ಆಗುವುದೇನು? ಅವರು ಗುರಿಯನ್ನಿಟ್ಟು ಕೊಂಡಲ್ಲಿಗೆ ನಮ್ಮಲ್ಲಿಯ ಯಾರಾದರೂ ಹೋಗಿ ತಲ್ಪಿದಂದೇ ಅವರಿಗೆ ಶಾಂತಿ! ಸಮಾಧಾನ!!

### ಪ. ವಾ. ಬದಾಮಿ ಕೃಷ್ಣರಾಯರು

ಇವರು ಕಳೆದ ತಿಂಗಳ ೧೧ನೆಯ ತಾರೀಖಿನ ದಿನ—ತಮ್ಮ ಜೀವನದ ೮೭ನೆಯ ವಯಸ್ಸಿನಲ್ಲಿ—ಪರಲೋಕ-ವಾಸಿಗಳಾದರು. ಇವರು ಮೈಸೂರು ಸರಕಾರದ ಅಸಿಸ್ಟಂಟ್ ಕಮಿಶನರರ ಅಧಿಕಾರದಲ್ಲಿದ್ದು ನಿವೃತ್ತರಾದವರು. 'ಬಾಲಮಿತ್ರ' ಎಂಬ ಹೆಸರಿನಿಂದ ಕನ್ನಡವಾಚಕರಿಗೆ ಇವರು ಪರಿಚಿತರು. 'ಬಾಲಭಾರತ' 'ಬಾಲರಾಮಾಯಣ' ಎಂಬ ಇವರ ಕವನಗಳು ಮೈಸೂರುದೇಶದ ವಿದ್ಯಾರ್ಥಿ ಪ್ರಪಂಚದಲ್ಲಿ ತುಂಬ ಪ್ರೀತಿಯನ್ನು ಪಡೆದುಕೊಂಡಿವೆ. ಇವರಿಂದ ರಚಿತವಾದ ಅನೇಕ ನಾಟಕ-ಕಾದಂಬರಿ-ಕವನಗಳು ಇನ್ನೂ ಅಪ್ರಕಟಿತವಾಗಿ ಇವೆ. ಪರಮಾತ್ಮನು ರಾಯರಿಗೆ ಸದ್ಗತಿಯನ್ನು ಕೊಡಲೆಂದು ನಮ್ಮ ಹಾರಯಿಕೆ.

CC-0. Jangamwadi Math Collection. Digitized by eGangotri






## ಕರ್ಣಾಟಕ

### ಕನ್ನಡ ಪಠ್ಯಪುಸ್ತಕ ಮಂಡಲ

ಸರಕಾರದ ವಿದ್ಯಾಖಾತೆಯಿಂದ ನಿರ್ಮಿತವಾದ 'ಪಠ್ಯ ಪುಸ್ತಕಮಂಡಲ'ವೊಂದೊಂದು ಪ್ರತಿಯೊಂದು ಪ್ರಾಂತ್ಯ-ದಲ್ಲಿಯೂ ಇವೆಯೆಂಬುದನ್ನು ಬಹುಜನರು ಬಲ್ಲರು. ಹಾಗೆಯೆ ಕನ್ನಡ ಪಠ್ಯಪುಸ್ತಕಮಂಡಲವೂ ಒಂದು ಇದೆ. ಪ್ರತಿಯೊಂದು ಪ. ಪು ಮಂಡಲದಲ್ಲಿಯೂ ಆಯಾಭಾಗ-ದಲ್ಲಿರುವ ಅಧಿಕೃತ ಸಾಹಿತ್ಯಸಂಸ್ಥೆಗಳ ಪ್ರತಿನಿಧಿಗಳೇ ಇರಬೇಕೆಂದು ಮುಂಬಯಿ ವಿದ್ಯಾಖಾತೆಯ ಡೈರೆಕ್ಟರ್ ಸಾಹೇಬರ ಅಪ್ಪಣೆ ಹೊರಟು ೯-೧೦ ವರುಷಗಳಾದು-ವೆಂದು (೧೯೩೮ನೆಯ ಇಸವಿಯ ಮಾರ್ಚ್ ತಿಂಗಳ ಸುಮಾರು, ಮಿ. ಹೆಸ್ಕಿಥ್ ಅವರ ಕಾಲದಲ್ಲಿ) ನಾವು ಕೇಳು ತ್ತೇವೆ. ಆದರೆ ಕನ್ನಡ ಪಠ್ಯಪುಸ್ತಕಮಂಡಲದಲ್ಲಿ, ಕನ್ನಡ ಸಾಹಿತ್ಯಸಂಸ್ಥೆಗಳಿಂದ ಒಬ್ಬ ಪ್ರತಿನಿಧಿಯನ್ನೂ ಇದುವರೆಗೆ ಸೇರಿಸಿಕೊಂಡಿಲ್ಲವಲ್ಲ! ಅಖಿಲಕರ್ಣಾಟಕದ ಪ್ರಾತಿನಿಧ್ಯ-ವನ್ನೂ ವಹಿಸಬಹುದಾದ ಕರ್ಣಾಟಕ ಸಾಹಿತ್ಯಪರಿಷತ್ತಿದೆ; ಮುಂಬಯಿಪ್ರಾಂತ್ಯದಲ್ಲಿಯೆ ಕರ್ಣಾಟಕ ವಿದ್ಯಾವರ್ಧಕ ಸಂಘವಿದೆ. ಕರ್ಣಾಟಕ ಸಾಹಿತ್ಯಪರಿಷತ್ತಿನ ಮನ್ನಣೆ ಯನ್ನು ಪಡೆದ ಬೇರೆ ಬೇರೆ ಕರ್ಣಾಟಕಸಂಘಗಳಿವೆ. ಇವುಗಳ ಪ್ರತಿನಿಧಿಗಳು ಆ ಮಂಡಲದಲ್ಲಿದ್ದರೆ ಪಠ್ಯಪುಸ್ತಕ ಗಳನ್ನಾರಿಸುವ ಕಾರ್ಯವು ಈಗಾಗುವುದಕ್ಕಿಂತಲೂ ಅಧಿಕೃತರೀತಿಯಿಂದಾದೀತು. ಇಂದಿನ ಮಂಡಲಗಳಲ್ಲಿ ಸಾಹಿತ್ಯದ ಪ್ರತ್ಯಕ್ಷಸಂಬಂಧವು ಬರಬಹುದಾದ ಸದಸ್ಯರ ಸಂಖ್ಯೆ ಕಡಿಮೆಯಿರುವುದು. ಅನೇಕ ಸಾಹಿತಿಗಳು ಕಾರಣಾಂ-ತರದಿಂದ ಪ. ಪು. ಮಂಡಳಗಳಿಗೆ ತಮ್ಮ ಗ್ರಂಥಗಳನ್ನು ಕಳುಹುತ್ತಿರುವುದಿಲ್ಲ. ಹೀಗಾಗುವುದರಿಂದ, ಬಂದುದರಲ್ಲಿ ಯಾವುವನ್ನಾದರೂ ಆರಿಸಬೇಕಾಗುತ್ತಿದೆಯಲ್ಲದೆ, ಒಳ್ಳೆಯ ಗ್ರಂಥಗಳ ಆಯ್ಕೆಯಾಗುತ್ತಿರುವುದಿಲ್ಲ. ಸಾಹಿತ್ಯದ ಪ್ರತ್ಯಕ್ಷ ಸಂಬಂಧವು ಬರುವ ಜನರು ಮಂಡಲದಲ್ಲಿ ಹೆಚ್ಚುವುದರಿಂದ, ಮಂಡಲಕ್ಕೆ ಒಳ್ಳೊಳ್ಳೆಯ ಗ್ರಂಥಗಳನ್ನು—ಬಾರದಿದ್ದುವು ಗಳನ್ನೂ—ಬರಮಾಡಿಕೊಂಡು, ಪಠ್ಯಪುಸ್ತಕವನ್ನಾರಿಸಲಿಕ್ಕೆ ಅನುಕೂಲವಾಗುವುದು. ವಿದ್ಯಾಖಾತೆಯ ಮುಖ್ಯಾಧಿಕಾರಿ ಗಳು ತಾವು ಹಿಂದೊಂದು ಸಲ ಹೊರಡಿಸಿದ್ದ ಅಪ್ಪಣೆ ಯೋಗ್ಯರೀತಿಯಲ್ಲಿ ಜಾರಿಗೆ ಬಂದಿದೆಯೋ ಇಲ್ಲವೋ ಎಂಬುದನ್ನು ನೋಡಬೇಕಾದುದು ಕರ್ತವ್ಯವಲ್ಲವೇ? ಸಾಹಿತ್ಯ ಸಂಘಗಳೂ ತಮಗಿರುವ ಹಕ್ಕನ್ನರಿತುಕೊಂಡು, ಪ. ಪು. ಮಂಡಳದಲ್ಲಿ ತಮ್ಮ ತಮ್ಮ ಪ್ರತಿನಿಧಿಗಳಿರಬೇಕೆಂದು ಪ್ರಯತ್ನಿಸಬೇಕಾಗಿಲ್ಲವೇ ?

### ಪಠ್ಯಪುಸ್ತಕಗಳ ಆಯ್ಕೆ

ಎಷ್ಟೋ ತೂಕಹಾಕಿ, ಶಬ್ದಗಳನ್ನು ಆಯ್ದಾಯ್ದು ಬರೆ-ದರೂ, ನಮ್ಮಲ್ಲಿಯ ಒಳ್ಳೆಯ ಲೇಖಕರ ಗ್ರಂಥಗಳು ಕೂಡ ಪಠ್ಯಪುಸ್ತಕವಾಗುವ ಯೋಗ್ಯತೆಯನ್ನು ಪಡೆಯ-ದಾಗಿವೆ. ಐತಿಹಾಸಿಕ ಸತ್ಯವು ಪುರಾಣಪ್ರಿಯರನ್ನು ರೇಗಿ-ಸುವುದು; ಪೌರಾಣಿಕಸತ್ಯವು ಲೌಕಿಕರ ಜುಗುಪ್ಸೆಗೆ ಕಾರಣವಾಗುವುದು. ಹಿಂದುಗಳ ಮೇಲ್ಮೆಯ ಹಾಡು ಮುಸಲ್ಮಾನರನ್ನು ರಂಜಿಸದು. ಮುಸಲ್ಮಾನರ ಯಶಸ್ಸಿನ ಕತೆ ಹಿಂದುಗಳಿಗೆ ರುಚಿಸದು. ವೀರಶೈವರಿಗೆ ಬೇಕಾ-ದುದು ಜೈನರಿಗೆ ಬೇಡ; ಇವರಿಬ್ಬರಿಗೂ ಬೇಕಾದುದು ಬ್ರಾಹ್ಮಣರಿಗೆ ಬೇಡ. ರಾಜನಿಷ್ಠೆಯೊಂದು ಇವೆಲ್ಲವು-ಗಳನ್ನು ಮೆಟ್ಟಿ ತಲೆಯೆತ್ತಿ ನಿಂತಿರುವುದು. ಇವೆಲ್ಲ ಗಾಣ ಗಳಲ್ಲಿ ಸಿಕ್ಕಿಕೊಂಡು ಜಿಬ್ಬೆಜಿಬ್ಬೆಯಾಗಿ ಹೊರಟು 'ಪಠ್ಯ ಪುಸ್ತಕ' ಎಂಬ ಮುದ್ರೆಹೊಡಿಸಿಕೊಳ್ಳಬೇಕಾದರೆ, ಅವೆಲ್ಲ ಗ್ರಂಥಗಳು ಅರಳೆಹಿಟ್ಟಿನ ಮುದ್ದೆಗಳಾಗಿಯೆ ಹೊರಕ್ಕೆ ಬರು ತ್ತವೆ; ಅಥವಾ ಅರಳೆಹಿಟ್ಟಿನ ಮುದ್ದೆಗಳಂತಹವೇ ಪಠ್ಯ-ಪುಸ್ತಕಗಳಾಗುತ್ತವೆ. ಇದರಿಂದ ಮಕ್ಕಳ ಮನಸ್ಸು-ಹೃದಯಗಳು ಸಂಸ್ಕಾರಗೊಳ್ಳಬೇಕು ಹೇಗೆ? ಅವರಲ್ಲಿ ಸ್ವಾಭಿಮಾನ-ಸ್ವದೇಶಾಭಿಮಾನಗಳು ಜಾಗ್ರತಗೊಳ್ಳಬೇಕು ಹೇಗೆ? ಪಶ್ಚಿಮದ ಕಡೆಯಿಂದ ಬರೆದು ಬಂದ ಗ್ರಂಥಗಳು, ನಮ್ಮಲ್ಲಿಯ ಯಾವ ಧರ್ಮವನ್ನು ಎಂತೆಂತಹ ರೀತಿ-ಯಲ್ಲಿಯೇ ಟೀಕಿಸಿರಲಿ!— ಅವು ಪಠ್ಯಪುಸ್ತಕಗಳಾಗಿದ್ದಾಗ ಬಾಯನ್ನು ಬಿಚ್ಚದಿದ್ದವರೇ, ನಮ್ಮವರು ಬರೆದ ಗ್ರಂಥ-

CC-0. Jangamwadi Math Collection. Digitized by eGangotri

ಗಳಲ್ಲಿಯ ಒಂದೊಂದು ಶಬ್ದವನ್ನೂ ಒರೆಗೆ ಹಚ್ಚುತ್ತ ಕೂಡುವರು. 'ಮಹಮ್ಮದೀಯರು' ಎಂದು ಬರೆದರೆ ಏನು ಕಡಿಮೆಯೋ! 'ಮುಸಲ್ಮಾನರು' ಎಂದರೆ ಏನು ಹೆಚ್ಚೋ! ಶಂಕರಾಚಾರ್ಯರು ಗುಹಾಪ್ರವೇಶಮಾಡಿದ-ರೆಂದೇ ಬರೆಯಬೇಕು; ಬಸವೇಶ್ವರರು ಶಿವೈಕ್ಯರಾದರೆಂತಲೇ ಬರೆಯಬೇಕು; ಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಹೋದರೆಂದೇ ಬರೆಯಬೇಕು. ಅವರೆಲ್ಲ ದೇಹತ್ಯಾಗ ಮಾಡಿದರೆಂದು ಹೇಳಿದರೆ, ಅವರವರ ಅಭಿಮಾನಿಗಳು ಕಿಡಿಕಿಡಿಯಾಗುವರು. ನಾವಿರುವುದೀಗ ೨೦ನೆಯ ಶತ-ಮಾನ; ವೈಜ್ಞಾನಿಕ ಯುಗ; ವಿಶ್ವಬಂಧುತ್ವವನ್ನು ಕುರಿತು ಎಲ್ಲೆಲ್ಲಿಯೂ ಚರ್ಚೆ ನಡೆದ ಕಾಲ; ಹೀಗಿರುವಾಗ ವೈಜ್ಞಾ-ನಿಕಸತ್ಯವನ್ನೂ, ಐತಿಹಾಸಿಕಸತ್ಯವನ್ನೂ, ಧಾರ್ಮಿಕ ಮೂಢ ಭಾವನೆ-ಅಂಧಶ್ರದ್ಧೆಗಳ ಪರಂಪರೆಯಿಂದ ನಾವು ಏತಕ್ಕಾಗಿ ಮುಚ್ಚಬೇಕು? ರಾಮರಾಜನು ಮುಸಲ್ಮಾನರಿಂದ ಸತ್ತ-ನೆಂದು ಹೇಳಿದರೆ ಹಿಂದುಗಳೂ, ಅಫಜುಲ್ ಖಾನನು ಶಿವಾಜಿ ಯಿಂದ ಸತ್ತನೆಂದು ಹೇಳಿದರೆ ಮುಸಲ್ಮಾನರೂ ಕೋಪ-ಗೊಳ್ಳಬೇಕೇಕೆ? ಸೃಷ್ಟಿ-ಸ್ಥಿತಿ-ಲಯಗಳನ್ನೊಪ್ಪುವ ಧಾರ್ಮಿಕ ಭಾವನೆಯವರು, ತಮ್ಮ ತಮ್ಮ ಗುರುವರ್ಗದವರನ್ನು, 'ಪ್ರಾಣನೀಗಿದರು' 'ದೇಹತ್ಯಾಗಮಾಡಿದರು' ಎಂದು ಯಾರಾದರೂ ಹೇಳಿದರೆ ರೇಗಿಕೊಳ್ಳಬೇಕೇಕೆ? ಇಂದಿನ ಕಾಲದ ನಾವೂ ಅಂಧಾನುಕರಣಕ್ಕೇ ಸಿದ್ಧರಾಗಬೇಕೇ? ಪಠ್ಯಪುಸ್ತಕಮಂಡಲದಲ್ಲಿದ್ದು ಕಾರ್ಯಮಾಡುವ ಸದಸ್ಯರು, ಇಂತಹ ಜೊಳ್ಳುಭಾವನೆಗಳನ್ನೆಲ್ಲ ಲಕ್ಷ್ಯದಲ್ಲಿ ತಾರದೆ, ವಿದ್ಯಾರ್ಥಿಗಳ ಮನಃಸಂಸ್ಕಾರವೊಂದನ್ನೇ ಗುರಿಯಾಗಿಟ್ಟು ಕೊಂಡಲ್ಲಿ ಯೋಗ್ಯ ಪುಸ್ತಕಗಳ ಆಯ್ಕೆಯಾದೀತು; ಇದನ್ನು ಬಿಟ್ಟು ಕೇವಲ ಭಾವನಾತ್ಮಕವಾದ ಮಾತುಗಳನ್ನು ನಂಬುತ್ತ ಹೋದರೆ, ನಮ್ಮ ವಿದ್ಯಾರ್ಥಿಗಳ ಬೆಳೆವಣಿಗೆ-ಯನ್ನು ನಾವೇ ಕೊಂದುಬಿಟ್ಟಂತಾದೀತು.

## ಕನ್ನಡಿಗರ ಔದಾಸೀನ್ಯದ ಮಾದರಿಯೊಂದು

ಕುಡಚಿ ಕರ್ನಾಟಕದ ಮಧ್ಯದಲ್ಲಿಯದೊಂದು ಹಳ್ಳಿ. ಈ ಸಲ ದಕ್ಷಿಣಸಂಸ್ಥಾನಗಳ ಪ್ರಜಾಪರಿಷತ್ತು ಅಲ್ಲಿ ಕೂಡಿದ್ದಿತಲ್ಲವೆ! ಪರಿಷತ್ತಿನಲ್ಲಿ ಸೇರಿದ ಮುಕ್ಕಾಲು ಪಾಲು ಜನರು ಉತ್ತರಕರ್ನಾಟಕದ ಸಂಸ್ಥಾನಗಳಲ್ಲಿಯವರು; ಮಹಾರಾಷ್ಟ್ರ ಭಾಷೆಯನ್ನು ಏನೂ ಅರಿಯದ ಹುಟ್ಟು-ಗನ್ನಡಿಗರು. ಅವರಿಗಾಗಿ ನಡೆಯಬೇಕಾಗಿದ್ದ ಕಾರ್ಯ-ಕ್ರಮಗಳು ಯಾವ ಭಾಷೆಯಲ್ಲಿ ನಡೆಯಬೇಕು? ಬಿಳಿಯ ಟಟ್ಟೆಯ ಮುಂದಾಳುಗಳೆಲ್ಲ ಸೇರಿ, ಪ್ರತಿಯೊಂದು ಕಾರ್ಯ-ಕ್ರಮವನ್ನೂ ಮರಾಟಿಯಲ್ಲಿಯೆ ನಡೆಯಿಸಿದರು. ಅಲ್ಲಿಯ ಬಿಳಿಯ ಟಟ್ಟೆಯವರಲ್ಲಿ ಕನ್ನಡಿಗರೇನೂ ಇರಲಿಲ್ಲವೆಂತಲ್ಲ. ಇದ್ದ ಕನ್ನಡಿಗರಲ್ಲಿ, ಯಾವ ಭಾಷೆಯೇನೆಂಬ ಔದಾಸೀನ್ಯ-ಭಾವದ ಉದಾರಿಗಳು ಕೆಲವರು; ಮರಾಟಿಗೆ ದತ್ತಪುತ್ರರಾ-ಗಿರುವವರು ಕೆಲವರು. ಇಂತಹರ ಮುಂದಾಳುತನದಲ್ಲಿದ್ದ ಪ್ರಜೆಗಳಿಗೆ, ಭಾಷೆಯ ಬಗೆಗಿರುವ ತಮ್ಮ ಹಕ್ಕುಗಳ ಕಲ್ಪನೆಯೆಲ್ಲಿಯದು? ಹೆಸರು ಪ್ರಜಾಪರಿಷತ್ತಾದರೂ ಪ್ರಜೆಗಳಿಗೆ ಪರಿಷತ್ತಿನ ಪ್ರಯೋಜನವೇನೆಂಬುದೇ ಗೊತ್ತಾಗುವಂತಿರಲಿಲ್ಲ. ನೋಡಿನೋಡಿ ಬೇಸತ್ತ ಸಾತಾ-ರೆಯ ಒಬ್ಬ ಮರಾಟೆಯ ಸಭ್ಯಗೃಹಸ್ಥರೇ ಹೇಳಿದರಂತೆ: "ಅಯ್ಯಾ ಇಲ್ಲಿ ನೆರೆದ ಜನವನ್ನು ನೋಡಿದರೆ ಎಲ್ಲರೂ ಕನ್ನಡ ಭಾಷೆಯವರಿರುವಂತೆ ತೋರುವುದು; ಪಾಪ! ಇಲ್ಲಿ ನಡೆದಿರುವ ಸಂಗತಿ ಅವರಿಗೇನಾದರೂ ತಿಳಿಯಬೇಡವೇ? ಕನ್ನಡದಲ್ಲಿಯೂ ವಿಷಯವಿವರಣೆಯಾಗುವ ಏರ್ಪಾಡನ್ನು ಮಾಡಲಾಗದೇ?" ಎಂದು ಕಳವಳಪಟ್ಟು ಹೇಳಿದರಂತೆ. ಆ ಮೇಲೆ ಅಲ್ಪ ಸ್ವಲ್ಪ ಮಾತು ಕನ್ನಡದಲ್ಲಿಯೂ ನಡೆಯ ತೊಡಗಿತಂತೆ. ನೋಡಿದಿರಾ ಕನ್ನಡಿಗರ ಕರ್ತವ್ಯನಿಷ್ಠೆ ಯನ್ನು?— ಸ್ವಾಧಿಕಾರ ಸಂರಕ್ಷಣೆಯ ಮಾದರಿಯನ್ನು? ಪರಭಾಷೆಯವರಿಗೇ ಕನ್ನಡಿಗರ ವಿಷಯದಲ್ಲಿ ಕನಿಕರ-ವೆನಿಸಬೇಕು; ನಮ್ಮವರು ಬಾಯಿಮುಚ್ಚಿ, ಎಲ್ಲವನ್ನೂ ಸಾಕ್ಷೀಭೂತರಾಗಿ ನೋಡುತ್ತಿರಬೇಕು.... ಇದಾವ ಸೀಮೆಯ ನಡತೆ? ಆ ಪರಿಷತ್ತಿನ ಸ್ವಾಗತಾಧ್ಯಕ್ಷರು ಕರ್ನಾಟಕದಿಂದ ಆರಿಸಿಹೋದ ಒಬ್ಬ ಅಸೆಂಬ್ಲಿಯ ಸಭಾಸದರು; ಕನ್ನಡ ಜನತೆಯ ಪ್ರತಿನಿಧಿಗಳು. ಅವರ ಬಾಯಿಗೆ ಕೂಡ ಬೀಗವೇ!

ಇನ್ನೊಂದು ಮಾತು: ಸಭೆಯಲ್ಲಿ ಮರಾಟಿಯಲ್ಲಿ ಮಾತು-ಕತೆ ನಡೆದಾಗ, ಅದು ತಿಳಿಯದ ೧೦೦ಕ್ಕೆ ೭೫—೮೦ರಷ್ಟು ಜನರು ಸುಮ್ಮಗೆ ಕುಳಿತು ಕೇಳಬೇಕು; ಕನ್ನಡದಲ್ಲಿ ಯಾರಾದರೂ ಮಾತನಾಡತೊಡಗಿದಾಗ, ಸಭೆಯಲ್ಲಿಯ ೧೦೦ಕ್ಕೆ ೨೦—೨೫ರಷ್ಟಿದ್ದ ಮರಾಟಿಗರು ಗಲಭೆಮಾಡಿ ಆಡುವ ಮಾತು ಕೇಳದಂತೆ ಮಾಡಬೇಕು!.... ಇದೂ ಒಂದು ಕನ್ನಡಿಗರ ನಿರ್ಜೀವತನದ ಲಕ್ಷಣವೇ! ಇದರ ಬಗೆಗೆ ಮರಾಟಿಗರಿಗೆ ದೋಷಕೊಡಬೇಕೆಂಬುದು ನಮ್ಮ ವಿಚಾರ ವಲ್ಲ; ಕನ್ನಡಿಗರ ಅಭಿಮಾನಶೂನ್ಯತೆಯನ್ನು ಅವರಿಗೆ ಎತ್ತಿ ತೋರಿಸಬೇಕೆಂದು ಅಪೇಕ್ಷೆ! ಚಳವಳಿಯಿಂದ ಬದುಕಿ ಬಾಳಬೇಕಾದ ಈ ಕಾಲದಲ್ಲಿ, ಕನ್ನಡಿಗರು ಇನ್ನೂ ತಮ್ಮ

CC-0. Jangamwadi Math Collection. Digitized by eGangotri

'ಗುಲಾಮಗಿರಿ'ಯ ಆವರಣವನ್ನೇ ಹೊದ್ದುಕೊಂಡು, ಬಿದ್ದಲ್ಲಿಯೆ ಬಿದ್ದುಕೊಳ್ಳಲು ತೊಡಗಿದರೆ ಕರ್ಣಾಟಕವು ಉಳಿದೀತೇ? ಈ ಮಾತನ್ನು ನಮ್ಮ ಮುಂದಾಳುಗಳೂ ವಿಚಾರ ಮಾಡಲಿ! ಜನಸಾಮಾನ್ಯರೂ ವಿಚಾರಮಾಡಲಿ!

### ಇತ್ತ ಪರಪ್ರಾಂತೀಯರ ಚಟುವಟಿಕೆ ನೋಡಿ!

ಕಾಂಗ್ರೆಸ್ಸಿನವರು ಕರ್ಣಾಟಕ ಪ್ರಾಂತ್ಯವನ್ನು ನಿರ್ಮಿಸಿದೊಡನೆಯೆ ತೆಲುಗುನಾಡಿನ ಕಾಂಗ್ರೆಸ್‌ಭಕ್ತರೇ ಚಳವಳಿಯೆಬ್ಬಿಸಿ, ಆಗಲೆ ಮೂರು ತಾಲ್ಲೂಕುಗಳನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ನಮ್ಮ ಕಾಂಗ್ರೆಸ್‌ಮುಂದಾಳುಗಳು ಸುಮ್ಮಗೆ ಒಪ್ಪಿಸಿಕೊಟ್ಟರಲ್ಲದೆ ಅನಂತಪುರ, ಕೊಯಿಂಬತ್ತೂರು, ಶಾಲ್ಯಮ್ ಜಿಲ್ಲೆಗಳೊಳಗಿನ ಕನ್ನಡಭಾಗವನ್ನೂ ಉತ್ತರದಲ್ಲಿರುವ ಸೊಲ್ಲಾಪುರ, ಸಾತಾರಾಜಿಲ್ಲೆಗಳಲ್ಲಿರುವ ಕನ್ನಡಭಾಗವನ್ನೂ ತಮ್ಮ ಅಧಿನಕ್ಕೆ ತೆಗೆದುಕೊಳ್ಳುವ ಚಳವಳಿಯನ್ನು ಆಗ ಭರದಿಂದ ಎಬ್ಬಿಸಲಿಲ್ಲ. ಈಗ ತೆಲುಗರು ಬಳ್ಳಾರಿಯೆಲ್ಲವನ್ನೂ ಆಕ್ರಮಿಸುವುದಕ್ಕೆ ಕುಳಿತಿದ್ದು, ಬಳ್ಳಾರಿ ಜಿಲ್ಲೆಯ ಕಾಂಗ್ರೆಸ್ ಕಮಿಟಿಯ ವ್ಯವಹಾರವೆಲ್ಲವೂ ತೆಲುಗಿನಲ್ಲಿಯೇ ನಡೆಯಬೇಕೆಂಬ ಹಟವನ್ನು ಮುಂದುವರಿಸುತ್ತಿದ್ದಾರೆ. ಆಂಧ್ರಪತ್ರಿಕೆಯಲ್ಲಿ ಪ್ರಕಟವಾದ ಲೇಖನವೊಂದನ್ನು ನೋಡಿದರೆ, ಅಲ್ಲಿಯ ಕಾಂಗ್ರೆಸ್ ಕಮಿಟಿಯಲ್ಲಿ ಕನ್ನಡ ಮಾತನಾಡುವವರಿಗೆ ತಡೆಯನ್ನೊಡ್ಡಲಾಗುತ್ತಿದೆಯೆಂಬ ಸಂಗತಿ ಗೊತ್ತಾಗುವುದು. ಇದಕ್ಕೆ ಬೆಳಗಾಂವಿ ಜಿಲ್ಲೆಯ ಕಾಂಗ್ರೆಸ್' ಕಮಿಟಿಯ ಅಧಿಕಾರಿಗಳ ಆಡಳಿತದ ಕ್ರಮವು ಸಹಕಾರಿಯಾಗಿದೆ. ಎರಡೂ ಜಿಲ್ಲೆಗಳ, ಮರಾಟಿ-ತೆಲುಗುಗಳಿಗೆ ಮನಸೋತ ಮುಂದಾಳುಗಳೂ ಸೇರಿ, ಕರ್ಣಾಟಕಕ್ಕೂ ಕರ್ಣಾಟಕ ಸಾಹಿತ್ಯ-ಸಂಸ್ಕೃತಿಗಳಿಗೂ ಕ್ಷಯರೋಗವನ್ನು ಅಂಟಿಸತೊಡಗಿದ್ದಾರೆ. ಮುಂದಾಳುಗಳ ಈ ಪಾತಕದ ಫಲವನ್ನು ಭವಿಷ್ಯತ್‌ಕರ್ಣಾಟಕವು ಅನುಭವಿಸಬೇಕಾಗುವುದೆಂಬುದನ್ನು ಎಲ್ಲರೂ ಲಕ್ಷ್ಯದಲ್ಲಿಟ್ಟು ನಡೆಯಬೇಕಾಗಿದೆ. ಪ್ರಾಂತಾಭಿಮಾನ ಸಂಕುಚಿತವೆಂಬುದು ನಮ್ಮ ಕನ್ನಡ ಮುಂದಾಳುಗಳಿಗೆ ಮಾತ್ರವೇ ಅದೇಕೆ ಮನದಟ್ಟಾಗಿದೆಯೋ ತಿಳಿಯದಾಗಿದೆ. ಕರ್ಣಾಟಕವನ್ನು ಕಾಯ್ದುಕೊಂಡರಲ್ಲವೇ ಕನ್ನಡಿಗರ ಮುಂದಾಳುಗಳೆನಿಸಿಕೊಳ್ಳುವುದರ ಸಾರ್ಥಕತೆ!

### ಕಾಸರಗೋಡೂ ಕೈಬಿಡುವಂತಿದೆ!

ತೆಲುಗರು ಕನ್ನಡ ಪ್ರದೇಶವನ್ನೇ ಆಕ್ರಮಿಸಲು ಕುಳಿತಿರುವಾಗ, ಕೇರಳರು—ತಮ್ಮ ಭಾಷೆಯನ್ನಾಡುವ ಬಹು ಜನರು ಇರುವರೆಂದು ಭಾವಿಸಿದ—ಕಾಸರಗೋಡನ್ನೇಕೆ ಬಿಡುವರು.... ಕನ್ನಡಿಗರ ಕಡೆಗೆ? ಅವರು ಏ. ಐ. ಸಿ. ಸಿ.ಯ ಕಡೆಗೆ ವ್ಯಾಜ್ಯವನ್ನೇ ಹೂಡಿದ್ದಾರೆ. ಆ ತಾಲ್ಲೂಕಿನ ಒಂದರ್ಧ ಭಾಗದಲ್ಲಿ ಕೇರಳರ ಬಹುಸಂಖ್ಯೆಯಿರಬಹುದೇನೋ ನಿಜ! ನೂರಕ್ಕೆ ೮೦-೯೦ ಜನರು ಕನ್ನಡ ಮಾತನ್ನಾಡುವ ಇಡಿಯ ತಾಲ್ಲೂಕುಗಳೇ ಎಷ್ಟೊಂದು ಬೇರೆಬೇರೆ ಪ್ರಾಂತಗಳಲ್ಲಿ ಸೇರಿಕೊಂಡಿಲ್ಲ? ಸದ್ಯದ ಆಡಳಿತದ ಅನುಕೂಲಕ್ಕೆಂದು ಇಡಿಯಿಡಿಯ ಜಿಲ್ಲೆಗಳನ್ನು ಹಂಚಲಾಗಿದೆಯೆಂಬ ಸಮಾಧಾನದಿಂದ ಕನ್ನಡಿಗರು ಸುಮ್ಮಗಿದ್ದು ಬಿಟ್ಟರೆ, ಇನ್ನುಳಿದ ಪ್ರಾಂತದವರು ತಮಗೆ ದೊರೆಯಬಹುದಾದ ಸೀಮೆಯ ವಿಷಯದಲ್ಲಿಯೂ, ದೊರೆಯಲಾಗದ ಸೀಮೆಯ ವಿಷಯದಲ್ಲಿಯೂ ಹೂಲಿಯನ್ನೇ ಎಬ್ಬಿಸಿಬಿಟ್ಟಿದ್ದಾರೆ. ಇನ್ನೊಬ್ಬರ ಪ್ರದೇಶ ಕರ್ಣಾಟಕದಲ್ಲಿರುವುದು ಅನ್ಯಾಯವೆಂದು ಹೇಳುವ ನ್ಯಾಯಬುದ್ಧಿಯವರು, ಕನ್ನಡ ಪ್ರದೇಶವೂ ಇನ್ನೊಂದು ಪ್ರಾಂತದಲ್ಲಿರಬಾರದೆಂಬ ನಿರ್ಣಯವನ್ನು ಕೊಟ್ಟೇ ಕೊಡುವರಲ್ಲ!—ಆದರೆ ಆದಕ್ಕಾಗಿಯೂ ಕನ್ನಡಿಗರು ಬಾಯ್ಬಿಟ್ಟು ತಮ್ಮ ನ್ಯಾಯವನ್ನು ವಿವರಿಸಬೇಕಲ್ಲವೇ?

### ಕರ್ಣಾಟಕ ಸಾಹಿತ್ಯಸಮ್ಮೇಳನವೂ ಜಮುಖಂಡಿಯ ಅಧಿಪತಿಗಳೂ

ಈ ಸಲದ ಡಿಸೆಂಬರ್ ತಿಂಗಳಲ್ಲಿ, ಜಮುಖಂಡಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಸೇರಲಿರುವುದು. ಈಗಾಗಲೆ ಸ್ವಾಗತಸಮಿತಿಯೂ ನಿರ್ಮಾಣವಾಗಿ, ಅದು ಕಾರ್ಯೋನ್ಮುಖವಾಗಿರುವುದು. ಜಮುಖಂಡಿಯ ಸಂಸ್ಥಾನದ ಜನತೆ ಈ ಸಮ್ಮೇಳನವನ್ನು ಯಶಸ್ವಿಯಾಗಿ ನೆರವೇರಿಸಬಹುದು, ಇದೇನು ದೊಡ್ಡವಿಷಯವಲ್ಲ: ಆದರೆ ಜಮುಖಂಡಿಯ ಅಧಿಪತಿಗಳು ಈ ಸಂದರ್ಭದಲ್ಲಿ ಕನ್ನಡದ-ಕರ್ಣಾಟಕದ ಬಗೆಗಿರುವ ತಮ್ಮ ಕೃತಜ್ಞತಾಭಾವವನ್ನು ಹೇಗೆ ವ್ಯಕ್ತಪಡಿಸುವರೆಂಬುದನ್ನು ನೋಡಬೇಕಾಗಿದೆ. ಅವರು ಹುಟ್ಟಿಬಳೆದುದು ಕರ್ಣಾಟಕದಲ್ಲಿ, ತಿನ್ನುವ ಅನ್ನವು ಕರ್ಣಾಟಕದ್ದು; ಕುಡಿಯುವ ನೀರು ಕನ್ನಡ ಹಿರಿಯಹೊಳೆಯದು! ಹೀಗಿರುವಾಗ ಕನ್ನಡದ ಋಣವನ್ನು ತೀರಿಸುವಂತಹ ಯಾವ ಕಾರ್ಯವು ನಡೆದಿದೆ ಅವರಿಂದ? ಗಾಯಕವಾಡ, ಇಂದೂರ್ ಗ್ವಾಲಿಯೇರ್ ಮೊದಲಾದ ಸಂಸ್ಥಾನಾಧೀಶರ ಮನೆಮಾತು, ಮರಾಟಿಯಾಗಿದ್ದರೂ ಆಡಳಿತದಲ್ಲಿ ಪ್ರಜಾಭಾಷೆಯಾದ ಗುಜರಾತೀ-ಹಿಂದೀ ಭಾಷೆಗಳಿಗೆ ಪ್ರಾಧಾನ್ಯವುಂಟು. ಆ

CC-0. Jangamwadi Math Collection. Digitized by eGangotri

ಭಾಷೆಗಳ ಸಾಹಿತ್ಯಪ್ರಚಾರದಲ್ಲಿ, ಆಯಾ ಸಂಸ್ಥಾನಗಳಿಂದ ಸಹಾಯ-ಸಹಾನುಭೂತಿಯೂ ಸಾಕಷ್ಟು ದೊರೆಯುತ್ತಿದೆ. ಉತ್ತರಕರ್ಣಾಟಕ ಸಂಸ್ಥಾನಗಳ ಅಧಿಪತಿಗಳೂ ಅವರ ಅಡಿಯಲ್ಲಿ ಅಡಿಯಿಟ್ಟರೆ, ಕನ್ನಡದ ಋಣವನ್ನು ಕೆಲಮಟ್ಟಿಗೆ ಇಳಿಸಿದಂತಾದೀತು. ಅಲ್ಪ ಸಂತುಷ್ಟರಾದ ಕನ್ನಡ ಜನರು ಅದನ್ನೇ ದೊಡ್ಡ ಉಪಕಾರವೆಂದು ಕೊನೆದು ಕೊಂಡಾಡಬಹುದು.

ನಾಳೆಯ ಸಾಹಿತ್ಯಸಮ್ಮೇಳನವು ಯಶಸ್ವಿಯಾಗಿ ಜರುಗುವಂತೆ ಜಮಖಂಡಿಯ ಅಧಿಪತಿಗಳು ಸಂಚಾಲಕರಿಗೆ ಎಲ್ಲ ಬಗೆಯ ಅನುಕೂಲತೆಗಳನ್ನೂ ಒದಗಿಸಿಕೊಡುವುದಲ್ಲದೆ, ಸಮ್ಮೇಳನಕಾಲದಲ್ಲಿ ಕೂಡಿದ ಕನ್ನಡಸಾಹಿತಿಗಳ ಪರಿಚಯವನ್ನು ಮಾಡಿಕೊಳ್ಳುವಂತಹ ಸಂದರ್ಭವನ್ನು ಕಲ್ಪಿಸಬೇಕು. ದೇಶ-ಕಾಲ ಪರಿಸ್ಥಿತಿಗಳ ಕಲ್ಪನೆಯು ಪ್ರಜೆಗಳಿಗಿಂತ ಪ್ರಜಾಧಿಪತಿಗೇ ಅವಶ್ಯವಾಗಿ ಇರಬೇಕು. ನಿರ್ಜೀವವಾದ ರಾಜಪೀಠದಲ್ಲಿ ಕುಳಿತು ಮೆರೆಯುವ ರಾಜರಿಗಿಂತ, ಸಜೀವವಾದ ಪ್ರಜಾಹೃದಯಪೀಠದಲ್ಲಿ ಕುಳಿತು ನಲಿಯುವ ರಾಜರ ರಾಜ್ಯದಲ್ಲಿ, ಸುಖ-ಸಮಾಧಾನಗಳು ಅನಾರತವೂ ನೆಲಸಿರುವುವು. ತಾನಾಗಿ ಒದವಿ ಬಂದಿದ್ದ ಪ್ರಜಾಪ್ರೀತಿಸಂಪಾದನೆಯ ಸಂದರ್ಭವನ್ನು—ದುರಭಿಮಾನಿಗಳಾದ ಕರ್ತವ್ಯವಿಮುಖರ ಮಾತಿಗೆ ಕಿವಿಗೊಡದೆ—ಯೋಗ್ಯರೀತಿಯಲ್ಲಿ ಅವರು ಉಪಯೋಗಮಾಡಿಕೊಳ್ಳಬೇಕೆಂದು ನಮ್ಮ ಕೋರಿಕೆ. ಸಮ್ಮೇಳನದ ಸಂಚಾಲಕರೂ ತಮ್ಮ ಅಧಿಪತಿಗಳಲ್ಲಿ, ಇದರ ವಿಷಯಕ್ಕೆ ನಿರ್ದಾಕ್ಷಿಣ್ಯಭಾವದಿಂದ ನೆರವನ್ನು ಕೇಳಿಕೊಳ್ಳಬೇಕೆಂದು ನಮ್ಮ ಸೂಚನೆ.



## ಹಿಂದುಸ್ಥಾನ



### ವೆಜ್‌ವುಡ್ ಕಮಿಟಿಯ ವರದಿ

ಹಿಂದುಸ್ಥಾನ್ ಸರಕಾರದ ಆಧಿಪತ್ಯಕ್ಕೊಳಪಟ್ಟ ರೈಲುದಾರಿಗಳ ವಿಷಯಕ್ಕೆ ವಿಮರ್ಶೆಯನ್ನು ಮಾಡಿ, ಅವುಗಳ ಉತ್ಪನ್ನವು ಬೆಳೆಯುವ ಬಗೆ ಹೇಗೆಂಬುದನ್ನೂ, ಮೋಟಾರು-ಉಗೆಬಂಡಿಗಳಲ್ಲಿ ನಡೆದಿದ್ದ ಮೇಲಾಟವು ಕಡಿಮೆಯಾಗಿ ರೈಲ್ವೆಗಳ ಪರಿಸ್ಥಿತಿಯು ಯಾವ ರೀತಿಯಿಂದ ಅಚ್ಚುಕಟ್ಟಾದೀತೆಂಬುದನ್ನೂ, ರೈಲ್ವೆಗಳ ಆಯವ್ಯಯಗಳ ಬಾಯಗೂಡಿಸೂವಿಕೆಯ ಲೆಕ್ಕವನ್ನು ಆದಷ್ಟು ಕಡಿಮೆಯ ಅವಧಿಯಲ್ಲಿ ಹೇಗೆ ಮಾಡಲಿಕ್ಕೆ ಬಂದೀತೆಂಬುದನ್ನೂ, ವಿಚಾರಿಸಿ ಸೂಚನೆಗಳನ್ನು ಕೊಡಬೇಕೆಂದು, ಹಿಂದುಸ್ಥಾನ್ ಸರಕಾರವು ಒಂದು ಕಮಿಟಿಯನ್ನು ಏರ್ಪಡಿಸಿತ್ತು. ಸರ್ ರಾಲ್ಫ್ ವೆಜವುಡ್, ಮಿ. ಸ್ಟೇನರ್ ಇವರೇ ಆ ಕಮಿಟಿಯ ಸದಸ್ಯರು. ೧೯೩೬ ನೆಯ ಇಸ್ವಿಯ ನವ್ಹೆಂಬರ್ ೧೯ ನೆಯ ತಾರೀಖಿನ ದಿನ ಆ ಕಮಿಟಿಯು ಮುಂಬಯಿಗೆ ಬಂದು ಕಾರ್ಯವನ್ನು ಕೈಕೊಂಡಿತು. ಕಳೆದ ಜೂನ್ ೧ ನೆಯ ತಾರಿಖಿಗೆ ಕಮಿಟಿಯ ವರದಿಯ ಮೇಲೆ ಸದಸ್ಯರ ಸಹಿಯಾಗಿ, ಮುಂದೆ ಜೂನ್ ೨೭ ನೆಯ ತಾರಿಖಿಗೆ ಅದು ಪ್ರಸಿದ್ಧವಾಯಿತು. ಕಮಿಟಿಯು ಮಾಡಿದ ಮುಖ್ಯ ಮುಖ್ಯ ಸೂಚನೆಗಳೆಂದರೆ ಇವು:—

(೧) ಇನ್ನೂ ಕೆಲವು ದಿನಗಳವರೆಗೂ ಹಿಂದೀ ರೈಲ್ವೆಗಳ ಆದಾಯವು, ಮೂಲಧನದ ಮೇಲಿನ ಬಡ್ಡಿಯನ್ನು ತೀರಿಸಿ ಉಳಿತಾಯವಾಗುವಷ್ಟು ಬೆಳೆವಣಿಗೆ ಹೊಂದಲಾರದೆಂದು ತೋರುವುದು. ಉಗೆಬಂಡಿಗಳಿಂದ ಹಿಂದುಸ್ತಾನ್ ಸರಕಾರಕ್ಕೆ ಹೆಚ್ಚಿನ ಪ್ರಾಪ್ತಿಯಾಗಬಹುದೆಂದು ಭಾವಿಸಲು ಎಡೆಯೇ ಇಲ್ಲ. ಸಾಮಾನ್ಯ ಅಂದಾಜುಪತ್ರಿಕೆಯಲ್ಲಿ, ರೈಲ್ವೆಗಳ ಬಗ್ಗೆ ಮಾಡಬೇಕಾದ ವೆಚ್ಚದ ಹೊರೆಬೀಳದಂತಿದ್ದರೆಯೆ ಅವು ಗಳಿಸಿದಂತೆ.

(೨) ರೈಲ್ವೆಗಳ ಪ್ರತಿಯೊಂದು ವಿಭಾಗದಲ್ಲಿಯೂ ಕಡಿತವನ್ನು ಮಾಡಬೇಕಾಗಿದೆ. ಹಣವುಳಿಸುವ ಮಾರ್ಗವನ್ನು ಕಮಿಟಿಯು ಸೂಚಿಸಿದುದು ಹೀಗೆ: ಉಗೆಬಂಡಿಗಳ ವೇಗವನ್ನು ಹೆಚ್ಚುಮಾಡಿ, ಅವುಗಳಿಗೆ ಅನುಕೂಲವಾದ ವೇಳೆಗಳನ್ನು ಯೋಜಿಸಿಕೊಡಬೇಕು. ಹಾನಿಗೆ ಕಾರಣವಾದ ರೈಲುದಾರಿಗಳನ್ನು ನಿಲ್ಲಿಸಿಬಿಡಲಿಕ್ಕೂ ಬರುವಂತಿದೆ. ಸಂಬಳದಲ್ಲಿಯೂ ಕೂಲಿಯಲ್ಲಿಯೂ ಈಗಿದ್ದುದಕ್ಕಿಂತ ಕಡಿಮೆಮಾಡಲಿಕ್ಕೆ ಬರುವಂತಿಲ್ಲ. ಕೆಲವು ಸ್ಥಳಗಳನ್ನು ಕಡಿಮೆಮಾಡಿ ಕಡಿತವನ್ನೇನೋ ತೋರಿಸಲಾಗಿದೆ, ಆದರೆ ಅದರಿಂದ ರೈಲ್ವೆಗಳ ಕಾರ್ಯಕ್ಷಮತೆಗೆ ಅಡ್ಡಿಯೊದಗಿದೆ.

(೩) ರೈಲ್ವೇ ಕೆಲಸಗಾರರ ಲಂಚಗುಳಿತನವನ್ನೂ ಬಾಯಬಡಕತನವನ್ನೂ ಕಡಿಮೆ ಮಾಡುವ ಪ್ರಯತ್ನಗಳು ನಡೆಯಬೇಕು.

(೪) ಉಗೆಬಂಡಿಗಳಿಂದ ವ್ಯಾಪಾರಿಗಳು ಹೇಗೆ ಹೇಗೆ ಲಾಭಪಡೆಯಬಹುದೆಂಬುದನ್ನು ಅವರಿಗೆ ತಿಳಿವಳಿಕೆ ಮಾಡಿಕೊಡುವುದರ ಪ್ರಚಾರವಾಗಬೇಕಾದುದು ಅಗತ್ಯ. ಪ್ರಾರಂಭಕ್ಕೆ ಗ್ರೇಟ್‌ಬ್ರಿಟನ್ನಿನಲ್ಲಿಯ ಅನುಭವಿಕರಾದ

CC-0. Jangamwadi Math Collection. Digitized by eGangotri

ಬಲ್ಲಿದರನ್ನು ಬರವಮಾಡಿಕೊಳ್ಳುವುದು ಒಳ್ಳೆಯದು. ಭಾರವನ್ನೊಯ್ಯುವುದರ ಬಗ್ಗೆ ಬಾಡಿಗೆಯ ದರವನ್ನು ಹೆಚ್ಚಿಸಬೇಕಾದುದು ವ್ಯಾಪಾರದ ಅಭಿವೃದ್ಧಿಯನ್ನು ಅವಲಂಬಿಸಿಕೊಂಡಿದೆ. ಅದರ ವಿಷಯಕವಾದ ಪ್ರಯತ್ನಗಳನ್ನು ನಡೆಯಿಸಲಿಕ್ಕೆ ಈಗಿನ ಕಾಲವು ಅನುಕೂಲವಾಗಿಲ್ಲ. (ಆಯಾತ-ನಿರ್ಗತ ವ್ಯಾಪಾರಗಳ ಅಭಿವೃದ್ಧಿಗೆ ರೈಲ್ವೇ ಬಾಡಿಗೆಯ ದರಗಳೇ ತುಂಬ ಪೋಷಕವಾಗಿರುತ್ತವೆಂಬುದರ ವಿಚಾರವನ್ನು ಕಮಿಟಿಯವರು ಮಾಡಿಯೆ ಇಲ್ಲ.)

(೫) ರೈಲ್ವೇ ಮತ್ತು ಮೋಟಾರುಗಳ ಬಾಡಿಗೆಯ ಪ್ರಮಾಣದಲ್ಲಿ ಏಕಸೂತ್ರತೆಯಿರಬೇಕಾದುದು ಅತ್ಯಾವಶ್ಯಕ. ಕೇಂದ್ರಸರಕಾರವು ಇಟ್ಟುಕೊಂಡಿದ್ದ ಧೋರಣಕ್ಕೆ ಅನುಸಾರವಾದ ನಿಯಂತ್ರಣಗಳನ್ನೇ, ತಮ್ಮ ತಮ್ಮಲ್ಲಿಯ ವಾಹನಗಳ ವಿಷಯದಲ್ಲಿ ಪ್ರಾಂತೀಯ ಸರಕಾರಗಳು ಜಾರಿಯಲ್ಲಿ ತರಬೇಕು. ಪ್ರಾದೇಶಿಕ ಲಾಯಸೆನ್ಸುಗಳನ್ನು ಕೊಡುವ ಪದ್ಧತಿಯನ್ನೆ—ಸಂದರ್ಭವನ್ನರಿತು—ಪ್ರಾರಂಭಿಸಬೇಕು. ಮೋಟಾರಿನ ಮೇಲೆ ಹಾಕುವ ಸುಂಕದ ವಿಷಯದಲ್ಲಿ ಎಲ್ಲ ಪ್ರಾಂತ್ಯಗಳೂ ಒಂದೇ ರೀತಿಯನ್ನು ಅನುಸರಿಸಬೇಕು. ಪ್ರಾಂತೀಯ ಸರಕಾರಗಳು ಹೊಸ ಹೊಸ ದಾರಿಗಳನ್ನು ಪ್ರಾರಂಭಿಸುವುದಕ್ಕಿಂತ ಮೊದಲು, ತಮ್ಮ ಯೋಜನೆಯ ಬಗ್ಗೆ ಕೇಂದ್ರಸರಕಾರದ ಸಮ್ಮತಿಯನ್ನು ಪಡೆಯುತ್ತಿರಬೇಕು. ದಾರಿಗಳಲ್ಲಿಯ ವಾಹನವ್ಯವಸ್ಥೆಯನ್ನು, ರೈಲ್ವೇಗಳು ತಮ್ಮ ಅಧೀನದಲ್ಲಿಟ್ಟುಕೊಳ್ಳುವಂತೆ ಏರ್ಪಾಡುಗಳಿರಬೇಕು. ರೈಲ್ವೇಗಳು ತಮ್ಮ ಸ್ವಂತದ ಮೋಟಾರುಗಳಲ್ಲಿಯೆ ಮನುಷ್ಯರನ್ನೂ ಸಾಮಾನುಗಳನ್ನೂ ತರುವ—ಕಳಿಸುವ ವ್ಯವಸ್ಥೆಯನ್ನು ಮಾಡಿ, ಮೇಲಾಟವನ್ನು ಎದುರಿಸಬೇಕು. ಒಳದಾರಿಗಳಲ್ಲಿ ಓಡಾಡುವ ವಾಹನಗಳ ಮೇಲಾಟದ ಮೂಲಕ, ರೈಲ್ವೇಗಳು ವರುಷಕ್ಕೆ ಸುಮಾರು ೪॥ ಕೋಟಿ ರೂಪಾಯಿಗಳಷ್ಟು ಹಾನಿಯನ್ನು ಹೊಂದುತ್ತಿವೆ; ಬೇಗನೆ ಇದಕ್ಕೆ ಉಪಾಯ ಯೋಜನೆಯನ್ನು ಮಾಡದಿದ್ದಲ್ಲಿ, ಮುಂದೆ ಈಗಿನದರ ಇಮ್ಮಡಿಯಷ್ಟು ಹಾನಿಯನ್ನು ಸಹಿಸಬೇಕಾದೀತು. ಇನ್ನೊಂದು ಮಾತೆಂದರೆ ರೈಲ್ವೇಗಳು ಜನಪ್ರೀತಿಯನ್ನು ಸಂಪಾದಿಸುವುದಕ್ಕೆ ಹೆಣಗಬೇಕು.

(೬) ಕೆಲವೊಂದು ರೈಲ್ವೆಗಳನ್ನು ಒಟ್ಟುಗೂಡಿಸಲಿಕ್ಕೆ ಬರುವಂತಿದೆ. ಕಾಲಾಂತರದಲ್ಲಿ ಅದನ್ನು ಮಾಡಿಬಿಡಬೇಕು. ಸರಕಾರವು ಹೊಸ ರೈಲ್ವೆಗಳನ್ನು ತನ್ನ ಕಡೆಗೆ ತೆಗೆದುಕೊಳ್ಳಬಹುದಾಗಿದ್ದ ಅಧಿಕಾರದ ಉಪಯೋಗವನ್ನು, ೧೯೫೫ನೆಯ ಇಸ್ವಿಯವರೆಗೆ ಮಾಡಲಾಗದು.

(೭) ರೈಲ್ವೆಗಳ ಸವಕಳಿಯ ಫಂಡಿನಲ್ಲಿ, ಕನಿಷ್ಠ ೩೦ ಕೋಟಿ ರೂಪಾಯಿಗಳಷ್ಟು ಸಂಗ್ರಹವಿರಲೇ ಬೇಕು. ಲೆಕ್ಕದ ವಿಚಾರದಲ್ಲಿ ಕೈಕೊಂಡ ಹೊಸಪದ್ಧತಿಯ ಸಲುವಾಗಿ, ೧ಕೋಟಿ ೨೫ಲಕ್ಷ ರೂಪಾಯಿಗಳನ್ನು ಹೆಚ್ಚಿಗೆ ಒದಗಿಸುವ ಏರ್ಪಾಡಾಗಬೇಕು. ಕಾದಿಟ್ಟ ನಿಧಿಯನ್ನೂ ಹೆಚ್ಚಿಸುವುದು ಅಗತ್ಯವಾಗಿದೆ. ಇಷ್ಟೆಲ್ಲವಾದಮೇಲೆ ಲಾಭದ ಹೆಚ್ಚಿನ ಉಳಿತಾಯವಾದೀತೆಂಬುದರ ಬಗ್ಗೆ ಅಷ್ಟೊಂದು ಆಶೆಯನ್ನು ಹಿಡಿಯುವಂತಿಲ್ಲ.

(೮) ಹಿಂದೀ ರೈಲ್ವೆಗಳ ವ್ಯವಹಾರದಲ್ಲಿ, ರಾಜಕೀಯ ವಿಚಾರಗಳ ಓಡಾಟವು ನಡೆಯಕೂಡದು. ಇನ್ನು ಮೇಲೆ ರೈಲ್ವೇಗಳಿಂದ ಕೇಂದ್ರ ಸರಕಾರಕ್ಕೆ ಹೆಚ್ಚಿನ ಲಾಭವು ದೊರೆಯುವಂತಿಲ್ಲ; ಆದುದರಿಂದ ಡಿಬೆಂಚರುಗಳನ್ನು ಧಾರಣಮಾಡುವವರು ಇರಿಸಬೇಕಾದಷ್ಟು ಲಕ್ಷ್ಯವನ್ನು ಮಾತ್ರ ಅದು ಸಂಯುಕ್ತ ರೈಲ್ವೇ ಮಂಡಳಗಳ ವ್ಯವಹಾರದ ವಿಷಯದಲ್ಲಿ ಇರಿಸತಕ್ಕದ್ದು. ಫೆಡರಲ್ ಅಧಿಕಾರಿಗಳು ರೈಲ್ವೆಬೋರ್ಡಿಗೆ ಕೈತುಂಬ ಅಧಿಕಾರವನ್ನು ಕೊಟ್ಟುಬಿಡಬೇಕು. ರೈಲ್ವೆಗಳು ತಮ್ಮ ಬಂಡವಾಳವನ್ನು ತಾವೇ ನಿರ್ಮಿಸಿಕೊಳ್ಳಲು ಬರುವಂತೆ ಯಾವ ಏರ್ಪಾಡುಗಳನ್ನು ಮಾಡಬೇಕೆಂಬುದರ ಕಡೆಗೆ, ಫೆಡರಲ್ ರೈಲ್ವೇ ಅಧಿಕಾರಿಗಳು ಸಾಕಷ್ಟು ಲಕ್ಷ್ಯವನ್ನು ಕೊಡಬೇಕು.

## ವರದಿಯ ಫಲಶ್ರುತಿಯೇನು?

ಕಮಿಟಿಯ ಅಭಿಪ್ರಾಯದಂತೆ ರೈಲ್ವೆಗಳ ಸಾಂಪತ್ತಿಕ ಸ್ಥಿತಿಯು ಮೆಲ್ಲಮೆಲ್ಲಗೆ ಸುಧಾರಿಸುತ್ತಿದೆ; ಹೀಗೆಯೆ ಅನೇಕ ಕಾಲ ಹೋಗುವುದು. ಅನೇಕರ ಅಪೇಕ್ಷೆ: ರೈಲ್ವೆಗಳ ಕಡೆಯಿಂದ ಸರಕಾರಕ್ಕೆ ಸಾಕಷ್ಟು ಲಾಭದೊರೆತೀತೆಂದು. ಆದರೆ ಅವರ ಅಪೇಕ್ಷೆಗೆ ನಿರಾಶೆಯ ಹೊರತು ಬೇರೆ ಫಲವಿಲ್ಲ. ಬಂಡವಾಳದ ಬಡ್ಡಿ, ಸವಕಳಿ, ಕಾದಿಟ್ಟನಿಧಿ ಇವುಗಳಿಗೆ ಮಾತ್ರ ಹಾಗೂ ಹೀಗೂ ಸಾಲುವಷ್ಟು ರೈಲ್ವೇಗಳಿಗೆ ಆದಾಯ ದೊರೆಯುವುದು. ಎಂತಲೆ ಉಳಿತಾಯದ ಭಾಗವು ಸರಕಾರದ ಬೊಕ್ಕಸದ ಮುಖವನ್ನೇ ಕಾಣುವಂತಿಲ್ಲ. ಪ್ರಾಂತಿಕ ಸ್ವಾಯತ್ತತೆಯ ರಾಜ್ಯಘಟನೆಯು ಯಶಸ್ವಿಯಾಗಿ ನಡೆಯುವದಕ್ಕಾಗಿ, ಪ್ರಾಂತಿಕ ಸರಕಾರಗಳಿಗೂ ರೈಲ್ವೆಗಳ ಹುಟ್ಟುವಳಿಯಲ್ಲಿ ಪಾಲುದೊರೆಯಲೇಬೇಕಾಗುವುದು. ಹಾಗೆ ಪಾಲುಮಾಡಿ ಕೊಡುವ

CC-0. Jangamwadi Math Collection. Digitized by eGangotri

ಸಾಮರ್ಥ್ಯವು ಕೇಂದ್ರಸರಕಾರಕ್ಕೆ ಬರಬೇಕಾದರೆ ರೈಲ್ವೆಗಳಿಂದ ಅದಕ್ಕೆ ಸಾಕಷ್ಟು ಲಾಭವು ಸಿಕ್ಕಬೇಕಾಗುವುದು. ಆದರೆ ಮೇಲೆ ಹೇಳಿದ ವೆಜವುಡ್ ಕಮಿಟಿಯವರು, ಈ ಆಶೆಯ ಬುರುಡಿಯನ್ನು ಒಡೆದೇ ಬಿಟ್ಟಿರುವರಲ್ಲದೆ, ಹೊಸ ರಾಜಕೀಯ ಸುಧಾರಣೆಯ ದಾರಿಯಲ್ಲಿ ಕಂಟಕಗಳನ್ನು ತಂದು ಒಡ್ಡಿರುವರು. ರೈಲ್ವೆಗಳ ಹಿತಸಂರಕ್ಷಣೆಗಾಗಿ ಮೋಟಾರುಗಳ ಮೇಲೆ ನಿಯಂತ್ರಣವನ್ನು ಹಾಕಬೇಕೆಂದು ಕಮಿಟಿಯವರ ನಿಷ್ಠುರ ಅಭಿಪ್ರಾಯ. ಇದರಿಂದ ಆಗುವುದೇನೆಂದರೆ ಪ್ರಾಂತಿಕ ಸರಕಾರದ ವಶದಲ್ಲಿದ್ದ ಒಂದು ಲಾಭದಾಯಕವಾದ ಉದ್ಯಮದ ಕಾಲುಕುಂಟುಬಿದ್ದು, ಅದರ ಹುಟ್ಟುವಳಿಯಲ್ಲಿ ಕೆಲಮಟ್ಟಿಗೆ ಕೊರತೆಬೀಳುವುದು. ರೈಲ್ವೆಗಳ ಹುಟ್ಟುವಳಿಯು ಹೆಚ್ಚಿ, ಭಾರತೀಯರ ಕರದ ಹೊರೆಯನ್ನು ಕಡಿಮೆಮಾಡಬಹುದೆಂಬ ನಿರೀಕ್ಷೆಗೆ ವೆಜವುಡ್ ಕಮಿಟಿಯ ವರದಿಯಲ್ಲಿ ಅವಕಾಶವೇ ಇಲ್ಲ; ಇದೇ ವರದಿಯ ಫಲಶ್ರುತಿ.

## ಬೆಡನ್‌ಪಾವೆಲ್ಲರ ಅರಿವುಮರೆವಿನ ಮಾತು

ಲಾರ್ಡ್ ಬೆಡೆಲ್ ಪಾವೆಲ್‌ರವರು ಬಹಳ ದಿನಕ್ಕೆ ಬಾಯಿತೆರೆದರು. ಹಿಂದುಸ್ಥಾನದಲ್ಲಿ ನಡೆದ ಚಳವಳಿಯ ಕೂಗು ಅವರ ಕಿವಿಯಲ್ಲಿ ಸೇರಲು ಇಷ್ಟೊಂದು ತಡೆಯಾಯಿತೋ! ಆಡಿದ ಮಾತನ್ನು ಹೇಗೆ ತಿರುಗಿಸಬೇಕೆಂಬ ಯೋಚನೆಯ ಮೂಲಕ ತಡೆಯಾಯಿತೋ! ಇಂಗ್ಲಿಷ್ ವೃತ್ತಪತ್ರಕಾರರ ಮನವನ್ನು 'ಮೆಚ್ಚಿಸಲಿಕ್ಕೆಂದೇನೋ ಅಂದು ಬಾಯಿಗೆ ಬಂದಂತೆ ಮಾತನಾಡಿದ ಮುದುಕ, ಅದರ ಮೇಲೆ ಸಹಾನುಭೂತಿಯ ಬಣ್ಣವನ್ನು ಬಳಿಯಲು ಹೊರಟಿದ್ದಾನೆ. ಸಹಾಯಕ್ಕೆ ಮುದುಕಿ ಹೆಂಡತಿಯೂ ಮುಂದುವರಿದಿದ್ದಾಳೆ. ಒಂದು ಕಾಲವಿದ್ದಿತು: ಹಿಂದುಸ್ಥಾನಕ್ಕೆ ಬಂದು ತಿಂದುಂಡು ಹೋದ ಬಹುಜನ ಬಿಳಿಮೊಗದವರು, ತಮ್ಮ ದೇಶಕ್ಕೆ ಹೋಗಿ ಮಾಡುವ ಕೆಲಸವೆಂದರೆ, ಭಾರತಿಯರನ್ನು ಬಗೆಬಗೆಯಿಂದ ಬೀಳುಗಳೆದು ನುಡಿಯುವುದು. ಆಗ ಅವರಾಡಿದುದು ಬಹುಜನಕ್ಕೆ ತಿಳಿಯುತ್ತಿರಲಿಲ್ಲ; ತಿಳಿದವರು ಅವರ ಮಾತಿಗೆ ತಲೆದೂಗಿ ಒಪ್ಪುತ್ತಿದ್ದರು. ನಮ್ಮವರಿಗೆ ಬಿಳಿಯರ ಆಚಾರ-ಸಂಸ್ಕೃತಿಗಳ ಪರಿಚಯವು ಸಾಕಷ್ಟಿರದುದರಿಂದಲೂ, ಅವರು ನಮ್ಮನ್ನಾಳುತ್ತಿರುವುದರಿಂದಲೂ, ಅವರೆಲ್ಲ ದೇವರ ಮುರುಕುಗಳೆಂದು ನಮ್ಮವರು ತಿಳಿಯುತ್ತಿದ್ದರು; ಎಂತಲೆ ಅವರು ಆಡಿದುದನ್ನೆಲ್ಲ ಆಡಿಸಿಕೊಂಡು ಬಾಯಿಮುಚ್ಚಿಕೊಂಡಿರುತ್ತಿದ್ದರು. ಮುದುಕ ಬೆಡನ್ ಪಾವೆಲ್ ಅವರೂ ಹಿಂದಿನವರ ಪರಂಪರೆಯನ್ನು ಎತ್ತಿಹಿಡಿಯಲು ಹೋಗಿ, ಈಗ ಏನು ಮಾಡಬೇಕೆಂಬುದು ತಿಳಿಯದೆ, ಒಣಗಿದ ಗಂಟಲನ್ನು ಉಗುಳಿನಿಂದ ಹಸಿಮಾಡಿಕೊಳ್ಳುತ್ತ ಕುಳಿತಿರುವರು. ಸಾಮ್ರಾಜ್ಯದ ಪುರಸ್ಕರ್ತ್ಯಗಳು—ತಮಗೆ ಸ್ಕೌಟ್‌ಚಳವಳಿಯು ಅವಶ್ಯಕವಾದುದರಿಂದ ಬೆಡನ್ ಪಾವೆಲ್ ಅವರ ಅಪರಾಧವನ್ನು ಮರೆಮಾಡಲು ಹೆಣಗುತ್ತಿರುವರು.

ಪಾಶ್ಚಾತ್ಯಸಂಸ್ಕೃತಿಯ ಒಳಗುಟ್ಟುಗಳೆಲ್ಲ ಇಂದು ಭಾರತೀಯರಿಗೆ ಗೊತ್ತಾಗಿವೆ. ಅವರೂ ಮನುಷ್ಯರ ಕುನ್ನಿಗಳೇ ಎಂಬುದು ಮನದಟ್ಟಾಗಿದೆ. ಸಭ್ಯತೆಯೆಂದರೇನೆಂಬುದೇ ಗೊತ್ತಿಲ್ಲದವರಿಂದ ಸಭ್ಯತೆಯನ್ನು ತಾವು ಕಲಿಯಬೇಕಾದುದೇನೂ ಇಲ್ಲವೆಂಬ ಮಾತು ನಮ್ಮವರಿಗೆ ಖಂಡಿತವಾಗಿದೆ. ಇಂದು ಭಾರತದ ಉದ್ಧಾರ ಬೆಡನ್‌ಪಾವೆಲ್ ಅವರಿಂದಲೂ ಆಗಬೇಕಾಗಿಲ್ಲ; ಅವರ ಸ್ಕೌಟ್ ಚಳವಳಿಯಿಂದಲೂ ಆಗಬೇಕಾಗಿಲ್ಲ. ಭಾರತದ ಉದ್ಧಾರ ಭಾರತೀಯರ ಆತ್ಮಶಕ್ತಿಯಿಂದ ಆಗಬೇಕಾಗಿದೆ! ಭಾರತೀಯ ತರುಣರ ಉತ್ಸಾಹ-ಪೌರುಷಗಳಿಂದ ಆಗಬೇಕಾಗಿದೆ! ಅಂತಹ ಆತ್ಮಶಕ್ತಿಯನ್ನು ತುಂಬುವ ಗುರುಗಳೂ, ಉತ್ಸಾಹ-ಪೌರುಷಗಳನ್ನು ಹೆಚ್ಚಿಸುವ ಸತ್ತ್ವಶಾಲಿಗಳೂ, ಭಾರತದಲ್ಲಿಯೂ ಇದ್ದಾರೆ. ಈಗ ಬೆಡನ್ ಪಾವೆಲ್ಲರು ಆಡಿದ ಮಾತನ್ನು ನಿಷೇಧಿಸುವುದಕ್ಕಾಗಿ ನಾವು ವೇಳೆಯನ್ನು ವೆಚ್ಚಮಾಡುವುದಕ್ಕಿಂತ, ತರುಣರಲ್ಲಿ ಸಂಘಟನೆಯಾಗುವಂತಹ ಯಾವುದಾದರೊಂದು ಚಳವಳಿಯನ್ನು—ಎಲ್ಲ ಪಕ್ಷದವರೂ ಸೇರಿ—ಕೈಕೊಳ್ಳುವುದು ಅವಶ್ಯಕ. ಆಡಿದುದರ ಬಗ್ಗೆ ಬರೀ ಕ್ಷಮೆಯನ್ನು ಕೇಳುವುದರಲ್ಲಿ ಯಾವ ಮಹತಿಯಿದೆ? ನಾವೇ ಕ್ಷಮಿಸಬೇಕು—ನಮ್ಮ ಕಾರ್ಯದಿಂದ ಅವರನ್ನು ಬೆರಗುಗೊಳಿಸಬೇಕು! ಇನ್ನು ಬೆಡನ್‌ಪಾವೆಲ್ಲರೊ, ಹಿಂದುಸ್ಥಾನದಲ್ಲಿ, ಇದುವರೆಗೆ ತಮ್ಮ ವಿಷಯದಲ್ಲಿದ್ದ ಗೌರವವನ್ನು ಕಾಯ್ದುಕೊಳ್ಳಬೇಕಾಗಿದ್ದಲ್ಲಿ, ಮಿಂಚಿ ಹೋದ ಮಾತಿಗಾಗಿ ಅವರು ವಿಷಾದವನ್ನು ವ್ಯಕ್ತಮಾಡಿ, ಕ್ಷಮೆಬೇಡುವುದು ಅತ್ಯಾವಶ್ಯಕವಾದುದು.

## ಬ್ಯಾ. ಸಾವರ್‌ಕರರ ಹಿಂದುತ್ವದ ಮೀಮಾಂಸೆ

ಬ್ಯಾ. ಸಾವರ್‌ಕರರವರು ಪುಣೆಯ ಒಂದು ಸಭೆಯಲ್ಲಿ 'ಹಿಂದೂಸಂಘಟನೆ' ಎಂಬ ವಿಷಯವನ್ನು ಕುರಿತು ಉಪನ್ಯಾಸಮಾಡಿದರು. ಸನಾತನ ಹಿಂದುಗಳೆಲ್ಲರ ವಿರೋಧವನ್ನು ಕಟ್ಟಿಕೊಂಡಿದ್ದ ಅವರ—'ಹಿಂದುತ್ವ'ದ ಬಗೆ

CC-0. Jangamwadi Math Collection. Digitized by eGangotri

ಗಿರುವ—ಕಲ್ಪನೆಯೇನಿರುವುದೆಂಬುದನ್ನು ತಿಳಿದುಕೊಳ್ಳ-ಬಹುದು ಅಂದಿನ ಅವರ ಉಪನ್ಯಾಸದಿಂದ. ಎಲ್ಲಕ್ಕೂ ಮೊದಲು 'ಹಿಂದುತ್ವವೆಂದರೇನು' ಎಂಬ ಮಾತನ್ನೆತ್ತಿ ಮಂಡನಮಾಡಿದುದು ಹೀಗೆ:—

"ಹಿಂದುತ್ವವೆಂದರೇನು? ಜನ್ಮಮಾತ್ರದಿಂದ ಜಾತಿ-ಭೇದವನ್ನು ಗಣಿಸಲಾಗದೆಂದು ಹೇಳುವವರೇ ಇಂದು ಇನ್ನೊಂದು ಬಗೆಯಲ್ಲಿ 'ಹಿಂದುಗಳ ಸಂಘಟನೆಮಾಡಿರಿ!' ಎಂದು ಹೇಳುವುದರ ಹುರುಳೇನು? 'ಅಂಧಪರಂಪರೆ-ಯನ್ನು ಬಿಟ್ಟುಬಿಡಿರಿ! ಜನ್ಮದಿಂದಾದ ಜಾತಿಗಳಲ್ಲಿಯ ಹೆಚ್ಚು-ಕಡಿಮೆತನವನ್ನು ತೊಡೆದುಹಾಕಿರಿ! ಧರ್ಮದ ಬಲುಮೆಯನ್ನು ದೂಡಿಹಾಕಿರಿ!' ಎಂದು ನಾನು ಹೇಳುವೆ-ನಾದರೂ 'ಹಿಂದುಗಳ ಸಂಘಟನೆಮಾಡಿರಿ!' ಎಂದೂ ಹೇಳುತ್ತಿರುವೆನಲ್ಲ....ಇದರ ಅರ್ಥವೇನು? ಇದರ ಅರ್ಥ-ವೇನೆಂದು ಕೇಳುತ್ತೀರಾ? ಹಿಂದುತ್ವವೆಂಬುದು ಹಿಂದೂ-ಧರ್ಮದಿಂದ ಬೇರೆಯಾಗಿರದಿದ್ದರೂ ಅದಕ್ಕಿಂತಲೂ ವ್ಯಾಪಕವಾಗಿದೆ. ಈಶ್ವರ, ಜೀವ, ಜಗತ್ತು ಇವುಗಳ ವಿಷಯವೆಲ್ಲ ಪಾರಮಾರ್ಥಿಕಧರ್ಮದ ತತ್ತ್ವಜ್ಞಾನವು; ಪ್ರತ್ಯಕ್ಷವಾದ ಐತಿಕ ಪರಿಸ್ಥಿತಿಗೆ ಅವುಗಳ ಸಂಬಂಧವಿಲ್ಲ. 'ಹಿಂದುಗಳಿಗೆಲ್ಲ ಒಂದೇ ಒಂದು ಧರ್ಮಗ್ರಂಥವಿದ್ದರೆ ಚೆನ್ನಾಗುವುದು!' ಎಂದು ಅನೇಕರು ಹೇಳುವರು; ಆದರೆ ಅಷ್ಟರಿಂದಲೆ ಯಾವ ಪ್ರಯೋಜನವೂ ಉಂಟಾಗಲಾರದು. ಏಕೆಂದರೆ ಮುಸಲ್ಮಾನರಿಗೆಲ್ಲ ಸೇರಿ ಒಂದೆಒಂದು 'ಕುರಾಣ'ವಿದ್ದರೂ, ಅದರ ಒಂದೊಂದು ಅಕ್ಷರಕ್ಕೂ ಬೇರೆ ಬೇರೆ ಅರ್ಥವನ್ನು ಹಚ್ಚುವ ಅಸಂಖ್ಯ ಭಾಷ್ಯಕಾರರು ಆಗಿ ಹೋಗಿ, ಒಬ್ಬರನ್ನೊಬ್ಬರು ಕಂಡರೆ ಆಗದಂತಹ ಪಂಥ-ಪಂಗಡಗಳು ಅವರಲ್ಲಿಯೂ ಹುಟ್ಟಿಕೊಂಡಿವೆ. ಹಿಂದೂ ಧರ್ಮದ ವಿಷಯವನ್ನು ಕುರಿತು ಮಾತನಾಡಬೇಕಾದಲ್ಲಿ, ಯಾವುದಾದರೂ ಒಂದೆಒಂದು ಗ್ರಂಥದ ಹೆಸರನ್ನೆತ್ತಿ ಹೇಳಲಿಕ್ಕೆ ಬರುವಂತಿಲ್ಲ. ಶಂಕರಾಚಾರ್ಯರು ಅದ್ವೈತ-ವನ್ನು ಎತ್ತಿಹಿಡಿದು ಹೇಳಿದರು. ರಾಮಾನುಜಾಚಾರ್ಯರು ವಿಶಿಷ್ಟಾದ್ವೈತವನ್ನು ಹೇಳಿದರು. ಹಾಗೆಯೆ ಮಧ್ವಾ-ಚಾರ್ಯರು, ಬುದ್ಧ ಇವರೆಲ್ಲ ಬೇರೆ ಇನ್ನೇನನ್ನೋ ಸಾರಿ-ದರು. ಇದನ್ನೆಲ್ಲ ನೋಡುತ್ತಿರುವಾಗ, ಧರ್ಮಗ್ರಂಥವು ಒಂದೇ ಇರುವುದರಿಂದ ಶಾಸ್ತ್ರೀಯ ಸಂಶೋಧನದ ಪ್ರಗತಿಗೆ ತಡೆಯುಂಟಾಗುವುದೆಂದೆನಿಸುವುದು. ಆದುದರಿಂದಲೆ ಒಂದು ತುದಿಯಿಂದ ಇನ್ನೊಂದು ತುದಿಯವರೆಗಿನ ಇಡಿಯ ವಿಶ್ವವೆ ಹಿಂದುಗಳ ಧರ್ಮಗ್ರಂಥವು. ಬೇರೆ ಬೇರೆ ತತ್ತ್ವಜ್ಞಾನ-ಗಳನ್ನು ಮನ್ನಿಸುವುದೂ ಬಿಡುವುದೂ ಪ್ರತಿಯೊಂದು ವ್ಯಕ್ತಿಯ ಸ್ವತಂತ್ರ ಪ್ರಶ್ನೆಯಾಗಿದೆ."

## ಹಿಂದುತ್ವದ ಒರೆಗಲ್ಲು

ಬ್ಯಾ. ಸಾವರ್‌ಕರರು ಮುಂದೆ ಮಾತನಾಡಿದುದು ಹೀಗೆ:—

"ಪಾರಲೌಕಿಕಕ್ಕೆ ಸಂಬಂಧಿಸಿದ ಧರ್ಮದ ಸಮಸ್ಯೆಯನ್ನು ಅವರವರ ಅನುಭೂತಿ — ಶ್ರದ್ಧೆಗಳಿಗೆ ಒಪ್ಪಿಸಿಕೊಟ್ಟಾದ ಮೇಲೆ, ಮನುಷ್ಯನ ಜೀವನದ ಮತ್ತೊಂದು ಭಾಗವಾದ 'ಪ್ರಾತ್ಯಕ್ಷಿಕ'ದ ಕಡೆಗೆ ದೃಷ್ಟಿಯಿಟ್ಟು ನೋಡಿದರೆ, ಆಗ ಮಾತ್ರ ಅಲ್ಲಿ ಏಕವಾಕ್ಯತೆಯುಂಟಾಗಲಿಕ್ಕೆ ತಡೆಯೇನೂ ತೋರುವುದಿಲ್ಲ. ಹಿಂದುಗಳ ಸಂಘಟನೆಗಾಗಿ ಅಥವಾ ಹಿಂದು-ತ್ವದ ಏಕೀಕರಣಕ್ಕಾಗಿ, ಯಾವ ನಾಲ್ಕೈದು ಮಾತುಗಳನ್ನು ಒರೆಗೆ ಹಚ್ಚಬೇಕಾಗಿದೆಯೋ ಅವುಗಳಲ್ಲಿ ಮೊದಲನೆಯದು ಭೌಗೋಲಿಕಸ್ಥಾನ; ಎರಡನೆಯದು ಭಾಷೆಯ ಏಕತೆಯು; ಮೂರನೆಯದು ಇತಿಹಾಸದ ಏಕತೆಯು; ನಾಲ್ಕನೆಯದು ಸಾಹಿತ್ಯಸಮಾನತೆ; ಐದನೆಯದು ಸಮಾನಶತ್ರುತ್ವ.

ನಿಸರ್ಗವು ಸ್ಪಷ್ಟವಾದ ಸೀಮಾರೇಷೆಗಳಿಂದ ಹಿಂದುಸ್ಥಾನವನ್ನು ನಿರ್ಮಿಸಿಬಿಟ್ಟಿರುವುದು. ಸಿಂಧುನದದಿಂದ ಪೂರ್ವ ಸಿಂಧುವಿನ ವರೆಗೂ, ಕಾಶ್ಮೀರದಿಂದ ಕನ್ಯಾಕುಮಾರಿಯು-ವರೆಗೂ ಇದೊಂದು ದೇಶವಿದೆ. ಗೊತ್ತಿಲ್ಲದ ಕಾಲ-ದಿಂದಲೂ ಈ ದೇಶಕ್ಕಿದ್ದ ನಿಶ್ಚಿತ ಮೇರೆಗಳಿವು. ಸಂಸ್ಕೃತಿಯ ಏಕೀಕರಣದ ಎರಡನೆಯ ಘಟಕವೆಂದರೆ ಭಾಷೆಯ ಏಕೀಕರಣ! ನಮ್ಮಲ್ಲಿ ಯಾವ ಭಾಷೆಯನ್ನು ತೆಗೆದು-ಕೊಂಡರೂ ಅದು ಸಂಸ್ಕೃತೋತ್ಪನ್ನವಿರುವುದು; ಇಲ್ಲದಿದ್ದರೆ ಸಂಸ್ಕೃತನಿಷ್ಠವಿರುವುದು. ಕೆಲಕೆಲವು ಸಂದರ್ಭಗಳಲ್ಲಿ ಏಕಭಾಷಾ — ಏಕದೇಶಗಳಿರದಿದ್ದರೂ ಏಕರಾಷ್ಟ್ರವಾಗಿರ-ಬಲ್ಲದು. 'ಪ್ಯಾನ್‌ಇಸ್ಲಾಮಿಝಮ್' ಎಂಬುದು ಅದರದೇ ಒಂದು ಮಾದರಿ. ಜ್ಯೂ ಜನರಿಗಂತೂ ದೇಶವೇ ಇಲ್ಲ. ಮುಷ್ಟಿಯಲ್ಲಿ ಮರಳನ್ನು ತೆಗೆದುಕೊಂಡು ಬಿಸುಡಿ-ದಂತೆ, ಜ್ಯೂ ಜನರು ಜಗತ್ತಿನಲ್ಲಿ ಎಲ್ಲೆಲ್ಲಿಯೋ ಚೆದರಿ-ಬಿಟ್ಟಿದ್ದಾರೆ; ಆದರೂ ಅವರು ಒಂದೆಒಂದು ಧರ್ಮಸೂತ್ರ-ದಲ್ಲಿ ಬಿಗಿವಡೆದಿದ್ದಾರೆ. ಎಂತಲೆ ನಾನು ಹೇಳುವುದು: ಒಂದೆ ಧರ್ಮವನ್ನನುಸರಿಸಿರುವುದು ರಾಷ್ಟ್ರೀಯತ್ವದ ಮೂರನೆಯ ಮಹತ್ತ್ವದ ಘಟಕವೆಂದು. ಹಿಂದುಗಳಿಗೆ ಧರ್ಮಗ್ರಂಥಗಳ ಬಂಧನವಿರುವುದೇನೋ ನಿಜ; ಆದರೆ ಯಾರಿಗವು ಬೇಡವಾಗಿವೆಯೋ ಅವರಿಗೆ ಆ ಗ್ರಂಥಗಳ

CC-0. Jangamwadi Math Collection. Digitized by eGangotri

ಆವಶ್ಯಕತೆಯೂ ಇಲ್ಲ. ಒಂದೆ ಇತಿಹಾಸವಿರುವುದು ನಾಲ್ಕನೆಯ ಘಟಕವೆಂದು ಹೇಳಿದೆನಲ್ಲವೇ! ಇಂಗ್ಲಂಡಿಗೆ ಹೆಚ್ಚು-ಹೆಚ್ಚೆಂದರೆ ಎರಡು ಸಾವಿರ ವರುಷಗಳ ಇತಿಹಾಸವಿರುವುದೆಂದು ಹೇಳುವರು ಆದರೆ ಹಿಂದುಸ್ತಾನಕ್ಕೆ, ಕಡಿಮೆಕಡಿಮೆ ಹಿಡಿದರೂ ಹತ್ತುಸಾವಿರ ವರುಷಗಳ ಇತಿಹಾಸವಿರುವುದೆಂದು ಹೇಳಲು ಬರುವಂತಿದೆ. ನಮ್ಮ ಇತಿಹಾಸದ ಪುರಾತನತ್ವವು ಪುರಾಣಗಳಲ್ಲಿ ಲುಪ್ತವಾಗಿಹೋಗಿದೆ. ಇತ್ತೀಚಿಗೇ ತಾಯಹೊಟ್ಟೆಯಿಂದ ಹೊರಕ್ಕೆ ಬಂದು, ತನ್ನ ಒಗರನ್ನು ತೋರಿಸಲು ತೊಡಗಿದ್ದ ಅಮೇರಿಕನ್ ರಾಷ್ಟ್ರಕ್ಕೆ ೨೦೦ ವರ್ಷಗಳ ಪ್ರಾಯವಿಷ್ಟೇ! ಆದರೆ ಅದು ತನ್ನ ವಿಷಯಕ್ಕೆ ಜಂಭಕೊಚ್ಚಿಕೊಳ್ಳುತ್ತಿರುವಾಗ 'ಈ ರಾಷ್ಟ್ರಕ್ಕೆ ಇನ್ನೂರು ವರ್ಷಗಳ ಇತಿಹಾಸ ಪರಂಪರೆಯಿದೆ; ಕನಿಷ್ಠ ಇನ್ನೂರು ವರ್ಷಗಳ ದಿವ್ಯಭವಿಷ್ಯವಿದೆ' ಎಂದು ಹೆಮ್ಮೆಯಿಂದ ಹೇಳುತ್ತಿರುತ್ತದೆ. ನಮ್ಮ ೨೦ ಸಾವಿರ ವರ್ಷಗಳ ಇತಿಹಾಸದೆದುರು ೨೦೦ ವರ್ಷಗಳೆಂದರೆ ಅದಕ್ಕೇನು ಬೆಲೆ? ರಾಷ್ಟ್ರದ ಐನೆಯ ಘಟಕವಾದ ಸಮಾನ ಶತ್ರುತ್ವವನ್ನು ಕುರಿತು ವಿಚಾರಮಾಡೋಣ: ಮೊದಲು ರಾವಣನು, ಬಳಿಕ ಹೂಣರು, ಆ ಮೇಲೆ ಗ್ರೀಕರು, ತರುವಾಯ ಶಕರು, ಆದರೀಚೆಗೆ ಮುಸಲ್ಮಾನರು—ಇವರೆಲ್ಲರೂ—ನಮಗೆಲ್ಲರಿಗೂ ಸಮಾನರಾದ ಶತ್ರುಗಳೇ ಆಗಿದ್ದರು. ಸದ್ಯದಲ್ಲಿರುವ ಶತ್ರುವೂ ಎಲ್ಲರಿಗೂ ಒಬ್ಬನೇ-ಆಗಿದ್ದಾನೆ. ಒಂದು ಪ್ರಾಂತದ ಶತ್ರುವಾವನೋ ಅವನೇ ಇನ್ನೊಂದು ಪ್ರಾಂತದ ಶತ್ರು.

ಬೀಜವೊಂದೇ ಆದುದರಿಂದ, ನಾವೆಲ್ಲ ಒಂದೇ ಜಾತಿಯಿಂದಲೇ ಒಂದೆಡೆಯಲ್ಲಿ ಬಿಗಿಯಲ್ಪಟ್ಟಿರುವೆವು. ಈಗ ಎಷ್ಟೋ ಭಿನ್ನತೆಯು ಕಾಣುತ್ತಿದ್ದರೂ,ಮೂಲದಲ್ಲಿ ಹಿಂದುಗಳೆಲ್ಲರ ರಕ್ತವು ಒಂದೇಒಂದು ಜಾತಿಯದಾಗಿರುವುದು. ಒಂದು ಕಾಲದಲ್ಲಿ ವೈದಿಕ ಸಮಾಜವು ಒಂದೆ ವರ್ಣದ್ದಾಗಿದ್ದಿತು. ಅನುಲೋಮ-ಪ್ರತಿಲೋಮಗಳಿಂದ ಬರುಬರುತ್ತ ಜಾತಿಗಳು ಬೆಳೆಯುತ್ತ ಬಂದುವು. ಮನುವಿನ ಧರ್ಮಶಾಸ್ತ್ರವು ನಿಜವಾದುದೇ ಇರುತ್ತಿದ್ದರೆ, ಚಾಂಡಾಲರು ಬ್ರಾಹ್ಮಣರ ಚಿಕ್ಕದೊಡ್ಡಮ್ಮನ ಮಕ್ಕಳೇ ಸರಿ!

ನಮ್ಮ ಸಾಹಿತ್ಯವೂ ಒಂದೆ ಬಗೆಯದಾಗಿದೆ. ಮದ್ರಾಸಿನಲ್ಲಿಯ ಐಯಂಗಾರ್ಯನಿರಲಿ, ಕಾಶ್ಮೀರದಲ್ಲಿಯ ಪಂಡಿತನಿರಲಿ, ಅವನು ಸಂಸ್ಕೃತದಲ್ಲಿಯ ಧರ್ಮಗ್ರಂಥಗಳನ್ನೇ ಓದುವನು. ಮಹಾಭಾರತ, ರಾಮಾಯಣಗಳು ಎಲ್ಲರಿಗೂ ಸಾಮಾನ್ಯವಾಗಿರುವುವು. ವಿದ್ಯುತ್ತಿನ ಪ್ರವಾಹವು ಪ್ರಾರಂಭವಾದೊಡನೆಯೆ ಎಲ್ಲ ಕಣಗಳೂ ಒಟ್ಟುಗೂಡುವಂತೆ, ರಾಮ-ಕೃಷ್ಣರ ಹೆಸರನ್ನುಚ್ಚರಿಸಿದ ಮಾತ್ರದಲ್ಲಿಯೆ ಇಡಿಯ ಹಿಂದುಸ್ತಾನವು ಒಟ್ಟುಗೂಡುವುದು....ಹಿಂದುಗಳೆಲ್ಲರಿಗೂ ಹೆಮ್ಮೆಯನ್ನು ಹುಟ್ಟಿಸುವಂತಹದಾವುದಾದರೂ ಇದ್ದರೆ, ಅದು ಹಿಂದುಸ್ಥಾನವೇ ಹೊರತು ಇನ್ನೊಂದಿಲ್ಲ. ಈ ದೇಶದ ಹೊರಗೆ ನಮ್ಮವರೆಂದು ಹೇಳುವವರು ಯಾರೂ ಇಲ್ಲ. ಅಮೇರಿಕೆಯಲ್ಲಿ ನಾವು ಹುಡುಗರು! ಆಫ್ರಿಕೆಯಲ್ಲಿ ನಾವು ಕೂಲಿಯಾಳುಗಳು! ಇಂತಹ ಪರಿಸ್ಥಿತಿಯಲ್ಲಿ ನಮ್ಮೆಲ್ಲ ಹಿಂದುಗಳ ಜೀವವು ಹಿಂದುಸ್ಥಾನದಲ್ಲಿ ಒಂದುಗೂಡಬೇಕು! ಹಿಂದೂರಾಷ್ಟ್ರಕ್ಕಾಗಿ ಹಿಂದುಗಳೆ ಹಣಿದಾಡಬೇಕಲ್ಲದೆ ಮಿಕ್ಕವರು ಮುಂದೆ ಬರಲಾರರು. ಕಳೆದ ೧೦೦ ವರ್ಷಗಳ ಇತಿಹಾಸವನ್ನು ಕಣ್ಣೆದುರಿಗೆ ತಂದುಕೊಂಡರೂ, ಹಿಂದುಸ್ಥಾನಕ್ಕಾಗಿ ಪ್ರಾಣಕಳೆದುಕೊಂಡವರು ಹಿಂದುಗಳೇ ಎಂಬುದು ಕಂಡುಬರುವುದು. ಹಿಂದುಸ್ತಾನದ ಸ್ವಾತಂತ್ರ್ಯದ ಯುದ್ಧದಲ್ಲಿ ಕರಿಯನೀರಿಗೆ ಹೋದವರೂ, ಗಲ್ಲಿಗೆ ಕೊರಳನ್ನು ಕೊಟ್ಟವರೂ ಹಿಂದುಗಳೇ ಆಗಿರುವರು. ಹಿಂದುಸ್ಥಾನದ ಬುನಾದಿಯೆಂದರೆ ಹಿಂದುಗಳು. ಅವರು ಸಂಘಟಿತರಾದಾಗಲೆ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಸಿದ್ಧಿಸುವುದು."

ಹಿಂದುಗಳ ಪ್ರತಿಯೊಂದು ಸಂಗಡದ ಮುಂದಾಳುಗಳೂ ಶ್ರೀಮಾನ್ ಸಾವರಕರರ ವಿಚಾರದವರಾದರೆ, ಹಿಂದುಗಳ ಜ್ಯೋತಿರ್ಮಯ ಭವಿಷ್ಯತ್ತು ಅವರನ್ನು ತೀರ ಸಮೀಪಿಸುವುದು!

## ವ್ಹಾಯಿಸ್ ರಾಯರ ಉಗ್ಗಡಣೆ

ರಾಷ್ಟ್ರೀಯ ಪಕ್ಷದವರ ಮಂತ್ರಿಪದ ಬಹಿಷ್ಕಾರದ ವಿಚಾರವು ಕುದಿಯ ತೊಡಗಿ ಆದೆಷ್ಟೊ ದಿನಗಳಾದುವು. ಭಾರತರಾಜಕಾರ್ಯಕ್ಕೆ ಸಂಬಂಧಿಸಿದ ಇಂಗ್ಲಂಡಿನಲ್ಲಿಯ ಮಹಾ-ಮಹಾ ಪ್ರಾಣಗಳೂ, ಒಮ್ಮೆಯಲ್ಲ— ಎರಡೆರಡು ಮೂರುಮೂರುಸಲ ತಮ್ಮ ಬಾಯನ್ನು ಬಿಟ್ಟು, ಹೃದಯವನ್ನು ಹೊರಕ್ಕೆ ಹಾಕಿದುವು. ಆದರೂ ಭಾರತದ ಸರ್ವಾಧಿಕಾರಿಗಳಾದ ಲಿನ್‌ಲಿಥ್‌ಗೋ ಅವರು ಬಹುಕಾಲ ಮೌನಿಗಳಾಗಿಯೆ ಇದ್ದರು. ಅವರ ಮೌನದ ವಿಷಯಕ್ಕೆ ಬೇರೆಬೇರೆ ಸುದ್ದಿ-ಸಂಗತಿಗಳೂ ವಾತಾವರಣದಲ್ಲಿ ಮೂಡಿ ಮರೆಯಾದುವು. ಮೊನ್ನೆ ಮೊನ್ನೆ (ತಾ ೨೨-೬-೩೭) ಹೊರಕ್ಕೆ ಹೊರಡಿಸಿದ, ಲಾರ್ಡ್‌ಸಾಹೇಬರ ಉಗ್ಗಡಣೆಯನ್ನು ವಿಮರ್ಶಿಸಿ ನೋಡಿದರೆ, ಅವರು ಹಿಂದುಸ್ತಾನದ ರಾಜಕಾರಣದ ವಿಚಾರದಲ್ಲಿ ಔದಾಸೀನ್ಯದ ಮೌನವನ್ನು ತಳೆದಿರದೆ,ಗಂಭೀರವಿಮರ್ಶೆಯ ಮೌನವನ್ನು ತಳೆದಿದ್ದರೆಂಬ ಮಾತು ಕಂಡು ಬರುತ್ತದೆ.

CC-0. Jangamwadi Math Collection. Digitized by eGangotri

ಆಗಲಿರುವ ಉಗ್ಗಡಣೆಯನ್ನು ಕೇಳುವದಕ್ಕೆ—ಎಲ್ಲರೂ ತಮ್ಮ ತಮ್ಮ ರೀತಿಯಲ್ಲಿ—ಆತುರರಾಗಿ ಕುಳಿತಿದ್ದರು. ತಡೆದ ಮಳೆಯು ಬಿದ್ದು ಲೋಕವನ್ನು ತಣಿಸುವಂತೆ, ವೈಸ್‌ರಾಯರ ಬಹುದಿವಸದ ಮೌನವು ಸುಂದರ-ಸುಂದರ-ವಾದ ಮಾತಿನ ಮಳೆಯನ್ನು ಸುರಿಸಿ, ಅನೇಕ ಜನರನ್ನು ತೃಪ್ತರನ್ನಾಗಿ ಮಾಡಿರುವುದು.

## ಉಗ್ಗಡಣೆಯ ಸಮಾಲೋಚನೆ

ರಾಷ್ಟ್ರೀಯ ಪಕ್ಷದವರನ್ನುಳಿದು ಮಿಕ್ಕವರೆಲ್ಲರಿಗೂ ವ್ಹಾಯಿಸ್‌ರಾಯರ ಮಾತುಗಳು ಮೆಚ್ಚಿಗೆಯಾಗಿವೆ. ರಾಷ್ಟ್ರೀಯ ಪಕ್ಷದವರ ಮುಖ್ಯ ಬೇಡಿಕೆಯನ್ನು ಕುರಿತು ಆಡಿದ ಮಾತುಗಳು ಲಾರ್ಡ ಝೆಟ್‌ಲಂಡರ ಮಾತಿನ ಅಚ್ಚುನುಡಿಗಳೆ ಆಗಿವೆ. ಉಗ್ಗಡಣೆಯ ಪ್ರಾರಂಭದ ಬಹುಭಾಗವು ರಾಷ್ಟ್ರೀಯಪಕ್ಷ-ಸರಕಾರ ಪಕ್ಷ ಇವುಗಳ ವಾದ-ವಿವಾದಗಳ ರಾಜಕೀಯಘಟನೆಯ ವಿಮರ್ಶಾ-ವಿಚಾರವನ್ನು ಒಳಗೊಂಡಿದೆ. ಈ ವಿಮರ್ಶೆಯು ನಿಃಪಕ್ಷ-ಪಾತವಿದ್ದಿರುವುದೆಂದು ಬಲುಜನ ರಾಜಕಾರ್ಯಪ್ರವೀಣರ ಅಭಿಪ್ರಾಯ. ಈ ಮೊದಮೊದಲಿನ ನಿಃಪಕ್ಷಪಾತವೆ ಬಹು-ಜನ ಮೃದುಹೃದಯರನ್ನು ತನ್ನ ಕಡೆಗೆ ಸೆಳೆದುಕೊಂಡು, ಇಡಿಯ ಘೋಷಣೆಯನ್ನೇ ಸಹಾನುಭೂತಿಯಿಂದ ನೋಡ-ಲಿಕ್ಕೆ ಹಚ್ಚಿದೆಯೆಂದೂ ಕೆಲವರು ಹೇಳುವರು.

ವ್ಹಾಯಿಸ್‌ರಾಯರ ಉಗ್ಗಡಣೆಯು ರಾಷ್ಟ್ರೀಯಪಕ್ಷ-ದವರನ್ನು ಅಧಿಕಾರವಹಿಸಲಿಕ್ಕೆ ಮುಂದಕ್ಕೆ ಕರೆಯುವು-ದೆಂದೂ,ಒಪ್ಪಂದದ ದಾರಿಯನ್ನೇನಾದರೂ ಹೊತ್ತು ತರುವು-ದೆಂದೂ ಎಲ್ಲರೂ ನಿರೀಕ್ಷಿಸುತ್ತಿದ್ದರು; ಆದರೆ ಅವರೆಲ್ಲರ ನಿರೀಕ್ಷಣೆಯು ವ್ಯರ್ಥವಾಯಿತು. ಕಾಂಗ್ರೆಸ್ ಪಕ್ಷದವರ ಯಾವ ಕರಾರನ್ನೂ ಒಪ್ಪುವಂತಹ ಮಾತು ಉಗ್ಗಡಣೆಯಲ್ಲಿ ಇಲ್ಲ. ಮಹಾತ್ಮಾ ಗಾಂಧಿಯವರೂ ಶ್ರೀ. ರಾಜಗೋಪಾಲಾ ಚಾರ್ಯರೂ ಒಡ್ಡಿದ 'ಬರ್‌ತರ್ಫೋ?ರಾಜೀನಾಮೆಯೋ?' ಎಂಬ ಪ್ರಶ್ನೆಯ ಉತ್ತರದಲ್ಲಿ, ಲಾರ್ಡಝೆಟ್ಲೆಂಡ್ ಅವರ ಉತ್ತರಕ್ಕಿಂತ ವಿಶೇಷವಾದುದೇನೂ ಇಲ್ಲ. ಮಹಾತ್ಮಾಜಿ ಯವರು ನೊನ್ನೆ ಮೊನ್ನೆ ಕೇಳಿದ 'ಗವರ್ನರರೇ ಮಂತ್ರಿಗಳಿಗೆ ರಾಜೀನಾಮೆ ಕೊಡಲು ಹಚ್ಚಬೇಕು' ಎಂಬ ವಿಷಯ-ವನ್ನಂತೂ ಮೂಲೆಗೇ ಎಸೆಯಲಾಗಿದೆ.

ರಾಷ್ಟ್ರೀಯ ಪಕ್ಷದವರು ಎಬ್ಬಿಸಿದ ಇದುವರೆಗಿನ ಚರ್ಚೆಯ ಪರಿಣಾಮವು ಏನಿಲ್ಲವೆಂದರೂ ಗವರ್ನರ್ ಮತ್ತು ಮಂತ್ರಿಗಳಿಗಿರುವ ಅಧಿಕಾರದ ಕೊನೆಯ ಮರ್ಯಾದೆಯನ್ನು ನಿರ್ಣಯಿಸಿ ಬಿಟ್ಟಿತು. ಈ ಚರ್ಚೆಯೇಳದೆ ರಾ. ಪ. ಪಕ್ಷದವರು ಒಮ್ಮೆಲೆ ಮಂತ್ರಿಪದವನ್ನು ಸ್ವೀಕರಿಸಲಿಕ್ಕೆ ಸಿದ್ಧರಾಗಿದ್ದರೆ, ಅಷ್ಟಿಷ್ಟಕ್ಕೆ ಗವರ್ನರರ ಅಧಿಕಾರವು ತಲೆ ಹಾಕಬಹುದಾಗಿದ್ದಿತು. ವಿಧಾಯಕ ಕಾರ್ಯಕ್ರಮದಲ್ಲಿ ತಾವೂ ಪ್ರಾಂತೀಯ ಮುಖ್ಯಾಧಿಕಾರಿಗಳೂ ಅವಶ್ಯವಾಗಿ ಸಂಪೂರ್ಣ ಸಹಕರಿಸುವೆವೆಂಬರ್ಥದ ಮಾತು ವ್ಹಾಯಿಸ್‌ರಾ-ಯರ ಉಗ್ಗಡಣೆಯಲ್ಲಿದೆ. ಅಲ್ಲದೆ 'ಕಾಂಗ್ರೆಸ್ಸಿನವರು ಆಶ್ವಾಸ-ನದ ಬೇಡಿಕೆಯ ವಾದವನ್ನೆಬ್ಬಿಸಿ, ದೊಡ್ಡದೊಂದು ಲೋಕ-ಸೇವೆಯನ್ನು ಮಾಡಿದ್ದಾರೆ' ಎಂದು ಲಾರ್ಡಸಾಹೇಬರು ಕಾಂಗ್ರೆಸ್ಸಿನ ಬೆನ್ನನ್ನು ಚಪ್ಪರಿಸಿ, ಹೊಗಳಿ ಹಾಡಿರುವರು.

## ರಾಷ್ಟ್ರೀಯ ಸಭೆಯವರು ಮಾಡಬೇಕಾದುದೇನು ?

ಈಗ ಪರಿಸ್ಥಿತಿಯನ್ನು ಸಂಪೂರ್ಣವಾಗಿ ಸಮಾಲೋಚಿಸಿ, ಕಾಂಗ್ರೆಸ್ಸಿನವರು ಅಧಿಕಾರಗ್ರಹಣಕ್ಕೆ ಸನ್ನದ್ಧರಾಗುವುದು ಒಳ್ಳೆಯದು. ಬರ್‌ತರ್ಫ-ರಾಜೀನಾಮೆಗಳ ಬಗೆಗಿರುವ, ಉಗ್ಗಡಣೆಯಲ್ಲಿಯ ಮಾತಿನ ವಿಷಯಕ್ಕೆ ನಾವು ಮೌನ-ವನ್ನು ವಹಿಸುವೆವಾದರೂ,ಮಂತ್ರಿಗಳು ಮತ್ತು ಗವ್ಹರ್ನರರು ಇವರಲ್ಲಿ ಮತಭೇದವುಂಟಾಗಿ, ಮಂತ್ರಿಗಳ ಸಲಹೆಗೆ ವಿರುದ್ಧವಾಗಿ ಗವರ್ನರರು ತಮ್ಮ ವಿಶೇಷಾಧಿಕಾರವನ್ನು ಉಪಯೋಗಿಸಲು ತೊಡಗಿದಾಗ, ತಮ್ಮ ವಿರೋಧವನ್ನು ಸಾರಿಸಾರಿ ಹೇಳುವುದಕ್ಕೆ ಮಂತ್ರಿಗಳಿಗೆ ಅವಕಾಶವಿರುವು-ದಲ್ಲವೇ ? ಇದರ ಉಪಯೋಗವು ಎಷ್ಟರ ಮಟ್ಟಿಗಾಗುವು-ದೆಂಬದನ್ನು,ರಾಷ್ಟ್ರೀಯ ಪಕ್ಷದವರು ಅಧಿಕಾರ ಸ್ವೀಕರಿಸಿ,, ಪ್ರಯೋಗಮಾಡಿ ನೋಡಬೇಕು. ಸಂಘಟನೆಯ ಕಾಯಿದೆ-ಯಂತೆ, ಬರತರ್ಫಿನ ಸಲುವಾಗಿ ಮೊದಲೆ ಆಶ್ವಾಸನ-ಕೊಡಲು ಬರುವಂತಿಲ್ಲನೆಂಬ ಹೊಸ ನೆಪವೊಂದನ್ನು ವ್ಹಾಯಿಸ್‌ರಾಯರು ತಮ್ಮ ಉಗ್ಗಡಣೆಯಲ್ಲಿ ಮುಂದೆ ಮಾಡಿದ್ದಾರೆ. ಇದು ಶಾಸನಶುದ್ಧವಿರಲಿ ಇರದೆ ಇರಲಿ, ಈ ಸಂದರ್ಭದಲ್ಲಿಈವಿಚಾರವನ್ನೆತ್ತಿ ಮತ್ತೆ ಚರ್ಚೆಹೂಡುತ್ತ ಕುಳಿತರೆ,ದೇಶದ ಒಳ್ಳೆಯ ವೇಳೆಯ ಹಾನಿಯಾದಂತಾದೀತು. ಇಂದಿನ ಸೋಗಿನ ಮಂತ್ರಿಮಂಡಳಗಳು ತಮ್ಮ ಬೇಳೆಯನ್ನು ಬೇಯಿಸಿಕೊಳ್ಳಬೇಕೆಂದು, ಪರಕೀಯರಿಗಿಂತ ಹೆಚ್ಚಾಗಿ ನಡೆಯಿಸಿದ್ದ ದಬ್ಬಾಳಿಕೆಯನ್ನು ರಾಷ್ಟ್ರೀಯಪಕ್ಷದವರು ಕಾಣದೆ ಇಲ್ಲ. ಈಗವರು ಮಂತ್ರಿಪದವನ್ನು ಸ್ವೀಕರಿಸಲು ಮುಂದೆಬಂದರೂ ಸೋಲನ್ನೊಪ್ಪಿಕೊಂಡಂತಲ್ಲ. ಹೂಡಿದ್ದ ಕಾರ್ಯದ ಮಹತಿಯನ್ನು ವಿರೋಧಿಗಳೇ ಮೆಚ್ಚಿ ಕೊಂಡಾಡುತ್ತಿರುವಾಗ ಅವರಿಗೆ ಸೋಲೆಲ್ಲಿಯದು ? ಆಗದ-ವರು 'ಸೋಲು' ಎಂದು ಕೆಲೆದರೂ ದೇಶಹಿತದ ದೃಷ್ಟಿಯ

CC-0. Jangamwadi Math Collection. Digitized by eGangotri

ರಾಷ್ಟ್ರೀಯ ಸಭೆಗೆ ಅದರದೇನು ಬೆಲೆ? ರಾಷ್ಟ್ರೀಯ ಸಭೆಯ ಬಹುಮತವಾದ ಆರುಪ್ರಾಂತಗಳಲ್ಲಿಯೂ ರಾಷ್ಟ್ರೀಯ ಪಕ್ಷದ ಮಂತ್ರಿಗಳು ಮುಂದೆ ಬಂದು, ದೇಶಹಿತದ ವಿಧಾಯಕ ಕಾರ್ಯಕ್ರಮವನ್ನು ಕೈಕೊಂಡು ಮುಂದುವರಿಸಿದಲ್ಲಿ, ಮಿಕ್ಕಪ್ರಾಂತದ ಮಂತ್ರಿಗಳಿಗೆ ಅದು ಆದರ್ಶವಾಗಿ, ಅವರೂ ಒಳ್ಳೊಳ್ಳೆಯ ಕಾರ್ಯಕ್ಕೆ ಕೈಹಾಕಬಹುದು. ದೇಶಹಿತದ ಕಾರ್ಯದ ಬಗೆಗೆ ಇಬ್ಬರಲ್ಲಿಯೂ ಮೇಲಾಟವೇ ನಡೆಯಬಹುದು. ಸಂದರ್ಭವನ್ನು ವಿಮರ್ಶಿಸಿ ನಡೆಯುವ ಸಾಮರ್ಥ್ಯ ರಾ. ಸಭೆಯ ಮುಂದಾಳುಗಳಲ್ಲಿ ಇದ್ದೆ ಇರುವುದೆಂಬ ಭರವಸೆ ನಮಗೆ.

## ನಮ್ಮ ಮಾತು

### ಗುರುಕುಲದ ಚಿತ್ರಗಳು

ಕುಲಕ್ಕೆ ಸಂಬಂಧಿಸಿದ ಎಲ್ಲ ಪಡಿಯಚ್ಚುಗಳನ್ನೂ ಟ್ಟು, ಈ ಸಂಚಿಕೆಯನ್ನು ಸಿಂಗರಿಸಲು ನೆರವಾದ ರ್ನಾಟಕ ಸಂಘದ ಕಾರ್ಯದರ್ಶಿಗಳಾದ ಶ್ರೀ. ರವರನ್ನು ಕೃತಜ್ಞತಾಭಾವದಿಂದ ಅಭಿನಂದಿ- ದ ಉತ್ತರದ ತುದಿಯಲ್ಲಿರುವ ಆ ಸಂಘದ ಡೆಯಿಸಿದ ಕಾರ್ಯವು, ಕರ್ಣಾಟಕದ ಚಾರಿಸುವಂತಹದು.

### ಈ ಸಂಚಿಕೆ

ಯಲ್ಲಿಯೆ ಸೂಚಿಸಿದಂತೆ ಸಂಚಿಕೆಯ ಲಾವಣೆಯಾದುದನ್ನು ಈ ಸಂಚಿಕೆಯಿಂದ ಕಾಗದದ ಗಂಟು ಸಮಯಕ್ಕೆ ಸರಿಯಾಗಿ ಬಾರದುದರಿಂದ ಹಾಳೆಗಳಲ್ಲಿ ಸ್ವಲ್ಪ ಕಲಸುಮೇಲೋಗರವಾಗಿದೆ. ಮುಂದಿನ ಸಂಚಿಕೆಯಲ್ಲಿ ಹೀಗಾಗದೆಂದು ಭರವಸೆ.

### ಮಹಾನುಭಾವ ಬಸವಣ್ಣನವರು

ಈ ಲೇಖನದಲ್ಲಿದ್ದ ಹೊಸನಾದರಿಯನ್ನು ಎಲ್ಲರೂ ವಿಮರ್ಶಿಸಿ ನೋಡಬೇಕು. ನಮ್ಮ ಪರಂಪರಾಗತ ಭಾವನೆಗಳನ್ನು ಸತ್ಯದ ಒಳನೋಟದಿಂದ ಕಂಡು, ಆ ಭಾವನೆಗಳ ಹಿಂದೆ ನಿಂತು ಮಿಡಿಯುತ್ತಿರುವ ದಿವ್ಯಧ್ವನಿಯನ್ನು ಒಳಗಿವಿಯಿಂದ ಕೇಳಬೇಕಾಗಿದೆ ಎಲ್ಲರೂ. ಅಂತಹ ಪ್ರಯತ್ನವನ್ನು ಈ ಲೇಖನದಲ್ಲಿ ನೋಡಬೇಕಲ್ಲದೆ, ಭಾವನೆಯ ಕಣ್ಣಡಕದಿಂದ ನೋಡಿ ಮುಖ ಮುದುರಿಸಿ ಬಿಡಲಾಗದು. ಹಾಗೆಯೆ ಇಂದಿನ ತರುಣಲೋಕವು 'ವಿಲ್ ಡ್ಯೂರಂಟ್' ಅವರ ಓಲೆಯನ್ನು ಓದಿ, ಐಹಿಕ ಜೀವನದಲ್ಲಿಯ ನಿರಾಶೆಯ ಕ್ಷಣಗಳನ್ನು ಮೆಟ್ಟಿಮುಂದರಿವ ಹೊಸಬೆಳಕನ್ನು ಪಡೆಯಬೇಕು

## ಬರಲಿವೆ

**ಬಾಳಿನ ಹುರುಳು-ತಿರುಳುಗಳು ( ಉತ್ತರಾರ್ಧ )**
ಶ್ರೀ. ಬಿ. ಪಾರ್ಥಸಾರಥಿರಾಯರು

**ಜಪಾನ್‌ದೇಶದ ರೇಷ್ಮೆಯ ಕೈಗಾರಿಕೆ(ಸಚಿತ್ರಪರಿಚಯ)**
ಶ್ರೀ. ಕೆ. ನಂಜಪ್ಪ, ಟೋಕಿಯೋ ( ಜಪಾನ್ )

**ತಥ್ಯ( ಪ್ರೇಮಚಂದರ ಸುಂದರಕಥೆಯೊಂದರ ಅನುವಾದ)**
ಶ್ರೀ. "ವಿಜಯಾಗ್ರಜ"

**ಬಾದಾಮಿಯ ಚಾಲುಕ್ಯರ ಕಾಲದ ಕನ್ನಡಿಗರ ಸಾಂಸ್ಕೃತಿಕಜೀವನ**
ಶ್ರೀ. ಪಾಂ. ಭಿ. ದೇಸಾಯಿ ಎಂ. ಎ. ಧಾರವಾಡ

**ಭಿಕ್ಷುಕಿ ( ಏಕಾಂಕ ನಾಟಕ )**
ಶ್ರೀ. ಎಂ. ಕೆ. ತಿಪ್ಪಯ್ಯ, ಬೆಂಗಳೂರು.

**ಪೂರ್ವ—ಪಶ್ಚಿಮ ( ಸಣ್ಣಕಥೆ )**
ಶ್ರೀ. ಶೇಷು 'ಸೋದರಸಂಘ' ಶಿವಮೊಗ್ಗೆ


## WANTED

A Deshastha Brahmin bride, grown-up, handsome, educated, music knowing and adept in domestic duties. Bridegroom—a bachelor of 30, an artist and literateur of repute, with culture, education and refinement. Tongue Kannada. Gotra Koundinya and Moudgalya.

Write with photograph:—

**S. C/o Jayakarnataka**


CC-0. Jangamwadi Math Collection. Digitized by eGangotri

# ಜಯ ಕರ್ನಾಟಕ

ಪ್ರೆಸಿಡೆಂಟ ಚಿತ್ರಪಟದಲ್ಲಿಯ ಒಂದು ದೃಶ್ಯ



ಸಂಪಾದಕರು: ಶ್ರೀ ಬೆಳಗಾವಿ ರಾಮಚಂದ್ರರಾಯರು ಸಹಸಂಪಾದಕರು: ಶ್ರೀ. ಬೆಟಗೇರಿ ಕೃಷ್ಣಶರ್ಮ

ESTD. 1906

CANARA BANK LIMITED

SCHEDULED MEMBER OF THE RESERVE BANK OF INDIA AND BOMBAY CLEARING HOUSE

ಕ್ಯಾನರಾ ಬ್ಯಾಂಕ್ ಲಿಮಿಟೆಡ್

| | |
|---|---|
| Subscribed Capital | Rs. 600,000 |
| Paid-up Capital | ,, 3,33,240 |
| Reserve Fund | ,, 4,50,000 |
| Deposits | ,, 79,64,000 |
| Total Working Capital | ,, 97,25,000 |

30 OFFICES AT-Fort Bombay, Mandvi Bombay, Bangalore, Chikmagalur, Hubli, Davangere, Mangalore, Udipi, Cochin, Calicut, Dharwar etc. etc.



CC-0. Jangamwadi Math Collection. Digitized by eGangotri

ಮೈಸೂರು ಚಂದನ ಸಾಬೂನು ನಿಮ್ಮ
ಮೈಬಣ್ಣಕ್ಕೆ ಅಂದವನ್ನೂ ಕಾಂತಿ
ಯನ್ನೂ ಕೊಡುತ್ತದೆ.




**ಮೈಸೂರು ಚಂದನದ ಸಾಬೂನಿನಿಂದ** ಅಂಗ ಕಾಂತಿಯು ಹೊಸದಾಗುವುದಲ್ಲದೆ, ಆಹ್ಲಾದಕರವೆನಿಸುವಂತೆ ನುಣುಪಾದುದೂ ನಿರಾಮಯವೂ ಆಗುವದು. ಅದರ ಸಮೃದ್ಧವಾದ ಬೆಳ್ಳನೆಯ ಬುರುಗು ರೋಮರಂಧ್ರಗಳನ್ನೆಲ್ಲಾ ಹೊಕ್ಕು ಮೈದೊಗಲಿನ ಅಶುದ್ಧಿಯನ್ನೆಲ್ಲಾ ಕಳೆಯುವುದು. ಯಾಕೆಂದರೆ **ಮೈಸೂರು ಚಂದನದ ಸಾಬೂನು** ಜಗತ್ಪ್ರಸಿದ್ಧವಾದ ಮೈಸೂರು ಚಂದನ ತೈಲದಿಂದ ತಯಾರಿಸಲ್ಪಟ್ಟಿದೆ. ಇದಕ್ಕಾಗಿಯೇ ಲಲನೆಯರು ಈ ಸುಗಂಧಮಯ ಸಾಬೂನನ್ನೇ ಇಂದಿಗೂ ಉಪಯೋಗಿಸುವರು;—ತಮ್ಮ ಲಾವಣ್ಯವನ್ನು ಅದು ಕಾಪಾಡುವುದೆಂದು ಅವರು ಬಲ್ಲರು.

**ಎಲ್ಲೆಲ್ಲಿಯೂ ದೊರೆಯುತ್ತದೆ.**

ಗವರ್ನ್‌ಮೆಂಟ್
ಸೋಪ್ ಫ್ಯಾಕ್ಟರಿ,
ಬೆಂಗಳೂರು.

**MYSORE SANDAL SOAP**

ಈ ಪತ್ರಿಕೆಯನ್ನು ಮಾಧವ ನಾರಾಯಣ ಮಂಗಳವೇಢೇಕರ, ಇವರು ಧಾರವಾಡದ ಕಲಾಸಿಂಧು ಮುದ್ರಣಾಲಯದಲ್ಲಿ ಮುದ್ರಿಸಿದರು.
ರಾಮಚಂದ್ರ ಪಾಂಡುರಂಗ ಬೆಳಗಾಂವಕರ ಇವರು ಧಾರವಾಡದ ಕಟರ ಓಣಿಯಲ್ಲಿರುವ ಜಯಕರ್ನಾಟಕ ಕಾರ್ಯಾಲಯದಲ್ಲಿ ಪ್ರಸಿದ್ಧಿಸಿದರು.

CC-0. Jangamwadi Math Collection. Digitized by eGangotri

# ಪರಿವಿಡಿ




UNEMPLOYMENT

OF EDUCATED MIDDLE CLASSES

is an important item in the news today

*Send a Post Card and let us tell you*

HOW TO GIVE YOUR BOY A START IN A BUSINESS OR PROFESSION!

**BOMBAY BARODA**

ASSURANCE CO., LTD.

ESTABLISHED 1925. HEAD OFFICE, BARODA.

Wanted immediately Inspectors, Organisers, Chief Agents and Dist. Agents, on most lucrative terms of Salary and Commission, throughout Karnataka and Nizam state.





ಈ ಕಷ್ಟದಿಂದ ಹ್ಯಾಗೆ ಪಾರಾಗಲಿ

## ಸ್ವಾಮಿಗಳ ಅದ್ಭುತ ಭವಿಷ್ಯ

ಗ್ರಹಗಳಿಗೆ ಅಧಿಪತಿಯಾದ ಸೂರ್ಯನನ್ನೇ ಬಾಧಿಸುವ ರಾಹುವು ಮನುಷ್ಯನನ್ನು ಬಿಟ್ಟೀತೇ? ಅತ್ಯುತ್ತಮವಾದ ಸುಖ ಮತ್ತು ಬಹು ದಾರುಣವಾದ ಕಷ್ಟಗಳು ಈ ಪ್ರಬಲ ಗ್ರಹದಿಂದ ಉಂಟಾಗುತ್ತವೆ:-



ಹುಟ್ಟಿದ ಘಳಿಗೆ-ದಿನ-ತಿಂಗಳು-ವರುಷಗಳನ್ನು ತಿಳಿಸಿದಲ್ಲಿ ನಿಮ್ಮ ಜೀವನದಲ್ಲಿ ಉಂಟಾಗುವ— (೧) ಆಕಸ್ಮಿಕ ದ್ರವ್ಯಯೋಗ (೨) ಆಯುಷ್ಯ (೩) ಆರೋಗ್ಯ (೪) ವಿದ್ಯೆ (೫) ಸಂತಾನ (೬) ಕಳತ್ರ (೭) ಕಸಬು ಮುಂತಾದ ಹಲವು ವಿಷಯಗಳ ಸಂಗ್ರಹವನ್ನು ಬರಿಯುವುದಲ್ಲದೇ ಪ್ರಬಲವಾದ ರಾಹುವಿನಿಂದ ನಿಮಗೂ ನಿಮ್ಮ ಮಕ್ಕಳಿಗೂ ಉಂಟಾಗುವ ಸುಖ ದುಃಖಗಳನ್ನು ಒಂದೇ ರೂಪಾಯಿಗೆ ವಿ ಪಿ ಮೂಲಕ ಕಳುಹಿಸು

ತ್ತೇವೆ. ವಿ. ಪಿ. ಚಾರ್ಜು ಎಮ ಆಣೆಯ ಸ್ಟ್ಯಾಂಪುಗಳನ್ನು ಮುಂಗಡವಾಗಿಯೇ ಕಳುಹಿಸಬೇಕು. ಸ್ಟ್ಯಾಂಪುಗಳಿಲ್ಲದ ಆರ್ಡರುಗಳನ್ನು ಖಂಡಿತವಾಗಿಯೂ ಗಮನಿಸುವುದಿಲ್ಲ.

The Acquarian Occult House,
Plot, 399. Co-operative House, Telang Road.
G. I. P. MATUNGA BOMBAY 19.


CC-0. Jangamwadi Math Collection. Digitized by eGangotri

# ಯುನೈಟೆಡ್ ಕರ್ನಾಟಕ ಇನ್ಶೂರನ್ಸ್ ಕಂ. ಲಿಮಿಟೆಡ್

## ಪ್ರಧಾನ ಕಾರ್ಯಾಲಯ—ಧಾರವಾಡ.

ಕಳೆದ ಆರುವರ್ಷಗಳಿಂದಲೂ ಬೆಳೆದು ಬಲಗೊಂಡು ನಿಂತು, ಸರಕಾರದ ಪಂಚವಾರ್ಷಿಕ ವಿಮರ್ಶೆಯಲ್ಲಿ ಜಯಶೀಲವಾಗಿರುವ ಕರ್ನಾಟಕದ ಜೀವವಿಮಾ ಕಂಪನಿ ● ● ●



ಈ ಕಂಪನಿಯ ಬಗ್ಗೆ ಜನರಿಗೆ ವಿಶೇಷ ಅಭಿಮಾನವೆನಿಸಲು ಕಾರಣಗಳೇನೆಂದರೆ: ● ● ●
ಕಂಪನಿಯ ಹಣಕ್ಕೆ ಸರಕಾರದ ಆಧಾರಪತ್ರಗಳ ಮೂಲಕ ಸಂಪೂರ್ಣ ಸುರಕ್ಷಿತತೆಯಿದೆ. ಪಾಲಿಸಿದಾರರ ಹಕ್ಕಿನ ಹಣವನ್ನು ಸಲ್ಲಿಸುವುದರಲ್ಲಿ ತೊಂದರೆ-ತಡೆಗಳೇ ಇಲ್ಲ. ಎಜಂಟರ ಮತ್ತು ಪ್ರಧಾನ ಕಾರ್ಯಾಲಯದ ವ್ಯವಹಾರದಲ್ಲಿ ಸಮಯಶೀಲತೆಯಿದೆ. ಕನಿಷ್ಠ ವೆಚ್ಚದಿಂದ ವಿಶಿಷ್ಟ ಲಾಭವನ್ನು ಕೊಡುವ ವಿಮಾಯೋಜನೆಗಳಿವೆ. ಈ ಕಂಪನಿಯು ಏಳ್ಗೆಯಲ್ಲಿ ಕರ್ನಾಟಕದ ಆರ್ಥಿಕೋನ್ನತಿಯ ಬಲವಾದ ಆಧಾರವಿದೆ.

ಅಲ್ಲದೆ ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಇದರ ಪಾಲುಗಾರರಿದ್ದು, ಇದು ಕನ್ನಡ ನಾಡಿನ ಪ್ರಾತಿನಿಧಿಕ ಸಂಸ್ಥೆಯಾಗಿದೆ. ಆದುದರಿಂದ ಕನ್ನಡದ ಗೆಲವನ್ನು ಬಯಸುವವರು 'ಯುನೈಟೆಡ್ ಕರ್ನಾಟಕ'ದ ಪಾಲಿಸಿಯನ್ನಾಗಲಿ ಪಾಲುಗಳನ್ನಾಗಲಿ ಪಡೆಯಬೇಕು; ವಿಶೇಷವಿವರಕ್ಕೆ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಮಳಗಿ ಬಂಧುಗಳು
ಧಾರವಾಡ ಜಿಲ್ಲೆಯ ಚೀಫ್ ಏಜಂಟರು
ಗದಗು

ಎಮ್. ಗೋವರ್ಧನರಾವ್
ಮ್ಯಾನೇಜರ್
ಯು. ಕ. ಇ. ಕಂ. ಲಿ., ಧಾರವಾಡ


CC-0. Jangamwadi Math Collection. Digitized by eGangotri




# ಸರ್ವಜ್ಞನ ಸ್ವಾನುಭವಸಾಹಿತ್ಯ

ಶ್ರೀ. ಎಸ್. ಕೆ. ಕುಲಕರ್ಣಿ ಬಿ. ಎ. (ಆನರ್ಸ್) ಗದಗು

ನಮ್ಮ ಹಳೆಯ ಕವಿಗಳಲ್ಲಿ ಬಹುಜನರು ಅಷ್ಟಾದಶವರ್ಣನೆಯ ಪರಂಪರಾ ಶೃಂಖಲೆಯಿಂದ ಬದ್ಧರಾಗಿ ಅನುಭವದ ಪರಿಜ್ಞಾನಕ್ಕಿಂತ ಅನುಕರಣದ ಪರಜ್ಞಾನದಲ್ಲಿಯೆ ಹೆಚ್ಚು ಆಸಕ್ತರಾದರು. ಸರ್ವಜ್ಞನು ಮಾತ್ರ ಇಂತಹ ನಿಯಮಬದ್ಧತೆಗೆ ಕಟ್ಟುಬೀಳಲಿಲ್ಲ. ಆತನು ಅನುಭವಭಾಂಡಾರಿ !



ಸಾಹಿತ್ಯಕ್ಕೂ ಜನಜೀವನಕ್ಕೂ ಕಾರ್ಯ-ಕಾರಣ ಸಂಬಂಧವಿದೆ. ಸಾಹಿತ್ಯದ ಸಮವಾಯಿಕಕಾರಣವು ಜೀವನ. ಸಾಹಿತ್ಯಕಲಾಕೃತಿಯು ಹುಟ್ಟುವುದು ಜೀವನದ ವಸ್ತು (material) ವಿನಿಂದಲೆ. ಬ್ರಹ್ಮನ ಲೀಲಾಕೈವಲ್ಯದಿಂದಲೆ ಸೃಷ್ಟಿಯು ಸ್ವರೂಪವನ್ನು ತಾಳಿದರೂ, ಅದರ ಕರ್ತಾರನು ಮಾತ್ರ ನೀರ ನೆಳಲಿನಂತೆ ಸೃಷ್ಟಿಯಿಂದ ಹೊರತಾಗಿರದಿದ್ದರೂ ಅದರಿಂದ ಅಲಿಪ್ತನಾಗಿರುತ್ತಾನೆ. ಸಾಹಿತಿಯೂ ಜೀವನದ ಆವರಣದಿಂದ ಸುತ್ತುವರಿಯಲ್ಪಟ್ಟಿದ್ದರೂ, ತನ್ನನ್ನೇ ತಾನು ಮರೆತು ಮೂರನೆಯ ಕಣ್ಣಿನಿಂದ ಆ ಜೀವನವನ್ನು ಕೆದಕಿ ಬೆದಕಿ, ಅರೆದು ಒರೆದು ನೋಡುವನು. ಆಗ ಸಾಹಿತಿಯು ತನ್ನ ಅನುಭವ ಸಾಗರದಲ್ಲಿ ಮುಳುಗಿ, ತನ್ನ ಅಂಗೈಹಿಡಿತದಲ್ಲಿ ಸಾರ್ಥಕವಾದ (Significant) ಅನುಭವಗಳನ್ನಷ್ಟೆ ಆಯ್ದುಕೊಂಡು—ಉಳಿದುದನ್ನೆಲ್ಲ ತೊಡೆದುಹಾಕಿ— ಆ ಅನುಭವವಸ್ತುವಿನಿಂದ ಒಂದು ಸುಂದರವಾದ ಅರ್ಥವತ್ತಾದ ಕಲಾಕೃತಿಯನ್ನು ರಚಿಸುವನು. ಅದುವೆ ಸಾಹಿತ್ಯ; ಅನುಭವಗಳ ಮಣಿಮಾಲೆ. ಅನುಭವವು ಆಳವೂ ವಿಶಾಲವೂ ಅಗಾಧವೂ ಇದ್ದಷ್ಟು, ಸಾಹಿತ್ಯವು ಸಾರವತ್ತಾಗಿಯೂ ಸತ್ಯನಿಷ್ಠಗಿಯೂ ಪೂರ್ಣವಾಗಿಯೂ ಪರಿಣಮಿಸುವುದು. ಸರ್ವಜ್ಞನ ಕಾವ್ಯಬಂಧವು ಈ ಅನುಭವಸೂತ್ರದಿಂದ ಹೆಣೆಯಲ್ಪಟ್ಟಿದೆ.

ನಮ್ಮಲ್ಲಿ ಕೆರೆಯನ್ನು ನೋಡಿ ಕಡಲನ್ನು ಬಣ್ಣಿಸಹೋದ ಕವಿಗಳೂ ಉಂಟು; ಮನೆಯ ಜಗಳವನ್ನು ನೋಡಿ ಮಹಾಯುದ್ಧವನ್ನು ಬಣ್ಣಿಸ ಹೋದ ಕವಿಗಳೂ ಉಂಟು. ಆದರೆ ಅವರೆಲ್ಲ ಅನುಭವಸಾಹಿತ್ಯಕ್ಕೆ ಅಪವಾದಗಳು. ಅಷ್ಟಾದಶವರ್ಣನೆಯ ಪರಂಪರಾಶೃಂಖಲೆಯಿಂದ ಬದ್ಧರಾಗಿ, ಅನುಭವದ ಪರಿಜ್ಞಾನಕ್ಕಿಂತ ಅನುಕರಣದ ಪರಜ್ಞಾನದಲ್ಲಿಯೆ ಹೆಚ್ಚು ಆಸಕ್ತರಾದರು. ಸರ್ವಜ್ಞನು ಮಾತ್ರ ಇಂತಹ ನಿಯಮಬದ್ಧತೆಗೆ ಕಟ್ಟುಬೀಳಲಿಲ್ಲ. ಆತನು **ಅನುಭವ ಭಾಂಡಾರಿ.** ಆತನ ಕಾವ್ಯವೆಲ್ಲವೂ ಅನುಭವದ ಎರಕವನ್ನೆ ಹೊಯ್ದು ತೆಗೆದಂತಿದೆ. "ರಾಜನೀತಿಪದ್ಧತಿ"

CC-0. Jangamwadi Math Collection. Digitized by eGangotri

"ದಾನಪದ್ಧತಿ" "ಧರ್ಮಪದ್ಧತಿ" "ಸ್ತ್ರೀಪದ್ಧತಿ" "ಸಮಾಜ ಪದ್ಧತಿ" "ಜ್ಯೋತಿಷ್ಯಪದ್ಧತಿ" ಮೊದಲಾದ ೨೭(೨೯?) ಪದ್ಧತಿಗಳ ಮೇಲೆ, ತನ್ನ ಅನುಭವಸಿದ್ಧವಾದ ಮಾತಿನಲ್ಲಿ, ಸಹಜವಾದ ಶೈಲಿಯಲ್ಲಿ, ಸಾರವತ್ತಾಗಿ ಹೇಳಿದ್ದಾನೆ. ಆತನ ಮಾತುಗಳೆಲ್ಲವು ಇಂದುಮುಂದಿನವರಿಗೆ ಆದರ್ಶವಾದ ನಾಣ್ಣುಡಿಗಳು, ಹಿತೋಪದೇಶಗಳು. ಯಾವುದೇ ವಿಷಯದ ಮೇಲೆ ಮಾತನಾಡಿದರೂ ಆದರ ಮೇಲಿನ ಆತನ ಅನುಭವ ಪ್ರಭುತ್ವವು ತನ್ನ ಅಧಿಕಾರವಾಣಿಯನ್ನು ಸಾರುತ್ತಲೆ ಇರುತ್ತದೆ. "ನಾಡೆಂಬ ದೇಹಕ್ಕೆ ರೂಢಿಯೇ ಪ್ರಾಣ" ಎಂಬ ನನ್ನಿಯ ಮಾತು ತ್ರಿಕಾಲಾನ್ವಯಿತವಾಗಿರುವುದು. ಇದರಲ್ಲಿ ಮಾತಿನ ಹುರುಳಿನೊಡನೆ ಕಾವ್ಯದ ತಿರುಳೂ ಅಡಕವಾಗಿರುವುದು. ಕಾವ್ಯದ ಲಕ್ಷಣವನ್ನು ಸರ್ವಜ್ಞನ ಸಾಹಿತ್ಯದಲ್ಲಿ ನುಡಿನುಡಿಗೂ, ಶಬ್ದಶಬ್ದಕ್ಕೂ ಕಾಣಬಹುದು. ಕೇವಲ ಶಬ್ದಾಲಂಕಾರದಿಂದಲೂ ಅರ್ಥಾಲಂಕಾರದಿಂದಲೂ ಬದ್ಧವಾದುದು ಕಾವ್ಯವಲ್ಲ. 'ಅನಲಂಕೃತ' ವಾಗಿದ್ದರೂ 'ರಸಾತ್ಮಕ'ವಾದುದೇ ಕಾವ್ಯ. ಒಂದೇ ಒಂದು ತೂಕದ ಶಬ್ದವು ಅಗಾಧವಾದ ಚಿತ್ರವನ್ನು ರೂಪಿಸಬಲ್ಲದು. ಇಲ್ಲಿ ದೇಹ—ಪ್ರಾಣಗಳ ರೂಪಕದಿಂದ ನಾಡಿನ ರೂಢಿಯನ್ನು ಮತ್ತಿಷ್ಟು ಅರ್ಥವತ್ತಾಗಿ ಹೇಳಲಾಗಿದೆ. ಪ್ರಾಣವಿಲ್ಲದೆ ದೇಹವು ಬದುಕಲಾರದು; ಹಾಗೆಯೆ ರೂಢಿಯಿಲ್ಲದೆ ನಾಡು ಬಾಳಲಾರದು. ಮೇಲಾಗಿ 'ನಾಡಿ'ಗೆ 'ರೂಢಿ'ಎಂಬ ಪ್ರಾಸವು. ಎಷ್ಟು ಸಹಜತೆಯಿಂದ ಕೂಡಿದೆ! ಆತನ ಪ್ರಾಸವು ತೀರ ಸಹಜಯುಕ್ತವಾದುದರಿಂದ, ಒಮ್ಮೊಮ್ಮೆ ತುಸು ಅವಾಚ್ಯವೆನಿಸಿದರೂ ಕೂಡ, ಹಾಗೆಯೇ ಅದನ್ನೂ ಪ್ರಯೋಗಿಸಿ ಬಿಟ್ಟಿದ್ದಾನೆ ಸರ್ವಜ್ಞ. ಉದಾಹರಣಾರ್ಥವಾಗಿ:

> "ಕುದುರೆಯನ್ನೇರದೆ, ಕದನವನು ಜಯಿಸದೇ,
> "ಸುದತಿಯರೊಲುಮೆಯರಿಯದಿಹ ಅರಸು ತಾ
> ಸಿದಿಗಿಹೆಣದಂತೆ ಸರ್ವಜ್ಞ"

ತಲೆತುರಿಸಿ ಶಬ್ದವನ್ನು ಹುಡುಕಿ, ಕಾವ್ಯರಚನೆಮಾಡಿ ಕೃತಾರ್ಥನೆಂದುಕೊಳ್ಳುವ ಹುಚ್ಚುಕವಿಯ ಹಂಬಲವು ಸರ್ವಜ್ಞನದಲ್ಲ. ದೃಷ್ಟಿಗೆ ಬಿದ್ದುದನ್ನು ದಿಟವಾಗಿ ಬಣ್ಣಿಸುವ ಗಂಡುಗವಿಯು ಆತ. ಅಂತೆಯೆ ಆತನಮಾತಿನಲ್ಲಿ ಮಾರ್ಮಿಕತೆಯೊಡನೆ, ಹೃದಯಭೇದಕವಿಡಂಬನವೂ ಅಡಕವಾಗಿದೆ. 'ಸಿದಿಗಿಹೆಣದಂತೆ'ಎಂಬ ಕಟುವಾತು ಎದೆಯಲ್ಲಿ ಕೂರಲಗಿನಿಂದ ತಿರುಹಿದಂತೆ ಎಸಗುವುದು. ಇದೇ ಬಗೆಯ ವಿಡಂಬನಾತ್ಮಕರೀತಿಯನ್ನು, ಧರ್ಮದ ಜೀವಾಳ ವನ್ನು ಮಿಡಿದುಹೇಳುವ ಮಾತಿನ ಸರಣಿಯಲ್ಲಿ ಕಾಣುವೆವು.

> "ಮುಂಡೆಬೋಳಾದೊಡಂ, ದಂಡಕೋಲ್ವಿಡಿದೊಡಂ
> "ಹೆಂಡತಿಯ ಬಿಟ್ಟು ನಡೆವೊಡಂ, ಗುರುಮುಖ
> ಕಂಡಲ್ಲದಿಲ್ಲ; ಸರ್ವಜ್ಞ"

ಇಂತಹ ಬಾಹ್ಯಾಡಂಬರದ ನಟನೆಯ ಧರ್ಮವು ಸರ್ವಜ್ಞನಿಗೆ ಬೇಡ. ಕುಲವೆಂದರೇನು? "ಯಾತರ ಹೂವಾದರು, ನಾತರೆ ಅದು ಸಾಲದೆ;" "ಜಾತಿ-ವಿಜಾತಿಯೆನಬೇಡ." ಏಕೆಂದರೆ: "ನಡೆವುದೊಂದೇ ಭೂಮಿ; ಕುಡಿವುದೊಂದೇ ನೀರು." ಆದುದರಿಂದ "ಕುಲಗೊತ್ರ ನಡುವೆಯೆತ್ತಣದು!"

೧೮ ನೆಯ ಶತಮಾನದ ಪ್ರಾರಂಭದಲ್ಲಿ ಹೇಳಿದ ಈ ಮಾತಿನ ಸತ್ಯತೆ-ಮಾರ್ಮಿಕತೆಗಳು ಇಂದಿನ ವಿಶ್ವ-ಕುಟುಂಬಿಕ—ವಿಶ್ವಬಂಧುತ್ವದ ಸಮಸ್ಯೆಗೆ ಬೀಗದಕೈಯಂತಿವೆ. ಸರ್ವಜ್ಞನ ಅನುಭವದ ಮಾತುಗಳು ಭವಿಷ್ಯತ್ ಕಾಲದ ಕೈದೀವಿಗೆಯಂತೆ. ಸರ್ವಜ್ಞನು ಯಾವ ರಾಜಾಶ್ರಯದಲ್ಲಿಯೂ ಬೆಳೆದವನಲ್ಲ. ಯಾರ ಪೋಷಣೆಯ ಹಂಗೂ ಅವನ ಸಹಜಸಾಹಿತ್ಯಕ್ಕೆ ತಡೆಮಾಡಲಿಲ್ಲ. ನೋಡಿದುದನ್ನು ಇಡಿಯಾಗಿ ನಿರೂಪಿಸುವ ಪ್ರಾಮಾಣಿಕತೆಯು ಆತನಲ್ಲಿದ್ದಿತು. ಅಂತೆಯೆ ತಾನು ಕಂಡ ಕರ್ನಾಟಕ ದೇಶವನ್ನು "ಬಟ್ಟೆ ಬಟ್ಟೆಯೊಳೆಲ್ಲ ಹೊಟ್ಟೆ ಜಾಲಿಯ ಮುಳ್ಳು" "ಊರು ಸನಿಹದಲಿಲ್ಲ ನೀರೊಂದು ಗಾವುದವು" "ಕಾಡೆಲ್ಲ ಕಸುಗಾಯಿ ನಾಡೆಲ್ಲ ಹೆಗ್ಗಿಡವು" ಎಂದು ಮೊದಲಾಗಿ ಬಣ್ಣಿಸಿರುವನು. ಆದರೆ ಈ ವರ್ಣನೆಯೆತ್ತ! 'ಮೋಡಿಯ ಮುಂಟಪಂ ಸಿರಿಯ ಪೆರ್ಚುಗೆಗೊಳ್ಮನೆ.... ಕನ್ನಡದ ನಾಡು ವಿರಾಜಿಪುದೆಂತು ಬಣ್ಣಿಪೆಂ" ಎಂಬ ಚಿಕುಪಾಧ್ಯಾಯನ ಹಾಗೂ "ಕನ್ನಡನಾಡು ಸಿಪ್ಪಾ ನಾಡು ಚೆಲ್ವಾಯ್ತು ಮೆಲ್ಲೆಲರಿಂ ಪೂತ ಕೊಳಂಗಳಿಂ ಕೆರೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ" ಎಂಬ ಆಂಡಯ್ಯನ ವರ್ಣನೆಗಳೆತ್ತ? ಆದರೆ ಮಲೆನಾಡ ವರ್ಣನೆಯಲ್ಲಿ ಮಾತ್ರ ಸರ್ವಜ್ಞನು ಮೋಹಗೊಂಡು ಹೇಳಿದ್ದಾನೆ—

> "ಅಲ್ಲವರಿಸಿಣವುಂಟು; ಬೆಲ್ಲ ಬಿಳಿಯೆಲೆಯುಂಟು
> ಒಳ್ಳೆ ಹಲಸುಂಟು ಮೆಲಲಿಕ್ಕೆ ಮಲೆನಾಡ
> ಅಲ್ಲೆನ್ನಬಹುದೆ ಸರ್ವಜ್ಞ"

"ನೆನೆವುದೆನ್ನಮನಂ ಬನವಾಸಿ ದೇಶಮಂ" ಎಂದು ಮನವಾರೆ ಹಾಡಿದ ಪಂಪನ ನುಡಿಯಾದರೂ ಮೇಲಿನ ಮಾತನ್ನೆ ಸ್ಪಷ್ಟಗೊಳಿಸುತ್ತದೆ.

ಇಂದಿಗೂ ಸರ್ವಜ್ಞನ ನುಡಿಗಳೆಂದರೆ ಗಾದೆಯ ಮಾತುಗಳಾಗಿವೆ; ನಾಣ್ಣುಡಿಗಳಾಗಿವೆ:

CC-0. Jangamwadi Math Collection. Digitized by eGangotri

" ಊರಿಂಗೆ ದಾರಿಯನು ಯಾರು ತೋರಿದಡೇನು ?
ಸಾರಾಯದಾ ನಿಜವ ತೋರುವಾ ಗುರುವು
ಯಾರಾದಡೇನು ಸರ್ವಜ್ಞ "

" ಮೊಸರು ಕಡೆಯಲು ಬೆಣ್ಣೆಯೆಸೆದು ತೋರುವ ತೆರದಿ
ಹಸನುಳ್ಳ ಗುರುವಿನುಪದೇಶದಿಂ ಮುಕ್ತಿ
ವಶವಾಗದಿಹುದೆ ಸರ್ವಜ್ಞ ? "

ಒಂದೊಂದು ಮಾತಿನಲ್ಲಿ ಸತ್ತ್ವದ ಅರ್ಥವನ್ನು ಹುದುಗಿಸಿಕೊಂಡಿರುವ ನುಡಿಗಳೂ ಅನೇಕ:

೧ " ಹಸಿಯು ಸನುಹೆಯು ತಂದು ಹೊಸೆದರುಂಟೇ ಕಿಚ್ಚು ? "
೨ " ಆ ದೇವ ಈ ದೇವ ಮಾಣೇವನೆನಬೇಡ "
೩ " ಕೊಲುವ ಕೈಯೊಳು ಪೂಜೆ; ಮೆಲುವ ಬಾಯೊಳು ಮಂತ್ರ "
೪ " ಜಾತಿಹೀನರ ಮನೆಯ ಜ್ಯೋತಿ ತಾ ಹೀನವೆ ? "
೫ " ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ "
೬ " ಲೋಕಕ್ಕೆ ಕಣ್ಣು ಕಾರಣ "
೭ " ಚಂದನನ ಕರಗಿಸಲು ಬೆಂದು ಪರಿಮಳವಕ್ಕು "
೮ " ತನ್ನ ನೋಡಲಿ ! ಎಂದು ಕನ್ನಡಿಯು ಕರೆಯುವುದೆ? "
೯ " ಉನ್ನತ ಗಜವೇರಿ ಬಪ್ಪವನು ಕುನ್ನಿಗಂಜುವನೆ ? "
೧೦ " ಮುತ್ತು ನೀರಲಿ ಹುಟ್ಟಿ ಮತ್ತೆ ನೀರಪ್ಪುದೆ ? "
೧೧ " ದಾನಿಗೆ ದೀನವ್ಯಾಕೆ. "
೧೨ " ಉತ್ತಮರು ತಪ್ಪಿನಡೆದರೆ ಲೋಕವಿನ್ನೆತ್ತ ಸೇರುವುದು?"
೧೩ " ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ. "
೧೪ " ಸಜ್ಜನರ ಸಂಗವು ಹೆಜ್ಜೇನು ಸವಿದಂತೆ. "
೧೫ " ಮಾನೇಶನೇ ಈಶ. "
೧೬ " ಹಾಲುಂಬ ಹಂಸವನು ಹೋಲಬಲ್ಲನೆ ಯೋಗಿ? "
೧೭ " ಹೆಣ್ಣೆಂಬ ಹಂಚ ನೆಚ್ಚುವರೆ ? "
೧೮ " ಹೆಣ್ಣನ್ನು ನಂಬಿದವ ಕೆಡುವ. "
೧೯ " ಸೂಳೆಗೆ ಸತ್ಯವಿಲ್ಲ. "
೨೦ " ಆಕೆಯನು ಕಂಡು ಮನೆಯಾಕೆಯನು ಮರೆದರೆ ಹಾಕಿದ ಉಂಕೆ ಹರಿದಂತೆ. "
೨೧ " ನಾರಿಯೇ ಮಾರಿ"
೨೨ " ಒಡಲೆಂಬ ಹುತ್ತಕ್ಕೆ ನುಡಿವ ನಾಲಿಗೆ ಸರ್ಪ "
೨೩ " ಹಂಗಿನರಮನೆಗಿಂತ ಹಿಂಗಡದ ಗುಡಿ ಲೇಸು "
೨೪. "ಕಂಡದ್ದನಾಡೆ ಭೂಮಂಡಲವು ಮುನಿಯುವುದು."
೨೫. "ಬಡತನವೆಂಬ ಹುಲಿಗೂಡಿ ಬರುವಾಗ ನುಡಿಸುವವರಿಲ್ಲ."
೨೬. "ಹೆರೆಹೋದ ಉರಗನಾ ಗರಳತಾ ತಪ್ಪುವುದೆ ?"
೨೭. "ಮುಟ್ಟಾದ ಹೊಲೆಯೊಳೂ ಹುಟ್ಟುವುದು ಜಗವೆಲ್ಲ."
೨೮. "ಮುನ್ನ ಮಾಡಿದ ಪಾಪ ಹೊನ್ನಿಂದ ಪೋಪುದೆ ?"
೨೯. "ಎಲ್ಲರಾಸೆಯ ಬಿಟ್ಟಡಿಲ್ಲಿಯೇ ಕೈಲಾಸ."
೩೦. "ಭ್ರಷ್ಟದೈವಕೆ ಬಾಯ ಬಿಟ್ಟಲ್ಲಿ ಫಲವಿಲ್ಲ."

ಅನುಭವದ ಆವಿಷ್ಕರಣ ಮಾತ್ರವೇ ಸಾಹಿತ್ಯವಲ್ಲ; ಸಾಹಿತ್ಯದ ಸ್ವರೂಪ ಬರಬೇಕಾದರೆ ಆ ಮಾತಿಗೆ ಕಾವ್ಯದ ಮೆರುಗುಬೇಕು. ಸರ್ವಜ್ಞನ ಸಾಹಿತ್ಯದ ಮಟ್ಟಿಗೆ ಅದು ಕಾವ್ಯಗುಣಪರಿಪೂರ್ಣವಾಗಿದೆಯೆಂದೇ ಹೇಳಬೇಕು. ಜನಸಾಮಾನ್ಯವಾಣಿಯಲ್ಲಿಯೆ ಕಾವ್ಯವನ್ನು ಬರೆಯಬೇಕೆಂದು ಪೂಣ್ದು ಪ್ರಯೋಗಮಾಡಿ, ವರ್ಡ್ಸ್‌ವರ್ಥ್‌ಕವಿಯು ಯಶಸ್ವಿಯಾದನೊ ಇಲ್ಲವೊ; ಸರ್ವಜ್ಞನು ಮಾತ್ರ ತನ್ನ ಕಾವ್ಯವನ್ನು ಜನಸಾಮಾನ್ಯರ ಮಾತಿನಲ್ಲಿಯೆ ಸರಸವಾಗಿ ಹೇಳಿದನು. ಹೇಳುವ ಭಾಷೆ ಸರ್ವಸಾಮಾನ್ಯವಾದುದಾದರೂ ಅದರೊಳಗಿನ ಭಾವಸಾದೃಶ್ಯಗಳು ಅಸಾಮಾನ್ಯವಾಗಿವೆ. ಸರ್ವಜ್ಞನ ಉಪಮೆಗಳೆಂದರೆ ಅನುಭವದಿಂದ ಹೊರಹೊಮ್ಮಿದ ಹೃದಯೋದ್ಗಾರಗಳು. ಆತನು ಒಮ್ಮೊಮ್ಮೆ ಉಪಮೆಗಳ ಮಾಲೆಯನ್ನೆ ಹೆಣೆದು ಕಾವ್ಯಕನ್ನೆಯ ಕೊರಳಿಗೆ ಕಟ್ಟುತ್ತಾನೆ.

"ಅತ್ತಿಗಿಡಕ್ಹೂವಿಲ್ಲ; ಕತ್ತೆಗೇ ಕೋಡಿಲ್ಲ;
ಹತ್ತಿಯ ಹೊಲಕೆ ಗಿಳಿಯಿಲ್ಲ; ಸೂಳೆಗೆ
ಸತ್ಯವಿಲ್ಲೆಂದ ಸರ್ವಜ್ಞ."

ಮನೆಮಾತಿನ ರೀತಿಯಲ್ಲಿ ಹೇಳಿದರೂ—ವಿಶ್ವದ ಅನುಭವದ ಮಾರ್ಮಿಕತೆ ಇದರಲ್ಲಿದೆ. ಒಂದೊಂದು ದೃಷ್ಟಾಂತವೂ ಸಹಜಪ್ರಾಸಬದ್ಧವಾಗಿರುವುದರಿಂದ, ಅದಕ್ಕೆ ಬೆಡಗು ಬಂದಿದೆ. ಇದುವೆ ಗಾದೆಯ ಮಾತಿನ ಗುಟ್ಟುನೀತಿ. 'ಅತ್ತಿ' 'ಕತ್ತೆ' 'ಹತ್ತಿ' ಇವುಗಳ ಸಹಜತೆ (Spontecisy) ಯು ತಡೆಯಿಲ್ಲದೆ ನಿರರ್ಗಳವಾಗಿ ಹರಿಯುವ ಸೆಳವುಳ್ಳ ಹೊನಲಿನಂತಿದೆ. ಈ ಬಗೆಯ ಇನ್ನೂ ಅನೇಕ ಉದಾಹರಣೆಗಳನ್ನು ನೋಡಬಹುದು—

" ಒಕ್ಕಲಿಗನೋದಲ್ಲ; ಬೆಕ್ಕು ಹೆಬ್ಬುಲಿಯಲ್ಲ;
ಎಕ್ಕೆಯೂ ಗಿಡವು ಬನವಲ್ಲ; ಇವು ಮೂರು
ಲೆಕ್ಕದೊಳಗಲ್ಲ ಸರ್ವಜ್ಞ"

ಈ ಬಗೆಯ ಛಂದದ ಚೆಂದನುಡಿಯು ಸರ್ವಜ್ಞನಿಗೇ ವಿಶಿಷ್ಟವಾಗಿದೆ. ಜನಪದಸಾಹಿತ್ಯಕ್ಕೆ, ಸರ್ವಜ್ಞನ ಸಾರನುಡಿಗಳು ತಕ್ಕ ದೃಷ್ಟಾಂತಗಳಾಗಿವೆ. ಪಂಪನಿಂದ "ಚಂಪೂಕಾವ್ಯ" ವು ನೈವೆತ್ತಂತೆಯೂ ಹರಿಹರ, ರಾಘವಾಂಕರಿಂದ "ರಗಳೆಷಟ್ಪದಿ"ಗಳ ನವಜನ್ಮವಾದಂತೆಯೂ, ಶಿಶುಮಾಯಣನಿಂದ"ಸಾಂಗತ್ಯವು" ಅವತರಿಸಿದಂತೆಯೂ, ಸರ್ವಜ್ಞನಿಂದ "ತ್ರಿಪದಿ"ಯು ಬಳಕೆಗೆ ಬಂದಿತೆನ್ನಬಹುದು. ಸರ್ವಜ್ಞನೆ 'ತ್ರಿಪದಿ'ಯನ್ನು ಹುಟ್ಟಿಸಿರಲಿಕ್ಕಿಲ್ಲ.

CC-0. Jangamwadi Math Collection. Digitized by eGangotri

(ಏಕೆಂದರೆ ೭ನೆಯ ಶತಮಾನದ ಬಾದಾಮಿಯ ಚಾಲುಕ್ಯ ರಾಜನಾದ ಮಂಗಳೀಶನ ಕಾಲದ ಒಂದು ಶಾಸನದಲ್ಲಿ ಒಂದು 'ತ್ರಿಪದಿ'ಯು ಉಪಲಬ್ಧವಾಗಿದೆ.) ರಾಘವಾಂಕನೂ ಷಟ್ಪದಿಯನ್ನು ಹುಟ್ಟಿಸಲಿಲ್ಲ—ಬೆಳೆಯಿಸಿದನು.

ಅನುಭಾವಿಗಳಾದ ವಚನಕಾರರು ದ್ವಂದ್ವಾತೀತ ಸತ್ಯವನ್ನು ಸಮಾಧಿಯ ಒಳಬೆಳಕಿನಿಂದ ಬೋಧಿಸಲು ಪ್ರಯತ್ನಿಸಿದ್ದರೆ, ಸರ್ವಜ್ಞನು ವ್ಯಾವಹಾರಿಕಸತ್ಯವನ್ನು ಅನುಭವದ ಹೊರಬೆಳಕಿನಲ್ಲಿ ಸಾರಿದನು. ಅವರು ಶೂನ್ಯ ತತ್ತ್ವಕ್ಕೆ ಕೈಚಾಚಿದರೆ, ಈತನು ಮರ್ಯಾದಿತ ಸತ್ಯವನ್ನು—ಅಂಗೈನೆಲ್ಲಿಯಂತೆ—ಒಂದೆ ಹಿಡಿತದಲ್ಲಿ ಹಿಡಿದು ತೋರಿಸಿದನು. ಅಂತೆಯೆ ಈತನ ಉಪಮೆಗಳು ಅಷ್ಟೊಂದ ಸಮಂಜಸವಾಗಿಯೂ ಚೊಕ್ಕಾಗಿಯೂ ಹೊರಹೊಮ್ಮಿವೆ—

"ಸುಣ್ಣವಿಲ್ಲದ ವೀಳ್ಯ; ಬಣ್ಣವಿಲ್ಲದ ಮದುವೆ
ಹೆಣ್ಣಿಲ್ಲದವನ ಸಂಸಾರ, ಮಳಲೊಳಗೆ
ಯೆಣ್ಣೆಹೊಯಿದಂತೆ ಸರ್ವಜ್ಞ"

ಸುಣ್ಣವಿಲ್ಲದೆ ವೀಳ್ಯವು ರುಚಿಯಲ್ಲ; ಅಡುಗೆಗೆ ಉಪ್ಪು ಇದ್ದಂತೆ ಅದು. ಇದರ ಸತ್ಯತೆಯು ಎಂತಹ ಸಾಮಾನ್ಯರ ಅನುಭವಕ್ಕೂ ಬಂದಿರುವಂತಹದು. ಹಾಗೆಯೆ ಮದುವೆಯೆಂದ ಮೇಲೆ ಅದಕ್ಕೆ ರಂಗು ಬೇಕು—ಬಣ್ಣ ಬೇಕು. ಸುಣ್ಣ-ಕಾರಣಿಗಳು ಬೇಕು.

ಅದರಂತೆಯೆ ಹೆಣ್ಣಿಲ್ಲದವನ ಸಂಸಾರ. ಇವು ಮೂರೂ ದೃಷ್ಟಾಂತಗಳು ಸರ್ವಜ್ಞನ ಸ್ವಾನುಭವಸಾಹಿತ್ಯದ ಹೆಗ್ಗುರುತುಗಳು.

"ರಾಗವಿಲ್ಲದ ವಿದ್ಯೆ"ಯೂ "ಭೋಗವಿಲ್ಲದ ಸಿರಿ"ಯೂ" "ತ್ಯಾಗವಿಲ್ಲದ ದೊರೆತನವೂ" "ಹಾಳೂರ ಗೂಗೆ"ಯಂತೆ.

ಸರ್ವಜ್ಞನ ಅನುಭವವಿಸ್ತಾರವನ್ನು ನೋಡಬೇಕಾದರೆ ಆತನು ಬಣ್ಣಿಸಿರುವ ಒಂದೊಂದು ಪದ್ಧತಿಯ ಮೇಲಿನ ಆತನ ಟೀಕೆಗಳನ್ನೂ, ಎಸಿಸಿಕೆಗಳನ್ನೂ ನೋಡಿಕೊಳ್ಳಬೇಕು:

ಸಾಲವನ್ನು ತರುವಾಗ ಯಾರಿಗಾದರೂ ತಮ್ಮ ಎಡರು ಅಳಿಯಿತೆಂದು ಹಿಗ್ಗು ಆಗುವುದೇ ನಿಜ. ಆಗ ಅದನ್ನು ತೀರಿಸುವ ಮುಂದಿನ ಯೋಚನೆ ಅವರಿಗೆ ಬರುವುದಿಲ್ಲ. ಸರ್ವಜ್ಞನು ಸ್ವತಃ ಸಾಲಿಗನಾಗಿದ್ದನೊ ಇಲ್ಲವೊ, ಸಾಲಿಗರ ಅನುಭವಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದ್ದನೆಂಬುದಕ್ಕೆ ಸಂಶಯವಿಲ್ಲ. ಅಂತೆಯೆ ಸಾಲಿಗನ ಸ್ಥಿತಿಯನ್ನು ಇಷ್ಟೊಂದು ಹೃದ್ಯವಾಗಿ ಹೇಳಿದ್ದಾನೆ—

"ಸಾಲವನು ತರುವಾಗ ಹಾಲು ಬೋನುಂಡಂತೆ.
ಸಾಲಿಗನು ಬಂದು ಕೇಳಿದರೆ, ಕುಂಡೆಗೆ
ಚೇಳು ಕಡಿದಂತೆ—ಸರ್ವಜ್ಞ."

ಹೇಳುವುದರಲ್ಲಿ ತೀರ ವಾಚ್ಯವೆನಿಸುತ್ತಿದ್ದರೂ, ಸತ್ಯದ ಸೂಚ್ಯತೆಯು ಅದರಲ್ಲಿ ಇಲ್ಲದೆ ಇಲ್ಲ.

'ಭಕ್ತಿ'ಯೆಂದರೆನು? "ಬಟ್ಟೆಯಾ ಕಲ್ಲಿಂಗೆ ಒಟ್ಟೆ ಪತ್ರಿಯ ಸಿಟ್ಟು, ಕಟ್ಟಿದ ಲಿಂಗವಡಿಯಾಗೆ, ಶರಣೆಂಬ-ಭ್ರಷ್ಟ"ತೆಯು ಭಕ್ತಿಯಲ್ಲ, ಹೊರಗಿನ ಆಚಾರಗಳಲ್ಲಿ ಭಕ್ತಿಯಿಲ್ಲ. ಒಳಗಿನ ಅಧ್ಯಾತ್ಮದಲ್ಲಿ ಭಕ್ತಿಯಿದೆ. ದೇವನನ್ನು ಅಂತಃಕರಣದಲ್ಲಿ ಅಡಗಿಸಿಗೊಂಡು ಒಳಗಣ್ಣಿನಿಂದ ಎದೆಯ ಬೆಳಕಿನಲ್ಲಿ ಅದನ್ನು ಕಾಣುವ ತನ್ಮಯತೆಯೆ ಭಕ್ತಿ. ಬರಿ ಜಪಮಾಡುವುದು ಭಕ್ತಿಯಲ್ಲ. ಅದು ದೇವವಂಚನೆ. ಭಕ್ತಿಯಿದ್ದೂ ಹೊರಗಿನ ಅಲಂಕಾರವಿದ್ದಲ್ಲಿ ಭಕ್ತಿಯ ಪರಾಕಾಷ್ಠತೆಯಿದ್ದಿರಬಹುದು. ಹಾಗಿಲ್ಲದೆ—

"ಎಣಿಸುತಿರ್ಪುದು ಬಾಯಿ; ಪೊಣರುತಿರ್ಪುದು ಬೆರಳು; ಕ್ಷಣಕೊಮ್ಮೆಯೊಂದನೆಣಿಸುವಾ ಜಪಕೊಂದು ಕುಣಿಕೆ" ಮಾತ್ರ ಉಂಟು. ಶಿವನನ್ನು ಸೆರೆವಿಡಿದು ಲಿಂಗದ ಬಟ್ಟಲಲ್ಲಿ ಬಂಧಿಸಿದರೆ ಭಕ್ತಿಯಾಗಲಿಲ್ಲ—ಶಿವನು ಕಳ್ಳನೆ ಹಾಗೆ ಬಂಧಿಸಲಿಕ್ಕೆ?

"ಕಟ್ಟಲೂ ಬಿಡಲು ಶಿವ ಬಟ್ಟಲನ ಕದ್ದನೆ?
ಕಟ್ಟಲೂ ಬೇಡ! ಬಿಡಬೇಡ."

ಆದರೆ ಭಕ್ತಿಯ ಚಿಹ್ನವೇನು? "ಕಣ್ಮನವ ಕಟ್ಟದರೆ ಸಾಕು." ಇಂಥವನೇ ನಿಜವಾದ ಭಕ್ತನೆಂದು ಹೇಳುವುದರಲ್ಲಿ ಯಾವ ಸಂದೇಹವೂ ಇಲ್ಲ. ಏಕೆಂದರೆ

"ಇಂದುವಿನೊಳುರಿಯುಂಟೆ? ಸಿಂಧುವಿನೊಳರಬುಂಟೆ?
ಸಂದ ವೀರನೊಳು ಭಯವುಂಟೆ? ಭಕ್ತಿಗೆ
ಸಂದೇಹವುಂಟೆ ಸರ್ವಜ್ಞ?"

ಸ್ತ್ರೀಜಾತಿಯ ಮೇಲೆ ಮಾತ್ರ ಸರ್ವಜ್ಞನು ತನ್ನ ಕಿಡಿಗಣ್ಣನ್ನೆ ತೆರೆದಿದ್ದಾನೆ. "The hand that rocks the cradle rules the world" (ತೊಟ್ಟಿಲನ್ನು ತೂಗುವ ಕೈಯೆ ತಿರೆಯನ್ನಾಳುವುದು.) ಎಂಬ ಅಭಿಪ್ರಾಯವೆತ್ತ! "ಹೆಣ್ಣೆಂಬ ಹಂಚ ನೆಚ್ಚುವರೆ?" ಎಂಬ ಅಭಿಪ್ರಾಯವೆತ್ತ! ಮಿಲ್ಟನ್ ಕವಿಯ ಸ್ತ್ರೀಯರ ವಿಷಯಕ ಮನೋವೃತ್ತಿಗಿಂತಲೂ ಇದು ಕಟುತರವಾಗಿದೆ. 'ಸ್ತ್ರೀಗೆ ಗಂಡನೇ ದೈವ' ಎಂಬ ಭಾವನೆಯು ಮಿಲ್ಟನ್ ಕವಿಯದಾದರೆ (He for God alone and she for God in him.) "ಲಲನೆಯರ ಒಲುಮೆ....ಮಲರೋಗದಂತೆ"

CC-0. Jangamwadi Math Collection. Digitized by eGangotri

"ನಾರಿಯೇ ಮಾರಿ" ಎನ್ನುವುದಕ್ಕಿಂತ "ನಾರಿಯೆ ದಾರಿ" ಎನ್ನಬೇಕು. ಸಂಸಾರದ ತಾಳಕ್ಕೆ ಹೆಣ್ಣು, ಗಂಡು ಎಂಬ ಎರಡೂ ಕೈಗಳ ಚಪ್ಪಾಳೆ ಬೇಕು. ಆಗ ಮಾತ್ರ ಆ ತಾಳಕ್ಕೆ ನಾದವು ಬಂದು, ತಾಳದ ಮೇಳವು ಯುಕ್ತವಾಗುತ್ತದೆ. ಮುಖ್ಯ ಸರ್ವಜ್ಞನ ಸ್ತ್ರೀವಿಷಯಕವಾದ ಮಾತುಗಳೆಲ್ಲವೂ ಆಗಿನ ಕಾಲದ ಸ್ತ್ರೀಸಮಾಜದ ಕನ್ನಡಿಯಿರಬಹುದೆ?.... ಎಂಬ ಪ್ರಶ್ನೆಯೂ ಏಳುತ್ತಿದೆ. ಅಥವಾ ಸರ್ವಜ್ಞನ ಅನುಭವಕ್ಕೆ ಬಂದ ಸ್ತ್ರೀಸಂಪರ್ಕದ ಬಗೆಯೆ ಈ ತೆರದ್ದಾಗಿರಬೇಕೆ ?

> "ಜಾತಿ ವಿಜಾತಿಯೆನಬೇಡ! ದೇವನೊಲಿ-
> ದಾತನೇ ಜಾತ."

ಅಂಥವರು ಕೀಳುಜಾತಿಯವರಾದರೇನು ಮೇಲುಜಾತಿಯವರಾದರೇನು? "ಜಾತಿಹೀನರ ಮನೆಯ ಜ್ಯೋತಿ ತಾ-ಹೀನವೆ?" ಜಾತಿಸಂಕರಗಳ ಮೇಲಿನ ಆಗಿನ ಅವಸ್ಥಾ-ಭೇದವನ್ನು ಇದರಿಂದ ಊಹಿಸಿಕೊಳ್ಳಬಹುದಾಗಿದೆ.

ಜನತೆಯು ಯಾವಾಗಲೂ ಗುಣಕ್ಕಿಂತ ಸ್ಥಾನಕ್ಕೆ ಹೆಚ್ಚು ಬೆಲೆಕೊಡುವ ಸ್ವಭಾವವುಳ್ಳದಾಗಿದೆ. ಇದನ್ನು ಸರ್ವಜ್ಞನೂ ಅರಿಯದಿಲ್ಲ.

> "ಬಡವನೊಳ್ಳೆಯ ಮಾತ ನುಡಿದರಲ್ಲೆಂಬುವರು;
> ಪೊಡವೀಶ ಜೊಲ್ಲೊಡನೆಯೇ ತಾನು ಕೂಗಿದರು
> ಕಡುಮೆಚ್ಚುತಿಹರು ಸರ್ವಜ್ಞ."

ಈ ಬಗೆಯಾಗಿ ಸರ್ವಜ್ಞನ ತ್ರಿಪದಿಗಳಲ್ಲಿ ಕಾವ್ಯಗುಣ; ಅನುಭವದ ವಿಸ್ತಾರಗಳೊಂದಿಗೆ ಸಾಮಾಜಿಕ ಅವಸ್ಥೆಯೂ ಚಿತ್ರಿತವಾಗಿದೆ ಅಲ್ಲಲ್ಲಿ. ಆಗಿನ ಸಾಮಾಜಿಕ ಆಶೆ-ನಂಬಿಕೆ-ಭಾವ-ದೃಷ್ಟಿಗಳಿಗೂ ಈಗಿನವುಗಳಿಗೂ ಎಷ್ಟೋ ವ್ಯತ್ಯಾಸವಿರಬಹುದು. ಆದರೆ ಹುರುಳು ತಿರುಳಿನಲ್ಲಿ ಎಲ್ಲವೂ ಒಂದೆಯೆನ್ನಬೇಕು.

> "ಕೊಟ್ಟದ್ದು ತನಗೆ ಬೈಚಿಟ್ಟದ್ದು ಪರರಿಂಗೆ;
> ಕೊಟ್ಟದ್ದು ಕೆಟ್ಟತೆನಬೇಡವದು ಮುಂದೆ
> ಕಟ್ಟಿಹುದು ಬುತ್ತಿ; ಸರ್ವಜ್ಞ"

ಭವಿತವ್ಯತೆಯ ಕನಸನ್ನು ನಚ್ಚದ ಇಂದಿನ ವೈಜ್ಞಾನಿಕರು "ಮುಂದೆಕಟ್ಟಿಹುದು ಬುತ್ತಿ" ಎಂಬ ನೀತಿಯನ್ನು ನಂಬಲಿಕ್ಕಿಲ್ಲ. ಆದರೆ ಬಡವರಿಗೆ ಸಿರಿವಂತರು ಕೊಡಬೇಕೆಂಬ ಇಂದಿನ ವಿಶ್ವಬಂಧುತ್ವದ-ಜೊಲ್ಮೆವಿಜಮ್ಮಿನ-ದೃಷ್ಟಿಯಿಂದಾದರೂ ಈ ಮಾತು ತೂಕವುಳ್ಳದಾಗಿರುತ್ತದೆ. ಇನ್ನೂ ಕೆಲವೆಡೆಗೆ ಸರ್ವಜ್ಞನು ತನ್ನ ವಿಧಾನಗಳನ್ನು ಸಾರ್ಥವತ್ತಾಗಿ ಪೂರೈಸುವುದಕ್ಕಾಗಿ, ಕೆಲವು ಪೌರಾಣಿಕ-ದಂತಕಥೆಗಳ ದೃಷ್ಟಾಂತಗಳಿಗೆ ಮೊರೆವೊಗುತ್ತಾನೆ. ಆದರೆ ವ್ಯಾವಹಾರಿಕಸತ್ಯಕ್ಕೆ ದಂತಕಥೆಗಳ ದೃಷ್ಟಾಂತಗಳು ಇಂದಿನ ವೈಜ್ಞಾನಿಕದೃಷ್ಟಿಯ ವಿಮರ್ಶಕನಿಗೆ ನೆಚ್ಚಿಗೆಯನ್ನುಂಟುಮಾಡಲಿಕ್ಕಿಲ್ಲ. 'ಜಗಕೆ ಒಬ್ಬನಲ್ಲದೆ ಇಬ್ಬರುಂಟೆ?' ಎಂದು 'ಸರ್ವಜ್ಞನಿಗೆ ಹೇಳಬೇಕಾಗಿದೆ. ಆ ಒಬ್ಬನೆಂದರೆ ದ್ವಂದ್ವಾತೀತನಾದ ಪರಮೇಶ್ವರನು—"ಭುವನ ಪ್ರಾಣಿಗಳಿಗಾದಪನು." ಅವನು ಬ್ರಹ್ಮನಲ್ಲ ವಿಷ್ಣುವಲ್ಲ, ರುದ್ರನಲ್ಲ. ಆದರೆ ಈ ಮಾತನ್ನು ಸಮರ್ಥಿಸುವ ಸರ್ವಜ್ಞನ ರೀತಿಯೆಂತಹದಿದೆ ನೋಡಿರಿ—

> "ಬೊಮ್ಮ ನಿರ್ಮಿಪನೆಂಬ ದುರ್ಮತಿಯೆ ನೀ ಕೇಳು!
> ಬೊಮ್ಮನ ಸತಿಗೆ ಮೂಗಿಲ್ಲವಾ ಮೂಗ
> ನಿರ್ಮಿಸನೇಕೆ ? ಸರ್ವಜ್ಞ."

ದಕ್ಷನನ್ನು ಸಂಹಾರಗೊಳಿಸುವುದಕ್ಕಾಗಿ ಶಿವನಿಂದ ಅಟ್ಟಲ್ಪಟ್ಟ ರಣವೀರಭದ್ರನು ಅಲ್ಲಿ ನೆರೆದಿದ್ದ ದೇವತೆ-ಗಳನ್ನೂ ಅವಯವಭಿನ್ನರನ್ನಾಗಿ ಮಾಡಿದನಂತೆ. ಆಗ ಸರಸ್ವತಿಯ ಮೂಗು ಭಿನ್ನವಾಯಿತಂತೆ. ಬ್ರಹ್ಮನು ಸೃಷ್ಟಿಕರ್ತನೇ ಆಗಿದ್ದರೆ ಸ್ವತಃ ಹೆಂಡತಿಯ ಮೂಗನ್ನೇಕೆ ನಿರ್ಮಿಸಲಿಲ್ಲವೆಂದು ಸರ್ವಜ್ಞನ ಆರೋಪ.

ಆದರೆ ಕೆಲವೆಡೆಗಳಲ್ಲಿ ಇಂತಹ ಕವಿಕಲ್ಪನಾತ್ಮಕ ದೃಷ್ಟಾಂತಗಳು ವಾಸ್ತವಿಕರೀತಿಯಿಂದ ಗುಣವೆನಿಸಿದರೂ ಕವಿಯ ಪ್ರತಿಭೆಯನ್ನು ಕಂಡುಹಿಡಿಯುವುದಕ್ಕೆ ಒಳ್ಳೆಯ ಉದಾಹರಣೆಗಳಾಗಿವೆ.

> "ತನ್ನ ನೋಡಲಿ ಎಂದು ಕನ್ನಡಿಯು ಕರೆಯುವುದೆ ?
> ತನ್ನಲ್ಲಿ ಜ್ಞಾನವುದಿಸಿದ ಮಹಾತ್ಮನು
> ಕನ್ನಡಿಯಂತೆ ಸರ್ವಜ್ಞ."

ನಿಜವಾದ ಜ್ಞಾನಿಯು ತುಂಬಿದ ಕೊಡದಂತೆ ಆರ್ಭಟಿ ಮಾಡದೆ, ವನದಲ್ಲಿ ಅಡಗಿದ ಮಲ್ಲಿಗೆಯಂತೆ ತನ್ನ ಕೀರ್ತಿಪರಿಮಳವನ್ನು ಪಸರಿಸುತ್ತಾನೆ. ಹೇಗೆ ಕನ್ನಡಿಯು "ತನ್ನ ನೋಡಲಿ ಎಂದು" ಕರೆಯುವುದಿಲ್ಲವೊ ಹಾಗೆಯೆ ಜನರಿಗೆ ಆತನು 'ನಾನು ಜಾಣನಿರುವೆ, ನನ್ನೆಡೆಗೆ ಬನ್ನಿರಿ'! ಎಂದು ಘೋಷಿಸುವುದಿಲ್ಲ. ಆದರೆ ಒಬ್ಬ ವಿಜ್ಞಾನಿಯು "ಕನ್ನಡಿಯು ಹೇಗೆ ಕರೆಯಬೇಕು? ಅದಕ್ಕೇನು ಜೀವವಿರುತ್ತದೆಯೆ?" ಎಂದು ಪ್ರಶ್ನೆಮಾಡಬಹುದು. ಅದು ನಿರ್ಜೀವವು, ಅದು ಕರೆಯಲಾರದು, ಎಂಬುದನ್ನೆ ಅದಕ್ಕೊಂದಿಷ್ಟು ಕಾವ್ಯದ ಮೆರುಗುಕೊಟ್ಟು, ಉತ್ಪ್ರೇಕ್ಷಾ ರೀತಿಯಲ್ಲಿ ಹೇಳಲಾಗಿದೆಯೆಂದು ಉತ್ತರ ಕೊಡಬೇಕಾಗು-ವುದು. ಇದ್ದ ಸಂಗತಿಯನ್ನು ಚಮತ್ಕಾರಿಕವಾಗಿ ಹೇಳುವುದ-ರಲ್ಲಿ ಕಾವ್ಯದ ಸೊಗಸು. ಇದೇ ಬಗೆಯ ಉತ್ಪ್ರೇಕ್ಷೆಗಳನ್ನು

CC-0. Jangamwadi Math Collection. Digitized by eGangotri

ಸರ್ವಜ್ಞನು ಇನ್ನೂ ಹಲವೆಡೆಗೆ ಸಮಯವರಿತು ಚಿತ್ತಾಕರ್ಷಕವಾಗುವಂತೆ ಪ್ರಯೋಗಿಸಿದ್ದಾನೆ. ಇಲ್ಲಿ ಒಬ್ಬ ಬಡವನ ಚಿತ್ರವನ್ನು ಕೊಡುತ್ತಾನೆ. ಬಡವನೆಂದರೆ ಯಾರೂ ಕಣ್ಣೆತ್ತಿ ಸಹ ನೋಡರು. ಆದರೆ ಅದನ್ನೆ ಕವಿಯು ತನ್ನ ಉತ್ಪ್ರೇಕ್ಷೆಯ ಮಿರುಗುಕೊಟ್ಟು ಎಷ್ಟು ಚಮತ್ಕಾರಿಕವಾಗಿ ಹೇಳುತ್ತಾನೆ:

> “ ಬಡವ ಬಟ್ಟೆಯ ಹೋಗಲೊಡನೆ ಸಂಗಡವೇಕೆ?”
> ಬಡತನವೆಂಬ ಹುಲಿಗೂಡಿ ಬರುವಾಗ
> ನುಡಿಸುವವರಿಲ್ಲ ಸರ್ವಜ್ಞ.”

ಬಡತನವೆಂಬ ಹುಲಿ ರೂಪವೆತ್ತು ಬಟ್ಟೆವಿಡಿದು ಹೋಗುವಾಗ ಅದನ್ನು ಮಾತನಾಡಿಸುವ ಧೈರ್ಯ ಯಾರಿಗೂ ಸಾಲದಂತೆ.

ಕೆಲವು ರೂಪಕರಚನೆಯಲ್ಲಿಯೂ ಸರ್ವಜ್ಞಕವಿಯು ತನ್ನ ಕಲೆಯ ಕೈವಾಡವನ್ನು ತೋರಿಸಿದ್ದಾನೆ:

> “ ಒಡಲೆಂಬ ಹುತ್ತಕ್ಕೆ ನುಡಿವ ನಾಲಗೆ ಸರ್ಪ
> ಕಡುರೋಷವೆಂಬ ವಿಷವೇರೆ, ಸಮತೆ ಗಾ-
> ರುಡಿಗನಂತಕ್ಕು ಸರ್ವಜ್ಞ. ”

ಇದೊಂದು ಇಡೀ ಚಿತ್ರವನ್ನೆ ಮತ್ತೊಂದು ಇಡೀ ಚಿತ್ರಕ್ಕೆ ಅಂಗಾಂಗಸಾದೃಶ್ಯವಾಗಿ ಹೋಲಿಸಿದ ರೂಪಕ. ಒಡಲೆಂಬುದೊಂದು ಹುತ್ತ, ಅದಕ್ಕೆ ನಾಲಗೆಯೆ ಸರ್ಪ, ರೋಷವೆಂಬುದೆ ವಿಷ.

ಸರ್ವಜ್ಞಕವಿಯು ೧೮ ನೆಯ ಶತಮಾನದ ಪ್ರಾರಂಭದಲ್ಲಿಯ ಒಬ್ಬ ಸ್ವತಂತ್ರಮಾರ್ಗಾವಲಂಬಿಯಾದ ಕವಿ; ಈತನ ಸಾಹಿತ್ಯವು ಬೋಧಕವೂ ಉಂಟು, ರಂಜಕವೂ ಉಂಟು. ತನ್ನ ಧಾಟಿ-ಧೋರಣಗಳನ್ನು ತಾನೆ ಹಾಕಿಕೊಂಡವನಿವನು. ಈತನು “ ಪಿಡಿದುದೇ ಪುರುಳು, ನುಡಿದುದೆ ತಿರುಳು ”ಆಯಿತು. ಈತನ ಸ್ವಾನುಭವ ಸಾಹಿತ್ಯವನ್ನು ಸವಿಯುವ ರಸಿಕರು ಕೂಡ ಕೈಬೆರಳ ಅಂಕಿಯಷ್ಟು. ಏಕೆಂದರೆ:

> “ಎಲ್ಲ ಬಲ್ಲವರಿಲ್ಲ; ಬಲ್ಲವರು ಬಹಳಿಲ್ಲ;
> ಬಲ್ಲಿದರು ಇದ್ದು ಬಲವಿಲ್ಲ; ಸಾಹಿತ್ಯ-
> ವೆಲ್ಲವರಿಗಿಲ್ಲ ಸರ್ವಜ್ಞ.”


SHREENIVAS & Co.




-THE PREMIER-
Karnataka
PHOTO ENGRAVERS.

ARTISTS & DESIGNERS.

Bea[illegible]& Faithful - Reproductions
BY
OUR PERFECT LINE, HALF-TONE & COLOUR PROCESS.



- Malamaddi DHARWAR


CC-0. Jangamwadi Math Collection. Digitized by eGangotri

# ಬಾದಾಮಿಯ ಚಾಲುಕ್ಯರ ಕಾಲದ ಸಾಂಸ್ಕೃತಿಕ ಜೀವನ

ಲೇಖಕರು: ಪಾಂ. ಭೀ. ದೇಸಾಯಿ ಎಂ. ಎ. (ಆನರ್ಸ್) ಧಾರವಾಡ

## ೨ನೆಯ ಲೇಖಾಂಕ—ರಾಜ್ಯವ್ಯವಸ್ಥೆ

ಇವರ ಆಳಿಕೆಯ ರಚನೆ ಲೋಕಾನುವರ್ತಿಯಾಗುವಂತೆ ಇರದಿದ್ದರೂ ಲೋಕಪ್ರಿಯವಾಗು-ವಂತೆ ಅದರಲ್ಲಿ ಹೆಚ್ಚು ಅನುವು ಇದ್ದಿತು. ಮಂತ್ರಿಗಳು ಕೇವಲ ಮಂತ್ರಾಲೋಚಕರಾಗಿರದೆ ಸಾಮಂತಾಧಿಕಾರವನ್ನಾಗಲಿ, ಸೇನಾಧಿಕಾರವನ್ನಾಗಲಿ, ಪ್ರತ್ಯಕ್ಷವಾಗಿ ಧರಿಸುವಂ-ತವರಾಗಿದ್ದರು. ಹಳ್ಳಿಗಳಲ್ಲಿ ಗ್ರಾಮಸಮಿತಿಗಳು ಇದ್ದುವು. ನೆಲತೆರಿಗೆ, ವ್ಯಾಪಾರದ ಮೇಲಿನ 'ಪೆರ್ಜುಂಕ' ಇವು ರಾಜಾದಾಯದ ಮುಖ್ಯ ಭಾಗಗಳಾಗಿದ್ದುವು.



**ರಾಜ್ಯಪದ್ಧತಿ**

ಚಾಲುಕ್ಯ ಸಾಮ್ರಾಜ್ಯದ ಆಡಳಿತವು ಆ ಕಾಲದ ರಾಜ್ಯರೀತಿಗನುಗುಣವಾಗಿ ಸಂಘಟಿತ ಪ್ರಜಾಧಿಕಾರದಿಂದ ನಿಯಂತ್ರಿತವಾಗಿದ್ದಿಲ್ಲ. ಆದರೂ ಅದು ಕೇವಲ ಅನಿಯಂತ್ರಿತ-ವಾಗಿದ್ದಿತು ಎಂದೂ ಹೇಳಲಿಕ್ಕಾಗು-ವುದಿಲ್ಲ. ರಾಜ್ಯದ ಎಲ್ಲ ಅಧಿಕಾರ ಸೂತ್ರಗಳು ಪ್ರಾಮುಖ್ಯ-ವಾಗಿ ರಾಜನಲ್ಲಿ ಏಕತ್ರಿತವಾಗಿದ್ದರೂ ಅದು ಸಮಗ್ರವಾಗಿ ಏಕನಿಷ್ಠ ರಾಜ್ಯರೀತಿ (One king system of absolute monarchy) ಆಗಿರಲಿಲ್ಲ. ಭರತಭೂಮಿಯಲ್ಲಿ ಪ್ರಾಚೀನಕಾಲದಿಂದ ಸಾಮಾನ್ಯವಾಗಿ ರೂಢಿಯಲ್ಲಿದ್ದು, ಗುಪ್ತಸಾಮ್ರಾಜ್ಯದಲ್ಲಿ ಹೆಚ್ಚಾಗಿ ಸುವ್ಯವಸ್ಥಿತ ಸ್ವರೂಪವನ್ನು ತಳೆದ (೨೨) ಸಂಘಪ್ರಧಾನ ಶಾಸನಪದ್ಧತಿ (Imperial system of the Federal character) ಅದಾಗಿತ್ತು. ಸಾಮ್ರಾಜ್ಯದಲ್ಲಿ ಅನೇಕ ಚಿಕ್ಕ ದೊಡ್ಡ ಪ್ರಾದೇಶಿಕ ರಾಜ್ಯಗಳಿದ್ದು, ಅವುಗಳನ್ನು ಆಳುವ ಸಾಮಂತರೂ ಮಾಂಡಲಿಕ ಅರಸರೂ ಸಮ್ರಾಟನಿಗೆ ವಿಧೇಯರಾಗಿ, ಜನ-ಧನಬಲಗಳಿಂದ ಸಮ್ರಾಟನ ಕಾರ್ಯದಲ್ಲಿ ಸಹಾಯ ವಾಗುತ್ತಿದ್ದರು. ರಾಜನ ಆಡಳಿತದಲ್ಲಿ ಪ್ರತ್ಯಕ್ಷವಾಗಿ ನೆರವಾಗಲು ರಾಜನಿಯುಕ್ತವಾದ ಮಂತ್ರಿಮಂಡಲವು ಏರ್ಪಟ್ಟಿತ್ತು. ಈ ಮಂತ್ರಿಮಂಡಲದಲ್ಲಿಯೂ, ಅಧಿಕಾರಿ-ವರ್ಗ, ನಾಯಕಸಮೂಹ, ಮಂಡಲಪತಿ ಮೊದಲಾದ-ವರಿಂದ ಕೂಡುವ ರಾಜಸಭೆಗಳಲ್ಲಿಯೂ, ಮುಂದೆ ನಿರ್ದಿಷ್ಟವಾಗಲಿರುವ ಪ್ರಜಾಸಂಘಗಳಲ್ಲಿಯೂ ಪ್ರಜಾಪಕ್ಷವು ಕೆಲವಂಶದಿಂದ ಪ್ರತಿಬಿಂಬಿತವಾಗಿ, ರಾಜ್ಯದ ಆಡಳಿತದ ಮೇಲೆ ಪ್ರಜಾಮತದ ಪರಿಣಾಮವು ಕೆಲಮಟ್ಟಿಗೆ ಆಗು-ತ್ತಿತ್ತು. ಇದಲ್ಲದೆ ಪ್ರತ್ಯಕ್ಷ ಶಾಸನನಿರ್ಬಂಧದಿಂದ ನಿಗಡಿತವಾಗದೆ ಇದ್ದರೂ, ಪ್ರಜಾನುರಾಗವೆ ರಾಜ್ಯದ ಮೂಲಾಧಾರವೆಂಬ ರಾಜನೀತಿಯ ಪರಂಪರಾಗತವಾದ ತತ್ತ್ವವು ಭಾರತೀಯರಾಜರ ಹೃದಯದಲ್ಲಿ ಬಿಂಬಿಸಿ-ದುದರಿಂದಲೂ, ಪರಿಸ್ಥಿತಿಯ ಪ್ರಭಾವದಿಂದಲೂ, ಪರರಾಜರ ಭಯದಿಂದಲೂ ಭಾರತೀಯ ಜನಪತಿಗಳ ಆಡಳಿತವು ಅನಿರ್ಬಂಧ ಸ್ವೈರಾಚಾರವಾಗಿ, ಪ್ರಜೆಗಳ ಮೇಲಿನ ಅನ್ಯಾಯವು ವಿಕೋಪಕ್ಕೆ ಹೋಗುವ ಸಂಭವವು ವಿಶೇಷ-ವಾಗಿರಲಿಲ್ಲ. (೨೩) ಆದುದರಿಂದ ನಮ್ಮ ಪ್ರಾಚೀನ ಅರಸರ ಆಳಿಕೆಯ ರಚನೆ ಲೋಕಾನುವರ್ತಿಯಾಗುವಂತೆ ಇರದಿದ್ದರೂ, ಅದು ಲೋಕಪ್ರಿಯವಾಗಲು ಹೆಚ್ಚು ಅನುವು ಇತ್ತು. ಈ ಎಲ್ಲ ದೃಷ್ಟಿಯಿಂದ ವಿಚಾರಮಾಡಿದರೆ, ಕನ್ನಡ ಜನಾಂ-ಗಕ್ಕೆ ಪರಿಪರಿಯಿಂದ ಉಪಕಾರಕವಾಗಿ ಪರಿಣಮಿಸಿದ ಈ ಚಾಲುಕ್ಯರ ಆಡಳಿತವು, ಸುಯಂತ್ರಿತವೂ ಜನಸಾಮಾನ್ಯವೂ ಜನಪ್ರಿಯವೂ ಆಗಿದ್ದಿತು.... ಎಂಬುದರಲ್ಲಿ ಸಂದೇಹವಿಲ್ಲ.

(೨೨) I H. P. p. 200

(೨೩) Al p. 157

CC-0. Jangamwadi Math Collection. Digitized by eGangotri

ಆಡಳಿತದ ಸೌಕರ್ಯಕ್ಕಾಗಿ ಸಾಮ್ರಾಜ್ಯದಲ್ಲಿ ಹಲವು ರಾಜಕೀಯವಿಭಾಗಗಳು ಏರ್ಪಟ್ಟಿದ್ದು, ಅವುಗಳ ಮೇಲೆ ಅಧಿಕಾರಿಗಳು ನೇಮಿಸಲ್ಪಡುತ್ತಿದ್ದರು. ರಾಜ್ಯದ ಈ ವಿಭಾಗಗಳಿಗೆ ವಿಷಯ, ಮಂಡಲ, ದೇಶ, ಭೋಗ, ರಾಷ್ಟ್ರ, ಕಂಪಣ, ಗ್ರಾಮ ಎಂಬ ಸಂಕೇತಗಳು ಇದ್ದುವು. ವಿಷಯಕ್ಕೆ ಪ್ರತಿಯಾಗಿ 'ನಾಡು' ಎಂಬ ಕನ್ನಡ ಹೆಸರೂ ಕೆಲವೆಡೆ ಬಳಕೆಯಲ್ಲಿತ್ತು. (೨೪) ಈ ಪಾರಿಭಾಷಿಕ ಸಂಕೇತಗಳ ಅರ್ಥವ್ಯಾಪ್ತಿ ಇದುವರೆಗೆ ಪೂರ್ಣವಾಗಿ ನಿಶ್ಚಿತವಾಗಿಲ್ಲವಾದರೂ, ಇವುಗಳು ಸಾಮಾನ್ಯ ಅವರೋಹಣಕ್ರಮದಲ್ಲಿ (descending order) ಪ್ರದೇಶವಾಚಕವಾಗಿರುವುವು ಎಂದು ಹೇಳಬಹುದು. ಗ್ರಾಮ ಅಥವಾ ಹಳ್ಳಿ, ಲಘುತಮ ಪ್ರಾದೇಶಿಕ ಘಟಕವು (minimum administrative unit) ಆಗಿದ್ದಿತು. ಈ ದೇಶವಿಭಾಗಗಳನ್ನು ಒಂದು ಅರ್ಥಪೂರ್ಣವಾದ ರೀತಿಯಲ್ಲಿ ನಿರ್ದೇಶಿಸುವ ರೂಢಿ ಇತ್ತು. ಆ ಆ ವಿಭಾಗಗಳ ಮುಂದೆ ಕೆಲವೊಂದು ಅಂಕೆಗಳನ್ನು ಸೇರಿಸಿ ಹೇಳುತ್ತಿದ್ದರು. ಈ ಅಂಕೆಗಳು ಆ ಆ ವಿಭಾಗಗಳಿಗೆ ಸೇರಿದ ಊರುಗಳ ಸಂಖ್ಯೆಯನ್ನು ಸೂಚಿಸುವಂತಹವು ಆಗಿವೆ. (೨೪ಅ)

**ಸಾಮ್ರಾಜ್ಯದ ವಿಭಾಗಗಳು**

ಉದಾ:—(೧) 'ಪುರಿಗೆರೆ ಮೂನೂರು' ಎಂದರೆ ಮೂರ ನೂರು ಗ್ರಾಮಗಳುಳ್ಳ ಪುರಿಗೆರೆ ನಾಡು.

(೨) 'ಬನವಾಸಿ ಪನ್ನಿರ್ಚ್ಛಾಸಿರಂ' ಎಂದರೆ ಹನ್ನೆರಡು ಸಾವಿರ ಗ್ರಾಮಗಳುಳ್ಳ ಬನವಾಸಿ ನಾಡು.

ಸ. ನೋ. (ಸರಿಹೋಲಿಸಿ ನೋಡಿರಿ—C. P.):—

अगमदधिपतित्वं यो महाराष्ट्रकाणाम् ।
नवनवतिसहस्रग्रामभाजां त्रयाणाम् ॥

(ಪುಲಿಕೇಶಿ ೯೯೦೦೦ ಗ್ರಾಮಸಂಖ್ಯೆಯುಳ್ಳ ಮೂರು ಮಹಾರಾಷ್ಟ್ರಗಳಿಗೆ ಅಧಿಪತಿಯಾದನು—ಐಯ್ಹೊಳೆಯ ಶಾಸನ ಪಂಕ್ತಿ, ೧೨)

ಸಾಮ್ರಾಜ್ಯದ ಬೇರೆಬೇರೆ ವಿಭಾಗಗಳ ಆಡಳಿತವನ್ನು ಸುಯಂತ್ರಿತವಾಗಿ ನಡೆಯಿಸುವುದಕ್ಕಾಗಿ ಕಾರ್ಯದಕ್ಷರಾದ ಅಧಿಕಾರಿಗಳನ್ನು ನಿಯೋಜಿಸಲಾಗುತ್ತಿದ್ದಿತು. ಅರಸುಮನೆತನದವರಿಗೆ ಶಾಸನಾಧಿಕಾರದಲ್ಲಿ ಪ್ರಧಾನ ಸ್ಥಾನವನ್ನು ಕೊಟ್ಟು, ಅವರನ್ನು ಬೇರೆಬೇರೆ ಪ್ರಾಂತಗಳ ಅಧಿಕಾರಿಗಳನ್ನಾಗಿ ನೇಮಿಸುವ ಸಂಪ್ರದಾಯವು ಚಾಲುಕ್ಯರಾಜ್ಯದಲ್ಲಿ ರೂಢಿಯಲ್ಲಿತ್ತು. ಉದಾಹರಣಾರ್ಥವಾಗಿ, ಇಮ್ಮಡಿ ಪುಲಿಕೇಶಿಯ ತಮ್ಮನಾದ ಕುಬ್ಜ ವಿಷ್ಣುವರ್ಧನನು ವೆಂಗಿಮಂಡಲದ ಅಧಿಪತಿಯಾಗಿ ನೇಮಿಸಲ್ಪಟ್ಟಿದ್ದನು. ಇಮ್ಮಡಿ ಪುಲಿಕೇಶಿಯ ಮಕ್ಕಳಾದ ಆದಿತ್ಯವರ್ಮ, ಚಂದ್ರಾದಿತ್ಯ ಮೊದಲಾದವರು ನೊಳಂಬವಾಡಿ (ಬಳ್ಳಾರಿ, ಕರ್ನೂಲ ಪ್ರಾಂತ), ಸಾವಂತವಾಡಿ ಮೊದಲಾದ ಪ್ರಾಂತಗಳ ವರೆಗೆ ಅಧಿಪತಿಗಳಾಗಿದ್ದರು. (೨೫) ಇಂತಹ ರಾಜಬಂಧುಗಳಲ್ಲಿ ಯುವರಾಜನ ಪದವಿ ಹೆಚ್ಚು ಗೌರವಾಸ್ಪದವಾಗಿತ್ತು. ಈ ಯುವರಾಜಪದಕ್ಕೆ ಯಾವಾಗಲೂ ಹಿರಿಯ ಮಗನೆ ಅರ್ಹನಾಗಬೇಕು ಎಂಬ ನಿಯಮವಿದ್ದಿಲ್ಲ. ಈ ಪದಪ್ರಾಪ್ತಿ ಕೆಲವಂಶದಿಂದ ಆಳುವ ಅರಸನ ಇಚ್ಛೆಯ ಮೇಲೆ ಅವಲಂಬಿಸಿರುತ್ತಿತ್ತು. ಉದಾ:—ಇಮ್ಮಡಿ ಪುಲಿಕೇಶಿಯ ಮೆಚ್ಚುಗೆಯ ಮಗನೂ ಯುವರಾಜಪದಸ್ಥನೂ ಭಾವೀ ಪಟ್ಟಾಧಿಕಾರಿಯೂ ಆದ (ಒಂದನೆಯ) ವಿಕ್ರಮಾದಿತ್ಯನು, ಪುಲಿಕೇಶಿಯ ಹಿರಿಯ ಮಗನಾಗಿರದೆ ಮೂರನೆಯ ಮಗನಾಗಿದ್ದನು.

**ಅಧಿಕಾರಿವರ್ಗ**

ರಾಜ್ಯಶಾಸನಾಧಿಕಾರದಲ್ಲಿ ಮಂತ್ರಿಗಳಿಗೆ ಮಹತ್ವದ ಸ್ಥಾನವು ಇದ್ದಿತು. ಮಂತ್ರಿವರ್ಗವನ್ನು ಕುರಿತು ಶುಕ್ರನೀತಿ ಮೊದಲಾದ ರಾಜ್ಯಶಾಸ್ತ್ರಗ್ರಂಥಗಳಲ್ಲಿ ನಿರ್ದಿಷ್ಟವಾಗಿರುವ ಸಾಮಾನ್ಯನಿಯಮಗಳಲ್ಲಿ ರೂಢಿವಶದಿಂದ ಕೆಲವು ವ್ಯತ್ಯಾಸಗಳು ಉಂಟಾದುದು ಕಾಣಬರುತ್ತದೆ. ಮಂತ್ರಿಗಳು ಪ್ರಾಯಃ ಕೇವಲ ಮಂತ್ರಾಲೋಚಕರಾಗಿರದೆ ಸಾಮಂತಾಧಿಕಾರವನ್ನಾಗಲಿ, ಪ್ರಾಂತಾಧಿಕಾರವನ್ನಾಗಲಿ, ಸೇನಾಧಿಕಾರವನ್ನಾಗಲಿ, ಪ್ರತ್ಯಕ್ಷವಾಗಿ ಧರಿಸುವಂತಹವರಾಗಿದ್ದರು. ಕೆಲವು ಶಾಸನಗಳಲ್ಲಿ ಪಂಚಪ್ರಧಾನರೆಂದು ಮಂತ್ರಿ, ಪುರೋಹಿತ, ಪ್ರಧಾನ, ಯುವರಾಜ, ದಂಡಾಧಿಕಾರಿ ಇವರ ನಿರ್ದೇಶವು ಬರುವುದಾದರೂ (೨೬) ಇವರಲ್ಲದೆ ಬೇರೆ ನಿಯೋಗಗಳುಳ್ಳ ಮಂತ್ರಿ-ಸಚಿವರು ಇರುತ್ತಿದ್ದರು ಎಂದು ತಿಳಿಯಬರುತ್ತದೆ. ಇವರಲ್ಲಿ ಪ್ರಧಾನನೆಂಬವನೆ ಮುಖ್ಯಮಂತ್ರಿ (Premier) ಯಾಗಿದ್ದನು. ಇವರಲ್ಲದೆ ಪರರಾಷ್ಟ್ರೀಯ ಸಚಿವನೊಬ್ಬನು ಇರುತ್ತಿದ್ದು, ಆತನಿಗೆ 'ಸಂಧಿವಿಗ್ರಹಿ' ಎಂಬ ಹೆಸರು ಇತ್ತು. ಇದಲ್ಲದೆ, ಅಮಾತ್ಯನೆಂಬ ಬೇರೊಬ್ಬ

(೨೪) Al p. p. 136-138 j'k. (೨೪ಅ) Al pp. 139-41

(೨೫) Bh. 73 (೨೬) K. P.39

CC-0. Jangamwadi Math Collection. Digitized by eGangotri

ಆಯಮಂತ್ರಿಯೂ (revenue member) ಇದ್ದನೆಂದು ತೋರುತ್ತದೆ. (೨೭)

ಶಾಸನ ಕಾರ್ಯವಿಭಾಗಗಳ ಪ್ರಧಾನ ಸೂತ್ರಚಾಲಕರಾದ ಈ ಮಂತ್ರಿ-ಸಚಿವರಲ್ಲದೆ, ರಾಜ್ಯದ ಬೇರೆಬೇರೆ ವಿಭಾಗ ಗಳನ್ನು ಪ್ರತ್ಯಕ್ಷವಾಗಿ ಆಳುವ ಚಿಕ್ಕ-ದೊಡ್ಡ ಶಾಸನಾ-ಧಿಕಾರಿಗಳಿದ್ದರು. ಅವರಿಗೆ ವಿಷಯಪತಿ, ಭೋಗಪತಿ, ರಾಷ್ಟ್ರಕೂಟ, ಗ್ರಾಮಕೂಟ ಮೊದಲಾದ ಹೆಸರುಗಳು ಇದ್ದುವು. ಈ ಅಧಿಕಾರಿಗಳು ತಮ್ಮತಮ್ಮ ವಿಭಾಗದ ಎಲ್ಲ ವಿಧದ ಆಡಳಿತಕ್ಕೆ ಪೂರ್ಣವಾಗಿ ಉತ್ತರದಾಯಿ-ಗಳಾಗಿರುತ್ತಿದ್ದರು. ರಾಜಶಾಸನವನ್ನು ಆಳವಡಿಸುವುದು, ತೆರಿಗೆಗಳನ್ನು ಎತ್ತುವುದು, ಶಾಂತಿಯನ್ನು ಕಾಯುವುದು, ಜನತೆಯ ಆಸ್ತಿ-ಬಾಧ್ಯಸ್ಥಿಕೆಗಳ ಸುರಕ್ಷಿತತೆ, ದಂಡನ್ನು ಕೂಡಿಸುವುದು, ಸಜ್ಜಾಗಿರಿಸುವುದು ಮೊದಲಾದುವು ಈ ರಾಜಾಧಿಕಾರಿಗಳು ನೆರವೇರಿಸುವ ಪ್ರಧಾನಕರ್ತವ್ಯ-ಗಳಾಗಿದ್ದುವು.

**ಪ್ರಜಾಸಂಘಗಳು**

ಊರು, ನಾಡು ಮುಂತಾದ ವಿಭಾಗಗಳಲ್ಲಿ ಹಲವು ಲೋಕನಿಯುಕ್ತವಾದ ಸಭೆಗಳು ಅಲ್ಲಲ್ಲಿ ಕಾರ್ಯವನ್ನು ಮಾಡುತ್ತ, ರಾಜ್ಯದ ಆಡಳಿತದಲ್ಲಿ ರಾಜ್ಯಾಧಿಕಾರಿಗಳಿಗೆ ನೆರವಾಗುತ್ತಿ-ದ್ದುವು. ಇಂತಹ ಲೋಕನಿಯುಕ್ತ ಸಮಿತಿಗಳ ಸದಸ್ಯರಿಗೆ 'ಮಹತ್ತರ' 'ಮಹಾಮತ್ತರ' ಎಂಬ, ಹೆಸರುಗಳು ಇದ್ದುವು. ಈ ಸಮಿತಿಗಳಿಗೆ ವ್ಯವಸ್ಥಿತವಾದ ಘಟನೆ, ಅಧಿಕಾರ ಮುಂತಾದುವುಗಳು ಏರ್ಪಟ್ಟಿದ್ದುವು. ಇಂತಹ ಲೋಕಸಮಿತಿಗಳು ವಿಶೇಷವಾಗಿ ವಿಷಯ, ಮಂಡಲ, ದೇಶ ಮುಂತಾದ ವಿಭಾಗಗಳಲ್ಲಿ ಇರುತ್ತಿದ್ದುವು. ಹಳ್ಳಿಗಳಲ್ಲಿ ಗ್ರಾಮಸಮಿತಿಗಳು ಇದ್ದುವು. ಈ ಗ್ರಾಮ-ಸಮಿತಿಗಳಿಗೆ ಸಾಮಾನ್ಯವಾಗಿ ಪ್ರತಿಯೊಂದು ಕುಟುಂಬದ ಹಿರಿಯನು ಆರಿಸಲ್ಪಡುತ್ತಿದ್ದನು. ಹೀಗೆ ಆರಿಸಿ ಬಂದ ಜನರಿಗೆ 'ಊರ ಮಹಾಜನರು' ಎಂದೆನ್ನುತ್ತಿದ್ದರು. (೩೦) ದಾನ, ಪಾಲನ, ವಿದ್ಯಾದಾನ, ರಾಜಶಾಸನದ ಅನುಷ್ಠಾನ, ಸೈನ್ಯಸಂಗ್ರಹ, ಸಾರ್ವಜನಿಕ ಉತ್ಸವ ಮೊದಲಾದ ಅನೇಕ ಸಂದರ್ಭಗಳಲ್ಲಿ ಈ ಲೋಕಸಂಘಗಳಿಂದ ರಾಜಾಧಿಕಾರಿ-ಗಳಿಗೆ ಬಹು ಸಹಾಯವು ದೊರೆಯುತ್ತಿತ್ತು. ಗ್ರಾಮಾಧಿ-ಕಾರಿಯಾದ 'ಗ್ರಾಮಕೂಟ' ಅಥವಾ ಗೌಡನಿಗೆ ಮಹಾ ಜನರ ಸಹಕಾರ್ಯವು ಒದಗುತ್ತಿತ್ತು. ವಿಷಯಪತಿ, ಮಂಡಲಪತಿ ಮುಂತಾದ ಅಧಿಕಾರಿಗಳಿಗೆ ಮಹತ್ತರರ ಸಹಕಾರ್ಯವು ಲಭಿಸುತ್ತಿತ್ತು. ಶಾಲೆ, ಧರ್ಮಶಾಲೆ, ಅನ್ನಸತ್ರಗಳನ್ನು ನಡೆಯಿಸುವುದು, ದೇವಾಲಯದ ವ್ಯವಸ್ಥೆ, ಕೆರೆಕಾಲುವೆಗಳ ನಿರೀಕ್ಷಣೆ ಮುಂತಾದ ವಿಶೇಷಕಾರ್ಯ-ಕಲಾಪಗಳು, ಹೆಚ್ಚಾಗಿ ಗ್ರಾಮಸಮಿತಿ ಮೊದಲಾದ ಇಂತಹ ಪ್ರಜಾಸಂಘಗಳ ಬೆಂಬಲದಿಂದಲೆ ಸಫಲವಾಗುತ್ತಿದ್ದುವು.

**ತೆರಿಗೆ**

ನೆಲತೆರಿಗೆ ರಾಜ್ಯದ ಆದಾಯದ ಪ್ರಮುಖಭಾಗವಾಗಿ ಇದ್ದಿತು. ಭೂಮಿಯ ತರಗತಿ, ಹುಟ್ಟುವಳಿ ಇವುಗಳ ಮಾನದಿಂದ ತೆರಿಗೆಯಾದರೂ ಹೆಚ್ಚುಕಡಿಮೆಯಾಗಿ ಇರುತ್ತಿತ್ತು. ನೆಲತೆರಿಗೆ ಧಾನ್ಯರೂಪವಾಗಿಯೆ ಎತ್ತಲಾಗುತ್ತಿತ್ತು. ಈ ನೆಲತೆರಿಗೆಗೆ ಸಾಮಾನ್ಯವಾಗಿ 'ಭಾಗಕರ' ಇಲ್ಲನೆ 'ವಡ್ಡರಾವುಳ' ಎಂಬ ಹೆಸರು ಇದ್ದಂತೆ ತಿಳಿಯುತ್ತದೆ. (೩೧)ಈ ತೆರಿಗೆಯಲ್ಲಿ ಆಗಾಗ ವಿಚಾರಣೆ ಯಾಗಿ ಯೋಗ್ಯಪ್ರಮಾಣವನ್ನು ನಿರ್ಧರಿಸಲಾಗುತ್ತಿತ್ತು. ಸ್ಮೃತ್ಯಾದಿಗ್ರಂಥಗಳಲ್ಲಿ ಉಕ್ತವಾಗಿರುವ ಮೇರೆಗೆ ನೆಲತೆರಿಗೆ ಉತ್ಪನ್ನದ ಒಂದು ಆರಂಶದಷ್ಟೆ ಆಗಿರಬೇಕು—ಎಂಬ ನಿರ್ಬಂಧವನ್ನು ಯಥಾವತ್ತಾಗಿ ಪಾಲಿಸಲಾಗುತ್ತಿತ್ತು ಎಂದು ತೋರುವುದಿಲ್ಲ. ಯುದ್ಧ ಮೊದಲಾದ ನಿಮಿತ್ತದಿಂದ ಸಾಮ್ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಭಾರವು ಬೀಳು ತ್ತಿದ್ದುದರಿಂದ, ತೆರಿಗೆಯನ್ನಾದರೂ ಹೆಚ್ಚಾಗಿ ಏರಿಸಲಾಗಿರ ಬೇಕು. ಮುಂದೆ ರಾಷ್ಟ್ರಕೂಟರ ಕಾಲದಲ್ಲಿ ನೆಲತೆರಿಗೆ ನೂರಕ್ಕೆ ೨೦ರಷ್ಟು ಆಗಿದ್ದುದರಿಂದ (೩೨) ಈ ಕಾಲದಲ್ಲಿ-ಯಾದರೂ ಅದು ಸಾಧಾರಣವಾಗಿ ಅಷ್ಟೆ ಪ್ರಮಾಣವಾಗಿ ಇರಬೇಕು ಎಂದರೆ—ತಪ್ಪಾಗದು. ದಾನವಾಗಿ ಕೊಟ್ಟ ಭೂಮಿಗಳಿಗೆ ತೆರಿಗೆ ಇದ್ದಿರಲಿಲ್ಲ. ನೆಲತೆರಿಗೆಯ ತರು-ವಾಯ ಎರಡನೆಯ ಪ್ರಮುಖ ತೆರಿಗೆ ವ್ಯಾಪಾರದ ಸರಕು-ಗಳ ಮೇಲಿನ ಸುಂಕವು ಆಗಿದ್ದಿತು. ಇದಕ್ಕೆ 'ಪೆರ್ಜುಂಕ' ಎಂದೆನ್ನುತ್ತಿದ್ದರಾಗಿ ತೋರುತ್ತದೆ. ಈ ಸುಂಕವು ಹೆಚ್ಚಾಗಿ ನಾಣ್ಯರೂಪವಾಗಿಯೂ ಕೆಲವೆಡೆ ಪದಾರ್ಥ ರೂಪವಾಗಿಯೂ ತೆಗೆದುಕೊಳ್ಳಲಾಗುತ್ತಿತ್ತು. ಇವಲ್ಲದೆ ದಂಡಿನ ಕರ, ಮನೆತೆರಿಗೆ, ಪಟ್ಟಣದ ಸುಂಕ (Octroi), ನಿದ್ಧಾಯ (Exise duties) ಮೊದಲಾದ ಹಲವು ಕರಗಳೂ ಇದ್ದುವಾಗಿ ತೋರುತ್ತದೆ. (೩೩)

(೨೭) Al. P. 166 & 170 (೨೮) Al PP. 136—37
(೨೯) Al PP. 158--160 & K. P. 37
(೩೦) Ibid P. 201
(೩೧) Al 216 & K. P. 44 (೩೨) Al P. 223
(೩೩) Ibid P. 230

CC-0. Jangamwadi Math Collection. Digitized by eGangotri

ಊರ ವಿವಾದಗಳೂ ವ್ಯಾಜ್ಯಗಳೂ ಗ್ರಾಮಪತಿಯ ಸಹಕಾರ್ಯದೊಂದಿಗೆ ಗ್ರಾಮಸಮಿತಿಯಿಂದಲೆ ನಿರ್ಣಯವಾಗುತ್ತಿದ್ದುವು. ಈ ನ್ಯಾಯ-

**ನ್ಯಾಯದಾನ**

ವಿಧಾಯಕ ಗ್ರಾಮಸಮಿತಿಯ ಇನ್ನೊಂದು ಸ್ವರೂಪವೆ ಮೊನ್ನೆ ಮೊನ್ನೆಯವರೆಗೆ ಸರ್ವತ್ರ ಪ್ರಚಾರದಲ್ಲಿದ್ದ 'ಗ್ರಾಮಪಂಚಾಯತಪದ್ಧತಿ' ಎಂದು ಹೇಳಬಹುದು. ಸಾಧಾರಣ ಅಪರಾಧಗಳಿಗೆ ದಂಡ, ಶಿಕ್ಷೆ ಮೊದಲಾದುವುಗಳನ್ನು ವಿಧಿಸುವ ಅಧಿಕಾರವು ಈ ನ್ಯಾಯವಿಚಾರಕ ಗ್ರಾಮಸಮಿತಿಗೆ ಇತ್ತು. ಗ್ರಾಮಸಮಿತಿಯ ನಿರ್ಣಯವು ಒಪ್ಪಿಗೆಯಾಗದೆ ಇದ್ದರೆ, ಮೇಲಿನ ಅಧಿಕಾರಿಗಳಿಗಾಗಲಿ, ಅರಸನ ಓಲಗಕ್ಕೆ ಆಗಲಿ ದೂರನ್ನು ಒಯ್ಯುವ ಸ್ವಾತಂತ್ರ್ಯವು (right to appeal) ಇತ್ತು. ಆದರೆ ಇಂತಹ ಸಂದರ್ಭಗಳು ಅಪರೂಪವಾಗಿ ಬರುತ್ತಿದ್ದುವು. ಈ ಜಾನಪದ ನ್ಯಾಯಸಭೆಗಳು ಅತಿ ಪ್ರಭಾವಶಾಲಿಗಳಾಗಿದ್ದುವು. ಇವುಗಳ ತೀರ್ಪನ್ನು ಮೀರುವ ಸಾಹಸಿಗನು ಸಾಮಾಜಿಕ ಬಹಿಷ್ಕಾರ, ದೇಶತ್ಯಾಗ ಮೊದಲಾದ ದಾರುಣ ಫಲಭೋಗಗಳಿಗೆ ಸಿದ್ಧನಾಗಿರಬೇಕಾಗುತ್ತಿತ್ತು. ದೊಡ್ಡ ಅಪರಾಧಗಳ ವಿಚಾರಣೆ ಪ್ರಾಂತಾಧಿಕಾರಿಯಲ್ಲಿಯಾಗಲಿ ರಾಜನಲ್ಲಿಯಾಗಲಿ ನಡೆಯುತ್ತಿದ್ದಿತು. ಹಳ್ಳಿಯ ಈ ನ್ಯಾಯಸಭೆಗಳು ಗುಡಿ, ಚಾವಡಿ, ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ಕೂಡುತ್ತಿದ್ದುವು. ಗ್ರಾಮಸಮಿತಿಗಳ ನಿರ್ಣಯಗಳಿಗೆ ಅಧಿಕಾರಿಗಳ ಬೆಂಬಲವೂ ಇರುತ್ತಿದ್ದು, ಪ್ರಸಂಗವು ಬಂದರೆ ಅವುಗಳನ್ನು ಆಚರಣೆಯಲ್ಲಿ ತರಿಸಲು ರಾಜಶಕ್ತಿಯ ಸಹಾಯವೂ ದೊರೆಯುತ್ತಿತ್ತು. (೨೪)

ಗ್ರಾಮನಿವಾಸಿಗಳ ವಿತ್ತ-ಜೀವಿತಗಳ ಸಂರಕ್ಷಣೆಗೆ ಗ್ರಾಮಪತಿ ಹೊಣೆಗಾರನಾಗಿರುತ್ತಿದ್ದನು. ಈತನ ಸಹಾಯಕ್ಕೆ ಗ್ರಾಮರಕ್ಷಕರು ಎಂದರೆ ತಳ-

**ರಕ್ಷಣೆ ವರ್ಗ (Police)**

ವಾರರು ಇರುತ್ತಿದ್ದರು. ಇವರಿಗೆ 'ಹಳಬರು' ಎಂಬ ಶಬ್ದವು ಕೆಲವೆಡೆಯಲ್ಲಿ ರೂಢಿಯಲ್ಲಿ ಬಂದುದಾಗಿದೆ. ಕಳವು ಮುಂತಾದ ಅಪರಾಧಗಳನ್ನು ಕಂಡುಹಿಡಿಯುವುದು, ಸೀಮೆಯ ರಕ್ಷಣೆ, ಕೋಟೆ, ಕೆರೆ, ಗುಡಿ, ಚಾವಡಿ ಮೊದಲಾದುವುಗಳು ಭದ್ರವಾಗಿರುವಂತೆ ನಿರೀಕ್ಷಿಸುವುದು, —ಇವು ಗ್ರಾಮರಕ್ಷಕರ ಪ್ರಧಾನಕರ್ತವ್ಯಗಳಾಗಿದ್ದು, ಅವುಗಳನ್ನು ಅವರು ದಕ್ಷತೆಯಿಂದ ಪಾಲಿಸುತ್ತಿದ್ದರು. ಮನುಸ್ಮೃತಿಯಲ್ಲಿ ಹೇಳಿದಂತೆ ಕೆಲವು ಊರುಗಳ ನಡುವೆ ಈ ರಕ್ಷಾಪಥಕದ ಠಾಣ್ಯಗಳಾದರೂ ಸ್ಥಾಪಿತವಾಗಿರುತ್ತಿದ್ದುವು ಎಂದು ಊಹಿಸಬಹುದು. ಇದಲ್ಲದೆ ಪ್ರತಿಯೊಂದು ಪಟ್ಟಣದಲ್ಲಿ ಪುರರಕ್ಷಕವರ್ಗವು ( City Police ) ಇರುತ್ತಿದ್ದು, ಅದಕ್ಕೆ ಒಬ್ಬ ಸ್ವತಂತ್ರ ಮೇಲಧಿಕಾರಿ ನಿಯುಕ್ತನಾಗಿರುತ್ತಿದ್ದನು. (೨೫)

ಈ ಕಾಲದ ಕರ್ನಾಟಕವು ವೀರ್ಯಸಂಪನ್ನವಾಗಿದ್ದಿತು. ಯಾವ ಪ್ರಚಂಡ ಕನ್ನಡದಂಡಾಳುಗಳ ಬಲದಿಂದ ಪುಲಿಕೇಶಿ, ವಿಕ್ರಮಾದಿತ್ಯ ಪ್ರಭೃತಿ-

**ಸೇನಾಬಲ**

ಗಳು ಕಾವೇರಿಯಿಂದ ನರ್ಮದೆಯವರೆಗಿನ ಭೂಭಾಗವನ್ನೆಲ್ಲ ಸಾಕ್ರಾಂತಮಾಡಿ ತಮ್ಮ ವಿಜಯಧ್ವಜಗಳನ್ನು ಬಹುಕಾಲ ಮೆರೆದಾಡಿಸಿದರೊ, ಆ ಕರ್ನಾಟಕ ಸೇನೆಯಲ್ಲಿ ವೀರ್ಯ, ಸಾಹಸ, ಪರಾಕ್ರಮ, ಶಿಸ್ತು, ಸಂಘಟನೆ, ಕಷ್ಟಸಹಿಷ್ಣುತೆ, ಮೊದಲಾದ ಗುಣಗಳು ವಿಶೇಷಪ್ರಮಾಣದಲ್ಲಿ ವಾಸಿಸುತ್ತಿರಬೇಕೆಂಬುದು ಸ್ಪಷ್ಟವಾಗಿದೆ. ರಾಷ್ಟ್ರಕೂಟರ ದಂತಿದುರ್ಗನ ಶಾಸನದಲ್ಲಿ, (೨೬)

**कंचीश-केरळ-नराधिप-पांड्य-चोळ-।**
**श्रीहर्ष—वज्रट विभेदविधानदक्षम्॥**

[ಕಂಚಿಯ ಅರಸರು (ಪಲ್ಲವರು), ಕೇರಳರು, ಪಾಂಡ್ಯ, ಚೋಳ ದೇಶಗಳ ಅರಸರು, ಶ್ರೀಹರ್ಷನು, ವಜ್ರಟನು ಇವರನ್ನು ಸದೆಬಡಿವ ಕಾರ್ಯದಲ್ಲಿ ದಕ್ಷತೆಯನ್ನು ಬೀರಿದಂತಹ—]

ಎಂದು ಪ್ರಶಂಸಾಪೂರ್ವಕವಾಗಿ ಕರ್ನಾಟಕಬಲವನ್ನು (ಸೇನೆಯನ್ನು) ಗೌರವಿಸಲಾಗಿದೆ. ಕನ್ನಡಿಗರ ಕಾದಾಳ್ತನದ ಕೀರ್ತಿ ಎಲ್ಲೆಡೆಯಲ್ಲಿಯೂ ಹಬ್ಬಿತ್ತು. ಕನ್ನಡಿಗರು ಹುಟ್ಟುಕಲಿಗಳು: **समरकर्मणि निसर्गोद्धता इव कर्णाटाः**—ಎಂದು ರಾಜಶೇಖರನು ಹೇಳುವನು. ಕನ್ನಡಿಗರ ಈ ಸಮರಧೌರಂಧರ್ಯವನ್ನು ಮೆಚ್ಚಿ ಬಂಗಾಳದ ಅರಸರು ತಮ್ಮ ಸೈನ್ಯದಲ್ಲಿ ಕನ್ನಡ ದಂಡಾಳುಗಳನ್ನು ಬರಮಾಡಿಕೊಳ್ಳುತ್ತಿದ್ದರು. ಕರ್ನಾಟಕ ಸೈನ್ಯದ ಹೆಸರು, ಆಸೇತುಹಿಮಾಚಲ ವೈರಿಹೃದಯದಲ್ಲಿ ನಡುಕನ್ನು ಹುಟ್ಟಿಸುತ್ತಿತ್ತು. (೨೭) ಪುಲಿಕೇಶಿಯ ವೀರಭ

---

(೨೪) AI PP. 210—11 & 260

(೨೫) AI PP 259—61

(೨೬) ಸಾಮಾನಗಡದ ಶಾಸನ (೨೭) AI P.

CC-0. Jangamwadi Math Collection. Digitized by eGangotri

ಸಂಮೇಲನವೂ, ಅದ್ಭುತವಾದ ಸೇನಾಸಾಮರ್ಥ್ಯವೂ ಹುವೆನತ್ಸಾಂಗನನ್ನು ಬೆರಗುಗೊಳಿಸಿತು. (೩೮) ಆತನ ದಂಡಾಳುಗಳ ಉನ್ನತ ಶರೀರಯಷ್ಟಿ, ಸ್ವಾಭಿಮಾನ ವೃತ್ತಿ, ನಿರ್ಭೀತತೆ ಮೊದಲಾದ ಗುಣಗಳನ್ನು ಆ ಚೀನೀ ಪ್ರವಾಸಿ ಸರಸವಾಗಿ ಬಣ್ಣಿಸಿರುವನು. "ಈ ಕನ್ನಡ ಭಟರು ಅತ್ಯಂತ ಪರಾಕ್ರಮಿಗಳಾಗಿದ್ದು ಒಬ್ಬೊಬ್ಬರು" ಹತ್ತುಹತ್ತು ಸಾವಿರ ಸಮೂಹವನ್ನು ಇದಿರಿಸಬಲ್ಲರು ಎಂದು ಆತನು ಹೇಳುವನು. (೩೯) ಅಪರಿಮಿತ ಸೇನಾಶಕ್ತಿಯಿಂದ ಉತ್ತರಭಾರತವನ್ನು ತನ್ನ ಅಂಕೆಯಲ್ಲಿ ತಂದಿರಿಸಿದ ಉತ್ತರಭಾರತ ಚಕ್ರವರ್ತಿ ಶ್ರೀಹರ್ಷವರ್ಧನನನ್ನು ಪುಲಿಕೇಶಿಯ ಈ ಸೈನಿಕರು ಸೋಲಿಸಿದುದನ್ನು ನೋಡಿದರೆ, ಈ ವರ್ಣನೆಯಲ್ಲಿ ಹೆಚ್ಚು ಸತ್ಯಾಂಶವಿದೆ ಎಂದು ಕಾಣಬರುವುದು.

ಸಾಮ್ರಾಜ್ಯದ ಪ್ರತಿಯೊಂದು ಭಾಗದಿಂದ ಆರಿಸಿ ಆರಿಸಿ ದಂಡಾಳುಗಳನ್ನು ಸೇನೆಯಲ್ಲಿ ಬರಮಾಡಿಕೊಳ್ಳುತ್ತಿದ್ದರು. ಊರೂರಿಗೆ ಗ್ರಾಮಸೇನೆ (militia) ಇದ್ದಿತು. ಪ್ರತಿಯೊಬ್ಬ ಯುವಕನು ಆಸ್ಥೆಯಿಂದ ಸಮರಶಿಕ್ಷಣವನ್ನು ಪಡೆಯುತ್ತಿದ್ದನು. (೪೦) ಒಕ್ಕಲತನದ ತರುವಾಯ ದಂಡಿನ ಊಳಿಗವು ಕರ್ನಾಟಕದ ಮುಖ್ಯವ್ಯವಸಾಯವಾಗಿದ್ದು, (೪೧) ಜನತೆಯ ಬಹುಭಾಗವು ಸೇನೋಪಜೀವಿಯಾಗಿತ್ತು. ಈಗ ಕೀಳುಸ್ಥಿತಿಗಿಳಿದು ಸಿಕ್ಕ ಸಿಕ್ಕ ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದ ಕನ್ನಡಭೂಮಿಯ ಸಂತಾನರಾದ ಕುರುಬ, ಹಟಗಾರ, ಬೇಡ, ಹೊಲೆಯ ಮೊದಲಾದ ಜಾತಿಯ ಜನಾಂಗದವರು ಪೂರ್ವದಲ್ಲಿ ಸಮರಪಟುಗಳಾದ ಸೇನೋಪಜೀವಿ ಜನಾಂಗಗಳು (martial race) ಆಗಿದ್ದುವು ಎಂದು ಅನೇಕ ಸಂಶೋಧಕರು ಅಭಿಪ್ರಾಯ ಪಡುವರು. (೪೨) ಆನೆ, ಕುದುರೆ, ರಥ, ಮುಂತಾದ ದಳಗಳು ಸೇನೆಯ ಅಂಗಗಳಾಗಿದ್ದರೂ ಕಾಲಾಳುಗಳೆ ದಂಡಿನ ಪ್ರಧಾನ ಅಂಗವಾಗಿದ್ದಿತು. ಮಂಗಳೀಶನು ರೇವತೀದ್ವೀಪದ ಮೇಲೆ ಮಾಡಿದ ದಾಳಿಯನ್ನೂ, ಇಮ್ಮಡಿ ಪುಲಿಕೇಶಿ ಜಲಮಾರ್ಗದಿಂದ ಪುರಿಯ ಮೇಲೆ ಮಾಡಿದ ದಂಡಯಾತ್ರೆಯನ್ನೂ ನೋಡಿದರೆ, ಚಾಲುಕ್ಯರು ಹಡಗು-ಪಡೆಯನ್ನಾದರೂ ಇಟ್ಟಿದ್ದರೆಂದು ಕಾಣುತ್ತದೆ.

(೩೮) V. S, p. 443 (೩೯) Bh p. 72

(೪೦) Al pp. 190—91 & 252 (೪೧) ಕ. ಸಾ. ಪ. ೩೧೭

(೪೨) Taybar, ಕಪಟರಾಳ, ಶಂ. ಬಾ. ಜೋಶಿ, ಸ್ವಾನುಭವ

ವಿ. ಸೂ: ಕಳೆದ ತಿಂಗಳಸಂಚಿಕೆಯಲ್ಲಿ ಹೇಳಿದ ಸಂದರ್ಭಗ್ರಂಥಗಳಲ್ಲದೆ ಈ ಸಂಚಿಕೆಯಲ್ಲಿ ಬಂದ ಸಂದರ್ಭಗ್ರಂಥಗಳ ಸಂಕ್ಷೇಪಚಿಹ್ನಗಳ ವಿವರಣೆ ಕೆಳಗೆ ಬರೆದಂತಿದೆ.

'H. P.'—ಶ್ರೀಮಾನ್ ಜಯಸ್ವಾಲರ 'Hindu Policy' ಎಂಬ ಗ್ರಂಥ.

'Al'—ಶ್ರೀಮಾನ್ ಆಳತೇಕರರ 'Rashtra Kutas & Their Times' ಎಂಬಗ್ರಂಥ

'K'—ಶ್ರೀಮಾನ್ ಕರಮರಕರರ 'ಚಾಲುಕ್ಯರ ಆಡಳಿತಕ್ರಮ' ಎಂಬ ಇಂಗ್ಲಿಷ್‌ಗ್ರಂಥ

ಕೂದಲಿಗೆ ಪುಷ್ಟಿ! ನಿದ್ರೆಗೆ ಉತ್ತೇಜನ!! ಕಣ್ಣುಗಳಿಗೆ ಆರೋಗ್ಯ!!!

ಕುಂತಲ-ವಿಕಾಸ ತೈಲ

ಆಯುರ್ವೇದ ಶಾಸ್ತ್ರಪದ್ಧತಿಯಿಂದ ಸಿದ್ಧಪಡಿಸಿದುದು.

ಈ ತೈಲವನ್ನು ಉಪಯೋಗಿಸುವದರಿಂದ ಅಕಾಲದಲ್ಲಿ ಬರುವ ನರೆಗೂದಲುಗಳು ಪೂರ್ಣವಾಗಿ ಕಪ್ಪಾಗುವವು. ಕೂದಲು ಉದುರುವುದು ತೀವ್ರ ನಿಲ್ಲುವದು. ಮತ್ತು ಪುನಃ ದಟ್ಟಾಗಿ ಬೆಳೆಯುವದು. ಸಾವಿರಾರು ಜನರು ಉಪಯೋಗಿಸಿ ಮನಗಂಡಿದ್ದಾರೆ. ಅನೇಕ ಡಾಕ್ಟರರೂ ಶಾಸ್ತ್ರಜ್ಞರೂ ಶಿಫಾರಸು ಮಾಡಿದ್ದಾರೆ.

೪ ಔಂಸಿನ ೧ ಬಾಟ್ಲಿಗೆ ೦-೧೨-೦. ಪೋಸ್ಟಿನಿಂದ ಮುಂಗಡ ೧-೦-೦ ಮಾತ್ರ.

ವರ್ತಕರಿಗೆ ವಿಪುಲ ಕಮಿಶನ್

ಮಾಧವ ಫಾರ್ಮಾಸ್ಯುಟಿಕಲ್ ಆ್ಯಂಡ ಪರ್ಫ್ಯೂಮರಿ ವರ್ಕ್ಸ್, ಧಾರವಾಡ

CC-0. Jangamwadi Math Collection. Digitized by eGangotri

ಬಿಡುವಿನ ಹೊತ್ತನ್ನು ಆನಂದದಲ್ಲಿ ಕಳೆಯಲು




ಮತ್ತು




ನಿಮ್ಮ ಮನೆಯ ಅಗತ್ಯ ಬೇ








ಇದಲ್ಲದೆ ಮುಂಬಯಿಯಲ್ಲಿ ದೊರೆಯುವ ಬೇರೆ ಎಲ್ಲ ಬಗೆಯ ಮಾಲನ್ನು ಅಲ್ಪ ಕಮಿಶನ್ನಿನ ಮೇಲೆ,

ಅಗ್ಗವಾಗಿ ಕೊಂಡು ಅತ್ಯಂತ ಜಾಗ ಯಿಂದ ಮತ್ತು ಸರಿಯಾಗಿ ಕಳಿ

ಹೆಚ್ಚಿನ ವಿವರಗಳಿಗಾಗಿ ಹೊಸ ದೊಡ್ಡ ೧೦೦ ಪುಟಗಳ ಸಚಿತ್ರ ಮರಾಠಿ ಕ್ಯಾಟಲಾಗನ್ನು, ೨ ಆಣೆಯ ಅಂಚೇಚೀಟಿ ಕಳಿಸಿದಲ್ಲಿ ಉಚಿತವಾಗಿ ಕಳಿಸಲಾ

## ಗೋಪಾಳ ಸಖಾರಾಮ ಮತ್ತು ಕಂಪನಿ,

೪೯೭-೯೯ ಕಾಳಬಾದೇವಿ ರೋ
ಮುಂಬಯಿ ನಂ. ೨.

# ಡಾಕ್ಟರ ಮಹಿಷಿ ಇವರ ಅನುಭವಸಿದ್ಧ ಔಷಧಿಗಳ

## ಅಶೋಕಾ ಕಾರ್ಡಿಯಲ್'

ಇದು ಸ್ತ್ರೀಯರ ಮುಟ್ಟಿನ ಹಾಗು ಗರ್ಭಾಶಯದ ಎಲ್ಲ ವಿಕಾರಗಳಿಗೆ ಸಿದ್ಧೌಷಧಿಯು.

## ವ್ಹಾಯಬರನಮ್ ಕಂಪೌಂಡ್

ಇದರ ಯೋಗದಿಂದ ಬಂಜೆತನದ ದೋಷಗಳು ನಾಶವಾಗಿ ಗರ್ಭಧಾರಣೆಯಾಗುವುದು. ಗರ್ಭ ಯರು ೩ ನೆಯ ತಿಂಗಳಿನಿಂದ ಇದನ್ನು ಸಾಧಿಸಿದಲ್ಲಿ ಗರ್ಭವು ಬಲಪಡುವುದು. ಅಲ್ಲದೆ ಹಲೆಯುಳಿಯುವ ಭೀ ಇಲ್ಲದಂತಾಗುವುದು. ಸುಖಪ್ರಸೂತಿಯಾಗುವುದು.

ಸೂಚನೆ:— ಈ ಔಷಧಿಗಳ ಹಾಗು ಇನ್ನೂ ಕೆಲವು ಔಷಧಿಗಳ ಸಂಪೂರ್ಣ ಮಾಹಿತಿಗಾಗಿ, ಇಂದೇ ನಮ್ಮ ಕ್ಯಾಟ ಬರೆಯಿರಿ.

ಮ್ಯಾನೇಜರ್,
ಸ್ವಾಸ್ಥ್ಯನಿಲಯ ಫಾರ್ಮಸಿ, ಧಾರವಾಡ

CC-0. Jangamwadi Math Collection. Digitized by eGangotri

# ದೂರ್ವಾಸರ ಹಾಡು

ನೌಕಾಕ್ರೀಡನದ "ಶ್ರೀಧರ"

( ಸಾಂಗತ್ಯ )

ಸೂರ್ಯೋದಯದ ಕೆಂಪು ಹರಿಯಿತು ಗಗನದಿ;
ಮೂಡಲರಾಣಿಯ ಕದಪೋ !
ಪರಮಾತ್ಮ ಧರಿಸಿದ ನಿಶ್ಪದುಂಗುರದಲ್ಲಿ
ಹೊಳೆವಂಥ ಹರಳಿನ ಬೆಳಕೋ! ||೧||

ವನವಾಸದೊಳಗಿದ್ದ ಪಂಚಪಾಂಡವರನ್ನು
ಒರೆಯಲು ಬಂದನು ಮುನಿಯು;
ಸಾಮಾನ್ಯಮುನಿಯಲ್ಲ ದೂರ್ವಾಸಮುನಿಯವ
ಮೈಗೊಂಡ ಮುನಿಸಿನ ಉರಿಯು! ||೨||

ಹತ್ತುಸಾವಿರ ಶಿಷ್ಯರೊಡಗೂಡಿ ಹೊರಟಿಹ;
ಸೈಪಿನ ಸಿರಿ; ಜ್ಞಾನನಿಧಿಯು;
ಧರ್ಮಸಾಗರನನ್ನು ಕೂಡಲ್ಕೆ ಕೆಳೆಯಿಂದ
ಹೊರಟಿತೊ ಕಾಂತಿಯ ಕೆನೆಯು ! ||೩||

ಶ್ರೀಕೃಷ್ಣಪೂಜೆಯ ಗೈಯುತ್ತ ಕುಳಿತಿಹ
ಧರ್ಮರಾಜನು ಸದ್ದು ಕೇಳಿ,
ಪರ್ಣಕುಟಿಯ ದ್ವಾರದೊಳು ನಿಂತು ನೋಡಿದ—
ಮೆರೆವಂಥ ಮುನಿಗಳ ಓಳಿ. ||೪||

ತುಲಸಿಗೆ ಭಕ್ತಿಯಿಂದಗ್ಗಣಿ ನೀಡುವ
ಪಾಂಚಾಲಿಯನು ಬೇಗ ಕರೆದು
ಹೇಳಿದ "ದೂರ್ವಾಸ ಮುನಿಗಳು ಬಂದರು"
ಹರುಷದಿ ಕಣ್ಣೀರ ತೊರೆದು. ||೫||

ಗದೆಯನ್ನು ತಲೆಗಿಂಬುಮಾಡಿ ಭೋರಿಡುತಿಹ
ಭೀಮನನ್ನೆಬ್ಬಿಸಿ "ತಮ್ಮಾ
ದೂರ್ವಾಸಮುನಿಗಳು ಬಂದಿಹರೇಳೇಳು
ತಮ್ಮಂದಿರನು ಕರೆ ಭೀಮಾ! " ||೬||

ಪರ್ಣಕುಟಿಯ ಬಿಟ್ಟು ತವಕದಿಂದಿದಿರಾಗಿ
ಧರ್ಮಾತ್ಮ ಪಾಂಚಾಲಿಸಹಿತ—
ಸಾಷ್ಟಾಂಗವೆರಗಿದ ಮುನಿಯ ಪಾದದ ಮುಂದೆ
ಹುಡಿಯಲ್ಲಹಂಕಾರರಹಿತ. ||೭||

ಏಳೆಂದು ಮುನಿಯಾಗ ಧರ್ಮರಾಜನ ಭಕ್ತಿ-
ಭಾವಕ್ಕೆ ಹೃದಯವು ಕರಗಿ
ಮಮತೆಯ ಕರವನ್ನು ಬೆನ್ನಮೇಲಾಡಿಸಿ
ಶಿರವನ್ನು ಮೂಸಿದ ಜವದಿ ||೮||

ಎಲುಬಿನ ಹಂದರ, ತೊಗಲಿನ ಮಂದಿರ,
ತನುವೆಲ್ಲ ತೊಗಲಿನ ಮಡಿಕೆ,
ನಯನದಿ ನೇಸರ ಕಾಂತಿಯಮಿತತೇಜ
ಕೈಯಲ್ಲಿ ಕುಂಬಳ ಮಡಕೆ. ||೯||

ಭೀಮನು ಮುಂದಕ್ಕೆ ದಾರಿಯ ತೋರಿದ
ಪಾರ್ಥ-ನಕುಲರನು ಕೂಡಿ;
ತೋಳುಗಳನು ಹಿಡಿದೊತ್ತುತ ನಡೆದನು
ಚವರಿಯ ಗಾಳಿಯಲಾಡಿ. ||೧೦||

ಪರ್ಣಕುಟಿಯಮುಂದೆ ಬಾಗಿಲ ಬಳಿಯಲ್ಲಿ
ಸಹದೇವ ಮಲ್ಲಿಗೆರಸವ
ಮುನಿಯ ಪಾದಕೆ ಪೂಸಿ, ಬಿಸಿಯಾದ ನೀರನ್ನು
ನೀಡಿದನೊತ್ತುತ ಪದವ. ||೧೧||

ಚಾಗದ ಕುರುಹಾದ ಚೆಲ್ವ ಚಾಪೆಯ ಮೇಲೆ
ನಸುನಕ್ಕು ಸುರಮುನಿ ಕುಳಿತ;
ಮಧುಪರ್ಕದರ್ಘ್ಯವ ನೀಡಿದ ಧರ್ಮನು.
ಮುನಿಯಾದನಾನಂದಭರಿತ. ||೧೨||

CC-0. Jangamwadi Math Collection. Digitized by eGangotri

ಧರ್ಮರಾಜನು ಬಗ್ಗಿ ಧರ್ಮನಿಧಿಯ ಮುಂದೆ
"ದೇವನೆ ಬಂದೆಮ್ಮ ಮನೆಗೆ;
ಬಡವರ ಮನೆಗಿಂದು ಭಾಗ್ಯದೇವತೆ ಬಂದು
ಬೆಳಕನ್ನು ತೋರಿಹುದೆಮಗೆ! ||೧೩||

ಮಟಮಟ ಮಧ್ಯಾಹ್ನ, ಗಂಗೆಯ ತಡಿಗುಂಟ
ಇರುಳೆಲ್ಲ ದಣಿದಿರಿ ನಡೆದು!
ಬಡವನತಿಥಿಸೇವೆ ಕೈಕೊಂಡು ಹೋಗಿರಿ"
ಎಂದಂದು ನುಡಿದನು ಮಣಿದು. ||೧೪||

"ಹತ್ತುಸಾವಿರ ಶಿಷ್ಯರೊಡಗೂಡಿ ಬಂದಿಹೆ;
ತವಕದಿಂದಾಗಲಿ ಅಡಿಗೆ"
(ಸತ್ತ್ವಪರೀಕ್ಷೆಯ ಮಾಡಲು ಬಂದಿಹ)
ಎಂದೆದ್ದ ಗಂಗೆಯ ತಡಿಗೆ. ||೧೫||

ಭೀಮನು ಕೋಪದಿಂದುರಿದೆದ್ದು ನಿಂತನು
ಮುನಿವರ್ಯ ತೆರಳಿದ ಬಳಿಕ:
"ಹತ್ತುಸಾವಿರ ಮಂದಿಯಡಿಗೆಯ ಮಾಡಲ್ಕೆ
ನನಗಿಲ್ಲ ನಿನ್ನಂತೆ ಮರುಕ. ||೧೬||

ಹತ್ತುಸಾವಿರ ಬಂಟರೊಡಗೂಡಿ ಬರುವರೆ?
ಏನಿಲ್ಲಿ ಕಾಳಗವಿಹುದೆ?
ಅರಸರೆ ನಾವಿಲ್ಲಿ? ತೆರಳಲಿ ಬಿಸಿಬಿಸಿ
ಗಂಗೆಯ ನೀರನ್ನು ಕುಡಿದೇ" ||೧೭||

ಪಾರ್ಥನು ಮುನಿಸಿನೊಂದೊರೆದನು; "ಧರ್ಮನೆ
ದುಷ್ಟದುರ್ಯೋಧನನಾಟ!
ಧನುವಿನ ದನಿಯಿಂದ ಬ್ರಾಂಬರ ಸೈನ್ಯವ-
ನೋಡಿಸುವೆನು. ನೋಡು ಮಾಟ! "||೧೮||

ಪಾಂಚಾಲಿ ಕಣ್ಣೀರನೊರಸುತ್ತ "ಮಾಧವ,
ಬಂದಿಹುದೆಂತಹ ಕಾಲ
ಮನೆಗೆ ಬಂದತಿಥಿಗಳುಪವಾಸ ಹೋಗುವ-
ರಿದೆ ನನ್ನ ದುಃಖದ ಮೂಲ!" ||೧೯||

ಕೃಷ್ಣಮೂರ್ತಿಯ ಮುಂದೆ ಧರ್ಮರಾಜನು ಬಿದ್ದು
"ಕೇಶವಾ ನೀನೇ ಕಾಪಾಡು!
ನೀನೆಮ್ಮ ಪೊರೆವಂಥ ಕರುಣದ ಛತ್ರವು.
ಮನಸಿಗೆ ಬಂದಂತೆ ಮಾಡು! ||೨೦||

ಮುನಿವರ್ಯರೆಲ್ಲರು ಮಿಂದು ಬಂದರೆ ನನ್ನ
ಸತ್ತ್ವವೆ ಹಾರಿ ಹೋಗುವುದು;
ಸತ್ತ್ವವು ತೆರಳಿದ ಬಳಿಕೆನ್ನ ಹರಣವು
ನಿನಗೊಂದೆ ಮಾಸಲಾಗಿಹುದು." ||೨೧||

ಹೀಗೆಂದು ನುಡಿದರೆ ನಿಮಿಷದಿ ಹೊರಗೊಂದು
ಮಂಟಪವನ್ನು ನೋಡಿಹರು;
ಮಂಟಪದೊಳಗತಿ ಸಂಭ್ರಮದಿಂದಲಿ;
ದೇವಾಂಗನೆಯರಿಳಿದಿಹರು. ||೨೨||

ಮಿಸುನಿಯ ಮಂಟಪ; ಹರಳಿನ ತೋರಣ;
ಮೆರೆಯಿತು ಮನೆಗಳ ಸಾಲು.
ಕದಳಿಯೆಲೆಗಳಲ್ಲಿ ಪಂಚಪಕ್ವಾನ್ನದ
ರುಚಿಯಾದ ಊಟವು ಮೇಲು! ||೨೩||

ಉಪ್ಪು, ನಿಂಬೆಯ ಹಣ್ಣು, ಸಂಡಿಗೆ-ಹಪ್ಪಳ,
ಮಲ್ಲಿಗೆಯರಳಂಥ ಅನ್ನ,
ತವ್ವಿ, ತುಪ್ಪದ ಗಿಂಡಿ, ಪಾಯಸ, ಪರಮಾನ್ನ
ತುಂಬಿದ ಪಂಚಪಕ್ವಾನ್ನ! ||೨೪||

ಕೇಶರ ಬೆರಸಿದ ನೀರಿನ ತಂಬಿಗೆ
ಮೇಲೊಂದು ರನ್ನದ ಥಾಲಿ
ಥಾಲಿಯ ಮೇಲೊಂದು ಚಿನ್ನದ ತಟ್ಟೆಯು
ತಟ್ಟೆಯೊಳಗೆ ಗಂಧಧೂಲಿ. ||೨೫||

ಧೂಪಧೂಮದಿ ತುಂಬಿ ಗಗನವು ಮೆರೆಯಿತು,
ಪರಿಮಲವಾಯಿತು ಸೂರಿ.
ಧರ್ಮನು ಪಾಂಚಾಲಿಕರವನ್ನೊತ್ತುತಲೆಂದ
"ನೋಡೆಂಥ ಮಾಟವು ನಾರಿ" ||೨೬||

ಸೂರ್ಯ-ಚಂದ್ರಮರನ್ನು ತೂಗುಬಿಟ್ಟಿಹರಲ್ಲಿ
ಕೃಷ್ಣನ ಪ್ರಾಸಾದದೀಪ!
ಮಂದಮಾರುತ ಬಂದು ತನುವಿನ ವೃಂತವ
ಬೀಸುತ್ತಲಿಹ ತಾನನೂಪ. ||೨೭||

ಗಗನದ ನಕ್ಷತ್ರಮಾಲೆಯಿಂದಿಳಿಯಿತೋ
ಧರಣಿಗೆ ಲಲನೆಯರಾಗಿ!
ಇಂದ್ರಧನುಷ್ಯಗಳುಟ್ಟಂಥ ಚಂದ್ರನ
ರಾಣಿಯರಿಲ್ಲಿ ಸಾಲಾಗಿ! ||೨೮||

CC-0. Jangamwadi Math Collection. Digitized by eGangotri

ಹರುಷವ ಸುರಿಸುತ್ತಲಾನಂದದಿಂದಲಿ
ಧರ್ಮ-ಪಾಂಚಾಲಿಯರೆರಗಿ
ಭೀಮಾರ್ಜುನರು ನಿಂತರವನಿಯ ನೋಡುತ್ತ
ನಾಚುತ್ತಲಿಯೆ ತಲೆವಾಗಿ. ||೨೯||

ಗದೆಯನ್ನು ತಿರುಹುತ್ತ ಭೀಮನು ನಗೆಗೂಡಿ
ಗಂಗೆಯ ತಡಿಯನ್ನು ಸೇರಿ,
ಕರಗಳ ಮುಗಿಯುತ್ತ ಮುನಿಗಳ ಸೈನ್ಯವ
ಕರೆತಂದನಾನಂದ ಬೀರಿ ||೩೦||

ಧರ್ಮರಾಜನು ತಾನು ಪಾಂಚಾಲಿಯೊಡಗೂಡಿ
ದೂರ್ವಾಸಮುನಿಗಳಿಗೆರಗಿ
"ಸಂತೋಷವಾಯಿತು ನಿಮ್ಮಯ ದಯದಿಂದ-
ಲೊಲಿದನೆನಗೆ ಹರಿ ಕರಗಿ" ||೩೧||

ರನ್ನಮಣಿಯನಿತ್ತು ಗಂಧವ ಮೈಗೆಲ್ಲ
ಕೋಮಲ ಕರದಿಂದ ಪೂಸಿ
"ಧನ್ಯನಾದೆನು ಮುನಿಪಾದಪದುಮದಿಂದ-
ಲಾಗುವಂಥ ಪರಿಮಲ ಮೂಸಿ" ||೩೨||

ರನ್ನಬಟ್ಟಲದಲ್ಲಿ ದೂರ್ವಾಸಮುನಿಗೆಂದು
ದ್ರಾಕ್ಷೆಯ ಹಣ್ಣ ಹಿಂಡಿದರು.
ಸವಿಯಾದ ನವಮಧು ಸಕ್ಕರೆ ಬೆರಸಿದ
ಆವಿನ ಹಾಲ ತಂದಿಹರು. ||೩೩||

ಹತ್ತು ಸಾವಿರ ಶಿಷ್ಯರೊಡಗೂಡಿ ಮುನಿವರ್ಯ-
ನೂಟವ ಗಯ್ದಂಥ ತೆರವ
ನಾನೇತು ಬಣ್ಣಿಪೆ ? ಹತ್ತುಸಾವಿರ ಹೆಡೆ-
ಯುಳ್ಳವ ಬಣ್ಣಿಪ ರಸವ ||೩೪||

ಶಿಷ್ಯರ ಸಂದಣಿಯೊಳಗಪ್ಸರೆಯರೆಲ್ಲ
ಮೆರೆದರು ಸೆಳೆಮಿಂಚಿನಂತೆ;
ಉಂಡಿ ಕಡುಬು ಖೀರು ಹೋರಿಗೆ ಮಂಡಿಗೆ
ಬಡಿಸಿದರಮರಿಯರಂತೆ ||೩೫||

ಗವಲಿಯ ಪರಮಾನ್ನ ಕುಡಿಯಲು ಶಿಷ್ಯರು
ಹಾಲಿನೊಳಿರುವಂಥ ದ್ರಾಕ್ಷಿ,
ಮೀಸೆಯುರಣ್ಯದಿ ಬಂದು ನಿಂತುವು ಮುಂದೆ
ಹೋಗದೆ—ಮಾಣಿಕ್ಯರಾಶಿ. ||೩೬||

ರುಚಿಯಾದ ಸಾರನ್ನು ಸುರಿದರು ಶಿಷ್ಯರು,
ಕರಪನಾಡಿಸಿ ಪೊಡೆಯ ಮೇಲೆ.
ಉಣ್ಣಲಾರದೆ ಹೊಟ್ಟೆ ಬಿಗಿಯಾಗಿ ಕುಳಿತರು
ಸುರಿಯುತ್ತ ತುತಿಗಳಮಾಲೆ. ||೩೭||

ರಸವಾದ ತಾಂಬೂಲಹಿಡಿಗಳ ಮೆಲ್ಲುತ್ತ
ನೆರೆದರು ಮಂಟಪದೊಳಗೆ;
ಪಂಚಪಾಂಡವರಿಗೆ ಜಯವಾಗಲೆಂದೆಂದು
ಹರಸಿದರಾನಂದವಾಗೆ. ||೩೮||

ಧರ್ಮನು ತಮ್ಮಂದಿರೊಡಗೂಡಿ ಮಣಿದನು
ದೂರ್ವಾಸಮುನಿಗಳ ಮುಂದೆ;
ಪಾರಿಜಾತದ ಸೇಸೆ ಶಿರದಲಿ ಸುರಿದನು
ಮುನಿವರ್ಯ ತಾ ಹಿಗ್ಗಿ ನಿಂದೆ. ||೩೯||

"ಕಪಟನಾಟಕಸೂತ್ರಧಾರ ನಾರಾಯಣ-
ನಿಂದೆನಗೆಯೆ ಒಲಿದಿಹನು;
ಕೃಷ್ಣನ ಕರದಿಂದ ಸಿದ್ಧವಾದಮೃತದ
ಊಟವನಿಂದು ಉಂಡಿಹೆನು." ||೪೦||

ಮುನಿವರ್ಯ ಸಾಷ್ಟಾಂಗವೆರಗಲು ಮಂಟಪ-
ವರೆನಿಮಿಷದಿ ಕರಗಿಹುದು.
ಮೇಣದ ಮಂಟಪ ಮೇಣದ ಪುತ್ಥಳಿ
ಮೇಣವಿದೆಲ್ಲವಾಗಿಹುದು ||೪೧||

ಮುಂಬಂದು ಪಾಂಚಾಲಿಯೊರಗಲು ದೂರ್ವಾಸ
ಹೆಚ್ಚಳದಾನಂದದಿಂದ
.'ಪಂಚಪಾಂಡವರನ್ನು ಪತಿಯಾಗಿ ಪಡೆ ಜನ್ಮ-
ಜನ್ಮದಿ ಸಂತಸದಿಂದ!" ||೪೨||

ಹೀಗೆಂದು ದ್ರುಪದನ ತನಯಳ ಹರಸಿದ
ದೂರ್ವಾಸನಾನಂದವಡೆದು;
ಹತ್ತು ಸಾವಿರ ಶಿಷ್ಯರೊಡಗೂಡಿ ನಡೆದನು
ಬಂದ ದಾರಿಯ ತಾನು ಹಿಡಿದು. ||೪೩||

ಪಂಚಪಾಂಡವರೆಲ್ಲ ಪಾಂಚಾಲಿಯೊಡಗೂಡಿ
ಗೋವಿಂದನನು ಪ್ರಾರ್ಥಿಸಿದರು;
ಕೃಷ್ಣನ ಕೃಪೆಯಿಂದಲರೆನಿಮಿಷದಿ ವನ
ನಂದನವನವ ಮಾಡಿದರು ||೪೪||

ಚಂದ್ರವಂಶದ ಚೆಲ್ವ ಚಂದ್ರಾಮನಾದಂಥ
ಧರ್ಮರಾಜನ ಭಕ್ತಿ ನೋಡಿ
ಸೂರ್ಯಮಣಿಯು ಹಿಗ್ಗಿ ನಗುತಲಿದ್ದನು ತಾನು
ಶ್ರೀಧರಹೃದಯದಿ ಕೂಡಿ. ||೪೫||

CC-0. Jangamwadi Math Collection. Digitized by eGangotri

# ಜಯಕರ್ನಾಟಕ

## ಚಂದಾದಾರರಲ್ಲಿ

ವಾರ್ಷಿಕ ಚಂದಾ (ಅಂಚೆಯವೆಚ್ಚ ಸೇರಿ) ಒಳದೇಶ ೪-೮-೦; ಪರದೇಶ ೭-೦-೦

ಅರ್ಧವಾರ್ಷಿಕ—ಒಳದೇಶ ೨-೪-೦; ಪರದೇಶ ೩-೮-೦; ಬಿಡಿ ಸಂಚಿಕೆ ೦-೬-೦; ವ್ಹಿ.ಪಿ. ವೆಚ್ಚ ಬೇರೆ

'ಜಯಕರ್ನಾಟಕ'ವು ಪ್ರತಿತಿಂಗಳ ಮೊದಲನೆಯ ತಾರೀಖಿಗೆ ಪ್ರಕಟವಾಗುವುದು. ಬೇಕಾದ ಸಂಚಿಕೆಯಿಂದ ಚಂದಾದಾರರಾಗಲು ಬರುವುದು. ಚಂದಾಹಣವನ್ನು ಮುಂಚಿತವಾಗಿಯೇ ಕಳಿಸಬೇಕು. ಇಲ್ಲವೆ ವ್ಹಿ. ಪಿ. ಯಿಂದ ತರಿಸಿಕೊಳ್ಳಬಹುದು. ಚಂದಾ ಅವಧಿ ಮುಗಿಯುವ ಮೊದಲು ಒಂದು ತಿಂಗಳು ಚಂದಾದಾರರಿಗೆ ತಿಳಿಸಲಾಗುವುದು. ಪತ್ರಿಕೆ ಬೇಡವಾದವರು ಹಾಗೆ ತಿಳಿಸಬೇಕು. ಇಲ್ಲದಿದ್ದಲ್ಲಿ ಮುಂದಿನ ವರ್ಷದ ಚಂದಾ ಹಣಕ್ಕಾಗಿ ವ್ಹಿ. ಪಿ. ಯನ್ನು ಕಳಿಸಲಾಗುವುದು ಬೇಡವಾದವರು ಮುಂಚಿತ ತಿಳಿಸುವುದರ ಅಗತ್ಯದ ಕಡೆಗೆ ಚಂದಾದಾರರ ಲಕ್ಷ್ಯವನ್ನು ಎಳೆಯುತ್ತೇವೆ. ಯಾಕೆಂದರೆ ಅದರಿಂದ ವ್ಯರ್ಥ ವ್ಹಿ. ಪಿ. ವೆಚ್ಚಕ್ಕೆ ಗುರಿಯಾಗುವುದು ನಮಗೆ ತಪ್ಪುವುದು. ಪತ್ರಿಕೆ ಬಾರದಿದ್ದವರು ಆ ತಿಂಗಳ ೧೫ನೆಯ ತಾರೀಖಿನೊಳಗೆ ತಿಳಿಸಬೇಕು ಮುಂದಿನ ತಕರಾರುಗಳಿಗೆ ನಾವು ಹೊಣೆಗಾರರಲ್ಲ.

## ಜಾಹೀರಾತುದಾರರಲ್ಲಿ

ಜಯಕರ್ನಾಟಕವು ಕರ್ನಾಟಕದಲ್ಲೆಲ್ಲ ಸಂಚರಿಸುವುದಲ್ಲದೆ, ಪರಪ್ರಾಂತ-ಪರದೇಶಗಳಲ್ಲಿಯೂ ಹೋಗುವುದರಿಂದ, ವ್ಯಾಪಾರ ವ್ಯವಹಾರಗಳ ಪ್ರಚಾರಕ್ಕೆ ಉತ್ತಮ ಮಾಧ್ಯಮ.

ಜಾಹೀರಾತುದಾರರು ೨೫% ಹಣವನ್ನು ಮುಂಗಡ ಕಳಿಸಲೇ ಬೇಕು. ಒಂದೇ ಸಲ ಪ್ರಕಟನೆ ಕೊಡಲಪೇಕ್ಷಿಸುವವರು ಇಡಿಯ ಹಣವನ್ನು ಕಳಿಸಬೇಕು. ೨೦ನೆಯ ತಾ. ನ ಒಳಗಾಗಿ, ಜಾಹೀರಾತು ಕಾರ್ಯಾಲಯಕ್ಕೆ ತಲುಪಬೇಕು.

### ಪ್ರಕಟನೆಯ ದರಗಳು

| | ವರ್ಷ. | ೬ ತಿಂಗಳು. | ೩ ತಿಂಗಳು. | ೧ ಸಾರೆ. |
|---|---|---|---|---|
| ಒಂದು ಪುಟಕ್ಕೆ | ೧೮೦ ರೂ. | ೯೫ ರೂ. | ೫೦ ರೂ. | ೨೦ ರೂ. |
| ಅರ್ಧ ಪುಟಕ್ಕೆ | ೯೫ ,, | ೫೦ ,, | ೩೦ ,, | ೧೨ ,, |
| ೧/೪ ಪುಟಕ್ಕೆ | ೫೦ ,, | ೩೦ ,, | ೨೦ ,, | ೭ ,, |
| ೧/೮ ಪುಟಕ್ಕೆ | ೩೦ ,, | ೨೦ ,, | ೧೨ ,, | ೪ ,, |

ವಿಶೇಷ ಸ್ಥಳ ಬೇಕಾದಲ್ಲಿ ಮತ್ತು ಹೆಚ್ಚಿನ ವಿವರಗಳಿಗಾಗಿ ಬರೆದು ತಿಳಿದುಕೊಳ್ಳಬೇಕು.

## ಬರೆಹಗಾರರಲ್ಲಿ

(೧) ತಮ್ಮ ಲೇಖನವು ಸ್ವೀಕೃತ-ಅಸ್ವೀಕೃತ ಎಂಬ ಬಗ್ಗೆ ತಿಳಿದುಕೊಳ್ಳಲು ಬಯಸುವ ಬರೆಹಗಾರರು, ತಮ್ಮ ಲೇಖನದೊಡನೆ ಅಂಚೆಯ ವೆಚ್ಚಕ್ಕಾಗಿ ಮೂರು ಬಿಲ್ಲೆಗಳ ಟಿಕೀಟೊಂದನ್ನು ಇಡಬೇಕು. (೨) ತಮ್ಮ ಲೇಖನಗಳನ್ನು ಮರಳಿ ಬಯಸುವವರು ಅದಕ್ಕೆ ತಗಲುವ ಅಂಚೆವೆಚ್ಚದಷ್ಟು ಟಿಕೀಟುಗಳನ್ನು ಅದರೊಂದಿಗೆ ಇಡಬೇಕು. (೩) ಲೇಖನಗಳನ್ನು ಒಂದೇ ಮಗ್ಗಿಲಿಗೆ ಸುವಾಚ್ಯವಾದ ಅಕ್ಷರಗಳಲ್ಲಿ ಬರೆಯಬೇಕು. ಸಾಕಷ್ಟು ಮಾರ್ಜಿನ್ ಬಿಡಬೇಕು. (೪) ಲೇಖನದ ಹಸ್ತಪ್ರತಿಯು ಜ. ಕ. ದ ನಾಲ್ಕು ಪುಟಗಳನ್ನು ಸಾಮಾನ್ಯವಾಗಿ ಮಿಕ್ಕಬಾರದು. (೫) ಜಯಕರ್ನಾಟಕಕ್ಕೆ ಬರುವ ಲೇಖನಗಳು ಜಯಕರ್ನಾಟಕಕ್ಕೆಂದೇ ಇರಬೇಕು. ಇಲ್ಲಿ ಪ್ರಕಟವಾಗುವ ಮೊದಲು ಇನ್ನೆಲ್ಲಿಯೂ ಪ್ರಕಟವಾಗಿರಬಾರದು. ಆ ಮೇಲೂ ಬೇರೆಕಡೆ ಪ್ರಕಟವಾಗುವ ಪಕ್ಷದಲ್ಲಿ ಸಂಪಾದಕರ ಅನುಮತಿಯನ್ನು ಪಡೆಯಬೇಕು. (೬) ಜಯಕರ್ನಾಟಕಕ್ಕೆಂದು ಬಂದ ಲೇಖನವು ಉದ್ಧೃತ ಇಲ್ಲವೆ ಅನ್ಯಭಾಷೆಯಿಂದ ಪರಿವರ್ತಿತವಿದ್ದಲ್ಲಿ ಮೂಲವನ್ನು ಉಲ್ಲೇಖಿಸಬೇಕು.

## ಸಾಮಾನ್ಯ

ಚೆಕ್ಕುಗಳು, ಮನಿಯಾರ್ಡರುಗಳು, ಬೇರೆ ಬಗೆಯ ಹಣದ ವ್ಯವಹಾರ-ಇವನ್ನು ಮತ್ತು ಲೇಖನಾದಿಗಳ ಪತ್ರವ್ಯವಹಾರವನ್ನು "ಸಂಪಾದಕ ಜಯಕರ್ನಾಟಕ, ಧಾರವಾಡ" ಇವರ ಹೆಸರಿನಲ್ಲಿಯೂ, ಜಾಹೀರಾತಿನ ಪತ್ರವ್ಯವಹಾರವನ್ನು 'ಕಾರ್ಯದರ್ಶಿ, ಜ. ಕ. ಪ್ರಕಟನಾ ವಿಭಾಗ' ಇವರ ಹೆಸರಿನಲ್ಲಿಯೂ, ಬೇರೆ ಕಾರ್ಯಾಲಯದ ವ್ಯವಹಾರವನ್ನು "ವ್ಯವಸ್ಥಾಪಕ" ರ ಹೆಸರಿನಲ್ಲಿಯೂ ನಡೆಯಿಸಬೇಕು.

ಜಯಕರ್ನಾಟಕ ಕಾರ್ಯಾಲಯ, ಧಾರವಾಡ

CC-0. Jangamwadi Math Collection. Digitized by eGangotri

ಸಣ್ಣ ಕತೆ

# ಆ ಭಾನುವಾರದ ರಾತ್ರಿ

ಶ್ರೀ. ಕೆ. ನರಸಿಂಹಮೂರ್ತಿ, ಬೆಂಗಳೂರು

**ನಾಟಕಕ್ಕೆ ಮೆಚ್ಚಿದ ಹುಡುಗ ಶ್ರೀನಿವಾಸ ತಂದೆತಾಯಿಗಳಿಗೆ ಗೊತ್ತಾಗದಂತೆ ಮನೆಯನ್ನು ಬಿಟ್ಟ. ನಾಟಕ ಕಂಪನಿಯ ಯಜಮಾನರ ಮಮತೆಯಲ್ಲಿ ಬೆಳೆದು ಸುಖಸಂಸಾರಿಯಾದ. ತಂದೆತಾಯಿಗಳ ಅಗಲಿಕೆಯ ಕೊರಗು ಆತನ ಎದೆಯನ್ನು ಕೊರೆಯುತ್ತಿರುವಾಗಲೆ ಅವರನ್ನು ಕಂಡು ಸಂಪೂರ್ಣಸುಖಿಯಾದ.**

ಶ್ರೀನಿವಾಸನು ಆಗ ತಾನೆ ಊಟಮಾಡಿ, ಮಲಗುವ ಕೊಠಡಿಯಲ್ಲಿ ಮಂಚದ ಮೇಲೆ ಕುಳಿತಿದ್ದನು. ಅಂದು ಭಾನುವಾರ; ಕಚೇರಿಗೆ ರಜ. ಭಾನುವಾರ ರಾತ್ರಿ ಅವನು ಮನೆಬಿಟ್ಟು ಕದಲುತ್ತಿರಲಿಲ್ಲ. ಅವನೂ ಪದ್ಮಳೂ ಒಂದು ಏರ್ಪಾಡು ಮಾಡಿಕೊಂಡಿದ್ದರು: ಒಂದು ಭಾನುವಾರ ರಾತ್ರಿ ಅವನು ಅವಳಿಗೆ ಕತೆಹೇಳುವುದು, ಮಾರನೆಯ ಭಾನುವಾರ ರಾತ್ರಿ ಅವಳು ಅವನಿಗೆ ಅದನ್ನು ಪುನಃ ಹೇಳುವುದು— ಎಂದು. 'ಎಲ್ಲೊ ಮೇಷ್ಟ್ರು ಹುಡುಗರ ಸಂಬಂಧ' ಎಂದುಕೊಳ್ಳಬಾರದು! ಶ್ರೀನಿವಾಸ ರಸಿಕ ಎಂದರೆ ಪಕ್ಕಾರಸಿಕ. ಪದ್ಮಳು ಅವನಿಗೆ ಕತೆಯನ್ನು ಹೇಳುವಾಗ, ಅವಳು ತೋರುತ್ತಿದ್ದ ಮುಖಭಂಗಿ, ಮಂದಹಾಸ, ಮಾತಿನ ಜಾಣ್ಮೆ ಇವುಗಳು ಅವನಿಗೆ ಹಬ್ಬದೂಟ. ಆ ಭಾನುವಾರ ಅವನ ಸರದಿ. 'ಏನುಕತೆ ಹೇಳಲಿ?' ಎಂದು ಯೋಚಿಸುತ್ತ ಕುಳಿತಿದ್ದನು.

ಆಗಿದ್ದ ಮನೆಗೆ ಅವನು ಹಿಂದಿನ ರಾತ್ರಿಯೆ ಬಂದಿದ್ದುದು. ಅದಕ್ಕೆ ಮೊದಲು ವಿಶ್ವೇಶ್ವರಪುರದಲ್ಲಿದ್ದನು. ಆ ಮನೆಯ ಯಜಮಾನನು ತಾನೊಂದು ಕೊಠಡಿಯಲ್ಲಿದ್ದುಕೊಂಡು ಮಿಕ್ಕುದುದೆಲ್ಲವನ್ನೂ ಬಾಡಿಗೆಗೆ ಕೊಟ್ಟಿದ್ದನು. ಆದರೆ ಅವನಿಗೆ, ಶ್ರೀನಿವಾಸ-ಪದ್ಮರ ಜೀವನವನ್ನು ನೋಡಿಯೊ ಏನೊ, ಇನ್ನೂ ಒಂದು ವಿವಾಹವನ್ನು ಮಾಡಿಕೊಂಡು ಬಿಡೋಣವೆಂದೆನಿಸಿತು. ಮೂರು ಮದುವೆಗಳು ಮುಗಿದಿದ್ದುವು. ಆದರೂ ಹಣಗಾರನಾದುದರಿಂದ ಒಬ್ಬ ಚೆಲುವೆಯನ್ನೆ ಹುಡುಕಿ ನಾಲ್ಕನೆಯ ಮದುವೆಗೆ ಅಣಿಮಾಡಿದ್ದನು. ಮದುವೆಯಾದ ಮೇಲೆ ಒಂದೆ ಕೊಠಡಿಯಲ್ಲಿ ಇರಲಾದೀತೆ! ಶ್ರೀನಿವಾಸನನ್ನು ಅವನು ಹೊರಡಿಸಿದ್ದುದು ಅದಕ್ಕೆಯೆ.

ಎಷ್ಟು ಯೋಚಿಸಿದರೂ ಒಂದು ಕತೆಯೂ ಮನಸ್ಸಿಗೆ ಬಾರದಿದ್ದುದರಿಂದ, ಶ್ರೀನಿವಾಸನಿಗೆ ಸ್ವಲ್ಪ ಆಶ್ಚರ್ಯವೆ. ಅಷ್ಟರಲ್ಲಿಯೆ ಅವನು ಅವಳಿಗೆ ಐವತ್ತು ಅರುವತ್ತು ಕತೆಗಳನ್ನು ಹೇಳಿದ್ದನು. ಕರೆದೊಡನೆಯೆ 'ಅಪ್ಪಣೆ' ಎಂದು ಬರಬೇಕಾದುವು ಅಂದದೇಕೋ ಬರಲೆ ಇಲ್ಲ. ಪದ್ಮಳು ಊಟಮಾಡಿ ಮುಸುರೆತೊಳೆದು ಬಂದವಳೆ, "ಆಯ್ತು. ಇನ್ನು ಪ್ರಾರಂಭಮಾಡಿ" ಎಂದಳು.

"ಅದೇನೊ, ಇವತ್ತು ಒಂದು ಕತೆಯೂ ಹೊಳೀಲಿಲ್ಲವೆ." ಎಂದನು ಶ್ರೀನಿವಾಸ.

"ಅದೆಲ್ಲ ನಾನೊಪ್ಪೋದಿಲ್ಲ."

"ಒಪ್ಪೋದಿಲ್ಲ! ಮಿದುಳಿನಲ್ಲಿ ಒಂದು ಕಥಾವಸ್ತುವೂ ಮಿಂಚಲಿಲ್ಲವೆ—ಎಂದರೆ ಒಪ್ಪೋದಿಲ್ಲವಂತೆ!"

"ಅದೇನು ಇವತ್ತು ದಾಸರ ಹಾಡಿಗೆ ಅಷ್ಟು ಮನಸೋತುಬಿಟ್ಟಿದ್ದೀರಿ! ಆಗಿನಿಂದ ಒಂದು ತರಹ ಇದ್ದೀರಿ!"

"ಅವರು ಹೇಳುತಾ ಇದ್ದರು ನೋಡು, 'ಕಂಡೆ ನಾ ಕನಸಿನಲ್ಲಿ' ಎಂದು. ಆ ಹಾಡನ್ನು ನನ್ನ ತಂದೆ ಸದಾ ಹಾಡುತ್ತಿದ್ದರು. ಬೆಳಿಗ್ಗೆ ಅದನ್ನು ಕೇಳುತಾ ಇದ್ದರೆ—ಎಂಟು ವರ್ಷದ ಹುಡುಗ ನಾನು—ನನ್ನ ತಂದೆಯ ಮುಂದೆ

CC-0. Jangamwadi Math Collection. Digitized by eGangotri

ಇನ್ನೊಂದು ಸಲ ನಿಂತ ಹಾಗೆ ತೋರಿತು. ಪದ್ಮಾ, ಕಣ್ಣಲ್ಲಿ ನೀರು ಬಂದುಬಿಟ್ಟಿತು. "

"ನೀವು ನನಗೆ ನಿಮ್ಮ ಕಿರ್‍ತನದ ಕತೇನೇ ಹೇಳಿಲ್ಲ ನೋಡಿ. ಅದನ್ನು ಹೇಳೀಂತ ಹೊಸವರಲ್ಲಿ ಒಂದೆರಡು ತಡವೆ ಕೇಳಿದೆ. ಹಾರಿಸಿಬಿಟ್ಟಿರಿ. ಇವತ್ತು ಹೇಗಿದ್ದರೂ 'ಕತೆಯೊಂದೂ ಸಿಗಲಿಲ್ಲ' ಎಂದಿರಲ್ಲ. ನಿಮ್ಮ ಕತೇನೇ ಹೇಳಿಬಿಡಿ."

"ಸರಿ, ಒಳ್ಳೇ ಕತೆ ನನ್ನದು; ಅದನ್ನು ಕಟ್ಟಿಕೊಂಡು ನಿನಗೇನು ಹೇಳು !"

"ಇವತ್ತು ಹಾರಿಸಬೇಡಿ. ನಿಮ್ಮರ್ಧಾಂಗಿ ಅಂದ ಮೇಲೆ ನಿಮ್ಮ ಕತೆ ತಿಳಿದೇ ಇರಬೇಕು ನನಗೆ !"

"ಪದ್ಮ, ಇನ್ನೊಂದುಸಲ ಹೇಳು! ನೀನು ನನ್ನ ಏನು ? ಅದೇನೊ 'ಅಂಗಿ' ಎಂದೆಯಲ್ಲ !"

"ಅ-ರ್ಧಾಂ-ಗಿ" ಎಂದು ನಗುತ್ತ ಪದ್ಮಳು ತನ್ನ ಮುಖ ವನ್ನು ಅವನೆದೆಯ ಮೇಲೆ ಇಟ್ಟಳು. ಅವಳ ಕಣ್ಣುಗಳು ಪ್ರೇಮರಸವನ್ನು ಕೋಡಿಹರಿಸುತ್ತಿದ್ದುವು. ಶ್ರೀನಿವಾಸನು ಅವಳ ಹಣೆಗೆ ಮುತ್ತಿಟ್ಟು—ಎಷ್ಟಾದರೂ ರಸಿಕ—ತನ್ನ ಕತೆಯನ್ನು ಪ್ರಾರಂಭಿಸಿದನು: "ನಿನಗೆ ನನ್ನ ವಿಷಯ ಏನೂ ಗೊತ್ತಿಲ್ಲವೆ ಪದ್ಮ ? "

"ಏನೂ ಗೊತ್ತಿಲ್ಲದೆ ಹೇಗಿರುತ್ತೆ ? ರಾಮಣ್ಣ ಮಾವನಿಗೆ ನೀವೆಲ್ಲೋ ಸಿಕ್ಕಿದಿರಿ; ಅವರು ನಿಮ್ಮನ್ನು ಸ್ವಂತ ಮಗನಂತೆ ಸಾಕಿ ಮುಂದಕ್ಕೆ ತಂದರು...ಎಂದಿದಿಷ್ಟು ನನಗೆ ತಿಳಿಯದೆ ಇಲ್ಲ."

"ಸರಿ, ಪದ್ಮಾ ಈಗ ಎಂಟೂವರೆ; ಸೀದಾ ಕತೆ ಶುರು ಮಾಡಿಬಿಡುತೇನೆ. ಬೇಗ ಮುಗಿಸಿ ಬಿಡೋಣ. ಚಿಕ್ಕಬಳ್ಳಾ-ಪುರದ ಹತ್ತಿರ ಒಂದು ಹಳ್ಳಿ. ಅದರ ಹೆಸರು ಚೆನ್ನಾಗಿಲ್ಲ, ಎಂದೇ ಹೇಳಲಿಲ್ಲ. ಆ ಹಳ್ಳಿಯೊಳಗೆ ನೀನು ಕಾಲಿಟ್ಟ ತಕ್ಷಣ ನಿನಗೆ ಕಾಣಿಸುತ್ತಿದ್ದುದು ಒಂದು ದೊಡ್ಡ ಮೈದಾನು; ಅದರ ಹಿಂದುಗಡೆ ಒಂದು ಸಣ್ಣ ಮನೆ. ಆ ಮನೆಯಲ್ಲೆ ನನ್ನ ತಂದೆ ವಾಸಿಸುತ್ತಿದ್ದುದು. ಅವರದು ಸ್ವಲ್ಪ ಧಾರ್ಮಿಕ ಪ್ರವೃತ್ತಿ; ರಾತ್ರಿ ಊಟವಾದ ಮೇಲೆ ದಾಸರ ಹಾಡುಗಳನ್ನು ಹೇಳಲು ಪ್ರಾರಂಭಿಸುತ್ತಿದ್ದರು. ಹನ್ನೊಂದು ಗಂಟೆಯಾಗೋದು ಒಂದೊಂದುದಿನ ಅವರು ನಿಲ್ಲಿಸುವಾಗ. ಆ ಹಳ್ಳೀಲಿ ಒಂದು ಪ್ರೈಮರಿ ಸ್ಕೂಲಿತ್ತು. ಅದಕ್ಕೆ ಅವರು ಹೆಡ್ಮಾಸ್ಟರರಾಗಿದ್ದರು. ಬೇರೆ ಕಡೆಯಿಂದ ವರ್ಗ—ವಾಗಿ ಬಂದವರಾದ್ದರಿಂದ ಭೂಮಿಕಾಣಿ ಏನೂ ಮಾಡಿರ ಲಿಲ್ಲ. ನನ್ನ ತಾಯಿ ಬಹು ಒಳ್ಳೆಯವಳು. ಅಂಥಾ ಸುಂದರಿಯೂ ಅಲ್ಲ, ಅಂಥಾ ಕುರೂಪಿಯೂ ಅಲ್ಲ."

"ನಾನು ಸುಂದರಿಯೊ ಕುರೂಪಿಯೋ ಹೇಳಿ ನೋಡೋಣ!" ಎಂದಳು ಪದ್ಮ. "ಪ್ರಿಯೇಷು ಸೌಭಾಗ್ಯ ಫಲಾಹಿ ಚಾರುತಾ" ಎನ್ನುವಂತೆ ಪತಿಯು ಮೆಚ್ಚಿ ಪ್ರೀತಿ-ಸಿದರೇ ಪತ್ನಿಯು ಸುಂದರಿಯಾದುದಕ್ಕೆ ಸಾರ್ಥಕ. "ಅದೇನು ಆಗಾಗ ಕೇಳುತ್ತಲೆ ಇರುತ್ತೀಯಲ್ಲ! ಅಪ್ರತಿಮ ಸುಂದರಿ ಎಂದು ಒಂದು ಸಲ ಹೇಳಿದರೆ ಸಾಲದೆ ? " ಎಂದನು ಶ್ರೀನಿವಾಸ. "ನೀವು ಹಾಗೆ ಹೇಳಿದರೆ ನನ್ನ ಮನಸ್ಸಿಗೆ ಬಲು ಸಂತೋಷ" ಎಂದು ಪದ್ಮಳು ಅವನ ಕೆನ್ನೆಗೆ ಕೆನ್ನೆಯಿಟ್ಟಳು. ಅವಳು ಅವನ ಅಚ್ಚುಮೆಚ್ಚಿನ ಮಡದಿ-ಅವಳ ಮಾತು ಅವನಿಗೆ ಅಮೃತ. ಅವನಿಗೆ ಸ್ವರ್ಗದಲ್ಲಿದ್ದಂತೆ ತೋರಿತು. ಸ್ವಲ್ಪ ಹೊತ್ತು ನಿಶ್ಶಬ್ದವಾಗಿ ಆ ಸುಖವನ್ನು ಸವಿದು, ಕತೆಯನ್ನು ಮುಂದುವರಿಸಿದನು: "ಅವರಿಗೆ ನಾನು ದಿನಕಳೆದು ಹುಟ್ಟಿದೆ. ನನ್ನಲ್ಲಿ ಅವರಿಗಿದ್ದ ಪ್ರೇಮ ಅಷ್ಟಿಷ್ಟಲ್ಲ ಪದ್ಮ! ಒಂದು ಗಂಟೆ ಕಣ್ಮರೆಯಾದೆನೆಂದರೆ ಹುಡುಕಿ ತಡಕಿ ತಲ್ಲಣಪಡುತ್ತಿದ್ದರು. ನನಗೆ ಎಂಟು ತುಂಬಿತು. ಆಗ ನಾಲ್ಕನೆಯ ಕ್ಲಾಸಿನಲ್ಲಿದ್ದೆ. ಇನ್ನೊಂದು ವಾರಕ್ಕೆ ಆ ನಾಲ್ಕನೆಯ ಕ್ಲಾಸ್ ಪರೀಕ್ಷೆ ಆಗಬೇಕು—ಎನ್ನುವಾಗ ಆ ಹಳ್ಳಿಗೆ ಒಂದು ನಾಟಕದ ಕಂಪೆನಿ ಬಂತು. ನಮ್ಮ ಮನೆಯ ಮುಂದಿನ ಮೈದಾನಿನಲ್ಲಿ, ಈಚಲ ಚಾಪೆ ತಕ್ಕೊಂಡು ಒಂದು ಭರ್ಜರಿ ಥಿಯೇಟರ್ ಕಟ್ಟಿ-ಬಿಟ್ಟರು. ಹಳ್ಳೀಲಿ ದೊಡ್ಡಮನುಷ್ಯರೆನಿಸಿಕೊಳ್ಳುವವರಿಗೆ ಪಾಸು ಕೊಡುವ ರೂಢಿ ಇತ್ತು. ಹೆಡ್ಮಾಸ್ಟರರಾದ್ದರಿಂದ ನನ್ನ ತಂದೆಗೆ ಒಂದು ಬಂತು. ಆದರೆ ಅವರು 'ನಾಟಕ-ಗೀಟಕ ನೋಡೋಕೆ ನಿನಗಿದು ಸಮಯವಲ್ಲ ಪಾಠಮಾಡು ಮನೇಲಿ' ಎಂದು ನನ್ನ ಕೂಡಿಸಿಬಿಟ್ಟು, ನನ್ನ ತಾಯಿಯನ್ನ ಕರೆದುಕೊಂಡು ಹೊರಟುಹೋದರು. ಇದಕ್ಕೆ ಎರಡು ವರ್ಷಗಳ ಕೆಳ-ಇನ್ನೊಂದು ಕಂಪೆನಿ ಬಂದಿದ್ದು, ನಾನೂ ಹೋಗಿ ನೋಡಿದ್ದೆ. ಆಗಿನಿಂದ ನನಗೆ ನಾಟಕ ಎಂದರೆ ಪ್ರಾಣ. ಅದರಷ್ಟು ಸೊಗಸಾಗಿರೋದು ಈ ಲೋಕದಲ್ಲಿ ಇನ್ನು ಏನೂ ಇ[illegible] ಎಂದುಕೊಂಡಿದ್ದೆ. ಆ ಕಂಪೆನಿಗೆ ಸೇರಿ ನಾನೂ ಪಾರ್ಟು ಮಾಡಬೇಕು; ಅದಕ್ಕೂ ಸುಖಕರವಾದ್ದು ಇನ್ನು ಏನ[illegible] ಇಲ್ಲ—ಎಂದೆನಿಸಿತ್ತು. ಆದ್ದರಿಂದ ನಾಟಕಕ್ಕೆ ತ[illegible] ಕರೆದುಕೊಂಡು ಹೋಗದೆಯಿದ್ದುದು ನನ್ನ ಮನಸ್ಸಿಗೆ ಬ[illegible] ಹಾಕಿದ ಹಾಗಾಯಿತು. 'ಇನ್ನು ಮೇಲೆ ನಾನು ಈ ಮನೆಯ[illegible] ರೋಲ್ಲ' ಎಂದುಕೊಂಡೆ. 'ಎಲಾ, ಎಷ್ಟು ಪ್ರೀತಿಸುತ್ತ[illegible] ತಂದೆತಾಯಿಗಳು ! ಅವರನ್ನು ಬಿಟ್ಟು ಹೋಗಬಹು[illegible]

CC-0. Jangamwadi Math Collection. Digitized by eGangotri

ಎಂದು ನನಗೆನಿಸಲೇ ಇಲ್ಲ. 'ಯಾವಾಗಲೂ ಈ ಬಂದೀಖಾನೇಲಿ ನನ್ನ ಕೂಡಿಹಾಕಿ ಸಾಯಿಸ್ತಾರಲ್ಲ' ಎಂದು ನನಗವರ ಮೇಲೆ ಬಲು ಕೋಪ. ಪುಸ್ತಕ ಅತ್ತಕಡೆ ಬಿಸಾಟು, ಕೂಡಿಟ್ಟುಕೊಂಡಿದ್ದ ದುಡ್ಡಿನ ಡಬ್ಬೀನ ತಕ್ಕೊಂಡೆ. ಮನೆಗೆ ಬೀಗಹಾಕಿ ಪಕ್ಕದ ಮನೆಗೆ ಹೋದೆ. ಅಲ್ಲಿ ಶಾಸ್ತ್ರೀಗಳ ತಾಯಿ ಮುದುಕಿ ಕುಳಿತಿದ್ದಳು. 'ಅಪ್ಪ ಬಂದರೆ, ಈ ಬೀಗದ ಕೈ ಕೊಡಿ; ನಾನು ಶಾಮೂ ಮನೆಗೆ ಹೋಗಿ ಓದಿಕೊಳ್ಳುತ್ತೇನೆ. ಹೇಳಿ ಬಿಡಿ, ಅಮ್ಮಾ' ಎಂದು ಅವರ ಕೈಲಿ ಬೀಗದ ಕೈ ಕೊಟ್ಟು, ಥಿಯೇಟರಿಗೆ ನಡೆದೆ. ಟಿಕೀಟು ತಕ್ಕೊಂಡು ಕೊನೆಯ ಕ್ಲಾಸಿನಲ್ಲಿ ಕುಳಿತೆ. ಎಲ್ಲಿ ಸಿಕ್ಕಿಬಿಡುತ್ತೇನೆಯೊ ಎಂದಿದ್ದೆ. ಆದರೆ ಸ್ಕ್ರೀನು ಬಿದ್ದಮೇಲೆ ಜನರೆಲ್ಲ ಹೊರಟುಹೋದರು. ಥಿಯೇಟರೆಲ್ಲ ಬರಿಯದಾಯ್ತು. ಅಲ್ಲಿಗೆಲ್ಲ ನಾನೊಬ್ಬನೆ ಉಳಿದೆ."

"ಉಂ"

"ಆಗ ಒಬ್ಬ ಸ್ಫುರದ್ರೂಪಿ ತರುಣ ಒಳಕ್ಕೆ ಬಂದ. ನನ್ನ ನೋಡಿ, 'ಯಾರಪ್ಪ ಮಗು' ನಾಟಕ ಮುಗಿದರೂ ಕೂತೇಯಿದ್ದಿ?' ಎಂದು ಕೇಳಿದ. ನಾನು 'ನೀವು ಯಾರು?' ಎಂದೆ. 'ನಾನು ಈ ಕಂಪನಿಯ ಯಜಮಾನರ ಮಗ. ದೊರೆಪಾರ್ಟ್ ನೋಡಿದೆಯೋ ಇಲ್ಲವೊ? ನಾನೆ ಆ ಪಾರ್ಟ್-ಮಾಡಿದ್ದುದು' ಎಂದ. ನನಗೆ ನಡುಕ ಬಂದುಬಿಟ್ಟಿತು. 'ನನಗೆ ತಂದೆತಾಯಿಲ್ಲ; ನಿಮ್ಮ ಕಂಪನೀಗೆ ಸೇರಿಸಿಕೊಂಡು ಒಂದಿಷ್ಟು ತಿಂಡೀಹಾಕಿ.' ಎಂದು ಕೇಳಿಕೊಂಡೆ. ತನ್ನ ತಂದೆ ಹತ್ತಿರಕ್ಕೆ ಅವನು ನನ್ನ ಕರೆದುಕೊಂಡು ಹೋದ....

ರಾಮು ಎನ್ನುತ್ತೀ ಪದ್ಮ, ಅವನ ತಂದೆ?"

"ರಾಮಣ್ಣಮಾವ ಒಂದು ನಾಟಕದ ಕಂಪನಿ ಇಟ್ಟು-ಕೊಂಡಿದ್ದರು.... ಎಂದು ಕೇಳಿದ್ದೇನೆ. ಅವರೇ ಇರಬಹುದು ಅಲ್ಲವೆ?"

"ಹೌದು, ಪದ್ಮಾ ನಿನಗೆ ಒಳ್ಳೆ ಕಲ್ಪನಾಶಕ್ತಿಯಿದೆ.... ಎಂದು ನಾನು ಹೇಳೋದು ಸುಳ್ಳಲ್ಲ." ಎಂದು ಶ್ರೀನಿವಾಸನು ಪದ್ಮಳ ಸದ್ಯಃಪ್ರಫುಲ್ಲಿತವಾದ ಮುಖವನ್ನು ಮುಸುಕುತ್ತಿದ್ದ ಮುಂಗುರುಳುಡುಂಬಿಗಳನ್ನು ಮೇಲಕ್ಕೆ ನೇವರಿಸಿ, ಕತೆಯನ್ನು ಮುಂದುವರಿಸಿದನು: "ಅಂದಿನಿಂದ ನಾನು ನಟನಾದೆ. ಅನೇಕ ಹಳ್ಳಿಗಳನ್ನೂ ಪಟ್ಟಣಗಳನ್ನೂ ಸುತ್ತಿದೆ. ಮೂರು ವರ್ಷಗಳು ಕಳೆದು ಹೋದುವು. ಇದ್ದಕಿದ್ದಹಾಗೆ ಒಂದುದಿನ ನಿಮ್ಮ ರಾಮಣ್ಣಮಾವನ ಮಗ ಹಾಸಿಗೆಹಿಡಿದ. ವಿಷಮಶೀತಜ್ವರ ಎಂದರು. ಔಷಧಿ-ಏನು ಕೊಟ್ಟರೂ ಅವನು ಉಳಿಯಲಿಲ್ಲ. ದಾರು ದಿನಗಳಲ್ಲಿ ಸತ್ತುಹೋದ. ನಿಮ್ಮ ರಾಮಣ್ಣಮಾವ ಬಹು ಅತ್ತರು ಪದ್ಮಾ, ಬಹು ಅತ್ತರು. ಅವನು ಸತ್ತ ಮಾರನೇ ದಿನವೆ ಕಂಪನೀನ ಮುರಿದುಬಿಟ್ಟು, ನಟರನ್ನೆಲ್ಲ ಮನೆಗೆ ಕಳಿಸಿ-ದರು. ಆದರೆ ನನ್ನನ್ನು ಮಾತ್ರ ಅವರು ಬಿಡಲಿಲ್ಲ. 'ಮಗೂ ನಿನಗೆ ತಂದೆತಾಯಿಲ್ಲ; ನನಗೆ ಮಗನೂ ಈಗಿಲ್ಲ. ನೀನೆ ನನ್ನ ಮಗ ಎಂದುಕೋತೇನೆ ಇದ್ದುಬಿಡು, ಎಂದರು. ಅಂದಿನಿಂದ ಅವರನ್ನು 'ಅಪ್ಪ' ಎಂದು ಕರೆಯಲು ಪ್ರಾರಂಭಿಸಿದೆ."

"ಉಂ"

"ಆ ತಿಂಗಳ ಕೊನೆಯಲ್ಲಿ ಅಪ್ಪ ನನ್ನ ಕರೆಕೊಂಡು ಈ ಬೆಂಗಳೂರಿಗೆ ಬಂದುಬಿಟ್ಟರು. ಇಲ್ಲಿಯೆ ವಿದ್ಯಾಭ್ಯಾಸ-ಮಾಡಿಸಿದರು; ಕೆಲಸ ಮಾಡಿಸಿಕೊಟ್ಟರು; ನಿನ್ನಂಥ ಹೆಂಡತೀನ ನನಗೆ ದೊರಕಿಸಿಕೊಟ್ಟರು. ಅಷ್ಟು ಒಳ್ಳೇ-ಯವರು ಭೂಮಿಯ ಮೇಲೆ ಬಹಳ ದಿನ ಇರಬಾರದೂ ಎಂದೊ ಏನೋ; ದೇವರು ಅವರನ್ನು ಸ್ವರ್ಗಕ್ಕೆ ಕರೆದು-ಕೊಂಡುಬಿಟ್ಟ."

"ಉಂ"

"ಆ ಮೇಲೆ ಹೆತ್ತತಂದೆಯ ಜ್ಞಾಪಕಬಂತು; ಆ ಹಳ್ಳಿಗೆ ಹೋದೆ. ನಾವಿದ್ದ ಮನೇಲಿ ನೋಡಿದೆ. ಇನ್ನು ಯಾರೋ ಇದ್ದರು. ಪಕ್ಕದ ಮನೆಗೆ ಹೋದೆ; ಶಾಸ್ತ್ರಿಗಳ ಹೆಂಡತಿ ಮೊಮ್ಮಗಳಿಗೆ, ಎಂದು ಕಾಣುತ್ತೆ, ಹೆರಳು ಹಾಕುತ್ತಿದ್ದರು. ವಿಚಾರಿಸಿದೆ,ಗೊತ್ತಾಯಿತು: ನಾನು ಮನೆಬಿಟ್ಟಿದ್ದ ವರ್ಷವೇ ನನ್ನ ತಾಯಿತಂದೆಗಳೂ ಹಳ್ಳಿಬಿಟ್ಟು ಹೊರಟುಬಿಟ್ಟಿದ್ದರಂತೆ. ಅದನ್ನು ಕೇಳಿದಾಗ ನನಗಾದ ದುಃಖದಂಥ ದುಃಖಾನ ನಾನೆಂದೂ ಅನುಭವಿಸಿರಲಿಲ್ಲ ಪದ್ಮ!" ಎಂದು ಶ್ರೀನಿವಾಸನು ನಿಟ್ಟುಸಿರುಬಿಟ್ಟನು. ಹಾಗೆಯೆ ಪದ್ಮಳನ್ನು ನೋಡಿದನು. ಅವಳು ಕಣ್ಣಿನಲ್ಲಿ ಮಿನುಗುತ್ತಿದ್ದ ಹನಿಗಳನ್ನು ಒರಸಿ-ಕೊಳ್ಳುತ್ತಿದ್ದಳು. ಮನೋಹರಳಾಗಿದ್ದಳು. "ಕತೆ-ಮುಗೀತು ಇನ್ನು ಬಹುಮಾನ!" ಎಂದನು. ಅವಳು ಎದ್ದು ದೂರಹೋಗಿ ನಿಂತುಕೊಂಡಳು. 'ಯಾವ ನೆಪವೂ ತೋಚದಲ್ಲಾ' ಎಂದುಕೊಂಡಳು. ಅಷ್ಟು ಹೊತ್ತಿಗೆ ಸರಿಯಾಗಿ ಬಾಗಿಲ ಹೊರಗೆ 'ಕಂಡೆ ನಾ ಕನಸಿನಲ್ಲಿ' ಎಂಬ ಹಾಡು ಕೇಳಿಬಂದಿತು.

ಇಬ್ಬರಿಗೂ ಆಶ್ಚರ್ಯವಾಯಿತು. "ಅಲ್ಲ, ಒಂಬತ್ತೂ-ಮುಕ್ಕಾಲು ಆಗಿ ಹೋಗಿದೆ; ಈಗ ಬಂದಿದಾರೆ ದಾಸರು." ಎಂದುಕೊಂಡು, ಪದ್ಮ ಒಂದು ಹಿಡಿ ಅಕ್ಕಿ ತೆಗೆದುಕೊಂಡು

CC-0. Jangamwadi Math Collection. Digitized by eGangotri

ಹೋಗಿ ಬಾಗಿಲು ತೆಗೆದಳು. ದಾಸರೊಬ್ಬರೇ ಇರಲಿಲ್ಲ, ಜತೆಗೊಬ್ಬ ಮುದುಕಿಯಿದ್ದಳು. ತೀರ್ಪು ಹೇಳಲು ಜಡ್ಜಿಗಳು ಮೇಲೆದ್ದಾಗ ವಾದಿ-ಪ್ರತಿವಾದಿಗಳ ಕಣ್ಣುಗಳು ನಿರೀಕ್ಷಣೆ-ಯಿಂದ ವಿಶಾಲವಾಗಿ ಚುಚ್ಚುತ್ತಿರುವಂತೆ ನೋಡುತ್ತವೆ ಹಾಗೆಯೆ ಇದ್ದುವು ದಾಸರ ಮತ್ತು ಮುದುಕಿಯ ಕಣ್ಣುಗಳು. ಪದ್ಮಾ, "ಎಲ್ಲೋ ವಿಚಿತ್ರಪುರುಷರು!" ಎಂದುಕೊಂಡು, ದಾಸರು ಪದ್ಧತಿಪ್ರಾಬಲ್ಯದಿಂದಲೇ ಅಗಲಿಸಿದ್ದ ಜೋಳಿಗೆಗೆ ಅಕ್ಕಿಹಾಕಹೋದಳು. ಆದರೆ ಅಕ್ಕಿಯು ದಾರಿಬಿಟ್ಟು, ಜೋಳಿಗೆಯು ಇದ್ದಕ್ಕಿದ್ದಂತೆ ಕದಲಿ, ಅಕ್ಕಿ ಚೆಲ್ಲಿ ಹೋಯಿತು. ಪದ್ಮಳ ಹಿಂದೆಯೆ ಶ್ರೀನಿವಾಸನು ಬಂದಿದ್ದನು. ಮುದುಕಿಯು ಅವನನ್ನೆ ದುರುದುರನೆ ನೋಡುತ್ತಿದ್ದಳು. ದಾಸರು ಸ್ವಲ್ಪಹೊತ್ತು ಅವನ ಮುಖ, ಸ್ವಲ್ಪಹೊತ್ತು ಅವಳ ಮುಖ ನೋಡುತ್ತಿದ್ದರು. ಚೆನ್ನಾಗಿ ಮುಂದಟ್ಟುಮಾಡಿ-ಕೊಂಡಿದ್ದ ವಿಷಯ ಪರೀಕ್ಷೆಯಲ್ಲಿ ಮರೆತುಹೋದರೆ, ಅದನ್ನು ಜ್ಞಾಪಿಸಿಕೊಳ್ಳಲು ವಿಶ್ವಪ್ರಯತ್ನ ಮಾಡುತ್ತಿರುವ ವಿದ್ಯಾರ್ಥಿಯ ಹಾಗೆ, ಶ್ರೀನಿವಾಸನೂ ಅವರಿಬ್ಬರ ಮುಖ-ಗಳನ್ನು ನೋಡುತ್ತಿದ್ದನು. ಕೊನೆಗೆ ಮುದುಕಿಯು ದಾಸರಕಡೆಗೆ ತಿರುಗಿ "ಹೌದೂಂದ್ರೆ ಅವನೇ" ಎಂದಳು. ಅವಳೆದೆಯು ಉಬ್ಬಿದ್ದಿತು. ದಾಸರ ಎದೆಯೂ ಉಬ್ಬಿದ್ದಿತು. ಕಾಳಿದಾಸನ "ಮಹೋದಧೇಃ ಪೂರ ಇವೇಂದು-ದರ್ಶನಾತ್" ಎಂಬುಪಮೆಯ ವಿನಾ ಬೇರೆ ಇನ್ನಾವುದೂ ಅವರೆದೆಗಳ ಭಾವವನ್ನು ಬಣ್ಣಿಸಲಾರದು. "ನಮ್ಮ ಗುರುತು ಸಿಕ್ಕಿತೇನಪ್ಪ, ಶ್ರೀನಿವಾಸ?" ಎಂದು ದಾಸರು ಕೇಳಿದರು. ಆ ದನಿಯು ಶ್ರೀನಿವಾಸನ ವಿಭ್ರಾಂತವಾಗಿದ್ದ ಮನಸ್ಸನ್ನು ತಟ್ಟಿ ಎಚ್ಚರಿಸಿತು. ಅವನ ಕಣ್ಣುಗಳು ಆರ್ದ್ರವಾದವು. "ಅಪ್ಪಾ, ಅಮ್ಮಾ!" ಎಂದು ಕೂಗಿ ಅವರ ಕಾಲಿಗೆ ಬಿದ್ದನು.

ಅರ್ಧಗಂಟೆ ಶ್ರೀನಿವಾಸನ ತಾಯಿತಂದೆ ಅಳುತ್ತಿದ್ದರು. ಎದೆ ಹಗುರವಾದಮೇಲೆ ಅವರು ತಮ್ಮ ಕತೆಯನ್ನು ಹೇಳಿದರು: ಅವನು ಹೊರಟುಹೋದ ರಾತ್ರಿ ಅವರು ಅವನಿಗಾಗಿ ಹಳ್ಳಿಯೆಲ್ಲ ಹುಡುಕಿ ಬೇಸತ್ತಿದ್ದರು. ಒಂದೆರಡು ತಿಂಗಳು ಸುತ್ತುಮುತ್ತು ವಿಚಾರಿಸಿ ವಿಫಲ-ರಾಗಿದ್ದರು. ಅವನನ್ನು ನೋಡದೆ ಜೀವನಮಾಡುವುದು ದುಸ್ತರವಾಗಿದ್ದಿತು. ಕೊನೆಗೆ ಹೆಡ್ಮಾಸ್ಟರ್ ಕೆಲಸಕ್ಕೆ ರಾಜೀನಾಮೆ ಕೊಟ್ಟು, ತಂದೆಯು ದಾಸರಾಗಿ, ಯಾರೋ "ತಪ್ಪಿಸಿಕೊಂಡ ಮಕ್ಕಳು ಸಿಗಬೇಕಾದರೆ ಬೆಂಗಳೂರಿನಂಥ ದೊಡ್ಡ ಪಟ್ಟಣದಲ್ಲಿ" ಎಂದು ಹೇಳಿದ ಮೇರೆಗೆ, ಹೆಂಡತಿ-ಯೊಡನೆ ಬೆಂಗಳೂರಿಗೆ ಬಂದಿದ್ದರು. ಆದಷ್ಟು ಮನೆ-ಗಳಿಗೂ ಹೋಗಿ, ಹಾಡಿ, ನೀಡಿದ ಭಿಕ್ಷೆಯನ್ನು ತೆಗೆದು-ಕೊಂಡು ತಮ್ಮ ಮಗನನ್ನು ಹುಡುಕುತ್ತಿದ್ದರು. ಆದಿನ ಬೆಳಿಗ್ಗೆ ಶ್ರೀನಿವಾಸನನ್ನು ಮೊದಲನೆಯಸಾರಿ ನೋಡಿದಾಗ ತಂದೆಗೆ ಅವನ ಗುರುತು ಹತ್ತಿತ್ತು. ಆದರೂ 'ಅವಳಿಗೆ ತೋರಿಸಿ, ಅವಳೂ ಇವನು ಶ್ರೀನಿವಾಸನೆ ಎಂದ ಮೇಲೆ ಇವನ ಜತೆಯಲ್ಲಿ ಮಾತಾಡೋಣ' ಎಂದುಕೊಂಡು ಹೊರಟು ಹೋಗಿ "ನಾಳೆ ಅಷ್ಟೊತ್ತಿಗೆ ಇಬ್ಬರೂ ಹೋಗೋಣ" ಎಂದು ಹೆಂಡತಿಗೆ ಹೇಳಿದ್ದರು. ದಿನವೇನೊ ಕಳೆದಿತ್ತು, ಆದರೆ ರಾತ್ರಿಯನ್ನು ಪ್ರತೀಕ್ಷಾವೇದನೆಯಲ್ಲಿ ಕಳೆಯ-ಲಾರದೆ "ಈಗಲೇ ಹೋಗೋಣ" ಎಂದು ಇಬ್ಬರೂ ಬಂದಿದ್ದರು.

ಕತೆ ಮುಗಿದಮೇಲೆ ಶ್ರೀನಿವಾಸನು, ಚಕಿತಳಾಗಿ ನಿಂತಿದ್ದ ಪದ್ಮಳಿಂದ ಅವರಿಗೆ ನಮಸ್ಕಾರ ಮಾಡಿಸಿದನು- "ಬೇಗೊಂದು ಗಂಡು ಹೆರಮ್ಮ" ಎಂದರು ದಾಸರ ಹಾಗೆಯೆ ತಾನೂ ಹರಸಿ ಮುದುಕಿಯು "ಎಷ್ಟು ಮುದ್ದಾಗಿದ್ದೀ ಮಗು!" ಎಂದು ಅವಳನ್ನು ತಬ್ಬಿಕೊಂಡರು. ಅನಂತರ ಶ್ರೀನಿವಾಸನು ಅವರಿಗೆ ತನ್ನ ಕತೆಯನ್ನು ವಿವರಿಸಿದನು. ಆ ಆನಂದದಲ್ಲಿ ಪುನರುಕ್ತಿಶ್ರಮವು ಅವನಿಗೆ ತೋರಲೇ ಇಲ್ಲ. ಬಳಿಕ, ಅವರಿಗೆ ಹಾಸಿಕೊಟ್ಟು ಪದ್ಮಳೊಡನೆ ಮಲಗುವ ಕೊಠಡಿಗೆ ಹೋದನು. ನಡೆದದ್ದೆಲ್ಲ ಕನಸೋ ನನಸೋ ಎಂದು ಸ್ವಲ್ಪಹೊತ್ತು ನಿಂತುಕೊಂಡೆ ಯೋಚಿಸಿ-ದನು. ಕಡೆಗೆ ಪದ್ಮಳನ್ನಪ್ಪಿ ಮುತ್ತಿಟ್ಟು "ಪದ್ಮಾ, ಈಗ ನನ್ನಂಥ ಪೂರ್ಣಸುಖಿಗಳು ಪ್ರಪಂಚದಲ್ಲಿ ಇನ್ನು ಯಾರೂ ಇಲ್ಲ" ಎಂದನು.



CC-0. Jangamwadi Math Collection. Digitized by eGangotri

# ಮಕ್ಕಳನ್ನು ಮರೆಯದಿರೋಣ

ಶ್ರೀಮಾನ್ ಎಸ್. ಎಸ್. ಸೀತಾರಾಮಶಾಸ್ತ್ರಿ, ಮೈಸೂರು

**ಪ್ರಾರಬ್ಧ ಕಾಟಗಳಾವುವನ್ನೂ ಮಕ್ಕಳ ಬೆನ್ನಿಗೆ ಕಟ್ಟದೆ, ನಿರ್ಮಲವೂ ಸ್ವಚ್ಛವೂ ಆದ ವಾತಾವರಣವನ್ನು ಕಲ್ಪಿಸಿ, ಅಲ್ಲಿ ಮಕ್ಕಳನ್ನು ಬೆಳೆಯಿಸಬೇಕು. ಆತ್ಮಸಾಕ್ಷಾತ್ಕಾರ, ಕುಲಮೋಕ್ಷಗಳನ್ನು ಸಾಧಿಸಲು ತಕ್ಕವರನ್ನಾಗಿ ಮಾಡಬೇಕು. ಈ ಧ್ಯೇಯಸಾಧನ–ದಲ್ಲಿ ಅವರನ್ನು ತ್ಯಾಗವೀರರನ್ನಾಗಿಯೂ ಸಾಹಸಪಟುಗಳನ್ನಾಗಿಯೂ ಮಾಡಬೇಕು.**



“ನಾವೇನೊ ಹಳ್ಳಕ್ಕೆ ಬಿದ್ದೆವು, ಕಹಿಯುಂಡೆವು; ನಮ್ಮ ಮಕ್ಕಳಿಗಾದರೂ ಆ ಹೊಡಬಾಳನ್ನು ತಪ್ಪಿಸೋಣ, ಜೀವನದ ಹೆಚ್ಚಿನ ಅವಸ್ಥಾನುಭವಗಳನ್ನು ಸಾಧಿಸಲು ತಕ್ಕವರನ್ನಾಗಿ ಮಾಡೋಣ!” ಎಂದು ವಿವೇಕಪರರಾದ ಹಿರಿಯರಿಗೆ ಎನ್ನಿಸದಿರದು. ತಾವು ಪಡೆತಂದ ಜ್ಯೋತಿ-ಯನ್ನು ತಮ್ಮ ಮಕ್ಕಳಲ್ಲಿಯೂ ಹೊತ್ತಿಸಿ, ಅಮರವಾಗಿ ಪ್ರಜ್ವಲಿಸುವಂತೆ ಮಾಡಿ, ಕೃತಾರ್ಥರಾಗೋಣವೆಂಬ ಹಂಬಲವು ಅವರ ಜೀವಜೀವಾಳದಲ್ಲಿ ಮಿಡಿಯುತ್ತಿರು-ತ್ತದೆ. ಈ ಮಿಡಿತವೆ ಶಿಕ್ಷಣಕ್ರಮದ ಜೀವ.

ಆದರೂ ಮಕ್ಕಳನ್ನು ತಿದ್ದಿಬೆಳಸುವುದು ಮಾನವನು ಮಾಡಬಹುದಾದ ಮಹತ್ಕಾರ್ಯಗಳಲ್ಲಿ ಒಂದು. ಇದು ಕೊಂಚ ಚೋದ್ಯವಾಗಿ ಕಾಣಬಹುದು. ‘ಪ್ರತಿಯೊಬ್ಬರೂ ಮಕ್ಕಳನ್ನು ಪಡೆಯುತ್ತಾರೆ. ಸಾಯದೆ ಉಳಿಯುವ ಮಕ್ಕಳೆಲ್ಲರೂ ದೊಡ್ಡವರಾಗುತ್ತಾರೆ. ಇಲ್ಲಿ ಮಾಡಬಹು-ದಾದ ಮಹತ್ಕಾರ್ಯವೇನು?’ ಎಂದು ಕುಹಕಮಾಡ-ಬಹುದು. ಈ ಮನೋಧರ್ಮದ ಸರಣಿಯನ್ನನುಸರಿಸಿ, ಪ್ರಾಣಿಗಳು ತಮ್ಮ ಮರಿಗಳಿಗೆ ಓಡಾಡುವುದು, ಹಾರಾ-ಡುವುದು, ಆಹಾರಪಡೆಯುವುದು ಮುಂತಾದ ಜನ್ಮಜಾತ ಶಕ್ತಿಗಳಿಗೆ ಸಂಸ್ಕಾರಪಟುತ್ವವನ್ನು ಕೊಡುವ ಕಾರ್ಯ-ಗಳನ್ನು ವಿನಾ ಮತ್ತಾವ ಅಭ್ಯಾಸವನ್ನು ಮಾಡಿಸುತ್ತವೆ? ಅವು ದೊಡ್ಡುವಾಗುವುದಿಲ್ಲವೆ? ಮಾನವನು ಪ್ರಾಣಿವಿಶೇಷ-ವಾದರೂ ಜೀವನಧರ್ಮದಲ್ಲಿ ಇವನು ಮಾಡಬಹುದಾ-ದರೂ ಬೇರೆ ಏನಿದೆ?....ಎಂದು ಕೇಳಿದರೂ ಚೆನ್ನಾಗಿರುತ್ತದೆ. ಆದರೆ ಇತರ ಪ್ರಾಣಿಗಳು ಜೀವನದ ವಿಕಾಸದ ಒಂದು ಅಂತಸ್ತನ್ನು ಹತ್ತಿ ನಿಂತಿವೆ. ಮಾನವನಿಗೆ, ಅವನು ಮಾನವನಾಗಿರಬೇಕಾದರೆ, ಈ ನಿಲುಗಡೆಯಿಲ್ಲ. ಅನಂತ-ವೆನಿಸುವ ಜೀವನಸೋಪಾನವನ್ನು ಅವನು ಹತ್ತಿ ಸಾಗಲೆ ಬೇಕು. ಇದೆ ಅವನ ಜೀವನವೈಶಿಷ್ಟ್ಯ. ಈ ದೃಷ್ಟಿ ಯಿಂದ ಹಸುಗೂಸುಗಳನ್ನು ಜೀವನ ಮಹಾಯಾತ್ರೆಗೆ ಸಿದ್ಧಮಾಡಬೇಕಾದುದು ಎಷ್ಟರಮಟ್ಟಿನ ಮಹತ್ಕಾರ್ಯ-ವೆನ್ನುವುದು ಬೋಧೆಯಾಗುತ್ತದೆ.

ಇಷ್ಟೆ ಅಲ್ಲ; ಮನುಷ್ಯನ ಬದುಕು ಒಂದು ಒಗಟು. ಅವನಲ್ಲಿ ಏನೇನೋ ಶಕ್ತಿಗಳು ಅಡಗಿವೆ. ಸಮಯಬಿದ್ದಾಗ ಅವು ತಲೆಯೆತ್ತಿ ಅವನಿಗೆ ಬೆಪ್ಪುಹಿಡಿಸಿ ಬಿಡುತ್ತವೆ. ಅವನ ಜೀವನದ ವ್ಯಾಪ್ತಿ ಮತ್ತು ಸಂಪತ್ತು ಅಜ್ಞಾತಬಹುಳವಾಗಿ ಕಾಣುತ್ತದೆ. ಅಲ್ಲದೆ ಅವನ ಬಾಳಿನ ಬಹ್ವಂಶವು ಹಿರಿಯರು ಗಳಿಸಿಕೊಟ್ಟಿರುವ ಸ್ವತ್ತು. ಸ್ವಪ್ನಸಾಮ್ರಾಜ್ಯವನ್ನುಹೊಗುವ ಭಿಕಾರಿಯಂತೆ, ಅವನು ಜೀವನಕ್ಕೆ ಕಾಲಿಡುತ್ತಾನೆ. ಹೇಗೋ ಏತಕ್ಕೋ ನಡೆದುಬಂದ ನಾನಾಶಕ್ತಿ-ಸಂಪ್ರ-ದಾಯಗಳು ಅವನನ್ನು ತಮ್ಮ ಅಧೀನಕ್ಕೆ ಎಳೆದುಕೊಳ್ಳು-ತ್ತವೆ. ತನ್ನ ವ್ಯಕ್ತಿತ್ವದ ಸ್ಥೈರ್ಯದಿಂದ ಸ್ವಸ್ವರೂಪ-ಜ್ಞಾನವನ್ನು ಪಡೆಯುವ ಹೊತ್ತಿಗೆ ಅವನು ಜನಾಂಗ-

CC-0. Jangamwadi Math Collection. Digitized by eGangotri

ಜೀವನದ ಅಂಗಾಂಗವಾಗಿ ಹೋಗಿರುತ್ತಾನೆ. ಅವನ ಅಸ್ತಿತ್ವವೇ ಅಚಿಂತ್ಯ. ಕಗ್ಗತ್ತಲ ರಾತ್ರಿಯ ದಾರಿಹೋಕನಂತೆ ತನ್ನ ಹಿಂದಿನವರು ನಡೆದು ಬಂದಿರುವ ಹಾದಿಯಲ್ಲಿ ಅವನು ಎಷ್ಟೋ ದೂರ ಬಂದುಬಿಟ್ಟಿದ್ದಾನೆ. ತನ್ನ ಹಿರಿಯರನ್ನು ಕರೆಯುತ್ತಿದ್ದ ದೂರದೂರದ ದಿವ್ಯಮೋಹನವಾಣಿಯನ್ನು ಆಲಿಸಿ, ಅರಸಿಕೊಂಡು ಅವನೂ ನುಗ್ಗುತ್ತಿದ್ದಾನೆ. ಹಳ್ಳತಿಟ್ಟುಗಳು ಅಡ್ಡ ಬಂದರೂ ಬಳಸಿಕೊಂಡು ಮತ್ತೆ ಆ ಚಿರಮನೋಹರ ವಾಣಿಯ ಸಾಮೀಪ್ಯವನ್ನು ಸಾರುತ್ತಿದ್ದಾನೆ. ಅದೊಂದೆ ಅವನ ಗುರಿ. ಕಗ್ಗತ್ತಲಲ್ಲಿ ಯಾರೋ ಎತ್ತ ಕಡೆಯೋ ತಂದುಬಿಟ್ಟಿರುವಾಗ ಅದೊಂದೆ ಅವನ ಜೀವನದ ಪ್ರಚೋದಕ ಶಕ್ತಿ. ಪೂರ್ವಿಕರು ಎಷ್ಟು ಅಡ್ಡದಾರಿಬಿದ್ದು ಎಷ್ಟೆಷ್ಟು ಅಲೆದರೋ, ನಿವಾರ್ಯವಾದ ತೊಡಕುಗಳನ್ನು ಬಿಡಿಸದೆ ಎಷ್ಟು ಕಾಲಹರಣ ಮಾಡಿದರೋ ಎಂದು ಚಿಂತಿಸುವುದು ಪ್ರಕೃತವೂ ಅಲ್ಲ ವಿವೇಕವೂ ಅಲ್ಲ. ಹಿಡಿದ ಹಾದಿಯ ಒಪ್ಪುತಪ್ಪುಗಳನ್ನು ನಿರ್ಧರಿಸುವುದು ಅದರ ಪರಿಣಾಮ. ಪ್ರಾಪ್ತವಾಗಿರುವ ಪ್ರತಿಬಂಧಕದ ಅಪೇಕ್ಷ್ಯಾ ಯತ್ನಿಸಿರುವ ನಿವಾರಣೋಪಾಯವು ಒಪ್ಪೇ ಆಗಿರಬಹುದು ಅಥವಾ ತಪ್ಪೇ ಆಗಿರಬಹುದು. ತಪ್ಪೆ ಆಗಿದ್ದರೆ, ಸತ್ಯಭ್ರಾಂತನಾಗುವುದು ಮಾನವನಿಗೆ ವಿಶೇಷ ಪ್ರಸಂಗವಲ್ಲ; ಆದರೆ ಭ್ರಾಂತಿಯೊಡೆದಮೇಲೂ, ತಪ್ಪನ್ನೆ ಸಾಧಿಸುವುದು ಅಮಾನುಷವಾದುದು ಹಿಡಿ ದಮಾರ್ಗವು ಒಪ್ಪೆ ಆಗಿದ್ದರೆ, ಯಾವ ಪ್ರತಿಬಂಧದ ನಿವಾರಣಾರ್ಥವಾಗಿ ಆ ಹಾದಿ ಹಿಡಿಯಿತೊ ಅದರ ನಿವಾರಣಾತ್ಪರ ಸಂಪ್ರದಾಯಮೂರ್ಖನಾಗುವುದೂ ಅಮಾನುಷವಾದುದು, ಪಾಶವೀಯವಾದುದು. ಕಾಲಕಾಲಕ್ಕೆ ಒದಗುವ ಎಡರುಗಳನ್ನು ನಿವಾರಿಸುವುದು ಎಷ್ಟು ಮುಖ್ಯವೊ, ಆಮೇಲೆ ಸರ್ವಸ್ವವನ್ನೂ ಗೆದ್ದಂತೆ ಆಯಿತೆಂದು ಶಾಂತ್ಯವನ್ನು ತಾಳದೆ, ಉನ್ನತಿಯ ಹಾದಿಯನ್ನು ಅವಿಶ್ರಾಂತವಾಗಿ ಹುಡುಕಿ ಹತ್ತುತ್ತಿರುವುದೂ ಅಷ್ಟೇ ಮುಖ್ಯ. ಒಂದರ ಸಾರ್ಥಕತೆ ಮತ್ತೊಂದು. ಇದನ್ನು ಪೋಷಕರು ಮನಗಾಣಬೇಕು. ಪ್ರಾರಬ್ಧಕಾಟಗಳಾವುವನ್ನೂ ಮಕ್ಕಳಬೆನ್ನಿಗೆ ಕಟ್ಟದೆ, ನಿರ್ಮಲವೂ ಸ್ವಚ್ಛವೂ ಆದ ವಾತಾವರಣವನ್ನು ಕಲ್ಪಿಸಿ, ಅಲ್ಲಿ ಮಕ್ಕಳನ್ನು ಬೆಳೆಯಿಸಬೇಕು. ಆತ್ಮಸಾಕ್ಷಾತ್ಕಾರ, ಕುಲಮೋಕ್ಷಗಳನ್ನು ಸಾಧಿಸಲು ತಕ್ಕವರನ್ನಾಗಿ ಮಾಡಬೇಕು. ಈ ಧ್ಯೇಯದ್ವಯ ಸಾಧನದಲ್ಲಿ ಅವರನ್ನು ತ್ಯಾಗವೀರರನ್ನಾಗಿಯೂ, ಸಾಹಸಪಟುಗಳನ್ನಾಗಿಯೂ ಮಾಡಬೇಕು.

ಆದರೂ ಶಿಕ್ಷಣವು ಸೃಷ್ಟಿಕಾರ್ಯವಲ್ಲ. ಇದು ಅತ್ಯಂತ ಮಹತ್ವದ ಸಂಗತಿ. ಶಿಕ್ಷಣವು ಕೇವಲ ಸಾಧನಕ್ರಮ. ಇಲ್ಲದ ಶಕ್ತಿ-ಸಾಮರ್ಥ್ಯಗಳನ್ನು ಅದು ಮನುಷ್ಯನಿಗೆ ಲಭಿಸಿಕೊಡುವುದಿಲ್ಲ; ಇರುವ ಶಕ್ತಿ-ಸಾಮರ್ಥ್ಯಗಳಿಗೂ ಸಲ್ಲದ ಪ್ರವೃತ್ತಿಗಳನ್ನು ಪ್ರೇರೇಪಿಸುವುದಿಲ್ಲ. ಜನ್ಮಜಾತಶಕ್ತಿಗಳಿಗೆ ಸಂಸ್ಕಾರಪಟುತ್ವವನ್ನುಂಟುಮಾಡುವ ಕೇವಲ ಸಾಧನೋಪಾಯ ಮಾತ್ರ ಶಿಕ್ಷಣ. ನಮ್ಮ ಇಂದಿನ ಪ್ರಪಂಚದ ಬಹುಭಾಗದ ದುಃಖ-ದಾರಿದ್ರ್ಯಗಳು ಸಹಜವಲ್ಲದ ಶಿಕ್ಷಣಪಡೆದು ಆತ್ಮವಂಚಿತರಾಗಿರುವುದರ ಫಲ. ಒಲ್ಲದ ಶಿಕ್ಷಣ ಕೊಡುವುದರಿಂದ ಸಮಾಜಕ್ಕೆ ಸೌಖ್ಯವಿಲ್ಲ. ಸಹಜವಾಗಿರುವ ಶಿಕ್ಷಣ ಪಡೆಯದಿರುವುದರಿಂದ ಆತ್ಮಕ್ಕೆ ಶಾಂತಿಯಿಲ್ಲ. ಈ ಸ್ಥಿತಿಯು ಸರ್ವನಾಶಕ್ಕೆ ಹೇತು. ಧಾರ್ಮಿಕ, ಸಾಮಾಜಿಕ, ವ್ಯಾವಹಾರಿಕ ಜೀವನರಂಗಗಳಲ್ಲಿ ಆತ್ಮಾವಲಂಬನಕ್ಕೆ ಮಾರ್ಗವಿಲ್ಲದೆ ನಾವು ಉದ್ರಿಕ್ತ ವ್ಯರ್ಥಜೀವನವನ್ನು ತಳ್ಳುತ್ತಿದ್ದೇವೆ. ನಮ್ಮ ಮಕ್ಕಳನ್ನು ಈ ಪಾಡಿನಿಂದ ಪಾರುಮಾಡೋಣ. ಸಹಜವಾದ ಸ್ವಂತಜೀವನವನ್ನು ನಡೆಯಿಸಲು ಅವರಿಗೆ ಅನುವು ಮಾಡಿಕೊಡೋಣ. ಆತ್ಮವಿಕಾಸಕ್ಕೆ ಮಾರ್ಗವಾಗಲಿ. ಹಿರಿಯರ ನಂಬಿಕೆ, ಒಪ್ಪಿಕೆಗಳು ಉಳಿದರೆ—ಉಳಿಯಬೇಕಾಗಿ ಬಂದರೆ—ಉಳಿಯಲಿ ಇಲ್ಲವೊ ಅಳಿಯಲೇಳಿ! ಹಿರಿಯರಿಗೆ ಪ್ರಿಯವೆನಿಸಿದ ಎಷ್ಟು ನಂಬುಗೆಗಳು ಇನ್ನೂ ಹೋಗಬೇಕೊ? ನಮಗೆ ಪ್ರಿಯವೆನಿಸಿರುವ ನಂಬುಗೆಗಳನ್ನು ಎಷ್ಟು ತ್ಯಜಿಸಬೇಕೊ? ನಮ್ಮ ಮಕ್ಕಳನ್ನು ತ್ಯಾಗವೀರರನ್ನಾಗಿ ಮಾಡೋಣ. ಸಾಹಸಪಟುಗಳನ್ನಾಗಿ ಬೆಳೆಯಿಸೋಣ.

ಮತ್ತೊಂದು ಬಹುಮುಖ್ಯ ವಿಷಯದಲ್ಲಿ ಮೋಸಹೋಗದಿರೋಣ. ಮಕ್ಕಳನ್ನು ಜೀವನಮಹಾಯಾತ್ರೆಗೆ ಸನ್ನದ್ಧರನ್ನಾಗಿ ಮಾಡಬೇಕು; ಬಾಲ್ಯವೇ ಶಾಶ್ವತವಲ್ಲ. ಮುಪ್ಪುಮರಣಗಳು ಕಾದಿವೆ ಎನ್ನುವ ಆತುರಕ್ಕೆ ತುತ್ತಾಗಿ, ಬಾಲ್ಯವನ್ನು ಕೆಡಿಸದಿರೋಣ. ಸರ್ವದಾ ಆಗಿಹೋಗುತ್ತಿರುವ ವ್ಯಕ್ತಿಗಳ ಸಂತತಪ್ರವಾಹವೆ ಮಾನವಕುಲದ ಜೀವನ. ಈ ಪ್ರವಾಹದಲ್ಲಿ ವ್ಯಕ್ತಿಗಳು ಒಂದು ಕ್ರಮದಲ್ಲಿ ಆಗಿ ಹೋಗುತ್ತಾರೆ. ಬಾಲ್ಯ, ಯೌವನ, ವಾರ್ಧಕ್ಯ ಎಂಬ ಅವಸ್ಥಾತ್ರಯಗಳನ್ನು ದಾಟಿ ಅವರು ಅದೃಶ್ಯರಾಗುತ್ತಾರೆ. ಮಾನವಕುಲವು ಎಷ್ಟೇ ಜಾಗೃತವಾದರೂ, ಈ ಅವಸ್ಥಾತ್ರಯವು ತಪ್ಪಿದ್ದಲ್ಲ. ಆಯಾ ಅವಸ್ಥಾ ವೈಶಿಷ್ಟ್ಯವೂ ತಪ್ಪಿದ್ದಲ್ಲ. ವಾರ್ಧಕ್ಯದಲ್ಲಿ ಚಿಂತಾಸಕ್ತರಾಗಿರುವಂತೆ,

CC-0. Jangamwadi Math Collection. Digitized by eGangotri

ಯೌವನದಲ್ಲಿ ವಿಷಯಾಸಕ್ತರಾಗಿರುವಂತೆ, ಬಾಲ್ಯದಲ್ಲಿ ವ್ಯಕ್ತಿಗಳು ಕ್ರೀಡಾಸಕ್ತರಾಗಿಯೆ ಇರುತ್ತಾರೆ. ಆಶ್ಚರ್ಯ, ಹರ್ಷ, ಉತ್ಸಾಹ, ಕಾತರ, ಚಾಂಚಲ್ಯ, ಚಾಪಲ್ಯ ಇವೆಲ್ಲ ಬಾಲ್ಯಾವಸ್ಥೆಯ ಸಹಜಲಕ್ಷಣಗಳು. ಈ ಅಮೂಲ್ಯ ಲಕ್ಷಣಗಳನ್ನು ಕೆದಕಿ ಕಲ್ಮಷಗೊಳಿಸದಿರೋಣ. ಮರಣದ ಶೂನ್ಯತೆಯನ್ನು ನೆನಸಿ, ಜೀವನದ ಪೂರ್ಣತೆಯನ್ನು ಮರೆಯದಿರೋಣ.

ಮಾನವನು ಜನ್ಮಸಾರ್ಥಕ್ಯಮಾಡಿಕೊಳ್ಳಬೇಕಾದರೆ ಮೂರು ಋಣಗಳನ್ನು ತೀರಿಸಬೇಕೆಂದು ಶಾಸ್ತ್ರಕಾರರು ಹೇಳುತ್ತಾರೆ. ಅದು ವಾಸ್ತವ. ಆದರೆ ಅವೆಲ್ಲ ಒಂದು ತೂಕವಾದರೆ, ಶಿಶುಋಣವೇ ಒಂದು ತೂಕವೆಂದು ನಾನು ಭಾವಿಸುತ್ತೇನೆ. ಈ ಋಣವು ಎಲ್ಲಕ್ಕಿಂತಲೂ ಒಂದು ಕೈ ಅಧಿಕ. ಅದನ್ನು ತೀರಿಸದವ ಮಹಾಪಾತಕನೆ ಹೌದು. ಆಸ್ತಿಕರಾಗಲಿ, ನಾಸ್ತಿಕರಾಗಲಿ ಮಾನವಕುಲಮೋಕ್ಷವು ಪರಮಧ್ಯೇಯವೆಂದು ಒಪ್ಪಿಕೊಳ್ಳುತ್ತಾರೆ. ಅದು ಸಿದ್ಧಿಸುವುದಾದರೂ ಹೇಗೆ? ಒಂದೊಂದು ತಲೆಮಾರಿನವರೂ ಜೀವನ ಘಟನೆಯಲ್ಲಿ ಕಂಡುಕೊಂಡ ಅಸತ್ಯ, ಅಸಾಮಂಜಸ್ಯಗಳನ್ನು ಕೊಡವಿಹಾಕಿ, ತದಪೇಕ್ಷ್ಯ ಉತ್ತಮತರ ಮಾರ್ಗವನ್ನು ಹಿಡಿಯುವುದೇ ಆಗಿರುತ್ತದೆ. ಸಾಧ್ಯವಾದಷ್ಟು ಕಲ್ಲುಮುಳ್ಳುಗಳನ್ನು ತೆಗೆದುಹಾಕಿ, ಪ್ರವರ್ಧಮಾನಕ್ಕೆ ಬರುತ್ತಿರುವ ತಲೆಮಾರಿನವರಿಗೆ ಅನುಕೂಲವಾದ ಪಥವನ್ನು ವಯಸ್ಕರು ಸಿದ್ಧಗೊಳಿಸಬೇಕು. ನಾನಾ ಪ್ರಗತಿ, ಪ್ರಾಚೀನಶಕ್ತಿಗಳ ಹೊಡೆತಕ್ಕೆ ಸಿಕ್ಕ ವಯಸ್ಕರು ಹೋರಾಡಬೇಕಾದುದೇನೊ ಸಹಜ. ಈ ಹೋರಾಟದಲ್ಲಿ ಗಳಿಸಿದ ಫಲಗಳನ್ನು ಭಾವೀ ತಲೆಮಾರಿನವರಿಗೆ ಕೊಟ್ಟು, ಮಾನವಕುಲ ಮೋಕ್ಷವನ್ನು ಶೀಘ್ರಗೊಳಿಸದೆ, ಮಕ್ಕಳ ತಲೆಗೂ ನಮ್ಮ ಹೋರಾಟವನ್ನು ಉಳಿಸಿ ಹೋಗುವುದರಿಂದ ಕುಲಘಾತುಕರಾಗುತ್ತೇವೆ. ಒಂದು ಜನಾಂಗದ ವೈಶಿಷ್ಟ್ಯ, ಅದರ ಸಮಾಜರಚನೆಯ ವಿಚಕ್ಷಣೆ, ಅದರ ಆಶೋತ್ತರಗಳ ಸಾಧನವ್ಯವಸ್ಥೆ, ಅದರ ಹುಳುಕು ಬೆಳಕುಗಳು ಇವೆಲ್ಲ, ಅವುಗಳ ಪೂರ್ಣಪರಿಣಾಮಪ್ರಮಾಣದಲ್ಲಿ ಆ ಜನಾಂಗದ ಶಿಶುಸಂಪತ್ತಿನ ಮೇಲೆ ಮುದ್ರಿತವಾಗಿರುತ್ತವೆ. ಅದು ವಜ್ರಮುದ್ರೆ. ಆ ಮುದ್ರೆಯನ್ನು ಒತ್ತುವಾಗ ಎಷ್ಟು ಎಚ್ಚರಿಕೆಯಿಂದ ವರ್ತಿಸಿದರೂ ಹೆಚ್ಚಲ್ಲ.

ಗಜಕರ್ಣ, ಹುರುಕು, ತದ್ದು, ನಡ ಮುಂತಾದ ಚರ್ಮರೋಗಗಳಿಂದ

ಪೀಡಿತ ಜನರಿಗೆ ಒಂದೇ ಉಪಾಯವು.

ರಜಿಸ್ಟರ್ಡ್



ಗುಣ ಬರದಿದ್ದರೆ ಹಣ ತಿರುಗಿ ಕೊಡುವೆವು. ಬಾಟಲಿಯ ಬೆಲೆ ೪ ಆಣೆ

ಸ್ಟಾರ್ ಕಂಪನಿ, ಬೆಳಗಾವಿ

CC-0. Jangamwadi Math Collection. Digitized by eGangotri

# ಶರಣಸಂದೇಶ

**ನೀವು ಹಿಂದುಗಳೋ ?**

**ಹಾಗಾದರೆ ಜಾಗ್ರತೆ ಚಂದಾದಾರರಾಗಿರಿ !**

ಇದು ವಿಚಾರಕ್ರಾಂತಿಯ ವಾರಪತ್ರಿಕೆ

**ಸಂಪಾದಕರು:**

**ಶ್ರೀ. ಹರ್ಡೇಕರ ಮಂಜಪ್ಪನವರು**

ಹಿಂದೂಸಮಾಜಸುಧಾರಣೆ, ಹಿಂದೂ ಸಂಘಟನೆ, ಧಾರ್ಮಿಕ ಸತ್ಯಸಿದ್ಧಾಂತಗಳ ಪ್ರತಿಪಾದನೆ, ಶ್ರೀ ಬಸವಾದಿ ಪ್ರಮಥರ ತತ್ತ್ವಪ್ರಸಾರಣೆ ಮತ್ತು ರಾಜಕೀಯ ಗುಣದೋಷ ವಿಮರ್ಶನೆ ಇವೇ ಈ ಪತ್ರಿಕೆಯ ಪಂಚಪ್ರಾಣ.

**ಮ್ಯಾನೇಜರ್, ಶರಣಸಂದೇಶ**

**ಪೋ. ಆಲಮಟ್ಟಿ, ಜಿ. ವಿಜಾಪೂರ.**



# ಕಲಿಯುಗ

ಕಾಮವಿಜ್ಞಾನ, ಆರೋಗ್ಯವಿಜ್ಞಾನ, ಸಮಾಜ-ವಿಜ್ಞಾನಗಳಿಗೆ ಮೀಸಲಾದ, ಕನ್ನಡಸಾಹಿತ್ಯದ ಇತಿಹಾಸದಲ್ಲೇ

**ಪ್ರಥಮ ಮಾಸಪತ್ರಿಕೆ**

★

ಸಂಪಾದಕರು:

ಆಯುರ್ವೇದವಿದ್ವಾನ್

**ಡಾ|| ಎಂ. ಗೋಪಾಲಕೃಷ್ಣರಾಯರು**

ವಾರ್ಷಿಕ ಚಂದಾ ೧|| ರೂ. ಬಿಡಿಸಂಚಿಕೆ ೨ ಆಣೆ

**ಕಲಿಯುಗ ಕಾರ್ಯಾಲಯ, ಧಾರವಾಡ.**



೨ನೆಯ ವರ್ಷದ ಯೋಜನೆ! ಹೊಸ ವರ್ಷದ ಪ್ರಾರಂಭ

# ಒಂದೇ ಒಂದು ವರ್ಷದಲ್ಲಿ

ಅಖಿಲ ಕರ್ನಾಟಕದ ಮನವನ್ನೆಳೆದುಕೊಂಡ

## ಅರವಿಂದ ಗ್ರಂಥಮಾಲೆ

ಸಂಪಾದಕರು—ಮಧುರಚೆನ್ನ

ವಿಚಾರಪ್ರಚುರ ವಾಙ್ಮಯವನ್ನು ಒದಗಿಸುವ ಹಾಗೂ ಸರಸ ಸಾಹಿತ್ಯವನ್ನು ಸೂರೆಮಾಡುವ ಆರು ಪುಸ್ತಕಗಳಲ್ಲದೆ ಮೇಲೊಂದು ಕಾಣಿಕೆಯ ಪುಸ್ತಕ ಕೊಡಲಾಗುವದು. ಅಚ್ಚುಮೆಚ್ಚಿನ ಅಚ್ಚು-ಕಟ್ಟುಗಳಿಂದ ಮನೋಹರವಾದ ಪುಸ್ತಕಗಳಿಗಾಗಿ ಇಂದೇ ಚಂದಾದಾರರಾಗಿರಿ. ಹಿಂದಿನ ಪುಸ್ತಕಗಳಿಗೆ ಎಪ್ರಿಲದಿಂದ ಹೊಸವರ್ಷದ ಪ್ರಾರಂಭವಾಯಿತು.

**ವಾರ್ಷಿಕ ಚಂದಾ (ಅಂಚೆವೆಚ್ಚಸೇರಿ) ೩—೮—೦**

**ಅರವಿಂದ ಗ್ರಂಥಮಾಲೆ, ಪೋ—ಹಲಸಂಗಿ**

**ಜಿಲ್ಲಾ ವಿಜಾಪುರ**



೫೬ ವರ್ಷಗಳಿಂದ ದಿನದಿನಕ್ಕೆ ಹೆಚ್ಚುತ್ತಲಿರುವ

**ಪ್ರಸಿದ್ಧಿಗೆ**

ಏನಾದರೂ ಮಹತ್ತ್ವವಿರುತ್ತಿದರೆ, ನೀವು

## ಆತಂಕನಿಗ್ರಹ ಗುಳಿಗೆ

ಗಳನ್ನೇ ಉಪಯೋಗಿಸುವದು ವಿಹಿತ.

ಈ ಗುಳಿಗೆಗಳಿಂದ ಶಾಶ್ವತ ಯೌವನವೂ ಶಕ್ತಿಯೂ ಬರುವವು.

**೩೨ ಗುಳಿಗೆಗಳ ಡಬ್ಬಿಗೆ ರೂ. ೧-೦-೦**

ಆರೋಗ್ಯ ವೈಭವ, ಸಮೃದ್ಧಿಗಳ ಮಾರ್ಗ ತೋರಿಸುವ ಕಾಮಶಾಸ್ತ್ರವನ್ನೋದಿರಿ. ಅಂಚೆಯ ವೆಚ್ಚವಿಲ್ಲದೆ ಪುಕ್ಕಟೆಯಾಗಿ ದೊರೆಯುವದು.

ಇಂದೇ ಬರೆಯಿರಿ:—

**ಆತಂಕನಿಗ್ರಹ ಫಾರ್ಮಸಿ,**

೨೬ ಬ್ರಾಡ್ವೇ, ಮದ್ರಾಸ


CC-0. Jangamwadi Math Collection. Digitized by eGangotri

# ಮದ್ಯದ ಮೀಮಾಂಸೆ

## ( ಒಂದು ವಿನೋದ ನಿರ್ಬಂಧ )

ಬರೆದವರು " ಶ್ರೀರಂಗ "

"ನಾನು ಹೆಂಡದಂಗಡಿಯ ಮಕ್ತೇದಾರನೆಂಬ ಕಲ್ಪನೆ ಎಲ್ಲಿಯಾದರೂ ತಮಗೆ ಆದೀತು. ಹೆಂಡವನ್ನು ಕುಡಿಯುವುದು ಯಾವುದೋ ಒಂದು ವಿಕಾರದ ಆವಿರ್ಭಾವದ ಒಂದು ತರಹ ಎಂದು ನಾನು ಹೇಳುವುದು. "

" ಹೆಂಡ ಕುಡಿಯುವುದು ಪಾಪ ಎಂದು ಹೇಳಬಹುದು; ಮಕ್ತೇದಾರನು ಶಾಲೆ-ವಿದ್ಯಾಲಯಗಳಿಗೆ, ತೀರ್ಥ-ದೇವಾಲಯುಗಳಿಗೆ ದಾನವನ್ನು ಕೊಡುವನಲ್ಲ ! ಹೆಂಡ ಕುಡಿಯದಿದ್ದರೆ ಈ ಹಣ ಬರುವುದೆಲ್ಲಿಂದ ? "

ಕಾಂಗ್ರೆಸ್ ಸರಕಾರವು ಅಧಿಕಾರಪದಾಭಿಷಿಕ್ತವಾಯಿತೆಂದು ನನ್ನ ಗೆಳೆಯನಿಗೆ ಅಸಂತೋಷ. ಇಷ್ಟಕ್ಕಾಗಿಯೆ ನನ್ನ ಗೆಳೆಯನು ದೇಶಾಭಿಮಾನಶೂನ್ಯನೆಂದು ಮಾತ್ರ ದಯವಿಟ್ಟು ತಿಳಿಯಬಾರದು; ಏಕೆಂದರೆ, "ಸ್ವದೇಶದಲ್ಲಿಯೆ ಹುಟ್ಟಬೇಕು, ಸ್ವದೇಶದಲ್ಲಿಯೆ ಸಾಯಬೇಕು, ಇದೇ ನನ್ನ ಧರ್ಮ, ಇದೇ ನನ್ನ ಪ್ರತಿಜ್ಞೆ " ಎಂದು ಎಂದಿನಿಂದಲೊ ಅವನು ನಿಶ್ಚಯಿಸಿಕೊಂಡಿದ್ದಾನೆ. ಈ ವಿಷಯವಾಗಿ ಅವನಿಗೂ ನನಗೂ ಎಷ್ಟೋ ಸಲ ಚರ್ಚೆಯಾದುದುಂಟು. ' ಹುಟ್ಟುವುದೂ ಸಾಯುವುದೂ ನಮ್ಮ ಕೈಮೀರಿದ ಮಾತು, ಅದನ್ನು ಇಂತಹ ಸ್ಥಲ ಕಾಲಗಳಲ್ಲಿಯೆ ಮಾಡಿತೀರುವೆನೆಂಬುದು ಹುಡುಗಾಟ' ಎಂದು ನನ್ನ ಹಟ; " ನಮ್ಮ ಕೈ ಮೀರಿದರೂ ದೇವನ ಕೈ ಮೀರಿಲ್ಲ, 'ಸ್ವದೇಶೇ ನಿಧನಂ ಶ್ರೇಯಃ' ಎಂದು ದೇವನೇ ಹೇಳಿದ್ದಾನೆ, ಇದಲ್ಲದೆ ಸ್ವದೇಶದಲ್ಲಿ ಸತ್ತರೆ ದೇಶೀ ವೃತ್ತಪತ್ರಗಳಿಗೆ ಒಂದೆರಡು ಕಾಲಂ ( column ) ಪುಕ್ಕಟೆ ಸುದ್ದಿ ದೊರೆಯುವುದು " ಎಂದು ಅವನ ಹಟ ! ಮಾತಿಗೆ ಮಾತು ಸಂಬಂಧವಿಲ್ಲ; ' ಸ್ವಧರ್ಮೇ ನಿಧನಂ ಶ್ರೇಯಃ ' ಎಂಬುದನ್ನು ಸಿಟ್ಟಿನ ಆವೇಶದಲ್ಲಿ ಬಾಯಿತಪ್ಪಿ ' ಸ್ವದೇಶೇ ನಿಧನಂ ಶ್ರೇಯಃ ' ಎಂದೆಯಲ್ಲ—ಎಂದು ಕೇಳಿದರೆ ' ನನ್ನ ಬಾಯಿ ತಪ್ಪಿಲ್ಲ, ಯುದ್ಧದ ಅವಸರ-ಆವೇಶಗಳಲ್ಲಿ ಕೃಷ್ಣನ ಬಾಯಿಯೆ ತಪ್ಪಿರಬಾರದೇಕೆ ? ' ಎನ್ನುತ್ತಾನೆ ! ಇಂತಹ ' ಉಲಕೋಚಿ ' ಮನಸ್ಸಿನವನಿಗೆ ಕಾಂಗ್ರೆಸ್ ಸರಕಾರದಿಂದ ಅಸಂತೋಷವಾದಲ್ಲಿ ಆಶ್ಚರ್ಯವೇನು ? ಆ ಅಸಂತೋಷದ ನಿಜವಾದ ಕಾರಣವನ್ನೂ ಹೇಳಿಬಿಡುವೆ. ಕಾಂಗ್ರೆಸ್ ಸರಕಾರದಿಂದ ಎಲ್ಲರಿಗೂ ಸಂತೋಷವಾಯಿತು, ತಸ್ಮಾತ್ ( ಎಂದರೆ ಆದುದರಿಂದ ) ನನ್ನ ಗೆಳೆಯನಿಗೆ ಅಸಂತೋಷ. ನನ್ನ ಗೆಳೆಯನು ' ಇಸಮ್ 'ವಾದಿ ಎಂದು ತಮ್ಮೆಲ್ಲರಿಗೆ ಗೊತ್ತಿರಲು ಸಾಕು. ಸದ್ಯಕ್ಕೆ ಅವನ ಬುದ್ಧಿ ವ್ಯಕ್ತಿವಾದ ' ಇಂಡಿವ್ಹಿಡುಅಲ್ ಇಸಮ್' ( Individualism )' ಎಂಬ ಜೇಡಬಲೆಯಲ್ಲಿ ಸಿಕ್ಕಿಕೊಂಡಿದೆ. ವ್ಯಕ್ತಿಗೆ ವಿಚಾರ ಸ್ವಾತಂತ್ರ್ಯವಿದೆ, ವಿಚಾರಶಕ್ತಿ ಇದೆ; ಆದರೆ ನೀರಿನಲ್ಲಿ ಕರಗುವ ಹಿಮಕಣದಂತೆ ವ್ಯಕ್ತಿಗಳ ಸಮುದಾಯದಲ್ಲಿ ಈ ಸ್ವಾತಂತ್ರ್ಯ-ಶಕ್ತಿಗಳು ಕರಗುವವಂತೆ; ಸಿದ್ಧಾಂತವೇನೆಂದರೆ: ಎಲ್ಲರ ಅಭಿಪ್ರಾಯವು ಸರಿಯಾದುದಲ್ಲ, ಒಬ್ಬನ ( ಇಲ್ಲವೆ ತನ್ನೊಬ್ಬನ ) ಅಭಿಪ್ರಾಯವೆ ನಿರ್ದುಷ್ಟವಾದ ಸಿದ್ಧಾಂತನ್ಯಾಯದ ಅಭಿಪ್ರಾಯ ! ಎಲ್ಲರೂ ಮಾಡಿದುದರ ವಿರುದ್ಧ, ತನ್ನದೆ ಹಟಸಾಗಿಸುವ ಬುದ್ಧಿ ನನ್ನ ಗೆಳೆಯನಿಗೆ ಎಷ್ಟರಮಟ್ಟಿಗಿದೆಯೆಂಬುದಕ್ಕೆ ಮೊನ್ನೆಮೊನ್ನೆ ಜರುಗಿದ ಸಂಗತಿಯೆ ದೃಷ್ಟಾಂತ. ೧೫—೨೦ ದಿವಸಗಳ ವರೆಗೆ ಒಂದೇಸವನೆ ಮಳೆ ಹಿಡಿದುದರಿಂದ ನಾವೆಲ್ಲರೂ ಮನೆಯ ಒಳಗೆಯೆ ಕೂತು ಕೂತು ಬೇಸತ್ತೆವು. ಒಂದು ದಿವಸ ಮಳೆ ನಿಂತು ಬಿಸಿಲು ಬಿದ್ದಿತು; 'ಈ ಹೊತ್ತು ಎಲ್ಲರೂ ಬೆಳಗಿನಿಂದ ಸಂಜೆಯವರೆಗೆ ಕಾಲುನಡಿಗೆಯಿಂದ ತಿರುಗಾಡಿಬರತಕ್ಕದ್ದು' ಎಂದು ನಿಶ್ಚಯಿಸಿದೆವು. 'ಕಾಲುನಡಿಗೆ' ಎನುವಾಗ 'ಕಾರು'

CC-0. Jangamwadi Math Collection. Digitized by eGangotri

(Car)ಗಳನ್ನು ತರಕೂಡದು ಎಂದು ನಮ್ಮ ಅಭಿಪ್ರಾಯ ವಿದ್ದಿತು. ಆದರೇನು? 'ಎಲ್ಲರೂ' ಎಂಬ ಶಬ್ದವನ್ನು ಉಪಯೋಗಿಸಿದ್ದೆವಲ್ಲ? ಅದಕ್ಕಾಗಿ, ನಮ್ಮ ಗೆಳೆಯನು ನಮ್ಮ ಕೂಡ ಬರಲಿಲ್ಲ ಇಷ್ಟೇ ಅಲ್ಲ, ಆ ಇಡಿಯ ದಿವಸ ಮನೆಯೊಳಗೆ ಶೀರ್ಷಾಸನವನ್ನು ಹೂಡಿಕೊಂಡು ನಿಂತಿದ್ದನು!

ಹೀಗಿರುವಾಗ ಒಂದು ದಿವಸ, ತಪ್ತಮುದ್ರೆಯಿಂದ ನಮ್ಮ ಮನೆಗೆ ಬಂದನು; ಚಪ್ಪಲಿ-ಕೊಡೆ-ಟೊಪ್ಪಿಗೆ ಒಂದೊಂದನ್ನು ನಿಧಾನವಾಗಿಯೂ ನಿಶ್ಶಬ್ದವಾಗಿಯೂ ತೆಗೆದಿಟ್ಟನು. 'ಹುಃ' ಎಂದು ತಿರಸ್ಕಾರದಿಂದ—ಮೂಗಿನಿಂದ ತಿದಿಯೂದಿದನು; ಆವೇಶವು ಆಯಾಸಕ್ಕಿಂತ ಹೆಚ್ಚಾದುದರಿಂದ ಕರವಸ್ತ್ರ-ದಿಂದ ಮುಖವನ್ನೂ ಒರಸಿಕೊಂಡನು. ಆಮೇಲೆ ನನ್ನನ್ನು ಯಜ್ಞ-ಕಂಬಕ್ಕೆ ಕಟ್ಟಿದ ಕುರಿ ಎಂದು ತಿಳಿದುಕೊಂಡವ-ನಂತೆ 'ಕೇಳಿದೆಯಾ ಕಾಂಗ್ರೆಸ್ಸಿನವರ ಕೊನೆಯಚ್ಚಿನ ಕುಣಿತ?' ಎಂದನು. ಪ್ರಾಸಕ್ಕಾಗಿ ಕುಣಿಯಬಹುದಾಗಿತ್ತು; ಆದರೆ ಅವನ ದನಿಯಲ್ಲಿ ಗದ್ದರಿಕೆ ಇದ್ದಿತು. ಅದಕ್ಕೆ ಮೆತ್ತಗಾಗಿ 'ಏನದು?' ಎಂದು ಕೇಳಿದೆ. 'ಏನು? ಏನು?'—ಅಕ್ಕಸಾಲಿಗನ ತಿದಿ ಇಪ್ಪರಲ್ಲಿ ಕಂಬಾರನ ತಿದಿಯಾಗಿತ್ತು—'ಏನಂತೆ? ಮದ್ಯಪಾನವನ್ನು ತತ್‌ಕ್ಷಣ ದಲ್ಲಿ ನಿಲ್ಲಿಸುವರಂತೆ! ನಿಷೇಧಿಸುವರಂತೆ!' ಎಂದು ಮತ್ತೊಮ್ಮೆ ಮೂಗನ್ನೂ ಮುಖವನ್ನೂ ಒರಸಿಕೊಂಡನು.

ನನಗೆ ಬಹಳೇ ಆಶ್ಚರ್ಯವಾಯಿತು; ಏಕೆಂದರೆ, ನನ್ನ ಗೆಳೆಯನಿಗೂ ಮದ್ಯಕ್ಕೂ ದರ್ಶನಸ್ನೇಹ ಕೂಡ ಇದ್ದಿರಲಿಲ್ಲ. ಇದಲ್ಲದೆ ಎಷ್ಟೋ ಸಲ ಮದ್ಯಪಾನವನ್ನು ಅತ್ಯಂತವಾಗಿ ಟೀಕಿಸಿದ್ದನು. 'ಸಂತತಿಸಂಯಮನ ಮಾಡಬೇಕು ಎನ್ನುವ ಕಾಯಿದೆಗೆ ಬ್ರಹ್ಮಚಾರಿ ವಿರೋಧಿಸುವಂತೆ, ಮದ್ಯಪಾನಪ್ರತಿ ಬಂಧಕ್ಕೆ ನಿನ್ನದು ಯಾಕೆ ವಿರೋಧ?' ಎಂದು ಕೇಳಿದೆ. ಕೇಳಿದ್ದೊಂದೇ ತಡ, ಆರ್ಯಸಂಸ್ಕೃತಿಯನ್ನು ಕುರಿತು ಉಪನ್ಯಾಸವೇ ಪ್ರಾರಂಭವಾಯಿತು.

ಮದ್ಯಪಾನದಲ್ಲಿ ವ್ಯಕ್ತಿಸ್ವಾತಂತ್ರ್ಯದ ಪ್ರಶ್ನೆಯಿದೆಯಂತೆ! ಮದ್ಯಪಾನದಲ್ಲಿ ಆರ್ಯಸಂಸ್ಕೃತಿಯ ಇತಿಹಾಸವಿದೆಯಂತೆ! ಇದೇನು ವ್ಯಕ್ತಿಸ್ವಾತಂತ್ರ್ಯದ ಕಾಲವೊ, ವ್ಯಕ್ತಿ-ಶ್ರೇಷ್ಠತೆ (dictatorship) ಗೆ ಪಾರತಂತ್ರ್ಯವನ್ನು ವಹಿಸುವ ಕಾಲವೊ? ಯಾರೊ ನಾಲ್ಕಾರು ಜನ ಹಿರಿಯರಿಗೆ, ಅಧಿಕಾರವಿದ್ದವರಿಗೆ ಸೆರೆಕುಡಿಯುವುದು ಅನಿಷ್ಟ ಎನಿಸಿ-ತಂತೆ, ಅಪವ್ಯಯ ತೋರಿತಂತೆ, ಅದಕ್ಕೆ ಪ್ರತಿಬಂಧ ಹಾಕುವರಂತೆ! ತಿಂಗಳಿನ ಇಪ್ಪತ್ತೈದು ದಿವಸಗಳನ್ನೆಲ್ಲ ಇಂದ್ರಿಯನಿಗ್ರಹದಿಂದ—ಆಶಾವಾದದಿಂದ ಕಳೆದು, ಸಂಬಳ ಸಿಕ್ಕ ಮೊದಲಿನ ಐದು ದಿವಸಗಳ ರಂಜನೆಗಾಗಿ ಕಡು-ತರವಾದ ಕಷ್ಟಪರ್ವವನ್ನು ತೃಣಪ್ರಾಯರಾಗಿ ತುಚ್ಛೀಕರಿಸಿ ಧೈರ್ಯದಿಂದ ಕಾಲಕಳೆಯುವ ಬಡಭಾರತೀಯರನ್ನು ಯಾರಾದರೂ ಇವರು ನೋಡಿದ್ದಾರೆಯೆ? ಇಲ್ಲದ ಸ್ವರ್ಗದ ಮದದಿಂದ ಇದ್ದ ಜೀವನವನ್ನೆಲ್ಲ ಹಾಳುಗೆಡಿಸಿಕೊಳ್ಳುವ ಆಚಾರವಂತರಿಗಿಂತ ತಿಂಗಳ ಮೊದಲ ಐದುದಿವಸಗಳಲ್ಲಿ ಸ್ವರ್ಗವನ್ನು ಸಿದ್ಧಿಸಿಕೊಳ್ಳಲು ಮದ್ಯಸೇವಕನು ತೋರುವ ಮನೋನಿಗ್ರಹ, ಆತ್ಮಶಕ್ತಿ ಹೆಚ್ಚಿನವಲ್ಲವೆ? ಪಾಪ! ಮಡದಿ-ಯರನ್ನು ಕೂಡಿಕೊಂಡು ಮೆತ್ತನ್ನ ಮನೆಯಲ್ಲಿ ಮೆರೆಯುವ ಶೃಂಗಾರ ಅವನಿಗಿಲ್ಲ; ಮತಿಗೆಟ್ಟವರ ಮನೆಯಲ್ಲಿ ಮೆರೆಯುವ ಬೀಭತ್ಸವೂ ಅವನಿಗಿಲ್ಲ; ಸಂಗೀತ—ನಾಟಕ—ಸಿನೆಮಾ-ಗಳನ್ನು ನೋಡಲಾರ; ಕತೆ-ಕಾದಂಬರಿ-ಕಾವ್ಯಗಳನ್ನು ಓದಲಾರ! ಅವನಿಗೊಂದು ರಂಜನೆ ಬೇಡವೆ? ಮನೆ-ಮಡದಿ-ಮಕ್ಕಳ ಅವ್ಯವಸ್ಥೆಯನ್ನೂ ಅಸಂಸ್ಕೃತಿಯನ್ನೂ ಅಸ್ವಚ್ಛತೆ-ಯನ್ನೂ ಐದು ದಿವಸಗಳವರೆಗಾದರೂ ಮರೆಯಬೇಕೆಂದರೆ ಸ್ವಾತಂತ್ರ್ಯವಿಲ್ಲವೆ ಅವನಿಗೆ? ಸುರೆಯನ್ನು ಸೇವಿಸದಿದ್ದರೆ ಯಜ್ಞಗಳಲ್ಲಿ ತಿನ್ನಿಸಿ ಕೊಬ್ಬಿಸಿದ ಪಶುವನ್ನು ತನ್ನ ಕೈಯಿಂದಲೆ ಕಡಿದೊಗೆಯುವ ಧೈರ್ಯ ಇರುತ್ತಿದ್ದಿತೇ ನಮ್ಮ ಪ್ರಾಚೀನ ಆರ್ಯಪೂಜ್ಯತಾತಂದಿರಿಗೆ?'ಸುರೆಯ ಸೇವನದಿಂದ ಸೂಕ್ತಗಳನ್ನು ರಚಿಸಲು ಸ್ಫೂರ್ತಿ ಬರುವುದೆಂದು' ವೇದ-ದಲ್ಲಿಯೆ ಹೇಳಿದೆ. ಅದು ಸುಳ್ಳೆನಬಹುದೆ? ಅದನ್ನು ಅಲ್ಲಗಳೆಯಬಹುದೆ? ದೇವನ ಅವತಾರವೆನಿಸುವ ಸಾಕ್ಷಾತ್ ಶ್ರೀಕೃಷ್ಣನಿಗೂ ಹಿರಿಯಣ್ಣನಾದ ಬಲರಾಮನಿಗೆ ಕೂಡ ಮದಿರೆಯು ಮನೋವಲ್ಲಭೆಯು. ಸ್ತ್ರೀಯರಿಗಂತೂ ಮದಿರೆ-ಯಿಂದ ಕಪೋಲಗಳು ಕೆಂಪೇರದಿದ್ದರೆ ಸೌಂದರ್ಯದ ಸರ್ಟಿಫಿಕೀಟಾಗಲಿ, ಸಾಹಿತ್ಯದಲ್ಲಿ ಸ್ಥಾನವಾಗಲಿ ದೊರೆ-ಯುವುದೆ ಸಾಧ್ಯವಿದ್ದಿಲ್ಲ. ಕಾಳಿದಾಸನ ಶಾಕುಂತಲದಲ್ಲಿ ಮೀನಗಾರ ಮತ್ತು ನಗರರಕ್ಷಕರ ಗೆಳೆತನವಾದ ಮೇಲೆ ಆ ಗೆಳೆತನಕ್ಕೆ ಶಾಶ್ವತಸ್ವರೂಪವನ್ನು ಕೊಡಲು ಅವರೆಲ್ಲರೂ ಹೆಂಡದಂಗಡಿಗೆ ಹೋಗುತ್ತಾರೆ!. ಕನ್ನಡಕಾವ್ಯಾಭಿಮಾನಿ-ಗಳಿಗಂತೂ ಹೆಚ್ಚಿಗೆ ಹೇಳುವ ಕಾರಣವೆ ಇಲ್ಲ. ಸುರೆಯೂ ಸುಗ್ಗಿಯ ಕಾಲವೂ ಇರದಿದ್ದರೆ ಅಷ್ಟಾದಶ ವರ್ಣನೆಗಳ-ಲ್ಲೊಂದಾಗಿರಬಹುದಾದ ಸೂಳೆಗೇರಿಯ ವರ್ಣನೆಯೆ ಇರುತ್ತಿರಲಿಲ್ಲ. ದೇವತೆಗಳಿಗೂ ಪ್ರಿಯವಿದ್ದಿತೆಂದೆ ಹೆಂಡಕ್ಕೆ 'ಸುರೆ' ಎಂಬ ಹೆಸರಿದ್ದಿರಬಹುದಲ್ಲವೆ?

CC-0. Jangamwadi Math Collection. Digitized by eGangotri

ಇತಿಹಾಸ ಪುರಾಣಗಳ ಸಾಕ್ಷ್ಯವು ಬೇಡವಾಗಿದ್ದರೆ ಬಿಡಲಿ, ಐಹಿಕದೃಷ್ಟಿಯಿಂದಲಾದರೂ ವಿಚಾರಮಾಡೋಣ: ಭಾರತೀಯನು ಬಡವನು; ಬಣ್ಣದ ಬಾಟ್ಲಿಗಳ ಹೆಂಡವನ್ನು ಅವನು ಚಿತ್ರಗಳಲ್ಲಿಯೆ ನೋಡಿ ಬಾಯಿ ಚಪ್ಪರಿಸಬೇಕು. ಪಾಪ ! ಅವನು ಕುಡಿಯುವುದು ದೇಶೀ, ಶು-ದ್ಧ-ಸ್ವ-ದೇ-ಶಿ ಹೆಂಡವನ್ನು; ಗಿಡಗಳಿಂದ ಸಂಗ್ರಹಿಸಿ ತಂದ ಹೆಂಡವನ್ನು. ಅವನು ಎಷ್ಟೆಷ್ಟು ಹೆಚ್ಚಾಗಿ ಹೆಂಡವನ್ನು ಕುಡಿಯುವನೊ ಅಷ್ಟಷ್ಟು ಹೆಚ್ಚಾಗಿ ಗಿಡಗಳನ್ನು ಹಚ್ಚಬೇಕಾಗುವುದು; ಗಿಡಗಳ ಸಂಖ್ಯೆಯು ಹೆಚ್ಚಿದಂತೆ ಮಳೆಯ ಸಂಭವವೂ ಪ್ರಮಾಣವೂ ಹೆಚ್ಚು; ಮಳೆಯು ಹೆಚ್ಚಿದಂತೆ ಬೆಳೆ ಹೆಚ್ಚು; ಬೆಳೆ ಹೆಚ್ಚಾದಂತೆ ರೊಕ್ಕದ ಸುರಿಮಳೆ; ರೊಕ್ಕದ ಮಳೆ ಸುರಿದಂತೆ ಹೆಂಡದ ಧಾರೆ ಸುರಿಯುವುದು; ಹೆಂಡದ ಧಾರೆ ಸುರಿದಂತೆ ಗಿಡಗಳ ಸಂಖ್ಯೆ ಹೆಚ್ಚು ! ಅಂತೂ ಇದೊಂದು ಆರ್ಥಿಕ ಮತ್ತು ಸಾಮಾಜಿಕ ಚಕ್ರಬಡ್ಡಿ ಪ್ರಗತಿ! ಧರ್ಮವು ಧಿಕ್ಕರಿಸುತ್ತಿದೆ! ಸಂಸ್ಕೃತಿಯು ಸುಳ್ಳೆಸುತ್ತಿದೆ! ಮದ್ಯಪಾನ ನಿಷೇಧವಂತೆ! ಅದಕ್ಕಿಂತಲೂ ಇಡೀ ರಾಷ್ಟ್ರವೆ ಏಕಾದಶಿಗಳನ್ನೂ, ಚಾತುರ್ಮಾಸ್ಯಾದಿವ್ರತಗಳನ್ನೂ ಪಾಲಿಸಬೇಕೆಂದು ಕಾಯಿದೆ ಮಾಡುವುದು ಒಳಿತು. ಪ್ರಕೃತಿಗೂ ಅನುಕೂಲ, ಪ್ರಪಂಚಕ್ಕೂ ಅನುಕೂಲ.

ನನ್ನ ಗೆಳೆಯನ ಉಪನ್ಯಾಸವಾದ ಎರಡು-ಮೂರು ರಾತ್ರಿ. ನನಗೆ ನಿದ್ದೆ ಬರಲಿಲ್ಲ. ನನ್ನಂತಹ ಬುದ್ಧಿವಂತನ ಮನಸ್ಸನ್ನೆ ಮರುಳುಗೊಳಿಸುವ ಅವನ ಮಾತಿನಿಂದ ಅಶಿಕ್ಷಿತ ಬಡವರ ಮೇಲೆ ಎಂತಹ ಅನರ್ಥ ಪರಿಣಾಮವಾಗಬಹುದು ! 'ಅನರ್ಥಪರಿಣಾಮ' ಎನಲೂ ಧೈರ್ಯವಿಲ್ಲ; ಏಕೆಂದರೆ, ಗೆಳೆಯನ ಬುದ್ಧಿಮತ್ತಿಕೆಯಲ್ಲೂ ವಿಶ್ವಾಸವಿದೆ. ಹೆಂಡವನ್ನು ಕುಡಿಯುವರೇಕೆ ಜನರು?—ಎಂಬ ಪ್ರಶ್ನೆ ಎದ್ದಿತು; ತಟ್ಟನೆ ಹೆಂಡತಿಯನ್ನು ಹೊಡೆಯುವರೇಕೆ ಕೆಲವರು?— ಎಂಬ ಪ್ರಶ್ನೆಯೂ ಎದ್ದಿತು. ಶಬ್ದದ ಸಾಮ್ಯವೆ ಇರಬಹುದು; ಎರಡೂ ಪ್ರಶ್ನೆಗಳಂತೂ ತಲೆಯಲ್ಲಿ ಕುಣಿಯಲಾರಂಭಿಸಿದುವು. ಕೊನೆಗೆ ಕಾರಣವನ್ನು ಹುಡುಕುವದಗತ್ಯವಿಲ್ಲ ಎಂದು ಬಿಟ್ಟುಬಿಟ್ಟೆ. ಏಕೆಂದರೆ, ಯಾರು ನನ್ನನ್ನು ಏನೆಂದು ಆಡಿಕೊಂಡರೂ ಒಂದು ಮಾತನ್ನು ನಾನು ಹೇಳದೆ ಬಿಡಲಾರೆನು. ಕಾರಣವನ್ನು ಕೊಡದೆಯೆ, ತೋರಿಸದೆಯೆ, (ಎಷ್ಟೋ ಸಲ) ತಿಳಿಯದೆಯೆ ಕಾರ್ಯ ಮಾಡುವುದರಲ್ಲಿ ಮಾನವಸ್ವಭಾವದ ಒಂದು ಸೊಗಸಿದೆ. ಎಷ್ಟೋ ಸಲ 'ನಗುವೆ ಏಕೆ ?' ಎಂದು ಜನರು ನನ್ನನ್ನು ಕೇಳಿದ್ದುಂಟು. 'ನಕ್ಕೆನೆ ? ಯಾಕೆ ?' ಎಂದು ನನಗೂ ಅವರು ಕೇಳಿದ ಮೇಲೆ ದಿಗಿಲು. ಇನ್ನು ಕಾರಣವನ್ನು ಕೊಡಲಿಲ್ಲವೆಂದರೆ ತಮ್ಮನ್ನು ನೋಡಿ ನಕ್ಕೆನೆಂದು ತಿಳಿದಾರು—ಎಂಬ ಹೆದರಿಕೆ. ಹೀಗಾಗಿ ಮೀಮಾಂಸೆ ಪ್ರಾರಂಭ: 'ಏನಿಲ್ಲ, ಹೀಗೇ ನಕ್ಕೆ. ಏನೋ! ಒಂದು ವಿಚಾರ. ಹೊರಗೆ ಶಾಂತ ಇದೆ, ಹಕ್ಕಿಗಳು ಉಲಿಯುತ್ತಲಿವೆ, ಕೋಗಿಲೆ ಹಾಡುತ್ತಲಿದೆ, ಕೈಯಲ್ಲಿ ತಿಂಗಳಿನ ಸಂಬಳ ಇನ್ನೂ ಇದೆ, ಮುಂಜಾನೆ ಶೇವ್ಹ(Shave) ಮಾಡಿಕೊಳ್ಳುವಾಗ ನೀರು ಸಾಕಷ್ಟು ಬಿಸಿ ಇದ್ದಿತು, ಚಹಾಕ್ಕೆ ಸಕ್ಕರೆ ಹೆಚ್ಚಿರಲಿಲ್ಲ, ನಮ್ಮಲ್ಲಿ ಲೆಕ್ಚರ್ ಕೊಡಿರೆಂದು ಮುಂಜಾವಿನಿಂದ ಯಾರದೂ ತೊಂದರೆ ಇಲ್ಲ, ನನ್ನದೊಂದು ಲೇಖಕ್ಕೆ ವೃತ್ತಪತ್ರದವರು ೫೦ ರೂ||ಗಳ ಚೆಕ್ಕನ್ನು ಕಳುಹಿಸಿದ್ದಾರೆ—' ಅಯ್ಯೊ ! ರಾಮಾ! ಏನೆಂದು ಹೇಳಲಿ, ಎಷ್ಟೆಂದು ಹೇಳಲಿ ? ಯಾಕೆ ನಕ್ಕೆನೊ ಎಂದು ಗೋಳಿಟ್ಟು ಅಳಬೇಕೆನಿಸುವುದು. ಏಕೆಂದರೆ, ಉಲ್ಲಾಸವು ಮೈಗೂಡಿ ನಾನು ನಕ್ಕಿರಬಹುದು, ಆನಂದತನ್ಮಯನಾಗಿ ನಾನು ನಕ್ಕಿರಬಹುದು; ಅದರ ಗೊಡವೆ ಯಾಕೆ? ಕಾರಣವನ್ನು ಹುಡುಕುವುದು ಯಾಕೆ? ನಕ್ಕು ನನ್ನ ಆಯುಷ್ಯ ಬೆಳೆಯಿತು, ಸಾಕಲ್ಲವೆ ?

ಕಾರಣಗಳನ್ನು ತಿಳಿಯದೆ ಮಾಡುವ ಕಾರ್ಯಗಳಲ್ಲಿ ಸೊಗಸು ಮಾತ್ರ ಅಲ್ಲ, ಸಹಜತೆಯೂ ಇದೆ. ಯುವಕರಿದ್ದಾಗ ನಾವು ವೇಷ-ಭಾಷೆಗಳ ಓರಣವನ್ನು ಹೆಚ್ಚಾಗಿ ಮಾಡುವೆವು. 'ನೀನು ದೋತರವನ್ನು ಇಷ್ಟೇಕೆ ಅಚ್ಚುಕಟ್ಟಾಗಿ ಉಟ್ಟಿರುವೆ ?' ಎಂದು ಕೇಳಿದರೆ ಉತ್ತರವೇನಿದೆ ? 'ನಾನು ನಿಸರ್ಗಕ್ಕೊಳಗಾದ ಒಂದು ಚೇತನವಸ್ತು. ಪ್ರತಿಯೊಂದು ವಸ್ತುವಿಗೆ ಆತ್ಮವಿಕಾಸದ ಶಕ್ತಿಯೂ ಇಚ್ಛೆಯೂ ಒಮ್ಮೆ ಮೂಡುವುದು. ಅದಕ್ಕೆ ವಿಜ್ಞಾನ ಶಾಸ್ತ್ರವು ಪ್ರಜೋತ್ಪಾದಕ (reproductive) ಶಕ್ತಿ ಎನ್ನುವುದು. ಆ ಶಕ್ತಿ ಮೂಡುವಾಗ ವಸ್ತುವು ತನ್ನ ಪೂರ್ತಿಯಾದ ವಿಕಾಸವನ್ನು ಹೊಂದುವುದು. ನಾನು ತರುಣ. ಆದುದರಿಂದ ಅಂದಗೊಂಡು ವಿಕಾಸಹೊಂದುವುದು ನನ್ನ ಸಹಜಸ್ಫೂರ್ತಿ' ಮುಂತಾಗಿ ನಾನು ಹೇಳತೊಡಗಿದರೆ ನನ್ನನ್ನು ಶಪಿಸಬಹುದು. ಇಂತಹ ಸ್ಥಿತಿಯಲ್ಲಿ ಯುವಕರು 'ದೋತರವನ್ನು ಅಚ್ಚುಕಟ್ಟಾಗಿ ಉಡಬಾರದು' ಎಂದು ಕಾಯಿದೆ ಮಾಡಿದರೆ ? ಬೆಳೆದ ಮೀಸೆಯನ್ನು ಹುರಿಮಾಡುವರು ?! ಅದನ್ನು ಪ್ರತಿಬಂಧಿಸಿ ಮೈ ಅಲುಗಿಸುತ್ತ, ಎದೆಯುಬ್ಬಿಸಿ ನಡೆಯುವರು! ಅಂತೂ ಸಹಜವಿಕಾರದ ಆವಿರ್ಭಾವವನ್ನು ತಡೆಯುವುದು ಸಾಧ್ಯವಿಲ್ಲ.

CC-0. Jangamwadi Math Collection. Digitized by eGangotri

ನಾನು ಎಲ್ಲಿಯಾದರೂ ಹೆಂಡದಂಗಡಿಗಳ ಮಕ್ತೇದಾರನೆಂಬ ಕಲ್ಪನೆ ತಮಗಾದೀತು. ಹೆಂಡವನ್ನು ಕುಡಿಯವುದು ಸಹಜವಾದ ಯಾವುದೋ ಒಂದು ವಿಕಾರದ ಆವಿರ್ಭಾವದ ಒಂದು ತರಹ—ಎಂದು ನಾನು ಹೇಳುವುದು. 'ಹೆಂಡವನ್ನು ಕುಡಿಯಕೂಡದು' ಎಂದರೆ ಕೆಂಡವನ್ನು ಕುಡಿಯಬಹುದು, ಮತ್ತಾವುದನ್ನಾದರೂ ಕುಡಿಯಬಹುದು. ಹೆಂಡದಿಂದ ಮೈ ಒಣಗುವುದು ಎಂದು ಹೇಳಿದರೆ ಇಂದು ಅನೇಕ ಜನ ಹೆಂಡಕುಡಿಯದವರು ಮನೆ ಮಗ್ಗುಲಿನ ಕಸದಿಂದ ರೋಗಪೀಡಿತರಾಗಿರುವರು; ಹೆಂಡದಿಂದ ಬಡತನ ಹೆಚ್ಚುವುದೆಂದರೆ ಇಂದು ಅನೇಕಜನ ಹೆಂಡಕುಡಿಯದವರು ಹೆಂಡತಿಯಿಂದ ಅನೇಕ ಮಕ್ಕಳನ್ನು ಹಡೆದು ಬಡವರಾಗಿರುವರಲ್ಲ! ಹೆಂಡದಿಂದ ದುರ್ಗುಣಗಳು ಸೇರುವುವೆಂದರೆ ಇಂದು ಹೆಂಡಕುಡಿಯದಿದ್ದರೂ ಲಂಚನುಂಗಿ ನೀರು ಕುಡಿಯುವವರೆಷ್ಟು ಜನ ಇಲ್ಲ? ನಾನು ಮೊದಲು ಹೇಳಿದಂತೆ ಕಾರಣಗಳನ್ನು ತೋರಿಸುತ್ತ ಹೋಗುವುದರಲ್ಲಿ ಅರ್ಥವಿಲ್ಲ. ಹೆಂಡಕುಡಿಯುವುದು ಪಾಪ ಎಂದು ಹೇಳಬಹುದು; ಮಕ್ತೇದಾರನು ಶಾಲೆ-ವಿದ್ಯಾಲಯಗಳಿಗೆ ತೀರ್ಥ-ದೇವಾಲಯಗಳಿಗೆ ದಾನವನ್ನು ಕೊಡುವನಲ್ಲ; ಹೆಂಡ ಕುಡಿಯದಿದ್ದರೆ ಈ ಹಣ ಬರುವುದೆಲ್ಲಿಂದ? ನಾನು ಹೀಗೆಯೇ ಮಾತನಾಡುತ್ತ ಹೋದರೆ ಕುಡಿದ ಆರೋಪವು ನನ್ನ ಮೇಲೆಯೆ ಬರಬಹುದು; ಏಕೆಂದರೆ, ತಮಗೆ ಒಪ್ಪದ ಯೋಚನೆಯು ಪಾಪದ ಯೋಚನೆಯೆಂದು ಮಾನವನ ಗ್ರಹಿಕೆ ಇದೆ. ತಪ್ಪೊ ಒಪ್ಪೊ? ಹೆಂಡಕುಡಿಯುವ ಕಾರಣವನ್ನು ತಿಳಿಯುವ ವರೆಗೆ ಅದನ್ನು ಪ್ರತಿಬಂಧಿಸುವುದು ಸಾರ್ಥಕವಿಲ್ಲ; ಕಾರಣವು ತಿಳಿಯಿತೆಂದರೆ ಕುಡಿಯುವವರಿಗೆಯೆ ಅದರಲ್ಲಿ ಮೋಜು ಉಳಿಯದೆ, ಪ್ರತಿಬಂಧಕ್ಕೆಯೆ ಕಾರಣ ಉಳಿಯುವುದಿಲ್ಲ. ಈ ಲೇಖನವನ್ನು ಓದಿ ಹೆಂಡ ಕುಡಿದಷ್ಟೆ ಮದ ಯಾರ ತಲೆಗಾದರೂ ಏರಿದರೆ ನಾನು ಕೃತಾರ್ಥನಾದೆ. ಎರಡನೆಯ ಹೆಂಡತಿಯ ಗಂಡನ ಮೊದಲನೆಯ ಹೆಂಡತಿಯನ್ನು ಇಂದಿಲ್ಲ ನಾಳೆಯಾದರೂ ಬಿಡಲೇ ಬೇಕಾಗುವುದು.


# ಡೋಂಗರೆ ಇವರ ಬಾಲಾಮೃತವು



★ ಇದ್ದದ್ದಾದರೂ ಏನು?

(೧) ಅದು ಅಶಕ್ತ ಮತ್ತು ರೋಗಿಷ್ಠ ಮಕ್ಕಳನ್ನು ಬೇಗ ವಾಸಿಪಡಿಸುತ್ತದೆ.

(೨) ಅದರಲ್ಲಿ ಎಲುಬುಗಳನ್ನು ಗಟ್ಟಿಗೊಳಿಸುವ ಎಲ್ಲ ಸತ್ತ್ವಾಂಶಗಳೂ ಇವೆ.

(೩) ಅದು ಚಿಕ್ಕಮಕ್ಕಳಿಗೆ ಉತ್ಕೃಷ್ಟ—ಪೌಷ್ಟಿಕ ಔಷಧಿಯಾಗಿದೆ.

(೪) ಅದು ಕೆಮ್ಮಿನ ಕೆಟ್ಟ ವಿಕಾರವನ್ನು ಗುಣಪಡಿಸುವುದಲ್ಲದೆ ಹಲ್ಲು ಬರುವ ಹೊತ್ತಿನಲ್ಲಿ ಮಕ್ಕಳಿಗೆ ಉಪಯುಕ್ತವಾಗಿದೆ.

ಎಲ್ಲೆಲ್ಲಿಯೂ ಸಿಗುತ್ತದೆ.


CC-0. Jangamwadi Math Collection. Digitized by eGangotri

# ಕಾಮೊಯೆನ್ಸ್ ಕವಿಯ 'ಲ್ಯುಸಿಯಾಡ್' ಮಹಾಕಾವ್ಯವು

ಶ್ರೀಮಾನ್ ಬಿ. ಅಶ್ವತ್ಥನಾರಾಯಣರಾಯರು, ಬೆಂಗಳೂರು



ಕವಿಪ್ರವರರಾದ 'ಹೋಮರ್' 'ವರ್ಜಿಲ್' ಇವರಂತೆಯೆ ಕಾಮೊಯೆನ್ಸ್ ಕವಿಯು ಕೂಡ ತನ್ನ ದೇಶದವರ ಅಪ್ರತಿಮ ಶೌರ್ಯ-ಸಾಹಸಗಳನ್ನು ಬಣ್ಣಿಸಿರುವನು. ಈ ಕಾವ್ಯದ ವಸ್ತುವು ಅಂತಿಂತಹದಲ್ಲ; ತುಂಬ ಮಹತ್ತ್ವದುದು. ಆಗಿನ ಯುರೋಪಿಗೆ ಸ್ವಪ್ನರೂಪಿಯಾಗಿದ್ದ ಹಿಂದುಸ್ಥಾನವನ್ನು ಸಾಕ್ಷೀಕರಿಸಿಕೊಂಡುದಿಷ್ಟೇ ಅಲ್ಲ, ಅಲ್ಲಿ ಯುರೋಪಿನವರ ರಾಜ್ಯಸ್ಥಾಪನೆ

§ ಮಾಡಿದ ವಿಶಿಷ್ಟ ಸಂಗತಿಯನ್ನೊಳಗೊಂಡುದು. §



ಈಗ ಕಾಮೊಯೆನ್ಸ್ ಕವಿಯು ಬರೆದಿರುವ ಮಹಾಕಾವ್ಯವನ್ನು ಕುರಿತು ವಿಚಾರಿಸೋಣ! ವಸ್ತುವಿಷಯ ಸಣ್ಣದಲ್ಲ; ಅದುವರೆಗೂ ಯಾರಿಗೂ ತಿಳಿಯದಿದ್ದ ಹಾದಿಯನ್ನು—ಹಿಂದುಸ್ಥಾನಕ್ಕೆ ಬಂದು ಮುಟ್ಟುವ ಮಾರ್ಗವನ್ನು—ಪೋರ್ಚುಗೀಸರು ಕಂಡುಹಿಡಿದುದು, ಮತ್ತು ಹಿಂದುಸ್ಥಾನದಲ್ಲಿ ರಾಜ್ಯವನ್ನು ಸ್ಥಾಪನೆ ಮಾಡಿದುದು.

"Arms and heroes who from Lisbon's shore
Thro' seas where sail was never spread before

* * *

With prowess more than human forced their way
To the fair kingdom of the rising day.

ವಾಸ್ಕೋ ಡಿ-ಗಾಮನು ಹಿಂದುಸ್ಥಾನಕ್ಕೆ ಬರುವ ದಾರಿಯನ್ನು ಕಂಡುಹಿಡಿದಿರುವ ಕಥಾಪ್ರಸಂಗದಲ್ಲಿ, ಮಹಾಕಾವ್ಯಕ್ಕೆ ಬೇಕಾದ ಅಂಶಗಳಿವೆ; ಅಗ್ರಸ್ಥಾನವನ್ನು ಪಡೆಯಲು ಸಾಕಾದಷ್ಟು ಸಂಗತಿಗಳಿರುವುದರಿಂದ, ಅದಕ್ಕೆ ಇಂದು ಜಗತ್ತಿನ ಇತಿಹಾಸದಲ್ಲಿ ಗಣ್ಯವಾದ ಸ್ಥಳವಿದೆ; ಪೋರ್ಚುಗೀಸರ ಸ್ವಾಭಿಮಾನ, ಸ್ವದೇಶಾಭಿಮಾನ, ಉನ್ನತಿಗಳನ್ನು ಕುರಿತು ಪ್ರಸ್ತಾಪಮಾಡುವುದಕ್ಕೆ ಬೇಕಾದಷ್ಟು ಅವಕಾಶವು ಆ ಪ್ರಕರಣದಲ್ಲಿದೆಯೆಂದು ನಿಶ್ಶಂಕೆಯಿಂದ ಹೇಳಬಹುದಾಗಿದೆ. ಕವಿವರ್ಯರಾದ ಹೋಮರ್ ಮತ್ತು ವರ್ಜಿಲ್ ಇವರನ್ನು ಅನುಸರಿಸಿ, ಕಾಮೊಯೆನ್ಸ್ ಕವಿಯು ಸಹ ತನ್ನ ದೇಶದವರ ಅಪ್ರತಿಮ ಶೌರ್ಯ-ಸಾಹಸಗಳನ್ನು ಬಣ್ಣಿಸಿರುವನು. ಈ ಮೊದಲೇ ಹೇಳಿದಂತೆ ಅದರ ಕಥಾವಸ್ತುವು ಅಂತಿಂತಹದಲ್ಲ. ಆಗಿನ ಯುರೋಪಿಗೆ ಸ್ವಪ್ನರೂಪಿಯಾಗಿದ್ದ ಹಿಂದುಸ್ಥಾನದಲ್ಲಿ, ರಾಜ್ಯಸ್ಥಾಪನೆ ಮಾಡಿದುದು ಅದರ ಮುಖ್ಯವಿಚಾರ. ಮಹಾಗ್ರಂಥಕ್ಕೆ ಯೋಗ್ಯವಾದ ವಸ್ತುವು. ಹೋಮರ್ ಕವಿಯ ಕೃತಿಯಲ್ಲಿಯೂ ಇಂತಹ ವಸ್ತುವಿಲ್ಲ. ವರ್ಜಿಲ್ ಕವಿಯ ಕಾವ್ಯದಲ್ಲಿ ಕೆಲಮಟ್ಟಿಗೆ ದೊರೆಯುವುದು. ಆದರಿಂದಲೇ ಕವಿಯು—ಪ್ರಾಯಶಃ ಈ ಭಾವನೆಯು ಆತನಿಗೆ ಹೊಳೆದಿರಬಹುದು—ಉಜ್ವಲ ಸ್ವಾಭಿಮಾನದಿಂದ ಸಾರಿರುವನು:

'Nor sage Ulysses, nor the Trojan pride
Such raging gulfs, such whirling storms defied'

ಇತರ ವಿಷಯಗಳನ್ನು ಬಿಟ್ಟು, ಭಾರತವರ್ಷಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಕೆಲವನ್ನು ಮಾತ್ರ ಅವಲೋಕಿಸಲು ಈ ಲೇಖನದಲ್ಲಿ ಅವಕಾಶವುಂಟು.

ಮಹಾಕಾವ್ಯದಲ್ಲಿ ವಿವರಿಸಿರುವ ಮುಖ್ಯ ಕಾರ್ಯವು ರಂಗಸ್ಥವಾಗುವುದಕ್ಕೆ ಮೊದಲೇ, ಕಥಾನಾಯಕನಿಗೆ ಒಂದು

CC-0. Jangamwadi Math Collection. Digitized by eGangotri

ಸ್ವಪ್ನವಾಗುವಂತೆ ಕವಿಯು ಯೋಜಿಸಿರುವನು. ಸ್ವಪ್ನದ ಸಾರಾಂಶವು ಹೀಗಿರುವುದು:

ಸುಪ್ರಸಿದ್ಧವಾದ ಸಿಂಧು-ಗಂಗಾನದಿಗಳು ಉನ್ನತವಾದ ಗಿರಿಶ್ರೇಣಿಯಿಂದ ಹೊರಬಿದ್ದು, ಡಿ-ಗಾಮನೆದುರಿನಲ್ಲಿ ಧಾರಾರೂಪವಾಗಿ ಪ್ರವಹಿಸುವವು. ಆ ಪ್ರವಾಹಗಳಿಂದ ಇಬ್ಬರು ದೇವತೆಗಳು ಜನಿಸುವರು; ಅಂತಃಕಲಹದಿಂದ ಹಾಳಾಗುತ್ತಿರುವ ಹಿಂದೂದೇಶಕ್ಕೆ ಬಂದು, ಸುಖಶಾಂತಿಗಳನ್ನು ಬೀರೆಂದು ಆತನಿಗೆ ಆಹ್ವಾನವೀಯುವರು. ಅದನ್ನು ಅನುಸರಿಸಿ ಕಥಾನಾಯಕನು ಮುಂದಿನ ಸಿದ್ಧತೆಗಳಿಗಾಗಿ ಮುಂಜಾಗ್ರತೆಗೊಳ್ಳುವನು.

ಈ ರೀತಿಯಾದ ಸ್ವಪ್ನದಿಂದ ಗಾಮನಿಗೆ ಉತ್ತೇಜನ ದೊರೆಯಿತೆಂದು (ಕಾವ್ಯದ ದಾರಿಯನ್ನು ಹಿಡಿದು. ಇತಿಹಾಸದಲ್ಲಿ ಈ ಸ್ವಪ್ನದ ಮಾತು ಸ್ಪಷ್ಟವಾಗಿಲ್ಲ—ಲೇಖಕ) ನಾವು ಹೇಳಬಹುದು. ಟ್ರೋಜನ್ ವೀರನಿಗೆ ಟೈಬರನು ಕಾಣಿಕೆಗೊಟ್ಟು ಬಾರೆಂದು ಆಹ್ವಾನವಿತ್ತಂತೆ, ಇಲ್ಲಿಯೂ ಈ ನದೀದೇವತೆಗಳು ಡಿ-ಗಾಮನಿಗೆ ಬಾರೆಂದು ಕರೆಯುವರು. ಈ ರೀತಿಯಾದ ಕನಸು ಎಂತಹ ಅಂಜುಗುಳಿಗೂ ಧೈರ್ಯವನ್ನು ನೀಡುವುದು; ಎಂದ ಬಳಿಕ ವೀರಾಗ್ರಗಣ್ಯನಾದ ಡಿ-ಗಾಮನಿಗೆ ಉತ್ತೇಜನ ದೊರೆಯಿತೆಂದರೆ ತಪ್ಪೇನಿದೆ ?

ಡಿ-ಗಾಮನೂ ಆತನ ಸಂಗಡಿಗರೂ ಮುಂದಿನ ಮಾರ್ಗವನ್ನು ನಿಶ್ಚಯಿಸಿಕೊಂಡು, ಸ್ವದೇಶದಿಂದ ಹೊರಬೀಳುವರು. ಪೂರ್ವದಿಕ್ಕನ್ನು ಹಿಡಿದು ಪಯಣಮಾಡುತ್ತಿರುವಾಗ, ಅವರಿಗೆ ಅನೇಕವಿಧವಾದ ಸಂಕಟಗಳು ಬಂದೊದಗುವುವು. ಅವುಗಳಿಂದ ಪಾರಾಗಿ ಕಾಲಕ್ರಮೇಣ ಅವರ ನೌಕೆಗಳು ಹಿಂದುಸ್ಥಾನದ ತೀರವನ್ನು ಸಮೀಪಿಸುವುವು. ನಾರೀಕೇಳವೃಕ್ಷ ನಿಬಿಡಿತವಾದ ಮಲಬಾರ ಪ್ರದೇಶದ ತೀರವು ಕಾಣಬರಲು, ನಾವಿಕರ ಆನಂದೋತ್ಸಾಹಗಳು ಮಿತಿಮಾರುವುವು:

'Pale shone the waves beneath the golden beam
Blue on the silver flood Malabria's mountains gleam
The sailors on the Maintop's airy round
Land, land, aloud, with waving hands resound

ಇಂತಹ ಉತ್ಸವಸಮಯದಲ್ಲಿ ನಾಯಕನಾದ ಡಿ-ಗಾಮನನ್ನು ಕವಿಯು ಹೀಗೆ ಚಿತ್ರಿಸಿರುವನು:

"Gama's great soul coufest the rushing swell
Prone on his manly knees the hero fell.
'Oh bounteous Heaven,' he cries and spreads his hands
To bounteous Heaven, while boundless commands
No farther word to flow. "

ಹೀಗೆ ಕೆಲವು ಕಾಲ ಮುಗ್ಧನಂತಿದ್ದು ಮರಳಿ:

"The hero wakes with raptures and behold
The Indian shores before his prows unfold."

ಆಗ ಮನಸ್ಸಿನಲ್ಲಿದ್ದ ಸ್ವಾಭಿಮಾನ-ಮಹದಾಶೆಗಳು ಹೊರಬೀಳುವುವು.

"with eyes on fire
Surveys the limits of his proud desire"

ಅಲ್ಲಿಂದ ಮುಂದೆ ತನ್ನ ಗ್ರಂಥದಲ್ಲಿ, ಕಾಮೋಯೆನ್ಸ್ ಕವಿಯು ಅವರ ಮುಂದಿನ ಕೃತ್ಯಗಳನ್ನು ಹಾಡಿ, ಅವರು ಸಾಮ್ರಾಜ್ಯದ ಶಂಕುಸ್ಥಾಪನೆ ಮಾಡಿದುದನ್ನು ಬರೆಯುವನು. ಆದರೆ ಇತಿಹಾಸವನ್ನು ಅನುಸರಿಸಿ ಬರೆಯುವುದು ಆತನ ಕಾರ್ಯಭಾರವಲ್ಲ. ಕವಿಸಹಜವಾಗಿ ಮುಂದುವರಿದಿರುವನು. ಈಗಿನವರಾದ ನಮಗೆ ಆ ಮಹಾಕಾವ್ಯದಲ್ಲಿ ತೋರಿಬರುವ ಸಮಾಜದ ಸ್ಥಿತಿ, ನಡೆವಳಿಕೆ, ರಾಜ್ಯವ್ಯವಸ್ಥೆಗಳ ಕಡೆಗೆ ಮನಸ್ಸು ಓಡುವುದು. ಇವನ್ನು ಬಿಟ್ಟರೂ ಕಾವ್ಯದ ವರ್ಣನಾಭಾಗಗಳು ಹೃದಯಂಗಮವಾಗಿರುವುವು.

ಹಿಂದುಸ್ಥಾನವನ್ನು ಸೇರಿದ ಮೇಲೆ ಡಿ-ಗಾಮನಿಗೆ ಅಲ್ಲಿಯ ಜನರ ಪರಿಚಯವಾಗುವುದು. ಅಲಂಕಾರಭೂಷಿತರಾದ ವಿದೇಶೀಯರನ್ನು ಕಂಡು ಅವರಿಗೂ ಕುತೂಹಲವಾಗುವುದು. ಮುಂದೆ ಹಿಂದೂ ದೇಶದ ಭೂವರ್ಣನೆಯಿರುವುದು. ಆಗಿನ ಕಾಲದವರಿಗೆ — ಭರತಖಂಡದ ಭೂವಿವರಣೆಯನ್ನು ತಿಳಿಯದವರಿಗೆ—ಇದರಿಂದ ಬಹುಮಟ್ಟಿಗೆ ಅನುಕೂಲವಾಗಿರಬೇಕು; ಹಾಗೂ ಮನಸ್ಸಿಗೂ ಹಿಡಿದಿರಬೇಕು. ಈಗಲೂ ಅದನ್ನು ಓದಲು ಹರ್ಷವಾಗುವುದು:

"Vast are the shores of India's wealthful soil;
Southward sea-girt; she forms a demi-isle;
His caverned cliffs with dark-browed forests crowned
Hemodian Taurus frowns her northern bound."

CC-0. Jangamwadi Math Collection. Digitized by eGangotri

ಉತ್ತರದಲ್ಲಿ ಕಡಿದಾಗಿ ಹಬ್ಬಿರುವ ಪರ್ವತಶ್ರೇಣಿಯನ್ನೂ ಬಿಟ್ಟಿಲ್ಲ:

> "From Caspia's lake the enormous mountain spreads,
> And leading Eastward rears a thousand heads;
> Far to extremest sea her ridges thrown
> By various names, through various tribes are known."

ಸಿಂಧು-ಗಂಗಾನದಿಗಳನ್ನೂ ಆತನು ಮರೆತಿಲ್ಲ !

> "Two infant rivers pour the crystal tide,
> Indus one, and the one the Ganges named
> Darkly of old, through distant lands famed."

ಕವಿಯ ವರ್ಣನಾಚಾತುರ್ಯವು ಬರೀ ಬೆಟ್ಟಗಳ, ನದಿಗಳ, ಕಾನನಗಳ ಕಡೆಗೆ ಮಾತ್ರವೇ ಇರುವುದಿಲ್ಲ. ಹಿಂದುಸ್ಥಾನದ ಧರ್ಮಗಳ ವಿಚಾರವಾಗಿಯೂ ನ್ಯಾಯಪದ್ಧತಿಯ ವಿಚಾರವಾಗಿಯೂ ಆತನು ಬರೆದಿರುವನು. ಸಮಭೂಮಿಯಲ್ಲಿ ಹರಡಿದ್ದ ದೊಡ್ಡದೊಡ್ಡ ನದೀತೀರಗಳನ್ನು ಹಿಡಿದಿದ್ದ ನಗರಗಳನ್ನು, ಅಲ್ಲಿಯ ಜನರನ್ನು ಆತನು ವರ್ಣಿಸಿರುವನು. ಗಂಗಾಜಲಪೋಷಿತವಾದ ಬಂಗಾಲವನ್ನು ಕುರಿತು ಹೇಳಿರುವನು; ಕಷ್ಟಜೀವಿಗಳಾದ ದಕ್ಷಿಣ ( Deccan ) ದವರನ್ನು ಕುರಿತು ನುಡಿದಿರುವನು. ಉನ್ನತ ಪದವಿಯಲ್ಲಿದ್ದ ವಿಜಯನಗರವನ್ನು ಕುರಿತು ಬರೆದಿರುವನು. ಅವರ ಸಿರಿಯನ್ನು ಜಗತ್ತಿಗೆ ಸಾರಿರುವನು. ತೀರದ ಕಾವಲುಗಾರನಂತಿರುವ ಸಹ್ಯಾದ್ರಿಯನ್ನು ಪ್ರತಿಬಿಂಬಿಸಿ ಇರುವನು. ಫಲವತ್ತಾದ ಮಲಬಾರು ಪ್ರಾಂತವನ್ನು ಕುರಿತು ಹೀಗೆ ಹಾಡಿರುವನು:

> "Here, from the mountain to the surgy main,
> Far as a garden, spreads the smiling plain."

ಕಲ್ಲೀಕೋಟೆಯ ವಿಷಯವಾಗಿ ಹೀಗೆ ಬರೆದಿರುವನು:

> " There lofty Calicut resplendent towers
> Here's every fragrance of the spicy shore
> Here's every gem of India's countless shore."

ಆದರೆ ಕಾಮೊಯೆನ್ಸ್ ಕವಿಯು ಧರ್ಮಗಳ ವಿಚಾರವಾಗಿ ಸರಿಯಾಗಿ ಗ್ರಹಿಸಿಕೊಂಡು ಬರೆದಿರುವನೆಂದು ಹೇಳಲಿಕ್ಕಾಗುವುದಿಲ್ಲ, ಆತನು ಇಲ್ಲಿದ್ದುದು ಸ್ವಲ್ಪ ಅವಧಿ; ಸಾಲದುದಕ್ಕೆ ಆತನು ರೋಮನ್ ಕ್ಯಾಥೊಲಿಕ್ ಜಾತಿಯವನು. ಅಂದ ಮೇಲೆ ಹಿಂದೂ ಧರ್ಮದ ಸಿದ್ಧಾಂತಗಳೂ ರಹಸ್ಯವೂ ಆತನಿಗೆ ಸರಿಯಾಗಿ ತಿಳಿದಿರಬಹುದೆಂದು ಹೇಗೆ ಹೇಳಲಿಕ್ಕೆ ಆದೀತು? ಆತನ ಅಭಿರುಚಿಯೂ ಈ ದಿಕ್ಕಿನಲ್ಲಿರಲಿಲ್ಲ. ಬೀದಿಗಳಲ್ಲಿ ಆತನು ನೋಡಿದ—ನಾವು ಇಂದಿಗೂ ನೋಡಬಹುದಾದ—ಉತ್ಸವಗಳನ್ನೂ ಜನಸಾಮಾನ್ಯರ ವರ್ತನೆಗಳನ್ನೂ ನೋಡಿ, ತನಗೆ ಎನಿಸಿದ ಮಾತನ್ನು ಕಾವ್ಯದಲ್ಲಿ ಕೀರ್ತಿಸಿರುವನು ಇಷ್ಟೆ. ಅಖಂಡ ಹಿಂದುಸ್ಥಾನದಲ್ಲಿ ಪೋರ್ಚುಗೀಸರ ರಾಜ್ಯವನ್ನು ಸ್ಥಾಪಿಸಬೇಕೆಂಬ ಮಹದಾಶೆಯು ಆತನ ಮನಸ್ಸಿನಲ್ಲಿತ್ತು. ಅದಕ್ಕಿಂತಲೂ ಹಿರಿದಾಗಿ, ಇಡಿಯ ಭಾರತವರ್ಷವನ್ನು ಈಸಾಯಿ ಧರ್ಮಕ್ಕೆ ಸೇರಿಸಿಬಿಡಬೇಕೆಂಬ ಕನಸು ಆತನ ಕಣ್ಣೆದುರಿಗೆ ಇದ್ದಿತು. ಈ ಭಾವನೆಯು ಆತನಲ್ಲಿ ಬಹುಮಟ್ಟಿಗೆ ಅಂಕುರವಿಟ್ಟು ಬೆಳೆದಿದ್ದಿತೆಂದು ನಿರ್ವಿವಾದವಾಗಿ ಹೇಳಬಹುದು. ಅನೇಕ ಸಂದರ್ಭಗಳಲ್ಲಿ ಅವನು, ಉಳಿದ ವಿಷಯಗಳನ್ನು ಬದಿಗಿರಿಸಿ ಇದನ್ನೆ ಸಾಂಗವಾಗಿ ಮಾಡಿದರೆ ಸಾಮ್ರಾಜ್ಯಸ್ಥಾಪನೆಗಿಂತಲೂ ಹೆಚ್ಚಿನ ಕಾರ್ಯಮಾಡಿದಂತೆ ಆಗುವುದೆಂದು ಉದ್ಗಾರ ತೆಗೆದಿರುವನು.

ಕಾಮೊಯೆನ್ಸ್ ಕವಿಯ ಮಹಾಗ್ರಂಥದ ಪ್ರತಿಯೊಂದು ಪುಟದಲ್ಲಿಯೂ ಭಾರತೀಯ ವಾಚಕರಲ್ಲಿ ಉತ್ಸಾಹವನ್ನೂ, ಹಿತವನ್ನೂ, ಅಭಿರುಚಿಯನ್ನೂ ಹೊರಡೆಗೆಯುವ ಅನೇಕ ಸಂದರ್ಭಗಳಿವೆ. ಅಗ್ನಿದೇವನು (Vulcan) ಏನಿಯಸ್‌ನಿಗೆ ( Aeneas ) ಮಾಡಿಕೊಟ್ಟ ಗುರಾಣಿಯ ಮೇಲೆ, ರೋಮಪಟ್ಟಣದ ಇತಿಹಾಸವನ್ನವನು ಚಿತ್ರರೂಪದಲ್ಲಿ ಮಾಡಿದ್ದನೆಂದು ವರ್ಜಿಲ್ ಕವಿವರ್ಯನು ಹೇಳಿರುವನು. ಅದರಂತೆಯೇ ಝೂಮೊರಿನ್ ಅರಸನ ಅರಮನೆಯ ಗೋಡೆಯ ಮೇಲೆ, ಭಾರತದ ಇತಿಹಾಸವನ್ನು ಚಿತ್ರಿಸಿದ್ದರೆಂದು ಈ ಕವಿಯು ಹೇಳುವನು. ಯವನವೀರನ ದಂಡಯಾತ್ರೆಯಿಂದ ಹಿಡಿದು, ಪೋರ್ಚುಗೀಸರ ಆಗಮನದ ವರೆಗೂ ನಡೆದ ಐತಿಹಾಸಿಕ ಕಾರ್ಯಕಲಾಪಗಳನ್ನು, ಕಲ್ಲಿಕೋಟೆಯ ರಾಜಮಂದಿರದ ಭಿತ್ತಿಗಳ ಮೇಲೆ ಬಿಂಬಿಸಿರುವುದನ್ನು ಡಿ–ಗಾಮ ಮುಂತಾದವರು ನೋಡುವರೆಂಬ ಮಾತನ್ನೂ ಕವಿಯು ಬರೆದಿರುವನು.

ಆಗಿನ ಕಾಲದಲ್ಲಿ ಹೆಸರುಗೊಂಡಿದ್ದ ವಿಷಯಗಳನ್ನೂ, ವಸ್ತುಗಳನ್ನೂ, ರೀತಿನೀತಿಗಳನ್ನೂ ಕವಿಯು ಉತ್ತಮತರದ ಕುಶಲತೆಯಿಂದ ರೂಹುಗಾಣಿಸಿರುವನು. ಇದನ್ನು ಸಾಧಿಸಲು ಒಂದು ಉದಾಹರಣೆಯು ಸಾಕೆನ್ನಬಹುದು. ಝೂಮೋರಿನ್ನನ ಆಸ್ಥಾನವು ಹೀಗಿತ್ತಂತೆ:

CC-0. Jangamwadi Math Collection. Digitized by eGangotri

"The tapestried walls with gold are painted o'er
And flowery velvet spreads the marble floor;
In all the grandeur of the Indian state
High on a blazing court the monarch sate,
With starry gems the purple curtains shined
And ruby flowers and foliage twined
Around the silver pillars; high o'erhead
The golden canopy its radiance shed,
Of cloth of gold the sovereign's mantle shone
And his high turban flamed with precious stones."

ಇಂತಹ ಅಪೂರ್ವವಾದ ಸಮಯದಲ್ಲಿ, ಸುಂಧರವಾದ ಭೂಮಿಯಲ್ಲಿ ಕವಿಯು ತನ್ನ ಕಥಾನಾಯಕನಾದ ಡಿ-ಗಾಮನ ಕೃತ್ಯಗಳನ್ನು ಹೊಗಳಿ, ಜಗತ್ತಿಗೆ ಸಂತಸದ ಸವಿಯನ್ನು ಹಂಚಿರುವನು. ಅಲ್ಲದೆ ಹಿಂದುಸ್ಥಾನದ ಸುಖ ಸಂಪತ್ತನ್ನೂ ಸೌಂದರ್ಯವನ್ನೂ ಅದರ ಯಾವತ್ತು ಪರಿಚಯವನ್ನೂ ಜನರಿಗೆ ದಾನಮಾಡಿ, ಮನದಣಿಯೆ ನಲಿದಾಡಿರುವನು. ತಮ್ಮ ದೇಶದವರು ಸಾಧಿಸಿದ ಕೆಲಸವನ್ನೂ, ಅವರ ಅಮಾನುಷವಾದ ಧೈರ್ಯ, ಸ್ಥೈರ್ಯ, ಸ್ವಾವಲಂಬನಗಳನ್ನೂ ನೋಡಿ ಕವಿಯು ಮನಸ್ಸಿನಲ್ಲಿಯೇ ಅತ್ಯಂತ ಹರ್ಷಿತನಾಗಿರಬೇಕು. ಡಿ-ಗಾಮ ಮತ್ತು ಆತನ ಸಂಗಡಿಗರು ಸ್ವದೇಶಕ್ಕೆ ಹಿಂದಿರುಗಿದಾಗ, ಆತನ ಮನಸ್ಸಿನ ಸಂತಸವನ್ನು ಯಾರು ತಾನೆ ಬಲ್ಲರು! ಈ ಸಂದರ್ಭವನ್ನು ಕಾಮೊಯೆನ್ಸ್ ಕವಿಯು ಗಂಭೀರವಾಗಿಯೂ ಸ್ವಲ್ಪ ಕುಂಠಿತವಾಗಿಯೂ(wistful) ಇರುವಂತೆ ಸೂಚಿಸಿರುವನು:

"On full spread wings the navy springs away
And far behind them foams the ocean grey;
Afar the lessening hills of Ghauts fly;
And mix their dim blue summits with the sky."

ಇದರಂತೆಯೇ ವರ್ಷಗಳು ಕಳೆದನಂತರ ತನ್ನ ದೇಶಕ್ಕೆ ಮರಳುವಾಗ, ಕಾಮೊಯೆನ್ಸನಿಗೆ ಆ ತೀರವು ಹೀಗೆಯೇ ಬರುಬರುತ್ತ ಮಬ್ಬಾಗಿರಬೇಕು. ಸಾಗರದ ನೀಲ, ಬೆಟ್ಟದ ನೀಲ, ಅಂಬರದ ನೀಲವರ್ಣಗಳು ಮಿಲನವಾಗಿ, ಕೊನೆಗೆ ಎಲ್ಲವೂ ಮಾಯವಾಗಿರಬೇಕು. ಆದರೆ ಆ ವ್ಯಾಕುಲದ ವೇಳೆಯಲ್ಲಿ ಇಂತಹ ಪುಣ್ಯಚರಿತೆಯಾದ ಭೂಮಿಯನ್ನು ಕಂಡ—ಅಲ್ಲಿ ಜೀವಿಸಿದ್ದ—ಅದರ ಕತೆಯನ್ನು ಮಹಾಕಾವ್ಯದಲ್ಲಿ ಚಿರಸ್ಥಾಯಿಯನ್ನಾಗಿ ಮಾಡಿದೆನೆಂಬ ಭಾವನೆಯು ಆತನಿಗೆ ತಿಳಿದಿರಬಹುದೆ? ತಿಳಿದು ಕಲಮಟ್ಟಿಗೆ ಸಮಾಧಾನಪಟ್ಟಿರಬಹುದೆ?"

ಹಿಂದುಸ್ಥಾನದವರಾದ ನಮಗೆ ಕಾಮೊಯೆನ್ಸನ ಮಹಾಗ್ರಂಥವಾದ ಲ್ಯೂಸಿಯಾಡ್ ಕಾವ್ಯದಿಂದ ಕಲಿಯಬಹುದಾದ ಪಾಠಗಳು ಬಹಳವಾಗಿವೆ. ಗ್ರೀಕ್ ರೋಮನ್ನರ ಗ್ರಂಥಗಳಾದ ಇಲಿಯಡ್, ಏನಿಯಡ್, ಒಡಿಸೆ (Iliad, Aeneid and Odessey) ಮುಂತಾದ ಗ್ರಂಥಗಳು, 'ಸಾಗಾ' (Sagas)ಗಳು ಸ್ವದೇಶದ ಬಗ್ಗೆ ಹೆಮ್ಮೆಪಡಬೇಕಾದ—ಪಡಬಹುದಾದ ಮಹದ್ಗ್ರಂಥಗಳು. ಇಂತಹ ರಚನೆಗಳು ನಮ್ಮಲ್ಲಿ ಇಲ್ಲವೆಂದರೆ ಯಾರ ಮೇಲೂ ದೋಷಾರೋಪಣೆ ಮಾಡಿದಂತಾಗುವುದಿಲ್ಲ. ಹೋಮರನು ಏಷ್ಯಾಖಂಡದಲ್ಲಿಯ ಗ್ರೀಕರ ಅಗ್ಗಳಿಕೆಯನ್ನು ಕುರಿತು ಹಾಡಿದಾಗ ಸ್ವದೇಶದ ಉನ್ನತಿಯನ್ನು ಮನಸ್ಸಿನಲ್ಲಿಟ್ಟಿದ್ದನು. ವರ್ಜಿಲನು ರೋಮಸಾಮ್ರಾಜ್ಯದ ಸ್ಥಾಪನೆಯನ್ನು ಬರೆದಾಗ, ಸ್ವದೇಶದ ಪ್ರೀತಿಯನ್ನು ಮರೆತಿರಲಿಲ್ಲ. "ಸಾಗಾ"ಗಳನ್ನು ಬರೆಯುವಾಗ ಸ್ಕ್ಯಾಂಡಿನೇವಿಯಾ—ಐಸ್‌ಲೆಂಡಿನ (Scandinavia and Iceland) ಜನರು ಮಾಡಿದ ಸಾಹಸಕೃತ್ಯಗಳನ್ನು ತಮ್ಮ ಹೃದಯದಲ್ಲಿಟ್ಟು, ಜನರಲ್ಲಿ ಉತ್ತೇಜನವನ್ನು ಬೀರಲು ಆ ದೇಶದ ಕವಿಗಳು ಅವುಗಳ ನೆನಪನ್ನು ಕಾದಿಟ್ಟರು. "ಜೆರುಸಿಲೆಂ ಲಿಬೆರೇಟಾ" (Tasso's Jerusalem Liberata) ವಿನಲ್ಲಿಯೂ ಇದೇ ಭಾವನೆಯು ಒಡಮೂಡಿ ಹೊರಬೀಳುವುದು. ಆದರೆ ಹಿಂದುಸ್ಥಾನದ ಎರಡು ಮಹಾಕಾವ್ಯಗಳಲ್ಲಿಯೂ ಹೆಚ್ಚಾಗಿ ಧರ್ಮಸಂಬಂಧವಾದ ವಿಷಯಗಳಿರುವುವೇ ಹೊರತು, ಮೇಲಿನ ಗ್ರಂಥಗಳಲ್ಲಿರುವಂತೆ ಸ್ವಾಭಿಮಾನ—ಸ್ವದೇಶಭಿಮಾನ—ಸ್ವಜನಾಭಿಮಾನಗಳಿರುವುದಿಲ್ಲವೆಂದು ಹೇಳಲು ದುಃಖವಾಗುತ್ತದೆ. ಅದರಲ್ಲಿಯೂ ಮಹಾಭಾರತದಲ್ಲಿ ವರ್ಣಿತವಾಗಿರುವ ವಿಷಯವೆಂದರೆ ಅಂತಃಕಲಹದ ಹೊರತು ಹೆಚ್ಚೇನೂ ಇಲ್ಲ. ಇದೇ ಅಂತಃಕಲಹದಿಂದ ನಾಡಿನ ನಾಶವು ಆರಂಭವಾಯಿತೆಂದರೆ ಐತಿಹಾಸಿಕದೃಷ್ಟಿಯುಳ್ಳವರು ಯಾರೂ ಹಳಿಯಲಾರರು. ಮಿಲ್ಟನ್ (Milton) ಕವಿಯ "ಪ್ಯಾರಡೈಸ್ ಲಾಸ್ಟ್" (Paradise Lost) ಎಂಬ ಕಾವ್ಯದ ವಿಚಾರದಲ್ಲಿ ಡ್ರೈಡನ್ (Dryden) ಮಾಡಿರುವ ಆರೋಪಣೆಯು ಮಹಾಭಾರತದ ವಿಷಯದಲ್ಲಿಯೂ

CC-0. Jangamwadi Math Collection. Digitized by eGangotri

ನಿಜವೆಂದು ತಿಳಿಯಬೇಕಾಗುವುದು. ರಾಮಾಯಣದಲ್ಲಿ ದೇವತೆಗಳು, ಯಕ್ಷ, ಕಿಂಪುರುಷರುಗಳು, ದೈತ್ಯರು, ವಾನರರು ಇವರ ಸಂಖ್ಯೆಯೇ ಹೆಚ್ಚು. ಮಾನವರ ಸಂಖ್ಯೆಯು ಬಹುಕಡಿಮೆಯೆನ್ನಬಹುದು. ಆದುದರಿಂದ ಸಿಂಹಳವಿಜಯವಾಯಿತೆಂದು ಹೇಳಲು ಧೈರ್ಯ ಸಾಲುವುದಿಲ್ಲ.

ಪಾಶ್ಚಾತ್ಯರ ಮಹಾಗ್ರಂಥಗಳ ಪಠನದಿಂದ ಭಾರತವಾಸಿಗಳು ಎಚ್ಚೆತ್ತರೆ ಉತ್ತಮವಾಗುವುದು. ಅದರಿಂದ ದೇಶದ ಮಾನವು ಬೆಳೆದಂತೆ ಕವಿಯ ಕೀರ್ತಿಯೂ ಬೆಳೆಯುವುದು. ಭರತಖಂಡದ ಇತಿಹಾಸದಲ್ಲಿ ಮಹಾಕಾವ್ಯಕ್ಕೆ ಯೋಗ್ಯವಾಗುವ ಕಥಾವಸ್ತುಗಳುಂಟು; ರಚನೆಯು ಕಠಿನವಾಗುವುದಿಲ್ಲ.

ಮುಂದೆ ನುಗ್ಗಿಬಂದ ವೇದಧರ್ಮಿಗಳು, ಅವರಿಂದ ಉಂಟಾದ ಆತ್ಮವಿಕಾಸ ಇವುಗಳನ್ನು ಕುರಿತು ಬರೆಯಬಹುದು; ಝೀಲಂನದೀತೀರದಲ್ಲಿ ಯವನರಿಗೆ ಕೈತೋರಿಸಿದ ಪೌರಸನ ಇತಿಹಾಸವುಂಟು; ಮೊದಲು ರಕ್ತದಿಂದ ಕೈತೊಳೆದು ಕೊನೆಗೆ ಬೌದ್ಧಧರ್ಮಾವಲಂಬಿಯಾಗಿ, ಇಡೀ ಪೃಥ್ವಿಯಲ್ಲಿ ದಯಾಪಥವನ್ನು ಬೀರಿದ ಅಶೋಕ ಸಮ್ರಾಟನುಂಟು; ಅಖಂಡಭಾರತವರ್ಷವನ್ನು ತನ್ನ ಜೆಳ್ಗೊಡೆಯಲ್ಲಿ ಸೇರಿಸಿಕೊಂಡು ಆಳಿದ ಸಮುದ್ರಗುಪ್ತನುಂಟು; ದೇಶವನ್ನು ಉಳುಹುವುದಕ್ಕಾಗಿ ತನ್ನ ಆತ್ಮವನ್ನೇ ದಾನವಾಗಿ ಇತ್ತ ಪೃಥ್ವೀಸಿಂಹನುಂಟು. ಹಿಂದೂಧರ್ಮವನ್ನು ಕಾಯ್ದು ಕೊನೆಗೆ ಸಾಮ್ರಾಜ್ಯವನ್ನೇ ತುತ್ತಾಗಿ ಇತ್ತ ವಿಜಯನಗರವುಂಟು; ಇವುಗಳಲ್ಲಿ ಯಾರನ್ನಾದರೂ ಆಯ್ದುಕೊಂಡು, ಅವರ ಕಾರ್ಯಗಳನ್ನು ಮಹಾಕಾವ್ಯವಾಗಿ ಮಹಾಗ್ರಂಥವಾಗಿ ರಚಿಸಬಹುದು. ನಮ್ಮಲ್ಲಿ ಕವಿಗಳಿಗೆ, ಲೇಖಕರಿಗೆ ಕೊರತೆಯಿಲ್ಲ; ಅವರ ಪ್ರತಿಭೆಗೆ ಕುಂದಿಲ್ಲ; ಕಾವ್ಯವನ್ನು ಉತ್ತಮರೀತಿಯಿಂದ ಬರೆಯಬಹುದು.

ಭಿಷಗ್ರತ್ನ ಆಯುರ್ವೇದವಿದ್ವಾನ್ ಬಿ.ವಿ.ಪಂಡಿತರ
ಶ್ರೀಕರ ಕಸ್ತೂರಿಮಾತ್ರೆ
ಮಕ್ಕಳ ಮತ್ತು ದೊಡ್ಡವರ ಸಮಸ್ತ ಶೀತ ವಾತ ರೋಗಗಳಿಗೂ ಸಂಜೀವನ
4 ಅಣೆ
ಬಾಲಸಂಜೀವಿನಿ
ಮಕ್ಕಳಿಗೆ ಸುಖವಾಗಿ ಭೇದಿಮಾಡಿಸಿ ಅಜೀರ್ಣ ಜ್ವರಗಳನ್ನು ನಿಲ್ಲಿಸುತ್ತೆ
4 ಅಣೆ
ಸದ್ವೈದ್ಯ ಶಾಲಾ ನಂಜನಗೂಡು

CC-0. Jangamwadi Math Collection. Digitized by eGangotri

ಕರ್ನಾಟಕದ ಸಾಹಸ! ಕರ್ನಾಟಕದ ಕೀರ್ತಿ!!

# ಮೈಸೂರು ಇನ್ಷ್ಯೂರೆನ್ಸ್ ಕಂಪೆನಿ

ಪೋಷಕರಿಗೂ ದೇಶಕ್ಕೂ ನಿರ್ವಂಚಿತವಾದ ಶ್ರದ್ಧಾಯುತ ಸೇವೆ ಸಲ್ಲಿಸಲು ಆಡಳಿತಮಂಡಳಿಗಿರುವ ಉತ್ಸಾಹವೇ "ಮೈಸೂರು" ಅಭ್ಯುದಯದ ಜೀವಾಳ.




## ಮೂರನೇ ವರ್ಷದ ಡೈರೆಕ್ಟರುಗಳಿಂದ ಅಂಗೀಕೃತವಾದ ವರದಿಯ ಕೆಲವು ಮುಖ್ಯಾಂಶಗಳು.

(೧) ಕಳೆದ ವರ್ಷಕ್ಕಿಂತ ಜೀವವಿಮಾ ನಿಧಿಯು ಶೇಕಡ ೨೨ ರಷ್ಟು ಏರಿದೆ. (೨) ಹೊಸ ಉದ್ಯಮವು ಶೇಕಡ ೬೫ ರಷ್ಟೂ, ಪೂರ್ಣವಾದ ಉದ್ಯಮವು ಶೇಕಡ ೫೩ರಷ್ಟೂ ಏರಿದೆ.(೩) ಆಸ್ತಿ ರೂ.೧ ಲಕ್ಷಕ್ಕೆ ಮೀರಿದೆ.

**ಕಾರ್ಯಕ್ಷೇತ್ರವು ವಿಸ್ತಾರಗೊಳ್ಳುತ್ತಿದೆ.**

"ಮೈಸೂರು" ಮಾದರಿಸಂಸ್ಥಾನದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡು, ಕರ್ನಾಟಕದ ಇತರ ಭಾಗಗಳಲ್ಲೂ ಬ್ರಿಟಿಷ್ ಇಂಡಿಯಾ, ಬರ್ಮಾ ಸಿಲೋನ್‌ಗಳಲ್ಲೂ ವಿಜಯಿಯೆನಿಸಲು ಮುಂದಡಿಯಿಟ್ಟಿದೆ.

**ಬೇಕು!** ಕರ್ನಾಟಕದ ಎಲ್ಲ ಊರುಗಳಲ್ಲೂ, ಉಳಿದ ಬ್ರಿಟಿಷ್ ಇಂಡಿಯಾ, ಬರ್ಮಾ, ಸಿಲೋನ್‌ಗಳ ಎಲ್ಲ ಪ್ರಾಂತ್ಯಗಳಲ್ಲೂ ಕೇಂದ್ರಸ್ಥಳಗಳಲ್ಲೂ ಏಜಂಟರುಗಳೂ, ಸ್ಪೇಷಲ್ ಏಜಂಟರುಗಳೂ, ಚೀಫ್ ಏಜಂಟರುಗಳೂ, ಆರ್ಗನೈಜರುಗಳೂ ಬೇಕು. ಪ್ರತಿನಿಧಿಗಳಾಗಲಿಚ್ಛಿಸುವವರು ತಾವು ಕೊಡುವ ಉದ್ಯಮದ ಭರವಸೆಯನ್ನೂ ಕಾರ್ಯಕ್ಷೇತ್ರವನ್ನೂ ತಿಳಿಸುವುದು

ಹೆಚ್ಚು ವಿವರಗಳಿಗೆ ಬರೆಯಿರಿ:—

ಜನರಲ್ ಮ್ಯಾನೇಜರ್,

**ಮೈಸೂರು ಇನ್ಷ್ಯೂರನ್ಸ ಕಂಪೆನಿ ಲಿಮಿಟೆಡ್,**

"ನಾಗೇಶ್ವರ ಬಿಲ್ಡಿಂಗ್ಸ್", ಶ್ರೀನರಸಿಂಹರಾಜಾ ರೋಡ್, **ಬೆಂಗಳೂರು ಸಿಟಿ.**

ಎಷ್ಟು ಹಳೆಯ ಉನ್ಮಾದರೋಗವಾದರೂ, ಎಷ್ಟೇ ಭಯಂಕರವಾಗಿದ್ದರೂ, ಖಂಡಿತ ಗುಣ ಹೊಂದುವುದರಲ್ಲಿ ಸಂಶಯವೇ ಇಲ್ಲ. ಒಂದೇ ಒಂದು ವಾರದಲ್ಲಿ ಗುಣ ಕಂಡುಬರುವುದು. ಅಪಸ್ಮಾರ, ಹಿಸ್ಟೀರಿಯಾಗಳಿಗೂ ನಮ್ಮಲ್ಲಿ ಸಿದ್ಧೌಷಧಗಳಿವೆ. ೧ ವಾರದ ಔಷಧಕ್ಕೆ ಕ್ರಯ ರೂ. ೩—೮—೦

## ಉನ್ಮಾದ(ಹುಚ್ಚು)ರೋಗಕ್ಕೆ ಅಪ್ರತಿಮ ಚಿಕಿತ್ಸೆ

**ಸ್ವಪ್ನೇಂದ್ರಿಯ ಸ್ತಂಭನ:—** ಎಲ್ಲ ವಿಧದ ವೀರ್ಯದೋಷ ಮೂತ್ರ ದೋಷಗಳಿಗೆ ಸಿದ್ಧೌಷಧ. ೨ ವಾರಗಳ ಔಷಧಕ್ಕೆ ರೂ. ೩

ವಿ. ಸೂ. ನಮ್ಮ ಔಷಧದಲ್ಲಿ ಮಾದಕ ಅಥವಾ ವಿಷದ್ರವ್ಯಗಳು ಸೇರಿರುವವೆಂದು ರುಜುಪಡಿಸುವವರಿಗೆ ಮತ್ತು ನಮ್ಮ ಔಷಧಸೇವನೆಯಿಂದ ನಾವು ಹೇಳುವ ರೋಗಗಳು ಗುಣ ಹೊಂದುವದಿಲ್ಲವೆಂದು ಸಿದ್ಧಪಡಿಸುವವರಿಗೆ ರೂ. ೧೦೦ ಬಹುಮಾನ ಕೊಡುತ್ತೇವೆ.

ಕೆಟಲಾಗಿಗಾಗಿ ಬರೆಯಿರಿ. ಏಜಂಟರು ಬೇಕು.

ಮೂಳ ನಾರಾಯಣಭಟ್ಟ, ಸಿದ್ಧೌಷಧ ಭವನ, ಪೋಸ್ಟು ವಿಟ್ಲ. ದ. ಕನ್ನಡ.

CC-0. Jangamwadi Math Collection. Digitized by eGangotri

# ಮುತ್ತಿನ ಸರ

ಶ್ರೀಯುತ ಕೆರೂರ ದತ್ತಾತ್ರೇಯ, ಬೆಳಗಾಂವಿ.

ಸರಸ್ವತೀ—ಮಾಧವರ ಸ್ವಾಭಾವಿಕ ಪ್ರೇಮವನ್ನು ಲೀಲೆಯೆ ಸಂಶಯದಿಂದ ಕಂಡಳೆಂದಮೇಲೆ, ಸರಸ್ವತಿಯ ಅತ್ತೆಯಂತಹ ಹಳೆಯ ಹೆಂಗಸರು ಹೇಗೆ ನೋಡಬಹುದು? ಪಾಪ! ಮಾಧವನು ಮಮತೆಯಿಂದ ಕೊಟ್ಟ ಮುತ್ತಿನ ಸರವು ಸರಸ್ವತಿಯ ಬಾಳಿಗೆ ಮುಳ್ಳಿನ ಸರವಾಯಿತು. ಮಗುವಿಗೆ ಕುಡಿಸಿದಹಾಲು ವಿಷವಾಗಿ ಪರಿಣಮಿಸುವ ವಿಷಮಸಂದರ್ಭಗಳೂ ಇರುತ್ತವೆಯಲ್ಲವೇ?

## ೧

ಬೆಂಗಳೂರು
೨೩-೨-೩೧

ಪ್ರಿಯರ ಚರಣಗಳಲ್ಲಿ,

ಅನೇಕ ವಂದನೆಗಳು. ನಾನು ತಮ್ಮನ್ನು ಬಿಟ್ಟು ಇಲ್ಲಿಗೆ ಬಂದು ನಾಲ್ಕುದಿನಗಳಾದುವು. ನನ್ನ ಅಣ್ಣನ ಮಗುವಿಗೆ ಹೆಸರಿಡುವ ನೆವದಿಂದ ತಮ್ಮ ಅಪ್ಪಣೆ ಪಡೆದು, ಇಲ್ಲಿಗೆ ಸುಖವಾಗಿ ಬಂದು ತಲ್ಪಿದೆ. ನಮ್ಮ ಮನೆಯವರಿಗೆಲ್ಲ ಇಲ್ಲಿ ಒಂದು ಹಬ್ಬ. ನನ್ನ ತಾಯ್ತಂದೆಗಳಿಗೆ ತಮ್ಮ ಜೀವಮಾನದಲ್ಲಿ ಒಬ್ಬ ಮೊಮ್ಮಗನನ್ನು ಕಂಡೆವೆಂದು ಹಿಗ್ಗು; ನನ್ನ ಅತ್ತಿಗೆ ಶಾರದೆಗೆ 'ಚೊಚ್ಚಲು ಗಂಡುಕೂಸನ್ನು ಪಡೆದೆನಲ್ಲ!' ಎಂಬ ಉಲ್ಲಾಸ. ಅಣ್ಣನ ಆನಂದವನ್ನು ಬೇರೆಯಾಗಿ ಹೇಳಬೇಕೆ? ನಾನು ಒಲ್ಲೆನೆನ್ನುತ್ತಿದ್ದರೂ ಹೆಸರಿಟ್ಟುದಕ್ಕಾಗಿ ಐವತ್ತುರೂಪಾಯಿ ಬೆಲೆ ಬಾಳುವ ಸೀರೆಯೊಂದನ್ನು ಉಡುಗೊರೆ ಕೊಟ್ಟಿದ್ದಾನೆ. ಆ ಸೀರೆಯ ಅಂದವನ್ನು ಕಣ್ಣಿನಿಂದ ನೋಡಬೇಕೇ ಹೊರತು, ಬಾಯ ಮಾತಿನಲ್ಲಿ ಬಣ್ಣಿಸಲಿಕ್ಕಾಗದು.

ಇವರ ಆನಂದೋತ್ಸವಕ್ಕೆ ಪುತ್ರಪ್ರಾಪ್ತಿಯೊಂದೇ ಕಾರಣವಲ್ಲ. ನನ್ನ ಆಗಮನವೂ ಕಾರಣವಾಗಿದೆಯೆಂದು ಹೇಳಬಹುದು. ಎಲ್ಲರಿಗೂ ನನ್ನ ವಿಷಯಕ್ಕೆ ತುಂಬ ಪ್ರೀತಿ. ಅಹುದು, ನಮ್ಮ ಮನೆಯವರೆಲ್ಲರೂ ಅಷ್ಟು ಪ್ರೀತಿಭಾವದವರೇ ಆಗಿರುವರು. ಸರಸ್ವತಿಗೆ ಇದನ್ನೆಲ್ಲ ತೋರಿಸಬೇಕೆಂದು ಅವಳನ್ನು ಇಲ್ಲಿಗೆ ಕರೆತರಲು ಎಷ್ಟೆಷ್ಟೋ ಒತ್ತಾಯಮಾಡಿದರೂ ಆಗಲಿಲ್ಲ. ಹೋಗಲಿ, ನೀವಾದರೂ ಈ ಆನಂದದಲ್ಲಿ ಭಾಗಿಗಳಾಗಲು ಇಲ್ಲಿ ಇದ್ದರೆ....?

ಸರಸ್ವತಿಯ ನೆನಪಾದುದರಿಂದ, ಅವಳ ವಿಷಯವಾಗಿ ಒಂದು ಕಟುವಿಷಯವನ್ನು—ನನ್ನಲ್ಲಿ ಇಟ್ಟುಕೊಳ್ಳಲಾಗದ್ದರಿಂದ—ಹೇಳುತ್ತೇನೆ. ಮೊನ್ನೆಯ ದಿನ ತಾವು ಅವಳಿಗೆ ಐನೂರು ರೂಪಾಯಿಯ ಮುತ್ತಿನ ಸರವನ್ನು ಉಡುಗೊರೆಯಾಗಿ ಕೊಟ್ಟಿರಲ್ಲ; ಅದೇಕೆ? ನಾನು ಹರಳೋಲೆಗಳನ್ನು ಬೇಡಹತ್ತಿ ಆರು ತಿಂಗಳಾದರೂ ನನಗೆ ತಂದು ಕೊಡದೆ, ಮಿತವ್ಯಯದ ಉಪನ್ಯಾಸವನ್ನೇ ಕೊಡುತ್ತಿದ್ದಿರಿ. ಅವಳಿಗೆ ಬೇಡವಾಗಿದ್ದರೂ ಒತ್ತಾಯಪಡಿಸಿ ಕೊಟ್ಟಿರಲ್ಲ! ಪತ್ನಿಯಾಗಬಹುದಾಗಿದ್ದ ಅವಳನ್ನು ತಂಗಿಯೆಂದು ಗೌರವಿಸಿ ಉಡುಗೊರೆಯಿತ್ತು, ಅವಳಿಗೇ ಸೋಲುವಿರೆಂದು ನಾನೆಣಿಸಿರಲಿಲ್ಲ. ಈಗೇನು ಮಾಡುವುದು? ನಿಮ್ಮ ತಂದೆ—ಅವಳ ಸೋದರಮಾವ—ಇದ್ದಿದ್ದರೆ ನಿಮ್ಮ ಬಣ್ಣ ತಿಳಿಯುತ್ತಿತ್ತು.

ಇದೇನು, ನಾನು ಮಿತಿಮೀರಿ ಗಳಹಹತ್ತಿದೆ. ಸಿಟ್ಟಿನ ಭರದಲ್ಲಿ ಏನೇನೋ ಬರೆದೆ. ಎಷ್ಟಾದರೂ ನಾನು ನಿಮ್ಮ ಹೆಂಡತಿಯು; ತಿಳಿಯದೆ ನುಡಿದ ಎಲ್ಲವನ್ನೂ ಕ್ಷಮಿಸುವಿರೆಂದು ಆಶಿಸುತ್ತೇನೆ. ನಿಮ್ಮವಳಾಗಿ ಎರಡುವರ್ಷಗಳಲ್ಲಿಯೇ ಇಷ್ಟು ಸ್ವಾತಂತ್ರ್ಯವನ್ನು ವಹಿಸಿದ್ದಕ್ಕಾಗಿ ಕ್ಷಮೆಯನ್ನು ಕೋರುವ

ನಿಮ್ಮಡಿಗಳ ದಾಸಿ
**ಲೀಲಾ.**

CC-0. Jangamwadi Math Collection. Digitized by eGangotri

## ೨

ವಿಜಾಪುರ

೨೫-೨-೩೧

ಅಣ್ಣಾ,

ನಾನು ನಿಮ್ಮಲ್ಲಿಂದ ಹೊರಟು ಸುರಕ್ಷಿತವಾಗಿ ಇಲ್ಲಿಗೆ ಬಂದು ಇಂದಿಗೆ ಒಂಬತ್ತು ದಿನಗಳಾದುವು. ಈಗ ನಾಲ್ಕೈದು ದಿನಗಳಿಗೆ ಮೊದಲೇ ಬರೆದ ನನ್ನದೊಂದು ಬೇರೆ ಪತ್ರ ಮುಟ್ಟಿರಬಹುದು. ಆದರೆ ಮತ್ತೆ ನಾಲ್ಕು ದಿನಗಳಲ್ಲಿಯೇ ಇನ್ನೊಂದು ಪತ್ರ ಬರೆಯಬೇಕಾಗ ಬಂದಿದೆ. ಅಂತಹ ಅಗತ್ಯದ ಕಾರಣವೇನೆಂದು ನಿನಗೆ ಅಚ್ಚರಿಯಾಗಬಹುದು. ಅದನ್ನೇ ಹೇಳಲು ಈ ಸದ್ಯದ ಕಾಗದ ಬರೆಯುತ್ತಲಿದ್ದೇನೆ.

ನಾನು ಬರುವಾಗ ನೀನು ಉಡುಗೊರೆಯಾಗಿ ಕೊಟ್ಟ ಮುತ್ತಿನ ಸರವೇ ಇದಕ್ಕೆ ಕಾರಣ. ನಾನೆಷ್ಟು ಒಲ್ಲೆನೆಂದರೂ ಕೇಳದೆ ನೀನದನ್ನು ಕೊಟ್ಟೆ. ನಮ್ಮ ಆಂತರಿಕ ಸ್ನೇಹದ ಕುರುಹಾಗಿ ಈ ಸರವೇ ಬೇಕಾಗಿದ್ದಿತೇ? ಅದನ್ನು ಕೊಟ್ಟರೆಯೆ ನಮ್ಮಲ್ಲಿ ಪ್ರೇಮವಿದೆಯೆಂದು ಸಿದ್ಧಪಡಿಸಿದಂತಾಯಿತೇ? ಇಲ್ಲವಾದರೆ ಇಲ್ಲವೆಂದು ನಿನ್ನ ನಂಬುಗೆಯೆ? ನಮ್ಮ ಸ್ನೇಹವು ಇದನ್ನು ಬೇಡುತ್ತಿರಲಿಲ್ಲ. ತಂದುಕೊಟ್ಟೆ, ಅದನ್ನು ಕೂಡ ಲೀಲಾವತಿಯ ಕೈಯಿಂದ ಕೊಡಿಸಬೇಕೇ? ಅವಳೆಷ್ಟು ನೊಂದುಕೊಂಡಿರುವಳೋ! ತಾನು ಹರಳೋಲೆ ಬೇಡಹತ್ತಿ ಆರು ತಿಂಗಳುಗಳಾದುವೆಂದು ನನ್ನೆದುರು ಆಕೆ ಹೇಳುತ್ತಿದ್ದಳು. ಆಕೆಗೆ ತಂದುಕೊಟ್ಟಿದ್ದರೆ ನಿಜವಾಗಿಯೂ ಎಲ್ಲ ರೀತಿಯಿಂದಲೂ ಸಮಾಧಾನಕರವಾಗುತ್ತಿತ್ತು. ಲೀಲಾವತಿಯು ಹಟಮಾರಿಯೆಂದು ನಾನು ಹೀಗೆ ಹೇಳುವುದಿಲ್ಲ. ಅವಳು ಬಹು ಪ್ರೇಮಲಸ್ವಭಾವದವಳಾದರೂ ಹುಡುಗತನವು ಇನ್ನೂ ಪೂರ್ಣವಾಗಿ ಹೋಗಿಲ್ಲ; ಆದುದರಿಂದಲೇ ಆಕೆ ಹಟಮಾರಿಯಂತೆ ಕಾಣುವಳು. ಅಣ್ಣಾ, ಸತಿಯರು ಹಾಗಿರುವುದೇ ಒಳ್ಳೆಯದು—ತಮ್ಮ ಸಂಸಾರವನ್ನು ಸುಖಮಯವಾಗಿರಿಸಲಿಕ್ಕೆ.

ನೀನು ಪ್ರೀತಿಯಿಂದ ತಂದುಕೊಟ್ಟ ಹಾರದ ಸಲುವಾಗಿ ಇಷ್ಟೇಕೆ ಉರಿದೆದ್ದಿರುವೆನೆಂಬುದನ್ನು ಕೇಳು. ಆ ಸರವನ್ನು ನಮ್ಮ ಅತ್ತೆಯವರಿಗೆ ತೋರಿಸಿದೆ. ಅವರು ನೋಡಿ ಮುಖ ಕಿವುಚಿದರು. ಇದೇನೆಂದು ಕೇಳಿದೆ. "ಏನೂ ಇಲ್ಲ; ನಿನ್ನ ಗಂಡನಿಂದ ತಂದುಕೊಡುವುದಕ್ಕಾಗದಿದ್ದರೆ ಬೇರೆಯವರಾದರೂ ಇದ್ದಾರಲ್ಲ; ಅವನಂಥವರು ತಂದು ಕೊಡಲಿಕ್ಕೆ!" ಎಂದರು. ನಾನು ಬಂಧು ಬಳಗದ ಮನೆಯಲ್ಲಿ ತಮ್ಮ ಮರ್ಯಾದೆ ಕಡಿಮೆಯಾಗಿದ್ದುದರ ಸಿಟ್ಟು ನನ್ನ ಮೇಲೆ ಇದ್ದೇ ಇತ್ತು. ಈ ಸಂಧಿಯನ್ನು ಸಾಧಿಸಿ ಈ ವಾಗ್ಬಾಣವನ್ನು ಬಿಟ್ಟರು. ನನ್ನ ಅವರ ನಡುವೆ ಸಣ್ಣ ವಾಗ್ಯುದ್ಧವೇ ಆಯಿತು. ಅಂದಿನಿಂದ ನಾನದನ್ನು ಹೊರಕ್ಕೆ ತೆಗೆದೇ ಇಲ್ಲ. ಮನೆಯಲ್ಲಿ ಕಲಹಕ್ಕೆ ಕಾರಣವಾದ ಆ ಸರವನ್ನು ನೀನು ಕೊಟ್ಟಿರದಿದ್ದರೆಯೆ ಒಳಿತಾಗುತ್ತಿತ್ತು.

ಪತಿರಾಯರ ಪತ್ರವಿನ್ನೂ ಆಲುಗಾಡಿಲ್ಲ. ಅಂತೆಯೆ ತುಸು ಧೈರ್ಯ. ತಾಯಿಯ ಮಾತನ್ನು ನಂಬುತ್ತಿರುವ ಅವರ ಮನಸ್ಸು ಹೇಗೆ ಒಲೆದೀತೆಂಬುದರ ನಿಯಮವಿಲ್ಲ. ಏನಾದರೇನು? ನನ್ನ ಪಾವಿತ್ರ್ಯ ನನ್ನ ಬೆಂಬಲಕ್ಕೆ ಇದ್ದೇ ಇರುವುದಲ್ಲ!

ಉಳಿದುದೆಲ್ಲ ನೆಟ್ಟಗೆ. ಹೆಚ್ಚುಕಡಿಮೆ ಏನಾದರೂ ಆದರೆ ತಿಳಿಸುವೆನು. ಲೀಲಾವತಿಯು ತವರೂರಿಗೆ ಹೋಗಿರುವಳೋ ಹೇಗೆ?

ನಿನ್ನ ನಲವಿನ ತಂಗಿ
**ಸರಸ್ವತಿ.**

## ೩

ಬೆಳಗಾವಿ

೨೮-೨-೩೧

ತಂಗೀ,

ನಿನ್ನ ಪತ್ರಗಳೆರಡೂ ಮುಟ್ಟಿದುವು. ನಿನ್ನೆಯ ಪತ್ರದಲ್ಲಿ ನಿನ್ನ ಸ್ವಭಾವದ ಪೂರ್ಣ ದಿಗ್ದರ್ಶನವಾಗಿದೆ. ನಿನ್ನ ಭೀರುತ್ವವೇ ಮೂರ್ತಿಮತ್ತಾಗಿ ಆ ಪತ್ರದಲ್ಲಿ ಕಾಣುತ್ತಿದೆ. ಈ ವಿಷಮಜಗತ್ತಿನಲ್ಲಿ ಹೀಗೆ ಅಂಜಿದರೆ ಜೀವಿಸುವುದು ಹೇಗೆ? 'ಆಕಾಶವೇ ಕಳಚಿಬಿದ್ದರೆ ಏನುಮಾಡಬೇಕು?' ಎಂಬ ರೀತಿಯ ಸಂಶಯಗಳಿಂದ ಮನಸ್ಸನ್ನು ಹಣ್ಣು ಮಾಡಿಕೊಳ್ಳುವುದರಲ್ಲಿ ಏನು ಅರ್ಥವಿದೆ? ಆ ದಿನ ನಿನ್ನ ಅತ್ತೆಯ ಮನಸ್ಸು ಇನ್ನಾವ ಕಾರಣದಿಂದಲೋ ನೆಟ್ಟಗಿ ಲಿಕ್ಕಿಲ್ಲ. ಆದುದರಿಂದಲೆ ಏನಾದರೂ ಅಸಂಬದ್ಧ ಮಾತಾಡಿರಬೇಕು. ಇಷ್ಟು ಮನಸ್ಸಿಗೆ ಹಚ್ಚಿಕೊಳ್ಳಲು ಕಾರಣವೇನೂ ಇಲ್ಲ.

ಇನ್ನು ಇಂತಹ ಸಮಯದಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ನಿನ್ನಂತಹ ಸುಜ್ಞಳಿಗೆ ನಾನು ತಿಳಿಸಿಹೇಳಬೇಕಾಗ

ಪತಿಯನ್ನು ಮೆಚ್ಚಿಸಿ ನಿನ್ನ ಮುಷ್ಟಿಯೊಳಗಿಟ್ಟುಕೊ; ಅವನು ಕೂಡ ವಿಲಕ್ಷಣ ಸ್ವಭಾವದವನೇ ಇದ್ದಾನೆ. ಯಾರು ಹೇಗಿದ್ದರೇನು, ನಿನ್ನ ಅಂತರಂಗವು ವಿಶುದ್ಧವಾಗಿರಲು ಯಾರಿಗೂ ಹೆದರುವ ಕಾರಣವಿಲ್ಲ. ನಿನ್ನ ತಾಯ್ತಂದೆ-ಗಳು ಇನ್ನೂ ಸ್ವಲ್ಪ ಜಾಣರಾಗಿದ್ದರೆ.... !

ಲೀಲೆಯು ತವರೂರಿಗೆ ಹೋಗಿ ಆರು ದಿನಗಳಾದುವು. ಅವಳ ಕಡೆಯಿಂದ ಕೂಡ ಸುಖವಾಗಿದ್ದ ಬಗ್ಗೆ ಪತ್ರ ಬಂದಿದೆ. ನಿನ್ನ ಪತ್ರದ ಸಮಾಚಾರವನ್ನು ಅವಳಿಗೆ ಇಲ್ಲಿ ಬಂದ ನಂತರವೇ ತಿಳಿಸುವೆನು. ನೀನು ಜಾಗರೂಕ-ಳಾಗಿರು.

ನಿನ್ನ

ಮಾಧು.

೪

ಬೆಳಗಾವಿ

೨೮—೨—೩೧

ಲೀಲಾ,

ಓಲೆಯೊಂದಿಗೆ ನಿನ್ನ ಹೃದ್ಗತವೂ ಅರಿಕೆಯಾಯಿತು. ಸುಧಾರಿಸಿದವಳಲ್ಲವೇ ನೀನು! ಪರಸ್ತ್ರೀಯರೊಡನೆ ನಾಲ್ಕು ಮಾತುಗಳನ್ನು ಆಡಿದರೂ ಸಹಿಸಲಾರದ ಸುಧಾರಿಸಿದ ಹೆಂಗಳೆಯರು ಈಗಿನ ಕಾಲದವರು! ನೀನೂ ಸುಧಾರಿಸಿ-ದವಳೇ! ವಿದ್ಯೆಯ, ಸಂಸ್ಕೃತಿಯ ಪರಿಣಾಮ ನಿನ್ನಲ್ಲಿ ಅಸೂಯೆಯನ್ನೇ ಬೀರಿದ್ದಾದರೆ, ನೀನು ಕಲಿತದ್ದೆಲ್ಲ ಅನಾಗರಿಕತನ. ವಿದ್ಯಮಾನಗಳನ್ನೆಲ್ಲ ಅರಿತುಕೊಳ್ಳದಷ್ಟು ನಿನ್ನ ಬುದ್ಧಿ ಮಂಕಾಗಿರುವುದನ್ನು ನೋಡಿ ನನಗೆ ಆಶ್ಚರ್ಯ-ವಾಯಿತು. ನಿನಗೆ ಹರಳೋಲೆ ಸಿಕ್ಕಲಿಲ್ಲವೆಂದೇ ಈ ಮಾತು ಬಂದಿರಬಹುದು. ನಿಮ್ಮ ಆಭರಣದ ಹುಚ್ಚು ಅಂತಹದೆ; ಆದರೂ ಈ ಪರಿಯ ಕೀಳುತನವನ್ನು ನಿನ್ನಲ್ಲಿ ನಾನು ಕಂಡಿರಲಿಲ್ಲ. ಕಾರಣವೇನಿದೆಯೊ ಇದಕ್ಕೆ?

ನಿಮ್ಮಲ್ಲಿ ಎಲ್ಲಕಡೆಗೂ ಮನೆಯಲ್ಲಿ ಆನಂದ. ಆದರೆ ನೀನು ಇಲ್ಲಿಗೆ ಬೇಗನೆ ಬರಬೇಕೆಂದು ನನ್ನ ಇಚ್ಛೆ. ಸರಸ್ವತಿಯಿಂದ ಮೊನ್ನೆ ಬಂದ ಓಲೆಯನ್ನು ನಿನಗೆ ತೋರಿಸ-ಬೇಕಾಗಿದೆ. ಆದರೂ ನಿಮ್ಮ ಮನೆಯವರನ್ನು ನೋಯಿಸಿ ಬರಬೇಡ.

ಮಾಧು.

[illegible]

ಪತಿದೇವಾ,

ತಮ್ಮ ಪಾಕೀಟು ಮುಟ್ಟಿತು. ನನ್ನ ಕಣ್ಣು ತೆರೆ-ದಂತಾಗಿದೆ. ನಿಮಗೆ ಆ ಪತ್ರ ಬರೆಯುವಾಗ ನನ್ನನ್ನು ಯಾವ ಭೂತವು ಹಿಡಿದುಕೊಂಡಿತ್ತೋ ನಾನು ಕಾಣೆ. ಅದನ್ನೆಲ್ಲ ನೀವು ಮರೆತು ಬಿಡಬಹುದೆಂದು ನಾನು ಬಲವಾಗಿ ಆಶಿಸುತ್ತೇನೆ. ಆದರೆ ನೀವು ಇಷ್ಟೊಂದು ಮಾತ್ರ ಮಾಡಬೇಕು; ನಾನು ಅಲ್ಲಿಗೆ ಬಂದೊಡನೆ ಹರಳೋಲೆಗಳನ್ನು ತಂದುಕೊಡಬೇಕು. ಆಕೆಯ ಪತ್ರ-ವನ್ನು ಇಲ್ಲಿಗೇ ಕಳಿಸಿದ್ದರೆ ಆಗುತ್ತಿರಲಿಲ್ಲವೇ?

ನಾನು ಊರಿಗೆ ಹೊರಡುವ ಕುರಿತು ತಂದೆಯವರನ್ನು ಕೇಳಿದೆ. ಇನ್ನೆರಡು ದಿನ ಬಿಟ್ಟು ಹೋಗೆಂದರು. ಅಲ್ಲಿಗೆ ಏಳನೆಯ ತಾರೀಖಿಗೆ ಬರುತ್ತೇನೆ. ತಡವಾದದ್ದಕ್ಕಾಗಿ ಸಿಟ್ಟಾಗಲಾರಿರೆಂದು ನಂಬಿದ

ತಮ್ಮ ಪ್ರೇಮಾಸ್ಪದಳಾದ

ಲೀಲಾ.

೬

ವಿಜಾಪುರ

೮—೩—೩೧

ಈಗ ಹತ್ತು ದಿನಗಳಲ್ಲಿ ನಮ್ಮ ಮನೆಯಲ್ಲಿ ಘಟಿಸಿದ ಸ್ಥಿತ್ಯಂತರಗಳನ್ನು ನೋಡಿದ ಯಾರಿಗೂ ದಿಕ್ಕು ತಪ್ಪದೆ ಇರದು. ಮಾವನವರು ಥಿಯೆಟರ ಕಟ್ಟಿಸಲಿಕ್ಕೆ ಹತ್ತಿ ಎರಡು ವರ್ಷಗಳು ಸಂದುಹೋದುವು. ಇನ್ನೂ ಪೂರ್ತಿ-ಯಾಗಿಲ್ಲ. ಇದುವರೆಗೆ ಎಲ್ಲ ವ್ಯವಹಾರ ಪತ್ತಿನ ಮೇಲೆ ನಡೆದಿತ್ತು. ಇಪ್ಪತ್ತಿಪ್ಪತ್ತು ಸಾವಿರದ ವರೆಗೆ, ಪತ್ತಿನ ಮೇಲೆ ವ್ಯವಹಾರಮಾಡುವ ಮಾವನವರನ್ನು ನೋಡಿ ಅಭಿಮಾನ ಪಡುತ್ತಿದ್ದೆ. ಆದರೆ ಈಗ ನಾಲ್ಕು ದಿನಗಳ ಹಿಂದೆ ಕಟ್ಟಿಗೆಯ ವ್ಯಾಪಾರಸ್ಥನು ತನ್ನ ಹಣವನ್ನೆಲ್ಲ ಕೊಟ್ಟುಬಿಡಬೇಕೆಂದು ನೋಟೀಸು ಕೊಟ್ಟಿದ್ದಾನಂತೆ. ಅದನ್ನು ತೋರಿಸಿ ಮಾವನವರು, "ಆ ಕಟ್ಟಿಗೆಯವ-ನಿಗೇನೋ ಕೇಡು ಬಂದಿದೆಯಂತೆ; ಅವನ ಹಣವನ್ನು ನಾವಿನ್ನೆರಡು ದಿನಗಳಲ್ಲಿ ಮುಟ್ಟಿಸಬೇಕು. ಒಡವೆಗಳನ್ನು ಮಾರಿದರೂ ಅಡ್ಡಿಯಿಲ್ಲ." ಎಂದು ನನ್ನ ಓರಗಿತ್ತಿಯ

CC-0. Jangamwadi Math Collection. Digitized by eGangotri

ಆಭರಣಗಳನ್ನೆಲ್ಲ ಕೇಳಿ ತೆಗೆದುಕೊಂಡರು. ಇದನ್ನು ಕಂಡು ಭಾವನವರು ತಾಯಿ-ತಂದೆಯವರಿಗೆ ಬಾಯಿಗೆಬಂದಂತೆ ಮಾತನಾಡಿ, ತನ್ನವಳೊಡನೆ ಮನೆಬಿಟ್ಟು ಹೊರಟು ನಡೆದರು. ಅತ್ತೆಯವರು ಒಳಗಿಂದೊಳಗೇ ಕುದಿಯು-ತ್ತಿದ್ದರು. ಭಾವನವರಿಗೆ ಮಾರುತ್ತರ ಕೊಡುವ ಧೈರ್ಯ ನಮ್ಮ ಅತ್ತೆಯವರಲ್ಲಿಲ್ಲ.

ಆ ಮೇಲೆ ಮುತ್ತಿನ ಸರಕೊಡೆಂದು ನನ್ನನ್ನು ಕೇಳಿ-ದರು. ಒಮ್ಮೆ ಕೈಬಿಟ್ಟು ಹೋದ ಮೇಲೆ ತಿರುಗಿ ಸರ ಸಿಕ್ಕುವುದಿಲ್ಲವೆಂದು ನಂಬಿದ ನಾನು "ನಿಮ್ಮ ಬಂಗಾರದ ಒಡವೆಗಳನ್ನೆಲ್ಲ ತೆಗೆದುಕೊಳ್ಳಿರಿ, ಮುತ್ತಿನ ಸರವನ್ನು ಮಾತ್ರ ಕೊಡಲಾರೆನು" ಎಂದೆ. ಇದನ್ನು ಕೇಳಿ ಅತ್ತೆಯವರು ಉರಿದೆದ್ದರು. ತುದಿಮೊದಲಿಲ್ಲದ ಅಪಶಬ್ದಗಳ ಸುರಿಮಳೆಯೂ ಆಯಿತು. ಇದರಿಂದ ನಾನು ಅದನ್ನು ಕೊಡಲೇ ಕೂಡದೆಂದು ನಿರ್ಧರಿಸಿದೆನು.

ರಾತ್ರಿ ಇವರೇ ಬಂದು ಸರವನ್ನು ಕೇಳಿದರು. ಎಲ್ಲವನ್ನೂ ತಿಳಿಸಿ ಹೇಳಿ, ಅದನ್ನು ಕೊಡುವುದು ಅನಿಷ್ಟ-ವಾದದ್ದೆಂದು ಹೇಳಿದೆ. ಅದಕ್ಕವರು, "ಪ್ರಿಯಕರನ ವಸ್ತುಗಳನ್ನು ಪ್ರಿಯತಮೆಯರು ಕಾಯ್ದಿಡುವುದನ್ನು ಕೇಳಿದ್ದೇನೆ. ಆದರೆ ಅಣ್ಣನಿಂದ ಬಂದ ಒಡವೆಗಳನ್ನು ತಂಗಿ ಈ ಪರಿ ಜತನವಾಗಿಡುವುದನ್ನು ಕಂಡಿಲ್ಲ." ಎಂದರು. ಈ ಬಿರುನುಡಿ ಕೇಳಿ, ನಾನು ಸಿಟ್ಟಿಗೆದ್ದು ಸರವನ್ನು ಕೊಟ್ಟು ಬಿಡುವೆನೆಂದು ಬಗೆದಿದ್ದರೊ ಏನೋ! ಆದರೆ ನಾನು ಸತ್ತ್ವಶಾಲಿನಿಯ ಪ್ರಭಾವದಿಂದ, "ಇದೇನು ಈ ಪರಿ ನುಡಿಯುವುದು! ಚಾಡಿಯ ಮಾತನ್ನು ಕೇಳಿ, ಬಾಯಿಗೆ ಬಂದದ್ದನ್ನೆಂದು, ನನ್ನಂತಹ ಇನ್ನೆಷ್ಟು ಬಾಲಿಕೆಯರ ಜೀವನವನ್ನು ಸೂರೆಗೊಂಡಿದ್ದೀರಿ?" ಎಂದು ಕೇಳಿದೆ. ಅವರು ತಲೆಕೆಳಗೆ ಹಾಕಬೇಕಾಯಿತು. ನಾನು ಹೀಗೆ ಮಾಡಿದ್ದು ಉಚಿತವೇ?—ಎಂಬುದನ್ನು ನಾನರಿಯೆ.

ಮರುದಿವಸ ಅವರು ನನ್ನನ್ನೇನೂ ಕೇಳಲಿಲ್ಲ. ಆದರೆ ಕೇವಲ ಅಪರಿಚಿತಳಂತೆ ನಾನು ಅವರ ಅಧೀನಳಾಗಿರ-ಬೇಕಾಗಿದೆ. ಆದರೂ ಪತಿಯ ಆಶ್ರಯವು ಪೂರ್ಣ ತಪ್ಪಿಲ್ಲವೆಂಬುದನ್ನರಿತು ಇದ್ದ ಬೇವನ್ನೇ ಬೆಲ್ಲವನ್ನಾಗಿ ಭಾವಿಸಿರುವೆ.

ದುಃಖದಿಂದ ಮನಸ್ಸು ಹುಚ್ಚಾದಾಗ ನಿನ್ನ ನೆನಪಾಗು-ತ್ತದೆ. ಮತ್ತು ಈ ರೀತಿ ಅದನ್ನು ಹರಿಬಿಡುತ್ತೇನೆ. ನೀನೊಬ್ಬನೇ ನನ್ನ ದುಃಖದ ಪಾಲುಗಾರ.

ನಿನ್ನ
ಸರಸ್ವತಿ.

೭

ಬೆಳಗಾವಿ
೧೧-೩-೩೦

ಸರಸ್ವತಿ,

ಇಂತಹ ಸಮಯದಲ್ಲಿ ನನ್ನ ಕೈಯಲ್ಲಿರುವುದು ನಿನ್ನನ್ನು ಇಲ್ಲಿಗೆ ಕರೆಯಿಸಿಕೊಳ್ಳುವುದು. ನನ್ನ ಮನೆಯ ಬಾಗಿಲು ನಿನ್ನ ಸಲುವಾಗಿ ಯಾವಾಗಲೂ ತೆರೆದೇ ಇರುತ್ತದೆ. ಇನ್ನೊಮ್ಮೆ ಆ ಸರವನ್ನು ಅವರು ಬೇಡಿದರೆ ಕೊಟ್ಟುಬಿಡು. ಮತ್ತೆ ಕೊಡಿಸಲಿಕ್ಕೆ ದೇವರು ಶಕ್ತ-ನಿದ್ದಾನೆ.

'ಅವರನ್ನು' ಅಲ್ಲಿ ಬಿಟ್ಟು ನೀನು ಇಲ್ಲಿಗೆ ಬಾರೆಂದು ನಾನೆಂದೂ ಒತ್ತಾಯ ಮಾಡುವುದಿಲ್ಲ. ಏಕೆಂದರೆ ಅದು ಸತೀತ್ವದ ದ್ರೋಹಮಾಡಿದಂತಾಗುತ್ತದೆ. ಆದರೆ ನಿನಗೆ ಅಲ್ಲಿಯ ವಾಸವು ತೀರ ಅಶಕ್ಯವಾದರೆ ಹೊರಟು ಬಂದುಬಿಡು! ಮುಂದೆ ಸಾಧ್ಯವಿದ್ದದ್ದನ್ನು ಮಾಡೋಣ! ಹೆಚ್ಚಿಗೆ ನಾನೇನು ಹೇಳಲಿ?

ಲೀಲಾ ಮೊನ್ನೆ ಇಲ್ಲಿಗೆ ಮರಳಿ ಬಂದಿದ್ದಾಳೆ.

ನಿನ್ನ
ಮಾಧು.-

೮

ವಿಜಾಪುರ
೨೫-೩-೩೦

ಅಣ್ಣಾ,

ಇನ್ನೊಮ್ಮೆ ಅವರು ಕೇಳಿದರೆ ಸರವನ್ನು ಕೊಟ್ಟು-ಬಿಡೆಂದು ಹೇಳಿದ್ದೆಯಲ್ಲವೇ! ಆದರೆ ಅತ್ತೆಯವರು ಸರ ಕೇಳಲಿಲ್ಲ. ನಿನಗೆ ಕಳಿಸಿಕೊಡೆಂದರು. ಅದು ಹೀಗೆ:

ಮಾವನವರು ಮತ್ತೆಲ್ಲಿಂದಲೋ ಹಣದೊರಕಿಸಿ ಋಣ ತೀರಿಸಿದರು. ಆ ಬಳಿಕಿನ ಮಾತು. ಮೊನ್ನೆ ಅವರು ಮತ್ತೆ ಕೇಳಿದರು 'ಅಂದು ಸರವನ್ನೇಕೆ ಕೊಡಲಿಲ್ಲ?' ಎಂದು. ಯಾವ ಏಳು ಜನ್ಮದ ವೈರಿಯೋ ಈ ಅತ್ತೆ ನಾನು ಕಾಣೆ. "ತನ್ನ ಹುಟ್ಟುವ ಮಗುವಿಗೆ ಕಾಣಿಕೆಯೆಂದು ಅವಳ ಮಾಧೂ ಅವಳಿಗೆ ಕೊಟ್ಟಿದ್ದಾನೆ. ಅದನ್ನು ಹೇಗೆ ಕೊಡುವುದು?" ಎಂದಳು. ಮಾವನವರಿಗೆ ಅರ್ಥವಾಗ-ಲಿಲ್ಲವೋ ಏನೋ, ತೆಪ್ಪಗೆ ಕುಳಿತಿದ್ದರು. ಅತ್ತೆಯು ಮಹಾ-ಕಾಳಿಯ ರೂಪಕ್ಕೆ ಅಂಜಿದ್ದರೇನೋ ಪಾಪ! ಹಾಗೆಯೇ ಇರಬಹುದು! ನನ್ನ ಮೇಲೆ ಆಕಾಶವೇ ಕಳಚಿ

CC-0. Jangamwadi Math Collection. Digitized by eGangotri

ಬಿದ್ದಂತಾಯಿತು. ನಾನು ಇನ್ನೂ ಹೇಗೆ ಜೀವಿಸಿರುವೆನೊ ಎನಿಸಿತು.

ರಾತ್ರಿ ಇವರ ಮುಂದೆ ಇದನ್ನೆಲ್ಲ ಹೇಳಿ, ಇದೇ ರೀತಿ ಇನ್ನುಮುಂದೆ ನಡೆದರೆ ನನ್ನ ಜೀವನವು ಅಶಕ್ಯವಾಗುವುದೆಂದು ಬೇಡಿಕೊಂಡೆನು. ಆದಕ್ಕವರು, "ಮನೆಯ ಮಾನವನ್ನೇ ಲಕ್ಷ್ಯಕ್ಕೆ ತಾರದ ಸ್ವಾರ್ಥಿ ನೀನು! ನಮ್ಮ ತಾಯಿಯಂತಹ ಸತ್ಯವಂತರಾರೂ ಇಲ್ಲ; ಅವಳು ನುಡಿದದ್ದೇ ಸತ್ಯ" ಎಂದರು. 'ನೀವೂ ಹೀಗೆ ಕಠಿನಚಿತ್ತರಾದರೆ ಹೇಗೆ?' ಎಂದು ಕೇಳಿದೆ. 'ನಮ್ಮ ಮನೆತನದ ಅಭಿಮಾನವಿಲ್ಲದ ನಿನಗೆ ಮಾಧೂನೇ ಜೋಡಿ' ಎಂದರು. ಮುಂದೆ ಒಂದು ಶಬ್ದವನ್ನು ಕೂಡ ಆಡಲಿಲ್ಲ. ನನ್ನಗತಿ ಇಂದೇ ಮುಗಿಯಿತೆಂದೆ. ನಾಳಿನ ಸೂರ್ಯ ನನ್ನ ವನಲ್ಲವೆಂದು ಮನಸ್ಸಿನಲ್ಲಿ ಅಂದುಕೊಂಡೆ.

ಹೊರಬಿದ್ದು ಪ್ರಾಣನೀಗಬೇಕೆಂದರೆ ಶಿಶುಹತ್ಯೆಯ ಪಾಪಭಯವೊಂದು. ತಂದೆಗೇ ಶಿಶುವಿನ ಆಗತ್ಯವಿಲ್ಲದಿರುವಾಗ ನಾನೇಕೆ ಇಷ್ಟು ಹಳಹಳಿಸಬೇಕೆಂದು ಕಡೆಗೊಮ್ಮೆ ನಿರ್ಧರಿಸಿದೆ! ಪತಿಗೆ ಸತಿ ಬೇಡವಾದ ಮೇಲೆ ಅವಳು ಇನ್ನಾರ ಸಲುವಾಗಿ ಬದುಕಿರಬೇಕು?

ಮುತ್ತಿನಸರವು ನಿನಗೆ ಬಂದು ಮುಟ್ಟುವಂತೆ ಏರ್ಪಾಡುಮಾಡಿದ್ದೇನೆ. ಈಗ ನನ್ನ ಕಾಣಿಕೆಯೆಂದು ಲೀಲಾವತಿಯದನ್ನು ಧರಿಸಿಕೊಳ್ಳಲಿ! ಮತ್ತೇನೂ ಇಲ್ಲ. ಇನ್ನೊಮ್ಮೆ ನಿನ್ನನ್ನು ಕಾಣುವ ಸುಯೋಗ ಒದಗಿ ಬರಲಿಲ್ಲವೆಂದು ವಿಷಾದವೆನಿಸಿದೆ.

ಮಾಧೂ, ಸರಸ್ವತಿಯೆಂದು ಒಬ್ಬ ಅಭಾಗಿ ತಂಗಿ ಇದ್ದಳೆಂದು ಮಾತ್ರ ನೆನಪಿನಲ್ಲಿರಲಿ. ಅದೇ ನನ್ನ ಸರ್ವಸ್ವ. ಅಷ್ಟೇ ನನ್ನ ಭಾಗ್ಯ. ಹೆಚ್ಚಿಗೇನೂ ಬೇಕಾಗಿಲ್ಲ.

ನಿನ್ನ ಹತಭಾಗ್ಯಳಾದ,

**ಸರಸ್ವತಿ.**


ನಕಲೀ ಮಾಲು ಕೊಂಡು ಮೋಸಹೋಗಬೇಡಿರಿ !!

ಆಸೇತುಹಿಮಾಚಲ




೪೦ ವರುಷಪರ್ಯಂತ

ಖ್ಯಾತಿಗೊಂಡ ಅಂಜನರಾಜ

ಅಮೃತಾಂಜನ

ಅಮೃತಾಂಜನ ಲಿಮಿಟೆಡ್

ಮದ್ರಾಸು, ಬೊಂಬಾಯಿ, ಕಲ್ಕತ್ತಾ.

AMRUTANJAN LTD., BANGALORE BRANCH,
Krishna Building,
Avenue Road, Bangalore City



ನಿಮ್ಮ ಎಲ್ಲ ಬಗೆಯ ಹಳೆಯ ರೋಗಗಳಿಗೂ ಆಹಾರವಿಜ್ಞಾನ ದಾಂಪತ್ಯವಿಜ್ಞಾನ, ಸಂತಾನವಿಜ್ಞಾನಾದಿ ವೈಜ್ಞಾನಿಕ ಗ್ರಂಥಕರ್ತರಾದ ವೈದ್ಯಭಾನು ಶ್ರೀ. ಡಿ. ಕೆ. ಭಾರದ್ವಾಜ ಎಂ. ಡಿ. (ಆಯುರ್ವೇದ) ಅವರ ಚಿಕಿತ್ಸೆಯನ್ನು ಪಡೆದು ಸುಖವಾಗಿರಿ.

ಬಿಳಿಯ ತೊನ್ನಿಗೆ (ಲ್ಯೂಕೋಡರ್ಮಾ) ಹೊರಲೇಪನೌಷಧ ೫ ದಿನಗಳಿಗೆ ೨—೦—೦

ದೃಷ್ಟಿಮಾಂದ್ಯ, ಇರುಳುಗಣ್ಣು, ಪರೆಬರುತ್ತಿರುವುದು ಮೊದಲಾದ್ದಕ್ಕೆ ೧ ತಿಂಗಳಿಗಾಗುವಷ್ಟು ನಯನಾಂಜನ ೧—೦—೦

ರಕ್ತಶುದ್ಧಿ, ಮಲಶುದ್ಧಿ, ಆರೋಗ್ಯರಕ್ಷಣೆಗಾಗಿ 'ಅಮೃತ' ಪಾನ. ಕಾಫಿಯಂತೆ ಉಪಯೋಗಿಸಬಹುದು. ಸುಮಾರು ೫೦ ಕಪ್ಪುಗಳಿಗಾಗುವಷ್ಟು ೧ ಸೇರು ಚೂರ್ಣ. ೧—೦—೦

ಗಜಕರ್ಣ, ತದ್ದು ಮೊದಲಾದುವುಗಳಿಗೆ ರಾಮಬಾಣ—೧ ಡಬ್ಬಿ. ೧—೦—೦

ಎಲ್ಲದಕ್ಕೂ ಅಂಚೆವೆಚ್ಚ ಬೇರೆ ಬೇರೆ ೦-೭-೦ ಆಗುವುದು. ಹೆಚ್ಚು ಮಾಹಿತಿಗೆ, ರೋಗವಿವರವನ್ನು ಸ್ಟಾಂಪಿಟ್ಟು ಅಥವಾ ರಿಪ್ಲೈಕಾರ್ಡುಬರೆದು ತಿಳಿಯಿರಿ.

ಶ್ರೀರಾಮಕೃಷ್ಣ ಚಿಕಿತ್ಸಾಲಯಂ,

ಬಸವನಗುಡಿ, ಬೆಂಗಳೂರು ಸಿಟಿ.


CC-0. Jangamwadi Math Collection. Digitized by eGangotri

# EVIDENCE OF SECURITY & STABILITY

*It pays you to represent*

# THE BOMBAY LIFE ASSURANCE Co. Ltd. Estd 1910

## FIGURES THAT SPEAK FOR THEMSELVES

# Assets Rs. 80,66,600

| | |
|---|---|
| Total Assets Over | Rs. 80,00,000 |
| ...fe Fund Over | Rs. 68,00,000 |
| ...mium Income Over | Rs. 22,54,000 |
| ...est Income | Rs. 3,16,000 |
| ...s Paid | Rs. 5,75,000 |

Total Claims Paid Over
Rs. 38,50,000
Total Business In Force Over
Rs. 4,42,51,000

*...siness In Force*

**...42,51,200**

**BRANCHES AT:**
P. B. 337, Mount Road, **Madras**; Visveswarapuram Circle, **Bangalore City**; Soumyalayam Puthiyara, **Calicut**; Car Street,**Mangalore**; **Udipi**, S. India; Charni Road, **Bombay No. 4.**

**...HIKAR BROTHERS** *Madras Branch Secretaries*



ಡಾ. ಜೀ. ಬೀ. ಯವರ

## ಸುಗಂಧ ನಶ್ಯದ ಪುಡಿ

ಲೋಕಪ್ರಸಿದ್ಧವಾದ ಈ ಸುಗಂಧನಶ್ಯದ ಪುಡಿಯಿಂದ ಪಿನಸಿ ಒಂಟೆತಲೆನೋವು ಮುಂತಾದ ವ್ಯಾಧಿಗಳು ಪರಿಹಾರವಾಗುವವು. ಕಂಠಕ್ಕೆ ಮೇಲ್ಪಟ್ಟ ೯೬ ವ್ಯಾಧಿಗಳು ಅಡಗಿ, ಜ್ಞಾಪಕಶಕ್ತಿ ಬೆಳೆಯುವದು. ಮೂರು ಬಟ್ಟಿನ ನಶ್ಯದ ಸಂಗಡ ಈ ಸುಗಂಧ ನಶ್ಯದ ಪುಡಿಯಲ್ಲಿ ಒಂದು ಚಿಟಿಕೆಯನ್ನು ಬೆರಸಿದರೆ ಎಲ್ಲವೂ ಪರಿಮಳವಾಗುವದು. ಅನೇಕರು ಕುಟುಂಬ ಔಷಧವಾಗಿ ಉಪಯೋಗಿಸುತ್ತಾರೆ. ಮಾದರಿ ಸೀಸೆ ಪುಕ್ಕಟೆ ಕಳಿಸಲಾದೀತು.



ಬುಡ್ಡಿ ೧ಕ್ಕೆ ರೂ. ೦-೪-೦
ವ್ಹಿ. ಪಿ. ಚಾರ್ಜ ೮ ಆಣೆ
ಗುರುಬಸವ ಆ್ಯಂಡ ಕಂಪನಿ, ಲಿಮಿಟೆಡ್
ಪೋಸ್ಟ್ ಬಾಕ್ಸ್ ... ಮದರಾಸು



## ಕರ್ನಾಟಕ ಭಕ್ತವಿಜಯ

ದ್ವಿತೀಯ ಭಾಗ ರೂ. ೨-೮-೦

೪೫೦ ಪುಟಗಳ ಅಮೌಲ್ಯಗ್ರಂಥ
ಗ್ರಂಥಕರ್ತರು: ಬೇಲೂರು ಕೇಶವದಾಸರು.

### ಇತರ ಗ್ರಂಥಗಳು

| | |
|---|---|
| ಕರ್ನಾಟಕ ಭಕ್ತವಿಜಯ ಭಾಗ ೧ | ರೂ. ೨-೮-೦ |
| ಕನ್ಯಕಾ ಪುರಾಣ | ರೂ. ೧-೦-೦ |
| ಶ್ರೀರಾಘವೇಂದ್ರ ವಿಜಯ | ರೂ. ೦-೮-೦ |

ದೊರೆಯುವ ಸ್ಥಳ

೧. ಸುಬೋಧ ಪ್ರಕಟನಾಲಯ, ಚಾಮರಾಜ ಪೇಟೆ ಬೆಂಗಳೂರು ನಗರ
೨. ಬೇಲೂರು ಕೇಶವದಾಸರು, ಚಾಮರಾಜಪುರಂ ಮೈಸೂರು.


CC-0. Jangamwadi Math Collection. Digitized by eGangotri

ಸಂಶೋಧನಾತ್ಮಕ

# ವಿಜಯನಗರದಲ್ಲಿದ್ದ ಭಗ್ನವಿಠ್ಠಲಮೂರ್ತಿ*

ಶ್ರೀ ಗ. ಹ. ಖರೆ, ಭಾ. ಇ. ಸಂ. ಮಂಡಲ, ಪುಣೆ.

ವಿಜಯನಗರದಲ್ಲಿ ವಿಟ್ಠಲಸ್ವಾಮಿಯ ಭವ್ಯದೇವಾಲಯವು ಇಷ್ಟೊಂದು ಪ್ರಸಿದ್ಧವಾದುದಾಗಿದ್ದರೂ ಅದರಲ್ಲಿ ಸ್ಥಾಪಿತವಾದ ಮೂರ್ತಿಯೆಲ್ಲಿದೆಯೆಂಬುದು ಇದುವರೆಗೆ ಯಾರಿಗೂ ಗೊತ್ತಿಲ್ಲ. ಅದೇ ವಿಟ್ಠಲಸ್ವಾಮಿಯ ಮಂದಿರದಲ್ಲಿ ಒಡೆದು ಹೋಗೀದ್ದ ಮೂರ್ತಿಯೊಂದು ಬಿದ್ದಿದ್ದು, ಅದು ವಿಟ್ಠಲನದೇ ಎಂದು ಊಹಿಸುವಂತಿದೆ.

§ § § §

ವಿಜಯನಗರದ ಸ್ಮಾರಕದ ವಿಚಾರದಲ್ಲಿ ಪ್ರಕಟವಾದ ಇಂಗ್ಲಿಷ್ ಸಂಪುಟದಲ್ಲಿ 'ಶ್ರೀಕೃಷ್ಣದೇವರಾಯ — ಪಂಢರಪುರದ ಶ್ರೀವಿಟ್ಠಲನ ಮೂರ್ತಿ' ಎಂಬ ಹೆಸರಿನಿಂದ ನನ್ನದೊಂದು ಲೇಖನವು (ಪುಟ ೧೯೧) ಪ್ರಕಟವಾಗಿದೆ. ಅದರಲ್ಲಿ ನಾನು "ವಿಜಯನಗರದ ವಿಟ್ಠಲಸ್ವಾಮಿಯ ದೇವಾಲಯದಲ್ಲಿ ಪೂಜೆಗೊಳ್ಳುತ್ತಿದ್ದ ವಿಟ್ಠಲನ ಮೂರ್ತಿ ತಮಗೆ ದೊರೆತ್ತಿದೆಯೆಂದು, ಅನಂತಪುರದ ನಿವಾಸಿಗಳಾದ ಡಾಕ್ಟರ್ ಸಿ. ನಾರಾಯಣರಾಯರು ಹೇಳುತ್ತಿದ್ದು, ಅದರ ವಿಷಯದಲ್ಲಿ ಅವರು ಬರೆಯುತ್ತಲಿದ್ದ ನಿಬಂಧವು ಪ್ರಸಿದ್ಧವಾದ ಮೇಲೆ ತುಂಬ ಮಹತ್ತ್ವದ ಸಂಗತಿಯೊಂದು ಬೆಳಕಿಗೆ ಬರಬಹುದು" ಎಂದು ನಾನು ಬರೆದಿರುವೆನು. ಆ ಲೇಖನವನ್ನು ಬರೆದಾದ ಕೆಲವು ದಿನಗಳ ತರುವಾಯ— ವಿಜಯನಗರದ ನೆರೆಹೊರೆಯಲ್ಲಿ — ಸಂಶೋಧನದ ಉದ್ದೇಶದಿಂದ ತಿರುಗಾಡುತ್ತಿರುವಾಗ, ಕಮಲಾಪುರದಲ್ಲಿರುವ ನನ್ನ ಸ್ನೇಹಿತರಾದ ರಾಜಗುರು ವೆಂಕಟದೇಶಿಕಾಚಾರ್ಲು ಅವರ ಉಪಕಾರದಿಂದ, ಮೇಲೆ ಹೇಳಿದ ಮೂರ್ತಿಯು ನನಗೆ ನೋಡಲು ದೊರೆಯಿತು. ವಿಟ್ಠಲಸ್ವಾಮಿಯ ದೇವಾಲಯವನ್ನು ದಕ್ಷಿಣ ಮಹಾದ್ವಾರದಿಂದ ಪ್ರವೇಶಿಸಿದೊಡನೆಯೆ, ಎಡಗಡೆಗೆ ಸಭಾಮಂಟಪವೊಂದಿರುವುದು. ಅದರಲ್ಲಿ ತೀರ ಪಶ್ಚಿಮದಿಶೆಗಿರುವ ಕಟ್ಟೆಯ ಬದಿಯಲ್ಲಿ 'ಶಂಖರುಶಣ' (ಸಂಕರ್ಷಣ), ಶಿವಪಾರ್ವತಿ, ಕೃಷ್ಣದೇವರಾಯ (?), ಆತನ ರಾಣಿ (?) ಮೊದಲಾದ ಸಂಪೂರ್ಣ ಭಗ್ನಪ್ರತಿಮೆಗಳೊಂದಿಗೆ ಈ ಮೂರ್ತಿಯ ಭಗ್ನಶಿಲ್ಪವೂ, ಮೂರ್ತಿಯನ್ನು ಇರಿಸಲಾಗಿದ್ದ ಸಿಂಹಾಸನದ ನಾಲ್ಕು ತುಂಡುಗಳೂ ಬಿದ್ದಿರುವುವು. ಮೂರ್ತಿಯನ್ನೂ ಸಿಂಹಾಸನವನ್ನೂ ಒಂದೆ ಬಗೆಯ ಕರಿಯ ವಜ್ರದುಂಡಿ ಕಲ್ಲಿನಿಂದ ಕಡೆದಿದ್ದು, ಈ ಕಲ್ಲಿನ ಜಾತಿಯು, ಮೇಲೆ ಹೇಳಿದ ಬೇರೆ ಮೂರ್ತಿಗಳನ್ನು ಕಡೆದ ಕಲ್ಲಿನಿಂದ ಬೇರೆ ಬಗೆಯದಾಗಿ ತೋರುತ್ತದೆ. ಮೂರ್ತಿಯ ತಲೆಯನ್ನೂ ಪಾದಗಳನ್ನೂ ಒಡೆದುಹಾಕಿದ್ದು, ಇದುವರೆಗೂ ಅವು ಎಲ್ಲಿಯೂ ದೊರೆತಿಲ್ಲ. ತಲೆ-ಪಾದಗಳನ್ನು ಬಿಟ್ಟು ಉಳಿದ ಭಾಗವು ೩ ಫೂಟು ೮ ಇಂಚುಗಳಷ್ಟು ಉದ್ದವಾಗಿದ್ದು, ಎಲ್ಲಕ್ಕೂ ಹೆಚ್ಚಿನ ಅಗಲವೆಂದರೆ ೧ ಫೂಟು ೮ ಇಂಚುಗಳಷ್ಟಿದೆ. ಕೊರಳಲ್ಲಿ ,ನಡುವೆ ಪದಕವಿದ್ದ ಮುತ್ತಿನ ಸರವಿದ್ದು, ಅದರ ಕೆಳಗೆ ಮೈಯಲ್ಲಿ ತೊಟ್ಟಿದ್ದ ನಿಲುವಂಗಿಯ ಕೊರಳ ಪಟ್ಟಿಯಂತೆ ಉತ್ತರೀಯವು ಕಾಣುತ್ತಿದೆ. ಈ ಉತ್ತರೀಯದ ಎರಡೂ ಬದಿಗಳು ಒಂದಕ್ಕೊಂದು ಹತ್ತಿಕೊಂಡಿರದುದರಿಂದ—ಕುತ್ತಿಗೆ ಮೊದಲುಮಾಡಿ ಸುಮಾರು ನಡುವಿನ ವರೆಗೆ—ಎದುರು ಭಾಗವು ತೆರೆದ ಮೈಯಿಂದಲೆ ಇದ್ದುದು ಕಂಡುಬರುತ್ತದೆ; ಎಂದರೆ ಗುಂಡಿಗಳನ್ನು ಹಾಕದೆ ಕೋಟನ್ನು ಹಾಕಿಕೊಂಡಂತೆ ಉತ್ತರೀಯವು ಭಾಸವನ್ನುಂಟುಮಾಡುತ್ತದೆ. ಕೊರಳ ಸರದ ಪದಕದ ಕೆಳಗೆ ಶ್ರೀವತ್ಸಲಾಂಛನವಿದೆ. ಅದರ ಮುಖ್ಯಭಾಗವು ಚತುಷ್ಕೋನದಲ್ಲಿದ್ದು, ಅದರ ಎರಡು ಪಕ್ಕಗಳಿಗೆ ನವಿಲಿನ

* ಇವರ ಚಿತ್ರವನ್ನೇ ಈ ಸಂಚಿಕೆಯ ಮುಖಚಿತ್ರವನ್ನಾಗಿ ಪ್ರಕಟಿಸಲಾಗಿದೆ. ಸಂ. ಜ. ಕ.

CC-0. Jangamwadi Math Collection. Digitized by eGangotri

ಕೊರಳ ಮುಂಭಾಗದಂತೆ ಏನೋ ಆಕಾರವಿದ್ದುದರ ಗುರುತುಗಳಿವೆ. ಈ ಮೂರ್ತಿಗೆ ಎರಡೆ ಕೈಗಳಿದ್ದು ನಡುವಿನ ಬಳಿ ಎರಡೂ ಪಕ್ಕಗಳಲ್ಲಿರುವ ಗುರುತುಗಳನ್ನು ನೋಡಿದರೆ, ಮೂರ್ತಿ ಸೊಂಟದ ಮೇಲೆ ಕೈಗಳನ್ನಿರಿಸಿ ನಿಂತಿರಬಹುದೆಂದು ಕಲ್ಪಿಸಲಿಕ್ಕೆ ಬರುವಂತಿದೆ. ನಡುವಿಗೆ ಪಟ್ಟಿಯನ್ನು ಬಿಗಿದಂತಿದ್ದು, ಅದರ ಕೆಳಗೆ ಮೂರು ಪದರಿನಿಂದ ಧೋತರವನ್ನು ಉಡಿಸಿದಂತೆ ಕಾಣುತ್ತಿದೆ. ಎಡಗಡೆಯ ನಡುಪಟ್ಟಿಯ ಭಾಗದಲ್ಲಿ, ಉಟ್ಟಧೋತರದ ಒಂದು ತುದಿಯನ್ನು ಸಿಕ್ಕಿಸಿದಂತಿದ್ದು, ಅದರ ಕೊಂಚ ಭಾಗವು ಪಟ್ಟಿಯಿಂದ ಮೇಲಕ್ಕೆ ಕಾಣುವಂತೆ ಕಡೆಯಲಾಗಿದೆ. ಧೋತರವು ಮೊಣಕಾಲಿನಿಂದ ಮೇಲೆಯೆ ಇದ್ದು, ಮೊಣಕಾಲ ಪರಟೆಯ ವರೆಗಿನ ಭಾಗವೆಲ್ಲ ತೆರೆದದ್ದಾಗಿಯೆ ಇದೆ. ಹಿಂಬದಿಗೆ ನೋಡಿದರೆ ಕಚ್ಚೆಯನ್ನು ಹಾಕಿದಂತೆ ಕಾಣುವುದಿಲ್ಲ. ಬಲಗಡೆಗೆ ಬಲಗೈಯಲ್ಲಿ ಹಿಡಿದುಕೊಂಡಿದ್ದ ಯಾವುದೋ ವಸ್ತುವಿನ ಅವಶೇಷವಿದೆ; ಅದರಿಂದ ಮೂಲವಸ್ತುವನ್ನು ಕಲ್ಪಿಸಲಿಕ್ಕೆ ಸಾಧ್ಯವಿಲ್ಲ.

ಸಾರಾಂಶವೇನೆಂದರೆ ಈ ಭಗ್ನಮೂರ್ತಿಯ ಸದ್ಯದ ಸ್ವರೂಪಾವಲೋಕನದಿಂದ, ಅದರ ಕಿವಿಗಳಲ್ಲಿ ಮಕರಕುಂಡಲಗಳು ಇದ್ದುವೋ ಇಲ್ಲವೋ? ಕೈಯಲ್ಲಿ ಯಾವ ವಸ್ತುಗಳಿದ್ದುವು?.... ಮೊದಲಾದ ಸಂಗತಿಗಳ ವಿಷಯದಲ್ಲಿ ಯಾವ ಮಾತೂ ಗೊತ್ತಾಗದಿದ್ದರೂ, ಎರಡೆ ಎರಡು ಕೈಗಳಿದ್ದುದೂ, ಅವುಗಳನ್ನು ಸೊಂಟದ ಮೇಲೆ ಇರಿಸಿಕೊಂಡಿದ್ದ ಭಂಗಿಯೂ — ಈ ಮೂರ್ತಿ — ವಿಟ್ಠಲನದೇ ಆಗಿರಬೇಕೆಂಬುದನ್ನು ಸ್ಪಷ್ಟಗೊಳಿಸುವುವು. ಇಷ್ಟಾದರೂ ಪಂಢರಪುರದಿಂದ ವಿಜಯನಗರಕ್ಕೆ ತಂದ ವಿಟ್ಠಲನ ಮೂರ್ತಿಯು ಇದೇ ಅಹುದೇ ಅಲ್ಲವೇ? — ಎಂಬ ಮಹತ್ತ್ವದ ಪ್ರಶ್ನೆಯು ಇದ್ದೇ ಇದೆ. ಅದನ್ನು ಬಿಡಿಸುವುದಕ್ಕೆ ಅನುಕೂಲವಾಗಿರುವಂತಹ ಸಾಧನಗಳು ನಮಗೆ ಇದುವರೆಗೆ ಯಾವುವೂ ದೊರೆತಿಲ್ಲ.

---


## ದಿ ತರುಣ ಅಶ್ಯುರನ್ಸ್ ಕಂಪನಿ ಲಿ., ಅಹಮ್ಮದಾಬಾದ

ನಮ್ಮಲ್ಲಿ ಕುಟುಂಬಸಂರಕ್ಷಕ ಯೋಜನೆ, ಮಲ್ಟಿಪಲ್ ಬೆನಿಫಿಟ್ ಪ್ಲ್ಯಾನ್, ಫಿಕ್ಸ್ಡ ಬೋನಸ್ ಎಂಡೌಮೆಂಟ್, ಮಕ್ಕಳ ಸುಖಭವಿಷ್ಯದ ವಿಮೆ—ಮೊದಲಾದ ಹಲವು ಲಾಭದಾಯಕ ಯೋಜನೆಗಳಿವೆ.

ತರುಣ ಡಾಯಮಂಡ್ ಪಾಲಿಸಿಯಿಂದ ಸ್ವಸಂರಕ್ಷಣೆ, ಪೆನ್ಶನ್ ಮತ್ತು ಸುರಕ್ಷಿತ ಠೇವುಗಳು ಸಿಗುವವು.

**ತರುಣ ಬಾಂಡ್:** ಇದೊಂದು ಅದ್ಭುತ ಕಾಣಿಕೆ. ಬರಿ ರೂ. ೧೩-೮-೦ರಲ್ಲಿ ನಿಮ್ಮ ಮತ್ತು ನಿಮ್ಮ ಕುಟುಂಬದ ರಕ್ಷಣೆಯಾಗುವುದಲ್ಲದೆ, ದೈವವಿದ್ದರೆ ೨೫೦೦ ರೂ. ಸಿಗುವ ಸಂಭವವಿದೆ.

೧೯೩೭ರ ಆಗಸ್ಟ ತಿಂಗಳಲ್ಲಿ ತರುಣಬಾಂಡುಗಳ ಬಹುಮಾನಗಳನ್ನು ಹಂಚುವ ೨ನೆಯ ಸಮಾರಂಭವು ಜರುಗಲಿದೆ!

ಕರ್ನಾಟಕದಲ್ಲೆಲ್ಲಾ ಕೆಲಸಮಾಡಲು ಏಜಂಟರು ಬೇಕು. ಕೆಳಗಿನ ವಿಳಾಸಗಳಿಗೆ ಬರೆಯಿರಿ:—

ಬ್ರ್ಯಾಂಚ್ ಮ್ಯಾನೇಜರ್,
**ಎ. ಡಿ. ದೇಶಪಾಂಡೆ, ಮೇನರೋಡ್, ಸಾಂಗಲಿ**

ಧಾರವಾಡ ಜಿಲ್ಲೆಯ ಚೀಫ ಏಜಂಟರು
**ಮೆಸರ್ಸ್ ಲೋಖಂಡೆ, ಸಿದ್ದನಗೌಡರ ಮತ್ತು ಕಂಪನಿ, ಧಾರವಾಡ**

**ಎನ್. ಗುಡಿ**
ಚೀಫ್ ಏಜಂಟ, ಹೈದರಾಬಾದ (ದ)

ಬೆಳಗಾಂವಿ ಜಿಲ್ಲೆಯ ಅಸಿಸ್ಟಂಟ್ ಆರ್ಗನೈಜರ್
**ಕೆ. ಎಸ್. ಪಾವಟೆ,**
ಬನಹಟ್ಟಿ (ಜಿ: ಬೆಳಗಾವಿ)


CC-0. Jangamwadi Math Collection. Digitized by eGangotri

# ತರಳೆ*

ಶ್ರೀ. ಮೂರ್ತಿ, 'ಸೋದರಸಂಘ', ಶಿವಮೊಗ್ಗ

ಅರಿತಿರುವೆ ನಾನಿವಳನಿವಳ ಮುಖಪ್ರಭೆಯಲ್ಲಿ
ಹೊಳೆವುದಿವಳೀ ಕಣ್ಣು, ಕರಿಯ ಕೇಶದ ರಾಶಿ,
ಕೌರ್ಯದಿಂ ಕೂಡಿರುವ ಕಿರುಚುದನಿಯಿವಳ ನಗು—
ಗುಡ್ಡದಾ ಕಿಬ್ಬಿಯಲಿ ಕಡೆಯುತಿರೆ ಮರಕುಟುಕ—
ಬರುವ ದನಿಯಂತಿವಳ ಕೀರ್ನಗೆಗಳು! ೧

ಇವಳೆ "ತರಳೆ"ಯು ತಾನೆ ಸ್ವೇಚ್ಛೆಯಲಿ ಆಡುವಳು;
ಇವಳ ನಾಲಗೆಗೊಂದು ತಡೆಯಿನಿತು ಕೇಳಿಲ್ಲ!
ಅದುವೆ ಕೇಳ್ ಕಿನ್ನರಿಯ ಹೊಸಹೊಸತು ಶ್ರುತಿಯಂತೆ;
ಇವಳ ಹೃದಯವ ನೋಡು ಮಿರುಗಿ ಮಿನುಗುವ ತಾರೆ;
ಇವಳೆದೆಯು ಹೊಸವಿಲ್ಲ ಕೂರಂಬಿನೊಲ್! ೨

ಇವಳಿಗೆಂದಿಗೆ ಮದುವೆ? ತಕ್ಕ ವರ ತಾನೆಲ್ಲಿ?
ತರಳೆ ಸಾಮಾನ್ಯರನು ಮೆಚ್ಚಲಾರಳು ಎಂದು!
ಸ್ತ್ರೀಯೋಧಳೀ ತರುಣಿ ಎನ್ನ "ತರಳೆಯು" ಕೇಳು!
ಇವಳ ಪರಿಯೇನೆಂಬೆ? ಏನೆಂಬೆ? ನೀ ಕೇಳು
ಶುದ್ಧಲೋಹದ ಕೂರಿತಲಗಿನಂತೆ! ೩

'ತರಳೆ' ನುಡಿಯುವಳಿಂತು: 'ವೀರರಿಲ್ಲವು ಜಗದಿ'
'ತರಳೆ' ನುಡಿವಳು ಪುರುಷರೆಲ್ಲ ಚಿಟ್ಟೆಗಳೆಂದು.
ನನ್ನ ಭಾಷೆಯ ಕೇಳಿ ತನ್ನ ಕೈಕೊಡಹುವಳು,
'ತರಳೆ' ಪ್ರಣಯವ್ಯಥೆಯನೊಂದಿನಿತು ಲೆಕ್ಕಿಸಳು.
ಇವಳನೊಲಿಸುವ ವೀರನಾವ ಜಗದಿ? ೪

ನಾನಂತು ಯೋಧನಿರೆ ಲೇಸಿತ್ತು ಲೇಸಿತ್ತು!
ನನ್ನ ಭುಜಬಲದಿಂದ ಜಯವಧುವನೈತಂದು,
ವಿಜಯದಲರಿನ ಸರವನೆನ್ನ ಶಿರದಲಿ ಧರಿಸಿ,
ನುಗ್ಗಿ ಎಡಬಲದಲ್ಲಿ ಶತ್ರುಗಳ ತುಂಡರಿಸಿ,
ಇವಳ ಪ್ರೀತಿಯನೊಲಿಸಿ ನಲಿಯುತಿದ್ದೆ! ೫

ಓ 'ತರಳೆ', ನೀನೇನೊ ವೀರರನೆ ಬಯಸುತಿಹೆ!
ಆದರಿಲ್ಲವೆ ಇಲ್ಲ, ನಿನ್ನನೊಲಿಸುವನಿಲ್ಲ!
ನಿನ್ನ ಮೆಚ್ಚುಗೆ ಪಡೆವ ವೀರನಿಲ್ಲವು ಜಗದಿ !!
'ತರಳೆ'! ನೀನೊಂಟಿಯಲಿ ಬಾಳಲೇ ಬೇಕಿಂತೆ;
ದೊರೆಯನೆಂದಿಗು ನಿನಗೆ ತಕ್ಕ ವರನು! ೬

# ಇರುಳ ದೀಪ

ಶ್ರೀ ಕೆ. ಎಸ್. ನರಸಿಂಹಸ್ವಾಮಿ, ಬೆಂಗಳೂರು

೧

ಕಿಟಕಿಯ ಬಾಗಿಲು ತೆರೆದಿತ್ತಂದು
ಸುತ್ತಲು ಕತ್ತಲೆ ಕವಿದಿತ್ತಂದು;
ಚಂದಿರನಡಿಯಲಿ ನಗುತಿತ್ತೊಂದು—
ತಾರಗೆ ಬಾನಿನೊಳು

೨

ಮಂಚದ ಮೇಗಡೆ ಅವಳಿಗೆ ನಿದ್ದೆ;
ನನಗೋ ಎಚ್ಚರು, ಓದುತಲಿದ್ದೆ;
ಬೇಸರವಾಯಿತು; ಮಲಗಲು ಎದ್ದೆ,
ಎಲ್ಲವು ಸುಮ್ಮನಿರೆ.

೩

ಬಂದಿತು ಮುತ್ತನು ಕದಿಯುವ ಬಯಕೆ!
'ಮೋಸವು ತಿಳಿದರೆ ಮುನಿಯಳೆ ಈಕೆ?'
ಎನ್ನುವ ಅಂಜಿಕೆ! ಚಂದಿರ 'ಜೋಕೆ!'
ಎಂದೆಚ್ಚರಿಸುತಿರೆ;

೪

ತಾರೆಗಳೆಲ್ಲಾ ನೋಡುವುವೆಂದು,
ಕಿಟಕಿಯ ಬಾಗಿಲ ಬಂಧಿಸಿ ಬಂದು,
ಇರುಳಿನ ದೀಪವು ಅರಿಯುವುದೆಂದು
ಆರಿಸಲೆಳಸಿದೆನು.

೫

'ಕಂಡರೆ ದೀಪವು ಹೇಳುವುದೇನು!'
ಎಂದೆನ್ನನು ಮೈದಡವಿದುದೆಲರು.
ದೀಪವು 'ಇನ್ನೂ ಹೊಸತಿದು,' ಎಂದು
ಮೌನದಿ ಬೆಳಗಿದುದು.

೬

ಮೂಡಣ ಬೆಳಕಿನ ಬಾಗಿಲ ತೆರೆದು,
ಬಂದಳು ಉಷೆ ಪನ್ನೀರ್ಮಳೆಗರೆದು.
ನಕ್ಕಳು ಇಂದಿರೆ. 'ಏತಕೆ?' ಎನಲು,
ದೀಪವ ನೋಡಿದಳು.

* ಟೆನಿಸನ್ನನ ಕವಿತೆಯೊಂದರಿಂದ

CC-0. Jangamwadi Math Collection. Digitized by eGangotri

# ಪರಿಣಾಮ

'ವಿದ್ವಾನ್' ಶಂಕರನಾರಾಯಣ, ಅಮ್ಮೆಂಬಳ

೧

ಮೊದಲು ಮುಂಜಾನೆಯದು ಮುಗುಳುನಗು ನಗುತ,
ಬಳಿಕ ಮಧ್ಯಾಹ್ನವದು ಬಿರುಸುನಗೆಯುಗುತ,
ಕಡೆಗೆ ಸಂಜೆಯ ಸಮಯ ಸೌಮ್ಯವಾಗುತ್ತ,
ಕತ್ತಲೆಯ ಕಾಲಿಮೆಯೆ ಪರಿಣಾಮವು!

೨

ಮರದ ರೆಂಬೆಗಳಲ್ಲಿ ಮೊಗ್ಗೆ ಮೊದಲೊಗೆದು,
ಸರಿಯಾದ ಸಮಯಕ್ಕೆ ಸಮನಾಗಿ ಬಿರಿದು,
'ಸದವಸಾನದಲಿ ತೊಟ್ಟೆಂದ ಸಿಡಿದು,
'ವ ನೀಗುವುದೆ ಪರಿಣಾಮವು!

೩

ಸೂರ್ಯನಾರಲು ತಾರೆ ಮುಸುಕಿ ಮಿನುಗುತ್ತ,
ರಾತ್ರಿಯಾಗಲು ತೊಳಗಿ ಬೆಳಗುವುದು ಸುತ್ತ.
ಮುಂಜಾವ ಬರಲಂಜಿ ಹಿಂಜರಿಯುತೆತ್ತ-
ನಾಮಾವಶೇಷವದು ಪರಿಣಾಮವು!

೪

ಅನತಿದೂರದಿ ತೆರೆಯು ಸಾಗರದೊಳೆದ್ದು,
ಮುಂದುವರಿಯುತ ಬಂದು ಘೋಷದಿಂದಿದ್ದು,
ದಡವನಡಹಾಯ್ದಲ್ಲಿ ಮೌನದಲಿ ಮುಗಿದು,
ನೊರೆಯಾಗಿ ಮರೆಯುವುದೆ ಪರಿಣಾಮವು!

೫

ಆರಂಭದಲಿ ಬಾಲ್ಯಕಾಲವರಳುವುದು;
ಆ ಮೇಲೆ ಯೌವನದ ಗಾಂಭೀರ್ಯವಿಹುದು;
ಕಡೆಗೆ ಮುದುರುವ ಮುದಿಯತನವು ಮುಸಗುವುದು;
ಬಾಳು ಬರಿದಾಗುವುದೆ ಪರಿಣಾಮವು!

# ಮರುಳು

ಶ್ರೀ. ಬಿ. ರಾಮಚಂದ್ರರಾವ್, ಮಿತ್ರಮಂಡಲಿ

೧

ದುಗುಡದಾ ಕತ್ತಲೆಯ ಹರಿಸುವುದು ಸೊಗವೆಳಗು;
ಸೊಗವೆಳಗ ಮರಸುವುದು ದುಗುಡದಾ ಮುಸುಕು.
ದಿನಪನಿರುಳಂಧಕಾರವ ಕಳೆದು ಬೆಳಗಿಸಲು
ಜನಪದವ ಕತ್ತಲೆಯು ಮುಗುಳಾವರಿಪುದು.

೨

ಪಗಲಿರುಳನುಕ್ರಮದೊಳನುವಾಗುವಂದದಲಿ
ಸೊಗ-ದುಗುಡವೆರಡೊಂದನೊಂದಿರುವುದು.
ಸೊಗದ ನೆರವಿಗೆ ಹಿಗ್ಗಿ ಪಿರಿದುಕ್ಕೆವಂಗೊಳಲು
ದುಗುಡದಾ ಸೋಂಕಿನೊಳೆ ಕುಗ್ಗುವುದು ಮರುಳು!

೩

ಬಾಂದಳದ ಹೆಜ್ಜೊಡರು ತಿರೆಯ ತಿಮಿರವ ತರಿಯೆ
ಬಂದು ಕಾರ್ಮೋಡಗಳು ಮಗುಳೆರಗುವಂತೆ-
ಮನದೊಳುತ್ತಮ ಭಾವನೆಗಳು ನೆಲೆಯಾಗಿರಲು
ಮುನಿಸು-ಮಚ್ಚರ-ಪೆರ್ಮೆಗಳು ನುಸುಳುತಿಹವು.

೪

ಬಡತನದ ಸಿಕ್ಕು-ಸಂಕಟಗಳಲಿ ಮನಗುಂದಿ,
ದುಡಿಯುತೊಡೆತನ ದೊರೆಯೆ ನಲ್ವಾತುಗಳೊಳು
ಸೊಗದ ಸುಗ್ಗಿಯ ಬೀರಿ, ನಗೆಮೊಗದ ಸವಿದೋರಿ
ಮಿಗೆ ಪೊಗಳೆ ನೆರೆ ಹಿಗ್ಗುವುದೆ ಹಿರಿದುಮರುಳು!

೫

ಸೊಬಗಿನಾಬಳ್ಳಿಯಲರಂ ತಳೆದು ತನಿಗಂಪ
ಹಬ್ಬಿಸಲು, ನಲ್ಮೆದುಂಬಿಯು ಬಟ್ಟೆವಿಡಿದು,
ಬಗೆಯರಳು ತಾನಿರ್ಪ ಹೊನಲೊಂದಿ ಭಾವನೆಯೊ-
ಳೊಗುವ ಬಂಡಂ ಸವಿಯಲಾ ಮರುಳೆ ಹುರುಳು!

CC-0. Jangamwadi Math Collection. Digitized by eGangotri

# ದೇವರು ಕೊಟ್ಟರೂ ಪೂಜಾರಿ ಬಿಡ!

ಶ್ರೀ. ಪಂಡಿತ ತಾರಾನಾಥರಾಯರು, 'ಪ್ರೇಮಾಯತನ', ತುಂಗಭದ್ರಾ

ಹಳ್ಳಿಗರಿಗೆ ಇಂದು ಮಾದರಿ ಬೇಕು! ಅಂತಹ ಮಾದರಿ ಯಾರಾಗಬೇಕು? ಅವರು ಹಳ್ಳಿಗಳಲ್ಲಿಯೆ ಹುಟ್ಟಬಹುದೋ! ಅಸಾಧ್ಯವಾದ ಮಾತಿದು! ಇಂದಿನ ಸ್ವಾತಂತ್ರ್ಯಸಂಗ್ರಾಮದಲ್ಲಿ ಹಲವು ಬಗೆಯ ಕಷ್ಟ ನಷ್ಟಗಳ ಬೆಂಕಿಯಲ್ಲಿ ಕರಗಿ, ಮತ್ತೆ ಸ್ವಾತಂತ್ರ್ಯದ ನವರೂಪವನ್ನು ಪಡೆದವರೆ ಆ ಕಾರ್ಯಕ್ಕೆ ಮುಂದುವರಿಯಬೇಕು.

§ § § §

ಈಗ ಕೊಂಗ್ರೆಸ್ ಸರಕಾರವು ನಮ್ಮ ಪ್ರಾಂತ್ಯಗಳನ್ನಾಳುತ್ತಿದೆ ಎಂಬುದು ಎಲ್ಲರಿಗೂ ಗೊತ್ತೇ. ಆರು ಪ್ರಾಂತ್ಯಗಳಲ್ಲಿ ಕೊಂಗ್ರೇಸ್ಸಿನದೇ ಅಧಿಕಾರ ಈಗ. ಆದರೆ ಅಷ್ಟಾದ ಮಾತ್ರಕ್ಕೆ ನಮ್ಮ ಹಳ್ಳಿಗಳ ಉದ್ಧಾರವಾದೀತು ಎಂದು ತಿಳಿಯುವುದು ಹಗಲ ಕನಸು.

ಹಳ್ಳಿಯವರ ಉದ್ಧಾರಕ್ಕಾಗಿ ನಮ್ಮ ಕೌನ್ಸಿಲ್ ಎಸೆಂಬ್ಲಿಗಳಲ್ಲಿ ಹೊಸ ಹೊಸ ಕಾನೂನುಗಳುಂಟಾಗಬಹುದು. ಅವುಗಳನ್ನೇ ನಡಿಸಲಿಕ್ಕೆ ಹೊಸ ಹೊಸ ಹುದ್ದೇದಾರರೂ ಉಂಟಾಗಬಹುದು. ಅವರಲ್ಲೆಲ್ಲ ಅಪಾರವಾದ ತಾಯಿತನವೂ ಇದೆ ಎಂದು ಇಟ್ಟುಕೊಳ್ಳೋಣ. ಇಷ್ಟಾದರೂ ಎರಡು ಮಾತುಗಳು ಉಳಿದುವು: (೧) ಮಗು ಕೂಗಬೇಕು (೨) ಕೂಗಿದ್ದು ಅಲ್ಲಿಯವರೆಗೆ ಕೇಳಿಸಬೇಕು.

ಅಹುದು ಮಗು ಕೂಗಬೇಕು; ಆದರೆ ಕೂಗುತ್ತದೆ ಎಂದು ಅಫೀಮು ತಿನ್ನಿಸುವ ರೂಢಿಯನ್ನು ಅದಕ್ಕೆ ಆಗಲೇ ಮಾಡಿಸಿದ್ದರೆ ಏನು ಗತಿ? ನಮ್ಮ ಬಡ ಹಳ್ಳಿಯವರು ಮೊದಲೇ ಮಕ್ಕಳಿಗಿಂತ ಕಡೆ. ಆದರಲ್ಲಿಯೂ ಬ್ರಿಟಿಷ್ ಸರಕಾರದ ಇಷ್ಟು ವರ್ಷದ ಆಡಳಿತದಲ್ಲಿಯೂ ಅಫೀಮು ಚೆನ್ನಾಗಿ ಬಿದ್ದಿದೆ ಅವಕ್ಕೆ! ಸರಕಾರ ಅಂದರೆ 'ಮಾ-ಬಾಪ್' ಎಂದು ಹೇಳುವಷ್ಟಕ್ಕೇ ಇದೆ ಆ ವಿಶಾಶೆಯ ಮಕ್ಕಳ ಬುದ್ಧಿ! ಅಂಥ ಮದ್ದಿನ ಜೋರಿನಿಂದ ಹಸಿವೆಗೆ ಕೂಡ ಅಳುವ ಗುಣ ಕುಂದಿಹೋಗಿದೆ! ಹೀಗಿರುವಾಗ ಮೊದಲು ಅವುಗಳಿಗೆ ಅಫೀಮಿನ ರೂಢಿ ತಪ್ಪಿಸಬೇಕಲ್ಲವೆ? ಸರಕಾರವೆಂದರೆ "ಮಾ-ಬಾಪ್" ಎಂಬ ಅಫೀಮಿನ ಅಮಲು ಹೋಗಬೇಕಾದರೆ ಮೊದಲು ಯೋಗ್ಯವಾದ ಶಿಕ್ಷಣವಾಗಬೇಕು. ಶಿಕ್ಷಣವೆಂದರೆ ಬರೇ ಗೌಡ-ಕುಲಕರ್ಣಿ, ಪಟೇಲ-ಪಟವಾರಿ ಕೆಲಸಕ್ಕೆ ಬೇಕಾದ ತರಬೇತು ಮಾತ್ರವಲ್ಲ. 'ಸರಕಾರ ಎಂದರೆ ತಮ್ಮನ್ನು ಆಳುವವರ ಕಾಟವಲ್ಲ, ತಮ್ಮ ಆಳುಗಳ ಕೂಟ' ಎಂಬ ಭಾವನೆಯು ಅವರಲ್ಲಿ ಮೂಡಬೇಕು. ಆ ಸರಕಾರವನ್ನು ಹುಟ್ಟಿಸುವ ಅಳಿಸುವ ಶಕ್ತಿಗಳು ತಮ್ಮನ್ನು ಸೇರಿಕೊಂಡಿರುವ ವಿಷಯಗಳು ಎಂಬ ಮನವರಿಕೆ ಅವರಿಗಾಗಬೇಕು. ಇಷ್ಟಾಗಬೇಕಾದರೆ ಬರೇ ಸಾಕ್ಷರತೆ ಒಂದೇ ಸಾಲದು. ಶಿಕ್ಷಣದ ಧಾಟಿಯೇ ಮಾರ್ಪಡಬೇಕು. ಮೊದಲು ಶಿಕ್ಷಕರ ಹೃದಯವೇ ಬದಲಾಗಿ ಹೋಗಬೇಕು.

ಇಲ್ಲವಾದರೆ ಬರೇ ಓದುಬರೆಹದಿಂದಾಗುವ ಲಾಭ ಎಂದರೆ, ಅದು ಯಾರಿಗೆ ಬಾರದೋ ಅಂಥವರ ವಂಚನೆ. ಈಗಲಾದರೂ ಅನೇಕ ಹಳ್ಳಿಗಳಲ್ಲಿ ಓದುಬರೆಹ ಬಲ್ಲವರು ಇದ್ದಾರೆ. ಆದರೆ ಇವರು ಮಾಡುವ ಕೆಲಸವೇನು? ಬಡಬಗ್ಗರ ಮೋಸ. ಇವರ ಆದರ್ಶವೇನು? ಇಷ್ಟೇ-ಊರ ಕುಲಕರ್ಣಿ-ಶಾನುಭಾಗರ ಸಹವಾಸ ಬೇಕು. ಊರ ಸಾಹುಕಾರನ ಕೃಪಾಛತ್ರದಲ್ಲಿರಬೇಕು. ಅಲ್ಲಿರುವ ಯಾವುದಾದರೊಂದು ಪಾರ್ಟಿಗೆ ಸೇರಬೇಕು. ಅಲ್ಲ-ಸಲ್ಲದ ಜಗಳ ಖಂಡಾಟಗಳನ್ನು ಎಬ್ಬಿಸಬೇಕು. ಈಗ ಕಂಡುಬರುವ ಶಿಕ್ಷಣದ ಫಲ ಎಂದರೆ ಇಷ್ಟೆ! ಅಂಥ ಶಿಕ್ಷಣವು ಲುಚ್ಚಾ-ಲಫಂಗರ ಬತ್ತಳಿಕೆಗೆ ಇನ್ನೂ ಹತ್ತು ಬಾಣಗಳನ್ನು ಸೇರಿಸಿದಂತೆಯೇ!

CC-0. Jangamwadi Math Collection. Digitized by eGangotri

ಸದ್ಯಕ್ಕೆ ಹಳ್ಳಿಗಳ ಆಡಳಿತೆ ಎಂದರೆ ಇಂಥವರ ದರ್ಬಾರೇ! ಬ್ರಿಟಿಷ್ ಪಾರ್ಲಿಮೆಂಟಿಗೆ ಹೇಗೆ "ಮೆನ್-ಒನ್-ದಿ-ಸ್ಪೊಟ್" (Man - on - the - spot)ನ ಉನ್ಮಾದವಿದೆಯೋ ಹಾಗೆಯೆ ಈ ಹಳ್ಳಿಯ ಗೌಡ, ಸಾಹುಕಾರ, ಕುಲಕರ್ಣಿ ಮತ್ತು ಇವರ ಕೂಟವನ್ನು ಕುರಿತು ನಮ್ಮ ಮೇಲಿನ ಹುದ್ದೇದಾರರ ಮಾಯಾ-ವಿಶ್ವಾಸ. ಇಂಡಿಯಾದಲ್ಲಿ ಆಯ್. ಸಿ. ಎಸ್ಸರ ಕೂಟವು ಆಡಿದ್ದೇ, ಅವರು ಮಾಡಿದ್ದೇ ಗವರ್ನರರಿಗೆ ನ್ಯಾಯ; ಗವರ್ನರರು ಮಾಡಿದ್ದೇ ವೈಸ್‌ರೊಯನಿಗೆ ನ್ಯಾಯ; ಈತ ಮಾಡಿದ್ದೇ ಸೆಕ್ರೆಟರಿ ಒಫ್ ಸ್ಟೇಟಿಗೆ ಪರಮ ಧರ್ಮ; ಆತ ಮಾಡಿದ್ದೇ ಪಾರ್ಲಿಮೆಂಟಿಗೆ ಕೈವಲ್ಯ-ಹೀಗಿದೆ ಈ ಹಾಳು ಸರಣಿ! ಹಾಗೆಯೇ 'ಗೌಡ-ಕುಲಕರ್ಣಿ ಎಂಡ್ ಕಂಪನಿ' ಯವರು ಮಾಡಿದ್ದು ತಹಸೀಲ್ದಾರ್ ಮಾಮಲೇದಾರರಿಗೆ ಸರಿಯಾದ ಕಾಯಿದೆ! ಮತ್ತೆ ಇವರು ಗೀಚಿದ್ದೇ ಕಲೆಕ್ಟರರಿಗೆ ಅನಾದಿಗ್ರಂಥ! ಸರಿ, ಸರಪಣಿಯು ಕೆಳಗಿನಿಂದ ಮೇಲಿನವರೆಗೆ, ನಮ್ಮ ಹಳ್ಳಿಯಿಂದ ಬ್ರಿಟಿಷ್ ಪಾರ್ಲಿಮೆಂಟಿನ ವರೆಗೆ ಉದ್ದಕ್ಕೆ ಹೋಯಿತು! ಇಂಥ ಪರಿಸ್ಥಿತಿಯಲ್ಲಿ ಬೋರೇಗೌಡನನ್ನು ಕೇಳುವವರಾರು? ಬಡ ರೈತನಿಗೆ ದಿಕ್ಕು ಯಾರು? ಆ ಮಗು ಕೂಗುವುದಕ್ಕೆ ಇನ್ನೂ ಕಲಿಯಲಿಲ್ಲ!

ಪರದೇಶಿ ಸರಕಾರ ಮತ್ತು ಅದರ ಹುದ್ದೇದಾರರ ಕಾಟ ಒಂದು ಕಡೆಯಿಂದ ಹಳ್ಳಿಗರ ಬಾಯಿಮುಚ್ಚಿದರೆ ಇನ್ನೊಂದು ಕಡೆಯಿಂದ ಧರ್ಮವು ಇವರ ಗಂಟಲನ್ನೇ ಹಿಡಿದುಕೊಂಡು ಕೂತಿದೆ. 'ಆದದ್ದಾಗಲಿ ಗೋವಿಂದನ ದಯ ಒಂದಿರಲಿ' ಎಂಬ ಭರವಸೆಯಿಂದ 'ರಾಮನಾಳಿದರೇನು ರಾವಣನಾಳಿದರೇನು' ಎಂದುಕೊಂಡು ಬಾಯಿಮುಚ್ಚಿಕೊಂಡು ಬಿದ್ದಿರುವುದೇ ಇವರ ನೂರಾರು ವರ್ಷಗಳ ಸಂಪ್ರದಾಯವಾಗಿ ಕೂತಿದೆ. ಈ ಸಂಪ್ರದಾಯಗಳಿಗೆ ಎಲ್ಲ ಕಡೆಗಳಿಂದಲೂ ಏಟು ಹಾಕಿ, "ಪುಣ್ಯವಂತ" ರಂತೆಯೇ ತಮಗೂ ಸುಖವಾಗಿ ಬದುಕಿರುವ ಹಕ್ಕು ಇದೆ, ಶಕ್ತಿಯಿದೆ.... ಎಂಬುದನ್ನೇ ಅವರಿಗೆ ಈಗ ಕಲಿಸಬೇಕು,. ಕಲಿಸುವವರು ಬೇಕು.

ಆದರೆ ಈ ಶಿಕ್ಷಣವನ್ನು ಶಾಲೆಗಳಲ್ಲಿಯ ಮಕ್ಕಳಿಗೆ ಕೊಡಬೇಕೋ? ಶಾಲೆಯ ಹೊರಗೆ ಇತರರಿಗೆ ಕೊಡಬೇಕೋ? ಇಬ್ಬರಿಗೂ ಕಲಿಸಬೇಕು. ಆದರೆ ಮಕ್ಕಳಿಗೆ ಮಾತ್ರ ಬೇರೆಯಾಗಿ ಅದನ್ನೇ ಕಲಿಸುವುದಕ್ಕಾಗದು. ಯಾಕೆಂದರೆ ಅವರಿಗೆ ಕಿವಿಯ ಪಾಠಕ್ಕಿಂತಲೂ ಕಣ್ಣ ಮುಂದಿನ ದೃಷ್ಟಾಂತವೇ ಮುಖ್ಯ. ದೊಡ್ಡವರ ಗುಣ-ನಡತೆಗಳನ್ನೇ ನೋಡಿ ಮಕ್ಕಳು ತಾವು ಹೆಜ್ಜೆಹಾಕುವರು. ಇದು ಅವರ ಸಹಜಪ್ರವೃತ್ತಿ. ಹೀಗಿರುವಾಗ ಅವರಿಗೆ ಶಾಲೆಗಳಲ್ಲಿ ಕಿವಿಗೆ ಬಿದ್ದದ್ದು ಹೊರಗೆ ಹಿರಿಯರ ಜೀವನದಲ್ಲಿ ನೋಡಲಿಕ್ಕೂ ಧಾರಾಳವಾಗಿ ದೊರೆಯಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ—ಮಾದರಿ ಬೇಕು

ಈ ಮಾದರಿ ಯಾರಾಗಬೇಕು? ಯಾರಾಗಬಲ್ಲರೋ, ಯಾರಾಗಿದ್ದರೋ ಅವರೇ ಅಲ್ಲದೆ ಇನ್ನಾರು ಮಾದರಿ ಆದಾರು? ಅವರು ಹಳ್ಳಿಗಳಲ್ಲಿಯೇ ಒಮ್ಮೆಗೇ ಹುಟ್ಟಿ ವರೋ? ಇದು—ಅಸಾಧ್ಯ. ಸ್ವಾತಂತ್ರ್ಯಸಂಗ್ರಾಮದಲ್ಲಿ ಹಲವು ಬಗೆಯ ಕಷ್ಟ-ನಷ್ಟಗಳ ಬೆಂಕಿಯಲ್ಲಿ ಕರಗಿ, ಮತ್ತೆ ಸ್ವಾತಂತ್ರ್ಯದ ನವರೂಪವನ್ನು ಪಡೆದವರು ಬೇಕು. ಅಂಥ ಮಾದರಿಗಳಾಗಲಿಕ್ಕೆ, ಪಟ್ಟಣಗಳಲ್ಲಿ ಅಂಥ ಎಷ್ಟು ಮಂದಿ ಯುವಕರಿಲ್ಲ! ಅವರು ಏತಕ್ಕೆ ಹಳ್ಳಿಗಳಿಗೆ ಹೋಗಬಾರದು? ಅವರು ಹಳ್ಳಿಗೆ ಹೋಗಿದ್ದುಕೊಂಡರೆ, ಅವರ ನಿತ್ಯ ಜೀವನದಲ್ಲಿಯೇ ಬಡಹಳ್ಳಿಗರಿಗೆ ಎಷ್ಟೋ ಹಿತೋಪದೇಶವು ಒಡೆದು ತೋರದಿರದು. ಹಳ್ಳಿಯು ಹಳಬರು ಮಾರ್ಪಡುವುದು ಕಷ್ಟಸಾಧ್ಯವೇ ಆಗಿರಬಹುದು, ಆದರೂ ಇಂಥವರ ಸಹವಾಸದ ಪ್ರಭಾವದಿಂದ ಹಳ್ಳಿಯ ಯುವಕರು ಹುರಿಗೊಳ್ಳುವುದರಲ್ಲಿ ಸಂದೇಹವಿಲ್ಲ. ಹಳ್ಳಿಯ ಬಡ ರೈತರಿಗೆ ಧೈರ್ಯ ಬಂದು, ಅವರ ಬೇನೆಯ ಕೂಗು ಏಳುವುದೆಂಬುದಕ್ಕೆ ಸಂಶಯವಿಲ್ಲ. ಇದು ನಮ್ಮ ಅನುಭವದ ಮಾತು.

ಅವರ ಕಷ್ಟ—ನಷ್ಟಗಳನ್ನು ಮೊದಲು ಕೇಳಿ ಬರಬೇಕು. ಅವನ್ನು ಮುಂದೆ ಮೇಲಿನ ಅಧಿಕಾರಿಗಳಿಗೆ ಕೇಳಿಸಬೇಕು. ಇವೆರಡಕ್ಕೂ ಸ್ವಾತಂತ್ರ್ಯಪ್ರಿಯ ಯುವಕರು ಹಳ್ಳಿಹಳ್ಳಿಯಲ್ಲಿಯೂ ಚಿಕ್ಕ ಪುಟ್ಟ ಸಂಸ್ಥೆಗಳನ್ನು ಇಡಬೇಕು. ಸರಕಾರವು ತೆರಿಗೆಯನ್ನು ಇಳಿಸಬಹುದು. ಆದರೆ ೮ ಆಣೆಯ ಜಾಗದಲ್ಲಿ ೧ ರೂಪಾಯಿ ರೈತನಿಂದ ವಸೂಲು ಮಾಡಿ, ೮ ಆಣೆಯ ರಸೀದಿಯನ್ನೇ ಆ ನಿರಕ್ಷರನಿಗೆ ಕೊಟ್ಟ ದೃಷ್ಟಾಂತಗಳು ಪ್ರತಿ ಜಮಾಬಂದಿಯ ಕಾಲಕ್ಕೂ ಇನ್ನೂ ನಮ್ಮ ಕಣ್ಣಿಗೆ ಬೀಳುತ್ತಲೇ ಇವೆ. ಹೀಗಿದೆ ಗೌಡ-ಕುಲಕರ್ಣಿಗಳ ಶಕುನಿಯಾಟ! ಗೌಡ-ಕುಲಕರ್ಣಿಗಳು ನಮಗೆ ಹೆದರಿಕೊಂಡಿದ್ದರೂ ರೈತರು ಅವರ ಭಯದಿಂದ ತೆರಿಗೆಯನ್ನು ನಮ್ಮ ಮುಖಾಂತರ ಕೊಡಲಿಕ್ಕೆ ಒಪ್ಪುವು ದಿಲ್ಲ. ಆದರೂ ಕೆಲಸವನ್ನು ಬಿಡದೆ ಮಾಡಿದ[illegible] ಗೌಡ-ಕುಲಕರ್ಣಿಗಳ 'ಅಂಧಾಧುಂದ್' ರಾಜ್ಯವನ್ನು ಇಂದ[illegible] ನಾಳೆಯಾದರೂ ಹತೋಟಿಗೆ ತರಬಹುದು ಎಂಬ ನಿಶ್ಚಯ[illegible]

CC-0. Jangamwadi Math Collection. Digitized by eGangotri

ನಮಗಿದೆ. ಸ್ವಲ್ಪಮಟ್ಟಿಗಾದರೂ ಇಂಥ ವಿಷಯಗಳಲ್ಲಿ ನಮಗಾದ ಜಯವೇ ಈ ನಿಶ್ಚಯಕ್ಕೆ ಬೆಂಬಲ. ಆದರೆ ಹಳ್ಳಿ-ಹಳ್ಳಿಯಲ್ಲಿಯೂ ಆಗಬೇಕಾದ ಸುಧಾರಣೆಗಳನ್ನು ಮಾಡಲಿಕ್ಕಾಗಿ ಹಳ್ಳಿಯಲ್ಲಿಯೇ ಕೂತು ದುಡಿಯುವ ಧೀರ-ವೀರ-ವೈರಾಗ್ಯಶೀಲ ಯುವಕರು ಬೇಕು.

ದೃಷ್ಟಾಂತಕ್ಕಾಗಿ ತೆರಿಗೆ ಒಂದನ್ನೇ ಇಲ್ಲಿ ಚರ್ಚಿಸಿದ್ದೇವೆ. ಪಂಚಾಯತುಗಳು ಅಲ್ಲಲ್ಲಿ ಏನೋ ಸ್ಥಾಪಿತವಾಗುತ್ತಲೇ ಇವೆ. ಆದರೆ ಎಷ್ಟೋ ಕಡೆ ಹಳ್ಳಿಯ ಲುಚ್ಚಾ-ಪಿತಾಮಹರು ಕೆಲಸವೇನನ್ನೂ ಮಾಡದೆ, ಹಣವನ್ನು ನುಂಗಿ ಹಾಕಿ, ಸುಳ್ಳುಲೆಕ್ಕದ ಪಟ್ಟಿಗಳನ್ನು ಗೀಚಿ, ಸರಕಾರಕ್ಕೂ ಮಂಕುಬೂದಿ ಎರಚುವುದನ್ನು ನೋಡಿದರೆ, ಎಂಥ ಒಳ್ಳೆಯ ಸರಕಾರವಾದರೂ ಏನು ಮಾಡೀತು ಎಂಬ ಉದ್ಗಾರವು ತಾನೇ ಹೊರಡುತ್ತದೆ! ಮಂಗನಿಗೆ ಮಾಗಣಿಯ ಯಜಮಾನಿಕೆ ಒಪ್ಪಿಸಿದರೆ ಮನುಷ್ಯನಿಗೆ ಆಗುವ ಲಾಭವಾದರೂ ಏನದರಿಂದ? ದರಿದ್ರ ಮನುಷ್ಯರ ಸೇವೆಗೆ ದಯಾರ್ದ್ರ ಮನುಷ್ಯನೇ ಬೇಕು. ಇಲ್ಲವಾದರೆ ಎಂಥ ಉತ್ತಮ ಸರಕಾರವು ಬಂದರೂ ಕಳ್ಳ-ಮಧ್ಯಸ್ಥರ ಕಾಟದಿಂದ, 'ದೇವರು ಕೊಟ್ಟರೂ ಪೂಜಾರಿ ಬಿಡ!' ಎಂಬಂತೆ ಆಗುವುದು ಎಂದೆಂದಿಗೂ ತಪ್ಪದು.

ಕೊನೆಯ ಮಾತು: ಕೊಂಗ್ರೆಸ್ಸಿನ ಸಿಪಾಯಿಗಳು ಇನ್ನು ಮುಂದೆ ಹಳ್ಳಿಗಳಲ್ಲಿದ್ದು ದುಡಿಯಬೇಕು.

---

# ಮುಯ್ಯಕ್ಕೆ ಮುಯ್ಯವೇ?

(ಕಿರುಗತೆ)

ಸಂಗ್ರಾಹಕರು: ಶ್ರೀ. ಗುರುನಾಥ ಜೋಶಿಯವರು

ರಷ್ಯಾ ದೇಶದ ಶ್ರೇಷ್ಠ ತತ್ತ್ವಜ್ಞಾನಿಯಾದ ಕೌಂಟ್ ಟಾಲಸ್ಟಾಯಿಯವರಿಗೆ ಒಬ್ಬ ಮಗಳಿದ್ದಳು. ಅವಳ ವಯಸ್ಸು ತೀರ ಚಿಕ್ಕದು.

ಒಂದು ದಿನ ಅವಳು ಮನೆಯಂಗಳದಲ್ಲಿ ಒಕ್ಕಲು-ಮಕ್ಕಳೊಡನೆ ಆಡುತ್ತಿದ್ದಳು. ಆಡು-ಆಡುತ್ತಿರುವಾಗ ಜಗಳ ಬಂದು ಜಗಳವಾಗಿಯೂ ಹೋಯಿತು. ಒಬ್ಬ ಹುಡುಗ ಹುಡುಗಿಯನ್ನು ಚೆನ್ನಾಗಿ ಥಳಿಸಿಬಿಟ್ಟಿದ್ದ.

ಹುಡುಗಿಯು ಅಳುತ್ತ ಅಳುತ್ತ ಮನೆಯೊಳಕ್ಕೆ ಬಂದಳು. ಹೊಡೆದವನನ್ನು ಬಾರುಕೋಲಿನಿಂದ ಚೆನ್ನಾಗಿ ಬಾರಿಸುವೆ ಎಂದಳು.

ಟಾಲಸ್ಟಾಯಿಯವರು ಅವಳನ್ನು ಹತ್ತಿರ ಕರೆದರು. ಪ್ರೇಮದಿಂದ ಅವಳ ಮೈದಡಹುತ್ತ ಎಂದರು: "ಮಗೂ, ಆ ಹುಡುಗನನ್ನು ಹೊಡೆದರೆ ಆದರಿಂದ ನಿನಗೇನು ದೊರೆತ ಹಾಗಾಯಿತು? ಹೊಡೆದರೆ ಪುನಃ ನಿನಗೆ ಏಟು ಬೀಳಬಹುದು; ಅವನಿಗೆ ಕೋಪ ಬಂದಿತ್ತು, ಆದುದರಿಂದಲೇ ನಿನಗೆ ಆತ ಹೊಡೆದ. ಸ್ವಲ್ಪ ಹೊತ್ತು ಅಲ್ಲದ ನುಡಿಗಳನ್ನಾಡಿದ. ನಾನು ಅವನನ್ನು ದಂಡಿಸಿದರೆ ನನ್ನ ಮೇಲೂ ರೇಗಿಗೆದ್ದು ಸಲ್ಲದ ಶಬ್ದಗಳನ್ನು ಉಸುರುವ. ಇದಕ್ಕೆ ಬದಲಾಗಿ ಅವನು ನಮ್ಮನ್ನು ಪ್ರೀತಿಸುವಂತಹ ಕೆಲಸವನ್ನು ನಾವೇಕೆ ಮಾಡಬಾರದು? ಹೋಗು ಮಗು, ಅಲ್ಲಿ ಸೀಸೆಯಲ್ಲಿ ಸರಬತ್ತು ಇದೆ. ಅವನಿಗೊಂದು ಬಟ್ಟಲು ಮಧುಪಾನ ಮಾಡಿಸಿ ಬಾ-ಹೋಗು.!"

ಆ ಹುಡುಗಿಯು ಆ ಹುಡುಗನಿಗೆ ಮಧುಪಾತ್ರವನ್ನು ಒಯ್ದು ಕುಡಿಯಲು ಕೊಟ್ಟಾಗ, ಅವರಿಬ್ಬರ ಅಂತಃಕರಣಗಳಲ್ಲಿ ಎಂತಹ ಭಾವನೆಗಳೆದ್ದಿರಬಹುದೆಂಬುದನ್ನು ನೀವು ಅರಿಯಬಲ್ಲಿರಾ?



CC-0. Jangamwadi Math Collection. Digitized by eGangotri

ಸಣ್ಣ ಕತೆ

# ವಿಚಿತ್ರ ಪ್ರಸಂಗ

ಶ್ರೀ॥ ಆರ್. ಎನ್. ಮುಳಗಿ, ಹುಬ್ಬಳ್ಳಿ

ಬರಿಯೆ ಸನ್ನಿವೇಶದ ವೈಚಿತ್ರ್ಯದಿಂದಲೆ ವಾಚಕರ ಮನಸ್ಸನ್ನು ಕಾತರಗೊಳಿಸುತ್ತ ಹೋಗುವುದೂ ಒಂದು ಬಗೆಯ ಕತೆಗಾರಿಕೆ. ಅಪರಿಚಿತ ಸ್ಥಳದಲ್ಲಿ ತಾನಾಗಿ ಬಂದಿವಟ್ಟ ಮನೋರಮೆಯ ಕಳವಳವು ಯಾರನ್ನೂ ಉಸಿರನ್ನು ಬಿಗಿಹಿಡಿಸದಿರದು. ಎಲ್ಲವೂ ಸುಸೂತ್ರವಾಗಿ ಕೊನೆಗಂಡುದು ಸಮಾಧಾನದ ನಿಟ್ಟುಸಿರನ್ನು ಹೊರಕ್ಕೆ ಹಾಕಿಸದೆ ಇರದು. § § §

ಮನೋರಮೆಗೆ ಮೂರುವಾರಗಳಿಂದಲೂ ಮೈಯಲ್ಲಿ ಚೆನ್ನಾಗಿರಲಿಲ್ಲ. ಮಾರ್ಗಕ್ರಮಣದಿಂದ ಆಯಾಸ ಗೊಂಡಿದ್ದಳು. ಅವಳೀಗ ಕಲ್ಕತ್ತೆಯಿಂದ ತನ್ನ ಪತಿ-ಯೊಡನೆ ಈ ವಿಜಾಪುರಕ್ಕೆ ಬಂದಿರುವಳು. ಮರುದಿನ ತನ್ನ ತವರುಮನೆಗೆ ಹೋಗತಕ್ಕವಳು. ಮೈಸೂರುತನವು ಸಂಕ್ಷಿಪ್ತರೂಪದಿಂದ ಮನೋರಮೆಯಲ್ಲಿ ಪ್ರಕಟಗೊಂಡಿತ್ತು.

ಅವಳು ಸ್ವಭಾವತಃ ಅಂಜುಬುರುಕಳು. ದಿನ-ದಿನದ ಪ್ರವಾಸದಿಂದ ಬಹು ಕಂಗೆಟ್ಟಿದ್ದಳು. ಮೊದಲೆಂದೂ ಮನೆಯಿಂದ ಹೊರಬಿದ್ದವಳಲ್ಲವಾದುದರಿಂದ, ಪ್ರಯಾಣ ವಿಷಯಕವಾದ ದಿಗಿಲೂ, ಇತರ ಜನಗಳಲ್ಲಿ ಅಪನಂಬಿಕೆಯೂ ಅವಳಲ್ಲಿದ್ದುವು. ಇವಳ ಮೈಸೂರಿನ ಭಾಷೆಯನ್ನು ಕೇಳಿ-ದೊಡನೆಯೇ ಈ ಕಡೆಯವರು ನಿರ್ಭಿಡೆಯಿಂದ ನಕ್ಕು ಬಿಡುತ್ತಿದ್ದರು; ಅನೇಕರಿಗೆ ಅದು ತಮಿಳೋ ತೆಲುಗೋ ಎಂಬ ಸಂದೇಹವನ್ನುಂಟುಮಾಡುತ್ತಿತ್ತು. ಭಾಷೆಯನ್ನು ಆದಷ್ಟು ಸರಿಪಡಿಸಿಕೊಂಡು ಈ ಕಡೆಯವರಿಗೆ ಅದು ಅರ್ಥವಾಗುವಂತೆ ಅವಳು ಮಾಡಿದ ಹಲವು ಪ್ರಯತ್ನ ಗಳೆಲ್ಲವೂ ವಿಫಲವಾದುವು. ಆದರೂ ಇಲ್ಲಿಯವರು ಹೆಚ್ಚು ಮಾತಿನವರಲ್ಲವಾದುದರಿಂದ ಹೆಚ್ಚಿನ ತೊಂದರೆ ಯಿಲ್ಲವೆಂದುಕೊಂಡಳು.

ರಾತ್ರಿ ಸುಮಾರು ಹನ್ನೊಂದುಗಂಟೆಯಾಗಿತ್ತು. ಕೃಷ್ಣ-ಪಕ್ಷವಾದುದರಿಂದ ಕತ್ತಲೆಯು ದಟ್ಟವಾಗಿತ್ತು. ಅದೇ ಬಂದ ಪತಿ-ಸತ್ನಿಯರು ಭವ್ಯಭೋಜನಾಲಯವೊಂದನ್ನು ಆಶ್ರಯಿಸಿದರು. ಊಟವು ಇಬ್ಬರಿಗೂ ಬೇಕಾಗಿರಲಿಲ್ಲ. ವಿಶ್ರಾಂತಿಯು ಅತ್ಯಾವಶ್ಯಕವಾಗಿತ್ತು. ಮನೋರಮೆಯೊಡನೆ ಮಾತನಾಡುತ್ತಾ ದಾಸಿಯು ಕೆಲಕಾಲ ಕುಳಿತಿದ್ದಳು. ಕೊನೆಗೆ ಅವಳು ಹೊರಡುನುವಾದೊಡನೆಯೇ ಮನೋ-ರಮೆಯು, ನಿಲ್ಲುವಂತೆ ಕೈಸನ್ನೆಯಿಂದ ತಿಳಿಸಿದಳು. ಬಹು ಬೆವರಿದ ಮನೋರಮೆಗೆ ಮೈತೊಳೆಯುವವರೆಗೂ ಸೊಗಸೆನಿಸಲೊಲ್ಲದು. ಸೇವಕಿಯು ಸಮೀಪದಲ್ಲಿ ಬಚ್ಚಲ ಮನೆಯನ್ನು ತೋರಿಸಿ, ಅಲ್ಲಿದ್ದ ವಿದ್ಯುದ್ದೀಪವನ್ನು ಬೆಳಗಿಸಿ, ಮನೋರಮೆಯನ್ನು ಬೆಳಗಿನಲ್ಲಿ ಸಂದರ್ಶಿಸು ವುದಾಗಿ ಬಿನ್ನವಿಸಿ ಹಿಂದಿರುಗಿದಳು. ಇಷ್ಟರಲ್ಲಿಯೆ ಮನೋರ ಮೆಯ ಪತಿಯಾದ ರಮಾಪತಿಗೆ ನಿದ್ರೆಬಂದಿತ್ತು. ಮನೋರ-ಮೆಗೆ ಮೂವತ್ತು ವರ್ಷ. ಅವಳ ಹೆಸರುಅನ್ವರ್ಥಕವಾಗಿತ್ತು.

ಬಚ್ಚಲುಮನೆಯು ಸುವ್ಯವಸ್ಥಿತವಾಗಿತ್ತು. ಮನೋರಮೆ ಯು ಮೂವತ್ತು ನಿಮಿಷಗಳ ವರೆಗೆ ಮೈಮರೆತು ಮಿಂದಳು. ಇದರಿಂದ ಸಾಕಷ್ಟು ಉಲ್ಲಾಸವು ಅವಳಲ್ಲಿ ಜನಿಸಿತು. ಅವಳು ಮೈಯನ್ನೊರಸಿಕೊಂಡು, ಒದ್ದೆಯ ಬಟ್ಟೆಗಳನ್ನು ಗಂಟುಕಟ್ಟಿಕೊಂಡು, ವಿದ್ಯುದ್ದೀಪವನ್ನಾರಿಸಿ ಕೋಣೆಯ ಕಡೆಗೆ ನಡೆದಳು.

ಕೋಣೆಯನ್ನು ಪ್ರವೇಶಿಸಿ,ವಿದ್ಯುದ್ದೀಪವನ್ನು ಹೊತ್ತಿಸಿ ಅವಳು ಬಾಗಿಲನ್ನಿಕ್ಕಿದಳು. ಕೂಡಲೆ ಒಂದು ವಿಚಿತ್ರವು

CC-0. Jangamwadi Math Collection. Digitized by eGangotri

ಘಟಿಸಿತು. ಭಯವಿಹ್ವಲರಾದವರಿಗೆ ಅಪರಿಚಿತಸ್ಥಳದಲ್ಲಿ, ಮಾರ್ಗಾಯಾಸದಿಂದ ಕಂಗೆಟ್ಟಿರುವಾಗ, ಅಪರಾತ್ರಿಯಲ್ಲಿ ಅದು ವಿಪರೀತವಾಗಿ ದಿಗ್ಭ್ರಮೆಗೊಳಿಸುವಂತಹುದು. ಮೇಲಾಗಿ ಇವಳು ಹೆಂಗಸು!

ಬಾಗಿಲ ಹಿಡಿಕೆಯು ಅವಳ ಕೈಯಲ್ಲಿ ಕಿತ್ತು ಬಂದಿತು !!

ಮನೋರಮೆಯು "ಥೂ" ಎಂದು ಮೆಲ್ಲನೆ ನುಡಿದು ಎಡಗೈಯಿಂದ ಬಾಗಿಲ ಹಿಡಿಕೆಯನ್ನು ಬಲವಾಗಿ ಒತ್ತಿದಳು. ಬಲಗೈಯಲ್ಲಿ ಅರಿವೆಯ ಗಂಟು ಇತ್ತು. ಇದು ಜಾಣತನದ ಕೆಲಸವಾಗಲಿಲ್ಲ. ಏಕೆಂದರೆ ಲಕ್ಷ್ಯಪೂರ್ವಕವಾಗಿ ಬಾಗಿಲ ಒಳಬೀಗದ ಮುಳ್ಳನ್ನು ಒತ್ತಿಹಿಡಿಯದೆ ಹಿಡಿಕೆಯನ್ನೊತ್ತಿದ್ದರಿಂದ ಬಾಗಿಲ ಒಳಬೀಗವು ಭದ್ರವಾಗಿ ಬಿದ್ದುಬಿಟ್ಟಿತು. ಹಿಡಿಕೆಯು ಮಾತ್ರ ಅಡಕವಾಗಲಿಲ್ಲ.

ಅವಳು ಪುನಃ "ಥೂ" ಎಂದುಸುರಿ, ಕೈಯಲ್ಲಿದ್ದ ಗಂಟನ್ನಿಟ್ಟು,ಬೀಗದ ಮುಳ್ಳನ್ನು ಒತ್ತಿಡಿದು,ಹಿಡಿಕೆಯನ್ನು ಕೂಡಿಸಲು ಯತ್ನಿಸಿದಳು. ಆದರೆ ಆ ಮುಳ್ಳು ಆಗ ಸರಿಪಡಿಸದ ಸ್ಥಿತಿಯಲ್ಲಿತ್ತು.'ನಾನೀಗ ದಾಸಿಯನ್ನು ಒದರಿ ಕರೆಯಬೇಕಾಗುವುದು. ಅವಳಿಗೆಚ್ಚರವಾಗುವುದೋ ಇಲ್ಲವೋ !! ಇತರರಿಗೆ ಮಾತ್ರ ನಿದ್ರಾಭಂಗವಾಗುವುದು. ಈ ಬಾಗಿಲನ್ನು ಬೆಳಗಿನಲ್ಲಿ ನೋಡಿಕೊಂಡರಾಯಿತು' ಎನ್ನುತ್ತಾ ಅವಳು ಪಲ್ಲಂಗದ ಕಡೆಗೆ ತಿರುಗಿದಳು. ಅವಳ ಮೇಲೆ ಭಯದ ಹಿಂದೆ ಭಯಗಳು ಏಕೋ ನುಗ್ಗಿಬರುತ್ತಿದ್ದುವು. ಅತ್ತ ತಿರುಗಿದೊಡನೆಯೇ ಎದೆಯೊಡೆದುಕೊಂಡಳು.

ಹಾಸಿಗೆಯ ಮೇಲೊಬ್ಬ ಪರಪುರುಷನು ಮಲಗಿದ್ದನು !!!

ಆ ಗಲ್ಲೀಮೀಸೆಯ ಕೊಬ್ಬಿದ ಕರಿಯ ಮೋರೆಯನ್ನು ಕಂಡೊಡನೆ ಅವಳಿಗೆ ಮರಣಭಯವುಂಟಾಯಿತು. ಎದೆ ಹಾರುವುದೇ ನಿಂತಂತಾಯಿತು. ಅವಳೊಮ್ಮೆ ಗಟ್ಟಿಯಾಗಿ ಚೀರಬೇಕೆಂದಳು. ವಿಚಾರಶಕ್ತಿಯು ಆಗ ಅವಳನ್ನು ತೊರೆದಿತ್ತು.

ಮರುಕ್ಷಣದಲ್ಲಿಯೇ ಅದು ಸರಿಯಲ್ಲವೆಂದು ತೋರಿತು. ಆ ಪುರುಷನನ್ನು ಕೆಲಕಾಲ ದಿಟ್ಟಿಸಿ ನೋಡಿದಳು. ಕೂಡಲೆ ಇದು ಅವನ ತಪ್ಪಲ್ಲವೆಂದೂ ತಾನೇ ಅದಕ್ಕೆ ಕಾರಣಳೆಂದೂ ಕಂಡುಕೊಂಡಳು. ಏಕೆಂದರೆ ಅದು ಮತ್ತೊಬ್ಬರ ಕೋಣೆಯಾಗಿತ್ತು !! ಸ್ತ್ರೀಯೊಬ್ಬಳ ಕೋಣೆಯಾಗಿದ್ದರೆ ಅಡ್ಡಿ ಇರಲಿಲ್ಲ; ಅದು ಪುರುಷನ ಶಯ್ಯಾಗೃಹವಾಗಿತ್ತು. ಅಲ್ಲಿದ್ದುವು ಒಂದೇತೆರನಾದ ಕೋಣೆಗಳು; ಆ ಕೋಣೆಗಳಲ್ಲಿ ಒಂದೇತೆರನಾದ ವ್ಯವಸ್ಥೆ. ಆದರೆ ಗೋಡೆಗೆ ಕೋಟು, ರುಮಾಲ, ಕೊಡೆಗಳೂ, ದೂರದ ಮೂಲೆಯಲ್ಲಿ ಬೆಲೆಬಾಳುವ ಪೆಟ್ಟಿಗೆ ಮೊದಲಾದುವೂ, ಕುರ್ಚಿಯ ಕೆಳಗೆ ಕಾಲ್ಜೋಡುಗಳೂ ಇದ್ದುವು.

ಹೇಗಿದ್ದರೂ ಹೇಗಾದರೂ ಮಾಡಿ ಅವಳು ಹೊರಗೆ ಹೋಗಬೇಕು.. ಪುನಃ ಬಾಗಿಲ ಬಳಿಗೆ ಬಂದಳು. ರಂಧ್ರದಲ್ಲಿ ಕೈಯಿಟ್ಟು ನೋಡಿದಳು; ಕೊನೆಗೆ ಹತಾಶಳಾದಳು, ಅಂತೂ ಅವಳು ನಿರ್ಬಂಧಿಸಲ್ಪಟ್ಟಳು—ಅಪರಿಚಿತ ಭೋಜನಾಲಯದ ಶಯ್ಯಾಗಾರದಲ್ಲಿ, ಒರ್ವಳೇ ಇರುವಾಗ, ಪುರುಷನೊಬ್ಬನೊಡನೆ—ಮಧ್ಯವಯಸ್ಕ ಒರಟು ಬಿಜಾಪುರದ ಅಪರಿಚಿತ ಪುರುಷನೊಬ್ಬನೊಡನೆ—, ಮನೋರಮೆಯು ನಿರ್ಬಂಧಿಸಲ್ಪಟ್ಟಳು !!

ಅತ್ತ ಒಂದು ವೇಳೆ ಪತಿಗೆ ಎಚ್ಚರವಾದರೆ!!! ಇತ್ತ ಅಪರಿಚಿತನೆದ್ದುಬಿಟ್ಟರೆ!!!

ಅವಳೀಗ ದೀರ್ಘವಿಚಾರಾಸಕ್ತಳಾದಳು. ಮೊಟ್ಟ ಮೊದಲು ವಿದ್ಯುದ್ದೀಪವನ್ನಾರಿಸಿಬಿಟ್ಟಳು. ದೀಪದಬೆಳಕಿಗೆ ಅವನೇಳುವ ಸಂಭವವಿತ್ತು. ಆಗ ಇವಳಿಗೆ ವಿಚಾರಕ್ಕಾಸ್ಪದವು ದೊರೆಯುತ್ತಿರಲಿಲ್ಲ. ಈಗೊಂದು ವೇಳೆ ಅವನಿಗೆ ಸ್ವಲ್ಪ ಎಚ್ಚರವಾದರೂ ಇವಳಿರುವುದನ್ನು ಕಂಡುಕೊಳ್ಳಲಾರನು. ಇಷ್ಟೆಲ್ಲ ಘಟಿಸಿದರೂ ಇದುವರೆಗೂ ಅವನೇಳದಿರುವುದು ಹೆಚ್ಚಿನದು. ಅವನೊಂದುವೇಳೆ ಎದ್ದರೆ ಏನು ಮಾಡುವನು? ತಾನೇನು ಹೇಳಬೇಕು? ಇವಳ ಮಾತನ್ನು ಅವನೆಂದೂ ನಂಬುವಂತಿರಲಿಲ್ಲ. ತಮ್ಮೂರಿನಲ್ಲಿದ್ದರೂ ಸಹ ಕಡುಕಷ್ಟ ಪರಿಸ್ಥಿತಿ; ಇದಂತೂ ತಮ್ಮವರೆಂಬುವರಿಲ್ಲದ ಅಪರಿಚಿತ ಕ್ರೂರಸನ್ನಿವೇಶ.

ಅವಳೇನೊ ಹೇಗಾದರೂ ಮಾಡಿ ಹೊರಗೆ ಹೋಗಬೇಕು. ಅಪರಿಚಿತನನ್ನೆಬ್ಬಿಸತಕ್ಕುದೋ? ಅದು ಸರಿಯಲ್ಲ. ಅವನು ಅವಳ ಕೊಲೆಮಾಡಲಿಕ್ಕೂ ಹಿಂದೆಗೆಯಲಿಕ್ಕಿಲ್ಲ. ಅಥವಾ ಅವನು....ಅಯ್ಯೋ, ಈ ಕಲ್ಪನೆಯು ಮತ್ತಷ್ಟು ಕಂಗೆಡಿಸುವಂತಹುದು. ಅವಳಿನ್ನು ಚೀರಬೇಕು. ಇದೂ ಸರಿಯಲ್ಲ. ಪ್ರಯತ್ನವು ವಿಫಲವಾಗುವುದು. ಜನಗಳೆಲ್ಲರೂ ಎದ್ದು ಓಡಿಬರಬಹುದು. ಅರ್ಧರಾತ್ರಿಯನಂತರ ಒಬ್ಬಳೇ ಅಪರಿಚಿತನ ಬಳಿಯಲ್ಲಿ ತಾನಿರುವುದನ್ನು ಅವರು ನೋಡಿದರೆ ಗತಿ? ತನ್ನಂಥಾ ಲೋಕಪ್ರಸಿದ್ಧ ಮನೆತನದ ಸಾಧ್ವಿಯ ಈ ಪರಿಸ್ಥಿತಿಯನ್ನು ಕಾಲಕ್ರಮದಲ್ಲಿ ಊರಿನವರು ಅರಿತರೆ? ಅಷ್ಟರಲ್ಲಿ ಪತಿಯೇ ಅಲ್ಲಿಗೆ ಬಂದುಬಿಟ್ಟರೆ?

CC-0. Jangamwadi Math Collection. Digitized by eGangotri

ಎಲ್ಲಕ್ಕೂ ಮೊದಲು ಈ ಹುಲಿಯು ಹಾಸಿಗೆಯಿಂದ ಹಾರಿ ಬಿದ್ದರೆ?

ಬೆಳಗಿನಲ್ಲಿ ತಾನು ಸೆರೆಯಾಳಾಗುವಳೋ? ಬಹುಶಃ ಅವಳು ಕೋಣೆಯಲ್ಲಿ ಬಂದುದು ಕಳವಿಗಾಗಿ ಅಥವಾ ಮಾನಹೀನ ಕೆಲಸಕ್ಕಾಗಿ ಎಂದು ಜನರೆಂದರೆ....? ಪ್ರತ್ಯುತ್ತರದಿಂದ ಪ್ರಯೋಜನವುಂಟಾಗದು. ಬಾಗಿಲನ್ನೀಗ ತೆರೆಯದಿದ್ದರೆ ಅವಳು ಇದ್ದಕ್ಕಿದ್ದಹಾಗೆ ನಿರ್ವಾಹವಿಲ್ಲದೆ ಸರ್ವನಾಶವನ್ನು ಹೊಂದುವಳು. ಹೊಗೆಯಕಿಂಡಿಯಿಂದ ನುಸುಳಿದರೆ? ಅದನ್ನು ಹತ್ತುವುದೆಂತು? ಅದು ತನ್ನನ್ನೆಲ್ಲಿ ಒಯ್ದು ಬಿಡುವುದು? ಪುನಃ ತನ್ನ ಕೋಣೆಯು ಸಿಕ್ಕ ಬೇಕು? ಮೈಯು ಕರಕಿನಲ್ಲಿ ಮುಚ್ಚಿಹೋದ ಆ ಸಂದರ್ಭ-ದಲ್ಲಿ ಇವನು ಎಚ್ಚರಹೊಂದಿ ಕಾಲನ್ನು ಹಿಡಿದೆಳೆದರೆ? ಅವನು ಯಾವಾಗ ಬೇಕಾದರೂ ಏಳುವ ಸಂಭವವಿತ್ತು. ಅವನು ಚಿಲಕವನ್ನು ಹಾಕದೆ ಏಕೆ ಮಲಗಿದನೆಂಬುದು ಅವಳಿಗೆ ತಿಳಿಯಲೊಲ್ಲದು.

ಅಷ್ಟರಲ್ಲಿ ಆದಾರೋ ಬಾಗಿಲ ಬಳಿಯಲ್ಲಿ ಹಾದು ಹೋದಂತಾಯಿತು. ಇವಳು ಕರೆಯುವ ಧೈರ್ಯಮಾಡಲಿಲ್ಲ.

ಹೊಸ ಯುಕ್ತಿಯೊಂದು ಹೊಳೆಯಿತು. ಈಗಾಗಲೇ ಎರಡು ಗಂಟೆಗೆ ಬಂದಿತ್ತು. ಆ ಮನುಷ್ಯ ವ್ಯಾಪಾರಿ-, ಯೊಬ್ಬನಂತೆ ತೋರಿದುದರಿಂದ ನಿರುಪದ್ರವಿಯೆಂದೂ ಅವನು ನಸುಕಿನಲ್ಲೆದ್ದು ಹೊರಡುವನೆಂದೂ ಬಗೆದಳು. ತಾನು ಮೂಲೆ-ಮೂಲೆಗಳನ್ನು ಹುಡುಕಿನೋಡುವ ಸ್ವಭಾವದವಳಾದರೂ ಗಂಡಸರು ಎಲ್ಲೆಡೆಗಳನ್ನೂ ನೋಡು ವುದಿಲ್ಲವೆಂದು ನಂಬಿ ಕೆಲವು ತಾಸುಗಳ ಮಟ್ಟಿಗೆ ಮಂಚದ ಕೆಳಗೆ ಅಡಗಿಕೊಳ್ಳಲನುವಾದಳು. ಅವನು ಹೋಗುವಾ-ಗಂತೂ ಹೇಗಾದರೂ ಮಾಡಿ ಬಾಗಿಲ ತೆರೆಯುತ್ತಾನೆ. ಒಡಿಕೆಯು ರಾತ್ರಿಯಲ್ಲಿ ಕಳಚಿ ಬಿದ್ದಿತೆಂದು ಅವನ ಭಾವನೆಯಾಗುವುದು. ಅವನು ಆಳುಗಳನ್ನು ಕರೆಯ ಬಹುದು; ಅಥವಾ ತನ್ನ ಚಾಕುವಿನಿಂದ ಮಳೆಯನ್ನೆಬ್ಬ ಬಹುದು. ಕೀಲಿಯನ್ನು ತೆರೆಯುವ ಕೆಲಸದಲ್ಲಿ ಗಂಡಸರೇ ಗಟ್ಟಿಗರು. ಅವನು ಹೋದ ಮರುಕ್ಷಣವೇ ತಾನು ತನ್ನ ಕೋಣೆಯನ್ನು ಸೇರಿ ಬಿಟ್ಟರೆ ಎಲ್ಲವಿಧದಿಂದಲೂ ಸುರಕ್ಷಿತ ವಾಗುವುದು. ಪತಿಯು ೯ ಗಂಟೆಯ ಮೊದಲು ಏಳುವುದೇ ಇಲ್ಲ. ಮನೋರಮೆಯು ಆನಂದಾತಿಶಯದಿಂದ ಮೈಮರೆ-ತಳು. ಒಮ್ಮೆ ಆ ಪರದೆಯನ್ನು ಮೆಲ್ಲಗೆ ಸರಿಸಿ ಪಲ್ಲಂಗದ ಕೆಳಗೆ ತೂರಿಕೊಂಡರಾಯಿತು—ಪೂರ್ಣಸುಖ! ಪರಮಾ-ತ್ಮನು ಅವಳನ್ನು ಪೊರೆದನು. ಹಗಲಿನಲ್ಲಿ ಅವಳೆಂದಿಗೂ ಇಷ್ಟು ಹೆದರುತ್ತಿರಲಿಲ್ಲ.

ಅವಳು ಒಳಸೇರಿದಳು. ನೆಲದ ಮೇಲೆ ಗುಡಾರವಿತ್ತು. ಅಷ್ಟರಲ್ಲಿಯೇ ಸ್ವಲ್ಪ ವಿಶ್ರಮಿಸಿಕೊಳ್ಳಲೆತ್ನಿಸಿದಳು. ಒಂದು ವೇಳೆ ಕೆಮ್ಮಿದರೆ ಅಥವಾ ಸೀತರೆ ಗತಿ! ಇದು ಹೆಚ್ಚು ಭೀಕರ. ಕೋಣೆಯೊಳಗೆ ಬಂದುದೇಕೆಂದು ವಿವರಿಸುವುದಕ್ಕಿಂತಲೂ ಮಂಚದ ಬುಡದಲ್ಲಿ ಅಡಗಿರುವುದರ ಕಾರಣವನ್ನು ಹೇಳು-ವುದು ಹೆಚ್ಚು ಕಠಿಣವಾಗುವುದು. ಮನೋರಮೆಯು ಅಪ್ರತಿಭೆಯಾಗಿ ಉಸಿರುಗಟ್ಟಿ ಆಲಿಸಿದಳು. ಏನೇನೂ ಕೇಳಬರಲಿಲ್ಲ; ಪರದೆಯಿಂದ ಮುಚ್ಚಲ್ಪಟ್ಟ ಈ ಪ್ರದೇಶದಲ್ಲಿ ಏನೂ ಕೇಳುವಂತಿರಲಿಲ್ಲ. ಎಲ್ಲವನ್ನೂ ಕೇಳುವುದ-ಕ್ಕಿಂತಲೂ ಇದು ಭೀಕರವಾದುದು; ಗಂಡಾಂತರವು ಪೂರ್ವ ಸೂಚನೆಯಿಲ್ಲದೆ ಘಟಿಸಬಹುದು. ಏನೇ ಆದರೂ ಈ ಅಲ್ಪಾವಧಿಯಲ್ಲಿ ಅವಳು ನಿರ್ಭಯಳಾಗಿ ವಿಚಾರಮಾಡ-ಬಹುದು. ಅಪರಿಚಿತನು ಎದ್ದರೂ ಇವಳು ಕೂಡಲೇ ಕಾಣು-ವಂತಿಲ್ಲ. ಇಲ್ಲಿಯ ವರೆಗೂ ಅವಳು ಒಂದೇ ಮನಸ್ಸಿನಿಂದ ವಿಚಾರಮಾಡಿರಲಿಲ್ಲ. ಅವಳಿಗೆ ತಲೆಯಿದ್ದೂ ತಲೆಯಿಲ್ಲ ದಂತಾಗಿತ್ತು—ಮಿದುಳು ಕೆಲಸಮಾಡುತ್ತಿರಲಿಲ್ಲ. ಸೆರೆಯಲ್ಲಿ ಸಿಕ್ಕ ಕಾಡುಪ್ರಾಣಿಯು ತಪ್ಪಿಸಿಕೊಳ್ಳಲೆಂದು ಕಂಗೆಟ್ಟು ಒದ್ದಾಡುವುದಕ್ಕಿಂತಲೂ ಹೆಚ್ಚಿನ ಜಾಣ್ಮೆಯನ್ನು ಇವಳು ತೋರಿಸಿರಲಿಲ್ಲ.

ವಿಜಾಪುರದ ಒರಟುಭಾಷೆಯಲ್ಲಿ ಏನೆಂದು ವಿವರಿಸಿ ಹೇಳಬೇಕೆಂದು ವಿಚಾರಮಾಡಿದಳು. ಅವಳ ಹಿಂದಿನ ಕೌಶಲ್ಯವು ಹೇಗೋ ಕೈತಪ್ಪಿಹೋಗಿತ್ತು. ಇದಲ್ಲದೆ ಇಲ್ಲಿಯವರು ಅದೆಷ್ಟು ಬೇಗನೆ ಏನೂ ತಿಳಿಯದಂತೆ ಏನೇನೋ ಹೇಳಿಬಿಡುವರಲ್ಲಾ!! ಅವಳು ತನ್ನ ಆಗಿನ ಪರಿಸ್ಥಿತಿಯನ್ನು ಸಹಿಸದಾದಳು. ಉಳಿದ ರಾತ್ರಿಯನ್ನು ಕಳೆಯುವಳೆಂತು? ಇವಳಿಗೆ ಮೊದಲಿನಂತೆ ತೊಂದರೆ ಯಿರಲಿಲ್ಲ, ಭಯವು ಬಹು ಹೆಚ್ಚಾಗಿತ್ತು. ಇನ್ನೂ ೩-೪-ತಾಸುಗಳನ್ನು ಕಳೆಯಬೇಕಾಗಿತ್ತು. ಕೊನೆಯ ಗಂಡಾಂತರಕ್ಕೂ ಬಲಿಯಾಗುವ ಸ್ಥಿತಿಯಿತ್ತು. ದೀರ್ಘ ಸೆಕೆಂದುಗಳು ಕಳೆದುವು. ಇವಳೂ ಪುನಃ ಪುನಃ ಪ್ರ ಚಿಂತಿಸಿದಳು. ಯತ್ನವಿಲ್ಲದಾಯಿತು. ಆಗಲೇ ಅವನನ್ನು ಒದರಿ ಎಬ್ಬಿಸಿದ್ದರೆ ವಿಹಿತವಾಗುತ್ತಿತ್ತೆಂದುಕೊಂಡು, ಆ ರುವಿಕೆಯನ್ನು ಸಹಿಸಲಾರದೆ ಪರದೆಯನ್ನು ಮೇಲಕೆ

CC-0. Jangamwadi Math Collection. Digitized by eGangotri

ಮುಂದೆ ಬಾಗಿ ಆಲಿಸಿದಳು. ಅವನು ಉಸಿರಾಡಿಸಿದಂತೆ ಭಾಸವಾಯಿತು.

ಬಚ್ಚಲುಮನೆಯನ್ನು ಬಿಟ್ಟುದು ಮೊದಲ್ಗೊಂಡು ಎಲ್ಲವೂ ಅವಳ ಕಣ್ಣೆದುರಿಗೆ ಏಕಕಾಲದಲ್ಲಿ ನುಗ್ಗಿ ಬಂದು ನಿಲ್ಲುತ್ತಿದ್ದುವು. ಅದು ಬಹುಶಃ ತನ್ನ ಕೋಣೆಯ ಪಕ್ಕದ ಕೋಣೆಯಾಗಿರಬೇಕೆಂದು ಬಗೆದಳು. ತನ್ನ ಕೋಣೆಯು ೧೦೦ನೆಯದೋ ಅಥವಾ ೧೦೧ನೆಯದೋ ಅವಳಿಗೆ ಸ್ಪಷ್ಟವಾಗಿ ಜ್ಞಾಪಕವಾಗಲೊಲ್ಲದು. ತನ್ನ ಬಾಲ್ಯಕಾಲದ ನೆನಪು ಅವಳಿಗಾಯಿತು. ಗಣಿತದಲ್ಲಿ ಕೊನೆಯ ಸ್ಥಾನವನ್ನೂ ಕತೆ ಹೇಳುವುದರಲ್ಲಿ ಮೊದಲ ಸ್ಥಾನವನ್ನು ಪ್ರತಿಸಲವೂ ಶಾಲೆಯಲ್ಲಿ ಅವಳು ಪಡೆಯುತ್ತಿದ್ದಳು. ಅವಳ ಕಲ್ಪನೆಯು ಅವಳನ್ನು ಇನ್ನೆಲ್ಲಿಗೊಯ್ಯುತ್ತಿತ್ತೋ ಏನೋ; ಅಷ್ಟರಲ್ಲಿ ಇವಳೊಂದು ಕುತ್ತಕ್ಕೀಡಾದಳು.

**ಸಂಪೂರ್ಣ ನಿಶ್ಶಬ್ದವಾಗಿರಬೇಕೆಂದು ನಿಶ್ಚಯಿಸಿದ್ದ ಮನೋರಮೆಯು, ಕಾರ್ಯವು ಕೆಡುವಂತೆ ಗಟ್ಟಿಯಾಗಿ ಸೀತುಬಿಟ್ಟಳು !!**

ಸರ್ವನಾಶ ! ಆ ರಾತ್ರಿಯಲ್ಲಿ ಎರಡನೆಯ ಬಾರಿ ಅವಳ ಹೃದಯಸ್ಪಂದನವು ನಿಂತಂತಾಯಿತು. ಎರಡನೆಯ ಬಾರಿ ಅವಳ ಮಿದುಳು ಅತಿ ನೋವಿನಿಂದ ಚೂರುಚೂರಾಯಿತು. ಆ ಕರಾಳ ಮೂರ್ತಿಯು ಎದ್ದುಬಿಡುವುದರಲ್ಲಿ ಅವಳಿಗೇನೂ ಸಂಶಯವಿರಲಿಲ್ಲ. ಅವನಿನ್ನು ಮೇಲಕ್ಕೆದ್ದು, ದೀಪವನ್ನು ಬೆಳಗಿ, ಪರದೆಯನ್ನೆತ್ತಿ ನೋಡಿಬಿಡುವನೆಂದು ಬೆದರಿದಳು. ಆ ಗಲ್ಲೀಮಿಸೆಯ ಕೊಣಪನ ಚಾಚಿದ ಮೋರೆಯ ಚಿತ್ರವನ್ನು ಅವಳು ಕೂಡಲೇ ಕಲ್ಪಿಸಿ ನೋಡಿದಳಲ್ಲದೆ ಅವನೆಲ್ಲಿ ತನ್ನನ್ನು ನೋಡಿ "ಗೌ" ಎಂದು ಬಿಡುವನೋ ಎಂದು ನಡುಗಿದಳು. ಅವನು ಅನಂತರ ತನ್ನ ದಪ್ಪವಾದ ತೋಳನ್ನು ಚಾಚಿ ತನ್ನನ್ನೆಳೆದುಕೊಳ್ಳಬಹುದು. ಆ ಮೇಲೆ ಗತಿ !! ಮುಂದಿನ ಮಾರ್ಗ !!

ಚೀರಬೇಕೆಂದರೆ ಅವಳ ಆಗಿನ ವಿಪರೀತವಾದ ಭಯವು ಅದಕ್ಕೆಡೆಗುಡಲಿಲ್ಲ. ಅವನೇ ತನ್ನನ್ನು ಕಂಡುಹಿಡಿದ ನಂತರ ಕ್ಷಮೆಬೇಡುವುದಕ್ಕಿಂತಲೂ ತಾನೇ ಮೊದಲು "ಆದದ್ದಾಗಲಿ" ಎಂದುಕೊಂಡು, ಎಬ್ಬಿಸಿ ಕ್ಷಮೆಬೇಡುವುದು ವಿಹಿತವೆಂದುಕೊಂಡಳು. ನಂತರ ಅವಳು ಹೊರಗೆ ಬಂದು, ದೀಪವನ್ನು ಹಚ್ಚಿದಳು. ಝುಗ್ಗನೆ ಕೋಣೆಯು ದೇದೀಪ್ತವಾಯಿತು. ಅವನ ಅತಿಸಮೀಪಕ್ಕೆ ಬಂದು ಕೆಮ್ಮಿದಳು; ಅವನೇಳಲಿಲ್ಲ. ನಂತರ ಧೈರ್ಯವಾಗಿ "ಸ್ವಾಮಿ" ಎಂದೊದರಿದಳು !!

ಅವನೇಳಲಿಲ್ಲ ! ಇದೇ ರಾತ್ರಿಯಲ್ಲಿ ಮೂರನೆಯ ಬಾರಿ ಅವಳ ಹೃದಯವು ನಿಂತಂತಾಯಿತು. ಎದೆಯ ಮೇಲೆ ಕೈಯಿಟ್ಟುಕೊಂಡು ಉಸಿರಾಡದೆ ಕೆಳಗೆ ಕುಳಿತಳು. ಈ ಸಲ ಅವಳ ಭಯವು ಮೊದಲಿಗಿಂತಲೂ ನೂರ್ಮಡಿಯಾಗಿಬಿಟ್ಟಿತು. ಇದರ ಮುಂದೆ ಹಿಂದಿನವುಗಳು ಸಾಸಿವೆಯಂತೆ ತೋರಿದುವು.

**ಹಾಸಿಗೆಯ ಮೇಲಿದ್ದ ಮನುಷ್ಯನು ಸತ್ತಿರುವನೆಂದು ಅವಳರಿತಳು.**

ಅವಳೆಂದೂ ಸತ್ತವರನ್ನು ಈ ಮೊದಲು ನೋಡಿರಲಿಲ್ಲ. ಮಿತಿಮೀರಿ ಎದೆಯೊಡೆದುಕೊಂಡಳು. ಮರ್ಯಾದೆಯು ಎಲ್ಲಕ್ಕೂ ಹೆಚ್ಚಿನದು. ಎದೆಗುಂದದೆ "ಸ್ವಾಮಿ, ಸ್ವಾಮಿ, ಸ್ವಾಮಿ" ಎಂದೊದರಿದಳು. ವ್ಯರ್ಥವಾಯಿತು. ಅವನ ಬಾಯಿಯು ಅರ್ಧ ತೆರೆದಿತ್ತು. ಮುಖವು ಕಳೆಗೆಟ್ಟಿತ್ತು. ಕಣ್ಣುಗಳಲ್ಲಿ ಭೀಕರತೆಯಿತ್ತು. ಮನೋರಮೆಯು "ಅಯ್ಯೋ ಅಮ್ಮಾ" ಎಂದು ಕಣ್ಣೀರು ಸುರಿಸಿ ಅತ್ತುಬಿಟ್ಟಳು. ಕೇಳುವವರಿರಲಿಲ್ಲ, ದೇವರಲ್ಲಿ ಮೊರೆಯಿಟ್ಟಳು.

ಬೆಳಗಾಗುವುದಕ್ಕೆ ಬಹುಕಾಲವಿರಲಿಲ್ಲ. ರಾತ್ರಿಯಲ್ಲಿ ಕೋಣೆಯಲ್ಲಿ ತಾನಿದ್ದುದು ಗೊತ್ತಾದರೆ ಒಳ್ಳೆಯದಲ್ಲ; ಗತಪ್ರಾಣನ ಕೊಠಡಿಯಲ್ಲಿದ್ದುದು ಗೊತ್ತಾದರೆ ಇನ್ನೂ ಕೆಟ್ಟುದು. ಅತ್ಯಂತ ಭಯಾನಕವಿದು. ಈ ಪರಕೀಯರಲ್ಲಿ ಅವರಿಗೆ ತಿಳಿಯುಂತೆ ಹೇಗೆ ವಿವರಿಸಬೇಕು? ಅದನ್ನು ನಂಬುವವರಾರು? ತಾನೇ ಕೊಲೆಪಾತಕಳೆಂದರೇನು ಗತಿ? ದೇವರೇ ಗತಿ. ತನ್ನನ್ನು ಗಲ್ಲಿಗೇರಿಸಿ ಕೊಲ್ಲುವರೋ? ತನ್ನಂಥ ಕುಲೀನಳಿಗೆ ಇಂತಹ ಅವಸ್ಥೆಯೇಕೆಂದಳು.

ತನ್ನ ತಲೆಯನ್ನು ಕಡಿಯುಗೊಡಬಾರದು. ಬೆಳಗಾಗುವುದರಲ್ಲಿ ತಾನು ತಪ್ಪಿಸಿಕೊಳ್ಳಬೇಕು. ಪುನಃ ಬಾಗಿಲಬಳಿಗೆ ಬಂದ ರಂಧ್ರವನ್ನು ಪರೀಕ್ಷಿಸಿ ನೋಡಿದಳು. ತನ್ನ ಹೆರಳಿನ ಹುರಿಯನ್ನು ಹಾಕಿತಿರುವಿ ಮುಳ್ಳನ್ನೆಳೆದಳು. ಹುರಿಯು ಹರಿದು ಹೋಯಿತು. ಇವಳು ಎಚ್ಚರದಪ್ಪಿದಂತಾದಳು.

ಮುಂದೆರಡು ಮೂರು ನಿಮಿಷಗಳ ನಂತರ ಮೇಲೆದ್ದು, ಅಪರಿಚಿತನ ಕೋಟು, ಚೀಲ, ಪೆಟ್ಟಿಗೆಗಳನ್ನು ಹುಡುಕಿದಳು. ಚಾಕೂ ಸಿಕ್ಕಲಿಲ್ಲ. ಸಿಕ್ಕರೂ ಹೆಚ್ಚು ಪ್ರಯೋಜನವಾಗುತ್ತಿರಲಿಲ್ಲ. ಅಲ್ಲಿಯದೊಂದು ಮೇಣಬತ್ತಿಯನ್ನು ಹಚ್ಚಿ, ಅರಗಿನ ಸಲಾಕೆಯನ್ನು ಕರಗಿಸಿದಳು. ಅನಂತರ ತನ್ನ ತಲೆಯಲ್ಲಿದ್ದ ಸೂಜಿಯನ್ನು ಅದರಲ್ಲಿ

CC-0. Jangamwadi Math Collection. Digitized by eGangotri

ಪುನಃ ಪುನಃ ಅದ್ದಿ, ಬೀಗದ ಮುಳ್ಳಿಗೆ ಹಚ್ಚಿದಳು. ಸೂಜಿಯ ಮೇಲೊಂದು ಗಾಜಿನ ಸಣ್ಣ ಗಿಳಿಯಿದ್ದುದರಿಂದ ಕೈಸುಡಲಿಲ್ಲ. ಸುಮಾರು ಮುಕ್ಕಾಲು ತಾಸು ಕಳೆದ ನಂತರ ಅದು ಕೈಯುಗುರಿಗೆ ಸಿಕ್ಕುವಂತಾಯಿತು. ಬಳಿಕ ಅವಳದನ್ನು ಹಿಡಿದೆಳೆಯಲು ಮುಳ್ಳು ಸರಿಯಿತು. ಬಾಗಿಲು ತೆರೆಯಿತು. ಅವಳ ಹರುಷವು ಉಕ್ಕೇರಿತು.

ಮನೋರಮೆಯು ಈ ಸಲ ತನ್ನ ಕೋಣೆಯನ್ನು ಗುರುತಿಸಿದಳು. ಹಿಡಿಸಲಾರದಷ್ಟು ಹರುಷವಾಯಿತು. ಆ ಹರುಷವು ಅಳಿಸಿಹೋಗುವಷ್ಟು ವಿಸ್ಮಯವೂ ಆಯಿತು. ಏಕೆಂದರೆ ಒಳಗಿನಿಂದ ಬಾಗಿಲು ಭದ್ರಪಡಿಸಲ್ಪಟ್ಟಿತ್ತು !!

ರಮಾಪತಿಯು ರಾತ್ರಿಯಲ್ಲೇಳುವುದಿಲ್ಲವೆಂಬುದನ್ನು ಮನೋರಮೆಯು ಚೆನ್ನಾಗಿ ಅರಿತಿದ್ದಳು. ಹಾಗಾದರೆ ಚಿಲಕವನ್ನಾರು ಹಾಕಿರಬಹುದು?

ಮನೋರಮೆಯು ಕೋಣೆಯನ್ನು ಪ್ರವೇಶಿಸಬೇಕು. ಆದುದರಿಂದ ಬಾಗಿಲನ್ನು ಬಡಿದು ಪತಿಯನ್ನೆಬ್ಬಿಸಬೇಕು. ಆಗ ಗುಟ್ಟೆಲ್ಲವೂ ರಟ್ಟಾಗುವುದು. ಅದರಿಂದ ಹಾನಿಯೇನು? ಅವಳಲ್ಲಿ ಪತಿಯ ಸಂಪೂರ್ಣ ನಂಬಿಕೆಯಿಲ್ಲವೇ ? ಭ್ರಾಮಕ ಬುದ್ಧಿಯಿಂದ ಮಾಡಿದುದನ್ನು ಕಾಲಿಗೆರಗಿದರೆ ಕ್ಷಮಿಸನೋ? ಬೇರೆಯ ಮಾರ್ಗವಂತೂ ಅವಳಿಗಿರಲಿಲ್ಲ.

ಕೊನೆಗೆ ದೇವರೇ ಗತಿಯೆಂದು ಬಾಗಿಲನ್ನು ಬಡಿದಳು. "ಯಾರದು?" ಎಂದು ರಮಾಪತಿಯು ಗರ್ಜಿಸಿದನು. ಪತಿಯ ದನಿಯೆಂದರಿತು ಹರುಷಿತಳಾದರೂ ಅವನು ತನ್ನನ್ನು ಕೂಡಲೆ ಬರಮಾಡಿಕೊಳ್ಳದಿರಲು ಬೆದರಿದಳು. ಪುನಃ ಬಾಗಿಲನ್ನು ಬಡಿದಳು. ಅರೆನಿದ್ದೆಯಲ್ಲಿದ್ದ ರಮಾಪತಿಯು ದಿಗ್ಗನೆದ್ದು ಬಂದು ಥಟಾರನೆ ಬಾಗಿಲನ್ನು ತೆರೆದನು. ಮನೋರಮೆಯು ಒಳಗಡಿಯಿಟ್ಟೊಡನೆ ಆಶ್ಚರ್ಯದಿಂದ ಬೊಟ್ಟು ಕಚ್ಚಿದನು.

ಮನೋರಮೆಯ ಮಂಚದಮೇಲೆ ಬೇರೊಬ್ಬ ಮಹಿಳೆಯು ಮಲಗಿದ್ದಳು. ಇವಳಿಗೆ ಪತಿಯಲ್ಲಿ ಸಂಶಯವುಂಟಾಯಿತು. ಮಲಗಿದ್ದವಳು ಮನೋರಮೆಯೆಂದೇ ನಂಬಿದ್ದ ರಮಾಪತಿಗೀಗ ಮಿತಿಮೀರಿದ ಆಶ್ಚರ್ಯವಾಯಿತು.

ಇಷ್ಟರಲ್ಲಿ ಆ ನವೀನ ಸುಂದರಿಯು ಎಚ್ಚತ್ತು ಎದ್ದು ಕುಳಿತಳು. ಪತಿ-ಪತ್ನಿಯರಿಬ್ಬರೂ ಆನಂದಾಶ್ಚರ್ಯಗಳಿಂದ ರೋಮಾಂಚಿತರಾದರು.

"ಅಕ್ಕಾ, ಈ ಊರಿಗೆ ನೀನೆಂದು ಬಂದೆ? ಈ ಕೋಣೆಯಲ್ಲಿ ಬಂದುದೆಂತು?" ಎಂದು ರಮಾಪತಿಯೆಂದನು. "ಅಮ್ಮಾ, ಅಪ್ಪನೆಲ್ಲಿ?" ಎಂದು ಕೇಳುತ್ತಾ ಮನೋರಮೆಯು ಅವಳನ್ನಾಲಂಗಿಸಿ ಕುಳಿತಳು. ಇವಳ ಮಾತಿಗುತ್ತರವಾಗಿ ಅವಳು ಬಾಗಿಲ ಬಳಿಬಂದ ಪುರುಷನೊಬ್ಬನ ಕಡೆಗೆ ಬೊಟ್ಟುಮಾಡಿ ತೋರಿಸಿದಳು.

ಕೌತುಕಾತಿರೇಕದಿಂದ ನಾಲ್ವರೂ ನಲಿದಾಡಿದರು. ಮನೋರಮೆಯ ಮನದಲ್ಲಿ ಭಯದ ಬೀಜವೊಂದಿತ್ತು. ಅದೂ ಈಗ ನಾಶವಾಯಿತು. ಅವಳ ಆ ಸತ್ತಮಷ್ಯನು ಕಾಲಕ್ರಮದಲ್ಲಿ ಮೇಲೆದ್ದು ಇವರ ಕೋಣೆಯ ಮುಂದೆ ಜೋಲಾಡುತ್ತಾ ಹೋದನು. ರಾತ್ರಿಯಲ್ಲಿ ಅವನು ಮದಿರಾಸಕ್ತನಾಗಿದ್ದನೆಂದು ಮನೋರಮೆಯರಿತಳು.

BALARKAMADHU

M.V.PRASADIKA
OUSHADHALAYA
SHIMOGA.

ಬಾಲಾರ್ಕಮಧು—ಮಕ್ಕಳಿಗೆ ಇದನ್ನು ಕೊಡುವುದರಿಂದ ಶಕ್ತಿಯೂ ಆರೋಗ್ಯವೂ ಹೆಚ್ಚುವುದು. ಇದು ಮಧುರವಾಗಿದೆ. ಬೆಲೆ ಶೀಸೆ ೧ಕ್ಕೆ ೦-೧೨-೦. ಟ.ಖ.೦-೧೩-೦

ಚಕ್ರಬಿಂದು:—ಪಿತ್ತಕೋಶ ಪ್ಲೀಹ (Spleen and Lever Enlargement ) ಎಂಬ ಮಕ್ಕಳ ಗಡ್ಡೆರೋಗಕ್ಕೆ ಪರಮೌಷಧ.

ತಿಂಗಳ ಔಷಧ ಬೆಲೆ V. P. ಸೇರಿ ೩-೮-೦
ಎಂ. ವಿ. ಪ್ರಾಸಾದಿಕ ಔಷಧಾಲಯ,
ಶಿವಮೊಗ್ಗಾ ( ಮೈಸೂರು ಸೀಮೆ )

CC-0. Jangamwadi Math Collection. Digitized by eGangotri



**ಹಗಲುಗನಸುಗಳು:** ಲೇಖಕರು: ಶ್ರೀಮಾನ್ ಎ. ಎನ್. ಮೂರ್ತಿರಾವ್; ಪ್ರಕಾಶಕರು: ಶಿವಮೊಗ್ಗ ಕರ್ಣಾಟಕಸಂಘ. ಬೆಲೆ ೧೨ ಆಣೆ. ಪುಟ ೯೦.

ಈ ಪುಸ್ತಕದ ಹೆಸರನ್ನು ಓದಿದ ಕೂಡಲೆ ಇದೊಂದು ಮಾನಸಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕವೆಂದು ಭ್ರಮೆಯಾಗುವಂತೆ ಇದೆ. ಆದರೆ ಇದೊಂದು ಲಲಿತ ಸಾಹಿತ್ಯ ಗ್ರಂಥ. ಪುಸ್ತಕದ ಹೆಸರು ಇನ್ನಿಷ್ಟು ಲಲಿತವಾಗಬಹುದಾಗಿತ್ತು. ಲೇಖಕರು ಇಲ್ಲಿರುವುವು ಪ್ರಬಂಧಗಳೆಂದು ಹೇಳುತ್ತಾರೆ. ಆದರೆ ಅವುಗಳಲ್ಲಿ ಕೆಲವನ್ನು ಕಥನಪ್ರಬಂಧಗಳೆಂದೂ ಕರೆಯಬಹುದು. ೧೯೩೩ನೆಯ ಇಸವಿಯ ದೇವರಾಜ ಬಹದ್ದೂರ್ ಬಹುಮಾನವು ಈ ಪುಸ್ತಕಕ್ಕೆ ದೊರೆತಿತ್ತು. ಆದರೆ ಆ ಒಂದು ಸಂಗತಿಯಿಂದಲೇ ಈ ಪುಸ್ತಕದ ಗುಣದ ವಿಷಯವಾಗಿ ಪೂರ್ವಗ್ರಹವನ್ನಿಟ್ಟುಕೊಳ್ಳುವುದು ಸರಿಯಾಗಲಿಕ್ಕಿಲ್ಲ.

ಈ ಸಂಗ್ರಹದಲ್ಲಿ ಪ್ರಬಂಧಗಳೂ ಕಥನಪ್ರಬಂಧಗಳೂ (ಕತೆಗಳೂ) ಕೂಡಿ ಏಳು ಇವೆ. ಇವು ಏಳಕ್ಕೂ ಒಂದು ಸಾಮೂಹಿಕ ಹೆಸರನ್ನು ಕೊಡುವುದು ಸುಲಭವಲ್ಲ. 'ಹಗಲುಗನಸುಗಳು' 'ಹೂವುಗಳು' 'ಗಾಡಿಯ ಪ್ರಯಾಣ' ಇವು ಮೂರನ್ನು ಭಾವನಾಲಹರಿಯುಳ್ಳ ಪ್ರಬಂಧಗಳೆಂದು ಹೇಳಬಹುದು. 'ಗೌರಜ್ಜಿ' 'ಕುರುಡ' 'ಲಲಿತೆಯ ವಿದ್ಯಾಭ್ಯಾಸ' 'ಪ್ರಣಯಯಾತ್ರೆ' ಇವುಗಳನ್ನು ಕಥನ ಪ್ರಬಂಧ (narrative sketches) ಗಳೆಂದು ಕರೆಯಬಹುದು. 'ಗೌರಜ್ಜಿ' ಎಂಬುದು ಒಂದು ವ್ಯಕ್ತಿಯ ಭಾವನಾತ್ಮಕ ವೃತ್ತಾಂತವಾಗಿದೆ. 'ಕುರುಡ' ಎಂಬುದರಲ್ಲಿ ಒಂದು ಸನ್ನಿವೇಶವ ಚಿತ್ರವಿದ್ದು, ಪ್ರಬೋಧಕ ವಿಚಾರಲಹರಿಯಿಂದ ಕೂಡಿದೆ. ಕೊನೆಯವೆರಡರಲ್ಲಿ ವ್ಯಕ್ತಿಗತ ಚಿತ್ರಗಳಿದ್ದು, ಆತ್ಮೀಯ ವೃತ್ತಾಂತಗಳನ್ನೊಳಗೊಂಡ ಕತೆಗಳಂತಿವೆ. ಅಂತೆಯೇ ಇಡಿ ಸಂಗ್ರಹವನ್ನೂ ಒಂದು ನಿರ್ದಿಷ್ಟ ಹೆಸರಿನಿಂದ ಕರೆಯಲಾರೆವು.

ಇನ್ನು ಈ ಪುಸ್ತಕವು ಕನ್ನಡಕ್ಕೆ ಹೊಸರೀತಿಯದೆಂದು ಒಪ್ಪಬೇಕು. ಸಣ್ಣ ಕತೆಗಳಿಗೂ ಪ್ರಬಂಧಗಳಿಗೂ ನಡುವೆ ಇರುವ ಭಾವನಾಚಿತ್ರಗಳ ಗುಂಪಿಗೆ ಸೇರಬಹುದಾದ 'ರಾಮಾಚಾರಿಯ ನೆನಪು' ಮುಂತಾದ ಪುಸ್ತಕಗಳು ಕನ್ನಡದಲ್ಲಿ ಒಂದೆರಡು ಮಾತ್ರ. ಪ್ರಸ್ತುತ ಸಂಗ್ರಹದಲ್ಲಿರುವ 'ಹಗಲುಗನಸುಗಳು' ಮುಂತಾದ ಪ್ರಬಂಧಗಳು ಆಂಗ್ಲೇಯ ಪ್ರಬಂಧಗಳ ರೀತಿಯನ್ನು ಹೋಲುತ್ತಿದ್ದು, ಲಿಂಡ್‌ನಂತಹ ಲೇಖಕರ ನೆನಪನ್ನು ತಂದುಕೊಡುತ್ತಿವೆ. ನಿರರ್ಗಳವಾಗಿ ಹರಿಯುವ ವಿಚಾರಲಹರಿ, ಆತ್ಮೀಯತೆ ಇವುಗಳು ಇಂತಹ ಪ್ರಬಂಧಗಳ ಗುಣಗಳು. ಈ ಪುಸ್ತಕದಲ್ಲಿ ಇನ್ನುಳಿದ ಕಥನಪ್ರಬಂಧಗಳಲ್ಲಿಯೆ ಕಥನರೀತಿ, ಆತ್ಮೀಯ ಶೈಲಿ ಇವುಗಳು ಮನವನ್ನು ಸೆಳೆಯುತ್ತಿವೆ.

'ಗೌರಜ್ಜಿ' ಎಂಬುದು ಒಂದು ಕಥನಚಿತ್ರ. ಅದರಲ್ಲಿ ಗೌರಜ್ಜಿಯ ಪಾತ್ರವು ಸ್ಫುಟವಾಗಿ ಮೂಡಿದೆ. ಹಳೆಯ ಕಾಲದ ಅತ್ತೆಯ ಯಜಮಾನತಿಯ ದರ್ಪ, ಸೊಸೆಯ ಕಾತರಸ್ಥಿತಿ, ಗೌರಜ್ಜಿ ಹೇಳುತ್ತಿದ್ದ ಹಾಸ್ಯದ ಕತೆ, ಇಂದು ಲಕ್ಷಣವಾಗಿ ಸಭ್ಯರಂತೆ ಸರ್ಜ್ ಸೂಟು ಹಾಕಿಕೊಂಡು, ಗಂಭೀರರೀತಿಯಿಂದ ವರ್ತಿಸುವ ಗೌರಜ್ಜಿಯ ಮಗನು ಬಾಲ್ಯದಲ್ಲಿ ನಡೆಸಿದ ಕಿಡಿಗೇಡಿತನ ಇವುಗಳು ಚೆನ್ನಾಗಿ ನಿರೂಪಿಸಲ್ಪಟ್ಟಿವೆ. ಗೌರಜ್ಜಿಗೆ ಚಿಕ್ಕಂದಿನಲ್ಲಿ ವೈಧವ್ಯವು ಪ್ರಾಪ್ತವಾಗಿದ್ದರೂ, ಮಕ್ಕಳಿಲ್ಲದಿದ್ದರೂ ಅವಳ ಹೃದಯವು ಕಲ್ಲಾಗಿರಲಿಲ್ಲ. ಅವರು ಒಮ್ಮೊಮ್ಮೆ "ಮೋಕ್ಷವನ್ನು ಮರೆತು ದೇವರ ಪಕ್ಷವನ್ನು ಬಿಟ್ಟು" ಹುಡುಗರ ಪಕ್ಷವನ್ನು ವಹಿಸುತ್ತಿದ್ದರೆಂದು ಹೇಳಿರುವದು ಸ್ವಾಭಾವಿಕವೂ ಸುಂದರವೂ ಆಗಿದೆ.

'ಹಗಲುಗನಸುಗಳು' ಎಂಬುದು ಒಂದು ರಮ್ಯ ಭಾವನಾಲಹರಿಯಾಗಿದೆ. 'ಭಾವನಾಪ್ರಪಂಚದಲ್ಲಿ ಜೀವಿಸುವ ಮನೋಭಾವ' ದಿಂದ ಚಿತ್ರಿಸಿದ ಪ್ರಬಂಧವಿದು. ವಾಸ್ತವ ಪ್ರಪಂಚದ ವೇಳಾಪಟ್ಟಿಯು ಯಾಂತ್ರಿಕವಾಗಿರುತ್ತದೆ. ಅಲ್ಲಿ ನೂತನ ಸಂಘಟನೆ, ಅದ್ಭುತ, ವಿಚಿತ್ರ ವ್ಯಾಪಾರಗಳು ಇರುವುದಿಲ್ಲ. ಆದುದರಿಂದಲೇ ಮನುಷ್ಯನು ಹಗಲುಗನಸುಗಳ ಭಾವನಾಪ್ರಪಂಚವನ್ನು ಅಪೇಕ್ಷಿಸಿ ಅಲ್ಲಿ ವಿಹರಿಸಿ ಆನಂದವನ್ನು ಪಡೆಯುತ್ತಾನೆ. ಲೇಖಕರು ಕನಸಿನ ವಿವಿಧಸನ್ನಿವೇಶಗಳನ್ನು ಕಾಂಡಪಟದಂತೆ ನಮ್ಮೆದುರು ತಂದು ನಿಲ್ಲಿಸುತ್ತಾರೆ. ಆ ಯಕ್ಷಪ್ರಪಂಚ

CC-0. Jangamwadi Math Collection. Digitized by eGangotri

ಮುನ್ನೋಡುವ ಕುದುರೆ! ಇದೊ! ಮುನ್ನೋಡುವ ಆ ಬಂಟ! ವಾತಾಪಿಪುರಕ್ಕೆ ಬೆನ್ನುತೋರಿಸಿ ವಾತಾಪಿಪುರವು ಬೆನ್ನಟ್ಟುವ ಮುನ್ನ ಓಡಿ ಹೋಗುವ ಈ ಬಂಟ" ಎಂದು ಅಣಕುಮಾತುಗಳಿಂದ ಕೆಣಕುತ್ತಾನೆ. ಸಖ್ಯದ ಸಲುಗೆಯ ಮಾತಾದರೂ ರಾಜರಕ್ತದ ವೀರಕ್ಷತ್ರಿಯನಿಗೆ ಸಲ್ಲುವ ಪರಿಹಾಸವಿದಲ್ಲ. ಇದಕ್ಕೆ ಪ್ರತಿಯಾಗಿ 'ಸತ್ಯಾಶ್ರಯ' ಚಕ್ರವರ್ತಿಯಾದಮೇಲೂ ಪುಲಕೇಶಿಯು ರವಿಕೀರ್ತಿಯ ಕವಿತ್ವವನ್ನು ಕಡೆಯಾಡದೆ ಬಿಟ್ಟಿಲ್ಲ.

ಮುಖ್ಯವಾಗಿ ಇದರಲ್ಲಿಯ ಮಾಧವಶರ್ಮನ ಪಾತ್ರ ಬಹಳ ವಾಸ್ತವಿಕವಾಗಿದೆ. ೭ನೆಯ ಶತಮಾನದಲ್ಲಿದ್ದ ಮಾಧವ ಶರ್ಮನವನಾಗಿದ್ದರೂ, ಇಂತಹ ಮಾಧವಶರ್ಮರನ್ನು ಸಂತತವೂ ಕಾಣುತ್ತೇವೆ. ಯಾವುದೊಂದು ಇಂದಿನ ಸಾಮಾಜಿಕ ನಾಟಕದಲ್ಲಿ ಈ ಪಾತ್ರ ಬಂದರೂ ಆಭಾಸವೆನಿಸದು. ಅಂತೆಯೆ ಶ್ರೀರಂಗರ ಸ್ವಭಾವಸಿದ್ಧವಾದ ಹಾಸ್ಯಗಾರಿಕೆಯು ಈ ಪಾತ್ರದಲ್ಲಿ ಮೈವೆತ್ತು ನಿಂತಿದೆ. ಇಲ್ಲಿಯ ಮಾಧವಶರ್ಮನ ಹಾಸ್ಯವು ಒಬ್ಬರ ಮನಸ್ಸನ್ನು ನೋಯಿಸುವಂತಹದಲ್ಲ; ಎಲ್ಲರ ಹೃದಯವನ್ನು ರಂಜಿಸುವಂತಹದು. ಶ್ರೀರಂಗರ ನಾಟ್ಯಸರಣಿಯಲ್ಲಿ 'ಪರಮೇಶ್ವರ ಪುಲಕೇಶಿ'ಗೊಂದು ವಿಶಿಷ್ಟಸ್ಥಾನವಿದೆ. ಈ 'ದೂರದ ದುಂದುಭಿ'ಯು ಶ್ರೀರಂಗರ ಭಾವೀ ಐತಿಹಾಸಿಕ ಸಾಹಿತ್ಯಕೃತಿಗಳ ಸೂಚ್ಯನಾದವಾಗಬೇಕು. ಆದರ್ಶಸಾಹಿತ್ಯಪ್ರಕಟನೆಯವರ ಪ್ರಥಮ ಪ್ರಕಟನಸಾಹಸವು ಆದರ್ಶವಾಗಲೆಂದೇ ನಮ್ಮ ಕೋರಿಕೆ.

—ನಾ. ಕು.

೬೫ **ಪಾಲಿಪಜ್ಜಪುಪ್ಫಂಜಲಿ:** ಅನುವಾದಕರು ಶ್ರೀ. ಜಿ. ಪಿ. ರಾಜರತ್ನಂ. ಬೆಂಗಳೂರಿನ, 'ಶಾಕ್ಯಸಾಹಿತ್ಯಮಂಟಪದ ಮೂರನೆಯ ಉಪಪುಷ್ಪ. ಕ್ರಾ. ಅ. ೬೪ ಪುಟಗಳು. ಬೆಲೆ ೦-೮-೦.

'ಪಾಲೀ ಪದ್ಯಸಾಹಿತ್ಯದ ಉತ್ಕೃಷ್ಟಭಾವಗಳನ್ನು ಭಾಷಾಂತರಿಸಿ, ಮೂಲದೊಡನೆ ಕೊಡಬೇಕೆಂಬ' ಶ್ರೀಮಾನ್ ರಾಜರತ್ನಂ ಅವರ 'ಯೋಜನೆಗೆ ಈ ಸಂಕಲನವು ಒಂದು ಪ್ರವೇಶ.' ಮುಂದೆ ಒಂದು ಸಂಪುಟದಲ್ಲಿ ಅವರು ಇಂತಹ ಸಾವಿರಾರು ಗಾಹೆಗಳನ್ನೂ ಅವುಗಳ ಅನುವಾದವನ್ನೂ ಸಲ್ಲಿಸಲಿದ್ದುದು ತುಂಬ ಸಂತೋಷದ ಸಂಗತಿ.

'ಈ ಸಂಕಲನದಲ್ಲಿ ವ್ಯಂಜನಕ್ಕಿಂತ ಮುಖ್ಯವಾಗಿ ಅರ್ಥವನ್ನು ಹಿಡಿದು, ಮೊದಲಿನ ಐವತ್ತು ಬಿಡಿಬಿಡಿ ಗಾಹೆಗಳಿಗೆ ಗದ್ಯಾನುವಾದವನ್ನೂ ಅನಂತರದ ಆರು ಕಾವ್ಯಭಾಗಗಳಿಗೆ ಪದ್ಯಾನುವಾದವನ್ನೂ ಕೊಟ್ಟಿದೆ.' ಅನುವಾದದೊಂದಿಗೆ ಮೂಲಪದ್ಯ-ಗಾಹೆಗಳನ್ನೂ ಕೊಟ್ಟುದರಿಂದ ಪಾಲೀಭಾಷೆಯ ಪರಿಚಯ ಮಾಡಿಕೊಳ್ಳಲಿಕ್ಕೆ ತುಂಬ ಅನುಕೂಲತೆಯನ್ನು ಮಾಡಿಕೊಟ್ಟಂತಾಗಿದೆ. ಈ ಸಂಕಲನದಲ್ಲಿಯ ಸತ್ಯದರ್ಶನವನ್ನು ನಿರೂಪಿಸುವ ಅನೇಕ ಮಾತುಗಳು, ಎಲ್ಲ ಕಾಲದವರನ್ನೂ ಎಲ್ಲ ಮತಪಂಥಗಳನ್ನೂ ಮೆಚ್ಚಿಸುವಂತಹವಾಗಿವೆ. ವೈದಿಕರು ಬುದ್ಧನನ್ನು ಒಂಬತ್ತನೆಯ ಅವತಾರವನ್ನಾಗಿ ತಿಳಿಯಲು ಹಚ್ಚಿದುದು ತ್ರಿಕಾಲಾಬಾಧಿತವಾದ ಆತನ ಸತ್ಯದರ್ಶನವೇ.

"ಏಕಂ ಹಿ ಸಚ್ಚಂ ನ ದುತೀಯಮತ್ಥಿ
ಯಸ್ಮಿಂ ಪಜಾನೋ ವಿವದೇ ಪಜಾನಂ"
—ಸುತ್ತನಿಪಾತ

"ಸತ್ಯ ಒಂದೇ, ಎರಡನೆಯದಿಲ್ಲ;
ಇದನ್ನು ತಿಳಿದರೆ ಜನರು ಜಗಳವಾಡುವುದಿಲ್ಲ!"

ಈ ದರ್ಶನವನ್ನು ಯಾವ ಮತಪಂಥದವರು ಒಪ್ಪಲಾರರು? ಇದರಲ್ಲಿ ಬರುವ ಗಾಥಾಪಾದಗಳ ಅನುವಾದಗಳೆಲ್ಲವೂ ಇದೇ ಬಗೆಯವಾಗಿವೆ.

ತಾವು ಅನುವಾದ ಮಾಡಿದ ರೀತಿ ಹೇಗೆಂಬುದನ್ನು ಶ್ರೀ. ರಾಜರತ್ನಂ ಅವರು ಹೇಳಿಯೇ ಇದ್ದಾರೆ. ಮುಖ್ಯವಾಗಿ ಅರ್ಥವನ್ನು ಹಿಡಿದು ಅನುವಾದಿಸಿದುದರಿಂದಲೇನೋ! ಕನ್ನಡಕ್ಕೆ ಹೊಸತೆನಿಸುವಂತಹ ಮಾತಿನ ರೀತಿ ಇವರ ಅನುವಾದದಲ್ಲಿ ಕಾಣುತ್ತಿದೆ. ಕೆಲಕೆಲವು ಕಡೆಯ ಅರ್ಥವು ಸಂದೇಹವನ್ನೂ ಹೊತ್ತು ನಿಂತಿರುತ್ತದೆ. ಉದಾಹರಣೆಗಾಗಿ 'ಜರಾ ಚ ಮಚ್ಚೂ ಚ' ಎಂಬ ಗಾಹೆಯೊಳಗಿನ ಮೊದಲನೆಯ ಭಾಗವನ್ನೇ ತೆಗೆದುಕೊಳ್ಳೋಣ. ಅದರ ಮೂಲವು ಹಿಗಿದೆ:

೧ ಯಥಾಪಿ ಸೇಲಾ ವಿಪುಲಾ
ನಭಮಾಹಚ್ಚ ಪಬ್ಬತಾ।
ಸಮಂತಾನುಪರಿಯೇಯ್ಯುಂ
ನಿಪ್ಫೋಟೇನ್ತೋ ಚತುದ್ದಿಸಾ।
ಏವಂ ಜರಾ ಚ ಮಚ್ಚೂ ಚ
ಅಧಿವತ್ತಂತಿ ಪಾಣಿನೋ॥

ಅನುವಾದವು ಹೀಗಿದೆ:

"ಆಕಾಶವನ್ನು ಮುಟ್ಟುವ
ದೊಡ್ಡಕಲ್ಲಿನ ಪರ್ವತಗಳು
ನಾಲ್ಕೂದಿಕ್ಕುಗಳನ್ನೂ ಅಮುಕಿ ಒತ್ತುತ್ತ
ಸಂಪೂರ್ಣವಾಗಿ ಚಲಿಸಿಬರುವಂತೆ

CC-0. Jangamwadi Math Collection. Digitized by eGangotri

ಮುಪ್ಪುಸಾವುಗಳು
ಪ್ರಾಣಿಗಳ ಮೇಲೆ ಉರುಳಿಬರುವುವು."

ಇಲ್ಲಿ 'ಚಲಿಸಿ....ಉರುಳಿಬರುವುವು' ಪರ್ವತಗಳೋ ಪರ್ವತದ ಮೇಲಿದ್ದ ಕಲ್ಲುಗಳೋ ಎಂಬುದು ಸರಿಯಾಗಿ ಅರ್ಥಬೋಧೆಯಾಗದು. ಇದರಂತೆಯೆ 'ಚಿತ್ತ' ಎಂಬ ಗಾಥೆಯೊಳಗಿನ ೭-೮ ನೆಯ ಭಾಗಗಳೂ—ಅವುಗಳೊಳಗಿದ್ದ — ಉಪಮಾನ-ಉಪಮೆಯುಗಳು — ಸರಿಯಾಗಿ ಅರ್ಥವಾಗದಂತೆ ಅನುವಾದಿತವಾಗಿವೆ.

'ಚಿರಪ್ಪವಾಸಿಂ ಪುರಿಸಂ' ಎಂಬುದನ್ನು 'ಬಲು ಹಿಂದೆ ಪ್ರವಾಸಹೋದ ಪುರುಷನು' ಎಂದು ಹೇಳುವುದಕ್ಕಿಂತ 'ಬಹುಕಾಲ ಪ್ರವಾಸದಲ್ಲಿದ್ದವನು' ಎಂದು ಹೇಳಿದರೆ ಹೆಚ್ಚು ಉಚಿತವೆನಿಸದೇ? 'ವಣ' ಎಂಬುದರ ಸರಿಯಾದ ಅರ್ಥ 'ಹುಣ್ಣು' ಎಂದು, 'ಗಾಯ'ವೆಂದಲ್ಲ.

ಇದರಲ್ಲಿಯ ಗಾಥೆಗಳ ಭಾವಗರ್ಭಿತತೆಯನ್ನು ಸಂಪೂರ್ಣವಾಗಿ ಓದಿಯೇ ಮನಗಾಣಬೇಕು. ಉದಾಹರಣೆಗಾಗಿ ಇಲ್ಲಿ ಒಂದೆರಡು ಅನುವಾದಿತ ಭಾಗಗಳನ್ನು ಕೊಡುತ್ತೇವೆ.

'ಮಾಡಿದ ಪಾಪದ ಕೆಲಸ
ಹಾಲಿನ ಹಾಗೆ ಆಗಲೇ ಹುಳಿಯಾಗಿ ಒಡೆಯುವುದಿಲ್ಲ.
ಸುಡುತ್ತ ಬೂದಿನುಚ್ಚಿದ ಬೆಂಕಿಯಂತೆ
ಆ ಜ್ಞಾನಿಯನ್ನು ಹಿಂಬಾಲಿಸುವುದು" (ಪುಟ ೨೧).

*  *  *

"ಕಬ್ಬಿಣದಿಂದ ಎದ್ದ ಕೊಳೆಯು
ಅಲ್ಲಿ ಎದ್ದು ಅದನ್ನೇ ತಿನ್ನುವಂತೆ
ಅತಿಮೀರಿ ನಡೆಯುವವರನ್ನು
ಅವರ ಕರ್ಮಗಳೇ ದುರ್ಗತಿಗೆ ಒಯ್ಯುತ್ತವೆ" (ಪು. ೩೮)

ಪ್ರತಿಯೊಬ್ಬ ಕನ್ನಡಿಗನೂ ಓದಿ ತಿಳಿದುಕೊಳ್ಳಬೇಕಾದ ಪುಸ್ತಕ. ಮಂಗಳೂರಿನ ಧರ್ಮಪ್ರಕಾಶ ಮುದ್ರಣಾಲಯದ ಮಾದರಿಯ ಅಚ್ಚು-ಕಟ್ಟು. ನಾಡಿನ ಪ್ರತಿಯೊಂದು ವಾಚನಾಲಯದಲ್ಲಿಯೂ ಈ ಗ್ರಂಥದ ಪ್ರತಿಯೊಂದು ಇರಲೇಬೇಕು.

ಬಿ. ಪಾ. ಸಾ. ರಾವ್

೧೧೬. **ಬಾಲತ್ರಿಕೋಣಮಿತಿ:** ಕ್ರೌನ್ ಅಷ್ಟಪತ್ರ. ಪುಟಗಳು ೯೦. ಬೆಲೆ ೧೨ ಆಣೆ. ಲೇಖಕರು: ಶ್ರೀ ಎಂ. ವಿ. ಜಂಬುನಾಥನ್ ಎಂ. ಎ. ಬಿ. ಎಸ್‌ಸಿ. ಬೆಂಗಳೂರು.

ಗಣಿತಶಾಸ್ತ್ರದ ಮೇಲ್ತರಗತಿಯ ಜ್ಞಾನಕ್ಕೆ ಅಂಕಗಣಿತ, ಬೀಜಗಣಿತ, ರೇಖಾಗಣಿತ ಇವುಗಳ ಮೂಲತತ್ತ್ವಗಳ ಜ್ಞಾನವು ಅವಶ್ಯವಾಗಿರುವಂತೆ ತ್ರಿಕೋಣಮಿತಿಯ ಜ್ಞಾನವೂ ಅವಶ್ಯವಿರುವುದು. ಅಂಕಗಣಿತವು ಅಳತೆಗಳನ್ನು ಸಂಖ್ಯೆಗಳಲ್ಲಿ ಹೇಳಿದಾಗ, ಆ ಸಂಖ್ಯೆಗಳಲ್ಲಿರುವ ಪರಸ್ಪರ ಸಂಬಂಧವನ್ನು ತಿಳಿಸುವುದು. ಬೀಜಗಣಿತವು ಗಣಿತಶಾಸ್ತ್ರದ ಸಾಮಾನ್ಯ ನಿಯಮಗಳನ್ನೂ, ಸಿದ್ಧಾಂತಗಳನ್ನೂ ಸ್ಥಾಪಿಸುವ ಪರಿಭಾಷೆಯನ್ನು ಒದಗಿಸಿಕೊಡುವುದು. ರೇಖಾಗಣಿತವು ಅವಿಚ್ಛಿನ್ನವಾದ ರಾಶಿಗಳ ಅಳತೆಗಳಲ್ಲಿರುವ ಪರಸ್ಪರ ಸಂಬಂಧವನ್ನು ಪರಿಶೀಲಿಸುವುದು. ಪ್ರಮಾಣಕ್ಕೆ ಸರಿಯಾಗಿ ನಕ್ಷೆಗಳನ್ನು ತೆಗೆದು, ಅವುಗಳಲ್ಲಿನ ರೇಷೆ-ಕೋನಗಳನ್ನು ಅಳತೆಮಾಡಿ ತಿಳಿದುಕೊಳ್ಳುವುದರ ಬದಲಾಗಿ ಆ ರೇಷೆ-ಕೋನಗಳ ಅಳತೆಯನ್ನು ಲೆಕ್ಕದಿಂದ ತೆಗೆಯಲಿಕ್ಕೆ ಕಲಿಸುವ ಹಂಚಿಕೆಯು ತ್ರಿಕೋಣಮಿತಿಯಲ್ಲಿ ಇರುವುದು.

ಪ್ರಕೃತ ಪುಸ್ತಕವು ಕನ್ನಡದಲ್ಲಿ ಈ ವಿಷಯವನ್ನು ಪ್ರತಿಪಾದಿಸಿ, ಕನ್ನಡಿಗರಿಗೆ ಉಪಕಾರವನ್ನು ಮಾಡಿದೆ. ಬಿಂದುಗಳನ್ನೂ, ಕೋನದ ಪರಿಮಾಣವನ್ನು ತೋರಿಸುವ ಸಂಕೇತಾಕ್ಷರಗಳನ್ನೂ, ಅವ್ಯಕ್ತಸಂಖ್ಯೆಗಳನ್ನೂ, ಅಂಕಿಗಳನ್ನೂ ಇಂಗ್ಲೀಷಿನಲ್ಲಿ ಬರೆದು, ಮೈಸೂರು ಮಂಗಳೂರು ಕಡೆಯ ಜನರ ಈ ವಿಷಯದಲ್ಲಿರುವ ಮೊಂಡುತನಕ್ಕೆ ಇದು ಇಂಬುಗೊಟ್ಟಿದೆ; ಆದರೆ ಪುಸ್ತಕವು ಚೆನ್ನಾಗಿ ಬರೆಯಲ್ಪಟ್ಟಿದೆ. ಪಾರಿಭಾಷಿಕ ಶಬ್ದಗಳ ಪಟ್ಟಿಯೊಂದನ್ನು ಪ್ರಾರಂಭದಲ್ಲಿಯೆ ಕೊಟ್ಟಿದ್ದಾರೆ. 'Sine,' 'Cosine' ಮುಂತಾದ ರಾಶಿಗಳಿಗೆ ಪ್ರಾಚೀನ ಪರಿಭಾಷೆಯನ್ನು ಸ್ವೀಕರಿಸಲಾಗಿದೆ. ಅವು ಸಮರ್ಪಕವಾಗಿವೆ. 'ಜ್ಯಾ,' 'ಶರ,' 'ಸ್ಪರ್ಶರೇಷೆ' ಮುಂತಾದ ಹೆಸರುಗಳು ಬರುವುದಕ್ಕೆ ಕಾರಣವೂ ಪ್ರಾಚೀನರ ಕಲ್ಪನೆಯಂತೆ ಕೊಡಲ್ಪಟ್ಟಿವೆ. ಪುಸ್ತಕದ ಕೊನೆಯಲ್ಲಿ ಪರೀಕ್ಷೆಯ ಪ್ರಶ್ನೆಗಳೂ ತ್ರಿಕೋಣಮಿತಿಯ ಕೋಷ್ಟಕಗಳೂ ಕೊಡಲ್ಪಟ್ಟಿವೆ.

ಪ್ರಾರಂಭದಲ್ಲಿ ತ್ರಿಕೋಣಮಿತಿಯಲ್ಲಿ ಸಾಮಾನ್ಯವಾಗಿ ಬರತಕ್ಕ ವಿಷಯಗಳೆಲ್ಲವೂ ಬಂದಿವೆ. ಕೊನೆಗೆ ವಿಷಮತ್ರಿಕೋಣಗಳ ಬಿಡಿಸುವಿಕೆಯೂ ('ಅಂಗನಿರ್ಣಯವೂ') ತೋರಿಸಲ್ಪಟ್ಟಿದೆ. ಆದರೆ ಒಂದು ವಿಷಯವನ್ನು ಬಿಟ್ಟಿದ್ದಾರೆ. ಕೋನವನ್ನು ಅಂಶಗಳಲ್ಲಿ ಅಳೆಯುವಂತೆ ತ್ರಿಜ್ಯಕ ಪರಿಮಾಣದಲ್ಲಿ (Radian measure) ಅಳೆಯುವುದನ್ನು ತಿಳಿಸಿಲ್ಲ. ಇಂಗ್ಲಿಷಿನಲ್ಲಿ Sin A ಎಂದಾಗ A ಎಂಬ ಕೋನವು ಅಂಶಗಳಲ್ಲಿರುವುದೆಂದೂ Sin $\theta$ ಎಂದು ಹೇಳಿದಾಗ $\theta$ ಎಂಬುದು 'ತ್ರಿಜ್ಯಕ' ಪರಿಮಾಣದಲ್ಲಿ ಅಳೆಯಲ್ಪಟ್ಟಿದೆ—ಯೆಂದೂ ತಿಳಿದುಕೊಳ್ಳುವ ಪರಿಪಾಠವಿದೆ. ಪ್ರಸ್ತುತ ಗ್ರಂಥಕರ್ತರು ಈ ಭೇದವನ್ನೇ ಇಟ್ಟುಕೊಂಡಿಲ್ಲ. ಆದ್ದರಿಂದ ೨೧ನೆಯ ಪುಟದಲ್ಲಿ $\angle AOP$ ಎಂಬ ಕೋನವನ್ನು $\theta$ ಎಂಬ ಸಂಜ್ಞೆಯಿಂದ ಸೂಚಿಸುವುದರ ಅಗತ್ಯವು ಇರುವುದಿಲ್ಲ.

CC-0. Jangamwadi Math Collection. Digitized by eGangotri

ಅದನ್ನು O ಎಂದೋ ಬೇರೆ ಯಾವುದಾದರೊಂದು ಇಂಗ್ಲಿಷು ಅಕ್ಷರದಿಂದಲೋ ತೋರಿಸಬೇಕಾದುದು ಸರಿಯಾದದ್ದು. ಆದರೆ ರೇಡಿಯನ್ (ತ್ರಿಜ್ಯಕ) ಅಳತೆಯ ಹೆಸರನ್ನೇ ಎತ್ತದೆ, ಜ್ಯಾ $\theta$, ಕೋ ಜ್ಯಾ $\theta$ ಎಂದು ಕೇವಲ ರೂಢಿಯ ಅನುಕರಣ ಮಾಡಿದುದು ಯುಕ್ತವಾಗಿಲ್ಲ. ಜ್ಯಾ A, ಕೋಜ್ಯಾ A ಎಂದು ಎಲ್ಲೆಡೆಯಲ್ಲಿಯೂ ಉಪಯೋಗಿಸಿದ್ದರೆ ಬಾಧಕವೇನೂ ಇರಲಿಲ್ಲ.

ಕೆಲವು ಪರಿಭಾಷೆಯ ಶಬ್ದಗಳು ಈ ಪ್ರಾಂತದಲ್ಲಿ ಬಳಕೆಯಲ್ಲಿದ್ದುವುಗಳಿಂದ ಭಿನ್ನವಾಗಿವೆ. ಅವು ನಮ್ಮವುಗಳಿಗಿಂತ ಚೆಂದವಾಗಿ ಕಂಡರೆ ಅವನ್ನೇ ಇಲ್ಲಿಯೂ ಉಪಯೋಗಿಸಬಹುದು. ಆದರೆ 'ನಿಷ್ಪತ್ತಿ,' 'ಕೋಟಿಕೋಣ,' 'ನ್ಯತಿಹಾರ,' ಇವುಗಳಿಗಿಂತ ಅನುಕ್ರಮವಾಗಿ 'ಗುಣೋತ್ತರ,' 'ಪೂರಕಕೋಣ,' 'ವ್ಯುತ್ಕ್ರಮ' ಎಂಬುವು ಹೆಚ್ಚು ಅನ್ವರ್ಥಕವಾದುವುಗಳೆಂದು ತೋರುತ್ತವೆ.

ಪ್ರತಿಪಾದನದ ಭಾಷೆಯಲ್ಲಿ ಸಂಸ್ಕೃತ ಶಬ್ದಗಳು ಬಹಳ ಬಂದಿವೆ. ಅವು ಹೊಸತಾಗಿ ಪ್ರಾರಂಭಿಸುವವರಿಗೆ, ಸುಲಭವಾಗಿ ತಮ್ಮಷ್ಟಕ್ಕೆ ತಾವೇ ಓದಿ ತಿಳಿದುಕೊಳ್ಳುವ ಹಾಗಿಲ್ಲ. ಮುದ್ರಣ, ಕಾಗದ, ಕಟ್ಟು ಮುಂತಾದುವು ಸೊಗಸಾಗಿವೆ. ಬರೆದವರು ವಿದ್ವಾಂಸರಿದ್ದು ಬಹಳ ಪರಿಶ್ರಮಪಟ್ಟಿದ್ದಾರೆ.

ತ್ರಿಕೋಣಮಿತಿಯ ಅಭ್ಯಾಸವನ್ನು ಪ್ರಾರಂಭಿಸುವುದಕ್ಕೆ ಆಂತರಿಕ ಆಗತ್ಯವು ಯಾವುದು....ಎಂಬುದನ್ನು ಉದಾಹರಣೆಗಳಿಂದ ತಿಳಿಸಿ ಕುತೂಹಲವನ್ನುಂಟುಮಾಡಿಲ್ಲ. ವಿಷಯವು ಹುಡುಗರಿಗೆ ಮನೋರಂಜನೆಯಾಗುವಂತೆ ಪ್ರಯತ್ನಮಾಡಿಲ್ಲ. ಇವೇ ಈ ಪುಸ್ತಕದ ಕೊರತೆಗಳು. ಆದರೂ ಸಾಂಪ್ರದಾಯಿಕ ರೀತಿಯಿಂದ ಎಲ್ಲ ಪ್ರಮೇಯಗಳನ್ನೂ ತಿಳಿಸಿದ್ದಾರೆ. ಕನ್ನಡದಲ್ಲಿಯೇ ಕಲಿತು ಪರೀಕ್ಷೆಯ ಉತ್ತರಗಳನ್ನು ಕನ್ನಡದಲ್ಲಿಯೇ ಬರೆಯಬೇಕೆನ್ನುವವರಿಗೆ, ಈ ಪುಸ್ತಕವು ತುಂಬ ಅನುಕೂಲವಾಗಿದೆ. ಅಲ್ಲದೆ ಗಣಿತಶಾಸ್ತ್ರದ ಮುಖ್ಯಾಂಗಗಳಲ್ಲಿ ಒಂದಾದ ತ್ರಿಕೋಣಮಿತಿಯ ಪರಿಭಾಷೆಯನ್ನು ಜನರಲ್ಲಿ ಪ್ರಸಾರಮಾಡಿದ ಶ್ರೇಯಸ್ಸು ಗ್ರಂಥಕರ್ತರಿಗೆ ಸಲ್ಲುವುದು. ಇವರಿಂದ ಇನ್ನೂ ಇಂತಹ ಗ್ರಂಥಗಳಾಗುವುದು ಬೇಕು.

—ಶೆಟ್ಟಿ ಶಾಮರಾಯ

೧೨೪ ಭೌತಶಾಸ್ತ್ರದ ಪ್ರಥಮಪಾಠಗಳು (ಭಾಗ ೧): ಬರೆದವರು ಶ್ರೀ. ಸಿ. ಎಸ್. ಶ್ರೀನಿವಾಸರಾವ ಬಿ. ಎ. ಬಿ. ಟಿ., ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜು, ಮೈಸೂರು. ಬೆಲೆ ೦—೮—೦

ಬೇಡಿಕೆಯಿಲ್ಲದೆ ಸರಕು ಸಿದ್ಧವಾಗುವುದಿಲ್ಲ. ಕನ್ನಡದಿಂದಲೇ ಹೈಸ್ಕೂಲುಗಳಲ್ಲಿ ಕಲಿಸಬೇಕೆಂದು ಗೊತ್ತಾದುದರಿಂದ, ಬೇರೆ ಬೇರೆ ವಿಷಯದ ಕನ್ನಡ ಪುಸ್ತಕಗಳ ಬೆಳಕಿಗೆ ಬರಲಾರಂಭಿಸಿದ್ದುದು ಸಹಜವೆ ಇದೆ. ಪ್ರಸ್ತುತ ಪುಸ್ತಕವು ಇದೇ ಬಗೆಗೆ ಸೇರಿದುದಾಗಿದೆ. ಕನ್ನಡದಲ್ಲಿ 'ಪದಾರ್ಥವಿಜ್ಞಾನ ಶಾಸ್ತ್ರ' ಎಂಬ ಹೆಸರಿನಲ್ಲಿ ಎರಡು ಬೇರೆ ಬೇರೆ ಪುಸ್ತಕಗಳು ಈಗಾಗಲೆ ಪ್ರಸಿದ್ಧವಾಗಿವೆ. ಧಾರವಾಡದ ಶ್ರೀ. ನ. ವೆ. ಕೋಲ್ಹಟಕರರು ಬರೆದುದು ಒಂದು; ಇನ್ನೊಂದು ಮಂಗಳೂರಿನ ಬಾಸೆಲ್ ಮಿಶನ್ನಿನವರು ಪ್ರಕಟಿಸಿದ್ದುದು. ಶ್ರೀ. ಶ್ರೀನಿವಾಸರಾಯರದು ಮೂರನೆಯ ಪುಸ್ತಕವು. ಈ ಲೇಖಕರು ಆ ಎರಡು ಪುಸ್ತಕಗಳನ್ನೂ ತಮ್ಮ ಲೇಖನಕಾಲದಲ್ಲಿ ಉಪಯೋಗಿಸಿಕೊಂಡಿದ್ದರೆ ಈ ಪುಸ್ತಕವು ಇನ್ನೂ ಹೆಚ್ಚು ಉಪಯುಕ್ತವಾಗುತ್ತಿತ್ತು; ಅದರಿಂದ ಧಾರವಾಡ, ಮಂಗಳೂರು ಮತ್ತು ಮೈಸೂರು ಮೂರು ಭಾಗದಲ್ಲಿಯೂ ರೂಢಿಯಲ್ಲಿ ಬರಬೇಕಾದ ಶಾಸ್ತ್ರೀಯ ಪರಿಭಾಷೆಯು ಎಷ್ಟೋ ಮಟ್ಟಿಗೆ ಒಂದೇ ಬಗೆಯದಾಗಬಹುದಾಗಿತ್ತು. 'Gases' ಎನ್ನುವುದಕ್ಕೆ 'ಅನಿಲವಸ್ತು'ಗಳೆಂಬ ಪ್ರತಿಶಬ್ದವನ್ನು ಶ್ರೀನಿವಾಸರಾಯರು ಉಪಯೋಗಿಸಿದ್ದಾರೆ; ಆದರೆ ಧಾರವಾಡಪ್ರಾಂತದಲ್ಲಿ 'ವಾಯುಗಳು' ಎಂದು ಹೇಳುವ ರೂಢಿಯಿದೆ.

ಈ ಪುಸ್ತಕದಲ್ಲಿ ತೀರ ಆರಂಭದ ವಿಷಯಗಳು ಅಡಕವಾಗಿದ್ದು, ಅವುಗಳ ವಿವರಣಾಪದ್ಧತಿಯು ಚೆನ್ನಾಗಿದೆ. ಮೂಲಮಾನದ (Units) ಆವಶ್ಯಕತೆಯಿಂದ ಮೊದಲ್ಗೊಂಡು ಆವಿಯ ಯಂತ್ರಗಳು (Gas Engines) ಎಂಬುದರ ವರೆಗೆ ೨೩ ವಿಭಾಗಗಳಲ್ಲಿ ವಿಷಯವಿವೇಚನೆಯಿದೆ. 'ಅನಿಲವಸ್ತು' ಎಂದು ಒಮ್ಮೆ, 'ಆವಿ' ಎಂದು ಇನ್ನೊಮ್ಮೆ ಹೀಗೆ ಬೇರೆ ಬೇರೆ ಶಬ್ದಗಳನ್ನು ಉಪಯೋಗಿಸುವ ಪ್ರಸಂಗ ಬಂದುದರಲ್ಲಿ, ಲೇಖಕರ ಕಡೆಗೆ ಅಷ್ಟು ದೋಷವಿಲ್ಲ; ಏಕೆಂದರೆ ಕನ್ನಡದಲ್ಲಿ ಸರ್ವಮಾನ್ಯವಾದ ಶಾಸ್ತ್ರೀಯ ಪರಿಭಾಷೆಯು ಇನ್ನೂ ನಿಶ್ಚಿತವಾಗಿಲ್ಲ.

ಒಟ್ಟಿನಲ್ಲಿ ಪುಸ್ತಕವು ಶಾಲೆಗಳಲ್ಲಿ ಉಪಯೋಗಿಸ[illegible] ತಕ್ಕುದಾಗಿದೆ. ಶ್ರೀನಿವಾಸರಾಯರು ಇದರಂತೆಯೆ ಇನ್ನೂ ಹೆಚ್ಚಿನ ವಿಷಯಗಳನ್ನು ಕುರಿತು, ಶಾಲೋಪಯುಕ್ತವಾದ ಬೇರೆ ಬೇರೆ ಪುಸ್ತಕಗಳನ್ನು ಬರೆಯಲೆಂದು ಹಾ[illegible]

—ಶಂ. ಬಾ.

CC-0. Jangamwadi Math Collection. Digitized by eGangotri

# ಸಾದರ ಸ್ವೀಕಾರ

### ಗ್ರಂಥಗಳು

೧೨೭ **ವಾಕ್ಯರಚನಾಕ್ರಮ** ( ಒಂದನೆಯಭಾಗ ). ಶ್ರೀ. ವೈ. ಸುಬ್ಬರಾಯರು. ಅಧ್ಯಾತ್ಮಪ್ರಕಾಶ ಕಾರ್ಯಾಲಯ ಬೆಂಗಳೂರು. ಕ್ರಾ. ಅ. ೧೮+೧೨೦ ಪುಟಗಳು. ಬೆಲೆ ೮ ಆಣೆಗಳು.

೧೨೮ **ಹೆಂಡ್ತಿ ಗಂಡನಾದರೆ** ( ಏಕಾಂಕಪ್ರಹಸನ ). ಲೇಖಕರು ಶ್ರೀ. ಕೆ. ಕಾಂತಪ್ಪಶೆಟ್ಟಿ, ಕಿರಿಯರ ಪ್ರಪಂಚ ಉಡುಪಿ. ತೊದಲ್‌ನುಡಿ ಗ್ರಂಥಮಾಲೆಯ ೯ನೆಯನುಡಿ. ಕ್ರಾ. ಅ. ೩೦ ಪುಟ. ಬೆಲೆ ೦—೪—೦.

೧೨೯ **ಪುರುಷವಧು** ( ಏಕಾಂಕಪ್ರಹಸನ) ಲೇಖಕರು, ಪ್ರಕಾಶಕರು ಮೇಲಿನವರೆ. ತೊದಲ್‌ನುಡಿ ಗ್ರಂಥಮಾಲೆಯ ೧೦ನೆಯ ನುಡಿ. ಕ್ರಾ. ಅ. ೩೪ ಪುಟ. ಬೆಲೆ ೦—೪—೦.

೧೩೦ **मॅक्सिम गोर्की** ( **व्यक्ति व वाङ्मय** ). ಶ್ರೀ. ಸ. ರಂ. ಸುಂಠಣಕರ ಎಲ್‌ಎಲ್. ಬಿ. ವಕೀಲರು ಧಾರವಾಡ. ಪ್ರಕಾಶಕರು ಶ್ರೀ. ಆರ್. ಬಿ. ಜತಾರ, ರಾಜಹಂಸ ಪ್ರೆಸ್ ಧಾರವಾಡ. ಫೂಲ್ಸ್‌ಕ್ಯಾಪ್ ಅ. ೧೬ ಪುಟಗಳು. ಬೆಲೆ ೦—೧—೦.

೧೩೧ **The Return of Shakuntala** (ಕತೆ). ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರ ಕನ್ನಡ ಕತೆಯೊಂದರ ಇಂಗ್ಲಿಷ್ ಅನುವಾದ. ಮದ್ರಾಸಿನ 'ತ್ರಿವೇಣಿ' ಮಾಸಪತ್ರಿಕೆಯಲ್ಲಿ ಪ್ರಕಟವಾಗಿದ್ದುದರ ಪುನರ್ಮುದ್ರಿತ ಪ್ರತಿ. ಅನುವಾದಕರು ಶ್ರೀ. ವ್ಹಿ. ಎಮ್. ಇನಾಮ್‌ದಾರ್ ಬಿ. ಎ. ವಿಜಾಪುರ.

೧೩೩ **ದಿ ಸ್ಟೂಡಂಟ್ಸ್ ಮಾಡರ್ನ್ ಕನ್ಸೈಜ್ ಡಿಕ್ಸನರಿ** (ಇಂಗ್ಲಿಷ್-ಇಂಗ್ಲಿಷ್-ಕನ್ನಡ): ಕೂಡಿಸಿದವರ್ರು ಶ್ರೀ. ಕೆ. ಬಿ. ಕೊಪ್ಪ ವಕೀಲರು. ಸಂಪಾದಕರು, ಪರಿಶೋಧಕರು, ಪರಿವರ್ಧಕರು ವೈದ್ಯಭಾನು ಶ್ರೀ. ಡಿ. ಕೆ. ಭಾರದ್ವಾಜ ಎಂ. ಡಿ. (ಆಯುರ್ವೇದ) ಬೆಂಗಳೂರು ಅವರು. ಪ್ರಕಾಶಕರು ಶ್ರೀ. ಪಿ. ಸಿ. ಶಾಬಾದಿಮಠ ಗದಗು. ಕ್ರಾನ್ ೧/೧೬ದ ೧೮೭೮ ಪುಟಗಳು. ಬೆಲೆ ೨—೦—೦.

೧೩೪ **सर्वलक्षणसंग्रहः** ( ಶಾಸ್ತ್ರಗ್ರಂಥ ) ಶ್ರೀ. ಭಿಕ್ಷು ಗೌರೀಶಂಕರರಿಂದ ಸಂಗೃಹೀತವಾದುದು. ಶ್ರೀ. ಕೃ. ಬ. ಪಾವಗಿಯವರಿಂದ ಕಾಶಿಯಲ್ಲಿಯ 'ಹಿತಚಿಂತಕ' ಮುದ್ರಣಾಲಯದಲ್ಲಿ ಮುದ್ರಿತವಾಗಿ ಪ್ರಕಾಶಗೊಂಡುದು. ದೊರೆಯುವ ಸ್ಥಳ ಮನಭರೀದೇವೀ ಪುಟ್ಮೆಗ್ರಾಮ, ಪೋಸ್ಟ್ ಬವಾನಿಖೇಡ; ಜಿಲ್ಲಾ ಹಿಸಾರ. ಕ್ರಾ. ೧/೧೬ದ ೧೫೮ ಪುಟಗಳು. ಬೆಲೆ ೦—೪—೦.

೧೩೫ **ಹೇಗಾದರೇನು?**: (೨ ನಾಟಕಗಳು). ಲೇಖಕರು ಶ್ರೀ. ಕೋ. ಶಿ. ಕಾರಂತರು. ಹಲಸಂಗಿಯ ಅರವಿಂದ ಗ್ರಂಥಮಾಲೆಯ ಎರಡನೆಯ ವರ್ಷದ ೨ನೆಯ ಕಮಲ. ಕ್ರಾ. ಅ. ೯೦ ಪುಟ. ಬೆಲೆ ೦—೮—೦.

೧೩೭ **ಸಂಕ್ಷೇಪ ಬಾಲರಾಮಾಯಣವು**: ( ಹುಡುಗ ಹುಡುಗಿಯರ ಉಪಯೋಗಕ್ಕಾಗಿ ಪದ್ಯಗ್ರಂಥ) ಲೇ. ಶ್ರೀ. ಎಸ್. ಎನ್. ಕೃಷ್ಣಶಾಸ್ತ್ರಿ, ಮಾಟುಂಗಾ, ಮುಂಬಯಿ. ರಾಯಲ್ ೧/೧೬ದ ೨೮ ಪುಟಗಳು. ಬೆಲೆ ೦—೮—೦.

೧೩೮ **ಕರ್ಣಾಟಕಪರಿಸ್ಥಿತಿ ಮತ್ತು ಮುಂಬಯಿ ಕನ್ನಡಿಗರು**: (ಪದ್ಯಸಂಗ್ರಹ). ಲೇ. ಶ್ರೀ. ಎಸ್. ಎನ್. ಕೃಷ್ಣಶಾಸ್ತ್ರಿ ಮಾಟುಂಗಾ ಮುಂಬಯಿ. ರಾಯಲ್ ೧/೧೬ದ ೩೦ ಪುಟ. ಬೆಲೆ ೦—೪—೦.

೧೪೩ **ಮದ್ಯಪಾನ**: ( ಚಿಕ್ಕ ಪ್ರಬಂಧ ). ಲೇಖಕರು ಶ್ರೀ. ಗುರುನಾಥ ಗೋವಿಂದ ಉಪ್ಪಾರ ಶಹಾಪೂರ. ಪ್ರಕಾಶಕರು ಶ್ರೀ. ಟಿ. ಕೆ. ಜಾಧವ ತಹಸಿಲದಾರ್‌ಗಲ್ಲಿ ಮನೆನಂಬರ ೨೪೪ (೧೦) ಬೆಳಗಾಂವಿ. ಡೆಮಿ ಅ. ೧೮ ಪುಟ. ಬೆಲೆ ೦—೧—೦

೧೪೪ **ರಂಗವಲ್ಲಿ** ( ಬೇರೆ ಬೇರೆ ಸ್ತ್ರೀಲೇಖಕರ ೧೪ ಕತೆಗಳ ಸಂಗ್ರಹ ). ಮುನ್ನುಡಿಕಾರರು ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರು. ಪ್ರಕಾಶಕರು ಶ್ರೀ. ದ. ಬಾ. ಕುಲಕರ್ಣಿ ಮನೋಹರ ಗ್ರಂಥಭಾಂಡಾರ ಧಾರವಾಡ. ಕ್ರಾ. ಅ. ೧೬+೧೭೨ ಪುಟಗಳು. ಬೆಲೆ ೧—೦—೦. ಕ್ಯಾಲಿಕೊ ೧—೮—೦.

### ಪತ್ರ-ಪತ್ರಿಕೆಗಳು

೧೩೨ ಕನ್ನಡಜ್ಯೋತಿ ( ಹೊಸ ಮಾಸಪತ್ರಿಕೆ ). ಇದೇ ಆಗಸ್ಟ್ ತಿಂಗಳಿಂದ ಬೆಂಗಳೂರುನಗರ ( ಮಲ್ಲೇಶ್ವರಂ ) ದಲ್ಲಿ ಹೊರಡುತ್ತಲಿದೆ. ಶ್ರೀಮಾನ್ ಬಿ. ಸತ್ಯನಾರಾಯಣ

CC-0. Jangamwadi Math Collection. Digitized by eGangotri

ಶರ್ಮ ಅವರು ಸಂಪಾದಕರು. ನಮ್ಮ ಕಡೆಗೆ ಬಂದಿದ್ದ ಮೊದಲನೆಯ ಸಂಚಿಕೆಯು ಕ್ರೌನ್ ೧/೮ದ ೨೬ ಪುಟಗಳಿಂದ ಕೂಡಿದೆ. [illegible]ಗಳಿಗೇ ಹೆಚ್ಚಿನ ಪುಟಗಳನ್ನು ಕೊಡಲಾಗಿದೆ. ಜನಮನೋರಂಜನವೇ ಈ ಪತ್ರಿಕೆಯ ಗುರಿಯಿದ್ದಂತೆ ತೋರುತ್ತದೆ. ೨೫ ರೂಪಾಯಿಗಳ ಬಹುಮಾನದ ಅಕ್ಷರಬಂಧಸ್ಪರ್ಧೆಯೂ ಇದೆ. ಒಂದೆರಡು ಚಿತ್ರಗಳು ಇವೆ. ವಾರ್ಷಿಕ ಚಂದಾ ೧—೦—೦. ಬಿಡಿಸಂಚಿಕೆಗೆ ೦—೧—೦.

೧೪೦-೧೪೧-೧೪೨. कल्याण (संतांक) गीताप्रेस, गोरखपूर. ೧೨ ನೆಯ ವರ್ಷದ ೧ ನೆಯ ೨ ನೆಯ ೩ ನೆಯ ಸಂಚಿಕೆಗಳು ಸಂತಾಂಕದ ಮೂರುಖಂಡಗಳಾಗಿ ಹೊರಬಿದ್ದಿವೆ. ಹಿಂದಿನ ಎಲ್ಲ ವಿಶೇಷಸಂಚಿಕೆಗಳಂತೆಯೆ ಅನೇಕ ತ್ರಿವರ್ಣಚಿತ್ರಗಳಿಂದಲೂ ಅಸಂಖ್ಯ ಹಾಫ್‌ಟೋನ್ ಚಿತ್ರಗಳಿಂದಲೂ ಇದೂ ತುಂಬ ಆಕರ್ಷಕವಾಗಿದೆ. ಭಗವಾನ್ ಸನಾತನಸದ್ಗುರುವನ್ನು ಮೊದಲುಮಾಡಿ ಪುರಾಣಕಾಲದ ಎಲ್ಲ ಭಕ್ತರ, ಇತಿಹಾಸಕಾಲದ ಎಲ್ಲ ಸಂತರ, ಆಧುನಿಕಕಾಲದ ಅನೇಕ ಸತ್ಪುರುಷರ ಸಚಿತ್ರ ಚರಿತ್ರಗಳು ಇದರಲ್ಲಿ ಸಂಗ್ರಹಗೊಂಡಿವೆ. ಆದರೆ ಒಂದು ವಿಚಿತ್ರ ಮಾತು: ಮಹಾರಾಷ್ಟ್ರದ, ತಮಿಳುನಾಡಿನ ಎಲ್ಲ ಸಂತರ ಪರಿಚಯಗಳೂ ಇದರಲ್ಲಿ ಬಂದಿದ್ದರೂ—ಶ್ರೀಮನ್‌ಮಧ್ವಾಚಾರ್ಯರ ಹೊರತು — ಕರ್ಣಾಟಕದ ಯಾವ ವೈಷ್ಣವದಾಸರ ವಿಚಾರವೂ ಇದರಲ್ಲಿ ಬಂದಿಲ್ಲ. ಅದರಂತೆಯೆ ಶಿವಶರಣರ ವಿಚಾರವೂ ಪ್ರಕಟವಾಗಿಲ್ಲ. ಹಿಂದೆ ಭಕ್ತಾಂಕದಲ್ಲಿ ಹರಿದಾಸರ ವಿಚಾರದಲ್ಲಿ ಒಂದೆರಡು ಲೇಖನಗಳು ಬಂದಿವೆಯಾದುದರಿಂದ, ಸಂಪಾದಕರಿಗೆ ಕನ್ನಡನಾಡಿನ ಸಂತಗಣದ ಇತಿಹಾಸದ ಪರಿಚಯವಿರದೆ ಹೋಗಿರಲಾರದು. ಭಾರತದ ಸಂತರ ಇತಿಹಾಸದಲ್ಲಿ ಮುಖ್ಯವಾದ ಒಂದು ಸ್ಥಾನವನ್ನು ಪಡೆಯಬಹುದಾಗಿದ್ದ ಕನ್ನಡಸಂತರಿಗೆ ಇದರಲ್ಲಿ ಸ್ಥಾನವೇ ಇರದಿರುವುದು ದೊಡ್ಡದೊಂದು ಕೊರತೆಯಿದಕ್ಕೆ. ಮೂರು ಖಂಡಗಳೂ ಸೇರಿ (ಚಿತ್ರದ ಪುಟಗಳನ್ನು ಬಿಟ್ಟು) ಕ್ರೌ. ೧/೮ದ ೮೩೪ ಪುಟಗಳನ್ನೊಳಗೊಂಡಿವೆ. ಕಲ್ಯಾಣಪತ್ರಿಕೆಯ ಚಂದಾದಾರರಿಗೆ, ಅವರು ವಾರ್ಷಿಕಮೂಲ್ಯವೆಂದು ಕೊಟ್ಟ ೪—೧೨—೦ ಗಳಲ್ಲಿಯೆ ಇಷ್ಟೊಂದು ಬೆಲೆಬಾಳುವ ಗ್ರಂಥವು ಸಿಕ್ಕುವುದು. ಮಿಕ್ಕವರು ೩—೮—೦ ಬೆಲೆ ಕೊಡಬೇಕಾಗುವುದು.

## ವರದಿ-ಸೂಚಿಗಳು

೧೪೬. **औषधांची सूची** (आयुर्वेद रसशाळा पुणे लिमिटे[illegible] ಪ್ರಕಾಶಕರು: ವೈದ್ಯ ಪ. ರ. ಗೋಡಬೋಲೆ 'ಆಯುರ್ವೇದ ವಿಶಾರದ', ಸೆಕ್ರೆಟರಿ ಆಯುರ್ವೇದ ರಸಶಾಲಾ ಪ[illegible] ಲಿ. ಡೆಕ್ಕನ್ ಜಿಮಖಾನಾ ಪುಣೆ ೪.

೧೪೭ ಮಾಗಡಿ ವೈಶ್ಯ ಕೋ-ಆಪರೆಟಿವ್ ಸೊಸೈ[illegible] ಲಿಮಿಟೆಡ್ ಈ ಸಂಸ್ಥೆಯ ೧೯೩೬-೩೭ ನೆಯ ವರ್ಷ[illegible] ಬಗ್ಗೆ ಜಮಾ-ಖರ್ಚು, ಲಾಭ-ನಷ್ಟ, ಆಸ್ತಿ-ಜವಾಬ್ದಾರಿ[illegible] ತಃಖ್ತೆ ಇವೆಲ್ಲವನ್ನು ಒಳಗೊಂಡ ಕಮಿಟಿಯ ರಿಪೋರ್ಟ[illegible] ೧೯೨೭-೨೮ ರಿಂದ ೧೯೩೬-೩೭ ರ ವರೆಗಿನ ಹತ್ತುವರ್ಷ[illegible] ಅಭಿವೃದ್ಧಿಯ ತಃಖ್ತೆಯನ್ನು ನೋಡಿದರೆ, ಈ ಸಂಸ್ಥೆ[illegible] ಸಂಪೂರ್ಣ ಪ್ರಗತಿಪರ ಸ್ಥಿತಿಯಲ್ಲಿದೆಯೆಂದು ಯಾರಿಗ[illegible] ತೋರಬಹುದಾಗಿದೆ. ಸಂಸ್ಥೆಯು ದಿನದಿನಕ್ಕೆ ಬೆಳೆ[illegible] ಚಿರಕಾಲ ಬಾಳಲೆಂದು ನಮ್ಮ ಆಶೆ.


## ಪ್ರಬುದ್ಧ ಕರ್ಣಾಟಕ

ವಿನಾಯಕನ ಹಬ್ಬ, ದೀಪಾವಳಿಯ ಹಬ್ಬ, ಸಂಕ್ರಾಂತಿಯ ಹಬ್ಬ, ಕಾಮನ ಹಬ್ಬ, ಈ ಪ್ರಸಿದ್ಧವಾದ ಹಬ್ಬ[illegible] ಹೊತ್ತಿಗೆ ಪ್ರಬುದ್ಧಕರ್ಣಾಟಕವು ವರ್ಷಕ್ಕೆ ನಾ[illegible] ಸಲ ಹೊರಡುತ್ತದೆ. ಕವನ, ಕತೆ, ಪ್ರಬಂಧ, ವಿಮ[illegible] ಚರಿತ್ರೆ, ವಿಜ್ಞಾನಶಾಸ್ತ್ರ, ಸಾಹಿತ್ಯ-ಕಲೆಗಳನ್ನು ಕು[illegible] ಲೇಖನಗಳು ಈ ಮೊದಲಾದುವನ್ನು ಪ್ರಕಟಿಸಿ, [illegible] ಜನರಿಗೆ ಆಧುನಿಕ ಮತ್ತು ಪ್ರಾಚೀನ ಸಂಸ್ಕೃತಿಗಳ [illegible] ಚಯವನ್ನು ಮಾಡಿಕೊಡುವುದೇ ಈ ಪತ್ರಿಕೆಯ ಉ[illegible]

ನಮ್ಮ ನಾಡಿನ ಶ್ರೇಷ್ಠಸಾಹಿತಿಗಳೂ ವಿದ್ವಾಂಸರೂ ಇ[illegible] ಲೇಖಕವರ್ಗದಲ್ಲಿ ಸೇರಿದ್ದಾರೆ.

| | |
|---|---|
| ಚಂದಾದಾರರಿಗೆ | ರೂ. ೨—೦— |
| ವಾಚನಾಲಯ ಮುಂತಾದ ಸಂಸ್ಥೆಗಳಿಗೆ | ,, ೩—೦— |
| ವಿದ್ಯಾರ್ಥಿಗಳಿಗೆ ಮಾತ್ರ | ,, ೧—೮— |

ಚಂದಾಹಣವನ್ನು ಮೈಸೂರು ವಿಶ್ವವಿದ್ಯಾ[illegible] ರೆಜಿಸ್ಟ್ರಾರರವರಿಗೆ ಪಾವತಿಮಾಡಬೇಕು. ಪತ್ರವ್ಯವ[illegible] ವನ್ನೆಲ್ಲಾ ಈ ಕೆಳಗಿನ ವಿಳಾಸದೊಂದಿಗೆ ನಡೆಯಿಸಬೇ[illegible]

ಸಂಪಾದಕ, ಪ್ರಬುದ್ಧ ಕರ್ಣಾಟ[illegible]
ಯುನಿವರ್ಸಿಟಿ ಲೈಬ್ರರಿ, ಮೈ[illegible]


CC-0. Jangamwadi Math Collection. Digitized by eGangotri

# ಜ್ಞಾನ-ವಿಜ್ಞಾನ

**ಜಲಸತ್ತ್ವ ಅಥವಾ ಅಮೃತಸಂಜೀವಿನಿ—ಆರೋಗ್ಯವನ್ನು ಸಾಧಿಸುವ ಕೆಲವು ಸುಲಭೋಪಾಯಗಳು—ರೋಗಿಯ ರಕ್ತವನ್ನೇ ರೋಗಿಗೆ ಚುಚ್ಚುವುದು—ಈ ಚುಚ್ಚುಮದ್ದಿನ ಉಪಯೋಗಗಳು—ಮರಣಾನಂತರದ ಅನುಭವಗಳು.**

### ಜಲಸತ್ತ್ವ ಅಥವಾ ಅಮೃತಸಂಜೀವಿನಿ

ಸ್ಕಾಟ್‌ಲಂಡಿನ ರಸಾಯನಶಾಸ್ತ್ರಸಂಶೋಧಕರೊಬ್ಬರಾದ ಡಾ. ಜೇಮ್ಸ್ ಕೆಂಡಾಲ್ ಅವರು, ಮನುಷ್ಯರನ್ನು ದೀರ್ಘಾಯುಷಿಗಳನ್ನಾಗಿ ಮಾಡಬಲ್ಲ ರಸಾಯನವೊಂದನ್ನು, ಹೊಸತಾಗಿ ಸಂಶೋಧಿಸಿರುವರು. ಈ ರಸಾಯನವನ್ನು ಸೇವಿಸುತ್ತಿದ್ದರೆ ಐವತ್ತು ವರ್ಷಗಳ ವಯಸ್ಸನ್ನು ದಾಟಿಹೋದ ಮನುಷ್ಯನಿಗೆ ಕೂಡ 'ತಾನೀಗ ಹೊಸಹರಯದಲ್ಲಿ ಕಾಲಿಟ್ಟಿದ್ದೇನೆ' ಎಂದು ಎನಿಸುತ್ತಿರುವುದು. ಈ ರಸಾಯನದಲ್ಲಿ ಮನುಷ್ಯನ ಆಯುಸ್ಸನ್ನು ಹೆಚ್ಚಿಸುವ ಸಾಮರ್ಥ್ಯವಿರುವುದರಿಂದ, ಇದಕ್ಕೆ 'ಅಮೃತಸಂಜೀವಿನಿ' ಎಂದು ಹೆಸರಿಡಬಹುದಾಗಿದೆ. ಬಹುಕಾಲ ಬಾಳಬೇಕೆಂದು ಅಪೇಕ್ಷಿಸುವವರು ಪ್ರತಿದಿನವೂ ಇದನ್ನು ಸೇವಿಸುತ್ತಿದ್ದಲ್ಲಿ, ನೂರುವರ್ಷಗಳ ವರೆಗಂತೂ ಅವರು ಖಂಡಿತವಾಗಿ ಜೀವಿಸಿರಬಹುದು. ಆದರೆ ಒಂದೇ ಒಂದು ಸಣ್ಣ ಮಾತು: ಇದನ್ನು ತೆಗೆದುಕೊಳ್ಳಬೇಕೆನ್ನುವವರ ಬಳಿಯಲ್ಲಿ ಸಾಕಷ್ಟು ಹಣವಿರಬೇಕಾಗುವುದು; ಏಕೆಂದರೆ ಒಂದು ಸವುಟಿನಷ್ಟು ಈ ಔಷಧಿಗೆ ೯೦೦ ರೂಪಾಯಿಗಳ ಬೆಲೆಯಾಗುವುದು. ಈಗ ವಿದ್ಯುಚ್ಛಕ್ತಿಯ ಉಪಯೋಗದಿಂದ ಈ ರಸಾಯನವನ್ನು ಹೆಚ್ಚಿನ ಪ್ರಮಾಣದಿಂದ ಸಿದ್ಧಗೊಳಿಸಲಿಕ್ಕೆ ಆಗುತ್ತಿದ್ದುದರಿಂದ, ಮೊದಲಿಗಿಂತ ಸ್ವಲ್ಪ ಕಡಿಮೆ ಬೆಲೆ ಬೀಳಬಹುದಿಷ್ಟೆ! ಈ ಔಷಧಿಯೆಂದರೆ ಇನ್ನೇನೂ ಅಲ್ಲ; ನೀರಿನ ಅರ್ಕವೇ ಇದೆಂದು ಹೇಳುವುದಕ್ಕೆ ಅಡ್ಡಿಯಿಲ್ಲ. ಇಂಗ್ಲಿಷ್ ಭಾಷೆಯಲ್ಲಿ ಇದಕ್ಕೆ 'Heavy water (ಭಾರವಾದ ನೀರು)' ಎಂದು ಹೆಸರಿದೆ. ನಾವು ಸಾಮಾನ್ಯವಾದ ನೀರನ್ನೆ ತೆಗೆದುಕೊಂಡು ಅದನ್ನು ಪೃಥಕ್ಕರಿಸಿನೋಡಿದಲ್ಲಿ, ಅದರ ೬೦೦೦ ಭಾಗಗಳಲ್ಲಿ ೫೯೯೯ ಭಾಗಗಳಷ್ಟು ಬರಿಯೆ ಶುದ್ಧವಾದ ನೀರಿದ್ದು, ಒಂದು ಭಾಗದಷ್ಟು ಮಾತ್ರ ಈ 'ಹೆವೀ ವಾಟರ್' ಅಥವಾ ಜಲಸತ್ತ್ವವು ಇರುತ್ತದೆಂಬುದು ನಮ್ಮ ಅನುಭವಕ್ಕೆ ಬಾರದೆ ಇರದು. ಈ ಔಷಧಿಯನ್ನು 'ಜಲಸತ್ತ್ವ' ಎಂಬ ಹೆಸರಿನಿಂದ ಕರೆಯುವುದಕ್ಕೆ ಕಾರಣವೇನೆಂದರೆ: ತುಂಬ ಹೆಚ್ಚಿನ ಪ್ರಮಾಣದಿಂದ ನೀರನ್ನು ತೆಗೆದುಕೊಂಡು, ಅದರಲ್ಲಿ ಕೆಲವು ಪದಾರ್ಥಗಳನ್ನು ಹಾಕಿ, ವಿದ್ಯುತ್ತಿನ ಉಷ್ಣತೆಯಿಂದ ಆ ನೀರನ್ನು ಎಡೆಬಿಡದೆ ಕುದಿಸಲಾಗುವುದು. ಕುದಿದು ಮರಳಿ ಎಲ್ಲ ನೀರೂ ಆಟ್ಟಿಸಿಹೋದ ಮೇಲೆ ಅದರಲ್ಲಿ ಉಳಿಯುವ ಪದಾರ್ಥವೆಂದರೆ ಅದು ನೀರಿನ ಸತ್ತ್ವವೇ ಹೊರತು ಇನ್ನೇನಿರಬಲ್ಲದು? ಈ ಸತ್ತ್ವವು ಸಾಮಾನ್ಯ ನೀರಿಗಿಂತ ಹೆಚ್ಚಿಗೇನೂ ಭಾರವಾಗಿರುವುದಿಲ್ಲ. ೧೦ ಕಪ್ಪುಗಳಷ್ಟು ಜಲಸತ್ತ್ವದ ಭಾರವು ೧೧ ಕಪ್ಪು ನೀರಿಗಿಂತ ಸ್ವಲ್ಪ ಹೆಚ್ಚಾಗಿಯೆ ಇರುವುದು, ಜಲಸತ್ತ್ವದ ರುಚಿಯು ಸಿಹಿಯಾಗಿರುವುದು. ಡಾ. ಕೆಂಡಾಲರವರು ಈ ಜಲಸತ್ತ್ವವನ್ನು ಆರುವರ್ಷಗಳಿಗೆ ಹಿಂದೆಯೆ ಕಂಡುಹಿಡಿದಿದ್ದು, ಸರ್ವಸಾಮಾನ್ಯ ಜನರಿಗೂ ಸುಲಭವಾಗಿ ಅದು ಹೇಗೆ ದೊರೆತೀತೆಂಬ ವಿಚಾರದಲ್ಲಿ ಹಗಲಿರುಳೂ ಅವರು ಪ್ರಯತ್ನವನ್ನು ನಡೆಯಿಸಿರುವರು.

—ಚಿತ್ರಮಯಜಗತ್

### ಆರೋಗ್ಯವನ್ನು ಸಾಧಿಸುವ ಕೆಲವು ಸುಲಭ ಉಪಾಯಗಳು

ಶ್ರೀಮಾನ್ ರಮೇಶಪ್ರಸಾದ ಬಿ. ಎಸ್ ಸಿ. ಅವರು 'ಚಾಂದ್' ಎಂಬ ಹಿಂದೀ ಪ್ರಸಿದ್ಧ ಮಾಸಪತ್ರಿಕೆಯಲ್ಲಿ, ತಮಗೊಬ್ಬ ಯೋಗಿಗಳು ಹೇಳಿಕೊಟ್ಟ—ಅನೇಕ ತಿಂಗಳಿಂದ ಆಚರಣೆಯಲ್ಲಿ ತಂದು ಒಳ್ಳೆಯ ಅನುಭವವನ್ನು ಪಡೆದ - ಆರೋಗ್ಯಸಾಧನೆಯ ಕೆಲವು ಉಪಾಯಗಳನ್ನು ಹೇಳಿರುವರು. ಈ

CC-0. Jangamwadi Math Collection. Digitized by eGangotri

ಉಪಾಯಗಳನ್ನು ಸಾಧಿಸಲಿಕ್ಕೆ ಹೆಚ್ಚಿನ ವೇಳೆಯನ್ನು ವೆಚ್ಚಮಾಡಬೇಕಾಗಿಲ್ಲವೆಂದೂ ನಮ್ಮ ದಿನಚರ್ಯೆಯಲ್ಲಿಯೆ ಸ್ವಲ್ಪ ಹೆಚ್ಚು-ಕಡಿಮೆ ಮಾಡಿದರೆ ಸಾಕೆಂದೂ ಅವರ ಅಭಿಪ್ರಾಯ. ಆ ಉಪಾಯಗಳು ಯಾವುವೆಂದರೆ:—

"ಬೆಳಗಿನಲ್ಲಿ ಹಾಸಿಗೆಯಿಂದ ಎದ್ದೊಡನೆಯೆ, ಯಾವುದಾದರೊಂದು ಸ್ವಚ್ಛಹವೆಯು ಬರುತ್ತಿದ್ದ ಕಿಟಕಿಯ ಎದುರಿನಲ್ಲಿ ನಿಂತುಕೊಳ್ಳಬೇಕು. ತುಟಿಗಳೆರಡನ್ನೂ ಚಿಕ್ಕದಾಗಿ ಕಾಗೆಯ ಚುಂಚಿನಂತೆ ಮುಂದೆ ಮಾಡಿ, ಕಿಟಕಿಯ ಹೊರಗಡೆಗೆ ಹಿಡಿದು, ಬಾಯಿಂದ ತುಂಬ ಹವೆಯನ್ನು ಜಗ್ಗಿಕೊಳ್ಳಬೇಕು.ಅನ್ನ ನೀರುಗಳನ್ನು ಗಟ್ಟಿಯಾಗಿ ನುಂಗುವಂತೆ ಜಗ್ಗಿದ ಹವೆಯನ್ನು ನುಂಗಬೇಕು. ಬಳಿಕ ಒಳಗಿನ ಹವೆಯನ್ನು ಹೊರಕ್ಕೆ ಬಿಡುವಾಗ ಮೂಗಿನಿಂದ ಬಿಡಬೇಕು. ಎರಡನೆಯ—ಮೂರನೆಯ ಕ್ರಿಯೆಗಳನ್ನು ಮಾಡುವಾಗ, ತುಟಿಗಳು ತಮ್ಮ ಸ್ವಾಭಾವಿಕ ಅವಸ್ಥೆಯನ್ನು ಪಡೆಯುವುವು. ಹೀಗೆ ಮಾಡುತ್ತಿರುವಾಗ ಎಲ್ಲಿಯೂ ತಡೆದುನಿಲ್ಲಬೇಕಾದುದಿಲ್ಲ. ಎಲ್ಲ ಕ್ರಿಯೆಗಳೂ ಒಂದರಹಿಂದೊಂದು ಎಡೆಬಿಡದೆ ನಡೆದಿರಬೇಕು. ಈ ಕ್ರಿಯೆಗೆ "ಉಷಾಪಾನ" ಎಂದು ಹೆಸರು. ಉಷಾಪಾನದಿಂದ ತುಂಬ ಪ್ರಯೋಜನವುಂಟು. ಇದರಿಂದ ಹೊಟ್ಟೆಯಲ್ಲಿಯ ಯಾವ ವಿಕಾರಗಳೂ ಉಳಿಯಲಾರವು. ಮೊದ-ಮೊದಲು ಇದರಿಂದ ಅಷ್ಟೊಂದು ಲಾಭವಾದಂತೆ ಕಾಣಲಾರದಾದರೂ ಕೆಲವು ದಿನಗಳ ಎಂದರೆ ತಿಂಗಳೆರಡು ತಿಂಗಳ ತರುವಾಯ ಇದರ ಗುಣವು ಅನುಭವಕ್ಕೆ ಬಾರದೆ ಹೋಗದು. ಹೊಟ್ಟೆಯ ವಿಕಾರಗಳನ್ನು ಹೊಡೆದೋಡಿಸಬೇಕೆಂದು 'ಫ್ರುಟ್‌ಸಾಲ್ಟ್' ಮೊದಲಾದುವುಗಳ ಬೆನ್ನನ್ನು ಹತ್ತಿದವರು, ಈ ಉಷಾಪಾನದ ಪ್ರಯೋಗವನ್ನು ಪ್ರಾರಂಭಿಸಿದರೆ ಅಚ್ಚರಿಯನ್ನುಂಟುಮಾಡುವಂತಹ ಲಾಭಗಳು ಅವರಿಗೆ ಕಂಡುಬರಬಹುದು. ಮಂದಾಗ್ನಿ (ಡಿಸ್ಪೆಪ್ಸಿಯಾ), ಬದ್ಧಕೋಷ್ಠ (ಕಾನ್ಸ್ಟಿಪೇಶನ್) ಇವುಗಳ ತೊಂದರೆಯುಳ್ಳವರಿಗೂ ಬಾಯಿಂದ ಕೊಳಕು ವಾಸನೆ ಬರುವವರಿಗೂ ಈ ಉಪಾಯವು ಖಂಡಿತ ಗುಣಕಾರಿಯಾಗಿದೆ.

ಉಷಾಪಾನದ ಇನ್ನೊಂದು ಗುಣವೆಂದರೆ ರಕ್ತವನ್ನು ಶುದ್ಧಗೊಳಿಸುವ ಕಾರ್ಯದಲ್ಲಿ ಸಂಪೂರ್ಣ ಸಹಾಯವನ್ನಿದು ಮಾಡುವುದು. ರಕ್ತಶುದ್ಧಿಯನ್ನುಂಟುಮಾಡುವ ಯಾವ ಔಷಧಿಗಳೂ ಇದಕ್ಕೆ ಸಮನಾಗಿ ನಿಲ್ಲಲಾರವು. ಎಂತಹ ಕಠಿಣವಾದ ಚರ್ಮರೋಗವಿದ್ದರೂ ಈ ಪ್ರಯೋಗದಿಂದ ಗುಣವಾಗುವುದೆಂಬುದು ಕಂಡುಂಡ ಮಾತಾಗಿದೆ. ಇದರಿಂದ ಗಲಿತಕುಷ್ಠರೋಗವು ಕೂಡ ಹೋಗುವುದೆಂದು ಯೋಗಿವರ್ಯರ ಅಭಿಪ್ರಾಯವಿದೆ.

ಉಷಾಪಾನಕ್ಕೆ 'ಶೀತಲೀಪ್ರಾಣಾಯಾಮ' ಎಂಬ ಇನ್ನೊಂದು ಹೆಸರೂ ಉಂಟು. ಬಿಸಿಲುಗಾಲದಲ್ಲಿ ಇದು ದೇಹವನ್ನೂ ಮೆದುಳನ್ನೂ, ದಿನವೆಲ್ಲವೂ ತಂಪಾಗಿ ಇರಿಸುತ್ತದೆ. ದಿನಕ್ಕೆ ಮೂರು-ನಾಲ್ಕು ಸಲವಲ್ಲದೆ ಮನಸ್ಸಿಗೆ ಬೇಕೆನಿಸಿದಾಗ ಹೆಚ್ಚುಸಲವೂ, ಸ್ವಚ್ಛವಾದ ಬಯಲುಹವೆಯಲ್ಲಿ ಈ 'ಶೀತಲೀಪ್ರಾಣಾಯಾಮ' ಕ್ರಿಯೆಯನ್ನು ಮಾಡಬಹುದು. ಒಂದಕ್ಕಿಂತ ಹೆಚ್ಚುಸಲ ಮಾಡುವವರಿಗೆ ಅದರ ಪರಿಣಾಮಫಲವು ಬೇಗನೆ ಕಂಡುಬರುವುದು.

"ಉಷಾಪಾನ" ಅಥವಾ "ಶೀತಲೀಪ್ರಾಣಾಯಾಮ" ವನ್ನು ಎಲ್ಲಕ್ಕೂ ಮೊದಲು ಪ್ರಾರಂಭಿಸುವವರು ಚಳಿಗಾಲದಲ್ಲಿ ಪ್ರಾರಂಭಿಸಲಾಗದು. ಸದ್ಯದ ದಿನಗಳು ಅದಕ್ಕೆ ಅನುಕೂಲವಾಗಿ ಇರುವುದರಿಂದ, ಈಗಲೆ ಆರಂಭಿಸಿಬಿಟ್ಟರೆ ಚಳಿಗಾಲದಲ್ಲಿಯೂ ಅದನ್ನು ಆಚರಣೆಯಲ್ಲಿ ಇಟ್ಟುಕೊಂಡಿರಲಿಕ್ಕೆ ಆಗುವುದು.

ಉಷಾಪಾನದ ಕ್ರಿಯೆಯನ್ನು ಮಾಡಿ ಮುಗಿಸಿದ ಮೇಲೆಯೇ ಮಲಮೂತ್ರ ವಿಸರ್ಜನೆಗೆ ಹೊರಡಬೇಕು. ಮಲವಿಸರ್ಜನೆಗೆ ಹೊರಡಲಿರುವಾಗ ಒಂದು ಕೆಲಸವನ್ನು ಮಾಡುವುದು ಅಗತ್ಯವಾಗಿದೆ. ಅದೇನೆಂದರೆ ಅಡಿಯ ಬೆರಳುಗಳನ್ನಷ್ಟೆ ನೆಲದಮೇಲೆ ಊರಿ ಎದ್ದುನಿಂತು, ಸಾಧ್ಯವಿರುವ ಮಟ್ಟಿಗೂ ದೇಹವನ್ನು ಮೇಲಕೆತ್ತರಿಸಿ, ಇಪ್ಪತ್ತು ಹೆಜ್ಜೆಗಳಷ್ಟು ಮುಂದಕ್ಕೂ, ಇಪ್ಪತ್ತು ಹೆಜ್ಜೆಗಳಷ್ಟು ಹಿಂದಕ್ಕೂ ನಡೆದಾಡಬೇಕು. ಇದರಿಂದ ೧ ಗಂಟೆಯ ಕಾಲ ಹೊರಕ್ಕೆ ತಿರುಗಾಡಿ ಬಂದಷ್ಟು ಫಲವು ಸಿಕ್ಕುವುದು. ಹೀಗೆ ಮಾಡುವವರು ಲಕ್ಷ್ಯದಲ್ಲಿಟ್ಟುಕೊಂಡಿರಬೇಕಾದ ಮಾತೆಂದರೆ, ದೇಹವನ್ನು ಮೇಲಿನ ಭಾಗಕ್ಕೆ ಸಾಕಷ್ಟು ಜಗ್ಗಿ ನಿಲ್ಲಿಸಬೇಕು. ಕಾಲ ಪಿಂಡರಿಕೆಗಳಲ್ಲಿಯೂ ತೊಡೆಗಳಲ್ಲಿಯೂ ಸಾಕಷ್ಟು ಎಳೆತವು ಬಿದ್ದಿದೆಯೆಂದೆನಿಸಿದಾಗಲೆ ತಮ್ಮ ನಿಲ್ಲುವ ಭಂಗಿ ಸರಿಯಾಗಿದೆಯೆಂದು ಅರಿತುಕೊಳ್ಳಬೇಕು.

ಮಲಮೂತ್ರ ವಿಸರ್ಜನೆಗೆ ಹೊರಡುವವರು ಸ್ವಚ್ಛತೆಗಾಗಿ ದೊಡ್ಡದೊಂದು ತಂಬಿಗೆ ನೀರು ತೆಗೆದುಕೊಂಡುಹೋಗುವುದನ್ನು ಎಂದೂ ಮರೆಯಲಾಗದು. ಪ್ರತಿದಿನವೂ, ಮಲಮೂತ್ರ ವಿಸರ್ಜನೆಗೆ ಹೋದ ಸಲಕ್ಕೂ,

CC-0. Jangamwadi Math Collection. Digitized by eGangotri

ಅವುಗಳನ್ನು ವಿಸರ್ಜಿಸುವ ಕಾಲದಲ್ಲಿ, ಮೇಲಿನ ಹಲ್ಲುಗಳನ್ನು ಕೆಳಗಿನ ಹಲ್ಲುಗಳ ಮೇಲೆ ಗಟ್ಟಿಯಾಗಿ ಒತ್ತಿಕೊಂಡು ಕುಳಿತಿರಬೇಕು. ಇದರಿಂದ ಎಲ್ಲಬಗೆಯ ಹಲ್ಲಿನ ರೋಗಗಳ ನಿವಾರಣೆಯಾಗುವುದು. ಈಗ ಎಲ್ಲೆಲ್ಲಿಯೂ 'ಪಾಯೋರಿಯಾ' ರೋಗದ ಪ್ರಚಾರವು ಹೆಚ್ಚಾಗಿದೆ. ಈ ರೋಗವು ಯಾರನ್ನು ಅಂಟಿಕೊಂಡಿಲ್ಲವೊ ಅವರನ್ನು ತುಂಬ ಭಾಗ್ಯಶಾಲಿಗಳೆಂದೇ ತಿಳಿಯಬೇಕು ನಾವು. ಇದುವರೆಗೂ ಈ ರೋಗದ ಮೇಲೆ ಖಂಡಿತಗುಣಕಾರಿಯಾದ ಔಷಧಿಯು ದೊರೆತೇ ಇಲ್ಲ. ಜನರು ಅನುಭವಶಾಲಿಯೊಬ್ಬನ ಕಂಡುಂಡ ಮಾತನ್ನು ನಂಬುತ್ತಿದ್ದರೆ, ನಾನು ಎದೆತಟ್ಟಿ ಹೇಳಬಲ್ಲೆ: ಈ ಪ್ರಕ್ರಿಯೆಯಿಂದ ಎಂತಹ ಕಠಿನತರದ 'ಪಾಯೋರಿಯಾ' ರೋಗವೂ ಮೂರು ತಿಂಗಳೊಳಗಾಗಿಯೇ ಗುಣವಾಗುವುದು. ಈ ರೋಗದ ಪ್ರಾರಂಭಾವಸ್ಥೆಯುಳ್ಳವರಂತೂ ತಿಂಗಳೊಪ್ಪತ್ತಿನಲ್ಲಿಯೆ ಅದರಿಂದ ಖಂಡಿತ ಮುಕ್ತರಾಗುವರು. ಈ ಉಪಾಯದಿಂದ ನಾನು ಹತ್ತಿಪ್ಪತ್ತು ಜನರ 'ಪಾಯೋರಿಯಾ' ರೋಗವನ್ನು ಕಳೆದಿದ್ದೇನೆ.

ಶೌಚಕ್ಕಾಗಿ ಜೋತೆಗೆ ಒಯ್ದಿದ್ದ ನೀರಿನ ಕೆಲವು ಭಾಗವನ್ನು, ಪ್ರಾರ್ಜನಕ್ಕಿಂತ ಮೊದಲು ಮೂತ್ರೇಂದ್ರಿಯದ ಮೇಲೆ—ಕೆಲವೊಂದು ವೇಳೆಯವರೆಗೆ—ಧಾರೆಧಾರೆಯಾಗಿ ಬಿಡುತ್ತಿರಬೇಕು. ಇದರಿಂದ ಧಾತುಸಂಬಂಧಿಕವಾದ ಎಲ್ಲ ರೋಗಗಳೂ ದೂರವಾಗುವುವು. ಧಾತುಕ್ಷೀಣತೆ, ಸ್ವಪ್ನದೋಷ, ಪ್ರಮೇಹ ಮೊದಲಾದ ರೋಗಗಳೂ ಈ ಕ್ರಿಯೆಯಿಂದ ಗುಣಹೊಂದುವುವು. ಈ ರೋಗಗಳಿಂದ ಬಳಲುವವರೆಲ್ಲರೂ ಅವಶ್ಯವಾಗಿ ಇದನ್ನು ಮಾಡಿನೋಡಬೇಕು. ಈ ರೋಗಗಳಿಲ್ಲದ ಜನರೂ ಈ ಕ್ರಿಯೆಯನ್ನು ಆಚರಿಸಬಹುದು.

ಕೈಬಾಯಿಗಳನ್ನು ತೊಳೆದುಕೊಳ್ಳುವಾಗ ಒಂದು ಕೆಲಸ ಮಾಡಬೇಕು. ಅದೇನೆಂದರೆ ಬಾಯಲ್ಲಿ ಸಂಪೂರ್ಣವಾಗಿ ನೀರನ್ನು ತುಂಬಿಕೊಂಡು, ತುಟಿಗಳನ್ನು ಮುಚ್ಚಿ ಒಂದೆ ಸವನೆ ಗುಳುಗುಳಿಸುತ್ತಿರಬೇಕು. ಹೀಗೆ ಗುಳುಗುಳಿಸುತ್ತಿರುವಾಗಲೆ ಬೇರೆಯ ನೀರನ್ನು ತೆಗೆದುಕೊಂಡು, ಕಣ್ಣುಗಳನ್ನು ಚೆನ್ನಾಗಿ ತೆರೆದು, ಮೆಲ್ಲಮೆಲ್ಲಗೆ ಬೆರಳುಗಳಿಂದ ನೀರನ್ನು ಚಿಮುಕಿಸಿಕೊಳ್ಳಬೇಕು. ಬಲಗಣ್ಣಿಲ್ಲೊಮ್ಮೆ, ಎಡಗಣ್ಣಿಲ್ಲೊಮ್ಮೆ, ಆಮೇಲೆ ಎರಡೂ ಕಣ್ಣುಗಳನಡುವೆ ಎಂದರೆ ಭ್ರುಕುಟಭಾಗದಲ್ಲೊಮ್ಮೆ ಹೀಗೆ ಐವ್ವೈದು ಸಲ ನೀರನ್ನು ಚಿಮುಕಿಸಿಕೊಳ್ಳುತ್ತಿರಬೇಕು. ಈ ಕ್ರಿಯೆಯನ್ನು ದಿನದಲ್ಲಿ ಮೂರುಸಲ—ಬೆಳಗು ಮಧ್ಯಾಹ್ನ, ಸಂಜೆ—ಮಾಡುತ್ತಿರಬೇಕು. ಕಣ್ಣಿಗೆ ಸಂಬಂಧಿಸಿದ ಎಲ್ಲ ರೋಗಗಳೂ ಇದರಿಂದ ಗುಣಹೊಂದುವುವು. ಕಣ್ಣಿನ ಹೊಳಪು ಬಹುದಿನಗಳ ವರೆಗೂ ಸುರಕ್ಷಿತವಾಗಿ ಇರುವುದು. ಕನ್ನಡಕ ಹಾಕಿಕೊಳ್ಳುವ ಸಂದರ್ಭವೊದಗಿದವರು ಕೂಡ ಎಡೆಬಿಡದೆ ಕೆಲವು ವರ್ಷ ಈ ಕ್ರಿಯೆಯನ್ನು ಆಚರಿಸುತ್ತ ಬಂದಲ್ಲಿ, ಅವರಿಗೆ ಕನ್ನಡಕದ ಆವಶ್ಯಕತೆಯೇ ಉಳಿಯಲಾರದೆಂದು ಹೇಳುವರು. ಹಠಯೋಗದಲ್ಲಿ ಈ ಕ್ರಿಯೆಯನ್ನು ಹೇಳಲಾಗಿದೆಯಲ್ಲದೆ ಇದರಿಂದ ಕಣ್ಣುಗಳಿಗೆ ಖಂಡಿತವಾದ ಪ್ರಯೋಜನವುಂಟೆಂದು ನಿಸ್ಸಂದಿಗ್ಧವಾಗಿ ಹೇಳಬಹುದು. ನನ್ನ ತಿಳಿವಳಿಕೆಯಂತೆ ಅನೇಕ ಜನರು ಇದರಿಂದ ಲಾಭವನ್ನು ಪಡೆದಿದ್ದಾರೆ. ಕಣ್ಣುಗಳನ್ನು ನಿರೋಗಿಯಾಗಿರಿಸಬೇಕೆಂಬ ಅಪೇಕ್ಷೆಯುಳ್ಳವರು ಅವಶ್ಯವಾಗಿ ಇದನ್ನು ಪ್ರಯೋಗಮಾಡಿ ನೋಡಬೇಕು.

ಚಾಂದ (ಹಿಂದಿ)

**ರೋಗಿಯ ರಕ್ತವನ್ನೇ ರೋಗಿಗೆ ಚುಚ್ಚುವುದು**

ಹದಿನೈದು ವರ್ಷಗಳಿಗೆ ಮೊದಲು ಪ್ಯಾರಿಸಿನಲ್ಲಿಯ ಡಾಕ್ಟರನೊಬ್ಬನು, ಒಬ್ಬ ಹೆಂಗುಸಿನ ಮೈಯ ಮೇಲಿದ್ದ ಹುಣ್ಣಿಗೆ ಚಿಕಿತ್ಸೆಯೆಂದು, ಆಕೆಯ ಸ್ವಂತದ ರಕ್ತವನ್ನೇ ತೆಗೆದು ಆಕೆಗೆ 'ಇಂಜಕ್ಶನ್' ಮಾಡಿದನು. ಇದರ ಅನಪೇಕ್ಷಿತ ಪರಿಣಾಮವಾಗಿ ಇದುವರೆಗೆ ಬಂಜೆಯಾಗಿದ್ದ ಅವಳು ನೂರನೆಯ ಇಂಜಕ್ಶನ್ ತೆಗೆದುಕೊಂಡ ಬಳಿಕ — ಗರ್ಭವತಿಯಾದಳು. ಇದು ಕಾಕತಾಲೀಯ ನ್ಯಾಯದಿಂದ ನಡೆದಿರಬಹುದೆಂದು ಯಾರಾದರೂ ಅಭಿಪ್ರಾಯಪಡಬಹುದು; ಆದರೆ ಆ ಡಾಕ್ಟರಿನ ಅಲ್ಲದೆ ಬೇರೆ ಕೆಲವು ಜನ ಡಾಕ್ಟರರ ಅನುಭವಗಳನ್ನು ನೋಡಿದರೆ, ಆ ಸಂಗತಿ ಕಾಕತಾಲೀಯವೆಂದು ಎನಿಸುವುದಿಲ್ಲವಿಷ್ಟೇ ಅಲ್ಲ; ಅದು ಇಂಜಕ್ಶನ್ ಚಿಕಿತ್ಸೆಯ ಪರಿಣಾಮವೇ ಎಂದು ಹೇಳಬೇಕಾಗುವುದು.

ರಕ್ತದ ಇಂಜಕ್ಶನ್ನಿನ ಈ ವಿಲಕ್ಷಣ ಪರಿಣಾಮವನ್ನು ಕಂಡು, ತಿಂಗಳ ಋತುಸ್ರಾವದ ಅಸಿಯಮಿತತನದ ಮೇಲೆ ಏನಾದರೂ ಇದರ ಪರಿಣಾಮವಾಗಬಹುದೇ ? ಎಂದು ನೋಡುವುದು ಸ್ವಾಭಾವಿಕವಾಗಿದ್ದಿತು. ಪ್ರಥಮ ಋತು-

CC-0. Jangamwadi Math Collection. Digitized by eGangotri

ಪ್ರಾಪ್ತಿಯ ಕಾಲದಲ್ಲಿಯೂ ತಿಂಗಳ ಋತುಸ್ರಾವದ ಕೊನೆಯ ಭಾಗದಲ್ಲಿಯೂ ಅನೇಕ ಜನ ಸ್ತ್ರೀಯರು ತುಂಬ ತೊಂದರೆಗೊಳಗಾಗುತ್ತಿರುವುದು ಅನೇಕ ಜನರಿಗೆ ಗೊತ್ತಿದ್ದ ಸಂಗತಿ. ಆ ತೊಂದರೆಯ ಮೇಲೆ ಈ ಚಿಕಿತ್ಸೆಯು ಪರಿಣಾಮಕಾರಿಯೆಂದು ಕಂಡುಬಂದಲ್ಲಿ, ಡಾಕ್ಟರ್ ಜನರಿಗೊಂದು ಅಮೂಲ್ಯವಾದ ಉಪಾಯವು ಕೈಗೆ ದೊರೆತಂತಾಗುತ್ತಿದ್ದಿತು. ಎಂತಲೆ ಆ ಗುರಿಯನ್ನಿಟ್ಟುಕೊಂಡು ಅನೇಕ ಪ್ರಯೋಗಗಳನ್ನು ಮಾಡಿನೋಡಿದಾಗ, ಈ ಚಿಕಿತ್ಸೆಯಿಂದ ಪ್ರಯೋಜನವಾಗುವ ಸಂದರ್ಭಗಳೆ ಹೆಚ್ಚೆಂದೂ ಹಾನಿಯಂತೂ ಏನೂ ಇಲ್ಲವೆಂದೂ ಆ ಪ್ರಾಯೋಗಿಕರಿಗೆ ಕಂಡುಬಂದಿದೆ.

ಸಂಕ್ಷೇಪವಾಗಿ ಹೇಳಬೇಕೆಂದರೆ ಈ ಚಿಕಿತ್ಸೆಯ ರೀತಿ ಹೀಗಿದೆ:— ರೋಗಿಯಾಗಿ ಬಂದ ಸ್ತ್ರೀಯಳ ಕಂಕುಳ ಒಳಬದಿಯಲ್ಲಿಯ ರಕ್ತವಾಹಿನಿಯೊಂದರಿಂದ ೨೦ 'ಸೀಸೀ' (೨೩ 'ಸೀ ಸೀ' =೧ ಔಂಸು) ಯಷ್ಟು ರಕ್ತವನ್ನು ತೆಗೆದುಕೊಂಡು, ಅದನ್ನು ಕೂಡಲೆ ತಿಗದ ಚರ್ಮದೊಳಕ್ಕೆ, ಅಥವಾ ಸ್ನಾಯುವಿನೊಳಕ್ಕೆ ಚುಚ್ಚಿ ಸೇರಿಸಬೇಕು. ಒಂದು ಮಹತ್ತ್ವದ ಸಂಗತಿಯೆಂದರೆ ೨೦ 'ಸೀ ಸೀ'ಗಿಂತ ಕಡಿಮೆ ರಕ್ತವನ್ನು ತೆಗೆದುಕೊಂಡಲ್ಲಿ ಅದರಿಂದ ಪ್ರಯೋಜನವಾಗದು; ಒಂದು ಸಲದ ಇಂಜೆಕ್ಶನ್ ಆದ ತರುವಾಯ ಇನ್ನೊಂದು ಇಂಜಕ್ಶನ್ ಮಾಡುವುದಕ್ಕೆ ನಡುವೆ, ಯಾವಾಗಲೂ ನಾಲ್ಕೈದು ದಿನಗಳ ಅಂತರವಿರಬೇಕು. ಈ ಉಪಚಾರದ ಪರಿಣಾಮವು ಮೊದಲಿನ ಇಂಜಕ್ಶನ್ನಿನಿಂದಲೆ ಕಾಣತೊಡಗುವುದಾದರೂ ಸಂಪೂರ್ಣ ಪರಿಣಾಮವಾಗುವುದಕ್ಕೆ ಆರರಿಂದ ಹತ್ತರ ವರೆಗೆ ಇಂಜೆಕ್ಶನ್ನುಗಳನ್ನು ಕೊಡಬೇಕಾಗುವುದು.

ಇದರಲ್ಲಿಯ ಮತ್ತೊಂದು ವಿಚಾರವೆಂದರೆ: ಈ ಉಪಚಾರದಿಂದುಂಟಾದ ಸುಪರಿಣಾಮವು ಕೆಲವು ದಿನಗಳ ವರೆಗೆ ಸ್ಥಾಯಿಯಾಗಿದ್ದು, ಬಳಿಕ ಮತ್ತೆ ಮೊದಲಿನ ರೋಗದ ಚಿಹ್ನೆಗಳೆ ಕಾಣಲು ತೊಡಗಿದರೆ, ಆಗಲೂ ಇದೇ ಚಿಕಿತ್ಸೆಯನ್ನು ಮಾಡುವುದರಿಂದ ಸ್ವಲ್ಪವೂ ಪ್ರಯೋಜನವಾಗದೆಂದು ಕಂಡುಬಂದಿದೆ. ಅಂತಹ ಸಂದರ್ಭದಲ್ಲಿ ಚುಚ್ಚಬೇಕಾದ ರಕ್ತದಲ್ಲಿ ಸ್ವಲ್ಪ ಹೆಚ್ಚು-ಕಡಿಮೆ ಮಾಡಬೇಕಾಗುವುದು. ಹಾಗೆ ಮಾಡಿದಲ್ಲಿ ಇದೇ ಉಪಚಾರವು ಮತ್ತೆ ಗುಣಕಾರಿಯಾಗಿ ಪರಿಣಮಿಸುವುದು. ರಕ್ತದಲ್ಲಿ ಹೆಚ್ಚು ಕಡಿಮೆ ಮಾಡುವ ಒಂದು ಬಗೆಯೆಂದರೆ ಬೇರೆಯವರ ರಕ್ತವನ್ನು, ಚುಚ್ಚುವುದಕ್ಕೆ ಉಪಯೋಗಿಸುವುದು. ರೋಗಿಯ ರಕ್ತವನ್ನೆ ತೆಗೆದುಕೊಳ್ಳುವುದಾದರೆ ರಕ್ತ ತೆಗೆದುಕೊಳ್ಳುವ ಜೀಕಳಿ (ಪಿಚಗಾರಿ) ಯಲ್ಲಿ ಮೊದಲೇ ಶುದ್ಧವಾಗಿರುವ ಸ್ವಲ್ಪ ನೀರನ್ನು ತೆಗೆದುಕೊಂಡು, ಆ ಮೇಲೆ ರಕ್ತವನ್ನು ತೆಗೆದುಕೊಳ್ಳಬೇಕು. ಹೀಗೆ ನೀರನ್ನು ತೆಗೆದುಕೊಳ್ಳುವುದರಿಂದ ರಕ್ತದ ಗುಣದಲ್ಲಿ ಹೆಚ್ಚು ಕಡಿಮೆಯಾಗುವುದು. ಇದನ್ನು ಚುಚ್ಚಿದ ಸ್ಥಳದಲ್ಲಿ ಸ್ವಲ್ಪ ನೋವೆನಿಸುವುದಾದರೂ ಒಳಕ್ಕೆ ಹೋದ ರಕ್ತವು ಮೈಯಲ್ಲಿ ಬೆರೆತುಹೋಗುವುದು. ೧೦ 'ಸೀಸೀ' ರಕ್ತಕ್ಕೆ ೨—೩ 'ಸೀಸೀ'ಯಷ್ಟು ನೀರನ್ನು ತೆಗೆದುಕೊಳ್ಳಬೇಕು. ಬಳಿಕ ರಕ್ತವನ್ನು ಜೀಕಳಿಗೆ ಹೀರಿಕೊಂಡು, ೨೦ ಸೇಕಂದುಗಳಷ್ಟು ಕಾಲ ಅದನ್ನು ಹಾಗೆಯೆ ಇಟ್ಟು ಆ ಮೇಲೆ ಒಮ್ಮೆಲೆ ಅದನ್ನು ಚುಚ್ಚಿಬಿಡಬೇಕು. ಮೊದಲು ಈ ಇಂಜಕ್ಶನ್ನುಗಳನ್ನು ಬೇಗಬೇಗನೆ ಕೊಡುವ ಪದ್ಧತಿಯಿದ್ದಿತು. ಇತ್ತೀಚೆಗೆ ಒಂದು ಇಂಜಕ್ಶನ್ನಿನ ಪರಿಣಾಮವು ತೀರುತ್ತ ಬಂದಾಗಲೆ ಇನ್ನೊಂದನ್ನು ಕೊಡುವುದು ಯುಕ್ತವೆಂದು ಕಂಡುಬಂದಿದೆ. ಆದುದರಿಂದಲೆ ಎರಡು ಇಂಜಕ್ಶನ್ನುಗಳ ನಡುವೆ ೪—೫ ದಿನಗಳ ಅಂತರವಿರುವುದು ಒಳ್ಳೆಯದು.

ಈ ಚಿಕಿತ್ಸೆಯ ಉಪಯೋಗವು ಚರ್ಮರೋಗಗಳ ಮೇಲಂತೂ ಒಳ್ಳೆಯದಾಗುವುದು; ಆದರೆ ಬಂಜೆತನದ ಮೇಲೆ ಇದು ಯಾವರೀತಿಯಲ್ಲಿ

**ಈ ಚುಚ್ಚುಮದ್ದಿನ ಉಪಯೋಗಗಳು**

ಪರಿಣಾಮಕಾರಿಯಾಗಬಹುದೆಂಬುದನ್ನು ನಾವೀಗ ನೋಡೋಣ!

ಈ ಚಿಕಿತ್ಸೆಯಿಂದ ಬಂಜೆತನವನ್ನು ಕಳೆದುಕೊಂಡ ಮೊದ-ಮೊದಲಿನ ಮೂವರು ಸ್ತ್ರೀಯರಿಗೆ ಅವರ ಚರ್ಮರೋಗದ ಸಲುವಾಗಿಯೋ ತಲೆನೋವಿನ ಸಲುವಾಗಿಯೋ ಇದನ್ನು ಪ್ರಯೋಗಿಸಲಾಗಿದ್ದಿತು. ಅವರ ಆ ರೋಗಗಳು ಗುಣವಾದುವಷ್ಟೇ ಅಲ್ಲ; ಹೊರಗಿನ ಯಾವ ಕಾರಣಗಳೂ ಕಂಡುಬಾರದಿದ್ದ ಅವರ ಬಂಜೆತನವೂ ಈ ಚಿಕಿತ್ಸೆಯಿಂದ ನಷ್ಟವಾಗಿ, ಅವರು ಗರ್ಭವತಿಯರಾದರು. ಮುಂದೆ ಹಲವು ಜನ ಬಂಜೆಯರಿಗೇ ಮಾಡಿದ ಈ ಉಪಚಾರಕ್ಕೆ ಸಾಕಷ್ಟು ಯಶಸ್ಸು ದೊರೆಯಿತು. ಕೆಲವರಿಗೆ ಒಂದೆ ಸಲದ ಚುಚ್ಚುವಿಕೆಯೆ ಸಾಕಾಗಿ, ಅವರು ಹಲವು ಮಕ್ಕಳನ್ನು ಹೆತ್ತರು. ಇನ್ನು ಕೆಲವು ಜನರಿಗೆ ಗರ್ಭಧಾರಣೆಯು ಆವಶ್ಯಕತೆಯೆನಿಸಿದ ಪ್ರತಿಸಲಕ್ಕೂ ಈ ಚಿಕಿತ್ಸೆಯನ್ನು ಮಾಡಬೇಕಾಗುತ್ತಿದ್ದಿತು. ಒಂದೆ ಒಂದು ಸಂತಾನವಾಗಿ ಮುಂದೆ ಹೆರಿಗೆಯೆ ನಿಂತುಹೋದ ಕೆಲವು ಹೆಂಗುಸರೂ ಇದರಿಂದ ಪ್ರಯೋಜನವನ್ನು ಪಡೆದರು.

CC-0. Jangamwadi Math Collection. Digitized by eGangotri

ಒಂದು ವಿಷಯ: ಈ ಚಿಕಿತ್ಸೆಯು ಎಲ್ಲರಿಗೂ ಪ್ರಯೋ-
ಜನಕಾರಿಯಾದೀತೆಂದು ಹೇಳಲಿಕ್ಕಾಗದು. ಅನೇಕ ಸ್ತ್ರೀಯ-
ರಿಗೆ ಅವರ ಸ್ವಂತದ ರಕ್ತವು ಉಪಯೋಗಕ್ಕೆ ಬಾರದೆ
ಇರುವಾಗ, ಅವರವರ ಗಂಡಂದಿರ ರಕ್ತವನ್ನು ಚುಚ್ಚಿ
ನೋಡಿದರೂ ಅದು ನಿರುಪಯುಕ್ತವಾಯಿತು. ಇಂತಹ
ಸಂದರ್ಭಗಳಲ್ಲಿ ಬೀಜಕೋಶಗಳಿಗೆ ಶಾಕವನ್ನು ಕೊಡುವ
(ಡಾಯಾಥರ್ಮಿ) ಕ್ರಿಯೆಯನ್ನು ಮಾಡಲಾಯಿತು; ಈ
ಜೋಡುಗುಂಡಿನಿಂದ ಆ ವೈಜ್ಞಾನಿಕರ ಗುರಿಯು ಸಾಧಿ-
ಸಿತು. ಆ ಮೊದಲು ಬರೀ ಶಾಕ ಕೊಡುವ ಚಿಕಿತ್ಸೆಯಿಂದ
ಗುಣವನ್ನು ಪಡೆಯದ ಬಂಜೆಯರೂ ಇಬ್ಬಗೆಯ
ಉಪಾಯದಿಂದ ತಾಯ್ತನವನ್ನು ಹೊಂದಿದರು. ಈ
ಚಿಕಿತ್ಸೆಯನ್ನು ಮಾಡುವಾಗ ಲಕ್ಷ್ಯದಲ್ಲಿಟ್ಟುಕೊಂಡಿರ-
ಬೇಕಾದ ಮಹತ್ತ್ವದ ವಿಚಾರವೆಂದರೆ, ಬಂಜೆತನಕ್ಕೆ
ಸ್ತ್ರೀಯರ ಪ್ರಾಕೃತಿಕ ದೋಷವು ಕಾರಣವಾಗಿದ್ದಲ್ಲಿ ಈ
ಉಪಾಯಗಳಾವುವೂ ಕೆಲಸಕ್ಕೆ ಬಾರವು. ಗಂಡುಸರ
ರೇತಸ್ಸಿನಲ್ಲಿ ಸಜೀವ ರೇತೋಜಂತುಗಳಿವೆಯೋ ಇಲ್ಲವೋ
ಎಂಬುದನ್ನು ಪರೀಕ್ಷಿಸಿ, ಹೆಂಗುಸರ ಯೋನಿಮಾರ್ಗದಲ್ಲಿ
ಆವಶ್ಯಕಕ್ಕಿಂತ ಹೆಚ್ಚಾಗಿ ಆಮ್ಲತೆಯಿಲ್ಲವೆಂಬುದನ್ನು
ಖಂಡಿತಪಡಿಸಿಕೊಂಡು, ರೇತೋಜಂತುಗಳು ಬೀಜ-
ವಾಹಕ ನಲಿಕೆಯಲ್ಲಿ ಪ್ರವೇಶಿಸುವುದಕ್ಕೆ ಸರಿಯಾಗಿದೆಯೋ
ನಡುವೆ ಏನಾದರೂ ಅಡೆತಡೆಯಿದೆಯೋ ಎಂಬುದನ್ನೆಲ್ಲ
ಪರೀಕ್ಷಿಸಿ, ಆ ಮೇಲೆಯೇ ಈ ಇಂಜಕ್ಶನ್ನಿನ ಉಪಚಾರ-
ವನ್ನು ಕೈಕೊಳ್ಳಬೇಕು. ಹೀಗೆ ಮಾಡಿದಾಗಲೆ ಉಪಚಾರವು
ಪರಿಣಾಮಕಾರಿಯಾಗುವುದು.

ಕೆಲಕೆಲವು ಹೆಣ್ಣುಮಕ್ಕಳಿಗೆ ಋತುಪ್ರಾಪ್ತಿಸಮಯ
ದಲ್ಲಿ ತುಂಬ ತೊಂದರೆಯಾಗುವುದು. ಹೊಟ್ಟೆನೋಯು
ವುದು; ಹೆಚ್ಚಾಗಿ ರಕ್ತಸ್ರಾವವಾಗುವುದು. ಇಲ್ಲವೆ ಅನಿಯ-
ಮಿತವಾಗುವುದು; ತಲೆ ನೋಯುವುದಲ್ಲದೆ ಓಕರಿಕೆಗಳು
ಬರತೊಡಗುವುವು. ಇಂತಹ ಸಂದರ್ಭಗಳಲ್ಲಿ ಮೇಲೆ
ಹೇಳಿದಂತೆ ಐದಾರು ಇಂಜಕ್ಶನ್ ಕೊಡುವುದರಿಂದ ಆ
ಎಲ್ಲ ವಿಕಾರಗಳೂ ಇಲ್ಲದಂತಾಗುವುವು. ಅಶಕ್ತತೆಯು
ಕಡಿಮೆಯಾಗುವುದಲ್ಲದೆ ತಿಂಗಳ ಋತುಸ್ರಾವಕ್ಕಿಂತ
ಮೊದಲು ಉಂಟಾಗುತ್ತಿದ್ದ ತೊಂದರೆಯೆಲ್ಲವೂ ದೂರವಾ-
ಗುವುದು. ಇಲ್ಲಿಯೂ ಶಾರೀರಿಕದೋಷಗಳಾವುವೂ ಇರ
ದಲ್ಲಿಯೆ ಈ ಚಿಕಿತ್ಸೆಯು ಉಪಯುಕ್ತವಾಗುವುದೆಂದು
ಬೇರೆ ಹೇಳಬೇಕಾಗಿಲ್ಲ; ಅದರಂತೆಯೆ ಎಲ್ಲರಿಗೂ ಯಾವಾ-
ಗಲೂ ಆದೀತೆಂದೂ ಹೇಳಲು ಬರುವಂತಿಲ್ಲ. ಹೀಗೆ
ನಿರುಪಯುಕ್ತವಾದಾಗ ಒಂದೊಂದು ಸಲ ಅಂತಃಸ್ರಾವದ
ಕಡಿಮೆತನವಿರುವುದು ಅದಕ್ಕೆ ಕಾರಣವೆಂದು ಕಂಡು
ಬರುವುದು. ಆಗ ಅಂತಃಸ್ರಾವವನ್ನು ಹಾಗೆಯೆ ಹೊಟ್ಟೆ
ಯೊಳಕ್ಕೆ ಕೊಡುವುದರಿಂದಲೂ, ಚುಚ್ಚುವ ರಕ್ತದಲ್ಲಿ
ಅದನ್ನು ಬೆರಸುವುದರಿಂದಲೂ ಪ್ರಯೋಜನವಾಗುವು
ದುಂಟು. ಈ ಚಿಕಿತ್ಸೆಯಿಂದ ಯಾವ ಬಗೆಯ ಹಾನಿಯೂ
ಉಂಟಾಗಲಾರದೆಂಬುದೊಂದು ವಿಶೇಷ.

ಮಾಸಿಕಸ್ರಾವವು ಯಾರಿಗೆ ನಿಂತುಹೋಗಲು ಬಂದಿ-
ರುವುದೋ ಅವರಿಗೂ ಅನೇಕ ಬಗೆಯ ವಿಕಾರಗಳು ಅಂಟಿ
ಕೊಂಡಿರುವುದುಂಟು. ಈ ಉಪಚಾರವು ಅವಕ್ಕೂ ಚೆನ್ನಾದ
ಮದ್ದಾಗಿರುವುದು. ಒಂದೊಂದು ಸಲ ಗರ್ಭಾಶಯದಲ್ಲಿ
ಗಂಟುಗಟ್ಟುವುದುಂಟು; ಅದನ್ನೂ ಇದು ಕರಗಿಸಬಲ್ಲದು.
ಕೆಲವರಿಗೆ ಮೊದಲಿನ ನಾಲ್ಕೈದು ಇಂಜೆಕ್ಶನ್ನಿನಿಂದಲೆ
ಸಂಪೂರ್ಣಲಾಭವು ಸಿಕ್ಕುವುದು. ಇನ್ನು ಕೆಲವರಿಗೆ ಆರು
ತಿಂಗಳು ಒಂದುವರ್ಷ ಅಷ್ಟೆ ಇದರ ಸುಪರಿಣಾಮಲಾಭವು
ದೊರೆಯುವುದು. ಆಗ ಮತ್ತೆ ಇದೇ ಉಪಾಯವನ್ನು
ಮಾಡಬೇಕಾಗುವುದು. ಎರಡನೆಯ ಸಲವೂ ಅಷ್ಟೊಂದು
ಉಪಯೋಗವೆನಿಸದಿದ್ದರೆ ಏನು ಮಾಡಬೇಕೆಂಬುದನ್ನು
ಮೇಲೆ ಹೇಳಿಯೇ ಇದ್ದೇವೆ. ಒಂದು ಮಾತಿನಲ್ಲಿ ಹೇಳುವು-
ದೆಂದರೆ ಮುಟ್ಟಿನ ವಿಷಯಕವಾದ ಯಾವ ವಿಕಾರಗಳೂ
ಈ ಚಿಕಿತ್ಸೆಯಿಂದ ಗುಣಹೊಂದುತ್ತವೆ.

ಸ್ತ್ರೀಯರ ಬಂಜೆತನದ ಎಲ್ಲ ಕಾರಣಗಳನ್ನೂ ತಿಳಿದು-
ಕೊಳ್ಳುವುದು ಯಾವಾಗಲೂ ಅಶಕ್ಯವೆನಿಸುವುದಾದುದರಿಂದ,
ಈ ಉಪಚಾರವು ನೂರಕ್ಕೆ ಎಷ್ಟು ಪ್ರಮಾಣದಿಂದ ಫಲ-
ಕಾರಿಯಾಗುವುದೆಂಬುದನ್ನು ಅರಿತುಕೊಳ್ಳುವುದು ಕಠಿನ-
ವಾಗಿರುವುದು. ಆದುದರಿಂದ ಹೆಣ್ಣು ಕುದುರೆಗಳ ಮೇಲೆ
ಈ ಉಪಾಯವನ್ನು ಪ್ರಯೋಗಮಾಡಿ ನೋಡಿ ಆಯಿತು.
ಬಹುಕಾಲದ ವರೆಗೂ ಗಬ್ಬವಾಗದ ೧೩ ಕುದುರೆಗಳನ್ನು
ತೆಗೆದುಕೊಂಡು, ಅವುಗಳ ರಕ್ತವನ್ನೆ ಅವುಗಳಿಗೆ ಚುಚ್ಚ-
ಲಾಯಿತು. (೨೦ರಿಂದ ೪೦ ಸೀ. ಸೀಗಳ ವರೆಗೆ) ಚುಚ್ಚಿದ
ಮೊದಲನೆಯ ದಿನದ ಮೊದಲನೆಯ ಸಮಾಗಮದಿಂದಲೆ
ಅವುಗಳಲ್ಲಿಯ ಏಳು ಕುದುರೆಗಳಿಗೆ ಗರ್ಭವು ನಿಂತಿತು.
ಮಿಕ್ಕ ಕುದುರೆಗಳಾವುವಕ್ಕೂ ಇದರಿಂದ ಉಪಯೋಗ-
ವಾಗಲಿಲ್ಲ. ಆಗ ಆ ಕುದುರೆಗಳನ್ನೆಲ್ಲ ಕೊಂದುಹಾಕಿ ಪರೀಕ್ಷೆ
ಮಾಡುತ್ತಿರುವಾಗ, ಎರಡರ ಗರ್ಭಾಶಯದಲ್ಲಿ ರೋಗ-
ವಿದ್ದುದು ಕಂಡುಬಂದಿತು; ಆದುದರಿಂದ ನಿರೋಗಿಗಳಾದ
ಕುದುರೆಗಳನ್ನಷ್ಟೆ ತೆಗೆದುಕೊಂಡು ಲೆಕ್ಕ ಮಾಡಿದರೆ,

CC-0. Jangamwadi Math Collection. Digitized by eGangotri

೧೧ಕ್ಕೆ ೭ ಕುದುರೆಗಳಂತೆ ಈ ಪ್ರಯೋಗದಲ್ಲಿ ಯಶಸ್ಸಿನ ಪ್ರಮಾಣವು ಬಿದ್ಧಂತಾಯಿತು.

ಯಾವ ಪ್ರಕಾರದ ಹಾನಿಯನ್ನೂ ಉಂಟುಮಾಡದೆ, ಸ್ತ್ರೀಯರ ಹಲವು ರೋಗಗಳನ್ನು ಈ ಚಿಕಿತ್ಸೆಯಿಂದ ಕಳೆಯ ಬಹುದಾದುದರಿಂದ, ಪ್ರತಿಯೊಂದು ರೋಗದ ಮೇಲೂ ಇದನ್ನು ಉಪಯೋಗಿಸಿ ನೋಡುವುದು ಒಳ್ಳೆಯದೆಂದು ಯಾವ ಅಡೆತಡೆಯೂ ಇಲ್ಲದೆ ಹೇಳಬಹುದು.

—ಪ್ರೆಸ್ ಮೆಡಿಕಲ್

ಈ ವಿಷಯವನ್ನು ಕುರಿತು ತಾ. ೨೦—೬—೩೭ನೆಯ 'ಸಂಡೇ ಸ್ಟ್ಯಾಂಡರ್ಡ್'ಪತ್ರಿಕೆಯಲ್ಲಿ, ಹ್ಯಾರಿ ಗ್ರೇಗರ್ಸನ್ ಎಂಬವರು ಒಂದು ಮಹತ್ತ್ವದ

**ಮರಣಾನಂತರದ ಅನುಭವಗಳು**

ಲೇಖನವನ್ನು ಬರೆದಿರುವರು. ಅದರಲ್ಲಿಯ ಬೇರೆ ಬೇರೆ ಜನರ ಅನುಭವಗಳು ಆಶ್ಚರ್ಯಕರ-ವಾಗಿವೆಯಲ್ಲದೆ ವಿಚಾರ ಮಾಡಲು ಹಚ್ಚುವಂತಹವಾಗಿವೆ. ಎಂತಲೆ ಜಯಕರ್ಣಾಟಕದ ವಾಚಕರಿಗಾಗಿ ಅವರ ಅನುಭವಗಳನ್ನು ಸಂಗ್ರಹಿಸಿ ಕೊಡಲಾಗಿದೆ.

೧. ಥಿಯೋಡೋರನ ಅನುಭವ

ಎರಡು ತಿಂಗಳ ಕೆಳಗೆ ಥಿಯೋಡೋರ್ ಪ್ರಿನ್ಸ್ ಆಫ್ ಎಬರ್ಡೀನ್ (ವಾಷಿಂಗ್ಟನ್) ಎಂಬ ಹೆಸರಿನ ಮನುಷ್ಯನು ಮೋಟಾರಿನ ಅಪಘಾತವೊಂದರಲ್ಲಿ ಮರಣಹೊಂದಿದನು. ಆತನ ಎದೆಯ ಹೊಡೆತ ನಿಂತುಹೋಗಿದ್ದಿತು. ಉಸಿರಾಟವು ಇಲ್ಲದಂತಾಗಿದ್ದಿತು. ದೇಹದ ಯಾವ ಭಾಗದಲ್ಲಿಯೂ ಜೀವವಿದ್ದ ಲಕ್ಷಣಗಳಿರಲಿಲ್ಲ. ಅವನು ಸತ್ತಿದ್ದಾನೆಂದು ಡಾಕ್ಟರರೂ ಖಂಡಿತವಾಗಿ ಹೇಳಿದರು. ಮುಂದೆ ಅರ್ಧ ಗಂಟೆ ಕಳೆದ ಬಳಿಕ ಅವನು ಮರಳಿ ಚೇತನವನ್ನು ಪಡೆದನು. ಆಗ ತನ್ನ ಅನುಭವವನ್ನು ಹೇಳಿದುದು ಹೀಗೆ:—

"ನನಗಾಗ ಏನೆನಿಸುತ್ತಿದ್ದಿತೆಂಬುದನ್ನು ಹೇಳುವುದೆಂದರೆ ಅಸಾಧ್ಯ. ನಾನೊಂದು ಯಾವುದೋ ಹೊಸ ಲೋಕದಲ್ಲಿ ನಡೆಯುತ್ತಿದ್ದೇನೆಂದು ನನಗೆ ಭಾಸವಾಗುತ್ತಿದ್ದಿತು. ಆದರೆ ಆ ಲೋಕದ ಬಣ್ಣನೆಯನ್ನು ಈ ಲೋಕದ ಭಾಷೆಯಲ್ಲಿ ಮಾಡಲಿಕ್ಕೆ ಬರುವಂತಿಲ್ಲ. ನಾನು ವಾತಾವರಣದಲ್ಲಿ ತೇಲುತ್ತ ತೇಲುತ್ತ ಹೊರಟಿದ್ದೇನೆಂದು ನನಗೆ ಎನಿಸುತ್ತಿದ್ದಿತು. ನನ್ನ ಮನಸ್ಸಾಗ ತುಂಬ ಆನಂದದಲ್ಲಿ ಇದ್ದಿತು. ಆ ಹೊಸಲೋಕದಲ್ಲಿ ಬೆಳಕು ಇರಲಿಲ್ಲವಾದರೂ ಅಲ್ಲಿಯ ಕತ್ತಲೆಯು ಹೆದರಿಕೆಯನ್ನುಂಟುಮಾಡುವಂತಹದಿರಲಿಲ್ಲ; ಅದೊಂದು ವಿಚಿತ್ರವಾದುದಾಗಿಯೂ ಶಾಂತಸ್ವರೂಪದುದಾಗಿಯೂ ಇದ್ದಿತು. ನಾನು ಹಾಗೆಯೆ ತೇಲುತ್ತ ಹೊರಟಿರುವಾಗ ಒಮ್ಮೆಲೆ ಬೆಚ್ಚಿಬಿದ್ದೆನು. ಆಗ ಕಣ್ಣುತೆರೆದು ನೋಡುತ್ತೇನೆ: ನಾನು ಆಸ್ಪತ್ರೆಯಲ್ಲಿಯ ಹಾಸಿಗೆಯೊಂದರ ಮೇಲೆ ಇದ್ದೇನೆ; ನನ್ನ ಮೈಯು ಒಂದೇಸವನೆ ನೋಯಿಸುತ್ತಲಿದೆ."

೨. ಹೆಣದ ಮೈಯಲುಗಾಟ

ಅಮೇರಿಕೆಯ 'ಕೆರೋಲಿನೊ' ಸಂಸ್ಥಾನದಲ್ಲಿಯ 'ವಿಲ್-ಮಿಂಗ್ಟನ್' ಎಂಬ ಹಳ್ಳಿಯಲ್ಲಿ ಇಬ್ಬರು ಗೆಳೆಯರಿದ್ದರು. 'ಮೊದಲು ಯಾರು ಸಾಯುವರೋ ಅವರು ಸತ್ತಮೇಲಿನ ತನ್ನ ಅನುಭವವನ್ನು ಬದುಕಿ ಇದ್ದವನಿಗೆ ಹೇಳಬೇಕು!' ಎಂದು ಇಬ್ಬರು ಗೆಳೆಯರೂ ತಮ್ಮತಮ್ಮಲ್ಲಿ ಗೊತ್ತು-ಮಾಡಿಕೊಂಡಿದ್ದರು. ಹೀಗೆ ಗೊತ್ತುಮಾಡಿಕೊಂಡ ಕೆಲವು ದಿನಗಳ ತರುವಾಯ ಅವರಲ್ಲಿಯ ಒಬ್ಬ ಗೆಳೆಯನು ಕುದುರೆಯ ಮೇಲಿಂದ ಬಿದ್ದು ಏಟು ತಾಗಿ ಮರಣಹೊಂದಿದನು. ಪದ್ಧತಿಯಂತೆ ಆತನಿಗೆ ಮಣ್ಣು ಕೊಟ್ಟೂ ಆಯಿತು. ಮರುದಿನವೇ ಬದುಕಿದ್ದ ಗೆಳೆಯನು ಒಂದು ಕನಸನ್ನು ಕಂಡನು. ಕನಸಿನಲ್ಲಿ ಸತ್ತಗೆಳೆಯನು ಬಂದು 'ನಾನು ಸತ್ತಿರಲಿಲ್ಲ, ಆದರೂ ನೀನು ನನ್ನನ್ನು ಹೂಳಗೊಟ್ಟಿಯೇಕೆ?' ಎಂದುಕೇಳಿದನು.

ತನಗೆ ಬಿದ್ದ ಕನಸಿನ ಅರ್ಥವೇ ಆ ಗೆಳೆಯನಿಗಾಗಲಿಲ್ಲ. ಮರುದಿನವೂ ಅವನು ಅದೇ ಬಗೆಯ ಕನಸನ್ನು ಕಂಡನು. ಆದರೂ ಅದರ ಕಡೆಗೆ ಅವನು ಲಕ್ಷ್ಯವನ್ನು ಕೊಡಲಿಲ್ಲ. ಮೂರನೆಯ ದಿನದ ಕನಸೂ ಮೊದಲಿನ ಎರಡು ದಿನಗಳಂತೆಯೆ ಇದ್ದಿತು. ಆಗ ಇದರಲ್ಲಿ ಏನೋ ಗೂಢವಿರಬಹುದೆಂದು ಆತನಿಗೆನಿಸಿತು. ಕೂಡಲೆ ಅವನು ತನ್ನ ಗೆಳೆಯನ ಗೋರಿಯಬಳಿ ಹೋಗಿ, ಅಗಿದು ಹೆಣವನ್ನು ಹೊರಕ್ಕೆ ತೆಗೆದನು. ಆಗ ಪೆಟ್ಟಿಗೆಯಲ್ಲಿರಿಸಿ ಹುಗಿದಿದ್ದ ಹೆಣವು ಒಂದು ಮಗ್ಗಲಿನಿಂದ ಇನ್ನೊಂದು ಮಗ್ಗಲಾಗಿ ಮಲಗಿದ್ದು, ಹೊರಕ್ಕೆ ಬರುವುದಕ್ಕಾಗಿ ಪ್ರಯತ್ನಿಸಿದುದರಿಂದಲೇನೋ—ಪೆಟ್ಟಿಗೆಯ ಕೆಲವೊಂದು ಭಾಗವು ಮುರಿದುಹೋಗಿದ್ದಿತು.

೩. ಡಾ. ಜೆಡಿಸ್ ಅವರು ಕಂಡುಹಿಡಿದುದು

ಇಂಗ್ಲೆಂಡಿನ ಪ್ರಸಿದ್ಧ ಡಾಕ್ಟರರೂ ಶರೀರವಿಜ್ಞಾನ-ಮಹೋಪಾಧ್ಯಾಯರೂ ಆದ ಸರ್ ಅಕ್ಲೆಂಡ್ ಜೇನಸ್ ಎಂಬವರೊಬ್ಬರು, ಇದೇ ವರ್ಷದ ಫೆಬ್ರುವರಿ ೨೭ನೆಯ ತಾರೀಖಿನ ದಿವಸ ಎಡಿನ್‌ಬರೋನಗರದ

CC-0. Jangamwadi Math Collection. Digitized by eGangotri

'ಮೆಡಿಕಲ್ ಸೊಸೈಟಿ' ಎಂಬ ಸಂಸ್ಥೆಯಲ್ಲಿ ಒಂದು ನಿಬಂಧವನ್ನು ಓದಿದರು. ಅದರಲ್ಲಿ ಅವರು, ಸತ್ತುಹೋದ ಕೆಲವೇಳೆಯ ತರುವಾಯ ಮತ್ತೆ ಜೀವಿಸಿದ ಮನುಷ್ಯನೊಬ್ಬನ ಅನುಭವವನ್ನು ವರ್ಣಿಸಿದ್ದಾರೆ. ಅದರ ಕತೆ ಕೆಳಗೆ ಬರೆದಂತಿದೆ:

"ಶನಿವಾರ ನವ್ಹೆಂಬರ್ ೯ ನೆಯ ತಾರೀಖಿನ ದಿನ ಇದ್ದಕ್ಕಿದ್ದ ಹಾಗೆಯೆ ನನಗೆ ಸಂಕಟ-ಸಂಕಟವೆನಿಸಲು ತೊಡಗಿತು. ಆಳನ್ನು ಕರೆಯುವುದಕ್ಕಾಗಿ ಗಂಟೆಯನ್ನು ಬಾರಿಸಬೇಕೆಂದು ಪ್ರಯತ್ನಿಸಿದೆ. ಆದರೆ ಅಷ್ಟು ಶಕ್ತಿಕೂಡ ನನ್ನಲ್ಲಿಲ್ಲವೆಂಬುದನ್ನು ತಿಳಿದು ಆ ಪ್ರಯತ್ನವನ್ನು ನಿಲ್ಲಿಸಿದೆ. ಮುಂದೆ ಸ್ವಲ್ಪಕಾಲದಲ್ಲಿಯೆ ನಾನು ನನ್ನ ದೇಹದಿಂದ ಬೇರೆಯಾಗುತ್ತಿದ್ದೇನೆಂದು ನನಗೆ ಕಂಡುಬರಲು ತೊಡಗಿತು. ಆ ಮೇಲೆ ಸ್ವಲ್ಪವೇಳೆಯಲ್ಲಿಯೇ, ನನ್ನ ಹಾಸಿಗೆಯೂ ಅದರಮೇಲೆ ನೀಡಿಕೊಂಡಿದ್ದ ನನ್ನ ದೇಹವೂ ನನ್ನಿಂದ ಬೇರೆಯಾಗಿ ಕಾಣಲಾರಂಭಿಸಿದುವು. ಮುಂದೆ ಸ್ವಲ್ಪವೇಳೆಯಲ್ಲಿಯೆ ನನಗೆ ನನ್ನ ಮನೆಯಲ್ಲಿರುವ—ಮನೆಯಹೊರಗಿರುವ—ಊರಲ್ಲಿರುವ — ಬೇರೆಯೂರಲ್ಲಿರುವ — ಪದಾರ್ಥಗಳು, ನೆನಪಿನೆದುರು ಬಂದೊಡನೆಯೆ ಕಣ್ಣಿಗೆ ಕಾಣಲು ತೊಡಗಿದುವು. ನಾನಾಗ ಸ್ಥಲ-ಕಾಲಗಳಿಂದ ಅತೀತನಾಗಿರುವೆನೆಂದು ನನಗೆ ಎನಿಸಲಾರಂಭಿಸಿತು.

ಕೆಲವು ನಿಮಿಷಗಳು ಕಳೆದ ಬಳಿಕ ನನ್ನ ಹೆಂಡತಿಯು ಕಿರುಮನೆಯೊಳಕ್ಕೆ ಬಂದಳು. ಅಲ್ಲಿ ಜೀವವಿಲ್ಲದೆ ಬಿದ್ದಿದ್ದ ನನ್ನ ಕಲೇವರವನ್ನು ನೋಡಿದೊಡನೆಯೆ ಆಕೆ ಬೆಚ್ಚಿ ಮೈಮರೆತುಹೋದಳು. ನಸುವೇಳೆಯಲ್ಲಿಯೆ ಅವಳು ಎಚ್ಚತ್ತು ಟೆಲಿಫೋನಿನಿಂದ ಡಾಕ್ಟರನ್ನು ಕರೆದಳು. ಆಗ ಡಾಕ್ಟರನು ತನ್ನ ಮನೆಯಲ್ಲಿ ರೋಗಿಯೊಬ್ಬನನ್ನು ಉಪಚರಿಸುವುದರಲ್ಲಿದ್ದನು. ಆತನಿಗೆ ಸುದ್ದಿ ಗೊತ್ತಾದೊಡನೆಯೆ ಎದುರಿಗಿದ್ದ ರೋಗಿಯನ್ನು ಬಿಟ್ಟು, ನನ್ನ ಮನೆಗೆ ಬರುವುದಕ್ಕೆಂದು ಹೊರಟನು. ಇದೆಲ್ಲವೂ ನಾನಿದ್ದ ಸ್ಥಳದಿಂದಲೆ ನನಗೆ ಗೊತ್ತಾಗುತ್ತಿದ್ದಿತು. ಡಾಕ್ಟರನು ನನ್ನ ಜಡವಾಗಿಬಿದ್ದ ದೇಹದ ಬಳಿಗೆ ಬಂದು ನೋಡಿ 'ಸರಿ! ಖಂಡಿತ ಈತನ ಜೀವನದ ಅಂತ್ಯವಾಗಿರಬೇಕು!' ಎಂದು ತನ್ನಲ್ಲಿಯೆ ಎಂದುಕೊಂಡನು. ಡಾಕ್ಟರು ಮಾತನಾಡದಿದ್ದರೂ ಆತನ ಮನಸ್ಸಿನ ಮಾತು ನನಗೆ ಗೊತ್ತಾಯಿತು. ಅವನು ನನ್ನ ದೇಹವನ್ನು ಅಲುಗಾಡಿಸಿ, ನನ್ನನ್ನು ಮಾತನಾಡಿಸಬೇಕೆಂದು ಪ್ರಯತ್ನಮಾಡಿದ. ಆದರೆ ನನಗೆ ದೇಹದ ಸಂಬಂಧವು ತಪ್ಪಿದುದರಿಂದ, ಡಾಕ್ಟರನೊಂದಿಗೆ ಮಾತನಾಡುವುದಕ್ಕೆ ನನ್ನಿಂದಾಗಲಿಲ್ಲ. ಆ ಮೇಲೆ ಜೇಕಳಿಯನ್ನು ಹೊರಕ್ಕೆ ತೆಗೆದು, ಕರ್ಪುರಾರ್ಕವನ್ನು ನನ್ನ ದೇಹದಲ್ಲಿ ಚುಚ್ಚಿ ಸೇರಿಸಿದನು. ಇದರಿಂದ ನನ್ನ ದೇಹಕ್ಕೆ ಚಲನವಲನವುಂಟಾಯಿತು. ಎದೆಯ ಹೊಡೆತಕ್ಕೆ ಮತ್ತೆ ಪ್ರಾರಂಭವಾಯಿತು. ನನ್ನ ದೇಹದಿಂದ ಮತ್ತೆ ನಾನು ಆಕರ್ಷಿತನಾದೆನು. ಹೀಗೆ ಮರಳಿ ನನ್ನನ್ನು ನನ್ನ ದೇಹದ ಸೆರೆಮನೆಯಲ್ಲಿ ತುರುಕಿದುದಕ್ಕಾಗಿ ನನಗೆ ತುಂಬ ಕೋಪವು ಬಂದುಬಿಟ್ಟಿತು. ಆದರೆ ಮಾಡಬೇಕೇನು? ಮತ್ತೆ ನನ್ನ ದೇಹದ ಅರಿವು ನನಗೆ ಆಯಿತು. ಈ ಮೊದಲು ನನಗೆ ತಿಳಿಯುತ್ತಿದ್ದ—ಕಾಣುತ್ತಿದ್ದ—ಎಲ್ಲ ಸ್ಥಳದ ವರ್ತಮಾನವೂ ಒಮ್ಮೆಲೆ ನನಗೆ ತಿಳಿಯದಂತಾಯಿತು. ಕಾಣದಂತಾಯಿತು."

### ೪. ಆಗಸ್ಟನ್ ಎಂಬಾತನ ಅನುಭವ

ಎಬರ್ಡೀನಿನಲ್ಲಿಯ ಪ್ರೊಫೆಸರೂ ಪ್ರಸಿದ್ಧ ಡಾಕ್ಟರೂ ಆದ ಸರ್ ಅಲೆಗ್ಝಾಂಡರ್ ಆಗಸ್ಟನ್ ಎಂಬವನು 'ಮೂರು ಯುದ್ಧಗಳಲ್ಲಿಯ ನೆನಪು' ಎಂಬ ಹೆಸರಿನ ಪುಸ್ತಕವೊಂದನ್ನು ಬರೆದಿದ್ದಾನೆ. ಅದರಲ್ಲಿ ತನ್ನ ಸ್ವಂತದ ಅನುಭವವನ್ನು ಕುರಿತು ಅವನು ಹೀಗೆ ಬರೆದಿರುವನು:

"ದಕ್ಷಿಣ ಆಫ್ರಿಕೆಯಲ್ಲಿ ನಡೆದುಹೋದ ಬೋಅರ್ ಯುದ್ಧಕ್ಕೆ ನಾನು ಹೋಗಿರುವಾಗ, ಅಲ್ಲಿ ನನಗೆ ವಿಷಮಜ್ವರವು ಅಂಟಿಕೊಂಡಿತು. ಆ ಜ್ವರದಲ್ಲಿಯೆ ವಾತ ಪ್ರಕೋಪವಾಗಿ, ಬಾಯಿಗೆ ಬಂದಂತೆ ನಾನು ಬಡಬಡಿಸತೊಡಗಿದೆನು. ಸ್ವಲ್ಪ ಕಾಲದ ತರುವಾಯ ನನ್ನ ದೇಹದಿಂದ ಮನಸ್ಸು ಬೇರೆಯಾದಂತೆ ನನಗೆ ಎನಿಸಿತು. ನನ್ನ ದೇಹವನ್ನು ನೋಡಿದಾಗ ಆ ಮಾಂಸದ ಮುದ್ದೆಯ ಬಗೆಗೆ ನನಗೆ ಜುಗುಪ್ಸೆಯುಂಟಾಯಿತು. 'ಆ ಮುದ್ದೆಯೆಂದರೆ ನನ್ನ ದೇಹವು ಅಹುದು, ಆದರೆ ಅದೇ ನಾನಲ್ಲ' ಎಂಬ ತಿಳುವಳಿಕೆಯು ನನ್ನಲ್ಲಿ ಜಾಗೃತವಾಯಿತು. ಶರೀರದಿಂದ ಒಳಗೂ ಹೊರಗೂ ನನ್ನ ಎಡೆಯಾಟವು ನಡೆಯಿತು. ನಾನು ದೇಹವನ್ನು ಬಿಟ್ಟು ಹೊರಕ್ಕೆ ಹೊರಕ್ಕೆ ಬಂದಾಗಲೆಲ್ಲ, ನನ್ನ ಸುತ್ತುಮುತ್ತಲೂ ನನ್ನಂತೆಯೆ ಬೇರೆ ಹಲವು ಛಾಯಾಮೂರ್ತಿಗಳು ತಿರುಗಾಡುತ್ತಿವೆಯೆಂದು ಎನಿಸುತ್ತಿದ್ದಿತು. ಶರೀರವನ್ನು ಬಿಟ್ಟು ಹೊರಬಿದ್ದಾಗಲೆ ಯಾವುದೋ

CC-0. Jangamwadi Math Collection. Digitized by eGangotri

ಒಂದು ದೊಡ್ಡ ಪ್ರವಾಹದಲ್ಲಿ ತೇಲುತ್ತ ನಡೆದಿದ್ದೇನೆ ಎನಿಸುತ್ತಿದ್ದಿತು. ಅಲ್ಲಿ ಬೆಳಕು ಇರಲಿಲ್ಲವಾದರೂ ಕತ್ತಲೆಯೂ ಇರಲಿಲ್ಲ. ಆ ಪರಿಸ್ಥಿತಿಯಲ್ಲಿ ನನಗೆ ಯಾವ ಬಗೆಯ ಭೀತಿಯೂ ಇರಲಿಲ್ಲ, ಆನಂದವೂ ಇರಲಿಲ್ಲ. ಹಾಗೆಯೆ ಅಲೆದಾಡುತ್ತಲಿದ್ದೆ. ಅಷ್ಟರಲ್ಲಿಯೆ ಇಲ್ಲಿ ಏನೇನಾಯಿತೋ ನಾನು ಕಾಣೆ; ನನ್ನ ದೇಹದಲ್ಲಿ ಮತ್ತೆ ಚೈತನ್ಯ ಸಂಚಾರವಾಯಿತು. ಅದು ನನ್ನನ್ನು ತನ್ನಲ್ಲಿ ಸೆಳೆದುಕೊಂಡಿತು. ಮತ್ತೆ ಮರಳಿ ಆ ಶರೀರವನ್ನು ಪ್ರವೇಶಿಸುವುದೆಂದರೆ ನನಗೆ ಬೇಡವೆನಿಸಿತು. ಆದರೆ ನಾನು ಅದರಿಂದ ಆಕರ್ಷಿತನಾದೆ. ಆಗಲೆ ನನ್ನ ಹಾಸಿಗೆಯ ಬಳಿಯಲ್ಲಿ ಕುಳಿತಿದ್ದ ನನ್ನ ಜನರು 'ಅಯ್ಯೋ ಇವನೀಗ ಹೊರಟು ನಡೆದ' ಎಂದು ನುಡಿಯುತ್ತಿರುವುದು ನನಗೆ ಕೇಳಿಸಿತು. ಸ್ವಲ್ಪ ಕಾಲದಲ್ಲಿಯೆ 'ನನ್ನ ಶರೀರವೂ ನಾನೂ ಬೇರೆಬೇರೆ' ಎಂದಿದ್ದ ನನ್ನ ಆಗಿನ ಭಾವನೆಯು ಅಡಗಿ, ನಾನು ದೇಹದೊಂದಿಗೆ ದೇಹವೇ ಆಗಿಬಿಟ್ಟೆನು. ಶರೀರವನ್ನು ಬಿಟ್ಟು ಹೊರಕ್ಕೆ ಬಿದ್ದಾಗ ನನಗೆ ಬರಹೋಗುವುದಕ್ಕೆ ಯಾವ ಗೋಡೆಯೂ ತಡೆಯನ್ನುಂಟುಮಾಡುತ್ತಿರಲಿಲ್ಲ. ಗೋಡೆಯ ಆಚೆಗಿರುವುದೆಲ್ಲವೂ ನನಗೆ ಸ್ಪಷ್ಟವಾಗಿ ಕಾಣುತ್ತಿದ್ದಿತು. ಆ ಆಸ್ಪತ್ರೆಯ ಒಂದು ದೂರದ ಭಾಗದಲ್ಲಿ ಡಾಕ್ಟರನೊಬ್ಬನು ಸಾಯುವ ಸ್ಥಿತಿಯಲ್ಲಿ ಬಿದ್ದುಕೊಂಡಿದ್ದನು. ಅದೂ ನನಗೆ ಕಾಣುತ್ತಿದ್ದಿತು. ಆ ಡಾಕ್ಟರನ ಹತ್ತಿರದ ಜನರು ಆತನ ಹೆಣವನ್ನು ಬಟ್ಟೆಯಿಂದ ಮುಚ್ಚಿದರು; ಅಲ್ಲದೆ ಮಿಕ್ಕ ರೋಗಿಗಳಾರಿಗೂ ಆ ಸಾವಿನ ಸಂಗತಿ ಗೊತ್ತಾಗಬಾರದೆಂದು, ಯಾವ ಗಲಾಟೆಯನ್ನೂ ಮಾಡದೆ ಹೆಣವನ್ನು ಅಲ್ಲಿಂದ ಸಾಗಿಸಿಕೊಂಡು ಹೋದರು. ನಾನು ಎಚ್ಚತ್ತ ಮೇಲೆ ಬಳಿಯಲ್ಲಿದ್ದ ನರ್ಸಿನ ಮುಂದೆ ನಾನು ನೋಡಿದ ವಿಷಯವನ್ನೆಲ್ಲ ಹೇಳಿದೆ. ಆಗ ನರ್ಸು 'ನೀವು ಹೇಳಿದಂತೆ ಆ ದಿನ ಡಾಕ್ಟರನೊಬ್ಬನು ಸತ್ತುದು ನಿಜ!' ಎಂದು ಹೇಳಿದಳು.

—ಸಂಡೇ ಸ್ಟ್ಯಾಂಡರ್ಡ್

---


## ದಮ್ಮು ಪೂರ್ಣ ಗುಣವಾಗುವ

### ಉಪಾಯವನ್ನೇ ಕೈಕೊಳ್ಳಬೇಕು



ಕೆಮ್ಮು ಮತ್ತು ಕಫವಿಕಾ... ವಿದ್ದವರು 'ಎಫಿಡಮ' ಮುಂತಾ... ತಾತ್ಕಾಲಿಕ ಆರಾಮವೆನಿಸು... ಔಷಧಗಳನ್ನು ಎಂದೂ ಉ... ಯೋಗಿಸಬಾರದು. ಈ ಔಷಧ... ಗಳು ರೋಗವನ್ನು ಪೂ... ಗುಣಪಡಿಸಲು ನಿರುಪಯೋ... ಗಳೆಂಬದು ನಿಶ್ಚಿತವು; ಮತ್ತ... ಇಂಥ ಔಷಧಗಳು ಶ್ವಾಸನಲಿಕೆ... ಯಲ್ಲಿಜೆಚ್ಚಿಗೆ ನೋವುಂಟುಮಾ... ರೋಗವನ್ನು ಶಾಶ್ವತಮಾಡುತ್ತ...

ರೋಗಲಕ್ಷಣವನ್ನು ಪೂರ್ಣ ವಿಚಾರ ಮಾಡಿ... ರೋಗಿಗೆ ಬೇಗನೆ ಮತ್ತು ಸಾವಧಾನವಾಗಿ ಪೂರ್ಣ ಗು... ಮಾಡುವ ಔಷಧವೇ ನಿಜವಾದ ಉಪಾಯವು; ಮತ್ತು ಇದೆ... ದೃಷ್ಟಿಯಿಂದ ಡಾ. ಪುರೋಹಿತ ಇವರ

'ಶ್ವಾಸಹಾರಿ ಪ್ಲೇನ್' ಮತ್ತು
'ಶ್ವಾಸಹಾರಿ ಕಾಂಪಾವುಂಡ್'

ಈ ಎರಡೂ ಔಷಧಗಳು ದಮ್ಮು ವಿಕಾರವನ್ನು ಪೂ... ಗುಣಪಡಿಸುವ ದಿವ್ಯೌಷಧಿಯಲ್ಲಿ ಅಗ್ರೇಸರವೆನಿಸಿವೆ. ದಮ್... ಶ್ವಾಸ, ಮುಂಜಾನೆಯ ತಸಕಿ, ಗಂಟಲು ಕೆರೆಯುವ ಹಳೆ... ಕೆಮ್ಮು ಮತ್ತು ಪುಪ್ಪುಸದ ಯಚ್ಚಾವತ್ ರೋಗಗಳನ್ನು... ಗುಣಪಡಿಸಲು "ಶ್ವಾಸಹಾರಿ ಪ್ಲೇನ್" ಉಪಯೋಗಿಸಬೇ... ಆಮ್ಲಪಿತ್ತವಿದ್ದವರು "ಶ್ವಾಸಹಾರಿ ಕಾಂಪೌಂಡ್" (ಕೆ... ಪ್ಯಾಕಿಂಗ್) ಉಪಯೋಗಿಸುವುದು ಹೆಚ್ಚು ಲಾಭಕರವು.

ಬಹುತರವಾಗಿ ಎಲ್ಲ ಶಹರಗಳಲ್ಲಿ ಕೆಮಿಸ್ಟ್ ಸ್ಟೋರ್ಸ್ ಮ... ಅಂಗಡಿಗಳಲ್ಲಿ ಈ ಔಷಧಗಳು ರೂ. ೨, ೩-೮-೦ ಮತ್ತು ... ಹೀಗೆ ಬೇರೆ ಬೇರೆ ಬೆಲೆಯ ೩ ಪ್ಯಾಕುಗಳಲ್ಲಿ ಮಾರಲಿಕ್ಕೆ ಸಿಗುತ್ತ...

ಮುಂಬಯಿ ಏಜಂಟ—

ಮೆ. ಓರಿಯಂಟಲ್ ಮೆಡಿಕಲ್
ಸ್ಟೋರ್ಸ್, ಪ್ರಿನ್ಸೆಸ್ ಸ್ಟ್ರೀಟ್, ಮುಂಬೈ




ಡಾ ಪುರೋಹಿತ ಫಾರ್ಮಸಿ, ಕೊಲ್ಹಾಪುರ


CC-0. Jangamwadi Math Collection. Digitized by eGangotri

# ಸಾಹಿತ್ಯಗೋಷ್ಠಿ

## ತಮಿಳು ಪದ್ಯವಾಙ್ಮಯದ ಪರಿಚಯ

ಶ್ರೀ. ಶ್ರೀನಿವಾಸಾಚಾರ್ಯ (ಭಾರದ್ವಾಜೀಯ)ರ ಹಿಂದೀ ಲೇಖನದಿಂದ ಸಂಗ್ರಹಿಸಿದುದು. (ಸಂ. ಜ. ಕ.)

ತಮಿಳು ಸಾಹಿತ್ಯದ ಬಹುಭಾಗವು ಪದ್ಯರೂಪಿಯಾಗಿಯೆ ಇದೆ. ಮೊದಲಿನ ಕಾಲದಲ್ಲಿ ಕೋಶ, ವ್ಯಾಕರಣ, ಚರಿತ್ರ, ಜ್ಯೋತಿಷ, ವೈದ್ಯಕ, ಭೂಗೋಲ, ಖಗೋಲ ಮೊದಲಾದ ಎಲ್ಲವಿಷಯಗಳನ್ನೂ ಪದ್ಯದಲ್ಲಿಯೆ ಬರೆಯಲಾಗುತ್ತಿದ್ದಿತು. ಅಂದಿನ ಕಾಲದಲ್ಲಿ ಗ್ರಂಥದ ಮೇಲಿನ ವ್ಯಾಖ್ಯಾನಗಳ ಹೊರತು ಇತರ ಸಾಹಿತ್ಯನಿರ್ಮಿತಿಯ ಸಂದರ್ಭದಲ್ಲಿ ಗದ್ಯ-ವನ್ನು ಉಪಯೋಗಿಸುತ್ತಲೇ ಇರಲಿಲ್ಲ. ಪುರಾತನ ತಮಿಳು ಕವಿಗಳೆಲ್ಲರೂ ಹೆಚ್ಚಾಗಿ ತಮ್ಮ ಕೃತಿಗಳನ್ನು ಅಕ್ಷರಾಲಂ-ಕಾರ, ಶಬ್ದಾಲಂಕಾರ, ಅರ್ಥಾಲಂಕಾರಗಳ ಸಂಪ್ರದಾಯ-ದಿಂದ ಬಿಗಿದು ಕಟ್ಟಿ ಹಾಕಿದ್ದಾರೆ. ಈ ಭಾಷೆಯ ಪದ್ಯ ವಾಙ್ಮಯದ ವಿಕಾಸಕಾಲವನ್ನು ಸ್ಥೂಲದೃಷ್ಟಿಯಿಂದ ಮೂರುಭಾಗಗಳನ್ನಾಗಿ ವಿಭಾಗಿಸಬಹುದು.

(೧) **ಆದಿಕಾಲ**—ಕ್ರಿ. ಶ. ೧೦೦ ವರ್ಷಗಳಿಗೆ ಹಿಂದಿನದು.

(೨) **ಮಧ್ಯಕಾಲ** ಪೂರ್ವಾರ್ಧ—ಕ್ರಿ. ಶ. ೧೦೦ ರಿಂದ ೬೦೦ ವರೆಗೆ.

" ಉತ್ತರಾರ್ಧ—ಕ್ರಿ. ಶ. ೬೦೦ ರಿಂದ ೧೪೦೦. ವರೆಗೆ

(೩) **ಆಧುನಿಕಕಾಲ**—ಕ್ರಿ. ಶ. ೧೪೦೦ ರಿಂದ ಇಂದಿನವರೆಗೆ.

### (೧) ಆದಿಕಾಲ (ಕ್ರಿ. ಶ. ೧೦೦ ವರ್ಷಗಳಿಗೆ ಹಿಂದೆ).

ಐತಿಹಾಸಿಕ ರೀತಿಯಿಂದ ಇದುವರೆಗೂ ಸಂಶೋಧಿತ-ವಾಗದಿರುವ ಸಾಹಿತ್ಯದ ಕಾಲವನ್ನೇ ಆದಿಕಾಲವೆಂದು ಹೇಳಬಹುದು. ಈ ಕಾಲದ ಗ್ರಂಥಗಳಲ್ಲಿ ಮೊದಲನೆಯ ತಮಿಳುಸಂಘದ **'ಅಗಸ್ತ್ಯವ್ಯಾಕರಣ'**ದ ಕೆಲವು ಸೂತ್ರ-ಗಳು, ಮಧ್ಯಮಸಂಘದ **'ತೊಲ್ಕಾಪ್ಯಮ್'** ಕೊನೆಯ ಸಂಘಕ್ಕೆ ಸಂಬಂಧಿಸಿದ **'ಎಟ್ಟುತ್ತೊಗೈ' 'ಪತ್ತುಪ್ಪಾಟ್ಟು' 'ಪದಿನೆಣ್‌ಕೀಷ್ಕಣಕ್ಕು'** ಇವಿಷ್ಟೇ ಇಂದು ದೊರೆತಿರುವ ಗ್ರಂಥಗಳು. **'ಎಟ್ಟುತ್ತೊಗೈ'** (= ಅಷ್ಟಕಸಂಗ್ರಹ) ಎಂಬುದು ಬೇರೆ ಬೇರೆ ಎಂಟುಗ್ರಂಥಗಳ ಸಂಗ್ರಹವನ್ನೊಳ ಗೊಂಡಿದ್ದು, ಅದರಲ್ಲಿಯ **"ಪದಿಟ್ರುಪ್ಪತ್ತು"** ಎಂಬ ಹೆಸರಿನ ಗ್ರಂಥವು, ತತ್ಕಾಲೀನರಾದ ೧೧ ಜನ ಚೇರದೊರೆ ಗಳ ಇತಿಹಾಸವನ್ನೂ ಶೌರ್ಯ-ಸಾಹಸಗಳ ವರ್ಣನೆ ಯನ್ನೂ ಒಳಗೊಂಡಿವೆ. **"ಪತ್ತುಪ್ಪಾಟ್ಟು"** (=ಹತ್ತು ಪದ್ಯಗಳು) ಎಂಬ ಗ್ರಂಥವು ಪೂರ್ವದ ತಮಿಳು ರಾಜರ ವೀರಕಥೆಯನ್ನೂ **"ಪದಿನೆಣ್ಕೀಷ್ಕಣಕ್ಕು"** ಎಂಬುದು ಹದಿನೆಂಟು ನೀತಿಗ್ರಂಥಗಳ ಸಂಗ್ರಹವನ್ನೂ ಒಳಗೊಂಡಿವೆ.

ಮೇಲೆ ಹೇಳಿದುವುಗಳಲ್ಲದೆ **"ತಿರುವಳ್ಳುವರ್"** ಕವಿಯ **"ತಿರುಕ್ಕುರಳ್"** ಎಂಬ ಹೆಸರಿನ ಅಮರಗ್ರಂಥವೂ ಇದೇ ಕಾಲಕ್ಕೆ ಸೇರಿದುದಿದ್ದು, ಜಗತ್ತಿನ ಎಲ್ಲ ಪ್ರಮುಖ ಭಾಷೆ ಗಳಲ್ಲಿಯೂ ಇದು ಪರಿವರ್ತಿತವಾಗಿದೆ. ಶ್ರೀಮಾನ್ ಚಕ್ರವರ್ತಿ ರಾಜಗೋಪಾಲಾಚಾರ್ಯರು, ಈ ಗ್ರಂಥವನ್ನು ಕುರಿತು, ೧೯೩೬ನೆಯ ಎಪ್ರಿಲ್ ತಿಂಗಳ ಹಿಂದೀ "ಹಂಸ" ಮಾಸಪತ್ರಿಕೆಯಲ್ಲಿ ವಿವೇಚನಾತ್ಮಕವಾದ, ಸುಂದರ ಲೇಖನವೊಂದನ್ನು ಬರೆದಿರುವರು. **ತಿರುವಳ್ಳುವರ್**‌ಕವಿಯ ತಂಗಿಯಾದ **ಔವಯರ್** ಎಂಬಾಕೆಯ ನೀತಿಗ್ರಂಥವೂ ಇದೇಕಾಲಕ್ಕೆ ಸೇರಿದುದು.

### (೨) ಮಧ್ಯಕಾಲ

ಪೂರ್ವಾರ್ಧ (ಕ್ರಿ. ಶ. ೧೦೦—೬೦೦)

ಕೊನೆಯ ತಮಿಳುಸಂಘದ ಕೊನೆಯ ಕಾಲವಿದಿದ್ದು, **"ಚಿಂತಾಮಣಿ" "ಶಿಲಪ್ಪಧಿಕಾರಮ್" "ಮಣಿ-ಮೇಖಲೈ" "ವಳೈಯಾಪದಿ" "ಕುಂಡಲಕೇಶಿ"** ಎಂಬ ಐದು ತಮಿಳು ಮಹಾಕಾವ್ಯಗಳ ನಿರ್ಮಾಣವು ಈ ಕಾಲ ದಲ್ಲಿಯೆ ಆಯಿತು. ಅದರಂತೆಯೆ **"ನೀಲಕೇಶಿ" "ಚೂಡಾ-ಮಣಿ" "ಯಶೋಧರ ಕಾವ್ಯ" "ನಾಗಕುಮಾರ ಕಾವ್ಯ" "ಉದಯನಕಥಾ"** ಈ ಲಘುಕಾವ್ಯ ಪಂಚಕದ ನಿರ್ಮಿತಿಯೂ ಇದೇ ಕಾಲದಲ್ಲಾಯಿತು. **ಮಣಿವಾ-ಚಕನ** ಭಕ್ತಿಕಾವ್ಯಗಳಾದ **"ತಿರುವಾಚಕಮ್" "ತಿರು-ಕ್ಕೊವೈಯಾರ್"** ಎಂಬುವೂ ಈ ಕಾಲದಲ್ಲಿಯ ಉತ್ತಮ

CC-0. Jangamwadi Math Collection. Digitized by eGangotri

ಕೃತಿಗಳು. 'ಆಳ್ವಾರ್' ಕವಿಗಳು ತಮ್ಮ ಭಕ್ತಿರಸಭರಿತ ಕಾವ್ಯಗಳಿಂದ ತಮಿಳು ವಾಙ್ಮಯಭಾಂಡಾರವನ್ನು ತುಂಬಿಸುದು ಈ ಕಾಲದಲ್ಲಿಯೆ.

### ಉತ್ತರಾರ್ಧ ( ಕ್ರಿ. ಶ. ೬೦೦—೧೮೦೦ )

ಭಕ್ತಿವಾಙ್ಮಯಕ್ಕಿದು ಸುಗ್ಗಿಯ ಕಾಲವೆಂದೇ ಹೇಳಬಹುದು. ಒಂದು ಕಡೆಯಿಂದ ಶಿವಭಕ್ತರಾದ ನಾಯನಾರರ ಕಾವ್ಯಗಳೂ, ಇನ್ನೊಂದು ಕಡೆಯಿಂದ ವೈಷ್ಣವಭಕ್ತರಾದ ಆಳ್ವಾರರ ಕಾವ್ಯಗಳೂ ಈಗ ಪ್ರಚಾರದಲ್ಲಿ ಬರಲುತೊಡಗಿದ್ದುವು. "**ತಿರುಜ್ಞಾನ ಸಂಬಂಧರ್**" "**ತಿರುನಾವುಕ್ಕರಶರ್**" ಎಂಬ ಗ್ರಂಥಗಳೂ ಸುಂದರಮೂರ್ತಿ ನಾಯನಾರರ "**ಶೇವಾರವನ್**" ಎಂಬ ಗ್ರಂಥವೂ ನಿಜವಾಗಿಯೂ ಪರಮಾತ್ಮನ ಕೊರಳಸರವಾಗಿ ಪರಿಣಮಿಸಿದ್ದುವು.

"**ಕಲ್ಲಾಡಮ್**" ಎಂಬ ಹೆಸರಿನ ಅಂತರ್ವಸ್ತು ವಿವೇಚಕವಾದ ಗಂಭೀರಕಾವ್ಯವು ಹತ್ತನೆಯ ಶತಮಾನದಲ್ಲಿ ರಚಿತವಾಯಿತು. "**ನನ್ನುಲ್**" "**ಅಳಪ್ಪಾರುಳ್ ವಿಳಕ್ಕಮ್**" ಎಂಬ ಗ್ರಂಥಗಳೂ ಐಯನಾರಿದನಾರ್ ಎಂಬವನ ಲಕ್ಷಣಗ್ರಂಥವೂ ಈ ಕಾಲಖಂಡದಲ್ಲಿಯೆ ನಿರ್ಮಾಣವಾದುವುಗಳು. ಮುಂದೆ ಹನ್ನೊಂದನೆಯ ಶತಮಾನದಲ್ಲಿ ತಮಿಳುಸಾಹಿತ್ಯವು ಅಭೂತಪೂರ್ವವಾದ ಉನ್ನತಿಯನ್ನು ಪಡೆಯಿತು. **ಕಂಬನ್, ಒಟ್ಟಕ್ಕುತ್ತರ, ಪುಹಷೇಂದಿ** ಇವರೇ ಮೊದಲಾದ ಮಹಾಕವಿಗಳು **ಕುಲೋತ್ತುಂಗ ಚೋಳನ** ಆಶ್ರಯದಲ್ಲಿ ಮುಂದೆಬಂದರು. ಕಂಬಕವಿಯ "ರಾಮಾಯಣ" ಒಟ್ಟಕ್ಕುತ್ತರ ಕವಿಯ "ಉತ್ತರ ರಾಮಾಯಣ" ಮತ್ತು "ತಕ್ಕಯಾಗಪ್ಪರಣಿ" ( ದಕ್ಷಯಾಗಭರಣಿ ), ಪುಹಷೇಂದಿಯ "ನಳವೆಣ್ಬಾ" (ನಳಚತ್ರ) ಈ ಗ್ರಂಥಗಳು ಮಧ್ಯಕಾಲದ ಉತ್ತಮೋತ್ತಮ ಕೃತಿಗಳು. ೧೨ನೆಯ ಶತಮಾನದ ಜಯಕೊಂಡಾರನಿಂದ ನಿರ್ಮಿತವಾದ "**ಕಲಿಂಗಭರಣಿ**" ಎಂಬ ಗ್ರಂಥದಲ್ಲಿ ಹಲವು ಜನ ಚೋಳದೊರೆಗಳ ಇತಿಹಾಸವು ಅಡಕವಾಗಿರುತ್ತದೆ. ಇದರ ತರುವಾಯದ ಕವಿಗಳಲ್ಲಿ ಹೆಸರನ್ನು ಎತ್ತಿ ಹೇಳಬೇಕಾದ ಕವಿಯೆಂದರೆ "**ಪಟ್ಟಿನತ್ತಡಿಗಳ್**" ಎಂಬವನೆ ಎಂದು ಹೇಳಬಹುದು.

### (೩) ಆಧುನಿಕ ಕಾಲ

( ಕ್ರಿ. ಶ. ೧೮೦೦ ರಿಂದ ಇಂದಿನ ವರೆಗೆ )

ಅತಿವೀರ ರಾಮಪಾಂಡ್ಯನ "**ನೈಷಧಕಾವ್ಯ**" ವೂ ವಿಲ್ಲಿಪುತ್ತೂರಾರನ "**ಮಹಾಭಾರತ**"ವೂ ಅರುಣಗಿರಿನಾಥನ "**ತಿರುಪ್ಪುಹಷ**"ವೂ ಈ ಕಾಲದ ಮೊದಮೊದಲಿನ ಗ್ರಂಥಗಳು. ಇವುಗಳಿಂದ ಮುಂದಿನ ಕಾಲದ ಗ್ರಂಥಗಳಲ್ಲಿ ಹೆಸರೆತ್ತಿ ಹೇಳುವಂತಹವೆಂದರೆ, ಶಿವಪ್ರಕಾಶಸ್ವಾಮಿಯ "**ಪ್ರಭುಲಿಂಗಲೀಲೆ**"—"**ವೆಂಗೈಕ್ಕೊವೈ**" ಎಂಬುವುಗಳು; ಭಕ್ತಕವಿಯಾದ ತಾಯುಮಾನಾರನ "**ಗೀತ**"ಗಳು; ದಿವ್ಯಕವಿ ಪಿಳ್ಳೈ ಪೆರುಮಾಳ್ ಐಯಂಗಾರ್ಯನ "**ಅಷ್ಟಪ್ರಬಂಧ**".

**ಮೀನಾಕ್ಷಿಸುಂದರಂ** ಪಿಳ್ಳೈ ಎಂಬವರು ಕಳೆದ ಶತಮಾನದಲ್ಲಿ ತಮಿಳು ಸಾಹಿತ್ಯಕ್ಕೆ ತಮ್ಮ ಬೆಲೆಯುಳ್ಳ ಸೇವೆಯನ್ನು ಸಲ್ಲಿಸಿದರು. ಅವರ ಶಿಷ್ಯಪ್ರವರರಾದ ಡಾ. ಸ್ವಾಮಿನಾಥ ಐಯರ್ ಅವರು ತಮ್ಮ ಗುರುಗಳ ಚರಿತ್ರೆಯನ್ನು ವಿಸ್ತೃತವಾಗಿ ಬರೆದು, ಎರಡು ಭಾಗಗಳಲ್ಲಿ ಪ್ರಸಿದ್ಧಿಸಿದ್ದಾರೆ. ಕವಿಚಕ್ರವರ್ತಿ ಸುಬ್ರಹ್ಮಣ್ಯ ಐಯರ್ ಅವರಂತೂ ತಮಿಳು ಕಾವ್ಯಸಾಹಿತ್ಯದಲ್ಲಿ ನೂತನ ಯುಗವೊಂದನ್ನೇ ನಿರ್ಮಾಣಮಾಡಿದರು. ಅತ್ಯುಚ್ಚವಾದ ಭಾವಗಳನ್ನು ಸರಳವಾದ ಶೈಲಿಯಲ್ಲಿ ಹೊರಕ್ಕೆ ಹಾಕುವುದನ್ನೇ ಇವರು ತಮ್ಮ ಧ್ಯೇಯವನ್ನಾಗಿ ತಿಳಿದಿದ್ದರು. ಇವರು ಮೊದ-ಮೊದಲು ಜನಪದದ ಕವಿಗಳೂ, ಕೊನೆಗೆ ಸಾಹಿತಿಪ್ರಿಯಕವಿಗಳೂ ಆಗಿದ್ದರು. ಇವರು ರಚಿಸಿದ ರಾಷ್ಟ್ರೀಯ ಕವನಗಳು ತುಂಬ ಸ್ಫೂರ್ತಿದಾಯಕವಾಗಿವೆ. ಮ. ಮ. ಡಾ. ಸ್ವಾಮಿನಾಥ ಐಯರ್ ಅವರು ಕಳೆದ ೬೦—೬೫ ವರ್ಷಗಳಿಂದಲೂ ತಮಿಳುಭಾಷೆಯ ಸೇವೆಯನ್ನು ಮಾಡುತ್ತ ಬಂದಿರುವರು. ಶ್ರೀಮಾನ್ ರಾಜಗೋಪಾಲಾಚಾರ್ಯರ ಮಾತಿನಲ್ಲಿ ಹೇಳಬೇಕೆಂದರೆ ಇವರು 'ತಮಿಳುಭಾಷೆಯ ವ್ಯಾಸ' ಎಂಬ ಬಿರುದಿಗೆ ಪಾತ್ರರು. ಪುರಾತನ ತಮಿಳು ಸಾಹಿತ್ಯದ ಬಹುಭಾಗವು ಡಾ. ಸ್ವಾಮಿನಾಥ ಐಯರ್ ಅವರ ಸಂಶೋಧನದಿಂದಲೆ ಇಂದು ತಮಿಳುಜನರಿಗೆ ನೋಡಲು ದೊರೆತಿದೆ. ಈ ಸಂಶೋಧನಕಾರ್ಯದಲ್ಲಿ ಎಂತೆಂತಹ ಕಷ್ಟ-ನಷ್ಟಗಳನ್ನು ತಾವು ಎದುರಿಸಬೇಕಾಯಿತೆಂಬ ವಿಷಯವನ್ನು ಕುರಿತು, 'ಕಲೈಮಹಳ್' ಮೊದಲಾದ ನಿಯತಕಾಲಿಕಗಳಲ್ಲಿ ಆಗಾಗ ಇವರ ಲೇಖನಗಳು ಪ್ರಕಟವಾಗುತ್ತಿರುತ್ತವೆ.

ತಮಿಳುಭಾಷೆಯ ಇಂದಿನ ಸಂಶೋಧಕರಲ್ಲಿ ಸೇ[illegible] ಸಂಸ್ಥಾನದ ಮಹಾ ವಿದ್ವಾನ್ ರಾ. ರಾಘವೈಯಂಗಾರ್ಯರು, ಎಸ್. ಅನವರತ ವಿನಾಯಕಂ ಪಿಳ್ಳೈ ಎಂ. ಎ. ಎಲ್. [illegible] ಅವರೂ, ಮು. ರಾಘವಯ್ಯಂಗಾರ್ ಮತ್ತು ವೈಯಾಪು[illegible]

CC-0. Jangamwadi Math Collection. Digitized by eGangotri

ಪಿಳ್ಳೈ, ಬಿ. ಎ. ಬಿ. ಎಲ್ ಅವರೂ ಅಗ್ರಗಣ್ಯರು. ಇತ್ತೀಚೆಗಿನ ಕವಿಗಳಲ್ಲಿ ಬಾಲಭಾರತಿ ಸುಬ್ರಹ್ಮಣ್ಯಯೋಗಿ, ದೇಶಿಕ ವಿನಾಯಕಂ ಪಿಳ್ಳೈ, ಸ್ವಾಮಿ ಶುದ್ಧಾನಂದ ಭಾರತಿ, ಅರಿಯೂರ ಪದ್ಮನಾಭ ಪಿಳ್ಳೈ, ಜಗನ್ನಾಥ ಐಯರ್ "ಜ್ಯೋತಿ" ಇವರು ಶ್ರೇಷ್ಠಸ್ಥಾನವನ್ನು ಪಡೆದಿರುವರು.

## ೮೮ ವರ್ಷಗಳ ಹಿಂದಿನ ಕನ್ನಡ ವೃತ್ತಪತ್ರ

ಕನ್ನಡ ವೃತ್ತಪತ್ರದ ಇತಿಹಾಸವು ಇಷ್ಟೊಂದು ಹಿಂದಿನಿಂದ ನಡೆದುಬಂದಿರಬಹುದೆಂದು ಅನೇಕರ ಕನಸು-ಮನಸುಗಳಲ್ಲಿ ಕೂಡ ಬಂದಿರಲಾರದು. ಮುಂಬಯಿ-ಪುಣೆಗಳ ಸ್ಥಾನಮಹತ್ತ್ವದಿಂದ ಆಧುನಿಕ ಶಿಕ್ಷಣದ ಸಂಸ್ಕಾರವು ನಮಗಿಂತ ಮೊದಲೆ ಮಹಾರಾಷ್ಟ್ರೀಯರಿಗೆ ಆದುದರಿಂದ, ಅಂದಿನ ಕನ್ನಡನಾಡಿನ ರಾಜಕೀಯ ಅಧಿಕಾರಸ್ಥಾನಗಳೆಲ್ಲ ಅವರ ಕೈಸೇರಿದುವು. ಆದರಿಂದ ಇದ್ದಬಿದ್ದ ಕನ್ನಡತನವೂ ಅವರ ಆಡಳಿತದಲ್ಲಿ ಸಿಕ್ಕಿ ಸತ್ತುಹೋಯಿತು. ಎಂತಲೆ ಬೆಳಗಾಂವಿಯಲ್ಲಿ 'ಚಿಕಿತ್ಸಕ' 'ಬೆಳಗಾಂವಸಮಾಚಾರ' ಮೊದಲಾದ ಮರಾಠೆ ಪತ್ರಿಕೆಗಳು ತಲೆಯೆತ್ತಿದುವು; ತಮಗಿಂತ ಮೊದಲು ಕನ್ನಡಪತ್ರಿಕೆ ಬೆಳಗಾಂವಿಯಲ್ಲಿ ಇದ್ದಿರಬಹುದೆಂಬ ಮಾತನ್ನೆ ಮರೆಸಿದುವು. ಧಾರವಾಡದಲ್ಲಿ ಹಿಂದಕ್ಕೆ ಹೊರಡುತ್ತಿದ್ದ 'ಧಾರವಾಡವೃತ್ತ' ಎಂಬ ಪತ್ರಿಕೆಯೂ ಮರಾಟೆಯಲ್ಲಿಯೆ ಇದ್ದಿತೆಂಬುದನ್ನು ಕೇಳಿದರೆ ಇಂದಿನ ನಾವು ಆಶ್ಚರ್ಯಪಡಬೇಕೋ ವ್ಯಸನಪಡಬೇಕೋ ಎಂಬುದು ತಿಳಿಯದ ಮಾತಾಗಿದೆ. ಆದರೂ ೮೮ ವರ್ಷಗಳಿಗೆ ಹಿಂದೆ ಕನ್ನಡ ಪತ್ರಿಕೆಯುದ್ದಿತೆಂಬ ಸಂಗತಿ ನಮಗೆ ತುಂಬ ಹೆಮ್ಮೆಯನ್ನು ಹುಟ್ಟಿಸುವಂತಹದಲ್ಲವೇ? ಆ ವೃತ್ತಪತ್ರಿಕೆ ಯಾವುದೆಂಬುದನ್ನು ಕುರಿತು ವಿವೇಚನೆಯೊಂದು ತಾ. ೧೯—೮—೩೬ನೆಯ 'ಸಂಯುಕ್ತಕರ್ನಾಟಕ' ದಿನಪತ್ರಿಕೆಯಲ್ಲಿ ಪ್ರಕಟವಾಗಿದೆ. ಆ ವಿವೇಚನೆಯನ್ನೇ ಕೃತಜ್ಞತಾಪೂರ್ವಕವಾಗಿ ಇಲ್ಲಿ ಉದ್ಧರಿಸುತ್ತೇವೆ:

"ಸುಬುದ್ಧಿಪ್ರಕಾಶ"ವೆಂಬ ಒಂದು ಕನ್ನಡ ವೃತ್ತಪತ್ರವು, ಈಗ ಸುಮಾರು ೮೮ ವರ್ಷಗಳ ಹಿಂದೆ, ಬೆಳಗಾವಿಯಲ್ಲಿ ಹೊರಡುತ್ತಿತ್ತೆಂಬ ಸಂಗತಿಯು ಇದೀಗ ಬೆಳಕಿಗೆ ಬಂದಿರುವದು.

ಈ ವೃತ್ತಪತ್ರದ ಒಂದು ಸಂಚಿಕೆಯು ಬೆಳಗಾವಿ ಶಹಾಪುರದಲ್ಲಿರುವ ಶ್ರೀ. ಭರಮಪ್ಪ ಪದ್ಮಪ್ಪ ಪಾಟೀಲ ಹೊಸೂರ ಇವರ ಮನೆಯೊಳಗೆ ಸಿಕ್ಕಿರುವದು.

ಈ ಸಂಚಿಕೆಯು ಸನ್ ೧೮೫೫ನೆಯ ಸಪ್ಟಂಬರ ೨೪ನೆಯ ತಾರೀಖಿನದಿದ್ದು ಇದರ ಮೇಲೆ '೩ನೇ ಸಂವತ್ಸರ ೨೩ನೇ ಪತ್ರ'ವೆಂದಿರುವದರಿಂದ, ಈ ಪತ್ರವು ೧೮೫೩ರಲ್ಲಿ ಹುಟ್ಟಿರಬೇಕೆಂದು ಅಂದಾಜ ಮಾಡಲಾಗಿದೆ. ಪತ್ರಿಕೆಯ ಮತ್ತೊಂದು ಭಾಗದಲ್ಲಿ 'ಶಕೆ ೧೭೭೭ನೇ ರಾಕ್ಷಸನಾಮ ಸಂವತ್ಸರ ಚಂದ್ರವಾರ'ವೆಂದು ಬರೆಯಲಾಗಿದೆ.

ಈ ಪತ್ರದಲ್ಲಿ ಅಯೋಧ್ಯಾ, ಮನುಷ್ಯರ ದೀರ್ಘಾಯುಷ್ಯವನ್ನು ಕುರಿತದ್ದು, ಹಬಿಣದ ಮಾರ್ಗದ ವೃತ್ತಾಂತವು, ಮುಲಕೀ ಖಾತೆಯ ಪ್ರಕರಣ ಮೊದಲಾದ ಸಂಗತಿಗಳಿರುವವು.

ಈ ಪತ್ರದ ಕ್ರಯ ಪ್ರತಿಸಂವತ್ಸರಕ್ಕೆ ೬ ರೂ. ಎಂದೂ ತಿಂಗಳಿಗೆ ೮ ಆಣೆಯೆಂದೂ ಬರೆಯಲಾಗಿದೆ.

"ಸುಬುದ್ಧಿಪ್ರಕಾಶ"ದ ಈ ಸಂಚಿಕೆಯಲ್ಲಿ ಪ್ರಕಟವಾಗಿರುವ ವಿಷಯಗಳ ಮತ್ತು ಅವುಗಳ ಬರೆವಣಿಗೆಯ ಶೈಲಿಯು ಈ ರೀತಿಯಿರುವುದು:—

"....ಬಂಗಾಲದೊಳಗೆ ನಡದ ಸಾಂಥಲ ಜನರ ಬಂಡು ಮುಸ್ನು ಪರಿಯಂತ್ರಕ್ಕೆ ಹಾಂಗೆ ನಡದದೆ. ಮತ್ತು ಯಿ ಬಂಡು ಉತ್ಪನ್ನವಾದ ಯಾವ ಕಾರಣವಂನ್ನು ಮೊದಲು ಭಾವಿಸೋಣದರಲ್ಲಿ ಬಂದಿತ್ತೋ ಅದು ವೃಥಾ ಅದೆ. ಹಿಂಗೆ ತಿಳಿದುಬರುತ್ತದೆ......"

"....ಶ್ರೀಮಂತರಾದ ಶ್ರೀ ವಾಜೀಸಾಹೇಬ ಚಂದ್ರಚೂಡ ಇವರು ತಾರೀಖ ೧೪ನೇ ಸಪಟಂಬರ ದಿವಸಾ ಮರಣಹೊಂದಿದರು. ಇವರ ಮಾತೋಶ್ರೀಯವರ ಹೆಸರ್ಲೆ ೩೦ ಸಾವಿರ ರೂಪಾಯಿದ ಜಾಗೀರ ನಡದದೆ....."

"...ನರಮನುಷ್ಯರಿಗೆ ನೂರವರ್ಷ ಆಯುಷ್ಯವುಂಟೆಂದು ಕ್ಲಪ್ತ, ಇದ್ದು ಯುರೋಪದೊಳಗೆ ಶತಸಂಖ್ಯೇಕ ಮೀರಿದ ಆಯುಷ್ಯವುಳ್ಳ ಜನರು ಇದ್ದಾರೆ. ಇದು ಹಿಂದುಶಾಸ್ತ್ರಕ್ಕೆ ವಿರುದ್ಧ ತೋರುತದೆ........"

ಈ ಪತ್ರಿಕೆಯ ಸಂಪಾದಕರು ಯಾರು, ಯಾವ ಕಲ್ಲಚ್ಚಿನ ಮುದ್ರಣಾಲಯದಲ್ಲಿ ಮುದ್ರಿಸಲಾಗುತ್ತಿತ್ತು ಮುಂತಾದ ಸಂಗತಿಗಳು ತಿಳಿಯುವಂತಿಲ್ಲ.

## ಭಾಷಾಶುದ್ಧೀಕರಣದ ಪ್ರಯೋಗಗಳು

ಮಹಾರಾಷ್ಟ್ರದಲ್ಲಿ ಬ್ಯಾ. ಸಾವರಕರ ಅವರು, ಮರಾಠಿ ಭಾಷೆಯ ಶುದ್ಧೀಕರಣದ ವಿಚಾರವಾಗಿ ಪ್ರಚಂಡ ಆಂದೋಲನವನ್ನು ಹೂಡಿದ್ದಾರೆ. ಆರ್ಯೇತರ ಶಬ್ದಗಳನ್ನು ಹೊರ ದೂಡುವುದೇ ಅವರ ಗುರಿ. ಅದಕ್ಕೆ ಸಾಧಕ-ಬಾಧಕವೆನಿಸುವ ಅಂಶಗಳನ್ನು ಅಲ್ಲಿಯ ಸಾಹಿತಿಗಳು ಚರ್ಚಿಸುತ್ತಿದ್ದಾರೆ. ಕರ್ನಾಟಕದಲ್ಲಿ ಇದೀಗ ಚಾಲನೆ ಸಿಕ್ಕಿದ ಈ ಪ್ರಶ್ನೆಗೆ ಇನ್ನೂ ಹೆಚ್ಚಿನ ಮಹತ್ತ್ವವು ಬರುವುದು ಅಗತ್ಯವಿದೆ. ಮೊನ್ನೆಮೊನ್ನೆ ಮುಂಬಯಿಯ ಮರಾಠಿ ಗ್ರಂಥಸಂಗ್ರಹಾಲಯದ, ವಾರ್ಷಿಕೋತ್ಸವಕಾಲದಲ್ಲಿ, ಅಧ್ಯಕ್ಷರಾದ ಶ್ರೀ। ದಾ. ನಾ. ಆಪಟೇಯವರು ಪ್ರದರ್ಶಿಸಿದ ವಿಚಾರಗಳು ಈ ಸಂದರ್ಭದಲ್ಲಿ ಸೂಕ್ತವೆನಿಸದಿರವು:

CC-0. Jangamwadi Math Collection. Digitized by eGangotri

ಪರಭಾಷೆಗಳೊಳಗಿನ ಶಬ್ದಗಳನ್ನು, ತತ್ಸಮಾನಾರ್ಥದ ಲಲಿತ ಅಭಿಜಾತ ಶಬ್ದಗಳು ಸ್ವಭಾಷೆಯಲ್ಲಿರುತ್ತಿರುವಾಗಲೂ, ತಮ್ಮ ಭಾಷೆಯಲ್ಲಿ ತರುವ ಕೆಟ್ಟ ಚಟದ ಲಂಬಕವು ಒಂದು ತುದಿಗೆ ಪೂರ್ತಿಯಾಗಿ ಒಲಿದಿರುವಾಗ, ಅದಕ್ಕೆ ಪ್ರತಿಕ್ರಿಯೆಯಾಗಿ ಶುದ್ಧೀಕರಣದ ಲಂಬಕವು ಇನ್ನೊಂದು ತುದಿಯನ್ನು ಮುಟ್ಟುವುದು ಸ್ವಾಭಾವಿಕವೆ ಆಗಿದೆ; ಮತ್ತೆ ಪರ ಪರಿಣಾಮವು ಬೇರೆ ಭೌತಿಕಪ್ರಮೇಯಗಳಂತೆ ಸುವರ್ಣ ಮಧ್ಯದಲ್ಲಿಯೆ ಕೊನೆಗೊಳ್ಳುವುದು ಸ್ಪಷ್ಟವೂ ಇಷ್ಟವೂ ಆಗಿದೆ....ಭಾಷೆಯು ಎಂದು ಶುದ್ಧವಿದ್ದಿತು ? ಮತ್ತೆಂದಿನಿಂದ ಅಶುದ್ಧವಾಗತೊಡಗಿತು ? ಬರಿ ನಮ್ಮ ಮರಾಠಿಯ ಮಟ್ಟಿಗೆ ಮಾತನಾಡುವುದಾದರೆ, ಅದರ ಶುದ್ಧತೆಯು ಯಾವ ಕಾಲದ್ದು ? ಮೂಲ ದೇಶಭಾಷೆಯ ಮೇಲೆ ಗೀರ್ವಾಣವಾಣಿಯ ಸಂಸ್ಕಾರವಾಗಿ ಈಗಿನ ಭಾಷೆಯು ರೂಪಗೊಂಡಿತೋ, ಸಂಸ್ಕೃತೋತ್ಪನ್ನ ಪ್ರಾಕೃತದಲ್ಲಿ ದೇಶ್ಯ ಶಬ್ದಗಳ ಭರತಿಯಾಗಿ ಈ ಸ್ವರೂಪವು ಪ್ರಾಪ್ತವಾಯಿತೋ ಎಂಬುದರ ಬಗ್ಗೆ ತಜ್ಞರಲ್ಲಿಯೆ ಮತಭೇದವಿದೆ.

ಇದನ್ನು ಕೇಳಹೊತ್ತು ಬದಿಗಿರಿಸಿದರೂ, ಈಗಿನ ಮರಾಠಿಯಲ್ಲಿ ಜ್ಞಾನೇಶ್ವರರ ಕಾಲದಿಂದಲೂ ಕನ್ನಡದ ಬೆರಕೆಯಾಗಿದೆಯೆಂಬುದನ್ನು ಅಲ್ಲಗಳೆಯಲು ಬರುವಂತಿಲ್ಲ. ಅದೇಕೆ ಚಾಲುಕ್ಯ, ರಾಷ್ಟ್ರಕೂಟ ಮೊದಲಾದವರ ಪ್ರಭುತ್ವದಲ್ಲಿ ಮಹಾರಾಷ್ಟ್ರದ ರಾಜಧಾನಿಯು ಕರ್ನಾಟಕದಲ್ಲಿಯೆ ಇದ್ದುದರಿಂದ, ಕನ್ನಡದೊಡನೆ ಮರಾಠಿಯ ಬಳಕೆ ಹೆಚ್ಚಾಗಿ, ಕನ್ನಡನುಡಿಗಳು ಮರಾಠಿಯಲ್ಲಿ ತುಂಬ ತುಂಬಿಕೊಂಡುವು. ಆ ತರುವಾಯ ಗುಜರಾಥಿ, ಹಿಂದೀ ಮೊದಲಾದ ಶಬ್ದಗಳು ಬಹಳವಾಗಿ ಒಳಸೇರಿದುವು. ಹಲವು ಹಿಂದೀ ಶಬ್ದಗಳು ನಮ್ಮಲ್ಲಿ ರೂಢವಾಗಿವೆ. ಮುಂದೆ ಮುಸಲ್ಮಾನರ ಆಳಿಕೆಯಲ್ಲಿ ರಾಜ್ಯಕರ್ತರ ನಿಕಟ ಸಹವಾಸದಿಂದಲೂ ರಾಜದಪ್ತರಿನ ಭಾಷೆಯ ಸಂಸರ್ಗದಿಂದಲೂ ಅವರ ಹಲವು ಶಬ್ದಗಳು ಮರಾಠಿಯಲ್ಲಿ ಮನೆಮಾಡಿರುವುವೆಂಬುದನ್ನು ಕೈ. ಪ್ರೊ. ಸೊಯಾರೀಸ ಅವರು ತೋರಿಸಿಯೆ ಇದ್ದಾರೆ. ಮುಂದೆ ಇಂಗ್ಲಿಷರ ಆಡಳಿತದಲ್ಲಿ ನೂರಾರು ಇಂಗ್ಲಿಷ್ ಶಬ್ದಗಳು ಬಂದುವು—ಈಗಲೂ ಬರುತ್ತಿವೆ.

ಈ ಶುದ್ಧೀಕರಣದ ಪ್ರಶ್ನೆಯು ಕೆಲವಂಶದಲ್ಲಿ ಪೋಷಾಕಿನ ಪ್ರಶ್ನೆಯಂತಿದೆ. ಹಿಂದುಸ್ತಾನದ ೧೦೦ ಅಂಶಕ್ಕಿಂತ ಹೆಚ್ಚಿಗಿನ ಉಷ್ಣತಾಮಾನವುಳ್ಳ ದೇಶದಲ್ಲಿ ನೆಕ್ಟಾಯ, ಕಾಲರ್, ಸೂಟು-ಪ್ಯಾಂಟುಗಳನ್ನು ತೊಡುವ ಹಿಂದೀ ಗೃಹಸ್ಥರನ್ನು ನೋಡಿದೆವೆಂದರೆ ತಿರಸ್ಕಾರವೆನಿಸಿ ನಾವು ವೇಷಶುದ್ಧಿಯ ಮಾತನ್ನೆತ್ತಿ ತೊಡಗುವೆವು. ಆದರಿಂದ ಅನವಸ್ಥಾ ಪ್ರಸಂಗವನ್ನು ಬರಮಾಡಿಕೊಳ್ಳುವೆವು. ಆ ಉಡುಪನ್ನು ನೋಡಲಾಗಿ ಉದ್ದ ಕೋಟು-ಟೊಪ್ಪಿಗೆಗಳೇ ನಮಗೆ ಹೆಚ್ಚು ಸಮೀಪದುವೆನಿಸುವವು. ಆದರೆ ಉದ್ದ ಕೋಟಾದರೂ ಇಂಗ್ಲಿಷರ ಸಂಪರ್ಕದಿಂದಲೇ ಬಂದುದು ! ನಾವು ಹೆಮ್ಮೆಪಡುವ ಸಂಸ್ಕೃತ ಭಾಷೆಯು ಪರಭಾಷೆಗಳೊಳಗಿಂದ ಹಲವು ಶಬ್ದಗಳನ್ನೆತ್ತಿಕೊಂಡು, ಅವಕ್ಕೆ ತನ್ನ ವೇಷಭೂಷೆಗಳನ್ನಿತ್ತಿದೆ. ಜ್ಯೋತಿಷದಲ್ಲಿಯ Creos, Tawrus, Semini ಮೊದಲಾದ ಗ್ರೀಕ ರಾಶಿನಾಮಗಳಿಗೆ ಕ್ರಿಯ, ತಾವುರು, ಜಿತುಮ, ಕುಲೀರ, ಲೇಯ, ಪಾಥೋನ ಮೊದಲಾದ ಸಂಸ್ಕೃತ ರೂಪಗಳನ್ನು ಕೊಟ್ಟು, ಅವುಗಳನ್ನು ಸಂಸ್ಕೃತದಂತೆಯೆ ಲಿಂಗ–ವಚನ–ವಿಭಕ್ತಿ ಪ್ರತ್ಯಯಗಳಿಂದ ನಡೆಯಿಸುವುದುಂಟು. ಬೀಜಗಣಿತ-ಭೂಮಿತಿಗಳಲ್ಲಿಯೂ ಈ ಕೊಡು-ತಕ್ಕೊಳ್ಳುವುದು ನಡೆದಿದೆ. ಇದರಿಂದ ಒಂದು ಶಬ್ದಕ್ಕೆ ಹಲವು ಭಿನ್ನಭಿನ್ನ ಛಾಯೆಗಳನ್ನು ತೋರಿಸುವ ಬೇರೆ ಶಬ್ದಗಳ ಜತೆ ದೊರೆತು ಭಾಷೆಯು ಸಮೃದ್ಧವಾಗಿದೆ.

ಹೀಗಿರಲು ಸದ್ಯಕ್ಕೆ ಹೆಚ್ಚಾಗಿ ಮುಸಲ್ಮಾನಿ ಭಾಷೆಯಲ್ಲಿಯ ಮತ್ತು ಸಾಮಾನ್ಯತಃ ಇಂಗ್ಲಿಷಿನೊಳಗಿನ ಶಬ್ದಗಳನ್ನು ಹೊರದೂಡುವ ಎತ್ತುಗಡೆಯು ನಡೆದಿದೆ. ಇದರಲ್ಲಿ ಕೆಲವು ಪುರಸ್ಕರ್ತರ ತಾತ್ತ್ವಿಕ ಭೂಮಿಕೆಯು ತೀರ ಸರಿಯಾಗಿದೆ. ಈ ಸಂದರ್ಭದಲ್ಲಿ ಶ್ರೀ. ಸಾವರಕರ ಅವರ 'ಶುದ್ಧೀಕರಣದ ಪಂಚಪ್ರಾಣ'ಗಳನ್ನು ನೆನಪಿನಲ್ಲಿಡುವುದು ಅಗತ್ಯ. ಈ ವಾದವೇನೂ ಹೊಸದಲ್ಲ. ಮೀಮಾಂಸಾ ಪಂಥದ ಪುರಸ್ಕರ್ತನಾದ ಜೈಮಿನಿಯ ಸೂತ್ರಗಳ ಮೇಲಿನ ಶಾಬರಭಾಷ್ಯದಲ್ಲಿ 'ಮ್ಲೇಚ್ಛ ಪ್ರಸಿದ್ಧಾರ್ಥಂ ಪ್ರಾಮಾಣಾಧಿಕರಣಂ' ಎಂಬ ಹೆಸರಿನ ಸ್ವತಂತ್ರ ಪ್ರಕರಣವೆ ಇದೆ. ಅಲ್ಲಿ ಈ ವಾದದ ಚರ್ಚೆ ಬಂದಿದೆ. 'ಚೋದಿತಂ ತು ಪ್ರತೀಯೇತ ಅವಿರೋಧಾತ್ ಪ್ರಮಾಣೇನ' ಎಂಬ ಸೂತ್ರದ ಮೇಲಿನ ಭಾಷ್ಯದಲ್ಲಿ ಇದನ್ನು ವಿಸ್ತರಿಸಿ ಹೇಳಿದುದೇನೆಂದರೆ, ಮ್ಲೇಚ್ಛರು ಉಪಯೋಗಿಸಿದ ಶಬ್ದಗಳಿಂದಲೂ ಇಷ್ಟಾರ್ಥವು ಹೊರಡುತ್ತಿದ್ದರೆ, ಅವುಗಳನ್ನು ಅಗತ್ಯವಾಗಿ ಸ್ವೀಕರಿಸಬೇಕು. ಈ ಭಾಷ್ಯದ ಮೇಲೆ ಮಾಧವಾಚಾರ್ಯರ 'ಜೈಮಿನಿ ನ್ಯಾಯಮಾಲಾ' ಎಂಬ ಟೀಕೆಯಲ್ಲಿ ಹೀಗೆ ಸ್ಪಷ್ಟವಾಗಿ ಹೇಳಲ್ಪಟ್ಟಿದೆ: "ಆರ್ಯ ಪ್ರಸಿದ್ಧಿ ವಿರೋಧಸ್ಯ ಅದೃಷ್ಟತ್ವೇನ ಈದೃಶೇ ವಿಷಯೇ ಮ್ಲೇಚ್ಛ ಪ್ರಸಿದ್ಧೇರಪಿ ಆದರಣೀಯತ್ವಾತ್ । ಕಲ್ಪ್ಯನಾ

CC-0. Jangamwadi Math Collection. Digitized by eGangotri

ನಾತ್ ಅವ್ಯವಸ್ಥಿತಾರ್ಥಾತ್ ವರಂ ಮ್ಲೇಚ್ಛರೂಢಿಃ।" ಅವ್ಯವಸ್ಥಿತವಾದ ಅರ್ಥವುಳ್ಳ ಹೊಸ ಶಬ್ದಗಳನ್ನು ಕಲ್ಪನೆಯಿಂದ ರಚಿಸಿ ಬಳಸುವುದಕ್ಕಿಂತ ಮ್ಲೇಚ್ಛರೂಢಿಯೇ ಲೇಸು. ಈ ರೀತಿಯಲ್ಲಿ ಇಷ್ಟು ಪ್ರಾಚೀನ ಕಾಲದಲ್ಲಿ ಹಾಕಿಕೊಟ್ಟ ದಂಡಕವು ಈಗಲೂ ಅನ್ವಯಿಸುವುದು.

'ತೀರ್ಥೋದಕಂ ಚ ವಹ್ನಿಶ್ಚ ನಾನ್ಯತಃ ಶುದ್ಧಿಮರ್ಹತಃ।' ಎಂಬ ನಿಯಮದಂತೆ ಈ ವಾಗ್ಗಂಗೆಯ ತೀರ್ಥೋದಕಕ್ಕೆ ಶುದ್ಧಿಯ ಆವಶ್ಯಕತೆಯಿಲ್ಲ. ಮಾತ್ರ ಅದರಲ್ಲಿಯ ಹೊಲಸು-ಕೊಳೆಗಳನ್ನು ಸೋಸಿ ತೆಗೆಯಬೇಕೆಂಬುದೆ ಈ ವಾದದ ನಿಷ್ಕರ್ಷೆಯು....

---

# ಕನ್ನಡದ ಮುನ್ನಡೆ

### ಸಂಘ-ಸಂಸ್ಥೆಗಳ ಚಟುವಟಿಕೆಗಳು

**ಧಾರವಾಡದ ಕರ್ನಾಟಕ ಕಾಲೇಜಿನ ಕರ್ನಾಟಕ** ಸಂಘವು, ಕಳೆದತಿಂಗಳ ೬ನೆಯ ತಾರೀಖಿನ ದಿನ **'ಕನ್ನಡ ಸಾಹಿತ್ಯಕ್ಕೆ ವಿವಿಧಾಂಗಗಳಿಂದಾದ ಸಹಾಯ'** ಎಂಬ ವಿಷಯವನ್ನು ಕುರಿತು 'ವಿಚಾರಸಂಕಿರಣ' ಕಾರ್ಯಕ್ರಮವನ್ನಿರಿಸಿತ್ತು. ಶ್ರೀಮಾನ್ ಆಲೂರ ವೆಂಕಟರಾಯರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮವು ಪ್ರಾರಂಭವಾಗಿ ಶ್ರೀ. ಬೆಟಗೇರಿ ಕೃಷ್ಣಶರ್ಮರು ಕಾದಂಬರೀವಾಙ್ಮಯವನ್ನು ಕುರಿತೂ, ಶ್ರೀಯುತರುಗಳಾದ ಸಾಲೀ ರಾಮಚಂದ್ರರಾಯರೂ ಬೇಂದ್ರೆ ದತ್ತಾತ್ರೇಯರಾಯರೂ ಕಾವ್ಯವಾಙ್ಮಯವನ್ನು ಕುರಿತೂ, ಶ್ರೀ. ಶಂ. ಬಾ. ಜೋಶಿಯವರು ವೃತ್ತಪತ್ರಿಕೆ-ಪ್ರಬಂಧ-ಭಾಷೆಯಚಟುವಟಿಕೆ ಇವುಗಳನ್ನು ಕುರಿತೂ, ಪ್ರೊ. ಮಾಳವಾಡ ಅವರು ಲೇಖಕರು-ಪ್ರಕಾಶಕರು-ಮುದ್ರಕರು ಎಂಬ ವಿಚಾರವನ್ನು ಕುರಿತೂ, ಪ್ರೊ. ಜಾಗಿರದಾರ್ ಅವರು ನಾಟ್ಯಸಾಹಿತ್ಯವನ್ನು ಕುರಿತೂ ಮಾತನಾಡಿದರು. ಅಂದಿನ ಕಾರ್ಯಕ್ರಮವು ತರುಣವಿದ್ಯಾರ್ಥಿಗಳನ್ನು ಬಹುಶ್ರುತರನ್ನಾಗಿಮಾಡುವುದಕ್ಕೆ ತುಂಬ ಅನುಕೂಲವಾದುದಾಗಿದ್ದಿತು.

**ಕರ್ನಾಟಕ ಏಕೀಕರಣಸಂಘವು** ಮದ್ರಾಸ್ ಇಲಾಖೆಯಲ್ಲಿಯ ಕನ್ನಡಜಿಲ್ಲೆಗಳನ್ನೆಲ್ಲ ಉತ್ತರಕರ್ನಾಟಕಕ್ಕೆ ಸೇರಿಸಿ, ಒಟ್ಟು ಈ ಬ್ರಿಟಿಷ್ ಕರ್ನಾಟಕಭಾಗವನ್ನೆಲ್ಲ ಮುಂಬಯಿ ಇಲಾಖೆಯ ಒಂದುಭಾಗವನ್ನಾಗಿಸಬೇಕೆಂಬ ಚಳವಳಿಯನ್ನು ಕೈಕೊಂಡಿದೆ.

**ಧಾರವಾಡದ ವನಿತಾಸೇವಾಸಮಾಜದ** ೯ನೆಯ ವಾರ್ಷಿಕೋತ್ಸವವು ಬೆಳಗಾಂವಿಯ ಲೋಕಪ್ರಿಯ ಮುಂದಾಳುಗಳಾದ ಶ್ರೀ. ಬೆಳವಿ ದತ್ತಾತ್ರೇಯರಾಯರ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ನೆರವೇರಿತು. ಅಲ್ಲಿಯು ವಿದ್ಯಾರ್ಥಿನಿಯರ ಸಂಸ್ಕೃತಿ-ಪ್ರಗತಿಪ್ರದರ್ಶಕವಾದ ವಿವಿಧ ಕಾರ್ಯಕ್ರಮಗಳು ಜರುಗಿದುವು. ಅಧ್ಯಕ್ಷರಕಡೆಯಿಂದ ಬಹುಮಾನದ ಹಂಚಿಗೆಯಾಯಿತು. ಅಂದೆಯೆ ರಾತ್ರಿಯಲ್ಲಿ ಸಮಾಜದ ವಿದ್ಯಾರ್ಥಿನಿಯರ ಜೊತೆಯನ್ನೊಡಗೊಂಡ ಶ್ರೀಮಾನ್ ಕುಲಕರ್ಣಿ ಶ್ರೀನಿವಾಸರ ನಾಟಕ-ನೃತ್ಯಗಳು ಜನಾಕರ್ಷಕವಾಗಿ ನಡೆದುವು. ೯ನೆಯ ವರ್ಷದ ವ. ಸೇ. ಸಮಾಜದ ವರದಿಯನ್ನು ನೋಡಿದಲ್ಲಿ, ಸಂಸ್ಥೆಯು ವರುಷ-ವರುಷಕ್ಕೂ ಅಡಿಯನ್ನು ಮುಂದೆ ಮುಂದೆ ಇಡುತ್ತಲಿದೆಯೆಂದು ಯಾರಿಗೂ ತೋರಬಹುದಾಗಿದೆ. ಅದರ ಮೆಲುನಡಿಗೆಗೆ ಬಲಬರುವುದಕ್ಕೆ ಕನ್ನಡಿಗರ ಕೊಡುಗೈಯ ನೆರವು ಬೇಕಾಗಿದೆ. ಇಲ್ಲಿಯ ಪ್ರತಿಯೊಬ್ಬ ವಿದ್ಯಾರ್ಥಿನಿಯೂ ಕರ್ನಾಟಕಭಾವನೆಯನ್ನು ಎಚ್ಚರಿಸಿಕೊಂಡೇ ಹೊರಬೀಳುವಂತಹ ವಾತಾವರಣಗಳನ್ನು ಸಂಚಾಲಕರು ಈ ಸಂಸ್ಥೆಯಲ್ಲಿ ಒದಗಿಸುತ್ತಲಿದ್ದಲ್ಲಿ, ಇದಕ್ಕೆ ಖಂಡಿತ ಗೆಲುವಿದೆ; ಬಲುದಿನದ ಬಾಳಿದೆ.

**ಅಖಿಲ ಕರ್ನಾಟಕದ ವರ್ತಕ ಸಂಘದವರು** ಮೊನ್ನೆ ಮೊನ್ನೆ ಧಾರವಾಡದಲ್ಲಿ ಕೂಡಿದ ಸಾಧಾರಣ ಸಭೆಯೊಂದರಲ್ಲಿ ಕನ್ನಡನಾಡಿನ ಏಕೀಕರಣತತ್ತ್ವವನ್ನು ಪ್ರಚಾರಗೊಳಿಸುವುದಕ್ಕಾಗಿ ಪ್ರಚಾರಕನೊಬ್ಬನನ್ನು ನಿಯಮಿಸಬೇಕೆಂದು ಗೊತ್ತುವಳಿಯೊಂದನ್ನು ಮಾಡಿದ್ದಾರೆ. ಅದಕ್ಕಾಗಿ ೨೫೦ ರೂಪಾಯಿಗಳ ವೆಚ್ಚವನ್ನೂ ನಿರ್ವಹಿಸುವುದಾಗಿ ನಿರ್ಣಯಿಸಿದ್ದಾರೆ.

### ಕನ್ನಡ ಸಂಸ್ಕೃತಿಯ ಪ್ರಚಾರ—ಪ್ರಸಾರ

**ಕುಮುದೇಂದು ಕವಿಯ 'ರಾಮಾಯಣ' ಕಾವ್ಯವು** ಇದುವರೆಗೆ ಅಚ್ಚಾಗಿ ಹೊರಕ್ಕೆ ಬಿದ್ದಿರಲಿಲ್ಲ. ಅದನ್ನಪೇಕ್ಷಿಸುವ ಸಾಹಿತ್ಯಾಭ್ಯಾಸಿಗಳು ದೊರೆಯದುದರಿಂದ ನಿರಾಶರಾಗಬೇಕಾಗಿದ್ದಿತು. ಈಗ ಈ ಗ್ರಂಥದ ಮೊದಲಿನ ಎಂಟು ಸಂಧಿಗಳ ಭಾಗವು, ಪ್ರೊ. ಕುಂದಣಕಾರರಿಂದ ಪರಿಶೋಧಿತವಾಗಿ ಪ್ರಕಟವಾಗಿದೆ. ಬೆಳಗಾಂವಿಯ ಬಳಿಯ ಹೊಸೂರಿನ

CC-0. Jangamwadi Math Collection. Digitized by eGangotri

ಶ್ರೀ. ಧರಮಪ್ಪಾ ಪದ್ಮಪ್ಪಾ ಪಾಟೀಲ, ಸೆಕ್ರೆಟರಿ ಶ್ರೀಚಂದ್ರ ಸಾಗರ ಜೈನ ಗ್ರಂಥಮಾಲೆ....ಇವರು ಅದರ ಪ್ರಕಾಶಕರು.

### ಮುನ್ನಡೆ— ಅಭಿನಂದನೆ

ಸುಪ್ರಸಿದ್ಧ ಕರ್ನಾಟಕ ಇತಿಹಾಸ ಸಂಶೋಧಕರಾದ ಶ್ರೀಮಾನ್ ನಾ. ಶ್ರೀ. ರಾಜಪುರೋಹಿತರನ್ನು, ಬೆಂಗಳೂರಿನ ಹಲವುಜನ ಶಾರದೋಪಾಸಕರು, ಶ್ರೀ-ಕೃಷ್ಣರಾಜೇಂದ್ರ ಪರಿಷನ್ಮಂದಿರದಲ್ಲಿ ಸಭೆಸೇರಿ ಗೌರವಿ-ಸಿದರು. ಅಲ್ಲಿಯ ವಯೋವೃದ್ಧ—ಜ್ಞಾನವೃದ್ಧ ಕನ್ನಡ ಸಾಹಿತ್ಯಪ್ರಿಯರಾದ ಶ್ರೀಮಾನ್ ಬೆಳ್ಳಾವೆ ವೆಂಕಟ-ನಾರಾಯಣಪ್ಪನವರು ಅಂದಿನ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ. ರಾಜಪುರೋಹಿತರ ಇದುವರೆಗಿನ ಕಾರ್ಯವನ್ನೆತ್ತಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ-ವರೂ ಅಧ್ಯಕ್ಷರೂ ಗೌರವಿಸಿ ಮಾತನಾಡಿದರಲ್ಲದೆ, ಚಿಕ್ಕದೊಂದು ನಿಧಿಯನ್ನೂ ಅವರಿಗೆ ಅರ್ಪಿಸಿದರು.

ಮೈಸೂರಿನ ಪ್ರಸಿದ್ಧ ಶಿಟಿಲುವಾದನಕಾರರಾದ ಶ್ರೀಮಾನ್ ಚೌಡಯ್ಯನವರು ದಕ್ಷಿಣದೇಶದಲ್ಲೆಲ್ಲ ತಿರುಗಾಡಿ ಅಲ್ಲಿಯವರಿಂದ ತಮ್ಮ ಕಲೆಯ ಮೇಲ್ಮೆಯನ್ನು ಕೊಂಡಾಡಿಸಿಕೊಂಡುದಕ್ಕಾಗಿ, ಮೈಸೂರಲ್ಲಿ ಅವರ ಅಭಿನಂದನ ಸಮಾ-ರಂಭವೊಂದು ಜರುಗಿತು. ಶ್ರೀಮಾನ್ ಎನ್. ಎಸ್ ಸುಬ್ಬ-ರಾಯರು ಅದಕ್ಕೆ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರಲ್ಲದೆ ಸಮಾರಂಭದ ವ್ಯವಸ್ಥಾಪಕರ ಪರವಾಗಿ ರತ್ನಖಚಿತವಾದ ಪದಕವುಳ್ಳ ಚಿನ್ನದ ಕಂಠಹಾರವನ್ನು ಶ್ರೀ. ಚೌಡಯ್ಯನವ-ರಿಗೆ ಸಲ್ಲಿಸಿದರು. ಮೈಸೂರಿನ ಕಲಾವಿದರು ಮೈಸೂರಿನ-ವರಷ್ಟೇ ಅಲ್ಲ, ಅಖಿಲಕರ್ನಾಟಕದ ಹೆಮ್ಮೆಗೂ ಪಾತ್ರರು ಎಂಬ ವಿಚಾರವನ್ನು ಯಾರೂ ಮರೆತು ನಡೆಯಲಾಗದು.

## ದಿವಂಗತರಾದ ಡಾ. ಜಯಸ್ವಾಲರು

ಸುಪ್ರಸಿದ್ಧರಾದ ಪುರಾತತ್ತ್ವಭೂಷಣ ಡಾ. ಕೆ. ಪಿ. ಜಯಸ್ವಾಲ್ ಅವರು ಕಳೆದ ತಿಂಗಳ ನಾಲ್ಕನೆಯ ತಾರೀಖಿನ ದಿನ — ಪಾಟಣಾದಲ್ಲಿ— ದಿವಂಗತರಾದರು. ಕೊನೆಗಾಲದಲ್ಲಿ ಅವರು ೬೨ ವಯಸ್ಸಿನವರಿದ್ದರು. ಅವರ ಹುಟ್ಟೂರು ಮಿರ್ಝಾಪುರವಾದರೂ, ಮುಂದೆ ಪಾಟಣಾ ನಗರವನ್ನೆ ತಮ್ಮ ವಸತಿಸ್ಥಾನವನ್ನಾಗಿ ಮಾಡಿಕೊಂಡಿದ್ದರು. ಅಲಹಾಬಾದ್ ವಿಶ್ವವಿದ್ಯಾನಿಲಯದ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾದೊಡನೆಯೇ ಜಯಸ್ವಾಲರವರು ಉಚ್ಚವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಹೋದರು. ಅಲ್ಲಿ ಜೀಸಸ್ ಕಾಲೇಜಿನಲ್ಲಿ ಅಧ್ಯಯನವನ್ನು ಮಾಡಿ ಎಂ. ಎ. ಪದವಿಯನ್ನು ಸಂಪಾದಿಸಿದರು. ಬಳಿಕ ಅವರು ಕಾನೂನು ಅಭ್ಯಾಸವನ್ನೂ ಮಾಡಿದರು. ಆಕ್ಸ್‌ಫೋರ್ಡಿನಲ್ಲಿ ಚೀನೀ ಸಂಸ್ಕೃತಿಯ ವಿಷಯಕ್ಕಿದ್ದ ಡೇವಿಸ್ ಸ್ಕಾಲರ್‌ಶಿಪ್ಪನ್ನು ಅವರು ದೊರಕಿಸಿದ್ದರು. ಹಿಂದುಸ್ಥಾನದ ಪುರಾತನ ಇತಿಹಾಸದಲ್ಲಿಯ ಅವರ ಸಂಶೋಧನಕಾರ್ಯವು ತುಂಬ ಹೆಸರನ್ನು ಪಡೆದುದು. ''ಹಿಂದೂ ಪೊಲಿಟಿ" ''ದಿ ಹಿಸ್ಟರಿ ಆಫ್ ಇಂಡಿಯಾ ಕ್ರಿ. ಶ. ೧೫೦ರಿಂದ ೩೫೦ರ ವರೆಗೆ" ಇವೆರಡೂ ಗ್ರಂಥಗಳು ಡಾ. ಜಯಸ್ವಾಲರ ಕಾರ್ಯ-ವನ್ನು ಚಿರಕಾಲ ಮೆರೆಯಿಸುವಂತಹವಿವೆ. 'ಟಾಗೋರ್ ಲೆಕ್ಚರ್' ನಲ್ಲಿ ಮನು, ಯಾಜ್ಞವಲ್ಕ್ಯರ ವಿಚಾರದಲ್ಲಿ ಮಾಡಿದ ಇವರ ಉಪನ್ಯಾಸಗಳು ಮನನೀಯವಾದುವು ಗಳು. ಬಡೋದೆಯಲ್ಲಿ ಕೂಡಿದ ಓರಿಯೆಂಟಲ್ ಕಾನ್ಫರೆನ್ಸಿನ ಅಧ್ಯಕ್ಷಸ್ಥಾನದ ಮರ್ಯಾದೆಯು ಜಯಸ್ವಾಲರಿಗೆ ದೊರೆತಿತು.. ಪಾಟಣಾ [illegible] ಅಧ್ಯಕ್ಷರಾಗಿಯೂ, ಬಿಹಾರ ಮತ್ತು ಒಡಿಸ್ಸಾ ರಿಸರ್ಚ್-ಜರ್ನಲ್ಲಿನ ಸಂಪಾದಕರಾಗಿಯೂ ಇವರು ಸಾಕಷ್ಟು ಕಾರ್ಯವನ್ನು ಮಾಡಿರುವರು. ಪಾಟಣಾ ವಿಶ್ವವಿದ್ಯಾನಿಲಯದ-ವರು ಕಳೆದ ವರ್ಷವೇ 'ಡಾಕ್ಟರ್' ಪದವಿಯನ್ನು ಕೊಟ್ಟು ಗೌರವಿಸಿದ್ದರು. ತಮ್ಮ ವಕೀಲಿಯ ಉದ್ಯಮದೊಡನೆಯೇ ವಿದ್ಯಾವ್ಯಾಸಂಗ ಕಾರ್ಯವನ್ನೂ ಉತ್ತಮರೀತಿಯಿಂದ ನಡೆಯಿಸಿಕೊಂಡು ಬಂದುದು ಡಾ. ಜಯಸ್ವಾಲರ ಚರಿತ್ರೆಯದೊಂದು ವೈಶಿಷ್ಟ್ಯ! ಇವರ ವಕೀಲಿಯ ವ್ಯವಸಾಯವು ಮೊದಲನೆಯ ತರಗತಿಯದಾಗಿ ನಡೆಯುತ್ತಿದ್ದಿತು. ಹೊಟ್ಟೆಗಾಗಿ ವಕೀಲಿಯನ್ನೂ, ಮೆಚ್ಚಿಕೆಯದೆಂದು ವಿದ್ಯಾ-ವ್ಯಾಸಂಗವನ್ನೂ ಸ್ವೀಕರಿಸಿ, ಅವುಗಳನ್ನು ಯಶಸ್ವಿಯಾಗಿ ನಡೆಯಿಸುತ್ತಿರುವಾಗಲೆ ರಾಜಕಾರ್ಯದ ಕಡೆಗೂ ಅವರು ತುಂಬ ಲಕ್ಷ್ಯವನ್ನು ಹಾಕುತ್ತಿದ್ದರು. 'ಇಂಡಿಯನ್ ನೇಶನ್'ಎಂಬ ಪತ್ರಿಕೆಗೆ ಅವರು ಎರಡು ವರ್ಷಗಳ ವರೆಗೆ ಡೈರೆಕ್ಟರರಾಗಿ ಇದ್ದರು. ಇವರಿಗೆ ಐವರು ಗಂಡುಮಕ್ಕಳಿದ್ದಾರೆ. ಹಿರಿಯ ಮಗನು ಸಿಂಗಾಪುರದಲ್ಲಿ ಬ್ಯಾರಿಸ್ಟರ್ ಆಗಿರುವನು. ಮೂವರು ಹೆಣ್ಣುಮಕ್ಕಳಲ್ಲಿ ಒಬ್ಬಾಕೆ ಎಂ. ಎ. ಪಾಸಾಗಿರುವಳಲ್ಲದೆ ಬಾರ್-ಆಟ್-ಲಾ ಪದವಿಯನ್ನು ಪಡೆದಿದ್ದಾಳೆ. ಡಾ. ಜಯಸ್ವಾಲರು ತಮ್ಮ ಕಾರ್ಯದಿಂದ ಅಖಿಲಭಾರತೀಯರ ಮನ್ನಣೆಗೂ ಪಾತ್ರರಾಗಿದ್ದಾರೆ. ಬಹು ಪ್ರಾಚೀನ ಇತಿಹಾಸವುಳ್ಳ ಕನ್ನಡಿಗರ ಮೇಲೂ ಅವರ ಋಣಭಾರವು ಸಾಕಷ್ಟಿದೆ. ಎಂತಲೆ ದಿವಂಗತ ಜಯಸ್ವಾಲರಿಗೆ ಕೃತಜ್ಞತೆಯ ಅಂಜಲಿಗಳನ್ನು ಅರ್ಪಿಸಬೇಕಾದುದು [illegible]ಗಿದೆ.

CC-0. Jangamwadi Math Collection. Digitized by eGangotri




## ಪ್ರಾದೇಶಿಕ ವಿಶ್ವವಿದ್ಯಾನಿಲಯ

ಕಳೆದ ತಿಂಗಳ ೧೮—೧೯ನೆಯ ತಾರೀಖಿಗೆ ನಡೆದ ಮುಂಬಯಿ ವಿಶ್ವವಿದ್ಯಾನಿಲಯದ ಸಿನೇಟಿನ ಸಭೆಯಲ್ಲಿ ಪ್ರಾದೇಶಿಕ ವಿಶ್ವವಿದ್ಯಾನಿಲಯಸ್ಥಾಪನೆಯ ವಿಷಯದಲ್ಲಿ ಮತ್ತೊಮ್ಮೆ ಗೊತ್ತುವಳಿ ಮುಂದೆ ಬಂದು ಪಾಸಾಯಿತು. ಈ ಗೊತ್ತುವಳಿಯಲ್ಲಿ ಮಹಾರಾಷ್ಟ್ರ, ಗುಜರಾಥ, ಸಿಂಧ ಈ ಮೂರು ಪ್ರಾಂತಗಳಲ್ಲಿ ಮಾತ್ರ ಪ್ರಾ. ವಿ. ವಿ. ಸ್ಥಾಪನೆಯಾಗಬೇಕೆಂದಿದೆ. ಇದುವರೆಗೆ ಸಿನೇಟಿನ ಕುರ್ಚಿಗಳನ್ನು ಹಿಡಿದು ಕುಳಿತ ಕನ್ನಡಿಗ ಸದಸ್ಯರು ಕರ್ಣಾಟಕದ ಹೆಸರನ್ನೆ ಎತ್ತಿಲ್ಲವೆಂದಮೇಲೆ ಆ ಗೊತ್ತುವಳಿಯಲ್ಲಿ ಅದಕ್ಕೆ ಸ್ಥಾನವು ಸಿಕ್ಕುವುದಾದರೂ ಹೇಗೆ? ಹೊಸತಾಗಿಯೆ ಪ್ರವೇಶವು ದೊರೆತ ಶ್ರೀಮಾನ್ ದಾತಾರ ಬಳವಂತರಾಯರಿಂದ 'ಕರ್ಣಾಟಕದ ಹೆಸರನ್ನೂ ಸೇರಿಸಬೇಕು' ಎಂದು ಆಯತ್ತ ಸಮಯದಲ್ಲಿ ಉಪಸೂಚನೆ ಬಂದುದರಿಂದ, ಅದು ನಿಯಮ ಬಾಹ್ಯವಾಗಿ ಹೋಯಿತು; ಆದರೆ ಪ್ರಾದೇಶಿಕ ವಿಶ್ವವಿದ್ಯಾಲಯಗಳ ಸಾಮಾನ್ಯ ತತ್ತ್ವಕ್ಕೆ ಸಿನೇಟಿನ ಬೆಂಬಲವು ದೊರೆಯಿತು. ಈ ಸಲವಿಲ್ಲ, ಮುಂದಿನ ಸಲ ಕರ್ಣಾಟಕದ ಬಗೆಗೂ ಒಂದು ಗೊತ್ತುವಳಿ ಪಾಸಾದೀತು; ಅದೇನು ದೊಡ್ಡ ವಿಷಯವಲ್ಲ. ಗೊತ್ತುವಳಿಯಂತೆ ಕಾರ್ಯವಾಗುವುದಕ್ಕಾಗಿ ಈಗಿನಿಂದಲೆ ನಾಡಿನಲ್ಲಿ ಕಾರ್ಯಾರಂಭವಾಗುವುದು ಆವಶ್ಯವಾಗಿದೆ.

ಹಿಂದೊಂದು ಸಲ ವಿಶ್ವವಿದ್ಯಾನಿಲಯದ ಚಟುವಟಿಕೆ ಸುಸಂಘಟಿತವಾಗಿ ನಡೆದು, ಕೆಲವು ದಿನಗಳಲ್ಲಿಯೆ ಜಾಡ್ಯ ಹಿಡಿದು ಮಲಗಿಕೊಂಡಿತು. ಈಗ ಆ ಚಟುವಟಿಕೆಯನ್ನೆ ಮತ್ತೆ ಬಡಿದೆಬ್ಬಿಸಬೇಕಾಗಿದೆ. ಸುಸಂಘಟಿತ ರೀತಿಯಿಂದ ನಾವೀಗ ಚಳವಳಿಯನ್ನು ಕೈಕೊಳ್ಳದಿದ್ದಲ್ಲಿ, ಇನ್ನೊಬ್ಬರು ಉಣ್ಣುತ್ತಿದ್ದ ಸವಿಯೂಟಗಳನ್ನು ನೋಡುತ್ತ ಕಳವಳದಿಂದ ಕಣ್ಣುಬಿಡುತ್ತಿರುವ ದುರ್ಭಾಗ್ಯರ ಸ್ಥಿತಿ ನಮ್ಮದಾಗುವುದು ಖಂಡಿತ.

## ಪ್ರವೇಶಪರೀಕ್ಷೆಯ ಸುಧಾರಣೆ

ವಿಶ್ವವಿದ್ಯಾನಿಲಯದ ವಿಧಿಸಮಿತಿಯಲ್ಲಿ (ಸಿನೇಟಿನಲ್ಲಿ) ಮೇಲಣ ಗೊತ್ತುವಳಿಯ ಜತೆಗೆ ಇನ್ನೊಂದು ಮಹತ್ತ್ವದ ನಿರ್ಣಯವು ಸ್ವೀಕರಿಸಲ್ಪಟ್ಟಿತು: ಅದೇನೆಂದರೆ, ಮುಂಬಯಿ ವಿದ್ಯಾಪೀಠದ ಪ್ರವೇಶಪರೀಕ್ಷೆಯ (ಮ್ಯಾಟ್ರಿಕ್ಯುಲೇಶನ್ನಿನ) ಪುನರ್ಘಟನೆಯನ್ನು ಮಾಡಬೇಕೆಂಬುದು. ಈಚೆಗೆ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ನಡೆಯುತ್ತಿರುವ ವಿದ್ಯಾರ್ಥಿಗಳ 'ಪ್ರಚಂಡ ಕೊಲೆ'ಯ ಮೂಲಕ ಈ ಪ್ರಶ್ನೆಗೆ ಮಹತ್ತ್ವ ಬಂದುದು ಸ್ವಾಭಾವಿಕವಾಗಿದೆ. ಮ್ಯಾಟ್ರಿಕ್ ಪರೀಕ್ಷೆಯ ಅಭ್ಯಾಸಕ್ರಮ, ಪರೀಕ್ಷಕರ ಆಯ್ಕೆ, ಪಠ್ಯಪುಸ್ತಕಗಳನ್ನು ಒದಗಿಸುವುದು, ಪರೀಕ್ಷಾಕೇಂದ್ರಗಳ ನಿಯಂತ್ರಣ, ಪರೀಕ್ಷೆಗಳ ಮಾಧ್ಯಮ, ವರ್ಷದಲ್ಲಿ ಎರಡು ಬಾರಿಯಾದರೂ ಪರೀಕ್ಷೆಯನ್ನು ನಡೆಯಿಸುವುದರ ಆಗತ್ಯ, ಪರೀಕ್ಷೆಯ ಪರಿಣಾಮವನ್ನು ಬರಿ ಮುಂಬಯಿಯಲ್ಲಲ್ಲದೆ ಪ್ರಾಂತದ ಬೇರೆ ಬೇರೆ ಕೇಂದ್ರಗಳಲ್ಲಿಯೂ ಪ್ರಕಾಶಗೊಳಿಸುವುದು — ಈ ಹಲವು ವಿಷಯಗಳಲ್ಲಿ ಸುಧಾರಣೆಯನ್ನು ಮಾಡುವುದು ತುಂಬ ಆಗತ್ಯವಾಗಿದೆ. ವಿದ್ಯಾಕ್ಷೇತ್ರದಲ್ಲಿಯ ಈ ಅವ್ಯವಸ್ಥೆಯ ಮೂಲಕ ಮುಂಬಯಿ ವಿಶ್ವವಿದ್ಯಾಲಯಕ್ಕೆ ಕಲಂಕ ತಟ್ಟಿದೆಯೆಂದು ಹೇಳಿದರೆ ಅತ್ಯುಕ್ತಿಯಾಗದು. ಮ್ಯಾಟ್ರಿಕ್ ಪರೀಕ್ಷೆಯಿಂದ ಮುಂಬಯಿ ವಿದ್ಯಾಪೀಠಕ್ಕೆ ಕಳೆದ ಕಲವು ವರ್ಷಗಳಿಂದ ಪ್ರತಿವರ್ಷ ೨ ಲಕ್ಷ ರೂ. ಯಂತೆ ಲಾಭವಾಗುತ್ತಿದ್ದರೂ ಅದನ್ನು 'ಮೃತನಿಧಿ'ಯನ್ನಾಗಿ ಮಾಡಿ ಒಗೆದುಬಿಟ್ಟಿರುವುದಲ್ಲದೆ ಪರೀಕ್ಷಾ—ಶಿಕ್ಷಾ ಪದ್ಧತಿಗಳನ್ನು ಸುಧಾರಿಸಲು ಎಳ್ಳಷ್ಟೂ ಅದನ್ನು ಬಳಸಿಲ್ಲ. ರಾಷ್ಟ್ರೀಯ ಮಂತ್ರಿಮಂಡಳದ ಆಡಳಿತದಲ್ಲಿ ಶಿಕ್ಷಣಕ್ರಮವು ಪರಿಶೋಧಿಸಲ್ಪಟ್ಟು, ರಾಷ್ಟ್ರಪೋಷಕವೂ ಜನಬಲವರ್ಧಕವೂ ಆಗುವಂತೆ ಎತ್ತುಗಡೆಯಾದೀತೆಂದು ಕೋರುವುದು ಅಪ್ರಸ್ತುತವಾಗದು.

CC-0. Jangamwadi Math Collection. Digitized by eGangotri

## ಈ ದುಃಸ್ಥಿತಿಗೆ ಕಾರಣರು ಯಾರು?

ಮುಂಬಯಿ ವಿದ್ಯಾಪೀಠವು ಪ್ರಾದೇಶಿಕ ವಿಶ್ವವಿದ್ಯಾನಿಲಯಃಸ್ಥಾಪನೆ, ಪಠ್ಯಪುಸ್ತಕ ಸುಧಾರಣೆ, ಪ್ರವೇಶ ಪರೀಕ್ಷೆಯ ಪುನರ್ಘಟನೆ, ಕೇವಲ ಪುಸ್ತಕೀಯ ಶಿಕ್ಷಣವಲ್ಲದೆ ಕಲಾ — ವೃತ್ತಪತ್ರವ್ಯವಸಾಯ — ಉದ್ಯೋಗಶಿಕ್ಷಣ ಮೊದಲಾದುವುಗಳಿಗೆ ಮನ್ನಣೆ ಇತ್ಯಾದಿ ವಿಷಯಗಳಲ್ಲಿ ಏಕೆ ಈ ಪರಿ ಅನಾಸ್ಥೆಯನ್ನು ತಾಳಿದೆಯೆಂದು ವಿಚಾರಿಸಿದರೆ, ಅದರ ಕಾರ್ಯವಿಸ್ತಾರ ಮತ್ತು ತೂಗಲಾಗದ ಕೆಲಸದ ಗೊಂದಲ—ಎಂಬೀ ಸಂಗತಿಗಳ ಕಡೆಗೇ ಬೊಟ್ಟುತೋರಿಸ ಬೇಕಾಗುವದು. ಮಾಂಟ್‌ಫರ್ಡ ಸುಧಾರಣೆಗಳ ಆಡಳಿತದ ೧೭ ವರ್ಷಗಳ ಅವಧಿಯಲ್ಲಿ, ಸಂಯುಕ್ತಪ್ರಾಂತದಲ್ಲಿಯ ೨ ವಿಶ್ವವಿದ್ಯಾಲಯಗಳ ಸಂಖ್ಯೆಯು ೫ ರಷ್ಟಾಯಿತು; ಮದ್ರಾಸದಲ್ಲಿ ಒಂದು ಇದ್ದುದು ಮೂರು ಆಯಿತು; ಬಂಗಾಲದಲ್ಲಿ ಒಂದರದು ಎರಡು ಆದುದಲ್ಲದೆ, ದಿಲ್ಲಿ, ನಾಗಪುರ, ಪಾಟಣಾ ನಗರಗಳಲ್ಲಿ ಸ್ವತಂತ್ರ ವಿದ್ಯಾಲಯಗಳು ಸ್ಥಾಪಿತವಾಗಿ ಒಳ್ಳೆಯ ರೀತಿಯಲ್ಲಿ ಕೆಲಸ ನಡೆಯಿಸಿವೆ. ಮುಂಬಯಿ ಪ್ರಾಂತದ ಕ್ಷೇತ್ರುಫಲವು ತುಂಬಾ ದೊಡ್ಡದಿದ್ದೂ, ಅಲ್ಲದೆ ಕನಿಷ್ಠ ೫ ದೇಶೀಯ ಭಾಷೆಗಳ ಪ್ರಚಾರವಿದ್ದೂ ವಿದ್ಯಾಪೀಠವನ್ನು ವಿಸ್ತರಿಸಿ, ಕೆಲಸವನ್ನು ಪ್ರಾಂತಶಃ ಹಂಚುವ ವಿಚಾರವು ಸ್ಫುರಿಸಲಿಲ್ಲ. ಜನರ ಬೇಡಿಕೆಯಿರಲಿಲ್ಲವೆಂತಲೂ ಅಲ್ಲ. ೧೦—೧೨ ವರ್ಷಗಳ ಹಿಂದೆಯೇ ಮುಂಬಯಿ ವಿದ್ಯಾಪೀಠ-ಸುಧಾರಣಾಸಮಿತಿಯು ಪ್ರಾದೇಶಿಕ ವಿಶ್ವವಿದ್ಯಾಲಯಗಳ ಸ್ಥಾಪನೆಯ ಶಿಫಾರಸು ಮಾಡಿದ್ದಿತು. ಆದರೆ ಶಿಕ್ಷಣಾಧಿಕಾರಿಗಳ ಪ್ರತಿಗಾಮಿತ್ವದ ಮೂಲಕ ಅದು ಕೈಗೂಡದೆ ಹೋಯಿತು. ಕಳೆದ ೧೭ ವರ್ಷಗಳಲ್ಲಿ ದೇಶೀಯ ಭಾಷೆಗಳಿಗೆ ಉತ್ತೇಜನ ದೊರೆಯುವುದಂತೂ ಇರಲಿ, ಮುಂಬಯಿ ವಿದ್ಯಾಪೀಠದಲ್ಲಿಯ ಇಂಗ್ಲಿಷ್ ಭಾಷಾವಿಷಯದ ಅಧ್ಯಾಪನದ ಕಾರ್ಯಕ್ಷಮತೆಯ ವಿಷಯದಲ್ಲಿ ಅವನತಿಯಾಗುತ್ತ ಬಂದು, ಮುಂಬಯಿ ವಿದ್ಯಾಪೀಠದ ಸ್ಥಾನವು ಅಂತಃಪ್ರಾಂತೀಯ ವಿದ್ಯಾಪೀಠಗಳ ಶ್ರೇಣಿಯಲ್ಲಿ ಕೆಳತರಗತಿಯದಾಗಿ ಭಾವಿಸಲ್ಪಡುವ ಸಂದರ್ಭವೂ ಒದಗಿತು.

ಪ್ರಾದೇಶಿಕ ವಿಶ್ವವಿದ್ಯಾಲಯದ ತತ್ತ್ವವನ್ನು ಸಿನೇಟು ಸ್ವೀಕರಿಸುತ್ತಿರುವ ಸಮಯದಲ್ಲಿ, ರಾಷ್ಟ್ರೀಯ ಸರಕಾರವು ಮುಂಬಯಿಯಲ್ಲಿ ಪದಾರೂಢವಾಗಿರುವ ಸಾಲಾವಳಿಯು ಕೂಡಿಬಂದುದು, ಕರ್ನಾಟಕ ವಿಶ್ವವಿದ್ಯಾಲಯಕ್ಕಾಗಿ ಹಾತೊರೆಯುತ್ತಿರುವವರ ಮನಸ್ಸಿನಲ್ಲಿ ಆಶಾಮಿಶ್ರಿತ ಆನಂದೋರ್ಮಿಯನ್ನು ಹುಟ್ಟಿಸದಿರದು. ಮುಖ್ಯಮಂತ್ರಿಗಳಾದ ಶ್ರೀಮಾನ್ ಖೇರ ಅವರೆ ಶಿಕ್ಷಣಮಂತ್ರಿಗಳು. ಶಿಕ್ಷಣದ ಪುನರ್ಘಟನೆಯ ವಿಚಾರವನ್ನು ಆಮೂಲಾಗ್ರವಾಗಿ ಮುಖ್ಯಮಂತ್ರಿಗಳು ಬೇಗನೆ ಮಾಡಲೇ ಬೇಕಾಗುವುದು; ಆಗಲೆ ಪ್ರಾದೇಶಿಕ ವಿಶ್ವವಿದ್ಯಾಲಯಗಳ ಶಂಕುಸ್ಥಾಪನೆಯ ನಿರ್ಣಯವನ್ನೂ ಅವರು ಕೈಕೊಂಡರೆ ಕನ್ನಡ ಜನತೆಯು ಅವರನ್ನು ಹರಸದೆ ಇರದು. ಕಾಂಗ್ರೆಸ್ ಪಕ್ಷವು ತನ್ನ ಚುನಾವಣೆ ಪತ್ರಿಕೆಯಲ್ಲಿ ಪ್ರಾ. ವಿಶ್ವವಿದ್ಯಾಲಯ ತತ್ತ್ವವನ್ನು ಅಂಗೀಕರಿಸಿಯೆ ಇದೆ. ದುಡ್ಡಿನ ಕೊರತೆಯ ದೊಡ್ಡ ದೆವ್ವವನ್ನು, ಈ ಮಾತೆತ್ತಿದಾಗಲೊಮ್ಮೆ ಮುಂದೆ ಮಾಡುವುದುಂಟು. ಆದರೆ ಹಲವು ರಾಷ್ಟ್ರಪೋಷಕ ಕಾರ್ಯಕ್ರಮಗಳನ್ನು — ದುಡ್ಡಿನ ಬಲವಿಲ್ಲದೆಯೂ — ಮುಂದುವರಿಸಲು ರಾಷ್ಟ್ರೀಯಪಕ್ಷವು ಕಟಿಬದ್ಧವಾಗಿರುವಾಗ, ಈ ಜೀವಜೀವಾಳದ ವಿಷಯದಲ್ಲಿ ಅದು ಹಿಂಜರಿಯಲಿಕ್ಕಿಲ್ಲವೆಂದು ನಾವು ನಂಬಿದ್ದೇವೆ. ಈ ವಿಷಯದ ಮಹತ್ತ್ವವನ್ನು ಮುಖ್ಯಮಂತ್ರಿಗಳಿಗೆ ನಿವೇದಿಸಲು ಪ್ರಾತಿನಿಧಿಕ ಶಿಷ್ಟಮಂಡಲವೊಂದು ಕರ್ನಾಟಕದಿಂದ ಹೋಗುವುದಗತ್ಯವೆಂದು ಇಲ್ಲಿ ಸೂಚಿಸದಿರಲಾರೆವು.

## ಏಕೀಕರಣ ಎಲ್ಲರಿಗೂ ಬೇಕಾಗಿದೆ

ಮೊನ್ನೆ ಮೊನ್ನೆಯೆ ಧಾರವಾಡದಲ್ಲಿ ಸೇರಿದ ಕರ್ಣಾಟಕ ವಣಿಕ್‌ಸಂಘದ ಸಾಧಾರಣ ಸಭೆಯಲ್ಲಿ, ಸಂಘದ ಅಧ್ಯಕ್ಷರಾದ ಶ್ರೀಮಾನ್ ವೈ. ಮಹಾಬಳೇಶ್ವರಪ್ಪನವರು ಮಾಡಿದ ಪ್ರಾರಂಭಭಾಷಣವು ತುಂಬ ವಿಷಯವೈಭವದಿಂದ ಕೂಡಿದುದಾಗಿದೆ. ಕರ್ಣಾಟಕದ ವ್ಯಾಪಾರವನ್ನು ಕುರಿತು ಅವರು ಆಡಿದ ಅಭ್ಯಾಸಪೂರ್ಣವಾದ ಮಾತುಗಳನ್ನು ಕೇಳಿದರೆ, ಕನ್ನಡಿಗರ ಪ್ರತಿಯೊಂದು ಮುಂದಡಿಗೂ ಏಕೀಕರಣದ ಆವಶ್ಯಕತೆಯೆಷ್ಟಿದೆಯೆಂಬುದನ್ನು ಕಂಡುಕೊಳ್ಳಬಹುದು. ಅವರು ಹೇಳಿದುದು ಹೀಗೆ:—

"ನಾವು ಆಧುನಿಕ ದೇಶವಿದೇಶ ವ್ಯಾಪಾರದಲ್ಲಿಯೂ, ಉದ್ಯೋ[ಗ]ಗಳಲ್ಲಿಯೂ ನಮ್ಮ ಕರ್ನಾಟಕ ಪ್ರಾಂತದ ಆಚೆಗಿರುವ ನಮ್ಮ ವರ್ತಕಬಾಂಧವರಿಗಿಂತಲೂ ತೀರ ಹಿಂದುಳಿದಿರುತ್ತೇವೆ. ನಾ[ವು] ಮಾಡುವ ವ್ಯಾಪಾರವು ದಲ್ಲಾಲಿಯಾಗಲಿ, ಚಿಕ್ಕ-ಪುಟ್ಟ ಅಂಗ[ಡಿ]ಗಳಾಗಲಿ ಇರುತ್ತವೆ. ಬಹಳ ಹೆಚ್ಚೆಂದರೆ ಹತ್ತಿ ಅರಳಿಯ ಜಿನಿಂ[ಗ್] ಮತ್ತು ಪ್ರೆಸಿಂಗ್ ಕಾರಖಾನೆಗಳನ್ನು ತೆರೆಯುವುದು.

ನಮ್ಮಲ್ಲಿ ಅರಿವೆಯ ಗಿರಣಿಗಳಿಲ್ಲ, ಸಿಮೆಂಟು, ಕಾಗದ, ಸಬ[ಕಾ] ಸಿಗಾರೆಟ್ಟು, ಔಷಧ ಮುಂತಾದ ಅನೇಕಾನೇಕ ನಿತ್ಯೋಪಯೋ[ಗಿ]

CC-0. Jangamwadi Math Collection. Digitized by eGangotri

ಸಾಮಾನುಗಳ ಕಾರಖಾನೆಗಳಿಲ್ಲ. ಅವುಗಳನ್ನು ಮಾಡಲು ಸಾಕಷ್ಟು ಸಾಹಸವೂ ಇಲ್ಲ. ಆದರೆ ಅವುಗಳನ್ನು ಮಾಡಲು ಕಚ್ಚಾಮಾಲು ವಿಪುಲವಾಗಿ ಬೆಳೆಯುತ್ತದೆ. ಶ್ರೀಮಂತರೂ ಇದ್ದಾರೆ; ಆದರೆ ನಾವು ನಮ್ಮ ಅಜ್ಞಾನದಿಂದಲೂ, ಕರ್ತವ್ಯಪರಾಙ್ಮುಖತೆಯಿಂದಲೂ ಆಲಸ್ಯದಿಂದಲೂ, ಆ ಕಚ್ಚಾಮಾಲುಗಳನ್ನು ಪರದೇಶಕ್ಕೆ ಕಳುಹಿಸಿ, ಅಲ್ಲಲ್ಲಿಯ ಬಡ ಕೂಲಿಕಾರರನ್ನು ಮೊದಲುಮಾಡಿ, ಎಂಜನಿಯರರು, ವಾಹನಕಾರರು, ವ್ಯಾಪಾರಸ್ಥರು ಮುಂತಾದವರ ಹೊಟ್ಟೆಬಟ್ಟೆಗೆ ಹಾಕಿ, ಅವರ ಐಷ-ಆರಾಮುಗಳನ್ನು ಒದಗಿಸಿಕೊಟ್ಟು, ದನಕರ ಮುಂತಾದ ಚತುಷ್ಪಾದ ಪ್ರಾಣಿಗಳನ್ನೂ ಕೂಡ ಪುಷ್ಟೀಕರಿಸಿ, ಮೋಜಿನಿಂದ ನಾವು ದಿನಾಲು ಹೆಚ್ಚೆಚ್ಚು ಬಡವರಾಗಿ, ಕುಲಗೇಡಿಗಳಾಗುತ್ತ, ಆ ಪರದೇಶಗಳಿಂದ ತಯಾರಾದ ಮಾಲನ್ನು ಕೊಂಡುಕೊಳ್ಳುತ್ತಲಿದ್ದೇವೆ. ಈ ಬಗ್ಗೆ ಒಂದೇ ಒಂದು ಉದಾಹರಣೆಯನ್ನು ನಿಮಗೆ ಹೇಳುತ್ತೇನೆ. ಶೇಂಗಾ ಬೆಳೆಯು ನಮ್ಮಲ್ಲಿ ವಿಪುಲವಾಗಿರುತ್ತದೆ. ಇನ್ನೂ ಬೆಳೆಯನ್ನು ಹೆಚ್ಚಿಸಲು ಅವಕಾಶವಿರುತ್ತದೆ. ಆದರೆ ನಾವು ಯಾವ ಗೋಜಿಗೂ ಹೋಗದೆ, ಅವನ್ನು ಅಮೇರಿಕೆಗೆ ಕಳುಹಿಸುತ್ತೇವೆ. ಅಲ್ಲಿ ಅವರು ಸುಮಾರು ಮೂರು ನೂರು ಸಾಮಾನುಗಳನ್ನು ನಾವು ಕಳುಹಿಸಿದ ಶೇಂಗಾದಿಂದಲೇ ತಯಾರು ಮಾಡಿ, ಅದರಿಂದ ಪ್ರತಿವರುಷ ೧೬೦೦ ಕೋಟಿ ರೂಪಾಯಿಗಳ ವ್ಯಾಪಾರವನ್ನು ಮಾಡುತ್ತಾರೆ.

ನಮಗೆ ಸ್ವತಂತ್ರ ಬಂದರವಿಲ್ಲ. ನಮ್ಮ ಕರ್ನಾಟಕವು ಛಿನ್ನವಿಚ್ಛಿನ್ನವಾಗಿ ಹರಿದು ಹೋಗಿ ಒಬ್ಬರಿಗೊಬ್ಬರು ಪರಕೀಯರಂತೆ ಆಗಿದ್ದೇವೆ. ನಮ್ಮ ನಿಮ್ಮ ಸುಖ-ದುಃಖಗಳು ಒಂದೇಯಾಗಿದ್ದರೂ ನಮ್ಮ ಸರಕಾರವು ಬೇರೆ, ನಿಮ್ಮ ಸರಕಾರವು ಬೇರೆ. ಆ ಸರಕಾರದಲ್ಲಿ ನಾವು ಅಲ್ಪಸಂಖ್ಯಾಕರಾಗಿರುವುದರಿಂದ ನಮ್ಮ ಬೇಡಿಕೆಗಳು ಅರಣ್ಯರೋದನೆಯಂತೆಯೇ ಆಗಿರುವವು. ಆದ್ದರಿಂದ ಇಂದು ಅಖಿಲಕರ್ನಾಟಕದ ಏಕೀಕರಣದ ಪ್ರಶ್ನೆಯೂ ನಮ್ಮ ಜೀವಾಳವಾಗಿದೆ. ''

## ಏಕೀಕರಣಕ್ಕೆ ಸಿಂಧದ ಬೆಂಬಲ

'The Servant of Sind' ಎಂಬುದು ಕರಾಚಿಯಲ್ಲಿ ಈಚೆಗೆ ಹೊರಟ ರಾಷ್ಟ್ರೀಯ ವಾರಪತ್ರಿಕೆಯು. ಅದರ ಆಗಸ್ಟ್ ೧೬ರ ಸಂಚಿಕೆಯ ಹಿರಿಬರೆಹದಲ್ಲಿ ಕರ್ನಾಟಕ ಏಕೀಕರಣದ ಬೇಡಿಕೆಯನ್ನು ಬಲವಾಗಿ ಸಮರ್ಥಿಸಲಾಗಿದೆ. ವಣಿಕ್ಪರಿಷತ್ತಿನವರು ಈ ಪ್ರಶ್ನೆಗೆ ಚಾಲನೆಕೊಟ್ಟುದು ತೀರ ಸಮಯೋಚಿತವೆಂದು ಹೇಳಿ ಏಕೀಕರಣ ಆಂದೋಲನದ ಪೂರ್ವವೃತ್ತವನ್ನು ಹೇಳಿದೆ. ಸೈಮನ್ ವರದಿಯು ಭಾಷಾನುಗುಣ ಪ್ರಾಂತರಚನೆಯನ್ನು ಒಪ್ಪಿದುದು, ಆದರೆ ಹಿಂದುಸ್ಥಾನ ಸರಕಾರವು ತನ್ನ ನಿರೂಪದಲ್ಲಿ 'ಸದ್ಯಕ್ಕೆ ಸಿಂಧ—ಓರಿಸಾ ಪ್ರಾಂತಗಳನ್ನಷ್ಟೇ ಬೇರ್ಪಡಿಸಿ, ಉಳಿದುವುಗಳಿಗಾಗಿ ಕಾಲನಿರೀಕ್ಷಣೆಮಾಡಬೇಕೆ'ಂದು ಹೇಳಿದುದು, ನೆಹರು ಸಮಿತಿಯವರು ತಲೆದೂಗುವಂತೆ ಕರ್ನಾಟಕದ ಮುಖಂಡರು ಕ. ಏಕೀಕರಣದ ಯುಕ್ತತೆಯನ್ನು ಪ್ರತಿಪಾದಿಸಿದುದು, ಈ ಬೇಡಿಕೆಯನ್ನು ಸಾರ್ವಜನಿಕರು ಲೆಕ್ಕವಿಲ್ಲದಷ್ಟು ಸಲ ಸಾರಿ ಸಾರಿ ಹೇಳಿದುದು — ಇದನ್ನೆಲ್ಲ ವಿವರಿಸಿ, ಕೆಳಗಿನ ಸೂಚಕ ಪ್ರಶ್ನೆಯನ್ನೆತ್ತಿ ಅದಕ್ಕೆ ಸಮಾಧಾನವನ್ನು ಹೇಳಲಾಗಿದೆ:

'ಕರ್ನಾಟಕದ ಪ್ರಶ್ನೆಯಲ್ಲಿ ಸಿಂಧದ ಆಸ್ಥೆಯೇನು ?— ಎಂದು ಯಾರಾದರೂ ಕೇಳುವಂತಿದೆ. ಸಿಂಧದ ನವನಿರ್ಮಾಣಕಾಲದ ಪ್ರಸವವೇದನೆಯನ್ನು ಯಾರೂ ಮರೆತಿರಲಾರರು. ಬೇರೆಕಡೆಗೂ ಇಂತಹ ವೇದನೆಗಳೇ ಏಳುತ್ತಿದ್ದರೆ, ಸಿಂಧದ ಲಕ್ಷ್ಯವಷ್ಟೇ ಅಲ್ಲ—ಸಹಾನುಭೂತಿಯೂ ಅತ್ತಕಡೆ ಎಳೆಯಲ್ಪಡುವುದು ಸ್ವಾಭಾವಿಕವಾಗಿದೆ. ತನ್ನ ಪ್ರಯತ್ನದಲ್ಲಿ ಯಶೋಭಾಗಿಯಾದಮೇಲೆ, ಇನ್ನೊಂದು ಪ್ರಾಂತದ ಅಡಚಣೆಯು ಹೊತ್ತಿನಲ್ಲಿ ನೆರವಾಗಲು ಸಿಂಧವು ಮುಂದು ಬರುವುದರಲ್ಲಿ ಸಂದೇಹವಿಲ್ಲ.'

ಕಾಂಗ್ರೆಸಿನ ಆಡಳಿತದಲ್ಲಿ ಕರ್ನಾಟಕಕ್ಕೆ ನ್ಯಾಯ ದೊರಕುವುದೇ ? — ಕ್ಷಿಪ್ರದಲ್ಲಿಯೆ ನಿರ್ಣಯವಾಗುವ ಸಂದರ್ಭವಿದೆ.

## ಈ ಗೊತ್ತುವಳಿ ಬೇಕಾಗಿದ್ದಿತೇ ?

ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಸಂಸ್ಥಾನ ಸಮಿತಿಯ ಸಭೆಯು (ತಾ. ೫-೮-೩೭) ಸೇರಿ 'ದಕ್ಷಿಣ ಸಂಸ್ಥಾನ ಪ್ರಜಾಪರಿಷತ್ತಿನ ಸಂಬಂಧದಲ್ಲಿ ಸ್ವೀಕೃತವಾಗುವ ಘಟನೆಗನುಸರಿಸಿ, ದಕ್ಷಿಣ ಸಂಸ್ಥಾನಗಳಲ್ಲಿ ಸಭಾಸದರನ್ನು ಮಾಡಿಕೊಳ್ಳುವುದು ಮತ್ತು ಸಮಿತಿಗಳನ್ನು ಸ್ಥಾಪಿಸುವುದು; ಅಲ್ಲದೆ ಆಯಾ ಸಮಿತಿಗಳ ಮುಖಾಂತರ ಅಲ್ಲಲ್ಲಿಯ ತೊಂದರೆಗಳನ್ನು ಕೇಳಿಕೊಂಡು ಪ್ರಯತ್ನಿಸುವುದು' ಎಂಬರ್ಥದ ಗೊತ್ತುವಳಿಯೊಂದನ್ನು ಮಾಡಿದೆ. ಮರಾಟಗರ ಈ ಉತ್ಸಾಹವೂ ಕಾರ್ಯಕಾರಿಬುದ್ಧಿಯೂ ಅಭಿನಂದನೀಯವಾದರೂ ತಮ್ಮದಲ್ಲದ ಪ್ರದೇಶವನ್ನು ತಮ್ಮದನ್ನಾಗಿಸಿಕೊಳ್ಳಬೇಕೆಂದಿರುವ ಅವರ ಮನೋವೃತ್ತಿಯು ಹೀನಯಿಸುವಂತಹದಾಗಿದೆ.

ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿಗೆ 'ಕರ್ನಾಟಕ' ಎಂಬುದೊಂದು ಪ್ರಾಂತವಿದ್ದುದೂ, ಅದಕ್ಕೂ ಒಂದು ಕಾಂಗ್ರೆಸ್ ಕಮಿಟಿಯಿದ್ದು ತನ್ನ ಪ್ರಾಂತದಲ್ಲಿ ಅದು ಕೆಲಸವನ್ನು ಮಾಡುತ್ತಿದ್ದುದೂ ಗೊತ್ತಿಲ್ಲವೇನು ಬೇರೆ! ಅಂದಿನ ಸಭೆಯಲ್ಲಿ ಶ್ರೀಮಾನ್ ಶಂಕರರಾವ್ ದೇವ ಅವರಂತಹ ಕಾಂಗ್ರೆಸ್‌ನಿಷ್ಠ ಜನರೂ ಇದ್ದು ಇಂತಹ ಆಕ್ರಮಣ

CC-0. Jangamwadi Math Collection. Digitized by eGangotri

ಶೀಲ ಗೊತ್ತುವಳಿಯಾಗುವುದೆಂದರೆ ಆಚ್ಚರಿಯ ಮಾತೇ ಸರಿ! ಕರ್ಣಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯೂ ಸಂಸ್ಥಾನಗಳಲ್ಲಿಯ ಕನ್ನಡಿಗರೂ ಇದರ ಬಗ್ಗೆ ಮೊದಲೆ ವಿಚಾರಿಸಿ, ಮರಾಟಿಗರ ಈ ನಿರ್ಣಯಕ್ಕೆ ಅಸಮ್ಮತಿಯನ್ನು ಸೂಚಿಸುವುದು ತುಂಬ ಅಗತ್ಯದ ಮಾತಾಗಿದೆ.

## ಬಡವರ ಬಲಕ್ಕೆ ಜಯ

ಕಳೆದ ವರ್ಷದ ಡಿಸೆಂಬರ್ ತಿಂಗಳಿಂದಲೂ ಗೋಕಾಕ ಗಿರಣಿಯ ಸಂಚಾಲಕರಿಗೂ ಕೂಲಿಕಾರರಿಗೂ ತಿಕ್ಕಾಟ ಪ್ರಾರಂಭವಾಗಿದ್ದುದು, ಸಂಚಾಲಕರಿಗಿದ್ದ ಅನುಕೂಲವಾದ ರಾಜಕೀಯ ಪರಿಸ್ಥಿತಿಯ ಮೂಲಕ ಇದುವರೆಗೂ ಬಗೆಹರಿಯದಾಗಿದ್ದಿತು.

ಹಣಗಾರರಾದ ಸಂಚಾಲಕರು ಈ ಏಳೆಂಟು ತಿಂಗಳಲ್ಲಿ ಸಂಪಾದಿಸಬಹುದಾದ ಲಾಭವನ್ನು ಕಳೆದುಕೊಂಡರು; ಬಡವರಾದ ಕೂಲಿಕಾರರು ಹಿಡಿಯನ್ನಕ್ಕೆ ಗತಿಯಿಲ್ಲದೆ, ನಿಂತಲ್ಲಿ ನಿಲ್ಲಲಿಕ್ಕೆ ಎಡೆಯಿಲ್ಲದೆ—ಜೀವನದ ಶಾಂತಿಯನ್ನೆ ಕಳೆದುಕೊಂಡರು. ಎಷ್ಟು ಜನ ಕೂಲಿಕಾರರ ಮೇಲೆ ಕ್ರಿಮಿನಲ್ ಮೊಕದ್ದಮೆಗಳು! ಇನ್ನೆಷ್ಟು ಜನ ಗತಿಗೇಡಿಗಳ ಮೇಲೆ ದಿವಾಣೀದಾವೆಗಳು! ಗಿರಣಿಯವರ ದಾವೆಗಳಿಗಾಗಿ ಗೋಕಾಂವಿಯ ಕೋರ್ಟಿಗೆ ಬೇಸಗೆಯ ಬಿಡುವು ಕೂಡ ಸಂಪೂರ್ಣವಾಗಿ ಸಿಕ್ಕಲಿಲ್ಲ! ಅಂತರಾಳ ಮಂತ್ರಿಮಂಡಳದ ೨-೩ ತಿಂಗಳ ಹಾರಾಟ-ಜಿಗಿದಾಟಗಳು ಈ ಕೂಲಿಕಾರರ ತೊಡಕನ್ನು ಬಿಡಿಸಲು ಮನಸ್ಸುಮಾಡಲಿಲ್ಲ.

ಈ ಕೂಲಿಕಾರರಿಗೆ ಮೊದಲಿನಿಂದಲೂ ಕಾರ್ಯತಃ—ಕಷ್ಟ-ನಷ್ಟಗಳನ್ನು ಎದುರಿಸಿ—ಸಹಾಯಮಾಡಿದವರೆಂದರೆ ಸರ್ವಂಟ್ ಆಫ್ ಇಂಡಿಯಾ ಸೊಸೈಟಿಯ ಶ್ರೀ. ದಿನಕರ ದೇಸಾಯಿಯವರು. ಸಹಾನುಭೂತಿಯನ್ನು ತೋರಿಸಿದವರು ರಾಷ್ಟ್ರೀಯ ಪಕ್ಷದ ಮುಂದಾಳುಗಳು. ಈಗ ರಾಜಕೀಯ ಅಧಿಕಾರಿಗಳು ರಾಷ್ಟ್ರೀಯ ಪಕ್ಷದ ಕೈಯಲ್ಲಿ ಬರುವುದೆ ತಡ! ಮುಖ್ಯಮಂತ್ರಿಗಳು ತಮ್ಮ ಪಾರ್ಲಿಮೆಂಟರಿ ಸೆಕ್ರೆಟರಿಗಳಾದ ಗುಲ್‌ಝಾರಿಲಾಲ ನಂದಾ ಅವರನ್ನು ಕಳುಹಿ, ಗಿರಣಿಯ ಸಂಚಾಲಕರಿಗೂ ಕೂಲಿಕಾರರಿಗೂ ತೃಪ್ತಿಕರವಾಗಿ ಒಪ್ಪಂದವಾಗುವಂತೆ ಮಾಡಿದರು. ಪರಿಸ್ಥಿತಿಯನ್ನರಿತು ಗಿರಣಿಯವರೂ ತಮ್ಮ ಹೆಮ್ಮೆಯನ್ನು ಬದಿಗೆ ಸರಿಸಿದರು. ಕೂಲಿಕಾರರೂ ತಮ್ಮ ಹಟದ ಬಿಗಿಯನ್ನು ಇಲ್ಲವೆನ್ನುವಷ್ಟು ಸಡಲಿಸಿದರು. ಇಬ್ಬರಲ್ಲಿಯೂ ಸಹಾನುಭೂತಿ-ಸಹಕಾರವು ಬೆಳೆಯುವಂತಹ ಗೊತ್ತುಗಳನ್ನೊಳಗೊಂಡ ಒಡಂಬಡಿಕೆಯಾಯಿತು. ಕೂಲಿಕಾರರ ಮುಖಂಡರಾಗಿ ಬೆಳಗಾಂವಿಯ ದೇ. ಭ. ಜೋಶಿ ನಾರಾಯಣರಾಯರೂ, ಗಿರಣಿಯವರಿಗೆ ಹೊಣೆಗಾರರಾಗಿ ಮಿ. ಬ್ರಾಡ್ಲೆಯವರೂ ಒಡಂಬಡಿಕೆಯಂತೆ ತಪ್ಪದೆ ನಡೆದುಕೊಳ್ಳಲಾಗುವುದೆಂದು ಒಪ್ಪಿಗೆಯೋಲೆ ಬರೆದುಕೊಟ್ಟಿದ್ದಾರೆ. ಸುಸೂತ್ರವಾಗಿ ಕೆಲಸಕ್ಕೆ ಪ್ರಾರಂಭವಾಗಿದೆ.

ಇದೆಲ್ಲವನ್ನೂ ಕಣ್ಣಿಟ್ಟು ವಿಮರ್ಶಿಸಿ ನೋಡಿದಲ್ಲಿ, ಹಿಂದುಸ್ಥಾನದಲ್ಲಿಯ ಜಾತಿ-ಜಾತಿಗಳಲ್ಲಿಯ ಜಗಳಗಳೂ, ಪಕ್ಷ-ಪಕ್ಷಗಳಲ್ಲಿಯ ಕಾದಾಟಗಳೂ, ಸಹಾನುಭೂತಿಯಿಂದ ಒಡಂಬಡಿಕೆ ಮಾಡಬಲ್ಲ ಅಧಿಕೃತ ಮಧ್ಯಸ್ಥರಿಲ್ಲದುದರಿಂದಲೆ ಸ್ಥಿರವಾಗಿ ಬಾಳಿಕೊಂಡಿವೆಯೆಂಬ ಸಂಗತಿ ಎಂತಹ ಸಾಮಾನ್ಯರಿಗೂ ತಿಳಿಯಬಹುದಾಗಿದೆ. ಕೈನಡೆಯುವವರ ಸಹಾನುಭೂತಿಯೆ ಬಡವರಿಗೆ ಬಲ! ಆ ಬಲಕ್ಕೆ ಜಯವು ದೊರೆತಾಗಲೇ ದೇಶದಲ್ಲಿಯ ಅಶಾಂತಿಗೆ ಅರ್ಧಚಂದ್ರ.

## ಮುಂಬಯಿ ಸರಕಾರದ ಅಂದಾಜುಪತ್ರಿಕೆ

ಈ ಪತ್ರಿಕೆಯನ್ನು ಒಂದು ಮಾತಿನಲ್ಲಿ ಬಣ್ಣಿಸುವುದಾದರೆ, ಅದು 'ಮುಂಜಾಗರೂಕತೆಯ ಪತ್ರಿಕೆ' ಎಂದು ಹೇಳಬಹುದು. ಹೆಚ್ಚಿನ ಕರಭಾರವಿಲ್ಲ; ಶಿಕ್ಷಣ, ಸ್ಥಳೀಯ ಸಂಸ್ಥೆಗಳು, ರೈತರ ಪರಿಸ್ಥಿತಿ, ಪ್ರಾಂತದ ಉದ್ಯೋಗಗಳು ಮೊದಲಾದುವುಗಳ ಪರೀಕ್ಷೆಯನ್ನು ತಜ್ಞರಿಂದ ನಡೆಯಿಸದೆ, ಅವುಗಳಬಗ್ಗೆ ಹೆಚ್ಚಿನ ವೆಚ್ಚ ಮಾಡಲಾಗುವುದಿಲ್ಲ. ಆದರೂ ಕಾಂಗ್ರೆಸ್ ಚುನಾವಣೆಪತ್ರಿಕೆಯ ಘೋಷಣೆಯನ್ನನುಸರಿಸಿ ಹಲಕೆಲವು ರಾಷ್ಟ್ರಪೋಷಕ ವಿಭಾಗಗಳಿಗಾಗಿ ತಕ್ಕಮಟ್ಟಿಗೆ ಹಣವನ್ನು ಕಾಯ್ದಿಡಲಾಗಿದೆ. ೧ ವರ್ಷಕ್ಕಿಂತ ಹಳೆಯದಾದ ಕಂದಾಯದ ಬಾಕಿಯನ್ನು ಸೂಟುಬಿಡುವುದಕ್ಕಾಗಿ ೫ ಲಕ್ಷ, ಕಂದಾಯವು ಬಹಳ ಭಾರವಾಗಿರುವಲ್ಲಿ ಶಾಶ್ವತವಾಗಿ ಸೂಟುಬಿಡಲು ೫ ಲಕ್ಷ, ೩ ವಿಭಾಗಗಳಲ್ಲಿ ಮದ್ಯಪಾನಪ್ರತಿಬಂಧಕ್ಕಾಗಿ ೨ ಲಕ್ಷ, ಹುಲ್ಲುಬನ್ನಿಯನ್ನು ಪೂರ್ತಿಯಾಗಿ ತೆಗೆದುಹಾಕುವುದಕ್ಕಾಗಿ ೫ ಲಕ್ಷ, ಹಳ್ಳಿಗಳ ನೀರಿನ ಪೂರೈಕೆಗಾಗಿ ೧೦ ಲಕ್ಷ, ಗ್ರಾಮೋದ್ಯೋಗಗಳ ಬೆಳೆವಣಿಗೆಗಾಗಿ ೧॥ ಲಕ್ಷ, ಹರಿಜನರಿಗೆ ಶಿಷ್ಯವೃತ್ತಿಗಳೆಂದು ೪೦ ಸಾವಿರ, ಪ್ರೌಢಶಿಕ್ಷಣ ವ್ಯಾಯಾಮಶಿಕ್ಷಣಗಳಿಗಾಗಿ ೨ ಸಾವಿರ, ನಡೆಯುವ ವರ್ಷದ ಕಂದಾಯದಲ್ಲಿಯ ಕೊರೆ ತುಂಬಲು ೧೭॥ ಲಕ್ಷ—ಈ ತೆರನಾಗಿ ಹಣವನ್ನು ತೆಗೆದಿಡಲಾಗಿದೆ.

CC-0. Jangamwadi Math Collection. Digitized by eGangotri

ಕರಭಾರಪೀಡಿತವಾದ ಈ ಪ್ರಾಂತಕ್ಕೆ ಹೆಚ್ಚಿನ ಕರಗಳ ಹೊರೆಯಿಲ್ಲವೆಂಬುದೊಂದು ಈ ಪತ್ರಿಕೆಯ ಸುಲಕ್ಷಣವು. ಇದಕ್ಕಿಂತ ಹೆಚ್ಚಿನ ಧನಸಹಾಯವನ್ನು ರಾಷ್ಟ್ರಪೋಷಕ ಕಾರ್ಯಗಳಿಗಾಗಿ ಮಾಡಬಹುದಾಗಿತ್ತೆಂದು ಕಾಂಗ್ರೆಸ್-ವಿಭಿನ್ನ ಪಕ್ಷಗಳು ಹೇಳುವುದರಲ್ಲಿ ಹುರುಳಿಲ್ಲದೆ ಇಲ್ಲ. ಅತ್ಯಲ್ಪ ಕಾಲಾವಧಿ, ಬರಿಯದಾದ ಪ್ರಾಂತಿಕ ಬೊಕ್ಕಸ—ಈ ಮೊದಲಾದ ಲಕ್ಷಣಗಳು ಸಾಮಾನ್ಯವಿದ್ದೂ, ಪಂಜಾಬ-ದಂತಹ 'ಅ-ರಾಷ್ಟ್ರೀಯ' ಮಂತ್ರಿಮಂಡಲವು—೨೫ ಲಕ್ಷ ರೂ. ಯಷ್ಟು ತೆರಿಗೆಯನ್ನು ಸೂಟು ಬಿಟ್ಟು, 'ವಿಧಾಯಕ ವಿಭಾಗ'ಗಳಿಗಾಗಿ ೬೦ ಲಕ್ಷ ರೂ. ಯನ್ನು ತೆಗೆದಿಡುವುದು ಸಾಧ್ಯವಾಯಿತಲ್ಲ—ಎಂದು 'ಸರ್ವಂಟ ಆಫ್ ಇಂಡಿಯ'ವು ಪ್ರಶ್ನಿಸುತ್ತದೆ.

ಕಾಂಗ್ರೆಸ್ ಆಧಿಪತ್ಯದಲ್ಲಿದ್ದ ಮದ್ರಾಸ, ಮಧ್ಯಪ್ರಾಂತ, ಇ. ಸರಕಾರಗಳು ೧—೧॥ ಕೋಟಿಯಷ್ಟು ಹೊಸ ಸಾಲವನ್ನು ತೆಗೆದು, ಪ್ರಾಂತೀಯ ಆರ್ಥಿಕ ಅಭಿವೃದ್ಧಿಯ ಕಾರ್ಯಕ್ರಮವನ್ನು ಕೈಕೊಂಡಿದ್ದಾರೆಂಬುದನ್ನೂ ಮರೆಯುವಂತಿಲ್ಲ. ಆದರೆ ಇದು ಲಾಕ್ಷಣಿಕ ಪತ್ರಿಕೆ (Token Budget), ಮುಂದೇನು ಮಾಡುತ್ತೇವೆಂಬುದನ್ನು ನೋಡಿರಿ—ಎಂದು ಅರ್ಥಮಂತ್ರಿಗಳು ಹೇಳಿದುದನ್ನು ನಾವು ನಂಬುತ್ತೇವೆ. ಎಂದರೆ ಮುಂದಿನ ವರ್ಷದ ಅಂದಾಜುಪತ್ರಿಕೆ ಬಹುಮಹತ್ತ್ವದ್ದಾಗುವುದೆಂದು ತಿಳಿಯಲಡ್ಡಿ ಇಲ್ಲ. ಹಾಗಿದ್ದಲ್ಲಿ, ಆರ್ಥಿಕ-ಶೈಕ್ಷಣಿಕ-ಔದ್ಯೋಗಿಕ ಮುಂತಾದ ಯಾವ ಒರೆಯನ್ನಿಟ್ಟುಕೊಂಡರೂ ಹಿಂದುಳಿದ ಸೀಮೆಗಳಲ್ಲೆಲ್ಲ ತೀರ ಹಿಂದುಳಿದುವುಗಳೆಂದೆನಿಸುವ ಈ ನಾಲ್ಕು ಉತ್ತರಕರ್ನಾಟಕ ಜಿಲ್ಲೆಗಳ ಕಾರ್ಯಕರ್ತರು ತಮ್ಮ ನಾಡಿನ ಕೊರತೆಗಳನ್ನೆಲ್ಲ ಸಾಧಾರವಾಗಿ ಸಂಗ್ರಹಿಸಿ, ಮಂತ್ರಿಮಂಡಲದ ವಿಚಾರಕ್ಕೊಪ್ಪಿಸುವುದು ಅತ್ಯಗತ್ಯದ ಮಾತಾಗಿದೆ. ಅಲ್ಲದೆ ಈಗಿನ ಅಂದಾಜುಪತ್ರಿಕೆಯಲ್ಲಿಯ ಚೂರುಚಾರು ಲಾಭವು ಕರ್ನಾಟಕಕ್ಕೆ—ಅದರ ಸ್ಥಾನಮಾನದ ದೃಷ್ಟಿಯಿಂದ—ಒದಗುವಂತೆ ನೋಡಿಕೊಳ್ಳುವುದೂ ಅಷ್ಟೇ ಮಹತ್ತ್ವವುಳ್ಳದ್ದಾಗಿದೆ.

## ಅಂದಮಾನದ ಕರುಣಕ್ರಂದನ

ಜುಲೈ ತಾ. ೨೦ನೆಯ ದಿನ ಅಂದಮಾನ ರಾಜಬಂದಿಗಳ ಬೇಡಿಕೆಗಳನ್ನೊಳಗೊಂಡ ನಿರೂಪವು ಹಿಂದುಸ್ಥಾನದ ಸರಕಾರಕ್ಕೆ ತಲುಪಿತು. ೧. 'ನಜರಕೈದಿ'ನಲ್ಲಿರುವ ಎಲ್ಲ ಸೆರೆಯಾಳುಗಳನ್ನೂ ರಾಜಕೀಯ ಅಪಾದನೆಗಾಗಿ ಶಿಕ್ಷೆ ಹೊಂದಿದವರನ್ನೂ ಬಿಡುಗಡೆ ಮಾಡಬೇಕು. ೨. ಎಲ್ಲ ದಬ್ಬಾಳಿಕೆಯ ಕಾನೂನುಗಳನ್ನೂ ಸ್ಥಾನಬದ್ಧತೆಯ ನಿರ್ಬಂಧಗಳನ್ನೂ ತೊಡೆದುಹಾಕಬೇಕು. ೩. ಅಂದಮಾನದಲ್ಲಿ ಈಗ ಇರುವ ಎಲ್ಲ ರಾಜಬಂದಿಗಳನ್ನೂ ಹಿಂದುಸ್ಥಾನಕ್ಕೆ ಮರಳಿ ತರಬೇಕಲ್ಲದೆ, ಮತ್ತೆ ಯಾರನ್ನೂ ಅಂದಮಾನಕ್ಕೆ ಕಳಿಸಿಕೊಡಬಾರದು. ಈ ಬೇಡಿಕೆಗಳಿಂದ ಇವುಗಳ ವ್ಯಾಪಕ ಸ್ವರೂಪವು ಗೊತ್ತಾಗುವುದು. ಜುಲೈ ೨೩ಕ್ಕೆ ಸರಕಾರದವರು ತಮ್ಮ ಅಮಾನ್ಯತೆಯನ್ನು ರಾಜಬಂದಿಗಳಿಗೆ ತಿಳಿಸಿದರು. ೨೪ ತಾರೀಖಿನಿಂದ ೧೮೭ ರಾಜಬಂದಿಗಳು ನಿರಶನವ್ರತವನ್ನು ಅಂಗೀಕರಿಸಿದರು. ತಾ. ೩೦ ರ ವರೆಗೂ ಈ ಸುದ್ದಿಯು ವೃತ್ತಪತ್ರಗಳಿಗೆ ಮುಟ್ಟಲಿಲ್ಲ.

ವೈಸ್ರಾಯರು ಮತ್ತು ಅ. ಭಾ. ರಾಜಬಂದಿಸಹಾಯಕ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ. ಸಕ್ಸೆನಾ ಇವರ ನಡುವೆ ನಿರಶನಸತ್ಯಾಗ್ರಹದ ಬಗ್ಗೆ ನಡೆದ ಪತ್ರವ್ಯವಹಾರವು ನಿಷ್ಪ್ರಯೋಜಕವಾಗಿದೆ.

ಅಂದಮಾನದ ಗಾಳಿ-ನೀರುಗಳು ಹಿಂದೀಬಂದಿಗಳಿಗೆ ತೀರ ಅನಾರೋಗ್ಯಕರವಾಗಿವೆ. ೧೯೩೩ರಿಂದ ಈ ವರೆಗಿನ ಅಲ್ಪಾವಧಿಯಲ್ಲಿ ೮ ಜನ ರಾಜಬಂದಿಗಳು ಕ್ಷಯರೋಗಿಗಳಾದುದರಿಂದ, ಅವರನ್ನು ಹಿಂದುಸ್ಥಾನಕ್ಕೆ ತರಬೇಕಾಯಿತು. ೧೯೩೬ರಲ್ಲಿ ಅಸೆಂಬ್ಲಿಸದಸ್ಯರ ಪರವಾಗಿ ಅಂದಮಾನಕ್ಕೆ ಹೋಗಿಬಂದ ಸರ ಮಹಮ್ಮದ ಯಾಮಿನಖಾನ ಮತ್ತು ರಾಯಜಾದಾ ಹಂಸರಾಜ ಅವರು ಕಂಡುದಿದು: ಅಲ್ಲಿಯ ೩೦೦ ಜನ ರಾಜಬಂದಿಗಳಲ್ಲಿ ೨೫ ಜನರು ಹಾಸಿಗೆ ಹಿಡಿದಿದ್ದರು; ೭೫ ಜನರು ಅರ್ಧಗುಣ ಹೊಂದಿದವರಾಗಿ ಶುಶ್ರೂಷೆ ಹೊಂದುತ್ತಿದ್ದರು. ಎಂದರೆ೧/೩ ಜನರು ರೋಗಿಗಳಾಗಿದ್ದರು.

ಅಂದಮಾನದಲ್ಲಿ ವರ್ಷದಲ್ಲಿ ೯ ತಿಂಗಳು ಮಳೆಗಾಲ. ಅಲ್ಲಿಯ ನೀರಿನ ಪರಿಣಾಮವಾಗಿ ಮಲಾವರೋಧ-ಡಿಸ್ಪೆಪ್ಸಿಯಾ ರೋಗಗಳು ಎಂತೆಂತಹರನ್ನೂ ಬಾಧಿಸುವವು. ಇವಕ್ಕೆ ಪ್ರತಿಕ್ರಿಯೆಯನ್ನು ಮಾಡಬಲ್ಲ ಹಣ್ಣುಹಂಪಲಗಳಾಗಲಿ, ಕಾಯಿಪಲ್ಲೆಗಳಾಗಲಿ ದೊರಕುವುದಿಲ್ಲವೆಂದೆ ಹೇಳಬಹುದು. ಆಟಪಾಟಗಳ ಸೌಲಭ್ಯಗಳೂ ಅಷ್ಟಕ್ಕಷ್ಟೆ.

ಬಂಗಾಲ ವಿಧಿಮಂಡಲದಲ್ಲಿ ಈ ಪರಿಸ್ಥಿತಿಯ ಚರ್ಚೆ ನಡೆದಾಗ, ಗೃಹಮಂತ್ರಿಗಳಾದ ಸರ್ ನಜಿಮುದ್ದೀನರು ಹೇಳೀದುದೇನೆಂದರೆ: ಕೊಲೆ, ಕೊಲೆಯ ಪ್ರಯತ್ನ, ಸಶಸ್ತ್ರ

CC-0. Jangamwadi Math Collection. Digitized by eGangotri

ದರೋಡೆ ಮೊದಲಾದ ಆರೋಪಗಳಿಗಾಗಿ ಶಿಕ್ಷೆಹೊಂದಿದವರನ್ನು ಕರಿನೀರಿಗೆ ಕಳಿಸಲಾಗಿದೆ. ಇದನ್ನು ನಂಬುವುದು ಕಷ್ಟ. ಸುಮಾರು ೩೦ ಜನ ಅಂದಮಾನಬಂದಿಗಳ ಮೇಲಿನ ಆರೋಪವೇದರೆ, ಅವರ ಮನೆಯಲ್ಲಿ ಕೆಲವು ಶಸ್ತ್ರಗಳು ಸಿಕ್ಕವು! ಹೆರರ ಮನೆಯಲ್ಲಿ ಶಸ್ತ್ರಗಳನ್ನಿರಿಸಿ ಅವರನ್ನು ತೊಂದರೆಗೀಡು ಮಾಡಿದ ಪೋಲೀಸರ ಕೈಗೊಂಬೆಗಳಿಗೆ ಹೈಕೋರ್ಟಿನವರು ಶಿಕ್ಷೆ ವಿಧಿಸಿದ ವಾರ್ತೆಗಳನ್ನು ನಾವು ಓದಿಯೇ ಇದ್ದೇವೆ.

ಇಲ್ಲಿಯೊಂದು ಉದಾಹರಣೆಯನ್ನು ತಕ್ಕೊಳ್ಳೋಣ. ಶ್ರೀ. ಕಾಲೀಮೋಹನ ಬಾನರ್ಜಿಯವರು ೧೯೩೩ ರಲ್ಲಿ ಒಮ್ಮೆ ಶಾಲೆಗೆ ಹೋಗುತ್ತಿದ್ದಾಗ, ಹಾದಿಯಲ್ಲಿ ಸೆರೆಹಿಡಿಯಲ್ಪಟ್ಟರು. ಹಿಜಲಿ, ಬಹರಮಪುರ ಮೊದಲಾದಕಡೆ ಬಂಧಿಸಿಡಲ್ಪಟ್ಟರು. ಅಲ್ಲಿಯ ಕಾರಾಗೃಹಗಳ ನಿಯಮಗಳನ್ನು ಮುರಿದುದಕ್ಕಾಗಿ ಮತ್ತೆ ಕೆಲ ಶಿಕ್ಷೆಗಳಾಗಿ ಕೊನೆಗೆ ಕರಿನೀರಿಗೆ ಕಳಿಸಲ್ಪಟ್ಟರು. ಅಂದಮಾನದ ಬಂದಿಗಳಲ್ಲಿ ಹಲವರ ಮೇಲಿನ ಆರೋಪಗಳು ಇಂತಹವೇ ಆಗಿವೆ.

ಅಂದಮಾನದ ಬಂದಿಗಳ ಬೇಡಿಕೆಯಲ್ಲಿ 'ಸ್ಥಾನಬದ್ಧರ ಬಿಡುಗಡೆ'ಯೂ ಮುಖ್ಯವಾದುದಾಗಿದೆ. 'ಕ್ರಾಂತಿಕಾರರು ಶಾಂತಿಮಾರ್ಗವನ್ನು ಅವಲಂಬಿಸುವರೆಂದು ನಮಗೆ ಮನದಟ್ಟಾದ ಮರುದಿನವೇ ಅವರನ್ನು ಬಿಟ್ಟುಕೊಡುವೆ' ವೆಂದು ಸರ್ ನಜೀಮುದ್ದೀನರು ಬಡಾಯಿ ಹೊಡೆದರು. ಸುಭಾಷಚಂದ್ರ ಬೋಸರು ಅಂತಹ ಹೊಣೆಯನ್ನು ಹೊರುವುದಾಗಿ ಸಾರ್ವಜನಿಕವಾಗಿ ಘೋಷಿಸಿದ್ದಾರೆ. ಅಂದಮಾನದ ಬಂದಿಗಳಾಗಲಿ, ಸ್ಥಾನಬದ್ಧರಾಗಲಿ ಈರೀತಿ ಕಾರಾಗೃಹಗಳಲ್ಲಿ ಕೊಳೆಯುವುದರ ಶ್ರೇಯಸ್ಸು ಬಂಗಾಲದ ಪೋಲೀಸರ ಕಾಯಕಕ್ಕೇ ಸಲ್ಲುತ್ತಿದೆಯೆಂಬ ಮಾತನ್ನು ದೀನಬಂಧು ಅಂಡ್ರೂಜರವರು ಘಂಟಾಘೋಷವಾಗಿ ಹೇಳಿದ್ದಾರೆ.

"The whole process of detention without trial is rotten to the core. The innocent suffer with the guilty. The police force has every inducement to bribery and corruption and the corruption of the Bengal polcie is notorious!"

ಸರಕಾರದ ಕರ್ತವ್ಯವು ಸ್ಪಷ್ಟವಿದೆ. ಬಂಗಾಲ ಮಂತ್ರಿಮಂಡಲವು ಮುಸಲ್ಮಾನರ ಪಕ್ಷಾಧಿಕ್ಯದಿಂದಲೂ ಸರಕಾರದ ಅನುವರ್ತಿತ್ವದಿಂದಲೂ 'ಹಿಂದೂ' ಗಳಾದ ರಾಜಬಂದಿಗಳನ್ನು ತಾತ್ಸಾರದಿಂದ ಕಾಣುತ್ತದಾದರೂ, ಅದು ಲೋಕನಿಯುಕ್ತವೆನಿಸುವುದರಿಂದ ದೇಶಕ್ಕೆ ದೇಶವೇ ಏಕಕಂಠದಿಂದ ಕೂಗಿಹೇಳುತ್ತಿರುವುದನ್ನು ಅಲ್ಲಗಳೆದರೆ, ಊಹಿಸಲಾಗ[illegible] ಭೀಕರ ಪರಿಣಾಮವುಂಟಾಗುವುದರಲ್ಲಿ ಸಂದೇಹವಿಲ್ಲ.

## ಚೀನ-ಜಪಾನ ಸಂಗ್ರಾಮ

ಉತ್ತರ ಚೀನಪ್ರಾಂತದ ಸಮಾಚಿನ ಸಮೃದ್ಧತೆ[illegible] ಜಪಾನದ ಈಚಿಯ ಏರಾಟದ ಗುಟ್ಟಾಗಿದೆ. ಜಪಾ[illegible] ಸಾಮ್ರಾಜ್ಯವಿಸ್ತಾರದ ಮಹತ್ವಾಕಾಂಕ್ಷೆಯಲ್ಲಿ ಮಂಚೂ[illegible] ಯವನ್ನು ಆಕ್ರಮಿಸುವುದು ಪ್ರಧಾನ ಸ್ಥಾನವ[illegible] ಪಡೆದಿದ್ದಿತು. ಕಲ್ಲಿದ್ದಲಿ, ಕಬ್ಬಿಣ, ಪೆಟ್ರೋಲ್—ಎಂದ[illegible] ಆಧುನಿಕ ಯುದ್ಧಸಾಮಗ್ರಿಯ ತ್ರಿತಯವು ಅಲ್ಲಿ ವಿಪು[illegible] ವಾಗಿದೆ. ಜಗತ್ತಿನಲ್ಲಿ ಜಪಾನ ಸಾಮ್ರಾಜ್ಯವನ್ನು ಹಬ್ಬಿ[illegible] ಇನ್ನೂ ಸಂಪನ್ನವಾದ ಭೂಮಿ ಬೇಕು. ಅದು ಉತ್ತ[illegible] ಚೀನಪ್ರದೇಶವಾಗಿದೆ.

ಕಾಂಟುಂಗಿನ ಕಲ್ಲಿದ್ದಲಿಯ ಕಣಿಗಳೊಂದರಿಂ[illegible] ಇನ್ನೂ ೩೦ ವರ್ಷಗಳ ವರೆಗೆ ಅವಿಚ್ಛಿನ್ನವಾಗಿ ಪ್ರತಿ[illegible] ೧೦೦೦ ಟನ್ನಿನಂತೆ ಕಲ್ಲಿದ್ದಲಿಯನ್ನು ತೆಗೆಯಬಹುದಾಗಿ[illegible] ಮಾದರಿಗಾಗಿ ಇದನ್ನು ಹೇಳಲಾಗಿದೆ. ಶಾನ್ಸಿಯ ಕಬ್ಬಿ[illegible] ಕಣಿಗಳು ಜಗತ್ತಿನಲ್ಲಿಯೆ ಹಳೆಯವೆನಿಸುವ ಕಣಿಗಳಾಗಿ[illegible] ಈಗಲೂ ತುಂಬ ಕಬ್ಬಿಣವನ್ನು ಕೊಡುತ್ತಿವೆ. ಬರಿ ಖನಿ[illegible] ಪ್ರದಾರ್ಥಗಳು ಮಾತ್ರವಲ್ಲ, ಹ್ಯಾಂಗ್‌ಹೋವಿನ ದೊ[illegible] ಬೈಲು ಮತ್ತು ವೀಹೊವಿನ ಕೊಳ್ಳ ಇವು ಜಗತ್ತಿನಲ್ಲಿ[illegible] ಫಲವತ್ತಾದ ಭೂಮಿಗಳೆಂದು ಹೆಸರಾಗಿವೆ. ಸಾವಿರಾ[illegible] ವರ್ಷಗಳಿಂದ ಕಿಕ್ಕಿರಿದು ತುಂಬಿ ಹೊರಚೆಲ್ಲುತ್ತಿ[illegible] ಚೀನದ ಜನಸಂಖ್ಯೆಯನ್ನು ಪೋಷಿಸಲು ಈ ಸೀಮೆ[illegible] ಸಮೃದ್ಧಿಯೇ ಕಾರಣವಾಗಿದೆ. ಇನ್ನೊಂದು ಉದಾಹ[illegible] ೧೯೩೫ ರಲ್ಲಿ ೧೪,೨೪೫,೭೩೭ ಡಾಲರ ಬೆಲೆಯ[illegible] ೧೯,೯೮೭,೦೪೦ ಕಿಲೋಗ್ರಾಮ್ ಉಣ್ಣೆಯನ್ನು ಚೀನ[illegible] ಪರದೇಶಗಳಿಗೆ ಕಳಿಸಿದುದರಲ್ಲಿ ೧೦೦ಕ್ಕೆ ೮೬ ರಷ್ಟು ಉತ್ತ[illegible] ಚೀನದ್ದೇ ಆಗಿತ್ತು! ಮತ್ತದೇ ವರ್ಷ ಇಡಿ ಚೀನ[illegible] ಹೊರಕ್ಕೆ ಕಳಿಸಿದ ತತ್ತಿಗಳಲ್ಲಿ ಅರ್ಧದಷ್ಟು ಇಲ್ಲಿ[illegible] ಆಗಿದ್ದುವು!

ಇಂತಹ ಸೀಮೆಯನ್ನು ಸೆಳೆದುಕೊಳ್ಳಲು ಜಪಾನ[illegible] ಅಮೇರಿಕೆ, ರಶ್ಯ, ಬ್ರಿಟನ್ನುಗಳ ಕ್ರೋಧವನ್ನೂ [illegible] ಸಲು ಸನ್ನದ್ಧವಾಗಿದೆ. ಚೀನದ ಅಂತಸ್ಥ ಜರ್ಜರ[illegible] ಇದಕ್ಕೆ ಅನುಕೂಲವಾಗಿದೆ. ಆದರೂ ದಣ್ಣಾಯಕ[illegible] ಚಿಯಾಂಗ್-ಕೈ-ಶೇಕನು ಸಕಲಪಕ್ಷಗಳ ಐಕಮತ್ಯ[illegible] ಇದೇ ಸಂದುಕಟ್ಟಿನಲ್ಲಿ ಸಾಧಿಸಿ, ಜಪಾನವನ್ನು ತಡೆಗ[illegible] ಉಜ್ಜುಗಿಸಿದ್ದಾನೆ.

CC-0. Jangamwadi Math Collection. Digitized by eGangotri

# ಪರಿವಿಡಿ




## UNEMPLOYMENT

**OF EDUCATED MIDDLE CLASSES**

is an important item in the news today

*Send a Post Card and let us tell you*

HOW TO GIVE YOUR BOY
A START IN A BUSINESS
OR PROFESSION!

**BOMBAY BARODA**
ASSURANCE CO., LTD.

ESTABLISHED 1925: HEAD OFFICE, BARODA

Wanted immediately Inspectors, Organisers, Chief Agents and Dist. Agents, on most lucrative terms of Salary and Commission, throughout Karnataka and Nizam State.





ಈ ಕಷ್ಟದಿಂದ ಹ್ಯಾಗೆ ಪಾರಾಗಲಿ

## ಸ್ವಾಮಿಗಳ ಅದ್ಭುತ ಭವಿಷ್ಯ

ಗ್ರಹಗಳಿಗೆ ಅಧಿಪತಿಯಾದ ಸೂರ್ಯನನ್ನೇ ಬಾಧಿಸುವ ರಾಹುವು ಮನುಷ್ಯನನ್ನು ಬಿಟ್ಟೀತೇ? ಅತ್ಯುತ್ತಮವಾದ ಸುಖ ಮತ್ತು ಬಹು ದಾರುಣವಾದ ಕಷ್ಟಗಳು ಈ ಪ್ರಬಲ ಗ್ರಹದಿಂದ ಉಂಟಾಗುತ್ತವೆ:—



ಹುಟ್ಟಿದ ಘಳಿಗೆ-ದಿನ-ತಿಂಗಳು-ವರುಷಗಳನ್ನು ತಿಳಿಸಿದಲ್ಲಿ ನಿಮ್ಮ ಜೀವನದಲ್ಲಿ ಉಂಟಾಗುವ— (೧) ಅಟಾವಳ ದ್ರವ್ಯಯೋಗ (೨) ಆಯುಸ್ಸು (೩) ಆರೋಗ್ಯ (೪) ವಿದ್ಯೆ (೫) ಸಂತಾನ (೬) ಕಳತ್ರ (೭) ಕಸಬು ಮುಂತಾದ ಹಲವು ವಿಷಯಗಳ ಸಂಗ್ರಹವನ್ನು ಬರೆಯುವುದಲ್ಲದೇ ಪ್ರಬಲವಾದ ರಾಹುವಿನಿಂದ ನಿಮಗೂ ನಿಮ್ಮ ಮಕ್ಕಳಿಗೂ ಉಂಟಾಗುವ ಸುಖ ದುಃಖಗಳನ್ನು ಒಂದೇ ರೂಪಾಯಿಗೆ ವಿ ಪಿ ಮೂಲಕ ಕಳುಹಿಸುತ್ತೇವೆ. ವಿ. ಪಿ ಚಾರ್ಜು ಐದು ಆಣೆಯ ಸ್ಟ್ಯಾಂಪುಗಳನ್ನು ಮುಂಗಡವಾಗಿಯೇ ಕಳುಹಿಸಬೇಕು ಸ್ಟ್ಯಾಂಪುಗಳಿಲ್ಲದ ಆರ್ಡರುಗಳನ್ನು ಖಂಡಿತವಾಗಿಯೂ ಗಮನಿಸುವುದಿಲ್ಲ

**The Acquarian Occult House,**
Plot, 399. Co-operative House. Telang Road.
G. I. P. MATUNGA BOMBAY 19.


CC-0. Jangamwadi Math Collection. Digitized by eGangotri

EVIDENCE OF SECURITY & STABILITY

*It pays you to represent*

THE BOMBAY LIFE ASSURANCE Co. Ltd. Estd 1910

FIGURES THAT SPEAK FOR THEMSELVES

Assets Rs. 80,66,600

| | |
|---|---|
| Total Assets Over | Rs. 80,00,000 |
| L. Fund Over | Rs. 68,00,000 |
| Premium Income Over | Rs. 22,54,000 |
| Interest Income | Rs. 3,16,000 |
| Claims Paid | Rs. 5,75,000 |

Total Claims Paid Over
Rs. 38,50,000
Total Business In Force Over
Rs. 4,42,51,000

*Total Business In Force*
4,42,51,200

BRANCHES AT:
P. B. 337, Mount Road, Madras; Visveswarapuram Circle, Bangalore City; Soumyalayam Puthiyara, Calicut; Car Street, Mangalore; Udipi, S. India; Charni Road, Bombay No. 4.

*Apply to:*

KOCHIKAR BROTHERS *Madras Branch Secretari*

CC-0. Jangamwadi Math Collection. Digitized by eGangotri

ಪ್ರಭಾತಕೃತಿ



" ಸಂತ ತುಕಾರಾಮ "

( ಕಾಶಿ–ಮಹಾದೇವರ ಭೂಮಿಕೆಯಲ್ಲಿಯ ಬಾಲನಟರು )

CC-0. Jangamwadi Math Collection. Digitized by eGangotri



ಸಂಪುಟ ೧೫ ಆಷಾಢ ವದ್ಯ ನವಮಿ ೧—೮—೬೭ ಸಂಚಿಕೆ ೮

# ★ ಬಾಳಿನ ಹುರುಳು-ತಿರುಳುಗಳು ★

( ವಿಲ್ ಡ್ಯೂರಂಟ್ ಅವರ ಓಲೆಯು ಮುಂದುವರಿದು ಮುಗಿದಿದೆ. )

ಸಂಗ್ರಾಹಕರು: **ಬಿ. ಪಾರ್ಥಸಾರಥಿರಾಯರು**

ವೈಯಕ್ತಿಕತೆಗಿಂತಲೂ ವ್ಯಾಪಕವಿರುವಂತಹ ಯಾವುದೇ ಪ್ರಕಾರದ ಜೀವನವಿರಲಿ!— ಅದರೊಂದಿಗೆ ಆತ್ಮೀಯತೆಯನ್ನು ಬಳೆಯಿಸಬೇಕು! ತನ್ನಲ್ಲಿದ್ದ ಶಕ್ತಿಗೆಲ್ಲಕ್ಕೂ ಸಾಕು--ಸಾಕೆನಿಸುವಷ್ಟು ಉದ್ಯೋಗದ ಹೊರೆಯನ್ನು ಮೈಮೇಲೆ ಹಾಕಿಕೊಳ್ಳಬೇಕು! ಇದೇ ಸುಖಸಮಾಧಾನಗಳ ಮೂಲಮಂತ್ರ. ಪ್ರತಿಯೊಂದು ಸಂಗತಿಯಲ್ಲಿಯ ಮರ್ಮವನ್ನೂ ಆನಂದವನ್ನೂ ತಿಳಿದುಕೊಳ್ಳುವವನಿದ್ದಲ್ಲಿ, ಮಾನವನ ಸುಖಕ್ಕೆ ಸೀಮೆಯೆ ಇಲ್ಲವೆನಿಸುವುದು!

**ಪ್ರಿಯ ಮಿತ್ರಾ!**

ಇನ್ನೊಂದು ಮಾತು: ಪ್ರಣಯವನ್ನು ಕುರಿತು ನೀನು ಇಷ್ಟೊಂದು ಉದ್ವೇಗದಿಂದ ಮಾತನಾಡುತಿರುವುದಕ್ಕೆ ಕಾರಣವೇನು? ಪ್ರಣಯದ ಮೂಲದಲ್ಲಿ ಮೂಗು ಮುದುರಿಸಲು ಹಚ್ಚುವಂತಹ—ಹೇಸಿ 'ದೇಹಧರ್ಮ'ವಿರುವುದೇನೋ ನಿಜ! ಆದರೆ ಅನೇಕ ರಮಣೀಯ ಭಾವನೆಗಳ ಹುಟ್ಟು ಪ್ರಣಯದಲ್ಲಿಯೆ ಇದೆಯೆಂಬುದನ್ನು ಯಾರೂ ಎಂದೂ ಮರೆತು ನಡೆಯಲಾಗದು. ಗಿಡದ ಬೇರು-ಬೊಡ್ಡೆಗಳು ಕೊಳಕುಮಣ್ಣಿನ ನೆಲದಲ್ಲಿ ನೆಟ್ಟುಕೊಂಡಿರುವುವಾದರೂ ಅದರ ಕೊಂಬೆ-ರೆಂಬೆಗಳಲ್ಲಿ, ಕಂಪನ್ನು ಹರಿಸುವ ಮೆಲುಮೆಯ್ಯ—ಹೂಗಳು ಅರಳಿ ನಿಲ್ಲುತ್ತವೆ; ಪ್ರಣಯದ ಬಗೆಯೂ ಹೀಗೆಯೆ! ಕಾಮಪ್ರೇರಣೆಯ ಬುಡದಲ್ಲಿ ಕೇವಲ ದೇಹವಾಸನೆಯ ಕಾತರವು ಕಂಡುಬರಬಹುದಾದರೂ, ಆ ಪ್ರೇರಣೆಯ ಕೊಟ್ಟಕೊನೆಯು ನಿಸ್ಸೀಮವಾದ ಭಕ್ತಿಯಲ್ಲಿಯೂ, ಸೌಜನ್ಯದಲ್ಲಿಯೂ ಪರಿಪಾಕಗೊಳ್ಳುತ್ತದೆ. ನಾನೀಗ ಕಾವ್ಯ-ನಾಟಕಗಳಲ್ಲಿಯ ಪ್ರಣಯದ ವಿಷಯವನ್ನೆತ್ತಿ ಮಾತನಾಡುವುದಿಲ್ಲ. ಏಕೆಂದರೆ: ತನಗೆ ಬೇಕಾಗಿದ್ದ ಪ್ರಿಯವ್ಯಕ್ತಿಯ ಕಡೆಯಿಂದ ಮನಃಕಾಮನೆಯು ಪೂರ್ಣವಾಗದಿದ್ದಾಗ, ಮನುಷ್ಯನು ತನ್ನ ಬಯಕೆಯನ್ನು ಪೂರಯಿಸಿಕೊಳ್ಳುವುದಕ್ಕಾಗಿ ಬಣ್ಣಬಣ್ಣದ ಕಲ್ಪನಾಚಿತ್ರಗಳನ್ನು ರೇಖಿಸತೊಡಗುತ್ತಾನೆ; ಕಾವ್ಯ-ಕವನಗಳನ್ನು ಹಡೆಯುತ್ತಾನೆ. ಮನಃಕಾಮನಾಭಂಗದ ಸಂದರ್ಭಗಳು ಹಿಂದಣ ಕಾಲದಷ್ಟು ಇಂದು ಒದಗುತ್ತಿಲ್ಲ; ಆದುದರಿಂದಲೆ ಇಂದಿನ ಕಾವ್ಯ-ನಾಟಕಗಳಲ್ಲಿ ಹಿಂದಿನ ಕಾಲದ ನಾಟಕೀಯ ಪ್ರಣಯವು ಉಕ್ಕಿಹರಿಯುತ್ತಿಲ್ಲವೆಂದು ಹೇಳಬಹುದು. ಪ್ರಣಯವನ್ನು ಕುರಿತು ಮಾತನಾಡುವಾಗ ನಾನು ಗುರಿಯನ್ನಾಗಿಸಿಕೊಂಡುದು ಆ ನಾಟಕೀಯ ಪ್ರಣಯವನ್ನಲ್ಲ; ಜೊತೆಜೊತೆಯಲ್ಲಿದ್ದು, ಬಾಳಿನ ದುಃಖವನ್ನು ಸಹಿಸಿ, ದುಃಖದ ಹಿಗ್ಗು-ಮುಗ್ಗಿನ ಸಂದರ್ಭದಲ್ಲಿ ಒಬ್ಬರೊಬ್ಬರ ಕೈಯನ್ನು ಒಬ್ಬರೊಬ್ಬರಿಗೆ ಆಧಾರವಾಗಿ ಕೊಟ್ಟು, ಕೈಗೆ ದೊರೆತ ಅಲ್ಪಸ್ವಲ್ಪ ಸೌಖ್ಯವನ್ನು ಇಬ್ಬರೂ ಸಮಾನವಾಗಿ ಭೋಗಿಸಿ, ದ್ವೈತದ ಹೋಳಿಯನ್ನು ಮಾಡಿ, ಅದ್ವೈತದ ನಂದಾದೀಪವನ್ನು ಹೃದಯದಲ್ಲಿ ಬೆಳಗಿಸಿಕೊಳ್ಳುತ್ತಿರುವ ಸ್ತ್ರೀ-ಪುರುಷಯುಗ್ಮದ ಕೆಳೆತನವನ್ನು

CC-0. Jangamwadi Math Collection. Digitized by eGangotri

ಮಾತ್ರ ನಾನು ಪ್ರೇಮವೆಂದು ಕರೆಯುತ್ತೇನೆ. ಇಂತಹ ಪ್ರೇಮವೇ ನನ್ನ ಗುರಿ. ಈ ಬಗೆಯ ಪ್ರೇಮಿಗಳು ದಿನ-ದಿನವೂ ತಮ್ಮ-ತಮ್ಮಲ್ಲಿ ಜಗಳವಾಡುತ್ತಿರುವರೆಂಬುದನ್ನೂ 'ನಿನ್ನ ಜೊತೆ ಸಾಕಿನ್ನು!' ಎಂದು ಒಬ್ಬರಿಗೊಬ್ಬರು ಸಾವಿರ ಸಲ ಸಾರಿಸಾರಿ ಹೇಳುತ್ತಿರುವರೆಂಬುದನ್ನೂ ನಾನು ಬಲ್ಲೆ. ವಸ್ತುಸ್ಥಿತಿಯು ಹೀಗಿದ್ದರೂ, ಹೀಗೆ ಜಗಳಕಾಯುವ ಸ್ತ್ರೀ-ಪುರುಷರ ಒಳದನಿಯ ಮಿಡಿತವು ಇದಕ್ಕೆ ತೀರ ವಿಪರೀತವಾಗಿರುವುದು. ಇಷ್ಟೊಂದು ಜಗಳವಾಡಿದರೂ 'ಒಬ್ಬರೊಬ್ಬರ ಚಿತ್ತವು ಬಳಿಯನ್ನು ಬಿಟ್ಟು ಹೋಗಿಲ್ಲ, ತಾವೆ ಒಬ್ಬರಿಗೊಬ್ಬರು ಆಧಾರವಾಗಿರುವೆವು' ಎಂದೂ, ತಮ್ಮಲ್ಲಿಯ ಅಲ್ಪ-ಸ್ವಲ್ಪ ಗುಣಗಳನ್ನು ಕಂಡರೂ ಜೊತೆಗಾರರು ಅವುಗಳನ್ನು ಕೌತುಕದಿಂದ ಕಾಣುವರೆಂದೂ, ಮನೆಗೆ ಮರಳಿದೊಡನೆಯೆ ಆತುರ-ಕಾತರ ಭಾವಗಳಿಂದ ಆಕರ್ಷಕವಾಗಿ ಕಾಣುವ ಅವರ ನಗೆಮೊಗವು ತಮ್ಮ ಕಣ್ಣಿಗೆ ಬೀಳದಿರದೆಂದೂ, ಗಂಡ-ಹೆಂಡಿರಿಬ್ಬರಿಗೂ—ಒಳಗೊಳಗೆ— ಖಂಡಿತವಾದ ಭರವಸೆಯಿರುತ್ತದೆ. ಇಂತಹ ಭಾವನೆ-ಭರವಸೆಗಳ ಆನಂದದೆದುರು ಅವರ ಆ ಜಗಳಾಟ ಏನನ್ನು ತಾನೆ ಮಾಡಬಲ್ಲದು? ನಾನಂತೂ ತೋಳೆತ್ತಿ ಹೇಳುತ್ತೇನೆ: ಜಗತ್ತಿನಲ್ಲಿ ನೂರಾರು ಮಹಾಯುದ್ಧಗಳು ನಡೆದರೂ ಅಡ್ಡಿಯಿಲ್ಲ; ಆದರೆ ಪ್ರೀತಿಯ ಜೊತೆಗಾರ-ಜೊತೆಗಾತಿಯರು ಇಲ್ಲದಂತಾಗಿ, ಸ್ತ್ರೀಯರೂ ಪುರುಷರೂ ಒಂಟಿ-ಒಂಟಿಗರಾಗಿ ಇರುವ ಸಂದರ್ಭವೊದಗಿದರೆ ಮಾತ್ರ, ಮಾನವಜಾತಿಯು ಅಳಿದುಹೋಗಲಿಕ್ಕೆ ಮುಂದೆ ಬಹಳ ಅವಧಿಯೇನೂ ಬೇಕಾಗಲಾರದೆಂದೆನಿಸುವುದು.

ಯಾವನಾದರೂ ತರುಣನು ಬಾಳಿಗೆ ಬೇಸತ್ತು ನಿರಾಶಾವಾದವನ್ನು ಪ್ರತಿಪಾದಿಸತೊಡಗಿದುದನ್ನು ಕೇಳಿದೆನೆಂದರೆ, ನಾನು ಮನದಲ್ಲಿಯೇ ಅಂದುಕೊಳ್ಳುತ್ತೇನೆ: 'ಈ ಮಹಾಶಯರಿಗೆ ಇನ್ನೂ ಮದುವೆಯಾಗಿಲ್ಲವೇನೋ!' ಎಂದು. ಏತಕ್ಕೆಂದರೆ ಮದುವೆಯಾದ ಮನುಷ್ಯನಿಗೆ ತನ್ನ ಹಾಡನ್ನು ಹಾಡುತ್ತ ಕುಳಿತುಕೊಳ್ಳಲಿಕ್ಕೆ ಬಿಡುವೇ ಇರುವುದಿಲ್ಲ. ನಿರಾಶಾವಾದಿಗಳು ಬಾಳಿಗೆ ಬೇಸತ್ತುಹೋಗಿರುವುದರ ಕಾರಣವು ಗೊತ್ತೇ? ಜೀವನದಲ್ಲಿಯ ಆಪತ್ತುಗಳ ಏಟುಗಳನ್ನು ತಿಂದು-ತಿಂದು, ದುಃಖ-ವ್ಯಸನಗಳನ್ನು ಅನುಭವಿಸಿ—ಅನುಭವಿಸಿ, ಅವರು ರೇಗಿಕೊಳ್ಳುತ್ತಾರೆ; ಅಲ್ಲದೆ ಸ್ವಂತದ ಅನುಭವಗಳ ಮೇಲಿಂದ 'ಬದುಕಿನಲ್ಲಿ ಯಾವ ಸ್ವಾರಸ್ಯವೂ ಇಲ್ಲ' ಎಂಬ ಸಿದ್ಧಾಂತವನ್ನು ಹೊರಡಿಸಿ ಮುಂದಿರಿಸುತ್ತಾರೆ. ಇಂತಹ ಜನರು ತಮ್ಮೊಬ್ಬರನ್ನು ಹೊರತು ಮಿಕ್ಕವರನ್ನು ಅರಿತುಕೊಂಡೇ ಇರುವುದಿಲ್ಲ. ಅವರ ಎಲ್ಲ ವಿಚಾರಗಳೂ ಕೇವಲ ಅಹಂಭಾವದಲ್ಲಿಯೆ ಗೊಂದಣಹಾಕುತ್ತಿರುತ್ತವೆ; ಎಂತಲೆ ಅವರಲ್ಲಿ 'ತಮ್ಮ ಮನದಲ್ಲಿ ಉಂಟಾದ ಬೇಸರವೇ ನಿಜವಾದ ವೇದಾಂತ!' ಎಂದು ಖಂಡಿತವಾದ ಭಾವನೆಯಾಗಿರುತ್ತದೆ. ನೆರೆಹೊರೆಯ ನಾಲ್ಕುಮಂದಿಯೊಡನೆ ಸಹಕರಿಸಿ ನಡೆಯುವವರೂ, ಹತ್ತಾರು ಜನರ ಸುಖದುಃಖಗಳಲ್ಲಿ ಸಾಮರಸ್ಯವನ್ನು ಹೊಂದುತ್ತಿರುವವರೂ ಜೀವಿತವನ್ನು ಕುರಿತು ಬೇಸರಪಟ್ಟುಕೊಳ್ಳುವುದು ತೀರ ಕಡಿಮೆ. ಹತ್ತಾರು ಜನ ಸಂಗಡಿಗರ ಹೆಗಲಿಗೆ ಹೆಗಲನ್ನು ಹಚ್ಚಿ, ಯಾವುದಾದರೊಂದು ಆಟವನ್ನಾಡುತ್ತಿರುವ ಸರಳಸ್ವಭಾವದ ಆಟಗುಳಿಯೊಬ್ಬನು, ಒಂಟಿಗನಾಗಿ ಜಗತ್ತನ್ನು ಬಿಟ್ಟು ಬೇರೆಯಾಗಿದ್ದುಕೊಂಡು ನಿರಾಶೆಯಿಂದ ನಿಟ್ಟುಸಿರನ್ನಿಕ್ಕುತ್ತ ಕುಳಿತ ತತ್ತ್ವಜ್ಞಾನಿಗಿಂತಲೂ ಸಾವಿರಮಡಿ ಸುಖಿಯಾಗಿರುವನು. ವ್ಯಕ್ತಿಯು ತಾನು ಒಂದೆ ಒಂದಾಗಿರದೆ, ಇನ್ನೊಂದು ವ್ಯಕ್ತಿಯ ಅಥವಾ ಇನ್ನೂ ಹಲವು ವ್ಯಕ್ತಿಗಳ ಜೀವನದೊಂದಿಗೆ ತನ್ನ ಜೀವನವನ್ನೂ ಒಂದುಗೂಡಿಸಿದರೆ, ಮಾನವ ಜೀವಿತದಲ್ಲಿ ಸಾಕಷ್ಟು ಸ್ವಾರಸ್ಯವಿದ್ದುದು ತೋರಲು ತೊಡಗುವುದಲ್ಲದೆ ತುಂಬುತನವೂ ಕಂಡುಬರುವುದು. ಆ ಬೇರೆ ವ್ಯಕ್ತಿಗಳ ದುಃಖದ ಹೊರೆಯನ್ನು ಕಡಿಮೆ ಮಾಡಲಿಕ್ಕಾದರೆ—ಇದ್ದ ಸುಖವನ್ನು ಇನ್ನಿಷ್ಟು ಹೆಚ್ಚಿಸಲಿಕ್ಕೆಂದರೆ—ಇನ್ನಾವ ನೆರವನ್ನಾದರೂ ಒದಗಿಸುವುದಕ್ಕಾದರೆ—ಅಷ್ಟರಿಂದಲೂ ತನ್ನ ಜೀವನವು ಸಾರ್ಥಕವಾಯಿತೆಂಬ ಸಮಾಧಾನ ಮನುಷ್ಯನಿಗೆ ಸಿಕ್ಕದೆ ಇರದು. ನಾಲ್ಕು ಜನರಲ್ಲಿ ಬೆರೆಯುವುದೆಂದರೆ ತಮ್ಮ ಯೋಗ್ಯತೆಗೆ ಕಡಿಮೆತನವೆಂದು ಭಾವಿಸುವವರಿಗೂ, ತಕ್ಕವಳಾದ ಹೆಂಡತಿ ತಮಗೆ ಸಿಕ್ಕಲಾರಳೆಂಬ ಕಲ್ಪನೆಯಿಂದ ಮದುವೆಮಾಡಿಕೊಳ್ಳದೆ— ಹೆಂಡಿರು-ಮಕ್ಕಳಿಲ್ಲದೆ— ಇರುವವರಿಗೆ ಜೀವನವು ಬರಿಯದಾಗಿ ನಿರರ್ಥಕವಾಗಿ ತೋರತೊಡಗುವುದು. ಆಗ ಅವರು ಕಂಗೆಟ್ಟುಹೋಗಿ 'ಬದುಕಿನಲ್ಲಿ ಏನಾದರೂ ಹುರುಳು-ತಿರುಳಿದೆಯೇ?' ಎಂದು ಕಂಡವರನ್ನು ಕೇಳಲಾರಂಭಿಸುವರು. ಆದೇ ನಾಲ್ಕು ಮಕ್ಕಳುಮರಿಗಳನ್ನು ಸಾಕಿ ಸಲಹುತ್ತಿರುವವನ ಬಳಿ "ಬದುಕಿನಲ್ಲಿ ಸ್ವಾರಸ್ಯವೇನಾದರೂ ಇದೆಯೇ?" ಎಂದು ಕೇಳಿನೋಡಿ! ಅವನು ಹೆಚ್ಚು ವಿಚಾರವನ್ನೇನೂ ಮಾಡದೆ "ಕುಟುಂಬವನ್ನು ಸಾಕಿಸಲಹುವುದೇ ಬದುಕಿನಲ್ಲಿ ನಿಜವಾದ ಸ್ವಾರಸ್ಯ!" ಎಂದು ತಟ್ಟನೆ ಹೇಳಿಬಿಡಬಹುದು.

CC-0. Jangamwadi Math Collection. Digitized by eGangotri

ಸ್ತ್ರೀ-ಪುರುಷರಲ್ಲಿಯ ಪರಸ್ಪರ ಆಕರ್ಷಣವನ್ನು ಕುರಿತು ಸ್ಥೂಲವಾಗಿ ವಿಚಾರಮಾಡುವವರಿಗೆ 'ಕಾಮವಿಕಾರವೆಂದರೆ ಇದೊಂದು ಕೇವಲ ಹುಚ್ಚಾಟ; ಅದನ್ನು ಬೆಂಬತ್ತುವುದೆಂದರೆ ವ್ಯರ್ಥವಾದ ಓಡಾಟ!' ಎಂದು ಎನಿಸುವುದು ಸಹಜ! ನಿಜವಾಗಿ ನೋಡಿದರೆ ಜೀವಿತಪ್ರವಾಹವನ್ನು ಜಾಗೃತ-ವಾಗಿರಿಸಲಿಕ್ಕೆಂದು ಕಾಮವಿಕಾರವನ್ನು ಉಪಯೋಗಿಸುತ್ತಿದ್ದಲ್ಲಿ, ವ್ಯಕ್ತಿಯ ಬದುಕಿಗೆ ಅದರಿಂದಲೆ ಸೌಂದರ್ಯ-ಸಾರ್ಥಕತೆಗಳು ಉಂಟಾಗುವುವು.

ಉಗೆಬಂಡಿಯಲ್ಲಿ ಕುಳಿತು ಪ್ರವಾಸಮಾಡುತ್ತ ನಾನು ಇದೆಲ್ಲವನ್ನೂ ಬರೆಯುತ್ತಲಿದ್ದೇನೆ. ಸದ್ಯ ನನ್ನ ಎದುರಿನ-ಲ್ಲಿಯೆ ಹೆಂಗುಸೊಬ್ಬಳು ಕುಳಿತಿರುವಳು; ತನ್ನ ಎಳಗೂಸಿ-ನೊಂದಿಗೆ ಆಕೆ ಆಟವಾಡುತ್ತಿರುವಳಲ್ಲದೆ, ಚಿಕ್ಕಮಕ್ಕಳ ತೊದಲುನುಡಿಯಲ್ಲಿ ಮಗುವನ್ನು ಮಾತನಾಡಿಸುತ್ತ—ಚಿಟಿಕೆಗಳನ್ನು ಬಾರಿಸುತ್ತ—ಕೊರಳನ್ನು ಕೊಂಕಿಸಿ ನೋಡಿ ನಗುನಗುತ್ತ—ಸುತ್ತುಮುತ್ತಣ ಜಗತ್ತಿನ ಅರಿವನ್ನೇ ಮರೆತುಬಿಟ್ಟಿರುವಳು. ಬದುಕಿನಲ್ಲಿಯ ಹುರುಳು-ತಿರುಳುಗಳನ್ನು ಕೆದರಿ ಕೆದರಿ ಹುಡುಕುತ್ತಿರುವ ಪಂಡಿತವರರೇ! ಈ ಹೆಂಗುಸಿಗಿಂತಲೂ ಹೆಚ್ಚಿನ ಬುದ್ಧಿವಂತಿಕೆಯೇನಾದರೂ ನಿಮ್ಮ ಮೆದುಳಿನಲ್ಲಿದೆಯೆಂದು ಎನಿಸುತ್ತಿದೆಯೇ ನಿಮಗೆ? ಜ್ಞಾನದ ಪ್ರಗತಿಯಿಂದ ಕಂಗೆಟ್ಟು ಕೈಕಾಲುಕಳೆದು-ಕೊಳ್ಳುವ ಶಾಸ್ತ್ರಜ್ಞರೇ! ಈ ಹೆಂಗುಸು ನಿಮಗಿಂತ ಶ್ರೇಷ್ಠ-ಳಲ್ಲವೇ? ಎರಡನೆಯ ಬೇರೊಂದು ಜೀವದೊಂದಿಗೆ ಆಕೆ ಸಾಮರಸ್ಯವನ್ನು ಹೊಂದಿದ್ದಾಳೆ; ಸ್ವಂತದ ಜೀವನದ ಸಂಕುಚಿತತನವನ್ನವಳು ಸಂಪೂರ್ಣವಾಗಿ ಮರೆತುಬಿಟ್ಟಿ-ರುವಳಲ್ಲದೆ, ಸುಖದ ಸಂಪೂರ್ಣತೆಯಲ್ಲಿ ಓಲಾಡುತ್ತಿದ್ದಾಳೆ!

**ಮನುಷ್ಯನು ತನ್ನ ವೈಯಕ್ತಿಕ ಜೀವನಕ್ಕಿಂತ ಹೆಚ್ಚು ವ್ಯಾಪಕವಾಗಿರುವಂತಹ ಜೀವನದಲ್ಲಿ ಬೆರೆತು ಕೊಳ್ಳಬೇಕಲ್ಲದೆ, ಅದಕ್ಕಾಗಿ ಹಗಲಿರುಳೂ ಕಾಯಾ-ವಾಚಾ-ಮನಸಾ ದುಡಿಯುತ್ತಿರಬೇಕು! ಹೀಗೆ ದುಡಿಯುತ್ತಲಿರುವುದನ್ನೇ ಜೀವನಸಾರ್ಥಕ್ಯದ ಒಂದೆ ಒಂದು ಮಾರ್ಗವೆಂದು ಹೇಳಬಹುದಾಗಿದೆ.** ತನಗಿಂತ ಹೆಚ್ಚು ವ್ಯಾಪಕವೆನಿಸಬಹುದಾದ ಇನ್ನೇನನಾ-ದರೂ ನಿರ್ಮಾಣಮಾಡುವ ಯೋಗವೂ, ಅದರಲ್ಲಿ ತಾನು ಪಾಲುಗಾರನೆಂದೆನಿಸಿಕೊಳ್ಳಬಹುದಾದ ಯೋಗವೂ ಈ ಜೀವನದಲ್ಲಿ ದೊರೆಯುವುದೆಂತಲೆ—ಇದನ್ನು ಧನ್ಯವೆಂದು ತಿಳಿದುಕೊಳ್ಳಬೇಕಾಗಿದೆ. **ವೈಯಕ್ತಿಕತೆಗಿಂತಲೂ ವ್ಯಾಪಕವಿರುವಂತಹ ಯಾವುದೇ ಪ್ರಕಾರದ ಜೀವ-ನವಿರಲಿ! — ಅದರೊಂದಿಗೆ ಆತ್ಮೀಯತೆಯನ್ನು ಬೆಳೆಯಿಸಬೇಕು! ತನ್ನಲ್ಲಿದ್ದ ಶಕ್ತಿಯೆಲ್ಲಕ್ಕೂ ಸಾಕು-ಸಾಕೆನಿಸುವಷ್ಟು ಉದ್ಯೋಗದ ಹೊರೆಯನ್ನು ತನ್ನ ಮೇಲೆ ಹಾಕಿಕೊಳ್ಳಬೇಕು! ನನ್ನ ಕಲ್ಪನೆಯಂತೆ ಸುಖ-ಸಮಾಧಾನಗಳ ಮೂಲ ಮಂತ್ರ ಇದೇ ಅಹುದು.**

ಬೇರೆಯವರನ್ನು ಕೇಳಿದ ನನ್ನ ಪ್ರಶ್ನೆಗಳಿಗೆ ನಾನು ಹೇಗೆ ಉತ್ತರಗಳನ್ನು ಕೊಡಬಹುದೆಂಬುದು ಇದುವರೆಗಿನ ನನ್ನ ಈ ವಿವೇಚನೆಯಿಂದ ವ್ಯಕ್ತವಾಗುವಂತಿದೆ. ನನ್ನ ಬದುಕಿನ ಉದ್ದೇಶವೂ ಹುರುಳು-ತಿರುಳುಗಳೂ ಯಾವು-ದರಲ್ಲಿರುವುವೆಂಬುದು ಗೊತ್ತೋ? ನನ್ನ ಸಂಸಾರದಲ್ಲಿವೆ—ನನ್ನ ನಿತ್ಯೋದ್ಯಮದಲ್ಲಿವೆ! ನನ್ನ ಉದ್ಯೋಗದಿಂದ ನನಗೆ ಸಮಾಧಾನವೆನಿಸುವುದೇಕೆ ಗೊತ್ತೋ? ಅದರಿಂದ ನನ್ನ ಸ್ವಾರ್ಥವನ್ನು ಸಾಧಿಸುತ್ತಿರುವೆನಾದುದರಿಂದ! ಪರಾರ್ಥ ಬುದ್ಧಿಯೂ ನನ್ನಲ್ಲಿ ಇಲ್ಲದೆ ಇಲ್ಲ; ಆದರೆ ಅದರಲ್ಲಿ ಕೂಡ ಸ್ವಾರ್ಥದ ಅಂಶವು ಇದ್ದೇ ಇರುವುದು. ಕೀರ್ತಿಯ ವಿಷಯದಲ್ಲಿರುವ ನನ್ನ ಆತ್ಯಂತಿಕ ಆಕಾಂಕ್ಷೆಯೂ ಕುಟುಂಬದಲ್ಲಿಯ ಜನರನ್ನು ಸುಖವಾಗಿರಿಸಬೇಕೆಂಬ ಅತಿಶಯವಾದ ಕಳಕಳಿಯೂ ನನ್ನ ಎಲ್ಲ ಉದ್ಯಮದ ತಂದೆ-ತಾಯಿಗಳಾಗಿವೆ. ಉದ್ಯಮದಿಂದ ನಾನು ಯಾವುದನ್ನು ಸಂಪಾದಿಸಬೇಕಾಗಿದೆ ಬಲ್ಲೆಯಾ? "ಎಲ್ಲಿ ನೋಡಿದಲ್ಲೆಲ್ಲ ಆನಂದೋಲ್ಲಾಸಗಳೇ ಕಣ್ಣಿಗೆ ಕಾಣಬೇಕು—ನನಗಿಂತ ಶ್ರೇಷ್ಠರೆನಿಸಿಕೊಳ್ಳುವವರೆಲ್ಲರೂ 'ಭಾಪು' ಎಂದು ನನ್ನ ಬೆನ್ನನ್ನು ತಟ್ಟಬೇಕು!" ಇದಿಷ್ಟನ್ನೇ ಸಾಧ್ಯಮಾಡಿಕೊಳ್ಳ-ಬೇಕಾಗಿದೆ ನನಗೆ. ನನ್ನ ಹೃದಯವನ್ನರಳಿಸಿ, ನನ್ನನ್ನು ಪ್ರಸನ್ನಮುಖನನ್ನಾಗಿ ಮಾಡುವ ವಸ್ತುಗಳು ಇನ್ನಾವುವೂ ಅಲ್ಲ; ನನ್ನ ಹೆಂಡತಿ-ಮಕ್ಕಳು—ನನ್ನ ಹೊತ್ತಗೆಗಳು—ಬರೆಯುವ ಉಪಕರಣಗಳು—ಇವೇ ನನ್ನ ಹೃತ್ಕಮಲವನ್ನು ಅರಳಿಸುವ ಸೂರ್ಯಬಿಂಬಗಳು. ನನ್ನ ಸುಖದ ನಿಧಿಯು ಎಲ್ಲಿಯಿದೆ ಗೊತ್ತೇನು? ಅದು ಎಲ್ಲೆಲ್ಲಿಯೂ ಇದೆ. **ಮಾನವನು ಪ್ರತಿಯೊಂದು ಸಂಗತಿಯಲ್ಲಿಯ ಮರ್ಮ-ವನ್ನೂ ಆನಂದವನ್ನೂ ತಿಳಿದುಕೊಳ್ಳುವ ಯೋಗ್ಯ-ತೆಯನ್ನು ಸಂಪಾದಿಸಿದವನಿದ್ದಲ್ಲಿ, ಆತನ ಸುಖಕ್ಕೆ ಸೀಮೆಯೆ ಇಲ್ಲವೆನಿಸುವುದು. ನಿಸರ್ಗವಂತೂ ಮನುಷ್ಯನ ಆನಂದದ ಹೂತಿಟ್ಟ ನಿಕ್ಷೇಪವೇ ಆಗಿ-ರುವುದು.** ನನ್ನ ಮಿಕ್ಕ ಎಲ್ಲ ಸೌಖ್ಯಗಳನ್ನು ಯಾರೂ ಸುಲಿದು ಸೂರೆಗೊಳ್ಳಲಿ; ನನಗವರಿಂದ ವ್ಯಸನವಿಲ್ಲ;

CC-0. Jangamwadi Math Collection. Digitized by eGangotri

ನಿಸರ್ಗದಲ್ಲಿಯ ಅನಂತದೃಶ್ಯಗಳಲ್ಲಿಯೂ ಅಸಂಖ್ಯ ಧ್ವನಿಗಳಲ್ಲಿಯೂ ಹುದುಗಿಕೊಂಡಿರುವ ಆನಂದವನ್ನು ಅನುಭವಿಸುವುದಕ್ಕಾಗಿ ನಾನು ಬದುಕಿಕೊಂಡು ಇದ್ದೇ ತೀರಬೇಕೆಂದು ನನ್ನ ಜೀವನದ ಕೊನೆಯ ಕ್ಷಣದ ವರೆಗೂ ನನಗೆ ಎನಿಸುತ್ತಿರುವುದು.

'ಧರ್ಮಶ್ರದ್ಧೆ ನನ್ನಲ್ಲಿದೆಯೇ? ಇದ್ದರೆ ಅದರಿಂದ ನನಗೆ ಆಗತಕ್ಕ ಪ್ರಯೋಜನವೇನು ? '

ಈ ಪ್ರಶ್ನೆ ಎಲ್ಲವಕ್ಕಿಂತಲೂ ತೊಡಕಿನದಾಗಿದೆ.

ಉಗೆಬಂಡಿಯಲ್ಲಿ ಕುಳಿತು ನಾನು ಈ ಬರೆಹವನ್ನು ಬರೆಯುತ್ತಿದ್ದೇನೆ. ಮೇಲೆ ಹೇಳಿದ ಪ್ರಶ್ನೆಯನ್ನು ಬರೆದಾದ ಮೇಲೆ, ಇದ್ದುದಿದ್ದಹಾಗೆಯೆ ಕಿಟಕಿಯಲ್ಲಿ ಹಣೆಯಿಕ್ಕಿ ನೋಡಿದೆ; ಆಗ ಬೆಟ್ಟದ ಕಿಬ್ಬರಿಯ ಹಳ್ಳಿಯೊಂದರಲ್ಲಿರುವ ಹೆಂಗುಸರೂ ಗಂಡಸರೂ ಪ್ರಾರ್ಥನೆಗಾಗಿ ಚರ್ಚಿಗೆ ಹೊರಟುದು ಕಣ್ಣಿಗೆ ಬಿದ್ದಿತು. ಆ ಶುಭ್ರವರ್ಣದ ಶಿಖರದ ಅಡಿಯಲ್ಲಿ ಎಂತೆಂತಹ ಹುಚ್ಚಾಟ-ಹುಡುಗಾಟದ ಆಧ್ಯಾತ್ಮಿಕ ಉಪನ್ಯಾಸಗಳು ಆಗುತ್ತಿರುವುವೆಂಬುದನ್ನೂ, ಎಂತೆಂತಹ ಮೋಸಗಾರಿಕೆ-ಪಂಥನಿಷ್ಠ ಅಭಿಪ್ರಾಯಗಳು ಬೆಳೆವಣಿಗೆ ಹೊಂದುತ್ತವೆಂಬುದನ್ನೂ, ಈ ಸರಳಸ್ವಭಾವದ ಒಕ್ಕಲಿಗರು ತಮ್ಮ ಧರ್ಮದ ವಿಷಯದಲ್ಲಿರುವ ಅಂಧಶ್ರದ್ಧೆಯ ಸಂರಕ್ಷಣೆಗಾಗಿ ಎಷ್ಟೊಂದು ಭೀಕರರೂಪಗಳನ್ನು ತಳೆದು—ಎಂತೆಂತಹ ಅತ್ಯಾಚಾರಮಾಡಬಹುದೆಂಬುದನ್ನೂ ನನ್ನ ಕಲ್ಪನೆಯು ನನಗೆ ಚೆನ್ನಾಗಿ ಅರಿಕೆಮಾಡಿಕೊಟ್ಟಿರುವುದು. ಆದರೂ ಇಂತಹ ಜನರ ವಿಷಯದಲ್ಲಿ ಉಂಟಾಗುತ್ತಲಿರುವ ಸಹಾನುಭೂತಿಯಿಂದ ನನ್ನ ಹೃದಯವು ಕರಗಿ ನೀರಾಗಿ ಹೊರಸೂಸುವುದು. ಸರಳಸ್ವಭಾವದ ಶ್ರದ್ಧಾಳುಜನರನ್ನು ಕಂಡರೆ ನನಗೆ ತುಂಬ ಮೆಚ್ಚಿಕೆ. ಇವರ ಶ್ರದ್ಧೆಯನ್ನು ಒಂದೆ ಏಟಿನಿಂದ ಹೊಡೆದುಹಾಕಬೇಕೆಂದಾಗ, ಖಂಡಿತವಾಗಿ ನನ್ನ ಕೈಯು ಕೂಡ ಹಿಂದೆಗೆಯದಿರಲಾರದು.

ನಾನು ಹೇಳಬೇಕಾಗಿದ್ದುದನ್ನು ಇನ್ನಿಷ್ಟು ಪರಿಷ್ಕಾರವಾಗಿ ಹೇಳುತ್ತೇನೆ: ಪ್ರಾಣಿಶಾಸ್ತ್ರದ ಪರಿಶೀಲನೆಯಿಂದ, ವ್ಯಕ್ತಿಗತವಾದ ಆತ್ಮದ ಅಮರತ್ವದ ಬಗೆಗಿರುವ ನನ್ನ ನಂಬುಗೆಯು ಇಲ್ಲದಂತಾಗಿದೆ; ಅದರಂತೆಯೆ ಪರಮಾತ್ಮನ ವಿಷಯದಲ್ಲಿ ಸದ್ಯ ರೂಢವಾಗಿದ್ದ ಕಲ್ಪನೆಗಳೂ ನಂಬುವುದಕ್ಕೆ ಅನರ್ಹವಾದುವುಗಳೆಂದು ಎನಿಸುತ್ತಿದೆ. ಜಗತ್ತಿನಲ್ಲಿಯ ಪ್ರತಿಯೊಂದು ಚಿಕ್ಕ-ದೊಡ್ಡ ಆಗು-ಹೋಗುಗಳ ಸೂತ್ರವನ್ನು ತನ್ನ ಕೈಯಲ್ಲಿ ಇಟ್ಟುಕೊಂಡು, ಪ್ರಾಣಿಗಳೆಲ್ಲಕ್ಕೂ ಸುಖ-ದುಃಖಗಳ 'ಡಿವಿಡೆಂಡ್ಸ್'ನ್ನು ಹಂಚಿಕೊಡುತ್ತಿರುವ ಪರಮಾತ್ಮನ ಅಸ್ತಿತ್ವವು ಹಾಸ್ಯಾಸ್ಪದವಲ್ಲದೆ ಇನ್ನೇನು ? ಇಂತಹ ಹುಚ್ಚಾಟದ ಕಲ್ಪನೆಯಲ್ಲಿ ತರ್ಕಶುದ್ಧತೆಯೇನಾದರೂ ಕಾಣುವುದೇ ? ಹಾಗೆ ತರ್ಕಶುದ್ಧತೆಯಿರುವುದಾದಲ್ಲಿ, ಯಾರಾದರೂ ಅದನ್ನು ನನಗೆ ಸಮಾಧಾನಕರವಾಗಿ ಎತ್ತಿತೋರಿಸಿದಲ್ಲಿ, ಅವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುವೆನು. ಪುನರ್ಜನ್ಮದ ಕಲ್ಪನೆಯಲ್ಲಿ ಸ್ವಾರ್ಥಬುದ್ಧಿಯನ್ನುಳಿದು ಇನ್ನೊಂದೇನೂ ನನಗೆ ಕಾಣುವುದಿಲ್ಲ. ಮತ್ತೊಂದು ಮಾತೆಂದರೆ, ಅಸಂಖ್ಯ ಜೀವಗಳಿಂದ ಗದ್ದಲ-ಗೊಂದಣವುಂಟಾಗುತ್ತ ನಡೆದ ಸ್ವರ್ಗವು, ಕೊನೆಗೆ ಉಸಿರುಗಟ್ಟಿಸುವ ಸೆರೆಮನೆಯ ಕತ್ತಲು-ಕೋಣೆಯ ವಿದ್ರೂಪವನ್ನು ಪಡೆಯಬಹುದೆಂದು ನನಗೆ ಎನಿಸುತ್ತಲಿದೆ. ನಾನು ಈ ಜಗತ್ತನ್ನು ಬಿಟ್ಟು ಹೋಗಬೇಕಾದ ಪ್ರಸಂಗವೊದಗಿದಾಗ, ನನಗೆ ವ್ಯಸನವೆನಿಸದಿರಲಾರದೇನೋ ಸಹಜ. ಅದರಂತೆಯೆ ನನ್ನ ತರುವಾಯ ಹೆಂಡಿರು-ಮಕ್ಕಳ—ಸ್ನೇಹಿತರ—ಕೈಕೊಂಡ ಕಾರ್ಯದ ಯೋಗಕ್ಷೇಮಗಳು ಹೇಗೆ ನಡೆಯಬಹುದೆಂಬುದು ನನಗೆ ಗೊತ್ತಾದಲ್ಲಿ, ನನ್ನ ಮನಸ್ಸಿಗೆ ತುಂಬ ಸಮಾಧಾನವೆನಿಸುವುದೂ ಸ್ವಾಭಾವಿಕ.

ಮೇಲಿನ ವಿವರಣೆಯ ಅರ್ಥವು ಹೀಗೆ: ಹಳೆಯ ಕಾಲದ ಧರ್ಮಶ್ರದ್ಧೆ-ಧಾರ್ಮಿಕ ಕಲ್ಪನೆಗಳನ್ನೆಲ್ಲ ನಾನು ದೂಡಿಹಾಕಿರುವೆನೆಂಬುದೂ, ನನ್ನ ಮನಃಶಾಂತಿಗಾಗಿ ಅವುಗ[illegible] ಆವಶ್ಯಕತೆಯಿಲ್ಲವೆಂಬುದೂ ದಿಟ! ಆದರೆ ಕೋಣೆಯೊ[illegible]ಗಿರಿಸಿದ್ದ ಕಮ್ಮಲರೊಂದನ್ನು ಬೇರೆಕಡೆಗೆ ತೆಗೆದುಕೊಂ[illegible] ಹೋಗಿದ್ದರೂ ಆ ಹೂವಿನ ಸುಗಂಧವು ಕೋಣೆಯಲ್ಲಿ [illegible]ಸುತ್ತಾಡುತ್ತಿರುವಂತೆ, ಆ ಧಾರ್ಮಿಕಭಾವನೆಗಳ ನೆನ[illegible] ಪರಿಮಳವು ಮಾತ್ರ ಈಗಲೂ ನನ್ನ ಅನುಭವಕ್ಕೆ ಬರುತ್ತಲಿದೆ.

ಅಯ್ಯಾ! ಆತ್ಮಹತ್ಯೆಗೆ ಸಿದ್ಧನಾಗಿ ನಿಂತಿದ್ದ ನ[illegible]ಗೆಳೆಯಾ! ನನ್ನ ಈ ವಿಚಾರಗಳ ಸವಿಜೊಂಪಿನಲ್ಲಿ ನಿನ್ನ[illegible] ಮರೆತೇ ಬಿಟ್ಟೆನಲ್ಲ ನಾನು! ಕ್ಷಮಿಸಯ್ಯಾ ನನ್ನ[illegible] ಆದರೆ........ ನಾನು ಇದೀಗ ಬರೆದುದೆಲ್ಲವನ್ನೂ ಚೆನ್ನಾ[illegible] ನೋಡಿದಲ್ಲಿ 'ನಿನ್ನ ಬೇಸರದ ರೋಗಕ್ಕೆ ನಿಜ[illegible] ಔಷಧಿಯೆಂದರೆ ವೇದಾಂತವಲ್ಲ; ಹೆಂಡಿರು-ಮಕ್ಕಳ[illegible] ಮೈತುಂಬ ಕೆಲಸ—ಇವೇ!' ಎಂಬ ಮಾತು ನಿನ್ನ ಲ[illegible]ದಲ್ಲಿ ಬಾರದೆ ಹೋಗದು. "ಹೀಗೆ ಉದ್ಯೋಗದ ಅಡಿ[illegible] ಸಿಕ್ಕಿಕೊಳ್ಳದಿದ್ದರೆ ಖಂಡಿತವಾಗಿಯೂ ನಾನು ಆತ್ಮ[illegible]

CC-0. Jangamwadi Math Collection. Digitized by eGangotri

ವನ್ನು ಮಾಡಿಕೊಳ್ಳಬಹುದಾಗಿದ್ದಿತು" ಎಂದು ಫ್ರೆಂಚ್ ವಿದ್ವಾಂಸನೊಬ್ಬನು ಉದ್ಗಾರ ತೆಗೆದುದನ್ನು ಕೇಳಿದ್ದೇನೆ; ಅವನ ಮಾತು ಸಂಪೂರ್ಣ ಸತ್ಯ! ಮರಳಿ ಮರಳಿ ಹೇಳುತ್ತೇನೆ ಕೇಳು! ಯಾರಿಗೆ ಮೈತುಂಬ ಕೆಲಸ-ಬವಸೆಗಳಿರುವು-ದಿಲ್ಲವೋ ಅವರೇ ನಿರಾಶಾವಾದವನ್ನು ಗಳಹುತ್ತಾರೆ; ಆದುದ-ರಿಂದಲೆ ಗೆಳೆಯಾ, ನೀನು ಕೂಡಲೆ ಯಾವುದಾದರೂ ಕೆಲಸ-ವೊಂದನ್ನು ಕೈಕೊಳ್ಳು! ಎಲ್ಲಿಯಾದರೂ ಕಾರಖಾನೆ-ಯೊಂದರಲ್ಲಿ ಕೂಲಿಯಾಳಾದರೂ ಚಿಂತೆಯಿಲ್ಲ. ಅಲ್ಲಿ ಎಡೆ ಸಿಕ್ಕದಿದ್ದರೆ ಯಾವನಾದರೂ ಒಬ್ಬ ಒಕ್ಕಲಿಗನ ಬಳಿಗೆ ಹೋಗು! ಎರಡು ಹೊತ್ತಿನ ಊಟವನ್ನೆ ಸಂಬಳವೆಂದು ತಿಳಿದು, ಮುಂಜಾವು-ಸಂಜೆ ಆತನ ಹೊಲದಲ್ಲಿ ಉಳುಮೆ-ಗಪ್ಪವನ್ನು ಮಾಡುವುದಕ್ಕೆ ಒಪ್ಪಿಕೊಳ್ಳು! ಆಮೇಲೆ ನೋಡು: ಆತ್ಮಹತ್ಯೆಯ ನಿನ್ನ ನಿರ್ಣಯವು ಪಾರ್ಪಡು-ವುದೋ ಇಲ್ಲವೋ ಎಂಬುದನ್ನು!

ಈ ಬಗೆಯ ಉಪದೇಶವನ್ನು ಇನ್ನೂ ಹೆಚ್ಚಿಗೆ ಬೆಳೆಯಿ-ಸದೆ, ಕೊನೆಗೆ ಒಂದೆ ಒಂದು ಮಾತನ್ನು ಹೇಳುತ್ತೇನೆ ಕೇಳು: ನಾವಿಬ್ಬರೂ ಒಬ್ಬರನ್ನೊಬ್ಬರು ಕಂಡು, ಒಂದೆರಡು ಗಳಿಗೆ ಮಾತನಾಡುತ್ತ ಕುಳಿತುಕೊಳ್ಳಬಹುದಾದ ಸಂದರ್ಭ ದೊರೆತರೆ ತುಂಬ ಚೆನ್ನಾಗುವುದು. ನೀನಿಲ್ಲಿ ಬಂದರೆ ನನ್ನ ಮನೆಯ ಪಕ್ಕದಲ್ಲಿದ್ದ ಸುಂದರವಾದ ಗಿಡದ ಗುಂಪನ್ನು ತೋರಿಸುವೆನು; ನನ್ನ ಯಾವ ಗ್ರಂಥಗಳೂ ನಿನ್ನ ಮನಸ್ಸಿಗೆ ಖಂಡಿತಮಾಡಕೊಡದ ತತ್ತ್ವವನ್ನು — ಎಂದರೆ "ಈ ಜೀವನವನ್ನು ವ್ಯರ್ಥವಾಗಿ ಹೋಗಲಾಡಿಸುವುದು ಕೇವಲ ಮೂರ್ಖತನ" ಎಂಬ ಮಾತನ್ನು, ಆ ತೋಪಿನ ಅಪ್ರತಿಮ ಸೌಂದರ್ಯವು ಖಂಡಿತಮಾಡಿಕೊಡಬಲ್ಲದು. ಗೆಳೆಯಾ, ನಿಜವಾಗಿಯೂ ಬಂದುಬಿಡು! "ಇವನೊಬ್ಬ ಸರಳ-ಸ್ವಭಾವದ ಆಶಾವಾದಿಯಿರುತ್ತಾನೆ—ಆಯಿತು!" ಎಂದು, ನೀನು ನನ್ನನ್ನು ಕುರಿತು ಆಡಿಕೊಂಡರೂ, ನಾನು ನಿನ್ನನ್ನು ಆಕ್ಷೇಪಿಸಲಾರೆ. ನಿನ್ನ ಪಕ್ಷವನ್ನು ಸಮರ್ಥಿಸಬಹುದಾದ ಎಲ್ಲ ಪ್ರಮಾಣಗಳನ್ನೂ ನನ್ನ ಮುಂದೆ ಇರಿಸು; ಸಾಕಷ್ಟು ಈ ಐಹಿಕಜಗತ್ತನ್ನು ಧಿಕ್ಕರಿಸು; ನಾನು ನಿನ್ನ ಎಲ್ಲ ಮಾತುಗಳನ್ನೂ ತಲೆದೂಗಿ ಒಪ್ಪುತ್ತೇನೆ. ಎಲ್ಲಮಾತುಗಳ-ನ್ನೆಂದರೆ ನಿನ್ನ ಕೊನೆಯ ನಿರ್ಣಯವನ್ನು ಮಾತ್ರ ಒಪ್ಪಲಾರೆ. ನಮ್ಮ ವಾದ-ಚರ್ಚೆಗಳೆಲ್ಲವನ್ನೂ ಮುಗಿಸೋಣ, ಬಳಿಕ ಈ ಬಡವನ ಮನೆಯ ರೊಟ್ಟಿ-ಅಂಬಲಿಗಳನ್ನು ಒಂದೆಡೆಯಲ್ಲಿಯೆ ಕುಳಿತು ಸೊಗಸಾಗಿ ಊಟಮಾಡೋಣ! ಆಗ ಹತ್ತಿರದಲ್ಲಿಯೆ ಆಡುತ್ತಿರುವ ನನ್ನ ಎಳಮಕ್ಕಳ ಮುದ್ದುಮುದ್ದಾದ ತೊದಲುಮಾತುಗಳನ್ನು ಕೇಳಿದೆನೆಂದರೆ "ಅಯ್ಯೋ! ನಾವು ಇನ್ನೂ ತರುಣರಾಗಿದ್ದೇವಲ್ಲವೇ! ಈ ಬದುಕಿನಲ್ಲಿಯ ಸ್ವಾರಸ್ಯವನ್ನು ಇನ್ನೂ ಎಷ್ಟೋ ವರ್ಷ-ಗಳ ವರೆಗೂ ನಾವು ಸುಲಿದು ಸೂರೆಗೊಳ್ಳಬೇಕಾಗಿದೆ!" ಎಂದು ನಮ್ಮಿಬ್ಬರಿಗೂ ಎನಿಸದಿರದೆಂದು ನನ್ನ ನಿಶ್ಚಿತವಾದ ಭಾವನೆ! ನಿಲ್ಲಬೇಡ, ಬಂದಬಿಡು!"

---


ಕೂದಲಿಗೆ ಪುಷ್ಟಿ! ನಿದ್ರೆಗೆ ಉತ್ತೇಜನ!! ಕಣ್ಣುಗಳಿಗೆ ಆರೋಗ್ಯ!!!

**ಕುಂತಲ—ವಿಕಾಸ ತೈಲ**

ಆಯುರ್ವೇದ ಶಾಸ್ತ್ರಪದ್ಧತಿಯಿಂದ ಸಿದ್ಧಪಡಿಸಿದುದು.

ಈ ತೈಲವನ್ನು ಉಪಯೋಗಿಸುವದರಿಂದ ಅಕಾಲದಲ್ಲಿ ಬರುವ ನರೆಗೂದಲುಗಳು ಪೂರ್ಣವಾಗಿ ಕಪ್ಪಾಗುವವು. ಕೂದಲು ಉದುರುವುದು ತೀವ್ರ ನಿಲ್ಲುವದು. ಮತ್ತು ಪುನಃ ದಟ್ಟಾಗಿ ಬೆಳೆಯುವದು. ಸಾವಿರಾರು ಜನರು ಉಪಯೋಗಿಸಿ ಮನಗಂಡಿದ್ದಾರೆ. ಅನೇಕ ಡಾಕ್ಟರರೂ ಶಾಸ್ತ್ರಜ್ಞರೂ ಶಿಫಾರಸು ಮಾಡಿದ್ದಾರೆ.

೪ ಔಂಸಿನ ೧ ಬಾಟ್ಲಿಗೆ ೦—೧೨—೦. ಪೋಸ್ಟಿನಿಂದ ಮುಂಗಡ ೧-೦-೦ ಮಾತ್ರ.

ವರ್ತಕರಿಗೆ ವಿಪುಲ ಕಮಿಶನ್.

ಮಾಧವ ಫಾರ್ಮಾಸ್ಯುಟಿಕಲ್ ಆ್ಯಂಡ ಪರ್ಫ್ಯೂಮರಿ ವರ್ಕ್ಸ್, ಧಾರವಾಡ


CC-0. Jangamwadi Math Collection. Digitized by eGangotri

# ಕರ್ನಾಟಕ ಭಕ್ತ ವಿಜಯ

ದ್ವಿತೀಯ ಭಾಗ ರೂ. ೨-೮-೦

೪೫೦ ಪುಟಗಳ ಅಮೌಲ್ಯಗ್ರಂಥ
ಗ್ರಂಥಕರ್ತರು: ಬೇಲೂರು ಕೇಶವದಾಸರು.

## ಇತರ ಗ್ರಂಥಗಳು

ಕರ್ನಾಟಕ ಭಕ್ತ ವಿಜಯ ಭಾಗ ೧ ರೂ. ೨-೮-೦
ಕನ್ಯಕಾ ಪುರಾಣ ರೂ. ೧-೦-೦
ಶ್ರೀರಾಘವೇಂದ್ರ ವಿಜಯ ರೂ. ೦-೮-೦

ದೊರೆಯುವ ಸ್ಥಳ

೧. ಸುಬೋಧ ಪ್ರಕಟನಾಲಯ, ಚಾಮರಾಜ ಪೇಟೆ ಬೆಂಗಳೂರು ನಗರ
೨. ಬೇಲೂರು ಕೇಶವದಾಸರು ಚಾಮರಾಜಪುರಂ ಮೈಸೂರು.



# ಕಲಿಯುಗ

ಕಾಮವಿಜ್ಞಾನ, ಆರೋಗ್ಯವಿಜ್ಞಾನ, ಸಮಾಜ-ವಿಜ್ಞಾನಗಳಿಗೆ ಮೀಸಲಾದ, ಕನ್ನಡಸಾಹಿತ್ಯದ ಇತಿಹಾಸದಲ್ಲೇ

ಪ್ರಥಮ ಮಾಸಪತ್ರಿಕೆ



ಸಂಪಾದಕರು:
ಆಯುರ್ವೇದವಿದ್ವಾನ್
ಡಾ॥ ಎಂ. ಗೋಪಾಲಕೃಷ್ಣರಾಯರು

ವಾರ್ಷಿಕ ಚಂದಾ ೧॥ ರೂ. ಬಿಡಿಸಂಚಿಕೆ ೨ ಆಣೆ

ಕಲಿಯುಗ ಕಾರ್ಯಾಲಯ, ಧಾರವಾಡ.



ನಿಮ್ಮ ಎಲ್ಲ ಬಗೆಯ ಹಳೆಯ ರೋಗಗಳಿಗೂ ಆಹಾರವಿಜ್ಞಾನ, ದಾಂಪತ್ಯವಿಜ್ಞಾನ, ಸಂತಾನ-ವಿಜ್ಞಾನಾದಿ ವೈಜ್ಞಾನಿಕ ಗ್ರಂಥಕರ್ತರಾದ ವೈದ್ಯಭಾನು ಶ್ರೀ. ಡಿ. ಕೆ. ಭಾರದ್ವಾಜ ಎಂ. ಡಿ. (ಆಯುರ್ವೇದ) ಅವರ ಚಿಕಿತ್ಸೆಯನ್ನು ಪಡೆದು ಸುಖವಾಗಿರಿ.

ಬಿಳಿಯ ತೊನ್ನಿಗೆ (ಲ್ಯೂಕೋಡರ್ಮಾ) ಹೊರಲೇಪನೌಷಧ ೫ ದಿನಗಳಿಗೆ ೨—೦—೦

ದೃಷ್ಟಿಮಾಂದ್ಯ, ಇರುಳುಗಣ್ಣು, ಪರೆಬರುತ್ತಿರುವುದು ಮೊದಲಾದ್ದಕ್ಕೆ ೧ ತಿಂಗಳಿಗಾಗುವಷ್ಟು ನಯನಾಂಜನ ೧—೦—೦

ರಕ್ತಶುದ್ಧಿ, ಮಲಶುದ್ಧಿ, ಆರೋಗ್ಯರಕ್ಷಣೆಗಾಗಿ 'ಅಮೃತ' ಪಾನ. ಕಾಫಿಯಂತೆ ಉಪಯೋಗಿಸಬಹುದು. ಸುಮಾರು ೫೦ ಕಪ್ಪುಗಳಿಗಾಗುವಷ್ಟು ೧ ಸೇರು ಚೂರ್ಣ. ೧—೦—೦

ಗಜಕರ್ಣ, ತದ್ದು ಮೊದಲಾದುವುಗಳಿಗೆ ರಾಮಬಾಣ—೧ ಔನ್ಸು. ೧—೦—೦

ಎಲ್ಲದಕ್ಕೂ ಅಂಚೇವೆಚ್ಚ ಬೇರೆ ಬೇರೆ ೦-೭-೦ ಆಗುವುದು. ಹೆಚ್ಚು ಮಾಹಿತಿಗೆ, ರೋಗವಿವರವನ್ನು ಸ್ಟಾಂಪಿಟ್ಟು ಅಥವಾ ರಿಪ್ಲೈಕಾರ್ಡು ಬರೆದು ತಿಳಿಯಿರಿ:

ಶ್ರೀರಾಮಕೃಷ್ಣ ಚಿಕಿತ್ಸಾಲಯ,
ಬಸವನಗುಡಿ, ಬೆಂಗಳೂರು ಸಿಟಿ.



# ಶರಣಸಂದೇಶ

ನೀವು ಹಿಂದುಗಳೋ ?
ಹಾಗಾದರೆ ಜಾಗ್ರತೆ ಚಂದಾದಾರರಾಗಿರಿ !

ಇದು ವಿಚಾರಕ್ರಾಂತಿಯ ವಾರಪತ್ರಿಕೆ

ಸಂಪಾದಕರು:

ಶ್ರೀ. ಹರ್ಡೇಕರ ಮಂಜಪ್ಪನವರು

ಹಿಂದೂಸಮಾಜಸುಧಾರಣೆ, ಹಿಂದೂ ಸಂಘಟನೆ, ಧಾರ್ಮಿಕ ಸತ್ಯಸಿದ್ಧಾಂತಗಳ ಪ್ರತಿಪಾದನೆ, ಶ್ರೀ ಬಸವಾದಿ ಪ್ರಮಥರ ತತ್ತ್ವಪ್ರಸಾರಣೆ ಮತ್ತು ರಾಜಕೀಯ ಗುಣದೋಷ ವಿಮರ್ಶನೆ ಇವೇ ಈ ಪತ್ರಿಕೆಯ ಪಂಚಪ್ರಾಣ.

ಮ್ಯಾನೇಜರ್, ಶರಣಸಂದೇಶ
ಪೋ. ಆಲಮಟ್ಟಿ, ಜಿ. ವಿಜಾಪೂರ


CC-0. Jangamwadi Math Collection. Digitized by eGangotri

# ಬಾದಾಮಿಯ ಚಾಲುಕ್ಯರ ಕಾಲದ ಸಾಂಸ್ಕೃತಿಕ ಜೀವನ

ಲೇಖಕರು: ಶ್ರೀಮಾನ್ ಪಾಂ. ಭೀ. ದೇಸಾಯಿ ಎಂ. ಎ. ( ಆನರ್ಸ್ ), ಧಾರವಾಡ



## ೧ನೆಯ ಲೇಖಾಂಕ — ರಾಜವಂಶಪರಿಚಯು

ಚಾಲುಕ್ಯ ಸಾಮ್ರಾಜ್ಯದೊಡನೆ ಕರ್ಣಾಟಕದ ಭಾಗ್ಯರೇಷೆ ಊರ್ಧ್ವಗಾಮಿಯಾಯಿತು. ಚಾಲುಕ್ಯ ಸಾಮ್ರಾಜ್ಯವು ಕನ್ನಡಿಗರ ಸಾಮ್ರಾಜ್ಯವು, ಕನ್ನಡ ಜನಾಂಗದ ಮೊದಲನೆಯ ಸಾಮ್ರಾಜ್ಯವು.... ಎಂಬುದು ಸ್ಪಷ್ಟವಿದೆ. ಕರ್ಣಾಟಕವೆಂಬುದು ಬಹು ಪ್ರಾಚೀನವೂ ವಿಸ್ತೃತವೂ ಆದ ಒಂದು ಸ್ವತಂತ್ರ ಜನಾಂಗವಿದೆ.



**ಒಡನುಡಿ**

ಕರ್ನಾಟಕದ ಚರಿತೆಯನ್ನು ಸಾಂಗೋಪಾಂಗವಾಗಿ ವಿವರಿಸಲು ಸಹಾಯಕವಾಗಬಲ್ಲ ಸಾಧನ ಸಾಮುಗ್ರಿಯು, ದುರ್ದೈವದಿಂದ ಅಲ್ಪವೂ ಅಪೂರ್ಣವೂ ಆಗಿದೆ. ಅದರಲ್ಲಿಯೂ ಹಿಂದು-ಹಿಂದಿನ ಕಾಲಗರ್ಭದೊಳಗೆ ಹೋದಂತೆ ಈ ಕೊರತೆ ಹೆಚ್ಚು ಹೆಚ್ಚು ಪ್ರತೀತಿಗೆ ಬರುತ್ತದೆ. ಪ್ರಸ್ತುತ ಪ್ರಬಂಧದ ವಿಷಯವಾದ ಕಾಲ-ಖಂಡವು, ಕರ್ನಾಟಕದ ಇತಿಹಾಸದ ಉಜ್ವಲಭಾಗವೂ ಕನ್ನಡನಾಡಿನ ನಿಜವಾದ ಇತಿಹಾಸದ ಆರಂಭಕಾಲವೂ ಆಗಿದ್ದರೂ, ಈ ಕಾಲದ ಚರಿತೆಯ ಮೇಲೆ ಸಾಕಷ್ಟು ಬೆಳಕನ್ನು ನೀಡುವ ಸಾಹಿತ್ಯವು ಉಪಲಬ್ಧವಾಗಿಲ್ಲ. ರಾಜಕೀಯ ಚರಿತೆಯಲ್ಲಿಯ ಹಲವು ಪ್ರಮುಖಘಟನೆ-ಗಳನ್ನು ಸ್ಥೂಲವಾಗಿ ತಿಳುಹುವ ಕೆಲವು ಪ್ರಮಾಣಗಳು ಮಾತ್ರ ಸಿಕ್ಕುತ್ತವೆ. ರಾಜ್ಯಶಾಸನ, ರಾಜ್ಯವಿಧಾನ, ಮೊದಲಾದ ರಾಜಕೀಯಜೀವನದ ಇತರ ಅನೇಕ ಅಂಗಗಳ ಬಗೆಗೂ, ಸಾಮಾಜಿಕ ಜೀವನದ ವಿವಿಧ-ವಿಸ್ತೃತ ಸನ್ನಿವೇಶಗಳ ಬಗೆಗೂ, ಪ್ರತ್ಯಕ್ಷವಾಗಿ ವಿದಿತ-ವಾಗುವ ಸಂಗತಿಗಳು ಅತ್ಯಲ್ಪವಾಗಿವೆ.

ಹೀಗೆ ಪ್ರತ್ಯಕ್ಷವಾದ ಸಾಧನಗಳು ಸ್ವಲ್ಪವಾಗಿದ್ದರೂ, ಅಪ್ರತ್ಯಕ್ಷವಾಗಿ ಈ ಕಾಲದ ಮೇಲೆ ಪ್ರಕಾಶವನ್ನು ಕೆಡಹುವ ಬೇರೆಯ ಕೆಲವು ಆಧಾರಗಳಿಂದ, ಈ ಕಾಲದ ಕತ್ತಲೆಯಲ್ಲಿ ಕೆಲಮಟ್ಟಿಗೆ ಇಣಿಕಿ ನೋಡಬಹುದು. ಭಾರತೀಯರಲ್ಲಿ ಪುರಾಣಪರಂಪರಾಭಕ್ತಿ ವಿಶೇಷವಾಗಿ ಇದ್ದುದು ಸಿದ್ಧವಾಗಿದೆ. ಮೂಲತಃ ನೈಸರ್ಗಿಕವಾಗಲಿ, ಸಾಂಸ್ಕೃತಿಕವಾಗಲಿ ವಿಭಿನ್ನತೆಗಳು ಇಲ್ಲದೆ ಇರುವಲ್ಲಿ, ದೇಶಕೃತವಾಗಲಿ, ಕಾಲಕೃತವಾಗಲಿ, ವಿಶಿಷ್ಟ ಅಂತರವು ಒದಗಿದರೂ ಇಲ್ಲಿಯ ಜನಾಂಗದ ಸಾಮಾನ್ಯ ಜೀವನದಲ್ಲಿ ಅಂತಹ ವಿಶೇಷ ವ್ಯತ್ಯಾಸಗಳು ದೃಗ್ಗೋಚರವಾಗುವುದಿಲ್ಲ. ಶ್ರೀ. ಅಳತೇಕರರು ಹೇಳುವಂತೆ (प्रा. भा. शी. प. प्रस्तावना) ಭಾರತೀಯ ಸಂಸ್ಕೃತಿಯ ಪಡಿಯಚ್ಚು ಉಕ್ಕಿನ ಕಟ್ಟಿನಿಂದ ಬಿಗಿದಂತೆ ಸ್ಥಾಯಿಯಾಗಿರುವುದರಿಂದ, ಒಂದೆರಡು ಶತಮಾನ ಆಚೆ-ಈಚೆಯ ಕಾಲದಲ್ಲಿ ದೊರೆವ ಸಂಗತಿ-ಗಳಿಂದ ಅದರ ನೆರೆಯ ಕಾಲದ ಸಂಗತಿಗಳನ್ನು ಊಹಿಸಿ-ಕೊಂಡರೆ, ಕಾಲವಿಪರ್ಯಾಸದೋಷಕ್ಕೆ ಗುರಿಯಾಗುವ ಪ್ರಸಂಗವು ಪ್ರಾಯಃ ಬರಲಾರದು....ಎಂದೆನಿಸುತ್ತದೆ. ಈ ತತ್ತ್ವವನ್ನು ನೆನೆದು, ಪ್ರಸ್ತುತ ಪ್ರಬಂಧವನ್ನು ಬರೆವಾಗ ಕೆಲವಡೆ, ಪ್ರಸ್ತುತಕಾಲಖಂಡಕ್ಕೆ ಈಚೆಯದಾದ ರಾಷ್ಟ್ರ-ಕೂಟರ ಕಾಲದ ಕೆಲವು ಘಟನೆಗಳನ್ನು ಆಧಾರವಾಗಿ ಇಟ್ಟುಕೊಳ್ಳಲಾಗಿದೆ; ಕೆಲವಡೆ ಅಖಿಲಭಾರತವರ್ಷಕ್ಕೆ ಸಂಬಂಧಪಡುವ ಕೆಲವು ವಿಷಯಗಳನ್ನು ಕರ್ನಾಟಕಕ್ಕೆ ಅಳವಡಿಸಿಕೊಳ್ಳಲಾಗಿದೆ. ಇದಕ್ಕಾಗಿ ಸುಜ್ಞರು ಆಕ್ಷೇಪಿಸ-ಲಿಕ್ಕಿಲ್ಲವಾಗಿ ನಂಬಿದ್ದೇನೆ.

CC-0. Jangamwadi Math Collection. Digitized by eGangotri

ಈ ವಿಷಯವು ಸ್ವಾಭಾವಿಕವಾಗಿಯೆ ಇಬ್ಭಾಗವಾಗಿರುವುದರಿಂದ, ಬಾದಾಮಿಯ ಚಾಲುಕ್ಯರ ಕಾಲದ ಕರ್ನಾಟಕದ ರಾಜಕೀಯಜೀವನವನ್ನು ಕುರಿತು ಮೊದಲು ವಿವೇಚಿಸಿ, ಆಮೇಲೆ ಸಾಮಾಜಿಕ ಜೀವನವನ್ನು ಕುರಿತು ವಿವೇಚಿಸುವ !

## ರಾಜಕೀಯ ಜೀವನ

**ಒಂದು ರಹಸ್ಯಮಯ ಚಿತ್ರ**

ತನ್ನ ಅತುಲ ಪರಾಕ್ರಮದಿಂದ ದಕ್ಷಿಣಭಾರತವನ್ನು ಪಾದಾಕ್ರಾಂತ ಮಾಡಿ, ಅಖಿಲ ಉತ್ತರಭಾರತದ ಅಧಿರಾಜನಾದ ಕನೋಜದ ಶ್ರೀಹರ್ಷವರ್ಧನನನ್ನು ನರ್ಮದೆಯ ಆಚೆಗೆ ಪರಾಭವಗೊಳಿಸಿ 'ಪರಮೇಶ್ವರ' ಎಂಬ ಅತ್ಯಂತ ಗೌರವದ ಬಿರುದನ್ನು ಧರಿಸಿದ ಸಾರ್ವಭೌಮ ಸತ್ಯಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜ ( ಇಮ್ಮಡಿ ) ಪುಲಿಕೇಶಿ, ತನ್ನ ಓಲಗದಲ್ಲಿ ಸಿಂಹಾಸನದ ಮೇಲೆ ಸುಖಾಸೀನನಾಗಿ ಕುಳಿತಿರುವನು. ಕೆಳಗಡೆಯಲ್ಲಿ, ಇಕ್ಕೆಲದಲ್ಲಿಯೂ, ಹಿಂದೆ-ಮುಂದೆಯೂ, ಅಲ್ಲಲ್ಲಿ ವಿನಮ್ರಭಾವದಿಂದ ಪರಿಜನರು, ಸಚಿವರು, ಸಭಾಸದರು, ಕಲಾವಂತರು, ದೂತರು ಆತನನ್ನು ಉಪಚರಿಸುತಲಿಹರು. ಸಮ್ಮುಖದಲ್ಲಿ ಬೇರೆಯ ಉಡುಪು ತೊಡಪುಗಳನ್ನು ಧರಿಸಿದ ಪರದೇಶದ ಅತಿಥಿಗಳು — ಇರಾಣದ ರಾಯಭಾರಿಗಳು ವೈಬಾಗಿ ಕೈಜೋಡಿಸಿ ನಿಂತುಕೊಂಡು, ತಮ್ಮ ಸಂದೇಶವನ್ನು ನಿವೇದಿಸುತ್ತಿರುವರು. ಭವ್ಯವಾದ ನೋಟ! ಚಿರಸ್ಮರಣೀಯ ಸಂನಿವೇಶ! ಕನ್ನಡಿಗರಿಗೆ ಅತ್ಯಭಿಮಾನದ ವಿಷಯ !

ರೋಮಹರ್ಷಣವಾದ ಈ ದೃಶ್ಯವು ಅಜಂತೆಯ ಒಂದನೆಯ ಗವಿಯಲ್ಲಿಯ ಲೇಪನ ಚಿತ್ರಶಿಲ್ಪದಲ್ಲಿ (frescos) ಚಿತ್ರಿತವಾಗಿದೆ. ಈ ಐತಿಹಾಸಿಕ ಘಟನೆಯ ಕಾಲವು ಕ್ರಿ.ಶ. ೬೨೫-೨೬. ಐದು ವರ್ಷಗಳ ಹಿಂದೆ ಈ ಪ್ರತಾಪಮೂರ್ತಿ ವರ್ಧಿಷ್ಣುವಾದ ಹರ್ಷವರ್ಧನನ ಉತ್ಕರ್ಷವನ್ನು ತಡೆದು ನಿಲ್ಲಿಸಿ, ಆತನ ಪ್ರಭಾವವನ್ನು ಕಳೆಗುಂದಿಸಿದ್ದನು. ಅಂದಿನಿಂದ ಈತನ ಕೀರ್ತಿಚಂದ್ರಿಕೆಗೆ ಭಾರತಭೂವಲಯವು ಕಿರಿದಾಗಿ, ಅದು ದ್ವೀಪಾಂತರಗಳನ್ನು ಆಕ್ರಮಿಸತೊಡಗಿತು. ಇಂದು ಆತನ ಮುಂದೆ ನಿಂತ ಈ ರಾಯಭಾರಿಗಳು, ಆತನ ಪ್ರಭೆಯಿಂದ ಆಕರ್ಷಿತನಾಗಿ ಆತನೊಡನೆ ಸ್ನೇಹ ಸಂಬಂಧಗಳನ್ನು ಬೆಳೆಯಿಸಲು ಹಂಬಲಿಸಿದ ಇರಾಣದೇಶಾಧಿಪತಿ ಇಮ್ಮಡಿ ಖುಸ್ರುವಿನಿಂದ ಕಳುಹಲ್ಪಟ್ಟವರು.೧

೧) V. S. p. 442.

ಬರಿಯ ಈ ಇತಿಹಾಸಪ್ರಸಿದ್ಧ ಘಟನೆಯ ಮೂಲಕ ಅಲ್ಲ, ಕಲಾವಿಲಾಸದ ಪರಿಯಿಂದಲೂ ಈ ಚಿತ್ರ ಕರ್ನಾಟಕ ಸಂಸ್ಕೃತಿಯ ಜೀವನಪ್ರಪಂಚದಲ್ಲಿ ಅಜರಾಮರವಾಗಿದೆ. ಅದು ಹೇಗೆ ಎಂಬುದನ್ನು ಮುಂ[illegible] ನೋಡುವ !

ಬಾದಾಮಿಯ ಚಾಲುಕ್ಯರ ಸಾಮ್ರಾಜ್ಯಗಿರಿರಾಜಿಯ[illegible] ಇಮ್ಮಡಿ ಪುಲಿಕೇಶಿಯ ಆಳಿಕೆ ಉತ್ತುಂಗವಾದ ಶಿಖ[illegible] ಬರಿಯ ಪರಾಕ್ರಮ-ರಾಜ್ಯವಿಸ್ತಾರಗಳ ದೃಷ್ಟಿಯಿಂದ[illegible] ಅಲ್ಲ; ಧರ್ಮ, ನೀತಿ, ಕಲೆ, ನಾಗರಿಕತೆ ಮೊದಲಾ[illegible] ಸಂಸ್ಕೃತಿಯ ಬೇರೆ ಬೇರೆ ಅಂಗಗಳ ವಿಚಾರದಿಂದಲೂ ಈ ಆಳಿಕೆ ಚಿರಸ್ಮರಣೀಯವಾಗಿದೆ. ಸುಮಾರು ಒಂದು ನೂ[illegible] ವರ್ಷಗಳ ಹಿಂದೆ ದಕ್ಷಿಣಭಾರತದ ನಭೋಮಂಡಲದ[illegible] ಮಿನುಗಲಾರಂಭಿಸಿದ ಈ ಚಿಕ್ಕ ರಾಜ್ಯವು, ಅಲ್ಪಾವಧಿಯ[illegible] ಕರ್ನಾಟಕದ ಪ್ರಥಮ-ಪ್ರಚಂಡ ಸಾಮ್ರಾಜ್ಯವಾಗಿ ಹೇ[illegible] ವಿಕಾಸಗೊಂಡಿತು ?........ ಎಂಬುದನ್ನು ನೋಡುವು[illegible] ಉದ್ಬೋಧಕವಾಗಿದೆ. ಆದುದರಿಂದ ರಾಜಕೀಯ ಕ್ಷೇತ್ರದ[illegible] ಈ ಚಾಲುಕ್ಯಸಾಮ್ರಾಜ್ಯವು ಯಾವ ವಿಧಾನದಿಂದ ಅಭ್ಯುದಯಾಭಿವೃದ್ಧಿಗಳನ್ನು ಪಡೆಯಿತು ?........ಎಂಬುದನ್ನು ಮೊದಲು ಸಂಕ್ಷೇಪವಾಗಿ ವಿಮರ್ಶಿಸುವ !

**ಸಾಮ್ರಾಜ್ಯದ ಉದಯಕಾಲೀನ ಪರಿಸ್ಥಿತಿ**

ದಕ್ಷಿಣಭಾರತದ ಇತಿಹಾಸದಲ್ಲಿ ಮೊದಲನೆಯ ಸಾಮ್ರಾಜ್ಯವು ಈ ಚಾಲುಕ್ಯರದು. ಈ ಸಾಮ್ರಾಜ್ಯ[illegible] ಸುಮಾರು ಆರನೆಯ ಶತಮಾನ[illegible] ಆರಂಭಕಾಲದಲ್ಲಿ, ದಕ್ಷಿಣ ಭಾರತ[illegible] ಕ್ಷಿತಿಜದ ಮೇಲೆ ಉದಯವಾ[illegible]ಯಿತು. ಈ ಸಾಮ್ರಾಜ್ಯ[illegible] ಉದಯವಾಗುವ ಪೂರ್ವದ[illegible] ದಕ್ಷಿಣಭಾರತದ ರಾಜಕೀಯ ಪರಿಸ್ಥಿತಿ ಹೇಗೆ ಇದ್ದಿತ[illegible] ಎಂಬುದನ್ನು ಇಲ್ಲಿ ಸ್ವಲ್ಪ ವಿಹಂಗಮದೃಷ್ಟಿಯಿಂ[illegible] ನಿರೀಕ್ಷಣ ಮಾಡುವುದು ಯುಕ್ತವಾಗಿದೆ. ಎರಡು-ಮೂ[illegible] ಶತಮಾನಗಳ ಹಿಂದೆ ಶಾತವಾಹನರ ಬಲಿಷ್ಠರಾ[illegible] ಪಶ್ಚಿಮಪ್ರದೇಶದಲ್ಲಿ ರಾಜ್ಯವನ್ನಾಳಿ ಅಸ್ತಂಗತವಾಗಿ[illegible] ಸಳಂಕಾಯನ, ವಾಕಾಟಕ, ವಿಷ್ಣುಕುಂಡಿನ್ ಮೊದಲಾ[illegible] ಹಲವು ಸಣ್ಣ ದೊಡ್ಡ ರಾಜವಂಶಗಳು, ಉತ್ತರದ ಹಾ[illegible] ಪೂರ್ವದ ಪ್ರಾಂತಗಳಲ್ಲಿ ಕೆಲಕಾಲ ಮಿನುಗಿ ಮರೆಯಾ[illegible]ದ್ದುವು. ಎರಡು ಮೂರು ಶತಮಾನಗಳ ಹಿಂದೆ ದಕ್ಷಿಣ[illegible] ಸ್ಥಾಪಿತವಾದ ಗಂಗ-ಕದಂಬರ ಅರಸೊತ್ತಿಗೆಗಳು ಕೆಲ[illegible] ಅಭಿವೃದ್ಧಿಯನ್ನು ಪಡೆದು ಕ್ಷೀಣಬಲವಾಗಿದ್ದು[illegible]

CC-0. Jangamwadi Math Collection. Digitized by eGangotri

ಆಗ್ನೇಯಪ್ರದೇಶದಲ್ಲಿ ಬಹುಕಾಲದಿಂದ ಬೇರೂರಿದ ಪಲ್ಲವ ಅರಸರು, ಈಗೀಗ ಉತ್ಕರ್ಷಾಭಿಮುಖರಾಗಿದ್ದರು. ಪಲ್ಲವರನ್ನುಳಿದು ಮಿಕ್ಕ ಈ ಎಲ್ಲ ರಾಜ್ಯಗಳು ಅಷ್ಟು ದೀರ್ಘಜೀವಿಗಳಾಗಲಿ ಪ್ರಭಾವಶಾಲಿಗಳಾಗಲಿ ಆಗಿರಲಿಲ್ಲ. ಅವುಗಳ ಶಕ್ತಿ ಅಲ್ಪ, ವ್ಯಾಪ್ತಿ ಮರ್ಯಾದಿತ. ಅವು ಪ್ರಾದೇಶಿಕರಾಜ್ಯಗಳು. ವಿಸ್ತಾರವಾದ ರಾಜ್ಯವನ್ನು ಸಂಪಾದಿಸಿ, ವಿಶಾಲವಾದ ಜನಾಂಗದ ಮೇಲೆ ಸ್ಥಿರವಾಗಿ ತಮ್ಮ ಪ್ರಭಾವವನ್ನು ಬೀರುವ ಸಾಮರ್ಥ್ಯವು ಅವುಗಳಲ್ಲಿ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ, ಆರನೆಯ ಶತಮಾನದ ಮಧ್ಯಭಾಗದಲ್ಲಿ ಎರಡು ರಾಜ್ಯಶಕ್ತಿಗಳು ದಕ್ಷಿಣಭಾರತದ ಒಡೆತನವನ್ನು ಪಡೆವುದಕ್ಕಾಗಿ ಹೋರಾಡಲನುವಾದುವು. ಅವುಗಳಲ್ಲಿ ಒಂದನೆಯ ಶಕ್ತಿಯೆಂದರೆ ಪಲ್ಲವರು, ಎರಡನೆಯ ಶಕ್ತಿಯೆಂದರೆ ಚಾಲುಕ್ಯರು. ಮುಂದೆ ಎರಡು ಶತಮಾನಗಳ ವರೆಗೆ, ಮಹತ್ವಾಕಾಂಕ್ಷೆಯವೂ ಸಮಬಲದುವೂ ಆದ ಈ ಎರಡು ಮನೆತನಗಳ ನಡುವೆ ರಾಜಕೀಯ ವರ್ಚಸ್ಸಿಗಾಗಿ ಎಡೆಬಿಡದೆ ಕದನಗಳು ನಡೆದುವು. ಅವುಗಳಲ್ಲಿ ಚಾಲುಕ್ಯರೆ ಹೆಚ್ಚುಸಲ ಜಯಶಾಲಿಗಳಾಗಿ, ದೀರ್ಘಕಾಲದ ವರೆಗೆ ದಕ್ಷಿಣಭಾರತದ ಸಾರ್ವಭೌಮತ್ವದ ಗೌರವವನ್ನು ಅನುಭವಿಸಿದರು.

'ಈ ಚಾಲುಕ್ಯರ ಉಗಮವು ಹೇಗೆ, ಎಲ್ಲಿಂದ ಆಯಿತು?' ಎಂಬುದು ಸಂದಿಗ್ಧವಾಗಿದೆ. ಇವರ ಮೂಲ ಪುರುಷರು ಉತ್ತರದಿಂದ ಬಂದವರು—ಎಂದು ಹೇಳುವುದರ ಕಡೆಗೆ ಪಂಡಿತರ ಅಭಿಪ್ರಾಯಗಳು ಒಲೆವುವು. ಆದರೆ ಇವರು ದಾಕ್ಷಿಣಾತ್ಯರು, ಕನ್ನಡಿಗರು ಎಂಬ ವಾದದಲ್ಲಿ ವಿಚಾರಣೀಯ ಅಂಶವು ಇಲ್ಲದೆ ಇಲ್ಲ (೩). ಅದೇನೆ ಇರಲಿ, ಚಾಲುಕ್ಯರು ಅಲ್ಪಾವಧಿಯಲ್ಲಿ ಕರ್ನಾಟಕದ ರಕ್ತದಲ್ಲಿ ಸಮರಸರಾಗಿ, ಕರ್ನಾಟಕದ ಸಾಮ್ರಾಜ್ಯವನ್ನು ಕಟ್ಟಿ, ಕರ್ನಾಟಕದ ಅಭಿಮಾನವನ್ನು ತೊಟ್ಟು, ಕನ್ನಡ ಜನಾಂಗವನ್ನೂ ಕನ್ನಡ ಸಂಸ್ಕೃತಿಯನ್ನೂ ಘನತೆಗೇರಿಸಿದರು ಎಂಬುದರಲ್ಲಿ ಸಂದೇಹವಿಲ್ಲ. ಜಯಸಿಂಹನು ಈ ಮನೆತನದ ಮೂಲಪುರುಷನು. ಈತನು ಮೊದಲು ಕದಂಬರಾಜ್ಯದಲ್ಲಿ ಅಧಿಕಾರಮಾಡಿದ್ದು, ಬಳಿಕ ಸ್ವತಂತ್ರನಾಗಲು ಯತ್ನಿಸಿದನೆಂದೂ, ಮುಂದೆ ತ್ರಿಲೋಚನ ಪಲ್ಲವನೊಡನೆ ಈತನ ವೈರವು ಬೆಳೆದು ಆತನಿಂದ ಹತನಾದನೆಂದೂ ತಿಳಿಯುತ್ತದೆ. (೪) ಜಯಸಿಂಹನ ಮಗನಾದ **ರಾಜಸಿಂಹ ರಣರಾಗನು** ಪಲ್ಲವರನ್ನು ಸೋಲಿಸಿ, ಮರಳಿ ಚಾಲುಕ್ಯರಾಜ್ಯವನ್ನು ಸಂಸ್ಥಾಪಿಸಿದನು.

ಜಯಸಿಂಹ-ರಾಜಸಿಂಹರ ಪ್ರಯತ್ನಗಳಿಂದ ಪ್ರಸ್ಥಾಪಿತವಾದ ಚಾಲುಕ್ಯರಾಜ್ಯವು, ರಾಜಸಿಂಹನ ಮಗನಾದ (ಒಂದನೆಯ) ಪುಲಿಕೇಶಿಯ ಪರಾಕ್ರಮದಿಂದ ದೃಢಮೂಲವಾಗಿ, ಉತ್ತರೊತ್ತರ ಪ್ರವರ್ಧಮಾನವಾಯಿತು. ಮಧ್ಯವರ್ತಿಯಾದ

**ಸಾಮ್ರಾಜ್ಯದ ಉತ್ಕರ್ಷ**

**ಬಾದಾಮಿಯನ್ನು** ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು, ಪುಲಿಕೇಶಿ (೫೩೦ ೫೬೬) ತನ್ನ ಸಾಮರ್ಥ್ಯವನ್ನು ಬೆಳೆಯಿಸಿ, ಅಲ್ಪಾವಧಿಯಲ್ಲಿ ಸಮ್ರಾಟ್ ಪದಭಾಜನನಾದನು. ಪುಲಿಕೇಶಿಯ ರಾಜ್ಯವಿಸ್ತಾರವು ಎಷ್ಟು ಇದ್ದಿತು ಎಂಬುದು ವಿದಿತವಾಗಿಲ್ಲ. ಆದರೂ 'ಆತನು ಅಶ್ವಮೇಧವನ್ನು ಮಾಡಿದನು' ಎಂಬ ಸಂಗತಿಯಿಂದಲೂ ಕವಿರನ್ನನು "ಗದಾಯುದ್ಧ"ದಲ್ಲಿ "ದ್ವೀಪಾಂತರಪ್ರಕಟಿತ ಪ್ರಭಾವನುಂ" ಎಂದು ಆತನನ್ನು ವರ್ಣಿಸಿದುದರಿಂದಲೂ ವಿಚಾರಿಸಲಾಗಿ, ಪುಲಿಕೇಶಿ ತತ್ಕಾಲೀನ ದಕ್ಷಿಣಭಾರತದಲ್ಲಿ ಬಲಿಷ್ಠನೂ ಪ್ರಭಾವಶಾಲಿಯೂ ಆದ ನೃಪವರನಾಗಿದ್ದನೆಂದು ಊಹಿಸಬಹುದಾಗಿದೆ.

ಪುಲಿಕೇಶಿಯ ಮಕ್ಕಳಾದ **ಕೀರ್ತಿವರ್ಮ-ಮಂಗಳೀಶರು** (೫೬೭-೬೧೦) ಹೊಸಪ್ರಾಂತವನ್ನು ಪಾದಾಕ್ರಾಂತ ಮಾಡಿ, ಸಾಮ್ರಾಜ್ಯವನ್ನು ವಿಸ್ತಾರಗೊಳಿಸಿದರು. ಕೀರ್ತಿವರ್ಮನು ಕದಂಬರ ರಾಜ್ಯಸಂಘವನ್ನು ಪೂರ್ಣವಾಗಿ ಸೋಲಿಸಿ, ಬನವಾಸಿಮಂಡಲವನ್ನು ತನ್ನ ಆಧಿಪತ್ಯಕ್ಕೆ ಒಳಪಡಿಸಿದನು. ಮೌರ್ಯರಿಂದ ಕೊಂಕಣಪ್ರದೇಶವನ್ನು ಕಿತ್ತುಕೊಂಡನು. ನಳರನ್ನು ಹಣಿದು ಬಳ್ಳಾರಿ-ಕರ್ನೂಲ ಪ್ರಾಂತವನ್ನು ಸೆಳೆದುಕೊಂಡನು (೫). ಗಂಗರೂ ಪಾಂಡ್ಯ ಮೊದಲಾದ ಅರಸರೂ ಆತನ ಪ್ರತಾಪದಿಂದ ಹತವೀರ್ಯರಾಗಿ, ಆತನ ಮಾಂಡಲಿಕತ್ವವನ್ನು ವಹಿಸಿದರು (೬). ಮಂಗಳೀಶನು ಕೀರ್ತಿವರ್ಮನ ಸಾಮ್ರಾಜ್ಯಸಂವರ್ಧನ ಕಾರ್ಯದಲ್ಲಿ ಆತನಿಗೆ ಸಹಾಯವಾದನು. ಆತನು ಚಾಲುಕ್ಯಸಾಮ್ರಾಜ್ಯದ ಪ್ರಭಾವವನ್ನು ಪೂರ್ವಸಮುದ್ರದಿಂದ

(೩) ಕ. ಸಾ. ಭಾಗ ೧; ಪು. ೧೯೭—೯೮ ಮತ್ತು ಬಾ.ವ.ಪು. ೪ ನೋಡಿ.

(೪) B. G. p. 343 & M. G. II p. 706.

[೫] A. I. [೬] ಮಂಗಳೀಶನ ಮಹಾಕೂಟದ ವಿಜಯಸ್ತಂಭ ಲೇಖ

CC-0. Jangamwadi Math Collection. Digitized by eGangotri

ಪಶ್ಚಿಮಸಮುದ್ರದ ವರೆಗೆ ಬೀರಿದನು. (೬) ಉತ್ತರದಲ್ಲಿ ತ್ರಿಪುರದ ವರೆಗೆ (೭) ದಿಗ್ವಿಜಯವನ್ನು ಮಾಡಿ, ಚೇದಿದೇಶದ ಬುದ್ಧರಾಜನಿಗೆ ಪಲಾಯನ ಮಾರ್ಗವನ್ನು ತೋರಿಸಿದನು. ರೇವತೀದ್ವೀಪದ (೮) ಮೇಲೆ ದಂಡಯಾತ್ರೆಯನ್ನು ಕೈಕೊಂಡು, ಅಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದನು.

ಕೀರ್ತಿವರ್ಮನ ಮಗನಾದ (ಇಮ್ಮಡಿ) ಪುಲಿಕೇಶಿಯ ಆಳಿಕೆಯಲ್ಲಿ (೬೦೯—೪೨) ಚಾಲುಕ್ಯಸಾಮ್ರಾಜ್ಯವು ಅತಿಶಯ ವಿಸ್ತಾರವನ್ನೂ ಅತ್ಯುನ್ನತ ಗೌರವವನ್ನೂ ಪಡೆಯಿತು. ಈ ಪುಲಿಕೇಶಿಯ ದಂಡಯಾತ್ರೆಗಳೂ ದಿಗ್ವಿಜಯಗಳೂ, ಜಗತ್ತಿನ ಇತಿಹಾಸದಲ್ಲಿ ನಾಮಾಂಕಿತರಾದ ವೀರಾಧಿವೀರರ ವಿಜಯಗಳ ಮಾಲಿಕೆಗೆ ಸೇರುವಂತಹವಾಗಿವೆ. ಆತನ ಪರಾಕ್ರಮಗಳ ವರ್ಣನೆಯನ್ನು ಓದುವಾಗ ಸಮುದ್ರಗುಪ್ತನ ಕಾರ್ಯಗಳು, ರಾಷ್ಟ್ರಕೂಟರ ಇಮ್ಮಡಿಗೋವಿಂದನ ವಿಜಯಗಳು, ನೆಪೋಲಿಯನನ ದಂಡಯಾತ್ರೆಗಳು ಸ್ಮೃತಿಪಥಕ್ಕೆ ಬರುವುವು. ಆತನು ಪಟ್ಟಕ್ಕೆ ಬಂದಾಗ ಮಂಗಳೀಶನ ಕುತಂತ್ರದಿಂದ ರಾಜ್ಯವು ಅರಾಜಕಕ್ರೀಡಾಗಿತ್ತು. ಮಂಡಲಾಧಿಕಾರಿಗಳು ಅನಿಯಂತ್ರಿತರಾಗಿ, ಸಾಮ್ರಾಜ್ಯವಿರೋಧಿಗಳು ಪ್ರಬಲಿಸಿ, ಪುಲಿಕೇಶಿಯ ಮಾರ್ಗವು ಕಂಟಕಮಯವಾಗಿತ್ತು. ದುರ್ದಮನೀಯ ಧೈರ್ಯಸಂಪನ್ನನಾದ ಪುಲಿಕೇಶಿ ಪ್ರತಿಕೂಲವಾದ ಈ ಪರಿಸ್ಥಿತಿಯನ್ನು ಪ್ರತಿಭಟಿಸಲು ಟೊಂಕಕಟ್ಟಿ, ಪ್ರಚಂಡ ಉತ್ಸಾಹದಿಂದ ಉಗ್ರವಾದ ದಂಡಯಾತ್ರೆಯನ್ನು ಕೈಕೊಂಡನು. ಭೀಮರಥಿಯ ಉತ್ತರದಲ್ಲಿ ಅಪ್ಪಾಯಿಕ-ಗೋವಿಂದರನ್ನು ಸೋಲಿಸಿದನು. ಬನವಾಸಿಯ ಮೇಲೆ ಏರಿಹೋಗಿ, ಕದಂಬರಾಜ್ಯವನ್ನು ಸ್ವಾಧೀನಪಡಿಸಿಕೊಂಡನು. ಮೈಸೂರ ಗಂಗರೂ ಮಲಬಾರದ ಆಳುಪರೂ ಆತನಿಗೆ ಅಂಕಿತರಾದರು. ಮೌರ್ಯರಿಂದ ಕಿತ್ತುಕೊಂಡ ಕೊಂಕಣಪ್ರಾಂತವು ಸಾಮ್ರಾಜ್ಯಕ್ಕೆ ಸೇರ್ಪಡೆಯಾಯಿತು. ಪಶ್ಚಿಮಸಮುದ್ರದ ಸ್ವಾಮಿನಿಯಂತೆ ಶೋಭಾಯಮಾನವಾದ 'ಪುರಿ' ಬಂದರವು ಶರಣಾಗತವಾಗಿ, ಪಶ್ಚಿಮಸಾಗರದ ಮೇಲೆ ಪುಲಿಕೇಶಿಯ ವಿಜಯಧ್ವಜವು ಮೆರೆಯತೊಡಗಿತು. ಉತ್ತರದಿಗ್ವಿಜಯವು ಆರಂಭವಾಯಿತು. ಲಾಟ, ಮಾಳವ, ಗುರ್ಜರ ರಾಜ್ಯಗಳು ಪಾದಾಕ್ರಾಂತವಾದುವು. ಪುಲಿಕೇಶಿಯ ವಿಜಯರಥವು ಅಪ್ರತಿಹತ ಗತಿಯಿಂದ ಮುಂದೆ ನೂಕಿತು. ಅಖಿಲ ಉತ್ತರಭಾರತವನ್ನು ಆಕ್ರಮಿಸಿ, ದಕ್ಷಿಣಭಾರತವನ್ನೂ ಗೆಲ್ಲುವ ಮಹತ್ವಾಕಾಂಕ್ಷೆಯಿಂದ ದಕ್ಷಿಣಕ್ಕೆ ಸಾಗಿಬರುತ್ತಲಿರುವ ಕನೋಜದ ಹರ್ಷವರ್ಧನ ಮಹಾರಾಜನು, ನರ್ಮದೆಯ ತಡಿಯಲ್ಲಿ ಪುಲಿಕೇಶಿಗೆ ತಡೆಯಾದನು. ಅಪೂರ್ವ ಸಾಹಸಶಾಲಿಯಾದ ಪುಲಿಕೇಶಿ ಆತನನ್ನು ಪರಾಭವಗೊಳಿಸಿ, ಹಿಮ್ಮೆಟ್ಟಿಸಿ, ಆತನ ಕೀರ್ತಿಲಕ್ಷ್ಮಿಯನ್ನು ಹರಣಮಾಡಿದನು. ಪುಲಿಕೇಶಿ ಪೂರ್ವದಿಗ್ವಿಜಯವನ್ನು ಕೈಕೊಂಡನು. ಕೋಸಲ-ಕಲಿಂಗ ದೇಶದ ಅರಸರು ವಿನಮ್ರರಾಗಿ ಪುಲಿಕೇಶಿಯ ಆಧಿಪತ್ಯವನ್ನು ಅಂಗೀಕರಿಸಿದರು. ಪುಲಿಕೇಶಿಯ ವಿಜಯಪತಾಕೆ ದಕ್ಷಿಣಾಭಿಮುಖವಾಯಿತು. ಪಲ್ಲವರನ್ನು ಹಣಿದು ಕಂಚೀಪುರವನ್ನು ಆಕ್ರಮಿಸಿದನು. ಕಾವೇರಿಯನ್ನು ದಾಟಿದನು. ಚೋಳ-ಪಾಂಡ್ಯ-ಕೇರಳ ದೇಶಗಳ ಅರಸರು ಆತನ ಸಾರ್ವಭೌಮತ್ವವನ್ನು ಒಡಂಬಟ್ಟು ಆತನ ಅನುಗ್ರಹವನ್ನು ಬಯಸಿದರು. (೯)

ಪುಲಿಕೇಶಿಯ ಈ ಅದ್ಭುತವಾದ ದಿಗ್ವಿಜಯಗಳಿಂದ ವಿಂಧ್ಯಗಿರಿಯ ತೆಂಕಲಿನ ಅಖಿಲಭಾರತ ಭೂವಲಯವು ಆತನ ಅಧಿರಾಜ್ಯಕ್ಕೆ ಒಳಪಟ್ಟಿತು. ಚಾಲುಕ್ಯರ ಪ್ರತಿಸ್ಪರ್ಧಿಗಳಾದ ಪಲ್ಲವರ ಪ್ರತಾಪವು ಕಳೆಗುಂದಿ, ಚಾಲುಕ್ಯರ ಏಕಚ್ಛತ್ರವು ದಕ್ಷಿಣಭಾರತದ ಮೇಲೆ ಪಸರಿಸಿತು. ಚಾಲುಕ್ಯಸಾಮ್ರಾಜ್ಯದ ಕೀರ್ತಿಗೌರವವು ದಕ್ಷಿಣಭರತಖಂಡದಲ್ಲಿಯಷ್ಟೆ ಅಲ್ಲದೆ, ಅಖಿಲ ಭಾರತವರ್ಷವನ್ನೂ ವ್ಯಾಪಿಸಿ, ಮಿಕ್ಕ ದ್ವೀಪಾಂತರಗಳಲ್ಲಿ ಇರಾಣ, ಚೀನ ಮೊದಲಾದ ಪರದೇಶಗಳಲ್ಲಿಯೂ ಹಬ್ಬಿತು. ಈ ಲೇಖನದ ಆರಂಭದಲ್ಲಿ ವರ್ಣಿತವಾದ ಅಜಂತೆಯ ಗುಹಾಚಿತ್ರದಿಂದ ಅಭಿವ್ಯಕ್ತವಾಗುವಂತೆ, ಇರಾಣದ ರಾಯಭಾರಿಗಳು ಸ್ನೇಹಸಂಬಂಧಗಳನ್ನು ಬೆಳೆಯಿಸುವ ಉದ್ದೇಶದಿಂದ, ಪುಲಿಕೇಶಿಯ ಒಡ್ಡೋಲಗಕ್ಕೆ ಆಗಮಿಸಿದರು. ಚೀನದ ಪ್ರವಾಸಿಯಾದ ಹುವೆನ್‌ತ್ಸಾಂಗನಿಗೆ ಪುಲಿಕೇಶಿಯಿಂದ ಪುರಸ್ಕಾರ ಹೊಂದಿದ ರಾಷ್ಟ್ರವೂ ಜನಾಂಗವೂ ಕೌತುಕಾಸ್ಪದವಾಗಿ ಕಂಗೊಳಿಸಿದುವು. ಪೂರ್ವಪ್ರದೇಶದಲ್ಲಿ ವಿಸ್ತಾರಗೊಂಡಿದ್ದ ಪಲ್ಲವರ ರಾಜ್ಯವನ್ನು ಗೆದ್ದುಕೊಂಡು, ಕೃಷ್ಣೆ-ಗೋದಾವರೀ ನದಿಗಳ ನಡುವಣ ಪ್ರದೇಶವಾದ ವೆಂಗಿಮಂಡಲಕ್ಕೆ ಪುಲಿಕೇಶಿ ತನ್ನ ತಮ್ಮನಾದ ಕುಬ್ಜ ವಿಷ್ಣುವರ್ಧನನನ್ನು ರಾಜನನ್ನಾಗಿ ಪ್ರಸ್ಥಾಪಿಸಿದನು (೬೧೫). ಈ ಚಾಲುಕ್ಯವಂಶವು ದೃಢಮೂಲವಾಗಿ ಮುಂದೆ ನಾಲ್ಕು ಶತಮಾನಗಳ ವರೆಗೆ ತಾಳಿ ಬಾಳಿತು.

---

[೬] A. I. & Bh p. 68.

[೭] ತೇವೂರ-ಜಬಲಪೂರದ ಬಳಿ. [೮] ವೆಂಗುರ್ಲೆಯ ಬಳಿ

[೯] A. I.

CC-0. Jangamwadi Math Collection. Digitized by eGangotri

ಪುಲಿಕೇಶಿಯ ಅತುಲ ಪ್ರತಾಪಬಲದಿಂದ ಅತ್ಯುಜ್ವಲ ದೀಪ್ತಿಯನ್ನು ಪಡೆದು ಪ್ರಕಾಶಮಾನವಾದ ಚಾಲುಕ್ಯ ಸಾಮ್ರಾಜ್ಯರವಿಗೆ, ಪುಲಿಕೇಶಿಯ ಆಳಿಕೆಯ ಕೊನೆಯ ಭಾಗದಲ್ಲಿ (೬೪೨-೬೫೫), ಕಂಚಿಯ ಪಲ್ಲವರಾಹುವಿನಿಂದ ಕೆಲಕಾಲ ಗ್ರಹಣವು ಹಿಡಿಯಿತು. ಆದರೆ ಆತನ ಮಗನಾದ **ವಿಕ್ರಮಾದಿತ್ಯನು** ಸಾಮ್ರಾಜ್ಯಕ್ಕೆ ಒದವಿದ ಈ ಕುತ್ತವನ್ನು ಕಿತ್ತೆಸೆದು, ಚಾಲುಕ್ಯ ಸಾಮ್ರಾಜ್ಯಪ್ರಭೆಯನ್ನು ಮತ್ತೆ ಉಜ್ವಲಗೊಳಿಸಿದನು. ಆತನು ಪಲ್ಲವರ ಆಕ್ರಮಣವನ್ನು ನಿರೋಧಿಸಿ, ಅವರ ಬಲವನ್ನು ಹಿಮ್ಮೆಟ್ಟಿಸುತ್ತ, ಅವರ ರಾಜಧಾನಿಯನ್ನು ಸೆಳೆದುಕೊಂಡನು. ಚಾಲುಕ್ಯರ ಪರಾಕ್ರಮದ ಮುಂದೆ ಅವರು ಕೈಯೂರಿ ತಲೆಬಾಗಬೇಕಾಯಿತು. ಕಂಚಿಯನ್ನು ಪಾದಾಕ್ರಾಂತಮಾಡಿದ **ವಿಕ್ರಮಾದಿತ್ಯನು** ವಿಚಲಿತರಾಗಿದ್ದ ಪಲ್ಲವರ **ಚೋಳ, ಪಾಂಡ್ಯ, ಕೇರಳ** ಮೊದಲಾದ ಮಾಂಡಲಿಕರ ಮೇಲೆ ಮತ್ತೆ ಚಾಲುಕ್ಯ ಸಾಮ್ರಾಜ್ಯದ ಆಧಿಪತ್ಯವನ್ನು ಪ್ರಸ್ಥಾಪಿಸಿದನು. ಕೊಸರಿ ಹೋಗುತ್ತಲಿರುವ ಚಾಲುಕ್ಯಸಾಮ್ರಾಜ್ಯದ ವರ್ಚಸ್ಸು ದಕ್ಷಿಣಭಾರತದ ಮೇಲೆ ಮತ್ತೆ ಮೊದಲಿನಂತೆ ಅಬಾಧಿತವಾಗಿ ಮುಂದುವರಿಯಿತು. ಚಾಲುಕ್ಯರು ತ್ರಿಸಮುದ್ರಾಂಕಿತ ಭೂಮಂಡಲಕ್ಕೆ ಒಡೆಯರಾದರು. (೧೩)

ಇದೇ ವಿಕ್ರಮಾದಿತ್ಯನ ಆಳಿಕೆಯಲ್ಲಿ (೬೫೫-೬೮೦) ವಿಕ್ರಮಾದಿತ್ಯನ ತಮ್ಮನಾದ ಜಯಸಿಂಹನು ಗುರ್ಜರ ರಾಜ್ಯದ ಅಧಿಕಾರವನ್ನು ಪಡೆದು, ಆ ನಾಡಿನಲ್ಲಿ ಚಾಲುಕ್ಯ ಅರಸುಮನೆತನದ ಬೇರನ್ನು ಊರಿದನು (೬೬೫). ಚಾಲುಕ್ಯರ ಈ ಎರಡನೆಯ ಶಾಖೆಯು ಕೆಲಕಾಲ ಪ್ರಾಬಲ್ಯಗೊಂಡು ಗುಜರಾತ ಪ್ರಾಂತದಲ್ಲಿ ಆಳಿ ಬಾಳಿತು. ಈ ಚಾಲುಕ್ಯ ವಂಶಸ್ಥನಾದ ಪುಲಿಕೇಶಿ ಎಂಬವನು ಮುಂದೆ ಎಂಟನೆಯ ಶತಮಾನದಲ್ಲಿ ಆ ಪ್ರಾಂತದಲ್ಲಿ ಅರಬ ದಾಳಿಗಾರರ ಹಾವಳಿ ಹೆಚ್ಚಲು ಅದನ್ನು ಹತ್ತಿಕ್ಕಿದನು(೭೩೯).(೧೪)

**ಸಾಮ್ರಾಜ್ಯದ ಪ್ರಭಾವ**

ಇಂತು ಉದಿಸಿ, ಪ್ರವರ್ಧಮಾನವಾಗಿ ಸ್ಥಿರತೆಯನ್ನು ಹೊಂದಿದ ಚಾಲುಕ್ಯ ಸಾಮ್ರಾಜ್ಯದ ಪ್ರಭಾವವು, ಮುಂದೆ ಸುಮಾರು ನೂರು ವರ್ಷಗಳ ವರೆಗೆ ಅಚ್ಚಳಿಯದೆ ಕಳೆಗೊಂಡು ಬಾಳಿತು. ವಿಕ್ರಮಾದಿತ್ಯನ ತರುವಾಯ **ವಿನಯಾದಿತ್ಯ, ವಿಜಯಾದಿತ್ಯ, (ಇಮ್ಮಡಿ) ವಿಕ್ರಮಾದಿತ್ಯ** ಮೊದಲಾದವರ ಆಳಿಕೆಗಳಲ್ಲಿ, ಚಾಲುಕ್ಯರ ಸಾಮ್ರಾಜ್ಯಶಕ್ತಿ ದಕ್ಷಿಣದಲ್ಲಿಯೂ ಉತ್ತರದಲ್ಲಿಯೂ ಉದಿತೋದಿತವಾಗಿ ನೆಲೆಗೊಂಡಿತು. ದಕ್ಷಿಣದಲ್ಲಿ ಆಗಾಗ ತಲೆಯೆತ್ತಿದ **ಪಲ್ಲವರು**, ಚಾಲುಕ್ಯರ ಬಲದಿಂದ ಹಲವು ಸಲ ಭಗ್ನರಾದರು. ವಿನಯಾದಿತ್ಯನ ಕಾಲದಲ್ಲಿ (೬೮೦-೬೯೬) **ಮಲಬಾರ** ದಂಡೆಯ ಮೇಲೆ ನೆಲಸಿದ **ಪಾರಸಿಕರೂ ಸಿಂಹಲದ್ವೀಪದ** ಅರಸನೂ ಈತನ ಸ್ವಾಮಿತ್ವವನ್ನು ಒಪ್ಪಿಕೊಂಡು, ಕಪ್ಪಕಾಣಿಕೆಗಳನ್ನು ಸಲ್ಲಿಸಿದರು (೧೫). ಚಾಲುಕ್ಯರ ವಿಜಯ ಪತಾಕೆ ಉತ್ತರದಲ್ಲಿ ವಿಂಧ್ಯ-ಮಾಳವದ ವರೆಗೆ ಮೆರೆದಾಡಿತು. ವಿನಯಾದಿತ್ಯನು ಉತ್ತರಭಾರತದ ಒಬ್ಬ ಬಲಾಢ್ಯ ಸಮ್ರಾಟನನ್ನು ಪರಾಭವಗೊಳಿಸಿ, ಆತನಿಂದ ಪಾಲಿಧ್ವಜ, ಢಕ್ಕಾ(ದುಂದುಭಿ) ಮೊದಲಾದ ವಿಜಯಚಿನ್ಹಗಳನ್ನು ಕಸಿದುಕೊಂಡನು (೧೬). ವಿನಯಾದಿತ್ಯನ ಮಗನಾದ **ವಿಜಯಾದಿತ್ಯನು** (೬೯೬-೭೩೩) ತಂದೆಯ ಬಿರುದನ್ನು ಬೆಳಗಿಸಿ, ಪೂರ್ವದಲ್ಲಿ **ಗುಪ್ತ**ರಾಜರ ಸ್ವಾಧೀನದಲ್ಲಿದ್ದ ಗಂಗಾ-ಯಮುನಾ ಧ್ವಜಗಳನ್ನು ಹರಣಮಾಡಿದನು (೧೭). ವಿಜಯಾದಿತ್ಯನ ಮಗನಾದ **ಇಮ್ಮಡಿ ವಿಕ್ರಮಾದಿತ್ಯ**ನೊಡನೆ (೭೩೩-೭೪೬) ಚೇದಿದೇಶದ ಹೈಹಯ ವಂಶದ ಅರಸರು ರಕ್ತಸಂಬಂಧವನ್ನೂ ಸ್ನೇಹಸಂಬಂಧವನ್ನೂ ಬಯಸಿ ಬೆಳೆಸಿದರು. ಈತನು **ಪಲ್ಲವ ನಂದಿಪೋಟವರ್ಮ**ನನ್ನು ಕಂಚಿಯಿಂದ ತಳ್ಳಿ, ಆತನ ಖಟ್ವಾಂಗಧ್ವಜ ಮೊದಲಾದ ರಾಜವೈಭವದ ಚಿನ್ಹಗಳನ್ನು ಸೆಳೆದುಕೊಂಡು, ವಿಜಯಚಿನ್ಹಗಳಾಗಿ ಧಾರಣಮಾಡಿದನು (೧೮). ಈ ವಿಕ್ರಮಾದಿತ್ಯನ ಮಗನಾದ ಇಮ್ಮಡಿ **ಕೀರ್ತಿವರ್ಮನ** (೭೪೬-೫೭) ಕಾಲದಲ್ಲಿ, ಚಾಲುಕ್ಯ ಪ್ರಭುತ್ವಕ್ಕೆ ದುರ್ಜಲತೆಯ ಬಾಧೆ ಉಂಟಾಗಲು, ರಾಷ್ಟ್ರಕೂಟರು ಪ್ರಬಲಿಸಿ, ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಲು ಮುಂದುವರಿದರು. ಇನ್ನೂರು ವರ್ಷಗಳ ವರೆಗೆದಕ್ಷಿಣಭಾರತದ ಗಗನಾಂಗಣದಲ್ಲಿ, ಉನ್ನತ ಕಾಂತಿಯಿಂದ ಪ್ರಕಾಶಿಸಿದ ಚಾಲುಕ್ಯ ಸಾಮ್ರಾಜ್ಯಜ್ಯೋತಿ ಕಳೆಗುಂದಿ ಅಸ್ತಂಗತವಾಯಿತು!

---

(೧೩) Bh. P. 75
(೧೪) Bh. p. 77.
(೧೫) Bh. P. 79
(೧೬) Ibid
(೧೭) M. G. Vol II Pt II p. 715
(೧೮) ಕ. ಸಾ. ಪು. ೨೯೨

CC-0. Jangamwadi Math Collection. Digitized by eGangotri

## ಚಾಲುಕ್ಯ ಸಾಮ್ರಾಜ್ಯದಿಂದ ಕರ್ನಾಟಕವು ಘನತೆಯನ್ನು ಹೊಂದಿತು.

ಚಾಲುಕ್ಯಪ್ರಭುತ್ವದ ಈ ಆಂದೋಲನಗಳನ್ನು ಕರ್ನಾಟಕದ ದೃಷ್ಟಿಯಿಂದ ಪರಿಶೀಲಿಸಿದರೆ, ಅನೇಕ ಮಹತ್ತ್ವದ ಸಂಗತಿಗಳು ಒಡೆದು ಕಾಣುವವು. ಈ ಕಾಲದಲ್ಲಿ ಕರ್ನಾಟಕದ ವ್ಯಾಪ್ತಿ ಎಲ್ಲಿಂದ ಎಲ್ಲಿಯ ವರೆಗೆ ಇದ್ದಿತು-- ಎಂಬುದನ್ನು ತಿಳುಹುವ ನಿಶ್ಚಿತ ಪ್ರಮಾಣಗಳು ದೊರೆತಿಲ್ಲ; ಆದರೂ ಈ ಕರ್ನಾಟಕವು ದಕ್ಷಿಣಭಾರತದ ಒಂದು ಪ್ರಮುಖವೂ ಬಲಿಷ್ಠವೂ ಆದ ಜನಾಂಗವಾಗಿ, ಬಲಿತು ಬೆಳೆದಿತ್ತು ಎಂಬುದಕ್ಕೆ ಸಂದೇಹವಿಲ್ಲ. ಮುಂದೆ ಒಂದೆರಡು ಶತಮಾನಗಳಲ್ಲಿ ನೃಪತುಂಗದೇವನು ಹೇಳುವಂತೆ, ಕಾವೇರಿಯಿಂದ ಗೋದಾವರಿಯ ವರೆಗೆ ಕನ್ನಡ ಜನಾಂಗವು ಹಬ್ಬಿರಬೇಕಾದರೆ, ಈ ಕಾಲದಲ್ಲಿಯಾದರೂ ಅದರ ವಿಸ್ತಾರವು ಸಾಧಾರಣವಾಗಿ ಅಷ್ಟೇ ಆಗಿರಬೇಕು ಎಂದು ಇಟ್ಟುಕೊಂಡರೆ ಅಸಯುಕ್ತಿಕವಾಗಲಾರದು. ಅದೇನೇ ಇರಲಿ: ಚಾಲುಕ್ಯಸಾಮ್ರಾಜ್ಯದೊಡನೆ ಕರ್ನಾಟಕದ ಭಾಗ್ಯರೇಷೆ ಊರ್ಧ್ವಗಾಮಿನಿಯಾಯಿತು. ಚಾಲುಕ್ಯ ಸಾಮ್ರಾಜ್ಯವು ಕನ್ನಡಿಗರ ಸಾಮ್ರಾಜ್ಯವೂ ಕನ್ನಡ ಜನಾಂಗದ ಮೊದಲನೆಯ ಸಾಮ್ರಾಜ್ಯವೂ ಎಂಬುದು ಸ್ಪಷ್ಟವಾಗಿದೆ. 'ಕರ್ನಾಟಕವು ಎಂಬುದು ಬಹು ಪ್ರಾಚೀನವೂ ವಿಸ್ತೃತವೂ ಆದ ಒಂದು ಸ್ವತಂತ್ರಜನಾಂಗವಿದೆ ಸಂಸ್ಕೃತಿ ಇದೆ' ಎಂಬುದರ ಪರಿಜ್ಞಾನವಿಲ್ಲದ ಸರ್ ರಾಮಕೃಷ್ಣ ಭಾಂಡಾರಕರರೂ, ಅವರನ್ನು ಅನುಸರಿಸಿದ ವಿನ್ಸೆಂಟ ಸ್ಮಿಥ್ ಮೊದಲಾದ ಪರಕೀಯ ಇತಿಹಾಸಕಾರರೂ ಪ್ರಮಾದದಿಂದ ಕರ್ನಾಟಕದ ನಾಮನಿರ್ದೇಶವನ್ನು ಮಾಡದೆ, ಈ ಚಾಲುಕ್ಯರೂ ಇವರ ಮುಂದಿನ ಸಮ್ರಾಟರೂ ಆಳಿದ ದೇಶವನ್ನು ಮಹಾರಾಷ್ಟ್ರಕ್ಕೆ ಸೇರ್ಪಡೆ ಮಾಡಿ, 'ಈ ರಾಜ್ಯಕರ್ತರೆಲ್ಲರೂ ಮಹಾರಾಷ್ಟ್ರೀಯರು' ಎಂದು ಸೂಚಿಸುತ್ತ, ಇಂತಹ ಸಾಮ್ರಾಜ್ಯಗಳನ್ನು ಸ್ಥಾಪಿಸಿದ ಶ್ರೇಯಸ್ಸು ಮಹಾರಾಷ್ಟ್ರಕ್ಕೆ ಸಲ್ಲುವಂತೆ ಮಾಡಿದ್ದರೂ, ಈಚೆಯ ಅನೇಕ ಸಂಶೋಧನಗಳಿಂದ ಸತ್ಯವು ಹೆಚ್ಚುಹೆಚ್ಚು ಪ್ರಕಾಶನಕ್ಕೆ ಬರುತ್ತ, ಪಂಡಿತರ ದೃಷ್ಟಿ ಹೆಚ್ಚು ನಿಚ್ಚಳವಾಗುತ್ತಲಿರುವುದರಿಂದ, ಕರ್ನಾಟಕಕ್ಕೆ ನಿಜವಾದ ಸ್ಥಾನವೂ ಮಾನ್ಯತೆಯೂ ಶ್ರೇಯಸ್ಸೂ ಲಭಿಸುವ ಸುಚಿನ್ಹಗಳು ತೋರಲಿವೆ. ಒಂದು ಮಾತಿನಲ್ಲಿ ಮುಗಿಸುವುದಾದರೆ, ಆ ಕಾಲದಲ್ಲಿ ಮಹಾರಾಷ್ಟ್ರವು ಇನ್ನೂ ಉದಯವೆ ಆಗಿರಲಿಲ್ಲ, ನಿಜವಾದ ಮಹಾರಾಷ್ಟ್ರದ ಉದಯಕಾಲವು ಮುಂದೆ ಅಯ್ದಾರು ಶತಮಾನಗಳು ಗತಿಸಿಹೋದ ಬಳಿಕ ಪ್ರಾಪ್ತವಾಯಿತು (೧೯). ದಕ್ಷಿಣಭಾರತದ ಮೂರು ಪ್ರಧಾನ ಜನಾಂಗಗಳಲ್ಲಿ ತಮಿಳರು ದಕ್ಷಿಣದ ತುದಿಯಲ್ಲಿ ಆಗ್ನೇಯಕ್ಕೆ ನೆಲಸಿದುದರಿಂದಲೂ, ಆಂಧ್ರರು ಇದ್ದರೆ ಇನ್ನೂ ಶೈಶವಾವಸ್ಥೆಯಲ್ಲಿದ್ದು ಈಶಾನ್ಯದ ಮೂಲೆಯಲ್ಲಿ ವಾಸಿಸಿದುದರಿಂದಲೂ, ಗೋದಾವರಿಯ ದಕ್ಷಿಣದ ವಿಶಾಲ ಪ್ರದೇಶದಲ್ಲಿ ಕನ್ನಡಜನಾಂಗವೇ ಹಬ್ಬುಗೆಗೊಂಡಿರಬೇಕು. ಕ್ರಿಸ್ತಕಾಲದ ಆರಂಭ ಪೂರ್ವದಿಂದಲೂ ಕನ್ನಡ ಜನಾಂಗದ ಅಸ್ತಿತ್ವದ ಕುರುಹುಗಳು ಸಿಕ್ಕುತ್ತವೆ (೨೦). ಈ ಚಾಲುಕ್ಯ ಸಾಮ್ರಾಜ್ಯದ ಕೇಂದ್ರವಾದ ಬಾದಾಮಿ ಎಂದಿಗೂ ಕರ್ನಾಟಕದ ತಿರುಳ್ನಾಡು ಆಗಿರುವುದಲ್ಲದೆ, ಈ ಸಾಮ್ರಾಜ್ಯಕ್ಕೆ ಒಳಪಟ್ಟ ಪ್ರದೇಶದ ತುಂಬೆಲ್ಲ ಕನ್ನಡ ಶಾಸನಗಳು, ಜೀವನಸಂಕೇತಗಳು ಮೊದಲಾದ ಕರ್ನಾಟಕ ಸಂಸ್ಕೃತಿಯ ಅನೇಕ ನಿದರ್ಶನಗಳು ದೊರೆಯುತ್ತವೆ. ಆದುದರಿಂದ 'ಈ ಚಾಲುಕ್ಯ ಸಾಮ್ರಾಜ್ಯವು ಕನ್ನಡಿಗರ ಸಾಮ್ರಾಜ್ಯವು' ಎಂದು ಧಾರಾಳವಾಗಿ ಹೇಳಲಿಕ್ಕೆ ಯಾವ ಅಭ್ಯಂತರವೂ ಇಲ್ಲ.

ದಕ್ಷಿಣಭಾರತದ ನಿಜವಾದ ರಾಜಕೀಯ ಇತಿಹಾಸ ನಾಟ್ಯರಂಗದ ಉದ್ಘಾಟನವೇ ಕರ್ನಾಟಕದ ಈ ನವಚಾಲುಕ್ಯ ಸಾಮ್ರಾಜ್ಯಸೂತ್ರಧಾರನಿಂದ ಆಗುವುದು (೨೧). ಇದಕ್ಕೂ ಪೂರ್ವದಲ್ಲಿ ಕನ್ನಡಿಗರು ಗಂಗ, ಕದಂಬ ಮೊದಲಾದ ಚಿಕ್ಕ ಚಿಕ್ಕ ಅರಸೊತ್ತಿಗೆಗಳ ರೂಪದಿಂದ ಆಳಲು ಕಲಿತು, ರಾಜ್ಯಗಳನ್ನು ಆಳಿದ್ದರು. ಆದರೆ ಮಹತ್ ಸಾಮ್ರಾಜ್ಯವನ್ನು ಕಟ್ಟಲು ಹವಣಿಸಿದುದು, ಕಟ್ಟಿ ಆಳಿದುದು ಇದು ಮೊದಲನೆಯ ಸಲ. ಕನ್ನಡಿಗರ ಸಾಮ್ರಾಜ್ಯ ಸಂಸ್ಥಾಪನೆಯ ಮೊದಲನೆಯ ಪ್ರಯತ್ನವು ಧುರಂಧರವಾಯಿತು, ಪೂರ್ಣ ಜಯಶಾಲಿಯಾಯಿತು. ಇದರಿಂದ ಕನ್ನಡಿಗರ ಜೀವನದ ವಿಶಾಲವಾಯಿತು. ಕಾರ್ಯಕ್ಷೇತ್ರವು ವಿಸ್ತೃತವಾಯಿತು. ಕನ್ನಡಸಂಸ್ಕೃತಿಗೆ ಸ್ಥೈರ್ಯವೂ ಸ್ವಾಯತ್ತತೆಯೂ ಉಂಟಾದುವು. ಈ ಸಾಮ್ರಾಜ್ಯದಿಂದ ಕರ್ನಾಟಕಕ್ಕೆ ಒದಗಿದ ಎಲ್ಲಕ್ಕೂ ಹೆಚ್ಚಿನ ಲಾಭವೆಂದರೆ: ಕನ್ನಡಿಗರ ರಾಜಕೀಯ ಸಾಮರ್ಥ್ಯವು ಅತಿಶಯವಾಗಿ ವಿಕಾಸ-

(೧೯) ಮ. ರಿ. p. 32

(೨೦) ಕ. ಚ. ಅವ. ಪು. ೬. ೭.

(೨೧) V. S. p. 440

CC-0. Jangamwadi Math Collection. Digitized by eGangotri

ಪಡೆದುದು. ತಾರುಣ್ಯದಲ್ಲಿ ಸಂಪಾದಿಸಿದ ಶಾರೀರಬಲದಿಂದಲೂ, ಜಯಶೀಲ ಜೀವನಸರಣಿಯಿಂದಲೂ, ಪುರುಷನ ಮುಂದಿನ ಜೀವನ ಪಥವು ಪ್ರಭಾವಶಾಲಿಯಾಗುವಂತೆ, ಕನ್ನಡಿಗರು ನವಯೌವನದಲ್ಲಿ ಕಟ್ಟಿದ ಈ ಸಾಮ್ರಾಜ್ಯದಿಂದಲೂ ಗಳಿಸಿದ ಗೌರವದಿಂದಲೂ ಅವರ ಭವಿಷ್ಯತ್ ಕಾಲವು ಬಹುಯಶಸ್ವಿಯೂ ಅಸಾಧಾರಣ ವೈಭವಶಾಲಿಯೂ ಆಗಿ ಪರಿಣಮಿಸಿತು. ಭರತಖಂಡದ ಇತರ ಜನಾಂಗಗಳ ಇತಿಹಾಸದಲ್ಲಿಯೂ ಬೇರೆ ದೇಶಗಳ ಇತಿಹಾಸದಲ್ಲಿಯೂ ದುರ್ಲಭವಾದ ಉಜ್ವಲ ಇತಿಹಾಸ-ಸಂಸ್ಕೃತಿಗಳ ಸುದೀರ್ಘ ಪರಂಪರೆಯನ್ನು ಕನ್ನಡಿಗರು ನಿರ್ಮಾಣಮಾಡಲು ಶಕ್ತರಾದರು. 'ಕರ್ನಾಟಕವು ಸಾಮ್ರಾಜ್ಯವನ್ನು ಆಳುವ ಜನಾಂಗವು' ಎಂಬುದೊಂದು ಲೌಕಿಕವು ಬೆಳೆಯಿತು. ಮುಂದೆ ಏಳೆಂಟು ಶತಮಾನಗಳ ವರೆಗೆ ಅಖಂಡ ಪರಂಪರೆಯಿಂದ ಕನ್ನಡಿಗರು ಸಾಮ್ರಾಜ್ಯಸೌಭಾಗ್ಯವನ್ನು ಅನುಭವಿಸಿದರು. ಸಾಮ್ರಾಜ್ಯಮಂದಿರಗಳನ್ನು ನಿಲ್ಲಿಸಿ ಸಂಸ್ಕೃತಿಯ ನಂದಾದೀಪವನ್ನು ಅವಿಚಲವಾಗಿ ಬೆಳಗಿಸಿದರು. ಅದ್ವಿತೀಯ ಕಲಾಪ್ರಪಂಚವನ್ನು ರಚಿಸಿ ವಿಶ್ವವನ್ನು ಮುಗ್ಧಗೊಳಿಸಿ ಮೆರೆದರು.

ಈ ಮೇರೆಗೆ ಕನ್ನಡಿಗರ ರಾಜಕೀಯ ಕ್ಷೇತ್ರವು ವಿಸ್ತೃತವಾದುದರಿಂದ ಪರಕೀಯ ಜನಾಂಗಗಳೊಡನೆ ಅವರ ಸಂಬಂಧವು ಬೆಳೆದು, ಪರರಾಷ್ಟ್ರೀಯ ರಾಜನೀತಿ ರೂಪುಗೊಂಡಿತು. ಚಾಲುಕ್ಯಸಾಮ್ರಾಜ್ಯದ ಪ್ರಭಾವವು ಕರ್ನಾಟಕವನ್ನು ಮಿಕ್ಕಿ ಮೇರೆವರಿದಂತೆ, ಕನ್ನಡಿಗರ ಸಂಘರ್ಷಣವು ದಕ್ಷಿಣೋತ್ತರಭಾರತಗಳಲ್ಲಿಯ ತಮಿಳು ಮೊದಲಾದ ಅನೇಕ ಜನಾಂಗಗಳೊಡನೆ ಹೆಚ್ಚು ಹೆಚ್ಚು ಉಂಟಾಯಿತು. ಪಲ್ಲವರ ಆಧಿಪತ್ಯದಲ್ಲಿರುವ ತಮಿಳು ಜನಾಂಗವನ್ನು ಕನ್ನಡಿಗರು ಹಲವು ಸಲ ಸೋಲಿಸಿ, ದಕ್ಷಿಣಭಾರತದ ಜನಾಂಗಗಳ ಸಂಘಗಳಲ್ಲಿ ಅತಿಗೌರವದ ಸ್ಥಾನವನ್ನು ಪಡೆದರು. ಗುಜರಾತದಲ್ಲಿ ಚಾಲುಕ್ಯರಾಜಶಾಖೆಯ ಸ್ಥಾಪನೆ, ಮಾಳವದ ವರೆಗೆ ಚಾಲುಕ್ಯರ ಆಕ್ರಮಣ, ಉತ್ತರಭಾರತದ ಬಲಶಾಲಿಗಳಾದ ಇಬ್ಬರು ನಾಮಾಂಕಿತ ಸಮ್ರಾಟರನ್ನು ಪರಾಭವಗೊಳಿಸಿದುದು, ಚೇದಿರಾಜವಂಶದೊಡನೆ ಚಾಲುಕ್ಯರ ರಕ್ತಸಂಬಂಧವು ಬೆಳೆದುದು—ಮೊದಲಾದ ಸಂಗತಿಗಳು, ಕನ್ನಡಿಗರು ಅಖಿಲ ಭಾರತೀಯ ಮಹತ್ತ್ವವನ್ನು ಪಡೆದುದಕ್ಕೆ ಸಾಕ್ಷಿಯಾಗಿವೆ. ಇರಾಣರು, ಅರಬರು, ಪಾರಸಿಕರು, ಸಿಂಹಳರು ಚಾಲುಕ್ಯಸಾಮ್ರಾಜ್ಯದ ವರ್ಚಸ್ಸಿಗೆ ಮೈಸೋತುದನ್ನು ನೋಡಿದರೆ, ಈ ಕಾಲದಲ್ಲಿ ಕನ್ನಡಿಗರ ಪರರಾಷ್ಟ್ರೀಯ ರಾಜಕಾರಣದ ಮತ್ತು ಸಾಂಸ್ಕೃತಿಕ ಸಂಬಂಧದ ಕ್ಷೇತ್ರವು ಎಷ್ಟು ವಿಸ್ತೃತವೂ ವ್ಯಾಪಕವೂ ಆಗಿದ್ದಿತೆಂಬುದು ಮನವರಿಕೆಯಾಗುವುದು. (೨೧ ಅ) ಇಂತಹ ಪರರಾಷ್ಟ್ರೀಯ ಸಂಸರ್ಗಗಳಲ್ಲಿಯೂ ಸ್ಪರ್ಧೆಗಳಲ್ಲಿಯೂ ಕನ್ನಡಿಗರು ಯಶಸ್ವಿಯಾಗಿ ರಾಜಕೀಯ ಸೂತ್ರಗಳನ್ನು ನಡೆಸಿ ಶ್ರೇಯೋಭಾಗಿಗಳಾದರು. ಹೀಗೆ ಸ್ವರಾಷ್ಟ್ರದಲ್ಲಿಯೂ ಪರರಾಷ್ಟ್ರದಲ್ಲಿಯೂ ಸಂಸ್ಥಾಪಿತವಾದ ಬಲಿಷ್ಠ ರಾಜಕೀಯ ಪ್ರಭಾವದಿಂದ, ಕರ್ನಾಟಕದ ಧರ್ಮ, ವಿದ್ಯೆ, ಕಲೆ ಮೊದಲಾದ ವಿವಿಧಜೀವನಾಂಗಗಳ ಮೇಲೆ ಚಿರಕಾಲಿಕವಾದ ಸಂಸ್ಕಾರಗಳು ಉಂಟಾಗಿ, ಕರ್ನಾಟಕದ ವಿಶಿಷ್ಟವಾದ ಸಂಸ್ಕೃತಿ ತಿರುಳುಗೊಂಡು ವಿಕಾಸಹೊಂದಿತು- ಕನ್ನಡಜನಾಂಗವು ಭಾರತೀಯ ಜನಾಂಗಗಳಲ್ಲಿ ಅಗ್ರಪದವಿಯನ್ನು ಪಡೆಯಿತು. ಕನ್ನಡ ನಾಗರಿಕತೆಗೆ ಆದರಣೀಯ ಸ್ಥಾನವು ಪ್ರಾಪ್ತವಾಯಿತು.

---

ವಿ. ಸೂ: ಅಡಿಟಿಪ್ಪಣಿಯಲ್ಲಿ ಸೂಚಿಸಿದ ಸಂದರ್ಭಗ್ರಂಥಗಳ ಸಂಕ್ಷೇಪಚಿಹ್ನಗಳ ವಿವರಣೆಯು ಕೆಳಗೆ ಬರೆದಂತಿದೆ:—

೧ 'V. S.'—ವಿನ್ಸೆಂಟ್ ಸ್ಮಿಥ್ ಅವರ 'Early History of India.'

೨ 'ಕ. ಸಾ.'—ಶ್ರೀ. ರಾ. ಹ. ದೇಶಪಾಂಡೆಯವರ 'ಕರ್ನಾಟಕ ಸಾಮ್ರಾಜ್ಯ'.

೩ 'ಬಾ. ವ.'—ಡಾ. ಶಿರಹಟ್ಟಿಯವರ 'ಬಾದಾಮಿಯ ವರ್ಣನೆ.'

೪ 'B. G.' ಬಾಂಬೇ ಗ್ಯಾಝೀಟಿಯರಿನ ೧ನೆಯ ಸಂಪುಟ.

೫ 'A. I.'—Aihole Inscription (I.A.VI).

೬ 'Bh'—ಶ್ರೀ. ಭಾಂಡಾರಕರರ 'Early History of Deccan.'

೭ 'M. G.'—ಮೈಸೂರ್ ಗ್ಯಾಝೀಟಿಯರ್

೮ 'म. रि.' ಮರಾಠೀ ರಿಯಾಸತ

೯ 'ಕ. ಚ.'— ಕವಿಚರಿತೆ

೧೦ 'Hav.'— ಹ್ಯಾವೆಲ್ಲರವರ 'Indo-Aryan Civilization.'

---

[೨೧ ಅ] Hav. P. 167-168

CC-0. Jangamwadi Math Collection. Digitized by eGangotri

# ಹೇ ಕವನಕಾಮಿನಿಯೆ!

ಶ್ರೀಮಾನ್ ಎಂ. ಗೋಪಾಲಕೃಷ್ಣ ಅಡಿಗ ಮೈಸೂರು





ಇಂದು ಹೃದಯದಿ ಮಧುರ ಭಾವಂಗಳುಣ್ಮುತಿರೆ,
ಸೌಂದರ್ಯದರ್ಶನದೊಳಿದೆ ಕರಗಿ ಹೋಗುತಿರೆ,
ಮಂದಾನಿಲನ ಕೂಡೆ ಕಲ್ಪನೆಯು ಚಲಿಸುತಿರೆ,
ಬಂದು ಬರಸೆಳೆದೆನ್ನ ನಪ್ಪಿ ಚುಂಬಿಸೆಯೇಕೆ ?



ಆಳಲ ಕೂರಲಗೆನ್ನ ಕರುಳ ಕತ್ತರಿಸುತಿರೆ,
ಕಳವಳಕೆ ತುತ್ತಾಗಿ ಜೀವ ತತ್ತರಿಸುತಿರೆ,
ಬಳಸಿ ಸೋಲುಗಳು ಬಾಳುವೆಯ ಕತ್ತಲಿಸುತಿರೆ,
ಚೆಲುವೆ! ನೀನೇಕೆನ್ನ ಮರೆತು ಮರೆಯೊಳೆ ಕುಳಿತೆ?

ನಿನಗಾಗಿ ಕಣ್ಣೀರ ಕಾಲುವೆಯ ಹರಿಸುತಿರೆ,
ಎನಗಾಗಿ ನೀನದರೊಳೋಲಾಡಿ ಬಳಿಸಾರೆ !
ನಿನಗಾಗಿ ಕರುಳ ಮಾಲೆಯ ಕೋದು ಕಾಯುತಿರೆ,
ಎನಗಾಗಿ ನೀನದನು ಬಂದು ತೊಡು ತೊಡು ಬಾರೆ!

ಬಾರೊಮ್ಮೆ, ಬಂದು ಬೆಂಪೆದೆಯನನುರಾಗರಸ-
ಧಾರೆಯಿಂದಲಿ ತಣಿಸು, ಬಾಳ್ವೆಯನು ಕುಡಿವಿಡಿಸು—
ಗಾರುವಡೆದೀ ಭಾವರಾಜ್ಯಕಮೃತವ ಸುರಿಸು,
ನೀರೆ! ನಿನ್ನಾಲಿಂಗನದೊಳೆನ್ನ ಮೆಯ್ಮರೆಸು—

ಕಂಡುಕೇಳದ ಕೂಡಿನಡೆದವಳ ವಿರಹದಲಿ
ಬೆಂದು ಕೂಗುವರುಂಟು; ನಾನಿಂತು ಬಾಳ್ವೆಯಲಿ
ಸುಂದರಾಂಗಿಯೆ...ನಿನ್ನ ಕಂಡಿಲ್ಲ, ನಿನ್ನೊಡನೆ
ಒಂದು ನುಡಿ ನುಡಿದಿಲ್ಲವಾದೊಡೇಕೀ ಬೇನೆ?

ಮನೆಯಿದನು ಗುಡಿಸಿ, ಶುಚಿಗೊಳಿಸಿ, ಸಿಂಗರಿಸಿ, ಹೊಸ-
ತನದೊಳಳವಡಿಸಿ, ವಿರಚಿಸುತಲೀ ಮೆಲ್ವಾಸ
ವನಿತೆ! ನಾನಿಂತು ಮೆಯ್ಕಣ್ಣಾಗಿ ಕಾಯುತಿರೆ,
ಮನವೊಲಿದು ಬಾರದೆದೆಯನು ಹಿಳಿದು ಹೀರುವರೆ?

ಒಲವುಂಟು ಚಲವುಂಟನನ್ಯ ಶರಣತೆಯುಂಟು.
ಲಲನೆ! ನಿನಗೀ ಬಾಳ ಮುಡಿಪಿಡುವ ಬಲುಹುಂಟು.
ಒಲವನೆನ್ನೊಳಗೊಮ್ಮೆ ನೇರ್ಪಡಿಸು, ತೋರ್ಪಡಿಸು,
ಬಳಲುವೀ ಬಾಳುವೆಯನಾವರಿಸು ನೇವರಿಸು—!

ನಿನ್ನ ಮೆಯ್ಗಂಪು ಮೆಲ್ಲೆಲರೊಡನೆ ಸುಳಿಸುಳಿದು
ಎನ್ನೆದೆಯ ಮುಟ್ಟಿ ಮೈದಟ್ಟಿ ಸವಿರೇರಿಪುದು.
ನಿನ್ನ ಪದವಿನ್ಯಾಸಜನಿತ ಮೃದುನಿಕ್ವಣಿತ-
ವೆನ್ನ ಕಿವಿದೆರೆಗೆ ಸೊದೆಯಾಗಿ ಬಂದೊಲೆಯುತಿದೆ—!

ನಿನ್ನ ನಡಿಗೆಯ ನಾದವಿದೊ ಕೇಳಿಬರುತಲಿದೆ !
ನಿನ್ನುಡುಪ ಮರ್ಮರವೊ ಕಿವಿದೆರೆಯ ಕೊರೆಯುತಿದೆ!
ನಿನ್ನ ಬರವಿನ ಕುರುಹಿವೆಲ್ಲವನು ತೋರಿಸುತೆ
ಚೆನ್ನೆ ! ನಿನ್ನಾ ಮೊಗವ ತೋರದಿಂತಳಲಿಪುದೆ?

ನಟ್ಟಿರುಳ ವೇಳೆ; ಜನರೆಲ್ಲ ನಿದ್ರಿಸುತಿರಲು,
ಸೃಷ್ಟಿದೇವಿಯೆ ಮೌನಶಯ್ಯೆಯಲಿ ಕೆಡೆದಿರಲು
ಇಷ್ಟಾರ್ಥದಾಯಿನಿಯೆ ! ನಾನೊರ್ವನಿದೊ ನಿನ್ನ
ಬಟ್ಟೆಯನೆ ನಿರುಕಿಸುತೆ ನಿದ್ದೆಯನು ಮರೆದಪೆನು!

ಕನಸು-ನನಸುಗಳೊಳಗೆ ನಿನ್ನ ಕೂಟದ ಬಯಕೆ
ತನಗೆ ತಾನಾಗಿ ಮನವನು ಮಿಡಿದು ನುಡಿಸುತಿದೆ.
ವನಿತೆ! ನಿನ್ನನುರಾಗರಸಸೇಕವಿಲ್ಲದಿಗೆ,
ತನಗೆ ತಾನೇ ಬಾಡಿ ಬೀಳದೇ ಜೀವಲತೆ?

ನಲುಮೆಯಿದು ಶರಧಿಯೊಲು ಗಂಭೀರವಾಗಿಹುದು,
ತಿಳಿಗೊಳದ ಜಲದಂತೆ ಪಾವಿತ್ರ್ಯವಾಂತಿಹುದು.
ಗಗನದೊಲು ವಿಸ್ತಾರ, ಪರ್ವತದವೋಲಚಲ!
ತೆಗೆ ಮೌನವನು! ನಚ್ಚು-ಮೆಚ್ಚೆನ್ನ ಪ್ರೇಯಸಿಯೆ!

ನೀನೊಮ್ಮೆ ಬಳಿಸಾರು! ನಿನಗಾಗಿ ಬಳಿಕಾನು
ಏನನೆಸಗುವೆನೆಂದು ನೀನೆ—ನೋಡುವೆಯಂತೆ
ತಾನ-ತಾನದಿ ದಿವ್ಯಗಾನ ಹೊರಹೊಮ್ಮುತಿರೆ
ಮಾನವತೆಗೇ ದೈವಿಕತೆಯ ಹೊಗರೇರುತಿರೆ!

CC-0. Jangamwadi Math Collection. Digitized by eGangotri

ಕೂಡಿ ನಿನ್ನನು ನಿನ್ನ ಬಾಹುಮೂಲದಿ ಕೆಡೆದು,
ಹಾಡುವೆನು ಹಾಡುವೆನು ಕೊನೆಯಿರದೆ ಕೊನೆಯಿರದೆ !
ದೂಡುವೆನು ದೂಡುವೆನು ದಿನವ ಗಳಿಗೆಯೊಲಂದು—
ನಾಡುನಾಡೇ ನನ್ನದನಿಗೆ ಪ್ರತಿಗೊಡುತಿರಲು.

ಹರಜಟಾಜೂಟದೊಳಗಿರುವ ಗಂಗೆಯ ತಂದು,
ತರುಣಿ ನಿನ್ನಯ ಪಾದವನು ತೊಳೆದು ಬೆಳಗುವೆನು !
ಸುರಿದು ತಾರೆಗಳ ಮಾಲೆಯ ಕೋದು ಮಿಂಚಿನಲಿ
ತರುಣಿ ! ನಿನ್ನಯ ಕಂಬುಕಂಧರಕೆ ತುಡಿಸುವೆನು !

ಆಗಸವ ದಾಂಟುವೆನು, ಗುಡುಗುಗಳ ಮಿಾಂಟುವೆನು,
ಮೇಗಡೆಗೆ ನೆಗೆದು ಕಾಣದ ನಾಡೊಳೋಡುವೆನು !
ಅಲ್ಲಿಯಮೃತವ ತಂದು ನಿನ್ನೊಡನೆ ಸವಿಸವಿದು
ಮೆಲ್ಲನಮರತೆಯ ಸಿಂಹಾಸನವನೇರುವೆನು !

ಅಲರಿನೆದೆಯೊಳಗೆ, ರವಿ-ಚಂದ್ರ-ತಾರೆಗಳೊಳಗೆ,
ಲಲಿತಪ್ರಕೃತಿಯ ಮಂಗಳಾಂಗ ರಂಗಗಳೊಳಗೆ,
ಎಲ್ಲರೆದೆವನೆಯೊಳಗೆ ಸುಳಿ-ಸುಳಿದು ನಿನಗಾಗಿ
ಚೆಲ್ವೆನಿಪುದೆಲ್ಲವನು ತಂದೊಪ್ಪಿಸುವೆ—ಬೇಗಿ !

ಕಲ್ಪನೆಯ ರೆಕ್ಕೆಯನು ಹೊಡೆ-ಹೊಡೆದು ಹಾರುತ್ತ,
ಕಲ್ಪ-ಕಲ್ಪದ ಹಿಂದೆ ಮುಂದೆ ಸಂಚರಿಸುತ್ತ,
ತಪ್ಪೊಪ್ಪುಗಳನು ತುಬ್ಬುವ ದಿವ್ಯಶಕ್ತಿಯಲಿ—
ಪ್ರಸ್ಫುರಿತಭಾವದಲಿ—ಜೀವದಲಿ ತೇಲುವೆನು !

ಮರೆದಪೆನು ಜಗವಿದನು ಜಗದ ಕೀಳ್‌ಬಾಳ್ವೆಯನು;
ಮರೆದಪೆನು ದೇಹವನು ದೇಹದ ವಿಚಾರವನು;
ಮರೆದಪೆನು ಜನ್ಮವನು ಜನ್ಮಾಂತರಂಗಳನು;
ಮರೆವೆನೆಲ್ಲವನು ನಿನ್ನನು ಬೆರೆತು ಸುಖಿಸುವೆನು !

ಆ ವಸಂತನ ಸಂತಸದ ಸೊಬಗುಸೋನೆಯಲಿ
ತೀವಿ ಹರಿವನುರಾಗರಸದೊಸರ ಪೂರದಲಿ,
ಭಾವದೀಧಿತಿ ದಾರಿಯನು ಬೆಳಗೆ, ಕಲ್ಪನೆಯ
ನಾವೆಯಲಿ ಕುಳಿತು ನಿನ್ನೆಡೆಗೆ ಬರುವೆನು ನೀರೆ !

ಅಂತು ನಾ ನಿನ್ನೆಡೆಗೆ ಬರುತಲಿರಲೆಲೆ ಜಾಣೆ !
ಶಾಂತಿರಸದೊಳಗೆ ತಲೆಗರೆಯದಿರು ಎನ್ನಾಣೆ !
ಮುಳುಗಿದರು ಶಾಂತಿಯಲಿ ಮೊಗವನೊಂದನು ತೋರು
ನಲುಮೆನುಡಿಯೊಂದೆರಡನೆದೆಗೊಟ್ಟು ಅವಧಾರು !

ನೀನು ರಸರಾಜ್ಯದಧಿದೇವಿಯೆಂಬುದ ಬಲ್ಲೆ !
ನೀನು ಮೇಲ್ನಾಡ ಕನ್ನಿಕೆಯಾದೊಡೆಲೆ ನಲ್ಲೆ !
ಕಾನನದ ಮುಗುಳೆಂದು ಮುರಿದು ಬಿಸುಡುವರೇನೆ ?
ಸಾನುರಾಗದಿ ಮಾಲೆ ಕೋದು ಮುಡಿದಪರಲ್ಲೆ !

ವ್ಯೋಮಮಾರ್ಗದಿ ಸುಳಿವೆನೆಂಬ ಬಿಂಕದ ಗಾಳಿ
ಭೂಮಿಯೊಳಗಿನ ಪಾಪಜೀವಿಗಳ ಮೈದಡಹಿ,
ಪ್ರೇಮದಲಿ ಸಂತವಿಸಿ ತವಿಸದೇನಾ ಅಳಲ ?
ಕಾಮಿನಿಯೆ ! ನಿನಗಿಂತು ಬಿಂಕವೇಕಿದು ಬಹಳ !

ಬಚ್ಚಲೊಳಗಲೆದಾಡಿತೀ ತುಂಬಿಯೆಂದೆನುತೆ
ಮುಚ್ಚುತೆದೆಯನು ಕುಸುಮವಿಸರ ಮೂದಲಿಸುವುದೆ ?
ಹೆಚ್ಚು-ಕಡಿಮೆಗಳುಂಟೆ ರಾಗರಸದೂಟದಲಿ—
ನಚ್ಚು-ಮೆಚ್ಚುಗಳ ಬಿರುದಿನ ಬೇಟದಾಟದಲಿ ?

ನೋಡವಿದಧೋಭುವನದಿಂದೆ ಬಂದುದೆನುತ್ತೆ
ದೂಡುವುವೆ—ಕಡೆಗಂಡು ಕೆಡೆನುಡಿದು ತಾರೆಗಳು ?
ಒಡನೆ ಬರಸೆಳೆದು ತೆಗೆದಪ್ಪಿ ಚುಂಬಿಸವೇನೆ ?
ಕಡುಬೆಡಗಿ ! ನೀನಿದನದೇಕೆ ಮರೆವೆಯೊ ಕಾಣೆ!

ತಂಗದಿರನಮೃತರಸದೊರತೆಯೊಳು ಮೈದಾಳಿ,
ಮಂಗಳಾಂಗಿಯು ಬರುವಳೆಂಬಾಸೆಯನು ತಾಳಿ,
ಚಂದಿರನ ಸೌಂದರ್ಯದೊಳಗೆ ಲೀನತೆಗೊಂಡು,
ನಿಂದು ನಿರುಕಿಸುತೆ ಕಳೆದಪೆನಿರುಳ ಬಾಳ್ವೆಯನು.

ಹೊತ್ತುಹುಟ್ಟುವ ಮೊದಲೆ ಹಾಸಿಗೆಯ ಬಿಟ್ಟೆದ್ದು
ಕತ್ತನುನ್ಮುಖಗೊಳಿಸಿ ಕಣ್ಣಿಟ್ಟು ಬಗೆನೆಟ್ಟು
ಮಿರುಪ ರವಿಕಿರಣಗಳ ಸರಣಿ-ಸರಣಿಗಳೊಳಗೆ—
ತರುಣಿ ! ನಿನ್ನಾಗಮನವನು ಕಾದು ಕೊರಗುವೆನು.

ಹಕ್ಕಿಗಳ ನುಣ್ದನಿಯ ಸೊಂಪಿನಲಿ ನಿನ್ನದನಿ-
ಯುಕ್ಕಿ ಹರಿವುದ ಕಾಣಬಯಸಿ ಕಾಣದೆ ನೊಂದು,
ಅಕ್ಕಪಕ್ಕದ ಮರದ ಗಿಡದ ನೆಳಲಲಿ ಕುಳಿತು,
ಬಿಕ್ಕುವೆನು ಬಿಕ್ಕುವೆನು ದುಃಖದಲಿ ಬಗೆ ಬೆರೆತು !

ಮುಕುಲವೆನಿತನೊ ಕಂಡು ಅವುಗಳೆದೆಯೊಳು ನೀನು
ಪ್ರಕಟವಾಗುವೆಯೆ ? ಎಂದೊಲವು ಮಿಗೆ ನೋಡುವೆನು;
ಸುಖದ-ದುಃಖದ ಸೋಂಕಿನೊಳು ನಿನ್ನ ಸಂಸ್ಪರ್ಶ-
ಸುಖವನರಸುತಲಿಂತು ಬಗೆ-ಬಗೆಯೊಳಳಲುವೆನು !

CC-0. Jangamwadi Math Collection. Digitized by eGangotri

ಎನ್ನ ಬಾಳ್ವೆಯ ಕಿಶೋರತೆಯ ಸಿರಿಯೊಸಗೆಯನು-
ಚೆನ್ನೆ ! ನೀನೇ ಬಿತ್ತರಿಸಿದೆಯೆಂಬುವ ಬಲ್ಲೆ !
ನಿನ್ನ ಪೈಜಿನ್ನದುಲಿ ನಿನ್ನ ನೇವುರಗಳುಲಿ
ನಿನ್ನ ಮೋರೆಯ ಮುಸುಕಿದೋ ನೆನಪನಾಳುತಿವೆ !

ಅಂದು ನಿನ್ನಾ ಮಿಂಚುಗೈಯ ಸೋಂಕಿನೊಳಾನು
ಹೊಂದಿದಾ ಪುಳಕವಿಂದಿಗು ಜುಮ್ಮುದಟ್ಟಿಪುದು !
ಅಂದು ಕೇಳಿದ ನಿನ್ನ ರಸವಾಣಿಯಿಂದೆದೆಗೆ
ಬಂದ ಅನುಭೂತಿಯಿಂದಿಗು ಹೆಮ್ಮೆ ಹುಟ್ಟಿಪುದು—.

ಅಂದು ಕಾಣದ ನಿನ್ನ ಮೊಗದಂದ-ಚೆಂದವನು
ಎಂದಾದರೂ ಕಾಂಬೆನೆಂಬ ಹಂಬಲವಿಂತು
ಎಣ್ಣೆ ತೀರಿದ ದೀಪದೊಲು ನಂದಿ ತಾನಿಂತು
ತಣ್ಣಗಾಗುವುದೊಂದೆ ಗತಿಯೆ ! ಹಾ ಹಾ ! ವಿಧಿಯೆ !

ಇಂತು ರವಿ-ಚಂದ್ರರಲಿ ತಾರಕಾವೃಂದದಲಿ
ಸಂತಸದ ನೆಳಲಿನಲಿ ದುಃಖಗಳ ಬಿಸಿಲಿನಲಿ
ಹಕ್ಕಿಗಳ ಹಕ್ಕೆಯಲಿ ಮುಗುಳುಗಳ ತಕ್ಕೆಯಲಿ
ಸಿಕ್ಕಬಾರದೆ ನೀನು —ಸೊಕ್ಕಸುಳಿದಕ್ಕರಲಿ ?

ಏನೇನೊ ಬರೆಬರೆದು ಬರಡುಗವಿತೆಯ ಹಾಡಿ
' ನಾನು ಕವಿ ! ' ಎಂಬಾತ್ಮವಂಚನೆಯು ಬೇಡೆನಗೆ.
ಉನ್ನತವ ಜಗದೊಳಗೆ ಮೆರೆದು ಕವಿಯೆನಿಸುವೊಡೆ
ಚೆನ್ನೆ ! ನಿನ್ನೊಲುಮೆಯಿಲ್ಲದೆ ಸಾಧ್ಯವಾಗುವುದೆ ?

ಅಂತು ರಸಸಿದ್ಧಿಯಾಗುವ ವರೆಗೆ—ನಿನ್ನ ಕೈ
ಅಂತರಂಗದ ತಂತಿಗಳನು ಮೀಂಟುವ ವರೆಗೆ—
ದಿನದ ಸವಿಗನಸುಗಳೆ ನನಸಾಗುವಾ ವರೆಗೆ—
ಮನಕದೆಲ್ಲಿದೆ ಶಾಂತಿ ! ಬಾಳ್ವೆಗೆಲ್ಲಿದೆ ಕಾಂತಿ !

ಇನಿತೆನ್ನ ನುಡಿ ನುಡಿದುದುಳಿದೆದೆಯ ಬೇನೆಯನು
ಹೊನಲಿಡುವ ಕಣ್ಣೀರು ತಾನೆ ನಿನಗೊರೆದಪುದು;
ನಿಡುಸುಯ್ಯು ನುಡಿದಪುದು, ಎದೆಮಿಡುಕ ಮಿಡಿದಪುದು;
ಕಿಡಿಗೊಳುವ ಬೇಗುದಿಯೆ ನಿನಗೆದೆಯ ತೋರ್ದಪುದು.

ಬರುವೆಯಾದೊಡೆ ತಳುವದೀಗಳೇ ಬಂದುಳಿಸು!
ಬಾರದಿರ್ದೊಡೆ ಬರುವ ಕುರುಹುಗಳ ಕೊನೆಗೊಳಿಸು!
ಎರಡರೊಳಗೊಂದನೆಸಗಾದೊಡನುಮಾನದಲಿ
ಕೊರಗುವಂತೆಸಗದಿರು ಹೇ ಕವನಕಾಮಿನಿಯೆ !


# ಕನ್ನಡದೊಳಗಿನ ಅಪೂರ್ವ ಗ್ರಂಥಗಳು

**ಓದದಿದ್ದರೆ ಅಷ್ಟು ಜ್ಞಾನಕ್ಕೆ ಎರವಾಗುವಿರಿ!**

## ಕರ್ಣಾಟಕದ ವೀರ ಕ್ಷತ್ರಿಯರು

ಋಗ್ವೇದ ಕಾಲದಿಂದ ಕನ್ನಡ ಜನಾಂಗದ ಕುರುಹುಗಳನ್ನು ಕಂಡು ಹಿಡಿದು ವಿವರಿಸಿದ ಗ್ರಂಥಗಳು, ಕನ್ನಡದಲ್ಲಿಯೆ ಏಕೆ ಇಂಗ್ಲಿಷಿನಲ್ಲಿಯೂ ಇಲ್ಲ! ಕುರುಬರು, ಆರೇರು, ಹಟಗಾರರು, ಜಾಡರು, ತುರುಕಾರರು, ಲಿಂಗವಂತರು, ಕಾಣ್ವರು, ಬಂಟರು (ನಾಡವರು) ಗಳೆಲ್ಲ ಇದನ್ನೊಮ್ಮೆ ಓದಿ, ತಮ್ಮವರ ಪೂರ್ವಪೀಠಿಕೆಯನ್ನು ಅರಿತುಕೊಳ್ಳುವುದು ಕರ್ತವ್ಯವಾಗಿದೆ. ಇಂಥ ಪುಸ್ತಕವು ಇದೇ ಮೊದಲನೆಯದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಸಲದ ದೇವರಾಜ ಬಹುಮಾನದ ಮರ್ಯಾದೆಯನ್ನು ಪಡೆದಿದೆ. ಬೆಲೆ ೧ರೂ.

**ಕಣ್ಮರೆಯಾದ ಕನ್ನಡ** ಬೆಲೆ ೦-೧೨-೦



**ಮಹಾರಾಷ್ಟ್ರದ ಮೂಲ** ಬೆಲೆ ೦-೮-೦

## ಕನ್ನಡ ನುಡಿಯ ಹುಟ್ಟು ಅಥವಾ ನಿರುಕ್ತ ಬೆಲೆ ೧-೦-೦

ಕನ್ನಡ ನುಡಿಯಲ್ಲಿ ಏನಾದರೂ ಬರೆಯಬೇಕು, ಉಪನ್ಯಾಸ ಮಾಡಬೇಕೆಂಬ ಇಚ್ಛೆ ಇರುವ ಪ್ರತಿಯೊಬ್ಬರೂ ಇದನ್ನು ಓದಲೇ ಬೇಕು; ಕನ್ನಡ ನುಡಿಯ ಆಳವನ್ನು ಅರಿತು, ಕನ್ನಡ ನುಡಿಯ ಕಂಪು-ಸೊಂಪುಗಳನ್ನು ಅರಿತುಕೊಳ್ಳಬೇಕಾಗಿದ್ದರೆ, ಈ ಪುಸ್ತಕವು ಹತ್ತಿರ ಇರುವುದು ಅವಶ್ಯಕ. ಇದರಲ್ಲಿ ಕನ್ನಡ ಶಬ್ದಗಳ ಸಿದ್ಧಿಕ್ರಮದ ಗುಟ್ಟನ್ನು ತಿಳಿಸಲಾಗಿದೆ. ಸಮಾನಾರ್ಥಕ ಶಬ್ದಗಳ ಸಂಗ್ರಹವಿದೆ. Idioms ಗಳನ್ನು ಪಂಪ, ಕುಮಾರವ್ಯಾಸಾದಿಗಳಿಂದ ಆರಿಸಿ ಕೊಡಲಾಗಿದೆ. ಕನ್ನಡಶಬ್ದಗಳೊಳಗೆ ಸೂಕ್ಷ್ಮಾರ್ಥದರ್ಶಕ ಶಕ್ತಿಯು ಎಷ್ಟೊಂದು ವಿಶಾಲವಾಗಿದೆಯೆಂಬುದನ್ನು ತೋರಿಸಲಾಗಿದೆ.

**ಮಾಧವ ಬಲ್ಲಾಳ ಬಂಧುಗಳು, ಸಾಧನಕೇರಿ, ಧಾರವಾಡ**


CC-0. Jangamwadi Math Collection. Digitized by eGangotri

# ಪೂರ್ವ-ಪಶ್ಚಿಮ

ಶ್ರೀ. ಶೇಷು 'ಸೋದರಸಂಘ' ಶಿವಮೊಗ್ಗ

ಇಂದಿನ ನಮ್ಮ ದಾಂಪತ್ಯಜೀವನದ ವೈಷಮ್ಯದ ಮಾದರಿಯೊಂದಿದು. ಎತ್ತು ಎರೆಯೆಂದರೆ ಕೋಣ ಕೆರೆಯೆನ್ನುವುದು. ಗಂಡು ಬುದ್ಧಿಯನ್ನು ಬೆಂಬತ್ತುವುದು; ಹೆಣ್ಣು ಭಾವನೆಯನ್ನು ಬೆಂಬತ್ತುವುದು. ಈ ಎಳೆದಾಟದ ಸಂಸಾರದಲ್ಲಿ ಗಂಡಹೆಂಡಿರ ಒಲ್ಮೆಯು ಗತಿಯು ಏನಾಗುತ್ತಿರಬಹುದು? ಮುಳ್ಳುಕಂಟಿಯಲ್ಲರಳಿದ ಮಲ್ಲಿಗೆಯಂತೆಯೆ ಅಲ್ಲವೇ?

ಪ್ರಿಯತಮ,

ನನಗೊಂದು ಹೊಸ ಅನುಭವ ಈಗ. ಹೊಸ ಆನಂದ. ಎಂದೂ ಅನುಭವಿಸದ ಆನಂದ. ನಮ್ಮಿಬ್ಬರ ನಡುವೆ ಹೊಸದೊಂದು ಮೂರ್ತಿ ಬಂದಿದೆ. ಅದರ ಮುಖವನ್ನು ನೋಡಿ ನೋಡಿದಷ್ಟು ನನ್ನ ಮನಸ್ಸಿಗೆ ತೃಪ್ತಿಯಿಲ್ಲ. ಅದನ್ನೆತ್ತಿ ಮುದ್ದಿಟ್ಟಷ್ಟು ತಣಿವಿಲ್ಲ. ನಮ್ಮ ತಾಯಿ, "ಹೀಗೆಲ್ಲ ಮಾಡಬಾರದು ಪಾತು, ಮಗೂನ್ನ ಏನಾದರೂ ಮಾಡೀಯೆ!" ಎನ್ನುತ್ತಾಳೆ. ನನಗೆ ಅದನ್ನು ಒಂದು ಆರೆಕ್ಷಣ ಬಿಡಲು ಇಷ್ಟವಿಲ್ಲ. ಮೈ ಕೈ ನೋಯುತ್ತಿದ್ದರೂ, ಕುಳಿತಿರಲು ಆಗದಿದ್ದರೂ, ಕುಳಿತು ಅದನ್ನೇ ನಿಟ್ಟಿಸೋಣವೆನ್ನಿಸುತ್ತದೆ. ಅದನ್ನು ನೋಡಿದರೆ 'ನೀವು ಎಲ್ಲಿ!' ಎನ್ನುವಂತಿಲ್ಲ. ನಿಮ್ಮಂತೆಯೇ ಅಗಲವಾದ ಮುಖ, ಮೂಗು, ತುಟಿಗಳು. ಆದರೆ ಕಣ್ಣುಗಳು ಮಾತ್ರ ನನ್ನಂತೆ ಎಂದು ಅಮ್ಮ ಹೇಳುತ್ತಾಳೆ. ನಿಮ್ಮಂತೆಯೇ ಬಹು ಹಟವಾದಿ ಅದು. ಅಳುವುದಕ್ಕೆ ಶುರು ಹಚ್ಚಿದರೆ ನಿಲ್ಲಿಸುವುದೇ ಇಲ್ಲ.

ಈ ಕಾಗದವನ್ನು ಕಂಡಕೂಡಲೆ ಖಂಡಿತಾ ಹೊರಟು ಬನ್ನಿ. ಬರುವಾಗ ಹದಿನೈದು ದಿನ ರಜೆಪಡೆದು ಬರಬೇಕು. ನಾನೂ ಮಗುವೂ ಈಗ ಹುಷಾರಾಗಿದ್ದೇವೆ. ಮಗುವಿಗೆ ಏನು ಹೆಸರಿಡಬೇಕೆಂದು ನಾನೀಗಾಗಲೇ ಮಾಡಿಕೊಂಡು ಇದ್ದೇನೆ. ತಿಮ್ಮು ಎಂದಿಡೋಣ ಎಂದಿದ್ದೇನೆ. ಅದು ನಮ್ಮ ಅಜ್ಜಿಯ ಹೆಸರು. ಅಮ್ಮನೂ ಅದಕ್ಕೆ ಒಪ್ಪಿದ್ದಾಳೆ—ನೀವು ಖಂಡಿತಾ ಬರಬೇಕು. ಯಾವುದಕ್ಕೂ ಕೂಡಲೇ ಜವಾಬು ಬರೆಯಿರಿ.

ಇಂತೀ ನಿಮ್ಮ ಪ್ರೀತಿಯ
**ಪಾತು.**

೨

ಪ್ರಿಯತಮೆಗೆ,

ನಿನ್ನ ಕಾಗದವನ್ನು ನೋಡಿ ಬಹಳ ಸಂತೋಷವಾಯಿತು. ನಮ್ಮಿಬ್ಬರ ಪ್ರೀತಿಯೇ ಮೂರ್ತಿವೆತ್ತಂತಾಯಿತು. ನಿಜವಾಗಿಯೂ ಮಗುವು ನನ್ನ ಹಾಗೆಯೇ ಇದೆಯೇ? ಮಹಾ ಹಟಮಾಡುತ್ತೆ....ಎಂತ ಬರೆದಿದ್ದೀ. ಆ ಹಟವೇ ತೋರಿಸುತ್ತದೆ—ಮುಂದೆ ಜೀವನದಲ್ಲಿ ಹೋರಾಡಬೇಕಾದರೆ ಹಟವಿಲ್ಲದೆ ಸಾಗುವುದಿಲ್ಲ....... ಎಂಬುದನ್ನ. ನಾನು ಹಟಮಾಡದಿದ್ದರೆ ನಿಮ್ಮ ತಂದೆಯವರು ನನ್ನನ್ನು B. A. ಗೆ ಕಳುಹಿಸುತ್ತಿದ್ದರೆ? ನಾನು ಈ ಪದವಿಯಲ್ಲಿರುವುದಕ್ಕೆ ಆಗುತ್ತಿತ್ತೆ?

ಮಗುವನ್ನು ಚೆನ್ನಾಗಿ ನೋಡಿಕೋ. ಅದಕ್ಕೆ ಥಂಡಿ-ಶೀತವಾದೀತು, ನೀನು ಆಯಾಸಪಟ್ಟುಕೊಳ್ಳಬೇಡ. ಕೊನೆಗೆ ನಿದ್ದೆ-ಗಿದ್ದೆಗೆಟ್ಟು ಏನಾದರೂ ಮಾಡಿಕೊಂಡೀಯೆ!

ನನಗೆ ಹಿಂದಿನ ಗೊಡ್ಡು ಹೆಸರುಗಳನ್ನು ಕಂಡರೆ ಆಗುವುದಿಲ್ಲವೆಂಬುದು ನಿನಗೆ ಗೊತ್ತೇ ಇದೆ. ತಿಮ್ಮು, ಪೊಮ್ಮು, ಕಾಳಿ, ಕುಟ್ಟಿ....... ಇವೇನು ಹೆಸರುಗಳೋ! ಮುದ್ದಾದ ಬೇರೆ ಹೆಸರುಗಳೇ ಇಲ್ಲವೇ? ಯಾವುದಾದರೂ

CC-0. Jangamwadi Math Collection. Digitized by eGangotri

ಲತೆಯ—ಹೂವಿನ ಅಥವಾ ಸುಂದರವಾದ ವಸ್ತುವಿನ ಹೆಸರನ್ನಿಟ್ಟರೆ ಚೆನ್ನಾಗಿರುವುದಿಲ್ಲವೆ? ನನಗೆ ಅಂಬುಜ ಎಂಬ ಹೆಸರು ಇಷ್ಟ. ಕಮಲದ ಹಾಗೆ ನಗುನಗುತ, ಎಲ್ಲರನ್ನೂ ಆಕರ್ಷಿಸುತ್ತಿರಲಿ! ಗುಲಾಬಿ ಎಂತ ಬೇಕಾದರೆ ಇಡೋಣ—ಯಾವ ಹೆಸರಿಟ್ಟರೂ ಅದರಲ್ಲಿ ಅರ್ಥವಿರಬೇಕು, ಒಪ್ಪುವಂತಿರಬೇಕು.

ನಾನು ಇನ್ನೆರಡು ದಿನ ತಡೆದು ಬರುತ್ತೇನೆ.

ಇಂತೀ ನಿನ್ನ
ರಾಜ.

೩

ಪ್ರಿಯತಮ,

ನೀವು ಯಾವಾಗಲೂ ಹೀಗೇ ಎಂದು ನನಗೆ ಗೊತ್ತಿತ್ತು. ಹೆಸರಿಗೇಕೆ ಈಗ ಗುದ್ದಾಟ. ನೆನಸಿಕೊಂಡರೆ ನಗುಬರುತ್ತದೆ. ಅಮ್ಮನಂತೂ ನಿಮ್ಮ ಹುಚ್ಚಾಟಕ್ಕೆ ಬಿದ್ದು ಬಿದ್ದು ನಕ್ಕಳು........ಅಂಬುಜ, ಗುಲಾಬಿ........ಮಲ್ಲಿಗೆ, ಸಂಪಗೆ, ಕೇದಿಗೆ........ ಚಂಪಕ.... ಮೊದಲಾದ ನಾಟಕಗಳ ಹೆಸರೇಕಾಗಬಾರದೋ?........ ನೀವು ಈಗಿನ ಕಾಲದವರು. ಹಿಂದಿನದನ್ನು ನಂಬುವುದಿಲ್ಲ........ ಹೋಗಲಿ, ನೀವು ಯಾವಾಗ ಬರುತ್ತೀರೋ, ಮಗುವಿನ್ನ ಯಾವಾಗ ನೋಡುತ್ತಿರೋ ಎಂದು ತವಕಪಡುತ್ತಿದ್ದೇನೆ.

ನಿಮ್ಮ ಪ್ರೀತಿಯ
ಪಾತು.

೪

ಮಿತ್ರ ಗೋಪೂಗೆ,

ಈ ಕಾಗದದಲ್ಲಿ ಸಂತೋಷದ ಸುದ್ದಿಯನ್ನೂ, ಅದರ ಹಿಂದೆಯೇ ದುಃಖದ ಸುದ್ದಿಯನ್ನೂ ತಿಳಿಸುತ್ತೇನೆ; ನನಗೆ ಒಂದು ಮಗು ಹುಟ್ಟಿತು—ತೀರಿಹೋಯಿತು. ಎಷ್ಟು ಚೆನ್ನಾಗಿತ್ತು ಅಂತೀಯಾ? ಬಾಯಲ್ಲಿ ಹೇಳಲಾರೆ........ ಆ ಎಸಳಾದ ಮೂಗೋ, ಮುದ್ದಾದ ಬಾಯೋ, ಚಿತ್ರ ಕೊರೆದಂಥ ಕಣ್ಣುಗಳೋ........ ಗೋಪೂ, ಹೇಳಲಾರೆ! ಮುಖ್ಯ ನನ್ನ ಅದೃಷ್ಟ!........ ನನ್ನದು ಸುದೈವವೆಂದು ನೀನು ಹೊಗಳುತ್ತಿದ್ದೆ. ರೂಪವತಿಯಾದ ಪತ್ನಿ, ಮಮತೆಯ ಅತ್ತೆ-ಮಾವಂದಿರು, ಕೈತುಂಬ ಹಣದ ಉದ್ಯೋಗ, ನನಗೆ ಕೊರತೆಯೇನೆಂದು!........? ಎಲ್ಲಾ ಕಂದಾಚಾರದವರು; ಮಗುವನ್ನು ಸರಿಯಾಗಿ ನೋಡಿಕೊಳ್ಳಲೇ ಇಲ್ಲಾಂತ ಕಾಣುತ್ತೆ. ಕಫಕಟ್ಟಿತ್ತಂತೆ! ಡಾಕ್ಟರನ್ನ ಕರಸೋದು ಬಿಟ್ಟು, ಅದು ಇದು ಕೊಡುತ್ತಾ, ಆ ಜಪ ಈ ಜಪ ಎನ್ನುತ್ತಾ, ವಿಭೂತಿ ಮೊದಲಾದುವುಗಳನ್ನಿಡುತ್ತಾ ನನ್ನ ಮಗುವನ್ನು ಕಳೆದರು. ಹಳೆಯ ಕಂದಾಚಾರಕ್ಕೆ ನನ್ನ ಮುದ್ದುಮಗು ಬಲಿ........

ಈಗ ಹೆಚ್ಚು ಬರೆಯಲಾರೆ.

ಇಂತೀ ನಿನ್ನ
ರಾಜ.

೫

ಪ್ರೀಯ ಗೆಳತಿ ಲಲಿತೆ,

ನಿನ್ನ ಪ್ರೀತಿಪೂರ್ವಕವಾದ ಕಾಗದ ತಲುಪಿತು. ನಿನ್ನ ಶುಭಾಶಯಗಳೂ ಪ್ರೀತಿಗಳೂ ವ್ಯರ್ಥವಾದುವು........ ಲಲಿತೇ........ ಅವುಗಳನ್ನೆಲ್ಲಾ ಸ್ವೀಕರಿಸಲು ಆ ವಸ್ತು ಇಲ್ಲ ಈಗ........ ಇದನ್ನು ಬರೆಯುತ್ತಾ ನನ್ನ ಕೈ ನಿಂತುಹೋಗುತ್ತದೆ.... ನಮ್ಮವರ ಹಟ, ನಾನೇನು ಮಾಡಲಿ?.... ನನ್ನ ಮನಸ್ಸಿನಲ್ಲಿ ಯಾವಾಗಲೂ ಹೊಡೆದುಕೊಳ್ಳುತ್ತಲೇ ಇತ್ತು. ಮನೆಯಲ್ಲಿ ಹಿರಿಯರಾದವರ ಹೆಸರೂ, ಮನೆಯ ದೇವರ ಹೆಸರೂ, ಮಗುವಿಗೆ ಇಟ್ಟರೆ ಚಿರಾಯುಷ್ಯ ಎಂದು ಎಷ್ಟು ಹೇಳಿದರೂ ಕೇಳಲಿಲ್ಲ. ಅವರ ಹಟವೇ ಗೆದ್ದಿತು... ಗುಲಾಬಿಯಂತೆ! ಗುಲಾಬಿ! ಏನು ಈಗಿನವರೋ! ಈಗಿನ ಹೆಸರುಗಳೋ........ ನನ್ನ ಮುದ್ದಿನ ಕಂದ ನನ್ನ ಕೈ ಬಿಟ್ಟು ಹೋಯಿತು. ಆ ಮಂದಹಾಸ, ತಿದ್ದಿದ ಹುಬ್ಬು, ನೀಳವಾದ ಮೂಗು........ ನೆನಸಿಕೊಂಡರೆ........! ಏನೋ ಒಂದು ನೆಪ, ಹಾಳುಸನ್ನಿ........ ಬಡಿದುಕೊಂಡು ಹೋಯಿತು! ಹಾಳು ಹೆಸರು! ಗುಲಾಬಿಯಂತೆ! ಮಲ್ಲಿಗೆಯಂತೆ! ಚಂಪಕವಂತೆ! ರಾಮ ರಾಮಾ! ನನ್ನ ಮುದ್ದು ಮಗುವು ಈ ಹೆಸರಿನ ಗಲಾಟೆಯನ್ನು ತಡೆಯಲಾರದೆ ಹೋಯಿತು........

ಇಂತೀ ನಿನ್ನ
ಪಾತು



CC-0. Jangamwadi Math Collection. Digitized by eGangotri

# ಕಾಮೊಯೆನ್ಸ್ ಮತ್ತು ಅವನ ಮಹಾಕಾವ್ಯ

ಶ್ರೀಮಾನ್ ಬಿ. ಅಶ್ವತ್ಥನಾರಾಯಣರಾವ್ ಬೆಂಗಳೂರು

## ★ ಕವಿಚರಿತ್ರೆ ★

ಕಾಮೋಯೆನ್ಸನು ಪೋರ್ತುಗಾಲ್ ದೇಶದ ಮಹಾಕವಿಯು. ಅದೃಷ್ಟವು ಅವನನ್ನು ದೇಶದೇಶಗಳನ್ನು ಅಲೆಯಲು ಹಚ್ಚಿತು. ವಾಸ್ಕೋ-ಡಿ-ಗಾಮನ ಜೊತೆಯಲ್ಲಿ ಅವನು ಹಿಂದುಸ್ಥಾನಕ್ಕೆ ಬಂದು, ಗೋವೆಯಲ್ಲಿ ಕೆಲವು ಕಾಲ ವಾಸಿಸಿದ್ದನು. 'ಲ್ಯೂಸಿಯಾಡ್' ಎಂಬ ಇವನ ಮಹಾಕಾವ್ಯದಲ್ಲಿ, ಹಿಂದುಸ್ಥಾನಕ್ಕೆ ಸಂಬಂಧಿಸಿದ ಅನೇಕ ಮಾತುಗಳುಂಟು. ಸಾಯುವವರೆಗೂ ಅವನನ್ನು ಯಾರೂ ಲೆಕ್ಕಿಸಲಿಲ್ಲ; ಬೀದಿಯ ನಾಯ ಬಾಳಿನಂತೆ ಅವನ ಬಾಳಿನ ಬೆಲೆಯಾಗಿದ್ದಿತು. ಸತ್ತ ಮೇಲಿನ ಆತನ ಕೊಂಡಾಟಕ್ಕೆ ಅಳತೆಯಿಲ್ಲ!



೧

ಯುರೋಪ್‌ಖಂಡದ ಅನೇಕ ಸುಪ್ರಸಿದ್ಧ ಲೇಖಕರ ಗ್ರಂಥಗಳಲ್ಲಿ ಹಿಂದುಸ್ಥಾನದ ವಿಚಾರವು ಬಂದಿರುವುದು. ಜರ್ಮನಿಯ ಪ್ರಸಿದ್ಧ ಕವಿಯೂ, ತತ್ತ್ವಜ್ಞಾನಿಯೂ ಆದ 'ಫ್ರೆಡೆರಿಕ್ ರೂಕರ್ಟ್( Frederick Ruckert )'ನು ಹಿಂದುಗಳ ಉಚ್ಚತತ್ತ್ವಗಳನ್ನು ತನ್ನ 'Brahmin'sWisdom' ಎಂಬ ಗ್ರಂಥದಲ್ಲಿ ಪ್ರತಿಪಾದಿಸಿರುವನು. ಅದೇ ಜನಾಂಗದವನಾದ ಗೀಟೆಯು ( Goethe ) ಅಸ್ಪೃಶ್ಯರ ಬಗ್ಗೆ ಒಂದು ಕವನವನ್ನು ಬರೆದಿರುವನು. ಐರಿಷ್ ಕವಿವರ್ಯನಾದ ಥಾಮಸ್ ಮೂರನು ( Thomas Moore ) ತನ್ನ ' Lalla-Rookh' ಪುಸ್ತಕದಲ್ಲಿ ಒಬ್ಬ ಮೊಗಲ ರಾಜಕುವರಿಯನ್ನು ಕುರಿತು ಒಂದು ರಮ್ಯವಾದ ಕಾವ್ಯವನ್ನು ರಚಿಸಿರುವನು. ಷೆಲ್ಲಿಯ ಚಂಚಲ ಮನಸ್ಸಾದರೂ

> "In the Vale of Cashmere, far within
> Its lonelist dell...."

ನಲ್ಲಿ ಶಾಂತಿಪಥವನ್ನರಸುವುದು.

ದೂರದೇಶದ ನಿವಾಸಿಗಳಾದ ಅಮೇರಿಕೆಯವರು ಕೂಡ ಹಿಂದುಸ್ಥಾನದಿಂದ ಕೆಲವು ಕಾವ್ಯಸಾಮಗ್ರಿಯನ್ನು ತೆಗೆದುಕೊಂಡಿರುವರು. "Song Celestial" ಎಂಬ ಪುಸ್ತಕದಿಂದ ಎಮರಸನ್ನನು ತನ್ನ "ಬ್ರಹ್ಮ (Brahma)" ಕವನದ ಅಂತರ್ಭಾವವನ್ನು ಆಯ್ದಿರುವನು. **ಲಾಂಗ್‌ಫೆಲೊ** ( Longfellow ) ಕವಿಯು ತ್ರಿಶಂಕುವಿನ ಕತೆಗೆ ಮನಸೋತು ಅದೇ ಹೆಸರಿನಿಂದ ಹಲವು ಪದ್ಯಗಳನ್ನು ಬರೆದಿರುವನು. ಸಾಲದುದಕ್ಕೆ ( Whittier ) ವಿಟ್ಟಿಯರ್ ಮಹಾಕವಿಯು "Pipers at Lucknow" ಹಾಗೂ " Hymn of the Brahma Samaj " ಎಂಬ ಎರಡು ಕವನಗಳನ್ನು ಕಾಣಿಕೆಯಾಗಿ ಅರ್ಪಿಸಿರುವನು. ಇಷ್ಟು ಮುಂದಿ ಕವಿಗಳೂ ಸಾಹಿತಿಗಳೂ ತಮ್ಮ ಕವನ-ಕಾವ್ಯಗಳ ಕಥಾಮೂಲವನ್ನು ಹುಡುಕಿ ತೆಗೆದುಕೊಂಡಿದ್ದರೂ, **ಕಾಮೊಯೆನ್ಸ್** ( Camoens ) ನ "ಲ್ಯೂಸಿಯೊಡ್ (Lusiad)" ಗ್ರಂಥಕ್ಕೆ ಸಮನಾದ ಪುಸ್ತಕವು ಯಾವುದೂ ಹೊರಬಿದ್ದಿಲ್ಲ.

ಶ್ರೀಮತಿ **ಬ್ರೌನಿಂಗಳು** ತನ್ನ "ಕವಿಗಳ ಸ್ವಪ್ನದೃಶ್ಯ" ( Vision of Poets ) ಎಂಬುದರಲ್ಲಿ ಹೀಗೆ ಹಾಡಿರುವಳು:

> "Camoens with that look he had
> Compelling India's genius sad
> From the wave through the Lusiad."

ಕಾಮೊಯೆನ್ಸನು ಇಂತಹ ಉಚ್ಚಸ್ಥಾನವನ್ನು ಸಂಪಾದಿಸಿ ಕೊಟ್ಟಿದ್ದರೂ, ಹಿಂದುಸ್ಥಾನದವರಾದ ನಾವು ಆತನ

CC-0. Jangamwadi Math Collection. Digitized by eGangotri

ಪರಿಚಯವನ್ನು ಸಾಕಷ್ಟು ಮಾಡಿಕೊಂಡಿಲ್ಲವೆಂದು ಹೇಳಲು ನಾಚಿಕೆಯಾಗುತ್ತದೆ. ಲ್ಯೂಸಿಯಾಡ್ ಮಹಾಕಾವ್ಯದ ಶೈಲಿ, ಭಾಷೆಯ ವೈಖರಿ, ಕಾವ್ಯದ ಬೆಳೆವಣಿಗೆ ಇವನ್ನಷ್ಟೇ ಕಾವ್ಯದೃಷ್ಟಿಯಿಂದ ತುಲನೆಮಾಡಿದರೂ, ಅದನ್ನು ಜಗತ್ತಿನ ಮಹಾಕಾವ್ಯಗಳಲ್ಲಿ ( Epics )ಒಂದೆಂದು ನಿರ್ದಾಕ್ಷಿಣ್ಯವಾಗಿ ಹೇಳಬೇಕಾಗುತ್ತದೆ. ಕಾವ್ಯವಸ್ತುವಾದರೂ ಮಹತ್ತರವಾದುದು. ಪ್ರಪಂಚದ ಇತಿಹಾಸದಲ್ಲಿ ಅದಕ್ಕೆ ಪ್ರಾಮುಖ್ಯತೆಯಿದೆ. ವಾಸ್ಕೊ-ಡಿ-ಗಾಮನು ಹೊಸದಾರಿಯಿಂದ ಹಿಂದುಸ್ಥಾನಕ್ಕೆ ಮೊದಲು ಮುಟ್ಟಿದ ವಿಷಯವನ್ನು ತೆಗೆದುಕೊಂಡು, ಕವಿಯು ತನ್ನ ರಚನಾಕಾರ್ಯದಲ್ಲಿ ತೊಡಗಿದ್ದಾನೆ. ಆದುದರಿಂದ ಕಾವ್ಯ, ಕಾವ್ಯವಸ್ತು....ಈ ಎರಡು ಕೋನಗಳಿಂದ ನೋಡಿದರೂ ಭಾರತೀಯರಿಗೆ,ಅದರಲ್ಲಿಯೂ ಕರ್ಣಾಟಕದವರಿಗೆ, ಅದರಬಗ್ಗೆ ಆದರವು ಹುಟ್ಟಬೇಕು.

೨

ಸುಪ್ರಸಿದ್ಧ ಲೇಖಕರ ಜೀವನಚರಿತ್ರೆಯಲ್ಲಿ ಕೆಲವು ವೇಳೆ ಸುಂದರತಮವಾದ ಸಂದರ್ಭಗಳು, ಕೆಲವು ವೇಳೆ ದಾರುಣವಾದ ವ್ಯಥೆ, ಇನ್ನು ಕೆಲವು ವೇಳೆ ಸಾಹಸ, ಕಾರ್ಯರೂಪ—ಇವುಗಳನ್ನು ಕಾಣಬಹುದು. ಆದರೆ ಜೀವನಚರಿತ್ರೆಯ ಇತಿಹಾಸದಲ್ಲಿ, ಕಾಮೊಯೆನ್ಸನ ಜೀವನದಂತೆ ಕಾವ್ಯಮಯವಾದುದೂ ( Romantic ) ಕಲ್ಪನಾತೀತವಾದುದೂ ಬಹುವಿರಳವೆಂದು ಹೇಳಬಹುದು. ಆತನು ಯಾವಯಾವ ಉದ್ಯೋಗಗಳಲ್ಲಿ ತೊಡಗಬಹುದೋ ಅವುಗಳಲ್ಲೆಲ್ಲ ತೊಡಗಿದ್ದನು; ಅವುಗಳಲ್ಲಿ ಅನುಭವಿಸಬಹುದಾದ ದುಃಖದ ಎಲ್ಲೆಯನ್ನು ಅರಿತಿದ್ದನು.ಆತನು, ಯೋಧ, ನಾವಿಕ, ಕವಿ, ಮುತ್ಸದ್ದಿ; ಎಲ್ಲಕ್ಕೂ ಹೆಚ್ಚಿನದೆಂದರೆ ದೇಶಭ್ರಷ್ಟನಾದ ಭಿಕ್ಷುಕ—ಹೀಗೆ ನೊಂದ ಜೀವನವುಳ್ಳವನು. ಆತನ ಮೇಲೆ ತನ್ನ ಕಲಿಯ ಪ್ರಬಲವಾದ ಕೃಪಾಕಟಾಕ್ಷವು ಬೀಳಲಿಲ್ಲವಷ್ಟೇ ಅಲ್ಲ; ತಿರುಗಿ ಗದಾಪ್ರಹಾರವೇ ಬಿದ್ದಿತು. ಐಶ್ವರ್ಯವಂತನಾಗಿ ಹುಟ್ಟಿ, ಬೆಳೆದು, ಸುಪ್ರಸಿದ್ಧ ಕವಿಯೆಂದು ಯಶಸ್ಸನ್ನು ಪಡೆದಿದ್ದರೂ ಎರಡುಹೊತ್ತಿನ ಊಟಕ್ಕಾಗಿ — ಕೇವಲ ಕೂಳಿಗಾಗಿ — ಬೀದಿಬೀದಿಗಳಲ್ಲಿ ಭಿಕ್ಷೆಯನ್ನೆತ್ತಿ ಉದರಂಭರಣವನ್ನು ಮಾಡಬೇಕಾಯಿತು. ಆತನು ದೇಶಭ್ರಷ್ಟತೆಯ ವ್ಯಥೆಯನ್ನು ಮಾತ್ರವೇ ಸಹಿಸಲಿಲ್ಲ ತುರಂಗದ ವಾಸವನ್ನೂ ಅನುಭವಿಸಬೇಕಾಯಿತು. ದೈವವಿಪಾಕದಿಂದ — ಅಲೌಕಿಕಪ್ರತಿಭೆಯಿದ್ದರೂ — ಅದನ್ನು ಪ್ರಕಾಶಕ್ಕೆ ತಂದು ಸುಖದಿಂದಿರುವುದನ್ನು ಆತನು ಬೇಡಿಬಂದಿರಲಿಲ್ಲ. ಭಾವೀ ಜನಾಂಗದವರು ಯಾರನ್ನು "Apollo Portuguez" ಎಂದು ಸಾರಿದರೋ, ಯಾರ ಕೀರ್ತಿಯು ಆಚಂದ್ರಾರ್ಕವಾಗಿ ಸ್ಥಾಯಿಯಾಗಿ ನಿಲ್ಲಬಲ್ಲದೋ, ಅಂತಹ ಮಹಾತ್ಮನು ಪಡಬಾರದ ಕಷ್ಟಗಳನ್ನು—ವರ್ಣಿಸಲಾಗದ ಮನೋವ್ಯಾಕುಲವನ್ನು—ಸಹಿಸಬೇಕಾಯಿತು.

ಆತನ ಜನನ-ಮರಣಗಳ ದಿವಸಗಳ ವಿಷಯವಾಗಿ ಸಂಶಯವುಂಟು. ಅವುಗಳ ವಿಚಾರವಾಗಿ ಬಡಿದಾಡುವುದನ್ನು ಚರಿತ್ರಕಾರರಿಗೆ ಬಿಟ್ಟು, ಸುಮಾರು ಕ್ರಿ. ಶ. ೧೫೨೪ನೆಯ ಇಸ್ವಿಯಲ್ಲಿ ಆತನು ಲಿಸ್ಬನ್ (Lisbon) ಪಟ್ಟಣದಲ್ಲಿ ಹುಟ್ಟಿದನೆಂದು ಹೇಳಿಬಿಡಬಹುದು. ಆತನು ಉತ್ತಮವಂಶದಲ್ಲಿ ಜನ್ಮತಾಳಿದ್ದನಲ್ಲದೆ, ವೀರನಾವಿಕನಾದ ವಾಸ್ಕೊ-ಡಿ-ಗಾಮನ(Vasco de Gama)ಸಂಬಂಧಿಯಾಗಿದ್ದನು.ಹೀಗಿರುವಾಗ ಆ ಶೂರ ನಾವಿಕನ ಸಾಹಸಕಾರ್ಯದ ವರ್ಣನೆಯಲ್ಲಿ ಅವನು ಕೈಹಾಕಿದುದು ಏನೂ ಅಚ್ಚರಿಯಲ್ಲ. ಮನೆತನದಲ್ಲಿ ಅಭಿಮಾನ, ಸ್ವದೇಶದ ಪ್ರೀತಿಗಳಿಂದ ಆ ಮಹಾಕಾವ್ಯದ ಪ್ರೇರಣೆಯಾಯಿತೆಂದರೂ ತಪ್ಪಾಗಲಾರದು. ಆಗ ಆ ದೇಶದಲ್ಲಿ ಓದಬಹುದಾದ ವಿದ್ಯಾಸ್ಥಾನಗಳಲ್ಲಿ ವ್ಯಾಸಂಗಮಾಡಿ, ಕೊನೆಗೆ ಆತನು ಲಿಸ್ಬನ್ ನಗರದಲ್ಲಿ ವಾಸಮಾಡಲು ಆರಂಭಮಾಡಿದನು. ಆಗ ಅವನು ಹರಯದವನು; ವಿದ್ವಾಂಸನಿದ್ದುದರಿಂದ ಆತನಿಗೆ ಎಲ್ಲರಿಂದಲೂ ಸನ್ಮಾನ-ಸತ್ಕಾರಗಳು ದೊರೆಯುತ್ತಿದ್ದುವು. ಆತನಿಗೆ ಎಲ್ಲ ಕಡೆಗಳಲ್ಲಿಯೂ ಪ್ರವೇಶವಿದ್ದಿತು. ಆಗ ಆತನ ಜೀವನವು ಕೇವಲ ಆನಂದಮಯವಾಗಿದ್ದಿತು.

ಕಾಮೊಯೆನ್ಸನ ಜೀವನದಲ್ಲಿ ಒಂದು ವಿಶೇಷಗುಣವುಂಟು. ಆತನು ಯಾವಾಗಲೂ ಸರಸಿ; ಪ್ರೇಮಯಾಚಕ; ಅಭಿಸಾರವನ್ನು ಕೋರುವವನು. ಆತನ ಈ ಕಾರ್ಯಕ್ರಮದಲ್ಲಿ ಮೊದಲನೆಯ ಪ್ರಸಂಗವು, ಆತನಿಗೆ ಇನ್ನೂ ೨೦ ವರ್ಷಗಳಾಗಿರುವಾಗ ಜರುಗಿತೆಂದು ತಿಳಿದುಬರುತ್ತದೆ.೧೫೪೪ನೆ "ಗುಡ್‌ಫ್ರೈಡೆ (Good Friday)"ಯ ದಿನ, ಮಹಾರಾಣಿಯ ಪರಿವಾರದಲ್ಲಿದ್ದ—ಕಿಶೋರಿಯಾದ ಕ್ಯಾಥೆರೀನ (Catherina) ಎಂಬ ಬಾಲಿಕೆಯನ್ನು ಕಂಡು, ಆತನು ಆಕೆಯ ಚರಣದಲ್ಲಿ ತನ್ನ ಹೃದಯವನ್ನು ಅರ್ಪಿಸಿದ. ಡ್ಯಾಂಟೆ (Dante), ಬೆಟ್ರಿಸ್ (Beatrice) ಇವರ ಹಾಗೂ ಪೆಟ್ರಾರ್ಕ್ (Petrarch), ಲಾರಾ(Laura)ಇವರ ಪ್ರೇಮಕ್ಕೆ ಸರಿದೂಗುವ ಯುವಕ-ಬಾಲಿಕೆಯರ ಪ್ರೇಮಪ್ರಕರಣ ಅಂದೆಯೆ ಆರಂಭವಾಯಿತು. ಕಾಮೊಯೆನ್ಸನು ಪ್ರೇಮವನ್ನು ಕಾವ್ಯರೂಪದಲ್ಲಿ ಹರಿಸಿ, ಅದನ್ನು ಒಲವಿನ ಗುರುತಾಗಿ ನೀಡಿದನು. ಆ ಬಾಲಿಕೆಯು

CC-0. Jangamwadi Math Collection. Digitized by eGangotri

ಮೇಲೆ ಸಹ ಆಕೆಯ ನೆನಪು—ಕವಿಯು ಹಿಂದುಸ್ಥಾನದ "Branding Summers" ನಲ್ಲಿದ್ದರೂ—ಆತನನ್ನು ಬಿಡಲಿಲ್ಲ. ಆತನ "ನ್ಯಾಥೆರಿಕಾ (Natherica)" ಕವನಗಳು ಡ್ಯಾಂಟೆಯ "ವೀಟಾನೋವಾ (Vita Nuova)" ದಂತೆ ನಿಷ್ಕಾಮಪೂರಿತವಾದುವಲ್ಲದಿದ್ದರೂ, ಪ್ರೇಮಸಾಮ್ರಾಜ್ಯವನ್ನು ಪ್ರವೇಶಿಸಿವೆಯೆಂದು ಹೇಳಬಹುದು. ಅವು ಅಕಳಂಕಿತವಲ್ಲದಿದ್ದರೂ ಅಷ್ಟೇ ಪ್ರೀತಿಯ ಸವಿಯನ್ನು ಸವಿದಿವೆಯೆಂದುಸುರಬಹುದು. ಆ ಪದ್ಯಗಳನ್ನು ಇಂದಿನ ವಿಮರ್ಶಕರ ದೃಷ್ಟಿಯಿಂದ ನೋಡಿದರೆ, ಅವುಗಳಿಗೆ ನೀತಿಯುಕ್ತವೆಂದು ಹೇಳಲಾಗುವುದಿಲ್ಲ. ಆದರೆ ಅವನ್ನು ಹಳಿಯಬೇಕಾದರೆ ಕೇವಲ ಹಳೆಯ ವಿಚಾರದ ಗೊಡ್ಡುಗಳಿಗೆ ಮಾತ್ರ ಸಾಧ್ಯ. ಇದೇ ಮಾದರಿಯ ಪ್ರೇಮಯಾಚನೆಯನ್ನು ಆತನ ಜೀವನದಲ್ಲಿ ಅನೇಕ ಕಡೆಗಳಲ್ಲಿ ನೋಡಬಹುದು. ಆತನು ಯಾವಾಗಲೂ ರಮಣಿಯರ ಸೌಂದರ್ಯಕ್ಕೆ ಮುಗ್ಧನು. ಒಂದು ಸಾರಿ ಒಬ್ಬ ಹಿಂದೂ ಯುವತಿಯೂ ಆತನ ಪ್ರಣಯಪರಿಚಯವನ್ನು ಪಡೆದಿದ್ದಳು.

ಮೊತ್ತಮೊದಲಿನ ಈ ಪ್ರೇಮಸಾಮ್ರಾಜ್ಯದಲ್ಲಿ ಬಹುದಿನಗಳಿರಲು ಕಾವೊಯೆನ್ಸ್ಸನಿಗೆ ಅನುವು ದೊರೆಯಲಿಲ್ಲ. ನೆಥೆರಿಕಾಳ ಸಂಗಡ ನಡೆದಿದ್ದ ಪ್ರಸಂಗವು ಹೇಗೋ ಹೊರಗೆ ಬಿದ್ದು ಹೋಯಿತು. ಆಗ ಆತನ ಸಂಬಂಧಿಗಳು ಬಲುವೆಯಿಂದ ಆತನನ್ನು ಲಿಸ್ಬನ್ ನಗರದಿಂದ ಹೊರಡಿಸಿ, ಮೇಲಿನ ಟೇಗಸ್ (Upper Tagus) ಪ್ರಾಂತಕ್ಕೆ ಅಟ್ಟಿದರು. ವಿದ್ಯಾಲಯದಿಂದ ಹೊರಬಿದ್ದಿದ್ದ ಬಾಲಕವಿಯು ಆ ಸಣ್ಣ ವಯಸ್ಸಿನಲ್ಲಿಯೇ ಹದ್ದುಪಾರಿನ ಕಷ್ಟವನ್ನು ಅನುಭವಿಸಬೇಕಾಯಿತು. ಕೆಲವು ತಿಂಗಳುಗಳು ಕಳೆದ ನಂತರ, ಪುನಃ ೧೫೪೭ರಲ್ಲಿ ಆತನು ರಾಜಧಾನಿಗೆ ಹಿಂದಿರುಗಿದನು. ಆದರೆ ಕವಿಸಹಜವಾದ ವಿವೇಕ-ವಿವೇಚನಾ ಹೀನನಾಗಿ, ಆತನು ಅದೇ ರೀತಿಯಾದ ಅಪರಾಧವನ್ನು ಮಾಡಿದನು. ಆಗ ಆತನನ್ನು ಆಫ್ರಿಕಾಖಂಡದಲ್ಲಿದ್ದ ಸಿಟ್ಯಾ ಪ್ರಾಂತಕ್ಕೆ ದೂಡಿದರು. ಸಹಜಪ್ರಾಪ್ತಳಾದ ಕಾವ್ಯಕಾಮಿನಿಯಿಂದ ಚ್ಯುತನಾಗಿ, ಕಾವೊಯೆನ್ಸ್ಸನು ಆ ದೇಶದ ಪರಿಸ್ಥಿತಿಗೆ ಅನುಸರಿಸಿ ಯುದ್ಧೋಪಜೀವಿಯಾದನು; ಸಂಗ್ರಾಮದಲ್ಲಿ ತಕ್ಕಷ್ಟು ಕೀರ್ತಿಯನ್ನು ಗಳಿಸಿದನು. ಆ ಸಮಯದಲ್ಲಿಯೇ ಏಟುಬಿದ್ದು ಆತನಿಗೆ ಒಂದು ಕಣ್ಣು ಹೋಯಿತೆಂದು ಕಥೆಯುಂಟು. ಮೂರು ವರ್ಷಗಳ ಕಾಲವನ್ನು ಆಫ್ರಿಕಾ ಖಂಡದಲ್ಲಿ ಕಳೆದು, ಮತ್ತೊಮ್ಮೆ ಸ್ವಸ್ಥಾನವಾದ ರಾಜಧಾನಿಯನ್ನವನು ಸೇರಿದನು. ಆ ವೇಳೆಯಲ್ಲಿ ಆತನಿಗೆ ಯಶೋಲಕ್ಷ್ಮಿಯು ಒಲಿದಿದ್ದಳೇ ಹೊರತು, ಭಾಗ್ಯಲಕ್ಷ್ಮಿಯ ಪ್ರಸಾದವು ದೊರೆತಿರಲಿಲ್ಲ. ತನ್ನ ಕೆಲಸ-ಕಾರ್ಯಗಳಲ್ಲಿ ತೊಡಗಿ ಸುಖದಿಂದಿರುವುದಕ್ಕೆ ಆತನಿಗೆ ಅವಕಾಶವು ಸಿಕ್ಕಲಿಲ್ಲ. ವಿಧಿವಿಲಾಸವು ತೀರಿರದುದರಿಂದ, ಅವನೊಂದು ದೊಡ್ಡ ಹಬ್ಬದ ದಿನ, ತನ್ನ ಸ್ನೇಹಿತನಿಗಾಗಿ, ರಾಜಧಾನಿಯ ಬೀದಿಯಲ್ಲಿ ಖಡ್ಗವನ್ನು ಹಿರಿದು ಕಾದಾಡಿದನು. ಆಗ ನಗರರಕ್ಷಕರು ಬಂಧಿಸಿ, ನ್ಯಾಯಸ್ಥಾನಕ್ಕೆ ಕರೆದುಕೊಂಡು ಹೋದರು; ಅಲ್ಲಿ ತುರಂಗವಾಸವನ್ನು ವಿಧಿಸಿದರು. ಕಾರಾಗೃಹದ ಬಂಧನದಿಂದ ಮುಕ್ತನಾಗಲು ಆತನು ಪೂರ್ವದೇಶಗಳಲ್ಲಿ ಕೆಲಸಮಾಡಲು ಒಪ್ಪಿಕೊಂಡನು. ಈ ಕಾರ್ಯಪರಂಪರೆಗಳಿಂದ ಆತನ ಜೀವಿತದ ಮಾರ್ಗವೇ ಮಾರ್ಪಟ್ಟಿತೆಂದು ಹೇಳಬಹುದು.

ಕ್ರಿ. ಶ. ೧೫೫೩ನೆಯ ಇಸವಿ ಮಾರ್ಚ್ ತಿಂಗಳ ೨೪ನೆಯ ತಾರೀಖಿನ ದಿನ ಆತನು ಹಿಂದುಸ್ಥಾನವನ್ನು ಕುರಿತು ನಾವೆಯನ್ನೇರಿದನು. ಕಾಲಕ್ರಮದಿಂದ ಸುರಕ್ಷಿತವಾಗಿ—ಆಗಿನ ಪೋರ್ತುಗೀಸರ ರಾಜಧಾನಿಯಾದ—ಗೋವಾಪಟ್ಟಣದಲ್ಲಿ ಬಂದಿಳಿದನು. ರೇವೆಯ ಸುತ್ತುಮುತ್ತಲಿನ ಮನೋಹಾರಿಯಾದ ಭೂಪ್ರದೇಶವನ್ನು ನೋಡಿ ಮನಸೋತನು. ಹೀಗೆ ಮುಗ್ಧನಾದುದಕ್ಕೆ 'ಲ್ಯೂಸಿಯಾಡ್' ಕಾವ್ಯದಲ್ಲಿ ಅನೇಕ ಉದಾಹರಣೆಗಳೂ ಸಿಕ್ಕುತ್ತವೆ. ದೇಶಭ್ರಷ್ಟನಾದ ಕವಿಗೆ, ಯಾವಾಗಲೂ ತೊಂದರೆಯಲ್ಲಿರುತ್ತಿದ್ದ ಕವನಕರ್ತೃವಿಗೆ ಹಿಂದುಸ್ಥಾನದಲ್ಲಿ ಜೀವನದ ಬೆಲೆಯೂ, ಆದರಲ್ಲಿರಬಹುದಾಗಿರುವ ಸೊಬಗೂ ತಿಳಿದುಬಂದುವು. ಆದರೆ ಸ್ವದೇಶದಿಂದ ದೂರವಿರುವವನಿಗೆ ಯಾವುದು ತಾನೆ ರುಚಿಸಬಲ್ಲದು? ಇವುಗಳಿಂದ ಕೆಲಮಟ್ಟಿಗೆ ಸಂತೋಷವಾದರೂ ಮನಸ್ಸಿನಲ್ಲಿ ಬೇಯುತ್ತಿದ್ದ ವ್ಯಥೆಯು ಕಡಿಮೆಯಾಗಲಿಲ್ಲ. ಅದರ ವಿಷಯಕವಾದ ಉದ್ಗಾರವು ಅನೇಕ ಸಾರಿ—ಪದ್ಯರೂಪದಲ್ಲಿ—ಹೊರಬಿದ್ದಿರುವುದು. ಹಿಂದುಸ್ಥಾನದಲ್ಲಿ ಯಾವ ಕೆಲಸದಲ್ಲಿ ಉದ್ಯುಕ್ತನಾಗಿದ್ದರೂ ಕವಿಯು ತನ್ನ 'ನೆಥೇರಿಕಾ' ಇವಳನ್ನೂ ಸ್ವದೇಶವನ್ನೂ ಮರೆಯಲು ಸಾಧ್ಯವಾಗಲಿಲ್ಲ.

ಪೋರ್ಚುಗೀಸರ ಪೌರ್ವಾತ್ಯ ಸ್ವಾಸ್ಥ್ಯಗಳ ಕೇಂದ್ರವಾದ ಗೋವಾಪಟ್ಟಣದಲ್ಲಿ, ಆಗ ಅನೇಕ ದುರ್ಗುಣಗಳು ಮನೆಮಾಡಿದ್ದುವು; ವಿಷಯಲಂಪಟತನವು ಮಿತಿಮೀರಿತ್ತು. ಇದೆಲ್ಲವನ್ನೂ ನೋಡಿ ಕಾವೊಯೆನ್ಸ್ಸನಿಗೆ ಜುಗುಪ್ಸೆಯಾಯಿತು. ಅದನ್ನು "Disparates Na India" (Vagaries of India) ಎಂಬ ಪುಸ್ತಕದಲ್ಲಿ ಹೊರಗೆಡೆಹಿದ್ದಾನೆ.

CC-0. Jangamwadi Math Collection. Digitized by eGangotri

ಪೂರ್ವದೇಶಗಳಲ್ಲಿಯ ಆತನ ಪ್ರವಾಸಗಳನ್ನೂ, ಆತನು ಮಾಡುತ್ತಿದ್ದ ಕಾರ್ಯರಂಗಗಳನ್ನೂ ಇಲ್ಲಿ ವಿವರಿಸಿದರೆ ಹೆಚ್ಚು ಉಪಯೋಗವಾಗುವುದಿಲ್ಲ. ಅರೇಬಿಯಾ, ಪರ್ಶಿಯನ್ ಕೊಲ್ಲಿ, ಸಿಂಹಳದ್ವೀಪ, ಚೀನಾ ಮುಂತಾದ ದೇಶಗಳಲ್ಲಿ ಆತನು ಅನೇಕ ಕಾರ್ಯಭಾರಗಳಿಂದ ಸಂಚರಿಸುತ್ತಿದ್ದನು. ಆತನ ಆಗಿನ ಕಾರ್ಯಕ್ರಮಗಳು ಅನೇಕ ಪ್ರಕಾರದುವು. ವಾಣಿಜ್ಯ, ರಾಜಕಾರ್ಯ,ಸಂಗರ ಮುಂತಾದ ಕಾರ್ಯಗಳಲ್ಲಿ ಆತನು ಮಗ್ನನಾಗಿರುತ್ತಿದ್ದನು. ಈ ಪರ್ಯಟನದಿಂದ ಆತನಿಗೆ ಪ್ರಪಂಚದ ವ್ಯವಹಾರವೂ ಜನಜೀವನದ ತಿರುಳುಗಳೂ ಮನದಟ್ಟಾಗಿ, ಮುಂದೆ ತನ್ನ ಮಹಾಕಾವ್ಯವನ್ನು ಬರೆಯುವಾಗ ಬಹಳಮಟ್ಟಿಗೆ ಉಪಯೋಗವಾಯಿತು.ಆದರೆ ಈ ವೇಳೆಯಲ್ಲಿ ಆತನು ಕವಿತಾ ರಮಣಿಯ ಸಹವಾಸವನ್ನು ಬಿಟ್ಟಿರಲಿಲ್ಲ. ಅನುವು ಸಿಕ್ಕಿದ್ದಾಗಲೆಲ್ಲಾ ತನ್ನ ಕವನರಚನೆಗೆ ತೊಡಗುತ್ತಿದ್ದನು. ಆಂಗ್ಲಸಾಹಿತ್ಯವನ್ನು ಬಲ್ಲವರು, ವರ್ಡ್ಸ್‌ವರ್ಥನ ಒಂದು ಸಣ್ಣ ಪದ್ಯದಲ್ಲಿ ಕಾಮೊಯೆನ್ಸನ ವಿಚಾರ ಬಂದಿರುವುದನ್ನು ಕಾಣಬಹುದು: ("Soothing an exile's grief"—Sonnet on sonnet). ಈ ವೇಳೆಯಲ್ಲಿ ಆತನು ಬರೆದಿರುವ ಪದ್ಯಗಳು ಸುಮಾರು ಎರಡು ಪುಸ್ತಕಗಳಷ್ಟು ಆಗುತ್ತವೆ (Burton's Classical Editions--2 Volumes). ಈ ಸಣ್ಣ ಪದ್ಯಗಳ (Sonnet) ರಸನೈಪುಣ್ಯವನ್ನೂ, ಭಾವಗಳನ್ನೂ ನೋಡಿದರೆ ಅದೇ ಜಾತಿಯವಾದ ಷೇಕ್ಸ್‌ಪಿಯರನ ಪದ್ಯಗಳಿಗೂ ಬ್ರೌನಿಂಗಳ 'ಪೋರ್ಚುಗೀಸ್ ಭಾಷೆಯಿಂದ ಆಯ್ದ ಪದ್ಯಗಳಿಗೂ (Mrs. Browning's Sonnets from Portuguese)' ಡ್ಯಾಂಟಿ ರೊಸೆಟ್ಟಿಯ 'ಜೀವನಮಂದಿರ'ದ ಪದ್ಯಗಳಿಗೂ (Dante Rossetti's House of Life) ಯಾವ ವಿಚಾರದಲ್ಲಿಯೂ ಕಡಿಮೆಯಿಲ್ಲವೆಂದು ಹೇಳಬಹುದು.

ಕಾಮೊಯೆನ್ಸನು ಸುಮಾರು ಹದಿನಾರು ವರ್ಷಗಳನ್ನು ಪರದೇಶಗಳಲ್ಲಿ ಕಳೆದು, ಕೊನೆಗೆ ತನ್ನ ಮಾತೃಭೂಮಿಯನ್ನು ಸೇರಿದನು. ವಿಶ್ವಾಸಘಾತಕಿಯಾದ ಮಿತ್ರನೊಬ್ಬನ ಮೋಸದಿಂದ,ಆತನಿಗೆ ದಾರಿಯಲ್ಲಿದ್ದ ಮೊಝಾಂಬಿಕ್ (Mozambique) ಎಂಬಲ್ಲಿ ಪುನಃ ಕಾರಾವಾಸವು ಬಂದೊದಗಿತು. ಅದೇ ಸಮಯದಲ್ಲಿ ಆತನ ಪರಿಚಯಸ್ಥರು ಮತ್ತೊಂದು ನೌಕೆಯಲ್ಲಿ ಅಲ್ಲಿಗೆ ಬಂದು ಸೇರಿದರು; ಸಮಾಚಾರವನ್ನು ಅರಿತು ಕವಿಯನ್ನು ಬಿಡಿಸಿಕೊಂಡರು. ಮುಂದಿನ ದಾರಿಯಲ್ಲಿ ಹಡಗು ಒಡೆದು ಪ್ರಾಣಾಪಾಯವು ಒದಗಿತ್ತು. ಈ ಎಲ್ಲ ಸಂಕಟಗಳನ್ನೂ ಅನುಭವಿಸಿ ಕೊನೆಗೆ ಲಿಸ್ಬನ್‌ಪಟ್ಟಣವನ್ನು ಸೇರಿದನು. ಬೆನ್ನಟ್ಟಿದ ಬೇತಾಳವು ಇಲ್ಲಿಯೂ ಬಿಡಲಿಲ್ಲ. ಆ ನಗರದಲ್ಲಿ ಪ್ಲೇಗ್ ರೋಗವು ಪ್ರಬಲವಾಗಿದ್ದುದರಿಂದ, ಅಧಿಕಾರಿಗಳು ಆತನನ್ನು ಬಹುದಿನಗಳ ವರೆಗೆ ಊರಹೊರಗೇ ಇಟ್ಟಿದ್ದರು.

ಸ್ವದೇಶಕ್ಕೆ ಮರಳಿದ ಮೇಲೆ ತನ್ನ ಮೇಲೆ ಕವಿದಿದ್ದ ದುರದೃಷ್ಟವು ಪರಿಹಾರವಾಗಬಹುದೆಂದು ಕವಿಗೆ ಬಹು ಆಶೆಯಿದ್ದಿತು. ತನ್ನ ದೀರ್ಘಕಾಲದ ಸೇವೆಯನ್ನು ನೋಡಿ ಸರಕಾರದವರು ಸನ್ಮಾನಮಾಡಬಹುದೆಂದು ಆತನು ತಿಳಿದನು. ಆದರೆ ದೌರ್ಭಾಗ್ಯದಿಂದ ಆತನಿಗೆ ಯಾರಿಂದಲೂ ಯಾವ ಉಪಕಾರವೂ ಆಗಲಿಲ್ಲ; ಬಹುಮಾನವೂ ದೊರೆಯಲಿಲ್ಲ. ಕೊನೆಗೆ ಒಂದು ದಿನ ಸನ್ಮಾನವು ಬಂದಿತು. ಇತರ ಸಾಮಾನ್ಯಸಾಹಿತಿಗಳಿಗೆ ದೊರೆತಂತೆ ಏನೋ ಒಂದಿಷ್ಟು ಸಹಾಯವು ದೊರೆಯಿತು.

ಮೋಡಹಿಡಿದ ಈ ಕಾಲದಲ್ಲಿ ಒಂದೇ ಒಂದು ರಶ್ಮಿಯು ಹೊರಬಿದ್ದು, ಆತನಿಗೆ ತುಸು ಆನಂದವನ್ನು ಬೀರಿತು. ದುರಂತವಾದ ದುಃಖದಲ್ಲಿದ್ದರೂ ಆತನು ತನ್ನ ಮಹಾಕಾವ್ಯವಾದ 'ಲ್ಯೂಸಿಯಾಡ್' ಗ್ರಂಥವನ್ನು ಪ್ರಕಟಿಸಿದನು. ಇದರಿಂದಲೂ ಆತನಿಗೆ ಹೆಚ್ಚಿನ ಪ್ರಯೋಜನವಾಗಲಿಲ್ಲ. ಸರಕಾರದವರು ಬಹುದೊಡ್ಡ ಮೊಬಲಗಾದ ಮೂರುವರೆ ಪೌಂಡು ದ್ರವ್ಯವನ್ನು ವಾರ್ಷಿಕವೇತನವನ್ನಾಗಿ ದಯೆಪಾಲಿಸಿದರು. ಅದನ್ನೂ ಸರಿಯಾಗಿ ಕೊಡುತ್ತಿರಲಿಲ್ಲ. ಬರುತ್ತಿದ್ದುದನ್ನೂ ಆತನು ಬಹುಕಾಲ ಪಡೆಯಲಿಲ್ಲ. ಮುಂದೆ ಎಂಟು ವರ್ಷಗಳನಂತರವೆ ಆತನು ಅಮರಪದವಿಯನ್ನು ಏರಿದನು.

ಕಡೆಯ ದಿವಸಗಳಲ್ಲಿ ಕಾಮೊಯೆನ್ಸನು ಅನುಭವಿಸಿದಷ್ಟು ದುಃಖಗಳನ್ನೂ, ದಾರಿದ್ರ್ಯವನ್ನೂ ಬೇರೆ ಯಾವ ಸಾಹಿತಿಯೂ ಅನುಭವಿಸಿರಲಾರನೆಂದು ನಿಃಶಂಕೆಯಿಂದ ಹೇಳಬಹುದು. ಅಖಂಡ ಪೃಥ್ವಿಯ ಇತಿಹಾಸದಲ್ಲಿ ಅದಕ್ಕೆ ಜೊತೆನಿಲ್ಲಬಹುದಾದ ದೃಶ್ಯವು ಗೋಚರವಾಗುವುದಿಲ್ಲ. ಆಗ ಆತನಿಗೆ ಸಾಕಷ್ಟು ವಯಸ್ಸಾಗಿದ್ದಿತು. ದೇಹದಲ್ಲಿ ಶಕ್ತಿಯಿರಲಿಲ್ಲ; ಕೊನೆಕೊನೆಗಂತೂ ನಿರ್ಗತಿಕನಾಗಿ,ಕೇವಲ ಉದರಂಭರಣಕ್ಕಾಗಿ ಪುರಜನರಲ್ಲಿ ಭಿಕ್ಷೆಗಾಗಿ ಅಲೆದಾಡುವ ಪ್ರಸಂಗವು ಆತನ ಮೈಮೇಲೆ ಬಿದ್ದಿತು. ಕೆಲವು ದಿವಸಗಳ ವರೆಗೆ ಒಬ್ಬ ವಿಶ್ವಾಸಿಯಾದ ಗೋವೆಯ ಸೇವಕನು ಆತನೊಡನೆ ಭಿಕ್ಷಾಟನೆಗಾಗಿ ನೆರವಾಗುತ್ತಿದ್ದನು. ಆದರೆ ನಿಷ್ಠುರವಿಧಿಗೆ ಇದು ಸರಿಬರಲಿಲ್ಲವೇನೋ! ಆತನೂ ತೀರಿ

CC-0. Jangamwadi Math Collection. Digitized by eGangotri

ಕೊಂಡನು. ಆತನ ಮರಣದ ದುಃಖವನ್ನು ಕವಿಯು ತನ್ನ ಪ್ರಣಯಿನಿಯಾದ ಕ್ಯಾಥೆರೀನಳ ಮರಣದಂತೆ ಭಾವಿಸಿ ಗೋಳಿಟ್ಟನು; ಆದರೆ ಕೇಳುವವರಾರು?

ಕವಿಯು ಇನ್ನುಳಿದ ಬಾಳಿನ ಚರಿತ್ರೆಯೆಂದರೆ ಹೇಳಲಾರದ ಕಷ್ಟಪರಂಪರೆಯ ಇತಿಹಾಸವೆಂದು ಹೇಳಬಹುದು. ಆ ರೀತಿಯ ದುಃಖವನ್ನು ಕಾದಂಬರಿಗಳಲ್ಲಿ ಮಾತ್ರ ಕಾಣಬಹುದು; ಇತಿಹಾಸದಲ್ಲಿ ಬಹುವಿರಳ. ಫ್ರೆಂಚರಲ್ಲಿ ನಮಗೆ ಚಿರಪರಿಚಯಸ್ಥನಾದ ಡೂಪ್ಲೆ, ಮೊಗಲ ಸಮ್ರಾಟರಲ್ಲಿ ಕೊನೆಯವನಾದ ಮಹಮದ್‌ಷಹ ಈ ಇಬ್ಬರೂ ಕಾಮೊಯೆನ್ಸನಂತೆಯೆ ತಮ್ಮ ಕೊನೆಯ ದಿನಗಳನ್ನು ಕಳೆದವರು. ೧೫೮೦ನೆಯ ಇಸವಿಯಲ್ಲಿ ಆ ಪೋರ್ತುಗೀಸ್ ಕವಿವರ್ಯನು ಒಂದು ಆಸ್ಪತ್ರೆ (a charity hospital) ಯಲ್ಲಿ ಅಸುವನ್ನು ತೊರೆದನು. ಮರಣಕಾಲದಲ್ಲಿ ಬಂಧುಮಿತ್ರರಾರೂ ಮೃತ್ಯುಶಯ್ಯೆಯ ಬಳಿ ಇರಲಿಲ್ಲ. ಆತನ ಪ್ರತಿಭೆಯನ್ನು ಕಂಡು ಮರುಳಾಗಿದ್ದ ಒಬ್ಬ ಬಡ ಸಂನ್ಯಾಸಿಯು (a monk) ಆತನ ಬಳಿಯಲ್ಲಿದ್ದನು. ಶವಕ್ಕೆ ಹೊದಿಸಲು ಒಂದು ತುಂಡು ಅರಿವೆಯೂ ಇರಲಿಲ್ಲ. ಚರಿತ್ರಕಾರನು ಹೀಗೆ ಬರೆದಿರುತ್ತಾನೆ:—

...without a sheet wherewith to cover himself.

ಯಾರೋ ಒಂದು ಧರ್ಮಾಲಯದವರು (Alms-House) ದೇಹವನ್ನು ಮುಚ್ಚಲು ಒಂದು ಬಟ್ಟೆಯನ್ನು ಕೊಟ್ಟರು.

ಆತನ ಸಮಾಧಿಯ ಮೇಲೆ ಯಾವ ಕುರುಹನ್ನೂ ಯಾರೂ ಏರಿಸಲಿಲ್ಲ; ಅಮೃತಶಿಲೆಯ ಮೇಲೆ ಸದ್ಗುಣಗಳ ಪಟ್ಟಿಯನ್ನು ಬರೆಯಲಿಲ್ಲ. ದೇಶದವರು ಯಾವ ರೀತಿಯಲ್ಲಿಯೂ ಸ್ಮಾರಕವನ್ನು ಮಾಡಿ ಸನ್ಮಾನಮಾಡಲಿಲ್ಲ. ಪೋರ್ಚುಗೀಜರ ಇತಿಹಾಸವನ್ನು ಬಲ್ಲವರು, ಇದರ ಕಾರಣವನ್ನು ಊಹಿಸಬಲ್ಲರು; ಅದನ್ನು ಹಿಂಬಾಲಿಸಿಯೇ ಅವರ ಅವನತಿಯ ಕಾರಣವನ್ನೂ ತಿಳಿಯುವರು.

ಬಹುಕಾಲದ ಬಳಿಕ ಪೋರ್ಚುಗೀಸರು ತಮ್ಮ ಘೋರ ಅಪರಾಧವನ್ನು ಅರಿತು, ಕಾಮೊಯೆನ್ಸನ ಹೆಸರನ್ನು ಉಳಿಸಲು ಯತ್ನಮಾಡಿದರು. ಆದರೆ ಅವರು ಏನನ್ನು ಮಾಡಿದ್ದರೂ, ಮುಂದೆ ಮಾಡಿದರೂ—ಕವಿಯ ಕೊನೆಯ ದಿನಗಳನ್ನು ಜ್ಞಾಪಕಕ್ಕೆ ತಂದುಕೊಂಡವರು—ಯಾರೇ ಆಗಲಿ...ಅವರನ್ನು ಹಳಿಯದಿರಲಾರರು. ಡೂಪ್ಲೆಯ ವಿಚಾರದಲ್ಲಿ ಫ್ರೆಂಚರಿಗೆ, ಮಹಮ್ಮದ್‌ಷಹನ ವಿಷಯದಲ್ಲಿ ಆಂಗ್ಲರಿಗೆ ಹತ್ತಿರುವ ಕಳಂಕವು ಪೋರ್ಚುಗೀಸರನ್ನು ಬಿಟ್ಟಿಲ್ಲ; ಬಿಡುವುದಿಲ್ಲ.

ಬೈರನ್, ಗೀಟೆ, ರೂಸೊ (Byron, Goethe, Rousseau) ಮುಂತಾದವರ ಜೀವನಚರಿತ್ರೆಗಳನ್ನು ಅನೇಕರು ಬರೆದಿರುವರು. ಕಾಮೊಯೆನ್ಸನ ಜೀವನಚರಿತ್ರೆಯನ್ನು ನೋಡಿದರೆ, ಒಂದಲ್ಲ—ಎರಡಲ್ಲ—ಅನೇಕ ಜೀವನಚರಿತ್ರೆಗಳನ್ನೂ ಕಾವ್ಯವಿಮರ್ಶಕ ಪುಸ್ತಕಗಳನ್ನೂ ಬರೆಯಬಹುದು. ಆತನ ಚರಿತ್ರೆಯಲ್ಲಿ ಇಷ್ಟೇ ಬೆಲೆಯಿದೆಯೆಂದು ಹೇಳಲು ಸಾಧ್ಯವಿಲ್ಲ. ಆತನ ಚರಿತ್ರಕಾರನಾದ ಬರ್ಟನ್ನನು (Richard Burton) ಹೀಗೆ ಬರೆದಿರುವನು:—

"Opening with the fairest and brightest promise, exposed in manhood to the extremes of vicissitude, to intense enjoyment and 'terrible abysses', lapsing about the middle age into the weariness of baffled hope, and ending comparatively early, in the deepest glooms of disappointment, distress and destitution, the student, the soldier, the traveller, the patriot, the poet, the mighty man of genius, thus crowded into a single career the efforts, the purposes and the events of half-a-dozen."

ಮತ್ತೊಬ್ಬರು ಹೀಗೆ ಬರೆದಿರುತ್ತಾರೆ:—

"Considered in this light the Portuguese may be looked upon as unique; never was such a spirit so maltreated by fortune."

ಮೇಲಿನ ಭಾವದಿಂದ ನೋಡಿದರೆ ಆ ಮಹಾತ್ಮನ ಜೀವನದಷ್ಟು ಭೀಕರವಾದುದು ಇನ್ನೊಂದು ಇಲ್ಲವೆನ್ನಬೇಕಾಗುವುದು. ಆದರೆ ಮುಂದಿನ ಜನಾಂಗಗಳಿಗೂ ಭಾವೀಪ್ರಪಂಚಕ್ಕೂ ಆತನು ಕೊಟ್ಟಿರುವ ಮಹಾದಾನದಿಂದ ಆತನ ಆತ್ಮಕ್ಕೆ ಅಲ್ಪ-ಸ್ವಲ್ಪವಾದರೂ ಶಾಂತಿಯಾಗಬಹುದೇ?



SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. 3670

CC-0. Jangamwadi Math Collection. Digitized by eGangotri

# SUSHEELA & Co., KOLLEGAL (S. INDIA)

## 1000 ರೂಪಾಯಿಗಳ ಬಹುಮಾನ

**ಪ್ರತಿ ಎರಡು ಕೂಪರ್ಣಗಳಿಗೂ ಒಂದು ಕೂಪರ್ಣ ಉಚಿತ.**

ಉತ್ತರಗಳನ್ನು ಸ್ವೀಕರಿಸುವ ಕಡೇ ದಿನ ೧೬-೮-೧೯೩೭. ಫಲಿತಾಂಶವನ್ನು ಪ್ರಕಟಿಸುವ ದಿನ ೨೦-೮-೧೯೩೭. ಮೂರು ಕೂಪರ್ಣಗಳೂ ಸರಿಯಾಗಿ ಕಳುಹಿಸಿದವರಿಗೆ ೫೦೦ ರೂ; ಒಂದು ಕೂಪರ್ಣ ತಪ್ಪುಳ್ಳವರಿಗೆ ೨೦೦ ರೂ; ಎರಡು ಕೂಪರ್ಣ ತಪ್ಪುಳ್ಳವರಿಗೆ ೧೦೦ ರೂ. ಇತರ ಬಹುಮಾನಗಳು: ಮೂರು ಕೂಪರ್ಣಗಳೂ ಸರಿಯಾಗಿ ಕಳುಹಿಸಿದ ಪ್ರಥಮಸ್ತ್ರೀಗೆ ೧೭೫ ರೂ; ಹೆಚ್ಚಾಗಿ ಕೂಪರ್ಣಗಳನ್ನು ಕಳುಹಿಸಿದವರಿಗೆ ೭೫ ರೂ.

| | | | | |
|---|---|---|---|---|
| | | | | |
| | | 17 | | |
| | | | | |
| | | | | |

**ಸುಶೀಲ ಅಂಡ್ ಕೋ., ಕೊಳ್ಳೆಗಾಲ**

ಈ ಸ್ಪರ್ಧೆಯ ನಿಯಮಗಳಿಗೆ ಬದ್ಧನಾಗಿದ್ದೇನೆ.

ಹೆಸರು ..................

ವಿಳಾಸ ..................

..................

ಪೋಸ್ಟಲ್ ಮನಿಯಾರ್ಡರ್ ನಂಬರು ..................

ಸ್ಟಾಂಪುಗಳು .................. ತಾರೀಖು .................. 1937

ಉತ್ತರಗಳನ್ನು ಕಂಡುಹಿಡಿಯುವ ಕ್ರಮ:— ಎಲ್ಲಾ ಕಡೆಗಳಿಂದಲೂ ಮೇಲಿಂದ, ಅಡ್ಡವಾಗಿ, ಮೂಲೆಗಳಿಂದ 85 ಬರುವಂತೆ, ಒಂದು ಸಲ ಉಪಯೋಗಿಸಿದ ಸಂಖ್ಯೆಯನ್ನು ತಿರುಗಿ ಅದೇ ಚದರದಲ್ಲಿ ಉಪಯೋಗಿಸದೆ ಶಾಯಿಯಲ್ಲಿ ಬರೆದು ಕಳುಹಿಸಬೇಕು.

### ನಿಬಂಧನೆಗಳು

ಪ್ರವೇಶ ಧನ ಕೂಪರ್ಣಗೆ ೦—೮—೦ ಆಣೆ. ಪ್ರವೇಶ ಧನವನ್ನು ಪೋಸ್ಟೇಜ್ ಸ್ಟಾಂಪುಗಳ ರೂಪದಲ್ಲಾಗಲಿ, ಮಣಿಯಾರ್ಡರ್ ಅಥವಾ ಪೋಸ್ಟಲ್ ಆರ್ಡರ್ ಮೂಲಕವಾಗಲಿ ಕಳುಹಿಸಬೇಕು. ಉತ್ತರಗಳು ೧೬-೮—೧೯೩೭ ರೊಳಗೆ ನಮ್ಮ ಕೈಸೇರಬೇಕು. ಈ ಸ್ಪರ್ಧೆಗೆ ಸಂಬಂಧವಾಗಿ ಕಳುಹಿಸಿದ ಹಣವನ್ನು ಯಾವ ಕಾರಣದಿಂದಲೂ ವಾಪಸುಮಾಡಲಾಗುವುದಿಲ್ಲ ಮತ್ತು ಯಾವ ಪತ್ರವ್ಯವಹಾರಕ್ಕೂ ಅವಕಾಶವಿಲ್ಲ. ಉತ್ತರಗಳ ಸಂಖ್ಯಾನುಸಾರ ಬಹುಮಾನದ ಮೊತ್ತವನ್ನು ಹೆಚ್ಚುಕಡಿಮೆ ಮಾಡಲಾಗುವುದು. ಒಂದಕ್ಕಿಂತ ಜಾಸ್ತಿಯಾಗಿ ಉತ್ತರಗಳು (ಎಲ್ಲಾ) ಬಂದಲ್ಲಿ ಬಹುಮಾನಗಳನ್ನು ಸಮವಾಗಿ ಹಂಚಲಾಗುವುದು. ಮೇನೇಜರ ತೀರ್ಮಾನವೇ ಕಡೇ ತೀರ್ಮಾನ. ತಮ್ಮ ವಿಳಾಸದೊಡನೆ ೦—೧—೦ ಆಣೆ ಸ್ಟಾಂಪು ಕಳಹಿಸಿದವರಿಗೆ ಫಲಿತಾಂಶವನ್ನು ಕಳುಹಿಸಲಾಗುವುದು. ಮೇಲ್ಕಂಡ ಷರತ್ತುಗಳನ್ನು ಒಪ್ಪುವವರು ಮಾತ್ರ ಸ್ಪರ್ಧೆಗಳಿಗೆ ಉತ್ತರಗಳನ್ನು ಕಳುಹಿಸಬೇಕು.

ಮ್ಯಾನೇಜರ್,
**ಸುಶೀಲ ಅಂಡ್ ಕೋ., ಕೊಳ್ಳೇಗಾಲ**



**ಎಷ್ಟು ಹಳೆಯ ಉನ್ಮಾದರೋಗನಾದರೂ, ಎಷ್ಟೇ ಭಯಂಕರವಾಗಿದ್ದರೂ, ಖಂಡಿತ ಗುಣ** ಹೊಂದುವುದರಲ್ಲಿ ಸಂಶಯವೇ ಇಲ್ಲ. ಅನುಮಾನದಿಂದ ಪ್ರಯೋಜನವಿಲ್ಲ. ಪ್ರತ್ಯಕ್ಷಕ್ಕೆ ಬೇರೆ ಪ್ರಮಾಣವೇಕೆ?

## ಉನ್ಮಾದ(ಹುಚ್ಚು)ರೋಗಕ್ಕೆ ಅಪ್ರತಿಮ ಚಿಕಿತ್ಸೆ

**ಒಂದೇ ಒಂದು ವಾರದೊಳಗೆ ಗುಣ ಕಂಡು ಬರುವುದು.** ಇದರ ಸೇವನೆಯಿಂದ ಅಪಸ್ಮಾರ, ಹಿಸ್ಟೀರಿಯಾಗಳೂ ಸಂಪೂರ್ಣ ಗುಣಹೊಂದುವವು. ೧ ವಾರದ ಔಷಧಕ್ಕೆ ಕ್ರಯ ರೂ. ೩—೮—೦

**ಸ್ವಪ್ನೇಂದ್ರಿಯ ಸ್ತಂಭನ:—** ಸ್ವಪ್ನೇಂದ್ರಿಯ, ಮೂತ್ರದಲ್ಲಿ ವೀರ್ಯಸ್ರಾವ ಮೊದಲಾದ ಯುವಕರ ರೋಗಗಳು ಇದರಿಂದ ಖಂಡಿತ ನಿರ್ಮೂಲವಾಗುವವು. ಎರಡು ವಾರಗಳ ಔಷಧಕ್ಕೆ ರೂ. ೩. ಕೆಟಲಾಗಿಗೆ ಬರೆಯಿರಿ. ಏಜಂಟರು ಬೇಕು.

**ಮಾಳ ನಾರಾಯಣಭಟ್ಟ, ಸಿದ್ಧೌಷಧ ಭವನ, ಪೋಸ್ಟು ವಿಟ್ಲ. ದ. ಕನ್ನಡ.**


CC-0. Jangamwadi Math Collection. Digitized by eGangotri

# ಭಿಕ್ಷುಕ

ಶ್ರೀ. ಎಂ. ಕೆ. ತಿಪ್ಪಯ್ಯ, ಬೆಂಗಳೂರು

## ಪಾತ್ರಗಳು

ಶಾಮರಾಯ — ಕತೆಗಾರ; ರಾಧೆ — ಆತನ ಹೆಂಡತಿ;

★ ರಾಜಲಕ್ಷ್ಮಿ — ಅವರ ಮಗಳು; ಭಿಕ್ಷುಕ ಮತ್ತು ಮಗು. ★

ಸ್ಥಳ — ಶಾಮರಾಯರ ಮನೆ .... .... .... ಕಾಲ — ಮಧ್ಯಾಹ್ನ

### ದೃಶ್ಯ ೧

ಮಧ್ಯಾಹ್ನ: ೧ ಗಂಟೆಯಾಗಿದೆ. ಮನೆಯ ಕೋಣೆಯೊಂದು ಕಾಣಿಸಿದೆ. ಬಾಗಿಲಲ್ಲಿ ಪ್ರೌಢವಯಸ್ಸಿನ ಭಿಕ್ಷುಕನೊಬ್ಬನು ನಿಂತಿದಾನೆ. ಮುಖದಲ್ಲಿ ಸಾತ್ತ್ವಿಕ ತೇಜಸ್ಸು ಉಕ್ಕುತಿದೆ.

**ಭಿಕ್ಷುಕ**

ಹಸಿದೊಡಲು ಕುಸಿಯುತಿದೆ,
ಅಶನ ನೀಡಿರಿ ತಾಯಿ !
ಅಶನ ನೀಡಿರಿ ತಾಯಿ !

(ಉತ್ತರವಿಲ್ಲ. ಸ್ವಲ್ಪ ಹೊತ್ತು ನೋಡಿ ತನ್ನಲ್ಲಿ ತಾನು:)

ಮಾರುತ್ತರವ ಕುಡರು.
ಉದರಪೂಜೆಯ ಕಾರ್ಯ
ಸಡಗರದಿ ನಡೆಯುತಿಪೆ;
ನಡುಬಾನ್ಗೆ ದಿನಮಣಿಯು
ಬಂದಿಹನು. ಓ ಒಡಲೆ.
ದಿಶೆಗಳಾದರು ನಿನಗೆ
ದನಿಗುಡವು ! ಅಚ್ಚರಿಯು !
ಎನ್ನ ಬಡಬಾಳಿನಲಿ
ಬೆಳಕು ಮೂಡದೆ ಒಮ್ಮೆ ?
ನೋಡುವೆನು ಇನ್ನೊಮ್ಮೆ:

( ಗಟ್ಟಿಯಾಗಿ )

ಹಸಿದೊಡಲು ಕುಸಿಯುತಿಡೆ.
ಅಶನ ನೀಡಿರಿ ತಾಯಿ !
ಅಶನ ನೀಡಿರಿ ತಾಯಿ !

( ಒಳಗಿನಿಂದೊಂದು ವಾಣಿ )—

" ತಳುವಾಯ್ತು, ಬಂದೆನಿದೊ ! "

( ಎರಡು ಮಕ್ಕಳ ತಾಯಾದರೂ ಚಿಕ್ಕ ವಯಸ್ಸು, ಲಲಿತ ಭಾವ. ಆನಂದಸ್ಫುರಿತಲೋಚನೆ — ಇಂದುಬಿಂಬಾನನೆ — ರಾಧೆ ಪ್ರವೇಶಿಸುವಳು. ೪-೫ ವರ್ಷ ವಯಸ್ಸಿನ ಮಗಳು-ರಾಜಲಕ್ಷ್ಮಿಯೂ ಬರುವಳು.)

**ರಾಧೆ** ( ತನ್ನಲ್ಲಿ ತಾನು: )

ಕನಸಿನಲಿ ಕಂಡಂತೆ
ಈ ಮೂರುತಿಯ ನೆನಹು
ಮನವನಂಡಲೆಯುತಿದೆ,
ಅರೈವುದನುಚಿತವು !

( ದಯಾರ್ದ್ರ ಭಾವದಿಂದ ಭಿಕ್ಷುಕನನ್ನು ನೋಡುವಳು; ಅವನಿರವಿಗೆ ಮನಕರಗಿ ಕಣ್ಣೀರ ಮಿಡಿವಳು ರಾಧೆ. ಗಟ್ಟಿಯಾಗಿ )

ಬಳಲಿ ಬೆಂಡಾಗಿ ಬಲು
ಸೊರಗುತಿಹ ನಚ್ಚಿನ
ಸೋದರನೆ, ಭಿಕ್ಷುಕನೆ,
ಅಟ್ಟ ಅಡಿಗೆಯನೆಲ್ಲ
ಕುಲದೈವಕಿಂದಿಟ್ಟೆ
ನಿಚ್ಚಟದ ನಿಯಮದಲಿ.
ಅಟ್ಟು, ನಿನಗಿಟ್ಟು, ನಾ-
ನೆನ್ನ ತುತ್ತನು ಕೊಂಬೆ.

( ಸ್ವಲ್ಪ ಹಾಗೆಯೆ ಯೋಚಿಸಿ, ತೋರಿಸುತ್ತ)

ನೋಡಲ್ಲಿ, ಎಳದಳಿರ
ಮಾಮರದ ಎಡೆಯಲ್ಲಿ,
ತಣ್ಣೆಳಲ ಜೊಂಪಿನಲಿ,
ತಂಗಾಳಿಯೊಯ್ಯನೇ
ಬೀಸುವೆಡೆಯಲ್ಲಲ್ಲಿ,

CC-0. Jangamwadi Math Collection. Digitized by eGangotri

ಆರೆಗಳಿಗೆ ವಿಶ್ರಮಿಸು;
ಮರಳಿ ಬರುವೆನು ನಾನು.

**ಭಿಕ್ಷುಕ**

ವಂದನೆಗಳೆನಿತೆನಿತೊ
ನಿಮಗಿರಲಿ ಮಾತಾಯಿ!

( ತೆರಳುವಳು ರಾಧೆ. )

**ರಾಜಲಕ್ಷ್ಮಿ**

ಯಾವೂರ ಮಾವನೋ
ಇವನು ನಾನರಿಯೆ;
ಯಾವೂರ ಭಿಕ್ಷುವೋ
ಅರಿಯೆ ನಾನಿದನು!

( ಭಿಕ್ಷುವನ್ನು ನೆಟ್ಟನೋಟದಿಂದ ನೋಡಿ ರಾಧೆಯನ್ನು ಹಿಂಬಾಲಿಸುವಳು ರಾಜಲಕ್ಷ್ಮಿ. ಮಾವಿನ ಮರದ ಕೆಳಗೆ ಚಿಂತಿಸುತ್ತಾ ಕುಳಿತುಬಿಡುವನು ಭಿಕ್ಷುಕ. )

**ಭಿಕ್ಷುಕ**

ಒಡ ಹುಟ್ಟಿದವರ
ನೆನಹು ನನಗಿಂದು
ಉಕ್ಕಿ ಬರುತಿಹುದು!
ನೆನಸು ಕನಸೇನು?
ಕನಸೆ ನೆನಸೇನು?
.... .... ....
ನಾನರಿಯೆ; ಕನಸೆ
ಇದ್ದಿರಲು ಬೇಕು!
.... .... ....
ಜನಿಸಿದ ಭೂಮಿಯ
ನೆರೆ ಬಿಟ್ಟೋಡಿ
ಕಾಣದ ದೇಶದಿ
ತೊಳಲಿದೆ ಬರಿಧೆ.
ಮೆಲ್ಲನೆ ನುಗ್ಗಿದೆ
ಇವರಿದ್ದೆಡೆಗೆ,
ತೆರೆದುದು ಎನಗಾ
ಸಗ್ಗವು ಕಡೆಗೆ!

( ಪರದೆ ಬೀಳುವುದು. )

**ದೃಶ್ಯ ೨**

ವಿಶಾಲವಾದ—ಸಿಂಗರಿಸಿದ ಕೊಠಡಿ. ಮೇಜಿನ ಮೇಲೆ ಪುಸ್ತಕ—ಗಳು ಮಲಗಿವೆ. ಶಾಮರಾಯರು ಲೇಖನಿಯನ್ನು ಹಿಡಿದು ಏನನೋ ಬರೆಯಲು ಯೋಚನಾತರಂಗದಲ್ಲಿ ಮುಳುಗಿದ್ದಾ[ರೆ]. ಪಶ್ಚಿಮದಿಕ್ಕಿನಲ್ಲಿ ಒಂದು ದೊಡ್ಡ ಕಿಟಕಿ ಹೊರಗಣ ಪ್ರಕೃತಿ ಸೌಂದರ್ಯದ ರನ್ನಗನ್ನಡಿಯಂತಿದೆ.

ಬಾಗಿಲ ತಟ್ಟುಗಳು; ಆವನಿಗೆಚ್ಚರವಿಲ್ಲ. ಬಾಗಿಲು ತಾನಾಗಿಯೆ ತೆರೆವುದು; ರಾಜಲಕ್ಷ್ಮಿ ಪ್ರವೇಶಿಸುವಳು; ಸುತ್ತಲೂ ನೋಡುವಳು ಕಿಟಕಿಯಲ್ಲಿ ಮನೋಹರವಾದ ಮೇಘಮಾಲೆಯನ್ನು ನೋ[ಡಿ] ಪುಳಕಿತಳಾಗುವಳು.

**ರಾಜಲಕ್ಷ್ಮಿ**

ಓ ಅಣ್ಣ! ಓ ಅಣ್ಣ!
ಕಣ್ಮುಂದೆ ನಿಂದಿಹುದು
ಕನಕಗಿರಿ ವೈಭವವು:
ಕುರುಡರಿಗೆ ಆಸದಳವು.

(ಉತ್ತರವಿಲ್ಲ)

ಕತೆಗಳನು ಬರೆವವರು
ಕಣ್ದೆರೆದು ನೋಡುವರೆ?

(ಶಾಮರಾಯನು ಮೆಲ್ಲನೆ ತನ್ನ ಕಟಾಕ್ಷವನ್ನು ಬೀರುವನು—ದರಹಸಿತ ವದನಾರವಿಂದನಾಗಿ.)

ಕುಡು ನನಗೆ, ಕುಡು ನನಗೆ
ಮಿಸಲಿಹ ವಸ್ತುಗಳ
ಕುಡು ಅಣ್ಣಾ!

**ರಾಮರಾಯ**

—ಓ ಲಕ್ಷ್ಮಿ!
ಓ ನನ್ನ ಮುದ್ದುಮಣಿ!
ಓ ನನ್ನ ಜೌವನದ
ವಾಣಿ! ಸೊಬಗು ಖಣಿ! ನಾ
ಕನಸ ಕಾಣುತಲಿದ್ದೆ;
ತಳುವಾಯ್ತು. ಒಲವಾಯ್ತು!

(ಪ್ರಸನ್ನನಾಗಿ ನೋಡಿ ಮುದ್ದಿಡುವನು)

**ರಾಜಲಕ್ಷ್ಮಿ**

ಹಗಲುಗನಸೇನಣ್ಣಾ?
ಅಣ್ಣಾ ಕುಡು, ನನಗೆ ಕುಡು
ಕೆನೆವಾಲ ತನಿವಣ್ಣ!
ಮಾವ ಬಂದಿಹ ಹಸಿದು,
ಬಿಸಿಯುಸಿರನೆಳೆದೆಳೆದು!

(ರಾಧೆ ಪ್ರವೇಶಿಸುವಳು.)

CC-0. Jangamwadi Math Collection. Digitized by eGangotri

ರಾಧೆ

ಓ ನನ್ನ ಮನದನಿಯು,
ಇಂದೇನೊ ಮೂಡುತಿದೆ
ಉತ್ಸಾಹದಂಕುರವು:
ಆರನೋ ನೆನೆಯುತಿದೆ.
( ಆಪ್ಸರಲ್ಲಿಯೆ)

ಶಾಮರಾಯ

ನಾ ಬಲ್ಲೆ ಓ ನಲ್ಲೆ,
ಆ ನನ್ನ ಹೋಗನಸೆ
ಒಳಮೂಡಿ, ಹೊರಮೂಡಿ,
ತೇಲಿಸುತ್ತಿಹುದೆಲ್ಲ
ತಾ ಜಗದ ಕಡಲಿನಲಿ.

ರಾಧೆ

ಸರಸವಲ್ಲಿದು ರಮಣ.
ಬಳಲಿ ಬಂದಿಹನೊಬ್ಬ
ಭಿಕ್ಷುಕನು, ಸೋದರನು;
ಹಸಿದವರಿಗಶನಕೆಡೆ-
ಯುಂಟೆಂದುಸಿರಿ ಬಂದೆ.
ಮೀಸಲಿಟ್ಟಿಹ ನಿಮ್ಮ
ಕೆನೆವಾಲ ತನಿವಣ್ಣ-
ನೆಳಸಿ ನಾ ಕೊಂಡೊಯ್ಯೆ
ಬಂದೆನಿಲ್ಲಿಗೆ ನಾಥ!

[ತಲೆಯನಲ್ಲಾಡಿಸುತ್ತಾನೆ ಶಾಮರಾಯ.]

ನನ್ನ ಹೃದಯವು ಕರಗಿ
ಮರುಗುತಿದೆ ಅವನಿರಕೆ.

ಶಾಮರಾಯ

ಬೇಡುವರು—ಕಾಡುವರು—
' ಲು ಜನರು ಜಗದೊಳಗೆ.
ಶ್ರಮಿಸದಯ ಕುಳಿತಲಿಯೆ
ಹೆರರ ಕೂಳನೆ ಬಯಸಿ
ತಿರಿದುಣ್ಣುವವರುಂಟು.
ಬಂದು ಬೇಡಿದರ್ಗೆಲ್ಲ
ನೀಡುವೊಡೆ ಹಿಂಗುವುದೆ
ಬಳೆಯುತಿಹ ದಾರಿದ್ರ್ಯ?
ಕಡುಗಲಿಗಳಾಗಿ, ತಾವ್
ಕೆಚ್ಚಿದೆಯ ಭಟರಾಗಿ,
ಉದ್ಯೋಗದಲಿ ತೊಡಗಿ,
ಪುರುಷಸಿಂಹಗಳಾಗೆ
ಹಿಂಗುವುದು ಅಂದಿಂಗೆ
ಬಳೆಯುತಿಹ ದಾರಿದ್ರ್ಯ!
ಎಲೆ ಮರುಳೆ, ಹಿಂದಿರುಗು;
ಮೀಸಲಿಟ್ಟಿಹ ವಸ್ತು
ಮೀಸಲೆಂದಿಗು ಕೇಳು!

ರಾಧೆ

ನೀಲಮೇಘಶ್ಯಾಮ,
ಹಾಗೆನ್ನಬೇಡೊಡೆಯ!
ಕೊಟ್ಟ ಭಾಷೆಗೆ ತಪ್ಪಿ
ಭ್ರಷ್ಟಳಾಗುವೆ ನಾನು!

ಶಾಮರಾಯ

ವಿಚಾರ ತರಂಗದಲಿ
ತೇಲಿಹುದು ಸಿದ್ಧಾಂತ.
ಹುಸಿಯ ಕಲ್ಪನೆಯಲ್ಲ
ತರ್ಕಶಾಸ್ತ್ರದ ರೀತಿ;
ಬರಿದೆ ಗಳಹದಿರಿನ್ನು
ಎಲೆ ಚೆನ್ನೆ, ಮನದನ್ನೆ!

[ಎಲ್ಲಿಯೂ ಮೌನ. ಶಾಮರಾಯನನ್ನು ದಿಟ್ಟಿಸಿ ನೋಡುವಳು—ರಾಧೆ.]

ರಾಧೆ

ಅರಿಯೆವಾವುದು ನಿಮ್ಮ
ಈ ತರ್ಕದ ವಿಚಾರ!
ದೊರೆತಿಹುದು ನಮಗೊಂದೆ
ಆ ಎದೆಯೊಲವು ಸಾರ!
ಅದರಿಂದೆ ಈ ಸೃಷ್ಟಿ-
ಸ್ಥಿತಿ-ಲಯವು ಜಗದೊಳಗೆ:
ಇದಕೆ ಸಿಲುಕಿಹ ನಿಮ್ಮ
ಇರವರಿಯಲರಿದೆಮಗೆ:
ಬೇಡುವವರಾವಲ್ಲ,
ನೀಡುವವರಾವಿನಿಯ!

[ಕೋಪಿಸಿಕೊಂಡು ಹೋಗುವಳು ರಾಧೆ. ಹೋದ ಕಡೆಯನ್ನೆ ನೋಡುತ್ತ ವಿಷಣ್ಣವದನನಾಗಿ, ನೆಟ್ಟ ಕಂಗಳವನಾಗಿ ಕುಳಿತಿರುವನು ಶಾಮರಾಯ.]

CC-0. Jangamwadi Math Collection. Digitized by eGangotri



### ರಾಜಲಕ್ಷ್ಮಿ

ಅಣ್ಣಾ ! ಅಣ್ಣಾ !

(ಉತ್ತರವಿಲ್ಲ)

ಓ ಅಣ್ಣಾ ! ಓ ಅಣ್ಣಾ !
ಅಮ್ಮನನು ಮೂದಲಿಸಿ
ಕಳುಹಿಸಿದೆ. ಸೋಜಿಗವು !
ಬಯಲ ನೋಟದಿ ಕುಳಿತ
ನಿನ್ನಿರವು ಚಿತ್ರವೈ !

(ಮೌನ)

ಹಸಿದ ಮಾವನ ಮರೆತೆ;
ಹಸನಾಗಿ ಇಹನೇನೊ
ನೋಡುವೆನು ಹೊರಹೋಗಿ !

[ಹೊರಡಲೇಳುವಳು]

### ಶಾಮರಾಯ

ಓ ಎನ್ನ ಮುದ್ದುಗಿಣಿ,
ಪಾರಿದುದು ತನಿಯುಸಿರು !
ನಿನ್ನೊಲವ ಸೋಂಕಿನಲಿ
ನನ್ನ ಜೀವನತರುವು
ಚಿಗುರಲರಿ ಕಾತುದೌ !
ಮುಂದಿಹುದು ಕಲ್ಯಾಣ,
ಕಿಡಿಸದಿರು ಅದನಿನ್ನು !

[ಆಶ್ಚರ್ಯದಿಂದ ತಂದೆಯನ್ನು ನೋಡಿ]

### ರಾಜಲಕ್ಷ್ಮಿ

ಬಾರಣ್ಣಾ ತೋರುವೆನು
ಅಮ್ಮನನು—ಚಿನ್ನೆಯನು;
ಅಶನವಿಲ್ಲದೆ ಬಂದ
ಭಿಕ್ಷುವನು.

**ಶಾಮರಾಯ** ( ಭಾವಪರವಶನಾಗಿ )

ಭಿಕ್ಷುವನು ! ಚಿನ್ನೆಯನು !
ಸೌಂದರ್ಯಮೂರುತಿಯ !
ತರ್ಕಶಾಸ್ತ್ರಾತೀತ
ಜಗದಂತರಾಳಮಣಿ
ಸ್ವಾನುಭವ ರಸಖನಿಯ !

[ಪರದೆ ಬೀಳುವುದು]

## ದೃಶ್ಯ ೩

(ನಡುಮನೆ. ಬಟ್ಟಲಲ್ಲಿ ಹಾಲು, ತಟ್ಟೆಯಲ್ಲಿ ಹಣ್ಣುಗಳು ಮತ್ತೊಂದು ತಟ್ಟೆಯಲ್ಲಿ ಆಹಾರಪದಾರ್ಥಗಳು ಸಿದ್ಧವಿವೆ. ಮಣೆಯ ಮೇಲೆ ಬಂದು ನಿಲ್ಲುವನು ಭಿಕ್ಷುಕನು; ಸ್ವಲ್ಪ ದೂರದಲ್ಲಿ ನಿಲ್ಲುವಳು ರಾಧೆ.)

### ರಾಧೆ

ಬಡತನವು ಅಡಸಿಹುದು;
ಅಟ್ಟುದನು ಇಟ್ಟಿಹೆನು;
ಸ್ವೀಕರಿಸು ಸೋದರನೆ !

### ಭಿಕ್ಷುಕ

ಹಣ-ಹೊನ್ನ ಬಡತನವ
ನಾನರಿಯೆ—ಸೋದರಿಯೆ !
ಎದೆಯ ಬಡತನವರಿದು
ನಡು—ನಡುಗಿ ಕಡುನೊಂದೆ;
ಇಂದು 'ಸೋದರ !' ಎಂದು
ಕರೆದ ಇನಿನುಡಿ ಕೇಳಿ-
ದಾ ಚಣಕೆ ಆ ನನ್ನ
ಬಡತನವು ಬಯಲಾದುದು.
ಬಾಳಿನಲಿ ಬೆಳಕುಂಟು !
ನೋವಿನಲಿ ಸುಖವುಂಟು !

(ಶಾಮರಾಯ ರಾಜಲಕ್ಷ್ಮಿ ಪ್ರವೇಶಿಸುವರು.)

### ರಾಜಲಕ್ಷ್ಮಿ

ಅಣ್ಣಾ ನೋಡಿದೊ ನಿನ್ನ
ಆ ಚಿನ್ನೆ ಇಲ್ಲಿಹಳು !
ನನ್ನ ನಚ್ಚಿನ ಮಾವ-
ನಲ್ಲಿಹನು !

(ಹೋಗಿ ಭಿಕ್ಷುವನ್ನು ತಬ್ಬಿ ನಿಲ್ಲುವಳು.)

### ಶಾಮರಾಯ

ನನ್ನ ಸೊಬಗಿನ ತೆನೆಯೆ,
ಚಿನ್ನೆ! ಬಂದೆನು ನೋಡು,
ಭಿಕ್ಷುಕನು ! ನೀ—ೕ—ಡು!

### ರಾಧೆ

ಹೃದಯ ದೇಗುಲದ ಕದ
ತೆರೆದಿಹುದು, ತೆರೆದಿಹುದು !
ಬಾ ನನ್ನ ಹೊಂಗನಸೆ,
ಜೀವನದ ತನಿಯುಸಿರೆ !

CC-0. Jangamwadi Math Collection. Digitized by eGangotri

( ಇನಿಯನನ್ನು ಆಲಿಂಗಿಸುವಳು ರಾಧೆ; ರಾಜಲಕ್ಷ್ಮಿಯನ್ನೆತ್ತಿಕೊಂಡು ಮುದ್ದಾಡುವನು ಭಿಕ್ಷುಕನು; ಪಕ್ಕದ ಕೋಣೆಯಿಂದ ಅಂಬೆಗಾಲಿಟ್ಟುಕೊಂಡು ಬಂದು, ಹೊಸ್ತಿಲಲ್ಲಿ ನಿಂತು, ಸಂತೋಷದಿಂದ ಎಲ್ಲರನ್ನೂ ನೋಡುವುದು ಮಗು.

ಆನಂದಸಾಗರದಿ ಮೂಡಿದೆಳನಗೆಯ ಕಿರುದೆರೆಯು ಮೊಗಗನ್ನಡಿಯಲ್ಲಿ ಪ್ರತಿಬಿಂಬಿಸಿ ಲಿಲಾಜಾಲವಾಗಿ ಹರಿಯುವುದು. )

ರಾಧೆ

(ಶಾಮರಾಯನ ಕಡೆಗೆ ಕೈದೋರಿ)

ಓ ಇನಿಯ, ಇಲ್ಲಿಹನು ನನ್ನ ಭಿಕ್ಷುಕನು-
(ಭಿಕ್ಷುಕನ ಕಡೆ ಕೈದೋರಿ) ಅರಸಿ
ಬಂದೆನ್ನ ಸೋದರನು
ಇಲ್ಲಿಹನು, ನೋಡಿದೆಯ?

(ಅಚ್ಚರಿಮೂಡಿ ಭಿಕ್ಷುವನ್ನು ದಿಟ್ಟಿಸಿ ನೋಡುವನು, ಶಾಮರಾಯ. ಪರದೆ ಬೀಳುವುದು.)

( ಮುಗಿದುದು )


ನಕಲೀ ಮಾಲು ಕೊಂಡು
ಮೋಸಹೋಗಬೇಡಿರಿ !!

ಆಸೇತುಹಿಮಾಚಲ




ಳಂವರುಷಪರ್ಯಂತ

ಖ್ಯಾತಿಗೊಂಡ ಅಂಜನರಾಜ
ಅಮೃತಾಂಜನ
ಅಮೃತಾಂಜನ ಲಿಮಿಟೆಡ್
ಮದ್ರಾಸು, ಬೊಂಬಾಯಿ, ಕಲ್ಕತ್ತಾ.

AMRUTANJAN LTD., BANGALORE BRANCH,
Krishna Building,
Avenue Road, Bangalore City



ದಮ್ಮು ಪೂರ್ಣ ಗುಣವಾಗುವ
ಉಪಾಯವನ್ನೇ ಕೈಕೊಳ್ಳಬೇಕು



ಕೆಮ್ಮು ಮತ್ತು ಕಫವಿಕಾರವಿದ್ದವರು 'ಎಫಿಡಿಮ' ಮುಂತಾದ ತಾತ್ಕಾಲಿಕ ಆರಾಮವೆನಿಸುವ ಔಷಧಗಳನ್ನು ಎಂದೂ ಉಪಯೋಗಿಸಬಾರದು. ಈ ಔಷಧಗಳು ರೋಗವನ್ನು ಪೂರ್ಣ ಗುಣಪಡಿಸಲು ನಿರುಪಯೋಗಿಗಳೆಂಬದು ನಿಶ್ಚಿತವು. ಮತ್ತು ಇಂಥ ಔಷಧಗಳು ಶ್ವಾಸನಲಿಕೆಯಲ್ಲಿಹೆಚ್ಚಿಗೆ ನೋವುಂಟುಮಾಡಿ ರೋಗವನ್ನುಶಾಶ್ವತಮಾಡುತ್ತವೆ ರೋಗಲಕ್ಷಣವನ್ನು ಪೂರ್ಣ ವಿಚಾರ ಮಾಡಿ, ರೋಗಿಗೆ ಬೇಗನೆ ಮತ್ತು ಸಾವಧಾನವಾಗಿ ಪೂರ್ಣ ಗುಣ ಮಾಡುವ ಔಷಧವೇ ನಿಜವಾದ ಉಪಾಯವು; ಮತ್ತು ಇದೇ ದೃಷ್ಟಿಯಿಂದ ಡಾ. ಪುರೋಹಿತ ಇವರ

'ಶ್ವಾಸಹಾರಿ ಪ್ಲೇನ್' ಮತ್ತು
'ಶ್ವಾಸಹಾರಿ ಕಾಂಪಾವುಂಡ್'

ಈ ಎರಡೂ ಔಷಧಗಳು ದಮ್ಮು ವಿಕಾರವನ್ನು ಪೂರ್ಣ ಗುಣಪಡಿಸುವ ದಿವ್ಯಾಷಧಿಯಲ್ಲಿ ಅಗ್ರೇಸರವೆನಿಸಿವೆ. ದಮ್ಮು, ಶ್ವಾಸ, ಮುಂಜಾನೆಯ ತಸಕಿ, ಗಂಟಲು ಕೆರೆಯುವ ಹಳೇ ಕೆಮ್ಮು ಮತ್ತು ಫುಪ್ಫುಸದ ಯಚ್ಚಾವತ್ ರೋಗಗಳನ್ನು ಗುಣಪಡಿಸಲು "ಶ್ವಾಸಹಾರಿ ಪ್ಲೇನ್"ಉಪಯೋಗಿಸಬೇಕು. ಆಮ್ಲಪಿತ್ತವಿದ್ದವರು "ಶ್ವಾಸಹಾರಿ ಕಾಂಪೌಂಡ್" (ಕೆಂಪು ಪ್ಯಾಕಿಂಗ್) ಉಪಯೋಗಿಸುವದು ಹೆಚ್ಚು ಲಾಭಕರವು.

ಬಹುತರವಾಗಿ ಎಲ್ಲ ಶಹರಗಳಲ್ಲಿ ಕೆಮಿಸ್ಟ್ ಸ್ಟೋರ್ಸ್ ಮತ್ತು ಅಂಗಡಿಗಳಲ್ಲಿ ಈ ಔಷಧಗಳು ರೂ. ೩, ೩-೮-೦ ಮತ್ತು ೫-೦-೦ ಹೀಗೆ ಬೇರೆ ಬೇರೆ ಬೆಲೆಯ ೩ ಪ್ಯಾಕು ಮಾರಲಿಕ್ಕೆ ಸಿಗುತ್ತವೆ.

ಮುಂಬಯಿ ಎಜಂಟ್—
ಮೆ. ಓರಿಯಂಟಲ್ ಮೆಡಿಕಲ್
ಸ್ಟೋರ್ಸ್, ಪ್ರಿನ್ಸೆಸ್ ಸ್ಟ್ರೀಟ್, ಮುಂಬೈ

ಪುರೋಹಿತ
ಶ್ವಾಸಹಾರಿ



ಡಾ ಪುರೋಹಿತ ಫಾರ್ಮಸಿ, ಕೊಲ್ಹಾಪುರ.


CC-0. Jangamwadi Math Collection. Digitized by eGangotri

# ಯುನೈಟೆಡ್ ಕರ್ನಾಟಕ ಇನ್ಶೂರನ್ಸ್ ಕಂ. ಲಿಮಿಟೆಡ್

## ಪ್ರಧಾನ ಕಾರ್ಯಾಲಯ—ಧಾರವಾಡ.

ಕಳೆದ ಆರುವರ್ಷಗಳಿಂದಲೂ ಬೆಳೆದು ಬಲಗೊಂಡು ನಿಂತು, ಸರಕಾರದ ಪಂಚವಾರ್ಷಿಕ ವಿಮರ್ಶೆಯಲ್ಲಿ ಜಯಶೀಲವಾಗಿರುವ ಕರ್ನಾಟಕದ ಜೀವವಿಮಾ ಕಂಪನಿ ● ● ●



ಈ ಕಂಪನಿಯ ಬಗ್ಗೆ ಜನರಿಗೆ ವಿಶೇಷ ಅಭಿಮಾನವೆನಿಸಲು ಕಾರಣಗಳೇನೆಂದರೆ: ● ● ●
ಕಂಪನಿಯ ಹಣಕ್ಕೆ ಸರಕಾರದ ಆಧಾರಪತ್ರಗಳ ಮೂಲಕ ಸಂಪೂರ್ಣ ಸುರಕ್ಷಿತತೆಯಿದೆ. ಪಾಲಿಸಿದಾರರ ಹಕ್ಕಿನ ಹಣವನ್ನು ಸಲ್ಲಿಸುವುದರಲ್ಲಿ ತೊಂದರೆ-ತಡೆಗಳೇ ಇಲ್ಲ. ಏಜಂಟರ ಮತ್ತು ಪ್ರಧಾನ ಕಾರ್ಯಾಲಯದ ವ್ಯವಹಾರದಲ್ಲಿ ಸಮಯಶೀಲತೆಯಿದೆ. ಕನಿಷ್ಠ ವೆಚ್ಚದಿಂದ ವಿಶಿಷ್ಟ ಲಾಭವನ್ನು ಕೊಡುವ ವಿಮಾಯೋಜನೆಗಳಿವೆ. ಈ ಕಂಪನಿಯ ಏಳ್ಗೆಯಲ್ಲಿ ಕರ್ನಾಟಕದ ಆರ್ಥಿಕೋನ್ನತಿಯ ಬಲವಾದ ಆಧಾರವಿದೆ.

ಅಲ್ಲದೆ ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಇದರ ಪಾಲುಗಾರರಿದ್ದು, ಇದು ಕನ್ನಡ ನಾಡಿನ ಪ್ರಾತಿನಿಧಿಕ ಸಂಸ್ಥೆಯಾಗಿದೆ. ಆದುದರಿಂದ ಕನ್ನಡದ ಗೆಲವನ್ನು ಬಯಸುವವರು 'ಯುನೈಟೆಡ್ ಕರ್ನಾಟಕ'ದ ಪಾಲಿಸಿಯನ್ನಾಗಲಿ ಪಾಲುಗಳನ್ನಾಗಲಿ ಪಡೆಯಬೇಕು; ವಿಶೇಷವಿವರಕ್ಕೆ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಮುಳಗಿ ಬಂಧುಗಳು
ಧಾರವಾಡ ಜಿಲ್ಹೆಯ ಚೀಫ್ ಏಜಂಟರು
ಗದಗು

ಎಮ್. ಗೋವರ್ಧನರಾವ್
ಮ್ಯಾನೇಜರ್
ಯು. ಕ. ಇ. ಕಂ. ಲಿ., ಧಾರವಾಡ

---

# ಡೋಂಗರೆ ಇವರ ಬಾಲಾಮೃತವು



ಇದ್ದದ್ದಾದರೂ ಏನು ?

(೧) ಅದು ಅಶಕ್ತ ಮತ್ತು ರೋಗಿಷ್ಠ ಮಕ್ಕಳನ್ನು ಬೇಗ ವಾಸಿಪಡಿಸುತ್ತದೆ.
(೨) ಅದರಲ್ಲಿ ಎಲುಬುಗಳನ್ನು ಗಟ್ಟಿಗೊಳಿಸುವ ಎಲ್ಲ ಸತ್ತ್ವಾಂಶಗಳೂ ಇವೆ.
(೩) ಅದು ಚಿಕ್ಕಮಕ್ಕಳಿಗೆ ಉತ್ಕೃಷ್ಟ—ಪೌಷ್ಟಿಕ ಔಷಧಿಯಾಗಿದೆ.
(೪) ಅದು ಕೆಮ್ಮಿನ ಕೆಟ್ಟ ವಿಕಾರವನ್ನು ಗುಣಪಡಿಸುವುದಲ್ಲದೆ ಹಲ್ಲು ಬರುವ ಹೊತ್ತಿನಲ್ಲಿ ಮಕ್ಕಳಿಗೆ ಉಪಯುಕ್ತವಾಗಿದೆ.

ಎಲ್ಲೆಲ್ಲಿಯೂ ಸಿಗುತ್ತದೆ.

CC-0. Jangamwadi Math Collection. Digitized by eGangotri

# ಜಗತ್ತಿನಲ್ಲಿಯ ಸಮಾಜಕ್ರಾಂತಿಯೂ ಹಿಂದುಸ್ಥಾನವೂ

ಲೇಖಕರು: ವೈದ್ಯಭಾನು ಶ್ರೀ. ಡಿ. ಕೆ. ಭಾರದ್ವಾಜ ಎಂ. ಡಿ. (ಆಯುರ್ವೇದ) ಬೆಂಗಳೂರು

## ರಶಿಯಾದೇಶದ ಹದಿನೈದು ವರುಷಗಳ ಕ್ರಾಂತಿ

### ಲೇಖನಮಾಲೆ ೨ *

ಸೋವಿಯೆಟ್ ಸರಕಾರದೆದುರಿನಲ್ಲಿ ಇಂದು ಪ್ರಚಂಡವಾದ ಕಾರ್ಯಕ್ರಮವಿದೆ. ಇಂದಿನ ವರೆಗೆ ಅಜ್ಞಾನ-ದಾರಿದ್ರ್ಯ-ಅಸಂಸ್ಕೃತಸ್ಥಿತಿಗಳಲ್ಲಿದ್ದ ಸಮಾಜವನ್ನು ಸಂಪೂರ್ಣವಾಗಿ ಸಂಸ್ಕಾರಗೊಳಿಸಿ, ಜೀವನಾವಶ್ಯಕವಾದ ಭೌತಿಕ ಸಂಪನ್ನಾವಸ್ಥೆಯನ್ನುಂಟುಮಾಡಿಕೊಟ್ಟು ಪ್ರಮುಖ ಪಾಶ್ಚಾತ್ಯರಾಷ್ಟ್ರಗಳಲ್ಲಿರುವ ಎಲ್ಲ ಸುಧಾರಣೆಗಳನ್ನೂ ತಮ್ಮ ರಾಷ್ಟ್ರದಲ್ಲಿ ತಂದುಕೊಳ್ಳಬೇಕೆಂದು ರಶಿಯಾದೇಶದವರ ಗುರಿಯಾಗಿದೆ.

### ೧೨. ಸೋವಿಯೆಟ್: ಪ್ರಚಂಡ ಪುನರ್ಘಟನೆ

ಜಗತ್ತಿನಲ್ಲಿ ಇಂದಿನವರೆಗಿನ ಮಾನವಪ್ರಗತಿಯು ತಾನಾಗಿಯೆ ಆಗುತ್ತ ಬಂದಿರುವುದು. ಆಗತ್ಯವಿದ್ದ ಮಟ್ಟಿಗೆ ಸಾಮಾಜಿಕ ಜೀವನದಲ್ಲಿ ಪ್ರಸ್ಥಾಪಿತ ಅಧಿಕಾರದಿಂದ ತಮ್ಮ ಪ್ರಾಬಲ್ಯವನ್ನು ತೋರಿ, ಅಧಿಕಾರವನ್ನು ಸ್ಥಿರಗೊಳಿಸಲು ಯತ್ನಿಸುವುದೂ ಸಮಾಜದಲ್ಲಿ ಸ್ವಾಭಾವಿಕವಾಗಿ ಆಗುವ ವಿಕಾಸಕ್ಕೆ ತಾನೂ ಸಹಾಯಮಾಡಿದಂತೆ ತೋರುವುದೂ ಇದುವರೆಗೆ ನಡೆದು ಬಂದಿರುವ ರಾಜಕೀಯ ಪದ್ಧತಿಯಾಗಿದೆ. ವ್ಯಕ್ತಿಸ್ವಾತಂತ್ರ್ಯ-ಪ್ರಜಾಪ್ರಭುತ್ವಾದಿ ನವೀನ ತತ್ತ್ವಗಳೂ ಈ ಪರಂಪರೆಗಳಿಗೆ ಪುಷ್ಟಿಯನ್ನಿತ್ತುವು.

ಯೋಜನಪದ್ಧತಿಯ ತತ್ವಸ್ವೀಕಾರ

ಹೀಗೆ ಆಗುವುದು ತಾನಾಗಿ ಆಗಲೆಂಬುವ ಪಕ್ಷವನ್ನು ಬಿಟ್ಟು, ಬುದ್ಧಿಪೂರ್ವಕವಾಗಿ ದೊಡ್ಡ ಪ್ರಮಾಣದಲ್ಲಿ ಯೋಜನೆಯನ್ನು ಹೂಡಿರುವ ದೇಶಗಳಲ್ಲಿ ರಶಿಯಾದೇಶವೆ ಮೊದಲನೆಯದು. ಸಾಮಾಜಿಕ ಪ್ರಗತಿ, ನಿಶ್ಚಿತ ರೂಪರೇಷೆ ಮತ್ತು ಯೋಜನೆಗಳನ್ನು ಗೊತ್ತುಪಡಿಸಿಕೊಂಡು, ಇಷ್ಟವೂ ಪೂರ್ವಯೋಜಿತವೂ ಆದ ಧ್ಯೇಯಾನುಸಾರವಾಗಿ ಅವುಗಳನ್ನು ಕಾರ್ಯಮುಖಗೊಳಿಸುವ ತತ್ತ್ವವನ್ನು ಮೊದಲು ಈ ದೇಶವು ಆಚರಣೆಯಲ್ಲಿ ತಂದಿತು. ತಾನಾಗಿಯೆ ಆಗುವ ಸಮಾಜದ ಬೆಳೆವಣಿಗೆಗೆ ಹೆಚ್ಚು ಕಾಲ ಬೇಕಾಗುವುದು. ಮತ್ತೆ ಆ ಪ್ರಗತಿಯು ವಿಶೇಷ ಅನಿಶ್ಚಿತವಾಗಿರುವುದು. ಈ ಸ್ವಾಭಾವಿಕ ವಿಕಾಸದ ಮಾರ್ಗವನ್ನು ನೋಡುವಷ್ಟೂ ಅವಕಾಶವು ರಶಿಯಾಕ್ಕೆ ಇಲ್ಲ. ಆದ್ದರಿಂದ ಆರ್ಥಿಕ, ಶೈಕ್ಷಣಿಕ, ಔದ್ಯೋಗಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಪ್ರಗತಿಯ ಐದು ವರ್ಷಗಳ ಯೋಜನೆಗಳನ್ನು ಆಗಾಗ ಗೊತ್ತುಪಡಿಸಿಕೊಂಡು, ಅದನ್ನು ಪೂರ್ಣಗೊಳಿಸಲು ಹೆಚ್ಚು ಪ್ರಯತ್ನಮಾಡಬೇಕೆಂಬ ಧೋರಣೆಯನ್ನು ಅಲ್ಲಿಯ ಮುಖಂಡರು ಸ್ವೀಕರಿಸಿದರು. ನಿಶ್ಚಿತವಾಗಿಯೂ ತತ್ಕಾಲದಲ್ಲಿ ಸಾಧ್ಯವಾಗಿಯೂ ಮಾಡತಕ್ಕ ಧ್ಯೇಯ, ಅಧಿಕಾರದ ಬೆಂಬಲ ಮತ್ತು ನಮ್ಮದೆಂಬ ಭಾವನೆಯಿಂದ ಕೆಲಸಮಾಡುವ ಸಮಾಜದ ಉತ್ಸಾಹ— ಇವುಗಳ ಬಲದಿಂದ, ಕಳೆದ ಹತ್ತು ವರುಷಗಳಲ್ಲಿ ರಶಿಯಾದೇಶವು ಮಾಡಿದಷ್ಟು ಪ್ರಗತಿಯನ್ನು ಮತ್ತಾವ ರಾಷ್ಟ್ರವೂ ಮಾಡಿಲ್ಲ; ಈ ಮಾತಿನಲ್ಲಿ ಎಳ್ಳಷ್ಟೂ ಅತಿಶಯೋಕ್ತಿ ಇಲ್ಲ.

ಸೋವಿಯೆಟ್ ಸರಕಾರದೆದುರಿನಲ್ಲಿ ಇಂದು ಪ್ರಚಂಡ ಕಾರ್ಯಕ್ರಮವಿದೆ. ಇಂದಿನವರೆಗೆ ಅಜ್ಞಾನ, ದಾರಿದ್ರ್ಯ ಮತ್ತು ಅಸಂಸ್ಕೃತಸ್ಥಿತಿಯಲ್ಲಿದ್ದ ಸಮಾಜವನ್ನು ಸಜ್ಞಾನವನ್ನಾಗಿ ಮಾಡಿ, ಅದಕ್ಕೆ ಭೌತಿಕ ಸಂಪನ್ನಸ್ಥಿತಿಯನ್ನು

* ಡಾ. ಗ. ಶ್ರೀ. ಖೈರ್ ಅವರ ಗ್ರಂಥಾಧಾರದಿಂದ

CC-0. Jangamwadi Math Collection. Digitized by eGangotri

ಉಂಟುಮಾಡಿಕೊಟ್ಟು, ಪಾಶ್ಚಾತ್ಯರಾಷ್ಟ್ರಗಳಲ್ಲಿ ಇಂದು ವಿಜೃಂಭಿಸುತ್ತಿರುವ ಸುಧಾರಣೆಯನ್ನೂ ಅಲ್ಪಕಾಲದಲ್ಲಿಯೆ ರಶಿಯಾದಲ್ಲಿ ಪ್ರಜಲಿತಗೊಳಿಸುವುದು ಈ ಕಾರ್ಯಕ್ರಮದ ಮುಖ್ಯ ಭಾಗವಾಗಿದೆ.

**ಜನರು ಹೇಗೆ ವಾಸಿಸುತ್ತಾರೆ?**

ಶ್ರಮಜೀವಿಗಳ ಮತ್ತು ಬಹುಜನ ಸಮಾಜದ ವಸತಿ ಸ್ಥಾನವು ನಿರ್ಮಲವೂ, ಆರೋಗ್ಯಾನುಕೂಲವೂ, ವಿಶಾಲವೂ ಆದ ಸ್ಥಳದಲ್ಲಿರುವಂತೆ ಮಾಡಬೇಕೆಂಬುದೇ ಆ ಸರಕಾರದ ಮುಂದಿರುವ ಮೊದಲನೆಯ ಪ್ರಶ್ನೆ. ಈಗ ರಶಿಯನ್ ನಗರಗಳಲ್ಲಿ ವಸತಿ ಸ್ಥಾನಗಳು ವಿಶೇಷವಾಗಿ ನೇರ್ಪಡುತ್ತಿರುವುವು. ಹಳೆಯ ಕಟ್ಟಡಗಳನ್ನು ಕಿತ್ತಿ ದೊಡ್ಡದು ಮಾಡುವುದು ಮತ್ತು ಆಧುನಿಕ ಪದ್ಧತಿಯ ಸೌಕರ್ಯಗಳುಳ್ಳ ಹೊಸಕಟ್ಟಡಗಳನ್ನು ಕಟ್ಟುವುದು, ಇವೆರಡು ಕೆಲಸಗಳೂ ಒಟ್ಟಿಗೆ ಈಗ ರಶಿಯದಲ್ಲಿ ನಡೆಯುತ್ತಿವೆ. 'ಝಾರ್' ಪ್ರಭುತ್ವದಲ್ಲಿ ಕೂಲಿಕಾರರು ಎಂತಹ ಹೊಲಸು ಗುಡಿಸಲುಗಳಲ್ಲಿ ವಾಸಮಾಡುತ್ತಿದ್ದರೆಂಬುದಕ್ಕೆ ನಿದರ್ಶನಗಳು ಈಗಲೂ ದೊರೆಯುವಂತಿವೆ. ನಾಲ್ಕು ಕಡೆಗಳಲ್ಲಿಯೂ ಹಲಗೆಗಳನ್ನಿಟ್ಟು, ಹೇಗೋ ಒಂದು ಆಶ್ರಯಸ್ಥಾನವನ್ನುಂಟುಮಾಡುವ ರೀತಿಯಲ್ಲಿ ಆಗಿನ ವಸತಿಸ್ಥಾನಗಳು ನಿರ್ಮಿತವಾಗಿವೆ. ಈಗ ಸಾಕಾದಷ್ಟು ಹೊಸ ಕಟ್ಟಡಗಳಿನ್ನೂ ಸಿದ್ಧವಾಗಿಲ್ಲವಾದುದರಿಂದ, ಕೆಲಮಟ್ಟಿನ ಶ್ರಮಜೀವಿಗಳಿನ್ನೂ ಆ ಕಟ್ಟಡಗಳಲ್ಲಿ ವಾಸಮಾಡುತ್ತಿರುವರು. ಆದರೆ ಮುಂದೆ ಎರಡು ಮೂರು 'ಪಂಚವಾರ್ಷಿಕ ಯೋಜನೆ'ಗಳು ಮುಗಿಯುವುದರೊಳಗಾಗಿ ಈ ಸ್ಥಿತಿಯು ಬದಲಾಗಿ, ಎಲ್ಲರಿಗೂ ಅನುಕೂಲವಾದ ವಸತಿಸ್ಥಾನಗಳು ಸಿಕ್ಕುವ ಸೂಚನೆಗಳು ಕಂಡುಬರುತ್ತಲಿವೆ. ಮೊದಮೊದಲು ಕಟ್ಟಿದ ಕಟ್ಟಡಗಳನ್ನು, ಔದ್ಯೋಗಿಕ, (ಕೈಗಾರಿಕೆ) ಮತ್ತು ಇತರ ಸ್ಥಾನಗಳಲ್ಲಿ ಮಹತ್ತ್ವದ ಕೆಲಸ ಮಾಡುವ ಜನರಿಗೂ ಯಾಂತ್ರಿಕ ಕಲೆ ಮತ್ತು ಇತರ ಉಚ್ಚಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೂ ವಾಸಕ್ಕೆ ಕೊಟ್ಟಿರುವರು. ಏಕೆಂದರೆ ಮುಂದಿನ ಪ್ರಗತಿ ಮತ್ತು ಪ್ರಸ್ಥಾಪಿತ ಸತ್ತೆಯ ಶಾಶ್ವತತೆಯು ಅವರನ್ನು ಅವಲಂಬಿಸಿರುವುದು. ಮಾಸ್ಕೊ ನಗರದಲ್ಲಿ 'ವರ್ಕ್ಸ್ ಸೆಟ್ಲ್‌ಮೆಂಟ್' ಎಂಬ ಹೆಸರಿನ ನವೀನ ವಸಾಹತು ಆಗಿರುವುದು. ಅದರಲ್ಲಿ ಒಂದು ಕಟ್ಟಡದಲ್ಲಿ ವಿದ್ಯಾರ್ಥಿಗಳ ವಾಸಕ್ಕೆ ಸೌಕರ್ಯಗಳನ್ನು ಮಾಡಿರುವರು. ೩೩ರಿಂದ ೪೦ ವರುಷ ವಯಸ್ಸಿನವರೆಗಿನ ಕೆಲಸಗಾರರಿಗೆ ಶಿಷ್ಯವೃತ್ತಿ (ಸ್ಕಾಲರ್‌ಶಿಪ್) ಕೊಟ್ಟು ಯುನಿವರ್ಸಿಟಿಗೆ ಸೇರಿಸಿಕೊಂಡಿರುವರು. ಈ ವಸತಿಗೃಹಗಳಲ್ಲಿ ವಿವಾಹಿತವಿದ್ಯಾರ್ಥಿಗಳ ವಾಸಕ್ಕೆ ಸೌಕರ್ಯಗಳಿವೆ. ಕಟ್ಟಡಗಳು ವಿಶಾಲವಾಗಿ ಒಳಗಿರುವ ಕೋಣೆಗಳು ನಿರ್ಮಲವಾಗಿಯೂ ಅನುಕೂಲವಾಗಿಯೂ ಇವೆ. ಪ್ರತಿಯೊಂದು ಕೋಣೆಯಲ್ಲಿ ಒಂದು ಲೆನಿನ್ನನ ಅರ್ಧ ಮೂರ್ತಿ, ರೇಡಿಯೋ, ನಿರ್ಮಲವಾದ ಹಾಸಿಗೆಯುಳ್ಳ ಮಂಚ ಮತ್ತು ಮೇಜುಗಳು ಇವೆ. ಈ ವಸಾಹತಿನಲ್ಲಿ ಎಲ್ಲ ಅನುಕೂಲತೆಗಳೂ ಇವೆ. ಅದಕ್ಕೆ ಸಂಬಂಧಿಸಿ ಒಂದು ಔಷಧಚಿಕಿತ್ಸಾಲಯವೂ ಇದೆ. ಈ ಬಗೆಯಾಗಿ ಎಲ್ಲ ಸೌಕರ್ಯಗಳುಳ್ಳ ವಸಾಹತುಗಳನ್ನು ಅಲ್ಲಲ್ಲಿ,ಪ್ರತಿಯೊಂದು ನಗರದಲ್ಲಿ ಕಟ್ಟುವ ಕೆಲಸವು ನಡೆಯುತ್ತಿದೆ.

ರಶಿಯಾದಲ್ಲಿ ಮನೆಬಾಡಿಗೆಯು, ಸ್ಥಳದ ಉದ್ದ, ಅಗಲ ಮತ್ತು ಬಾಡಿಗೆದಾರರಿಗೆ ಸಿಕ್ಕುವ ಸಂಪಾದನೆ ಇವುಗಳನ್ನವಲಂಬಿಸಿರುವುದು. ಕಡಿಮೆ ಸಂಬಳದವನಿಗೆ ಸಿಕ್ಕುವ ಕೋಣೆಗೆ ಹೆಚ್ಚು ಸಂಬಳದವನು ಹೆಚ್ಚು ಬಾಡಿಗೆ ಕೊಡಬೇಕಾಗುವುದು. ಅಲ್ಲಿ ವಸತಿಗೃಹಗಳಂತೆಯೆ ಹೊಸ ವಿದ್ಯಾಲಯ, ಆಸ್ಪತ್ರೆ (ಚಿಕಿತ್ಸಾಲಯ)ಗಳನ್ನೂ ಕಟ್ಟುವ ಕೆಲಸಗಳು ನಡೆಯುತ್ತಿವೆ.

**ಆರೋಗ್ಯದ ಸಾರ್ವತ್ರಿಕ ಸೌಕರ್ಯಗಳು**

ಆರೋಗ್ಯದ ಮತ್ತು ವೈದ್ಯಕದ ಪ್ರಗತಿ ಅಲ್ಲಿ ವಿಶೇಷವಾ[illegible] ಇದೆ. ಮಾಸ್ಕೊ ನಗರದ ಬೇರೆ ಬೇರೆ ಭಾಗಗಳಲ್ಲಿ ಹತ್ತು ದೊಡ್ಡ ದೊಡ್ಡ ಆಸ್ಪತ್ರೆಗಳಿವೆ. ಪ್ರತಿಯೊಂದು ಆಸ್ಪತ್ರೆಯು ಆಯಾ ಭಾಗದ ೫೦,೦[illegible] ಪ್ರಜೆಗಳಿಗೆ ಉಪಯುಕ್ತವಾಗಿದೆ. ಆ ಚಿಕಿತ್ಸಾಲಯ (ದವಾಖಾನೆ) ಗಳಲ್ಲಿ[illegible] ಉಪಕರಣಗಳು ಅತ್ಯಂತ ಆಧುನಿಕ ಕಾಲದುವಾಗಿ 'ಎಕ್ಸ್‌ರೇಜ್' 'ಹೈಡ್ರೋಥೆರಪಿ' ಇವೇಮೊದಲಾದ ಹೆ[illegible] ವೆಚ್ಚದ ಉಪಚಾರಗಳು ಪ್ರತಿಯೊಬ್ಬ ವ್ಯಕ್ತಿಗೂ ಸುಲ[illegible]ವಾಗಿ ದೊರೆಯುವಂತಾಗಿವೆ. ಪ್ರತಿಯೊಂದು ಕುಟುಂಬ[illegible] ಅವರ ಮನೆಯ ಹತ್ತಿರವೇ ಒಬ್ಬ ಡಾಕ್ಟರು ನೇಮಕ[illegible] ಇರುವನು. ಆ ಕುಟುಂಬದವರು ಆ ಡಾಕ್ಟರನ್ನು ಯಾ[illegible] ಬೇಕಾದರೂ ಟೆಲಿಫೋನಿನ ಮೂಲಕ ಕರೆಯಬಹು[illegible]

ಮಕ್ಕಳಿಗೆ ಕಾಹಿಲೆ (ಜಡ್ಡು) ಆದರೆ ತಾಯ[illegible] ಚಿಕಿತ್ಸಾಲಯಗಳಿಗೆ ಬರಬೇಕೆಂಬ ಪದ್ಧತಿಯು ಇಲ್ಲಿ ಹೆರಿಗೆಗೆ ಮುಂಚೆ ಮತ್ತು ಅನಂತರ ಆಗಾಗ ಮಕ್ಕ[illegible]

CC-0. Jangamwadi Math Collection. Digitized by eGangotri

ತೋರಿಸಿ, ಅವರ ದಿನಚರ್ಯೆಯ ವಿಚಾರದಲ್ಲಿ ಸಲಹೆಗಳನ್ನು ಕೇಳಲು, ತಾಯಂದಿರು ಚಿಕಿತ್ಸಾಲಯಗಳಲ್ಲಿ ತುಂಬಿರುವರು. ಶಾಲೆಗಳಲ್ಲಿರುವ ಮಕ್ಕಳಿಗಾಗಿ ಒಂದು ಸ್ವತಂತ್ರ ಶಾಖೆಯು ಇದೆ. ಅಲ್ಲಿ ಮಕ್ಕಳ ಶಾರೀರಿಕ ಪರೀಕ್ಷೆಯನ್ನು ಸಂಪೂರ್ಣವಾಗಿ ಮಾಡಿ, ಮುಂದೆ ಅವರು ಯಾವ ಕಸಬು, ಕೈಗಾರಿಕೆಗೆ ಯೋಗ್ಯರಾಗುವರು ?. ಎಂಬುದನ್ನು ಚಿಕಿತ್ಸಾಲಯಗಳವರು ಪಾಠಶಾಲೆಯ ಶಿಕ್ಷಕರಿಗೂ, ಮಕ್ಕಳ ಪಾಲಕರಿಗೂ ತಿಳಿಸುವರು. ಈ ಚಿಕಿತ್ಸಾಲಯಗಳಲ್ಲಿ ಕೆಲಸಮಾಡುವ ಡಾಕ್ಟರ್ ಮೊದಲಾದ ಅಧಿಕಾರಿಗಳಲ್ಲಿ ನೂರಕ್ಕೆ ೭೦ ರಷ್ಟು ಜನ ಸ್ತ್ರೀ ಕೆಲಸಗಾರರಾಗಿರುವುದೊಂದು ವಿಶೇಷಸಂಗತಿ.

ಕ್ರಾಂತಿಗೆ ಮುಂಚೆ ರಶಿಯಾದೇಶದಲ್ಲಿ ಕೆಲವು ಕಸಬು, ಕೈಗಾರಿಗೆಗಳಿದ್ದರೂ ಅವು ಬಹಳ ಹಿಂದುಳಿದಿದ್ದುವು.

**ಪ್ರಚಂಡ ಕಾರ್ಖಾನೆಗಳ ಸ್ಥಾಪನೆ**

ಯುರೋಪಿಯನ್ ರಾಷ್ಟ್ರದವರು ತಮಗೆ ಬೇಡವಾದ ಹಳೆಯದಾದ ಯಂತ್ರಸಾಮಗ್ರಿಗಳನ್ನು ರಶಿಯಾಕ್ಕೆ ರವಾನಿಸುತ್ತಿದ್ದರು. ರಶಿಯನ್ ಬಂಡವಾಳಗಾರರು ೧೨-೧೫ ಗಂಟೆಗಳ ಕಾಲ ಕೂಲಿಯಾಳುಗಳನ್ನು ದುಡಿಸಿ, ಆ ಯಂತ್ರಗಳಿಂದ ತಯಾರಾಗಬಹುದಾದ ಸಾಮಾನುಗಳನ್ನು ಮಾಡಿಸುವ ಪರಿಸ್ಥಿತಿ ಇತ್ತು. ಹದಿನಾರು ಕೋಟಿ ಜನರಿಗೆ ಅನ್ನವಸ್ತ್ರಗಳನ್ನೂ ಜೀವನೋಪಯೋಗದ ವಸ್ತುಗಳನ್ನೂ ಹೇಗೆ ಒದಗಿಸಬೇಕೆಂಬ ಪ್ರಶ್ನೆಯು ಈಗಿನ ಪ್ರಭುತ್ವದ ಮುಂದಿರುವುದರಿಂದ, ಅವರು ತಮ್ಮ ಕಾರ್ಯಕ್ರಮದಲ್ಲಿ ಔದ್ಯೋಗಿಕಪ್ರಗತಿಗೆ ಹೆಚ್ಚು ಗಮನಕೊಟ್ಟಿರುವರು. ರಶಿಯಾಕ್ಕೆ ಹೋಗಿ ಬಂದ ಪೌರ್ವಾತ್ಯಪ್ರವಾಸಿಗೆ ರಶಿಯದ ಈ ಕೈಗಾರಿಕೆಗಳ ಹುಚ್ಚು ರುಚಿಸದು. ಆದರೆ ಮುಂಚೆ ಬಡತನದಿಂದ ಬೆಂದು ಬಳಲಿದ ರಶಿಯದ ಪ್ರಜೆಗಳನ್ನು ಇಂದು ನೋಡಿದರೆ, ಸೊವಿಯೆಟ್ ಸರಕಾರದ ಈ ಕೈಗಾರಿಕೆಗಳ ಹುಚ್ಚಿನ ಗುಟ್ಟು ತಾನಾಗಿಯೆ ರಟ್ಟಾಗುವುದು. ಜನಗಳಿಗೆ ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ, ವಾಸಕ್ಕೆ ಬೆಚ್ಚಗಿರುವ ಮನೆ ಇವುಗಳು ಮೊದಲು ದೊರಕದ ಹೊರತು ಸಂಸ್ಕೃತಿ, ಸುಧಾರಣೆ, ಪ್ರಗತಿ ಮೊದಲಾದ ವೇದಾಂತದ ಹರಟೆಗಳನ್ನು ಹೊಡೆಯುವುದು ವ್ಯರ್ಥವೆಂದು ಅಲ್ಲಿಯ ಮುಂದಾಳುಗಳು ತಿಳಿದಿರುವರು. ರಶಿಯನ್ ವರ್ತಮಾನ ಪತ್ರಿಕೆಗಳಲ್ಲಿರುವ ಸುದ್ದಿಗಳನ್ನು ನೋಡಿದವರಿಗೆ, ಅಲ್ಲಿ ಮುಖ್ಯವಾಗಿ ಕೈಗಾರಿಕೆಯ ಪ್ರಗತಿಯ ಕಡೆಗೂ ರಾಜಕೀಯ ಪರಿಸ್ಥಿತಿಯ ಕಡೆಗೂ ಹೆಚ್ಚು ಗಮನ ಕೊಡುತ್ತಿರುವುದು ಕಂಡುಬರದಿರದು. ಔದ್ಯೋಗಿಕ ಕ್ಷೇತ್ರದಲ್ಲಿ ಪೂರ್ಣ ಸ್ವಾವಲಂಬಿಯಾಗಲು ರಶಿಯನ್‌ರಾಷ್ಟ್ರವು ನಿಶ್ಚಯಿಸಿ, ಆ ಧೋರಣೆಯಿಂದ ತನ್ನ ಐದುವರುಷಗಳ ಯೋಜನೆಯನ್ನು ಗೊತ್ತುಪಡಿಸಿತು. ವಸ್ತುನಿರ್ಮಾಣದ ಚಿಕ್ಕಪುಟ್ಟ ಯಂತ್ರಗಳನ್ನು ಪರದೇಶಗಳಿಂದ ತರಿಸುವುದಕ್ಕೆ ಬದಲಾಗಿ, ತಾನೇ ಅವುಗಳನ್ನು ನಿರ್ಮಾಣಮಾಡಿದರೆ ಔದ್ಯೋಗಿಕ ಪರಾವಲಂಬನವು ಇಲ್ಲದಂತಾಗುವದು ಎಂದು ಅಲ್ಲಿಯ ಮುಖಂಡರು ಕಂಡುಕೊಂಡರು. ಮೊದಲು ಮೊದಲು ಐದು ವರುಷಗಳಲ್ಲಿ ಅವರು ಯಂತ್ರೋತ್ಪಾದಕ ಕೈಗಾರಿಕೆಗಳನ್ನು ಸ್ಥಾಪಿಸುವ ಯೋಜನೆಯನ್ನು ಹೂಡಿ, ಅದರಲ್ಲಿ ಸಿದ್ಧಿಯನ್ನು ಹೊಂದಿದರು. ಆದರಿಂದ ಇಂದು ರಶಿಯಾದಲ್ಲಿ ದೊಡ್ಡ ದೊಡ್ಡ ಕಾರ್ಖಾನೆಗಳನ್ನು ನೋಡಬಹುದಾಗಿದೆ. ಹಸಿದವನಿಗೆ ಅನ್ನವನ್ನು ನೋಡಿದಕೂಡಲೆ ಆಸೆ ಹುಟ್ಟಿದಂತಾಗಿದೆ ರಶಿಯಾದ ಸ್ಥಿತಿ. ಔದ್ಯೋಗಿಕ ಕ್ಷೇತ್ರದಲ್ಲಿ ಇಂಗ್ಲಂಡ್ ಮತ್ತು ಜರ್ಮನಿ ದೇಶಗಳು ಹಿಂದುಳಿದಿವೆಯೆಂದು ರಶಿಯನರು ತಿಳಿದಿರುವರು. ಇನ್ನು ಉಳಿಯಿತು ಅಮೇರಿಕಾ; ಪ್ರತಿಯೊಂದು ಕ್ಷೇತ್ರದಲ್ಲಿಯೂ ತಮ್ಮ ಕಾರ್ಖಾನೆಗಳು ಅಮೇರಿಕೆಗಿಂತ ದೊಡ್ಡವಾಗಿರಬೇಕು—ಎಂಬುದೇ ರಶಿಯನ್ ಇಂಜನಿಯರುಗಳ ಮಹತ್ತ್ವಾಕಾಂಕ್ಷೆಯಾಗಿದೆ. ಆದ್ದರಿಂದ ಈ ಜನರು ಪ್ರೇಕ್ಷಕರೊಂದಿಗೆ ಮಾತಾಡುವಾಗೆಲ್ಲ "ಅಮೇರಿಕಾಕ್ಕಿಂತ ದೊಡ್ಡ" ಎಂಬ ಪದಗಳನ್ನು ಪ್ರಯೋಗಿಸುತ್ತಿರುವರು.

ದೊಡ್ಡದೊಡ್ಡ ಯಂತ್ರೋತ್ಪಾದಕ ಸಾಮುಗ್ರಿಗಳು ಈಗ ಅಲ್ಲಿ ನಿರ್ಮಾಣವಾಗಿರುವುದರಿಂದ ಇನ್ನು ಮುಂದೆ ಚಿಕ್ಕಪುಟ್ಟ ಯಂತ್ರಗಳೆಲ್ಲ ರಶಿಯಾದಲ್ಲಿ ತಯಾರಾಗಬಹುದು. ಮತ್ತೆ ಈ ಐದು ವರುಷಗಳ ಯೋಜನೆಯಂತೆ ಅನೇಕ ಕೈಗಾರಿಕೆಗಳೂ ಅಲ್ಲಿ ಬೆಳೆಯಬಹುದು. ಹತ್ತು ವರುಷಗಳ ಹಿಂದೆ ಔದ್ಯೋಗಿಕ ದೃಷ್ಟಿಯಿಂದ ಹಿಂದುಳಿದಿದ್ದ ಆ ದೇಶವು ಈಗ ತಾನೆ ಮೋಟಾರುಗಾಡಿ, ರೈಲುಗಳು, ರಬ್ಬರ್ ಟೈರುಗಳು, ವಿದ್ಯುದ್ದೀಪಗಳ ಗ್ಲೋಬುಗಳು, ರೇಡಿಯೊ ಯಂತ್ರ, ಚಿಕಿತ್ಸಾಲಯಗಳ ಮತ್ತು ಶಾಸ್ತ್ರೀಯ ಉಪಕರಣಗಳು ಇವುಗಳನ್ನು ತಯಾರುಮಾಡಲಾರಂಭಿಸಿದೆ! ನಾನು ಅಲ್ಲಿ ಅನೇಕ ಪ್ರಯೋಗಶಾಲೆಗಳನ್ನು ನೋಡಿ, ಅವುಗಳನ್ನು ನಡೆಯಿಸುವವರಿಗೆ 'ಇವುಗಳಲ್ಲಿ ಎಷ್ಟು ಸಾಮಾನುಗಳು ಪರದೇಶದುವು?' ಎಂದು ಪ್ರಶ್ನಿಸಿದ್ದಕ್ಕೆ, ಅನೇಕರು 'ನೂರಕ್ಕೆ ಒಂದು' ಎಂದು ಉತ್ತರವಿತ್ತರು.

CC-0. Jangamwadi Math Collection. Digitized by eGangotri

ರಶಿಯದ ಈ ಔದ್ಯೋಗಿಕ 'ಟೆಂಪೊ' (ವೇಗವು) ಪ್ರಚಂಡವೂ ಅಪರಿಹಾರ್ಯವೂ ಆಗಿದೆ. ಇಂದು ಅಲ್ಲಿ ಕಾರ್ಖಾನೆಗಳೆಲ್ಲ ದಿನಕ್ಕೆ ೨೪ ಗಂಟೆಗಳ ಕಾಲ ಕೆಲಸ ಮಾಡುತ್ತಿವೆ. 'ಹಾಗಾದರೆ ಅಲ್ಲಿ ಅಷ್ಟು ಔದ್ಯೋಗಿಕ ಪ್ರಗತಿಯು ಇರುವಾಗ, ಆ ದೇಶದಲ್ಲಿ ದಾರಿದ್ರ್ಯವೇಕಿರುವುದು?' ಎಂಬ ಪ್ರಶ್ನೆಯು ಸಹಜವಾಗಿ ಹುಟ್ಟುವುದು. ರಶಿಯವು ಮೊದಲು ತನ್ನ ಐದುವರುಷಗಳ ಯೋಜನೆಯನ್ನು ಗೊತ್ತುಪಡಿಸಿ ಕೊಂಡಾಗ, ಪಾಶ್ಚಾತ್ಯ ರಾಷ್ಟ್ರಗಳಿಂದ ಯಂತ್ರಸಾಮಗ್ರಿಗಳನ್ನು ತೆಗೆದುಕೊಂಡು, ಅದಕ್ಕೆ ಬದಲಾಗಿ ಅವರಿಗೆ ರಶಿಯದ ಮ್ಯಾಂಗನೀಜ್ ಮೊದಲಾದ ಖನಿಜವಸ್ತುಗಳನ್ನು ಮಾರಬೇಕೆಂಬ ವಿಚಾರವಿತ್ತು. ಆದರೆ ೧೯೨೯ನೆಯ ವರ್ಷದಿಂದ ಉಂಟಾದ ವ್ಯಾಪಾರಮಾಂದ್ಯ (ಡಿಪ್ರೆಶನ್)ದ ವಿಚಾರದ ಅಂದಾಜು ಅದಕ್ಕೆ ಮೊದಲು ಗೊತ್ತಾಗಲಿಲ್ಲ. ಆ ಮಾಂದ್ಯದ ದೆಸೆಯಿಂದ ರಶಿಯದ ಖನಿಜಸಂಪತ್ತಿಯನ್ನು ಕೇಳುವರಿಲ್ಲದಂತಾಯಿತು. ಮತ್ತೆ ರಶಿಯದವರು ತಮ್ಮ ಮುಂಚಿನ ಮಾತಿನ ಭರವಸೆಯನ್ನು ನೆಲೆಯಾಗಿಟ್ಟುಕೊಳ್ಳುವುದೂ ಅಗತ್ಯವಾಗಿತ್ತು. ಈ ಪರಿಸ್ಥಿತಿಯಲ್ಲಿ ಖನಿಜವಸ್ತುಗಳಿಗೆ ಬದಲಾಗಿ ಜೀವನಕ್ಕೆ ಅಗತ್ಯವಾದ ಗೋಧಿ,ಬೆಣ್ಣೆ, ಮೀನು, ಹಣ್ಣು, ಮಾಂಸ ಇವೇ ಮೊದಲಾದ ವಸ್ತುಗಳನ್ನು ಪರದೇಶಗಳಿಗೆ ಮಾರಿ, ತನ್ನ ಸಾಲತೀರಿಸುವ ಬಗೆಯೊಂದೇ ರಶಿಯಾಕ್ಕೆ ಉಳಿಯಿತು. ಇದನ್ನು ರಶಿಯವು ಸ್ವೀಕರಿಸಿತು. ಆದರ ದೆಸೆಯಿಂದ ದೇಶದಲ್ಲಿ ಉತ್ತಮವಾದ ಆಹಾರ ಪದಾರ್ಥಗಳು ಹುಟ್ಟುತ್ತಿದ್ದರೂ,ಆದು ಜನರಿಗೆ ಲಭಿಸದಂತಾಯಿತು.

**ಹಾಗಾದರೆ ಬಡತನವೇಕೆ?**

ರಶಿಯನರು ಹೊಟ್ಟೆ ಕಟ್ಟಿ ಕೆಲಸ ಮಾಡಬೇಕಾಗಿದೆ. ಆದರಿಂದ ರಶಿಯದ ದಾರಿದ್ರ್ಯದ ಚಿತ್ರವು ಪಾಶಾತ್ಯ ದೇಶಗಳ ಸಂಪನ್ನತೆಯ ದೃಷ್ಟಿಯಿಂದ ಭಯಂಕರವಾಗಿ ಕಾಣುತ್ತಿದೆ. ಔದ್ಯೋಗಿಕ ಪ್ರಗತಿಯ ಈ ಟೆಂಪೊ (ವೇಗ)ವನ್ನು ಕಡಿಮೆ ಮಾಡಿದರೆ, ಜನರ ದುಃಖಜನಕ ಸ್ಥಿತಿಯು ಹೆಚ್ಚದೆ, ಪ್ರಗತಿಯು ಸಾವಕಾಶವಾಗಿ ಆಗುವುದು. ಆದರೆ ಭೌತಿಕ ಸಾಮರ್ಥ್ಯದ ದೃಷ್ಟಿಯಿಂದ ಪಾಶಾತ್ಯರಾಷ್ಟ್ರಗಳ ಸ್ಥಾನಕ್ಕೆ ಶೀಘ್ರವಾಗಿ ತಾನು ಬರಬೇಕೆಂಬ ಮಹತ್ವಾಕಾಂಕ್ಷೆಯೂ ಸ್ವಲ್ಪ ಕಾಲ ಕಷ್ಟವನ್ನನುಭವಿಸಿದರೆ ಶೀಘ್ರವಾಗಿ ಮಾಲು ಉತ್ಪತ್ತಿಯಾಗಲಾರಂಭಿಸಿ ಮುಂದೆ ಎಲ್ಲರಿಗೂ ಅನ್ನ-ಬಟ್ಟೆಗಳು ದೊರೆಯುವುವೆಂಬ ಆಶೆಯೂ ಆ ದೇಶದವರ ಮನಸ್ಸಿನಲ್ಲಿರುವುದರಿಂದ ರಾಷ್ಟ್ರದ ಆ ಧೋರಣೆಯನ್ನರಿತಿರುವ ಜನರಿಗೆ ಕಷ್ಟಸಹನೆಯ ಧೈರ್ಯವೂ ಬಂದಿದೆ.

ಔದ್ಯೋಗಿಕ, ಭೌತಿಕ ಮತ್ತು ರಾಜಕೀಯ ಪ್ರಗತಿಯೊಂದಿಗೆ, ಸಮಾಜದ ಸಂಸ್ಕೃತಿಯ ಪ್ರಗತಿಗೂ ವಿಶೇಷ ಗಮನಸವಿತ್ತಿರುವುದು ಸೋವಿಯೆಟ್ ಸರಕಾರದ ಕಾರ್ಯಕ್ರಮದ ವೈಶಿಷ್ಟ್ಯವಾಗಿದೆ. ಕ್ರಾಂತಿಪೂರ್ವದ ರಶಿಯಾದಲ್ಲಿ ನೂರಕ್ಕೆ ೮೦ ಜನರು ನಿರಕ್ಷರರಾಗಿದ್ದರು. ಕಳೆದ ೧೫ ವರುಷಗಳ ಪ್ರಯತ್ನದಿಂದ ಈ ನಿರಕ್ಷರರ ಸಂಖ್ಯೆಯು ಸೇಕಡಾ ೨೦ಕ್ಕೆ ಇಳಿದಿದೆ. ಇದರಲ್ಲಿಯೂ ಅನೇಕರು ಮುದುಕರಾಗಿದ್ದಾಗ್ಗೂ ಅವರು ಕೂಡ ಪಾಠಶಾಲೆಗೆ ಹೋಗಬೇಕಾಗಿರುವುದು. ರಶಿಯದಲ್ಲಿ ನೂರಕ್ಕೆ ೫೦ ಜನರು ಯಾವುದಾದರೊಂದು ಬಗೆಯ ಶಾಲೆಗೆ ಹೋಗುತ್ತಿರುವರು. ಸೋವಿಯೆಟ್ ಸರಕಾರದ ಲೋಕಶಿಕ್ಷಣದ ಅರ್ಥವು ಕೇವಲ ಸಾಕ್ಷರತೆ ಎಂಬುದಕ್ಕಿಂತಲೂ ಹೆಚ್ಚು ವ್ಯಾಪಕವಾಗಿದೆ. ಸಾಹಿತ್ಯ, ಸಂಗೀತ ಮತ್ತು ಕಲೆಗಳಲ್ಲಿ ಅಭಿರುಚಿಯುಂಟಾಗಬೇಕೆಂಬುದಕ್ಕಾಗಿ, ಸರಕಾರದವರು ಅನೇಕ ಪ್ರಯತ್ನಗಳನ್ನು ನಡೆಯಿಸಿದ್ದಾರೆ. ಅವುಗಳಲ್ಲಿ ಸಂಸ್ಕೃತಿಮಂದಿರ (Palce of Culture) ಸ್ಥಾಪನೆಯು ಮಹತ್ತ್ವದ ಮಾರ್ಗವಾಗಿದೆ. ಈ ಸಂಸ್ಥೆಯ ಕಲ್ಪನೆಯು ಚೆನ್ನಾಗಿ ಮನಸ್ಸಿಗೆ ನಾಟುವಂತಿದೆ. ಸಾಯಂಕಾಲದಲ್ಲಿ ಕೆಲಸಗಾರರು ಮನೋರಂಜನೆಗಾಗಿಯೂ ಶಿಕ್ಷಣಕ್ಕಾಗಿಯೂ ಅಲ್ಲಿಗೆ ಹೋಗುವರು. ಅಲ್ಲಿ ಓದುವುದಕ್ಕೆ ಗ್ರಂಥಸಂಗ್ರಹ, ವಾದವಿವಾದಗಳ ಸಭೆ, ವ್ಯಾಯಾಮಕ್ಕಾಗಿ ಎಲ್ಲ ಬಗೆಯ ಉಪಕರಣಗಳು, ಸಿನೆಮಾ ಥಿಯೆಟರುಗಳು, ನಾಟ್ಯಗೃಹಗಳು, ಇವೇ ಮೊದಲಾಗಿ ಎಲ್ಲ ಬಗೆಯ ಸಂಸ್ಕೃತಿಸಂವರ್ಧನಪರವಾದ ಸಂಸ್ಥೆಗಳು ಒಂದೇ ಕಟ್ಟಡದಲ್ಲಿ ಇರುವುವು. ಚಿಕ್ಕಮಕ್ಕಳ ಪಾಲನೆಯಲ್ಲಿ ತಾಯಂದಿರಿಗೆ ಈ ಸಂಸ್ಕೃತಿಶಿಕ್ಷಣ ದೊರೆವಂತೆ ಅವರಿಗಾಗಿ ಹೆಚ್ಚಿನ ಅನುಕೂಲತೆಗಳನ್ನು ಕಲ್ಪಿಸಲಾಗಿದೆ. ಪ್ರತಿಯೊಂದು ಸಂಸ್ಕೃತಿಮಂದಿರದಲ್ಲಿಯ ಒಂದು 'ಕಿಂಡರ್ ಗಾರ್ಟನ್' (ಬಾಲೋದ್ಯಾನ)ದ ತರಗತಿಯು, ತಜ್ಞಳಾದ ಶಿಕ್ಷಕಳೊಬ್ಬಳ ಮೇಲ್ವಿಚಾರಣೆಯಲ್ಲಿರುವುದು. ಅಲ್ಲಿ ಚಿಕ್ಕಮಕ್ಕಳನ್ನು ೨-೩ ಗಂಟೆಗಳ ಕಾಲ ಇಡಬೇಕು. ಆದೇ ಸಮಯದಲ್ಲಿ ಸ್ವಂತ ಶಿಕ್ಷಣ ಅಥವಾ ಮನೋರಂಜನೆಗಾಗಿ ತಾಯಂದಿರೂ ಅಲ್ಲಿರುವಂತೆ ಸೌಕರ್ಯಗಳನ್ನು ಕಲ್ಪಿಸಿರುವರು. ಸೋವಿಯೆಟ್ ಸರಕಾರದ ಕಾರ್ಯಕ್ರಮ

**ಸಂಸ್ಕೃತಿಪ್ರಸಾರದ ಆರಂಭ**

CC-0. Jangamwadi Math Collection. Digitized by eGangotri

ವಿವೇಚನೆ ಮಾಡಬೇಕಾದರೆ, ಬೇರೊಂದು ಪುಸ್ತಕವನ್ನೆ ಬರೆಯಬೇಕಾಗುವುದು. ಆ ಕಾರ್ಯಕ್ರಮವು ಅಷ್ಟು ವ್ಯಾಪಕವಾಗಿದೆ. ಶಿಕ್ಷಣಕ್ಕೆ ಅಂತಹ ತಳಹದಿಯನ್ನು ಇಂದಿನ ವರೆಗೆ ಯಾವ ಸಮಾಜವೂ ಹಾಕಿಲ್ಲ.

ಮೇಲೆ ಹೇಳಿದ ಎಲ್ಲ ವಿಧಾಯಕ ಕಾರ್ಯಕ್ರಮಗಳನ್ನು ನಡೆಯಿಸುತ್ತಿರುವಾಗಲೆ, ಸೊವಿಯೆಟ್ ಸರಕಾರವು ತನ್ನ ಸತ್ತಾತ್ಮಕ ಅಸ್ತಿತ್ವವನ್ನೂ ನೆಲೆಯಾಗಿಡುವ ದೃಷ್ಟಿಯಿಂದಲೂ, ಯಾವಾಗಲೂ ಜಾಗರೂಕತೆಯನ್ನು ವಹಿಸಬೇಕಾಗಿದೆ. ಕ್ರಾಂತಿಯಾದಂದಿನಿಂದ ಇಂದಿನ ವರೆಗೆ ತನ್ನ ಸಾಮರ್ಥ್ಯದ ವರ್ಚಸ್ಸಿನಿಂದ ಸರಕಾರವು ಎಲ್ಲ ಸತ್ತೆಯನ್ನು ತನ್ನ ಕೈಯಲ್ಲಿಟ್ಟುಕೊಂಡಿದೆ. ಈ ರಾಜ್ಯಪದ್ಧತಿಯು ನೆಲೆಯಾಗಿರಬೇಕಾದರೆ ಕ್ರಾಂತಿಗೆ ಮೂಲವಾದ ತತ್ತ್ವಗಳ ಶಿಕ್ಷಣವನ್ನು ಜನರಿಗೆ ಕೊಡಬೇಕು ಎಂಬ ಅರಿವೂ ಆ ಸರಕಾರಕ್ಕಿದೆ. ಚಿಕ್ಕವರಿಂದ ಮೊದಲ್ಗೊಂಡು ವೃದ್ಧರ ವರೆಗೆ, ಅಶಿಕ್ಷಿತರಿಂದ ಮೊದಲ್ಗೊಂಡು ಸುಶಿಕ್ಷಿತರ ವರೆಗೆ ಎಲ್ಲರಿಗೂ ಈ ರಾಜಕೀಯ ಶಿಕ್ಷಣವನ್ನು, ಸರಕಾರದ ಅಧೀನದಲ್ಲಿರುವ ಎಲ್ಲ ಬಗೆಯ ಸಾಧನಗಳ ಮೂಲಕ ಕೊಡಲಾಗುತ್ತಿದೆ. ಶಿಕ್ಷಣಸಂಸ್ಥೆ, ರೇಡಿಯೋ, ವರ್ತಮಾನ ಪತ್ರಿಕೆ, ಮೊದಲಾದುವುಗಳು ತಮ್ಮ ಕಾರ್ಯದೊಂದಿಗೆ ರಾಜಕೀಯ ತತ್ತ್ವಪ್ರಸಾರ ಕಾರ್ಯವನ್ನೂ—ಸರಕಾರದ ನಿಯಂತ್ರಣದಲ್ಲಿ—ಮಾಡುತ್ತಿವೆ. ಎಂದರೆ ಸತ್ತಾಸಂರಕ್ಷಣೆಯ ಇತರ ಒಳ್ಳೆಯ ಕೆಟ್ಟ ರಾಜಮಾನ್ಯ ಸಾಧನಗಳನ್ನು ಇತರ ದೇಶಗಳಂತೆ ಇಲ್ಲಿಯೂ ಧಾರಾಳವಾಗಿ ಉಪಯೋಗಿಸುತ್ತಿರುವರು!

ರಾಜ್ಯಸಂಸ್ಥೆಗಳ ಸಂರಕ್ಷಣೆ

ಮುಖ್ಯವಾಗಿ ರಶಿಯಾದಲ್ಲಿ ಎಲ್ಲಿ ಹೋದರೂ ಮೇಲೆ ಮೇಲೆ ಕಾಣುವ ವ್ಯವಹಾರ-ವೈವಿಧ್ಯದ ಮೂಲದಲ್ಲಿ ಕೆಲವು ಸಾಮಾನ್ಯ ತತ್ತ್ವಗಳಿವೆಯೆ ಎಂದು ಹೇಳಬಹುದು. ಪ್ರಜೆಗಳ ಭೌತಿಕಜೀವನದ ಸುಧಾರಣೆಯನ್ನು ಮಾಡುವುದಕ್ಕಾಗಿ ಔದ್ಯೋಗಿಕ ಸಂಘಟನೆಯನ್ನು ಮಾಡುವುದು, ಭೌತಿಕ ಪ್ರಗತಿಯೊಂದಿಗೆ ಸಂಸ್ಕೃತಿ ವಿಕಾಸದ ಸೌಕರ್ಯಗಳನ್ನು ಒದಗಿಸುವುದು, ಮತ್ತೆ ಈ ಎಲ್ಲ ವಿಚಾರಗಳಿಗೆ ಸಾಧ್ಯವೂ ಅನುಕೂಲವೂ ಆದಂತಹ ಸತ್ತೆಯನ್ನು ನೆಲೆಗೊಳಿಸುವುದು — ಎಂಬ ಆದ್ಯತತ್ತ್ವಗಳನ್ನವಲಂಬಿಸಿ ಸೊವಿಯೆಟ್ ಸರಕಾರದ ಕಾರ್ಯಕ್ರಮಗಳನ್ನು ರಚಿಸಲಾಗಿದೆ.

## ೧೩—ಸಮಾಜ, ಸಂಸ್ಥೆಗಳ ಪ್ರತ್ಯಕ್ಷ ಪರಿಚಯ

ಮರಾಠಿಯಲ್ಲಿರುವ 'ಸ್ತ್ರೀಯರ ದಂಗೆ', ಮತ್ತು 'ಸ್ತ್ರೀ-ಸಾಮ್ರಾಜ್ಯ' ಎಂಬ ನಾಟಕಗಳನ್ನು ನೋಡಿದ ಪ್ರೇಕ್ಷಕರು, ರಂಗಭೂಮಿಯ ಮೇಲಣ ದೃಶ್ಯಗಳು ಪ್ರತ್ಯಕ್ಷವಾಗಿ ಸಮಾಜದಲ್ಲಿ ನೋಡಲು ಸಿಕ್ಕುವುದೆಂದು ಸ್ವಪ್ನದಲ್ಲಿಯೂ ಭಾವಿಸಲಾರರು. ಕವಿಯ ಕಲ್ಪನಾಸೃಷ್ಟಿಯ ಆ ದೃಶ್ಯಗಳನ್ನು ಇಂದು ಒಂದು ದೇಶದಲ್ಲಿ ನೋಡಬಹುದಾಗಿದೆ. ರಶಿಯಾದಲ್ಲಿ ಸ್ತ್ರೀಯರ ಸಾಂಪ್ರದಾಯಿಕ ಜೀವನದಲ್ಲಿ ಒಂದು ಕ್ರಾಂತಿಯುಂಟಾಗಿದೆ. ಆದರೆ ಆ ಸ್ತ್ರೀಯರ ಕ್ರಾಂತಿಯಲ್ಲಿ ಸ್ತ್ರೀಯರು ಭಾಗವಹಿಸದೆ, ಪುರುಷರೇ ಆ ಕ್ರಾಂತಿಯನ್ನು ಮಾಡಿದ್ದಾರೆ! ಇದುವರೆಗೆ ಜಗತ್ತಿನಲ್ಲಾದ ಕ್ರಾಂತಿಗಳೆಲ್ಲ ಕೇವಲ ರಾಜಕೀಯ ಸ್ವರೂಪವುಳ್ಳುವೂ ತಾತ್ಕಾಲಿಕವಾದುವೂ ಆಗಿ ಪ್ರಭುತ್ವದ ಮಾರ್ಪಾಟಾದ ಕೂಡಲೆ ನಿಂತುಹೋಗುವಂತಹವಾದ್ದುವು. ರಶಿಯಾದಲ್ಲಿ ಆದ ಕ್ರಾಂತಿಯು ಕೇವಲ ರಾಜಕೀಯವಾಗಿರದೆ ಸಾಮಾಜಿಕವೂ ಸಾಂಸ್ಕೃತಿಕವೂ ಆಗಿದೆ. ಅದು ಇನ್ನೂ ಪೂರ್ಣವಾಗದೆ, ಇದೀಗ ಪ್ರಾರಂಭವಾಗಿದೆ. ಆದರ ದೆಸೆಯಿಂದ ರಶಿಯಾದಲ್ಲಿ ತಿರುಗುವ ಪ್ರೇಕ್ಷಕನಿಗೆ ನಿತ್ಯವೂ ಕಾಣುವ ಸಮಾಜದಿಂದ ಪ್ರತ್ಯೇಕವಾದ ವಿಶಿಷ್ಟಗುಣಯುಕ್ತವಾದ ಬೇರೆ ಸಮಾಜವು ಕಾಣುವುದು.

ಸ್ತ್ರೀಯರಲ್ಲಿ ಕ್ರಾಂತಿ

ನಾನು ಈ ವರೆಗೆ ಫ್ರೆಂಚ್, ಬ್ರಿಟಿಶ್, ಅಮೇರಿಕನ್, ಇಟಲಿಯನ್ ಮತ್ತು ರಶಿಯನ್ ಹಡಗುಗಳಲ್ಲಿ ಪ್ರಯಾಣ ಮಾಡಿರುವೆನು. ಆದರೆ ರಶಿಯನ್ ಹಡಗಿನ ಮೇಲೆ ಕಂಡುಬಂದ ದೃಶ್ಯವು ಬೇರೆ ಹಡಗುಗಳಲ್ಲಿ ಕಂಡುಬರಲಿಲ್ಲ. ನಾನು ಕುಳಿತಿದ್ದ ಹಡಗು ಆಗ ತಾನೆ ಹೊರಟಿತು. ಎಂದಿನಂತೆ ಕಲಾಸಿಗಳು ಬಂದು ಹಗ್ಗಗಳನ್ನು ಮೇಲಕ್ಕೆಳೆಯಲಾರಂಭಿಸಿದರು. ಅದೇ ಸಮಯದಲ್ಲಿ ೨೫ ವಯಸ್ಸಿನ ರಶಿಯನ್ ಸ್ತ್ರೀಯೊಬ್ಬಳು ಬಂದು, ಹಗ್ಗಗಳನ್ನೆಳೆದು ಹಡಗಿನ ಮೇಲಿದ್ದ ರೇಡಿಯೋ ತಂತಿಗಳನ್ನು ಅಣಿಗೊಳಿಸಲಾರಂಭಿಸಿದಳು. ಆ ಸ್ತ್ರೀಗೆ ರೇಡಿಯೋದ ಖಾತೆಯನ್ನು ವಹಿಸಿಕೊಟ್ಟಿದ್ದರು. ಆಕೆ ಆ ಸೂಕ್ಷ್ಮಯಂತ್ರವನ್ನು ನಡೆಯಿಸುವ ಮೊದಲ್ಗೊಂಡು, ಹಡಗಿನ ಭಾರವಾದ ಹಗ್ಗಗಳನ್ನೆಳೆಯುವವರೆಗೆ ಎಲ್ಲ ಕೆಲಸಗಳನ್ನೂ ಮಾಡುತ್ತಿದ್ದಳು. ಲೆನಿನ್‌ಗ್ರಾಡಿನಲ್ಲಿ ನಮ್ಮ

ಪುರುಷರ ಕಾರ್ಯಕ್ಷೇತ್ರದಲ್ಲಿ ಸ್ತ್ರೀಯರು ಹೆಜ್ಜೆ ಇಟ್ಟರು!

CC-0. Jangamwadi Math Collection. Digitized by eGangotri

ಮೋಟಾರು ಪ್ರವೇಶಿಸುತ್ತಿರುವಾಗ, ಊರ ಬಾಗಿಲಿನಲ್ಲಿ ಪೋಲಿಸಿನವನು 'ಪಾಸಿ'ಗಾಗಿ ನಮ್ಮ ಮೋಟಾರನ್ನು ನಿಲ್ಲಿಸಿದನು. ಹಳದಿಬಣ್ಣದ ಗುಂಡಿಗಳುಳ್ಳ ದೊಡ್ಡ ನಿಲುವಂಗಿಯನ್ನು ತೊಟ್ಟಿದ್ದ ಒಬ್ಬ ಹೆಂಗುಸು ಅಲ್ಲಿ ಕೆಲಸ-ಮಾಡುತ್ತಿದ್ದಳೆಂದು ಅನಂತರ ತಿಳಿಯಿತು. ಮಾಸ್ಕೊ-ನಗರಕ್ಕೆ ಹೋಗುವುದಕ್ಕಾಗಿ ರೈಲಿನಲ್ಲಿ ಕುಳಿತೆನು: ಕಪ್ಪು 'ಯೂನಿಫಾರ್ಮ್' ಧರಿಸಿ ಕೈಯಲ್ಲಿ ಕೆಂಪು,ಹಸುರು ದೀಪದ ಲಾಂದ್ರ (ಕಂದೀಲು) ಹಿಡಿದುಕೊಂಡ ವ್ಯಕ್ತಿಯು 'ಸಿಗ್ನಲ್' ಕೊಟ್ಟ ಕೂಡಲೆ ಗಾಡಿಯು ಹೊರಟಿತು. ಪುರುಷರಂತಹ ಅಂಗಿಯನ್ನು ತೊಟ್ಟ ಆ ವ್ಯಕ್ತಿಯ ಕಾಲಕಡೆಗೆ ನೋಡಿದಾಗ, ಆ ವ್ಯಕ್ತಿಯು ಹೆಂಗಸರ ' ಲಂಗಾ ' ಧರಿಸಿದ್ದುದು ಕಂಡು ಬಂದಿತು ! ಸ್ತ್ರೀಶಿಕ್ಷಣದ ದೃಷ್ಟಿಯಿಂದ ಮುಂದುವರಿದ ದೇಶಗಳಲ್ಲಿ ಕೂಡ, ಸ್ತ್ರೀಯರು ಈ ವರೆಗೆ ಸ್ವೀಕರಿಸಲಾಗದ ಈ ಭೂಮಿಕೆಯನ್ನು ಕೇವಲ ೧೫ ವರುಷಗಳಲ್ಲಿ ರಶಿಯನ್ ಸ್ತ್ರೀಯರು ಕೈಕೊಂಡಿರುವರು. ಇಲ್ಲಿ ವ್ಯವಹಾರಜಗತ್ತಿನಲ್ಲಿ- 'ಇಂತಹ ಕ್ಷೇತ್ರವು ಪುರುಷರದು ' ಎಂಬ ಭೇದವಿಲ್ಲದಂತಾಗಿದೆ. ಕಮ್ಮಾರನ ಕಬ್ಬಿಣದ ಭಟ್ಟಿಯ ಬಳಿ ನಿಂತು, ಭಾರವಾದ ಸುತ್ತಿಗೆಯಿಂದ ಕಬ್ಬಿಣವನ್ನು ಬಡಿಯುವುದು ಪುರುಷರ ಕೆಲಸ. ' ಶಾರೀರಿಕ ಕಷ್ಟದ ಈ ಕ್ಷೇತ್ರದಲ್ಲಿಯಾದರೂ ಸ್ತ್ರೀಯರು ಪ್ರವೇಶಿಸಲಾರರು ' ಎಂದು ನಾನು ತಿಳಿದಿದ್ದೆನು. ಆದರೆ ನನ್ನ ತಿಳಿವಳಿಕೆ ತಪ್ಪಾಯಿತು. ಮಾಸ್ಕೋ ನಗರದಲ್ಲಿ ಮೋಟಾರ್ ಕಾರ್ಖಾನೆಗೆ ಜೋಡಿಯಾಗಿ ಒಂದು ಉದ್ಯೋಗಶಿಕ್ಷಣದ ಕಾಲೇಜ್ ಇರುವುದು. ಅದರ ವರ್ಕ್‌ಶಾಪಿನಲ್ಲಿ ೭-೮ ಮಂದಿ ವಿದ್ಯಾರ್ಥಿಗಳು ಕಮ್ಮಾರನ ಕೆಲಸ ಮಾಡುತ್ತಿದ್ದರು. ಅವರಲ್ಲಿ ಮೂವರು ವಿದ್ಯಾರ್ಥಿನಿಯರೂ ಇದ್ದರು. ಭಟ್ಟಿಯೊಳಗಿಂದ ಕಾದ ಕಬ್ಬಿಣವನ್ನು ತೆಗೆದು, ಭಾರವಾದ ಸುತ್ತಿಗೆಯಿಂದ ಅದನ್ನು ಬಡಿಯುವ ಕೆಲಸವನ್ನೂ ಅವರೇ ಮಾಡುತ್ತಿದ್ದರು. ಉಳಿದ ಯಂತ್ರಗಳ—ಕಲಾಕುಸುರುಗಳ ಕೆಲಸಗಳನ್ನೂ ವಿದ್ಯಾರ್ಥಿನಿಯರೇ ಮಾಡುತ್ತಿದ್ದರೆಂದು ಬೇರೆಯಾಗಿ ಹೇಳಬೇಕಾಗಿಲ್ಲ. ಟ್ರಾಮುಗಳಲ್ಲಿ ಕಂಡಕ್ಟರ್, ಟಿಕೇಟು ಮಾರುವುದು, ರಸ್ತೆಯ ಮೇಲೆ ಚಳಿಯಲ್ಲಿ, ಮಳೆಯಲ್ಲಿ ನಿಂತು ' ರೋಲರ್ 'ಗಳನ್ನು ಉರುಳಿಸುವುದು ಇವೇ ಮೊದಲಾದ ಕಷ್ಟತರವಾದ ಕೆಲಸಗಳನ್ನೂ ಸ್ತ್ರೀಯರೇ ಮಾಡುತ್ತಿರುವರು. ಶಿಕ್ಷಣಸಂಸ್ಥೆ, ನ್ಯಾಯಸಭೆ, ಹಾಸ್ಪಿಟಲ್ಸ್ ಮೊದಲಾದೆಡೆಗಳಲ್ಲಿಯೂ ಸ್ತ್ರೀ ಕೆಲಸಗಾರರ ಸಂಖ್ಯೆಯು ಅಧಿಕವಾಗಿಯೆ ಇದೆ. ಸಮಾಜದ ಆರ್ಥಿಕಜೀವನದಲ್ಲಿ ಸ್ತ್ರೀಯರ ಕ್ಷೇತ್ರವು ಅಡಿಗೆಮನೆ ತೊಟ್ಟಿಲು, ಬಾಚಣಿಗೆ, ಕನ್ನಡಿಗಳೆಂದು ಇದುವರೆಗೆ ಮರ್ಯಾದಿತವಾಗಿತ್ತು. ರಶಿಯಾದಲ್ಲಿ ಪುರುಷರ ಕೆಲಸಗಳನ್ನೆಲ್ಲ ಮಾಡುವ ಸಮಾನವಾದ ಹಕ್ಕು ಸ್ತ್ರೀಯರಿಗೆ ದೊರೆತಿರುವುದು

**ಭಾಗ್ಯವಂತ ಮಾತೆಯರು**

ಸ್ತ್ರೀಯರ ಆರೋಗ್ಯದ ಮತ್ತು ಅವರ ಮನೋವಿಕಾಸದ ವಿಚಾರವಾಗಿ ರಶಿಯಾದಲ್ಲಿ ವಿಶೇಷಜಾಗರೂಕತೆಯನ್ನು ಅತ್ಯಂತ ದಕ್ಷತೆಯಿಂದ ವಹಿಸಲಾಗಿದೆ. ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಸ್ತ್ರೀಯರಿಗೆ ಬಾಣಂತಿತನಕ್ಕೆ ಮುಂಚೆ ಮತ್ತು ಅನಂತರ ಎರಡೆರಡು ತಿಂಗಳು ಸಂಬಳಸಹಿತವಾದ ರಜೆಯನ್ನು ಕೊಡುವರು. ಸಾರ್ವಜನಿಕ ಚಿಕಿತ್ಸಾಲಯಗಳಲ್ಲಿ ಅವರಿಗೆ ಸರಿಯಾದ ಸಲಹೆ ಮತ್ತು ಆಧುನಿಕ ಸಾಧನ ಸಮೇತವಾದ ಔಷಧೋಪಚಾರಗಳ ಅನುಕೂಲತೆಗಳನ್ನು ಮಾಡಿಕೊಡುವರು. ಅನಂತರ ಅವರು ಕೆಲಸಕ್ಕೆ ಹಾಜರಾದಾಗ ಅವರಿಗೆ (ಬಾಣಂತಿಯರಿಗೆ) ಎರಡೆರಡು ಗಂಟೆಗಳಿಗೊಮ್ಮೆ ವಿರಾಮವನ್ನೂ ಕೊಡಲಾಗುವುದು. ಆ ಸಮಯದಲ್ಲಿ ಅವರು ತಮ್ಮ ಮಕ್ಕಳನ್ನು ಪಾಲಿಸಬೇಕು. ಕಾರ್ಖಾನೆಗೆ ಸಂಬಂಧಿಸಿಯೆ ಒಂದೊಂದು ಶಿಶುಮಂದಿರವಿರುವುದು. ಅಲ್ಲಿ ೭-೮ ಗಂಟೆಗಳ ಕಾಲ ಮಕ್ಕಳನ್ನಿಟ್ಟಿರುವರು. ಅಲ್ಲಿಯ ತಜ್ಞರಾದ ದಾದಿಯರೂ ಮಕ್ಕಳ ಆರೋಗ್ಯದ ಮತ್ತು ಶಿಕ್ಷಣದ ಕಾರ್ಯವನ್ನು ಮಾಡುವರು. ರಶಿಯನ್ ಕ್ರಾಂತಿಗೆ ಮುಂಚೆ ಸ್ತ್ರೀಯರಿಗೆ ಈ ಸೌಖ್ಯವಿರಲಿಲ್ಲ. ಗರ್ಭಿಣಿಯರನ್ನು ಕಾರ್ಖಾನೆಯವರು ಕೆಲಸದಿಂದೋಡಿಸಿಬಿಡುತ್ತಿದ್ದರು. ಅವರು ಮನೆಗೆ ಬಂದರೆ ಅಲ್ಲಿ ಮದ್ಯಪಾನ ಮಾಡಿಬಂದ ಗಂಡನು ಅವರನ್ನು ಚಬುಕಿಯಿಂದ ಹೊಡೆವುದು ಆಗಿನ ಪದ್ಧತಿಯಾಗಿಬಿಟ್ಟದ್ದಿತು.

**ವಿವಾಹಸಂಸ್ಥೆಯ ಸರಳತೆ**

ಹದಿಮೂರು ನಿಮಿಷ (ಮಿನಿಟು)ಗಳಲ್ಲಿ ಲಗ್ನವಿಧಿಯು ಮುಗಿಯುವುದನ್ನು ಯಾರಾದರೂ ಕಣ್ಣಿನಿಂದ ನೋಡಿದ್ದರೆ, ಅದನ್ನು ಇತರರೂ ನಂಬಬಹುದು. ರಶಿಯಾದಲ್ಲಿ ವಿವಾಹ ವಿಚ್ಛೇದನಗಳನ್ನು ' ರಿಜಿಸ್ಟರ್ ' ಮಾಡುವ ಸಂಸ್ಥೆಗಳಿಗೆ ( Zags ) ಎನ್ನುವರು. ನಾನು ಅಲ್ಲಿ ಈ ಸಂಸ್ಥೆಯನ್ನು ನೋಡಿ ಹೊರಬೀಳುವಾಗ, ೧೯-೨೦ ವಯಸ್ಸಿನ ಒಂದು ಜೋಡಿಯು ಲಗ್ನಕ್ಕಾಗಿ ಅಲ್ಲಿಗೆ ಬಂದಿತು. ಆಗ ೧೧ ಗಂಟೆ ೨೦ ನಿಮಿಷ

CC-0. Jangamwadi Math Collection. Digitized by eGangotri

ಆಗಿತ್ತು. 'ರಿಜಿಸ್ಟ್ರಾರ್' ಅಧಿಕಾರಿಣಿಯು ಅವರಿಬ್ಬರ ಕಾಗದಪತ್ರಗಳನ್ನು ನೋಡಿಕೊಂಡು, ಮೂರು 'ರೂಬಲ್' 'ಫೀ' ತೆಗೆದುಕೊಂಡು, ಅವರಿಗೆ ಒಂದು ರಸೀದಿ (ಪಾವತಿ) ಕೊಟ್ಟಳು. ಆಗ ಒಂದೂ ಕಾಲು ಗಂಟೆಯಾಗಿತ್ತು. ಆ ವ್ಯಕ್ತಿಗಳಿಬ್ಬರೂ ವಿವಾಹಿತರಾಗಿ ಆಫೀಸಿನಿಂದ ಹೊರ ಬಿದ್ದರು! ರಶಿಯಾದ ವಿವಾಹಪದ್ಧತಿಯು ನಿಯಂತ್ರಣ-ವಿಲ್ಲದ್ದೆಂಬ ತಿಳಿವಳಿಕೆಯು ತಪ್ಪು. ವಿವಾಹವಿಚಾರದಲ್ಲಿ ಅವರ ಕಾಯಿದೇಕಾನೂನು-ನಿಯಮಗಳು ಅಲ್ಪವಾಗಿಯೂ ಸರಳವಾಗಿಯೂ ಇವೆ. ಮತ್ತೆ ಆನುಷಂಗಿಕ ಸಮಾರಂಭ, ವೆಚ್ಚ, ಇವೇ ಮೊದಲಾದುವುಗಳಿಗೆ ಅದರಲ್ಲಿ ಅವಕಾಶವೇ ಇಲ್ಲ. ಅಲ್ಲಿ ಸ್ತ್ರೀ-ಪುರುಷರಿಬ್ಬರೂ ನಿರೋಗಿಗಳಾಗಿರುವರೆಂದು ವೈದ್ಯಕೀಯ ದಾಖಲೆಯು ದೊರೆಯುವವರೆಗೆ ವಿವಾಹಕ್ಕೆ ಅವಕಾಶವು ದೊರೆಯದು. ಈ ಕಾನೂನು (ಕಾಯಿದೆ) ಭಂಗಮಾಡಿ, ಸಂಸರ್ಗಜನ್ಯರೋಗವನ್ನು ಇತರ ವ್ಯಕ್ತಿಗಳಿಗೆ ಬೀರುವ ಅಪರಾಧಿಗೆ ೧೦೦೦ ರೂಬಲ್ ದಂಡವೂ ಮೂರು ವರುಷಗಳ ಕಾರಾಗೃಹವಾಸವೂ ಪ್ರಾಪ್ತವಾಗುವುದು. ಭ್ರಮಿಷ್ಟರು, ಪೂರ್ವವಿವಾಹಿತರು ಮತ್ತು ವಿಶೇಷ ಸಮೀಪಬಂಧುಗಳು ಇವರಲ್ಲಿ ವಿವಾಹವಾಗಲು ಅವಕಾಶ ವಿಲ್ಲ. ವಿವಾಹಿತರಾಗದೆ ಒಂದೆಡೆಯಲ್ಲಿ ದಾಂಪತ್ಯಜೀವನವನ್ನು ನಡೆಯಿಸುವ ವ್ಯಕ್ತಿಗಳು, ಕಾನೂನು ಪ್ರಕಾರ ವಿವಾಹಿತರಾದ-ವರೆಂದೇ ಗಣಿಸಲ್ಪಡುವರು; ಅವರು ಎಲ್ಲ ಕಾನೂನಿನ ಎಲ್ಲ ನಿರ್ಬಂಧಗಳಿಗೂ ಒಳಗಾಗಿರುವರು. ವಿವಾಹವಿಚ್ಛೇದ-ನಕ್ಕೂ ಮೂರು ರೂಬಲ್ 'ಫೀ' ಕೊಡಬೇಕು. ಪತಿ-ಪತ್ನಿಯರಲ್ಲಾರಾದರೊಬ್ಬರು ಹಿಂದೆ ಹೇಳಿದ ಕಚೇರಿಗೆ ಹೋಗಿ, ಕೂಡಲೆ ವಿವಾಹವಿಚ್ಛೇದನ ಮಾಡಿಕೊಳ್ಳಬಹುದು. ಆ ಕಚೇರಿಯ ಹೊರಭಾಗದಲ್ಲಿ ವೈವಾಹಿಕಶಿಕ್ಷಣ ವಿಷಯದ ಮಾಹಿತಿಯ ಪಟ್ಟಿಯನ್ನು ಹಚ್ಚಿರುವರು. ವೈವಾಹಿಕಬ್ರಹ್ಮಚರ್ಯದ ನಿಯಮ, ಶಿಶುಸಂಗೋಪನ ಮತ್ತು ಸುಸಂಸ್ಕೃತ ಕುಟುಂಬಜೀವನಕ್ರಮ ಮೊದಲಾದ ವಿಷಯಗಳ ಮಾಹಿತಿಯೂ ಆ ಸ್ಥಳದಲ್ಲಿ ದೊರೆವುದು. ವಿವಾಹ ಮತ್ತು ದಾಂಪತ್ಯಸಂಸ್ಥೆಯನ್ನು ರಶಿಯಾ ದೇಶವು ಒಂದು ಉದ್ದೇಶದಿಂದ ಸುಲಭವೂ ಸರಳವೂ ಆಗಿರುವಂತೆ ಮಾಡಿರುವುದು. ಅದರಿಂದ ವೈಷಯಿಕವೃತ್ತಿಗೆ ಉತ್ತೇಜನ ಕೊಡಬೇಕೆಂದಿಲ್ಲ. ಸ್ತ್ರೀ-ಪುರುಷರಿಗೆ ಪರಸ್ಪರ ಸಂಬಂಧದ ಹೊಣೆಗಾರಿಕೆ ತಿಳಿಯಬೇಕು ಮತ್ತು ಗೃಹಜೀವನವು ಸುಖಮಯವಾಗಬೇಕು-ಎಂಬುದೆ ಅದರ ಉದ್ದೇಶ. ಆ ದೇಶದಲ್ಲಿ ದಾಂಪತ್ಯವಿಚ್ಛೇದನದ ಪ್ರಮಾಣವು ಈಗ ನೂರಕ್ಕೆ ೫೦ರಷ್ಟು ಇದೆ.

**ಶಾಲೆಗೆ ಹೋಗುವ ಸಮಾಜ**

ಸಂಜೆಯ ಹೊತ್ತು ರಶಿಯಾದ ಪಟ್ಟಣಗಳ ಬೀದಿಗಳಲ್ಲಿ ವಿದ್ಯಾರ್ಥಿಗಳಂತೆ ಕೈಯಲ್ಲಿ ಸ್ಲೇಟು, ಪುಸ್ತಕಗಳ ಚೀಲ-ಗಳನ್ನು ತೆಗೆದುಕೊಂಡು ಅವಸರದಿಂದ ನಡೆಯುತ್ತಿರುವ ಪ್ರೌಢ ವ್ಯಕ್ತಿಗಳನ್ನು ಕಾಣಬಹುದು. ವಯಸ್ಸಿನಲ್ಲಿ ಮೂವತ್ತರಿಂದ ಅರುವತ್ತರವರೆಗೆ ಇರುವ ಈ ಸ್ತ್ರೀ-ಪುರುಷರು ಪಾಠಶಾಲೆಗೆ ಹೋಗುತ್ತಿರುವರು, ಅಥವಾ ಪಾಠಶಾಲೆಯಿಂದ ಹಿಂತಿರುಗುತ್ತಿರುವರು. ರಶಿಯಾದ ಜನರಲ್ಲಿ ನೂರಕ್ಕೆ ೫೦ ಮಂದಿ, ಯಾವುದಾದ-ರೊಂದು ಬಗೆಯ ಶಾಲೆಗೆ ಹೋಗುತ್ತಿರುವರು. ಅಲ್ಲಿ ಕೆಲವರು ಅಕ್ಷರಮಾಲೆಯನ್ನೂ, ಕೆಲವರು ಪ್ರಾಥಮಿಕ ಶಿಕ್ಷಣವನ್ನೂ, ಕೆಲವರು ಮಾಧ್ಯಮಿಕಶಿಕ್ಷಣವನ್ನೂ ಕೆಲವರು ಕಸಬುಶಿಕ್ಷಣವನ್ನೂ, ಕೆಲವರು ಉಚ್ಚತರಗತಿಯ ರಾಜಕೀಯ ಶಿಕ್ಷಣವನ್ನೂ ಪಡೆಯುತ್ತಿರುವರು. ಇವರನ್ನು ನೋಡಿದರೆ, 'ಝಾರ್' ಪ್ರಭುತ್ವಕಾಲದಲ್ಲಿ ಅಜ್ಞಾನದಲ್ಲಿಟ್ಟಿದ್ದ ಈ ಜನರಿಗೆ, ಶಿಕ್ಷಣದ ತೃಷೆಯುಂಟಾ-ಗಿದೆಯೊ ಏನೊ-ಎಂದು ಭಾಸವಾಗುತ್ತದೆ. ಕಳೆದ ಹದಿನೈದು ವರುಷಗಳಲ್ಲಿ ನಿರಕ್ಷರತೆಯ ಪ್ರಮಾಣವು ಇಲ್ಲಿ ೮೦ ರಿಂದ ೨೦ ಕ್ಕೆ ಇಳಿದಿದೆ. ಈ ಮಾತನ್ನು ಕೇಳಿದ ಕೂಡಲೆ ನಂಬ-ಲಿಕ್ಕಾಗುವುದಿಲ್ಲ. ನಾನು ಒಬ್ಬ ಅಮೆರಿಕನ್ ಮಿತ್ರ-ನೊಂದಿಗೆ, ಒಂದು ಇಂಗ್ಲಿಷ್ ರಶಿಯನ್ ಕೋಶ (ಡಿಕ್ಶನರಿ ವನ್ನು) ಜೇಬಿನಲ್ಲಿಟ್ಟುಕೊಂಡು, ಅಲ್ಲಿಂದಿಲ್ಲಿಗೆ ಬೀದಿಯಲ್ಲಿ ಹೋಗುವವರನ್ನು ನೋಡುತ್ತ ಅಡ್ಡಾಡುತ್ತಿದ್ದೆನು. ದಾರಿ-ಯಲ್ಲಿ ಅಡಚಣೆ ಬಂದರೆ, ಅಥವಾ ಬೇರೆ ಏನಾದರೂ ಕೇಳಬೇಕಾಗಿ ಬಂದರೆ, ನಾವು ಬೇಕೆಂತಲೆ ಒಬ್ಬ ಅಶಿಕ್ಷಿತ-ನಂತೆ ತೋರುವ ಮನುಷ್ಯನನ್ನು ನಿಲ್ಲಿಸಿ, ನಮ್ಮ ಕೋಶದಲ್ಲಿ ಇಂಗ್ಲಿಷ್ ಶಬ್ದದ ಪಕ್ಕದಲ್ಲಿದ್ದ ರಶಿಯನ್ ಶಬ್ದವನ್ನು ತೋರಿಸಿ, ಪ್ರಶ್ನಿಸುತ್ತಿದ್ದೆವು. ನಾವು ಪ್ರಶ್ನಿಸಿದವರಲ್ಲಿ ಒಬ್ಬನೂ ನಿರಕ್ಷರ ವ್ಯಕ್ತಿಯು ದೊರೆಯಲಿಲ್ಲ. ೧೬ ಕೋಟಿ ಜನರನ್ನು ಸಾಕ್ಷರರನ್ನಾಗಿ ಮಾಡುವುದು ಸುಲಭವಲ್ಲ. ಅನೇಕ ಶತಮಾನಗಳಿಂದ, ಸೂರ್ಯನು ಮುಳುಗದ ರಾಜ್ಯವನ್ನು ಕಟ್ಟಿದರೂ, ಅಂಧಕಾರದಲ್ಲಿಯೆ ತನ್ನ ಸಾಮ್ರಾಜ್ಯವನ್ನು ನಡೆಯಿಸುತ್ತಿರುವ ಇತರ ರಾಜ್ಯಗಳು ತಲೆತಗ್ಗಿಸುವಂತಹ ಕಾರ್ಯವನ್ನು ಈ ಕಾರ್ಯತತ್ಪರವಾದ ಸೋವಿಯೆಟ್ ಪ್ರಭುತ್ವವು ೧೫ ವರುಷಗಳಲ್ಲಿ ಸಾಧಿಸಿದೆ.

CC-0. Jangamwadi Math Collection. Digitized by eGangotri

ಸಾಕ್ಷರವಾದ ಈ ಸಮಾಜದಲ್ಲಿ ವಾಚನಾಭಿರುಚಿಯೂ ಉಂಟಾಗಿದೆ. ಈ ಅಭಿರುಚಿಗೆ ಪೋಷಕವಾಗಿಯೂ ಸಾತ್ತ್ವಿಕವಾಗಿಯೂ ಇರುವಂತಹ ವಾಙ್ಮಯ

ಜ್ಞಾನತೃಷೆ, ಜಿಜ್ಞಾಸೆ ವನ್ನು ಸರಕಾರವೆ ನಿರ್ಮಿಸುತ್ತಿದೆ. ನಗರದ ಯಾವಬೀದಿಗೆ ಹೋದರೂ ಪುಸ್ತಕಗಳ ಅಂಗಡಿಗಳು ಶೋಭಾಯಮಾನವಾಗಿ ಕಾಣಿಸುತ್ತಿರುವವು. ಅವುಗಳಲ್ಲಿ ಕೀಳುತರಗತಿಯ ಲಘುಕಥೆ, ಕಾದಂಬರಿ ಇತ್ಯಾದಿ ವಾಙ್ಮಯವಿರದೆ, ಇತಿಹಾಸ, ರಾಜಕಾರಣ, ತತ್ತ್ವಜ್ಞಾನ, ಟೆಕ್ನಾಲಜಿ, ವಿಜ್ಞಾನ, ರೇಡಿಯೋ ಇವೇ ಮೊದಲಾದ ಗಂಭೀರವಾದ ವಿಷಯಗಳ ಪುಸ್ತಕಗಳು ಇರುವುವು. ಪ್ರತಿಯೊಂದು ಅಂಗಡಿಯಲ್ಲಿ ಜನರು ತುಂಬಿರುವರು. ಈ ಗಿರಾಕಿಗಳು ಕೇವಲ ಪಾಠಶಾಲೆ, ಕಾಲೇಜುಗಳ ತರುಣರಾಗಿರದೆ, ಅವರಲ್ಲಿ ಪ್ರೌಢವಯಸ್ಸಿನ ಸ್ತ್ರೀ-ಪುರುಷರೂ ಇರುವರು. ಹಡಗುಗಳ ಮೇಲೆ ಕೆಲಸಮಾಡುವ ನಾವಿಕರು — ಕಲಾಸಿಗಳು — ಎಂದರೆ ತಮ್ಮ ಕೆಲಸಗಳು ಮುಗಿದ ಬಳಿಕ ವಿನೋದ ಮಗ್ನರಾಗುವವರೂ ಬಂದರು ಬಂದಕೂಡಲೆ ತಮ್ಮ ಮನುಷ್ಯತ್ವವನ್ನು ಮರೆಯುವವರೂ ಎಂಬ ತಿಳಿವಳಿಕೆಯು ಪ್ರಚಾರದಲ್ಲಿದೆ; ಆದರೆ ರಶಿಯನ್ ಹಡಗಿನಲ್ಲಿ ಕಲಾಸಿಗಳು ವಾಸಿಸುವ ಸ್ಥಳಕ್ಕೆ ನಾನು ಹೋಗಿ ನೋಡಿದೆನು. ಅಲ್ಲಿ ಲೆನಿನ್, ಸ್ಟಾಲಿನ್, ಮಾರ್ಕ್ಸ್ ಮೊದಲಾದವರ ಫೋಟೊಗಳನ್ನು ಹಾಕಿರುವರು; ಸಿನೆಮಾ ನಟಿಯರ ಭಾವಚಿತ್ರಗಳು ಅಲ್ಲಿ ಕಾಣಿಸಲಾರವು. ಅಲ್ಲಿ ಮೇಜಿನ ಮೇಲಿದ್ದ ಮಾಸಿಕಗಳಲ್ಲೆಲ್ಲ ರಾಜಕೀಯ, ಸಾಮಾಜಿಕ ಮತ್ತು ಟೆಕ್ನಿಕಲ್ ವಿಷಯಗಳ ವಾಙ್ಮಯವು ತುಂಬಿರುವುದು. ಶ್ರಮಜೀವಿಗಳಾದ ಕಲಾಸಿಗಳನ್ನು ಮೊದಲ್ಗೊಂಡು ಉಚ್ಚವರ್ಗದವರ ವರೆಗೆ, ಯಾವ ಸಮಾಜದಲ್ಲಿ ಗಂಭೀರವಿಷಯಗಳ ವಿಚಾರವೂ ವಾಚನದ ಮತ್ತು ವಾದ-ವಿವಾದದ ಅಭಿರುಚಿಯೂ ಉತ್ಪನ್ನವಾಗುವುದೊ, ಅಂತಹ ಸಮಾಜವು ಉಚ್ಚ ಸಂಸ್ಕೃತಿಯ ಮಾರ್ಗದಲ್ಲಡಿಯಿಟ್ಟಿರುವುದೆಂಬುದರಲ್ಲಾವ ಸಂಶಯವೂ ಇಲ್ಲ.

ರಶಿಯನ್ ಜನರಿಗೆ ವಾದ-ವಿವಾದಗಳಲ್ಲಿ ಅತ್ಯಂತ ಉತ್ಸಾಹ. ಈ ಜನರು ಮಾತನಾಡುವಾಗ ತಡೆಯಿಲ್ಲದೆ ಮಾತನಾಡುವರು. ಇಂಗ್ಲಿಷಿನಲ್ಲಿ ಒಂದು ವಾಕ್ಯವನ್ನು ಹೇಳಿದರೆ ಅದನ್ನು ರಶಿಯನ್ ಮನುಷ್ಯನು ತನ್ನವರಿಗೆ ಹತ್ತುವಾಕ್ಯಗಳಲ್ಲಿ ತಿಳಿಯ ಹೇಳುವನು. ಮಾತೆಂದರೆ ಅಷ್ಟು ಅಭಿರುಚಿ ಅವರಿಗೆ. ನಿಮಗೆ ಇಂಗ್ಲಿಷು ಬರುತ್ತದೆಂದು ತಿಳಿದಿದ್ದರೂ, ಅಪರಿಚಿತನಾದ ಇಂಗ್ಲಿಷ ಗೃಹಸ್ಥನೊಬ್ಬನು ನಿಮ್ಮೆದುರಿಗೆ ಮೂರುನಾಲ್ಕು ಗಂಟೆಗಳ ಕಾಲ ಕುಳಿತಿದ್ದರೂ ಅವನು ಮೂಕನಂತೆ ಕುಳಿತಿರುವನು. ರಶಿಯನ್ ಮನುಷ್ಯನು, ನಿಮ್ಮ ಗುರುತು ಇಲ್ಲದಿದ್ದರೂ, ಕೈಸನ್ನೆ ಬಾಯಿಸನ್ನೆಗಳಿಂದಲೊ ತನಗೆ ಗೊತ್ತಿರುವಷ್ಟು ಹರುಕು ಮುರುಕು ಇಂಗ್ಲಿಷ್ ಭಾಷೆಯಿಂದಲೊ ತನ್ನ ಮನೋಗತವನ್ನು ನಿಮಗೆ ತಿಳಿಸಿ, ನಿಮ್ಮ ಭಾವನೆಯನ್ನು ತಾನು ತಿಳಿದುಕೊಳ್ಳುವನು.

ನ್ಯಾಯದಾನದ ಪದ್ಧತಿಯಲ್ಲಿ ಕ್ರಾಂತಿಯನ್ನುಂಟುಮಾಡಿ, ರಶಿಯಾರಾಷ್ಟ್ರವು ಒಂದು ಬಗೆಯ ಗ್ರಾಮಪಂಚಾಯತಿಯನ್ನು ಪ್ರಾರಂಭಿಸಿರುವುದು.

ನ್ಯಾಯಸ್ಥಾನಗಳ ಚಿತ್ರ ಸಾಮಾನ್ಯ ಕೋರ್ಟುಗಳಲ್ಲಿ ಕಂಡುಬರುವ ಔಪಚಾರಿಕತೆ, ಕಾನೂನಿನ ದರ್ಪ ಮೊದಲಾದುವುಗಳಿಗೆ ಬದಲಾಗಿ, ಇಲ್ಲಿಯ ನ್ಯಾಯಸ್ಥಾನಗಳಲ್ಲಿ ಸಾಮಾನ್ಯಸಮಾಜದ ಮತ್ತು ಮನೆಯ ವಾತಾವರಣವಿರುವುದು. ಇಲ್ಲಿಯ ನ್ಯಾಯಸಭೆಗಳ ಚಿತ್ರವು ನೋಡುವಂತಿದೆ. ೨೦ × ೫೦ ಅಡಿಗಳ ವಿಸ್ತಾರವುಳ್ಳ ದಿವಾನ್‌ಖಾನೆಯಲ್ಲಿ, ಒಂದುಅಡಿ ಎತ್ತರವಿರುವ ಗದ್ದುಗೆಯ ಮೇಲೆ, ಕಪ್ಪು ಚೌಕಟ್ಟಿನ ಕನ್ನಡಕ (ಚಾಳೀಸು) ಹಾಕಿಕೊಂಡು, ಸುಮಾರು ನಲವತ್ತು ವಯಸ್ಸಿನ ಒಬ್ಬ ಸ್ತ್ರೀಯು ಕುಳಿತಿರುವಳು; ಆಕೆ ಮುಖ್ಯ ನ್ಯಾಯಾಧೀಶಳು. ಆಕೆಯ ಎಡಗಡೆಗೆ ಅದೇ ವಯಸ್ಸಿನ ಮತ್ತೊಬ್ಬ ಸ್ತ್ರೀಯೂ ಬಲಗಡೆಯಲ್ಲಿ ಒಬ್ಬ ಗೃಹಸ್ಥನೂ ಕುಳಿತಿರುವರು. ಇವರಿಬ್ಬರೂ ಯಂತ್ರಾಲಯಗಳಲ್ಲಿ ಕೆಲಸಮಾಡುವವರು. ನ್ಯಾಯಾಧೀಶರ ಸಹಾಯಕ್ಕೆ ಇಬ್ಬರು ವ್ಯಕ್ತಿಗಳನ್ನು ಯಂತ್ರಾಲಯ ಕೆಲಸಗಾರರು ಒಮ್ಮತದಿಂದ ಆರಿಸಿರುವರು. ಮೇಜಿನ ಮೇಲೆ ಹಸಿರು ಬಟ್ಟೆ, ಹಿಂದುಗಡೆ ಲೆನಿನ್ನನ ಫೋಟೊ, ಬೇರೆ ಗೋಡೆಗಳ ಮೇಲೆ ಐದುವರುಷದ ಯೋಜನೆಗಳ ಚಿತ್ರಗಳು—ಇರುವವು. ಎದುರಿಗೆ ಒಂದು ಬೆಂಚನ್ನು ಇಟ್ಟಿರುವರು. ಪ್ರೇಕ್ಷಕ ವರ್ಗದವರು ಅಲ್ಲಿ ಬಂದು ಕುಳಿತಿರುವರು. ನ್ಯಾಯದ ಕೆಲಸವು ಆರಂಭವಾಯಿತು; ಆದರೆ ಇಲ್ಲಿ ಬಿಲ್ಲೆಧರಿಸುವ ಜವಾನರಿಲ್ಲ. ಇಂತಹ ವಕೀಲನು ಬಂದಿದ್ದಾನೆಂಬ ಗೊಂದಲವಿಲ್ಲ. ಇಲ್ಲಿ ಆರೋಪಿಯು ನಿಂತುಕೊಳ್ಳುವ ಪಂಜರವಿಲ್ಲದಿರುವುದು ಮತ್ತೊಂದು ವಿಶೇಷ. ಅಪರಾಧಿಯು ನ್ಯಾಯಾಧೀಶಳೆದುರಿಗೆ ನಿಂತು, ಮೇಜಿಗೆ ಆತುಕೊಂಡು, ತನ್ನ ಕೇಸಿನ ವಿಚಾರವನ್ನು ತಿಳಿಸುತ್ತಿದ್ದನು. ೨೪ ವರುಷದ ಆ

CC-0. Jangamwadi Math Collection. Digitized by eGangotri

ಪುರುಷನಿಗೆ ನ್ಯಾಯಾಧೀಶಳು ಅನೇಕ ಪ್ರಶ್ನೆಗಳನ್ನು ಹಾಕುತ್ತಿದ್ದಳು. ಮೊದಲನೆಯ ಕೇಸಿನಲ್ಲಿ ಆರೋಪಿಯು ಕೊ-ಆಪರೆಟಿವ್ ಸೊಸೈಟಿಯಿಂದ ಆಹಾರಪದಾರ್ಥವನ್ನು ಸುಲಭ ದರಕ್ಕೆ ತೆಗೆದುಕೊಂಡು, ಅದನ್ನು ಹೆಚ್ಚುಬೆಲೆಗೆ ಮಾರಿ ಲಾಭ ಪಡೆದನೆಂದು ಆಪಾದನೆ ಇತ್ತು. ಎರಡನೆಯ ಕೇಸಿನಲ್ಲಿ ಒಬ್ಬ ಪುರುಷನು 'ಪೇಂಟಿಂಗ'ಮಾಡುವುದಕ್ಕಾಗಿ ಕ್ರೆಯಾನ್ (ಬಣ್ಣದ ಸಣ್ಣಕಡ್ಡಿ)ಗಳನ್ನೂ ಬಣ್ಣಗಳನ್ನೂ ಕದ್ದನೆಂಬ ಆರೋಪವಿತ್ತು. ಮೊದಲನೆಯ ಕೇಸು ಮುಗಿದ ಬಳಿಕ, ಕೋರ್ಟಿನ ಕೆಲಸವನ್ನು ಬೇಕಾಗಿಯೆ ಸ್ವಲ್ಪ ಹೊತ್ತು ನಿಲ್ಲಿಸಿ, ಶ್ರೀಮತಿ ನ್ಯಾಯಾಧೀಶರೆಲ್ಲರೂ ಗದ್ದುಗೆಯಿಂದ ಇಳಿದು ಬಂದು, ಇತರರು ಕುಳಿತಿದ್ದೆಡೆಯಲ್ಲಿ ಕುಳಿತು, ಕೇಸಿನ ವಿಚಾರವೇನು? ಅದರಲ್ಲಾದ ತೀರ್ಮಾನ ವೇನು? —ಇವೇ ಮೊದಲಾದ ವಿಷಯುಗಳನ್ನು ನಮಗೂ ಇತರ ಪರದೇಶೀಯ ಪ್ರೇಕ್ಷಕರಿಗೂ ತಿಳಿಸಿ ಹೇಳಿದರು. ನ್ಯಾಯಾಧೀಶರ ಮೈಮೇಲೆ ದೊಡ್ಡ-ದೊಡ್ಡ ಕರಿಯ ಗೌನುಗಳಿರಲಿಲ್ಲ. ತಾವು ಕೆಳಗೆ ಕುಳಿತಿದ್ದವರ ಬಳಿ ಕುಳಿತುದರಿಂದ, ತಮ್ಮ ಗೌರವ ಮತ್ತು ಅಧಿಕಾರದರ್ಪಕ್ಕೆ ಕುಂದುಬರುವುದೆಂಬ ಭೀತಿಯು ಅವರಲ್ಲಿ ಉಂಟಾಗಿರಲಿಲ್ಲ.

ನ್ಯಾಯಾಧೀಶಳ ಸಹಾಯಕರನ್ನು ಸರತಿ (ಪಾಳಿ)ಯಿಂದ ಬದಲಾಯಿಸುವರು. ಅವರ ಮುಂದೆ ಬರುವ ಆರೋಪಿ ಮತ್ತು ಸಾಕ್ಷಿಗಳ ಪರಿಚಯವು ಅವರಿಗೆ ಇರುವುದು. ನ್ಯಾಯಾಧೀಶಳು ಮತ್ತು ಆಕೆಯ ಇಬ್ಬರು ಸಹಾಯಕರ ಬಹುಮತದಿಂದ ನ್ಯಾಯನಿರ್ಣಯವಾಗುವುದು. ಅದರಲ್ಲಿ ಶಾರೀರಿಕಶ್ರಮದ ಶಿಕ್ಷೆಯನ್ನೆ ಸಾಮಾನ್ಯವಾಗಿ ವಿಧಿಸ-ಲಾಗುವುದು. ಈ ಶ್ರಮಕ್ಕಾಗಿ ಕೈದಿಗಳಿಗೆ ಸಂಬಳವು ದೊರೆಯುವುದು. ಸರಕಾರಿ ರಜೆಯ ದಿನಗಳನ್ನು ಅವರ ಶಿಕ್ಷೆಯ ಅವಧಿಯಿಂದ ಕಳೆದು, ಶಿಕ್ಷೆಯ ಕಾಲವನ್ನು ಕಡಿಮೆ ಮಾಡುವರು. ಕಾರಾಗೃಹದಲ್ಲಿ ಕೈದಿಗಳೇ ತಂತಮ್ಮ ವ್ಯವಸ್ಥೆಗಳೆಲ್ಲವನ್ನೂ ಆಡಳಿತವನ್ನೂ ನೋಡಿಕೊಳ್ಳುವರು. ವಾರ್ಡರ್ ಮುಂತಾದವರು ಅಲ್ಲಿ ಇಲ್ಲ. ಅಲ್ಲಿಯ ವಕೀಲರೆ-ಲ್ಲರೂ ಸರಕಾರದ ನೌಕರರಾಗಿರುವರು. ಬೇಕಾದವರು ವಕೀಲರನ್ನಿಟ್ಟುಕೊಳ್ಳಬಹುದು, ಬೇಡವಾದವರು ತಾವೇ ಸ್ವತಃ ತಮ್ಮ ಕೆಲಸವನ್ನು ನಡೆಯಿಸಿಕೊಳ್ಳಬಹುದು. ಹಿಂದೆ ಹೇಳಿದ ಎರಡು ಪ್ರಸಂಗಗಳಲ್ಲಿಯೂ ವಕೀಲರ ಸುದ್ದಿಯೆ ಇರಲಿಲ್ಲ. ಅದರಿಂದ ಅಲ್ಲಿ ವಕೀಲಸಂಸ್ಥೆಯು ಅಷ್ಟು ಪ್ರಬಲವಾಗಿಲ್ಲ-ವೆಂದು ಕಂಡುಬರುವುದು.

ರಶಿಯನ್ ರಾಜ್ಯಕ್ರಾಂತಿಯು ಕೇವಲ ರಾಜಕೀಯ ಸ್ವರೂಪದ್ದಾಗಿರದೆ, ಸಮಾಜದ ಅಖಿಲ ಸಾಂಪ್ರದಾಯಿಕ ಜೀವನದಲ್ಲಿಯೆ ಆ ರಾಷ್ಟ್ರವು ಕ್ರಾಂತಿಯನ್ನುಂಟುಮಾಡ-ಲಾರಂಭಿಸಿದೆ.

---


## ದಿ ತರುಣ ಅಶ್ಯುರನ್ಸ್ ಕಂಪನಿ ಲಿ., ಅಹಮ್ಮದಾಬಾದ

ನಮ್ಮಲ್ಲಿ ಕುಟುಂಬಸಂರಕ್ಷಕ ಯೋಜನೆ, ಮಲ್ಟಿಪಲ್ ಬೆನಿಫಿಟ್ ಪ್ಲ್ಯಾನ್, ಫಿಕ್ಸ್ಡ್ ಬೋನಸ್ ಎಂಡೌಮೆಂಟ್, ಮಕ್ಕಳ ಸುಖಭವಿಷ್ಯದ ವಿಮೆ—ಮೊದಲಾದ ಹಲವು ಲಾಭದಾಯಕ ಯೋಜನೆಗಳಿವೆ.

**ತರುಣ ಡಾಯಮಂಡ್ ಪಾಲಿಸಿಯಿಂದ ಸ್ವಸಂರಕ್ಷಣೆ, ಪೆನ್ಶನ್ ಮತ್ತು ಸುರಕ್ಷಿತ ಠೇವುಗಳು ಸಿಗುವವು.**

**ತರುಣ ಬಾಂಡ್:** ಇದೊಂದು ಅದ್ಭುತ ಕಾಣಿಕೆ. ಬರಿ ರೂ. ೧೩-೮-೦ರಲ್ಲಿ ನಿಮ್ಮ ಮತ್ತು ನಿಮ್ಮ ಕುಟುಂಬದ ರಕ್ಷಣೆಯಾಗುವುದಲ್ಲದೆ, ದೈವವಿದ್ದರೆ **೨೫೦೦ ರೂ.** ಸಿಗುವ ಸಂಭವವಿದೆ.

☞ ೧೯೩೭ರ ಆಗಸ್ಟ ತಿಂಗಳಲ್ಲಿ ತರುಣಬಾಂಡುಗಳ ಬಹುಮಾನಗಳನ್ನು ಹಂಚುವ ೭ನೆಯ ಸಮಾರಂಭವು ಜರುಗಲಿದೆ!

ಕರ್ನಾಟಕದಲ್ಲೆಲ್ಲಾ ಕೆಲಸಮಾಡಲು ಏಜಂಟರು ಬೇಕು. ಕೆಳಗಿನ ವಿಳಾಸಗಳಿಗೆ ಬರೆಯಿರಿ:—

ಬ್ರ್ಯಾಂಚ್ ಮ್ಯಾನೇಜರ್,
**ಎ. ಡಿ. ದೇಶಪಾಂಡೆ, ಮೇನರೋಡ್, ಸಾಂಗಲಿ**

ಧಾರವಾಡ ಜಿಲ್ಲೆಯ ಚೀಫ ಏಜಂಟರು
**ಮೆಸರ್ಸ್ ಲೋಖಂಡೆ, ಸಿದ್ದನಗೌಡರ**
**ಮತ್ತು ಕಂಪನಿ, ಧಾರವಾಡ**

**ಎನ್. ಗುಡಿ**
**ಚೀಫ್ ಏಜಂಟ, ಹೈದರಾಬಾದ (ದ)**

ಬೆಳಗಾಂವಿ ಜಿಲ್ಲೆಯ ಅಸಿಸ್ಟಂಟ್ ಆರ್ಗನೈಜರ್
**ಕೆ. ಎಸ್. ಪಾವಟೆ,**
**ಬನಹಟ್ಟಿ (ಜಿ: ಬೆಳಗಾವಿ)**


CC-0. Jangamwadi Math Collection. Digitized by eGangotri

The Guardian of India Insurance Co. Ltd.

BOMBAY ★ MADRAS

೧೯೩೭ರಲ್ಲಿ ಸಂಪಾದಿಸಿದ ವಿಮಾವ್ಯವಹಾರ

ರೂ. ೪೭,೦೦,೦೦೦

**ಉತ್ತರ ಕರ್ನಾಟಕದಲ್ಲೆಲ್ಲ ನಿಶ್ಚಿತ ವೇತನದ ಮೇಲೆ**
**ಆರ್ಗನೈಜರರಾಗಿ ಕೆಲಸ ಮಾಡುವವರು ಬೇಕಾಗಿದ್ದಾರೆ.**

ಈ ತಿಂಗಳಲ್ಲಿ ಮುಖ್ಯ ಕಾರ್ಯಾಲಯದ ಮ್ಯಾನೇಜರರು ಕರ್ನಾಟಕದಲ್ಲಿಯೂ ದಕ್ಷಿಣಹಿಂದುಸ್ತಾನದಲ್ಲಿಯೂ ಸಂಚಾರ ಮಾಡತಕ್ಕವರಿದ್ದಾರೆ. ಕಂಪನಿಯ ಪರವಾಗಿ ಕೆಲಸಮಾಡಲಿಚ್ಛಿಸುವವರು, ಮುಂಚಿತವಾಗಿ ಬರೆದು ಕೇಳಿಕೊಂಡು, ಮ್ಯಾನೇಜರರನ್ನು ಕಂಡು ಮಾತನಾಡಿಕೊಳ್ಳಬಹುದು.

ಹೆಚ್ಚಿನ ವಿವರಗಳಿಗಾಗಿ ಕೆಳಗಿನ ವಿಳಾಸಕ್ಕೆ ಬರೆಯಿರಿ:—

**The Guardian of India Insurance Co., Ltd.**
Patel House, Church-gate Street
Fort, BOMBAY

---

ಭಿಷಗ್ರತ್ನ ಆಯುರ್ವೇದ ವಿದ್ವಾನ್ ಬಿ. ವಿ. ಪಂಡಿತರ

**ಶ್ರೀಕರ ಕಸ್ತೂರಿಮಾತ್ರೆ**

ಮಕ್ಕಳ ಮತ್ತು ದೊಡ್ಡವರ ಸಮಸ್ತ ಶೀತ ವಾತ ರೋಗಗಳಿಗೂ ಸಂಜೀವನ

4 ಅಣೆ

**ಬಾಲಸಂಜೀವಿನಿ**

ಮಕ್ಕಳಿಗೆ ಸುಖವಾಗಿ ಭೇದಿಮಾಡಿಸಿ ಅಜೀರ್ಣ ಜ್ವರಗಳನ್ನು ನಿಲ್ಲಿಸುತ್ತೆ

4 ಅಣೆ

ಸದ್ವೈದ್ಯ ಶಾಲಾ ನಂಜನಗೂಡು

# ಅಂತರಂಗದರ್ಶನ

ಶ್ರೀ. ವಿಜಯ ಬೆಟಗೇರಿ ಬಿ. ಎ. (ಆನರ್ಸ್)

**ಪೂರ್ಣಿಮೆ—ಅಮೃತರು ನೆರೆನೆರೆಯಲ್ಲಿದ್ದು ಕೂಡಿ ಆಡಿ ಬೆಳೆದವರು. ಇಬ್ಬರಲ್ಲಿಯೂ ಅನೂನವಾದ ಸ್ನೇಹ. ಪೂರ್ಣಿಮೆಯ ಮದುವೆ ಇನ್ನೊಬ್ಬನೊಂದಿಗೆ ಆಯಿತು. ಆಕೆಯ ಹೃದಯವು ತನಗೆ ಗೊತ್ತಾಗಿದೆಯೆಂದು ಕಳವಳಿಸುತ್ತಿರುವ ಅಮೃತನು, ತನ್ನ ತಪ್ಪುತಿಳಿ—ವಳಿಕೆಯು ಕಂಡುಬಂದಾಗ ಬೆರಗು—ಮರುಕಗಳಿಂದ ಮೈಮರೆತು ಹೋದನು.**

* ಅಮೃತನ ಮನದಲ್ಲಿ ಮೂಡಿದ ಶಂಕೆ ಅವನಿಗೆ ಒಡೆಯದ ಒಗಟವಾಗಿ ಪರಿಣಮಿಸಿತು. ಅದರ ವಿಚಾರ-ವಾಗಿ ಅವನೆಷ್ಟು ಯೋಚಿಸಿದರೂ ಸರಿಯಾದ ಉತ್ತರ-ವೊಂದೂ ಹೊಳೆಯಲಿಲ್ಲ. ಆದುದರಿಂದಲೇ ಅವನ ಬಗೆಯಲ್ಲಿ ಆ ಸಮಸ್ಯೆಯು, ಸದಾ ಮಿಡಿಯುತ್ತಿದ್ದಿತೇ ಹೊರತು ಪೂರ್ತಿಯಾಗಲಿಲ್ಲ. ಅಮೃತನಿಗೂ ತನಗೂ ಒಂದು ಬಗೆಯ ಸಂಬಂಧ ಬಳೆಯುತ್ತ ಬಂದುದು ಪೂರ್ಣಿಮೆಗೆ ಗೋಚರಿಸಲಿಲ್ಲ. 'ನೆರೆಹೊರೆಯವರೊಡನೆ ಹೇಗೆ ಆಚರಿಸಬೇಕು? ಬಾಲ್ಯಸ್ನೇಹವನ್ನು ಕೊನೆಯವರೆಗೂ ಹೇಗೆ ಹೇಗೆ ಉಳಿಸಿಕೊಂಡು ಹೋಗಬೇಕು ?' ಎಂಬ ಮಾತುಗಳನ್ನು ಅವಳು ವಿಚಾರಿಸಿ ತಿಳಿದುಕೊಂಡಿದ್ದಳೇ ಹೊರತು, ತಮ್ಮಿಬ್ಬರಲ್ಲಿ ಬೆಳೆಯುತ್ತ ಬಂದ ಒಂದು ಬಗೆಯ ಸಂಬಂಧದ ಕಲ್ಪನೆಯು-- ಅಮೃತನ ಯಾವ ಬಗೆಯ ದೃಷ್ಟಿವಿಕ್ಷೇಪಗಳಿಂದಲೂ— ಮಾತುಗಳಿಂದಲೂ, ಸಾಮಾನ್ಯವ್ಯವಹಾರಗಳಿಂದಲೂ ಅವಳಿಗೆ ಕಂಡುಬರಲಿಲ್ಲ. ಪೂರ್ಣಿಮೆಯು ಕೊಡ ತೆಗೆದುಕೊಂಡು ಬಾವಿಗೆ ಹೋಗುವಳು; ದೇವರಿಗೇ ಗೊತ್ತು, ಅದು ಅಮೃತನಿಗೆ ಹೇಗೆ ತಿಳಿಯುತ್ತಿದ್ದಿತೆಂಬುದು! ಅವನು ಅಲ್ಲಿ ಹಾಜರ್! ಅವಳ ಕೈಯಲ್ಲಿಯ ಕೊಡ ಕಸಿದುಕೊಂಡು, ತಾನೇ ನೀರನ್ನು ಸೇದಿಕೊಡುವನು. ಪೂರ್ಣಿಮೆಗೆ ಸದಾ ಸಹಾಯಕನಾಗಿರುವುದೇ ಅಮೃತನಿಗೆ ಸಂತೋಷದ ವಿಷಯ; ಆಕಳಿಗೆ ತಿನ್ನಿಸಲೆಂದು ಹಿಟ್ಟು-ಹೊಟ್ಟುಗಳನ್ನು ತೆಗೆದುಕೊಂಡು ಪೂರ್ಣಿಮೆಯು ಹೊರಟಾಗ, ಅವಳ ಕೈಯಿಂದ ಕಸಿದುಕೊಂಡು ತಾನೇ ಹೋಗಿ ಗೋದಲೆಯಲ್ಲಿ ಸುರಿದು ಬರುವನು. ಏನಾದರೂ ಬೇಕಾದರೆ ಮಾರವಾಡಿಯ ಅಂಗಡಿಗೆ ಪೂರ್ಣಿಮೆಯು ಹೋಗುತ್ತಿರುವಳು; ದಾರಿಯಲ್ಲಿ ಖಂಡಿತವಾಗಿಯೂ ಅಮೃತನು ಭೆಟ್ಟಿಯಾಗುವನು; ಅವನೇ ಅವಳಿಗೆ ಬೇಕಾದ ಕೆಲಸವನ್ನೆಲ್ಲ ಮಾಡಿಕೊಡುವನು.

ಪೂರ್ಣಿಮೆಯ ಮನೆಯಲ್ಲಿ ಇಬ್ಬರೇ ಇಬ್ಬರು. ಪೂರ್ಣಿಮೆಯ ತಾಯಿ, ಪೂರ್ಣಿಮೆ. ಇವರನ್ನುಳಿದು ಮಿಕ್ಕವರಾರೂ ಇಲ್ಲ. ತಂದೆ ಕೆಲವು ವರ್ಷಗಳ ಹಿಂದೆ ತೀರಿಕೊಂಡಿದ್ದರು. ತಾಯಿ ಯಾವಾಗಲೂ ಪರದೆಯಲ್ಲಿರುವರು. ಶಾಲೆಗೆ ಹೋಗುವಾಗ ಅಮೃತನು ಪೂರ್ಣಿಮೆಯ ಮನೆಗೆ ಹೋಗಿ "ಸಾಯಂಕಾಲ ಪೇಟೆಯಿಂದ ಏನಾದರೂ ಸಾಮಾನು ತರುವುದು ಇದೆಯೊ ?" ಎಂದು ವಿಚಾರಿಸಿಕೊಂಡು ಹೋಗುತ್ತಿದ್ದನು. ಇದು ಅವನ ನಿತ್ಯದ ವ್ಯವಹಾರ. ಅಮೃತನ ಮನೆಯಲ್ಲಿ ಒಕ್ಕಲುತನವಿದ್ದಿತು. ಎಮ್ಮೆ-ಆಕಳುಗಳೂ ತೋಟ-ಪಟ್ಟಿಗಳೂ ಇದ್ದುವು. ಸುಗ್ಗಿಯ ಕಾಲದಲ್ಲಿ ವಿವಿಧವಸ್ತುಗಳು ಅವನ ಮನೆಯಲ್ಲಿ ಬಂದು ತುಂಬುತ್ತಿದ್ದುವು. ಮನೆಯವರಿಗೆ ತಿಳಿಯದಂತೆ ಕೆಲವನ್ನು ತೆಗೆದುಕೊಂಡು ಹೋಗಿ, 'ಮಾದರಿ ನೋಡಿ'—ಎಂದು ಪೂರ್ಣಿಮೆಯ ಮನೆಯಲ್ಲಿ ಕೊಟ್ಟುಬಿಡುವುದು ಅವನ ವಾಡಿಕೆಯಾಗಿತ್ತು. ಇದರಲ್ಲಿ ಪೂರ್ಣಿಮೆಗೆ ವಿಶೇಷವೇನೂ ಎನಿಸುತ್ತಿರಲಿಲ್ಲ. ಅವನ ತಿನಿಸುಣಿಸುಗಳ ಸಂತೋಷ 'ಭಲೆ' ಎನ್ನಿಸಿಕೊಳ್ಳಬೇಕೆಂಬ ಆಶೆ--ಇವೇ ಅವನು ಆ ಪದಾರ್ಥಗಳನ್ನು ತಂದುಕೊಡುತ್ತಿರುವುದಕ್ಕೆ ಕಾರಣಗಳೆಂದು ಪೂರ್ಣಿಮೆಯು ಗ್ರಹಿಕೆಯಾಗಿದ್ದಿತು. ಬೇರೆ ಗ್ರಹಿಕೆಯಾಗಲು ಕಾರಣವಾದರೂ ಏನು?

* ಹಿಂದೀಭಾಷೆಯ ಪ್ರಸಿದ್ಧ ಕತೆಗಾರರಾದ ಸ್ವರ್ಗೀಯ ಪ್ರೇಮಚಂದರ 'ತಥ್ಯ' ಎಂಬ ಕತೆಯ ಅನುವಾದ.

CC-0. Jangamwadi Math Collection. Digitized by eGangotri

ಒಂದು ಹಳ್ಳಿಯಲ್ಲಿ, ನೆರೆಹೊರೆಯಲ್ಲಿ ಬದುಕಿ ಬಾಳುವ ಹುಡುಗ-ಹುಡುಗಿಯರಿಬ್ಬರಲ್ಲಿ—ರಕ್ತಸಂಬಂಧವಿರಲಿ,ಇಲ್ಲದಿರಲಿ—ಒಂದು ಬಗೆಯ ಭ್ರಾತೃಭಗಿನಿಯರ ಭಾವವು ಇದ್ದೇ ಇರುವುದು. ಬಾಲಿಕೆಯರಿಗೆ ಅಣ್ಣನ ಮೇಲಿರಬಹುದಾದ ಸಲುಗೆ-ವಿಶ್ವಾಸಗಳು ಸ್ವಲ್ಪ ಹಿರಿಯನಾದ ನೆರೆಯವನೊಡನೆ ಕಂಡುಬರುವುವು. ಆದುದರಿಂದಲೇ ಅಮೃತನು ತಂದುಕೊಡುವ ಸಂಭಾವನೆಗಳಲ್ಲಿ, ವಿಶೇಷವಾದ ಅರ್ಥವನ್ನು ಕಲ್ಪಿಸಿಕೊಳ್ಳುವ ಸಂದರ್ಭವು ಪೂರ್ಣಿಮೆಗೆ ಬರಲಿಲ್ಲ.

ಪೂರ್ಣಿಮೆಯು ಒಂದು ದಿನ ಅಮೃತನನ್ನು ಹೀಗೆ ಕೂಡ ಕೇಳಿದ್ದಳು: "ಅಮೃತ, ನೀನು ದಿನವೆಲ್ಲವನ್ನೂ ಸ್ಕೂಲಿನಲ್ಲಿಯೇ ಕಳೆಯುತ್ತೀಯೆ; ನನಗೇನೊ ಬಹಳ ಉದಾಸೀನತೆಯೆನಿಸುತ್ತದಪ್ಪಾ! ನೀನು ಸ್ಕೂಲಿಗೆ ಹೋದಮೇಲೆ ನನಗೆ ಹೇಗೆಹೇಗೋ ಆಗುತ್ತದೆ."

ಅಮೃತನ ಉತ್ತರವೂ ಅಷ್ಟೇ ಸಹಜ: "ಏನು ಮಾಡಲಿ? ಪರೀಕ್ಷೆಯೊಂದು ಸಮಿಾಪಕ್ಕೆ ಬಂದುಬಿಟ್ಟಿದೆ."

"ನನಗೆ ಮೇಲಿಂದ ಮೇಲೆ ಎನ್ನಿಸುವುದು: ನಾನು ಎಲ್ಲಿಯಾದರೂ ಹೋದರೆ ನಿನ್ನನ್ನು ಕಾಣುವುದು ಹೇಗೆ? ಎಂದು. 'ನಾನು ಹೋಗಲಿರುವೆನಲ್ಲ...!' ಎಂದು ಆಗಾಗ ಎನಿಸುವುದು. ಅಮೃತ, ಆ ಮೇಲೆ ನಮ್ಮ ಮನೆಗಾದರೂ ಏತಕ್ಕೆ ಬಂದೀಯಪ್ಪಾ ನೀನು!"

"ಎಲ್ಲಿಗೆ ಹೋಗಲಿರುವೆ?" ಅಮೃತನ ಪ್ರಶ್ನೆಯಲ್ಲಿ ಅಧೀರತೆಯು ತುಂಬಿದ್ದಿತು. ಪೂರ್ಣಿಮೆಯು ಲಜ್ಜಿತಳಾದಳು. ಆದರೂ ನಸುವೇಳೆಯಲ್ಲಿ ಮುನ್ನಿನ ರೀತಿಯಲ್ಲಿ ಹೇಳಿದಳು: "ನಿನ್ನ ಅಕ್ಕಂದಿರು ಎಲ್ಲಿಗೆ ಹೋಗಿದ್ದಾರೆ? ಹುಡುಗಿಯರೆಲ್ಲ ಹೋಗುವುದೆಲ್ಲಿ? ನಾನೂ ಅಲ್ಲಿಗೇ ಹೋಗಬೇಕಾಗುವುದಲ್ಲವೇ?"

"ಸರಿ! ಆ ಮಾತೂ ನಿಜ!" ಅಮೃತನು ನಿರಾಶೆಯ ಭಾವದಲ್ಲಿಯೇ ಗೊಣಗಿದನು. ಇದಿಷ್ಟನ್ನು ಹೇಳಿ ಅವನು ಕೆಲವೇಳೆ ಸ್ತಬ್ಧನಾಗಿ ಕುಳಿತನು. ಪೂರ್ಣಿಮೆಯು ಎಲ್ಲಿಗಾದರೂ ಹೋಗಲಿರುವಳೆಂಬ ಮಾತು, ಇಲ್ಲಿಯವರೆಗೆ ಅವನ ಲಕ್ಷ್ಯಕ್ಕೆ ಬಂದಿರಲಿಲ್ಲ. ಇಷ್ಟೊಂದು ಮುಂದಿನ ವಿಚಾರವನ್ನು ಮಾಡಲಿಕ್ಕೆ ಅವನಿಗೆ ಅವಕಾಶವೇ ಇರಲಿಲ್ಲ. ಪ್ರಸನ್ನತೆಯು ವರ್ತಮಾನ ಕಾಲದಲ್ಲಿ ಮಾತ್ರ ಸಾಕಷ್ಟು ಕಂಡುಬರುವುದು; ಆದರೆ ಭವಿಷ್ಯತ್‌ಕಾಲದ ಸಂಗತಿಗಳನ್ನು ಕುರಿತು ಯೋಚಿಸಿದರೆ ಅದು ಉಳಿಯುವ ಸಂಭವವಾದರೂ ಇದೆಯೆ?

'ಪೂರ್ಣಿಮೆಯು ಹೋಗುವಳು'—ಎಂಬ ಮಾತು ಅಮೃತನಿಗೆ ಮನದಟ್ಟಾಯಿತು. 'ಈ ದುರ್ಘಟನೆಯು ಸ್ವಲ್ಪ ದಿವಸದಲ್ಲಿಯೇ ಆಗಬೇಕಾದುದು' ಎಂದು ಅವನಿಗೆನಿಸಿತು. ಆದರೆ ಅವನು ಚಿಂತಿಸಿದ ಕಾಲಕ್ಕಿಂತ ಪೂರ್ವದಲ್ಲಿಯೇ ದುರ್ಘಟನೆಯು ಅವನೆದುರಿಗೆ ಸುದ್ದಿಯ ರೂಪದಲ್ಲಿ ತಾಂಡವವನ್ನಾಡಿತು. ಪೂರ್ಣಿಮೆಗೆ ಒಂದು ಸ್ಥಳವನ್ನು ನೋಡುವುದಾಗಿ, ಲಗ್ನದ ನಿಶ್ಚಯವೂ ಆಯಿತು. ಮಾತು-ಕತೆಯೆಲ್ಲವೂ ಮುಗಿದುಹೋಯಿತು. ವರನು ತುಂಬ ಶ್ರೀಮಂತ; ದೊಡ್ಡಮನೆತನದವನು; ಮನ್ನಣೆನಂತರ ಮನೆತನವೇ ಎಂದು ಹೇಳಬಹುದು. ಪೂರ್ಣಿಮೆಯ ತಾಯಿಯೂ ಆ ಸ್ಥಳವನ್ನು ತುಂಬ ಸಂತೋಷದಿಂದ ಒಪ್ಪಿದಳು. ಬಡತನದ ಪರಿಸ್ಥಿತಿಯಲ್ಲಿದ್ದ ತಾಯಿಯ ಕಣ್ಣಿಗೆ ಎಲ್ಲಕ್ಕೂ ಪ್ರಿಯವಾದ ವಿಷಯವೆಂದರೆ ಸಂಪತ್ತು. ಆ ಸಂಪತ್ತು ವರನಲ್ಲಿ ಯಥೇಚ್ಛವಾಗಿದ್ದಿತು. ಪೂರ್ಣಿಮೆಯ ಸುಖಜೀವನಕ್ಕೆ ಬೇಕಾಗುವ ಸಾಧನ-ಸಾಮುಗ್ರಿಗಳೆಲ್ಲವೂ ಅಲ್ಲಿ ಅಣಿಯಾಗಿದ್ದುವು. ಹೆಚ್ಚಿಗೇನು? ಪೂರ್ಣಿಮೆಯ ಮನಸ್ಸಿಗೆ ಏನೇನು ಬೇಕೆನಿಸಿದರೂ ಅಲ್ಲಿ ಕೊರತೆಯೆನಿಸುವ ಹಾಗಿರಲಿಲ್ಲ. ಇದಕ್ಕೂ ಮೊದಲು ತಾಯಿ ಚಿಂತೆಯಿಂದ ಕೊರಗಿ ಸೊರಗುತ್ತ ನಡೆದಿದ್ದಳು. ಪೂರ್ಣಿಮೆಯ ಮದುವೆಯ ಪ್ರಶ್ನೆ ಅವಳ ಮನದಲ್ಲಿ ಮೂಡುತ್ತಲೆ ಎದೆಯಲ್ಲಿ ಸುರಿಗೆಯನ್ನು ನೆಟ್ಟಂತಾಗುತ್ತಿದ್ದಿತು. ಆದರೆ ಈಗೇನು? ದೇವ-ದೇವನು ಅವಳ ಚಿಂತೆ-ವಿಹ್ವಲತೆಗಳನ್ನು ಒಂದೇ ಒಂದು ಕೃಪಾಕಟಾಕ್ಷದಿಂದ ಹೊಡೆದೋಡಿಸಿಬಿಟ್ಟನು.

ಈ ಸುದ್ದಿಯನ್ನು ಕೇಳಿ ಅಮೃತನು ಹುಚ್ಚನಂತಾದನು; ಹೌಹಾರಿದವನಾದನು. ಅವನು ಒಮ್ಮೆಲೆ ಪೂರ್ಣಿಮೆಯ ಮನೆಯಕಡೆಗೆ ಓಡಿದನು; ಆದರೆ ಮತ್ತೆ ನಡುದಾರಿಯಿಂದಲೇ ಹಿಂತಿರುಗಿದನು. ವಿವೇಕವು ಅವನ ಕಾಲುಗಳನ್ನು ಕಟ್ಟಿಹಾಕಿದಂತೆ ಮಾಡಿತು. "ಅಲ್ಲಿಗೆ ಹೋಗಿಯಾದರೂ ಏನು ಉಪಯೋಗ?" ಎಂಬ ಮಾತು ಅವನ ತಲೆಯಲ್ಲಿ ಸುತ್ತಾಡಿತು. "ಪೂರ್ಣಿಮೆಯ ದೋಷವೇನು ಇದರಲ್ಲಿ?.... ಹಾಗಾದರೆ ದೋಷವಾದರೂ ಯಾರದು?" ಎಂದು ಯೋಚಿಸಿಯೆ ಯೋಚಿಸಿದನು. ಬಳಿಕ ಮನೆಗೆ ಮರಳಿ ಬಂದು ಮುಸುಕುಹಾಕಿಕೊಂಡು ಮಲಗಿಬಿಟ್ಟನು. "ಪೂರ್ಣಿಮೆಯು ಹೊರಟುಹೋದರೆ ತಾನು ಇರಬೇಕ್ಕು

CC-0. Jangamwadi Math Collection. Digitized by eGangotri

ಹೇಗೆ? ನನ್ನ ಜೀವನದಲ್ಲಿ ಸ್ವಾರಸ್ಯವಾದರೂ ಏನು?" ಅಮೃತನು ಭವಿಷ್ಯಜ್ಜೀವನದ ನೀರಸ ಕನಸುಗಳನ್ನು ಕಂಡು ಹೆದರಿದನು; ಕಳವಳಿಸಿದನು. ನಸುವೇಳೆಯಲ್ಲಿ ಬಿರುಗಾಳಿಯನಂತರ ಕಂಡುಬರುವ ಶಾಂತ ವಾತಾವರಣದಂತೆ, ಅಮೃತನ ಅಲ್ಲೋಲಕಲ್ಲೋಲವಾದ ಮನಸ್ಸು ಸ್ತಬ್ಧವಾಯಿತು. ಆದರೆ ಅವನನ್ನು ಆವರಿಸಿದ ಔದಾಸೀನ್ಯವು ಮಾತ್ರ ಹಾಗೆಯೇ ಉಳಿದುಕೊಂಡಿದ್ದಿತು.

ಒಂದು ವೇಳೆ ಪೂರ್ಣಿಮೆಯು ಹೋಗುವುದೇ ಆದಲ್ಲಿ ಅವಳ ಜೊತೆಗೆ ಯಾವುದೇ ಬಗೆಯ ಸಂಬಂಧವನ್ನಾದರೂ ಇಟ್ಟುಕೊಳ್ಳುವುದರಲ್ಲಿ ಏನು ಪ್ರಯೋಜನ? ಸಂಬಂಧವನ್ನು ಇಟ್ಟುಕೊಳ್ಳುವುದಾದರೂ ಏಕೆ? ಅವಳ ಬಿಟ್ಟಿ ಮಾತುಕತೆಗಳಾದರೂ ಏತಕ್ಕೆ? ಅಮೃತನು ಸಂಬಂಧವನ್ನು ಇಟ್ಟುಕೊಳ್ಳಬೇಕೆಂದು ಹವಣಿಸಿದರೂ, ಪೂರ್ಣಿಮೆಗೆ ಅದರ ಅರಿವು ಇಲ್ಲದೆ ಇವನನ್ನು ಕಡೆಗಣಿಸಿಬಿಟ್ಟರೆ? ಇನ್ನು ಮೇಲೆ ಅವಳಿಗೆ ಇವನದೇನು ಪ್ರಯೋಜನ? ಮೊದಲು ಕೂಡ ಪೂರ್ಣಿಮೆಗೆ ಅಮೃತನ ಸ್ನೇಹದ ನಿಜವಾದ ಅರಿವು ಆದದ್ದೆಲ್ಲಿ? ಅವನೊಬ್ಬ ಆಕೆಯ ಸಂಗಾತಿಯಾಗಿದ್ದ, ನೆರೆಮನೆಯವನಾಗಿದ್ದ ಅಷ್ಟೆ; ಅಮೃತನೇ ಬಾಲಗುಂಡಾಡಿಸುತ್ತ ಬೆಂಬತ್ತಿ ಸುತ್ತುತ್ತಿದ್ದ. ಈಗ ಅಮೃತನ ಬಗ್ಗೆ ಪೂರ್ಣಿಮೆಯು ಒಂದು ಮಾತನ್ನೂ ವಿಚಾರಿಸಿರಲಿಲ್ಲ. ಅವಳಿಗೆ ತಾನು ಲಕ್ಷಾಧೀಶದ ಹೆಂಡತಿಯಾಗುವೆನೆಂದು ಅಭಿಮಾನವೂ ಎನಿಸಿರಬೇಕು. ಎನಿಸಬಾರದೇಕೆ? ಲಕ್ಷಾಧೀಶನ ಹೆಂಡತಿಯಾಗಲಿರುವಳು. ಆಗಲಿ, ಅದಕ್ಕೇನು? ಅಮೃತನೇನೂ ಇದರಿಂದ ಸಾಯಲಾರ! ಜೀವಿಸಿಕೊಂಡೇ ಇರುವನು. ಈ ಕಾಲದ ಆತ್ಮಿಯತೆಯ ರೀತಿಯೇ ಹೀಗೆ ಅಲ್ಲವೆ?

ಈ ವಿಚಾರಸರಣಿಯು ಒಳಗೊಳಗೇ ತಿರುಗಣಿಯಂತೆ ಸುತ್ತಲುತೊಡಗಿತು. ಎಷ್ಟು ವಿಚಾರಿಸಿದರೇನು? ಅದೆಲ್ಲವೂ ನಿರರ್ಥಕವೇ ಆಗಿದ್ದಿತು. ಯಾವುದೆಲ್ಲವೂ ಅಂತರ್ಯದ ಆಕಾಶದಲ್ಲಿಯೇ? ಪೂರ್ಣಿಮೆಯ ತಾಯಿಯೆಡೆಗೆ ಹೋಗಿ, ಪೂರ್ಣಿಮೆಯು ತನ್ನವಳೆಂದು ಹೇಳಿಕೊಳ್ಳುವ ಧೈರ್ಯವಾದರೂ ಅವನಿಗೆ ಎಲ್ಲಿ? 'ಅವಳು ತನ್ನವಳಾಗಿಯೇ ಉಳಿಯಲೆಂದು ಹೇಳಿದರೆ?' ಛೇ, ಮನೆಮನೆಗಳಲ್ಲಿಯೆಲ್ಲ ಕ್ರಾಂತಿಯೇ ಎದ್ದುಬಿಟ್ಟೀತು! ಹಳ್ಳಿಯಲ್ಲಿ ಹೊಸ ಸಂಕಟವೊಂದು ಉಪಸ್ಥಿತವಾದೀತು! ಇಂತಹ ಸನ್ನಿವೇಶಗಳನ್ನು ಹಳ್ಳಿಯ ಕತೆಗಳು ಒಂದನ್ನಾರೂ ತೋರಿಸಬಲ್ಲವೇ!

ಪೂರ್ಣಿಮೆಯ ಸ್ಥಿತಿಯಾದರೂ ಅಮೃತನಂತೆಯೆ ವೈಚಿತ್ರ್ಯಪೂರ್ಣವಾಯಿತು. ಅಮೃತನ ದಾರಿಯನ್ನು ಕಾಯುವುದು ಆಕೆಯ ಉದ್ಯೋಗವಾಯಿತು. "ನಮ್ಮ ಮನೆಯ ಬಾಗಿಲ ಮುಂದೆ ಹಾದುಹೋಗುವ ಅಮೃತ ಮನೆಯೊಳಕ್ಕೆ ಬರುವುದಿಲ್ಲವೇಕೆ....?" ಎಂಬುದಾಗಿ ಅವಳು ವಿಚಾರಿಸುವಳು. ಪೂರ್ಣಿಮೆಯು ಎಂದಾದರೂ ದಾರಿಯಲ್ಲಿ ಬೆಟ್ಟಿಯಾದರೆ, ಅವಳ ನೆರಳು ಕೂಡ ಬೇಡವೆಂಬವರಂತೆ ಅಮೃತ ದೂರ ಹಾಯ್ದುಹೋಗುವನು — ಆಕೆ ಬಿಂದಿಗೆಯನ್ನು ತೆಗೆದುಕೊಂಡು, ಬಾವಿಯ ದಂಡೆಗೆ ಆತು ನಿಂತು, ಅಮೃತನ ಬರವನ್ನು ನಿರೀಕ್ಷಿಸುವಳು. ಅವನು ಬರಲೆಂದು ಬಹಳವಾಗಿ ಹಾರಯಿಸುವಳು. ಆದರೆ ಅವನು ಎಲ್ಲಿಯೂ ಕಂಡುಬರುತ್ತಿರಲಿಲ್ಲ.

ಒಂದು ದಿನ ಪೂರ್ಣಿಮೆಯೇ ಅವನ ಮನೆಗೆ ಹೋಗಿ ಬೆಟ್ಟಿಯಾಗಿ ಕೇಳಿದಳು: "ಇಷ್ಟು ದಿನಗಳಾದರೂ ನಮ್ಮ ಮನೆಗೆ ಒಮ್ಮೆಯೂ ಬಂದಿಲ್ಲವೇಕೆ?" ಸರಿ! ಇಷ್ಟಕ್ಕೆ ಅವಳ ಕಂಠ ಬಿಗಿದುಬಂದಿತು. ತಾನು ಈ ಊರಲ್ಲಿ, ಇನ್ನು ತೀರ ಸ್ವಲ್ಪ ದಿವಸವೇ ಇರಬೇಕಾಗಿದೆಯೆಂಬ ಮಾತು ಆಗ ಅವಳ ಲಕ್ಷ್ಯಕ್ಕೆ ಬಂದಿತು.

ಅಮೃತನನ್ನು ಆವರಿಸಿದ್ದ ಔದಾಸೀನ್ಯ-ಸ್ತಬ್ಧತೆಗಳು ಹಾಗೆಯೇ ಉಳಿದುಕೊಂಡಿದ್ದುವು. ಕೆಲವೇಳೆ ಮೌನಿಯಾಗಿಯೇ ಕುಳಿತುಬಿಟ್ಟನು. ಕೊನೆಗೆ ಸಹಜವಾಗಿ "ಪರೀಕ್ಷೆ ಸಮಾಸಿದೆ, ವೇಳೆಯೇ ಸಿಕ್ಕುವುದಿಲ್ಲ!" ಎಂದು ಇಷ್ಟೇ ನುಡಿದುಬಿಟ್ಟನು. ಮತ್ತೆ ಕೆಲ ವೇಳೆ ನೀರವತೆ. ಅಮೃತನೇ ಮಾತನಾಡಿದನು: "ನನ್ನ ತಲೆಯಲ್ಲೊಂದು ವಿಚಾರ; ನೀನು ಹೋಗುವವಳೇ ಇದ್ದ ಮೇಲೆ ........" "ನಾನು ಪ್ರೇಮಸಂಬಂಧಗಳನ್ನಾದರೂ ಏತಕ್ಕೆ ಬಿಗಿಪಡಿಸಲಿ?" ಎಂಬುದನ್ನೂ ಹೇಳಿ ಮುಗಿಸಬೇಕೆಂದು ಇಚ್ಛಿಸುತ್ತಿದ್ದನೆಂದು ತೋರುವುದು. ಆದರೆ ಹೀಗೆ ಹೇಳುವುದು ಮೂರ್ಖತನವೆನಿಸಿತೇನೊ! ಆಪ್ತಮನುಷ್ಯನೊಬ್ಬನು ರೋಗದಿಂದ ಸಾಯುವುದರಲ್ಲಿದ್ದಾನೆ. ಅವನು ಸಾಯುವವನೇ ಇರುವನೆಂದು ತಿಳಿದು ಔಷಧೋಪಚಾರವನ್ನು ಬೇರೆ ಬಿಡಲಾಗುವುದೇ? ಎಷ್ಟೆಷ್ಟು ಅವನ ಪ್ರಕೃತಿಯಲ್ಲಿ ದೋಷಗಳು ಕಂಡುಬರುವುವೋ ಅಷ್ಟಷ್ಟು ತತ್ಪರತೆಯಿಂದ ಆಪ್ತವರ್ಗದವರು ಅವನನ್ನು ಉಪಚರಿಸಬೇಕಾಗುವುದು. ಅಷ್ಟಾದರೂ ರೋಗಿಗೆ ಕೊನೆಯ ಕ್ಷಣವು ಬಂದಿತೆಂದರೆ ಆಪ್ತವರ್ಗದ ದುಗುಡ-ಓಡಾಟಗಳಿಗೆ ಅಳತೆಯೇ ಇರುವುದಿಲ್ಲ. ಆದುದರಿಂದಲೇ ಅಮೃತನು ಮಾತಿನ ರೀತಿಯನ್ನು

CC-0. Jangamwadi Math Collection. Digitized by eGangotri

ಬದಲಿಸಿದನು. "ಆ ಗೃಹಸ್ಥರು ತುಂಬ ಸಿರಿವಂತರೆಂದು ಕೇಳಿದ್ದೇನೆ."

ಪೂರ್ಣಿಮೆಯು ಆವನ ಕೊನೆಯ ವಾಕ್ಯವನ್ನು ಬಹುಶಃ ಕೇಳಿರಲಿಕ್ಕಿಲ್ಲ. ಅಥವಾ ಕೇಳಿಯೂ ಅದಕ್ಕೆ ಉತ್ತರ-ಕೊಡಬೇಕೆಂದು ಅವಳಿಗೆನಿಸಿರಲಿಕ್ಕಿಲ್ಲ. ಅವಳ ತಲೆಯಲ್ಲಿ ಅಮೃತನ ಪ್ರಥಮ ವಾಕ್ಯವೇ ವಿಚಿತ್ರ ಸಂವೇದನೆಯನ್ನು ಉಂಟುಮಾಡಿದ್ದಿತು.

"ಇದರಲ್ಲಿ ನನ್ನ ಅಪರಾಧವಾದರೂ ಏನಿದೆ?" ದುಃಖಾರ್ತಭಾವದವಳಾಗಿ ಪೂರ್ಣಿಮೆಯು ಪ್ರಶ್ನಿಸಿದಳು. "ನಾನು ಸ್ವಸಂತೋಷದಿಂದ ನಲಿಯುತ್ತ ಹೊರಟಿರುವೆನೇ? ಹೋಗಲೇ ಬೇಕಾಗುವುದೆಂದು ಹೋಗಲಿರುವೆನು...." ಇದಿಷ್ಟನ್ನು ನುಡಿಯುವಾಗಲೇ ಪೂರ್ಣಿಮೆಯ ಮೊಗವು ರಕ್ತದ ಬಣ್ಣಕ್ಕೇರಿದಿದ್ದಿತು. ಅವಳು ಮಾತನಾಡಬೇಕೆಂದು ಅಪೇಕ್ಷಿಸಿದುದಕ್ಕಿಂತ ಹೆಚ್ಚಾಗಿ ಮಾತನಾಡಿಬಿಟ್ಟಿದ್ದಳು.

ಅಮೃತನ ಭಾವಗರ್ಭಿತವಾದ ನೋಟ ಪೂರ್ಣಿಮೆಯ ಮುಖವನ್ನು ನಿಟ್ಟಿಸಿತು. ಅವಳು ನುಡಿದ ಮಾತುಗಳಲ್ಲಿ ಅರ್ಥವೇನಾದರೂ ಇದೆಯೋ ಇಲ್ಲವೋ—ಎಂಬುದನ್ನು ಅವನು ಶೋಧಿಸಲು ಹವಣಿಸುತ್ತಿದ್ದನೆಂದು ತೋರಿತು. ಪೂರ್ಣಿಮೆಯ ಅಂತರ್ಯವನ್ನು ಪ್ರವೇಶಿಸಿ, ಅಲ್ಲಿಯ ಭಾವಾವೇಶವನ್ನು ನೋಡಿಕೊಳ್ಳುವಷ್ಟು ಅವನ ದೃಷ್ಟಿಯಲ್ಲಿ ಶಕ್ತಿಯಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು? 'ಸಾಮಾನ್ಯವಾಗಿ ಎಲ್ಲ ಹುಡುಗಿಯರೂ ಈ ರೀತಿಯ ನಿರಾಶೆಯ ಮಾತುಗಳನ್ನಾಡುವರು. ಆದರೆ ಮದುವೆಯಾದ ಮೇಲೇನು ಅದು ಅವರ ಜೀವಕ್ಕೆ ಮುಳುವಾಗುವುದು ಅಷ್ಟರಲ್ಲಿಯೇ ಇದೆ. ಒಂದಿಲ್ಲೊಂದು ದಿನ ಎಲ್ಲ ಹುಡುಗಿಯರೂ ಒಳ್ಳೊಳ್ಳೆಯ ಅಲಂಕಾರಗಳನ್ನು ತೊಟ್ಟು, ಮೆರಗುವಟ್ಟೆಗಳನ್ನುಟ್ಟು, ಚಕ್ಕಂದದಲ್ಲಿ ತಮ್ಮ ತಮ್ಮ ಗಂಡಂದಿರ ಕಡೆಗೆ ಹೋಗುವರು' ಈ ಬಗೆಯ ಯೋಚನೆಯಲ್ಲಿ ಅಮೃತನಿಗೆ ವಿಶೇಷ ಸಂತೋಷವೆನಿಸಲಿಲ್ಲ; ಏಕೆಂದರೆ ಪೂರ್ಣಿಮೆಯೂ ಆ ಹುಡುಗಿಯರಲ್ಲಿ ಒಬ್ಬಳು.

ಅವನು ಪುನಃ ಅಂಜಂಜುತ್ತ ಕೇಳಿದನು: "ಆಮೇಲೆ ನನ್ನ ನೆನಪಾದರೂ ಏತಕ್ಕಾಗಬೇಕು ನಿನಗೆ?" ಇದಿಷ್ಟನ್ನು ಹೇಳಬೇಕಾದರೆ ಅವನಿಗೆ ಸಾಕುಬೇಕಾಗಿ ಹೋಯಿತು. ಹಣೆತುಂಬ ಬೆವರು; ಲಜ್ಜೆಯಿಂದ ಹುಚ್ಚನಂತಾಗಿದ್ದನು. ಒಮ್ಮೆಲೆ ಎದ್ದು ಕಿರುಮನೆಯಿಂದ ಹೊರಟು ಓಡಬೇಕೆನ್ನುವಷ್ಟು ಅವನು ಮುಗ್ಧಭಾವದವನಾದನು. ಪೂರ್ಣಿಮೆಯ ಮುಖದ ಕಡೆಗೆ ನೋಡುವಷ್ಟು ಧೈರ್ಯ ಅವನಲ್ಲಿರಲಿಲ್ಲ. ಇದೆಲ್ಲ ಅವಳಿಗೆ ಬೇರೆಯಾಗಿಯೇನೂ ತಿಳಿದಿರಲಿಕ್ಕಿಲ್ಲವಲ್ಲವೇ!

ಪೂರ್ಣಿಮೆಯು ಬಾಗಿದ ಮೊಗದವಳಾಗಿ—ಮನಸ್ಸಿನಲ್ಲಿ ಮಾತನಾಡಿಕೊಂಡಳೋ ಎನ್ನುವಷ್ಟು — ಮೆಲ್ಲಗೆ ಹೇಳಿದಳು. 'ನನ್ನನ್ನು ಇಷ್ಟು ಸ್ನೇಹವಿಲ್ಲದವಳೆಂದು ತಿಳಿದುಕೊಂಡಿದ್ದೀಯೇನು? ಅಮೃತ, ನಾನು ನಿಜವಾಗಿಯೂ ನಿರಪರಾಧಿನಿಯು. ಇದನ್ನೆಲ್ಲ ತಿಳಿದವನಾಗಿಯೂ ನೀನು ನನ್ನ ಮೇಲೆ ಕೋಪಿಸಿರುವುದನ್ನು ನೋಡಿ ನನಗೆ ಕಳವಳವೆನಿಸುತ್ತದೆ; ಮುಂಗಾಣದ ಹಾಗಾಗುತ್ತದೆ. ನನ್ನನ್ನು ಇಷ್ಟೊಂದು ದುಗುಡಕ್ಕೆ ಈಡು ಮಾಡುತ್ತೀಯಾ?.... ನೀನಾದರೂ ಈ ಪ್ರಸಂಗದಲ್ಲಿ ನನಗೆ ಸಹಾನುಭೂತಿಯನ್ನು ತೋರಿಸಲಿಕ್ಕೆ ಬೇಕಾಗಿದ್ದಿತು. ನನಗೆ ಧೈರ್ಯಕೊಡುವುದೇ ನಿನಗೆ ಉಚಿತವಾಗಿತ್ತು. ಆದರೆ ನನ್ನ ಮೇಲೆ ಸಿಟ್ಟಿಗೆದ್ದು ಕುಳಿತುಬಿಟ್ಟಿದ್ದೀಯೆ! ನೀನೇ ಹೇಳಿಬಿಡು, ನನಗೆ ಇನ್ನು ಬೇರೆ ಯಾವ ದಾರಿಯಿದೆ? ನನ್ನವರೆನ್ನಿಸಿಕೊಳ್ಳುವವರೇ ನನ್ನನ್ನು ಎರಡನೆಯವರ ಮನೆಗೆ ಅಟ್ಟಲು ಸಿದ್ಧರಾಗಿದ್ದಾರೆ; ಎಂದಮೇಲೆ ನಾನು ಮಾಡಬೇಕಾದುದಾದರೂ ಏನು? ಪರಕೀಯರಿಂದ ನಾನೇನು ಎಳೆಯಲ್ಪಡುತ್ತಿಲ್ಲ; ಮನೆಯವರೇ ಹೊರಕ್ಕೆ ಹಾಕಬೇಕೆಂದಿದ್ದಾರೆ! ನನ್ನ ಸ್ಥಿತಿಯೇನಾಗಬಹುದು? ಇದೇ ದುಗುಡದಿಂದ ನಾನು ಬೆಂದುಬೀಳುತ್ತಿರುವುದು ಸಾಕಾಗದೇ? ನಿನ್ನ ಕೋಪವನ್ನು ಬೇರೆ ಅದಕ್ಕೆ ಭರತಿಹಾಕುತ್ತೀಯೇನು?"

ಪೂರ್ಣಿಮೆಯ ಗಂಟಲು ಮತ್ತೆ ಬಿಗಿದು ಬಂದಿತು. ಆಕೆಯ ಈ ಔದಾಸೀನ್ಯ-ದುಃಖಗಳನ್ನು ಕಂಡು, ಈ ವರೆಗೆ ಮುಚ್ಚಿಟ್ಟುಕೊಂಡ ಸಂವೇದನೆಯೊಂದು ಅವಳ ಬಗೆಯನ್ನು ಸುಡುತ್ತಿದೆಯೆಂಬ ಮಾತು ಅಮೃತನ ಲಕ್ಷ್ಯಕ್ಕೆ ಬಂದಿತು. ಅವನು ಅವಲಂಬಿಸಿದ ಹುಡುಗಾಟಿಕೆಯ ಕ್ಷುದ್ರವೃತ್ತಿ-ಸ್ವಾರ್ಥಪರತೆಗಳು ಕಾಳಿಮದಂತೆ ಅವನ ಮೊಗದಲ್ಲಿ ಕಾಣಿಸಿಕೊಂಡುವು. ಪೂರ್ಣಿಮೆಯ ಮಾತುಗಳಲ್ಲಿ ಸತ್ಯತೆಯಿದ್ದಿತು. ಆತ್ಮೀಯತೆಯಿದ್ದಿತು. ಪರಕೀಯರ ಮುಂದೆ ತಮ್ಮ ಎದೆಗುದಿಯನ್ನು ಯಾರು ತೋಡಿಕೊಳ್ಳುವರು? ಇಂತಹ ಪರಿಸ್ಥಿತಿಯಲ್ಲಿ ಅಮೃತನು ಅವಳಿಗೆ ಅವಶ್ಯವಾಗಿ ಸಹಾಯ ಮಾಡಬೇಕಾಗಿದ್ದಿತು; ಧೈರ್ಯಕೊಡಬೇಕಾಗಿದ್ದಿತು. ಈ ಕರ್ತವ್ಯವನ್ನು ಅವನು ತೀರ ಪ್ರಸನ್ನತೆಯಿಂದಲೇ ಮಾಡಬೇಕಾಗಿದ್ದಿತು. ಪ್ರೇಮದ ಹೊಸ ಆದರ್ಶವೊಂದನ್ನು ಪೂರ್ಣಿಮೆಯು ಅವನೆದುರಿಗೆ ಇಟ್ಟಿದ್ದಳು. ಅಮೃತನ ವಿವೇಕವಾದರೂ ಈ ಆದರ್ಶವನ್ನು ತಪ್ಪಿ ನಡೆಯುವಷ್ಟು ದುರ್ಬಲವಾಗಿರಲಿಲ್ಲ. ಪ್ರೇಮವು ಕೂಡ ಒಂದು ಬಗೆಯ ಸ್ವಾರ್ಥತ್ಯಾಗವೆಂದು ಹೇಳುವುದರಲ್ಲಿ

CC-0. Jangamwadi Math Collection. Digitized by eGangotri

ಸಂದೇಹವೇನೂ ಇಲ್ಲ; ಆದರೆ ಅದು ಬಹಳ ದೊಡ್ಡ ಜೀವನಕ್ಕೆ ಸಲ್ಲುವುದು ಅಷ್ಟೆ !

ಅವನು ಲಜ್ಜಿತನಾಗಿ ನುಡಿದನು. " ಪೂರ್ಣಿಮೆ, ನನ್ನನ್ನು ಕ್ಷಮಿಸು; ನಾನು ನಿಜವಾಗಿಯೂ ಅಪರಾಧಿಯಾಗಿದ್ದೇನೆ; ಇದುವರೆಗೆ ನನ್ನನ್ನು ಹುಚ್ಚೊ ಮೂರ್ಖತನವೋ ಆವರಿಸಿದ್ದಿತು. "

(೨)

ಪೂರ್ಣಿಮೆಯ ಮದುವೆಯಾಯಿತು. ಅಮೃತನು ಎಂತೆಂತಹ ಕಷ್ಟ-ಶ್ರಮಗಳನ್ನೂ ಲೆಕ್ಕಿಸದೆ, ಲಗ್ನವ್ಯವಸ್ಥೆಗಾಗಿ ಶ್ರಮಪಡುತ್ತಿದ್ದನು. ಅಳಿಯದೇವನು ಅರ್ಧಕ್ಕಿಂತ ಹೆಚ್ಚು ವಯಸ್ಸಿನವನು. ದಪ್ಪಗಿನ ದೇಹ; ಸಿರಿವಂತಿಕೆಯ ಡೊಳ್ಳುಹೊಟ್ಟೆ. ಸಿರಿವಂತಿಕೆಗೆ ಸಹಜವಾದ ದೇಹವಿದ್ದಿತೆಂದ ಮೇಲೆ ಮನಸ್ಸೇಕೆ ಹಾಗೆ ಇರಬಾರದು ? ಗರ್ವವು ತುಂಬಿದ್ದಿತು.ಇಲ್ಲದ ಪ್ರತಿಷ್ಠೆ-ಕೋಪ.ಇಷ್ಟಿದ್ದರೂ ಅಮೃತನು ಆತನ ಆತಿಥ್ಯವನ್ನು ತುಂಬ ತತ್ಪರತೆಯಿಂದ ನೋಡಿಕೊಳ್ಳುತ್ತಿದ್ದನು. ಅಳಿಯದೇವನು ನಿಜವಾಗಿಯೂ ದೇವರ ಸಮಾನ. ಅವನ ಪ್ರಸನ್ನತೆಯ ಹಾಸ್ಯದ ಕಿರಣವೊಂದು ತನ್ನನ್ನು ಸ್ವರ್ಗಕ್ಕೆ ಕಳುಹಿಸಬಹುದೆಂದು ನಂಬಿಗೆಯೇನೋ ಅಮೃತನಿಗೆ ! ಆತನು ಮೈತುಂಬ ಕಣ್ಣುಗಳುಳ್ಳವನಾಗಿ, ಅಳಿಯನ ಸೇವೆಗೆ ಸಿದ್ಧನಾಗಿದ್ದ. ಪೂರ್ಣಿಮೆಯ ಜೊತೆಗೆ ಮಾತನಾಡಲು ಅವನಿಗೆ ವೇಳೆಯೇ ಸಿಕ್ಕಿರಲಿಲ್ಲ, ಅಲ್ಲದೆ ಅದಕ್ಕಾಗಿ ವೇಳೆಯನ್ನು ಸಾಧಿಸಲಿಕ್ಕೆ ಅವನು ಪ್ರಯತ್ನಿಸಿಯೂ ಇರಲಿಲ್ಲ. ಅಮೃತನು ಆಗಾಗ ಮದುಮಗಳ ಕಡೆಗೆ ನೋಟ ಹೊರಳಿಸಿ ನೋಡಿದಾಗ, ಅವಳು ಅಳುತ್ತಿರುವುದು ಕಾಣುತ್ತಿದ್ದಿತು. ಪ್ರತ್ಯಕ್ಷವಾಗಿ ಅವಳನ್ನು ಸಂತಯಿಸುವುದು ಸಾಧ್ಯವಾಗದ್ದರಿಂದ, ನೇತ್ರಭಾಷೆಯಿಂದಲೆ ಶಕ್ಯವಿದ್ದಷ್ಟು ಧೈರ್ಯ-ವಿಶ್ವಾಸಗಳನ್ನು ಹೇಳುತ್ತಿದ್ದ; ಸಹಾನುಭೂತಿಯನ್ನು ಪ್ರಕಟಿಸುತ್ತಿದ್ದ.

ಮೂರನೆಯ ದಿವಸ ಪೂರ್ಣಿಮೆಯು ಅತ್ತತ್ತು, ಕೊನೆಗೆ ಕಣ್ಣೊರಸಿಕೊಂಡು ಅತ್ತೆಯ ಮನೆಗೆ ಹೋದಳು. ಅಮೃತನು ಅದೇ ದಿನ ಶಿವಮಂದಿರಕ್ಕೆ ಹೋಗಿ, ದೇವರನ್ನು ಸಾಷ್ಟಾಂಗವಾಗಿ ವಂದಿಸಿ, ಕೈಜೋಡಿಸಿ, ಗದ್ಗದಿತನಾಗಿ ಬೇಡಿಕೊಂಡನು: 'ದೇವಾ, ಪೂರ್ಣಿಮೆಯು ಸುಖದಿಂದಿರಲಿ!'

ದುಃಖವು ಹೊಸದಾಗಿದ್ದಾಗ ಸಾಮಾನ್ಯ ವ್ಯಾವಹಾರಿಕ ವಿಚಾರಗಳು ಮನವನ್ನು ಪ್ರವೇಶಿಸುವುವಾದರೂ ಹೇಗೆ ? ದುಃಖವೆಂಬುದು ಆತ್ಮಕ್ಕೆ ತಗಲಿಕೊಂಡ ರೋಗವನ್ನು ಕಳೆದು ಬಿಡುವ ದಿವ್ಯೌಷಧಿಯಾಗಿದೆ; ಆದರೂ ಅಮೃತನ ಮನಸ್ಸಿನಲ್ಲಿ ಅದು ಶೂನ್ಯತೆಯನ್ನು ತಂದು ತುಂಬಿತು. ಬದುಕೆಲ್ಲವೂ ಆತನಿಗೆ ಬರಿದುಬರಿದಾಗಿ ಕಾಣಲು ತೊಡಗಿತು. ತನ್ನ ಜೀವನಕ್ಕೆ ಇನ್ನು ಯಾವ ಉದ್ದೇಶ-ಕಾಮನೆಗಳೂ ಉಳಿಯಲಿಲ್ಲವೆಂದು ಆತನಿಗೆನಿಸಿತು.

(೩)

ಮೂರು ವರುಷಗಳು ಸಂದುಹೋದುವು; ಪೂರ್ಣಿಮೆಯು ಮರಳಿ ತವರುಮನೆಗೆ ಬಂದಳು. ಇಷ್ಟರಲ್ಲಿಯೇ ಅಮೃತನ ಲಗ್ನವೂ ಆಗಿದ್ದಿತು. ಅವನು ಸಂಸಾರಶಕಟವನ್ನು ವಹಿಸಿ, ಮಾರ್ಗಕ್ರಮಣಮಾಡುವುದರಲ್ಲಿದ್ದನು. ಮದುವೆಯಾದಂದಿನಿಂದ ಅವನ ಜೀವನಕ್ರಮವೇ ಬದಲಾಗಿದ್ದಿತು. ಆದರೂ ಅವನ ಬಗೆಯಲ್ಲಿ ಅಸ್ಪಷ್ಟವಾದ ಆಶೆಯೊಂದು ಉಳಿದುಬಂದಿದ್ದಿತು. ಅದಕ್ಕೆ ಯಾವುದೊಂದು ಬಗೆಯ ಸ್ಪಷ್ಟವಾದ ಸ್ವರೂಪವನ್ನೂ ಕಲ್ಪಿಸಲಾಗುತ್ತಿದ್ದಿಲ್ಲ. ಅವನ ಆ ಆಶೆಯು ಥರ್ಮಾಮಿಟರಿನಲ್ಲಿಯ ಪಾರಜದಂತೆ, ಅಂತಃಕರಣದ ನಾಳದಲ್ಲಿ ಸುರಕ್ಷಿತವಾಗಿದ್ದಿತು. ಪೂರ್ಣಿಮೆಯ ಆಗಮನದಿಂದ ಈಗ ಅದಕ್ಕೆ ಕಾವು ತಗಲಿದುದರಿಂದ, ಆ ಪಾರಜವು ಹಬ್ಬಿ ತೀರ ಮೇಲಿನ ಅಂಶ ( degree ) ದ ವರೆಗೂ ಹೋಗಿ ಮುಟ್ಟಿತು.

ಪೂರ್ಣಿಮೆಯ ಕಂಕುಳಲ್ಲಿ ಎರಡು ವರ್ಷದ ಸುಂದರವಾದ ಮಗುವೊಂದು ಒಪ್ಪುತ್ತಿದ್ದಿತು. ಹಗಲಿರುಳೂ ಕೂಡಿಯೇ ಆ ಮಗುವನ್ನು ಕೊರಳಿಗೆ ಕಟ್ಟಿಕೊಂಡು ತಿರುಗುವುದರಲ್ಲಿ ಅಮೃತನಿಗೆ ಸಂತೋಷ. ಎರಡೂ ವೇಳೆ ತಿರುಗಾಡಲು ಕರೆದುಕೊಂಡು ಹೋಗುವನು. ತಿರುಗಿ ಬರುವಾಗ ಹೊಸ ಹೊಸ ಆಟದ ಸಾಮಾನುಗಳನ್ನೂ ಸವಿದಿನಸುಗಳನ್ನೂ ಹಿಡಿದುಕೊಂಡು ತಾಯಿಯ ಕಡೆಗೆ ಬರುತ್ತಿದ್ದಿತು ಮಗು. ಬೆಳಗಾಗುವುದೇ ತಡ ಬಿಸಿ-ಬಿಸಿಯಾದ—ಮೆದುವಾದ—ಸಿಹಿಸಜ್ಜಿಗೆ, ಒಂದು ಲೋಟ ಹಾಲು ತೆಗೆದುಕೊಂಡು ಅಮೃತನು ಪೂರ್ಣಿಮೆಯ ಮಗುವಿನ ಕಡೆಗೆ ಬರುವನು. ಅದನ್ನು ತಿನ್ನಿಸುವನು, ಸ್ನಾನಮಾಡಿಸುವನು, ತಲೆತುಂಬ ಹಾರುವ ಕುರುಳುಗಳನ್ನು ನೇವರಿಸುವನು. ಈ ಎಲ್ಲ ಕೆಲಸಗಳನ್ನೂ ಅವನು — ತಾನಾಗಿಯೇ — ತನ್ನ ಕಡೆಗೆ ನಿಯಮಿಸಿಟ್ಟುಕೊಂಡಿದ್ದನು. ಆ ಹುಡುಗನು ಕೂಡ ಅಮೃತನನ್ನು ಸಂಪೂರ್ಣ ತನ್ನವನನ್ನಾಗಿ ತಿಳಿದಿದ್ದಿತು. ಒಂದು ನಿಮಿಷ ಕೂಡ ಅವನನ್ನು ಬಿಡುತ್ತಿರಲಿಲ್ಲ.ಅಮೃತನ ಕೊರಳಿಗೆ ಸುತ್ತಿದ್ದ ಆ ಎಳಮಗುವಿನ ತೋಳುಗಳು ಅವನನ್ನು ಸದಾ ಬಂಧನದಲ್ಲಿರಿಸಿದ್ದುವು. ಎಷ್ಟೋ ಸಲ ಅದು ಅಮೃತನ

CC-0. Jangamwadi Math Collection. Digitized by eGangotri

ಬಳಿಯಲ್ಲಿಯೇ ಮಲಗುವುದು ಕೂಡ. ಪೂರ್ಣಿಮೆಯು ಕರೆಯಲು ಬಂದರೆ ಅವಳ ಜೊತೆಗೆ ಹೋಗುತ್ತಿರಲೇ ಇಲ್ಲ.

ಅಮೃತನು ಆಗಾಗ ಕೇಳುತ್ತಿದ್ದ: "ನೀನು ಯಾರವನಪ್ಪಾ ಮಗು? ಯಾರ ಹತ್ತಿರ ಇರುತ್ತೀಯೆ?"

"ನಿಮ್ಮ ಹತ್ರಲ" ಎಂದು ಮಗುವು ಉತ್ತರ ಕೊಡುತ್ತಿದ್ದಿತು. ಅಮೃತನು ಆನಂದದಿಂದ ಅದನ್ನು ಇನ್ನಿಷ್ಟು ಬಿಗಿಯಾಗಿ ಅಪ್ಪಿಕೊಳ್ಳುತ್ತಿದ್ದ.

ಪೂರ್ಣಿಮೆಯ ಸೌಂದರ್ಯವು ಈಗ ಇನ್ನಿಷ್ಟು ಕಳೆಯುಳ್ಳದಾಗಿತ್ತು. ಇದುವರೆಗೆ ಮೊಗ್ಗೆಯಂತೆ ಒಪ್ಪುತ್ತಿದ್ದ ಅವಳ ಅಂಗಕಾಂತಿಯು ಇಂದು ಅರಳಿ ಹೂವಾಗಿ ಮಗಮಗಿಸುತ್ತಿದ್ದಿತು. ಸ್ವಭಾವದಲ್ಲಿ ಕೂಡ ಮಾರ್ಪಾಡಾಗಿ, ನಸು ಆಢ್ಯತೆ-ಅಭಿಮಾನಗಳು ಕಾಲಿಟ್ಟಿದ್ದುವು. ಅದರ ಜೊತೆಗೇ ಒಂದುಬಗೆಯ ನಾಟಕೀಯ ಶೃಂಗಾರದ ಪ್ರೇಮವೂ ಬಂದುನಿಂತಂತಿದ್ದಿತು. ಬಗೆಬಗೆಯ ಚಿನ್ನದ ಅಲಂಕಾರಗಳನ್ನಿಟ್ಟು, ಮೆರುಗು ಬೀರುವ ರೇಶ್ಮೆಯ ಸೀರೆ-ಕುಪ್ಪಸಗಳನ್ನು ತೊಟ್ಟು ಹೊರಟಳೆಂದರೆ, ಅವಳು ಇನ್ನಿಷ್ಟು ಆಕರ್ಷಕಳಾಗಿ ತೋರುವಳು. ಅವಳ ನಡೆವಳಿಕೆಯು ತನ್ನನ್ನು ಛಲಿಸುವುದಕ್ಕಾಗಿಯೇ ಇದೆಯೇನೋ ಎಂದು ಅಮೃತನಿಗೆ ಎನಿಸುತ್ತಿದ್ದಿತು. ಆವಶ್ಯಕತೆಯಿಲ್ಲದ ಹೊರತು ಅವಳು ಅಮೃತನ ಜೊತೆಗೆ ವಿಶೇಷವಾಗಿ ಮಾತನಾಡುತ್ತಿದ್ದಿಲ್ಲ. ಒಂದುವೇಳೆ ಮಾತನಾಡಿದರೆ, 'ನಾನು ಮಾತನಾಡುತಿರುವುದೇ ನಿನ್ನಮೇಲೆ ಮಹದುಪಕಾರ' ಎಂಬ ಭಾವನೆಯು ಅವಳ ಪ್ರತಿಯೊಂದು ಮಾತಿನಿಂದಲೂ ಕಂಡುಬರುತ್ತಿದ್ದಿತು. ಪೂರ್ಣಿಮೆಯ ಮಗನ ಸಲುವಾಗಿ ಅಮೃತನು ಎಷ್ಟೊಂದು ಜೀವಬಿಡುತ್ತಿದ್ದನು! ಅವನ ಇಚ್ಛೆಗಳನ್ನು ಎಷ್ಟೋ ಉತ್ಸುಕತೆಯಿಂದ ಪೂರಯಿಸುತ್ತಿದ್ದನು. ಈಬಗೆಯ ಆತ್ಮೀಯ-ಉಪಚಾರ ಪ್ರೀತಿಗಳು ಪೂರ್ಣಿಮೆಯ ದೃಷ್ಟಿಯಿಂದ ಬೆಲೆಯಿಲ್ಲದುವಾಗಿ ತೋರುತ್ತಿದ್ದುವು. ಆ ಹುಡುಗನ ಸೇವೆ-ಶುಶ್ರೂಷೆಗಳನ್ನು ಮಾಡುವುದು ಅಮೃತನ ಕರ್ತವ್ಯವೇ ಆಗಿದ್ದಿತೆಂದೂ, ಆ ಕರ್ತವ್ಯವನ್ನು ಅವನು ಮಾಡಿಯೇ ತೀರಬೇಕೆಂದೂ ಅವಳ ಭಾವನೆಯಾಗಿದ್ದಂತೆ ಕಂಡುಬರುತ್ತಿದ್ದಿತು. ಅವನು ಸಲ್ಲಿಸುತ್ತಿದ್ದ ಸೇವೆಗೆ ಬದಲಾಗಿ ಯಾವಬಗೆಯ ಧನ್ಯವಾದಕ್ಕೂ ಕೃತಜ್ಞತೆಗೂ ಅವನು ಬಾಧ್ಯಸ್ಥನಲ್ಲ!

ಮಗುವು. ಹಟಕ್ಕೆ ಬಂದು ಅಳುತ್ತಿರುವಾಗ ಅದನ್ನು ಪೂರ್ಣಿಮೆ ಗದರಿಸುವುದು ಹೀಗೆ: "ನೋಡು ಅಳಬೇಡ! ಅತ್ತೆಯೆಂದರೆ ಅಮೃತಮಾವ ನಿನ್ನ ಜೊತೆಗೆ ಎಂದೂ ಮಾತನಾಡುವುದಿಲ್ಲ ನೋಡು ಮತ್ತೆ.!"

ಈ ಮಾತನ್ನು ಕೇಳಿದೊಡನೆಯೇ ಮಗುವು ಎರೆದು ಮಲಗಿಸಿದಂತೆ ಸುಮ್ಮಗೆ ಬಿದ್ದುಕೊಳ್ಳುವುದು.

ಪೂರ್ಣಿಮೆಗೆ ಏನಾದರೊಂದು ವಸ್ತು ಬೇಕಾದರೆ ಅಮೃತನನ್ನು ಕರೆಯಿಸಿ, ಆಜ್ಞೆಯ ಸ್ವರೂಪದಲ್ಲಿಯೆ ಅವನಿಗದನ್ನು ತರಲಿಕ್ಕೆ ಹೇಳುವಳು. ಅಮೃತನಾದರೂ ಅವಳ ಆಜ್ಞೆಯನ್ನು ಶಿರಸಾವಹಿಸಿ ಕೂಡಲೆ ಪಾಲಿಸುವನು.

ತವರುಮನೆಯಲ್ಲಿ ಆರುತಿಂಗಳುಗಳನ್ನು ಕಳೆದು ಪೂರ್ಣಿಮೆಯು ಅತ್ತೆಯ ಮನೆಗೆ ಹೊರಟಳು. ಅಮೃತನು ಅವಳನ್ನು ಕಳುಹಿಸಲಿಕ್ಕೆ ಸ್ಟೇಶನ್ನಿನವರೆಗೆ ಹೋಗಿದ್ದನು. ಉಗೆಬಂಡಿಯಲ್ಲಿ ಕುಳಿತ ಕೂಡಲೆ ಅಮೃತನು ಮಗುವನ್ನು ಅವಳ ಕೈಗೆ ಕೊಟ್ಟನು. ಕಣ್ಣಲ್ಲಿ ಕಂಬನಿಗಳು ತುಂಬಿದುವು. ಆದರೆ ಮುಖ ತಿರುಗಿಸಿದಂತೆ ಮಾಡಿ, ಅವಳಿಗೆ ತಿಳಿಯದಹಾಗೆ ಒರಗಿಸಿಕೊಂಡನು. ತನ್ನ ಅಶ್ರುಗಳನ್ನು ಪೂರ್ಣಿಮೆಗೆ ತೋರಿಸುವುದಾದರೂ ಹೇಗೆ? ಏಕೆಂದರೆ ಅವಳ ಕಣ್ಣುಗಳಲ್ಲಿ ಉತ್ಸಾಹ-ಆನಂದಗಳ ಲಾಸ್ಯ ನಡೆದಿದ್ದಿತು. ಇಷ್ಟಾದರೂ ಅಮೃತನ ಹುಚ್ಚುಜೀವ ಕಾತರಿಸುತ್ತಿದ್ದಿತು. ಪುನಃ ಆ ತಾಯಿ-ಮಕ್ಕಳ ಬೆಟ್ಟಿ ಎಂದೋ ಏನೋ—ಎಂದು ಕಳವಳಿಸಿತು.

ಪೂರ್ಣಿಮೆಯು ನಸು ಅಭಿಮಾನ ಬೆರೆತ ದನಿಯಲ್ಲಿ ಹೇಳಿದಳು: "ಮಗುವು ಎಷ್ಟೋ ದಿವಸಗಳವರೆಗೆ ಇನ್ನು ನಿಮ್ಮ ನೆನಪನ್ನು ತೆಗೆಯಬಹುದು!"

ಬಿಗಿದಕಂಠದಲ್ಲಿಯೇ ಅಮೃತನು ಉತ್ತರಿಸಿದನು: "ನನಗೆ ಮಾತ್ರ ಈ ಮಗುವಿನ ಮುಖಚರ್ಯೆ ಆಯುಷ್ಯಾಂತದ ವರೆಗೂ ಕಣ್ಮುಂದೆ ಉಳಿಯುವುದು."

"ಎಂದಾದರೊಮ್ಮೆ ಕಾಗದ ಬರೆಯುತ್ತಲಿರಿ!"

"ಆಗಲಿ!"

"ಆದರೆ ನಾನು ಉತ್ತರ ಬರೆಯಲಾರೆನೆಂಬುದನ್ನು ಮರೆಯಬೇಡಿ!"

"ಸರಿ! ಹಾಗೆಯೆ ಆಗಲಿ! ನಿಮ್ಮ ಉತ್ತರವನ್ನು ನಾನು ನಿರೀಕ್ಷಿಸುವುದೂ ಇಲ್ಲ.... ಆದರೆ.... ನನ್ನ ನೆನಪು ಮಾತ್ರ ಇರಲಿ......."

ಬಂಡಿ ಹೊರಟಿತು. ಅಮೃತನು ಕಿಟಕಿಯ ಕಡೆಗೇ ನೋಡುತ್ತ ನಿಂತ. ಒಂದು ಫರ್ಲಾಂಗಿನಷ್ಟು ಹೋದ ಮೇಲೆ ಪೂರ್ಣಿಮೆಯು ಕಿಟಕಿಯೊಳಗಿಂದ ಅವನ ಕಡೆಗೆ ಸ್ವಲ್ಪವೆ ಇಣಿಕಿ ನೋಡಿ, ಮತ್ತೆ ಸರಿದುಕೊಂಡಳು.

CC-0. Jangamwadi Math Collection. Digitized by eGangotri

ಈಗ ಅಮೃತನ ಹೃದಯವು ಪೂರ್ಣಿಮೆಯ ಕಡೆಗೆ ಹಾರಿಹೋಗಬೇಕೆಂದು ಹಾತೊರೆಯುತ್ತಿದ್ದಿತು. ತನ್ನ ಉದ್ದೇಶವು ಸಫಲವಾಯಿತೆನ್ನುವಷ್ಟು ಅವನಾಗ ಪ್ರಸನ್ನನಾಗಿದ್ದನು.

(೪)

ಅದೇ ವರ್ಷ ಪೂರ್ಣಿಮೆಯ ತಾಯಿಯು ತೀರಿದಳು ಪೂರ್ಣಿಮೆಯು ಆಗ ಅತ್ತೆಯ ಮನೆಯಲ್ಲಿದ್ದಳು. ತಾಯಿಯ ಮೊಗವನ್ನು ಮೃತ್ಯುಸಮಯದಲ್ಲಿ ಕೂಡ ಅವಳಿಗೆ ನೋಡಲಿಕ್ಕಾಗಲಿಲ್ಲ ಪಾಪ! ಅಮೃತನು ತನ್ನ ಶಕ್ತಿಗೆ ಮೀರಿ ಔಷಧೋಪಚಾರದ ವ್ಯವಸ್ಥೆಯನ್ನೂ ಮಾಡಿದನು. ಮರಣಾನಂತರ ಔರ್ಧ್ವದೇಹಿಕಕ್ರಿಯೆಯನ್ನೂ ಅವನೇ ನೆರವೇರಿಸಿದನು. ಜ್ಞಾತಿಗಳಿಗೂ ಬ್ರಾಹ್ಮಣರಿಗೂ ಯಥೇಚ್ಛವಾಗಿ ಭೋಜನವನ್ನು ಏರ್ಪಡಿಸಿದನು. ತನ್ನ ಸ್ವಂತದ ತಾಯಿಯೆ ತೀರಿಕೊಂಡಿದ್ದಳೆನೋ—ಎನ್ನುವಷ್ಟು ಅವನು ಕರ್ತವ್ಯಮುಖನಾಗಿದ್ದನು. ಹಿರಿಯರು ತೀರಿಹೋಗಿದ್ದುದರಿಂದ ಅಮೃತನೇ ಮನೆಗೆ ಯಜಮಾನನಾಗಿದ್ದ; ಆದುದರಿಂದ ಯಾವುದಕ್ಕೂ ಅತನ ಕೈಹಿಡಿದು ಅಡ್ಡಿ ಮಾಡುವವರು ಇರಲಿಲ್ಲ.

ಪೂರ್ಣಿಮೆಯು ಇನ್ನು ಯಾವ ಸಂಬಂಧದ ಮೂಲಕ ತವರುಮನೆಗೆ ಬರಬೇಕು? ಅವಳಿಗೆ ತವರುಮನೆಗೆ ಬರಲು ಬಿಡುವಾದರೂ ಎಲ್ಲಿ? ಅವಳೂ ಈಗ ಮನೆಯ ಯಜಮಾನಿ; ಆದುದರಿಂದ ಮನೆಬಿಟ್ಟು ಎಲ್ಲಿಯೂ ಕದಲುವಂತಿರಲಿಲ್ಲ. ಅವಳಿಗೆ ಮತ್ತೆ ಇಬ್ಬರು ಮಕ್ಕಳಾಗಿದ್ದರು. ಹಿರಿಯವನು ಈಗ ದೊಡ್ಡವನಾಗಿ ಶಾಲೆಗೆ ಹೋಗುತ್ತಿದ್ದನು. ವರ್ಷಕ್ಕೊಮ್ಮೆ ಅಮೃತನು ಆಳುಗಳನ್ನು ಕಳುಹಿಸಿ, ಕುಶಲವಾರ್ತೆಯನ್ನು ತಿಳಿದುಕೊಳ್ಳುತ್ತಿದ್ದ. ಪೂರ್ಣಿಮೆಯು ಎಲ್ಲ ಬಗೆಯಲ್ಲಿ ಸುಖಿಯಾಗಿಯೂ ಶಾಂತಳಾಗಿಯೂ ಇರುವಳೆಂಬ ಮಾತೊಂದೇ ಅಮೃತನ ಮನಸ್ಸಿನ ಸಮಾಧಾನಕ್ಕೆ ಸಾಕಾಗಿದ್ದಿತು. ಅಮೃತನ ಮಕ್ಕಳೂ ದೊಡ್ಡವರಾಗಿದ್ದರು; ಅವನು ಸಂಸಾರನಿಮಗ್ನನಾಗಿದ್ದನು; ವಯಸ್ಸು ನಾಲ್ವತ್ತಕ್ಕೆ ಮೀರಿದ್ದಿತು; ಆದರೂ ಪೂರ್ಣಿಮೆಯ ನೆನಪು ಅವನ ಅಂತಃಕರಣದಲ್ಲಿ ಭದ್ರವಾಗಿದ್ದಿತು.

(೫)

ಇದ್ದುದಿದ್ದಹಾಗೆಯೆ ಅಮೃತನು ಒಂದುದಿನ, ಪೂರ್ಣಿಮೆಯ ಪತಿಯು ತೀರಿಕೊಂಡನೆಂಬ ವಾರ್ತೆಯನ್ನು ಕೇಳಿದನು. ಆದರೆ ಆ ವಾರ್ತೆಯನ್ನು ಕೇಳಿ ಆತನಿಗೆ ಸ್ವಲ್ಪವೂ ದುಃಖವೆನಿಸಲಿಲ್ಲವೆಂಬುದು ಆಶ್ಚರ್ಯದ ವಿಷಯವಾಗಿದ್ದಿತು. ಆ ಮುದುಕ—ಗಂಡನ ಜೊತೆಗೆ ಪೂರ್ಣಿಮೆಗೆ ಏನೂ ಸುಖವಿರಲಿಲ್ಲವೆಂದು ಅವನ ದೃಢವಾದ ನಂಬಿಗೆಯಾಗಿದ್ದಿತು. ಪಾತಿವ್ರತ್ಯದ ವಿವೇಕವೂ ಕರ್ತವ್ಯವಿವಶತೆಯೂ ಅವಳ ಹಾರ್ದಿಕದುಃಖವನ್ನು ಇದುವರೆಗೆ ಪ್ರಕಟಗೊಳಿಸದೆ ಹುದುಗಿಸಿ ಇಟ್ಟಿದ್ದುವೆಂದು ಅವನ ಭಾವನೆ. "ಸುಖಸಂಪತ್ತಿಗಳೂ ನಿಶ್ಚಿಂತತೆಯೂ ಎಷ್ಟೇ ಇದ್ದರೂ, ಆ ಮುದುವನನ್ನು ಇವಳು ಪ್ರೀತಿಸುವುದು ಹೇಗೆ?—ಇಂತಹ ಸುಂದರ ತರುಣಿಯರು ಅಪಾತ್ರರ ಕೈಹಿಡಿದು ಬಳಲಬೇಕಾದುದು ಭಾರತವರ್ಷದ ವೈಶಿಷ್ಟ್ಯವೇ ಆಗಿದೆ. ಪೂರ್ಣಿಮೆಯು ಬೇರೆ ದೇಶದಲ್ಲಿ ಜನ್ಮತಾಳಿದ್ದರೆ ಎಷ್ಟೋ ನವಯುವಕರು ಅವಳ ಮೇಲೆ ತಮ್ಮ ಜೀವನಸರ್ವಸ್ವಗಳನ್ನು ನಿವಾಳಿಸಿ ಚೆಲ್ಲುತ್ತಿದ್ದರು."

ಅಮೃತನ ಸುಪ್ತವಾಸನೆಯೊಂದು ಇದೀಗ ಮತ್ತೆ ಜಾಗೃತವಾಯಿತು. ಮೊದಲಿನ ನಿರಾಶೆಯ ಉಪಟಳವೂ ಈಗ ಕಂಡುಬರಲಿಲ್ಲ; ಔದಾಸೀನ್ಯದಿಂದ ಆವರಿಸಿದ ಮೌನವೂ ಈಗ ಅವನಿಂದ ಹೊರಟುಹೋಯಿತು. ಪೂರ್ಣಿಮೆಯು ಈಗ ಸ್ವತಂತ್ರಳಾಗಿದ್ದಳು; ಅವಳು ದಯಾಳುವೂ ಆಗಿರಬಹುದು; ಮೊದಲಿದ್ದ ಹುಡುಗಾಟಿಕೆ-ಅಭಿಮಾನ-ಅಹಂಕಾರಗಳು ಈಗ ಅಳಿಸಿಹೋಗಿರಬಹುದು. 'ಪೂರ್ಣಿಮೆಯ ಮನೆಗೆ ಹೋಗಿ ಅವಳನ್ನು ಕರೆದುಕೊಂಡು ಬರಲೇ?' ಎಂಬ ವಿಚಾರವೂ ಅಮೃತನ ತಲೆಯಲ್ಲಿ ಬಂದಿತು. ಶಕ್ಯವಿದ್ದಷ್ಟು ಇಚ್ಛಾನುವರ್ತಿಯಾಗಿದ್ದು ಅವಳ ಸೇವೆಯನ್ನು ಮಾಡಬೇಕೆಂದೂ, ಅವಳ ಸಾಮೀಪ್ಯದಲ್ಲಿಯೆ ತನಗೆ ಅಪಾರವಾದ ಸುಖವುಂಟೆಂದೂ ಅಮೃತನು ವಿಚಾರಿಸಿ- ಅವಳ ಬಾಯಿಂದ "ನಿನ್ನ ನೆನಪು ಇನ್ನೂ ಅಳಿಸಿ ಹೋಗಿಲ್ಲ!" ಎಂದು ಕೇಳುವ ಹಂಬಲ ಅವನಿಗೆ. 'ಬಾಲ್ಯದಲ್ಲಿಯ ಸ್ನೇಹ-ಸೌಹಾರ್ದಗಳು ಇನ್ನೂ ಅಚ್ಚಳಿಯದೆ ಇವೆ' ಎಂದು ಅವಳು ಹೇಳಿದರೆ ಸಾಕು! ಇನ್ನೇನೂ ಆತನಿಗೆ ಬೇಕಾಗಿರಲಿಲ್ಲ.

ಅಮೃತನು ಮನಸ್ಸಿನೆದುರು ಪೂರ್ಣಿಮೆಯ ಸುಂದರ ಚಿತ್ರವನ್ನು ರೇಖಿಸತೊಡಗಿದನು. ಅವನು ಪೂರ್ಣಿಮೆಯ ಸೌಂದರ್ಯವನ್ನು ಇಪ್ಪತ್ತು ವರ್ಷಗಳ ಹಿಂದೆ ನೋಡಿದ್ದನು. ಅಂಗಾಂಗಗಳೆಲ್ಲ ತುಂಬಿದುವಾಗಿ ಮನೋಮೋಹಕವಾಗಿದ್ದುವು. ಕೆನ್ನೆಯಲ್ಲಿ ಚೆಂಬಣ್ಣದ ಛಾಯೆ ಮಿರುಗುತ್ತಿದ್ದಿತು. ಸ್ವಲ್ಪ ಮುಂದೆ ಬಂದ ಅವಳ ಗದ್ದದಲ್ಲಿ ಕಾಣುತ್ತಿದ್ದ ಚಿಕ್ಕ ಗುಳಿಯು, ಅಮೃತದಿಂದ ತುಂಬಿದ ಕರಡಿಗೆಯಂತೆ ಅಮೃತನಿಗೆ ಆಶೆಹುಟ್ಟಿಸುತ್ತಿದ್ದಿತು. ಸರಿ,

CC-0. Jangamwadi Math Collection. Digitized by eGangotri

ಪೂರ್ಣಿಮೆಯ ಈ ಬಗೆಯ ಚಿತ್ರವು—ಸ್ವಲ್ಪ ಪರಿವರ್ತನ-ದಿಂದ ಕೂಡಿರಲೂ ಬಹುದು — ಅಮೃತನ ಕಣ್ಮುಂದೆ ಮೂಡಿತು. ಕಲ್ಪಿಸಿದ ರೂಪಪರಿವರ್ತನವು ಕೂಡ ಅವನ ಏಕಾಂತದಲ್ಲಿ ಒಂದು ಬಗೆಯ ಸುಖಾನುಭವವನ್ನೇ ಉಂಟು-ಮಾಡುತ್ತಿದ್ದಿತು. ಆದರೆ ಪೂರ್ಣಿಮೆಯ ದೇಹಪರಿ-ವರ್ತನೆಯ ನಿಜವಾದ ಕಲ್ಪನೆಯು ಅವನಿಗೆ ಬರಲು ಸಾಧ್ಯವೇ ಇರಲಿಲ್ಲ. ಅಮೃತನು ಈಗ ಅವಳ ಮಧುರವಾದ ಸೌಹಾರ್ದದ ಮಾತುಗಳನ್ನು ಕೇಳಲು ಎಷ್ಟೊಂದು ಹಂಬಲಿಸುತ್ತಿದ್ದನೋ ಅಷ್ಟೊಂದು ಅವಳ ಮನೋಹರ ರೂಪಕ್ಕಾಗಿ ಆಶೆಪಡುತ್ತಿರಲಿಲ್ಲ. ಪುರುಷೋಚಿತವಾದ ಆತ್ಮಾಭಿಮಾನದಿಂದ ಅವನು ಹೀಗೆ ಕೂಡ ಚಿಂತಿಸುತ್ತಿರ-ಬಹುದು: "ಪ್ರೇಮವಾಸನೆಯನ್ನು ಹುದುಗಿಸಿ, ಅವಳನ್ನು ಸುರಕ್ಷಿತವಾಗಿರಿಸುವುದೇ ತನ್ನ ಕರ್ತವ್ಯ; ಈ ಬಗೆಯ ವರ್ತನದಿಂದ ಹಿಂದೆ ನಡೆದ ಎಷ್ಟೋ ಹುಚ್ಚು-ತಪ್ಪುಗಳ ಪರಿಮಾರ್ಜನವೂ ಆದಂತಾಗುವುದು."

ಪೂರ್ಣಿಮೆಯು ತಾನಾಗಿಯೇ ಒಂದು ದಿವಸ ತವರು ಮನೆಗೆ ಬಂದುಬಿಟ್ಟಳು. ಸಂಗಡ ಎಲ್ಲ ಮಕ್ಕಳನ್ನೂ ಕರೆದುಕೊಂಡು ಬಂದಿದ್ದಳು. ಪೂರ್ಣಿಮೆಯ ತಾಯಿಯ ಜತೆಗೆ ವೈಧವ್ಯಜೀವನವನ್ನು ಸಾಗಿಸುತ್ತಿದ್ದ ಚಿಕ್ಕಮ್ಮ-ನೊಬ್ಬಳು ಈಗ ಅಲ್ಲಿಯೆ ಇದ್ದಳು. ಆ ಶೂನ್ಯವಾದ ಮನೆಯಲ್ಲಿ ಈಗ ಪೂರ್ಣಿಮೆಯೂ ಬಂದು ಇರಲು ತೊಡಗಿದಳು.

ಈ ಸಮಾಚಾರವನ್ನು ಕೇಳಿ ಅಮೃತನು ಉನ್ಮತ್ತ-ನಂತಾದನು, ಉಬ್ಬಿದನು. ಈ ಉಬ್ಬಿನ ಭರದಲ್ಲಿ ಕೂಡಲೆ ಅವಳ ಮನೆಯ ಕಡೆಗೆ ಓಡಿದನು. ದಾರಿಯಲ್ಲಿ ತಮ್ಮಿಬ್ಬರ ಬಾಲ್ಯದ ಒಡನಾಟ, ಯೌವನದ ಮುಗ್ಧ ಸೌಹಾರ್ದ ಇತ್ಯಾದಿ ಮಧುರವಾದ ಭಾವಗಳನ್ನು ಮನಸ್ಸಿನಲ್ಲಿ ತೂಗಾಡಿಸುತ್ತ ಹೊರಟಿದ್ದನು. ಜತೆಯ ಹುಡುಗನನ್ನು ನೋಡಿ, ಅವಸರದಿಂದ ತನ್ನಲ್ಲಿ ಇದ್ದಬಿದ್ದ ಆಟದ ಸಾಮಾನುಗಳನ್ನೆಲ್ಲ ಹಿಡಿದುಕೊಂಡು ಓಡುತ್ತಿದ್ದ ಒಬ್ಬ ಬಾಲಕನ ಸ್ಥಿತಿಯಂತೆಯೇ ಈಗ ಅಮೃತನ ಸ್ಥಿತಿಯಾಗಿತು.

ಪೂರ್ಣಿಮೆಯನ್ನು ನೋಡುತ್ತ ಅವನ ಹುರುಪು-ಆನಂದಗಳೆಲ್ಲ ಅಳಿಸಿಹೋದುವು; ಸ್ತಬ್ಧನಾಗಿ ಮುಂದೆ ನಿಂತುಬಿಟ್ಟನು. ಪೂರ್ಣಿಮೆಯೂ ಮುಂದೆ ಬಂದು ಅವನೆದುರು ಬಾಗಿದ ಮೊಗದವಳಾಗಿ ನಿಂತಳು. ಉಟ್ಟ ಬಿಳಿಯ ಪತ್ತಲದ ಸೆರಗಿನಲ್ಲಿ ಅವಳ ಮುಖದ ಅರ್ಧ-ದಷ್ಟು ಭಾಗವು ಮುಚ್ಚಿಹೋಗಿದ್ದಿತು. ಕೈಗಳು ಸೊರಗಿ ದಾರದಂತಾಗಿದ್ದುವು. ಕಾಲುಗಳಲ್ಲಿ ತುಂಬ ಅಶಕ್ತತೆಯ ಮೂಲಕ, ನಡುಕ ಹುಟ್ಟಿದ್ದಿತು. ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯುತ್ತಿದ್ದಿತು. ಹೆಚ್ಚೇನು! ಪೂರ್ಣಿಮೆಯ ಈ ಅವಸ್ಥಾಂತರವು ಎದೆಗೆ ಬರೆಯೆಳೆ-ಯುವಂತಹದಾಗಿದ್ದಿತು. ಸೀರೆಯನ್ನು ಸುತ್ತಿ ನಿಲ್ಲಿಸಿದ ಒಂದು ಹೆಣದ ಹಾಗೆಯೇ ಅವಳು ಕಾಣುತ್ತಿದ್ದಳು.

ಪೂರ್ಣಿಮೆಯ ಚಿಕ್ಕಮ್ಮ ಬಂದು ಹೇಳಿದರು: "ಕೂಡಪ್ಪಾ. ನೋಡಿದೆಯಾ ಈಕೆಯ ಪರಿಸ್ಥಿತಿಯನ್ನು! ಒಣಗಿದ ಕಟ್ಟಿಗೆಯಾಗಿ ಹೋಗಿದ್ದಾಳೆ! ಒಂದು ನಿಮಿಷ ಕೂಡ ಅಶ್ರುಧಾರೆಯನ್ನು ನಿಲ್ಲಿಸುವುದಿಲ್ಲ. ದಿನಕ್ಕೊಂದಾವರ್ತಿ ಒಂದು ಚೂರು ರೊಟ್ಟಿಯನ್ನು ಮಾತ್ರ ಬಾಯಲ್ಲಿ ಹಾಕಿಕೊಳ್ಳುವಳಲ್ಲದೆ ಇನ್ನಾವುದನ್ನೂ ಮುಟ್ಟುವುದಿಲ್ಲ. ಏನು ಹೇಳಲಿ? ಉಪ್ಪುತಿನ್ನುವುದನ್ನು ಬಿಟ್ಟುಬಿಟ್ಟಿದ್ದಾಳೆ. ಒಂದು ತೊಟ್ಟು ಹಾಲು-ಹೈನವೆಂದರೆ ಅದನ್ನೂ ಮುಟ್ಟು-ವುದಿಲ್ಲ. ಬರೀ ಒಂದು ಚೂರು ತಂಗುಳು ರೊಟ್ಟಿ! ದಿನದ ಇರುವಿಕೆಯೇ ಒಂದು ಕಠಿನ ವ್ರತವಾಗಿರುವಾಗ, ಬೇರೆ ಬೇರೆ ವ್ರತಗಳನ್ನು ಜೇರೆ ಮಾಡುತ್ತಾಳೆ. ಇಂದು ಏಕಾದಶಿ ನಾಳೆ ಶನಿವಾರ, ನಾಡಿದ್ದು ರವಿವಾರ—ಹೀಗೆ ಉಪವಾಸದ ಮೇಲೆ ಉಪವಾಸ! ಹೀಗಾದರೆ ಮನುಷ್ಯ ಹೇಗೆ ತಡೆಯ-ಬೇಕಪ್ಪಾ! ನೆಲದ ಮೇಲೆಯೇ ಮಲಗಿಕೊಳ್ಳುತ್ತಾಳೆ. ಪ್ರಹರ ರಾತ್ರಿಯಿರುವಾಗಲೇ ಎದ್ದು ಪೂಜಾ-ಪಾಠಗಳನ್ನು ಮಾಡಿಕೊಳ್ಳುತ್ತಾಳೆ. ಒಂದೇ ಎರಡೇ? ಏನು ಹೇಳಲಿ? ಹುಡುಗರು ಕೂಡ ಎಷ್ಟೋ ಸಮಾಧಾನ ಹೇಳುತ್ತಾರೆ. ಆದರೆ ಯಾರ ಮಾತನ್ನೂ ಈಕೆ ಕೇಳುವುದಿಲ್ಲ. 'ನನ್ನ ಸೌಭಾಗ್ಯವನ್ನೇ ದೇವರು ಹರಣಮಾಡಿರುವಾಗ ನನ್ನ ಪಾಲಿಗೆ ಏನಿದ್ದರೇನು? ಬದುಕುವುದು ಮಿಥ್ಯ' ಎಂದು ನುಡಿಯುತ್ತಾಳೆ. ಮನಸ್ಸು ನಸು ಹಗುರಾಗಬಹುದೇನೋ ಎಂದು ಇಲ್ಲಿಗೆ ಬಂದಿದ್ದಾಳೆ; ಆದರೆ ಇಲ್ಲಿಯೂ ಕಣ್ಣೀರ ಕಾಲುವೆಗೆ ತಡೆಯಿಲ್ಲದಾಗಿದೆ. ನಾನು ಪರಿಪರಿಯಾಗಿ ಹೇಳಿ-ಕೊಳ್ಳುತ್ತೇನೆ: 'ಅಮ್ಮಾ ದೈವದಲ್ಲಿದ್ದದ್ದು ಆಗಿ-ಹೋಯಿತು! ದುಃಖವನ್ನು ಬಿಡು! ದೇವರು ಮುತ್ತಿನಂತಹ ಮಕ್ಕಳನ್ನು ಕೊಟ್ಟಿದ್ದಾನೆ. ಅವುಗಳನ್ನು ಸಂರಕ್ಷಿಸು! ಮನೆಯಲ್ಲಿ ಏನೆಲ್ಲವೂ ಇದೆ. ಯಾವುದಕ್ಕೂ ಕೊರತೆಯಿಲ್ಲ. ಮನಸ್ಸನ್ನು ಪವಿತ್ರವಾಗಿಟ್ಟುಕೊಂಡರಾಯಿತು! ಶರೀರ-ವನ್ನು ಇಷ್ಟು ಕಷ್ಟಪಡಿಸಿ ಕೃಶವಾಗಿಸಬೇಡ." ಎಂದು ಬೇಕಾದಷ್ಟು ಬೇಡಿಕೊಳ್ಳುತ್ತೇನೆ. ಆದರೆ ಕೇಳುವುದೇ ಇಲ್ಲ. ನೀನಾದರೂ ಇವಳಿಗೆ ತಿಳಿಸಿಹೇಳಪ್ಪಾ!"

CC-0. Jangamwadi Math Collection. Digitized by eGangotri

ಅಮೃತನು ಮೇಲೆ ಮಾತ್ರ ಮೌನಿಯಾಗಿದ್ದರೂ ಅಂತರ್ಯದ ವೇದನೆಯಿಂದ ಒಳಗೊಳಗೇ ಸುಟ್ಟು ಸುಣ್ಣವಾಗುತ್ತಿದ್ದನು. ಅವನ ಸವಿಗನಸುಗಳ ಗೋಪುರವು ಯಾವಾಗಲೋ ಹಾರಿಹೋಗಿದ್ದಿತು. ಪೂರ್ಣಿಮೆಯು ಇಷ್ಟೊಂದು ಕಾತರಿಸುತ್ತಿರಬಹುದೆಂದು ಅವನಿಗೆನಿಸಿರಲಿಲ್ಲ. ಆದುದರಿಂದಲೇ ಅವಳ ಸ್ನೆಹವಚನಗಳಿಗಾಗಿ ಸೀರಡಿಸಿ ಬಂದಿದ್ದನು. ಯಾವುದನ್ನು ಸತ್ಯವೆಂದು ತಿಳಿದಿದ್ದನೋ ಅದು ಇಂದು ಮೃಗಜಲವಾದಂತಾಯಿತು. ಆ ತಪಸ್ವಿನಿಯ ಭಕ್ತಿ-ಆತ್ಮಸಂಯಮನ ಇವುಗಳ ಮುಂದೆ ಅವನ ಆಶೆ, - ಪ್ರೇಮಲಹರಿಗಳೆಲ್ಲ ನಷ್ಟವಾಗಿ ಹೋಗಿದ್ದುವು. ಇಂದು ಜೀವನದ ಹೊಸದಾದ ಸತ್ಯದ ದರ್ಶನವಾಯಿತವನಿಗೆ. ಮನಸ್ಸು ಮಣ್ಣಿಗೆ ದೇವತ್ವವನ್ನು ತಂದುಕೊಡುವಷ್ಟು ಶಕ್ತಿಯುಳ್ಳುದಾದರೆ, ಮನುಷ್ಯನನ್ನು ದೇವರೆಂದು ತಿಳಿಯುವುದು ಅದಕ್ಕೆ ಕಠಿನವಾದೀತೇ? ಪೂರ್ಣಿಮೆಯ ದೇವನು ಅವಳ ಸ್ಮೃತಿಪಥದಲ್ಲಿ ಚೆನ್ನಾಗಿ ಮೂಡಿದ್ದನು. ಅವನನ್ನು ಅವಳು ಮರೆಯುವುದೆಂತು? ಅವನ ನಿಧಿಧ್ಯಾಸ-ಪೂಜೆಗಳಲ್ಲಿಯೇ ಅವಳಿಗೆ ಸಮಾಧಾನ.

ಅಮೃತನು ಶಾಂತಭಾವದಲ್ಲಿ ಮಾತನಾಡಿದನು: "ಚಿಕ್ಕಮ್ಮಾ, ಈ ತಪಸ್ವಿನಿಯನ್ನು ನನ್ನಂತಹ ಸ್ವಾರ್ಥಿಯಿಂದ ಸಂತಯಿಸಲಿಕ್ಕಾದೀತೆ? ಇಂದು ಅವಳ ಪಾದಗಳ ಮೇಲೆ ಮಸ್ತಕವನ್ನಿಟ್ಟು ಕ್ಷಮೆ ಕೋರುವುದೇ ನನ್ನ ಕರ್ತವ್ಯವಾಗಿದೆ."

ಪೂರ್ಣಿಮೆಯು ಮುಖದ ಮೇಲಿನ ಸೆರಗನ್ನು ಓಸರಿಸುತ್ತ ನುಡಿದಳು: "ಮಗುವು ಆಗಾಗ ನೆನಪು ತೆಗೆದು 'ಮಾವ ಎಲ್ಲಿ?' ಎಂದು ನಿಮ್ಮನ್ನು ವಿಚಾರಿಸುತ್ತಿರುತ್ತದೆ!"

---


ಗಜಕರ್ಣ, ಹುರುಕು, ತದ್ದು, ನಡ ಮುಂತಾದ ಚರ್ಮರೋಗಗಳಿಂದ
ಪೀಡಿತ ಜನರಿಗೆ ಒಂದೇ ಉಪಾಯವು.
ರಜಿಸ್ಟರ್ಡ್
ಗುಣ ಬರದಿದ್ದರೆ ಹಣ ತಿರುಗಿ ಕೊಡುವೆವು. ಬಾಟಲಿಯ ಬೆಲೆ ೪ ಆಣೆ
ಸ್ಟಾರ್ ಕಂಪನಿ, ಬೆಳಗಾವಿ


CC-0. Jangamwadi Math Collection. Digitized by eGangotri

# ಮಿದುಳಿನ ಸ್ವರೂಪ ಪರಿಚಯ

" ವೈಜ್ಞಾನಿಕ "

ಮನುಷ್ಯನಿಗೆ ಕಿವಿಯಿಂದ ಕೇಳಿದ ಶಬ್ದದ ಅರ್ಥವನ್ನು ಗ್ರಹಿಸಲಾಗದುದಕ್ಕೆ ಏನು ಕಾರಣ? ಕಣ್ಣು ನೋಡಿ ಗುರುತಿಸಿ ಓದಿದ ಬರೆಹವನ್ನು, ಅರ್ಥಮಾಡಿಕೊಳ್ಳಲಾಗದಿರುವುದಕ್ಕೆ ಏನು ಕಾರಣ? ಕಲಾ–ಕೌಶಲ್ಯಗಳಿಗೆ ಕಾರಣವಾದ ಶಕ್ತಿಯೆಲ್ಲಿದೆ? ಮಾತನಾಡಿಸುವ ಕಾರ್ಯ–ವನ್ನು ಮಾಡುವ ಸಾಮರ್ಥ್ಯವೆಲ್ಲಿದೆ? ಮನುಷ್ಯನು ಹುಚ್ಚನಾಗುವುದು ಏಕೆ? ಇವೆಲ್ಲ ಪ್ರಶ್ನೆಗಳಿಗೆ ಸರಿಯಾದ ಉತ್ತರ ಬೇಕಾಗಿದ್ದರೆ ಇದನ್ನು ಓದಿನೋಡಿರಿ !

ಮನುಷ್ಯನ ಮಿದುಳು ತುಂಬ ಆಶ್ಚರ್ಯಕರವಾದು-ದೊಂದು ಪದಾರ್ಥ. ಮಿದುಳಿನಿಂದ ಹೊರಹೊರಡುವ ಹೊಸಹೊಸ ವಿಚಾರತರಂಗಗಳನ್ನು ನೋಡಿದರಂತೂ ಅದು ನಮ್ಮನ್ನು ಆಶ್ಚರ್ಯವಿಮೂಢರನ್ನಾಗಿ ಮಾಡುವುದು. ನಾನೀಗ ಹೇಳುತ್ತಿರುವುದು ಮಿದುಳಿನ ವಿಚಾರೋತ್ಪಾದಕ ಶಕ್ತಿಯನ್ನು ಕುರಿತಲ್ಲ; ಸಹನಶೀಲತೆಯನ್ನು ಕುರಿತು! ಮಿದುಳಿಗೆ ಎಂತೆಂತಹ ಏಟುಗಳು ತಗಲಿದರೂ—ಅನೇಕ ಸಲ—ಅದಕ್ಕೆ ಯಾವ ಪರಿಣಾಮವೂ ಆದಂತೆ ಕಾಣುವುದಿಲ್ಲ; ಇಷ್ಟೇ ಅಲ್ಲ, ಮಿದುಳು ಮನುಷ್ಯನ ದೇಹದ ಒಂದು ಭಾಗವಾದರೂ ಆಹುದೊ ಅಲ್ಲವೊ ?—ಎಂದು ಸಂದೇಹ-ವನ್ನು ಉಂಟುಮಾಡುವುದು.

ಕಳೆದ ಮಹಾಯುದ್ಧದಲ್ಲಿ, ಯಾವನೊ ಒಬ್ಬ ಸೈನಿಕನ ಮಿದುಳಿನ ಬಹುಭಾಗವು ಇಲ್ಲದಂತಾಗಿ ಹೋಯಿತಂತೆ; ಆದರೂ ಅದರಿಂದ ಅವನಿಗೆ ಯಾವ ಅಡೆ-ತಡೆಯೂ ಉಂಟಾಗಲಿಲ್ಲವಂತೆ. ತೋಫಿನ ಗುಂಡಿನ ಭಾಗವೊಂದು ತಲೆಗೆ ತಗುಲಿ ಗಾಯಮಾಡಿತು . ಈ ಗಾಯದಿಂದ ಕುಸುಬೆಯ ಬಣ್ಣದ್ದಾಗಿರುವ ಮಿದುಳಿನ ಬಹುಭಾಗವು ನಷ್ಟವಾಯಿತು. ಒಡೆದ ತಲೆಬುರುಡೆಯ ಎಲುವಿಗೆ ಬದಲು, ಅಲ್ಲಿ ಬೆಳ್ಳಿಯ ತಗಡನ್ನು ಕೂಡಿಸಿದೊಡನೆಯೆ ಆ ಸೈನಿಕನು ಮತ್ತೆ ಯುದ್ಧಭೂಮಿಗೆ ಹೋದನು. ಮಹಾಯುದ್ಧವು ಕೊನೆ-ಗೊಂಡ ಕಾಲದಲ್ಲಿ ಆ ಸೈನಿಕನು ಕರ್ನಲ್ ಪದವಿಯ ವರೆಗೆ ಏರುತ್ತ ಬಂದಿದ್ದನು.

ಇನ್ನೊಬ್ಬ ಮನುಷ್ಯನ ಮಿದುಳಿನ ಬಲಗಡೆಯ ಭಾಗಕ್ಕೆ ಕಿತ್ತಳೆಯ ಹಣ್ಣಿನಷ್ಟು ದೊಡ್ಡದಾದ ಒಂದು ಕುರುವು ಆಗಿದ್ದಿತು. ಶಸ್ತ್ರಕ್ರಿಯೆಯಿಂದ ಅದನ್ನು ಕೊಯ್ದುಹಾಕಿ ಗುಣಪಡಿಸಲಾಯಿತು. ಶಸ್ತ್ರಕ್ರಿಯೆಯನ್ನು ಮಾಡುವ ವರೆಗೂ ಆ ಕುರುವಿನಿಂದ ಅವನಿಗೆ ಯಾವ ಬಗೆಯ ಹಿಂಸೆಯೂ ಇರಲಿಲ್ಲ.

ಫರಂಗಿಯ ( ಉಪದಂಶ ) ರೋಗದಿಂದ ಮಿದುಳಿನ ಸಂಪೂರ್ಣ ಭಾಗವೂ ನಾಶವಾಗಿ ಹೋಗಿದ್ದವನೊಬ್ಬನು ಒಬ್ಬ ಡಾಕ್ಟರ ಬಳಿಗೆ ಬಂದ. ಡಾಕ್ಟರರು ಆತನ ಮೂಗಿನಲ್ಲಿ ಸೂಜಿ ( Lancet ) ಯನ್ನು ಏರಿಸಿ ಪರೀಕ್ಷಿಸುವಾಗ, ಸೂಜಿಯು ಮಿದುಳಿನೊಳಗಿಂದ ಪಾರಾಗಿ ತಲೆಬುರುಡೆಯ ಹಿಂಬದಿಗೆ ಬಂದು ಹತ್ತಿದರೂ, ಅವನು ಉಸ್ಸೆನ್ನಲಿಲ್ಲ. ರೋಗಜಂತುಗಳು ಆ ರೋಗಿಯ ಎಲ್ಲ ಮಿದುಳನ್ನೂ ಸಾಮಾನ್ಯವಾಗಿ ತಿಂದುಬಿಟ್ಟದ್ದುವಾದರೂ — ಆಗಾಗ ಕಣ್ಣಿಗೆ ಕಾವಳ ಬಂದು ಮೈಮುರಿಯುವುದರ ಹೊರತು— ಇನ್ನೇನೂ ಆತನಿಗೆ ತೊಂದರೆಯಿರಲಿಲ್ಲ. ಮುಂದೆ ಅವನು ಫರಂಗಿಯ ರೋಗದಿಂದ ಸತ್ತುಹೋದನಲ್ಲದೆ, ಮಿದುಳು ಅವನ ಸಾವಿಗೆ ಕಾರಣವಾಗಲಿಲ್ಲ.

ಹೃದಯಕ್ರಿಯೆಯ ಮೇಲೆ ಆಧಿಪತ್ಯವನ್ನು ನಡೆಯಿಸುವ **ವ್ಹಾಗ್ಯಾಸ್** ಎಂಬ ಹೆಸರಿನ ಜ್ಞಾನತಂತುವು ಮಾತ್ರ ಮಿದುಳಿಗಿಂತ ತೀರ ವಿರುದ್ಧಗುಣವುಳ್ಳುದು. ಇದಕ್ಕೆ ಕೊಂಚವೆ ಏಟು ತಗಲಿದರೆ ಸಾಕು; ಕೂಡಲೆ ಮನುಷ್ಯನು ಸತ್ತುಹೋಗುವನು. ಮಿದುಳಿನಲ್ಲಿ ಇರುವ ' Pituitary gland' ಎಂಬ ಹೆಸರಿನ ಗ್ರಂಥಿಯ ಮೇಲೆ, ಬಟ್ಟೆಗಡಲೆ-ಯಷ್ಟೇ ಬೊಕ್ಕೆಯೊಂದರ ಭಾರವು ಬಿದ್ದರೂ ಕೂಡಲೆ ಕುರುಡತನವು ಬಂದುಬಿಡುವುದು. ಮೈಮೇಲೆ ಒಂದು

CC-0. Jangamwadi Math Collection. Digitized by eGangotri

ಚಿವುರುಗಾಯವು ಕೂಡ ಬೀಳದಿದ್ದರೂ, ಅನೇಕ ಜನರು ಒಮ್ಮಿದ್ದೊಮ್ಮೆಲೆ ಸತ್ತುಹೋಗಿದ್ದ ಉದಾಹರಣೆಗಳು ಕಳೆದ ಮಹಾಯುದ್ಧದಲ್ಲಿ ಸಾಕಷ್ಟು ಕಂಡುಬಂದುವು. ಸಿಡಿಗುಂಡಿನ ಹೊಡೆತದಿಂದ ಒಮ್ಮೆಲೆ ಉಂಟಾದ ಹವೆಯ ಒತ್ತುವಿಕೆಯೆ ಆ ಜನರ ಸಾವಿಗೆ ಕಾರಣವಾಗಿರುವುದು. ಜ್ಞಾನತಂತುಗಳೆಂದರೆ ಮಿದುಳಿಗೆ ಬಾಲಗಸೆಯಿದ್ದಂತೆ. ಇವುಗಳ ಮೇಲೆ ರೋಗಜಂತುಗಳು ದಾಳಿಯಿಕ್ಕಿದರೆ, ಚಿತ್ರ-ವಿಚಿತ್ರವಾದ ಅನೇಕ ಪರಿಣಾಮಗಳು ತೋರಲು ತೊಡಗುವುವು. ರೋಗವಿರುವುದು ಒಂದು ಎಡೆ; ಅದು ಹೊರಕ್ಕೆ ಕಾಣಿಸಿಕೊಳ್ಳುವುದೇ ಬೇರೊಂದು ಎಡೆ. ಜ್ಞಾನತಂತುಗಳ ಜಾಳಿಗೆಯನ್ನು ಮೂರು ಭಾಗಗಳನ್ನಾಗಿ ವಿಂಗಡಿಸುವರು. ಮೊದಲನೆಯ ಭಾಗ ಮಿದುಳು; ಎರಡನೆಯ ಭಾಗ ಮಿದುಳಿನ ಅಡಿಗಟ್ಟು; ಮೂರನೆಯ ಭಾಗವೆಂದರೆ ಬೆನ್ನ-ಹುರಿಯ ಕಳಿಗೆಗಳೊಳಗಿಂದ ಹಾಯ್ದುಹೋಗಿರುವ ಜ್ಞಾನತಂತುಗಳು.

ಫರಂಗೀ (ಉಪದಂಶ) ರೋಗದ ಕ್ರಿಮಿಗಳು ಜ್ಞಾನತಂತುಗಳ ಮೇಲೆ ದಾಳಿಯಿಕ್ಕಿದಾಗ, ಎಂತಹ ಪರಿಣಾಮವುಂಟಾಗುವುದೆಂಬುದನ್ನು ನಾವೀಗ ವಿಚಾರಮಾಡೋಣ! ಈ ರೋಗದ ಕ್ರಿಮಿಗಳಿಗೆ ಯಾವುದನ್ನು ತಿನ್ನಬೇಕು.... ಯಾವುದನ್ನು ತಿನ್ನಬಾರದು—ಎಂಬುದರ ಕಟ್ಟು-ನಿಟ್ಟುಗಳು ಯಾವುವೂ ಇಲ್ಲ. ಎಲುವುಗಳನ್ನು ಮೊದಲು ಮಾಡಿ ಜ್ಞಾನತಂತುಗಳ ವರೆಗೆ ಎಲ್ಲವನ್ನೂ ತಿನ್ನಬಲ್ಲವಲ್ಲದೆ, ಎಲ್ಲಿ ಬೇಕಾದಲ್ಲಿಂದಲೂ ತಿನ್ನುವುದಕ್ಕೆ ಪ್ರಾರಂಭಮಾಡುತ್ತವೆ. ಬೆನ್ನಹುರಿಯ ಕಳಿಗೆಗಳ ಮೇಲೆ ಆದ ಈ ರೋಗಜಂತುಗಳ ದಾಳಿ, ಯಾವ ಪರಿಣಾಮವನ್ನುಂಟು ಮಾಡುವುದೆಂಬುದು ಗೊತ್ತೋ? ಕೈಕಾಲುಗಳ ಚಲನ-ವಲನದ ಮೇಲೆ, ಈ ದಾಳಿಯಿಂದ ವಿಚಿತ್ರ ಪರಿಣಾಮ ವಾದುದು ಕಂಡುಬರುವುದು. ಇಂತಹ ಪರಿಣಾಮಕ್ಕೆ 'Locomotor ataxia' ಎಂದು ಹೇಳುವರು. ಈ ವಿಕಾರದ ಜನರು ವಿಶಿಷ್ಟವಾದ ಒಂದು ರೀತಿಯಲ್ಲಿ, ಕಾಲನ್ನು ಎಳೆದೆಳೆದು ಹಾಕುತ್ತ ನಡೆಯುತ್ತಿರುವರು. ಈ ಸಂದರ್ಭದಲ್ಲಿ ನಿಜವಾಗಿ ರೋಗವಿರುವುದು ಮಜ್ಜಾತಂತುವಿನಲ್ಲಾದರೂ, ರೋಗದ ಲಕ್ಷಣಗಳು ಮತ್ತೊಂದು ಸ್ಥಳದಲ್ಲಿಯೆ ಗೋಚರಿಸುತ್ತಿರುವುವು.

ಇವೇ ರೋಗಜಂತುಗಳು ಮಿದುಳಿನ ಅಡಿಗಟ್ಟಿನ ಭಾಗದವರೆಗೆ ಬಂದುಮುಟ್ಟಿದರೆ, ಅದರಿಂದುಂಟಾಗುವ ಪರಿಣಾಮವು ಮೇಲಿನದಕ್ಕಿಂತ ಹೆಚ್ಚು ಭಯಂಕರವಾದುದು. ಹೀಗಾದ ಮನುಷ್ಯರು, ಮನಸ್ಸಿನ ಮೇಲಿರುವ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಬಿಡುವರು. ಒಂದೊಂದು ಸಲ ವಿಪರೀತ ಕೋಪವು ಬಂದರೆ, ಇನ್ನೊಂದು ಸಲ ಹೆಚ್ಚಾಗಿ ಅಳುವು ಬಂದುಬಿಡುವುದು. ಒಂದೊಂದು ಸಲ ಈ ರೋಗದ ಮನುಷ್ಯರು ಎಡೆಬಿಡದೆ ನಗುವುದಕ್ಕೆ ಪ್ರಾರಂಭಿಸುವರು. ಸಾರಾಂಶವೇನೆಂದರೆ ಲಕ್ಷಣವು ಮನೋವಿಕಾರದಲ್ಲಿ ಹೊರಗೆ ಕಾಣುವುದಾದರೂ, ಮಿದುಳಿನ ಅಡಿಗಟ್ಟಿನ ಮೇಲೆ ರೋಗಜಂತುಗಳು ಇಕ್ಕಿದ ದಾಳಿಯೆ ಆ ವಿಕಾರವಶತೆಯ ಮೂಲಕಾರಣವಾಗಿರುವುದು. ಒಂದು ವೇಳೆ ಈ ರೋಗಕ್ರಿಮಿಗಳು ಪ್ರತ್ಯಕ್ಷವಾಗಿ ಮಿದುಳಿನಲ್ಲಿಯೆ ಮುತ್ತಿಗೆ ಹಾಕಿದರೆ "General Paresis" ಎಂಬ ಹೆಸರಿನಿಂದ ರೂಢವಾಗಿರುವ ಭಯಂಕರವಾದ ಹುಚ್ಚು ಹಿಡಿಯುವುದು.

ಎಡಗಾಲೊಂದು ಯಾವುದೋ ಕಾರಣದಿಂದ ಕಡಿಯಲ್ಪಟ್ಟದೆಯೆಂದು ಭಾವಿಸೋಣ! ಸ್ನಾಯುವಿನಿಂದ ಮೊದಲು ಮಾಡಿ ಬೆನ್ನಹುರಿಯ ಕಳಿಗೆಗಳವರೆಗಿನ ಜ್ಞಾನತಂತುಗಳು ಯಾವ ಭಾಗದಲ್ಲಿಯೆ ಹರಿದು ಹೋಗಿದ್ದರೂ ಮನುಷ್ಯನಿಗೆ ಹುಚ್ಚುಹಿಡಿಯಬಹುದು. ಪ್ರಯೋಗಮಾಡಿ ತೋರಿಸಬಹುದಾದಲ್ಲಿ ಯಾವ ಶಸ್ತ್ರವೈದ್ಯನೂ ಇದನ್ನು ಸಹಜವಾಗಿ ಮಾಡಿ ತೋರಿಸಬಲ್ಲನು. ಜ್ಞಾನತಂತುಗಳು ದೇಹದ ತೀರ ಒಳಭಾಗದಲ್ಲಿರುವುದರಿಂದಲೆ ಅಪಘಾತಗಳಿಂದ ಅವು ಮನುಷ್ಯನನ್ನು ಸಂರಕ್ಷಿಸುತ್ತಿರುವುವು. ಜ್ಞಾನತಂತುಗಳು ಬೆನ್ನಹುರಿಯ ಕಳಿಗೆಗಳೊಳಗಿಂದ ಹೊರಬಿದ್ದಮೇಲೆ, ಯಾವ ರೋಗಕ್ರಿಮಿಗಳೂ ಹೆಚ್ಚಿನ ಪರಿಣಾಮವನ್ನು ಅವುಗಳಿಗೆ ಮಾಡಲಾರವು.

ಬೆನ್ನಹುರಿಯ ಕಳಿಗೆಗಳಲ್ಲಿಯ ಜ್ಞಾನತಂತುಗಳಿಗೆ ಕುತ್ತಗಳು ಬಹಳ; ಅವುಗಳಲ್ಲಿ ಎಲ್ಲಕ್ಕಿಂತ ಭೀಕರವಾದುದೆಂದರೆ ಚಿಕ್ಕ ಮಕ್ಕಳಿಗೆ ಉಂಟಾಗುವ 'ಪಕ್ಷಘಾತ' ಎಂಬ ರೋಗ. ಈ ರೋಗಕ್ರಿಮಿಗಳಿಗೆ ಕಿಡಿಗೇಡಿತನವು ಬಹಳ. ಸ್ನಾಯುಗಳ ಕಡೆಗೆ ಹೊರಟಿರುವ ಜ್ಞಾನತಂತುಗಳನ್ನೇ ಇವು ತಿಂದುಹಾಕುವುವು. ಜ್ಞಾನತಂತುಗಳ ಆಧಾರವು ಇಲ್ಲದಂತಾಗುವದರಿಂದಲೆ ಸ್ನಾಯುಗಳೆಲ್ಲವೂ ಹಾಗೆಯೆ ಸವಿದುಹೋಗುತ್ತಿರುವುವು. ಮಂಗನ ಮಜ್ಜಾತಂತುವಿನಿಂದ ಅನುಗೊಳಿಸಿದ ಚುಚ್ಚುಮದ್ದ (ಸೀರಮ್)ನ್ನು ಈ ರೋಗದ ಮೇಲೆ ಉಪಯೋಗಿಸಲಾಗುತ್ತಿದೆ; ಆದರೆ ಅದರಿಂದ ಏನಾದರೂ ಫಲವು ದೊರೆತರೆ ಒಳ್ಳೆಯದು. ಮಜ್ಜಾರಜ್ಜುವಿನ 'meningitis' ಮೂಲಕವೂ ಈ ರೋಗವು

CC-0. Jangamwadi Math Collection. Digitized by eGangotri

ಉಂಟಾಗುವುದು. ಮಜ್ಜಾರಜ್ಜುವಿನ ಆವರಣಕ್ಕೆ ಬಾವು ಬಂದಾಗ ಅವುಗಳ ಒತ್ತುವಿಕೆಯಿಂದ ಜ್ಞಾನತಂತುಗಳು ಕೆಲಸಕ್ಕೆ ಬಾರದುವಾಗುವುವು. ಇದರಿಂದಲೂ ಮೇಲೆ ಹೇಳಿದ ಪರಿಣಾಮಗಳು ಆಗುತ್ತಿರುವುವು.

ಫರಂಗೀ (ಉಪದಂಶ) ರೋಗದ ಜಂತುಗಳು ಬೆನ್ನಹುರಿಯಲ್ಲಿ ಮನೆಮಾಡಿದುವೆಂದರೆ, ಮೇಲೆ ಹೇಳಿದ 'Locomotor Ataxia' ರೋಗವು ತಲೆದೋರುವುದು. ಆದರಿಂದ ನಡಿಗೆಯಲ್ಲಿ ಅಡೆತಡೆಯು ಕಂಡುಬಂದರೂ ಮಿಕ್ಕ ಯಾವ ಕಾರ್ಯವೂ ಸಂಪೂರ್ಣವಾಗಿ ತಡೆದು ನಿಲ್ಲದು. ಅದೇ ಬೆನ್ನಹುರಿಯ ಒಳಭಾಗದಲ್ಲಿ ಕುರುವು ಎದ್ದು ಬಿಟ್ಟರೆ, ಒಮ್ಮೆಲೆ ಕೈಕಾಲುಗಳು ಒಣಗಿಹೋಗುತ್ತಿರುವುದುಂಟು. ರಕ್ತಕ್ಷಯದ ಮೂಲಕ ಮಿದುಳಿನ ಅಡಿಗಟ್ಟು ಕೆಲಸಕ್ಕೆ ಬಾರದಾಗುವುದರಿಂದಲೂ ಇದೇ ಪರಿಣಾಮ ವೊದಗುವದನ್ನು ನಾವು ಕಾಣಬಹುದು. ಯಾವುದಾದರೂ ಅಪಘಾತವೊದಗಿ, ಬೆನ್ನಹುರಿಯ ಸರಪಣಿಗೆ ಪೆಟ್ಟು ತಗಲಿದರೂ ಹೀಗೆಯೇ ಆಗುವುದು. ಮೈಯ ಭಾರವು ಪುರಗಟ್ಟುವಂತೆ ಡಾಕ್ಟರರು ಚುಚ್ಚುಮದ್ದನ್ನು ಪ್ರಯೋಗಿಸುತ್ತಿರುವಾಗಲೂ, ಒಂದೊಂದು ಸಲ ಇಂತಹ ಪರಿಣಾಮವುಂಟಾಗುವುದು. ಬೇರೆ ಬೇರೆ ಇಂದ್ರಿಯಗಳಿಗೆ ಮಾಡುವ ಮಿದುಳಿನ ಆಜ್ಞೆಗಳಿಗೆ ಅಡಚಣೆಯಾಗುವುದೇ ಈ ಎಲ್ಲ ದುಷ್ಪರಿಣಾಮಗಳಿಗೂ ಮೂಲವಾಗಿದೆ. ಇವೆಲ್ಲವುಗಳಿಗೂ ಮನೋರೋಗವೇ ಮೂಲಕಾರಣವೆಂದು ತಿಳಿಯುವುದರಲ್ಲಿ ಯಾವ ತಥ್ಯವೂ ಇಲ್ಲ. ಮಜ್ಜಾರಜ್ಜುಗಳಿಗಾದ ಬಗೆಬಗೆಯ ವಿಕಾರಗಳೆಲ್ಲವೂ ಮಿದುಳಿನವರೆಗೂ ಪಸರಿಸಬಲ್ಲವು. ಹೀಗೆ ಪಸರಿಸಿದ ಮೇಲೆ ಉಂಟಾಗುವ ಪರಿಣಾಮಗಳು ತುಂಬ ಅನಿಷ್ಟಕರವಾದುವುಗಳು.

ಮಿದುಳಿನ ಅಡಿಗಟ್ಟಿನಲ್ಲಿಯೂ ತುಂಬ ಮಹತ್ತ್ವದ ಭಾಗಗಳಿರುತ್ತವೆ. ಇದರ ಬೇರೆಬೇರೆ ಪದರುಗಳ ಮೇಲೆ ರೋಗಜಂತುಗಳ ದಾಳಿಯಾದಂತೆ, ಬೇರೆಬೇರೆ ಪರಿಣಾಮಗಳು ಕಂಡುಬರುತ್ತವೆ. ಎಲ್ಲಕ್ಕಿಂತ ಕೆಳಗಿನ ಪದರಿನಲ್ಲಿ ಶ್ವಾಸೋಚ್ಛ್ವಾಸ ಮತ್ತು ಹೃದಯಕ್ರಿಯೆಗಳನ್ನು ಅಧೀನದಲ್ಲಿಟ್ಟುಕೊಂಡಿರಬಹುದಾದ ಸಾಮರ್ಥ್ಯವು ಕೆಲಸಮಾಡುತ್ತಿರುವುದು.

'High Infantlie Paralysis' ಎಂಬ ರೋಗದ ವಿಷಯಕ್ಕೆ ಡಾಕ್ಟರ್ ಜನರು ತುಂಬ ಹೆದರುವರು. ಏಕೆಂದರೆ ಹುಡುಗರ ಮುಖದ ಸ್ನಾಯುಗಳಮೇಲೆ ಈ ರೋಗದ ಪರಿಣಾಮವಾದುದನ್ನು ನೋಡಿದೊಡನೆಯೆ ಉಸಿರಾಟ, ಎದೆಯ ಹೊಡೆತ, ಇವುಗಳ ಕಾರ್ಯದಮೇಲೆ ಅಧಿಕಾರಿಯಾಗಿದ್ದ ಜ್ಞಾನತಂತುವಿನವರೆಗೂ ರೋಗಜಂತುಗಳು ಬಂದು ತಲ್ಪಿವೆಯೆಂದವರು ತಿಳಿದುಕೊಂಡೇ ಬಿಡುವರು. ಆಗಿನ ಅವರ ಚಿಕಿತ್ಸೆಯೆಂದರೆ 'ಏನೋ, ಪ್ರಯತ್ನ ಮಾಡಿ ನೋಡೋಣ!' ಎಂಬ ನಿರಾಶೆಯ ಹೊರತು ಇನ್ನೇನೂ ಅವರ ಕೈಯಲ್ಲಿ ಇರದು.

ಕುತ್ತಿಗೆಯ ಮೂಳೆಗಳು ಮುರಿದರೂ ಮೇಲೆ ಹೇಳಿದ ಪರಿಣಾಮವುಂಟಾಗುವುದು. ಎಂತಲೆ ಗಲ್ಲಿನ ಶಿಕ್ಷೆಯ ಕಾಲದಲ್ಲಿ ಉರುಲುಬೀಳುವ ಹಗ್ಗವು, ಕುತ್ತಿಗೆಯ ಸರಿಯಾದ ಭಾಗದಲ್ಲಿ ಬೀಳುವಂತೆ ಮೊದಲೆ ಎಚ್ಚರವನ್ನು ತೆಗೆದುಕೊಳ್ಳುತ್ತಿರುತ್ತಾರೆ.

ಮಿದುಳಿನ ಅಡಿಗಟ್ಟಿಗೆ ಹೊಂದಿಕೊಂಡಿರುವ 'Optic thalamus' ಎಂಬ ಭಾಗಕ್ಕೆ ಫರಂಗಿ (ಉಪದಂಶ) ರೋಗದ ಕ್ರಿಮಿಗಳು ತಗಲಿಕೊಂಡುವೆಂದರೆ, ಮನುಷ್ಯನಿಗೆ ತನ್ನ ಮೈ-ಮನಸ್ಸುಗಳ ಮೇಲಿನ ಸ್ವಾಧೀನತೆಯು ತಪ್ಪಿ ಹೋಗುವುದು. ಇಂತಹ ಮನುಷ್ಯನು ಯಾವ ಕಾರಣವೂ ಇಲ್ಲದೆ ಗಂಟೆಗಂಟೆಯ ಕಾಲ ನಗುತ್ತ ಕುಳಿತುಕೊಳ್ಳುವನು. ತಾನು ಇದೇನೋ ಹುಚ್ಚನ ಹಾಗೆ ಮಾಡುತ್ತಿರುವೆನೆಂದು ಆತನಿಗೆ ತಿಳಿಯುತ್ತಿರುವುದಾದರೂ, ಆ ನಗೆಯನ್ನು ತಡೆದು-ಹಿಡಿಯಲಿಕ್ಕೆ ಮಾಡುವ ಆತನ ಪ್ರಯತ್ನಗಳು ನಿರುಪಯುಕ್ತವಾಗುವುವು. 'ನಿದ್ರಾರೋಗ (Sleeping sickness)' ದ ಪರಿಣಾಮವಂತೂ ಇನ್ನೂ ವಿಲಕ್ಷಣವಾದುದು. ಈ ರೋಗವೂ ಮಿದುಳಿನ ಅಡಿಗಟ್ಟಿನ ಮೂಲಕ ಉಂಟಾಗುವ ರೋಗವು. ಈ ರೋಗವು ತಗಲಿದ ಮನುಷ್ಯನು ಆಳತೆಕಟ್ಟು ಇಲ್ಲದೆ ನಿದ್ದೆ ಮಾಡುವನಲ್ಲದೆ, ಸ್ವಲ್ಪ ಮಾತಿಗೇ ತುಂಬ ಸಿಟ್ಟಿಗೇಳುತ್ತಿರುವನು. ಈ ಸಿಟ್ಟಿನ ಭರದಲ್ಲಿ ಅವನು ಏನು ಬೇಕಾದುದನ್ನೂ ಮಾಡುವುದಕ್ಕೆ ಹಿಂದೆ ಮುಂದೆ ನೋಡಲಾರನು.

ಈ ಅಡಿಗಟ್ಟಿನಿಂದ ಮೇಲಕ್ಕೆ ಹೋದರೆ ಅಲ್ಲಿಂದ ಮಿದುಳಿನ ಭಾಗವು ಪ್ರಾರಂಭವಾಗುವುದು. ಇದಕ್ಕೆ ಎಂತೆಂತಹ ಆಘಾತಗಳು ಬಂದು ಒದಗಿದರೂ ಆದರಿಂದ ಹುಚ್ಚು-ಗಿಚ್ಚು ಹಿಡಿಯುತ್ತಿರುವುದಿಲ್ಲ. ಪಕ್ಷಘಾತದ ರೋಗಿಯ ಮಿದುಳಿನಲ್ಲಿಯ ರಕ್ತನಾಳವೊಂದು ಒಡೆದು ಹೋಗುವುದು. ಆದರಿಂದ ಹೊರಡುವ ರಕ್ತದ ಒತ್ತುವಿಕೆಯಿಂದ, ಮಿದುಳಿನ ಕೆಲವೊಂದು ಭಾಗವು ಕೆಲಸಮಾಡಲು ಅಸಮರ್ಥವಾಗುವುದು. ಇದರಿಂದ ಒಂದೊಂದು ಸಲ ಕೆಲಕೆಲವು ಅವಯವಗಳು ಶಕ್ತಿಹೀನವಾಗುವುವೇ ಹೊರತು

CC-0. Jangamwadi Math Collection. Digitized by eGangotri

ವಿಚಾರಶಕ್ತಿಯೆ ಮೊದಲಾದ ಮಿದುಳಿನ ಇತರ ವ್ಯವಹಾರ-ಗಳಿಗೆ ಯಾವ ತಡೆಯೂ ಉಂಟಾಗದು.

ಮಿದುಳಿನ ಬೇರೆ ಬೇರೆ ಭಾಗದಲ್ಲಿ ಬೇರೆ ಬೇರೆ ಕಾರ್ಯಗಳು ನಡೆಯುತ್ತಿರುವುವೆಂಬುದನ್ನು ಅನೇಕರು ಕೇಳಿ ಅರಿತಿರಬಹುದು. ಹಣೆಯ ಒಳಭಾಗಕ್ಕೆ ಹೊಂದಿ-ಕೊಂಡಿದ್ದ ಮಿದುಳಿನ ಭಾಗದಲ್ಲಿ, ಕಲಾಕೌಶಲ್ಯಗಳನ್ನು ಕಲಿಯುವಂತಹಸಾಮರ್ಥ್ಯವು ಕಾರ್ಯಮಾಡುತ್ತಿರುವುದು. ಎಲ್ಲ ಸ್ನಾಯುಗಳ ಸುಸಂಘಟಿತ ಕಾರ್ಯಕಲಾಪಗಳೆಲ್ಲ ಈ ಮಿದುಳಿನ ಭಾಗದಿಂದ ಹೊರಡುವ 'ಹುಕುಮಿ'ನಿಂದಲೆ ನಡೆಯುತ್ತಿರುವುವು. ಲೇಖನ, ಚಿತ್ರಕಲೆ, ವಾದ್ಯವಾದನ ಮೊದಲಾದುವುಗಳು ಇದನ್ನೆ ಅವಲಂಬಿಸಿಕೊಂಡಿರುತ್ತವೆ. ಈ ಭಾಗಕ್ಕೆ ಏನಾದರೂ ಏಟು-ಗೀಟು ತಗಲಿದರೆ, ಕೂಡಲೆ ಮೇಲೆ ಹೇಳಿದ ಕಾರ್ಯಕಲಾಪಗಳ ಮೇಲೆ ಪರಿಣಾಮ-ವಾದುದು ಕಂಡುಬರುತ್ತದೆ. ಈ ಬಗೆಯ ಪರಿಣಾಮಕ್ಕೆ ಇಂಗ್ಲಿಷ್ ಭಾಷೆಯಲ್ಲಿ "Apraxia" ಎಂದು ಹೆಸರಿದೆ. ಉಪದಂಶದಂತಹ ರೋಗದಿಂದಲೂ ಇಂತಹ ಪರಿಣಾಮ-ವಾಗುವುದುಂಟು. ಈ ಮಿದುಳಿನ ಭಾಗಕ್ಕೆ ಗುಂಡು ತಗಲಿದರೂ, ಇನ್ನಾವುದೇ ಕಾರಣದಿಂದ ಇಲ್ಲಿಯ ರಕ್ತ-ನಾಳವೊಂದು ಒಡೆದು ಹೋದರೂ ಮೇಲೆ ಹೇಳಿದ ಪರಿಣಾಮವು ತಲೆದೋರುವುದು.

'Apraxia' ರೋಗದ ಮನುಷ್ಯನಿಗೆ ಕೌಶಲ್ಯವನ್ನು ತೋರಿಸಬಹುದಾದ ತೀರ ಸಣ್ಣ ಕೆಲಸವನ್ನು ಕೂಡ ಮಾಡಲಿಕ್ಕೆ ಬಾರದು. ಕೈಯೊಳಗೆ ಪೆನ್ಸಿಲನ್ನು ಕೊಟ್ಟು ಅಂಕಿತವನ್ನು ಮಾಡಲಿಕ್ಕೆ ಹೇಳಿದರೆ ಅಷ್ಟು ಕೂಡ ಅವನಿಂದಾಗದು. ಬಹಳವಾದರೆ ಮುಟ್ಟಿಗೆಯಿಂದ ಪೆನ್ಸಿಲನ್ನು ಹಿಡಿದು, ಕುಂಬಳಕಾಯಿಯ ಗಾತ್ರದ ಅಕ್ಷರ ಗಳನ್ನು ತೆಗೆಯಲಿಕ್ಕಾಗಬಹುದಿಷ್ಟೇ. ಒಬ್ಬ ಸೈನಿಕನ ಹಣೆಗೆ ಗಾಯವಾಗಿ, ಹಣೆಗೆ ಹೊಂದಿಕೊಂಡಿದ್ದ ಮಿದುಳಿನ ಭಾಗಕ್ಕೆ ಪೆಟ್ಟು ತಗಲಿದ್ದಿತು. ಆತನು ಒಂದು ಕಪ್ಪನ್ನು ಹಿಡಿದು ಮೇಲಕ್ಕೆತ್ತಬೇಕೆಂದು ಎಷ್ಟೊಂದು ಪ್ರಯತ್ನಿಸಿ-ದರೂ ಬೆರಳುಗಳು ಸಮರ್ಥವಾಗಲಿಲ್ಲ. ಕೊನೆಗವನು ಎರಡೂ ಕೈಗಳಿಂದ ಗಟ್ಟಿಯಾಗಿ ಕಪ್ಪನ್ನು ಹಿಡಿದು ಅದುಮಲು, ಅದು ಆತನ ಕೈಯಲ್ಲಿಯೆ ಚೂರುಚೂರಾಗಿ ಹೋಯಿತು.

ಹುಬ್ಬಿನ ಕೆಳಬದಿಯಲ್ಲಿ ಮಿದುಳಿನ 'Speech Centre' ಎಂಬ ಭಾಗವು ಇದೆ. ನಾಲಗೆ-ತುಟಿಗಳ ಕಾರ್ಯದ ನಿಯಂತ್ರಣವನ್ನು ಈ ಭಾಗವು ವಹಿಸಿಕೊಂಡಿರುತ್ತದೆ. ಇದಕ್ಕೆ ಏಟುತಗಲಿದರೆ, ಮನುಷ್ಯನ ಮಾತನಾಡಬಹುದಾದ ಶಕ್ತಿಯೇ ಇಲ್ಲದಂತಾಗುತ್ತದೆ. ಈ ಪರಿಣಾಮಕ್ಕೆ 'Motor aphasia' ಎಂಬುದಾಗಿ ಹೆಸರಿದೆ. ಮೇಲೆ ಹೇಳಿದ 'ಎಪ್ರ್ಯಾಕ್ಸಿಯಾ' ವಿಕಾರದಲ್ಲಿ, ವಾದ್ಯಗಳನ್ನು ಹೇಗೆ ಹೇಗೆ ಬಾರಿಸಬೇಕೆಂಬುದರ ತಿಳಿವಳಿಕೆಯಿದ್ದರೂ ಬಾರಿಸ-ಬೇಕೆಂದರೆ ಬೆರಳುಗಳೇ ಅಡವು. ಅದರಂತೆಯೆ 'Motor aphasia' ವಿಕಾರದಲ್ಲಿ, ಏನು ಮಾತನಾಡಬೇಕೆಂಬುದು ಗೊತ್ತಾಗುತ್ತಿದ್ದರೂ ನಾಲಗೆ-ತುಟಿಗಳ ಮೇಲಿನ ಅಧೀನತೆ-ಯಿಲ್ಲದುದರಿಂದ ಅಕ್ಷರಗಳನ್ನು ಹೊರ-ಹೊರಡಿಸಲಿಕ್ಕೇ ಆಗುವುದಿಲ್ಲ.

ಇಂತಹದೇ ಇನ್ನೊಂದು 'auditary aphasia' ಎಂಬ ಹೆಸರಿನ ವಿಕಾರವಿದೆ. ಹುಬ್ಬಿನ ಕೆಳಭಾಗದ ಮಿದುಳು ಮಾತನಾಡಿಸಲು ಹಚ್ಚುವಂತೆಯೆ, ಕಿವಿಯ ತೂತುಗಳ ಒಳ-ಬದಿಗೆ ಹೊಂದಿಕೊಂಡಿರುವ ಮಿದುಳಿನ ಭಾಗವು ಮಾತನಾಡಿ ದುದರ ಅರ್ಥವನ್ನು ತಿಳಿದುಕೊಳ್ಳುವ ಶಕ್ತಿಯನ್ನು ಸಂಗ್ರ-ಹಿಸಿಕೊಂಡಿರುವುದು. ಇಲ್ಲಿ ವಿಶೇಷ ನೋವು-ಗಾಯಗಳೇ-ನಾದರೂ ಆದಲ್ಲಿ, ಮಾತನ್ನು ಅರ್ಥಮಾಡಿಕೊಳ್ಳುವ ಶಕ್ತಿಯು ಇಲ್ಲದಂತಾಗುವುದು. ಆಡಿದ ಮಾತು ಕೇಳಿಸು-ವುದಾದರೂ, ಅದರಿಂದ ಅರ್ಥಬೋಧವೇ ಏನೂ ಆಗುತ್ತಿ-ರುವುದಿಲ್ಲ. ಆಗ ಓದಿಕೊಂಡ ಮಾತಿನ ಅರ್ಥವು ಮಾತ್ರ ಸರಿಯಾಗಿ ಗೊತ್ತಾಗುವುದು. ಏಕೆಂದರೆ ಇದು ದೃಷ್ಟಿಯಲ್ಲಿ-ರುವ ಅರ್ಥಗ್ರಹಣಶಕ್ತಿಯ ಕಾರ್ಯವಾಗಿರುವುದು; ಅದು ಚೆನ್ನಾಗಿ ಇದ್ದರೆ ತೀರಿತು. ಕೇಳಿದ ಮಾತಿನ ಅರ್ಥವು ಆಗದಿರಲಿಕ್ಕೆ ಕಿವಿಯೊಳಗೆ ಹೊಂದಿಕೊಂಡಿದ್ದ ಮಿದುಳಿನ ಭಾಗಕ್ಕಾದ ನೋವೇ ಕಾರಣವೆಂಬುದಕ್ಕೆ ಕಳೆದ ಮಹಾ ಯುದ್ಧದಲ್ಲಿ ಒದಗಿದುದೊಂದು ಉದಾಹರಣೆಯಿದೆ. ಒಬ್ಬ ಮನುಷ್ಯನ ಕಿವಿಗೆ ಹೊಡೆತಬಿದ್ದುದರಿಂದ ಅವನು ಭಾಷೆಯನ್ನೇ ಮರೆತುಬಿಟ್ಟನು. ಅವನ ಹುಟ್ಟುನುಡಿಯ-ಲ್ಲಿಯೆ ಮಾತನಾಡಿಸಿದರೂ ಆತನಿಗೇನೂ ತಿಳಿಯುತ್ತಿರಲಿಲ್ಲ. ಬರೆದುದನ್ನು ಓದಿದರೆ ಮಾತ್ರ ಅವನಿಗೆ ಎಲ್ಲವೂ ಅರ್ಥವಾಗುತ್ತಿದ್ದಿತು. ಮಾತಿನೊಳಗಿನ ಬೇರೆ ಬೇರೆ ಶಬ್ದಗಳನ್ನು ಹೇಗೆ ಹೇಗೆ ಉಚ್ಚರಿಸಬೇಕೆಂಬುದೇ ಆತನಿಗೆ ಮರೆತುಹೋಯಿತು.

ತಲೆಯ ಹಿಂಬದಿಗೆ ಪೆಟ್ಟುತಗಲಿದರೂ ಹೀಗೆಯೇ ವಿಚಿತ್ರ-ವಿಚಿತ್ರ ಪರಿಣಾಮಗಳು ಆಗುತ್ತಿರುವುದುಂಟು. ಕಣ್ಣಿನಿಂದ ಅರ್ಥಬೋಧೆಯನ್ನು ಮಾಡಿಕೊಳ್ಳುವ ಶಕ್ತಿ ಇಲ್ಲಿಯ ಮಿದುಳಿನಲ್ಲಿ ಸಂಗ್ರಹಿತವಾಗಿರುವುದು. ಈ ಭಾಗಕ್ಕೆ

CC-0. Jangamwadi Math Collection. Digitized by eGangotri

ಹುಣ್ಣು ಹುಟ್ಟಿದರೂ ಒಳಗಿನ ರಕ್ತವಾಹಿನಿಯೊಂದು ಒಡೆದರೂ—ಮನುಷ್ಯನಿಗೆ— ಕಣ್ಣು ಕಾಣುತ್ತಿದ್ದರೂ— ತಾನು ಯಾವುದನ್ನು ನೋಡುತ್ತಿರುವೆನೆಂಬುದು ಗೊತ್ತಾಗದು. ಆಡಿದ ಮಾತನ್ನವನು ಕಿವಿಯಿಂದ ಕೇಳಿ ತಿಳಿದುಕೊಳ್ಳಬಲ್ಲನು. ತಾನೂ ಮಾತನಾಡಲು ಬಲ್ಲನು. ಓದಿದುದರ ಅರ್ಥವನ್ನು ಮಾತ್ರ ಸ್ವಲ್ಪವೂ ತಿಳಿದುಕೊಳ್ಳಲಾರನು.

ಕೆಲಕೆಲವರಿಗೆ ಹುಟ್ಟಿದಂದಿನಿಂದಲೂ ಕಣ್ಣುಗಳ ಮೇಲೆ ಪರೆಯು ಬಂದಿರುತ್ತದೆ. ಇಂತಹರಿಗೆ—೪೦ನೆಯ ವಯಸ್ಸಿನಲ್ಲಿ ಕೂಡ—ಶಸ್ತ್ರಕ್ರಿಯೆಯಿಂದ ಗುಣವಾಗಿ ಕಣ್ಣುಗಳು ಚೆನ್ನಾಗಿ ಕಾಣುವಂತಾದ ಉದಾಹರಣೆಗಳು ಕೆಲವು ಉಂಟು. ಆದರೆ ಇಂತಹ ಜನರು ಕಣ್ಣಿನ ಉಪಯೋಗ ಮಾಡಿಕೊಳ್ಳುವುದನ್ನು, ಸಣ್ಣ ಹುಡುಗರಂತೆ ಪ್ರಾರಂಭದಿಂದಲೆ ಕಲಿತುಕೊಳ್ಳಬೇಕಾಗುವುದು. ಅವರ ಕಣ್ಣೆದುರು ದುಡ್ಡೊಂದನ್ನು ಇಟ್ಟು-ಇದೇನೆಂದು ಕೇಳಿದರೆ, ಬಾಯಿಗೆ ಬಂದ ಪದಾರ್ಥದ ಹೆಸರನ್ನವರು ಹೇಳಿಬಿಡುವರು; ಏಕೆಂದರೆ ಇಂತಹದೊಂದು ಪದಾರ್ಥಕ್ಕೆ ಇಂತಿಂತಹ ಆಕಾರವಿರುವುದೆಂಬುದನ್ನು ಅವರಿಗೆ ಹೊಸತಾಗಿಯೆ ಕಲಿತುಕೊಳ್ಳಬೇಕಾಗಿರುವುದು.

ಯಾವುದೇ ಕಾರಣದ ಮೂಲಕವಾಗಿ ಉಂಟಾದ—ಸರ್ವೇಸಾಮಾನ್ಯ—ಪೆಟ್ಟುನೋವುಗಳಿಂದಲೂ ಇಂತಹ ಬೇರೆಬೇರೆ ವಿಕಾರಗಳಾಗುತ್ತಿರುವುದುಂಟು; ಆದರೂ ಮಿದುಳಿನ ವಿಕಾರಗಳು ಉಪದಂಶದ ಜಂತುಗಳನ್ನೆ ಹೆಚ್ಚಾಗಿ ಅವಲಂಬಿಸಿಕೊಂಡಿರುವುವು. 'Meningitis' ಎಂಬ ರೋಗದ ಮೂಲಕವೂ ಈ ಮೊದಲು ಹೇಳಿದ ವಿಕಾರಗಳು ಕಂಡುಬರುವುವು. 'Influenza' ರೋಗವು ಬಂದುಹೋದ ಬಳಿಕ ಕೂಡ ಇಂತಹ ವಿಕಾರಗಳೊದಗಿದುದರ ಅನುಭವವುಂಟು. 'Scarlet Fever' ಅಥವಾ Diptheria' ಎಂಬ ರೋಗಗಳು ಬಂದುಹೋದವರಿಗೆ ಕುರುಡತನವಾಗಲಿ ಕಿವುಡುತನವಾಗಲಿ ಬಂದುಬಿಡುವುದುಂಟು. ಮಿದುಳಿಗಾದ ಹುಣ್ಣು-ನೋವುಗಳಿಂದಲೂ ಇಂತಹ ಪರಿಣಾಮಗಳು ಕಾಣುವುವು.

ಮಿದುಳಿಗೆ ಸ್ಥಾನಿಕವಿಕೃತಿಯೊದಗಿದ ಮಾತ್ರಕ್ಕೆ, ಎಂದರೆ ಮಿದುಳಿನ ಕೆಲವೊಂದು ಭಾಗವು ಕೆಟ್ಟುಹೋದ ಮಾತ್ರಕ್ಕೆ ಮನುಷ್ಯನು ಎಂದೂ ಹುಚ್ಚನಾಗನು; ಸಂಪೂರ್ಣ ಮಿದುಳೆಲ್ಲ ಕೆಟ್ಟುಹೋದಾಗಲೆ ಅವನಿಗೆ ಹುಚ್ಚು ಹಿಡಿಯುವುದು. ಮಿದುಳಿಗೆ ಏನಾದರೊಂದು ಹುಣ್ಣು ಹುಟ್ಟಿದೆಯೆಂದು ತಿಳಿಯೋಣ! ಅದು ಚಿಕ್ಕದಿರುವಾಗ ಕೆಲವೊಂದು ವಿಶಿಷ್ಟಭಾಗದಲ್ಲಿ ಅದರ ಒತ್ತುವಿಕೆಯುಂಟಾದಲ್ಲಿ, ಮೇಲೆ ಹೇಳಿದ ವಿಕಾರಗಳಲ್ಲಿ ಯಾವುದಾದರೊಂದು ತಲೆದೋರುವುದು. ಅದೇ ಹುಣ್ಣು ದೊಡ್ಡದಾಗಿ ಬಲಿತುಕೊಂಡಲ್ಲಿ, ಸಂಪೂರ್ಣ ಮಿದುಳಿನ ಮೇಲೆ ಅದು ಪರಿಣಾಮನ್ನುಂಟುಮಾಡುವುದು. ಆಮೇಲೆ ಇಂತಹ ವ್ಯಕ್ತಿಗಳನ್ನು ಹುಚ್ಚರ ಆಸ್ಪತ್ರೆಗೆ ಕಳಿಸುವುದೇ ಒಳ್ಳೆಯ ಉಪಾಯವು.

ಕುಡುಕತನದ ಪರಿಣಾಮಗಳು ಎಲ್ಲಕ್ಕೂ ಮೊದಲು, ಮಿದುಳಿನ ಮೇಲಿನ ಪದರಿನಮೇಲೆ ಆಗುವುವು. ಬಳಿಕ ಕ್ರಮಕ್ರಮವಾಗಿ ಅವು ಕೆಳಗಿನ ಪದರುಗಳಲ್ಲಿ ಹಬ್ಬುತ್ತ ಹೋಗುವುವು. ಎಂತಲೇ ಮೊದ-ಮೊದಲು ಸ್ವಭಾವದ ಮೇಲೆ ಮಾತ್ರ ಪರಿಣಾಮವಾಗುತ್ತಿರುವುದು. ಆ ಬಳಿಕ ದೈಹಿಕಪರಿಣಾಮಗಳು ಒಂದರ ಹಿಂದೊಂದು ಕಾಣಲು ತೊಡಗುವುವು. 'Morphine' ಎಂಬ ದ್ರವ್ಯದಿಂದಲೂ 'Bromine' ಎಂಬುದರಿಂದಲೂ ಕೆಲವು ವೇಳೆಯವರೆಗೆ ಹುಚ್ಚು ಹಿಡಿಯುವುದುಂಟು.

ಮನುಷ್ಯನ ಅವ್ಯವಸ್ಥಿತ ನಡೆವಳಿಕೆಯಿಂದಲೂ ಜ್ವರದ ಕಾರಣದಿಂದಲೂ ಕೆಲಕೆಲವು ವಿಷದ್ರವ್ಯಗಳು, ದೇಹದಲ್ಲಿ ತಮ್ಮಿಂದ ತಾವೆ ಉತ್ಪನ್ನವಾಗುವುವು. ಇವುಗಳಿಂದಲೂ ಸಾಕಷ್ಟು ವಿಕಾರಗಳಾಗುವುದು ಕಂಡುಬರುವುದು. 'ನ್ಯುಮೋನಿಯಾ' ಇಲ್ಲವೆ 'ವಿಷಮಜ್ವರ' ಇವುಗಳ ಕ್ರಿಮಿಗಳಿಂದುಂಟಾದ ವಿಷಪದಾರ್ಥಗಳ ಮೂಲಕ, ಮಿದುಳು ಕೆಟ್ಟುಹೋಗುವುದು. 'ಅಪೆಂಡಿಂಕ್ಸ್' ಎಂಬ ದೇಹದ ಒಳಭಾಗವು ಕೆಟ್ಟುಹೋದುದರಿಂದ ಒಬ್ಬ ಮನುಷ್ಯನ ಮಿದುಳೂ ತೀರ ಕೆಟ್ಟುಹೋಗಿದ್ದಿತು. ಅವನನ್ನು ಯಾವಾಗಲೂ ಕಟ್ಟಿ ಕೆಡಹಬೇಕಾಗುತ್ತಿದ್ದಿತು. ಈ ಬಗೆಯ ಪರಿಣಾಮಗಳು ತಾತ್ಕಾಲಿಕವಾಗಿರುವುವು. ಒಂದೊಂದು ಸಲ ಯಾವುದಾದರೊಂದು ದೊಡ್ಡ ಬೇನೆಯು ಬಂದು ಹೋದಮೇಲೆ, ಮಿದುಳಿನಲ್ಲಿ ಯಾವುದಾದರೊಂದು ಕೊರತೆಯು ನಿರಂತರವಾಗಿ ನಿಂತುಬಿಡುವುದು.

ಕೆಲವೊಂದು ಹುಡುಗರು ಅತ್ತುಅತ್ತು, ತಮ್ಮಿಂದ ತಾವೆ ಮೂರ್ಛಾರೋಗವನ್ನು ತಂದುಕೊಳ್ಳುತ್ತವೆ. ಅಳುವುದರಿಂದ ತಮಗೆ ಇಷ್ಟವಿದ್ದ ವಸ್ತುವು ಸಿಕ್ಕುವುದೆಂಬ ವಿಚಾರವು ಒಂದು ಸಲ ಹುಡುಗರ ತಲೆಯಲ್ಲಿ ಸೇರಿಬಿಟ್ಟಿತೆಂದರೆ ಈ ರೋಗವುಂಟಾಗುತ್ತಿರುವುದು. ಇಂತಹ ರೋಗಕ್ಕೆ ತಾಯ್ತಂದೆಗಳ ಹೆಚ್ಚಿನ ಸಲಿಗೆಯೆ ಕಾರಣವಲ್ಲದೆ, ಮಿದುಳಿನ ದೋಷವು ಕಾರಣವಲ್ಲವೆಂಬುದನ್ನು ಪ್ರತಿಯೊಬ್ಬರೂ ನೆನಪಿನಲ್ಲಿ ಇಟ್ಟುಕೊಂಡಿರಬೇಕಾಗಿದೆ. *

---

*ಇಂಗ್ಲಿಷ್ ಭಾಷೆಯ ಲೇಖನವೊಂದನ್ನು ಓದಿ ಸಂಗ್ರಹಿಸಲಾಗಿದೆ. ಲೇ.

CC-0. Jangamwadi Math Collection. Digitized by eGangotri

# ಹನ್ನೊಂದು ಹೆಣಗಳು

## ( ಜನಪದಸಾಹಿತ್ಯ )

ಸಂಗ್ರಾಹಕರು: ಶ್ರೀ. ಬ. ಅ. ಕಟ್ಟೀಮನಿ

ಅಣ್ಣಾ ನಿಂಗನಗೌಡ,
ತಮ್ಮ ಸಂಗನಗೌಡ;
ಅಣ್ಣಾಗ ಬಡತನ,
ತಮ್ಮಾಗ ದೊರೆತನ.

ಅಣ್ಣಾ ನಿಂಗನಗೌಡ
ಮುಂಗೈ ಜೋಳಿಗ್ಯಾಕ್ಯಾನ;
ತಮ್ಮ ಸಂಗನಗೌಡ
ಹಗೆಯನ್ನು ತಗದಾನ.

ಒಂದ್ಬುಟ್ಟಿ ಜ್ವಾಳಾವ
ಜೋಳಿಗ್ಯಾಗ ಸುರುವ್ಯಾನ.
ಜೋಳಿಗ್ಯಾಗಿನ ಜ್ವಾಳಾವ
ಮರದಾಗ ಸುರುವ್ಯಾನ.

ಪಡಿ ಜ್ವಾಳಾ ಒಡಿ ಅಂದ,
ಪಡಿ ಜ್ವಾಳಾ ಇಡ ಅಂದ.
ಪಡಿ ಜ್ವಾಳಾ ಒಡಿದಾಳ,
ಪಡಿಜ್ವಾಳಾ ಇಟ್ಟಾಳ.

ತಮ್ಮ ಸಂಗನ ಹೇಣ್ತಿ
ಬೆಂಕಿಗಿ ಬಂದಾಳ:
"ನಮ್ಮ ಮನಿಯಾನ ಜ್ವಾಳಾ
ನಿಮ್ಮ ಮನಿಯಾಗ್ಯಾಕ?"

ಮರದಾಗಿನ ಜ್ವಾಳಾವ
ಉಡಿಯಾಗ ಸುರಿಕೊಂಡ್ಳ;
ಅಡುವೂ ಗಡಿಗೀ ಮ್ಯಾಲ
ಹಿಡಿಗಲ್ಲ ಹೇರ್ಯಾಳ.
ಕಾಲುಂಗರ ಕಾಲೀಲಿ
ಝಾಡಿಸಿ ಒದ್ದಾಳ.

* * *

( ಅತ್ತ ಹೊಲದ ಹೋರೆಗೆ ಹೋದ ಸಂಗನಗೌಡನು ಹೊತ್ತಾ-ದುದರಿಂದ ಊಟಬರುವ ದಾರಿನೋಡುವನು. )

"ಊರ ಊಟಾ ಬಂತು
ಕೇರೀ ಊಟಾ ಬಂತು
ರಾಮಣ್ಣಾ್ಯಕ ಊಟಾ
ತರಲಿಲ್ಲsss ?"

"ಊರ ಊಟಾ ಬಂತು
ಕೇರೀ ಊಟಾ ಬಂತು
ಲಕ್ಷ್ಮಣ್ಣಾ್ಯಕ ಊಟಾ
ತರಲಿಲ್ಲsss ?"

"ಊರ ಊಟಾ ಬಂತು
ಕೇರೀ ಊಟಾ ಬಂತು
ಗಂಗವ್ವ್ಯಾಕ ಊಟಾ
ತರಲಿಲ್ಲsss ?"

"ಊರ ಊಟಾ ಬಂತು
ಕೇರೀ ಊಟಾ ಬಂತು
ಗೌರವ್ವ್ಯಾಕ ಊಟಾ
ತರಲಿಲ್ಲsss ?"

ಗುದ್ದಲಿ ಸನಿಕಿಯ
ಹೆಗಲಿಗಿ ಹಚಿಕೊಂಡ;
ಅಣ್ಣಾ ನಿಂಗನಗೌಡ
ಮನೆಕಡೆ ಬಂದಾನ.

( ಮನೆಗೆ ಬಂದು ಕೇಳಲು ಹೆಂಡತಿ ಹೇಳುವಳು )

"ತಮ್ಮ ಸಂಗನ ಹೇಣ್ತಿ
ಬೆಂಕಿಗಿ ಬಂದಾಳ.
ನಮ್ಮ ಮನಿಯಾನ ಜ್ವಾಳಾ
ನಿಮ್ಮ ಮನಿಯಾಗ್ಯಾಕ?"

"ಮರದಾಗಿನ ಜ್ವಾಳಾವ
ಉಡಿಯಾಗ ಸುರಿಕೊಂಡ್ಳ;
ಅಡುವೂ ಗಡಿಗೀಮ್ಯಾಲ
ಹಿಡಿಗಲ್ಲ ಹೇರ್ಯಾಳ.
ಕಾಲುಂಗರ ಕಾಲೀಲಿ
ಝಾಡಿಸಿ ಒದ್ದಾಳ."

* * *

ಗುದ್ದಲಿ ಸನಿಕಿಯ
ಹೆಗಲಿಗಿ ಹಚಿಕೊಂಡ
ಎದ್ದಾನ ನಿಂಗನ
ಗೌಡ ಅಂಗಡಿಗಿ.

CC-0. Jangamwadi Math Collection. Digitized by eGangotri

ಗುದ್ದಲಿ ಸನಿಕಿಯ
ಒತ್ತೀಯ ಒಗದಾನ.
ಪಡಿ ಅಕ್ಕಿ ಕೊಡಂದ
ದುಡ್ಡಿನಿಸs* ಕೋಡಂದ

ಅಣ್ಣ ಸಿಂಗನಗೌಡ
ಮನಿಕಡೆ ಬಂದಾನ.
ಪಡಿ ಅಕ್ಕಿ ಅಡು ಅಂದ
ದುಡ್ಡಿನಿಸs ಹಾಕಂದ.

ಪಡಿ ಅಕ್ಕಿ ಅಟ್ಟಾಳ
ದುಡ್ಡಿನಿಸ ಹಾಕ್ಯಾಳ.
ಹತ್ತೊತ್ತಿ ನೀಡಂದ
ಹತ್ತೆಡಿ ಮಾಡಂದ.
ಹತ್ತೊತ್ತಿ ನೀಡ್ಯಾಳ
ಹತ್ತೆಡಿ ಮಾಡ್ಯಾಳ.

* * *

ಸಟ್ವಾನ ಸರವತ್ತಿಗಿ
ನೀರಡಕಿ ಆದಾವ.
" ನೀರಿಲ್ಲ: ನನಬಾಳs
ಸುಮ್ಮನs ಮಲಗಪ್ಪ! "

" ನೀರಿಲ್ಲ ನನ ಮಗಳs
ಸುಮ್ಮನs ಮಲಗವ್ವ! "
ಹಾಕಿದ ಬಾಗಲಾ
ಹಾಕಿದಂಗಿರವವು.
ಸಿಂಗನಗವಡೆದ್ದ
ಬಾಗೀಲ ತಗಿಲಿಲ್ಲ.

+ ದುಡ್ಡಿನಿಸ= ದುಡ್ಡಿನ ವಿಷ

ತಮ್ಮ ಸಂಗನಗೌಡ
ಓಡೋಡಿ ಬಂದಾನ.
" ಊರ ಬಾಗಿಲ ತಗಿತು
ಕೇರಿ ಬಾಗಿಲ ತಗಿತು
ಅಣ್ಣನ ಬಾಗಿಲ್ಯಾಕ
ತಗೀಲಿಲ್ಲss ? "

ಹೋಗಿ ಹೇಳ್ಯಾನ
ಊರ ಗೌಡಗ;
ಗೌಡ ಬಂದಾನ
ಬಾಗಿಲ ಮುರದಾನ
ಮುರದ ಮಾಡ್ಯಾನ
ಪಂಚನಾಮಾss !

ತಮ್ಮ ಸಂಗನಗೌಡ
ಮನಿಯೊಳಗ ಹ್ವಾದಾನ.
"ಅಣ್ಣ ಸಿಂಗನಗೌಡ
ಹೀಂಗ್ಯಾಕ ಆಯಿತೊ ?
ನನಗ್ಯಾಕ ಹೇಳಲಿಲ್ಲ " ?

ಅಣ್ಣನ ಕಿಸೆದಾಗ
ಚೀಟಿಯ ನೋಡ್ಯಾನ;
ಹತ್ತು ಹೆಣಗಳನ್ನ
ಅತ್ತತ್ತು ಹೇರ್ಯಾನ.

ಮತ್ತ ಮಡದಿಯನ್ನ
ಜಗ್ಗಿ ಜಗ್ಗಿ ತಂದಾನ.
ಹತ್ತು ಹೆಣಗಳ ಗೂಡೆ
....ಹನ್ನೊಂದ ಕೂಡಿಸ್ಯಾನ....

## ಪರಿಚಯ

ಇದೊಂದು ಹಳ್ಳಿಗರ ಜೀವನದಲ್ಲಿಯ ವಿಷಾದಾಂತಘಟನೆಯ ಸರಲ-ಸುಂದರ ಚಿತ್ರ. ಹಳ್ಳಿಯ ಹೆಣ್ಣುಮಕ್ಕಳು ಬೆಳುದಿಂಗಳಲ್ಲಿ ಕುಳಿತು, ಇಬ್ಬರು ಜೊತೆಗೂಡಿ ಒಂದುನುಡಿ ಹಾಡನ್ನು ಹೇಳುವರು. ಇನ್ನಿಬ್ಬರು ಜೊತೆಗೂಡಿ 'ಕೋಲೆನ್ನ ಕೋಲೇ' ಎಂದು ಬರೀ ಪಲ್ಲವಿಯನ್ನು ಹೇಳುವರು. ಹೇಳುವ ರಾಗವು, ಹಾಡಿನ ಭಾವವನ್ನು ಚೆನ್ನಾಗಿ ಹೊರಕ್ಕೆ ಹಾಕುವುದು.

—ಸಂ. ಜ. ಕ.

CC-0. Jangamwadi Math Collection. Digitized by eGangotri

# ಜಪಾನಿನಲ್ಲಿಯ ರೇಶಿಮೆಯ ಕೈಗಾರಿಕೆ

ಶ್ರೀಮಾನ್ ಕರಾಚೂರ್ ಎಲ್. ನಂಜಪ್ಪ, ಟೋಕಿಯೊ (ಜಪಾನ್)



೬೦ ವರ್ಷಗಳ ಕೆಳಗೆ ಜಪಾನ್‌ದೇಶವು ಬಡತನದ ಬೀಡಾಗಿದ್ದಿತು. ರೈತರ ಸ್ಥಿತಿಯಂತೂ ತುಂಬ ಶೋಚನೀಯವಾಗಿದ್ದಿತು. ಆದರೇನು? ಸರ್ಕಾರವು ಸೊಂಟಕಟ್ಟಿಕೊಂಡು, ರೇಶಿಮೆಯ ಕೈಗಾರಿಕೆಯ ಉನ್ನತಿಗೆ ನಾನಾ ವಿಧವಾಗಿ ದುಡಿದ ಪರಿಣಾಮವಾಗಿ ಇಂದು ರೈತರ ಆರ್ಥಿಕ ಸ್ಥಿತಿಯು ಉತ್ತಮಗೊಂಡಿರುತ್ತದಲ್ಲದೆ ಗ್ರಾಮುಗಳು ಕೂಡ ಸಂಪತ್ತಿನ ಬೀಡಾಗಲು ಸಾಧ್ಯವಾಯಿತು.

ಜನತೆಗೆ ಬೇಕಾದ ಸರಕಾರ!

ಜಪಾನಿನ ಕೀರ್ತಿಯು ಪ್ರಪಂಚದ ಮೂಲೆಮೂಲೆಗಳಲ್ಲಿ ತಾಂಡವವಾಡುತ್ತಿದ್ದರೂ ದೇಶದ ವಿಸ್ತೀರ್ಣವು ತರ ದೇಶಗಳಿಗಿಂತ ಎಷ್ಟೋ ಪಾಲು ಕಡಿಮೆ. ಸಾಲದುದಕ್ಕೆ ದೆಸೆದಿಕ್ಕಿಲ್ಲದೆ ಬೆಳೆಯುತ್ತಿರುವ ಪ್ರಜಾಸಂಖ್ಯೆ ಬೇರೆ. ಅಲ್ಲದೆ ಜನರ ಅಭಿವೃದ್ಧಿಗೆ ಅಸಹಕಾರದ ಧ್ವಜವನ್ನು ಎತ್ತಿ ಹಿಡಿದುಕೊಂಡಿರುವ ಪ್ರಕೃತಿ. ಇಷ್ಟೆಲ್ಲವನ್ನೂ ಸಹಿಸಿಕೊಂಡು, ತಮ್ಮ ದೇಶದ ಮತ್ತು ಜನರ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳಲು ಇವರಿಗೆ ದೊರಕಿದ ಸಲಕರಣೆಗಳಾದರೂ ಏನು? ಇಂದು ಜಪಾನಿಗಳು ಕಾರ್ಯಗಳನ್ನು ಕೈಕೊಂಡು ಅದರ ಫಲವನ್ನು ಅನುಭವಿಸುತ್ತಿರುವುದನ್ನು ನೋಡಿದರೆ ಮಾನವನಿಂದ ಸ್ವರ್ಗವನ್ನು ನಿರ್ಮಿಸಲು ಸಾಧ್ಯವೆಂದು ಖಂಡಿತವಾಗಿ ಎದೆತಟ್ಟಿಕೊಂಡು ಹೇಳಲು ಅವಕಾಶವಿದೆ. ಭಾವಿಕರ ಸ್ವರ್ಗವು ಮಾನವರಿಂದ ದೂರವಾಗಿ ಇದ್ದರೂ, ಒಮ್ಮೆ ಅದೇ ಮಾನವರು ಅದನ್ನು ಗಳಿಸಲು ಪ್ರಾರಂಭಿಸಿದರೆ, ನಿಜವಾಗಿಯೂ ಸ್ವರ್ಗವು ಲಭಿಸುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಇದರ ಗುಟ್ಟನ್ನು ಜಪಾನೀಯರು ಪ್ರಪಂಚದ ಮುಂದೆ ಪ್ರದರ್ಶಿಸುತ್ತಲಿರುವರು. ಅವರು ಪ್ರದರ್ಶಿಸುತ್ತಲಿರುವ ವಿಷಯಗಳು ಯಾವ ಬಗೆಯ ಇಂದ್ರಜಾಲ, ಮಹೇಂದ್ರಜಾಲಗಳಿಂದಲೂ ಕೂಡಿರದೆ, ನೂರಕ್ಕೆ ನೂರರಷ್ಟು ಸತ್ಯಾಂಶವನ್ನೊಳಗೊಂಡಿರುತ್ತವೆ.

ಜಪಾನ್ ದೇಶವು ಪುಟ್ಟ ರಾಜ್ಯ; ಪುಟ್ಟ ರಾಜ್ಯವಾದರೂ ತನ್ನ ಬೆದರಿಕೆಯಿಂದ ಅನೇಕ ದೊಡ್ಡದೊಡ್ಡ ರಾಜ್ಯಗಳಿಗೆ ಹಗಲಿರುಳು ನಿದ್ರೆಬಾರದಂತೆ ಮಾಡಿರುವುದು. ಮುಖ್ಯವಾಗಿ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ಜಪಾನಿನ ವಿಸ್ತಾರವು ಕೇವಲ ೩,೩೯,೦೫೮ ಚ. ಮೈಲಿಗಳಷ್ಟು ಮಾತ್ರ. ೧೯೧೪ಕ್ಕೆ ಮೊದಲು ಈ ದೇಶವು ಕೇವಲ ವ್ಯವಸಾಯದ ದೇಶವಾಗಿ ಇದ್ದಿತು. ಆದರೆ ಪ್ರಪಂಚದ ಯುದ್ಧದಲ್ಲಿ ದೊರಕಿದ ಅನುಕೂಲಾವಕಾಶದಿಂದ, ದೇಶವು ವ್ಯವಸಾಯವಲ್ಲದೆ ಕೈಗಾರಿಕೆಯ ದೇಶವಾಗಿ ಪರಿಣಮಿಸಲು ಸಾಧ್ಯವಾಯಿತು. ಅಲ್ಲದೆ ಅದೇ ಯುದ್ಧಕಾಲದಲ್ಲಿ ಕೈಗಾರಿಕೆಯಿಂದ ಗಳಿಸಿದ ಲಾಭದಿಂದ, ತನ್ನ ಹಣಕಾಸಿನ ಸ್ಥಿತಿಯನ್ನು ಉತ್ತಮಗೊಳಿಸಿಕೊಂಡುದಲ್ಲದೆ, ತನ್ನ ಹಿಂದಣ ಸಾಲವನ್ನೆಲ್ಲ ತೀರಿಸಿಕೊಂಡಿತು. ಇಲ್ಲಿಯ ರೈತನಿಗೆ ಸರಾಸರಿಯಾಗಿ ೨॥ ಎಕರೆ ಜಮೀನು ಮಾತ್ರ—ಸಾಗುವಳಿಗೆ—ದೊರೆಯುವುದು. ಈ ೨॥ ಎಕರೆ ಭೂಮಿಯು ಕೂಡ—ಬೆಳೆಯುತ್ತಿರುವ ಜನಸಂಖ್ಯೆಯಿಂದ—ಕಡಿಮೆಯಾಗುತ್ತಲಿರುವುದು. ರೈತರ ವ್ಯವಸಾಯವೆಂದರೆ ಬತ್ತ,

CC-0. Jangamwadi Math Collection. Digitized by eGangotri

ಆಲುಗಡ್ಡೆ; ಮುಖ್ಯ ಭಾಗದಲ್ಲಿಯೂ ನೀರಿನ ಸೌಕರ್ಯವಿದೆ. ಇವರ ಆಹಾರವಾದರೂ ಬತ್ತ, ಮೀನು, ಆಲುಗಡ್ಡೆ ಇವೇ ಆಗಿವೆ.

ಇವುಗಳು ಅಲ್ಲದೆ ರೈತನಿಗೆ ಮತ್ತೆ ಯಾವುದಾದರೂ ಕೈಗಾರಿಕೆ ಇರುವುದಾದರೆ, ಅದು ರೇಶಿಮೆಯ ಕೈಗಾರಿಕೆಯಲ್ಲದೆ ಬೇರೆ ಯಾವುದೂ ಅಲ್ಲ. ರೇಶಿಮೆಯ ಕೈಗಾರಿಕೆಯು ಇವರ ಜನ್ಮ-ಜನ್ಮಾಂತರದ ಹಕ್ಕು. ಇಂದು ಪ್ರಪಂಚದಲ್ಲಿ ಉತ್ಪತ್ತಿಯಾಗುವ ರೇಶಿಮೆ (Raw silk) ಯಲ್ಲಿ ಜಪಾನ್ ದೇಶವು ನೂರಕ್ಕೆ ೮೦ರಷ್ಟನ್ನು ಒದಗಿಸುತ್ತದೆ; ಅಮೇರಿಕೆಯ — ಯುರೋಪಿನ — ರೇಶಿಮೆಯ ಕೈಗಾರಿಕೆಯು ಜೀವಿಸಿಕೊಂಡು ಇರುವುದು ಜಪಾನಿನ ರೇಶಿಮೆಯಿಂದಲೇ !

ರೇಶಿಮೆಯ ಹುಳುಗಳನ್ನು (Sericulture) ಸಾಕುವುದು ಇಲ್ಲಿಯವರಿಗೆ ಎರಡು ಸಾವಿರ ವರ್ಷಗಳಿಗೆ ಹಿಂದಣಿಂದಲೂ ತಿಳಿದಿರುವುದು. ಈ ವಿಷಯದ ಗುಟ್ಟು ಚೀನಾ, ಕೋರಿಯಾ ದೇಶಗಳಿಂದ ಬಂದಿತೆಂಬ ಪ್ರತೀತಿಯು ದೇಶದ ನಾನಾ ಭಾಗಗಳಲ್ಲಿ ಕೇಳಬರುವುದು. ಆದರೆ ಈ ಕೈಗಾರಿಕೆಯು, ಬೌದ್ಧಧರ್ಮವು ಇಲ್ಲಿಗೆ ಪ್ರವೇಶಿಸಿದ ಮೇಲೆಯೇ ಹೆಚ್ಚಾಗಿ ಉತ್ತೇಜನವನ್ನು ಪಡೆಯಿತೆಂದು ಹೇಳಬಹುದು. ಅಲ್ಲಿಂದ ಈಚೆಗೆ ಜಪಾನೀಯರ ಪ್ರತಿಯೊಂದು ಉಡುಪೂ ರೇಶಿಮೆಯಿಂದ ನಿರ್ಮಿತವಾದುದೇ ಹೊರತು ಹತ್ತಿಯ ಸೋಂಕೇ ಇರಲಿಲ್ಲ. ಹತ್ತಿಯ ಬಟ್ಟೆಯು ದೇಶದಲ್ಲಿ ಪ್ರಚಾರದಲ್ಲಿ ಇದ್ದರೂ ರೇಶಿಮೆಗೆ ಹೆಚ್ಚು ಗೌರವವು ಇದ್ದುದರಿಂದ, ಪ್ರತಿಯೊಬ್ಬ ಮನುಷ್ಯನೂ ರೇಶಿಮೆಯ ಉಡುಪನ್ನು ಧರಿಸುವುದು ವಾಡಿಕೆಯಲ್ಲಿ ಬಂದಿದ್ದಿತು. ಸನ್ ೧೮೬೮ರಿಂದ ಜಪಾನ್ ದೇಶವು ಪರದೇಶಗಳೊಡನೆ ವ್ಯಾಪಾರಮಾಡಲು ನಿಶ್ಚಯಿಸಿದಾಗ, ಅದು ಮಾರಾಟಮಾಡಬಹುದಾದ ವಸ್ತುವು ರೇಶಿಮೆ ( Raw silk ) ಯೊಂದಲ್ಲದೆ ಮತ್ತೆ ಯಾವ ಪದಾರ್ಥವೂ ಇರಲಿಲ್ಲ. ಈ ರೇಶಿಮೆಯನ್ನು ಮಾರಿಬಂದ ಹಣದಿಂದಲೇ ಪ್ರಪಂಚದ ಇತರ ವಸ್ತುಗಳನ್ನು ಪಡೆಯಲು ಅದಕ್ಕೆ ಸಾಧ್ಯವಾಯಿತು. ಇಂತಹ ಅದರ ಪರಿಸ್ಥಿತಿಯನ್ನು ಸರಕಾರವು ಚೆನ್ನಾಗಿ ಕಂಡುಕೊಂಡು, ತನ್ನ ರೇಶಿಮೆಯ ಕೈಗಾರಿಕೆಗೆ (Sericulture) ಸಾಕಷ್ಟು ಉತ್ತೇಜನ ಕೊಟ್ಟ ಹೊರತು ತನಗೆ ಮುಕ್ತಿಯಿಲ್ಲವೆಂದು ತಿಳಿದುಕೊಂಡು, ಮೇಲಿಂದ ಮೇಲೆ ರೇಶಿಮೆಯ ಕೈಗಾರಿಕೆಗೆ ಸಹಾಯಮಾಡಲು ಪ್ರಾರಂಭಿಸಿತು. ಅಲ್ಲದೆ ಇದರ ಸಲುವಾಗಿಯೆ ಬೇಕಾದಷ್ಟು ಸಹಕಾರಸಂಘ ( Cooperative Socities) ಗಳನ್ನು ಸ್ಥಾಪಿಸಿತು. ರೇಶಿಮೆಯ ಕೈಗಾರಿಕೆಯ ಉತ್ತೇಜನಕ್ಕಾಗಿ ಸರಕಾರವು ಪ್ರತಿ ಡಿಸ್ಟ್ರಿಕ್ಟಿನಲ್ಲಿಯೂ 'Sericulture ಶಾಲೆಗಳನ್ನು ಸ್ಥಾಪಿಸಿರುವುದಲ್ಲದೆ, ಟೋಕಿಯೋದಲ್ಲಿ ಕೇಂದ್ರ Sericultural Bureau ವನ್ನು ಸ್ಥಾಪಿಸಿ, ಅದರಿಂದ ಶಾಲೆಗಳಿಗೂ ವ್ಯಾಪಾರಸ್ಥರಿಗೂ ಬೇಕಾದಷ್ಟು ಅನುಕೂಲತೆಗಳನ್ನು ಒದಗಿಸಿಕೊಡುತ್ತಿರುವುದು. ಸರಕಾರವು ರೇಶಿಮೆಯ ಕೈಗಾರಿಕೆಗಾಗಿ ಬೇಕಾದಷ್ಟು ಕಾನೂನುಗಳನ್ನು ಜಾರಿಗೆ ತಂದಿರುವುದು. (The Government has already passed the raw silk union law, the raw silk law, the silk-worm egg control law, the raw silk transportation law and the silk cocoon control law.) ಮುಖ್ಯವಾಗಿ ರೇಶಿಮೆಯ ಉತ್ಪತ್ತಿಯನ್ನು ಹೆಚ್ಚಿಸುವುದಕ್ಕಾಗಿ ಸರ್ಕಾರವು ಸನ್ ೧೯೩೩ರಿಂದ ಪ್ರತಿಸಲವೂ ಒಂದು ಕೋಟಿ ಎನ್ನನ್ನು ಖರ್ಚುಮಾಡುತ್ತಲಿದೆ.



ರೇಶಿಮೆಯ ಹುಳಗಳ ಆಹಾರಕ್ಕಾಗಿ ರೈತರು ಹಿಪ್ಪಲಿ ಎಲೆಗಳನ್ನು (Mulberry leaves) ಕೊಡಿಸುತ್ತಿರುವುದು.

CC-0. Jangamwadi Math Collection. Digitized by eGangotri

ಹಸಿ ರೇಶಿಮೆ ( Raw silk ) ಯ ಉತ್ಪತ್ತಿ ಮತ್ತು ಮಾರಾಟದಲ್ಲಿ ಸಹಕಾರ ಸಂಘಗಳು ಪ್ರಮುಖ ಭಾಗವನ್ನು ವಹಿಸಿಕೊಂಡಿರುವವು. ಸನ ೧೯೩೫ರಲ್ಲಿ, ಎಲ್ಲ ಸಹಕಾರ ಸಂಘಗಳಲ್ಲಿ ಸೇರಿ ೬೦ ಲಕ್ಷ ಜನ ಸದಸ್ಯರಿದ್ದರು. ಅದೇ ವರ್ಷದಲ್ಲಿ ನಡೆದ ವ್ಯಾಪಾರದಿಂದ, ಸಂಘಗಳು ೫೬೩,೮೧೯,೫೬೫ ಎನ್ನಿನಷ್ಟು ಲಾಭವನ್ನು ಪಡೆದುವು. ಇಷ್ಟು ಲಾಭವನ್ನು ಪಡೆದರೂ ಸಂಘಗಳು ಸದಸ್ಯರುಗಳ ಹಿತವನ್ನು ರಕ್ಷಿಸಿಕೊಂಡು ಬರತ್ತಿರುವುವು. (The Co-operative union mills do not speculate and have no occasion to sell their product at a sacrifice in order to obtain working funds. They do not exploit the cocoon producers and benefit not only the members of the co-operative unions, but also the members. )



ರೇಶಿಮೆಯ ಹುಳದ ಗೂಡು (Cocoons) ಗಳನ್ನು ಆರಿಸುತ್ತಿರುವುದು.



ರೇಶಿಮೆಯ ಕಟ್ಟುಗಳನ್ನು ಕಟ್ಟುತ್ತಿರುವುದು,

ಸದ್ಯ ಜಪಾನ್ ದೇಶದಲ್ಲಿ ೫೦ ಸಾವಿರದಷ್ಟು ರೇಶಿಮೆಯನ್ನು ನೂಲುವ ( Realing ) ಕಾರ್ಖಾನೆಗಳಿರುವುವು. ಇವುಗಳಲ್ಲಿ ೩ಸಾವಿರ ಕಾರ್ಖಾನೆಗಳು ರಫ್ತಿನ ವ್ಯಾಪಾರದಲ್ಲಿ ತೊಡಗಿಕೊಂಡಿರುವುವು. ಒಟ್ಟು ಈ ಕಾರ್ಖಾನೆಗಳಲ್ಲಿ ೩॥ ಲಕ್ಷ ಜನ ತರುಣಿಯರು ಕಾರ್ಯದಲ್ಲಿ ನಿರತರಾಗಿರುವರು. ಸನ್ ೧೯೩೦ರಿಂದಲೂ ಉಂಟಾದ ಪ್ರಪಂಚದ ಆರ್ಥಿಕ ದುಸ್ಥಿತಿಯಿಂದ ಜಪಾನಿನ ರೇಶಿಮೆಯ ಕೈಗಾರಿಕೆಯು ಬಹಳ ಕಷ್ಟವನ್ನು ಅನುಭವಿಸುತ್ತಲಿರುವುದು. ರಫ್ತಿನ ಬೆಲೆಯು ಪ್ರತಿ ವರ್ಷವೂ ಕಡಿಮೆಯಾಗುತ್ತಲಿರುವುದು. ಕಳೆದ ೫ ವರ್ಷಗಳ ರಫ್ತಿನ ಬೆಲೆಯನ್ನು ಲೇಖನದ ಕೊನೆಗೆ ಕಾಣಿಸಿರುವ ಅಂಕಿಗಳಿಂದ ಕಂಡುಕೊಳ್ಳಬಹುದು.

ಅಮೇರಿಕಾ ದೇಶವು ಜಪಾನಿನ ರೇಶಿಮೆಯ ಒಟ್ಟು ರಫ್ತಿನಲ್ಲಿ ನೂರಕ್ಕೆ ೮೦ರಷ್ಟು ಪಡೆಯುವುದು. ಚೀನಾ ದೇಶದಲ್ಲಿಯ ರೇಶಿಮೆಯ ಉತ್ಪತ್ತಿಯ ಸರಿಯಾದ ಅಂಕೆಗಳು ಸಿಕ್ಕದಿರುವುದರಿಂದ, ಜಪಾನ್ ದೇಶವೇ ಕಚ್ಚಾ ರೇಶಿಮೆಯ ಉತ್ಪಾದನೆಯ ಬಗ್ಗೆ ಪ್ರಪಂಚದಲ್ಲಿ ಹೆಸರುವಾಸಿಯನ್ನು ಪಡೆದಿರುವುದು. ಮುಖ್ಯವಾಗಿ ಇಲ್ಲಿ ರೇಶಿಮೆಯ ಕೈಗಾರಿಕೆಗೆ ಪ್ರಕೃತಿಯು ಹೆಚ್ಚು ನೆರವನ್ನ

CC-0. Jangamwadi Math Collection. Digitized by eGangotri

ಕೊಡುವುದು. (The sericulture industry, which depends largely upon nature, might be called a gift bestowed upon Japan by God.)

ರೇಶಿಮೆಯ ಕೈಗಾರಿಕೆಯು ಜಪಾನಿನ ಬೆನ್ನುಮೂಳೆ. ಅದು ಮುರಿದುಬಿದ್ದಿತೆಂದರೆ ಜಪಾನಿನ ದುಸ್ಥಿತಿಯನ್ನು ಹೇಳುವುದು ಅಸಾಧ್ಯ. ಆದುದರಿಂದಲೇ ಸರ್ಕಾರವು ಈ ಕೈಗಾರಿಕೆಗೆ ಸಾಕಾದಷ್ಟು ಉತ್ತೇಜನವನ್ನು ಕೊಡುತ್ತಲಿರುವುದು.



ರೇಶಿಮೆಯ ಕಾರ್ಖಾನೆ. ಜಪಾನಿನ ನೇಯುವ ಕಾರ್ಖಾನೆಗಳು. ನೂರಕ್ಕೆ ೯೦ ರಷ್ಟು ಕೇವಲ ೧೬-೨೦ ವಯಸ್ಸಿನ ತರುಣೆಯರಿಂದ ನಡೆದುಕೊಂಡು ಬದಕುವೆ.

## World Production of Raw Silk in 1934

| | Kilograms | | |
|---|---|---|---|
| | | Spain | 30,000 |
| Japan | 47,369,000 | Italy | 2,835,000 |
| China | 6,316,000 | France | 77,000 |
| East Europe, Near East and Central Asia | 930,000 | Total | 57,557,000 |

## ಕಳೆದ ಐದು ವರ್ಷಗಳ ರಫ್ತಿನ ಬೆಲೆಯ ವಿವರಣೆ

| ವರ್ಷ | ತೂಕ | ಬೆಲೆ |
|---|---|---|
| ೧೯೩೦ | ೬೩೬,೧೯೬ | ೫೦೩,೦೧೩,೭೭೬ |
| ೧೯೩೧ | ೬೫೭,೭೭೮ | ೪೦೦,೪೯೬,೬೫೭ |
| ೧೨೩೨ | ೬೩೯,೩೭೧ | ೪೨೭,೨೧೦,೦೦೦ |
| ೧೯೩೩ | ೬೪೩,೪೯೫ | ೪೭೧,೯೫೯,೦೦೦ |
| ೧೯೩೪ | ೬೯೮,೭೭೧ | ೩೭೭,೮೭೨,೭೭೭ |

———

CC-0. Jangamwadi Math Collection. Digitized by eGangotri

# ಕಂಬನಿ-ಶ್ರದ್ಧಾಂಜಲಿ

**ದಿವಂಗತ ಎಂ. ಎ. ರಾಮಾನುಜಯ್ಯಂಗಾರ್ಯರು**

ಇಂದು ಕನ್ನಡದ ಹಳೆಯ ವಾಙ್ಮಯವನ್ನು ಅಭ್ಯಸಿಸಬೇಕೆಂಬ ಪ್ರತಿಯೊಬ್ಬ ಕನ್ನಡಿಗನೂ ದಿವಂಗತ ರಾಮಾನುಜಯ್ಯಂಗಾರ್ಯರ ಉಪಕಾರವನ್ನು ಸ್ಮರಿಸಿ ಮುಂದುವರಿಯಬೇಕು. ದಿವಂಗತ ಎಸ್. ಜಿ. ನರಸಿಂಗಾಚಾರ್ಯರ ಸಹಕಾರದಿಂದ, ಈ ಮಹನೀಯರು 'ಕರ್ಣಾಟಕ ಕಾವ್ಯಕಲಾನಿಧಿ' ಎಂಬ ಮಾಸಪತ್ರಿಕೆಯನ್ನು ಹೊರಡಿಸಿ ಮಾಡಿದ ಕನ್ನಡದ ಸೇವೆಯು ಅಮೂಲ್ಯವಾದುದು. ಆ ಮಾಸಪತ್ರಿಕೆ ಹೊರಡದಿದ್ದಲ್ಲಿ ಅನೇಕ ಪ್ರಾಚೀನ ಕನ್ನಡ ಕಾವ್ಯಗಳು ಇಡಿಯಾಗಿ ಮುದ್ರಿತವಾಗಿ—ಇದುವರೆಗೂ ಬೆಳಕಿಗೆ ಬರುತ್ತಿದ್ದುವೋ ಇಲ್ಲವೋ ಎಂಬುದು ಸಂದೇಹದ ಸಂಗತಿ. 'ಮುದ್ದಣ'ನಿಂದ ಕಾವ್ಯಗಳನ್ನು ಬರೆಯಲು ಹಚ್ಚಿದುದು ಇವರ 'ಕಾವ್ಯಕಲಾನಿಧಿ'ಮಾಸಪತ್ರಿಕೆಯೆ.

ಈ ಪತ್ರಿಕೆ ನಿಂತುಹೋದ ಮೇಲೂ ಅಯ್ಯಂಗಾರ್ಯರು ಬೇರೆಬೇರೆ ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸಿದರು. 'ಕವಿಸಮಯ' ವೇ ಮೊದಲಾದ, ಸಾಹಿತ್ಯಾಭ್ಯಾಸಿಗಳಿಗೆ ಉಪಯುಕ್ತವಾದ ಸ್ವತಂತ್ರ ಗ್ರಂಥಗಳನ್ನು ಬರೆದು ಅಚ್ಚು ಹಾಕಿಸಿದರು. ಇವರ ಲೆಕ್ಕಣಿಕೆ ಎಷ್ಟೊಂದು ಕಟ್ಟುನಿಟ್ಟಿನದೆಂಬುದನ್ನು, ಪ್ರಬುದ್ಧಕರ್ಣಾಟಕದಲ್ಲಿ ಇವರು 'ಮುದ್ದಣ'ನ ವಿಚಾರದಲ್ಲಿ ಬರೆದ ಲೇಖನದಿಂದ ತಿಳಿದುಕೊಳ್ಳಬಹುದು. ಪ್ರಾಚೀನಸಾಹಿತ್ಯವಿಚಾರದ ಚರ್ಚೆಯಲ್ಲಿ ಅಯ್ಯಂಗಾರ್ಯರದು ಕೊನೆಯಮಾತು... ಎನ್ನುವಷ್ಟು ಆಳವಾದ ಅಭ್ಯಾಸವಿದ್ದವರದು. ಕಳೆದ ಜೂನ್ ೨೭ನೆಯ ತಾರೀಖಿನ ದಿನ ಈ ಕರ್ಣಾಟಕ ಶಾರದೆಯ ಉಪಾಸಕರು ನಮ್ಮನ್ನಗಲಿ ಹೊರಟುಹೋದರು. ದಿವಂಗತರ ಆತ್ಮಕ್ಕೆ ಸದ್ಗತಿ ದೊರೆಯಲೆಂದು ಪರಮಾತ್ಮನಲ್ಲಿ ನಮ್ಮ ಬೇಡಿಕೆ.

**ಕೈ. ವಾ. ಶಿವರಾಮ ಶಾಸ್ತ್ರಿ, ಕೊಪ್ಪಳ**

ಕೊಪ್ಪಳದಲ್ಲಿ ಕರ್ಣಾಟಕದ ಚಟುವಟಿಕೆಯು ಹಬ್ಬಿ ಹರಡಲು ಕಾರಣರಾದ ಶ್ರೀ. ನಾ. ಭಾ. ಶಾಸ್ತ್ರಿಗಳು ಕಳೆದ ವರ್ಷದಲ್ಲಿ ಅಗಲಿಹೋದ ವ್ಯಸನದ ಬಿಸಿಯನ್ನು ಆರಿಸಿಕೊಳ್ಳುತ್ತಿರುವುದರೊಳಗಾಗಿಯೆ, ಅವರ ತಮ್ಮಂದಿರಾದ ಶಿವರಾಮಶಾಸ್ತ್ರಿಗಳೂ ಕಳೆದ ತಿಂಗಳ ೨೬ನೆಯ ತಾರೀಖಿನ ದಿನ ಸಂಜೆಗೆ ಕಾಲವಶರಾದರೆಂಬ ದುಃಖದವಾರ್ತೆಯನ್ನು ಕೇಳಬೇಕಾಗಿ ಬಂದಿತು. ಶಿವರಾಮಶಾಸ್ತ್ರಿಗಳು ಒಳ್ಳೆಯ ಕಲಾವಿದರು; ಸಾಹಿತ್ಯಪ್ರಿಯರು. ಕೆಲಕೆಲವು ಕವಿತೆ-ಕತೆಗಳನ್ನೂ ಬರೆದು ಅಲ್ಲಲ್ಲಿ ಪ್ರಕಟಿಸಿರುವರು. ಕಾಗದದಲ್ಲಿ ಸುಳಿವು-ಬಳ್ಳಿಗಳನ್ನು ಕತ್ತರಿಸುವುದರಲ್ಲಿ ಶಿವರಾಮಶಾಸ್ತ್ರಿಗಳದು ಮೇಲುಗೈ. ಹೈದರಾಬಾದಿನಲ್ಲಿ ತಮ್ಮದೊಂದು ಕಲಾಭವನವನ್ನು ಸ್ಥಾಪಿಸಿಕೊಂಡು, ಅಲ್ಲಿದ್ದು ತಮ್ಮ ಕಲಾಸೇವೆಯ ಕಾರ್ಯವನ್ನು ನಡೆಯಿಸಿದ್ದರು. ಇನ್ನೂ ತರುಣರು; ಇವರನ್ನು ಅರಿತವರು ಇವರ ಕಲೆಯ ಭವಿಷ್ಯತ್ತಿನ ಬಗ್ಗೆ ಒಳ್ಳೆಯ ಆಶೆಯನ್ನಿಟ್ಟುಕೊಂಡಿದ್ದರು ಆದರೇನು 'ಅರಳದ ಮೊಗ್ಗೆ'ಯನ್ನೆ ಚರಣಸೇವೆಗೆ ಸಲ್ಲಿಸಿಕೊಂಡ ಶಿವ'ಶಾಸ್ತ್ರಿಗಳವರ ಕುಟುಂಬದ ದುಃಖದಲ್ಲಿ ನಾವೂ ಪಾಲುಗಾರರು. ಪರಮಾತ್ಮನು ಇವರಿಗೆ ಸದ್ಗತಿ ಕೊಡಲಿ!

**ಸ್ವ. ವಾ. ಮಾರ್ಕೋನಿಯವರು**

ತಮ್ಮ ಸಂಶೋಧನಾಕಾರ್ಯದಿಂದ ಜಗತ್ತಿಗೊಂದು ದೊಡ್ಡ ಉಪಕಾರವನ್ನು ಮಾಡಿದ ಮಹಾಪುರುಷರಿವರು. ತಂತಿಯಿಲ್ಲದೆ ದೇಶ ವಿದೇಶಗಳಿಗೆ ಸುದ್ದಿಯನ್ನು ಕಳಿಸುವ ವೈಜ್ಞಾನಿಕ ಸಂಶೋಧನವು ಇವರಿಂದಲೆ ನಡೆದುದು. ಕಳೆದ ತಿಂಗಳ ೧೯ ನೆಯ ತಾರೀಖಿನ ದಿನ ಇಟಲಿಯಲ್ಲಿ ಇವರು ಕೈಲಾಸವಾಸಿಗಳಾದರು.

ಸ್ವ. ಮಾರ್ಕೋನಿಯವರು ಇಟಲಿದೇಶದವರು. ೧೮೭೪ ನೆಯ ಇಸ್ವಿಯ ಎಪ್ರಿಲ್ ೨೫ನೆಯ ತಾರೀಖಿಗೆ 'ಬೋಲೋಗ್ನ' ದಲ್ಲಿ ಇವರ ಜನ್ಮವಾಯಿತು. ೧೮೯೬ ನೆಯ ಜೂನ್ ೨ ನೆಯ ತಾ. ದಿನ ಇವರು ಕೈಕೊಂಡಿದ್ದ ವೈರ್‌ಲೆಸ್ ಟೆಲಿಗ್ರಾಫಿಯ ಸಂಶೋಧನಾಕಾರ್ಯವು ಯಶಸ್ವಿಯಾಗಿ ಪರಿಣಮಿಸಿತು. ಈ ಸಂಶೋಧನೆಯು ಸಮುದ್ರ ಪ್ರಯಾಣಿಕರಿಗೆ ತುಂಬ ಅನುಕೂಲತೆಯನ್ನು ಒದಗಿಸಿಕೊಟ್ಟಿತು.

೧೯೦೯ ನೆಯ ಇಸ್ವಿಯಲ್ಲಿ, ಮಾರ್ಕೋನಿಯವರಿಗೆ ನೋಬೆಲ್ ಪಾರಿತೋಷಿಕವು ಸಿಕ್ಕಿತು. ಇಟಲಿಯ ಇಂದಿನ ಸರ್ವಾಧಿಕಾರಿ ಮುಸೊಲಿನಿಗೆ ಇವರ ಬೆಂಬಲವಿದ್ದಿತಲ್ಲದೆ, ಕಳೆದ ಅಬಿಸೀನಿಯಾ ಯುದ್ಧದಲ್ಲಿ ಇವರ ಹೊಸಹೊಸ ಸಂಶೋಧನಗಳು ಇಟಲಿಯ ಸೈನ್ಯಕ್ಕೆ ತುಂಬ ನೆರವನ್ನು ಒದಗಿಸಿದುವು. ಮರಣಕಾಲದಲ್ಲಿ ಇವರ ವಯಸ್ಸು ೬೩ ವರ್ಷಗಳದಾಗಿದ್ದಿತು. ತಮ್ಮ ಕಾರ್ಯದಿಂದ ಇವರು ಅಂತರರಾಷ್ಟ್ರೀಯ ವ್ಯಕ್ತಿತ್ವವನ್ನು ಪಡೆದವರಾದುದರಿಂದ, ಭಾರತೀಯರೂ ಮಾರ್ಕೋನಿಯವರಿಂದ ಉಪಕೃತರು. ಎಂತಲೇ ಜಗತ್ತಿನ ಜನರೊಂದಿಗೆ ನಾವೂ ಈ ಸಂಶೋಧಕ ಸಮ್ರಾಟನ ಆತ್ಮಕ್ಕೆ ನಮ್ಮ ಶ್ರದ್ಧಾಂಜಲಿಗಳನ್ನರ್ಪಿಸೋಣ!

CC-0. Jangamwadi Math Collection. Digitized by eGangotri

ಬಿಡುವಿನ ಹೊತ್ತನ್ನು ಆನಂದದಲ್ಲಿ ಕಳೆಯಲು




ಮತ್ತು




ನಿಮ್ಮ ಮನೆಯಲ್ಲಿ ಅಗತ್ಯ ಬೇಕು.








ಇದಲ್ಲದೆ ಮುಂಬಯಿಯಲ್ಲಿ ದೊರೆಯುವ ಬೇರೆ ಎಲ್ಲ ಬಗೆಯ ಮಾಲನ್ನು ಅಲ್ಪ ಕಮಿಶನ್ನಿನ ಮೇಲೆ, ಅಗ್ಗವಾಗಿ ಕೊಂಡುಕೊಂಡು ಅತ್ಯಂತ ಜಾಗರೂಕತೆಯಿಂದ ಮತ್ತು ಹೊತ್ತಿಗೆ ಸರಿಯಾಗಿ ಕಳಿಸುತ್ತೇವೆ.

ಹೆಚ್ಚಿನ ವಿವರಗಳಿಗಾಗಿ ಹೊಸ ದೊಡ್ಡ ೧೦೦ ಪುಟಗಳ ಸಚಿತ್ರ ಮರಾಠಿ ಕ್ಯಾಟಲಾಗನ್ನು, ೨ ಆಣೆಯ ಅಂಚೇಚೀಟಿ ಕಳಿಸಿದಲ್ಲಿ ಉಚಿತವಾಗಿ ಕಳಿಸಲಾಗುವುದು.

**ಗೋಪಾಳ ಸಖಾರಾಮ ಮತ್ತು ಕಂಪನಿ,** ೩೯೭-೯೯ ಕಾಳಬಾದೇವಿ ರೋಡ ಮುಂಬಯಿ ನಂ. ೨.

## ಡಾಕ್ಟರ್ ಮಹಿಷಿ ಇವರ ಅನುಭವಸಿದ್ಧ ಔಷಧಿಗಳು

### ಅಶೋಕಾ ಕಾರ್ಡಿಯಲ್

ಇದು ಸ್ತ್ರೀಯರ ಮುಟ್ಟಿನ ಹಾಗು ಗರ್ಭಾಶಯದ ಎಲ್ಲ ವಿಕಾರಗಳಿಗೆ ಸಿದ್ಧೌಷಧಿಯು.

### ವ್ಹಾಯಬರನಮ್ ಕಂಪೌಂಡ್

ಇದರ ಯೋಗದಿಂದ ಬಂಜೆತನದ ದೋಷಗಳು ನಾಶವಾಗಿ ಗರ್ಭಧಾರಣೆಯಾಗುವುದು. ಗರ್ಭವತಿಯರು ೩ ನೆಯ ತಿಂಗಳಿನಿಂದ ಇದನ್ನು ಸಾಧಿಸಿದಲ್ಲಿ ಗರ್ಭವು ಬಲಪಡುವುದು. ಅಲ್ಲದೆ ಹಲೆಯುಳಿಯುವ ಭೀತಿಯು ಇಲ್ಲದಂತಾಗುವುದು. ಸುಖಪ್ರಸೂತಿಯಾಗುವುದು.

ಸೂಚನೆ:— ಈ ಔಷಧಿಗಳ ಹಾಗು ಇನ್ನೂ ಕೆಲವು ಔಷಧಿಗಳ ಸಂಪೂರ್ಣ ಮಾಹಿತಿಗಾಗಿ, ಇಂದೇ ನಮ್ಮ ಕ್ಯಾಟಲಾಗಿಗೆ ಬರೆಯಿರಿ.

ಮ್ಯಾನೇಜರ್,
ಸ್ವಾಸ್ಥ್ಯನಿಲಯ ಫಾರ್ಮಸಿ, ಧಾರವಾಡ


CC-0. Jangamwadi Math Collection. Digitized by eGangotri



ಭಾಸಮಹಾಕವಿ. ಬರೆದವರು ಸಿ. ಕೆ. ವೆಂಕಟರಾಮಯ್ಯ, ಎಂ. ಎ. ಎಲ್‌ಎಲ್. ಬಿ. ಪುಟ ೧೩+೫೪೪. ಬೆಲೆ ರೂ. ೨.

'ಸಂಸ್ಕೃತ ಸಾಹಿತ್ಯಭಂಡಾರದ ಅತ್ಯುತ್ತಮ ಜೀವ-ರತ್ನಗಳ ಗುಂಪಿಗೆ ಸೇರಿ ಶಾಶ್ವತ 'ವಾಗಿರುವ ರೂಪಕಗಳ ಕರ್ತೃವಿಗೆ 'ನನ್ನ ಸೇವೆಯಾಗಿ ಈ ಗ್ರಂಥವನ್ನು ರಚಿಸಿ-ದ್ದೇನೆ' ಎಂದು ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ-ನವರು ತಮ್ಮ ಗ್ರಂಥವಿಷಯವನ್ನು ಪ್ರಸ್ತಾವಿಸಿದ್ದಾರೆ. ಶ್ರೀಯುತರ ಈ 'ಸೇವೆ'ಯು ಭಾಸನನ್ನು ಮುಟ್ಟಿದರೆ ಅವನನ್ನೇ ಯಾವ ಧ್ರುವಬಿಂದುವಿಗೆ ಮುಟ್ಟಿಸಬಹುದೊ ಎಂದು ಹೇಳುವ ಧಾರ್ಷ್ಟ್ಯ ನಮ್ಮಲ್ಲಿಲ್ಲ; ಆದರೆ ಈ 'ಸೇವೆ'ಯಿಂದ ಅಧುನಿಕ ಕನ್ನಡಸಾಹಿತ್ಯವು ಮಾತ್ರ ತನ್ನ ವೈಭವದ ಅತ್ಯುನ್ನತ ಶಿಖರವನ್ನೇರಿ ಮೆರೆಯುವುದು-ಎಂದು ಧೈರ್ಯವಾಗಿ ಹೇಳಬಹುದು. ಸಮತೋಲ ಬುದ್ಧಿಯ, ಸರಸಶೈಲಿಯ, ಸಮಂಜಸವಿಚಾರಗಳ, ಸಮರ್ಪಕ ನಿರೀಕ್ಷಣೆಯ ಇಂತಹ ವಿಮರ್ಶಾಗ್ರಂಥವು ಇದುವರೆಗೆ ಕನ್ನಡದಲ್ಲಿಲ್ಲ; ಇನ್ನು ಮುಂದಾದರೂ ಇದನ್ನು ಮರೆಯಿಸುವ ಗ್ರಂಥವು ಹುಟ್ಟೀತೆಂದು ಹೇಳಲು ಧೈರ್ಯವಿಲ್ಲ.

ತತ್ತ್ವಜ್ಞಾನದಲ್ಲಿ ಹೇಗೆ ಭಗವದ್ಗೀತೆಯು ಅನೇಕ ಮುಖವಾದ, ಪರಸ್ಪರವಿರುದ್ಧವಾದ ಊಹೆ-ಚರ್ಚೆ-ಸಿದ್ಧಾಂತಗಳಿಗೆ ಆಸ್ಪದವನ್ನುಂಟುಮಾಡಿದೆಯೊ ಹಾಗೆಯೆ ಸಂಸ್ಕೃತ ಸಾಹಿತ್ಯದಲ್ಲಿ ಭಾಸಕವಿಯ ಹೆಸರೂ ಆಸ್ಪದ-ವನ್ನುಂಟುಮಾಡಿದೆ. ಆದರೆ ಪ್ರಸ್ತುತಗ್ರಂಥವನ್ನು ಓದಿದರೆ (ಮುಗಿಸದೆ ಕೆಳಗಿಡಬೇಕೆಂದು ಮನಸ್ಸಾಗುವುದಿಲ್ಲ) ಭಾಸನದೊಂದು ತದ್ರೂಪಚಿತ್ರವೆ ಓದುಗರ ಕಣ್ಣುಕಟ್ಟಿ-ದಂತಾಗುವುದು. ಒಂದು ದೃಷ್ಟಿಯಿಂದ ಶ್ರೀ. ಸಿ. ಕೆ. ಯವರು ಭಾಸನನ್ನು ನಿರ್ಮಿಸಿದ್ದಾರೆಂದು ಹೇಳಬಹುದು.

ಭಾಸಕೃತವೆಂದು ಗೃಹೀತವಾದ ಹದಿಮೂರು ರೂಪಕಗಳ ವಿಮರ್ಶೆಯೆ ಈ ಗ್ರಂಥದ ಬಹುಭಾಗವು ಮತ್ತು ಧ್ಯೇಯವು. ಶ್ರೀಯುತರ ವಿಮರ್ಶಾಪದ್ಧತಿಯು ಬಹಳೇ ಮಾರ್ಮಿಕ ವಾಗಿದೆ, ರಸವತ್ತಾಗಿದೆ. 'ಕಥಾಸಾರಾಂಶ'ವೆಂದು ಮೊದಲು ರೂಪಕದಲ್ಲಿ ನಡೆವ ಸಂಗತಿಗಳ ಸಾರಾಂಶವನ್ನು ಕೊಡುವುದು; ಆ ಮೇಲೆ ಆ ಸಂಗತಿಗಳು ಪರಸ್ಪರಸಂಬದ್ಧ ವಾದುವು ಹೇಗೆ, ಸಂಗತಿಯಿಂದ ಸಂಗತಿ ಬೆಳೆದುದು ಹೇಗೆ, ಒಂದು ಸಂನಿವೇಶವು ಮತ್ತೊಂದು ಸಂನಿವೇಶಕ್ಕೆ ಹೊಂದುವುದೊ ಹೇಗೆ, ಓದುವವನ ಮತ್ತು ನೋಡುವವನ ದೃಷ್ಟಿಯಿಂದ ರಂಗಭೂಮಿಯಲ್ಲಿ ಮತ್ತು ಹೃದಯದಲ್ಲಿ ಯಾವ ಪರಿಣಾಮವಾಗುವುದು—ಮೊದಲಾದ ಪ್ರಶ್ನೆಗಳ-ನ್ನೊಳಗೊಂಡ ವಿಮರ್ಶೆ; ಆ ಮೇಲೆ ನಾಟಕದ ಕೆಲವು ವೈಶಿಷ್ಟ್ಯಗಳು; ತರುವಾಯ ಪಾತ್ರನಿರ್ಮಿತಿಯನ್ನು ಮಾಡಿದ ಕೌಶಲ್ಯದಿಂದಲೆ ಅದನ್ನು ಬಿಚ್ಚಿ ರಹಸ್ಯವನ್ನು ತೋರುವುದು. ಈ ಪದ್ಧತಿಯಿಂದ ಮೂಲರೂಪಕಗಳನ್ನು ಓದದವರಿಗೂ ವಿಷಯವು ಸುಲಭವಾಗಿ ತಿಳಿಯುವುದಲ್ಲದೆ, ಆ ರೂಪಕಗಳನ್ನು ಓದಿಯೆ ತೀರಬೇಕೆಂಬ ಲವಲವಿಕೆ ಉಂಟಾಗುತ್ತದೆ. ಕೆಲವೆಡೆಯಂತೂ ಮೂಲರೂಪಕ-ಗಳಿಗಿಂತ ವಿಮರ್ಶೆಯೆ (ದೊಡ್ಡದಾಗಿದೆಯಲ್ಲದೆ) ಹೆಚ್ಚು ರಸವತ್ತಾಗಿದೆ—ಎಂದು ಹೇಳಬಹುದು.

ಈ ಗ್ರಂಥದ ಮೊದಲನೆಯ ತರಂಗದ ೭೦ ಪುಟಗಳಲ್ಲಿ 'ಕವಿಯ ವಿಚಾರ'ವಿದೆ. ಭಾಸಕವಿಯ ವಿಷಯವಾಗಿ ಸಂಸ್ಕೃತಸಾಹಿತ್ಯದಲ್ಲಿ ದೊರಕುವ ವಿವರಗಳನ್ನು ಪ್ರಸ್ತಾವಿಸಿ, ತಿರುವಾಂಕೂರಿನಲ್ಲಿ ಸಿಕ್ಕಿದ ಹದಿಮೂರು ರೂಪಕಗಳು ಏಕಕರ್ತೃಕವೆಂದು ತೋರಿಸಿ, ಅವುಗಳಲ್ಲಿ ಒಂದಾದ 'ಸ್ವಪ್ನವಾಸವದತ್ತ'ದ ವಿಷಯವಾಗಿ, ಅನ್ಯಕವಿಗಳ ನಿದರ್ಶನಗಳಿಂದ ಭಾಸನೇ ಈ ಹದಿಮೂರು ರೂಪಕಗಳ ಕರ್ತೃವು ಎಂಬುದು ಹೇಗೆ ಸಿದ್ಧವಾಗುವು-ದೆಂಬುದನ್ನು ಚರ್ಚಿಸಿ, ಅವುಗಳಲ್ಲಿ ಕೆಲವಾಗಲಿ, ಎಲ್ಲವಾಗಲಿ ಭಾಸಕೃತವಲ್ಲ ಎಂದು ಅಭಿಪ್ರಾಯಪಟ್ಟ ವಿದ್ವಾಂಸರ ತರ್ಕದೋಷಗಳನ್ನು ತೋರಿಸಿ, ಕವಿಯ ದೇಶ-ಕಾಲಗಳ ವಿಚಾರದಿಂದ ಈ ತರಂಗವನ್ನು ಮುಗಿಸಲಾಗಿದೆ. ಶ್ರೀ.ಸಿ.ಕೆ. ವೆಂಕಟರಾಮಯ್ಯನವರ ಸಿದ್ಧಾಂತವು ಸರಿಯೆ ಅಲ್ಲವೆ ಎಂಬುದನ್ನು ಚರ್ಚಿಸಲು ಈ ವಿಮರ್ಶೆಯಲ್ಲಿ ಸ್ಥಾನವಿಲ್ಲ. ಸದ್ಯಕ್ಕೆ ಅವಗತವಾಗಿರುವ ಇತಿಹಾಸಸಾಮಗ್ರಿಗಳಿಂದ

CC-0. Jangamwadi Math Collection. Digitized by eGangotri

ಭಾಸಕವಿಯ ವಿಷಯವಾಗಿ ಸರ್ವಸಮ್ಮತ ಸಿದ್ಧಾಂತವನ್ನು ಕೊಡುವುದೆ ಶಕ್ಯವಿಲ್ಲ—ಎಂದು ನಮ್ಮ ಅಭಿಪ್ರಾಯ. ಇದುವರೆಗೆ ವಿಮರ್ಶಾಪಂಡಿತರಲ್ಲಿ ಭಾಸಕವಿಯ ವಿಷಯವಾಗಿ ಅತ್ಯಂತ ಮತಭೇದವಿದೆ. ಈ ಹದಿಮೂರು ರೂಪಕಗಳೂ ಭಾಸಕೃತವಲ್ಲವೆಂದು ಕೆಲವು ವಿದ್ವಾಂಸರ ಅಭಿಪ್ರಾಯ; ಆ ಅಭಿಪ್ರಾಯಕ್ಕೆ ಆವಶ್ಯಕವೆನಿಸುವ ಮುಖ್ಯಕಾರಣಗಳನ್ನು ಶ್ರೀಯುತರು ಸಂಗ್ರಹಿಸಿದ್ದಾರೆ. ತದ್ವಿರುದ್ಧವಾಗಿ ಈ ರೂಪಕಗಳು ಭಾಸಕೃತವೆಂದು ಕೆಲವು ವಿದ್ವಾಂಸರ ಅಭಿಪ್ರಾಯ; ಅದರ ಮುಖ್ಯಕಾರಣಗಳನ್ನೂ ಶ್ರೀಯುತರು ವಿವರಿಸಿದ್ದಾರೆ—ಅದಕ್ಕೆ ತಮ್ಮ ಒಪ್ಪಿಗೆಯನ್ನಿತ್ತಿದ್ದಾರೆ. ಆದರೆ ಆ ಒಪ್ಪಿಗೆಯನ್ನು ಕೊಡುವಾಗ ಹೊಸತಾದ ಸಬಲಸಾಕ್ಷ್ಯಗಳನ್ನು ತೋರಿಸಿದ್ದರೆ ಸಂಸ್ಕೃತಸಾಹಿತ್ಯ ಪರಿಶೋಧನಾ ಕಾರ್ಯವು ಶ್ರೀಯುತರಿಗೆ ಅತ್ಯಂತಋಣಿಯಾಗುತ್ತಿತ್ತು. ಅಂತಹ ಸಬಲಸಾಕ್ಷ್ಯಗಳು ಈ ವಿಚಾರದಲ್ಲಿ ಇಲ್ಲವೆಂದು ವಿಷಾದದಿಂದ ಒಪ್ಪಬೇಕಾಗುವುದು.'ಈ ಹದಿಮೂರು ರೂಪಕಗಳು ಭಾಸಕೃತವೆನ್ನಲು ನಮಗಿರತಕ್ಕ ಕಾರಣಗಳೇ, ರೂಪಕಗಳು ಭಾಸಕೃತವಲ್ಲವೆಂದು ಹೇಳುವವರು ಸೂಚಿಸುವ ಆಕ್ಷೇಪಗಳಿಗಿಂತ ವಿಶೇಷ ಪ್ರಬಲವಾಗಿರುವಂತೆ ತೋರುತ್ತದೆ. ಅವರು ಮಾಡುವ ಆಕ್ಷೇಪಗಳಿಗೆ ತೂಕವುಂಟೆಂದು ಹೇಳಲು ಅಡ್ಡಿಯಿಲ್ಲ. ಆದರೂ ಸಾಧಕವಿಚಾರಗಳ ಗುರುತ್ವದ ಮುಂದೆ ಬಾಧಕವಿಚಾರಗಳ ಆ ತೂಕವು ಅಷ್ಟೇನೂ ಕೆಂದುವಂತಿಲ್ಲ' (ಪು. ೪೩) ಎಂಬ ವಾಕ್ಯಗಳಲ್ಲಿ ನಿರ್ಣಯ ಕೊಡುವ ಧೈರ್ಯಕ್ಕಿಂತ ನಿರ್ಣಯ ಕೊಡುವ ಅವಸರವೆ ಹೆಚ್ಚು ಸ್ಫುಟವಾಗಿದೆ. ಶೈಲಿಯಲ್ಲಿ, ಒಂದೇ ಪಾತ್ರವನ್ನು ಬೇರೆ ಬೇರೆ ರೂಪಕಗಳಲ್ಲಿ ಚಿತ್ರಿಸುವಲ್ಲಿ, ಕಾವ್ಯಶಕ್ತಿಯಲ್ಲಿ, ನಾಟ್ಯಪ್ರತಿಭೆಯಲ್ಲಿ, ಕಾವ್ಯದ ಸ್ಫೂರ್ತಿಯಲ್ಲಿ ಒಂದರಿಂದೊಂದಕ್ಕೆ ಈ ರೂಪಕಗಳಲ್ಲಿ ವ್ಯತ್ಯಾಸವಿದೆ. ಭಾಸನಾಟಕಗಳ ವೈಶಿಷ್ಟ್ಯವೆಂದು ಡಾ. ಟಿ. ಗಣಪತಿ ಶಾಸ್ತ್ರಿಗಳು ತೋರಿಸಿದ ಲಕ್ಷಣಗಳು **ಸ್ವಪ್ನವಾಸವದತ್ತ, ಪ್ರತಿಜ್ಞಾ-ಯೌಗಂಧರಾಯಣ, ಪ್ರತಿಮಾ** ಮತ್ತು **ಪಂಚರಾತ್ರ** ಎಂಬ ನಾಲ್ಕೇ ರೂಪಕಗಳಲ್ಲಿ ಕಂಡುಬರುವುವು. ಮಿಕ್ಕ ಒಂಬತ್ತು ರೂಪಕಗಳು ಈ ನಾಲ್ಕರಿಂದ ಭಿನ್ನವಾಗಿರುವುವಲ್ಲದೆ, ತಮ್ಮೊಳಗೆಯೆ ಕೆಲವು ಸಾಧಾರಣ ವೈಶಿಷ್ಟ್ಯಗಳಿಂದ ಕೂಡಿಕೊಂಡಿವೆ. ಉದಾಹರಣೆ ಎಂದು "ದೂತವಾಕ್ಯದಲ್ಲೂ, ಬಾಲಚರಿತದಲ್ಲೂ ಮತ್ತು ಎರಡರಲ್ಲೂ, ಶ್ರೀಕೃಷ್ಣನ ಆಯುಧಗಳಾದ ಸುದರ್ಶನ,ಶಂಖ ಮುಂತಾದುವುಗಳು ರಂಗಸ್ಥಳಕ್ಕೆ ಬಂದು ವಿಜೃಂಭಿಸುವಂತೆ ಚಿತ್ರಿತವಾಗಿದೆ" (ಪು. ೨೦) ಎಂದು ಶ್ರೀ. ವೆಂಕಟರಾಮಯ್ಯನವರು ತೋರಿಸಿದ ಸಾಧಾರಣ ವೈಶಿಷ್ಟ್ಯವನ್ನೆ ತೋರಿಸಬಹುದು. **ದೂತವಾಕ್ಯ**ದಲ್ಲಿ ಸುದರ್ಶನಾದಿಗಳು ರಂಗಸ್ಥಲಕ್ಕೆ ಬಂದುದರ ವಿಷಯವಾಗಿ ಮುಂದೆ ವಿಮರ್ಶೆಯಲ್ಲಿ ಶ್ರೀಯುತರೆ ಹೀಗೆ ಅಭಿಪ್ರಾಯಪಟ್ಟಿದ್ದಾರೆ: "ಅಲ್ಲದೆ ಡಾಕ್ಟರ್ ವುಲ್ನರ್ ಅವರೂ ಡಾಕ್ಟರ್ ಲಕ್ಷ್ಮಣ ಸರೂಪ್ ಅವರೂ ಹೇಳಿರುವಂತೆ ಶ್ರೀಕೃಷ್ಣನ ಆಯುಧಗಳು ಬಂದು ಹೋಗಿ ಆಲಸ್ಯವಾಗುವುದರಲ್ಲಿ ಆಗಿನ ಸಂನಿವೇಶಕ್ಕೆ ಹೊಂದಿಕೆಯೂ ಕಂಡುಬರುವುದಿಲ್ಲ. ಆದ ಕಾರಣ, ಈ ಭಾಗವು ಭಾಸಮಹಾಕವಿಯು ಬರೆದುದಲ್ಲವೆಂದೂ ಅದು ಪ್ರಕ್ಷಿಪ್ತವೆಂದೂ ತೋರುತ್ತದೆ." (ಪು. ೩೧೬). ಮೊದಲು ಇದೇ ಸಂನಿವೇಶವು ಈ ಹದಿಮೂರರಲ್ಲಿ ಕೆಲವು ರೂಪಕಗಳ ಸಾಮಾನ್ಯಲಕ್ಷಣ ಎಂದು ಹೇಳಿ, ತರುವಾಯ ಅದೇ ಸನ್ನಿವೇಶವು ಪ್ರಕ್ಷಿಪ್ತವೆಂದು ಅಭಿಪ್ರಾಯಪಟ್ಟರೆ ಮಿಕ್ಕ ರೂಪಕಗಳಲ್ಲೂ ಅದು ಪ್ರಕ್ಷಿಪ್ತವೆನಬೇಕೆ ? ಇಲ್ಲವೆ ಬೇರೆ ವಿದ್ವಾಂಸರಂತೆ ಇನ್ನೂ ಕಾರಣಗಳನ್ನು ಸೇರಿಸಿ ಈ ಕೆಲವು ರೂಪಕಗಳು ಭಾಸಕೃತವಲ್ಲವೆಂದು ಒಪ್ಪಬೇಕೇ ? ಅದರಂತೆಯೆ **ಚಾರುದತ್ತ-ಮೃಚ್ಛಕಟಿಕೆ**ಗಳ ಪರಸ್ಪರ ಸಂಬಂಧವನ್ನು ಚರ್ಚಿಸುವ ಸಂದರ್ಭಗಳಲ್ಲಿ ಈ ವಾಕ್ಯ ಬಂದಿದೆ: "ಚಾರುದತ್ತ ರೂಪಕಕ್ಕಿಂತ ಮೃಚ್ಛಕಟಿಕವು ಹಲವು ಭಾಗಗಳಲ್ಲಿ ಉತ್ತಮವಾಗಿದೆ. ಅವುಗಳನ್ನೆಲ್ಲ ಬಿಟ್ಟು ಅದರ ಆಧಾರದ ಮೇಲೆ ಚಾರುದತ್ತ ರೂಪಕವನ್ನೆಂದಿಗೂ ಕವಿಯು ಬರೆಯುತ್ತಿರಲಿಲ್ಲ. ಹಾಗೆ ಬರೆದರೆ ಪಂಡಿತ ಜನರ ಅಭಿಪ್ರಾಯವು ಪ್ರಸನ್ನವಾಗಿರುವುದಿಲ್ಲವೆಂಬ ಶಂಕೆಯಿಂದಲಾದರೂ ಅವನು ಆ ಕೆಲಸವನ್ನು ಕೈಬಿಡುತ್ತಿದ್ದನು." (ಪು. ೪೩೪) ಅವಗತವಾದ **ಚಾರುದತ್ತ**ರೂಪಕದ ನಾಲ್ಕನೆಯ ಅಂಕಕ್ಕೆಯೆ 'ಕೈ ಬಿಟ್ಟಿದೆ'! ಇದಲ್ಲದೆ ಶ್ರೀಯುತರು ಕೊಟ್ಟಿರುವ ಕಾರಣಗಳಿಂದ **ಚಾರುದತ್ತ**ವು **ಮೃಚ್ಛಕಟಿಕ**ಕ್ಕಿಂತ ಮುಂಚಿನದು ಎಂದು ಹೇಳಲು ಧೈರ್ಯಸಾಲುವಂತಿಲ್ಲ. ಹೀಗೆ ಅನೇಕ ಮಾತುಗಳಿಂದ ಈ ಚರ್ಚೆಯನ್ನು ಬೆಳೆಯಿಸಬಹುದು. ಆದರೆ ಇಲ್ಲಿ ಅಪ್ರಸ್ತುತ. 'ಅವುಗಳನ್ನು ಬರೆದವನು ಭಾಸಮಹಾಕವಿಯಲ್ಲವೆಂದು ನಿರ್ವಿವಾದವಾಗಿ ಸಿದ್ಧಾಂತವಾಗಲು ನಿರ್ಧಾರಕವಾದ ಪ್ರಮಾಣಗಳು ದೊರೆಯುವ ವರೆಗಾದರೂ, ಭಾಸಮಹಾಕವಿಯೆ ಅವುಗಳನ್ನು ರಚಿಸಿದನೆಂದು ನಂಬಿ' (ಪು. ೫೩೪) ಎಂಬ ವಾಕ್ಯದಲ್ಲಿ '**ಭಾಸಮಹಾಕವಿಯಲ್ಲವೆಂದು**' ಎಂಬುದರ ಬದಲಾಗಿ '**ಭಾಸಮಹಾಕವಿ**' ಎಂದು, '**ರಚಿಸಿದನೆಂದು**' ಎಂಬುದರ

CC-0. Jangamwadi Math Collection. Digitized by eGangotri

ಬದಲಾಗಿ **'ರಚಿಸಿಲ್ಲವೆಂದು'** ಎಂದು ಬದಲಾವಣೆ ಮಾಡಿದರೂ ನಡೆಯಬಹುದಲ್ಲವೆ ? **' ನಂಬುವುದೆ '** ಆದರೆ ಉಭಯಪಕ್ಷದವರಿಗೂ ನಂಬಲು ಸಾಕಷ್ಟು ಪ್ರಾಮಾಣಿಕ ಆಧಾರಗಳಿವೆ.

ಮೇಲಿನ ಮಾತುಗಳು ಭಿನ್ನಮತದ ನಿದರ್ಶಕಗಳು; ಶ್ರೀ. ವೆಂಕಟರಾಮಯ್ಯನವರ ಗ್ರಂಥದ ದೋಷಗಳೆಂದಾಗಲಿ ತಪ್ಪುಗಳೆಂದಾಗಲಿ ಸರ್ವಥಾ ತಿಳಿಯಬಾರದು. ತಮ್ಮ ಅಭಿಪ್ರಾಯವೇನೆ ಇರಲಿ—ಅದನ್ನು ಸಾಕಷ್ಟು ಆಧಾರಗಳಿಂದ, ಮನೋಹರವಾದ ಶೈಲಿಯಿಂದ, ಸುಗಮವಾಗಿ ತಿಳುಹಿಸುವ ಕೈಚಳಕವು ನುರಿತ ಸಾಹಿತಿಗಳಾದ 'ಸಿ. ಕೆ.' ಯವರಲ್ಲಿದೆ ಎಂದು ಅಭಿಮಾನದಿಂದ ಹೇಳಬಹುದು. ಎಲ್ಲಾದರೂ ಒಂದೆರಡು ಕಡೆ 'ಕವಿಪಾದಾಬ್ಜಭೃಂಗವಾಗಲಾರದವರ ಶುಷ್ಕಪಾಂಡಿತ್ಯಕ್ಕೆ ಕವಿಹೃದಯದರ್ಶನ ಸೌಭಾಗ್ಯವು ಸರ್ವಥಾ ದೊರೆಯದೆಂದು' (ಪು. ೪೮) ಮುಂತಾಗಿ ತಲೆತುರಿಸುವಂತಹ ಅಡಂಬರದ ಶೈಲಿ ಇದ್ದರೆ **' ನಿಮಜ್ಜತೀಂದೋಃ ಕಿರಣೇಷ್ವಿವಾಂಕಃ '** ಎಂದು ಸಮಾಧಾನ ತಂದುಕೊಳ್ಳಬಹುದು. ಇಂತಹ ಗ್ರಂಥವನ್ನು ಕನ್ನಡದಲ್ಲಿ ಬರೆಯುವುದೆ ಅಪರೂಪ; ಪ್ರಕಟಿಸಿದ್ದು ಪೂರ್ವಜನ್ಮದ ಸುಕೃತ (ಕರ್ನಾಟಕದ್ದು). ಬರೆಯುವ ಇಂದ್ರಜಾಲ ಕಲೆಯೂ ಸಾಧಿಸಿದಂತೆ ಗ್ರಂಥಕ್ಕಿಟ್ಟ ಬೆಲೆಯೂ ಸಾಧಿಸಿದೆ.

ಇಂತಹ ದೊಡ್ಡ ಗ್ರಂಥದಲ್ಲಿ ಹಲವು ಅಚ್ಚಿನ ದೋಷಗಳು ಕೈಮಿಾರಿ ಉಳಿದಿವೆ; ಅವುಗಳನ್ನು ತಿದ್ದಿಕೊಂಡು ಪುನರಾವೃತ್ತಿಯಲ್ಲಿ ಗ್ರಂಥವನ್ನು ಸರ್ವಾಂಗಸುಂದರ ಮಾಡಬೇಕೆಂದು ಸಲುಗೆಯ ಸವಿನಯ ಸೂಚನೆ. ಅದರಂತೆಯೆ ' ಪ್ರಾಭವ ' (ಪು. ೧೧೩), 'ನಿಪಾತಗೊಳಿಸು' (ಪು. ೨೦೬), ' ಉಪಷ್ಟಂಭಕ ' ( ಪು. ೨೧೮ ) ಮುಂತಾದ ಕೆಲವು (ಸಂದರ್ಭದಲ್ಲಿ) ಅಸಾಧುವೆನಿಸಬಹುದಾದ ಪದಗಳನ್ನೂ ಬದಲಾಯಿಸಬೇಕೆಂದು ಬೇಡುವೆವು.

'ಕನ್ನಡಿಗರಾದ ನನ್ನ ದೇಶಬಾಂಧವರಿಗೆ ಇದರಿಂದ ಅಲ್ಪಸ್ವಲ್ಪ ಸಂತೋಷವಾದರೂ ನನ್ನ ಶ್ರಮಕ್ಕೆ ಪೂರ್ಣ ಫಲವಾಯಿತೆಂದು ಭಾವಿಸುವೆನು' ಎಂದು ಮುನ್ನುಡಿಯಲ್ಲಿ ಓದಿ ನಮಗೆ ಹೆದರಿಕೆಯಾಗಿದೆ. ಏಕೆಂದರೆ, ಕನ್ನಡಿಗರಿಗೆ ಈ ಗ್ರಂಥದಿಂದ — ಅಲ್ಪಸ್ವಲ್ಪವೇಕೆ ? — ಅಪಾರವಾದ ಸಂತೋಷವಾಗುವುದು ಖಂಡಿತ; ಹೀಗೆಂದರೆ ಶ್ರೀ. ವೆಂಕಟರಾಮಯ್ಯನವರಿಗೆ ಪರಿಪೂರ್ಣಫಲ ದೊರಕಿದಂತಾಗಿ, ಅವರು ಬೇರೆ ಇಂತಹ ಗ್ರಂಥಗಳನ್ನು ಬರೆಯುವುದನ್ನೆ ಬಿಟ್ಟುಕೊಡಲಿಕ್ಕಿಲ್ಲವಷ್ಟೆ? ಅವರ ಪರಿಶ್ರಮಕ್ಕೆ ಇನ್ನೂ ಅನೇಕ ವರ್ಷ ಫಲ ದೊರಕಿದ ಭಾವನೆಯನ್ನು ಅವರಲ್ಲಿ ಹುಟ್ಟಿಸಕೂಡದೆಂದು ದೇವನನ್ನು ಬೇಡೋಣವೆ, ಕನ್ನಡಸೌಭಾಗ್ಯದೇವತೆಯನ್ನು ಬೇಡೋಣವೆ.?

—ಆರ್. ವ್ಹಿ. ಜಾಗಿರದಾರ

೬೧ **'ಬುದ್ಧವಚನ ಪರಿಚಯ'** ಮತ್ತು **ಮಿಲಿಂದ ಪ್ರಶ್ನೆ.** ಅನುವಾದಕರು, ಸಂಪಾದಕರು ಶ್ರೀಮಾನ್ ಜಿ. ಪಿ. ರಾಜರತ್ನಮ್ ಅವರು. ಬೆಲೆ ಸಾಮಾನ್ಯಪ್ರತಿಗೆ ೪-೦-೦; ಲೈಬ್ರರಿ ಪ್ರತಿಗೆ ೭-೮-೦. ಪಾಲೀಕನ್ನಡ ಅನುವಾದಮಾಲೆಯ ೧೯೩೭ರ ಪ್ರಕಟನೆ.

ಶ್ರೀಮಾನ್ ರಾಜರತ್ನಂ ಅವರು ಸಾಹಿತ್ಯಪ್ರಪಂಚದ ಯಾವಭಾಗದಲ್ಲಿಯೆ ಕಾರ್ಯವನ್ನಾರಂಭಿಸಲಿ, ಎಲ್ಲರೂ ಅವರ ಕಾರ್ಯವನ್ನು ಅಪೇಕ್ಷಿಸುವರು; ಮೆಚ್ಚುವರು. ಅದರ 'ಹೆಂಡ್ಕುಡ್ಕ'ನ ಪದಗಳು ಕನ್ನಡ ಸಾಹಿತ್ಯದಲ್ಲಿ ತಮಗಾಗಿ ಹೊಸದೊಂದು ಸ್ಥಾನವನ್ನೇ ಕಾದಿರಿಸಿಕೊಂಡುವು. ಅವರ " ಶಿಶುಸಾಹಿತ್ಯ"ವು ಮಕ್ಕಳಿಗೊಂದು ಸವಿಯೂಟವಾಯಿತು. ಅವರ 'ಹನಿಗಳು' ನೀರಹನಿಗಳಲ್ಲ, ಬೆಳಕಿನ ಮಳೆಯ ಹನಿಗಳು. 'ಗಂಡುಗಲಿ' ಮನಃಕ್ಷೇತ್ರದ ಹೇಡಿತನಹೆದರಿಕೆಗಳ ಮುಳ್ಳುಕಂಟಿಗಳನ್ನು ಸವರಿ ಚೆಲ್ಲಿ,ಧಮನಿಗಳಲ್ಲಿ ಬಿಸಿರಕುತವನ್ನು ದುಡಿಯಿಸಿಬಿಡುವುದು. ಈಗ ಅವರು ಇನ್ನೊಂದು ಬೆಲೆಬಾಳುವಂತಹ ಕಾರ್ಯವನ್ನು ಕೈಕೊಂಡಿರುವರು. ಅವರ ಮೊದಲನೆಯ ಫಲವೇ ಈ ಸಂಯುಕ್ತ ಗ್ರಂಥವು.

ಬೌದ್ಧಸಾಹಿತ್ಯವೆಂದರೆ ಭಾರತದ ಅತ್ಯುಜ್ವಲವಾದ ಸಂಸ್ಕೃತಿಸೂರ್ಯನ ಹರಿಹಿಂಗದ ಒಂದು ಪ್ರಕಾಶವು: ಅದು ಸಂಸ್ಕೃತದಲ್ಲಿಯೂ ಪಾಲಿಯಲ್ಲಿಯೂ ಇರುವುದರಿಂದ, ಕನ್ನಡಿಗರಿಗೆ ಅದರ ಪ್ರಕಾಶವು ನೋಡಮುಚ್ಚಿದ ಸೂರ್ಯಪ್ರಕಾಶವಾಗಿದೆ. ಬೌದ್ಧಸಾಹಿತ್ಯವು ಪ್ರಸಿದ್ಧವಾದ ವಿದೇಶೀಯ ಭಾಷೆಗಳಲ್ಲೆಲ್ಲ ಭಾಷಾಂತರವಾಗಿದೆ. ಇಂದಿನ ನಮ್ಮ ಭಾರತೀಯರಲ್ಲಿಯ ಭಿನ್ನಭಿನ್ನ ಜಾತಿಗಳನ್ನೆಲ್ಲ ಒಂದೇ ಸೂತ್ರದಲ್ಲಿ ಕೋದು, ಜನತೆಯನ್ನು ಒಂದುಗೂಡಿಸುವುದಕ್ಕೆ ಅಂದಿನ ಬುದ್ಧನ ತ್ರಿಸೂತ್ರಗಳಲ್ಲಿ ಒಂದಾದ 'ಸಂಘಂ ಶರಣಂ ಗಚ್ಛಾಮಿ'ಎಂಬ ಸಂಕಲ್ಪವನ್ನೆ ನಾವಿಂದು ಅವಲಂಬಿಸಬೇಕಾಗಿದೆ. ಅದಕ್ಕಾಗಿ ಮತ್ತೆ ನಾವೆಲ್ಲ ಬುದ್ಧನ ತತ್ತ್ವಗಳನ್ನು ಕೂಲಂಕಷವಾಗಿ ಅಭ್ಯಸಿಸಿ, ವಿಶ್ವವನ್ನೇ ತನ್ನ ಕಡೆ ತಿರುಗಿಸಿಕೊಂಡುದರ ರಹಸ್ಯವನ್ನು ಕಂಡು-

CC-0. Jangamwadi Math Collection. Digitized by eGangotri

ಕೊಳ್ಳಬೇಕಾಗಿದೆ. ಎಂತಲೇ ಭಾರತದ ಅನೇಕಭಾಷೆಗಳಲ್ಲಿ ಬೌದ್ಧಸಾಹಿತ್ಯವು ಭರದಿಂದ ಅನುವಾದಿತವಾಗುತ್ತಲಿದೆ. ಕನ್ನಡದಲ್ಲಿ ಆಗಬೇಕಾದುದನ್ನು ಶ್ರೀ. ರಾಜರತ್ನಂ ಅವರಂತಹ ಸಿದ್ಧಹಸ್ತರು ಕೈಕೊಂಡು, ಮಾಡಲು ಮುಂದುವರಿದುದನ್ನು ಕಂಡು, ನಮಗೆ ಸಂತೋಷ; ಅಭಿಮಾನ.

ಲೇಖಕರು ತಮ್ಮ ಈ ಪ್ರಯತ್ನದ ಗುರಿಯ ವಿಷಯದಲ್ಲಿ ಹೀಗೆಂದು ಹೇಳಿರುವರು.

"ಈ ಪ್ರಯತ್ನದ ಗುರಿ ಎರಡು. ಪಾಲಿಪಿಟಕಗಳಲ್ಲಿರುವ ಸಾಹಿತ್ಯಗುಣವನ್ನು ಆದಷ್ಟುಮಟ್ಟಿಗೆ ಕನ್ನಡದಲ್ಲಿ ತಿಳಿಸುವುದು ಒಂದು. ಭಗವಂತನ ನಿಜಸ್ವರೂಪವನ್ನೂ ಅದರೊಡನೆ ಸಹಗತವಾಗುವ ಆತನ ಧರ್ಮದ ಪರಿಚಯವನ್ನೂ ಮೂಲಗ್ರಂಥಗಳಿಂದ ಯಥಾಭೂತವಾಗಿ ಮಾಡಿಕೊಡುವುದು ಎರಡನೆಯದು."

ಪಾಲೀಭಾಷೆಯ ಬೌದ್ಧಸಾಹಿತ್ಯವು 'ವಿನಯಪಿಟಕ' **'ಸುತ್ತ ಪಿಟಕ'** **'ಅಭಿಧಮ್ಮ ಪಿಟಕ'** ಎಂಬ ಮೂರುಭಾಗಗಳಲ್ಲಿ ವಿಭಾಗಿತವಾಗಿದೆ. **'ತಿಪಿಟಕ(ಮೂರುಬುಟ್ಟಿ)'** ಎಂಬ ಹೆಸರಿನಿಂದ ಈ ಸಾಹಿತ್ಯವು ಕರೆಯಿಸಿಕೊಳ್ಳುತ್ತದೆ. ಸದ್ಯ ಈ ಲೇಖಕರು 'ವಿನಯಪಿಟಕ' **'ಸುತ್ತ ಪಿಟಕ'** ಎಂಬ ಎರಡೇ ಭಾಗಗಳನ್ನು ಕನ್ನಡಿಸಲಿದ್ದಾರೆ. ಏಕೆಂದರೆ ಇವೆರಡರಲ್ಲಿಯೂ 'ನಾನಾ ಪರ್ಯಾಯಗಳಿಂದ ಸ್ವಾರಸ್ಯವಾಗಿ ತಿಳಿಸಿರುವ ಧರ್ಮವನ್ನೇ **'ಅಭಿದಮ್ಮ ಪಿಟಕದಲ್ಲಿ'** ಬೇರೊಂದು ರೀತಿಯಿಂದ—ನೀರಸವಾಗಿ ಪಟ್ಟಿಮಾಡಿದಂತೆ ಒಣ ಪ್ರಶ್ನೋತ್ತರಮಾಲಿಕೆಯಾಗಿ ಅಥವಾ ಶುಷ್ಕನಿರೂಪಣೆಯನ್ನು ತಿಳಿಸಿರುವುದರಿಂದ' ಮೂರನೆಯ ಭಾಗವನ್ನು ಬಿಟ್ಟುಬಿಡಲಿದ್ದಾರೆ.

"ಹೀಗೆ ಆರಿಸಿಕೊಂಡ ವಿನಯಪಿಟಕ, ಸುತ್ತಪಿಟಕ ಎಂಬ ಎರಡನ್ನೇ.... ಸದ್ಯಕ್ಕೆ 'ಬುದ್ಧವಚನ' ಎಂದು ಎಣಿಸಿ, ಅವುಗಳೊಳಗಿನ ಸಾರವನ್ನು 'ಬುದ್ಧವಚನಮಧು' ಎಂಬ ಹೆಸರಿನಲ್ಲಿ" ಅವರು ಅರ್ಪಿಸಲು ಹೊರಟಿದ್ದಾರೆ. ಇವೆರಡು ಭಾಗಗಳೂ ಗದ್ಯ ಪದ್ಯ ಎರಡರಿಂದಲೂ ಕೂಡಿವೆ. ರಾಜರತ್ನಂ ಅವರು ಆ ಗದ್ಯಭಾಗವನ್ನು ನಾಲ್ಕು ಸಂಪುಟಗಳಲ್ಲಿಯೂ ಪದ್ಯಭಾಗವನ್ನು ಒಂದು ಸಂಪುಟದಲ್ಲಿಯೂ ಪ್ರಕಟಿಸಲಿದ್ದಾರೆ. ಈ ಸಂಯುಕ್ತಗ್ರಂಥದಲ್ಲಿಯ **'ಬುದ್ಧವಚನ ಪರಿಚಯ'** ಎಂಬ ಮೊದಲನೆಯ ಗ್ರಂಥವು ಲೇಖಕರು ಮುಂದೆ ಪ್ರಕಟಿಸಲಿರುವ ಗದ್ಯಭಾಗದ ನಾಲ್ಕು ಸಂಪುಟಗಳ ಮಾದರಿಯನ್ನು ತೋರಿಸುವಂತಹದಾಗಿದೆ. ಮೊದಲನೆಯ ಸಂಪುಟಕ್ಕೆ ಸೇರಬಹುದಾದ ಎಂಟು ಜಾತಕ ಕಥೆಗಳೂ, ಎರಡನೆಯ ಸಂಪುಟದಲ್ಲಿ ಬರಬಹುದಾದ ಹದಿನೈದು ಉಪಮಾನಗಳೂ, ಮೂರನೆಯ ಸಂಪುಟದಲ್ಲಿ ಅಡಕವಾಗಬಹುದಾದ ನಾಲ್ಕು ಸೂತ್ರಗಳೂ ನಾಲ್ಕನೆಯ ಸಂಪುಟದಲ್ಲಿ ಅಚ್ಚಾಗಲಿರುವ 'ಬುದ್ಧನ ಜೀವನ ಮತ್ತು ಉಪದೇಶ' ಎಂಬುದರ ಹತ್ತು ಸನ್ನಿವೇಶಗಳೂ ಈ ಮೊದಲನೆಯ ಗ್ರಂಥದಲ್ಲಿ ಪ್ರಕಟವಾಗಿವೆ. ಕೊನೆಯಲ್ಲಿ 'ಜನ-ಸ್ಥಾನಪರಿಚಯ'ಎಂಬ ಸೂಚಿಯೂ 'ಪದಪದಾರ್ಥಕೋಶ'ವೂ ಇದ್ದು, ವಾಚಕರಿಗೆ ಓದುವುದಕ್ಕೆ ತುಂಬ ನೆರವನ್ನು ಕೊಡುತ್ತವೆ.

ಇದರಲ್ಲಿಯ ೨ನೆಯ ಗ್ರಂಥವಾದ 'ಮಿಲಿಂದ ಪ್ರಶ್ನೆ' ಎಂಬುದು 'ಶಾಕ್ಯಸಾಹಿತ್ಯ ಮಂಟಪ'ದ ಮೂರನೆಯ ಉಪಪುಷ್ಪವಾಗಿದೆ. ಪಾಲೀ ಭಾಷೆಯಲ್ಲಿರುವ ಬೌದ್ಧಸಾಹಿತ್ಯದಲ್ಲಿ, ಪಿಟಕ ಸಾಹಿತ್ಯ, ಪಿಟಕೇತರ ಸಾಹಿತ್ಯ ಎಂದು ಎರಡು ಭಾಗಗಳುಂಟು. ಬರ್ಮಾ, ಸಯಾಂ, ಸಿಂಹಳ ಈ ದೇಶಗಳ ಬೌದ್ಧಧರ್ಮಿಗಳಿಗೆ ಸಂಪೂರ್ಣಮಾನ್ಯವೂ ಪವಿತ್ರವೂ ಆದ ಭಾಗವೆಂದರೆ ಪಿಟಕಸಾಹಿತ್ಯವು. 'ಮಿಲಿಂದಪ್ರಶ್ನೆಯು ಪಿಟಕೇತರ ಸಾಹಿತ್ಯಕ್ಕೆ ಸೇರಿದುದಾದರೂ ಪಿಟಕಗಳಷ್ಟೇ ಪೂಜನೀಯ ಪ್ರಮಾಣಗ್ರಂಥವೆನಿಸಿಕೊಳ್ಳುತ್ತದೆ.' ಇದರಲ್ಲಿ 'ಧರ್ಮವನ್ನೇ ಹೇಳಿದರು ಕೂಡ ಕಾವ್ಯದ ಕಳೆಯಿದೆ. ಇದರ ಸ್ವರೂಪವು ವಿನಯ-ಸುತ್ತಪಿಟಕಗಳನ್ನು ಸ್ಮರಿಯಿಸುತ್ತದೆ. ಮಿಲಿಂದಪ್ರಶ್ನೆಯನ್ನು ಬರೆದವನು, ಪ್ರಾರಂಭದಲ್ಲಿ ಆ ರಾಜನ ರಾಜಧಾನಿಯನ್ನು ಕಾವ್ಯಗಳ ರೀತಿಯಲ್ಲಿ ವರ್ಣಿಸಿ, ಆತನು ನಾಗಸೇನನೆಂಬ ಭಿಕ್ಷುವನ್ನು ಕಂಡನೆಂದು ಅವರ ಪೂರ್ವಕಥೆಯನ್ನು ತಿಳಿಸಿ, ಓದುಗರ ಕುತೂಹಲವನ್ನು ಕೆರಳಿಸಿ, ಮಿಲಿಂದ ನಾಗಸೇನರ ಸಂವಾದರೂಪದಲ್ಲಿ ತಾನು ಹೇಳಬೇಕಾದ ಧರ್ಮಬೋಧೆಯನ್ನು ಹೇಳುತ್ತಾನೆ' ಸಿಂಹಳದಲ್ಲಿ ಕ್ರೈಸ್ತಪಾದರಿಗಳ ಹಾವಳಿಯಿಂದ ಬೌದ್ಧಧರ್ಮವನ್ನು ಉಳಿಸಿಕೊಂಡ **'ಮೊಹೋಟ್ಟಿವತ್ತೇ ಗುಣಾನಂದ'** ಎಂಬ ಹೆಸರಿನ ಧರ್ಮವೀರನಿಗೆ ' ಮಿಲಿಂದಪ್ರಶ್ನೆ 'ಯು ತುಂಬ ಸಹಕಾರವನ್ನು ಕೊಟ್ಟಿತು. ಎಂತಲೆ ಬೌದ್ಧರ ದೃಷ್ಟಿಯಲ್ಲಿ ಪಿಟಕಕ್ಕೆ ಸಮಾನವಾಗಿರುವ ಸ್ಥಾನವು ಇದಕ್ಕೆ ದೊರೆತಿವೆ.

ಇದರ ಅನುವಾದದ ವಿಚಾರದಲ್ಲಿ ಹೇಳುವಾಗ ಗ್ರಂಥಕರ್ತರ ಮಾತು ಹೀಗಿದೆ:

"ಮುಂದೆ ಕೊಟ್ಟಿರುವ ಅನುವಾದಗಳಲ್ಲಿ 'ಮಿಲಿಂದ ಪ್ರಶ್ನೆ'ಯ ( ೭ ಭಾಗಗಳಲ್ಲಿ ) ಪ್ರಕ್ಷಿಪ್ತವೆನಿಸಿರುವ ಕಡೆಯ

CC-0. Jangamwadi Math Collection. Digitized by eGangotri

ನಾಲ್ಕು ಭಾಗಗಳನ್ನು ಸದ್ಯಕ್ಕೆ ಬಿಟ್ಟಿದೆ. ತೆಗೆದುಕೊಂಡಿರುವ ಮೊದಲ ಮೂರರಲ್ಲಿ "ಲಕ್ಷಣಪ್ರಶ್ನೆ" "ವಿಮತಿಚ್ಛೇದನ ಪ್ರಶ್ನೆ"ಗಳನ್ನು ಸಂಪೂರ್ಣವಾಗಿ ಅನುವಾದ ಮಾಡಿದೆ; 'ಬಾಹಿರಕಥೆ'ಯಲ್ಲಿ ವಿಂಟರ್‌ನಿಟ್ಸ್ ಪಂಡಿತನ ಮತದಂತೆ ಪ್ರಕ್ಷಿಪ್ತವೆನಿಸಿದ ಭಾಗಗಳನ್ನು ಮಾತ್ರ ಸಂಗ್ರಹಿಸಿ, ಮಿಕ್ಕುದನ್ನು ಮೂಲದಂತೆಯೆ ತರಲಾಗಿದೆ."

ಈ ಗ್ರಂಥದ ಕೊನೆಯಲ್ಲಿಯೂ 'ನಾಮಪದಸೂಚಿ'ಯೂ 'ಪದವಿಷಯಸೂಚಿ'ಯೂ ಇದ್ದು ಓದುವವರಿಗೆ ಅನುಕೂಲ ಮಾಡಿಕೊಡುತ್ತಲಿವೆ. ಧರ್ಮಕ್ಕೆ ಸಂಬಂಧಿಸಿದ ವಿಷಯವಾದುದರಿಂದ ಧಾರ್ಮಿಕಪರಿಭಾಷೆಗಳು ನಡುನಡುವೆ ಬಂದು ಭಾಷೆ ಕ್ಲಿಷ್ಟವೆನಿಸುವುದು ಅನಿವಾರ್ಯವಾದರೂ,ರಾಜರತ್ನಂ ಅವರು ಸಾಧ್ಯವಾದಷ್ಟು ಅದನ್ನು ಸುಲಭಗೊಳಿಸಲಿಕ್ಕೆ ಪ್ರಯತ್ನಿಸಿದ್ದಾರೆಂಬುದು ಓದುಗರಿಗೆ ಕಂಡುಬಾರದೆ ಇರದು. ಇಂತಹ ಗ್ರಂಥಗಳನ್ನು ಎಲ್ಲರೂ ಓದಬೇಕಾದುದು ಅವಶ್ಯಕವಾದರೂ ಓದುವವರು ಸಿಕ್ಕುವುದು ಎಲ್ಲಿಯೋ ಅಪೂರ್ವ; ಆದರೆ ಓದಬೇಕೆನ್ನುವ ಕೆಲವರಿಗಾದರೂ ಈ ಗ್ರಂಥದ ಆವಶ್ಯಕತೆಯಿದ್ದೇ ಇದೆಯಲ್ಲವೇ? ಓದಬೇಕೆನ್ನುವವರಿಂದ—ತಕ್ಕಮಟ್ಟಿಗೆ—ಲೇಖಕರಿಗೆ ಹಣದ ನೆರವು ದೊರೆತೀತಾದರೂ ಅಷ್ಟರಿಂದ ಇಂತಹ ದೊಡ್ಡ ಕೆಲಸವಾಗುವುದು ಸಾಧ್ಯವಿಲ್ಲ. ಆದುದರಿಂದ ಸಿರಿವಂತರಾದ ಕನ್ನಡಿಗರು—ತಾವು ಓದದಿದ್ದರೂ—ವಾಙ್ಮಯಪ್ರಚಾರದ ಮಹೋದ್ದೇಶಕ್ಕೆ ನೆರವನ್ನು ನೀಡಲು ಕೈ ಮುಂದೆ ಮಾಡಬೇಕೆಂದು ನಮ್ಮ ಬಿನ್ನಹ.

೧೦೫ **ನಡುಮನೆಯಲ್ಲಿ:** ಬರೆದವರು ಶ್ರೀಮಾನ್ ಎಸ್.ಕೆ. ಕುಲಕರ್ಣಿ ಬಿ. ಎ. ಅವರು. ಧಾರವಾಡದ ಪ್ರೇಮ ಪ್ರಕಟನಾಲಯದ ಪ್ರಕಟನೆ. ಬೆಲೆ ೦—೬—೦.

ಇದೊಂದು ಏಕಾಂಕ ನಾಟಕಗಳ ಸಂಗ್ರಹವು. ಲೇಖಕರು ಸ್ವತಂತ್ರವಾಗಿ ಬರೆದುವು ಆರು, ಪರಭಾಷೆಯ ಕೃತಿಗಳ ಆಧಾರದಿಂದ ಬರೆದುವು ಎರಡು—ಹೀಗೆ ಒಟ್ಟು ಎಂಟು ಏಕಾಂಕನಾಟಕಗಳಿವೆ ಇದರಲ್ಲಿ. ಇದೇ ಲೇಖಕರ ಈ ಮೊದಲಿನ 'ಇಲೆಕ್ಶನ್' 'ಪುರಾಣದ ಪೂರ್ವರಂಗ' ಇವುಗಳನ್ನು ಓದಿದವರಿಗೆ, ಅವರ ಸಮಾಜದ ವಾಸ್ತವ ಚಿತ್ರ ರಚನಾನೈಪುಣ್ಯವು ಪ್ರತ್ಯಯಕ್ಕೆ ಬಾರದೆ ಹೋಗಲಾರದು. ಈ ಕೃತಿಗಳಲ್ಲಿಯೂ ಲೇಖಕರು ತಮ್ಮಲ್ಲಿ ಸಹಜವಾಗಿರುವ ಚಿತ್ರಶಕ್ತಿಯನ್ನು ಚೆನ್ನಾಗಿ ತೋರಿಸಿ ಇದ್ದಾರೆ.

ಭಾವಗೀತ, ಸಣ್ಣಕತೆ, ಏಕಾಂಕನಾಟಕ ಇವೆಲ್ಲ ಒಂದೆ ಜಾತಿಗೆ ಸೇರಿದುವು. ಒಂದೆ ಒಂದು ಭಾವವನ್ನು ಉಚಿತವಾದ ರೀತಿಯಲ್ಲಿ, ಉಚಿತವಾದ ಭಾಷೆಯಲ್ಲಿ ಯುಕ್ತಿ-ಯುಕ್ತವಾಗಿ ಪರಿಪೋಷಿಸಬೇಕಾಗುವುದು. ಇವುಗಳಲ್ಲಿ ಸ್ವಲ್ಪ ತೂಕ ತಪ್ಪಿದರೆ ಸಾಕು, ಕೃತಿಯು ಆಭಾಸವಾಗಿ ಪರಿಣಮಿಸುವುದು. ಏಕಾಂಕನಾಟಕಗಳಲ್ಲಿ 'ಕಾಲಪರಿಮಾಣ'ದುದೊಂದು ಹೆಚ್ಚಿನ ತೂಕವಿರಬೇಕಾಗುವುದು. ಅದರಲ್ಲಿ ಅಡಕವಾದ ಕಥಾವಸ್ತುವು ನಡೆದ ವೇಳೆಯು, ಅದನ್ನು ಆಡಿತೋರಿಸಬಹುದಾದ ವೇಳೆಗೆ ಆದಷ್ಟು ಹೆಚ್ಚಿಗೆ ಸಮೀಪವಾಗಿರುವುದು ಏಕಾಂಕನಾಟಕದ್ದೊಂದು ಉತ್ತಮ ಲಕ್ಷಣವೆಂದು ಲಾಕ್ಷಣಿಕರ ಮತ; ಈ ಮತವನ್ನು ಅನುಸರಿಸ ಹೋಗಿ ಅನೇಕ ಜನ ಹೊಸ ಲೇಖಕರು, ಯುಕ್ತವಸ್ತುವನ್ನು ಆಯ್ದುಕೊಳ್ಳಲಿಕ್ಕಾಗದೆ — ಸ್ವಲ್ಪಕಾಲದಲ್ಲಿಯೆ ನಡೆದುವೆಂದು — ಅನೇಕ ಅಸ್ವಾಭಾವಿಕ ಘಟನೆಗಳನ್ನು ಹೆಣೆದು, ಕೃತಿಗಳನ್ನು ಅವಾಸ್ತವವೆಂದೆನ್ನುವಂತೆ ಮಾಡುವುದುಂಟು. ಕೆಲವರು ಉದ್ದೇಶಸಾಧನೆಗೆಂದು ಏಕಾಂಕನಾಟಗಳನ್ನು ಬರೆಯಲು ಹೋಗಿ, ಸಾಹಿತ್ಯದ ಪಾಕವನ್ನು ಹದಗೆಡಿಸಿಕೊಳ್ಳುವುದೂ ಉಂಟು.

ವ್ಯಕ್ತಿಯನ್ನಾಗಲಿ, ವ್ಯಕ್ತಿಗಳನ್ನಾಗಲಿ, ಸಾಮಾಜಿಕ,-ಧಾರ್ಮಿಕ ಮೂಢರೂಢಿಗಳನ್ನಾಗಲಿ, ಅಣಕಿಸಿ ತೋರಿಸಬೇಕೆಂದು, ಕೇವಲ ವಿಕೃತವ್ಯಕ್ತಿಗಳನ್ನೇ ಪಾತ್ರಗಳನ್ನಾಗಿ ತೆಗೆದುಕೊಂಡು, ಆ ಆ ಪಾತ್ರಗಳನ್ನು ಪರಿಪೋಷಿಸುವಂತಹ ವಿಡಂಬನಾತ್ಮಕ ಶೈಲಿಯಲ್ಲಿ, ಒಂದಂಕದ ಪರಿಹಾಸ ನಾಟಕಗಳನ್ನು ಬರೆಯಲು ಹವಣಿಸುವವರು ಬಹುಜನರು. ಇಂತಹ ನಗೆಯಾಟಗಳು ನಗೆಯಲ್ಲಿಯೆ ಮೂಡಿ ನಗೆಯಲ್ಲಿಯೇ ಮುಳುಗಬೇಕಲ್ಲದೆ, ಲೇಖಕರ ಆದರ್ಶಸಾಧನೆಯು ಗಾಂಭೀರ್ಯದ ಸೋಂಕು ಕೂಡ ಅವಕ್ಕೆ ಇರಲಾಗದು. ಉದಾಹರಣೆಗಾಗಿ ಈ ಸಂಗ್ರಹದಲ್ಲಿಯ ಮೊತ್ತಮೊದಲನೆಯ 'ಬೆಳಕು' ಎಂಬುದನ್ನೆ ತೆಗೆದುಕೊಳ್ಳೋಣ! ಆದರಲ್ಲಿ ನಾಟಕಕಾರನಿಗೆ "ಜನಸಾಮಾನ್ಯರಲ್ಲಿ ಯಾರು ಹೆಚ್ಚು ಎಂಬುದನ್ನು ತನ್ನ ಕೃತಿಯಲ್ಲಿ ತೋರಿಸಬೇಕಾಗಿದೆ." ಇದಕ್ಕಾಗಿ ಪರಿಹಾಸಶೈಲಿಯನ್ನು ಲೇಖಕರು ಅವಲಂಬಿಸಿದ್ದಾರೆ. ಮೊದಮೊದಲುಬರುವ ಡಾಕ್ಟರ್, ಗೃಹಸ್ಥ, ಆಚಾರ್ಯ ಇವೆಲ್ಲ ಪಾತ್ರಗಳು ಅವರು ಅವಲಂಬಿಸಿದ ಶೈಲಿಯನ್ನು ತುಂಬು-ತುಂಬಾಗಿ, ರಮಣೀಯವಾಗಿ, ಔಚಿತ್ಯಪೂರ್ಣವಾಗಿ ಪರಿಪೋಷಿಸುತ್ತಿವೆ; ಆದರೆ ಕೊನೆಗೆ ಬರುವ ನಾಟಕ-

CC-0. Jangamwadi Math Collection. Digitized by eGangotri

ಕಾರನ ಪಾತ್ರದ ಗಾಂಭೀರ್ಯವು ಕೃತಿಯ ಇದುವರೆಗಿನ ಸಹಜಸೌಂದರ್ಯವನ್ನು ಹಿಡಿದು ನಿಲ್ಲಿಸಿಬಿಟ್ಟಿದೆ. ಅದಕ್ಕೆ ಕಾರಣವನ್ನೂ ಕಲ್ಪಿಸಬಹುದು; ಮೊದಲಿನ ಮೂರು ವ್ಯಕ್ತಿಚಿತ್ರಗಳು ಲೇಖಕರ ಸ್ವತಂತ್ರ ನಿರ್ಮಿತಿಗಳು. ಕೊನೆಯದಾದ ನಾಟಕಕಾರನ ಚಿತ್ರವು ಇನ್ನೊಬ್ಬರ ಕೃತಿಯಲ್ಲಿ ಕಂಡಿದ್ದ ಚಿತ್ರದ ಅನುಕೃತಿಯ ಪರಿಣಾಮವು.

ಗಂಭೀರ ಸಮಸ್ಯೆಯನ್ನು—ಮೊದಲಿನಿಂದಲೂ ಕೊನೆಯ ವರೆಗೆ—ಗಂಭೀರವ್ಯಕ್ತಿಗಳನ್ನು ಚಿತ್ರಿಸಿದ ಏಕಾಂಕ ನಾಟಕಗಳಿಂದಲೇ ಬಿಡಿಸಿದರೆ ಅದು ಔಚಿತ್ಯಪೂರ್ಣ ವಾಗುವುದೆಂಬುದಕ್ಕೆ, ಇದರಲ್ಲಿಯ 'ಪ್ರಾಯಶ್ಚಿತ್ತ' ಎಂಬ ಕೃತಿಯು ಸುಂದರವಾದ ಮಾದರಿಯಾಗಿದೆ. ಶ್ರೀ. ಧನ-ಗೋಪಾಲ ಮುಖರ್ಜಿಯೆಂಬ ಬಂಗಾಲಿಗರೊಬ್ಬರ ಕೃತಿ-ಯೊಂದರ ಆಧಾರದಿಂದ ಅನುಗೊಂಡುದಿದು. ಕವಿರವೀಂದ್ರರ ಹಲವು ಏಕಾಂಕನಾಟಕಗಳೂ ಗಂಭೀರಸಮಸ್ಯೆಯನ್ನು ಹುದುಗಿಸಿಕೊಂಡು ನಿಂತಿರುವುದನ್ನು ಅನೇಕರು ಅರಿತಿರ-ಬಹುದು. ಈ ಬಗೆಯ ಕೃತಿಗಳಲ್ಲಿ ವಿಕೃತವ್ಯಕ್ತಿಯೊಂದನ್ನು ನಿರ್ಮಾಣಮಾಡಿ ಜನತೆಯನ್ನು ನಗಿಸಬೇಕೆಂದು ಹವಣಿಸಿ-ದಲ್ಲಿ, ಅದೂ ಆಭಾಸವಾಗಿ ಹೋಗುವುದು. ಮಹಾರಾಷ್ಟ್ರ ಭಾಷೆಯ ನಾಟಕಗಳಲ್ಲಿ—ಹೆಚ್ಚಾಗಿ—ಈ ಬಗೆಯ ತೇಪೆ ಹಚ್ಚಿದಂತಿರುವ ಹಾಸ್ಯರಸವನ್ನು ನಾವು ಕಾಣಬಹುದು. ಏಕಾಂಕನಾಟಕದ ಅವಕಾಶವು ಕಡಿಮೆಯಾದುದರಿಂದ, ಅನೇಕ ಭಾವಗಳನ್ನು ಅಲ್ಲಿ ಬೆಳೆಯಿಸಿ ತೋರಿಸಲಿಕ್ಕೆ ಆಸ್ಪದವಿರುವುದಿಲ್ಲ. ಒಂದೆ ಒಂದು ಭಾವದ ಸಂಪೂರ್ಣ ಬೆಳವಣಿಗೆ ಅದರಲ್ಲಿ ನಮಗೆ ದೊರೆತರೆ ಸಾಕು.

'ಬಾರ್‌ರೂಮು' ಎಂಬುದೊಂದು ಇಂದಿನ ನಮ್ಮ ವಕೀಲ ಪ್ರಪಂಚದ 'ಒಂದು ಕಂಗಾಲ ದೃಶ್ಯ.' ಇದರಲ್ಲಿಯ ಚಂಚೀ ವಕೀಲರು ನಿಜವಾಗಿಯೂ ನಮ್ಮ ಮನಸ್ಸಿನಲ್ಲಿ ಮನೆಮನ್ನು ಮಾಡುವರು. ಆದರೆ ಕುಲಕರ್ಣಿ ವಕೀಲ ರಿಬ್ಬರಿಗೂ, ದಪ್ಪಗಿನ ಕುಂಚದ ಅಡ್ಡತಿಡ್ಡ ಬಣ್ಣ ಬಿದ್ದಿದೆ. ರೈತನು ತಂಬಾಕನ್ನು ಬೇಡಲು ಬಂದ ಸನ್ನಿವೇಶ ಸಹಜ ರಮಣೀಯವಾಗಿದೆಯಾದರೂ ದೇಶಾವರಿಗೆ ಬಂದ ಬ್ರಾಹ್ಮಣನ ಸನ್ನಿವೇಶವನ್ನು ಹೆಚ್ಚಾಗಿ ಉದ್ದಕ್ಕೆ ಎಳೆದು-ದರಿಂದ, ವಾಚಕರ ಆತುರವು ಬೇಸರದಲ್ಲಿ ಪರ್ಯವಸಾನ ಗೊಳ್ಳುವುದು. ಎಂತಲೆ ಈ ನಾಟಕವು ಚಾತುರ್ಯದಲ್ಲಿ ಕೊನೆಗಂಡಿದ್ದರೂ ಅದರ ಬೆಲೆಯು ತಿಳಿಯದೆ ಹೊಗು-ವುದು.

ಹಿಂದೂ ಸಮಾಜದಲ್ಲಿರುವ ರೂಢಿಯ ಸಂಕೇತವನ್ನು ನಂಬುವವರಿಗೆ "ಮೂಲಾನಕ್ಷತ್ರ" ಎಂಬ ನಾಟಕವು ಸಂಪೂರ್ಣ ಸೌಂದರ್ಯದಿಂದ ಕೂಡಿದುದಾಗಿ ತೋರದೆ ಇರದು. ಇದರಲ್ಲಿಯ ಹುಚ್ಚರಾಯ; ಸರ್ವೋತ್ತಮ, ಭಟ್ಟರು ಇವರೆಲ್ಲರ ಮಾತು-ಕತೆಗಳೂ ರೀತಿ-ನೀತಿಗಳೂ ಅವರಿಗೆ ಸಹಜವಾಗಿ ತೋರದಿರವು. ಆದರೆ ಆ ಸಂಕೇತದಲ್ಲಿ ನಂಬಿಗೆಯಿಲ್ಲದವರಿಗೆ ನಾಟಕದ ವಸ್ತುವು ಅಘಟಿತಘಟನೆ-ಯಾಗಿ ತೋರುವುದು. ಆದರೆ "ಕಿವಿಮಾತು" ಎಂಬ ಕೃತಿಯು ಮಾತ್ರ ಎಲ್ಲರ ಮೆಚ್ಚಿಕೆಯನ್ನೂ ಸೆಳೆದುಕೊಳ್ಳು ವುದೆಂದು ನಿಃಶಂಕೆಯಿಂದ ಹೇಳಬಹುದು. ಇದರ ಲ್ಲಿಯ ಕೌಟುಂಬಿಕ ವಾಸ್ತವ ಚಿತ್ರವು ಸಹಜಸುಂದರವಾಗಿದೆ. ಭಿಕ್ಷೆಗೆ ಬಂದಿದ್ದ ಜೀವಕ್ಕನ ಕಿಡಿಗೇಡಿತನ, ರುಕ್ಮಿಣಿ-ಲಕ್ಷ್ಮಂಬಾಯಿಯವರ ದಾಯಾದಭಾವದ ತಿಳಿಗೇಡಿತನ, ಅಣ್ಣ ಶ್ರೀಪಾದನ ಹಿರಿಯತನ, ತಮ್ಮ ಶ್ರೀಧರನ ತಳ್ಳು-ವಳ್ಳಿತನ ಇವೆಲ್ಲ ವಾಚಕರನ್ನು ನಗಿಸಿ ರೇಗಿಸುವುವು; ರೇಗಿಸಿ ಕಂಬನಿ ಮಿಡಿಸುವುವು. ಈ ಸಂಗ್ರಹದಲ್ಲಿಯೆ ಇದೊಂದು ಗುಣಪೂರ್ಣವಾದ ನಾಟಕ.

"ನಡುಮನೆಯಲ್ಲಿ" ಎಂಬ ಕಡೆಯ ನಾಟಕದ ವಸ್ತುವು ಲೇಖಕರ ಚಾತುರ್ಯವನ್ನು ಹೊರಕ್ಕೆ ಹಾಕುವುದಾದರೂ ಅದರಲ್ಲಿ ಬರುವ ಕೆಲವು ಪಾತ್ರಗಳ ವಯಸ್ಸಿಗೂ, ಅವರಾಡುವ ಮಾತಿನಿಂದ ಕಾಣುವ ಅವರ ಪ್ರಪಂಚ-ಜ್ಞಾನಕ್ಕೂ ಸರಿಯಾದ ಮೇಳವು ಬೀಳುವುದಿಲ್ಲವೆಂಬು-ದೊಂದೇ ಅಸಮಾಧಾನ ನಮಗೆ. "ಸೇಕು" ವಿನ ಪಾತ್ರ-ಪರಿಪೋಷಣೆ ಚೆನ್ನಾಗಿ ಆಗಿದೆಯಾದರೂ ಗಂಡುವೇಷದಲ್ಲಿ ಅವಳನ್ನು ಕಂಡ ಅಜ್ಜಿ, ನೋಡಲಿಕ್ಕೆ ಬಂದ ವರನೆಂದು ತಿಳಿದುಕೊಂಡುದೂ — ಹುಡುಗಿಯರೆಲ್ಲ ಮಾಡುತ್ತಿದ್ದ ಹಾಸ್ಯದಲ್ಲಿ ಅರ್ಥವಾವುದನ್ನೂ ತಿಳಿದುಕೊಳ್ಳದಿದ್ದುದೂ ಸ್ವಲ್ಪ ಅಸಂಭವನೀಯವಾಗಿ ಕಾಣದಿರದು. ಈ ಸಂದರ್ಭವು ಸಕೃದ್ದರ್ಶನಕ್ಕೆ ಆತುರ - ಹಾಸ್ಯಗಳನ್ನುಂಟು ಮಾಡಿದರೂ, ನಸುವೆ ಅವುಗಳನ್ನು ಬದಿಗೆ ಸರಿಸಿ ನೋಡಿದರೆ ಅವರ ಅಸಮಂಜಸತೆಯು ಕಂಡುಬರುವಂತಿದೆ.

ಶ್ರೀ. ಕುಲಕರ್ಣಿಯವರು ನಿರ್ಮಿಸಿದ ಪಾತ್ರಗಳಾಡುವ ಭಾಷೆ ಹೆಚ್ಚಾಗಿ ಉತ್ತರ ಕರ್ಣಾಟಕದ ಮಾಧ್ವಬ್ರಾಹ್ಮಣ-ರಾಡುವ ವ್ಯಾವಹಾರಿಕ ಭಾಷೆ. ಅನೇಕ ಪಾತ್ರಗಳು ಈ ಬಗೆಯ ಭಾಷೆಯಿಂದಲೆ ಕಳೆಗೊಂಡು ನಿಂತಿವೆಯೆನ್ನು-ವಷ್ಟು ಸಹಜವಾಗಿ ಅದು ಹರಿದು ಬಂದಿದೆ. ಆಡುವ ಮಾತಿನ ಅನೇಕ ಬಗೆಯ ಕುಸುರುಗಳ ಸಂಗ್ರಹವಾದುದನ್ನು

CC-0. Jangamwadi Math Collection. Digitized by eGangotri

ನಾವಿಲ್ಲಿ ಕಾಣಬಹುದುದು. ಒಂದೊಂದು ಸಲ ಪ್ರಾಸದ ಬೆನ್ನುಹತ್ತಿ ಹೋದಾಗ ಮಾತ್ರ ಇವರ ಭಾಷೆ ಇಲ್ಲದ ಶಬ್ದಗಳನ್ನು ಹುಡುಕಲು ತೊಡಗುವುದು ( ಉದಾ: "ಪಾತಕಲ್ಲಾ ಬ್ರಹ್ಮಚಾರೀ ಸ್ನಾತಕಾ" "ಅತಿಥೀನೋ? ಹುಡತೀಥೀನೊ " " ಏನ ಒಂತುಸಾ ಕಾಡತೂಸಾ " ಇತ್ಯಾದಿ). ಆದರೂ ಬಹಳ ಕಡೆಗಳಲ್ಲಿಯ ಇವರ ಚಣಕದ ಮಾತುಗಳು ನಗದವರನ್ನೂ ನಗಿಸುವುವು

ಶ್ರೀ. ಕುಲಕರ್ಣಿಯವರು ಸಾಹಿತ್ಯರಂಗದಲ್ಲಿ ಹೊಸದಾಗಿ ಬಂದವರು. ಅವರ ಪ್ರತಿಭೆಯಲ್ಲಿ ಕನ್ನಡಿಗರು ಆಶೆಯಿಂದ ನೋಡಬೇಕಾದಂತಹ ಹಲವು ಒಳ್ಳೆಯ ಗುಣಗಳಿವೆ. ಎಂತಲೇ ಈ ಸಂಗ್ರಹವನ್ನು ಓದಲಿಕ್ಕೆಂದು ಕೈಯಲ್ಲಿ ತೆಗೆದುಕೊಂಡವರು ಮುಗಿಸದೆ ಕೆಳಕ್ಕೆ ಇಡರು; ಕನ್ನಡದ ಸೊಗಸನ್ನು ಹೆಚ್ಚಿಸುವಂತಹ ಅನೇಕ ಕೃತಿಗಳು ಈ ಲೇಖಕರ ಲೆಕ್ಕಣಿಕೆಯಿಂದ ಇಳಿಯಲೆಂದು ಅಪೇಕ್ಷಿಸದೆ ಇರರು.

—ಬೆಟಗೇರಿ ಕೃಷ್ಣಶರ್ಮ

**೪೪ ವಿದೇಶೀಯ ಲೋಕೋಪಕಾರಿಗಳು.** ಲೇಖಕರು ಶ್ರೀಮಾನ್ ಎಲ್. ಸ್ವಾಮಿರಾವ್ ಬಿ. ಎ. ಬೆಲೆ ೦—೬—೦

ಪುಸ್ತಕಕ್ಕಿರಿಸಿದ ಹೆಸರಿನಿಂದಲೆ ಈ ಗ್ರಂಥದ ಬಗೆ ಗೊತ್ತಾಗುವುದು. ಇದರಲ್ಲಿ ವಿಲಿಯಂ ಕ್ಯಾಕ್ಸ್‌ಟನ್, ಜಾನ್ ಹ್ಯಾನ್‌ಕಾಕ್, ಥಾಮಸ್ ಆಲ್ವ ಎಡಿಸನ್, ಆಂಡ್ರೂ ಕಾರ್ನೆಗಿ, ಬೆಂಜಮಿನ್ ಫ್ರಾಂಕ್ಲಿನ್, ಬುಕರ್ ಟಿ. ವಾಷಿಂಗಟನ್ ಲೂಯಿ ಪ್ಯಾಶ್ಚರ್, ಮಿಸ್ ಫ್ಲಾರೆನ್ಸ್ ನೈಟಿಂಗೇಲ್ ಈ ಎಂಟುಜನ ಮಹನೀಯರ ಸಂಕ್ಷಿಪ್ತ ಜೀವನಚರಿತ್ರೆಗಳು ಸಂಗ್ರಹಗೊಂಡಿರುವುವು. ದೈವವನ್ನು ನಂಬಿಕೊಂಡು, ವಿರಕ್ತಿಯನ್ನೆ ಮುಖ್ಯ ಆದರ್ಶವಾಗಿಟ್ಟುಕೊಂಡು—ಇಂದಿನ ಕರ್ಮಯುಗದಲ್ಲಿ—ನಿರರ್ಥಕವಾದ ಹೀನ-ದೀನ ಜೀವನ-ವನ್ನು ಅನುಭವಿಸುತ್ತಿದ್ದ ಭಾರತೀಯರಿಗೆ, ಇಂತಹ ಕರ್ಮ-ಯೋಗಿಗಳ ಜೀವನಚರಿತ್ರೆಗಳು ಖಂಡಿತವಾಗಿಯೂ ಹೊಸ ಬೆಳಕನ್ನು ತೋರಿಸುವುವು. ಇದರಲ್ಲಿ ಬರುವ ಚರಿತ್ರ ನಾಯಕರೆಲ್ಲರೂ ಒಂದೊಂದು ಬಗೆಯ ಸಂಶೋಧನ ಕಾರ್ಯಕ್ಷೇತ್ರದಲ್ಲಿ ಕೆಲಸಮಾಡಿ, ಯಶಸ್ಸನ್ನು ಪಡೆದು, ಜನತೆಯ ಹಿತವನ್ನು ಸಾಧಿಸಿ ಅಮರರಾದವರು. ನಮ್ಮಲ್ಲಿಯ ಆಧ್ಯಾತ್ಮಿಕ ದಾರ್ಶನಿಕರಿಗೆ ನಾವು ಕೊಡುತ್ತಿದ್ದ ಬೆಲೆಯನ್ನೇ ಈ ಆಧಿಭೌತಿಕ ದಾರ್ಶನಿಕರಿಗೂ ಕೊಡುವುದನ್ನು ನಾವು ಕಲಿತಾಗಲೆ ನಮ್ಮ ಜೀವನಕ್ಕೆ ಶಾಂತಿ-ಪುಷ್ಟಿ-ತುಷ್ಟಿಗಳು ದೊರೆವುವು. ಸಂಸಾರವಿರಕ್ತಿಯನ್ನು ಬೋಧಿಸುವ ಸನ್ಯಾಸ-ಭಕ್ತಿಯೋಗಗಳಿಗಿಂತಲೂ 'ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ!' ಎಂದು ಉಪದೇಶಿಸಿದ ಉಪನಿಷತ್‌ಸತ್ಯವೇ ಶ್ರೇಷ್ಠವಾದುದೆಂಬುದನ್ನು ಈ ಮಹನಿ-ಯರ ಕಾರ್ಯದಲ್ಲಿ ನಾವು ಕಂಡುಹಿಡಿಯಬಹುದಾಗಿದೆ.

ಇಂದಿನ ವಾಙ್ಮಯದಲ್ಲಿ ಜೀವನಚರಿತ್ರೆಗಿರುವ ಸ್ಥಾನವು ದೊಡ್ಡದು. ಪಾಶ್ಚಾತ್ಯರಾಷ್ಟ್ರಗಳಲ್ಲಿ ಕತೆ-ಕಾದಂಬರಿ-ಗಳಿಗಿಂತ ಜೀವನಚರಿತ್ರೆಗಳನ್ನೋದುವ ವಾಚಕರೆ ಬಹಳ ಜನರು. ಇದಕ್ಕೆ ಕಾರಣವೇನೆಂದರೆ: ಪಶುಭಾವದಲ್ಲಿದ್ದ ಮನುಷ್ಯನು ಚರಿತ್ರಪುರುಷನಾಗುವುದಕ್ಕೆ ಕಾರಣವಾದ ಆತನ ಮುಂದಡಿಯ ರೀತಿ, ಜೀವನಚರಿತ್ರೆಗಳಲ್ಲಿ ಹೆಚ್ಚು ನಿಚ್ಚಳವಾಗಿಯೂ ನಿಜವಾಗಿಯೂ ಕಾಣುವುದು. ಇದರಿಂದ ಎಂತಹ ಸಾಮಾನ್ಯ ಸಾಮರ್ಥ್ಯದ ಮನುಷ್ಯನೂ ನಿಂತಲ್ಲಿ ನಿಂತಿರದೆ, ಅಡಿಯನ್ನು ಮುಂದಿಟ್ಟು ನಡೆಯಲು ಹವಣಿಸು-ವನು; ಮೊಳದಷ್ಟು ಮುಂದೆ ಸರಿಯಬಲ್ಲವನು ಮಾರಿನಷ್ಟು ಮುಂದೆ ಸರಿಯುವ ಧೈರ್ಯ-ಸಾಮರ್ಥ್ಯಗಳನ್ನು ಪಡೆ-ಯುವನು. ವಿದ್ಯಾರ್ಥಿವರ್ಗವಂತೂ ಇಂತಹ ಮಹನೀಯರ ಚರಿತ್ರೆಗಳನ್ನು ಅವಶ್ಯವಾಗಿ ಓದಬೇಕು. ಪಠ್ಯಪುಸ್ತಕಗಳಲ್ಲಿ ಬರೀ ಭಾವಿಕತನವನ್ನು ಬೆಳೆಯಿಸುವ ಪಾಠಗಳನ್ನು ತುಂಬು-ವುದಕ್ಕಿಂತಲೂ ಬೇರೆ ಬೇರೆ ಮಹಾಪುರುಷರ ಸುಂದರ ಜೀವನಚಿತ್ರದ ಪಾಠಗಳನ್ನು ಹಾಕುವುದು ಅಗತ್ಯ. ಪ್ರಸ್ತುತ ಲೇಖಕರು ಸರಲವಾದ ಭಾಷೆಯಲ್ಲಿ ಈ ಗ್ರಂಥವನ್ನು ಬರೆದು, ಕನ್ನಡ ವಾಚಕರ ಮೇಲೆ ತುಂಬ ಉಪಕಾರವನ್ನು ಮಾಡಿದ್ದಾರೆ. ಎಲ್ಲ ಹಿರಿಯರೂ ಇದನ್ನು ಕೊಂಡು ತಾವೂ ಓದಬೇಕಲ್ಲದೆ, ತಮ್ಮ ಮಕ್ಕಳೂ ಓದುವಂತೆ ಏರ್ಪಡಿಸ-ಬೇಕು.

--ವಿಜಯೀಂದ್ರ



# ಸಾದರ ಸ್ವೀಕಾರ

## ಗ್ರಂಥಗಳು

೧೧೬ **ಬಾಲತ್ರಿಕೋಣಮಿತಿ** (ಗಣಿತಶಾಸ್ತ್ರ). ಲೇಖಕರು ಶ್ರೀ. ಎಂ. ವಿ. ಜಂಬುನಾಥನ್ ಎಂ. ಎ. ಬಿ. ಎಸ್‌ಸಿ. ಅವರು. ಪ್ರೊ. ಕೆ. ಎಸ್. ಕೆ. ಐಯಂಗಾರ್ ಎಂ. ಎ. ಅವರ ಮುನ್ನುಡಿ. ಪ್ರಕಾಶಕರು ಎಂ. ವಿ. ಶೇಷಾದ್ರಿ ಮತ್ತು ಕಂಪನಿ ಬಳೇಪೇಟೆ ಬೆಂಗಳೂರುನಗರ. ಕ್ರಾ. ಅ ೧೦+೧೦೦ ಪುಟಗಳು. ಬೆಲೆ ಕ್ಯಾಲಿಕೊಬೈಂಡ್ ೦-೧೨-೦; ಸಾದಾ ೦-೮-೦.

೧೨೦ **ವೈದಿಕಧರ್ಮದ ಮಹತ್ತ್ವ** (ಪ್ರಬಂಧ). ಲೇಖಕರು ಶ್ರೀ. ಬಸ್ತಿ ದಾಸಪ್ಪ ಶೆಣೈ ಅವರು ಮಂಗಳೂರು. ವೈದಿಕಧರ್ಮ ಗ್ರಂಥಮಾಲೆಯ ೨ನೆಯಗ್ರಂಥ. ಪ್ರಕಾಶಕರು ವೈದಿಕಧರ್ಮಪ್ರಚಾರಸಂಘ ಮಂಗಳೂರು. ಡೆ. ಅ. ೨೨ಪುಟ. ಬೆಲೆ ೦-೧-೦.

೧೨೧ **ಶ್ರಾದ್ಧನಿರ್ಣಯ** (ಪ್ರಬಂಧ) ಲೇಖಕರೂ ಪ್ರಕಾಶಕರೂ ಮೇಲಿನವರೆ. ವೈದಿಕಧರ್ಮ ಗ್ರಂಥಮಾಲೆಯ ೩ನೆಯ ಗ್ರಂಥವಿದು. ಡೆ. ಅ. ೩೦ಪುಟ. ಬೆಲೆ ೦-೧-೬.

೧೨೨ **ನಟಿ** (ಒಂಬತ್ತು ಕತೆಗಳು). ಲೇಖಕರು ಶ್ರೀ. ಕೆ. ಗೋಪಾಲಕೃಷ್ಣರಾಯರು, ಬಿ. ಎ. ಧಾರವಾಡದ ಪ್ರೇಮಪ್ರಕಟನಾಲಯದ ೫ನೆಯ ಮಾಸಿಕ ಗ್ರಂಥ. ಕ್ರಾ. ಅ. ೨೦ಪುಟಗಳು. ಬೆಲೆ ೦-೬-೦.

೧೨೩ **ಕೊಸುಮರಿ** (ಚಿಕ್ಕಮಕ್ಕಳ ಸಚಿತ್ರ ಕವಿತಾ ಸಂಗ್ರಹ). ಲೇಖಕರು ಶ್ರೀ. ಟಿ. ಎಂ. ಆರ್. ಸ್ವಾಮಿ, 'ಕನ್ನಡಿಗರ ಕಣಜ' ಬೆಂಗಳೂರುನಗರ. 'ಕಂದನ ಚಂದ್ರಹಾರ'ದಲ್ಲಿಯ ಮೊದಲನೇಯ ಮಣಿ. ಫೂಲ್ಸ್‌ಕ್ಯಾಪ್ ಅ. ೧೮ಪುಟ. ಬೆಲೆ ೦-೧-೬.

೧೨೪ **ಭೌತಶಾಸ್ತ್ರದ ಪ್ರಥಮಪಾಠಗಳು** (ಸಚಿತ್ರ ವೈಜ್ಞಾನಿಕಗ್ರಂಥ). ಲೇಖಕರು ಸಿ. ಎಸ್. ಶ್ರೀನಿವಾಸ-ರಾವ್ ಬಿ. ಎ. ಬಿ. ಟಿ. ಅಸಿಸ್ಟಂಟ್ ಮಾಸ್ಟರ್ ವಿಮೆನ್ಸ್ ಟ್ರೈನಿಂಗ್‌ಕಾಲೇಜ್ ಮೈಸೂರು. ಕ್ರಾ. ಅ. ೧೦೦ಪುಟಗಳು. ಬೆಲೆ ೦-೮-೦.

೧೨೫ **ಕರ್ನಾಟಕವಿಜಯ** (ಲಾವಣಿ). ಕರ್ನಾಟಕ-ದಲ್ಲಿಯ ಪ್ರಸಿದ್ಧ ಲಾವಣಿಕರ್ತೃಗಳೂ ಹಾಡುಕಾರರೂ ಆದ ಶ್ರೀ. ಎನ್. ವಿಷಕಂಠರಾಯರು ಟ್ವಿನ್ ರೆಕಾರ್ಡ್ ಕಂಪನಿಗೆ ಕೊಟ್ಟ, ಕರ್ನಾಟಕದ ಮಹತಿಯನ್ನೊಳಗೊಂಡ ಲಾವಣಿಪದದ ಮುದ್ರಿತ ಪ್ರತಿ (Booklet). ಈ ಲಾವಣಿಯನ್ನು ಆರುಭಾಗಗಳಲ್ಲಿ ಎಂದರೆ ಮೂರು ಡಬಲ್ ರೆಕಾರ್ಡುಗಳಲ್ಲಿ ಕೊಡಲಾಗಿದೆ. ಕರ್ನಾಟಕದ ಪ್ರಾಚೀನ ವೈಭವವೂ ಇಂದಿನ ಪುನಶ್ಚೇತನದ ಚಟುವಟಿಕೆಯೂ ಜನಸಾಮಾನ್ಯರಿಗೆ ಪರಿಚಯವಾಗುವಂತೆ ಮಾಡಿದ ಒಳ್ಳೆಯ ಪ್ರಯತ್ನವಿದು. ಆದಕ್ಕಾಗಿ ಶ್ರೀ. ವಿಷಕಂಠರಾಯರಿಗೂ ಕಂಪನಿಯವರಿಗೂ ನಮ್ಮ ಕೃತಜ್ಞತೆಯ ಅಭಿವಂದನೆಗಳು. ಕ್ರಾ. ಅ. ೧೦ಪುಟಗಳು. ಬೆಲೆ ೦-೧-೦.

## ಪತ್ರಿಕೆಗಳು

೧೧೭ **ವಿಮಾವಾಣಿಜ್ಯ** (ಜನ್ಮೋತ್ಸವ ಸಂಚಿಕೆ). ಸಂಪಾದಕರು ಶ್ರೀ. ಜೆ. ವಿ. ದೊಡ್ಡವೀರಪ್ಪನವರು ಬೆಂಗ-ಳೂರು ನಗರ. ಕ್ರಾ. ⅛ದ ೪೨+೧೮೨ ಪುಟಗಳು. ಬೆಲೆ ೦—೪—೦.

ಈ ವಿಶೇಷಸಂಚಿಕೆಯ ಪ್ರಾರಂಭದ ನಾಲ್ವತ್ತು ಪುಟ-ಗಳು ಬೇರೆಬೇರೆ ಮಹನೀಯರ ಸಚಿತ್ರಸಂದೇಶಗಳನ್ನು ಒಳಗೊಂಡಿವೆ. ಈ ಪುಟಗಳೆಲ್ಲ ಬೆಲೆಬಾಳುವ 'ಆರ್ಟ್' ಕಾಗದದಲ್ಲಿ ಮುದ್ರಿತವಾಗಿವೆ. ಬಳಿಕ ೧ರಿಂದ ೧೨೪ ಪುಟಗಳ ವರೆಗಿನ ಭಾಗದಲ್ಲಿ ಅಖಿಲಕರ್ನಾಟಕದಲ್ಲಿಯ ಬೇರೆಬೇರೆ ಲೇಖಕರು ಬರೆದ—ವಿಮಾವಾಣಿಜ್ಯಕ್ಕೆ ಸಂಬಂ-ಧಿಸಿಯೇ ಇದ್ದ—ವಿವಿಧ ಲೇಖನ, ಕಥೆ, ಕವಿತೆಗಳು ಅಡಕವಾಗಿವೆ. ಲೇಖಕವರ್ಗದಲ್ಲಿ ಸರ್ ಎಂ. ವಿಶ್ವೇಶ್ವ-ರಯ್ಯನವರು, ಸರ್ ಹರಿಸಿಂಗ್ ಗೌರರು, ಪ್ರೊ. ಕೆ. ಬಿ. ಮಾಧವ (ಅಕ್ಚ್ಯುಯರಿ), ಶ್ರೀ. ಗುರುರಾವ ವಾಳ್ವೇಕರ, ಶ್ರೀ. ಎಂ. ಎಸ್. ಕೇಸರಿ, ಶ್ರೀ. ಕೆ. ನಂಜಪ್ಪ ಟೋಕಿಯೊ, ಶ್ರೀ. ಹು. ಗು. ಮುದಗಲ್ಲ, ಶ್ರೀ. ವಿ. ಸೀತಾರಾಮಯ್ಯ, ಶ್ರೀ. ವಿ. ವಿ, ಗಿರಿ ಮೊದಲಾದ ಅರ್ಥಶಾಸ್ತ್ರತತ್ತ್ವಗಳನ್ನು ಸರಿಯಾಗಿ ಅರಿತುಕೊಂಡ — ಮಹನೀಯರಿರುವರು.

CC-0. Jangamwadi Math Collection. Digitized by eGangotri

ಇವರೆಲ್ಲರ ಲೇಖನಗಳೂ ವಾಚನೀಯವಾಗಿವೆ. ೧೨೫ರಿಂದ ಮುಂದಿನ ಪುಟಗಳಲ್ಲಿ, ಹಿಂದುಸ್ಥಾನದಲ್ಲಿಯ ಬೇರೆ ಬೇರೆ ೨೩ ವಿಮಾ ಕಂಪನಿಗಳ ಸಚಿತ್ರಪರಿಚಯಗಳಿರುವುವು. ಪ್ರತಿಯೊಂದು ಲೇಖನದ ಶಿರೋಭಾಗದಲ್ಲಿಯೂ ಲೇಖಕರ ಚಿತ್ರಗಳಿರುವುವು. ಎಲ್ಲ ಬಗೆಯಿಂದಲೂ ಸಂಚಿಕೆಯು ಆಕರ್ಷಕವೂ ಉಪಯುಕ್ತವೂ ಆಗುವಂತೆ ನಿಯೋಜಿಸಲು ಸಂಪಾದಕರು ಮಾಡಿದ ಪ್ರಯತ್ನವು ನಿಜವಾಗಿಯೂ ಪ್ರಶಂಸನೀಯ. ವಿಮಾವಾಣಿಜ್ಯದಂತಹ ರುಕ್ಷವಿಷಯವನ್ನು ಅದರ—ಅವಶ್ಯಕತೆಯನ್ನರಿತು—ಕನ್ನಡ ಜನರಿಗೆ ಪರಿಚಯಮಾಡಿಕೊಡಲು ಸೊಂಟಬಿಗಿದು ಮುಂದುವರಿದ "ವಿಮಾವಾಣಿಜ್ಯ"ವು ಚಿರಾಯುವಾಗಿ ಬಾಳಲೆಂದು ಜಯಕರ್ನಾಟಕದ ಹಾರಯ್ಕೆ.

೧೧೮ Key to Success. "ವಿಮಾವಾಣಿಜ್ಯ" ಮಾಸಪತ್ರಿಕೆಯ ಆವಶ್ಯಕತೆ ಉಪಯುಕ್ತತೆಗಳನ್ನು ಕುರಿತು ಬೇರೆ ಬೇರೆ ಪತ್ರಿಕೆಗಳೂ ಮಹನೀಯರೂ ಪಟ್ಟ ಅಭಿಪ್ರಾಯಗಳನ್ನು ಒಂದೆಡೆಯಲ್ಲಿ ಸೇರಿಸಿ ಪ್ರಕಟಿಸಿದ ಕ್ರಾ. ಅ. ೬೮ ಪುಟಗಳ ಪುಸ್ತಕವಿದು. ತಮ್ಮತಮ್ಮ ಪುಸ್ತಕ-ಪತ್ರಿಕೆಗಳನ್ನು ಪ್ರಸಾರಗೊಳಿಸಬೇಕೆಂದು ಜಾಹೀರಾತು ಮಾಡಬಹುದಾದವರಿಗೆ ಇದೊಂದು ಮಾದರಿಯಾಗಿದೆ.

೧೧೯ **ಮಹಿಳಾಸಖಿ** (ಮಾಸಪತ್ರ) ಸಂಪಾದಕರು ಮಿಸ್. ಕೆ. ಇ. ಮನ್‌ಸನ್ 8 ಈಗಲ್ಸ್ ಸ್ಟ್ರೀಟ ಬೆಂಗಳೂರು ಅವರು. ಪ್ರಕಾಶಕರು: ದಿ ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್ ಮೈಸೂರು ಸಿಟಿ. ವಿಶ್ವಕರ್ಣಾಟಕದಳತೆಯ ಎಂಟು ಪುಟಗಳು. ವಾರ್ಷಿಕ ಚಂದಾ ೦—೧೨—೦.

ಕ್ರೈಸ್ತಧರ್ಮಪ್ರಸಾರದ ಉದ್ದೇಶದಿಂದ ಸ್ತ್ರೀಯರಿಗೆ ಉಪಯುಕ್ತವಾಗಬೇಕೆಂದು ಹೊರಡಿಸಿದ ಪತ್ರಿಕೆಯಿದು. ಕೇವಲ ಅದೇ ಉದ್ದೇಶವನ್ನೇ ಒಳಗೊಂಡ ಲೇಖನಗಳು ಸಚಿತ್ರವಾಗಿ ಅಚ್ಚಾಗುತ್ತವೆ. ಇದರಲ್ಲಿಯ ಮತಪ್ರಸಾರದ ಭಾಗವನ್ನು ಕಡೆಗಣಿಸಿ ಬಿಟ್ಟರೂ, ಜನಸಾಮಾನ್ಯರನ್ನು ಸುಧಾರಿಸಬೇಕೆಂದು "ಪಾದರಿ"ಗಳು ಮಾಡುತ್ತಿದ್ದ ನಿರಪೇಕ್ಷ ಪ್ರಯತ್ನಗಳನ್ನು ಕುರಿತು ಹೇಳುವ ಮಾತುಗಳು ಎಲ್ಲರೂ ಓದುವಂತಿವೆ.

### ವರದಿಗಳು

೧೨೬ ಪಂಜಸೀಮೆ ಹವ್ಯಕಬ್ರಾಹ್ಮಣರ ಸಹಕಾರ ಉತ್ತಮ ಜೀವನ ಸಂಘದವರ ಉಪನಿಬಂಧನೆ ಯಾನೆ ಕ್ರಮಗಳು.


SHREENIVAS & Co.



ARTISTS & DESIGNERS.

Beautiful & Faithful - Reproductions BY OUR PERFECT LINE, HALF-TONE & COLOUR PROCESS.

-THE PREMIER-
Karnataka
PHOTO ENGRAVERS.



— Malamaddi, DHARWAR.


CC-0. Jangamwadi Math Collection. Digitized by eGangotri

# ಜಯಕರ್ನಾಟಕ

## ಚಂದಾದಾರರಲ್ಲಿ

**ವಾರ್ಷಿಕ ಚಂದಾ (ಅಂಚೆಯವೆಚ್ಚ ಸೇರಿ) ಒಳದೇಶ ೪-೮-೦; ಪರದೇಶ ೭-೦-೦**

**ಅರ್ಧವಾರ್ಷಿಕ—ಒಳದೇಶ ೨-೪-೦; ಪರದೇಶ ೩-೮-೦; ಬಿಡಿ ಸಂಚಿಕೆ ೦-೬-೦; ವ್ಹಿ.ಪಿ. ವೆಚ್ಚ ಬೇರೆ**

'ಜಯಕರ್ನಾಟಕ'ವು ಪ್ರತಿತಿಂಗಳ ಮೊದಲನೆಯ ತಾರೀಖಿಗೆ ಪ್ರಕಟವಾಗುವುದು. ಬೇಕಾದ ಸಂಚಿಕೆಯಿಂದ ಚಂದಾದಾರರಾಗಲು ಬರುವುದು. ಚಂದಾಹಣವನ್ನು ಮುಂಚಿತವಾಗಿಯೇ ಕಳಿಸಬೇಕು. ಇಲ್ಲವೆ ವ್ಹಿ. ಪಿ. ಯಿಂದ ತರಿಸಿಕೊಳ್ಳಬಹುದು. ಚಂದಾ ಅವಧಿ ಮುಗಿಯುವ ಮೊದಲು ಒಂದು ತಿಂಗಳು ಚಂದಾದಾರರಿಗೆ ತಿಳಿಸಲಾಗುವುದು. ಪತ್ರಿಕೆ ಬೇಡವಾದವರು ಹಾಗೆ ತಿಳಿಸಬೇಕು. ಇಲ್ಲದಿದ್ದಲ್ಲಿ ಮುಂದಿನ ವರ್ಷದ ಚಂದಾ ಹಣಕ್ಕಾಗಿ ವ್ಹಿ. ಪಿ. ಯನ್ನು ಕಳಿಸಲಾಗುವುದು ಬೇಡವಾದವರು ಮುಂಚಿತ ತಿಳಿಸುವುದರ ಅಗತ್ಯದ ಕಡೆಗೆ ಚಂದಾದಾರರ ಲಕ್ಷ್ಯವನ್ನು ಎಳೆಯುತ್ತೇವೆ. ಯಾಕೆಂದರೆ ಅದರಿಂದ ವ್ಯರ್ಥ ವ್ಹಿ. ಪಿ. ವೆಚ್ಚಕ್ಕೆ ಗುರಿಯಾಗುವುದು ನಮಗೆ ತಪ್ಪುವುದು. ಪತ್ರಿಕೆ ಬಾರದಿದ್ದವರು ಆ ತಿಂಗಳ ೧೫ನೆಯ ತಾರೀಖಿನೊಳಗೆ ತಿಳಿಸಬೇಕು ಮುಂದಿನ ತಕರಾರುಗಳಿಗೆ ನಾವು ಹೊಣೆಗಾರರಲ್ಲ.

## ಜಾಹೀರಾತುದಾರರಲ್ಲಿ

ಜಯಕರ್ನಾಟಕವು ಕರ್ನಾಟಕದಲ್ಲೆಲ್ಲ ಸಂಚರಿಸುವುದಲ್ಲದೆ, ಪರಪ್ರಾಂತ-ಪರದೇಶಗಳಲ್ಲಿಯೂ ಹೋಗುವುದರಿಂದ, ವ್ಯಾಪಾರ ವ್ಯವಹಾರಗಳ ಪ್ರಚಾರಕ್ಕೆ ಉತ್ತಮ ಮಾಧ್ಯಮ.

ಜಾಹೀರಾತುದಾರರು ೨೫% ಹಣವನ್ನು ಮುಂಗಡ ಕಳಿಸಲೇ ಬೇಕು. ಒಂದೇ ಸಲ ಪ್ರಕಟನೆ ಕೊಡಲಪೇಕ್ಷಿಸುವವರು ಇಡಿಯ ಹಣವನ್ನು ಕಳಿಸಬೇಕು. ೨೦ನೆಯ ತಾ. ನ ಒಳಗಾಗಿ, ಜಾಹೀರಾತು ಕಾರ್ಯಾಲಯಕ್ಕೆ ತಲುಪಬೇಕು.

### ಪ್ರಕಟನೆಯ ದರಗಳು

| | ವರ್ಷ. | ೬ ತಿಂಗಳು. | ೩ ತಿಂಗಳು. | ೧ ಸಾರೆ. |
|---|---|---|---|---|
| ಒಂದು ಪುಟಕ್ಕೆ | ೧೮೦ ರೂ. | ೯೫ ರೂ. | ೫೦ ರೂ. | ೨೦ ರೂ. |
| ಅರ್ಧ ಪುಟಕ್ಕೆ | ೯೫ ,, | ೫೦ ,, | ೩೦ ,, | ೧೨ ,, |
| ೧/೪ ಪುಟಕ್ಕೆ | ೫೦ ,, | ೩೦ ,, | ೨೦ ,, | ೭ ,, |
| ೧/೮ ಪುಟಕ್ಕೆ | ೩೦ ,, | ೨೦ ,, | ೧೨ ,, | ೪ ,, |

ವಿಶೇಷ ಸ್ಥಳ ಬೇಕಾದಲ್ಲಿ ಮತ್ತು ಹೆಚ್ಚಿನ ವಿವರಗಳಿಗಾಗಿ ಬರೆದು ತಿಳಿದುಕೊಳ್ಳಬೇಕು.

## ಬರೆಹಗಾರರಲ್ಲಿ

(೧) ತಮ್ಮ ಲೇಖನವು ಸ್ವೀಕೃತ-ಅಸ್ವೀಕೃತ ಎಂಬ ಬಗ್ಗೆ ತಿಳಿದುಕೊಳ್ಳಲು ಬಯಸುವ ಬರೆಹಗಾರರು, ತಮ್ಮ ಲೇಖನದೊಡನೆ ಅಂಚೆಯ ವೆಚ್ಚಕ್ಕಾಗಿ ಮೂರು ಬಿಲ್ಲೆಗಳ ಟಿಕೀಟೊಂದನ್ನು ಇಡಬೇಕು. (೨) ತಮ್ಮ ಲೇಖನಗಳನ್ನು ಮರಳಿ ಬಯಸುವವರು ಅದಕ್ಕೆ ತಗಲುವ ಅಂಚೆವೆಚ್ಚದಷ್ಟು ಟಿಕೀಟುಗಳನ್ನು ಅದರೊಂದಿಗೆ ಇಡಬೇಕು. (೩) ಲೇಖನಗಳನ್ನು ಒಂದೇ ಮಗ್ಗಲಿಗೆ ಸುವಾಚ್ಯವಾದ ಅಕ್ಷರಗಳಲ್ಲಿ ಬರೆಯಬೇಕು. ಸಾಕಷ್ಟು ಮಾರ್ಜಿನ್ ಬಿಡಬೇಕು. (೪) ಲೇಖನದ ಹಸ್ತಪ್ರತಿಯು ಜ. ಕ. ದ ನಾಲ್ಕು ಪುಟಗಳನ್ನು ಸಾಮಾನ್ಯವಾಗಿ ಮಿಕ್ಕಬಾರದು. (೫) ಜಯಕರ್ನಾಟಕಕ್ಕೆ ಬರುವ ಲೇಖನಗಳು ಜಯಕರ್ನಾಟಕಕ್ಕೆಂದೇ ಇರಬೇಕು. ಇಲ್ಲಿ ಪ್ರಕಟವಾಗುವ ಮೊದಲು ಇನ್ನೆಲ್ಲಿಯೂ ಪ್ರಕಟವಾಗಿರಬಾರದು. ಆ ಮೇಲೂ ಬೇರೆಕಡೆ ಪ್ರಕಟವಾಗುವ ಪಕ್ಷದಲ್ಲಿ ಸಂಪಾದಕರ ಅನುಮತಿಯನ್ನು ಪಡೆಯಬೇಕು. (೬) ಜಯಕರ್ನಾಟಕಕ್ಕೆಂದು ಬಂದ ಲೇಖನವು ಉದ್ಧೃತ ಇಲ್ಲವೆ ಅನ್ಯಭಾಷೆಯಿಂದ ಪರಿವರ್ತಿತವಿದ್ದಲ್ಲಿ ಮೂಲವನ್ನು ಉಲ್ಲೇಖಿಸಬೇಕು.

## ಸಾಮಾನ್ಯ

ಚೆಕ್ಕುಗಳು, ಮನಿಯಾರ್ಡರುಗಳು, ಬೇರೆ ಬಗೆಯ ಹಣದ ವ್ಯವಹಾರ-ಇವನ್ನು ಮತ್ತು ಲೇಖನಾದಿಗಳ ಪತ್ರವ್ಯವಹಾರವನ್ನು "ಸಂಪಾದಕ ಜಯಕರ್ನಾಟಕ, ಧಾರವಾಡ" ಇವರ ಹೆಸರಿನಲ್ಲಿಯೂ, ಜಾಹೀರಾತಿನ ಪತ್ರವ್ಯವಹಾರವನ್ನು 'ಕಾರ್ಯದರ್ಶಿ, ಜ. ಕ. ಪ್ರಕಟನಾ ವಿಭಾಗ' ಇವರ ಹೆಸರಿನಲ್ಲಿಯೂ, ಬೇರೆ ಕಾರ್ಯಾಲಯದ ವ್ಯವಹಾರವನ್ನು "ವ್ಯವಸ್ಥಾಪಕ" ರ ಹೆಸರಿನಲ್ಲಿಯೂ ನಡೆಯಿಸಬೇಕು.

**ಜಯಕರ್ನಾಟಕ ಕಾರ್ಯಾಲಯ, ಧಾರವಾಡ**

CC-0. Jangamwadi Math Collection. Digitized by eGangotri

# ಜ್ಞಾನ-ವಿಜ್ಞಾನ

ವೈಜ್ಞಾನಿಕ ಪ್ರಯೋಗಗಳಿಂದ ಆತ್ಮದ ಸಂಶೋಧನೆ—ಕಣ್ಣು ಬರುವುದೆಂದರೆ ಏನು?—ಕಾಫಿಯ ಬಗ್ಗೆ ಕೆಲವು ಮಾತು—ಲಿಂಬೆಹಣ್ಣಿನ ಔಷಧೀ ಗುಣ—ಹತ್ತಿಯ ವ್ಯಾಪಾರದ ಪರಿಳಿತಗಳು—ಅಟ್ಲಾಂಟಿಕ್ ಪರ್ಯಟಣದ ಮೇಲಾಟ—ಗೆಲವು.

**ವೈಜ್ಞಾನಿಕ ಪ್ರಯೋಗಗಳಿಂದ ಆತ್ಮದ ಸಂಶೋಧನೆ**

ದಕ್ಷಿಣ ಆಫ್ರಿಕೆಯ ನಿವಾಸಿಗಳಾದ ಒಬ್ಬ ಡಾಕ್ಟರನೂ ಒಬ್ಬ ಎಂಜಿನಿಯರನೂ—ಕಳೆದ ಐದು ವರ್ಷಗಳಿಂದಲೂ—ಬದುಕು - ಸಾವುಗಳ ನಿಜವಾದ ರಹಸ್ಯವನ್ನು ಕಂಡು ಹಿಡಿಯುವುದಕ್ಕಾಗಿ, ಲಂಡನ್ನಿನ ಪ್ರಯೋಗ ಶಾಲೆಯೊಂದರಲ್ಲಿ ಸಂಶೋಧನಾ ಕಾರ್ಯವನ್ನು ನಡೆಯಿಸಿರುವರು. 'ಜಗತ್ತಿನಲ್ಲಿಯ ಪ್ರತಿಯೊಂದು ಪ್ರಾಣಿಯೂ ,ವಿಶಿಷ್ಟವಾದ ಒಂದು ವಿದ್ಯುತ್‌ಶಕ್ತಿಯನ್ನೊಳಗೊಂಡು ಜನಿಸಿ ಜೀವಿಸುವುದು; ಆ ಶಕ್ತಿಯು ದೇಹದಿಂದ ಹೊರಟುಹೋದೊಡನೆಯೆ ಅದಕ್ಕೆ **ಸಾವು** ಎಂಬುದಾಗಿ ಹೇಳಲಾಗುವುದು' ಎಂಬ ಸಿದ್ಧಾಂತದ ವರೆಗೆ ಅವರ ಸಂಶೋಧನೆಯಿಾಗ ಬಂದುನಿಂತಿದೆ. ಈ ಸಿದ್ಧಾಂತವನ್ನು ಸಿದ್ಧಮಾಡುವುದಕ್ಕಾಗಿ ಅವರು ಒಂದು ವಿಶಿಷ್ಟವಾದ ಯಂತ್ರವನ್ನು ನಿರ್ಮಿಸಿದ್ದಾರೆ. ಈ ಯಂತ್ರವು ಪ್ರತಿಯೊಂದು ಪ್ರಾಣಿಯ ದೇಹದಲ್ಲಿಯೂ ಅಡಗಿಕೊಂಡಿದ್ದ ವಿದ್ಯುತ್‌ಶಕ್ತಿಯನ್ನು ಅಳತೆಮಾಡಿ ಹೇಳಬಲ್ಲದು. ಸರ್ವಸಾಮಾನ್ಯ ಮನುಷ್ಯನೊಬ್ಬನ ದೇಹದಲ್ಲಿ ೫೦೦ ವೊಲ್ಟಿನಷ್ಟು ವಿದ್ಯುತ್‌ಶಕ್ತಿಯು ದೊರೆಯುವುದೆಂದು ಆ ಸಂಶೋಧಕರ ಅಭಿಪ್ರಾಯ; ಮನುಷ್ಯನಿಗೆ ವಯಸ್ಸು ಹೆಚ್ಚುಹೆಚ್ಚಾಗುತ್ತ ಹೋದಂತೆ ಈ ವಿದ್ಯುತ್‌ಶಕ್ತಿಯ ಪ್ರಮಾಣದಲ್ಲಿ ಅಂತರಬೀಳುತ್ತ ನಡೆಯುವುದಂತೆ. ಈ ಅಂತರವು ಮನುಷ್ಯನ ಆಚಾರವಿಚಾರಗಳನ್ನು ಅವಲಂಬಿಸಿಕೊಂಡಿರುವುದಂತೆ. ಅವರು ಎಷ್ಟೆಷ್ಟೋ ಜನರನ್ನು ಪರೀಕ್ಷಿಸಿ, ಉಜ್ವಲಚರಿತ್ರೆಯ ಮನುಷ್ಯರಲ್ಲಿ ವಿದ್ಯುಚ್ಛಕ್ತಿಯ ಪ್ರಮಾಣವು ಅಧಿಕವಾಗಿರುವುದೆಂದೂ ಹೀನಚರಿತ್ರರಲ್ಲಿ ಅದು ಕಡಿಮೆಯಾಗಿರುವುದೆಂದೂ ನಿರ್ಣಯಿಸಿರುವರು. ಪಾಶವಸ್ವಭಾವದ ಮನುಷ್ಯನಲ್ಲಿ ಈ ಶಕ್ತಿ ತೀರ ಕಡಿಮೆಯಾಗಿರುವುದಂತೆ; ಅದರಂತೆಯೆ ಹುಚ್ಚುಮನುಷ್ಯನಲ್ಲಿಯೂ ಇದು ಕಡಿಮೆಯಿರುವುದಂತೆ. ಜನ್ಮಕಾಲದಲ್ಲಿ ಹುಡುಗಿಯರಿಗಿಂತ ಹುಡುಗರಲ್ಲಿ ಈ ವಿದ್ಯುಚ್ಛಕ್ತಿ ಹೆಚ್ಚಾಗಿ ಇರುವುದಂತೆ. ಆದರೆ ಸ್ವಲ್ಪ ದಿನಗಳಲ್ಲಿಯೆ ಹುಡುಗಿಯರು ಹುಡುಗರನ್ನು ಹಿಂದೆಹಾಕಿ ಮುಂದುವರಿಯುವರಂತೆ.

ಇನ್ನು ಮನುಷ್ಯನು ಸತ್ತುಹೋದ ಬಳಿಕ ಆ ಶಕ್ತಿ ಎಲ್ಲಿಗೆ ಹೊರಟುಹೋಗುವುದೆಂಬ ಸಮಸ್ಯೆಯನ್ನಷ್ಟು ಅವರಿಗೆ ಬಿಡಿಸಬೇಕಾಗಿದೆ. ಏಕೆಂದರೆ ಆತ್ಮವು ಒಂದು ಶಕ್ತಿಯ ರೂಪದಲ್ಲಿದೆಯೆಂದ ಮೇಲೆ ಅದು ಎಂದೂ ಸಂಪೂರ್ಣವಾಗಿ ನಾಶಹೊಂದಲಾರದು;ಎಲ್ಲಿಯಾದರೂ—ಯಾವುದೇ ರೂಪದಿಂದಲಾದರೂ—ಅದು ಇದ್ದೇ ತೀರಬೇಕಾಗುವುದು. ಇದನ್ನು ಕಂಡುಹಿಡಿಯುವುದಕ್ಕಾಗಿ ಎಂಜಿನಿಯರನು ಈಗ ಹೊಸದೊಂದು ಯಂತ್ರವನ್ನು ಸಿದ್ಧಗೊಳಿಸುತ್ತಿದ್ದಾನೆ. ಇದು ಮನುಷ್ಯನ ದೇಹದಲ್ಲಿ ಅಡಗಿಕೊಂಡಿದ್ದ ವಿದ್ಯುತ್ತನ್ನು ಅಳೆಯದೆ ಆತನ ಸುತ್ತುಮುತ್ತಣ ವಾತಾವರಣದಲ್ಲಿರುವ ವಿದ್ಯುತ್‌ಶಕ್ತಿಯನ್ನು ಮಾತ್ರ ಅಳತೆಮಾಡಿ ಹೇಳುವುದು. ಮನುಷ್ಯನ ಸುತ್ತಲೂ ಒಂದು ಬಗೆಯ ಅತಿಸೂಕ್ಷ್ಮವಾದ ಪ್ರಭೆಯು ಹರಡಿಕೊಂಡಿರುವುದೆಂಬ ನಂಬಿಗೆಯನ್ನವಲಂಬಿಸಿ ಈ ಯಂತ್ರನಿರ್ಮಿತಿಯ ಕಾರ್ಯವು ನಡೆದಿದೆ. ಯಾವನೆ ಒಬ್ಬ ಮನುಷ್ಯನು ಸತ್ತುಹೋಗಿದ್ದ ಕಿರುಮನೆಯ ವಾತಾವರಣದಲ್ಲಿ ಸಿಕ್ಕುವ ವಿದ್ಯುಚ್ಛಕ್ತಿಯ ಪ್ರಮಾಣವನ್ನು ಈ ನವೀನ ಯಂತ್ರದಿಂದ ಅಳೆಯಲಾಗುವುದು. ಹೀಗೆ ಅಳತೆಮಾಡುವಾಗ ಮನುಷ್ಯದೇಹದಿಂದ ಹೊರಹೊರಟ ವಿದ್ಯುಚ್ಛಕ್ತಿಯು ಆ ಮನೆಯ ವಾತಾವರಣದಲ್ಲಿಯೆ ಸೇರಿ

CC-0. Jangamwadi Math Collection. Digitized by eGangotri

ಕೊಂಡಿರುವುದೆಂಬ ಮಾತು ಗೊತ್ತಾಗಬಹುದೆಂದು ಆ ಯಂತ್ರನಿರ್ಮಾಪಕನ ಕಲ್ಪನೆಯಾಗಿದೆ. ಸತ್ತ ಬಳಿಕ ಮನುಷ್ಯನ ಶಕ್ತಿಯು ಆತನ ಶರೀರದಿಂದ ಹೊರಟು-ಹೋದರೂ, ಅದು ಶರೀರದ ಬಳಿಯ ಹವೆಯಲ್ಲಿಯೆ ಹುದುಗಿಕೊಂಡಿರುವುದೆಂದು ಆ ಸಂಶೋಧಕನ ಹೇಳಿಕೆ.

ತಮ್ಮ ಈ ಉಪಾಯದಿಂದ, 'ಆತ್ಮ' ಎಂಬ ಹೆಸರಿನಿಂದ ಕರೆಯಿಸಿಕೊಳ್ಳುವ ಶಕ್ತಿಯು ಏನಿರುವುದೆಂದೂ ಹೇಗಿರುವುದೆಂದೂ ನಿರ್ಣಯಿಸಲಿಕ್ಕೆ ಸಾಧ್ಯವಾಗುವುದೆಂದು ಆ ಸಂಶೋಧಕರಿಬ್ಬರ ಕಲ್ಪನೆಯಿದೆ. ಈ ಸಂಶೋಧನೆಯು ಬರಲಿರುವ ಐದು ವರ್ಷಗಳಲ್ಲಿ ಕೊನೆಗೊಳ್ಳಬಹುದೆಂದು ಊಹಿಸಬಹುದಾಗಿದೆ.

ಚಾಂದ್ (ಹಿಂದೀ)

**ಕಣ್ಣು ಬರುವುದೆಂದರೇನು!**

ನಮ್ಮ ಕಣ್ಣುಗಳ ರೆಪ್ಪೆಯ ದಂಡೆಯನ್ನು ಮೊದಲು-ಮಾಡಿ ಒಳಬದಿಯೊಂದಿಗೆ ಹೊರಟು ಕಣ್ಣಿನ ಹಿಂಬದಿಯ-ವರೆಗೂ, ಅಲ್ಲಿಂದ ಕಣ್ಣಿನ ಬಿಳಿಯ ಗುಡ್ಡೆಯ ಮೇಲೆ ಹಾಯ್ದು ಕರಿಯ ಬಳಸಿನ ವರೆಗೂ ಆದೊಂದು ಜಾಳಿಗೆಯಂತಿರುವ ಪರೆಯು ಅಂಟಿಕೊಂಡಿರುವುದು. ಇಂಗ್ಲಿಷ್ ಭಾಷೆಯಲ್ಲಿ ಇದಕ್ಕೆ 'ಕಂಜಂಕ್ಟಾಯವ್ಹಾ' ಎಂಬ ಹೆಸರಿದೆ. ಈ ಪರೆಗೆ ಬಾವು ಬಂದರೆ 'ಕಣ್ಣು ಬಂದಿದೆ' ಎಂದು ಹೇಳುವುದುಂಟು. ಈ ವಿಕಾರಕ್ಕೆ 'ಕಂಜಂಕ್ಟಿವ್ಹಾಯಟಿಸ್' ಎಂದು ಇಂಗ್ಲಿಷಿನಲ್ಲಿ ಹೇಳುವರು. ಬಗೆಬಗೆಯ ಕ್ರಿಮಿಗಳ ಸಂಪರ್ಕದಿಂದಲೂ ಕಣ್ಣು ಬರುತ್ತಿರುವುದುಂಟು; ಆಗ ಬೇರೆ ಬೇರೆ ಲಕ್ಷಣಗಳೂ ಪರಿಣಾಮಗಳೂ ಕಂಡುಬರುವುವು.

**ಸಾಮಾನ್ಯಲಕ್ಷಣ:** ಈ ವಿಕಾರದಲ್ಲಿ ಕಣ್ಣುಗಳು ನೋಯುವುವು; ಕಣ್ಣೊಳಕ್ಕೆ ಮರಳು ಬಿದ್ದಂತೆ ಚುಚ್ಚಿ ತೊಂದರೆಕೊಡುವುವು. ಕಣ್ಣಲ್ಲಿ ಆಗಾಗ ಪಿಚ್ಚು ಬರುವು-ದಲ್ಲದೆ ಬೆಳಕನ್ನು ನೋಡಿದರೆ ಕಣ್ಣು ಕುಕ್ಕುವುದು. ಒಳಗಿನ ಬಾವು ಹೆಚ್ಚಾಗಿದ್ದಲ್ಲಿ ರೆಪ್ಪೆಗಳೂ ಊದಿಕೊಂಡು ಹೊರ-ಬದಿಗೂ ಕೆಂಪಗೆ ಕಾಣುವುವು. ಹೀಗೆ ಎರಡೂ ರೆಪ್ಪೆಗಳು ಉಬ್ಬಿದುವೆಂದರೆ ಆಗ ರೆಪ್ಪೆಗಳನ್ನಾಡಿಸಲಿಕ್ಕಾಗದೆ ಕಣ್ಣು-ಗಳನ್ನು ತೆರೆಯಲಿಕ್ಕೆ ಬಾರದಂತಾಗುವುದು. ಈ ವಿಕಾರವು ಕ್ರಿಮಿಜನ್ಯವಾದುದರಿಂದ ಒಂದು ಕಣ್ಣಿನಿಂದ ಇನ್ನೊಂದು ಕಣ್ಣಿಗೂ ಒಬ್ಬ ಮನುಷ್ಯನಿಂದ ಇನ್ನೊಬ್ಬ ಮನುಷ್ಯನಿಗೂ ಅದು ಸಹಜವಾಗಿ ಅಂಟಿಕೊಳ್ಳಬಹುದಾಗಿದೆ. ಹುಡುಗರಲ್ಲಿ ಕಣ್ಣುಬೇನೆಯ ಸೋಂಕುರೋಗವು ಇದೇ ಪದ್ಧತಿಯಿಂದಲೆ ಹಬ್ಬಿಹರಡುತ್ತಿರುವುದು. ನೋವು ಹೆಚ್ಚಾಗಿದ್ದು ಸರಿಯಾದ ಉಪಚಾರಗಳು ನಡೆಯದಿದ್ದಲ್ಲಿ ಗುಡ್ಡೆಗಳೂ ಊದಿಕೊಳ್ಳು-ವುವು. ಬೊಕ್ಕೆಗಳೆದ್ದು ದೃಷ್ಟಿಶಕ್ತಿಯನ್ನು ಕಡಿಮೆ ಮಾಡುವುವು.

**ಉಪಚಾರ:** ಕಣ್ಣು ಬರುವುದಕ್ಕೆ ಪ್ರತಿಬಂಧಕ (ಪ್ರಿವೆಂಟಿವ್) ಉಪಾಯವೆಂದು ಕಣ್ಣುಗಳನ್ನೂ ಮೂಗನ್ನೂ ಹಸನಾಗಿ ಇರಿಸುವುದು ಮೊದಲನೆಯ ಮಹತ್ತ್ವದ ಉಪಾಯವಾಗಿದೆ. ಕಣ್ಣು ಬರುವ ಸೋಂಕುರೋಗವು ಪ್ರಾರಂಭವಾದಾಗ ತಾಯ್ತಂದೆಗಳು ತಮ್ಮ ಮಕ್ಕಳನ್ನು ಬೇರೆ ಮಕ್ಕಳೊಂದಿಗೆ ಸೇರಿ ಆಡಗೊಡಲಾಗದು; ಅದರಂತೆಯೆ ತಮ್ಮ ಮಕ್ಕಳಿಗೆ ಕಣ್ಣು ಬಂದಾಗ ವಾಸಿ-ಯಾಗುವವರೆಗೂ ಇತರರಿಂದ ದೂರವಿರಿಸುವ ಏರ್ಪಾಡನ್ನು ಮಾಡಬೇಕು. ಕಣ್ಣುಗಳನ್ನು ತೊಳೆಯುವುದಕ್ಕೆ 'ಬೋರಿಕ್ ಆಸಿಡ್ಡ'ನ್ನು ಬೆರಸಿದ (೧ ಅಂಸು ನೀರಿಗೆ ೧೦ ಗ್ರೇನಿನಂತೆ) ನೀರನ್ನು ಉಪಯೋಗಿಸುತ್ತಿರಬೇಕು. 'ಆರ್ಜಿರಾಲ್' ಎಂಬ ಔಷಧಿಯ ಹನಿಗಳನ್ನು (ನೂರಕ್ಕೆ ೧೦ರಂತೆ) ಎರಡುಹೊತ್ತೂ ಕಣ್ಣಲ್ಲಿ ಹಾಕುತ್ತಿರಬೇಕು. ಈ ಸುಲಭಚಿಕಿತ್ಸೆಯಿಂದ ಕಣ್ಣುಬೇನೆಯು ಬರುವುದಿಲ್ಲವಿಷ್ಟೇ ಅಲ್ಲ; ಬಂದ ಕಣ್ಣುಗಳೂ ಬೇಗನೆ ವಾಸಿಯಾಗುತ್ತವೆ.

**ಮಹತ್ತ್ವದ ಸೂಚನೆ:** ಕಣ್ಣುಬೇನೆಯು ತುಂಬ ತೀವ್ರವಾಗಿ ಹಬ್ಬಿಹರಡುವುದು; ಆದುದರಿಂದ ಕಣ್ಣು ಬಂದ-ವರಿಗಾಗಿ ತಂದ ಔಷಧಿಯ ಬಾಟ್ಲಿಯನ್ನೂ, ರೋಗಿಗಳು ಬಳಸಿದ ಪಾತ್ರೆ-ಪಡಗಗಳನ್ನೂ, ಕೈ-ಮೊಗಗಳನ್ನೊರಸಿ-ಕೊಂಡ ಬಟ್ಟೆ ಮೊದಲಾದುವುಗಳನ್ನೂ ಬೇರೆಯವರು ಮುಟ್ಟಲೆ ಬಾರದು.

ಕಣ್ಣುಬೇನೆಯ ಕೆಲವು ಮುಖ್ಯಮುಖ್ಯ ಪ್ರಕಾರಗಳು ಕೆಳಗೆ ಬರೆದಂತಿವೆ:—

(ಅ) **ಸಾಮಾನ್ಯ ಕಣ್ಣುಬೇನೆ:** ಇದಕ್ಕೆ 'ಕಣ್ಣು-ಬೇನೆ ಬರುವುದು' ಎಂದು ಹೇಳುವರು. ಇದರ ಸ್ವರೂಪ-ಲಕ್ಷಣಗಳನ್ನು ಮೇಲೆ ವಿವರಿಸಿಯಾಗಿದೆ. ಕಣ್ಣುಗಳಿಂದ ಹೊರಬೀಳುವ ಪಿಚ್ಚ(ಕೀವು)ನ್ನು ಸೂಕ್ಷ್ಮದರ್ಶಕಯಂತ್ರ-ದಿಂದ ಪರೀಕ್ಷಿಸಿ ನೋಡಿದಲ್ಲಿ ಅದರಲ್ಲಿ ಎಣಿಸಲಾಗದಷ್ಟು ಸೂಕ್ಷ್ಮಕ್ರಿಮಿಗಳಿರುವುದು ಕಂಡುಬರುತ್ತದೆ. ನಮ್ಮ ಕಣ್ಣುಗಳು ಇಂತಹ ಕ್ರಿಮಿಗಳಿಗೆ ಮನೆಮಾಡಿಕೊಂಡಿರು-ವುದಕ್ಕೆ ಅನುಕೂಲಸ್ಥಳಗಳಾಗಿವೆ. ಆದುದರಿಂದಲೆ ಕಣ್ಣಿನ

CC-0. Jangamwadi Math Collection. Digitized by eGangotri

ವಿಷಯದಲ್ಲಿ ಎಚ್ಚರಿಕೆ ತೆಗೆದುಕೊಳ್ಳಬೇಕೆನ್ನುವವರು ಕ್ರಿಮಿಗಳಿರುವುದಕ್ಕೆ ಸ್ವಲ್ಪವೂ ಅವಕಾಶವನ್ನು ಕೊಡಲಾಗದು.

**(ಆ) ಪ್ರಮೇಹದಿಂದಾದ ಕಣ್ಣಬೇನೆ:** ಈ ಬೇನೆಯಲ್ಲಿ ಕಣ್ಣುಗಳಿಗೆ ಪ್ರಮೇಹದ ರೋಗಜಂತುಗಳ ಸಂಪರ್ಕವಾಗಿರುವುದು. ಕಣ್ಣುಗಳಲ್ಲಿ ಶೂಲಿಯುಂಟಾಗಿ ಗುಡ್ಡೆಗಳಿಗೆ ಹುಣ್ಣುಗಳೇಳುತ್ತವೆ. ಇದರಿಂದ ಕೇವಲ ೨೪ ತಾಸುಗಳ ಅವಧಿಯಲ್ಲಿಯೆ ಕಣ್ಣುಗಳು ತಮ್ಮ ಶಕ್ತಿಯನ್ನು ಕಳೆದುಕೊಂಡ ಉದಾಹರಣೆಗಳನ್ನು ನಾವು ಸಾಕಷ್ಟು ಕಾಣಬಹುದು. ಹುಟ್ಟಿದ ಕೂಸಿಗೆ ಕೂಡ, ಈ ರೋಗಜಂತುಗಳ ಸಂಸರ್ಗದೋಷದಿಂದ ಕಣ್ಣಬೇನೆಬರುತ್ತಿರುವ ಉದಾಹರಣೆಗಳೂ ನೋಡಲು ಸಿಕ್ಕುತ್ತವೆ. ಈ ಕಾರಣದಿಂದಲೆ ಹೆರಿಗೆಯ ಆಸ್ಪತ್ರೆಗಳಲ್ಲಿ, ಕೂಸು ಹುಟ್ಟಿದೊಡನೆಯೆ ಅದರ ಕಣ್ಣನ್ನು ಸ್ವಚ್ಛವಾಗಿ ತೊಳೆದು ಕ್ರಿಮಿನಾಶಕ ಔಷಧಿಯ ಹನಿಗಳನ್ನು ಬಿಡುವ ವಾಡಿಕೆಯಿದೆ. ಯಾರಿಗಾದರೂ ಈ ಬಗೆಯ ಕಣ್ಣಬೇನೆ ಬಂದಿದ್ದಲ್ಲಿ ಎಲ್ಲಕ್ಕೂ ಮೊದಲು ನೆರೆಹೊರೆಯವರು ತಮ್ಮನ್ನು ಕಾಪಾಡಿಕೊಳ್ಳಬೇಕಲ್ಲದೆ, ರೋಗಿಗೆ ಒಳ್ಳೆಯ ಉಪಚಾರಗಳು ನಡೆಯುವ ವ್ಯವಸ್ಥೆಯನ್ನು ಮಾಡಬೇಕು.

**(ಇ) ಬೊಕ್ಕೆಗಳೆದ್ದು ಕಣ್ಣಬೇನೆಬರುವುದು:** ಈ ವಿಕಾರವು ಹೆಚ್ಚಾಗಿ ಸಣ್ಣ ಹುಡುಗರಲ್ಲಿ ತಲೆದೋರುತ್ತಿರುವುದು. ಆಗ ಕಣ್ಣಗುಡ್ಡೆಯ ಸುತ್ತಲೂ ಸಣ್ಣ ಸಣ್ಣ ಹುಗುಳುಗಳೆದ್ದು, ಒಡೆದೊಡೆದು ಹುಣ್ಣುಗಳಾಗುವುವು. ಇದರಿಂದ ಕಣ್ಣುಗಳು ತುಂಬ ನೋಯುವುವಲ್ಲದೆ ಬೆಳಕನ್ನು ನೋಡಗೊಡವು. ಕಣ್ಣುಗಳಿಂದ ಎಡೆಬಿಡದೆ ನೀರು ಹರಿಯುವುದಲ್ಲದೆ ಅವು ಕುಕ್ಕುತ್ತಿರುವುವು. ಹುಡುಗರು ಕತ್ತಲೆಯಲ್ಲಿಯೆ ಕಣ್ಣುಮುಚ್ಚಿಕೊಂಡು ಬಿದ್ದು ಬಿಡುವರು. ಹೀಗಾಗುವುದರಿಂದ ಕಣ್ಣುಗಳನ್ನು ಪರೀಕ್ಷಿಸಬೇಕೆಂದರೆ ತುಂಬ ತೊಂದರೆಯಾಗುವುದು. ಈ ವಿಕಾರವುಳ್ಳ ಮಕ್ಕಳು ಕಳೆಯಿಲ್ಲದುವಾಗಿರುವುವು; ಮೈ ಒಣಗಿದಂತಾಗಿ ಬಡಕಲಾಗಿರುವುವು. ಕುತ್ತಿಗೆಯ ಪಕ್ಕಗಳಲ್ಲಿಯೂ ಗಂಟಲಿನಲ್ಲಿಯೂ ಗಂಟುಗಳಿರುವುವು. ಕೆಳದುಟಿಯು ಉಬ್ಬಿರುವುದಲ್ಲದೆ ಮೂಗಿನ ಮೇಲೂ ಮೇಲ್ದುಟಿಯ ಮೇಲೂ ಹುಗುಳುಗಳೂ ಜೆಂಬಣ್ಣವೂ ಕಾಣುತ್ತಿರುವುವು. ಕಿವಿಗಳಿಂದ ಕೀವು ಹೊರಡುತ್ತಿರುವುದು.

ಉಪಚಾರ: ಇಂತಹ ಕಣ್ಣುಗಳನ್ನು ನೋಡಿದ ಕೂಡಲೆ ರೋಗಿಯ ಶರೀರಪ್ರಕೃತಿಯನ್ನು ಗುರುತಿಸಲಿಕ್ಕೆ ಬರುವುದು. ಅನ್ನದೋಷ—ಶರೀರದೋಷಗಳೇನಾದರೂ ಇದ್ದರೆ ಮೊದಲು ಅವನ್ನು ಸರಿಪಡಿಸಬೇಕು. ಹೊಟ್ಟೆಯಲ್ಲಿ 'ಕ್ಯಾಲೊಮೆಲ್' ಔಷಧಿಯನ್ನು ಕೊಟ್ಟಲ್ಲಿ ಮಲದೋಷವು ಇಲ್ಲದಂತಾಗುವುದು. ಆಮೇಲೆ ಲೋಹವನ್ನಾಗಲಿ, ಕಾಡ್‌ಲಿವ್ಹರಾಯಿಲನ್ನಾಗಲಿ, ಕ್ವಿನಾಯಿನನ್ನಾಗಲಿ ಕೊಡುತ್ತಿರಬೇಕು.

**(ಈ) ಕಣ್ಣುಗಳ ಬಹುದಿನದ ಕೆಂಪುತನ:** ಈ ವಿಕಾರವು ಹೆಚ್ಚಾಗಿ ಇಳಿವಯಸ್ಸಿನವರಲ್ಲಿ ಕಂಡುಬರುವುದು. ಇದು ಅಷ್ಟೊಂದು ತೀಕ್ಷ್ಣವಾದುದೇನೂ ಅಲ್ಲ. ಕಣ್ಣಬೇನೆ ಬಂದು ಅವು ಪೂರ್ತಿ ವಾಸಿಯಾಗದಿದ್ದಾಗಲೂ, ಅವಶ್ಯಕತೆಯಿದ್ದರೂ ಕನ್ನಡಕವನ್ನು ಉಪಯೋಗಿಸದಿದ್ದಾಗಲೂ ಈ ವಿಕಾರವು ಹುಟ್ಟಿಕೊಳ್ಳುವುದು. ಅಲ್ಲದೆ ಇದಕ್ಕೆ ಮೂಗಿನ ವಿಕಾರ, ಅಸ್ವಚ್ಛತನದ ಜೀವನ, ಓದುಬರೆಹದ ಕೆಲಸದ ಹೆಚ್ಚಿಕೆ, ತಂಬಾಕಿನ ವ್ಯಸನ,ಕುಡುಕತನ ಇವುಗಳೂ ಮೂಲಕಾರಣಗಳಾಗುವುವು. ಇದಕ್ಕೆ ಉಪಚಾರವೆಂದರೆ ರೋಗದ ಕಾರಣಗಳನ್ನು ದೂರಕ್ಕೆ ಸರಿಸುವುದು ಒಂದೇ ಒಂದು; ಆದರೆ ಮುಪ್ಪಿನ ಕಾರಣದಿಂದ ಬಂದ ಈ ವಿಕಾರವನ್ನು ಯಾರಿಂದ ಕಳೆಯಲಿಕ್ಕಾದೀತು? ಅದಕ್ಕೆ ಮುದುಕರನ್ನು ಹುಡುಗರನ್ನಾಗಿ ಮಾಡಬಲ್ಲ ಚಿಕಿತ್ಸಕರೇ ಹುಟ್ಟಿಬರಬೇಕು.

—ಸಮಾಜಸ್ವಾಸ್ಥ್ಯ

**ಕಾಫಿಯ ಬಗ್ಗೆ ಕೆಲವು ಮಾತು.**

ಕಾಫೀಬೀಜಗಳನ್ನು ಹುರಿದು ಕುಡಿಯಲಿಕ್ಕೆ ಯೋಗ್ಯವಾಗುವಂತೆ ಪುಡಿಯನ್ನು ಮಾಡಲಿಕ್ಕಾಗುವುದು. ಕಾಫೀಬೀಜಗಳನ್ನು ಸಂಗ್ರಹಿಸಿಡುವುದರಿಂದ, ಅವುಗಳಿಗೆ ಯಾವ ಬಗೆಯ ನಷ್ಟವೂ ಉಂಟಾಗಲಾರದು. ಕಾಫಿಯ ಬೆಲೆಯನ್ನು ಹೆಚ್ಚಿಸುವುದಕ್ಕಾಗಿ, ಇತ್ತೀಚೆಗೆ ಅವುಗಳ ಹೆಚ್ಚಿನ ಬೆಳಸನ್ನು ಸುಟ್ಟುಬಿಡುವುದೊಂದು ವಿಚಿತ್ರವಾದ ಪದ್ಧತಿಯೆ ಪ್ರಚಾರದಲ್ಲಿ ಬಂದಿದೆ. ಕಾಫಿಯ ಮೂಲ ಉತ್ಪತ್ತಿಸ್ಥಾನವು ಅಬಿಸೀನಿಯಾ ದೇಶವು. ಅಲ್ಲಿಂದ ಅದು ಅರಬಸ್ತಾನಕ್ಕೆ ಹೋಯಿತು. ಲಂಡನ್ನಿನಲ್ಲಿ ಮೊದಲನೆಯ ಕಾಫೀಗೃಹವು ಹದಿನೇಳನೆಯ ಶತಮಾನದಲ್ಲಿ ಸ್ಥಾಪಿತವಾಯಿತು. ಇತ್ತೀಚೆಗೆ ಕಾಫಿಯ ಮಾರಾಟವು ಅಮೇರಿಕೆಯಲ್ಲಿ ಹೆಚ್ಚಾಗಿ ನಡೆದಿದೆ. ಅಮೇರಿಕೆಯ ಅಳತೆಯಿಂದ ಅಳೆದುನೋಡಿದರೆ, ಇಂಗ್ಲೆಂಡಿನಲ್ಲಿಯ ಜನರು ಕಾಫಿಯನ್ನು ಕುಡಿಯುವುದು ಕಡಿಮೆಯೆಂದು ಗೊತ್ತಾಗುವುದು. ಇಂಗ್ಲಿಷ್ ಜನರ ಪ್ರೀತಿ ಚಹದ ಮೇಲೆ ಹೆಚ್ಚಾಗಿದೆಯಾದರೂ

CC-0. Jangamwadi Math Collection. Digitized by eGangotri

ಯುರೋಪಿನಲ್ಲಿ ಉಪಯೋಗಿಸಲಿಕ್ಕಿರುವ ಕಾಫಿಯು ಹೆಚ್ಚಾಗಿ ಇಂಗ್ಲೆಂಡಿಗೆ ಮೊದಲು ಬಂದು, ಅಲ್ಲಿಂದ ಮುಂದೆ ಬೇರೆಬೇರೆ ದೇಶಗಳಿಗೆ ಹೋಗುತ್ತಿರುವುದು. ದಕ್ಷಿಣ ಅರಬಸ್ತಾನದಲ್ಲಿಯ 'ಯೆಮೆನ್' ಪ್ರಾಂತದಲ್ಲಿ ಕಾಫಿಯ ಹುಟ್ಟುವಳಿ ಹೆಚ್ಚಾಗಿ ಇದ್ದಿತು. ಅಲ್ಲಿಯ ಕಾಫಿಯು ಜಗತ್ತಿಗೆಲ್ಲ ಪೂರಯಿಕೆಯಾಗುತ್ತಿದ್ದಿತು. ಈಗಲಾದರೂ ಕೆಲವೊಂದು ವಿಶಿಷ್ಟಗುಣಗಳಿಂದ ಕೂಡಿದುದೊಂದು ಹೆಸರುವಾಸಿಯಾದ ಕಾಫಿಯು ಇಲ್ಲಿಂದಲೆ ರಫ್ತಾಗುವುದು. ಯುರೋಪ್‌ಖಂಡದಲ್ಲಿ ಕಾಫೀ ಕುಡಿತದ ಪ್ರಸಾರವಾಗುತ್ತಿರುವಾಗ, ಮಧ್ಯ ಅಮೇರಿಕೆಯಲ್ಲಿಯೂ ವೆಸ್ಟ್ ಇಂಡಿಜ್ ದ್ವೀಪಗಳಲ್ಲಿಯೂ ಬ್ರಾಝಿಲ್ ದೇಶದಲ್ಲಿಯೂ ಕಾಫಿಯ ಹುಟ್ಟುವಳಿಯ ಕ್ಷೇತ್ರಗಳು ನಿರ್ಮಾಣವಾದುವು. ಕೊನೆಗೆ ಜಗತ್ತಿಗೆಲ್ಲ ಕಾಫಿಯನ್ನು ಪೂರೈಸುವ ಮುಂದಾಳ್ತನದ ಮಾನವು ಬ್ರಾಝಿಲ್ ದೇಶದ ಪಾಲಿಗೆ ಬಂದಿತು. ಜಗತ್ತಿನ ಕಾಫಿಯ ಹುಟ್ಟುವಳಿಯಲ್ಲಿ ೧೦೦ಕ್ಕೆ ೭೦ರಷ್ಟು ಒಂದೆ ಬ್ರಾಝಿಲ್ ದೇಶದಲ್ಲಿ ಬೆಳೆಯುತ್ತದೆ. ಬ್ರಾಝಿಲಿಯನ್ ಕಾಫಿಯು ೧೦೦ಕ್ಕೆ ೬೦ ರಂತೆ ಅಮೇರಿಕೆಗೂ, ನೂರಕ್ಕೆ ೩೦ರಂತೆ ಯುರೋಪಿಗೂ ರಫ್ತಾಗುತ್ತದೆ. ಸದ್ಯ ಕಾಫಿಯ ಬೆಲೆಯು ತಗ್ಗಿದುದರಿಂದ, ಅದರ ಪೂರೈಕೆಯನ್ನು ಕಡಿಮೆಮಾಡಿ ಬೆಲೆಯನ್ನು ಹೆಚ್ಚಿಸಬೇಕೆಂದು, ಬ್ರಾಝಿಲ್ ಸರಕಾರವು ಪ್ರಯತ್ನವನ್ನು ಮಾಡುತ್ತಲಿದೆ. ಪ್ರತಿ ವರ್ಷದ ಕಾಫಿಯ ಹುಟ್ಟುವಳಿಯಲ್ಲಿ ಕೆಲವೊಂದು ಭಾಗವನ್ನು—ಸರಕಾರದ ಉಗ್ರಾಣದಲ್ಲಿ ಸಂಗ್ರಹಿಸಲಿಕ್ಕೆಂದು—ಕಾಫಿಯ ಉತ್ಪಾದಕರೆಲ್ಲರೂ ಕಳಿಸಬೇಕೆಂದು ಕಟ್ಟಪ್ಪಣೆಯನ್ನು ಅಲ್ಲಿ ಹೊರಡಿಸಲಾಗಿದೆಯಲ್ಲದೆ, ಸರಕಾರದ ಉಗ್ರಾಣದಲ್ಲಿ ಸಂಗ್ರಹಗೊಂಡಿದ್ದ ಕಾಫಿಯ ಕೆಲವೊಂದು ಭಾಗವನ್ನು ನಾಶಗೊಳಿಸಲಾಗುತ್ತಿದೆ. ನಾಶಮಾಡಿದ ಪ್ರತಿಯೊಂದು ಚೀಲದ ಬಗ್ಗೆ ಮಾಲಕನಿಗೆ ತೀರ ಕಡಿಮೆ ಪ್ರಮಾಣದಲ್ಲಿ ಪ್ರತಿಧನವು ಸಿಕ್ಕುತ್ತದೆ. ಇದು ಮಾಲಕನಿಗೊದಗಿದ ಚೀಲದ ವೆಚ್ಚ—ಕಳಿಸುವ ವೆಚ್ಚ ಮೊದಲಾದುವುಗಳನ್ನು ಸಾಮಾನ್ಯವಾಗಿ ತುಂಬಿಕೊಡುವಂತಿರುತ್ತದೆ. ಪೇಟೆಯ ಧಾರಣೆಯನ್ನು ಹೆಚ್ಚುಮಾಡುವುದಕ್ಕೆ ನಡೆಯಿಸಿದ ಅವರ ಈ ಪ್ರಯತ್ನಕ್ಕೆ ಇತ್ತೀಚೆಗೆ ಯಶಸ್ಸು ದೊರೆಯುತ್ತಲಿದೆ. ಧಾರಣೆ ಮೊದಲಿಗಿಂತ ಸ್ವಲ್ಪ ಮೇಲಕ್ಕೆ ಏರಿದೆ. ಕಳೆದ ವರ್ಷ ಗ್ರೇಟಬ್ರಿಟನ್ನಿಗೆ ಸುಮಾರು ೪೫ ಲಕ್ಷ ಹಂಡ್ರೆಡ್‌ವೇಟನಷ್ಟು ಕಾಫಿಯ ಆಯಾತವಾಯಿತು. ಅದರಲ್ಲಿ ೧೫ ಲಕ್ಷ ಹಂಡ್ರೆಡ್‌ವೇಟನಷ್ಟು ಹೊರದೇಶಗಳಿಗೆ ಹೋಯಿತು. ಕೆಲವು ವರ್ಷಗಳ ಹಿಂದೆ ಈ ಆಯಾತ-ನಿರ್ಗತಗಳ ಅಂಕೆಗಳು ಸುಮಾರು ಇದರ ಒಂದೂವರೆ—ಎರಡುಮಡಿಯಷ್ಟಿದ್ದುವು. ಕಾಫಿಯ ಕುಡಿತದ ಅಭ್ಯಾಸವು ಅನೇಕ ಸಮಾಜಗಳಲ್ಲಿ ತಡೆಯಲು ಬಾರದಷ್ಟು ಆಗಿರುವುದರಿಂದ, ಬೆಲೆಯು ಸ್ವಲ್ಪ ಹೆಚ್ಚಾದರೂ ಮಾರಾಟವು ನಿರಂತರವಾಗಿ ಉಳಿದೇ ಉಳಿಯುವುದು ಖಂಡಿತ.

—ಅರ್ಥ (ಮರಾಟಿ)

ಲಿಂಬೆಹಣ್ಣುಗಳನ್ನು ಮಿಕ್ಕ ಹಣ್ಣುಗಳಂತೆ ತಿನ್ನಲಿಕ್ಕೆ ಬರುತ್ತಿಲ್ಲವಾದರೂ ಆಹಾರದಲ್ಲಿಯೂ ಔಷಧಿಯಲ್ಲಿಯೂ ಅವುಗಳ ಉಪಯೋಗವು ತುಂಬ ಪ್ರಯೋಜನಕಾರಿಯಾಗಿದೆ.

**ಲಿಂಬೆಹಣ್ಣಿನ ಔಷಧೀಗುಣ**

ಈ ಹಣ್ಣು ಮೂಲತಃ ಹಿಂದುಸ್ಥಾನದ್ದು. ಕ್ರಿಸ್ತಶಕದ ಆನೆಯ ಶತಮಾನಕ್ಕೆ ಮೊದಲು ಯುರೋಪ್ ಖಂಡದವರಿಗೆ ಇದರ ಗುರುತು ಕೂಡ ಇರಲಿಲ್ಲ. ತೀರ ಮೊದಲಿನ ಕಾಲದಿಂದಲೂ ವೈದ್ಯಕವು ಇದರ ಗುಣಗಳನ್ನು ಕೊನೆದುಕೊಂಡಾಡುತ್ತ ಬಂದಿದೆ. ಲಿಂಬೆಹಣ್ಣು ಆಹಾರಕ್ಕೆ ರುಚಿಯನ್ನು ತಂದುಕೊಡುವುದೆಂಬ ಮಾತಂತೂ ಎಲ್ಲರಿಗೂ ಗೊತ್ತು. ಯುರೋಪ್ ದೇಶಗಳಲ್ಲಿ ಹುಳಿಯ ರುಚಿಗಾಗಿ 'ವಿನಿಗರ್' ಎಂಬುದನ್ನು ಉಪಯೋಗಿಸುತ್ತಿರುವರಾದರೂ, ಪಚನದ ವಿಚಾರದಲ್ಲಿ ಲಿಂಬೆಹಣ್ಣೆ ಹೆಚ್ಚು ಗುಣಕಾರಿಯೆಂಬ ಮಾತನ್ನು ಯುರೋಪಿನ ಡಾಕ್ಟರರೆಲ್ಲರೂ ಒಪ್ಪಿಕೊಳ್ಳುವರು. ಯುರೋಪಿನಲ್ಲಿ 'ಆಯ್‌ಸ್ಟರ್'ಗಳನ್ನು—ಜೀವಿಸಿದ್ದುವುಗಳನ್ನೆ—ತಿನ್ನುವುದರಿಂದ, ರೋಗಕ್ರಿಮಿಗಳು ಹೊಟ್ಟೆಯೊಳಕ್ಕೆ ಸೇರಬಹುದಾದ ಸಂದರ್ಭ ಹೆಚ್ಚಾಗಿರುವುದು. ಆದುದರಿಂದ ಲಿಂಬೆರಸವನ್ನು ಜೊತೆಗೆ ಸೇರಿಸಿ ತಿನ್ನುವುದರಿಂದ ಅಂತಹ ಕ್ರಿಮಿಗಳೆಲ್ಲ ಸತ್ತುಹೋಗುವುವು.

ಲಿಂಬೆಹಣ್ಣಿನ ಪಾನಕವನ್ನು ಕುಡಿಯುದ ಪದ್ಧತಿಯು ಜಗತ್ತಿನಲ್ಲೆಲ್ಲ ಪಸರಿಸಿರುವುದು. ಪಾನಕದೊಂದಿಗೆ ಲಿಂಬೆಹಣ್ಣಿನ ಮೇಲ್ದೊಗಟೆಯಲ್ಲಿಯ ಎಣ್ಣೆಯೂ ಸ್ವಲ್ಪ ಬೆರೆತುಕೊಳ್ಳುವುದು ಒಳ್ಳೆಯದೆಂದು ಡಾ. ಅಂರಿ ಲಕ್ಲೆರ್ ಅವರ ಅಭಿಪ್ರಾಯವಿದೆ. ನೂರು ಸೀ. ಸೀ. (ಕ್ಯೂಬಿಕ್ ಸೆಂಟಿಮೀಟರ್) ಯಷ್ಟು ಲಿಂಬೆಯ ರಸವನ್ನು ತೆಗೆದುಕೊಂಡರೆ ಅದರಲ್ಲಿ ಕೆಳಗೆ ಹೇಳಿದಂತೆ ಪದಾರ್ಥಗಳು ದೊರೆಯುತ್ತವೆ:—

| ಸಿಟ್ರಿಕ್ ಆಸಿಡ್ | ಏಳರಿಂದ ಏಳುವರೆ ಗ್ರಾಮಿನ ವರೆಗೆ |
|---|---|

CC-0. Jangamwadi Math Collection. Digitized by eGangotri

| | |
|---|---|
| ಮ್ಯಾಲಿಕ್ ಆಸಿಡ್ | ಸುಮಾರು ಅರ್ಧ ಗ್ರ್ಯಾಮ್ |
| ಸ್ಯಾಕ್ಯಾರೋಜ್ | [illegible] |
| ಸಕ್ಕರೆ (ಇನ್ವರ್ಟ್) | ಸುಮಾರು ಎರಡು ಗ್ರ್ಯಾಮ್ |
| ಕಾಲ್ಸಿಯಮ್ ಸಿಟ್ರೇಟ್ | ೧ ಗ್ರ್ಯಾಮ್ |
| ಪೊಟ್ಯಾಸಿಯಮ್ ಸಿಟ್ರೇಟ್ | ೧ ಗ್ರ್ಯಾಮ್ |

ಇವಲ್ಲದೆ ಲೋಹ,ರಂಜಕ (ಫಾಸ್ಫರಸ್)ಗಳೂ ಸೂಕ್ಷ್ಮ ಪ್ರಮಾಣದಲ್ಲಿರುವುವು.

ಲಿಂಬೆಹಣ್ಣುಗಳು ಹುಳಿಯಾಗಿರುವುದರಿಂದ, ಅವುಗಳ ಉಪಯೋಗದಿಂದ ದೇಹದಲ್ಲಿ ಆಮ್ಲತೆಯು ಬೆಳೆಯ ಬಹುದೆಂದು ಅನೇಕರು ತಿಳಿದುಕೊಳ್ಳಬಹುದು. ಆದರೆ ವಸ್ತುಸ್ಥಿತಿಯು ಅವರ ತಿಳಿವಳಿಕೆಗೆ ವಿಪರೀತವಾಗಿದೆ. ಆಮ್ಲತೆಯ ಆಧಿಕ್ಯದಿಂದ ಉಂಟಾದ ಅನೇಕ ರೋಗಗಳಿಗೆ ಲಿಂಬೆಹಣ್ಣೇ ಸರಿಯಾದ ಔಷಧಿಯಾಗಿರುವುದು. ಸಂಧಿವಾತ, ಲಂಬ್ಯಾಗೋ ಮೊದಲಾದುವುಗಳನ್ನು ಉದಾಹರಣೆಗೆಂದು ಹೇಳಬಹುದು. ಈ ರೋಗಗಳನ್ನು ಬೇರೆ ಹಣ್ಣುಗಳೂ-ಹೆಚ್ಚಾಗಿ ದ್ರಾಕ್ಷೆಯೂ ಮಾಣಿಸುವುವೆಂದು ಕೆಲವು ಜನರ ಅಭಿಪ್ರಾಯವಿದೆ. ಬಾಯಿಬಂದಾಗ ದೇಹದ ಒಳಗೂ ಹೊರಗೂ ಲಿಂಬೆಹಣ್ಣನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರೆ ಖಂಡಿತ ಗುಣವುಂಟು; ಆಗ ಅರ್ಧ ಲಿಂಬೆಹಣ್ಣನ್ನು ಬಾಯಿಬಂದ ಸ್ಥಳದಲ್ಲೆಲ್ಲ ತಿಕ್ಕಿ, ಮಿಕ್ಕ ಅರ್ಧವನ್ನು ನೆಕ್ಕಿನೆಕ್ಕಿ ತಿನ್ನಬೇಕು. ಈ ಕ್ರಮವನ್ನು ದಿನದಲ್ಲಿ ಅನೇಕ ಸಲ ನಡೆಯಿಸುತ್ತಿರಬೇಕು.

—ಫ್ರೆಂಚ್ ಡಾಕ್ಟರ್ ಫ್ರಾಂಸ್ವಾ ನಅನ್ವಿಲ್ ಅವರು

**ಹತ್ತಿಯ ವ್ಯಾಪಾರದ ಏರಿಳಿತಗಳು**

ಹತ್ತಿಯನ್ನು ಬೆಳೆಯಿಸುವುದರಲ್ಲಿ ಪ್ರಥಮ ಮರ್ಯಾದೆಯು ಹಿಂದುಸ್ಥಾನಕ್ಕೆ ಸಲ್ಲುತ್ತಿದ್ದಿತಾದರೂ ಇದರ ಸ್ಥಾನವೀಗ ಜಗತ್ತಿನಲ್ಲಿ ಮೂರನೆಯದೆಂದು ಗಣಿಸಲಾಗುತ್ತಿದೆ. 'ಬೆನ್ನ ಹಿಂದಿಂದ ಬಂದ ಕುನ್ನಿ ಭೂತವಾಗಿಬಿಟ್ಟಿತು' ಎಂಬ ಗಾದೆಯಂತೆ, ಅಮೇರಿಕೆಯು ಹತ್ತಿಯ ಹುಟ್ಟುವಳಿಯ-ವಿಚಾರದಲ್ಲಿ, ಎಲ್ಲಕ್ಕಿಂತ ಹಿಂದೆ ಇದ್ದುದು ಇಂದು ಮೊದಲನೆಯಸ್ಥಾನವನ್ನು ಪಡೆದು ನಿಂತಿದೆ.ಜಗತ್ತಿನ ಒಟ್ಟು ಹತ್ತಿಯ ಹುಟ್ಟುವಳಿಯಲ್ಲಿ ಅರ್ಧಕ್ಕಿಂತ ನಸುವೆ ಕಡಿಮೆ ಮಾತ್ರ ಅಮೇರಿಕೆಯಲ್ಲಿ ಬೆಳೆಯುತ್ತಿದೆ. ಹತ್ತಿಯ ಬೆಳೆಯು ವರು-ವರುಷಕ್ಕೂ ಉತ್ತಮವಾಗಿಯೇ ಬರುವುದೆಂದು ಹೇಳಲಿಕ್ಕೆ ಬಾರದು. ಐದು ವರ್ಷಗಳ ಬೆಳೆಯ ಸರಾಸರಿಯನ್ನು ವಿಮರ್ಶಿಸಿ ನೋಡಿದರೆ: ಎರಡು ವರ್ಷ ಉತ್ತಮ-ಬೆಳೆಯೂ ಒಂದು ವರ್ಷ ಮಧ್ಯಮ ಬೆಳೆಯೂ ಮಿಕ್ಕೆರಡು ವರ್ಷ ಕನಿಷ್ಠ ಬೆಳೆಯೂ ಬರುತ್ತದೆಯೆಂದು ಗೊತ್ತಾಗುವುದು. ಸರಕಾರದವರ ಆಡಳಿತಕ್ರಮವು ಜನಹಿತದ ದೃಷ್ಟಿ-ಯನ್ನಿಟ್ಟುಕೊಂಡು ಹೊರಟಿದ್ದಲ್ಲಿ, ಉತ್ತಮ ಬೆಳೆ ಬಂದಿದ್ದ ಹಂಗಾಮಿನಲ್ಲಿ, ಒಕ್ಕಲಿಗರು ಬೆಳೆದ ಮಾಲನ್ನು ಸರಕಾರವು ತನ್ನ ಅಧೀನಕ್ಕೆ ತೆಗೆದುಕೊಂಡು, ತನ್ನ ಬೊಕ್ಕಸದಿಂದಲೆ ಒಕ್ಕಲಿಗರಿಗೆ ಅದರ ಬೆಲೆಯ ಮೊಬಲಗನ್ನು ಸಲ್ಲಿಸುತ್ತಿರುತ್ತದೆ. ೧೯೩೭-೩೮ನೆಯ ಇಸ್ವಿಯಲ್ಲಿ, ಅಮೇರಿಕೆಯಲ್ಲಿ ಹತ್ತಿಯ ಬೆಳೆ ಚೆನ್ನಾಗಿ ಬಂದುದರಿಂದ, ಧಾರಣೆಯಿಳಿದು ವ್ಯಾಪಾರವು ತಗ್ಗಿ, ಒಕ್ಕಲಿಗರು ಹಾನಿಗೊಳಗಾಗುತ್ತಿರುವರೆಂಬುದು ಅಲ್ಲಿಯ ಸರಕಾರಕ್ಕೆ ಕಂಡುಬಂದೊಡಯೆ, ಒಕ್ಕಲಿಗರ ಬಳಿಯಲ್ಲಿದ್ದ ಹತ್ತಿಯನ್ನೆಲ್ಲ ಸರಕಾರವು ತನ್ನ ಸಂಗ್ರಹ-ದಲ್ಲಿರಿಸಿಕೊಂಡು, ಅವರಿಗೆ ಹಣವನ್ನು ಪೂರಯಿಸಿಕೊಟ್ಟ-ತಲ್ಲದೆ, ತಗ್ಗುತ್ತ ನಡೆದಿದ್ದ ವ್ಯಾಪಾರವನ್ನು ಒಂದು ಹಿಡಿತಕ್ಕೆ ತಂದು ನಿಲ್ಲಿಸಿತು. ಹೀಗೆ ಸಂಗ್ರಹಿಸಿಟ್ಟ ಹತ್ತಿಯು ಅಮೇರಿಕನ್ ಸರಕಾರದ ವಶದಲ್ಲಿ ಈ ವರ್ಷದ ಪ್ರಾರಂಭಕ್ಕೆ-೬೦ಲಕ್ಷ ಗಂಟುಗಳಷ್ಟು ಇದ್ದಿತೆಂದು ಗೊತ್ತಾಗುವುದು. ಈ ವರ್ಷದ ಹತ್ತಿಯ ಹುಟ್ಟುವಳಿಯು—ಜಗತ್ತಿನದೆಲ್ಲ ಸೇರಿ—ಸುಮಾರು ೩೧೦ ಲಕ್ಷ ಗಂಟಿನಷ್ಟಾಗಬಹುದೆಂದು ತಜ್ಞರ ಅಭಿಪ್ರಾಯ. ಕಳೆದ ವರ್ಷ ಜಗತ್ತಿನಲ್ಲೆಲ್ಲ ಸೇರಿ ೨೮೦ ಲಕ್ಷ ಗಂಟುಗಳಷ್ಟು ಹತ್ತಿಯನ್ನು ಉಪಯೋಗಿಸಿ ಸವೆಯಿಸಲಾಯಿತಂತೆ. ನಡೆಯುವ ವರ್ಷಕ್ಕೆ ೩೦೦ ಲಕ್ಷ ಗಂಟುಗಳು ಬೇಕಾಗಬಹುದೆಂದು ಸಾಧಾರಣವಾದ ಊಹೆಯಿದೆ. ಪ್ರತಿಯೊಂದು ರಾಷ್ಟ್ರದಲ್ಲಿಯೂ ನೂಲುವ ನೇಯುವ ಯಂತ್ರಗಳು ಹೆಚ್ಚಾಗುತ್ತಲಿವೆಯಾದುದರಿಂದ, ಈ ಊಹೆಗಿಂತ ಹೆಚ್ಚಿನ ಹತ್ತಿ ಬೇಕಾಗುವ ಸಂದರ್ಭವೂ ಇದೆ. ಸದ್ಯ ಜಾಗತಿಕಯುದ್ಧದ ಹುಯ್ಯಲು ಎಲ್ಲೆಲ್ಲಿಯೂ ಕೇಳಬರುತ್ತಿರುವುದರಿಂದ ರಬ್ಬರು, ತಾಮ್ರ, ಕಬ್ಬಿಣ ಮೊದಲಾದುವುಗಳ ಬೆಲೆಯು ಒಂದೆಸವನೆ ಏರಿಕೆಯ ಸ್ಥಿತಿಯಲ್ಲಿದೆ. ಆದರೆ ಹತ್ತಿಯು ಮಾತ್ರ ಒಮ್ಮೆ ಏರುತ್ತದೆ, ಇನ್ನೊಮ್ಮೆ ಇಳಿಯುತ್ತದೆ; ಈ ಏರಿಳಿತಗಳಿಗೆ ಕಾರಣವೇನು ಗೊತ್ತಿದೆಯೆ? ಇದಕ್ಕೆ ಬೇರೆ ಯಾವ ಕಾರಣವನ್ನೂ ಹೇಳಲಿಕ್ಕೆ ಬರುವಂತಿಲ್ಲ. ಅಮೇರಿಕೆಯ ಸರಕಾರವು ಸಂಗ್ರಹಿಸಿ ಇಟ್ಟುಕೊಂಡಿದ್ದ ೬೦ಲಕ್ಷ ಗಂಟುಗಳ ಹತ್ತಿಯೆ ಈ ಏರಿಳಿತಗಳ ಸೂತ್ರವನ್ನು ಕೈಯಲ್ಲಿ ಹಿಡಿದುಕೊಂಡು ನಿಂತಂತಾಗಿದೆ. ಹತ್ತಿಯ ದರವು ಸ್ವಲ್ಪ ಮೇಲಕ್ಕೇರಿತೋ, ಕೂಡಲೆ ಅಮೇರಿಕನ್ ಸರಕಾರವು ತನ್ನ ಹತ್ತಿಯ ಗಂಟು-

CC-0. Jangamwadi Math Collection. Digitized by eGangotri

ಗಳನ್ನು ಮಾರಲಿಕ್ಕೆಂದು ಹೊರಕ್ಕೆ ತರುವುದು. ನಸುವೆ ಬೆಲೆ ತಗ್ಗಿತೆಂದರೆ ಕೂಡಲೆ ಅವುಗಳನ್ನು ಹಿಂದಕ್ಕೆ ತೆಗೆದು-ಕೊಳ್ಳುವುದು. ಈಗ ಹಿಂದುಸ್ಥಾನದಲ್ಲಿಯ ಭಡೋಚ್ ಹತ್ತಿಯು ನ್ಯೂಯಾರ್ಕ್‌ನಗರದ ವ್ಯಾಪಾರವನ್ನು ಅವಲಂ-ಬಿಸಿಕೊಂಡು ನಿಂತಿರುವುದು. ನ್ಯೂಯಾರ್ಕಿನ ಅಮೇರಿಕನ್ ಹತ್ತಿಯು ೧೨ಪಾಯಿಂಟಿಗೆ ಇಳಿದಾಗ,ಭಡೋಚದ ಹತ್ತಿಯ ಧಾರಣೆಯೂ ತಗ್ಗಿತು. ಅದೇ ಅಮೇರಿಕೆಯ ಹತ್ತಿ ೧೪ ಪಾಯಿಂಟಿಗೇರಲು ಭಡೋಚದ ಹತ್ತಿ ೨೪ಂಕ್ಕೆ ಏರಿ-ನಿಂತಿತು. ಈ ಹತ್ತಿಯ ದರದ ಏರಿಳಿತಗಳ ಪಾರಜವು ನ್ಯೂಯಾರ್ಕಿನ ಮಾರ್ಕೇಟಿನ ವಾತಾವರಣವನ್ನು ಅವಲಂಬಿಸಿಕೊಂಡಿದೆ. ಅಲ್ಲಿಯ ವಾತಾವರಣವನ್ನು ಉಲ್ಲೋಲಕಲ್ಲೋಲಗೊಳಿಸುವ ಸಾಮರ್ಥ್ಯವು ಅಮೇರಿ-ಕೆಯ ಸರಕಾರದ ಕೈಯಲ್ಲಿದೆ. ಅದರ ಸಾಮರ್ಥ್ಯ-ಸೂತ್ರದ ಆಲ್ಲಾಟವನ್ನು ಭಾರತದಲ್ಲಿಯ ಹತ್ತಿಯ ವ್ಯಾಪಾರಿಗಳು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸುತ್ತಲಿದ್ದು ತಮ್ಮ ಕೊಡು-ಕೊಳ್ಳುವ ವ್ಯವಹಾರನ್ನು ಸಾಗಿಸುತ್ತಿದ್ದ-ರೆಯೆ ಅವರಿಗೆ ಲಾಭದೊರೆಯಬಹುದು. ಏನಾದರೇನು? ಭಾರತೀಯ ಸರಕಾರವೂ ಅಮೇರಿಕನ್ ಸರಕಾರದಂತೆ ಹತ್ತಿಯ ವ್ಯಾಪಾರದ ವಿಚಾರದಲ್ಲಿ ಜನಹಿತದೃಷ್ಟಿಯಿಂದ ನಡೆಯದೆ ಇದ್ದರೆ ಹೊರಗಿನವರ ಮೇಲಾಟವನ್ನು ತಡೆಯುವುದು ನಮ್ಮ ವ್ಯಾಪಾರಿಗಳಿಂದ ಸಾಧ್ಯವೇ ಇಲ್ಲ.

—ಪ್ರಾವೀಣ್ಯ ( ಮುಂಬಯಿ )

**ಅಟ್ಲಾಂಟಿಕ್ ಪರ್ಯಟಣದ ಮೇಲಾಟಗಳು**

ಅಟ್ಲಾಂಟಿಕ್ ಮಹಾಸಾಗರದ ಶೀಘ್ರಪರ್ಯಟನದ ಇತಿಹಾಸಕ್ಕೆ ಈಗ ಸುಮಾರು ೭೦ವರ್ಷಗಳಿಂದ ಪ್ರಾರಂಭ-ವಾಯಿತು. ಕ್ರಿ. ಶ ೧೮೭೦ರಲ್ಲಿ ಇಂಗ್ಲೆಂಡಿನ 'ವೈಟ್‌ಸ್ಟಾರ್' ಕಂಪನಿಯವರು ಕಟ್ಟಿಸಿದ 'ಓಶಾನಿಕ' ಎಂಬ ಹಡಗು ಅನೇಕ ವರ್ಷಗಳ ವರೆಗೂ ಅಟ್ಲಾಂಟಿಕ್ ಮಹಾಸಾಗರದಲ್ಲಿ ಮುಂದಾಳಾಗಿ ಮೆರೆಯು-ತ್ತಿದ್ದಿತು. ಮುಂದೆ ಬಹುಕಾಲದ ತರುವಾಯ ಎಂದರೆ ೧೯೦೭ರಲ್ಲಿ ಮೊರಿಟ್ಯಾನಿಯಾ ( Mauretania ) ಎಂಬ ಹೆಸರಿನ ಉಗೆಹಡಗು ಐರ್ಲೆಂಡಿನಿಂದ ನ್ಯೂಯಾರ್ಕ್‌ದ ವರೆಗಿನ ಅಂತರವನ್ನು ೪ ದಿನ ೧೦ ತಾಸುಗಳಲ್ಲಿ ಮುಗಿಸಿ ಮೇಲಿನ ಸ್ಥಾನವನ್ನು ಹೊಸತಾಗಿಯೆ ಸಂಪಾದಿಸಿಕೊಂಡಿತು. ಮುಂದೆ ೧೯೨೪ರಲ್ಲಿ ಇದೇ ಉಗೆಹಡಗು ಮೊದಲಿಗಿಂತ ಹೆಚ್ಚಿನ ವೇಗವನ್ನು ಕ್ರಮಿಸಿ, ನ್ಯೂಯಾರ್ಕಿನಿಂದ ಚೆರ್-ಬೋರ್ಗಿನವರೆಗೆ ೫ ದಿನ ೧ ತಾಸು ೪೯ ಮಿನಿಟುಗಳಲ್ಲಿ ಪ್ರಯಾಣವನ್ನು ಮಾಡಿತು. ಇದಾದ ಮೇಲೆ ಈ ಶೀಘ್ರ-ಪರ್ಯಟನದ ಮೇಲಾಟದಲ್ಲಿ, ಯುರೋಪಿನ ಬೇರೆ ರಾಷ್ಟ್ರ-ಗಳೂ ಭಾಗವಹಿಸಲು ತೊಡಗಿದುವು. ಜರ್ಮನಿಯ 'ಬ್ರೆಮೆನ್ (Bremen)' ಎಂಬ ಹಡಗು, ಇಟಲಿಯ 'ರೆಕ್ಸ್ ( Rex )' ಎಂಬ ಹಡಗು ಎರಡರಲ್ಲಿಯೂ ಮೇಲಾಟವು ನಡೆದು, ಅದರಲ್ಲಿ 'ರೆಕ್ಸ್' ಹಡಗು ೨೯·೯೮ ನಾಟ್ಸ್ (ಸಮುದ್ರಮಾರ್ಗಕ್ರಮಣದ ಒಂದು ವಿಶಿಷ್ಟವಾದ ಅಂತರದಳತೆ)ಗಳ ವೇಗದಿಂದ ಎಂದರೆ ಬ್ರೆಮೆನ್ನಿಗಿಂತ ೧ ನಾಟ್ ಹೆಚ್ಚಿನ ವೇಗದಿಂದ ನಡೆದು, ಅಟ್ಲಾಂಟಿಕ್ ಮಹಾಸಾಗರವನ್ನು ಕ್ರಮಿಸಿತು.

ಮುಂದೆ ೧೯೩೫ನೆಯ ಜೂನ್ ತಿಂಗಳಲ್ಲಿ, ಫ್ರಾನ್ಸ್ ದೇಶದ 'ನಾರ್ಮಂಡಿ' (Normandie)' ಎಂಬ ಹೆಸರಿನ ಪ್ರಚಂಡವಾದ ಉಗೆಹಡಗಂತೂ ಮೊದಲಿನವೆಲ್ಲವನ್ನೂ ಮಿಕ್ಕಿ ಮೀರಿ ನಿಂತಿತು. ಆಗ ಅದು ತನ್ನ ಮೊದಲನೆಯ ಪಯಣದಲ್ಲಿಯೆ—'ಸಿಲಿ (Seilly)' ದ್ವೀಪದಲ್ಲಿರುವ 'ಬಿಶಪ್‌ಸ್‌ರಾಕ್'ಎಂಬಲ್ಲಿಂದ ನ್ಯೂಯಾರ್ಕಿನ ಬಳಿಯಲ್ಲಿರುವ 'ಅಂಬ್ರೋಜ್ ಚಾನಲ್ ಲೈಟ್‌ಶಿಪ್' ಎಂಬ ಪ್ರದೇಶ ವರೆಗಿನ ೩೦೧೫ ಸಮುದ್ರದ ಮೈಲು (nautical miles) ಗಳನ್ನು ಬರೀ ೪ ದಿವಸ ೬ ಮಿನಿಟು ೨೩ ಸೇಕಂದುಗಳಲ್ಲಿ ದಾಟಿಹೋಯಿತು. ಈ ಹಡಗಿನ ವೇಗದ ಪ್ರಮಾಣವು ೩೦·೩೧ ನಾಟ್ಸನಂತೆ ಬಿದ್ದಂತಾಯಿತು.

ಕಳೆದ ವರ್ಷದ ಆಗಸ್ಟ್‌ತಿಂಗಳಲ್ಲಿ "ಕ್ವೀನ್‌ಮೇರಿ" ಎಂಬ ಹೆಸರಿನ ತೀವ್ರಗಾಮಿಯಾದ ಉಗೆಹಡಗು, ಹೋಗಿ ಬರುವ ಅವಧಿಯ ವಿಚಾರದಲ್ಲಿ ತುಂಬ ಮೇಲಿನ ಸ್ಥಾನ-ವನ್ನು ಪಡೆದಿದೆ. ಅದು ಸ್ವದೇಶಕ್ಕೆ ಮರಳಿ ಬರುವಾಗ ಹತ್ತಿರಿನ ಮಾರ್ಗವನ್ನು ಸ್ವೀಕರಿಸಿತಾದುದರಿಂದ ಎರಡೂ ಸ್ಥಳಗಳ ನಡುವೆ ಇದ್ದ ೨೯೦೮ ಮೈಲುಗಳ ಅಂತರ-ವನ್ನು ಕೇವಲ ೩ ದಿನ ೨೩ ತಾಸು ೫೭ ಮಿನಿಟುಗಳಲ್ಲಿ ಕ್ರಮಿಸಿತು (ತಾ. ೩೦ ಆಗಸ್ಟ ೧೯೩೭). ಇದ-ರಿಂದ "ನಾರ್ಮಂಡಿ" ಹಡಗಿಗಿಂತ ಇದಕ್ಕೆ ೩ ತಾಸು ೩೧ ಮಿನಿಟುಗಳ ವೇಳೆ ಕಡಿಮೆ ಹತ್ತಿದಂತಾಯಿತು. ಅಮೇ-ರಿಕೆಗೆ ಹೋಗುವಾಗ ಮಾತ್ರ ಇದಕ್ಕೆ ೪ ದಿವಸ ೨೭ ಮಿನಿಟುಗಳ ಅವಧಿ ಬೇಕಾಗಿದ್ದಿತು. ಆಗ ಇದರ ವೇಗದ ಪ್ರಮಾಣವು ೩೦.೧೪ ನಾಟ್ಸನಂತೆ ಇದ್ದಿತು.

CC-0. Jangamwadi Math Collection. Digitized by eGangotri

### 'ಕ್ವೀನ್ ಮೇರಿ' ಉಗೆಹಡಗಿನ ಚರಿತ್ರೆ

ಈ ಉಗೆಹಡಗು 'ಕನಾರ್ಡ್ ವೈಟ್‌ಸ್ಟಾರ್' ಕಂಪನಿಯದಿದ್ದು ೧೯೩೪ನೆಯ ಇಸ್ವಿಯ ಸಪ್ಟೆಂಬರ್ ತಿಂಗಳಲ್ಲಿ ಮೇರೀ ಮಹಾರಾಣಿಯವರಿಂದ ಇದರ ನಾಮಕರಣ ಮಹೋತ್ಸವವು ಜರುಗಿತು. ಆಗಲೆ ಇದನ್ನು ನೀರಲ್ಲಿ ತೇಲಲು ಬಿಟ್ಟಾಯಿತು. 'ಸೌಥ್ಯಾಪ್ಟನ' 'ದಿಂದ 'ನ್ಯೂಯಾರ್ಕ್' ವರೆಗೆ— ಇದಕ್ಕೆ ಮೊದಲು— ಪ್ರತಿವಾರದಲ್ಲಿಯೂ ತಿರುಗಾಡಿಸಲಾಗುತ್ತಿದ್ದ ಮೂರು ಉಗೆಹಡಗುಗಳನ್ನು ಕಡಿಮೆ ಮಾಡಿ, ಎರಡನ್ನೇ ಓಡಾಡಿಸಬೇಕೆಂಬ ಮುಖ್ಯೋದ್ದೇಶದಿಂದಲೇ ಈ ಪ್ರಚಂಡವಾದ ಉಗೆಹಡಗನ್ನು ಕಟ್ಟಲಾಯಿತು. ಈ ಹಡಗಿನ ಭಾರವು ೮೦,೭೭೩ ಟನ್ನುಗಳಷ್ಟಿದ್ದು, ಪ್ರವಾಸಿಗಳೂ ಹಡಗಿನ ಕೂಲಿಗಳೂ ಸೇರಿ ೨೫೫೦ ಜನರ ಪ್ರಯಾಣಸೌಕರ್ಯವನ್ನು ಇದರಲ್ಲಿ ಮಾಡಲಾಗಿದೆ. ಎಲ್ಲಬಗೆಯ ಆಧುನಿಕ ಸುಖಾನುಕೂಲ್ಯಗಳನ್ನೂ ಇದರಲ್ಲಿ ಕಲ್ಪಿಸಲಾಗಿದೆ. ಇದನ್ನು ಸಿದ್ಧಗೊಳಿಸುವುದಕ್ಕೆ ೬೦ ಲಕ್ಷ ಪೌಂಡುಗಳ ವೆಚ್ಚವಾಯಿತೆಂದು ಹೇಳುತ್ತಾರೆ.

### 'ನಾರ್ಮಂಡೀ' ಹಡಗಿನ ಹೊಸಗೆಲವು

'ಕ್ವೀನ್‌ಮೇರೀ' ಹಡಗು ತನ್ನನ್ನು ಹಿಂದೊಗೆದುದನ್ನು ಕಂಡು 'ನಾರ್ಮಂಡೀ' ಹಡಗು ಅದನ್ನು ಗೆಲ್ಲಬೇಕೆಂದು ಮತ್ತೆ ನಿರ್ಣಯಿಸಿತು. ಅದರಂತೆಯೆ ಅದು ಮೊನ್ನೆ ಮೊನ್ನೆಯೆ ತನ್ನ ಪೂರ್ವಾಭಿಮುಖ ಪ್ರಯಾಣದಲ್ಲಿ ( West to East Crossing ) 'ಕ್ವೀನ್‌ಮೇರಿ'ಯ ಶ್ರೇಯಸ್ಸನ್ನು ಸುಲಿಗೆಮಾಡಿಬಿಟ್ಟಿತು. ಕಳೆದ ಮಾರ್ಚ್ ತಿಂಗಳಲ್ಲಿ ನ್ಯೂಯಾರ್ಕಿನಿಂದ ಸೌಥ್ಯಾಪ್ಟನ್ನಿನ ವರೆಗಿನ ಪ್ರವಾಸದಲ್ಲಿ ೩೦. ೯೯ ನಾಟ್ಸಿನ ಸಾಮಾನ್ಯವಾದ ಗತಿಯಿಂದ ನಡೆದು, 'ಕ್ವೀನ್‌ಮೇರಿ'ಯ ಮೇಲಿನ ಸ್ಥಾನವನ್ನು ಕೆಳಕ್ಕೆ-ಹಾಕಿ-ಬಿಟ್ಟಿದೆ. 'ಅಂಬ್ರೊಜ್ ಲೈಟ್‌ಶಿಪ್'ನಿಂದ ಬಿಶಪ್ಸ್-ರಾಕ್'' ವರೆಗಿನ ೨೯೭೮ ಮೈಲುಗಳ ಅಂತರವನ್ನು ಬರೀ ೪ ದಿನ ೬ ಮಿನಿಟು ೨೩ ಸೇಕಂಡುಗಳಲ್ಲಿ ಅದು ದಾಟಿನಡೆದಿದೆ. (ತಾ. ೨೨ ಮಾರ್ಚ್ ೧೯೩೭). ಇದರ ಮೊದಲಿನ ಮೂರು ದಿನಗಳ ವೇಗಪ್ರಮಾಣವಂತೂ ೩೧·೦೨ ನಾಟ್ಸಿನಷ್ಟಿದ್ದಿತು. ಕಳೆದ ಎರಡು ವರ್ಷದ ಅವಧಿಯಲ್ಲಿ ಅಟ್ಲಾಂಟಿಕ್ ಮಹಾಸಾಗರದ ಶೀಘ್ರಪರ್ಯಟನದ ಮೇಲಾಟದಲ್ಲಿ ಮೂರು ಬಾರಿ 'ರೆಕಾರ್ಡ್‌ಬ್ರೆಕ್' ಗಳಾದುವು. 'ನಾರ್ಮಂಡಿ' 'ಕ್ವೀನ್‌ಮೇರಿ' ಇವೆರಡೂ ಹಡಗುಗಳಲ್ಲಿರುವ ಈರ್ಷೆಯು ಹೀಗೆಯೆ ಮುಂದುವರಿಯುವುದೆಂದು ತೋರುವುದು. ಈ ಮೇಲಾಟದಲ್ಲಿ ಗೆಲವನ್ನು ಪಡೆಯುವುದೆಂದರೆ ವರ್ಷವೊಂದಕ್ಕೆ ಏನಿಲ್ಲವೆಂದರೂ ೨೦ ಲಕ್ಷ ಪೌಂಡುಗಳಷ್ಟು ಹೆಚ್ಚಿನ ಹುಟ್ಟುವಳಿಯನ್ನು ಸಂಪಾದಿಸುವುದು ಆಗಿದೆ.

—ಸಹ್ಯಾದ್ರಿ

---

# ಕನ್ನಡದ ಮುನ್ನಡೆ

### ಸಂಘ—ಸಂಸ್ಥೆಗಳ ಚಟುವಟಿಕೆಗಳು

ಬಳ್ಳಾರಿಯ ಕರ್ನಾಟಕ ಏಕೀಕರಣಸಂಘದ ಕಾರ್ಯದರ್ಶಿಗಳಾದ ಶ್ರೀಮಾನ್ ಚಂದ್ರಶೇಖರ ಶಾಸ್ತ್ರಿಗಳು, ಮದ್ರಾಸ್ ಇಲಾಖೆಯ ವಿದ್ಯಾವಿಭಾಗದ ಮುಖ್ಯಾಧಿಕಾರಿಗಳಾದ ಮಿ. ಆರ್. ಎಂ. ಸ್ಟ್ಯಾಥ್ ಅವರ ಕಡೆಗೆ ಹೋಗಿ, ತಮ್ಮ ಸಂಘದ ಆಶೆ-ಅಪೇಕ್ಷೆಗಳ ವಿವರಣೆಯನ್ನೊಳಗೊಂಡ ಓಲೆಯೊಂದನ್ನು ಒಪ್ಪಿಸಿದರು. ಅದರಲ್ಲಿ 'ಬಳ್ಳಾರಿಯ ಶಾಲೆಗಳಲ್ಲಿ ಕನ್ನಡಕ್ಕೆ ಸ್ಥಾನವು ದೊರೆಯಬೇಕು; ಪ್ರಾಥಮಿಕ ಶಾಲೆಗಳಲ್ಲೆಲ್ಲ ಕನ್ನಡವನ್ನೆ ಕಲಿಸುವ ಏರ್ಪಾಡಾಗಬೇಕು; ಜಿಲ್ಲೆಯ ಪೂರ್ವಭಾಗದ ಆದವಾನಿ, ಆಲೂರು, ರಾಯದುರ್ಗ ತಾಲ್ಲೂಕುಗಳಲ್ಲೂ ಕನ್ನಡಕ್ಕೆ ಸ್ಥಾನವು ಸಿಕ್ಕಬೇಕು' ಈ ಮೊದಲಾದ ಬೇಡಿಕೆಗಳಿವೆ. ಮುಖ್ಯಾಧಿಕಾರಿಗಳು ಡಿವಿಜನಲ್ ಇನ್‌ಸ್ಪೆಕ್ಟರ್ ಅವರ ಕಡೆಗೆ ಈ ವಿಚಾರವನ್ನು ಸಂಪೂರ್ಣವಾಗಿ ವಿಮರ್ಶಿಸಿ, ವರದಿಯನ್ನು ಒಪ್ಪಿಸಬೇಕೆಂದು ಹೇಳಿದ್ದಾರೆ. ಅಧಿಕಾರಿಗಳು ಅಧಿಕಪ್ರಸಂಗತನ ಮಾಡದಿದ್ದರೆ ಚೆನ್ನು !

ಬಳ್ಳಾರಿ ಜಿಲ್ಲೆಯ ಕಾಂಗ್ರೆಸ್ ಕಮಿಟಿಯ ಸಾಧಾರಣ ಸಭೆಯು ಕಳೆದ ಜುಲೈ ತಿಂಗಳ ೧೧ನೆಯ ತಾರೀಖಿಗೆ ಸೇರಿ, ಕನ್ನಡದ ವಿಚಾರದಲ್ಲಿ ಕೆಳಗೆ ಬರೆದಂತೆ ಗೊತ್ತುವಳಿಯೊಂದನ್ನು ಮಾಡಿದೆ.

" ಬಳ್ಳಾರಿಯ ನಗರದಲ್ಲಿ ಕಾಂಗ್ರೆಸ್ ಸದಸ್ಯರ ಪತ್ರಿಕೆಗಳು ಕನ್ನಡದಲ್ಲಿಯೆ ಇರಬೇಕು; ಚುನಾವಣೆಯ

CC-0. Jangamwadi Math Collection. Digitized by eGangotri

ಜಾಹೀರಾತುಗಳೂ ಉಪನ್ಯಾಸಗಳೂ ಕನ್ನಡದಲ್ಲಿ ನಡೆಯಬೇಕು. ಹೆಚ್ಚಿನ ಜನರು ಯಾವ ಮಾತೃಭಾಷೆಯನ್ನು ಬೇಡುತ್ತಾರೋ ಆ ಭಾಷೆಯಲ್ಲಿ ಉಪನ್ಯಾಸಗಳಾಗಬೇಕು. ಉಪನ್ಯಾಸಕನಿಗೆ ಕನ್ನಡವು ಬಾರದಿದ್ದಲ್ಲಿ, ಆತನ ಭಾಷಣದ ಭಾಷಾಂತರವು ಕನ್ನಡದಲ್ಲಿಯೆ ಆಗುವಂತೆ ಏರ್ಪಾಡಾಗಬೇಕು. ಕನ್ನಡಭಾಷೆಯ ಏಳಿಗೆಯ ವಿಚಾರದಲ್ಲಿ ಕಾಂಗ್ರೆಸ್ಸಿನವರೂ ಹೋರಾಡಬೇಕು! ”

ಬಳ್ಳಾರಿಯ ಕಾಂಗ್ರೆಸ್ ಕಾರ್ಯಕರ್ತರಿಗೆ ಜಯಕರ್ನಾಟಕದ ಅನೇಕ ಅಭಿನಂದನೆಗಳು.

‘ ದಿವಂಗತ ಶ್ರೀ. ಎ. ಇ. ಭಾಸ್ಕರರಾಯರ ಜ್ಞಾಪಕಸ್ಪರ್ಧೆ ’ ಎಂಬ ಹೆಸರಿನ ಸಾಹಿತ್ಯಸ್ಪರ್ಧೆಯೊಂದನ್ನು, ಬೆಂಗಳೂರಿನ ಕ. ಸಾ. ಪರಿಷತ್ತು ವರುವರುಷಕ್ಕೂ ನಡೆಯಿಸಲಿದೆ. ದಿವಂಗತರ ತಾಯಿ ಶ್ರೀಮತಿ ಎ. ಶೇಷಮ್ಮನವರು, ಪರಿಷತ್ತಿಗೆ ಸಲ್ಲಿಸಿದ ಜ್ಞಾಪಕನಿಧಿಯಿಂದ ಈ ಸ್ಪರ್ಧೆಯಲ್ಲಿ ಜಯಶೀಲರಾದವರಿಗೆ ಬಹುಮಾನ ದೊರೆಯುತ್ತದೆ. ಈ ವರ್ಷ (೧೯೩೭) ಕನ್ನಡಸಾಹಿತ್ಯ ವಿಚಾರ ಪ್ರಬಂಧಸ್ಪರ್ಧೆಯೊಂದನ್ನು ಏರ್ಪಡಿಸಿದ್ದು, ಆ ಪ್ರಬಂಧವು “ ತೊರವೆ ರಾಮಾಯಣದ ವಿಮರ್ಶೆ ” “ ಕನಕದಾಸರ ಕೃತಿಗಳ ವಿಮರ್ಶೆ ” ಇವೆರಡರಲ್ಲಿ ಯಾವುದಾದರೂ ಒಂದು ವಿಷಯವನ್ನು ಒಳಗೊಂಡುದಿರಬೇಕೆಂದು ನಿರ್ಣಯಿಸಲಾಗಿದೆ. ಸ್ಪರ್ಧೆಗೆ ಬರಲಿರುವ ಪ್ರಬಂಧವು ಪೂಲ್ಸ್‌ಕ್ಯಾಪ್ ಆಕಾರದ ೨೦-೨೫ ಪುಟಗಳ ಪರಿಮಿತಿಯಲ್ಲಿ ಇರಬೇಕು. ೧೯೩೭ ನೆಯ ಸಪ್ಟಂಬರ್ ೩೦ ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಾರ್ಯಾಲಯಕ್ಕೆ ಅದು ತಲ್ಪಬೇಕು. ಅತ್ಯುತ್ತಮವೆಂದು ನಿರ್ಣಯಿಸಲಾದುದಕ್ಕೆ ೨೦ ರೂಪಾಯಿಗಳ ಪಾರಿತೋಷಿಕ ದೊರೆಯುವುದು. ಪ್ರಬಂಧವನ್ನು ಯಾರು ಬೇಕಾದರೂ ಬರೆಯಬಹುದು. ಉತ್ಸಾಹಿಗಳಾದ ತರುಣಸಾಹಿತಿಗಳು ಅವಶ್ಯವಾಗಿಯೂ ಸ್ಪರ್ಧೆಯಲ್ಲಿ ಭಾಗವಹಿಸಬೇಕು.

ಕನ್ನಡಸಾಹಿತ್ಯ—ಸಂಸ್ಕೃತಿಗಳ ಪ್ರಚಾರ--ಪ್ರಸಾರ

**ಶ್ರೀವಿದ್ಯಾರಣ್ಯರ ಪುಣ್ಯತಿಥಿಯ ದಿನಾಚರಣೆಯು** ಈ ಸಲ ಅಖಿಲಕರ್ನಾಟಕದಲ್ಲಿಯೂ ವಿಜೃಂಭಣೆಯಿಂದ ನೆರವೇರಿತು. ಕರ್ನಾಟಕ ಸಂಸ್ಕೃತಿಯಿಂದ ಸಿಡಿದು ದೂರಕ್ಕೆ ಬಿದ್ದಿರುವ ಭಾಗಗಳಲ್ಲಿಯೂ ಈ ಉತ್ಸವವು ನಡೆದುದು ಈ ಸಲದ ವಿಶೇಷವಾಗಿದೆ.

**ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ** ‘ತುಂಬಿಗಳ ಬಳಗ’ ಎಂಬ ಹೆಸರಿನ ಕರ್ನಾಟಕ ವಿದ್ಯಾರ್ಥಿ ಸಂಘವೊಂದು, ಕಳೆದ ೧೦-೭-೩೭ ನೆಯ ದಿನ ಶ್ರೀಮಾನ್ ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಪ್ರತಿಷ್ಠೆಗೊಂಡಿತು.

**ಹೊಸಪೇಟೆಯಲ್ಲಿ** ಕಳೆದ ತಿಂಗಳ ೨೪-೭-೩೭ ನೆಯ ದಿನ, ವಿದ್ವಾನ್ ಎಚ್. ರಾಮರಾವ್ ಎಂ. ಎ. ಎಲ್. ಟಿ. ಅವರ ಅಧ್ಯಕ್ಷತೆಯಲ್ಲಿ ‘ ವಿದ್ಯಾನಗರ ಕನ್ನಡ ಸಾಹಿತ್ಯ ಸಮಿತಿ ’ ಎಂಬ ಸಂಸ್ಥೆಯು ಸ್ಥಾಪಿತವಾಯಿತು. ವಿಜಯನಗರದ ಗತವೈಭವವನ್ನು ಸ್ಮರಣೆಗೆ ತರುವುದಾಗಿಯೂ, ಜನರಿಗೆ ಕನ್ನಡ ಸಾಹಿತ್ಯದ ಪರಿಚಯು ಮಾಡಿಕೊಡುವುದಾಗಿಯೂ ಆಗಾಗ ನವೀನಗ್ರಂಥಗಳನ್ನು ಹೊರಡಿಸಿ ಕರ್ನಾಟಕ ಭಾಷಾಸಂಪತ್ತಿಯನ್ನು ಅಭಿವೃದ್ಧಿಗೊಳಿಸುವುದಾಗಿಯೂ, ಈ ಸಂಘವು ಗುರಿಯನ್ನಿಟ್ಟುಕೊಂಡಿದೆ. ಸಂಘದ ಕಾರ್ಯಕಾರಿಮಂಡಲದ ಸ್ಥಾಪನೆಯೂ ಆಗಿದೆ. ಹೊಸಪೇಟೆಯಲ್ಲಿ ಇಂತಹ ಸಂಸ್ಥೆಯ ಅವಶ್ಯಕತೆಯು ತುಂಬ ಇದ್ದಿತು. ಈಗದು ಮೈದೋರಿದೆ. ಬೆಳೆದು ಬಾಳಿ ಕಾರ್ಯಕಾರಿಯಾಗಿ ಪರಿಣಮಿಸಲಿ!

**ಬೆಳಗಾಂವಿ ಜಿಲ್ಲೆಯ ಗೋಕಾವಿಯಲ್ಲಿ**, ಶ್ರೀಮಾನ್ ಕೆ. ಟಿ. ಪುರಾಣಿಕ ಬಿ. ಎ. (ಆನರ್ಸ್) ಅವರ ನೇತೃತ್ವದಲ್ಲಿ ಕರ್ನಾಟಕಸಂಘದ ಪ್ರತಿಷ್ಠೆಯಾಗಿದೆ. ಈ ಸಂಘವು ‘ **ಪಂಜು** ’ ಎಂಬ ಹೆಸರಿನ ಕೈಬರೆಹದ ಪತ್ರಿಕೆಯೊಂದನ್ನು ಹೊರಡಿಸುವುದಲ್ಲದೆ, ಸಾಹಿತ್ಯಪ್ರಚಾರಕ್ಕೆ ಅನುಕೂಲವಾಗುವಂತಹ ಸನ್ನಿವೇಶಗಳನ್ನು ಅಲ್ಲಿ ಒದಗಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡಿದೆ. ಗೋಕಾವಿಯ ಜಾನಪದ ಕನ್ನಡನುಡಿ ತುಂಬ ಕುಸುರಿನಿಂದ ಕೂಡಿದುದು. ಸಂಘವು ಆ ದೃಷ್ಟಿಯಿಂದ ತನ್ನ ಕಾರ್ಯವನ್ನಾರಂಭಿಸಿದಲ್ಲಿ, ಕನ್ನಡನುಡಿಯ ಪರಿಪುಷ್ಟಿಗೆ ಅನುಕೂಲವಾದೀತು!

**ಮೈಸೂರು ಆಸ್ಥಾನ ಸಂಗೀತವಿದ್ವಾನ್** ಶ್ರೀ. ದೇವೇಂದ್ರಪ್ಪನವರ ಶಿಷ್ಯರಾದ ಸಂಗೀತವಿದ್ವಾನ್ ಸಿ. ಎಸ್ ನಾರಾಯಣಶಾಸ್ತ್ರಿಗಳವರು ವೀರಶೈವವಚನಗಳನ್ನು ರಾಗತಾಳಗಳಲ್ಲಿ ಹಾಡುವ ಹೊಸ ಉಪಕ್ರಮವನ್ನು ಪ್ರಾರಂಭಿಸಿದ್ದಾರೆ. ಕರ್ನಾಟಕದ ಪ್ರತಿಯೊಂದು ಸಾಂಸ್ಕೃತಿಕ ಚಟುವಟಿಕೆಯಲ್ಲಿಯೂ ಕನ್ನಡನುಡಿಗೆ ಮೊದಲನೆಯ ಸ್ಥಾನವನ್ನು ಕೊಟ್ಟಾಗಲೆ ಅದಕ್ಕೆ ಬೆಳೆದು ಬಾಳಲು ಅನುಕೂಲವಾಗುವುದು.

**ಶ್ರೀಮಾನ್** ವೀರಭದ್ರಪ್ಪನವರು ಹಾಲಭಾವಿ ಬಿ. ಎ. ಎಲ್ ಎಲ್. ಬಿ. ಅವರ ಅಧ್ಯಕ್ಷತೆಯಲ್ಲಿ ‘ ಪುಲಕೇಶಿ ಪಿಕ್ಚರ್ಸ್ ’ ಎಂಬ ವಾಕ್ಪಟಸಂಸ್ಥೆಯು ಸ್ಥಾಪಿತವಾಗಿದ್ದು, ಈ ಸಂಸ್ಥೆಯು ಬೇಗನೆ ‘ಶ್ರೀಬಸವೇಶ್ವರ

CC-0. Jangamwadi Math Collection. Digitized by eGangotri

ಎಂಬ ಕನ್ನಡ ವಾಕ್ಪಟವೊಂದನ್ನು ಹೊರಡಿಸುವ ಸಂಪೂರ್ಣಸಿದ್ಧತೆಯಲ್ಲಿದೆ. ಇಂದು ಕರ್ಣಾಟಕದಲ್ಲಿ ಕನ್ನಡ ತನವನ್ನು ಪ್ರಸಾರಗೊಳಿಸಬೇಕಾಗಿದ್ದಲ್ಲಿ, ವಾಕ್ಪಟ-ನಿರ್ಮಾಣವೊಂದು ಉತ್ತಮವಾದ ಸಾಧನ.

ಮುನ್ನಡೆ—ಅಭಿನಂದನೆ

**ಬೆಂಗಳೂರಿನ ಸಂಟ್ರಲ್‌ಕಾಲೇಜಿನಲ್ಲಿ** ಫಿಜಿಕ್ಸ ಪ್ರೊಫೆಸರಾಗಿದ್ದ ಶ್ರೀಮಾನ್ ಬಿ. ವೆಂಕಟೇಶಾಚಾರ್ಯರು ಅಲ್ಲಿಯ ಟಾಟಾ ವಿಜ್ಞಾನಮಂದಿರದ ಡೈರೆಕ್ಟರರಾದರು. ಇದುವರೆಗೆ ಅವರು ಆ ಸಂಸ್ಥೆಯ ಗೌರ್ನಿಂಗ್ ಕೌನ್ಸಿಲಿನ ಸದಸ್ಯರೊಬ್ಬರಾಗಿ ಇದ್ದರು. ಈಗ ಸರ್ ಸಿ. ವಿ. ರಾಮನ್ ಅವರು ಡೈರೆಕ್ಟರ್ ಸ್ಥಾನವನ್ನು ಬಿಡಬೇಕಾಗಿ ಬಂದುದರಿಂದ, ಆ ಮರ್ಯಾದೆ ಕನ್ನಡಿಗರೊಬ್ಬರಿಗೆ ದೊರೆತುದು ನಮಗೆಲ್ಲ ಹೆಮ್ಮೆಯ ವಿಷಯ.

ಮೈಸೂರಿನಲ್ಲಿ ಪ್ರಸಿದ್ಧ ಅಡ್ವೊಕೇಟರಾಗಿದ್ದ ದಿವಂಗತ ಎಂ. ಬಸವಯ್ಯ ಅವರ ಹಿರಿಯಮಗ ಶ್ರೀಮಾನ್ ಎಂ. ಬಿ. ಶಂಕರಪ್ಪ ಎಂ. ಎಸ್‌ಸಿ. ಇವರು ಹೆಚ್ಚಿನ ವಿದ್ಯಾಭ್ಯಾಸ-ಕ್ಕಾಗಿ ಇಂಗ್ಲೆಂಡಿಗೆ ಹೋಗಿದ್ದರು. ಅವರೀಗ ಶೆಫಿಲ್ಡ್ ವಿ. ವಿ. ನಿಲಯದ ಬಿ. ಎಂ. ಇ. ಟಿ. ಡಿಗ್ರಿಯ ಪರೀಕ್ಷೆ-ಯಲ್ಲಿ ಮೊದಲನೆಯವರಾಗಿ ಉತ್ತೀರ್ಣರಾಗಿದ್ದಾರೆ.

ವಿಜಾಪುರದ ಶ್ರೀ. ಸಿ. ಪಿ. ಹಳಕಟ್ಟಿಯವರು ಬಟ್ಟೆಯ ಗಿರಣಿಯ ಉದ್ಯಮದ ಅಭ್ಯಾಸಕ್ಕಾಗಿ,ಮುಂಬಯಿ ಸರಕಾರದ ವಿದ್ಯಾರ್ಥಿವೇತನವನ್ನು ಪಡೆದು ಇಂಗ್ಲಂಡಿಗೆ ಹೋಗಿದ್ದರು. ಮ್ಯಾಂಚೆಸ್ಟರ್ ವಿಶ್ವವಿದ್ಯಾನಿಲಯದಲ್ಲಿ ಅವರು ಅಭ್ಯಾಸವನ್ನು ಮಾಡಿ, ಬಿ. ಎಸ್‌ಸಿ. ಟೆಕ್ನಿಕಲ್ ಪದವಿಯನ್ನು ಪಡೆದಿರುವರಲ್ಲದೆ 'ಸಿಟಿ ಆ್ಯಂಡ್ ಗಿಲ್ಡ್ಸ ಲಂಡನ್' ಎಂಬ ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ಪಾಸಾಗಿದ್ದಾರೆ.

ಶ್ರೀಮಾನ್ ಪಿ. ವಿ. ಕೃಷ್ಣಮೂರ್ತಿ ಎಂ. ಎಸ್‌ಸಿ. ಅವರು ಮೈಸೂರಿನ ಪದವೀಧರರು. ಲಂಡನ್ನಿನ ಇನ್‌ಸ್ಟಿಟ್ಯೂಟ್ ಆಫ್ ಆಕ್ಚ್ಯುಯರೀಜ್ ಎಫ್‌-ಐ. ಎ. ಪರೀಕ್ಷೆಯಲ್ಲಿ ಇವರು ಉತ್ತೀರ್ಣರಾಗಿರುವರು.

ದೇವರಾಜ ಬಹುಮಾನ

ಈ ಸಲದ ದೇವರಾಜ ಬಹುಮಾನದ ಮೊದಲನೆಯ ೩೦೦ ರೂಪಾಯಿಗಳ ಬಹುಮಾನವು ಶ್ರೀಮಾನ್ ದಿವಾಕರರ **'ವಚನಶಾಸ್ತ್ರರಹಸ್ಯ'** ಎಂಬ ಗ್ರಂಥಕ್ಕೂ ಮಿಕ್ಕೆರಡು ಇನ್ನೂರು—ಇನ್ನೂರು ರೂಪಾಯಿಗಳ ಬಹುಮಾನಗಳು ಶ್ರೀಮಾನ್ ಜೋಶಿ ಶಂಕರರಾಯರ **'ಕರ್ಣಾಟಕ ವೀರ-ಕ್ಷತ್ರಿಯರು'**, ಮೈಸೂರಿನ ಶ್ರೀಮಾನ್ ಶೇಷಯ್ಯಂಗಾರ್ ಇವರ 'ನಮ್ಮ ಹಳ್ಳಿಗಳು' ಎಂಬ ಗ್ರಂಥಗಳಿಗೂ ಸಿಕ್ಕಿವೆ.


# ನಮ್ಮಲ್ಲಿ ದೊರೆಯುವ ವಿಜಯನಗರ ಸಾಹಿತ್ಯ

೧. **Vijayanagara Sexcentenary Commemoration Volume:** ವಿಜಯನಗರ ಸ್ಮಾರಕೋತ್ಸವ ಮಂಡಲದವರ ಇಂಗ್ಲಿಷ್ ಪ್ರಕಟನೆ: ಭಾರತದ ವಿದ್ವನ್ಮಣಿಗಳ ಪ್ರಬಂಧಗಳು; ೩೪ ಇಡಿಪುಟದ ಚಿತ್ರಗಳು; ೩೮೦ ಪುಟಗಳು. ೧೦—೦—೦

೨. ವಿಜಯನಗರ ಸಾಮ್ರಾಜ್ಯ— ದೇಸಾಯಿ ಪಾಂಡು ರಂಗರಾಯರು ಬರೆದುದು. ಕನ್ನಡದಲ್ಲಿಯ ವಿಜಯನಗರ ಚರಿತ್ರಾತ್ಮಕ ಪ್ರಥಮ ಸಮಗ್ರ ಗ್ರಂಥವೆಂದರೆ ಇದೇ. ೨—೦—೦

೩. ಸಚಿತ್ರ ವಿಜಯನಗರ—ಆಲ್ಬಂ—ಕನ್ನಡ ವಿವರಣೆ ಸಹಿತ. ಪ್ರಯಾಣಿಕರಿಗೆ ಅತ್ಯುಪಯುಕ್ತ. ೦—೧೨—೦

೪. ಜಯಕರ್ನಾಟಕ ವಿಜಯನಗರ ವಿಶೇಷಾಂಕ— ವಿಪುಲಚಿತ್ರಗಳು, ಸಂಗ್ರಾಹ್ಯ ಲೇಖನಗಳು ೦—೬—೦

೫. ನಾಗರಿಕ—ಎಂ. ಆರ್. ಶ್ರೀ. ವಿರಚಿತ ಪದ್ಯನಾಟಕ ೦—೧೨—೦

೬. ನಾಗರಿಕ— ಮೇಲಿನದರ ಹಿಂದೀ ಅನುವಾದ. ಹಿಂದೀ ಜ್ಞಾನಯಾತ್ರೀಮಂಡಲದ ಪ್ರಕಟನೆ. ೦—೮—೦

೭. ವಿದ್ಯಾರಣ್ಯವಿಜಯ— (ನಾಟಕ) ಡಿ. ವಿ. ಗುಂಡಪ್ಪನವರು ಬರೆದುದು. ಸಾದಾ ೧—೪—೦

೮. " " ಕ್ಯಾಲಿಕೊ ೨—೦—೦

೯. ವಿದ್ಯಾರಣ್ಯರ ಸಮಕಾಲೀನರು— (ಐತಿಹಾಸಿಕ ಗ್ರಂಥ) ಕ್ಯಾಲಿಕೊ ೨—೪—೦

೧೦. ಕೃಷ್ಣದೇವರಾಯ— (ನಾಟಕ) ಶ್ರೀ. ಎಸ್. ಆರ್. ಕರೂರ ಅವರು ಬರೆದುದು. ೦—೮—೦

೧೧. ಪಂಪಾಯಾತ್ರೆ— (ಸಚಿತ್ರ) "ವಿ. ಸೀ." ೦—೧೨—೦

೧೨. ತಾಳೀಕೋಟೆ— (ಏಕಾಂಕನೃತ್ಯ) "ಶ್ರೀನಿವಾಸ" ೦—೧೦—೦

**ಜಯಕರ್ನಾಟಕ ಪುಸ್ತಕಾಲಯ, ಧಾರವಾಡ**


CC-0. Jangamwadi Math Collection. Digitized by eGangotri

ಕರ್ನಾಟಕದ ಸಾಹಸ ! ಕರ್ನಾಟಕದ ಕೀರ್ತಿ ! !

# ಮೈಸೂರು ಇನ್ಷ್ಯೂರೆನ್ಸ್ ಕಂಪೆನಿ

ಪೋಷಕರಿಗೂ ದೇಶಕ್ಕೂ ನಿರ್ವಂಚಿತವಾದ ಶ್ರದ್ಧಾಯುತ ಸೇವೆ ಸಲ್ಲಿಸಲು ಆಡಳಿತ ಮಂಡಳಿಗಿರುವ ಉತ್ಸಾಹವೇ "ಮೈಸೂರು" ಅಭ್ಯುದಯದ ಜೀವಾಳ.




**ಮೂರನೇ ವರ್ಷದ ಡೈರೆಕ್ಟರುಗಳಿಂದ ಅಂಗೀಕೃತವಾದ ವರದಿಯ ಕೆಲವು ಮುಖ್ಯಾಂಶಗಳು.**

(೧) ಕಳೆದ ವರ್ಷಕ್ಕಿಂತ ಜೀವವಿಮಾ ನಿಧಿಯು ಶೇಕಡ ೨೨ ರಷ್ಟು ಏರಿದೆ. (೨) ಹೊಸ ಉದ್ಯಮವು ಶೇಕಡ ೬೫ ರಷ್ಟೂ, ಪೂರ್ಣವಾದ ಉದ್ಯಮವು ಶೇಕಡ ೫೩ರಷ್ಟೂ ಏರಿದೆ. (೩) ಆಸ್ತಿ ರೂ.೧ ಲಕ್ಷಕ್ಕೆ ಮೀರಿದೆ.

**ಕಾರ್ಯಕ್ಷೇತ್ರವು ವಿಸ್ತಾರಗೊಳ್ಳುತ್ತಿದೆ.**

**"ಮೈಸೂರು"** ಮಾದರಿಸಂಸ್ಥಾನದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡು, ಕರ್ನಾಟಕದ ಇತರ ಭಾಗಗಳಲ್ಲೂ ಬ್ರಿಟಿಷ್ ಇಂಡಿಯಾ, ಬರ್ಮಾ ಸಿಲೋನ್‌ಗಳಲ್ಲೂ ವಿಜಯಿಯೆನಿಸಲು ಮುಂದಡಿಯಿಟ್ಟಿದೆ.

**ಬೇಕು!** ಕರ್ನಾಟಕದ ಎಲ್ಲ ಊರುಗಳಲ್ಲೂ, ಉಳಿದ ಬ್ರಿಟಿಷ್ ಇಂಡಿಯಾ, ಬರ್ಮಾ, ಸಿಲೋನ್‌ಗಳ ಎಲ್ಲ ಪ್ರಾಂತ್ಯಗಳಲ್ಲೂ ಕೇಂದ್ರಸ್ಥಳಗಳಲ್ಲೂ ಏಜಂಟರುಗಳೂ, ಸ್ಪೇಷಲ್ ಏಜಂಟರುಗಳೂ, ಚೀಫ್ ಏಜಂಟರುಗಳೂ, ಆರ್ಗನೈಜರುಗಳೂ ಬೇಕು. ಪ್ರತಿನಿಧಿಗಳಾಗಲಿಚ್ಛಿಸುವವರು ತಾವು ಕೊಡುವ ಉದ್ಯಮದ ಭರವಸೆಯನ್ನೂ ಕಾರ್ಯಕ್ಷೇತ್ರವನ್ನೂ ತಿಳಿಸುವುದು.

ಹೆಚ್ಚು ವಿವರಗಳಿಗೆ ಬರೆಯಿರಿ:—

ಜನರಲ್ ಮ್ಯಾನೇಜರ್,

**ಮೈಸೂರು ಇನ್ಷ್ಯೂರನ್ಸ್ ಕಂಪೆನಿ, ಲಿಮಿಟೆಡ್,**

"ನಾಗೇಶ್ವರ ಬಿಲ್ಡಿಂಗ್ಸ್", ಶ್ರೀ ನರಸಿಂಹರಾಜಾ ರೋಡ್, ಬೆಂಗಳೂರು ಸಿಟಿ.

# ಕಲಾಸಿಂಧು ಮುದ್ರಣಾಲಯ

ನಮ್ಮಲ್ಲಿ ಹಿಂದಿ, ಸಂಸ್ಕೃತ, ಮರಾಟಿ, ಕನ್ನಡ, ಇಂಗ್ಲಿಷುಗಳಲ್ಲಿ ಪುಸ್ತಕಮುದ್ರಣವೂ ಎಲ್ಲಬಗೆಯ ಜಾಬ್ ಕೆಲಸವೂ ಅಚ್ಚುಕಟ್ಟಾಗಿ, ಅಂದವಾಗಿ ಆಗುವುದು. ಮತ್ತು ನಿಯಮಿತ ವೇಳೆಯಲ್ಲಿ ಕೊಡಲ್ಪಡುವುದು.

**ಜಯಕರ್ನಾಟಕ ಪತ್ರಿಕೆಯು ಇಲ್ಲಿಯೇ ಅಚ್ಚಾಗುವುದು.**

ಪ್ರಾಮಾಣಿಕ ವ್ಯವಹಾರ, ಯೋಗ್ಯವಾದ ದರ.


CC-0. Jangamwadi Math Collection. Digitized by eGangotri



## ಕರ್ನಾಟಕ

### ಕನ್ನಡದ ಪ್ರೀತಿ ಹಿಂದಿಯ ದ್ವೇಷವೇ ?

ಮೈಸೂರಿನ ಹಿಂದೀ ಪ್ರಚಾರ ಸಭೆಯಲ್ಲಿ ಪ್ರಸಿದ್ಧ ರಾಷ್ಟ್ರಭಕ್ತರಾದ ಶ್ರೀ. ಸತ್ಯಮೂರ್ತಿಯವರು ಮಾತನಾಡುತ್ತಿದ್ದಾಗ, ಇಂದು ಭಾರತೀಯರಿಗಿರುವ ಹಿಂದೀಭಾಷೆಯ ಆವಶ್ಯಕತೆಯನ್ನು ವಿವರಿಸಿದರಲ್ಲದೆ 'ಹಿಂದಿಯನ್ನು ಕಲಿತರೆ ಕನ್ನಡವನ್ನು ದ್ವೇಷಿಸಿದಂತಾಗುವುದಿಲ್ಲ' ಎಂದು ಹೇಳಿದರು. ರಾಜಕೀಯರೀತಿಯಲ್ಲಿ ಭಾರತಕ್ಕೆ ಒಂದು ಸಾಮಾನ್ಯ ಭಾಷೆಯಿರಬೇಕೆಂದೂ ಆ ಸ್ಥಾನವನ್ನು ಹೊಂದುವುದಕ್ಕೆ ಹಿಂದೀಭಾಷೆಯಲ್ಲಿ ತಕ್ಕ ಗುಣಗಳಿವೆಯೆಂದೂ ಹೇಳುವವರೊಂದಿಗೆ ನಾವೂ ದನಿಗೂಡಿಸದೆ ಇರಲಾರೆವು. ರಾಜಕೀಯ ಮುಂದಾಳುಗಳೂ, ಪ್ರಾಂತ-ಪ್ರಾಂತಗಳೊಂದಿಗೆ ವ್ಯವಹಾರ ನಡೆಯಿಸಬೇಕಾದವರೂ, ಹಿಂದೀಭಾಷೆಯ ಅಪೇಕ್ಷೆಯುಳ್ಳವರೂ ಅದನ್ನು ಕಲಿತುಕೊಳ್ಳುವುದು ಆವಶ್ಯಕವೆಂದು ನಾವೂ ಹೇಳುವೆವು. ಆದರೆ ಕೆಲವೊಂದು ವಿಶಿಷ್ಟಕಾರಣಗಳ ಮೂಲಕ ಹಿಂದೀಪ್ರಚಾರವು ಕರ್ನಾಟಕದ ಪ್ರಗತಿಗೆ ಬಾಧಕವಾಗಿ ಪರಿಣಮಿಸುತ್ತಿದೆಯಾದುದರಿಂದ, ಹಿಂದೀಪ್ರಚಾರದ ವಿರುದ್ಧವಾಗಿ ದ್ವೇಷವಿರಹಿತ ಭಾವನೆಯಿಂದಲೆ ಮಾತನಾಡಿದರೂ ಅದು ಇನ್ನೊಬ್ಬರಿಗೆ ದ್ವೇಷವಾಗಿ ತೋರುತ್ತಿದೆ.

(೧) ಸಾಂಸ್ಕೃತಿಕ ಕಾರಣಗಳಿಂದಲೂ ರಾಜಕೀಯ ವಿಭಾಗಗಳ ಮೂಲಕವೂ ಇಂದು ಕನ್ನಡದಲ್ಲಿ ಪ್ರಾಂತೀಯ ಭಾವನೆ ತೀರ ಕಡಿಮೆಯಾಗಿಬಿಟ್ಟಿದೆ. ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲಿ, ಕನ್ನಡಭಾಷೆ ಮನೆಮಾತಲ್ಲದ ಕೆಲವು ಗುಂಪುಗಳು ಅಲ್ಲಲ್ಲಿ ವಸತಿಮಾಡಿಕೊಂಡಿದ್ದು, ಆ ಗುಂಪುಗಳಿಗೆ ಕನ್ನಡಭಾಷೆ ಬೇಡವಾಗಿದೆ; ಎಂತಲೆ ಪ್ರಾಂತದ ವಿಚಾರದಲ್ಲಿ ಆತ್ಮೀಯತೆ ಅವಕ್ಕೆ ತೋರದಾಗಿದೆ. ಆ ಗುಂಪಿನ ಜನರ ಹಿತಸಂಬಂಧಗಳು ಕರ್ನಾಟಕದಲ್ಲಿಯೆ ಇದ್ದು, ಅವರು ಇನ್ನೆಲ್ಲಿಯೂ ಹೊರಟು ಹೋಗರಾದರೂ, ಕನ್ನಡನಾಡು— ನುಡಿಗಳ ವಿಚಾರದಲ್ಲಿ ಅವರಿಗೆ ಶ್ರದ್ಧೆ-ವಿಶ್ವಾಸಗಳಿಲ್ಲ. ಅಂತಹ ಜನರು ದೇಶಭಕ್ತಿಯ ಸೋಗನ್ನು ಹಾಕಿ ಹಿಂದಿಯನ್ನು ಪುರಸ್ಕರಿಸಿ, ಕನ್ನಡಕ್ಕೆ ಕೇಡುಬಗೆಯುತ್ತಿರುವರು. ಹಣ—ವಿದ್ಯೆ ಇವುಗಳ ಬಲದಿಂದ ಅವರು ಸಮಾಜದಲ್ಲಿ ಮುಂದಾಳುಗಳಾಗಿದ್ದುದರಿಂದ, ತಮ್ಮ ಬೇಳೆಯನ್ನು ಅವರು ಹೇಗೆ ಬೇಯಿಸಿಕೊಳ್ಳುತ್ತಿರುವರೆಂಬುದು ಜನಸಾಮಾನ್ಯರಿಗೆ ಪಾಪ ಹೇಗೆ ಗೊತ್ತಾಗಬೇಕು!

(೨) ಈಗ ಕರ್ನಾಟಕದಲ್ಲಿ ಕನ್ನಡ ಅಕ್ಷರಗಳನ್ನು ಬಲ್ಲವರ ಸಂಖ್ಯೆಯೇ ನೂರಕ್ಕೆ ಎಂಟೋ ಹತ್ತೋ ಇದೆ ಹೀಗಿರುವಾಗ ಅಲ್ಲಲ್ಲಿ ಆಶ್ರಮಗಳನ್ನು ತೆಗೆದ ದೇಶಸೇವಕರೂ,ಹಿಂದೀಪ್ರಚಾರಕರೂ—ಹಳ್ಳಿಗರಿಗೂ ಹೆಂಗುಸರಿಗೂ ಕನ್ನಡವನ್ನು ಬಿಡಿಸಿ ಹಿಂದಿಯನ್ನು ಕಲಿಸುತ್ತ ಹೊರಟರೆ, ಪ್ರಾಂತದ ಪ್ರಗತಿಯನ್ನಪೇಕ್ಷಿಸುವ ಯಾವ ಕನ್ನಡಿಗನಿಂದ ಸುಮ್ಮನೆ ಕುಳಿತುಕೊಳ್ಳಲಿಕ್ಕಾದೀತು ? ಅವನೇನಾದರೂ ಬಾಯಿಬಿಟ್ಟನೋ ನಮ್ಮ ದೇಶಸೇವಕರು ಅವನನ್ನು ದೇಶದ್ರೋಹಿಗಳ ವರ್ಗದಲ್ಲಿ ಸೇರಿಸಿಬಿಡುವರು. ಕನ್ನಡ ಜನಸಮಾಜದ ಪ್ರಾಥಮಿಕ ಅಭ್ಯಾಸವು ಕನ್ನಡದಲ್ಲಿ ಆಗಬೇಕೋ ? ಹಿಂದಿಯಲ್ಲಿ ಆಗಬೇಕೋ ?

(೩) ಹಿಂದೀಪ್ರಚಾರಸಂಘಕ್ಕೆ ಸಭಾಸದನಾಗಿರುವ ಪ್ರತಿಯೊಬ್ಬ ಕನ್ನಡಿಗನೂ ಮೊದಲು—ನಮ್ಮ ಪರಿಸ್ಥಿತಿಯನ್ನನುಸರಿಸಿ—ಕರ್ನಾಟಕದಲ್ಲಿರುವ ಸಾಹಿತ್ಯಸಂಸ್ಥೆಗಳಲ್ಲಿ ಯಾವುದಾದರೊಂದಕ್ಕೆ ಸಭಾಸದನಾಗಿರಬೇಕಲ್ಲವೇ ? ಹಿಂದೀಸಾಹಿತ್ಯಪ್ರಸಾರಕ್ಕೆ ಹಣದ ಸಹಾಯ ಮಾಡುವ ಕನ್ನಡಿಗನು ತನ್ನ ಪ್ರಾಂತೀಯ ಭಾಷಾಸಾಹಿತ್ಯಕ್ಕೆ ಅಂತಹ ಸಹಾಯವನ್ನು ಮಾಡಲೇ ಬೇಕಲ್ಲವೇ ? ಸಂದರ್ಭವು ಹಾಗಿಲ್ಲದಾಗ, ಅಂತಹ ಜನರೊಂದಿಗೆ ಚರ್ಚೆಮಾಡಿದರೆ ಅದು ಹಿಂದಿಯ ದ್ವೇಷವೆಂದು—ನಮ್ಮವರಿಂದ ಕೂಡ—ಕರೆಯಿಸಿಕೊಳ್ಳುವುದು.

(೪) ಹಿಂದೀಪ್ರಚಾರಕರನೇಕರು ಪರಪ್ರಾಂತದಿಂದ ಬಂದಿರುವರು. ಅವರು ಕಾಡುಜನರನ್ನು ಸುಧಾರಿಸಲು ಬಂದ ಮಹಾಪುರುಷರು ತಾವೆಂಬ ಹೆಮ್ಮೆಯ ಮುಗಿಲಲ್ಲಿ ಹಾರಾಡುತ್ತಿರುವರು. ಅವರಿಗೆ ಕನ್ನಡಭಾಷೆ—ಸಾಹಿತ್ಯಗಳೆಂದರೆ ಅಸಡ್ಡೆ. ಅವರ ಈ ರೀತಿಯನ್ನು ಟೀಕಿಸಿ ನುಡಿದರೆ ಅದೂ ಹಿಂದೀದ್ವೇಷಮೂಲಕವೆಂಬ ಗೊಂದಲವೇಳುವುದು.

CC-0. Jangamwadi Math Collection. Digitized by eGangotri

(ಆ) ಇನ್ನು ಹೆಂಗುಸರ ವಿಚಾರ. ತತ್ತ್ವಕ್ಕಿಂತ ಅನುಕರಣಪ್ರೀತಿ ಹೆಚ್ಚಾಗಿರುವುದು ಅವರ ಸ್ವಭಾವವಾಗಿದೆ. ಇನ್ನೊಬ್ಬರು ಹೇಳಿದ ಮಾತನ್ನು ಒಮ್ಮೆಲೆ ಒಪ್ಪಿ ಅದರಂತೆ ನಡೆಯತೊಡಗುವುದು ಅವರ ಪದ್ಧತಿ. ದೇಶಸೇವಕರು ಬಂದು ಉಪನ್ಯಾಸಕೊಟ್ಟರಾಯಿತು; ತಮಗೆ ಕನ್ನಡದ ಅ-ಆ ಬಾರದಿದ್ದರೂ ಹಿಂದೀಭಾಷೆಯನ್ನು ಕಲಿಯಲು ಸಿದ್ಧರಾಗುವರು. ಇಂತಹ ತಾಯಂದಿರ ಮಕ್ಕಳು ಕನ್ನಡವನ್ನು ಎಷ್ಟೊಂದು ಪ್ರೀತಿಸಬಹುದು? ಈ ಕಂಡ ವಿಷಯವನ್ನು ಎತ್ತಿ ಆಡಿದರೆ ಕೆಂಡದಂತೆ ಕೋಪಗೊಳ್ಳುವರು ಹಿಂದೀಪಕ್ಷದವರು. ಇವರ ಮಾತನ್ನು ಕೇಳಿ, ದೊಡ್ಡವರೆನ್ನುವವರೂ ತಪ್ಪು ತಿಳಿವಳಿಕೆಯಿಂದ, ಕನ್ನಡಿಗರು ಅಪರಾಧಿಗಳೆಂದು ಅವರಿಗೆ ಉಪದೇಶಮಾಡಲು ಬರುವರು. ಬಾಯಿಯಿದ್ದವರು ಬದುಕುವ ಕಾಲವಿದು. ಎಂತಲೆ ಯಾರ ಉಪದೇಶಕ್ಕೂ ಕಿವಿಗೊಡದೆ, ಕನ್ನಡಿಗರು ತಮ್ಮ ಪ್ರಾಂತವಿಘಾತಕವಾದ ತೊಂದರೆಗಳನ್ನು ತುತೂರಿಯಿಂದ ಕೂಗಿ ಕೂಗಿ ತಿಳಿಸುತ್ತಿರಬೇಕು.

### ಕರ್ನಾಟಕಪ್ರಾಂತಿಕ ಹಿಂದೀಪ್ರಚಾರ—ಸಭೆಗೊಂದು ಸೂಚನೆ

ಈಗ ಬೆಂಗಳೂರಿನಲ್ಲಿದ್ದ ಕರ್ನಾಟಕ ಪ್ರಾಂತಿಕ ಹಿಂದೀ ಪ್ರಚಾರಕ ಸಂಘದವರು, ಮುಂಬಯಿಕರ್ನಾಟಕ ಜಿಲ್ಲೆಗಳಲ್ಲಿಯೂ ಪ್ರಚಾರಕಾರ್ಯವನ್ನಾರಂಭಿಸಬೇಕೆಂಬ ಯೋಜನೆಯನ್ನು ನಡೆಯಿಸಿರುವರು. ಕರ್ನಾಟಕ ಪ್ರಗತಿಗೆ ಅಡ್ಡಿಯೊದಗದಂತೆ ಅವರು ತಮ್ಮ ಪ್ರಚಾರಕಾರ್ಯವನ್ನು ಪ್ರಾರಂಭಿಸಲಿ, ಯಾರು ಬೇಡವೆನ್ನುವರು! ಉತ್ತರಕರ್ನಾಟಕದಲ್ಲಿ ಕರ್ನಾಟಕಸಾಹಿತ್ಯಪರಿಷತ್ತಿಗೆ ಮೆಂಬರರಾದ ಜನರು ಕಡಿಮೆ; ಆದುದರಿಂದ ಕರ್ನಾಟಕ ಹಿಂದೀಪ್ರಚಾರಸಂಸ್ಥೆಯವರು ಇಲ್ಲಿಯಜನರನ್ನು ತಮ್ಮ ಸಭೆಗೆ ಮೆಂಬರರನ್ನಾಗಿ ಮಾಡಿಕೊಳ್ಳುವ ಮೊದಲು ಅವರನ್ನು ಕ. ಸಾ. ಪರಿಷತ್ತಿಗೂ ಮೆಂಬರರನ್ನಾಗಿಮಾಡುವ ಹೊಣೆಯನ್ನು ಹೊರಬೇಕು. ಕ. ಸಾ. ಪರಿಷತ್ತಿನ ಮೆಂಬರರಲ್ಲದವರನ್ನು ಹಿಂದೀಪ್ರಚಾರಸಭೆಗೆ ಮೆಂಬರರನ್ನಾಗಿ ಮಾಡಿಕೊಳ್ಳಲೇ ಬಾರದು. ಹೀಗೆ ಮಾಡಿದರೆ ಹಿಂದೀಪ್ರೇಮಿಗಳ ನಿಜವಾದ ಹೃದಯವು ಹೊರಬೀಳುವುದಲ್ಲದೆ, ಯಾರು ಯಾವ ಭಾಷೆಯನ್ನು ದ್ವೇಷಿಸುವರೆಂಬ ಸಂಗತಿ ಸಹಜವಾಗಿ ಗೊತ್ತಾಗುವುದು. ಕರ್ನಾಟಕ ಹಿಂದೀಪ್ರಚಾರಕ ಸಂಘದವರಿಗೆ ಇನ್ನೊಂದು ನಮ್ಮ ಸೂಚನೆ: ರಾಷ್ಟ್ರಭಾಷೆಯೆಂದು ಹಿಂದಿಯನ್ನು ಕಲಿಸುವುದರೊಂದಿಗೆ, ಪ್ರಾಂತೀಯ ಭಾಷೆಯೆಂದು—ಕನ್ನಡ ಬಾರದಿದ್ದವರಿಗೆ— ಅವಶ್ಯವಾಗಿ ಕನ್ನಡವನ್ನು ಕಲಿಸುವ ಚಳವಳಿಯನ್ನೂ ಪ್ರಾರಂಭಿಸಬೇಕು. ಇದರಿಂದ ಎಲ್ಲ ಕನ್ನಡಿಗರು ಹಿಂದೀಪ್ರಚಾರಕರನ್ನೂ ಅವರ ಕಾರ್ಯವನ್ನೂ ನಿಸ್ಸಂದಿಗ್ಧಭಾವದಿಂದ ನೋಡುವರಲ್ಲದೆ ಪ್ರಚಾರಕಾರ್ಯಕ್ಕೆ ಯುಕ್ತವಾದ ಸಹಾಯಗಳನ್ನೂ ನೀಡಲು ಮುಂದೆ ಬರಬಹುದು. ಕರ್ನಾಟಕ ಪ್ರಾಂತಿಕ ಹಿಂದೀಪ್ರಚಾರಸಭೆಯಲ್ಲಿ ಹೆಚ್ಚಾಗಿ ಕನ್ನಡಿಗರೆ ಇದ್ದಾರೆ; ಕರ್ನಾಟಕವನ್ನು ನಿಜವಾಗಿ ಪ್ರೀತಿಸುವ ಸರಲಸ್ವಭಾವದ ಕನ್ನಡಿಗರೂ ಕೆಲವು ಜನರಿದ್ದಾರೆ. ನಮ್ಮ ಸೂಚನೆಯನ್ನು ಅವರು ವಿಮರ್ಶಿಸದಿರಲಾರರೆಂದು ಭರವಸೆ.

### ಈಗ ಏಕೀಕೃತ ಕರ್ನಾಟಕವಿದ್ದರೆ

ಖಂಡಿತವಾಗಿಯೂ ಶಾಸನಸಭೆಯಲ್ಲಿ ರಾಷ್ಟ್ರೀಯ ಪಕ್ಷದ ಬಹುಮತವಾಗುತ್ತಿದ್ದಿತು. ರಾ. ಸಭೆಯ ಬಹುಮತವಾದ ಆರು ಪ್ರಾಂತ್ಯಗಳ ಜೊತೆಗೆ ಕರ್ನಾಟಕವು ಏಳನೆಯದಾಗಿ ನಿಲ್ಲುತ್ತಿದ್ದಿತು. ಎಲ್ಲ ಮಂತ್ರಿಗಳೂ ಕನ್ನಡಿಗರು; ಎಲ್ಲ ಸದಸ್ಯರೂ ಕನ್ನಡಿಗರು. ಕರ್ನಾಟಕದ ಸಂಸ್ಕೃತಿ-ಸಂಪತ್ತುಗಳನ್ನು ಬೆಳೆಯಿಸುವ ಎಷ್ಟೆಷ್ಟೋ ವಿಧಾಯಕ ಕಾರ್ಯಕ್ರಮಗಳನ್ನು ಕೈಕೊಂಡು ನೆರವೇರಿಸಲಿಕ್ಕಾಗುತ್ತಿದ್ದಿತು. ಇಂದಿನ ಪ್ರಾಂತವಿಭಾಗದ ಗೊಂದಲದ ಮೂಲಕ, ಕರ್ನಾಟಕದಿಂದ ಹೋಗಿ ಪ್ರಾಂತೀಯ ಭಾಂಡಾರದಲ್ಲಿ ಬಿದ್ದ ದುಡ್ಡು ಕೇವಲ ಕನ್ನಡಿಗರ ಉಪಯೋಗಕ್ಕೆ ಬೀಳಲಾರದು; ಕರ್ನಾಟಕ ಏಕೀಕರಣವಿದ್ದಲ್ಲಿ ಹೀಗಾಗುವುದು ತಪ್ಪುತ್ತಿದ್ದಿತು.

### ಹಾಗೆ ಇಲ್ಲವಾದುದರಿಂದ

ಮುಂಬಯಿ ಇಲಾಖೆಯ ಮಂತ್ರಿಗಳಲ್ಲಿ ಕನ್ನಡಿಗರಿಗೆ—ಅಲ್ಲ ಕರ್ನಾಟಕದವರಿಗೆ—ಒಂದೆ ಒಂದು ಸ್ಥಾನವು ದೊರೆಯಿತು. ಮದ್ರಾಸ್ ಅಸೆಂಬ್ಲಿಯ ಮಂತ್ರಿಸಮುದಾಯದಲ್ಲಿ ಕನ್ನಡಿಗರು ಔಷಧಕ್ಕೂ ಇಲ್ಲ. ಎರಡೂ ಅಸೆಂಬ್ಲಿಗಳಲ್ಲಿ ಕರ್ನಾಟಕದ ಸದಸ್ಯರು ಅಲ್ಪಸಂಖ್ಯಾಕರಾಗಿ ಇದ್ದುದರಿಂದ, ಕರ್ನಾಟಕಕ್ಕೆ ಅವಶ್ಯಕವಾಗಿದ್ದ ಬೇಡಿಕೆಗಳ ಕೂಗಿಗೆ ಬಲವೇ ಬಾರದು. ಬಹುಜನರಿದ್ದ ಪ್ರಾಂತಗಳವರು ತಮಗೆ ಬೇಕೆನಿಸಿದ ಮಾತುಗಳನ್ನು ಸುಲಭವಾಗಿ ಸಾಧ್ಯಮಾಡಿಕೊಳ್ಳಬಹುದು. ಉದಾಹರಣೆಗಾಗಿ ಮಹಾರಾಷ್ಟ್ರದವರು ಬಲುದಿನಗಳಿಂದಲೂ ಹವಣಿಸುತ್ತಿದ್ದ ವಿಶ್ವವಿದ್ಯಾನಿಲಯ

CC-0. Jangamwadi Math Collection. Digitized by eGangotri

ವನ್ನು ಸ್ಥಾಪಿಸಿಕೊಳ್ಳಬಹುದು; ಉತ್ತರಕರ್ಣಾಟಕದ ಸಂಸ್ಥಾನಗಳೆಲ್ಲವೂ ಆ ವಿಶ್ವವಿದ್ಯಾನಿಲಯವನ್ನೇ ಪುರಸ್ಕರಿಸಿ ಕರ್ಣಾಟಕಕ್ಕೆ ಕ್ಷಯರೋಗವನ್ನು ತಗುಲಿಸಬಹುದು. ಬಳ್ಳಾರಿಯನ್ನು ಬಾಯಿಗೆ ಹಾಕಿಕೊಳ್ಳಬೇಕೆಂದಿದ್ದ ಆಂಧ್ರರು ಬಹುಮತದ ಬೆಂಬಲದಿಂದ ಅದನ್ನು ಸೆಳೆದುಕೊಳ್ಳಲು ಪ್ರಯತ್ನಿಸಬಹುದು.

ಏಕೀಕರಣವಿಲ್ಲದಿದ್ದರೆ ಕರ್ಣಾಟಕಕ್ಕೆ ಉಳಿಗಾಲವೇ ಇಲ್ಲ.

ಎಂತಲೆ ಶಾಸನಸಭೆಯ ಮೇಲುಮನೆ ಕೆಳಮನೆಗಳೆರಡರ ಎರಡೂ ಪ್ರಾಂತದ — ಕರ್ಣಾಟಕಸಭಾಸದರು ಮೊದಲಿನಿಂದಲೂ ಕರ್ಣಾಟಕೈಕೀಕರಣದ ಬೇಡಿಕೆಯ ಗುಲ್ಲನ್ನು ಎಬ್ಬಿಸಬೇಕು. ಆವಶ್ಯಕತೆ-ಅನುಕೂಲತೆಗಳಿದ್ದಲ್ಲೆಲ್ಲ ಏಕೀಕರಣದ ಗೊತ್ತುವಳಿಯನ್ನು ಮುಂದೆ ಚಾಚಿ ಪಾಸುಮಾಡಿಕೊಂಡು, ಪಾರ್ಲಿಮೆಂಟಿನ ಕಣ್ಣಿಗೆ ಆ ಚಳವಳಿಯ ರಭಸನ್ನು ತೋರಿಸಬೇಕು. ಕರ್ಣಾಟಕದಲ್ಲಿಯ ಪ್ರತಿಯೊಂದು ರಾಜಕೀಯ ಸಂಸ್ಥೆಯೂ, ಸಾಂಸ್ಕೃತಿಕ ಸಂಸ್ಥೆಯೂ ಏಕೀಕರಣಕ್ಕಾಗಿ ಸೊಂಟಕಟ್ಟಬೇಕು. ಅಸೆಂಬ್ಲಿಗಳಲ್ಲಿ ಅಲ್ಪಸಂಖ್ಯಾಕರಾಗಿದ್ದ ಪಕ್ಷದ ಸಭಾಸದರಿಗೆ ತೀವ್ರವಾದ ಕಾರ್ಯಕ್ರಮಗಳು ಸೇರವಾದುದರಿಂದ, ಶಾಸನವಿರುದ್ಧವಾದ ಈ ಏಕೀಕರಣದ ಕಾರ್ಯವನ್ನು ಕೈಕೊಂಡು ಒಳಗೂ ಹೊರಗೂ ಕಾರ್ಯಮಾಡಲು ತೊಡಗಿದರೆ, ಏನಾದರೂ ಕೆಲಸಮಾಡುತ್ತಿದ್ದೇವೆಂಬ ತೃಪ್ತಿಯವರಿಗೆ ಇರುವುದಲ್ಲದೆ ಕನ್ನಡಿಗರ ಏಕೀಕರಣದ ಗುರಿಯನ್ನು ಸಮೀಪಿಸಲಿಕ್ಕೆ ಸುಲಭಸಾಧ್ಯವಾದೀತು. ಚುನಾವಣೆಯ ಕಾಲದ ಪತ್ರಿಕೆ-ಪ್ರಕಟನೆಗಳಲ್ಲಿ 'ಕರ್ಣಾಟಕ ಏಕೀಕರಣದ ಚಳವಳಿಯನ್ನು ತುಂಬ ಎತ್ತಿ ಹಿಡಿಯುತ್ತೇವೆ' ಎಂದು ಬಾಯುಹವೆಯನ್ನು ಬಿಟ್ಟವರು ಆ ಹವೆಗೆ ಮೂರ್ತಸ್ವರೂಪವು ಬರುವಂತೆ ಯಾವುದಾದರೊಂದು ಕಾರ್ಯಕ್ರಮವನ್ನು ಕೈಕೊಂಡಲ್ಲಿ, ಪ್ರಾಮಾಣಿಕತೆಯ ಪ್ರತ್ಯಕ್ಷಪ್ರಮಾಣವನ್ನು ತೋರಿಸಿದಂತಾಗಿ ಕನ್ನಡಿಗರ ಪ್ರೀತಿ-ವಿಶ್ವಾಸಗಳನ್ನು ಸಂಪಾದಿಸಿದ ಶ್ರೇಯಸ್ಸಾದರೂ ಸಿಕ್ಕೀತು. ಅಸೆಂಬ್ಲಿಯ ಅಧಿಕಾರಸ್ಥಾನದಲ್ಲಿದ್ದ ಕನ್ನಡಿಗರೂ ಕರ್ಣಾಟಕ ಏಕೀಕರಣದ ಗುರಿಯನ್ನು ಮರೆಯಲಾಗದಿಷ್ಟೇ ಅಲ್ಲ; ಆ ಗುರಿಗೆ ವಿಘಾತಕವೆನಿಸಬಹುದಾದ ಪರಪ್ರಾಂತೀಯರ ಚಟುವಟಿಕೆಗಳನ್ನೂ ತೆರೆದ ಕಣ್ಣುಗಳಿಂದ ನೋಡುತ್ತ, ಅವುಗಳಿಗೆ ತಡೆಯನ್ನೊಡ್ಡುವ ತಮ್ಮ ಕರ್ತವ್ಯವನ್ನು ಮರೆತು ನಡೆಯಲಾಗದು.

## ಪರದೇಶ

### ಜಾತಿಗೆ ತಕ್ಕ ನೀತಿ

ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಕೂಲಿಕಾರ ಪಕ್ಷದವರು ತಂದಿದ್ದ ಸೂಚನೆಯ ಮೇಲೆ ಜೂಲೈ ೧೯ ತಾ. ನಿಂದ ೨ ದಿನಗಳ ವರೆಗೆ ಚರ್ಚೆ ನಡೆಯಿತು. ಆಗ ಚರ್ಚಿಲ್ ಮತ್ತು ಲಾಯಿಡ್ ಜಾರ್ಜ ಅವರುಗಳು, ಪ್ರಾಪ್ತವಾಗಿರುವ ಭೀಕರಪರಿಸ್ಥಿತಿಯ ಯಥಾರ್ಥಚಿತ್ರವನ್ನು ಬರೆದು ತೋರಿಸಿ, ಪರರಾಷ್ಟ್ರಮಂತ್ರಿಗಳಾದ ಏಡನ್ನರು ಸರಕಾರದ ಧೋರಣೆಯನ್ನು ಬೈಲಿಗೆಳೆಯುವಂತೆ ಮಾಡಿದರು. ಸ್ಪೇನದೊಳಗಿನ ಕಲಹವನ್ನು ಯುರೋಪೀಯ ರಾಷ್ಟ್ರಗಳು ಒಕ್ಕಟ್ಟಿನಿಂದ ನಿಲ್ಲಿಸದಿದ್ದರೆ, ಮತ್ತು ಹೊರಗಿನ ವರ್ಚಸ್ವಿಗಳಿಗೆ ಸ್ಪೇನದಲ್ಲಿ ಸ್ವೇಚ್ಛಾವಿಹಾರ ಮಾಡಲು ಅನುವು ಮಾಡಿಕೊಟ್ಟರೆ, ಯುರೋಪ್ ಖಂಡವು ಪ್ರವಾಹಪತಿತವಾಗಿ ಮಹಾಯುದ್ಧದ ಘೋರಸಂಕಟದಲ್ಲಿ ಬೀಳದಿರಲಾರದೆಂದು ಏಡನ್ನರು ಒಪ್ಪಬೇಕಾಯಿತು. ಆದರೆ ಇಟಲಿಯ ಪ್ರಭುತ್ವವು ಭೂಮಧ್ಯ ಸಮುದ್ರದಲ್ಲಿ ಕ್ರಮಶಃ ಪ್ರವರ್ಧಮಾನವಾಗುತ್ತ ಬಂದರೆ, ಆ ಸ್ವಾಭಾವಿಕಪ್ರಗತಿಗೆ ಅಡೆತಡೆಯನ್ನೊಡ್ಡುವ ಅಧಿಕಾರವು ಬ್ರಿಟನ್ನಿಗಿಲ್ಲವೆಂದು ಅವರು ಹೇಳಿದರು. ಇದು ರಾಜನೀತಿಯ ಬಾಯಿಚಳಕವಾಯಿತು. ಇದನ್ನೆ ಬಿಚ್ಚುಮಾತಿನಲ್ಲಿ ಹೇಳುವುದಾದರೆ, ಇಟಲಿಯ ಸಮುದ್ರ ಸ್ವಾಮಿತ್ವವನ್ನು ಬೆಳೆಯಗೊಡದಿರುವುದು ಇಂಗ್ಲಂಡಿನ ಕೈಯಲ್ಲಿ ಇದೀಗ ಉಳಿದಿಲ್ಲ. ಇದೇ ಮಾತು ಜರ್ಮನಿ ಮೊದಲಾದ ರಾಷ್ಟ್ರಗಳಿಗೂ ಅನ್ವಯಿಸುವುದು. ಕಳೆದ ಇಟಲಿ — ಅಬಿಸೀನಿಯ ಸಂಗ್ರಾಮದಲ್ಲಿಯೂ ಬ್ರಿಟಿಷರು ಇದೇ ವ್ಯಾವಹಾರಿಕ ನೀತಿಯನ್ನನುಸರಿಸಿದ್ದರು. ಬ್ರಿಟಿಷರು ಲೆಕ್ಕಹಾಕಿ ತೂಕದಿಂದ ಕೆಲಸಮಾಡುವ ಜನರಲ್ಲವೇ ?

### ಗೆದ್ದೆತ್ತಿನ ಹಿಂಬಾಲಿಗರು

ಬ್ರಿಟಿಷರೊಬ್ಬರೆ ಎಂತಲ್ಲ, ಸ್ಪೇನದಲ್ಲಿಯ ಸದ್ಯದ ನರಯಜ್ಞದಲ್ಲಿ ಫ್ರಾಂಕೋವಿನ ಪಕ್ಷಕ್ಕೇ ಗೆಲವು ಕಟ್ಟಿಟ್ಟದ್ದೆಂದು ಯುರೋಪಿನ ಇತರ ರಾಷ್ಟ್ರಗಳವರಿಗೂ ಮನ

CC-0. Jangamwadi Math Collection. Digitized by eGangotri

ವರಿಕೆಯಾಗತೊಡಗಿದೆ. ಈ ಅಂತಃಕಲಹವು ಪ್ರಾರಂಭವಾಗಿ ಒಂದು ವರ್ಷವಾಯಿತು. ಸ್ಪೇನದ ಸಾಮ್ಯವಾದಿಗಳು ತಮ್ಮ ಸ್ವಾಯತ್ತತೆಯನ್ನುಳಿಸಿಕೊಳ್ಳಲು ಅಭೂತಪೂರ್ವವಾದ ಶೌರ್ಯವನ್ನೆಸಗಿದರು. 'ಇಂಟರ್‌ನ್ಯಾಶನಲ್ ಬ್ರಿಗೇಡ್'ನವರ ಸಹಾಯದಿಂದ ಮಾಡ್ರಿಡ್ ನಗರವನ್ನು ಅಲ್ಲಿಯ ಸರಕಾರದವರು ಸಂರಕ್ಷಿಸುತ್ತಿದ್ದುದು ಜಗತ್ತಿನ ಇತಿಹಾಸದಲ್ಲಿ ಹೊನ್ನಕ್ಕರಗಳಲ್ಲಿ ಬರೆದಿಡಲು ತಕ್ಕುದಾಗಿದೆ. ಆದರೆ ಇಟಲಿ—ಜರ್ಮನಿಗಳ ಅಸಾಧಾರಣ ಸಹಾಯದ ಮೂಲಕ ಫ್ರಾಂಕೋವಿನ ಪಕ್ಷವು ಜಯಶೀಲವಾಗುತ್ತ ನಡೆದಿದೆ. ಈ ರಾಷ್ಟ್ರಗಳೆರಡೂ ಕೆಲತಿಂಗಳ ಹಿಂದೆಯೇ 'ಫ್ರಾಂಕೋ ಸರಕಾರ'ಕ್ಕೆ ಮಾನ್ಯತೆಯನ್ನಿತ್ತಿದ್ದಂತೂ ಸರಿಯೆ; ಆದರೆ ಜರ್ಮನಿಯು ಅದರೊಡನೆ ವ್ಯಾಪಾರದ ಸಂಧಾನವನ್ನು ಮಾಡಿಕೊಂಡು ಇನ್ನೊಂದು ಮುಂಗಡಿಯಿಟ್ಟಿರುವುದು. ಸೇನಾಪತಿ ಫ್ರಾಂಕೋ, ತಾನು ಗೆದ್ದಿದ್ದ ಸೀಮೆಯಲ್ಲಿ ಆಧುನಿಕ—ಸುಧಾರಿಸಿದ—ಪದ್ಧತಿಯಿಂದ ಆಡಳಿತವನ್ನು ನಡೆಯಿಸಿರುವನು. ಫ್ರಾಂಕೋವಿನ ಕೈವಶವಾಗಿದ್ದ ನಾಡು ಉಳಿದ ಭಾಗಕ್ಕಿಂತ ಈಗಾಗಲೆ ದೊಡ್ಡದಾಗಿದೆ. ಮಾದ್ರಿದೊಂದೇ ಉಳಿದಿದೆ. ಅದಷ್ಟು ಕೈಸೇರಿದ ಮೇಲೆ ಇಂಗ್ಲಂಡಾದಿ ವ್ಯವಹಾರವೀರ ರಾಷ್ಟ್ರಗಳು ಫ್ರಾಂಕೋವಿನ ಸರಕಾರಕ್ಕೆ ಪ್ರಕಟಮಾನ್ಯತೆಯನ್ನು ಕೊಡಲು ಅನುಕೂಲವಾಗುವುದು.

### ಭೀಕರ ಭವಿಷ್ಯತ್ತು

ಸ್ಪೇನದಲ್ಲಿಯ ಫ್ರಾಂಕೋವಿನ ರಾಜ್ಯವು ಜರ್ಮನಿ—ಇಟಲಿಗಳ ಬೆಂಬಲದಿಂದ ಗಟ್ಟಿಯೂರುತ್ತಿದೆ. ಜರ್ಮನಿ—ಇಟಲಿಗಳೆರಡೂ ಫಾಸಿಸ್ಟ ಮತದವಾಗಿದ್ದುದರಿಂದ (ಎಂದರೆ ರಾಷ್ಟ್ರಾಂಧವಾಗಿದ್ದುದರಿಂದ), ಮತ್ತದು ಫ್ರಾಂಕೋವಿಗೆ ಅನುಕೂಲ ಸಂಗತಿಯಾಗಿರುವುದರಿಂದ, ಅಲ್ಲದೆ ಸಮೀಪದ ಪೋರ್ತುಗಾಲವೂ ಮೂಕ—ಪ್ರಕಟ ಸಮ್ಮತಿ—ಸಹಕಾರಗಳನ್ನಿತ್ತಿರುವುದರಿಂದ, ಈ ತ್ರಿಕೂಟದ ಶಕ್ತಿಯು ಅಜಯ್ಯವಾಗಿ ಪರಿಣಮಿಸುವ ಸಂಭವವಿದೆ. ಇಟಲಿ—ಜರ್ಮನಿಗಳು ಬಾಸ್ಕ ಪ್ರಾಂತದಲ್ಲಿಯ ಕಣಿಗಳ ಮೇಲೂ ಭೂಮಧ್ಯ ಸಮುದ್ರದಲ್ಲಿಯ ಕೇಂದ್ರಸ್ಥಳಗಳ ಮೇಲೂ ಹೊಂಚುಹಾಕಿಕೊಂಡಿವೆ. ಇಂಗ್ಲಿಷ್ ಹಡಗುಗಳು ಜಿಬ್ರಾಲ್ಟರ್ ಸಾಮುದ್ರಧುನಿಯೊಳಗಿಂದ ಹಾಯ್ದು ಹೋಗುವುದುಂಟು. ಜಿಬ್ರಾಲ್ಟರಿನ ಮೇಲಿನ ಬ್ರಿಟಿಷರ ಒಡೆತನದ ಮೂಲಕ ಇದು ಸಾಧ್ಯವಾಗಿತ್ತು. ಆದರಿದೀಗ ಜಿಬ್ರಾಲ್ಟರಿನ ಎದುರಿಗಿನ (ಎಂದರೆ ದಕ್ಷಿಣ) ಸಮುದ್ರ ತೀರವು ಫ್ರಾಂಕೋವಿನ ಕೈಯಲ್ಲಿ ಹೋಗಿದ್ದು, ಅಲ್ಲಿ ಅವನ ದೊಡ್ಡದೊಡ್ಡ ತೋಪುಗಳು ಕಣ್ಣುಕಿಸಿದು ಕಾವಲಿಟ್ಟಿವೆ. 'ಅವುಗಳಿಗಿಂತ ಹೆಚ್ಚಿನ ತೋಪುಗಳು ಜಿಬ್ರಾಲ್ಟರಿನಲ್ಲಿವೆ' ಎಂದು ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಹೇಳಲಾದ ಸಮಾಧಾನವು ವಿಫಲವೆಂಬುದು, ಮುಂದಿನ ಮಹಾಯುದ್ಧವು ಸ್ಫೋಟಗೊಂಡರೆ ತಿಳಿದುಬರುವುದು. ಅಂತೂ ಕ್ಷಿಪ್ರದಲ್ಲಿಯೆ ಇಟಲಿಯು ಭೂಮಧ್ಯಸಮುದ್ರದ ಸ್ವಾಮಿಯಾಗಿ, 'ಸಾಗರ ಸ್ವಾಮಿನಿ'ಯೆನಿಸಿದ ಬ್ರಿಟಾನಿಯಳನ್ನು ಪ್ರತಿಭಟಿಸುವುದು ಖಂಡಿತವಾಗಿ ತೋರುತ್ತದೆ.

### ಆರ್ಥಿಕ—ಧಾರ್ಮಿಕ ಹಕ್ಕುಗಳ ಹೋರಾಟ

ರಾಜಕೀಯ ಕ್ಷೇತ್ರದಲ್ಲಿ ಕೇವಲ ರಾಜಕೀಯ-ಆರ್ಥಿಕ ಹಕ್ಕುಗಳ ವಿಚಾರಗಳಿಗೆ ಮಾತ್ರ ಮಹತ್ತ್ವವಿದೆಯೇ?—ಧರ್ಮ, ಸಂಸ್ಕೃತಿ ಮೊದಲಾದ ಮನೋಭಾವನೆಯ ವಿಷಯಗಳಿಗೆ ಕಾಸಿನ ಬೆಲೆಯೂ ಇಲ್ಲವೆ?—ಎಂಬ ಸಮಸ್ಯೆಯನ್ನು ನಾವು ಯಥಾರ್ಥವಾಗಿ ಪರಿಶೀಲಿಸಬೇಕಾದರೆ, ಸದ್ಯಕ್ಕೆ ಪ್ಯಾಲೆಸ್ಟಾಯಿನಿನಲ್ಲಿ ನಡೆದ ಜ್ಯೂ-ಅರಬರ ತಿಕ್ಕಾಟವನ್ನು ಗಮನಿಸಬೇಕು.

ಪ್ಯಾಲೆಸ್ಟಾಯಿನು ಯಹೂದಿ-ಕ್ರಿಸ್ತೀ ಧರ್ಮಗಳೆರಡಕ್ಕೂ ತಾಯ್ನಾಡು. ಯಹೂದಿಗಳೊಡನೆ ಅವರ ಧರ್ಮವೂ ದೇಶಾಂತರಮಾಡಿತು; ಆದರೆ ಮಹಾಯುದ್ಧದಲ್ಲಿ ಇಂಗ್ಲಂಡ್ ಆದಿ ರಾಷ್ಟ್ರಗಳು ಜಯಶೀಲವಾಗಿ, ರಾಷ್ಟ್ರಸಂಘದ ಅನುಮತಿಯಿಂದ ಅರಬಸ್ತಾನದ ಬಹುಭಾಗವು ೧೯೨೦ರಲ್ಲಿ ಇಂಗ್ಲಂಡಿನ 'ಮೇಲ್ವಿಚಾರಣೆ'ಯ ಕೆಳಗೆಬಂದು ಯಹೂದಿಗಳಿಗೆ ತಮ್ಮ ಧರ್ಮಭೂಮಿಯಲ್ಲಿ ಪುನಃಪ್ರವೇಶಮಾಡಲು ಅವಕಾಶವು ದೊರೆತಂದಿನಿಂದ, ಜಗತ್ತಿನಲ್ಲಿ ಚೆಲ್ಲಾಪಿಲ್ಲಿಯಾಗಿ ಹರಿದು ಹಂಚಿಹೋದ ಜ್ಯೂ ಜನರು ತಮ್ಮ ಸಂಪತ್ತಿನ ಬಲದಿಂದ ಪ್ಯಾಲೆಸ್ಟಾಯಿನಿನಲ್ಲಿ ಮನೆಮಾರು-ಆಸ್ತಿ-ಜಿಂದಗಿ-ತೋಟಪಟ್ಟಿಗಳನ್ನು ಮಾಡಿಕೊಂಡು, ಅಲ್ಲಿ ಸ್ಥಾಯಿಕವಾಗಿ ನೆಲಸಿದ ಅರಬರ ಭೂಮಿಕಾಣಿಯ ಬಹುಭಾಗವನ್ನು ಕೈವಶಮಾಡಿಕೊಂಡರು. ಅತಿ ಪ್ರಾಚೀನ ಕಾಲದಲ್ಲಿ ತಮ್ಮ ಧರ್ಮದ ಮಾತೃಸ್ಥಾನವೆನಿಸಿದ ಪ್ರಾಂತದ ಬಗ್ಗೆ ಆಂತರಿಕಮಮತೆ, ಈಚೆಗೆ ದೊರಕಿಸಿದ ಆಸ್ತಿ-ಪಾಸ್ತಿಯ ಹಕ್ಕುಗಳು—ಇವೆರಡೂ, ಯಹೂದಿಗಳ ಕಾಲು ಅಲ್ಲಿ ಬಲವಾಗಿ ಊರುವಂತೆ ಮಾಡಿವೆ. ಮೇಲಾಗಿ ಅವರ ಬೆಂಬಲಕ್ಕೆ ಬ್ರಿಟಿಷ್ ಸಾಮ್ರಾಜ್ಯಸತ್ತೆಯು (ತನ್ನ ಸ್ವಾರ್ಥ ದೃಷ್ಟಿಯಿಂದಲಾದರೂ ಆಗಲಿ) ಸಕಲಸಿದ್ಧತೆಯಿಂದ

CC-0. Jangamwadi Math Collection. Digitized by eGangotri

ನಿಂತಿವೆಯೆಂದಮೇಲೆ, ಈಗ ಸಾಗಿದ ಹೋರಾಟವು ಇನ್ನೂ ಹಲವು ದಿನ ನೆತ್ತರಹೊಳೆಯನ್ನು ಹರಿಯಿಸಿಯೆ ಮುಗಿ-ಯುವುದೆಂದರೆ ಅತ್ಯುಕ್ತಿಯಾಗದು.

ಮೊನ್ನೆಮೊನ್ನೆ ಬ್ರಿಟಿಷರು ನಿಯಮಿಸಿದ ರಾಯಲ್ ಕಮಿಶನಿನ ವರದಿಯು ಹೊರಬಿದ್ದಿದೆ. ಅದರಲ್ಲಿಯ ಅಂಶ-ಗಳನ್ನು ಬ್ರಿಟಿಷ್ ಸರಕಾರವು ವಿಚಾರಿಸುತ್ತಲಿದೆ. ಅದರ ಮುಖ್ಯಾಂಶಗಳನ್ನು ಇಲ್ಲಿ ಕೊಡುತ್ತಿದ್ದೇವೆ.

ಅರಬರ ರಾಷ್ಟ್ರೀಯ ಸ್ವಾತಂತ್ರ್ಯದ ಆಕಾಂಕ್ಷೆ, ಪ್ಯಾಲೆಸ್ಟಾಯಿನು ಜ್ಯೂಗಳ ಸ್ವದೇಶವಾದುದರಿಂದ ಅವರ ಬಗ್ಗೆ ಅರಬರಿಗೆ ಎನಿಸುವ ಭೀತಿ-ಇವೆರಡು ದೊಂಬಿಯ ಮುಖ್ಯಕಾರಣಗಳು. ಮುಸಲ್ಮಾನ, ಯಹೂದಿ, ಕ್ರಿಶ್ಚನ್-ಈ ಮೂರು ಧರ್ಮಗಳು ಪ್ಯಾಲೆಸ್ಟಾಯಿನ್ ಪ್ರಾಂತವನ್ನು ಮೂರುತೆರನಾಗಿ ಮಾಡಿಬಿಟ್ಟಿವೆ.ಪ್ರಾಂತವು ತೀರ ಕಿರಿದು; ಆದರೆ ಮೂರು ಭಾಷೆಗಳು ನಡೆಯುತ್ತಿವೆ. ಮೂರು ಧರ್ಮಗಳಾದುದರಿಂದ ವಾರದಲ್ಲಿ ಮೂರು ರಜೆಯ ದಿನಗಳು, ಮೂರು ತೆರನಾದ ಹಬ್ಬದ ರಜೆಗಳು, ಮೂರು ತೆರನಾದ ಕಾಯಿದೆಕಾನೂನುಗಳು—ಹೀಗಾಗಿ ಎಲ್ಲವೂ ಮೂರಾಬಟ್ಟೆ. ಕ್ರಿಸ್ತ-ಯಹೂದಿಗಳು ಒಂದೆಡೆ ಸೇರಿಯಾರು—ಆದರೆ ಅರಬ-ಯಹೂದಿಗಳು ೩—೬ ಅಂಕಿಗಳಂತೆ ಪರಸ್ಪರ-ವಿಮುಖರೇ. ಎಂತಲೆ ಪ್ಯಾಲೆಸ್ಟಾಯಿನಿನಲ್ಲಿ ಪಾಲುಮಾಡಿ, ಎರಡೂ ಜಾತಿಗಳವರಿಗೂ ಹಂಚಿಬಿಡುವುದು ವಿಹಿತ. ಆದರೆ ಕೆಲಕೆಲವು ಪಟ್ಟಣಗಳಲ್ಲಿ ಮಿಶ್ರ-ವಸತಿಯಿದೆ; ಅವು ಬ್ರಿಟಿಷರ 'ಪಾಲನ'ಕ್ಕೊಳಪಟ್ಟುವಾಗಿರಬೇಕು. ಜ್ಯೂಗಳಿಗೆ ದೊರೆಯುವ ಪ್ರದೇಶವು ಅರಬರಿಗಿಂತ ದೊಡ್ಡದಾಗುವುದರಿಂದ, ಜ್ಯೂಗಳು ಅರಬರಾಜ್ಯಕ್ಕೆ ಕಪ್ಪ-ಕೊಡಬೇಕು. ಆದರೆ ಇಷ್ಟರಿಂದ ಅರಬರಾಜ್ಯದ ಖರ್ಚು-ವೆಚ್ಚ ತೂಗದುದರಿಂದ, ಬ್ರಿಟಿಷ್ ಪಾರ್ಲಿಮೆಂಟು ಅರಬಸಂಸ್ಥಾನಕ್ಕೆ ೨೦ ಲಕ್ಷ ಪೌಂಡಿನ ಸಹಾಯವನ್ನು ಕೊಡಬೇಕು.

ಈ ವಿಚಾರಕ್ಕೆ ಅರಬರು ತೀವ್ರ ಪ್ರತೀಕಾರವನ್ನು ಮಾಡುತ್ತಿರುವರಲ್ಲದೆ, ನೆರೆಹೊರೆಯ ಇರಾಕ್ ಮೊದಲಾದ ಸ್ವತಂತ್ರ ಅರಬಪ್ರದೇಶಗಳ ಅರಸರು ಮತ್ತು ತುರ್ಕ-ಸ್ಥಾನದ ಸರ್ವಾಧಿಕಾರಿಯಾದ ಕೆಮಾಲಪಾಶಾ ಮೊದಲಾದ-ವರು ಪ್ರಬಲವಿರೋಧವನ್ನು ಪ್ರಕಟಿಸಿರುವುದರಿಂದ ಕಮಿಶನಿನ ಸೂಚನೆಗಳನ್ನು ಅಂಗೀಕರಿಸಲು ಸಿದ್ಧವಾಗಿರುವ ಬ್ರಿಟಿಷ್ ಸರಕಾರವು ಸ್ವಲ್ಪ ಹಿಂದೆಮುಂದೆ ನೋಡುತ್ತಿದೆ.

# ನಮ್ಮ ಮಾತು

### ಮೈಸೂರು ಇನ್ಶೂರೆನ್ಸ್ ಕಂಪನಿ

ಮೂರನೆಯ ವರ್ಷದ ವರದಿಯಿಂದ ವ್ಯಕ್ತವಾಗುವ ಈ ಕಂಪನಿಯ ಪ್ರಗತಿಯು ಯಾರಿಗಾದರೂ ಸಮಾಧಾನ ವನ್ನುಂಟುಮಾಡುವಂತಹದಾಗಿದೆ. ಹಿಂದಿನ ವರ್ಷದಲ್ಲಿ ೪೯೨ ವಿಮೆಯ ದರಖಾಸ್ತುಗಳು ಬಂದಿದ್ದು, ಅವುಗಳಲ್ಲಿ ರೂ. ೫೯೪೯೧೨ ಬೆಲೆಯುಳ್ಳವು ಸ್ವೀಕೃತವಾಗಿದ್ದುವು. ಇದರ ಬದಿಯಲ್ಲಿಯೇ ಈ ವರ್ಷ ಬಂದ ೧೧೪೪ ದರಖಾಸ್ತು ಗಳನ್ನಿರಿಸಿ ನೋಡಿದರೆ,ಪ್ರಗತಿಯು ತ್ವರಿತವಾಗಿಯೆ ನಡೆದಿದೆ ಯೆಂದು ಯಾರಾದರೂ ಒಪ್ಪಬಹುದಾಗಿದೆ. ಈ ದರಖಾಸ್ತುಗಳಲ್ಲಿ ರೂ. ೮,೬೨,೦೭೫ ಗಳಷ್ಟರವು ಸ್ವೀಕೃತವಾಗಿವೆ.

ಕಂಪನಿಯ ಸ್ಥಾಪನೆಗಾಗಿ ತಗಲಿದ ವೆಚ್ಚವನ್ನು ವರುಷ ವರುಷವೂ ತೀರಿಸುತ್ತಬಂದು ಉಳಿದಿರುವ ರೂ. ೬೦೦ ಗಳನ್ನು ಈ ಸಲ ತೀರಿಸಿದ್ದಲ್ಲದೆ, ರೂ. ೧೬,೨೨ಗಳ ವಿಮಾನಿಧಿಯನ್ನೇರ್ಪಡಿಸಿದ್ದು ಶ್ಲಾಘನೀಯವಾಗಿದೆ. ರದ್ದಾದ ಉದ್ಯಮದ ಮತ್ತು ಆಡಳಿತದ ವೆಚ್ಚದ ಪ್ರಮಾಣವು ಅಲ್ಪವಿದ್ದು, ಅದು ಆಡಳಿತದವರು ಹೆಮ್ಮೆ ಪಡಬೇಕಾದ ವಿಷಯವೇ ಸರಿ. ಈವರೆಗೆ ಒಟ್ಟು ರೂ. ೧,೧೩೦ ರಷ್ಟು ಮಾತ್ರ ಕ್ಲೇಮಾಗಿ ಪರಿಣಮಿಸಿರುವುದು ವಿಮೆಗಳ ಆಯ್ಕೆಯ ವಿಷಯದಲ್ಲಿ ಆಡಳಿತಮಂಡಳಿಯು ತೋರಿಸಿದ ವಿವೇಕಕ್ಕೆ ಸಾಕ್ಷಿಯಾಗಿದೆ.

ಹೈದರಾಬಾದ' ಸಂಸ್ಥಾನದಲ್ಲಿ ಶಾಖೆಯೊಂದನ್ನು ತೆರೆದಿರುವುದಲ್ಲದೆ, ಹಿಂದುಸ್ಥಾನದಲ್ಲಿ ಎಲ್ಲೆಡೆಯಲ್ಲಿಯೂ ಕಾರ್ಯ ನಿರ್ವಹಿಸಲು ಅನುಕೂಲವಾಗಲೆಂದು, ಇಂಡಿಯಾ ಸರಕಾರದಲ್ಲಿರಿಸಬೇಕಾದ ಠೇವಿನ ವ್ಯವಸ್ಥೆಯನ್ನಾದರೂ ಮಾಡಿದ್ದಾರೆ.

ತಮ್ಮ ಕರ್ತವ್ಯದ ಜವಾಬ್ದಾರಿಯರಿತ ಕಾರ್ಯಕರ್ತರ ನೇತೃತ್ವದಲ್ಲಿ ಕನ್ನಡನಾಡಿನ ಈ ಕಂಪನಿಯು ಇತೋ-ಪ್ಯತಿಶಯವಾಗಿ ಜಯಶೀಲವಾಗಲೆಂದು ಕೋರುತ್ತೇವೆ.

CC-0. Jangamwadi Math Collection. Digitized by eGangotri

## ಎಲ್ಲರೂ ಅರಿಯಬೇಕಾದುದು

೧. ಜಯಕರ್ನಾಟಕ ಕಾರ್ಯಾಲಯದ ಪರವಾಗಿ ಪ್ರಚಾರ ಕಾರ್ಯವನ್ನು ಮಾಡಲೆಂದು ಹೋದ ಶ್ರೀ|| ಶ್ರೀನಿವಾಸರಾವ ಬಿ. ಮಂತ್ರಿ ಇವರು ತಮ್ಮ ಕೆಲಸ- ದಿಂದ ಬಿಡುಗಡೆಮಾಡಲ್ಪಟ್ಟಿರುವುದರಿಂದ, ಇನ್ನುಮುಂದೆ ಜಯಕರ್ನಾಟಕ ಪತ್ರಿಕೆಯ ಚಂದಾಬಗ್ಗೆ, ಜಯಕರ್ನಾಟಕ ದಲ್ಲಿಯ ಜಾಹೀರಾತಿನ ಬಗ್ಗೆ, ಜಯಕರ್ನಾಟಕ ಗ್ರಂಥ- ಮಾಲೆಯ ಚಂದಾ ಬಗ್ಗೆ, ಮತ್ತು ಜಯಕರ್ನಾಟಕ ಕಾರ್ಯಾಲಯಕ್ಕೆ ಸಂಬಂಧಿಸಿದ ಇನ್ನು ಬೇರೆ ಯಾವುದೇ ವ್ಯವಹಾರದ ಬಗ್ಗೆ ಅವರ ಕೂಡ ಯಾರೂ ಹಣದ ವ್ಯವಹಾರ ಮಾಡಬಾರದೆಂದು ಈ ಮೂಲಕ ತಿಳಿಸುತ್ತೇವೆ.

೨. ನಮ್ಮ ಕಾರ್ಯಾಲಯವನ್ನು ೭ ತಿಂಗಳ ಹಿಂದೆಯೆ ಬಿಟ್ಟುಹೋದ ಶ್ರೀ. ದೇವಜಿ ಬಾಬು ಮುತಾಲಿಕ ದೇಸಾಯಿ ಇವರದೂ ಜ.ಕ. ಕಾರ್ಯಾಲಯದ್ದೂ ಯಾವಬಗಯಿ ಸಂ- ಬಂಧವೂಉಳಿದಿಲ್ಲವೆಂಬುದನ್ನು ಇಲ್ಲಿ ತಿಳಿಸಲಪೇಕ್ಷಿಸುತ್ತೇವೆ.

## ಬರಲಿವೆ

**ಬಾದಾಮಿಯ ಚಾಲುಕ್ಯರ ಕಾಲದ ರಾಜ್ಯವ್ಯವಸ್ಥೆ**
ಶ್ರೀ. ಪಾಂ. ಭೀ. ದೇಸಾಯಿ ಎಂ. ಎ. (ಆನರ್ಸ್)

**ಆ ಭಾನುವಾರದ ರಾತ್ರಿ (ಸಣ್ಣ ಕಥೆ)**
ಶ್ರೀ. ಕೆ. ನರಸಿಂಹ ಮೂರ್ತಿ ಬೆಂಗಳೂರು.

**ಸರ್ವಜ್ಞನ ಸ್ವಾನುಭವ ಸಾಹಿತ್ಯ (ಸಾಹಿತ್ಯವಿಚಾರ)**
ಶ್ರೀ. ಎಸ್. ಕೆ. ಕುಲಕರ್ಣಿ ಬಿ. ಎ. (ಆನರ್ಸ್)

**ಮುತ್ತಿನ ಸರ (ಸಣ್ಣಕಥೆ)**
ಶ್ರೀ. ದತ್ತಾತ್ರೇಯ ಕೆರೂರು ಬೆಳಗಾಂವಿ

**ಕಾವೊಯೆನ್ಸ್ ಕವಿಯ ' ಲುಸಿಯಾಡ್ ' ಮಹಾಕಾವ್ಯ**
ಶ್ರೀ. ಬಿ. ಅಶ್ವತ್ಥನಾರಾಯಣರಾಯರು ಬೆಂಗಳೂರು.

**ಮದ್ಯದ ಮೀಮಾಂಸೆ (ಹಾಸ್ಯಪ್ರಬಂಧ)**
"ಶ್ರೀರಂಗ"ರು





**ಬಾಲಾರ್ಕಮಧು:**— ಮಕ್ಕಳಿಗೆ ಇದನ್ನು ಕೊಡುವು ದರಿಂದ ಶಕ್ತಿಯೂ ಆರೋಗ್ಯವೂ ಹೆಚ್ಚುವುದು. ಇದು ಮಧುರವಾಗಿದೆ. ಬೆಲೆ ಶೀಸೆ ೧ಕ್ಕೆ ೦-೧೨-೦. ಟ.ಖ.೦-೧೨-೦

**ಚಕ್ರಬಿಂದು:**— ಪಿತ್ತಕೋಶಪ್ಲೀಹ (Spleen and Lever Enlargement) ಎಂಬ ಮಕ್ಕಳ ಗಡ್ಡೆರೋಗಕ್ಕೆ ಪರಮೌಷಧ.

ತಿಂಗಳ ಔಷಧ ಬೆಲೆ V. P. ಸೇರಿ ೩-೮-೦

ಎಂ. ವಿ. ಪ್ರಾಸಾದಿಕ ಔಷಧಾಲಯ, ಶಿವಮೊಗ್ಗಾ (ಮೈಸೂರು ಸೀಮೆ)


**ಕನ್ನಡ ವಾಕ್ಪಟುಗಳ ಗೆಲವು ಎಲ್ಲಿದೆ?**
ಶ್ರೀ. ಬಿ. ಪಾರ್ಥಸಾರಥಿರಾಯರು.


ಸಾದಾ: ೧೦ ಆಣೆ.] **ಗರತಿಯಹಾಡು** [ಕ್ಯಾಲಿಕೊ: ೧ ರೂ

ಹೆಣ್ಣುಮಕ್ಕಳು ಬೀಸುವಾಗ, ತೊಟ್ಟಿಲ ತೂಗುವಾಗ ಇ. ಪ್ರಸಂಗಗಳಲ್ಲಿ ಹಾಡುವ ತ್ರಿಪದಿಗಳ ಸಂಗ್ರಹ. ಮೊದಲನೆಯ ಆವೃತ್ತಿಯು ಮುಗಿದುಹೋದುದರಿಂದ ಎರಡನೆಯದನ್ನು ಅಚ್ಚುಹಾಕಿಸಿದೆ. ಉಪೋದ್ಘಾತರೂಪವಾಗಿ ಶ್ರೀಯುತರು- ಗಳಾದ ಬಿ. ಎಂ. ಶ್ರೀಕಂಠಯ್ಯ, ದ. ರಾ. ಬೇಂದ್ರೆ, ಮಾಸ್ತಿ ವೆಂಕಟೇಶಯ್ಯಂಗಾರ್ ಇವರ ಬರಹಗಳು ಅವು ಜನಪದಸಾಹಿತ್ಯದ ಮರ್ಮವನ್ನು ತಿಳಿಸತಕ್ಕ ಶ್ರೇಷ್ಠತರಗತಿಯ ಪ್ರಬಂಧಗಳೆ ಆಗಿವೆ. ಅಪರಿಚಿತ ಮತ್ತು ಬಳಕೆಯ ಮಾತಿನ—ಪದಪ್ರಯೋಗಗಳ ಸಾರ್ಥ ವಿವರಣೆ. ಆ್ಯಂಟಿಕ್ ಕಾಗದದ ಮೇಲೆ ಮುದ್ದಾದ ಮುದ್ರಣ. ಹೊದಿಕೆಯ ಮೇಲೆ ಭಾವಗರ್ಭಿತವಾದ ಸುಂದರ ಚಿತ್ರ.

ಜಯಕರ್ನಾಟಕ ಕಾರ್ಯಾಲಯ, ಧಾರವಾಡ.


CC-0. Jangamwadi Math Collection. Digitized by eGangotri

# ಜಯಕರ್ನಾಟಕ ಗ್ರಂಥಮಾಲೆ

ಗ್ರಂಥಮಾಲೆಗೆ ೩ ವರ್ಷಗಳು ತುಂಬಿ, ನಾಲ್ಕನೆಯ ವರ್ಷದಲ್ಲಿ ಅದು ಹೆಜ್ಜೆಯಿಟ್ಟಿದೆ. ಸರಸ, ಸುಲಲಿತ, ಮನೋರಂಜಕ, ವಿನೋದಾತ್ಮಕ, ಉಪಯುಕ್ತ, ಪ್ರೌಢ ವಿಷಯಗಳ ಮೇಲೆ ಹಲವು ಪುಸ್ತಕಗಳನ್ನು ಕನ್ನಡಿಗರಿಗೆ ಸಲ್ಲಿಸಲಾಗುವುದು.

ಕ್ರೌ. ೧/೮ ಆಳತೆಯ ಸು. ನೂರಾಇಪ್ಪತ್ತು ಪುಟಗಳುಳ್ಳ ೬ ಗ್ರಂಥಗಳು ಚಂದಾದಾರರ ಕೈಸೇರುವವು. ವಾರ್ಷಿಕ ಚಂದಾ ಅ. ವೆ. ಸೇರಿ ರೂ. ೩—೪—೦. **ಜಯಕರ್ನಾಟಕದ ಚಂದಾದಾರರಿದ್ದವರಿಗೆ ೩—೦—೦ ಮಾತ್ರ.**

ಈಗ ಗ್ರಂಥಮಾಲೆಯ ಚಂದಾದಾರರಲ್ಲದವರಿಗೆ ಅಂಚೆಯ ವೆಚ್ಚ ಬೇರೆ. ನಡೆಯುವ ಮತ್ತು ಮುಂದಿನ ವರುಷದ ಚಂದಾದಾರರಾಗಬಹುದು. ಆದರೆ ಹಿಂದಿನ ಪ್ರಕಟನೆಗಳ ಬಗ್ಗೆ ಚಂದಾಸೌಲಭ್ಯವಿಲ್ಲ. ಇಂದಿನ ಚಂದಾದಾರರೂ ಕೂಡ ಹಿಂದಿನ ಪುಸ್ತಕಗಳ ಬೆಲೆಯನ್ನೂ ಅಂಚೆಯ ವೆಚ್ಚವನ್ನೂ ಸಹಿಸಬೇಕಾಗುವುದು.

## ಪ್ರತಿ ಮನೆಯಲ್ಲಿಯೂ ವಾಚನಾಲಯದಲ್ಲಿಯೂ ಸಂಗ್ರಾಹ್ಯವಾದ ಗ್ರಂಥಗಳು

### ಮುಂಚಿನ ಪ್ರಕಟನೆಗಳು

**ಹರಟೆಗಳು:** ಶ್ರೀ. ಬೇಂದ್ರೆಯವರು ಬರೆದ ೫ ಹರಟೆಗಳು; ಪ್ರೊ. ಗೋಕಾಕ ಅವರ 'ಯುಗಾಂತರ' ಎಂಬ ಹಾಸ್ಯಪ್ರಬಂಧ ಸಹಿತ. ೦-೧೦-೦

**ಅದೇನೆ ಇರಲಿ:** ನೈಜಾಂ ಕರ್ನಾಟಕದ ಶ್ರೀ. ಮನ್ಸಬ್ದಾರರು ಬರೆದ ಸಾಮಾಜಿಕ ನಾಟಕ. ೦-೮-೦

**ದರಿದ್ರನಾರಾಯಣ:** ಪ್ರೊ. ಜಾಗೀರದಾರ ರಂಗಾಚಾರ್ಯರು ಬರೆದ ಸಾಮಾಜಿಕ ನಾಟಕ. ೦.೧೦.೦

**ಜೀವನಸಂಗೀತ:** ೧೪ ಲಾವಣಿಗಳು. ೦-೧೦-೦

### ಮೂರನೆಯ ವರ್ಷದ ಪ್ರಕಟನೆಗಳು

**ಮಾವಿನ ತೋಪು:** ಶ್ರೀಮಾನ್ ಹ. ಪೀ. ಜೋಶಿ, ಬಿ. ಎ. ಅವರು ಬರೆದ ಸಾಮಾಜಿಕ ಕಾದಂಬರಿ. ೦-೧೦-೦

**ತರಂಗಿಣಿ:** ಶ್ರೀ. ಟೇಂಗ್ಸೆ ಗೋವಿಂದರಾಯರು ಬರೆದ ಕಾವ್ಯಮಯ ನಾಟ್ಯಚಿತ್ರ. ೦.೬.೦

**ಬಂಗಾರದ ಡಾಬು:** ಶ್ರೀಮಾನ್ ಕೆ. ಗೋಪಾಲಕೃಷ್ಣ ರಾಯರ ಕಥಾಸಂಗ್ರಹ. ೦.೧೦.೦

**ಉದಯರಾಗ:** ಶ್ರೀ. ಅ. ನ. ಕೃಷ್ಣರಾಯರು ಬರೆದ ಸಾಮಾಜಿಕ ಕಾದಂಬರಿ. ೦.೧೨.೦

**ರಾಜವಲ್ಲಭ:** ಶ್ರೀ. ಹ. ಪೀ. ಜೋಶಿ ವಿರಚಿತ ಸಂಗೀತ ಪೌರಾಣಿಕ ನಾಟಕ. ೦.೧೦.೦

**ಕೆಲವು ನೀಳ್ಗತೆಗಳು:** ಹೆಸರು ಪಡೆದ ಕತೆಗಾರರ ಆರು ಕತೆಗಳು. ೦.೧೦.೦

**ಮಲ್ಲಿಗೆದಂಡೆ:** ಸಂಗ್ರಾಹಕರು: ಶ್ರೀ. ಕಾಪಸೆ ರೇವಪ್ಪನವರು ಹಲಸಂಗಿ. ೦-೧೨-೦

ಫೇವರವೇಟಿ ಕಾಗದದ ಕ್ಯಾಲಿಕೋ ಹೊದಿಕೆಯ ಪ್ರತಿಗೆ ೧.೨.೦

### ನಾಲ್ಕನೆಯ ವರ್ಷದ ಪ್ರಕಟನೆಗಳು

**ಪರಿಣೀತಾ:** ವಿಶ್ವವಿಖ್ಯಾತ ವಂಗ ಕಾದಂಬರೀಕಾರರಾದ ಶ್ರೀ. ಶರಚ್ಚಂದ್ರ ಚಟ್ಟೋಪಾಧ್ಯಾಯರ ಅತ್ಯಂತ ರಸಭರಿತ ಕಾದಂಬರಿ. ಶ್ರೀ. ಗುರುನಾಥ ಜೋಶಿಯವರು ಅನುವಾದಿಸಿದುದು. ೦-೧೦-೦

**ಹೂಬಿಸಿಲು:** ಸೌ॥ ಶಾಮಲೆಯವರ ಸರಸ ಕಥಾಸಂಗ್ರಹ. ಶ್ರೀ. ಆನಂದಕಂದರ ಮುನ್ನುಡಿಯೊಡನೆ. ೦-೧೦-೦

**ಸಾಲುದೀಪ:** ಶ್ರೀಮಾನ್ ಜೈನೇಂದ್ರ ಕುಮಾರರ ಆಯ್ದ ಕತೆಗಳು. ಶ್ರೀ. ಗುರುನಾಥ ಜೋಶಿಯವರಿಂದ ಸರಲ—ಸರಸ ಕನ್ನಡದಲ್ಲಿ ಅನುವಾದಿಸಲ್ಪಟ್ಟಿದೆ. ೧—೦—೦

---

### ಮುಂಬಯಿ ವಿದ್ಯಾಖಾತೆಯವರ ಮನ್ನಣೆಯನ್ನು ಪಡೆದ ನಮ್ಮ ಪ್ರಕಟನೆಗಳು

೧ ಉದಯರಾಗ ೨ ಮಲ್ಲಿಗೆದಂಡೆ ೩ ಜ. ಕ. ನಾಟ್ಯಾಂಕ ೪ ತರಂಗಿಣಿ ೫ ಅದೇನೆ ಇರಲಿ ೬ ಪರಿಣೀತಾ ೭ ಜೀವನಸಂಗೀತ ೮ ರಾಜವಲ್ಲಭ ೯ ಬಂಗಾರದ ಡಾಬು ೧೦ ದರಿದ್ರನಾರಾಯಣ

---

**ರಾಜರಹಸ್ಯ (ಭಾಗ ೧):** ಶ್ರೀ. ರಾ. ನ. ಮಳಗಿಯವರು ಬರೆದ, ಅದ್ಭುತರಸಪೂರ್ಣವಾದ ಈ ಕಾದಂಬರಿಯ ಪ್ರಥಮ ಭಾಗವು ಮಾರಾಟಕ್ಕೆ ಸಿದ್ಧವಾಗಿದೆ. ಪುಟಗಳು ೨೦೭. ೦.೧೨.೦

**ಜಯಕರ್ನಾಟಕದ ವಿಜಯನಗರ ವಿಶೇಷಾಂಕ:** ವಿಜಯನಗರದ ಸ್ಮಾರಕೋತ್ಸವ ಕಾಲದಲ್ಲಿ ಸಾಹಿತ್ಯೋತ್ಸವದ ಅಧ್ಯಕ್ಷರಾದ ಪ್ರೊ. ಬಿ. ಎಂ. ಶ್ರೀಕಂಠಯ್ಯನವರ ಹಸ್ತದಿಂದ ಪ್ರಕಾಶಿತವಾದ ಈ ಸಂಚಿಕೆಯ ಪ್ರತಿಗಳೆಲ್ಲ ತೀರಲು ಬಂದಿವೆ. ೦—೬—೦

CC-0. Jangamwadi Math Collection. Digitized by eGangotri

# ಪರಿವಿಡಿ



## ಬರಲಿವೆ!

**ಚೆಕ್ಕಿನ ಮೀಮಾಂಸೆ (ವಿನೋದಪ್ರಬಂಧ)**
"ಶ್ರೀರಂಗ"

**ಇಂಗ್ಲಿಷು ಶಬ್ದನಿಘಂಟು ಶಾಸ್ತ್ರದ ಚರಿತ್ರೆ**
ಶ್ರೀ. ಮಂ. ಆ. ದೊರೆಸ್ವಾಮಿ ಅಯ್ಯಂಗಾರ್ಯರು

**ಅಲ್ಸೆಸ್ಟಿಸ್ (ಗ್ರೀಕ ನಾಟಕಕಥೆ)**
"ಡಿ. ವಿ. ಎಸ್."

**ಬಡವರ ಗೋಳು (ಪ್ರೇಮಚಂದರ ಕತೆ)**
ಅನುವಾದಕರು: ಶ್ರೀ. ಗುರುನಾಥ ಜೋಶಿ

**ಬಾದಾಮಿಯ ಚಾಲುಕ್ಯರ ಕಾಲದ ಸಾಮಾಜಿಕ ಜೀವನ**
ಶ್ರೀ. ಪಾಂಡುರಂಗರಾವ ದೇಸಾಯಿ ಎಂ. ಎ (ಆನರ್ಸ)

**ಇತ್ಯಾದಿ, ಇತ್ಯಾದಿ.**

CC-0. Jangamwadi Math Collection. Digitized by eGangotri

ಜನರಲ್ ಫಿಲ್ಮ್ಸ್‌ದವರ ಕಲಾಕೃತಿ



' ಚಂದ್ರರಾವ ಮೋರೇ '

ಚಿತ್ರಪಟದಲ್ಲಿಯ ದೃಶ್ಯ

CC-0. Jangamwadi Math Collection. Digitized by eGangotri




# ಭಾರತೀಯ ಆರ್ಥಿಕ ಸ್ಥಿತಿ

ಶ್ರೀ॥ ಸಂ. ಅ. ದೊರೆಸ್ವಾಮಿ ಐಯಂಗಾರ್ಯರು, ಎಂ. ಎ. ಬಿ. ಎಲ್., ಮೈಸೂರು.

**ಚಿನ್ನ ತೆಗೆಯುವುದು, ತುಕ್ಕು ಹಿಡಿಯದಂತೆ ಕಬ್ಬಿಣಕ್ಕೆ ಹದಕೊಡುವುದು, ಹತ್ತಿ ಬೆಳೆಯುವುದು, ಮೊದಲಾದ ಕಸಬುಗಳಿಗೆ ಜನ್ಮಸ್ಥಾನವೆನಿಸಿ, ನೂರಾರು ಕಲೆ-ಕೈಗಾರಿಕೆಗಳಿಗೆ ಉಚ್ಛ್ರಾಯದ ಆಸರೆಯೆನಿಸಿ, ಇಗುಪ್ತ–ಸುಮೇರು–ಬಾಬೆಲ–ಚೀನ–ರೋಮಾದಿಗಳೊಡನೆ ನಡೆದ ತನ್ನ ಜಗದ್ವ್ಯಾಪಿಯಾದ ವ್ಯಾಪಾರದ ದೆಸೆಯಿಂದಲೆ ಕ್ರಮೇಣ ಕ್ರಿಸ್ತ-ಮುಸಲ್ಮಾನರ ಸಿಲುಬೆಯ ಯುದ್ಧಗಳಿಗೂ, ಕೋಲಂಬಸನ ಮಹಾಯಾನಕ್ಕೂ, ಗ್ರೀಕರ ವಿದ್ಯೋದಯಕ್ಕೂ ಕಾರಣವಾಗಿರುವ ಭಾರತದ ಆ ಹೆಗ್ಗಳಿಕೆಯು ಮಾಯವಾಗಲು ಕಾರಣಗಳು ಯಾವವು–ಎಂಬುದನ್ನು ವಿಲ್ ಡುರಾಂಟರು ವಿವೇಚಿಸಿರುವರು.**



ಭಾರತದ ನೆಲವು ನಾಗರಿಕತೆಯ ಏಳಿಗೆಗೆ ತಾನಾಗಿಯೇ ಒದಗುವಂತಿರಲಿಲ್ಲ. ಅದರಲ್ಲಿ ಬಹುದೊಡ್ಡ ಭಾಗವು ಅರಣ್ಯವಾಗಿದ್ದಿತು. ಇಲ್ಲಿ ಸಿಂಹಗಳೂ ಹುಲಿಗಳೂ ಆನೆಗಳೂ ಹಾವುಗಳೂ ಸಮಾರಂಭದಿಂದ ಮನೆಮಾಡಿಕೊಂಡು ಮೆರೆಯುತ್ತಿದ್ದವು. ದೇಶವನ್ನು ಈ ಶತ್ರುಗಳಿಂದ ಉದ್ಧರಿಸತಕ್ಕ ಕಲಹವು ಆರ್ಥಿಕ ಮತ್ತು ರಾಜಕೀಯ ಕಲಹಗಳ ಜತೆಯಲ್ಲೇ ಭೀಕರವಾಗಿ ನಡೆಯುತ್ತಿದ್ದಿತು. ಅಕ್ಬರನು ಮಥುರಾನಗರದ ಬಳಿಯಲ್ಲಿ ಹುಲಿ ಬೇಟೆಯಾಡುತ್ತಿದ್ದನು; ಅಲ್ಲದೆ ಕಾಡಾನೆಗಳನ್ನು, ಈಗ ಅವುಗಳ ಸುಳಿವೇ ಇಲ್ಲದಿರುವ ಪ್ರದೇಶಗಳಲ್ಲಿ ಹಿಡಿಸಿದ್ದನು. ವೇದಕಾಲದಲ್ಲಿ ಸಿಂಹವು ಭಾರತದ ವಾಯುವ್ಯ ಮತ್ತು ಮಧ್ಯಭಾಗದಲ್ಲಿ ಸರ್ವತ್ರ ಸುಳಿದಾಡುತ್ತಿದ್ದಿತು. ಈಗ ಅದು ಈ ಖಂಡದಲ್ಲೇ ಖಿಲವಾಗಿದೆ. ಆದರೆ ಹಾವುಗಳೂ ಕ್ರಿಮಿಕೀಟಗಳೂ ಅದ್ಯಾಪಿ ಯುದ್ಧನಡೆಯಿಸುತ್ತಲೇ ಇವೆ. ಕ್ರಿ. ಶ. ೧೯೩೬ನೆಯ ವರ್ಷದಲ್ಲಿ ಕಾಡುಮೃಗಗಳ ದೆಸೆಯಿಂದ ಸುಮಾರು ಎರಡು ಸಾವಿರ ಭಾರತೀಯರೂ, ಹಾವುಗಳ ಕಡಿತದಿಂದ ಇಪ್ಪತ್ತು ಸಾವಿರ ಭಾರತೀಯರೂ ಸತ್ತರು, ಹುಲಿಗಳಿಂದ ಸತ್ತವರು ೮೭೫ ಮಂದಿ ಇದ್ದರು.

ಕ್ರಮವಾಗಿ ಭೂಮಿಯನ್ನು ಮೃಗಗಳಿಂದ ಬಿಡಿಸಿಕೊಂಡು ಭಾರತೀಯರು ಅದರಲ್ಲಿ ಅಕ್ಕಿ, ಬೇಳೆ, ಗೋಧಿ, ತರಕಾರಿ, ಹಣ್ಣು ಇವುಗಳನ್ನು ಬೆಳೆಯಲಾರಂಭಿಸಿದರು. ಬಹು ಮಂದಿ ಮಿತವಾಗಿ ಸಸ್ಯಾಹಾರವನ್ನು ತಿನ್ನುತ್ತಾ ಜೀವಿಸುತ್ತಿದ್ದರು; ಧನಿಕರೂ ನೀಚಜಾತಿಯವರೂ ಮಾತ್ರ ಮಾಂಸಾಹಾರಕ್ಕೆ ಕೈಹಾಕುತ್ತಿದ್ದರು. ತಮ್ಮ ಆಹಾರಕ್ಕೆ ರುಚಿ ಏರುವುದಕ್ಕೂ, ಪ್ರಾಯಶಃ ಕಾಮೋದ್ದೀಪನಕ್ಕೂ ಭಾರತೀಯರು ಮೆಣಸು, ಶುಂಠಿ, ಲವಂಗ, ದಾಲಚಿನ್ನಿ ಮೊದಲಾದ ಪರಿಮಳ ದ್ರವ್ಯಗಳನ್ನು ಹೇರಳವಾಗಿ ಬೆಳೆದು ಸೇವಿಸುತ್ತಿದ್ದರು. ಐರೋಪ್ಯರು ಈ ದ್ರವ್ಯಗಳನ್ನು ಪಡೆಯಲು ಅತ್ಯುತ್ಕಟವಾಗಿ ಕನವರಿಸುತ್ತಾ, ಭಾರತವನ್ನು ಹೋಗಿ ಸೇರುವ ಪ್ರಯತ್ನದಲ್ಲಿ ಅಮೇರಿಕಾ ಖಂಡವನ್ನು ಕಂಡು ಹಿಡಿದರು. ಅಮೇರಿಕ



CC-0. Jangamwadi Math Collection. Digitized by eGangotri

ವನ್ನು ಕಂಡುಹಿಡಿಯಲು ಕಾಮಸಾಧನೆಯ ಪ್ರಯತ್ನವೇ ಕಾರಣವಾಗಿದ್ದಿರಬಹುದಲ್ಲವೇ ?

ವೇದಕಾಲದಲ್ಲಿ ಭೂಮಿಯು ಜನರ ಸ್ವತ್ತಾಗಿದ್ದಿತು; ಆದರೆ ಚಂದ್ರಗುಪ್ತ ಮೌರ್ಯನ ಕಾಲದಿಂದ ಮುಂದಕ್ಕೆ ರಾಜರುಗಳು ಭೂಮಿಯು ತಮ್ಮ ಸ್ವತ್ತೆಂದು ಹೇಳಿಕೊಳ್ಳುತ್ತ, ಅದರ ಬೆಳೆಯಲ್ಲಿ ಒಂದು ಪಾಲನ್ನು ತಾವು ಸಾಗುವಳಿದಾರರಿಂದ ಪಡೆದು, ಸಾಗುವಳಿಗೆ ಕೊಡುವ ಪದ್ಧತಿಯನ್ನು ಸ್ಥಾಪಿಸಿದರು. ನೀರಾವರಿ ಕೆಲಸವನ್ನು ಪ್ರಾಯಿಕವಾಗಿ ಸರ್ಕಾರವು ಕೈಕೊಳ್ಳುತ್ತಿತ್ತು. ಚಂದ್ರಗುಪ್ತ ಮೌರ್ಯನು ಹಾಕಿಸಿದ್ದ ಒಂದು ಅಣೆಕಟ್ಟು ಕ್ರಿ. ಶ. ೧೫೦ರ ವರೆಗೂ ನಡೆದು ಬಂದಿತ್ತು. ಪ್ರಾಚೀನವಾದ ಕಾಲುವೆಗಳ ಗುರುತು ದೇಶದಲ್ಲಿ ಈಗ ಸರ್ವತ್ರ ಕಂಡುಬರುತ್ತಿದೆ. ಮೇವಾಡದ ರಾಜಸಿಂಹನು ಕ್ರಿ. ಶ. ೧೬೬೧ರಲ್ಲಿ ಅಮೃತಶಿಲೆಯಿಂದ ಹನ್ನೆರಡು ಮೈಲುಗಳ ಉದ್ದಕ್ಕೆ ಕಟ್ಟೆಹಾಕಿಸಿ ಕಟ್ಟಿಸಿದ್ದ ಕೆರೆಯ ಸ್ಮಾರಕವು ಅದ್ಯಾಪಿ ಕಾಣಿಸುತ್ತಿದೆ.

ಲೋಕದ ಜನರಲ್ಲಿ ಚಿನ್ನವನ್ನು ಮೊದಲಿಗೆ ಗಣಿಯಿಂದ ತೆಗೆದವರು ಹಿಂದೂಗಳು. ಹೆರಾಡೊಟಸ್ಸನೂ ಮೆಗಾಸ್ಥನೀಸನೂ ಈ ವಿಚಾರವನ್ನು ಸ್ಪಷ್ಟಪಡಿಸಿರುವರು. ಕ್ರಿ. ಪೂ. ಐದನೆಯ ಶತಮಾನದಲ್ಲಿ ಇರಾಣ ಸಾಮ್ರಾಜ್ಯದಲ್ಲಿ ಉಪಯೋಗಿಸುತ್ತಿದ್ದ ಚಿನ್ನವೆಲ್ಲವೂ ಇಂಡಿಯಾ ದೇಶದ್ದು. ಈ ದೇಶದಲ್ಲಿ ಬೆಳ್ಳಿ, ತಾಮ್ರ, ಸೀಸ, ತವರ, ಸತು, ಕಬ್ಬಿಣ ಇವೆಲ್ಲವನ್ನೂ ಬಹಳ ಹಿಂದಲ ಕಾಲದಿಂದಲೂ ಹೇರಳವಾಗಿ ತಯಾರು ಮಾಡುತ್ತಿದ್ದರು. ಕಬ್ಬಿಣವು ಕ್ರಿ.ಪೂ. ೧೫೦೦ಕ್ಕೆ ಹಿಂದೆಯೇ ಗೋಚರಿಸಿದ್ದಿತು. ಕಬ್ಬಿಣಕ್ಕೆ ಹದಕೊಟ್ಟು ಕೆಲಸಮಾಡತಕ್ಕ ವಿದ್ಯೆಯು ಯುರೋಪಿನಲ್ಲಿ ತಲೆದೋರುವುದಕ್ಕೆ ಬಹುಕಾಲ ಹಿಂದೆಯೆ ಇಂಡಿಯಾ ದೇಶದಲ್ಲಿ ಹರಡಿದ್ದಿತು. ಗುಪ್ತ ಸಮ್ರಾಟನಾದ ಚಂದ್ರಗುಪ್ತ ವಿಕ್ರಮಾದಿತ್ಯನು ಕ್ರಿ.ಶ. ೩೮೦ರ ಸುಮಾರಿನಲ್ಲಿ ದೆಹಲಿಯಲ್ಲಿ ನೆಟ್ಟಿರುವ ಕಬ್ಬಿಣದ ಕಂಭವು, ಹದಿನೈದು ಶತಮಾನಗಳಾದರೂ ತುಕ್ಕು ಹಿಡಿಯದೆ ಹೊಸತಾಗಿಯೇ ಕಳಕಳಿಸುತ್ತಾ ನಿಂತಿದೆ; ಹೀಗೆ ತುಕ್ಕುಹಿಡಿಯದಂತೆ ಇರಲು ಕಾರಣವಾದ ಕಬ್ಬಿಣದ ಜಾತಿಯಾಗಲಿ ಅಥವಾ ಹದಕೊಡತಕ್ಕ ಉಪಾಯವಾಗಲಿ, ಅಧುನಿಕ ಲೋಹ ಶಾಸ್ತ್ರಕ್ಕೆ ಇನ್ನೂ ತಿಳಿದು ಬಂದಿಲ್ಲ. ಐರೋಪ್ಯರ ಧಾಳಿಗೆ ಪೂರ್ವ, ಕಬ್ಬಿಣವನ್ನು ಕರಗಿಸಿ ಕೆಲಸಮಾಡುವುದು ಭಾರತದ ಒಂದು ಪ್ರಧಾನ ಕೈಗಾರಿಕೆಯಾಗಿದ್ದಿತು. ಕೈಗಾರಿಕೆಯ ಕ್ರಾಂತಿಯಿಂದ ಐರೋಪ್ಯರು ಈ ಕೆಲಸವನ್ನು ಯಂತ್ರಸಹಾಯದಿಂದ ಮಾಡಲು ಕಲಿತದ್ದರಿಂದ, ಭಾರತದ ಕೈಗಾರಿಕೆಯು ನಷ್ಟವಾಯಿತು. ಈ ದೇಶದ ಖನಿಜ ಸಂಪತ್ತನ್ನು ಯಂತ್ರಸಹಾಯದಿಂದ ಪಡೆಯತಕ್ಕ ಕಾರ್ಯವು ಈಗ ತಾನೇ ಪ್ರಾರಂಭಿಸಿದೆ.

ಹತ್ತಿಯನ್ನು ಬೆಳೆಯತಕ್ಕದ್ದು ಪ್ರಪಂಚದಲ್ಲಿ ಭಾರತದಲ್ಲಿ ಮೊದಲು ಗೋಚರಿಸಿದೆ. ಮೋಹೆಂಜೊದಾರೋ ಪ್ರಾಚೀನ ನಗರದಲ್ಲಿ, ಅದರಿಂದ ಬಟ್ಟೆ ಮಾಡುತ್ತಿದ್ದರು. ಗ್ರೀಕರ ಚರಿತ್ರಕಾರನಾದ ಹೆರಾಡೊಟಸ್ಸನು ಈ ದೇಶದ ಹತ್ತಿಯ ವಿಚಾರದಲ್ಲಿ ತಾನು ಕೇಳಿದ್ದ ಕಥೆಯನ್ನು ಹೀಗೆ ಬರೆದಿರುವನು: "ಇಲ್ಲಿ ಕೆಲ ಕಾಡುಗಿಡಗಳಲ್ಲಿ ಹಣ್ಣು ಬಿಡುವುದಕ್ಕೆ ಪ್ರತಿಯಾಗಿ ಉಣ್ಣೆ ಬೆಳೆಯುತ್ತದೆ; ಇದು ಕುರಿಯ ಉಣ್ಣೆಗಿಂತಲೂ ಉತ್ಕೃಷ್ಟವೂ ಸುಂದರವೂ ಆಗಿದೆ. ಭಾರತೀಯರು ಈ ಗಿಡಗಳಿಂದ ತಮ್ಮ ಬಟ್ಟೆಯನ್ನು ತಯಾರಿಸುವರು." ರೋಮಕರು ತಮ್ಮ ಏಷ್ಯಾಮೈನರಿನ ಯುದ್ಧಗಳಲ್ಲಿ ಈ ಗಿಡದಲ್ಲಿ ಬಿಡುವ ಉಣ್ಣೆಯ ವಿಚಾರವನ್ನು ಅರಿತರು. ಕ್ರಿ. ಶ. ಒಂಭತ್ತನೆಯ ಶತಮಾನದಲ್ಲಿ ಭಾರತ ದೇಶದಲ್ಲಿ ಸಂಚರಿಸಿದ ಅರಬಿ ಪ್ರವಾಸಿಗಳು—ಈ ದೇಶದ ವಸ್ತ್ರಗಳನ್ನು ಕುರಿತು ಪ್ರಪಂಚದಲ್ಲಿ ಮತ್ತಾವ ಕಡೆಯೂ ಈ ದೇಶದಲ್ಲಿ ನೇಯುವಷ್ಟು ಸೂಕ್ಷ್ಮವಾಗಿಯೂ ರಮಣೀಯವಾಗಿಯೂ ತಯಾರಿಸುವುದಿಲ್ಲವೆಂದೂ, ದೊಡ್ಡದಾದ ಒಂದು ವಸ್ತ್ರವನ್ನು ಒಂದು ಉಂಗುರದೊಳಗಿನಿಂದ ಹೊಗಿಸಿ ತೆಗೆಯುವಷ್ಟು ಸೂಕ್ಷ್ಮವಾಗಿ ಕಲ್ಪಿಸುತ್ತಾರೆಂದೂ—ಬರೆದಿರುವರು. ಮಧ್ಯಯುಗದಲ್ಲಿ ಅರಬರು ಈ ವಿದ್ಯೆಯನ್ನು ಇಂಡಿಯಾದಲ್ಲಿ ಕಲಿತು ಹರಡಿದರು; ಅವರ ಕುರ್ಟ (quattan) ಎಂಬ ಪದವೇ ಇಂಗ್ಲಿಷಿನಲ್ಲಿ ಕಾರ್ಟ (Cotton) ಎಂದಾಗಿದೆ. ಹಿಂದೂ ವಸ್ತ್ರಗಳ ಮಾದರಿಯಲ್ಲಿ ಮೊಸಲ್ ನಗರದಲ್ಲಿ ತಯಾರಾಗುತ್ತಿದ್ದ ವಸ್ತ್ರಗಳು ಮಸ್ಲಿನ್ ಎಂದೂ, ಕಲ್ಲಿಕೋಟೆಯಿಂದ (ಮೊದಲು ೧೬೬೧ರಲ್ಲಿ) ಬರುತ್ತಿದ್ದ ವಸ್ತ್ರಗಳು ಕ್ಯಾಲಿಕೋ ಎಂದೂ ಯುರೋಪಿನಲ್ಲಿ ಹೆಸರು ಪಡೆದುವು. ಮಾರ್ಕೊ ಪೋಲೋ ಎಂಬ ಪ್ರವಾಸಿಯು ಗುಜರಾತಿನ ವಿಚಾರವಾಗಿ ೧೨೯೩ರಲ್ಲಿ, "ಕಸೂತಿ ಕೆಲಸವು ಇಲ್ಲಿನಷ್ಟು ಸೂಕ್ಷ್ಮವಾಗಿ ಪ್ರಪಂಚದಲ್ಲಿ ಮತ್ತೆಲ್ಲೂ ನಡೆಯುವುದಿಲ್ಲ" ಎಂದು ಬರೆದಿರುವನು. ಕಾಶ್ಮೀರದ ಶಾಲುಗಳೂ ಭಾರತದ ಜಮಖಾನಗಳೂ ಈಗಲೂ ಸಹ ಈ ದೇಶದ ನೇಯ್ಗೆಯ ಕೈಗಾರಿಕೆಯ ಪ್ರಶಸ್ತಿಯನ್ನು ಲೋಕದಲ್ಲಿ ಬೀರುತ್ತಿವೆ. ಆದರೆ ಭಾರತದಲ್ಲಿ ನೇಯ್ಗೆಯು

CC-0. Jangamwadi Math Collection. Digitized by eGangotri

ಹತ್ತಾರು ಕೈಗಾರಿಕೆಗಳಲ್ಲಿ ಒಂದು ಮಾತ್ರವಾಗಿತ್ತು. ಅಸಂಖ್ಯಾಕ ಕೈಗಾರಿಕೆಯ ಜನರು ವ್ಯಾಪಾರ ಶ್ರೇಣಿ (gilds) ಗಳಾಗಿ ವ್ಯವಸ್ಥೆಗೊಂಡು ಕೆಲಸಮಾಡುತ್ತಿದ್ದರು. ಮರಗೆಲಸ, ದಂತದ ಕೆಲಸ, ಲೋಹದ ಕೆಲಸ, ಬಣ್ಣ ಹಾಕುವುದು, ಚರ್ಮಕ್ಕೆ ಹದಕೊಡುವುದು, ಗಾಜು ತಯಾರಿಸುವುದು, ಮದ್ದುಗುಂಡಿನ ನಿರ್ಮಾಣ, ಬಾಣ-ಬಿರುಸುಗಳ ಕಲ್ಪನೆ, ಗಾರೆಮಾಡುವುದು ಇತ್ಯಾದಿಯಾಗಿ ಸಕಲ ವಿಧವಾದ ಕೈಗಾರಿಕೆಯ ಕೆಲಸದಲ್ಲೂ ಯುರೋಪ್‌ಖಂಡವು ಹಿಂದುಗಳನ್ನು ಅತ್ಯಂತ ಕಲಾವಿದರೆಂದು ಭಾವಿಸಿದ್ದಿತು. ಕ್ರಿ. ಶ. ೧೨೬೦ರಲ್ಲಿ ಚೀಣವು ಈ ದೇಶದಿಂದ ಕನ್ನಡಕಗಳನ್ನು ತರಿಸಿಕೊಳ್ಳುತ್ತಿತ್ತು. ಕ್ರಿ. ಶ. ಹದಿನೇಳನೆಯ ಶತಮಾನದಲ್ಲಿ ಈ ದೇಶದಲ್ಲಿ ಸಂಚರಿಸಿದ ಬರ್ನಿಯರ್ ಎಂಬ ಫ್ರೆಂಚ ಪ್ರವಾಸಿಯು ಇಲ್ಲಿ ಹೆಜ್ಜೆ-ಹೆಜ್ಜೆಗೂ ಕೈಗಾರಿಕೆಗಳು ಮೆತ್ತಿಕೊಂಡಿದ್ದುವೆಂದು ವರ್ಣಿಸಿರುವನು. ೧೫೮೫ರಲ್ಲಿ ಫಿಚ್ ಎಂಬ ಪ್ರವಾಸಿಯು, ಯಮುನಾನದಿಯಲ್ಲಿ ವಿವಿಧ ಜಾತಿಯ ಪದಾರ್ಥಗಳನ್ನು ಸಾಗಿಸುತ್ತಿದ್ದ ಒಂದು ನೂರ ಎಂಭತ್ತು ಹಡಗುಗಳ ಪಡೆಯೊಂದನ್ನು ಕಂಡುದಾಗಿ ಹೇಳಿರುವನು.

ಒಳದೇಶದ ವ್ಯಾಪಾರವು ಅತಿ ಉಚ್ಛ್ರಾಯದಲ್ಲಿ ನಡೆಯುತ್ತಿತ್ತು. ಈ ದೇಶದಲ್ಲಿ ಮಾರ್ಗವೆಲ್ಲವೂ ಹಿಂದೆಯೂ ಈಗಲೂ ಸಹ ಅಂಗಡಿಸಾಲೇ ಆಗಿದೆ. ಪರದೇಶದ ವ್ಯಾಪಾರವಂತೂ ಭಾರತದೇಶದ ಚರಿತ್ರಾದಿಯಿಂದಲೂ ನಡೆಯುತ್ತಿದೆ. ಇಗುಪ್ತ ಮತ್ತು ಸುಮೇರು ದೇಶಗಳಲ್ಲಿ ದೊರೆತಿರುವ ಪದಾರ್ಥಗಳುಈ ದೇಶಗಳಿಗೂ ಇಂಡಿಯಾ ದೇಶಕ್ಕೂ ಕ್ರಿ. ಪೂ.೩೦೦೦ ವರ್ಷಗಳ ಹಿಂದೆಯೇ ವ್ಯಾಪಾರ ನಡೆಯುತ್ತಿದ್ದಿತೆಂದು ಸ್ಪಷ್ಟಪಡಿಸುತ್ತಿವೆ. ಕ್ರಿ. ಶ. ೭೦೦ ರಿಂದ ೧೫೦೦ ರ ವರೆಗೆ ಪಾರಸಿಕ ಕೊಲ್ಲಿಯ ಮಾರ್ಗವಾಗಿ ಇಂಡಿಯಾವಿಗೂ ಬಾಬೆಲ ದೇಶಕ್ಕೂ ವ್ಯಾಪಾರ ನಡೆಯುತ್ತಿತ್ತು. ಜೂದರ ರಾಜನಾದ ಸಾಲೊಮನ್ನನ ದಂತ, ಕಪಿ, ನವಿಲುಗಳು ಈ ಮಾರ್ಗವಾಗಿಯೇ ಬಂದಿರಬಹುದು. ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಭಾರತದ ಹಡಗುಗಳು ಸಮುದ್ರ ಮಾರ್ಗವಾಗಿ ಬರ್ಮಾವಿಗೂ ಚೀಣಾವಿಗೂ ಹೋಗಿಬರುತ್ತಿದ್ದುವು. ಹಿಂದುಗಳಿಂದ ಯವನರು ಎಂದು ಕರೆಯಲ್ಪಟ್ಟಿರುವ ಗ್ರೀಕರ ವರ್ತಕರು ಕ್ರಿಸ್ತಜನ್ಮಕ್ಕೆ ಹಿಂದೆಯೂ ಅನಂತರವೂ ಸಹ ದ್ರಾವಿಡದೇಶದ ಪೇಟೆಗಳಲ್ಲಿ ಮುತ್ತು ಮುರಿಯುತ್ತಿದ್ದರು. ರೋಮಕನಗರವು ತನ್ನ ಸುಖ ಲೋಲುಪ್ತಿಯ ಕಾಲದಲ್ಲಿ ಭಾರತದಿಂದ ಪರಿಮಳ ದ್ರವ್ಯಗಳನ್ನು ತರಿಸಿಕೊಳ್ಳುತ್ತಿದ್ದುದಲ್ಲದೆ, ಭಾರತದ ರೇಶ್ಮೆಬಟ್ಟೆಗಳಿಗೂ ಹತ್ತಿಬಟ್ಟೆಗಳಿಗೂ, ಜರತಾರಿ ವಸ್ತ್ರಗಳಿಗೂ ಬಹು ಹೆಚ್ಚು ಬೆಲೆಯನ್ನು ಸುರಿದು ಕೊಂಡುಕೊಳ್ಳುತ್ತಿದ್ದಿತು. ಪ್ರತಿವರ್ಷವೂ ಇದಕ್ಕಾಗಿ ರೋಮಕ ನಗರದಿಂದ ಇಂಡಿಯಾವಿಗೆ ಒಂದುವರೆ ಕೋಟಿ ರೂಪಾಯಿಗಳು ಸಲ್ಲುತ್ತಿದ್ದ ಭೋಗವನ್ನು 'ಪ್ಲೈನಿ' ಎಂಬ ಲೇಖಕನು ನಿಂದಿಸಿರುವನು. ರೋಮಕ ನಗರದ 'ಕಾಲೊಸಿಯಂ' ಎಂಬ ವಿಹಾರಭವನದಲ್ಲಿ ನಡೆಯುತ್ತಿದ್ದ ಆಟಗಳಲ್ಲಿ ಭಾರತದ ಚಿರತೆಗಳೂ ಹುಲಿಗಳೂ ಆನೆಗಳೂ ಭಾಗಿಗಳಾಗಿದ್ದುವು. ಪಾರಸಿಕ ದೇಶದೊಡನೆ ದೀರ್ಘವಾಗಿ ರೋಮಕರು ಹೋರಾಡಿದ್ದಕ್ಕೆ ಕಾರಣವು ಭಾರತಕ್ಕೂ ತಮ್ಮ ದೇಶಕ್ಕೂ ನಿರಾತಂಕವಾದ ವ್ಯಾಪಾರ ನಡೆಯುವ ಸಲುವಾಗಿಯೇ ಆಗಿದ್ದಿತು. ಕ್ರಿ. ಶ. ಏಳನೆಯ ಶತಮಾನದಲ್ಲಿ ಅರಬರು ಇಗುಪ್ತ ಇರಾಣ ದೇಶಗಳನ್ನು ಜಯಿಸಿದ್ದರಿಂದ ಇಂಡಿಯಾವಿಗೂ ಯುರೋಪಿಗೂ ನಡೆಯುತ್ತಿದ್ದ ವ್ಯಾಪಾರವು ಮುಸಲ್ಮಾನರ ವಶವಾಯಿತು. ಇದರಿಂದಲೇ ಕ್ರಿಸ್ತ-ಮುಸಲ್ಮಾನರ ಸಿಲುಬೆಯ ಯುದ್ಧಗಳೂ ಕೊಲಂಬಸನ ಯಾನವೂ ಹುಟ್ಟಿದುವು. ಮೊಗಲರ ಕಾಲದಲ್ಲಿ ಪರದೇಶದ ವ್ಯಾಪಾರವು ಮತ್ತೆ ಚೇತರಿಸಿತು. ವೆನಿಸು, ಜಿನೋವ ಮೊದಲಾದ ಇಟಲಿಯ ನಗರಗಳು ಭಾರತ-ಐರೋಪ್ಯರ ವ್ಯಾಪಾರಕ್ಕೆ ರೇವು ನಗರಗಳಂತೆ ಕೆಲಸಮಾಡಿ ಅಪಾರವಾದ ಸಂಪತ್ತನ್ನು ಗಳಿಸಿದವು. ಯುರೋಪದಲ್ಲಿ ಮಧ್ಯಯುಗದ ನಾಗರಿಕತೆಯನ್ನು ಮುಕ್ತಾಯಮಾಡಿ ವಾರ್ತಮಾನಿಕ ಯುಗದ ನಾಗರಿಕತೆಯನ್ನು ಹುಟ್ಟಿಸಲು ಆಧಾರಕಾರಣವೆನ್ನಿಸಿರುವ ವಿದ್ಯೋದಯ (Renaissance) ಚಳವಳಿಗೆ, ಇಟಲಿಗೆ ಗ್ರೀಕ ಪಂಡಿತರು ತಂದ ಗ್ರೀಕ ಗ್ರಂಥಗಳಿಗಿಂತಲೂ ಭಾರತ ವ್ಯಾಪಾರ ಲಬ್ಧವಾದ ಧನವು ಬಹುವಾಗಿ ಕಾರಣವಾಗಿದ್ದಿತು. ಅಕ್ಬರನ ಕಾಲದಲ್ಲಿ ಒಂದು ದೊಡ್ಡ ನೌಕಾ ಇಲಾಖೆ ಇದ್ದಿತು; ಅದು ಹಡಗುಗಳನ್ನು ತಯಾರಿಸುವ ಕೆಲಸವನ್ನೂ ಸಾಗರವ್ಯಾಪಾರವನ್ನೂ ಮೇಲ್ವಿಚಾರಣೆ ಮಾಡುತ್ತಿದ್ದಿತು. ಬಂಗಾಳ ಮತ್ತು ಸಿಂಧೂ ದೇಶಗಳ ಬಂದರಗಳು ಹಡಗುಗಳ ತಯಾರಿಕೆಗೆ ಬಹಳ ಪ್ರಸಿದ್ಧವಾಗಿದ್ದುವು. ಕಾನಸ್ಟಾಂಟಿನೋಪಲ್ಲಿನ ಸುಲ್ತಾನರು ತಮಗೆ ಬೇಕಾದ ಹಡಗುಗಳನ್ನು ಅಲೆಕ್ಸಾಂಡ್ರಿಯಾ ಬಂದರಿಗಿಂತಲೂ ಈ ಬಂದರುಗಳಲ್ಲಿ ಅಗ್ಗವಾಗಿಯೂ ಉತ್ಕೃಷ್ಟವಾಗಿಯೂ ತಯಾರಿಸಿಕೊಳ್ಳುತ್ತಿದ್ದರು. ಈಸ್ಟಿಂಡಿಯಾ ಕಂಪೆನಿಯವರು ಸಹ ತಮಗೆ ಬೇಕಾದ ಅನೇಕ ಹಡಗುಗಳನ್ನು ಬಂಗಾಳದ ಬಂದರುಗಳಲ್ಲಿ ತಯಾರಿಸಿಕೊಳ್ಳುತ್ತಿದ್ದರು.

CC-0. Jangamwadi Math Collection. Digitized by eGangotri

ಇಂಥಾ ವ್ಯಾಪಾರಕ್ಕೆ ಸಾಧಕವಾದ ನಾಣ್ಯಕ್ರಮವು ಅಭಿವೃದ್ಧಿಯಾಗುವುದಕ್ಕೆ ಹಲವು ಶತಮಾನಗಳು ಹಿಡಿದುವು. ಬುದ್ಧನ ಕಾಲದಲ್ಲಿ ಹಲವು ಸಂಸ್ಥೆಗಳು ಒರಟಾದ ಚೌಕದ ಬಿಲ್ಲೆಯ ನಾಣ್ಯಗಳನ್ನು ಮುದ್ರಿಸಿ ಸ್ಥಾಪಿಸುತ್ತಿದ್ದುವು. ಕ್ರಿ. ಪೂ. ನಾಲ್ಕನೆಯ ಶತಮಾನದ ವರೆಗೂ ಭಾರತದೇಶದಲ್ಲಿ ನಾಣ್ಯಸ್ಥಾಪನೆಯು ಸರ್ಕಾರಕ್ಕೆ ಮಾನ್ಯವಾಗುವ ಪದ್ಧತಿಯಲ್ಲಿ ಹುಟ್ಟಲಿಲ್ಲ: ಅದಕ್ಕೆ ಇರಾಣರ ಮತ್ತು ಯವನರ ಪ್ರಾಬಲ್ಯವು ಕಾರಣವಾಗಿದ್ದಿತು. ಷೇರಷಹನು ಚೆನ್ನಾಗಿ ತಯಾರಾದ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳನ್ನು ಹಾಕಿಸಿ, ದೇಶದ ನಾಣ್ಯಕ್ರಮಕ್ಕೆ ರೂಪಾಯಿಯನ್ನು ಆಧಾರಸ್ತಂಭವಾಗಿ ಏರ್ಪಡಿಸಿದನು. ಅಕ್ಬರ ಜಹಾಂಗೀರರ ಕಾಲದಲ್ಲಿ ಭಾರತದ ನಾಣ್ಯಕ್ರಮವು ಯುರೋಪಿನ ಸಕಲ ರಾಜ್ಯಗಳ ನಾಣ್ಯಕ್ರಮಗಳಿಗಿಂತಲೂ ಕೆಲಸಗಾರಿಕೆಯಲ್ಲೂ ಲೋಹಶುದ್ಧಿಯಲ್ಲೂ ಶ್ರೇಷ್ಠವಾಗಿತ್ತು.

ಮಧ್ಯಯುಗದ ಯುರೋಪಿನಂತೆಯೇ ಮಧ್ಯಯುಗದ ಇಂಡಿಯಾದಲ್ಲಿ ಸಹ, ಬಡ್ಡಿ ತೆಗೆಯುವುದಕ್ಕೆ ಇದ್ದ ಮತೀಯ ವಿರೋಧವು, ವ್ಯಾಪಾರ-ಕೈಗಾರಿಕೆಗಳ ಅಭಿವೃದ್ಧಿಗೆ ಕುಂದಕವನ್ನುಂಟುಮಾಡುತ್ತಿದ್ದಿತು. "ಹಿಂದೂಗಳು ಹಣವನ್ನು ಬಡ್ಡಿಗೆ ಹಾಕುವುದಿಲ್ಲ, ಸಾಲಸಹ ತೆಗೆಯುವುದಿಲ್ಲ. ಅನ್ಯಾಯ ಮಾಡುವುದಾಗಲಿ ಮಾಡಿಕೊಳ್ಳುವುದಾಗಲಿ ಹಿಂದೂ ಧರ್ಮಾಚರಣೆಗೆ ವಿರುದ್ಧವಾಗಿರುವುದರಿಂದ, ಅವರು ಕರಾರುಗಳನ್ನು ಮಾಡಿಕೊಳ್ಳುವುದಿಲ್ಲ, ಯಾವ ಬಗೆಯಾದ ಆಧಾರವನ್ನೂ ಒತ್ತೆಯನ್ನೂ ತೆಗೆದುಕೊಳ್ಳುವುದಿಲ್ಲ" ಎಂದು ಮೆಗಾಸ್ತನೀಸನು ಬರೆದಿರುವನು. ಆರ್ಥಿಕೋದ್ಯೋಗಗಳಿಗೆ ತಾವು ಮಿಗಿಸಿದ್ದನ್ನು ಹಾಕಲು ಅಸಾಧ್ಯವಾದುದರಿಂದ ಹಿಂದೂಗಳು ಅದನ್ನು ನಗಗಳಿಗೆ ಹಾಕುತ್ತಿದ್ದರು; ಇಲ್ಲವೇ ಬಚ್ಚಿಡುತ್ತಿದ್ದರು. ಇವರು ಅನುಕೂಲವಾದ ಸಾಲಕ್ರಮವನ್ನು ಕಲ್ಪಿಸಿಕೊಳ್ಳದೆ ಹೋದುದರಿಂದ, ಯುರೋಪಿನ ಕೈಗಾರಿಕೆಯ ಕ್ರಾಂತಿಯು ಯೂರೋಪಿಗೆ ಏಷಿಯಾ ಖಂಡದ ಮೇಲೆ ಆಧಿಪತ್ಯವನ್ನು ಸ್ಥಾಪಿಸಲು ಸಾಧ್ಯವಾಯಿತೆಂದು ಹೇಳಬಹುದು. ಆದರೆ ಬ್ರಾಹ್ಮಣರ ವಿರೋಧಕ್ಕೆ ಸಗ್ಗದೆ ಸ್ವಲ್ಪಸ್ವಲ್ಪವಾಗಿ ಲೇವಾದೇವಿಯು ಬಳೆಯುತ್ತಾ ಬಂದಿತು. ಬಡ್ಡಿಯ ದರವು ಸಾಲ ತೆಗೆದುಕೊಳ್ಳುವವನ ಜಾತಿಯನ್ನು ಅನುಸರಿಸಿ ನೂರಕ್ಕೆ ಹನ್ನೆರಡರಿಂದ ಅರುವತ್ತರ ವರೆಗೆ, ಪ್ರಾಯಿಕವಾಗಿ ಇಪ್ಪತ್ತರ ಸರಾಸರಿಯಲ್ಲಿ ಇದ್ದಿತು. ದಿವಾಳಿಕ್ರಮ ಎಂದರೆ ಸಾಲಗಾರನು ದಿವಾಳಿಯಾಗಿ ಋಣಮುಕ್ತನಾಗುವ ಪದ್ಧತಿಯು ಇಲ್ಲಿ ನಿರೋಧಿಸಲ್ಪಟ್ಟಿತು; ಸಾಲಗಾರನು ದಿವಾಳಿಯಾಗಿ ಸತ್ತರೂ ಅವನ ಸಂತತಿಯವರು ಆರು ತಲೆಯ ವರೆಗೆ ಅವನ ಸಾಲವನ್ನು ತೀರಿಸಲು ಬದ್ಧರಾಗಿದ್ದರು.

ಸರ್ಕಾರವು ನಡೆಯುವುದಕ್ಕಾಗಿ ವ್ಯಾಪಾರದ ಮೇಲೂ ಕೃಷಿಯ ಮೇಲೂ ಭಾರಿ ಕಂದಾಯವು ಹೊರಿಸಲ್ಪಟ್ಟಿತ್ತು. ಕೃಷಿಕನು ತನ್ನ ಬೆಳೆಯಲ್ಲಿ ಆರರಲ್ಲಿ ಒಂದು ಪಾಲಿನಿಂದ ಹಿಡಿದು ಎರಡರಲ್ಲಿ ಒಂದು ಪಾಲಿನ ವರೆಗೆ ಕಂದಾಯ ತೆರಬೇಕಾಗಿದ್ದಿತು. ಹೊರಕ್ಕೆ ಹೋಗಿ ಬರುತ್ತಿದ್ದ ವ್ಯಾಪಾರದ ಮೇಲೆ ಅನೇಕ ವಿಧವಾದ ಸುಂಕಗಳು ಇದ್ದುವು. ಅಕ್ಬರನು ಇತರ ವಿಧವಾದ ಕಂದಾಯಗಳನ್ನೆಲ್ಲಾ ತಳ್ಳಿಬಿಟ್ಟು ಭೂಮಿಯ ಕಂದಾಯವನ್ನು ಮೂರರಲ್ಲೊಂದು ಪಾಲಿನಷ್ಟಕ್ಕೆ ಏರಿಸಿದ್ದನು. ಭೂಕಂದಾಯವು ಜನರನ್ನು ತುಂಬಾ ಹೊಟ್ಟೆಯುರಿಸುತ್ತಿದ್ದಿತು. ಕ್ಷಾಮಗಳು ಪದೇ ಪದೇ ಸಂಭವಿಸುತ್ತಿದ್ದುವು. ಕ್ರಿ. ಶ. ೧೫೫೬ನೆಯ ವರ್ಷದ ಕ್ಷಾಮದಲ್ಲಿ ಜನರು ಹೊಟ್ಟೆಗಿಲ್ಲದೆ ಮನುಷ್ಯರನ್ನೇ ತಿನ್ನಲಾರಂಭಿಸಿದ್ದರಂತೆ. ರಸ್ತೆಗಳು ತೀರ ಅಸಮರ್ಪಕವಾಗಿದ್ದವು; ವಸ್ತುಗಳನ್ನು ಸ್ಥಳದಿಂದ ಸ್ಥಳಕ್ಕೆ ಕೊಂಡೊಯ್ಯುವ ಕೆಲಸವು ಬಹು ನಿಧಾನವೂ ಕಷ್ಟಕರವೂ ಆಗಿದ್ದಿತು. ಒಂದು ಪ್ರದೇಶದಲ್ಲಿ ಬೆಳೆದ ಅಧಿಕ ದವಸವನ್ನು ಮತ್ತೊಂದು ಸ್ಥಳದ ಕ್ಷಾಮನಿವಾರಣೆಗೆ ಉಪಯೋಗಿಸುವುದು ಬಹು ದುರ್ಘಟವಾಗಿದ್ದಿತು.

ಇತರ ಕಡೆಗಳಂತೆಯೇ ಬಡತನ ಮತ್ತು ಸಿರಿತನದ ಅಂತರಗಳು ಭಾರತದೇಶದಲ್ಲೂ ಇದ್ದುವು; ಆದರೆ ಈ ಅಂತರಗಳು ಈಗಣ ಅಮೇರಿಕಾದಲ್ಲೂ ಇಂಡಿಯಾದಲ್ಲೂ ಇರುತ್ತಿರುವಷ್ಟು ವಿಪರೀತಕ್ಕೆ ಹೋಗಿರಲಿಲ್ಲ. ಸಮಾಜದ ಕೆಳ ಅಂತಸ್ತಿನಲ್ಲಿ ತೀರ ಸಣ್ಣ ಸಂಖ್ಯೆಯ ಗುಲಾಮರು ಇದ್ದರು; ಅವರ ಮೇಲುಗಡೆ ಇದ್ದ ಶೂದ್ರರು ಕೆಲಸಗಾರರಾಗಿದ್ದರೂ ಗುಲಾಮರಾಗಿರಲಿಲ್ಲ. ಡೂಬಾಯ್ (Dubois) ಎಂಬ ಕ್ರಿಸ್ತ ಪಾದ್ರಿ ಪ್ರವಾಸಿಯು ಕ್ರಿ. ಶ. ೧೮೦೦ರ ಕಾಲಕ್ಕೆ ವರ್ಣಿಸಿರುವ ಬಡತನವು ತತ್ಪೂರ್ವವಾದ ಐವತ್ತು ವರ್ಷಗಳ ರಾಜಕೀಯ ಅವ್ಯವಸ್ಥೆಯಿಂದ ಕಲ್ಪಿತವಾದ ವಿಪರೀತ ಸ್ಥಿತಿಯಾಗಿತ್ತು. ಮೊಗಲರ ಕಾಲದಲ್ಲಿ ಜನರು ಸುಮಾರಾಗಿ ಉಚ್ಛ್ರಾಯ ಸ್ಥಿತಿಯಲ್ಲೇ ಇದ್ದರು. ಕೂಲಿಯು ಮಿತವಾಗಿತ್ತು; ಅಕ್ಬರನ ಕಾಲದಲ್ಲಿ ಆಳಿಗೆ ಒಂದೂವರೆಯಿಂದ ನಾಲ್ಕೂವರೆ ಆಣೆಯಷ್ಟು ದಿನಗೂಲಿ ಇದ್ದಿತು. ಆದರೆ ಪದಾರ್ಥಗಳ ಬೆಲೆಯು ತೀರ ಸುಲಭವಾಗಿದ್ದುದರಿಂದ ಜನರು ಸುಖವಾಗಿ ಜೀವಿಸಲು

CC-0. Jangamwadi Math Collection. Digitized by eGangotri

ಅವಕಾಶವಿದ್ದಿತು. ೧೬೦೦ನೆಯ ವರ್ಷ ಒಂದು ರೂಪಾಯಿಗೆ ೧೯೪ ಪೌಂಡು ಗೋದಿಯೂ ೧೬೪ ಪೌಂಡು ಜೋಳವೂ ದೊರೆಯುತ್ತಿತ್ತು. ೧೯೦೧ರಲ್ಲಿ ಅದೇ ಒಂದು ರೂಪಾಯಿಗೆ ೨೯ ಪೌಂಡು ಗೋಧಿಯೂ ೪೪ ಪೌಂಡು ಜೋಳವೂ ಮಾತ್ರ ದೊರೆಯುತ್ತಿತ್ತು. ೧೬೧೬ರಲ್ಲಿ ಇಂಡಿಯಾ ದೇಶದಲ್ಲಿ ವಾಸಮಾಡುತ್ತಿದ್ದ ಒಬ್ಬ ಆಂಗ್ಲನು ಈ ದೇಶದಲ್ಲಿ ಸರ್ವತ್ರ ಸಕಲ ವಿಧವಾದ ಪದಾರ್ಥಗಳೂ ಸಮೃದ್ಧಿಯಾಗಿ ದೊರೆಯುತ್ತಿದ್ದವೆಂದೂ ಸಕಲರೂ ಕೊರತೆಯಿಲ್ಲದೆ ಆಹಾರವನ್ನು ಪಡೆಯುತ್ತಿದ್ದರೆಂದೂ ವರ್ಣಿಸಿರುವನು. ಇಲ್ಲಿ ೧೭ನೆಯ ಶತಮಾನದಲ್ಲಿ ಸಂಚರಿಸಿದ ಮತ್ತೊಬ್ಬ ಆಂಗ್ಲನು ತನ್ನ ದಿನಂಪ್ರತಿಯ ವೆಚ್ಚವೆಲ್ಲವೂ ಸರಾಸರಿಯಲ್ಲಿ ಎರಡಾಣೆ ಮಾತ್ರವಾಗಿತ್ತೆಂದು ಹೇಳಿರುವನು.

ಈ ದೇಶದ ಸಂಪತ್ತಿನ ಶಿಖರವು ಚಂದ್ರಗುಪ್ತ ಮೌರ್ಯನ ಕಾಲದಲ್ಲೂ ಷಹಾಜಹಾನನ ಕಾಲದಲ್ಲೂ ಮುಗಿಲನ್ನು ಮುಟ್ಟಿದ್ದಿತು. ಗುಪ್ತ ಸಮ್ರಾಜರ ಕಾಲದ ಭಾರತದ ಸಂಪತ್ತು ಜಗತ್ತಿಗೆಲ್ಲಾ ಗಾದೆಯಾಗಿ ಹರಡಿದ್ದಿತು. ಚೀಣಾಪ್ರವಾಸಿ. ಯೂವನಷ್ವಾಂಗನು ಹಿಂದೂ ನಗರಗಳೆಲ್ಲವೂ ವನಗಳಿಂದಲೂ ತಟಾಕಗಳಿಂದಲೂ ವಿದ್ಯಾಪೀಠಗಳಿಂದಲೂ ಕಲಾಮಂದಿರಗಳಿಂದಲೂ ಶೋಭಿಸುತ್ತಿದ್ದುವೆಂದು ವರ್ಣಿಸಿರುವನು: "ನಿವಾಸಿಗಳು ಅನುಕೂಲಸ್ಥರಾಗಿದ್ದರು; ಕೆಲವು ಮನೆಗಳವರು ತುಂಬಾ ಐಶ್ವರ್ಯವಂತರಾಗಿರುವರು. ಫಲಗಳೂ ಪುಷ್ಪಗಳೂ ಹೇರಳವಾಗಿದ್ದುವು....ಜನರೆಲ್ಲರೂ ಅತಿ ಸುಶಿಕ್ಷಿತರಾಗಿ, ಥಳಥಳಿಸುವ ಪಟ್ಟವಸ್ತ್ರಗಳನ್ನುಡುತ್ತಿದ್ದರು; ವಾಕ್ಯಾರ್ಥದಲ್ಲಿ ಅವರು ಸ್ಪಷ್ಟವಾಗಿಯೂ ಸೂಕ್ಷ್ಮವಾಗಿಯೂ ಅಭಿಪ್ರಾಯಗಳನ್ನು ತಿಳಿಸುತ್ತಿದ್ದರು. ಅವರು ಹಿಂದೂ ಮತ್ತು ಬೌದ್ಧ ಮತಗಳೆರಡಕ್ಕೂ ಸಮವಾಗಿ ಸೇರಿದ್ದರು." "ಮುಸಲ್ಮಾನರು ನಾಶಮಾಡಿದ ಹಿಂದೂ ರಾಜ್ಯಗಳ ಸಂಪತ್ತು ಎಷ್ಟು ಅಪಾರವಾಗಿದ್ದಿತೆಂದರೆ ವಿಜೇತರು ಅಲ್ಲಿಂದ ಸೂರೆಮಾಡಿದ ಒಡವೆ ನಾಣ್ಯಗಳ ಪ್ರಮಾಣವನ್ನು ಇತಿಹಾಸಕಾರರು ವರ್ಣಿಸಲಾರದೆ ಬೇಸತ್ತಿರುವರು" ಎಂದು ಎಲ್ಫಿನ್‌ಸ್ಟನ್ನನು ಬರೆಯುವನು. ನಿಕೊಲೊ ಕಾಂಟಿ ಎಂಬ ಪ್ರವಾಸಿಯು ಸುಮಾರು ೧೪೨೦ರಲ್ಲಿ ಗಂಗಾನದಿಯ ತೀರವೆಲ್ಲವೂ ಉದ್ದಕ್ಕೂ ಅತ್ಯಚ್ಚ್ಯಾರ್ಯಕರವಾದ ನಗರಗಳಿಂದ ತುಂಬಿದ್ದಿತೆಂದೂ, ಅವೆಲ್ಲವೂ ರಮಣೀಯವಾಗಿ ರಚಿಸಲ್ಪಟ್ಟ ವನಗಳಿಂದಲೂ, ಚಿನ್ನ-ಬೆಳ್ಳಿಗಳಿಂದಲೂ, ಕೈಗಾರಿಕೆ, ವ್ಯಾಪಾರಗಳಿಂದಲೂ ಕಿಕ್ಕಿರಿಯುತ್ತಿದ್ದುವೆಂದೂ ವಿವರಿಸಿರುವನು. ಷಹಾಜಹಾನನ ಭಂಡಾರದಲ್ಲಿ ಭೂಮಿಯ ಕೆಳಗಡೆ ಪ್ರತಿಯೊಂದೂ ಒಂದೂವರೆ ಲಕ್ಷ ಘನ ಅಡಿ ಪ್ರದೇಶವುಳ್ಳ ಎರಡು ಕೊಠಡಿಗಳು ಚಿನ್ನ ಬೆಳ್ಳಿಯಿಂದ ಮೇಲಿನವರೆಗೂ ತುಂಬಿದ್ದುವು. "ಮುಖ್ಯಮುಖ್ಯ ನಗರಗಳ ಜನರು ಅನುಕೂಲಸ್ಥರಾಗಿದ್ದರೆಂದು ಆಗಿನ ಕಾಲದ ಸಾಕ್ಷ್ಯವು ಸ್ಪಷ್ಟವಾಗಿ ತಿಳಿಸುತ್ತದೆ" ಎಂದು ವಿನ್‌ಸೆಂಟ ಸ್ಮಿತ್ತನು ಹೇಳುವನು. ಆಗ್ರಾ ಮತ್ತು ಫತ್ತೇಪೂರ್ ಸಿಕ್ರಿಗಳು ಲಂಡನ್ನಿಗಿಂತಲೂ ವಿಸ್ತಾರವಾಗಿಯೂ ಸಂಪತ್ಕರವಾಗಿಯೂ ಇದ್ದುವೆಂದು ಪ್ರವಾಸಿಗಳು ತಿಳಿಸುವರು. ಮಹಾರಾಷ್ಟ್ರದಲ್ಲಿ ೧೭೬೦ರಲ್ಲಿ ಸಂಚಾರ ಮಾಡಿದ ಆಂಕ್ವೆಟಿಲ್ ಡುಪೆರಾನ್ (Anquetil Duperron) ಎಂಬಾತನು ತಾನು ಸುವರ್ಣಯುಗದ ಸ್ಥಿತಿಯನ್ನು ಕಂಡಂತೆಯೂ, ಜನರು ಸಂತೋಷಚಿತ್ತರೂ ಸಾಹಸಿಗಳೂ ತುಂಬಾ ಆರೋಗ್ಯಶಾಲಿಗಳೂ ಆಗಿದ್ದರೆಂದೂ ವರ್ಣಿಸಿರುವನು. ೧೭೫೭ರಲ್ಲಿ ಮುರ್ಷಿದಾಬಾದನ್ನು ನೋಡಿದ ಕ್ಲೈವನು ಆ ನಗರವು ವಿಸ್ತಾರದಲ್ಲೂ ಜನಸಂಖ್ಯೆಯಲ್ಲೂ ಸಂಪತ್ತಿನಲ್ಲೂ ಲಂಡನ್ ನಗರಕ್ಕೆ ಸಮನಾಗಿದ್ದಿತೆಂದೂ, ಅದರ ಅರಮನೆಗಳು ಯುರೋಪಿನ ಸಕಲ ಅರಮನೆಗಳಿಂತಲೂ ದೊಡ್ಡವಾಗಿದ್ದುವೆಂದೂ, ಅದರ ಐಶ್ವರ್ಯವಂತರಷ್ಟು ಸಿರಿವಂತರು ಲಂಡನ್ನಿನಲ್ಲಿ ಒಬ್ಬರೂ ದೊರೆಯುಪುದಿಲ್ಲವೆಂದೂ, ಇಂಡಿಯಾ ದೇಶವು ಎಂದೆಂದಿಗೂ ಸವೆಯದಷ್ಟು ಸಂಪತ್ತುಳ್ಳ ದೇಶವೆಂದೂ ವಿವರಿಸಿರುವನು. ಇವನು ಲಂಚ ತೆಗೆದುಕೊಂಡನೆಂದು ಪಾರ್ಲಿಮೆಂಟಿನವರು ವಿಚಾರಣೆಗೆ ಗುರಿಪಡಿಸಿದಾಗ, ಈ ದೇಶದ ಸಂಪತ್ತಿನ ಪ್ರಮಾಣವನ್ನೂ ಕೊಳ್ಳೆಯನ್ನು ತಪ್ಪಿಸಿಕೊಳ್ಳುವ ಸಲುವಾಗಿ ಆಯಾ ಊರಿನವರು ಕೊಡುವುದಾಗಿ ಹೇಳುತ್ತಿದ್ದ ಲಂಚದ ಪ್ರಮಾಣವನ್ನೂ ನೋಡಿದ್ದಕ್ಕೆ, ತಾನು ಅತ್ಯಲ್ಪವಾದ ಲಂಚಮಾತ್ರದಲ್ಲೇ ತೃಪ್ತನಾದುದನ್ನು ಈಗ ನೆನೆಸಿಕೊಂಡರೆ ತನಗೇ ಆಶ್ಚರ್ಯವಾಗುತ್ತಿದೆ, ಎಂದು ಕ್ಲೈವನು ಹೇಳಿಕೊಂಡನು.

ಹಿಂದೂಗಳು ಸಕಲ ವಿಚಾರಗಳಲ್ಲೂ ಲೋಕದಲ್ಲಿ ಇತರ ಜನರಿಗಿಂತಲೂ ಮುಂದುವರಿದಿದ್ದರೂ ಈಗ ಅವನತಿ ಪಡೆದಿರುವುದಕ್ಕೆ ಕಾರಣವೇನು? ಗುಪ್ತರ ಕಾಲವಾದ ಮೇಲೆ ಇವರು ರಾಜಕೀಯ ಐಕಮತ್ಯವನ್ನು ಗುರಿಯಾಗಿಟ್ಟುಕೊಳ್ಳದೆ ಹೋದುದರಿಂದ ಇವರ ರಾಜ್ಯಗಳು ಹಲವು ಶತಮಾನ ಕಾಲ ಪರಸ್ಪರವಾಗಿ ಸರ್ವದಾ ಕಲಹಿಸುತ್ತಾ

CC-0. Jangamwadi Math Collection. Digitized by eGangotri

ಎಲ್ಲರೂ ದುರ್ಬಲರಾಗಿಬಿಟ್ಟಿದ್ದರು. ಆದುದರಿಂದ ಇವರು ಸುಲಭವಾಗಿ ಮುಸಲ್ಮಾನರಿಂದ ಜಯಿಸಲ್ಪಟ್ಟರು. ಈ ವಿಜೇತರು ಹಿಂದೂಗಳ ಅಖಂಡವಾದ ಸಂಪತ್ತನ್ನೂ ಧ್ವಂಸಮಾಡಿ ಅವರ ಮಹಾನಗರಗಳನ್ನೂ ಗೃಹಾರಾಮ ದೇವಾಲಯ ಪ್ರಾಸಾದಗಳನ್ನೂ ವಿದ್ಯಾಶಾಲೆಗಳನ್ನೂ ಕೆರೆ-ಕಾಲುವೆಗಳನ್ನೂ ಲೆಕ್ಕವಿಲ್ಲದಂತೆ ಮನಸ್ವೀ ನಾಶಮಾಡಿ-ಬಿಟ್ಟರು. ಈ ದೆಸೆಯಿಂದ ಹಿಂದೂಗಳಿಗೆ ಶತ್ರುಗಳನ್ನು ಎದುರಿ-ಸುವ ಶಕ್ತಿಯೇ ಉಡುಗಿಹೋಗಿಬಿಟ್ಟಿತು. ಅದರ ಜತೆಗೆ ಹೀಗೆ ಎದುರಿಸುವ ಪ್ರವೃತ್ತಿಯನ್ನು ಸಹ ಇವರು ವಿಸರ್ಜಿಸಿ, ಆಮುಷ್ಮಿಕ ಪರಿಹಾರಗಳಲ್ಲಿ ನಿಮಗ್ನರಾಗಿಬಿಟ್ಟರು. ಲೌಕಿಕ ವ್ಯವಹಾರದ ಸ್ವಾಮಿ-ಭೃತ್ಯ ಸ್ಥಿತಿಗಳು ಮಾಯಾಕಲ್ಪಿತ-ವಾದುವೆಂದೂ, ಅತ್ಯಲ್ಪಕಾಲ ಮಾತ್ರವಿರತಕ್ಕ ಈ ಜನ್ಮದಲ್ಲಿ ಪರಸಾಧನೆಯನ್ನು ಬಿಟ್ಟು ದೇಹದ ಸ್ವಾತಂತ್ರ್ಯ-ಕ್ಕಾಗಿ ಹೋರಾಡುವುದು ಮೂಢತನವೆಂದೂ ಸಿದ್ಧಾಂತವು ಹುಟ್ಟಿತು. ಬೌದ್ಧಮತವನ್ನು ಸೋಲಿಸುವುದಕ್ಕಾಗಿ ಹಿಂದೂ ಮತವು ವೇದಕಾಲದ ಆರ್ಯಾಂಶಗಳನ್ನು ಮೂಲೆಗೊತ್ತಿ ದ್ರಾವಿಡಾಂಶಗಳನ್ನು ಬಹುವಾಗಿ ಸ್ವೀಕರಿಸಿ ರೂಪಾಂತರ ವನ್ನು ಪಡೆಯಿತು. ಜಾತಿ, ವಿಗ್ರಹಾರಾಧನೆ, ಮೂಢಾಚಾರ, ಬ್ರಾಹ್ಮಣಾಧಿಪತ್ಯ ಇವು ಹಿಂದೂ ಧರ್ಮದ ಊರೆಗಂಬ-ಗಳಾದುವು. ಲೋಕವ್ಯವಹಾರಕ್ಕೆ ಹೊರಚ್ಚಾದ ವಿಚಾರ ಗಳಲ್ಲೇ ಮನಸ್ಸನ್ನು ಓಡಿಸುತ್ತ ಬಂದುದರಿಂದ ನೀತಿಯ ಶ್ರದ್ಧೆಯಲ್ಲಿ ಮನಸ್ಸು ಉದಾಸೀನಗೊಂಡು ದೇವರೂ ಮುಕ್ತರೂ ಸಹ ನೀತಿಯ ಕಟ್ಟುಪಾಡಿಗೆ ಅತೀತರೆಂದೂ ಅವರನ್ನು ನೀತಿವಂತರೆಂದೇ ಹೇಳಲಾಗುವುದಿಲ್ಲವೆಂದೂ ಸಿದ್ಧಾಂತವು ಹುಟ್ಟಿತು; ಈ ದೆಸೆಯಿಂದ ಈ ಜನರ ನೀತಿ-ಚೈತನ್ಯವು ಮಲಿನಗೊಂಡು ಇವರು ನೀತಿಧರ್ಮಕ್ಕೆ ಅತ್ಯಂತ ಹೇಯವಾಗಿ ಕಂಡುಬರುವ ಸಹಗಮನ, ನರಬಲಿ, ಅಸ್ಪೃಶ್ಯತೆ ಮೊದಲಾದ ಘೋರ ದುಷ್ಪದ್ಧತಿಗಳನ್ನು, ಇತರ ಜನಾಂಗಗಳು ಎಷ್ಟೋ ಹಿಂದೆ ಬಿಟ್ಟಿದ್ದರೂ, ಇದುವರೆಗೂ ಛಲದಿಂದ ಆಚರಿಸುತ್ತಾ ಬಂದರು. ಪ್ರಪಂಚವೇ ಮಾಯೆ ಯೆಂಬ ಸಿದ್ಧಾಂತಕ್ಕೆ ಸಿಲುಕಿ ಸ್ವಾತಂತ್ರ್ಯದಲ್ಲೂ ದೇಶಾ ಭಿಮಾನದಲ್ಲೂ ಪ್ರಗತಿಯಲ್ಲೂ ಇವರು ಪ್ರವೃತ್ತಿಯನ್ನೇ ಕಳೆದುಕೊಂಡರು. ಧರ್ಮಾಚಾರಿಗಳಿಂದಲೂ ಯೋಗಿ-ಗಳಿಂದಲೂ ತುಂಬಿರುವ ಹಿಂದೂ ಜನಾಂಗದ ಉದ್ಧಾರಕ್ಕೆ ಯುರೋಪಿನ ಇತಿಹಾಸದಲ್ಲಿ ತಲೆದೋರಿದ ವಿದ್ಯೋದಯ (Renaissance), ಧರ್ಮೋದಯ (Reformation), ಜ್ಞಾನಪ್ರಬೋಧ (Enlightenment) ಗಳ ಚಳವಳಿ-ಗಳು ಹುಟ್ಟದಲ್ಲದೆ ತೀರದು.*

---

* ಈ ಲೇಖನವು ವಿಲ್ ಡುರಾಂಟ್ ಎಂಬ ಸುಪ್ರಸಿದ್ಧ ಲೇಖಕನ "ನಾಗರಕತೆಯ ಕಥೆ (೧೯೩೫)" ಎಂಬ ಗ್ರಂಥದ ಪ್ರಥಮ ಪುಸ್ತಕದ ಕೆಲ ಪುಟಗಳ ಅನುವಾದವಾಗಿದೆ. ಇವನು ಹೇಳುವ ಅನೇಕ ವಿಚಾರಗಳಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿದೆ; ಇವನ ಅನೇಕ ಸಾರಾಂಶಗಳನ್ನು ಒಪ್ಪಲಾಗುವುದಿಲ್ಲ.

—ಲೇಖಕ.


ದಿ ತರುಣ ಅಶ್ಯುರನ್ಸ್ ಕಂಪನಿ ಲಿ., ಅಹಮ್ಮದಾಬಾದ

ನಮ್ಮಲ್ಲಿ ಕುಟುಂಬಸಂರಕ್ಷಕ ಯೋಜನೆ, ಮಲ್ಟಿಪಲ್ ಬೆನಿಫಿಟ್ ಪ್ಲ್ಯಾನ್, ಫಿಕ್ಸ್ಡ ಬೋನಸ್ ಎಂಡೌಮೆಂಟ್, ಮಕ್ಕಳ ಸುಖಭವಿಷ್ಯದ ವಿಮೆ—ಮೊದಲಾದ ಹಲವು ಲಾಭದಾಯಕ ಯೋಜನೆಗಳಿವೆ.

ತರುಣ ಡಾಯಮಂಡ್ ಪಾಲಿಸಿಯಿಂದ ಸ್ವಸಂರಕ್ಷಣೆ, ಪೆನ್ಶನ್ ಮತ್ತು ಸುರಕ್ಷಿತ ಠೇವುಗಳು ಸಿಗುವವು.

ತರುಣ ಬಾಂಡ್: ಇದೊಂದು ಅದ್ಭುತ ಕಾಣಿಕೆ. ಬರಿ ರೂ. ೧೩-೮-೦ರಲ್ಲಿ ನಿಮ್ಮ ಮತ್ತು ನಿಮ್ಮ ಕುಟುಂಬದ ರಕ್ಷಣೆಯಾಗುವುದಲ್ಲದೆ, ದೈವವಿದ್ದರೆ ೨೫೦೦ ರೂ. ಸಿಗುವ ಸಂಭವವಿದೆ.

☞ ೧೯೩೭ರ ಆಗಸ್ಟ್ ತಿಂಗಳಲ್ಲಿ ತರುಣಬಾಂಡುಗಳ ಬಹುಮಾನಗಳನ್ನು ಹಂಚುವ ೩ನೆಯ ಸಮಾರಂಭವು ಜರುಗಲಿದೆ!

ಕರ್ನಾಟಕದಲ್ಲೆಲ್ಲಾ ಕೆಲಸಮಾಡಲು ಏಜಂಟರು ಬೇಕು. ಕೆಳಗಿನ ವಿಳಾಸಗಳಿಗೆ ಬರೆಯಿರಿ:—

ಬ್ರ್ಯಾಂಚ್ ಮ್ಯಾನೇಜರ್,
ಎ. ಡಿ. ದೇಶಪಾಂಡೆ, ಮೇನರೋಡ್, ಸಾಂಗಲಿ

ಧಾರವಾಡ ಜಿಲ್ಲೆಯ ಚೀಫ ಏಜಂಟರು
ಮೆಸರ್ಸ್ ಲೋಖಂಡೆ, ಸಿದ್ದನಗೌಡರ ಮತ್ತು ಕಂಪನಿ, ಧಾರವಾಡ

ಎನ್. ಗುಡಿ
ಚೀಫ್ ಏಜಂಟ, ಹೈದರಾಬಾದ (ದ)

ಬೆಳಗಾಂವಿ ಜಿಲ್ಲೆಯ ಆಸಿಸ್ಟಂಟ್ ಆರ್ಗನೈಜರ್
ಕೆ. ಎಸ್. ಪಾವಟೆ, ಬನಹಟ್ಟಿ (ಜಿ: ಬೆಳಗಾವಿ)


CC-0. Jangamwadi Math Collection. Digitized by eGangotri

# ಶುಭದೃಷ್ಟಿ

ಲೇಖಕರು: ಶ್ರೀ. ನಾಗಾನಂದ

**ಆ ಕಲಾಕೋವಿದನಿಗೆ ಯಾರೂ ಇಲ್ಲ. ತಂದೆ ಈತ, ತಾಯಿ ಈಕೆ ಎಂದು ನಿರ್ಧರವಾಗಿ ಹೇಳಲು ಬಾರದಂಥ ಪರದೇಶಿ. ಆತನಿಗೆ ಯಾವ ಭೂಲೌಕಿಕ ಆಸೆಯೂ ಇರಲಿಲ್ಲ. ಪ್ರಪಂಚದಲ್ಲಿಯ ಹಾಸ್ಯ–ವಿನೋದಗಳನ್ನೆಲ್ಲಾ ಸವಿದು, ಅನುಭವಿಸಿ, ಸುಖಿಸಬೇಕೆಂಬುದೇ ಅವನ ಕರುಳಿನ ಬಯಕೆ. ಅವನ ಕಣ್ಣಿಗೊಮ್ಮೆ ಅವನ ಈಪ್ಸಿತದ ಮೋಹಮೂರುತಿಯಂತಿರುವ ಲಲನೆ ತೋರಿದಾಗ— ಆ ಪೀಯೂಷ-ವಿಷಸಮ ಮುಹೂರ್ತದಲ್ಲಿ — ನಡೆದುದೇನು ?**



ಒಂದುಕಡೆ ಅನಂತವಾದ, ಅಗಾಧವಾದ ಅಂಬುಧಿ; ಒಂದು ಕಡೆ ಸೊಗಸುಗಾತಿಯಾದ, ಪ್ರಫುಲ್ಲಮಯಿಯಾದ ನಿಸರ್ಗರಮಣಿ. ಗಾಂಭೀರ್ಯವೂ ಸರಳ ಸುಮನೋಹರತೆಯೂ ಇದಿರಿದಿರಾಗಿ ರೂಪುಗೊಂಡು ಹೊಯಿಕೈಯಾಗಲೆಳಸುತ್ತಿರುವಂತೆ ಭಾಸವಾಯಿತು. ಸುನೀಲ, ಸುಗಭೀರ ವಾರಿಧಿಯು, ಹೃದಯಾಂತರಾಳದಲ್ಲಿ ಅಸಹ್ಯ ಆನಂದೋನ್ಮೀಲಿತ ಭೀತಿ ಹುಟ್ಟಿಸಿ ಎದೆಯ ಬೀಣೆಯ ತಂತುವನ್ನು 'ಮೀಂಝು, ಮೀಂಝು....' ಎಂದು ತಾನತಾನವಾಗಿ ಆದುರಿಸುವುದು; ಪ್ರಕೃತಿಯ ಮನೋಜ್ಞವಾದ ಸೊಬಗೂ, ನಯನಹಾರಿತ್ವವೂ, ಸೃಷ್ಟಿಸಾರಿಕೆಯ ಅಂಗಾಂಗಗಳಿಂದ ಹೊರಚಿಮ್ಮುವ — ಸಮರಸೋನ್ಮುಖ ಸರಸಿಗೆ ಮಾತ್ರ ಕೇಳಿಬರುವ—ಸಾನುರಾಗದ ಸಪ್ತಸ್ವರಗಳೂ, ಒಂದಕ್ಕೊಂದು ಹಾಸುಹೊಕ್ಕಾಗಿದ್ದು ಹರಿಸುವ ಲಾವಣ್ಯತೇಜೋರಸವು ಜೀವನಸಂಗೀತಾನುಭವಕ್ಕೆ ಹೊಸಮೆರಗು ಬೊಳೆಯುವುದು. ಈ ಉಭಯ ಭೂತವಸ್ತುಗಳ ಪರಸ್ಪರ ಸ್ಪರ್ಧೆ ಮಾತಿನ ಬಲೆಗೆ ಸಿಲುಕದೆ, ವರ್ಣನಾತೀತವಾಗಿ, ಅನಾದಿಯಾಗಿ, ದುರ್ನಿರೀಕ್ಷ್ಯವಾಗಿ ನಡೆದಿದೆ; ಈಗಲೂ ಅನಿವಾರ್ಯವಾಗಿ ನಡೆಯುತ್ತಿದೆ. ಈ ಮೇಲಾಟದ ಘರ್ಷಣೆಯಲ್ಲಿ ಅನೇಕ ಅನುಪಮೇಯ ಅಪಾರ್ಥಿವ ಚಿತ್ರವಸ್ತುಗಳೂ ಕವಿಯಾದರ್ಶಗಳೂ ಒಸೆದು ಬಂದಿವೆ. ಆದರೆ ಅವುಗಳಲ್ಲಿ ಕೆಲವು ಮಾತ್ರ ಕಾಗದದ ಮೇಲೆಯೋ ವೇಶ್ಮದ ಮೇಲೆಯೋ ಬಣ್ಣಬಣ್ಣವಾಗಿ ಒಸರಿಕೊಂಡು ರೂಪುತಳೆದು ಅವರ್ಣನೀಯಾನಂದ ಕಾರಣಗಳಾಗಿವೆ. ಕೆಲವು ಕವಿಯ ಸ್ಫೂರ್ತಿಮಾಲೆಯ ಕಿಡಿಗಳಾಗಿ, ನಿರರ್ಗಳವಾಗಿ ನಿನಾದಮಧುರವಾಗಿ ಗಾನಮಾಡಲ್ಪಟ್ಟು ಗಮಕಿಗಳ ಗರ್ಭಪಟಲದ ಮೇಲೆ ಚಿರಂತನವಾಗಿ ಕಡೆಯಲ್ಪಟ್ಟಿವೆ.

ಇಂಥ ರುದ್ರ ಸುಂದರ ಸ್ಪರ್ಧೆ ಉತ್ತುಂಗಾವೇಶ ಹೊಂದಿದ ಆದೊಂದು ಪುಣ್ಯದಿನ. ಬಾಂದಳದಲ್ಲಿ ಪಶ್ಚಿಮ ದಿಗ್ಭಾಗವಷ್ಟನ್ನು ಬಿಟ್ಟರೆ ಉಳಿದ ಕಡೆಯೆಲ್ಲಾ ನೀಲವರ್ಣದ ಜವನಿಕೆ ಎಡೆಬಿಡದೆ ಆಚ್ಛಾದಿಸಿಕೊಂಡಿದೆ. ಪಡುವೆಡೆಗೆ ನಾನಾವಿಧ ವರ್ಣಗಳ ಅಷ್ಟಗಲದ ತಿಮಿರದ ಮರಿಗಳು ಲಘುವಾಗಿ ತೇಲುತ್ತಿವೆ. ಈ ವಿಖರಿತ ಮೇಘಮಾಲೆಗಳ ಎಡೆಯೆಡೆಗಳಿಂದ ಬೆಂಗದಿರನು ಇಣುಕುತ್ತಾ, ತೂರಿ ನಲಿಯುತ್ತಾ ಕೆಳಗೆ ಜಾರುತ್ತಿದ್ದಾನೆ. ಆಗಣ ಆ ವರ್ಣವೈವಿಧ್ಯವೇನು ! ಬಣ್ಣಗಳ ತೆರತೆರನಾದ ಲಾಸ್ಯವೇನು, ವಿಲಾಸವೇನು ! ಒಂದು ಕ್ಷಣ, ಎರಡು ಮೋಡಗಳ ಸಂದಿನಿಂದ ಕೆಂಚುಕಿರಣಗಳ ಕುಂಚವೊಂದು ಚಿಮ್ಮಿಕೊಂಡು ಅಷ್ಟು ವ್ಯಾಸವನ್ನು ಪ್ರಜ್ವಲಗೊಳಿಸಿ ಮಾಯವಾಗುವುದು. ಜ್ವಲಿತ ವ್ಯಾಸದ ಸುತ್ತಲೂ ಧೂಸರಿತ ಬಣ್ಣ; ಅದನ್ನು ಬಳಸಿ ಕಿತ್ತಳೆಯ ಮಿರುಗು; ಆದರ ಹೊರಮೈಯಲ್ಲಿ ಗುಲಾಬಿ. ಆಮೇಲೆ ಒಂದೋಂದಾಗಿ ಗುಲಾಲು ಬಣ್ಣ, ಹಸರು, ಕಪಿಲ, ನೀಲ, ನಾನಾರೀತಿಯವು; ರಾಮಣೀಯಕವಾದವುಗಳು. ಆಹಾ! ಎಂಥ ದೃಶ್ಯ ! ಮೋಡಗಳೆಲ್ಲಾ ಒಂದು ಕಡೆ ಸರಿದಿವೆ. ಜ್ಯೋತಿರ್ಮಯವಾದ ಸೂರ್ಯ-

CC-0. Jangamwadi Math Collection. Digitized by eGangotri

ಗೋಲ ಆ ಅವಕಾಶದಲ್ಲಿ ತಾನೇ ತಾನಾಗಿ ರಾರಾಜಿಸುತ್ತಿದೆ. ಮಿಕ್ಕ ವರ್ಣಗಳೆಲ್ಲಾ ಆ ಸ್ವಯಂಪ್ರಭೆಯಲ್ಲಿ ವಿಲೀನವಾಗಿ ಹೋದುವು. ಆ ಪ್ರಖರ ಪ್ರಕಾಶ ಉತ್ಸಾಹ ಸೂಸುತ್ತಿದೆ........ಅದೊಂದು ಸೌಂದರ್ಯದ ಗೋಪುರ.

ಈ ಅಭೂತಪೂರ್ವ ಕಣಸು ಕಾಣುತ್ತಾ ಸಾಗರದ ತೀರದಲ್ಲಿ ಒಬ್ಬ ಚಿತ್ರಶಿಲ್ಪಿ ದೇಹದರಿವು ಮರೆತುಬಿಟ್ಟಿದ್ದಾನೆ. ಕ್ಷಣಕ್ಷಣವೂ ಗಾತ್ರವು ಪುಲಕಿತವಾಗುತ್ತಿದೆ. ಮೈಮರೆದು ನಿಂತಿದೆ. ಅಂತಃಕರಣದ ಅಂತರಾಳವೆಲ್ಲವೂ ಹೊರಗಣ ದಿವ್ಯತೇಜಸ್ಸಿನಿಂದ ತುಂಬಿಹೋಗಿ ಒಳಗೊಳಗೆ ಗುಡುಗಾಡುತ್ತಿದೆ. ಸೃಷ್ಟಿಯೊಡನೆ ಸಾಮರಸ್ಯ ಹೊಂದಿ ಅದರೊಡನೆ ಒಂದಾಗಿಹೋಗುವ ದಾಹ ಪ್ರತಿನಿಮಿಷವೂ ಅಪ್ರತಿಹತವಾಗಿ ಬೆಳೆಯುತ್ತಿದೆ. ಈ ಸಾಮರಸ್ಯದ ತೃಷ್ಣೆಯಲ್ಲಿ ಜೀವನವೇ ನಿಸ್ಸಾರ; ಸ್ಥೂಲಶರೀರವೂ ಭಾರ. ಸತ್ತು ಸೂಕ್ಷ್ಮದೇಹಧಾರಿಯಾಗಿ, ಲಾವಣ್ಯಮಯಿಯಾದ ಶಾಂತಸ್ವರೂಪಿಣಿಯಾದ ಅಮಾನುಷಪ್ರಕೃತಿಯೊಡನೆ ನಿರ್ವಾಣಗೊಳ್ಳಲು ಚಿತ್ರಶಿಲ್ಪಿಯದೆಲ್ಲವೂ ಹಾತೊರೆಯುತ್ತಿದೆ. ಕಿವಿಯ ನೆಲೆಗಳಲ್ಲಿ 'ಜೀವನವು ಕಹಿ ಸಾವು ಜೆಲ್ಲ' ಎಂಬ ಶಬ್ದದ ಪಾಂಚಜನ್ಯದಂಥ ಘೂರ್ಮಿನಾದ.

ಚಿತ್ರಕಾರನ ಆವೇಶಪೂರಿತ ಕೆಂಗಣ್ಣುಗಳು ಒಂದು ಸರ್ತಿ ಸುತ್ತಲ ಪ್ರದೇಶವೆಲ್ಲಾ ಹಾಯ್ದು ಬಂದುವು. ಸಮುದ್ರ ನಯವಾಗಿ ಮೃದುವಾಗಿ ನೃತ್ಯಮಾಡುತ್ತಿದೆ. ಅಲೆಯಲೆಯಾದ ನಲಿತ. ದಡದ ಬಳಿ ರೌದ್ರತೆಯೊಡನೆ ಪಾದವಿನ್ಯಾಸಮಾಡುತ್ತಾ ತೀರದಿಂದ ದೂರ ಹೆಚ್ಚಿದ ಹಾಗೂ ಮೆಲ್ಲಗೆ ಶಾಂತವಾಗಿ ಒಲೆಯೊಲೆಯುತ್ತ ತೊನೆದಾಡಿಕೊಂಡು, ನೀಲಿಮೆಯೇರುತ್ತಾ ದಿಗಂತದೊಡನೆ ಐಕ್ಯವಾಗುವಲ್ಲಿ ನಿಶ್ಚಲವಾಗಿ ಕಣ್ಗೆಡ್ಡವಾಗಿದೆ. ನರ್ತಕಿಯ ನಾಟ್ಯವನ್ನು ಹೋಲುತ್ತಿದೆ ಕಡಲ ಕುಣಿತ. ನರ್ತಕಿಯ ಹೆಜ್ಜೆಗಳು ಅವಿಶ್ರಾಂತವಾಗಿ ಬಿದ್ದೇಳುತ್ತಿದ್ದರೂ ಸಿಂಹಕಟಿ ಕೊಂಚ ಮಾತ್ರ ಅತ್ತಿತ್ತ ಬಳಕುತ್ತಾ ಇರಲು ಶಿರಸ್ಸು ಊರ್ಧ್ವವಾಗಿ ನಿಲ್ಲುವುದಿಲ್ಲವೆ? ಅದೇ ರೀತಿ.

ಅಸ್ತಮಿಸುತ್ತಿರುವ ರವಿಯ ಕಿರಣಗಳು ಜಲನಿಧಿಗೆ ಆಭರಣಗಳನ್ನು ಓರಣವಾಗಿ ತೊಡಿಸುತ್ತಿವೆ.

ಚಿತ್ರಕಾರನ ಕಣ್ಣುಗಳು ಈ ದೃಶ್ಯ ನೋಡಿ ನಿಶ್ಚಲವಾದುವು. ಸಮುದ್ರದ ಮೇಲಣಿಂದ ಶೀತಲವಾದ ಎಲರು ಸುಳಿದುಬಂದು ಬಿಸಿಯಾದ ಅವನ ವಿದುಳನ್ನು ಶಾಂತವಾಗಿಸಿತು. ಸ್ವಲ್ಪ ಸಮಯದ ನಂತರ ಚಿತ್ರಕಾರನು ಸಮುದ್ರದ ಮೇಲಣ ಕಣ್ಣು ತಿರುಗಿಸಿ ತಿರುಗಿನಿಂತನು. ತಿರುಗಿಯೂ ಅನುಪಮವಾದ ನೋಟ. ವನರಾಜಿ,ನೇಸರು ಬೀರಿದ ಹೊಂಬಣ್ಣದಲ್ಲಿ ಮಿಂದು ಮನೋರಮವಾಗಿದೆ. ಅದರಾಚೆ ಅತ್ಯಂತರದ ಮಬ್ಬಿನಲ್ಲಿ ಮಸಕಾಗಿ ನಿಂತಿರುವ ನೀಲಗಿರಿಗಳು — ಗಿರಿಶೃಂಗಗಳು. ಜಗತ್ತೇ ಲಾವಣ್ಯಮಯ, ಕಲಾಪೂರ್ಣ !

ಚಿತ್ರಶಿಲ್ಪಿ ಸೌಂದರ್ಯಪಾನಮಾಡುತ್ತಾ ಕಲೆಯ ತಿರುಳು ಅರಿಯುತ್ತಿದ್ದಾನೆ. ಚಿತ್ರಕಾರನಿಗಾಗಲಿ, ಕವಿಗಾಗಲಿ ಆದರ್ಶದರ್ಶನವಾಗದೆ ಸ್ಫೂರ್ತಿ ಬರಲಾರದು. ಸ್ಫೂರ್ತಿ ಮೈದುಂಬದೆ ಉತ್ತಮ ದೃಶ್ಯಕಾವ್ಯವಾಗಲಿ ಶ್ರಾವ್ಯಕಾವ್ಯವಾಗಲಿ ಹುಟ್ಟುವುದಿಲ್ಲ.

ನಮ್ಮ ಚಿತ್ರಶಿಲ್ಪಿಗೆ ಈಗ ಉತ್ತಮ ಆದರ್ಶದ ಒಸಗೆಯಾಗಿದೆ. ದರ್ಶನದ ಪ್ರಸನ್ನತೆ, ಸ್ಫೂರ್ತಿ ಝುರಿಝುರಿಯಾಗಿ ಹರಿಯಲು ಕಾರಣವಾಗಿದೆ. ಆಗ ಕಂಡ ದರ್ಶನ ಅವನನ್ನು ಸುಮ್ಮನಿರಿಸಲಿಲ್ಲ. ಚುಚ್ಚಿಚುಚ್ಚಿ ಕೆರಳಿಸಿತು; ಕೆರಳಿ ಬೆನ್ನು ಚಪ್ಪರಿಸಿತು. 'ಹೋಗು, ಉತ್ತಮ ಚಿತ್ರ ನಿರ್ಮಾಣಮಾಡು. ನಿಸರ್ಗವನ್ನು ನಿನ್ನ ಕುಂಚದಿಂದ ವೇಶ್ಮದ ಮೇಲೆ ವರ್ಣಿಸು. ಶೀಘ್ರ.' ಎಂದು ಹುರಿದುಂಬಿಸುವುದು.

* *

ಬಳಿಯಲ್ಲಿಯೇ ವ್ಯಾಸಪೀಠದಂತಿದ್ದ ಒಂದು ಚಿಕ್ಕ ದಿಣ್ಣೆ. ಅದರ ಮೇಲೆ ಹತ್ತಿ ನೋಡಿದರೆ ದೃಶ್ಯ ಇನ್ನೂ ವಿಸ್ತಾರವಾಗುತ್ತಾ ಹೋಗಿ, ದೂರದಲ್ಲಿ ಕರೆಯ ಮಳಲ ಮೇಲೆ ವಿಹರಿಸುತ್ತಿದ್ದ ಜನರು ಕಾಣಿಸುತ್ತಾರೆ. ಅವರು ಧರಿಸಿದ್ದ ಬಣ್ಣಬಣ್ಣದ ಬಟ್ಟೆಗಳು ಆ ಶುಭ್ರ ಸೈಕತ ರಾಶಿಯಲ್ಲಿ ಮಾಟವಾಗಿ ಕಂಗೊಳಿಸುತ್ತಿವೆ. ಹಾಗೆಯೆ ತೀರವನ್ನು ಅನುಸರಿಸಿ ದೃಷ್ಟಿ ಓಡಿಸುತ್ತಾ ಹೋದರೆ, ಅಲ್ಲೊಂದು ಇಲ್ಲೊಂದು ಚಿಕ್ಕದೊಡ್ಡ ದೋಣಿಗಳು ಅಲೆಗಳ ಮೇಲೆ ಜಾರಿಕೊಂಡು ಕ್ರಮವಾಗಿ ಸರಿಯುತ್ತಾ ಕಣ್ಮರೆಯಾಗುವುವು. ಅವುಗಳ ಎತ್ತಿಕಟ್ಟಿದ ಪಟಗಳು ದೂರದಿಂದ, ಬೆಳ್ಳಕ್ಕಿಗಳು ತೇಲುವಂತೆ ಬಹುಮನೋಹರವಾಗಿವೆ. ಅಲ್ಲಲ್ಲಿ ಮೀನುಬೇಟೆಯಲ್ಲಿ ತೊಡಗಿರುವ ಬೆಸ್ತರ ಕೃಷ್ಣಕಾಯಗಳು ಚಲಿಸುತ್ತಿರುವ ಕಪ್ಪುಗಲ್ಲಿನ ನಗ್ನ ಪುತ್ಥಳಿಗಳಂತೆ ಒಪ್ಪುತ್ತಾ ತೀರದ ನಿರ್ಜನತೆಯನ್ನು ತೊಡೆದುಹಾಕುತ್ತಿವೆ.

ಚಿತ್ರಕಾರನು ಆ ದಿಣ್ಣೆಯನ್ನೇರಿ ಈ ನೋಟವನ್ನೆಲ್ಲಾ ನಿಧಾನವಾಗಿ ಗಮನಿಸತೊಡಗಿದನು. ಉಚ್ಚತಮ ಚಿತ್ರರಸಕ್ಕೆ ಅದೊಂದು ನಿರುಪಮ ಆದರ್ಶವಾಗಿತ್ತು.

CC-0. Jangamwadi Math Collection. Digitized by eGangotri

ನೋಡಿದಷ್ಟೂ ಇನ್ನೂ ನೋಡಬೇಕೆಂಬ ಬಯಕೆ ನಿಡಿದಾಗುವುದು. ಅವನ ಮನಸ್ಸು ಆಹ್ಲಾದಗೊಂಡಿತು. ಅವನ ಹೃದಯ ಕಲೆಯ ಸ್ಫೂರ್ತಿಯಲ್ಲಿ ಮಜ್ಜನಮಾಡಿ, ರಸೋತ್ಪಾದನೆಗೆ ಮೊದಲಿಟ್ಟಿತು; ಕೈ ಸ್ಫುರಣಗೊಂಡಿತು; ಅಂಗುಲಿಗಳು ಮಹತ್ಕಾರ್ಯಕ್ಕಾಗಿ ತತ್ತರಿಸತೊಡಗಿದುವು............

ಒಡನೆ ಅತಿಚಪಲತೆಯಿಂದ ಜತೆಯಲ್ಲಿ ತಂದಿದ್ದ ಚಿತ್ರಸಾಮಗ್ರಿಯನ್ನೆಲ್ಲಾ ಒಂದೊಂದಾಗಿ ಪೆಟ್ಟಿಗೆಯಿಂದ ಹೊರಗೆ ತೆಗೆದಿಟ್ಟ. ಒಂದು ಶುಭ್ರವೇಶ್ಮವನ್ನು ಸುರುಳಿಬಿಚ್ಚಿ ಚೌಕಟ್ಟಿನಲ್ಲಿ ಬಿಗಿದು ಜೋಡಿಸಿ ಇದಿರಿಗೆ ಓರೆಯಾಗಿ ಹಾಸಿ ನಿಲ್ಲಿಸಿದ. ದೃಶ್ಯವನ್ನು ಯಾವ ಕೋನದಿಂದ ದರ್ಶಿಸಿದರೆ ಹೆಚ್ಚು ಪರಿಣಾಮಕರವಾಗಿಯೂ ಹೆಚ್ಚು ಸುಂದರವಾಗಿಯೂ ತೋರುತ್ತದೆ ಎಂಬುದನ್ನು ಕೊಂಚ ಹೊತ್ತು ಆಸನ ಬದಲಾಯಿಸುತ್ತಾ ಪರೀಕ್ಷಿಸಿ, ಕೊನೆಗೆ ಒಂದು ನಿರ್ದಿಷ್ಟ ಕೋನವನ್ನು ಕಂಡುಹಿಡಿದು ಅದಕ್ಕೆ ತಕ್ಕಂತೆ ಚೌಕಟ್ಟನ್ನು ತಿರುಗಿಸಿ ಕೂತುಕೊಂಡ.

ಮರಳಿ ಒಂದು ಬಾರಿ ಇದಿರಿಗೆ ಚಿತ್ರಾರ್ಪಿತದಂತಿದ್ದ ಕನಸನ್ನು ಸಂಪೂರ್ಣವಾಗಿ ಅವಗಾಹನೆಗೆ ತಂದುಕೊಂಡು ಒಳಗೊಳಗೆ ಅದನ್ನು ಮಥಿಸಿ ಆಸ್ವಾದಿಸಲು ತೊಡಗಿದ. ಎದೆಯ ಗೂಡು ಅನನುಭೂತ ಭಾವಸಂವೇದನದ ಪೂರದಿಂದುಬ್ಬಿಹೋಯಿತು. ಮುಖದ ಮೇಲೆ ಅಪರಿಚಿತ, ಅಪಾರ್ಥಿವ ಓಜವು ಹೊಮ್ಮಿ ಹಸರಿಸಿತು. ಕೈ ತನ್ನಿಂದ ತಾನೆ ಚಟುವಟಿಕೆ ವಹಿಸಿಕೊಂಡು ಕುಂಚವನ್ನು ಧರಿಸಿಕೊಂಡಿತು. ಅಲ್ಲಲ್ಲಿ ಬೇಕಾಗುವ ಬಣ್ಣಗಳ ಕಲಸುವಿಕೆಯಿಂದ ಜನ್ಮತಳೆಯುವ ನೂತನ ವರ್ಣಗಳು ರಂಗು ಹಲಗೆಯ ಮೇಲೆ ನಿರ್ಮಿತವಾದುವು. ಕುಂಚವು ಅದರಲ್ಲಿ ಅದ್ದಿಕೊಂಡು ವೇಶ್ಮದ ಮೇಲೆ ಬೆಡಗಿನಿಂದ, ಒನಪಿನಿಂದ ಅತಿಮಧುರವಾದ, ಅತಿಮನೋಹರವಾದ, ಚಿರಸ್ಥಾಯಿಯಾದ ವರ್ಣಚಿತ್ರವನ್ನು ಬಿತ್ತರಿಸತೊಡಗಿತು. ಅದೆಂಥ ಕುಂಚದ ಓಟ! ಅದೇನು ಚಿತ್ರಸೃಷ್ಟಿಯ ಸೌಭಾಗ್ಯ!

ಆ ಹೊತ್ತಿನಲ್ಲಿ ಚಿತ್ರಶಿಲ್ಪಿಗೆ ಅಸ್ತಿತ್ವವೇ ಇರಲಿಲ್ಲ. ಚಿತ್ರಶಿಲ್ಪಿ ಕಲೆಯ ಮನನೀಯ ಗರ್ಭದಲ್ಲಿ ಕಲೆತುಹೋಗಿ ತನ್ನನ್ನು ತಾನೆ ತೊರೆದುಬಿಟ್ಟಿದ್ದಾನೆ. ತನ್ನನ್ನೇ ಕಲಾದೇವಿಗೆ ಮುಡುಪು ಕಟ್ಟಿ ಸಮರ್ಪಣೆ ಮಾಡುವ ಹಾಗೆ ಪ್ರೇರೇಪಿಸಿದೆ ಆ ಕಲೆಯ ಆವೇಶ. ಕಲೆಯ ಕೈಯ ಕುಂಚವೇ ತಾನಾಗಿ ಆ ದೇವತೆಯ ಸಂದೇಶದಂತೆ ಚಿತ್ರಗೀತೆಯನ್ನು ಸಾರುತ್ತಿದ್ದಾನೆ.

ಹೀಗೆ ಚಿತ್ರಕಾರ, ಹೊರಪ್ರಪಂಚದ ಪರಿಜ್ಞಾನವುಳಿದು, ದೇಹಭಾವ ವಿಸರ್ಜನೆಮಾಡಿ, ಕಲಾವಿಶ್ವದಲ್ಲಿ ತಲ್ಲೀನನಾಗಿ, ದಿನಕರನು ಅಸ್ತನಾಗಿ ಸಂಧಿಪ್ರಕಾಶ ತೋರುವತನಕ ಚಿತ್ರ ಬರೆಯುತ್ತಿದ್ದ.

## ೨

ಅವನ ಹಿಂದುಗಡೆಯೇ ಬಹು ಸಮೀಪವೆನ್ನುವ ಹಾಗೆ ಅತಿ ಆಯಾಸದಿಂದ, ಗಾಬರಿಗಾಬರಿಯಾಗಿ ಮೇಲುಸಿರು ಬಿಡುವ ಶಬ್ದ. ಆ ಪಿಸುಗಾಳಿಯೊಡನೆ ಸೀರೆಯ ನಿರಿಗಳ, ಸೆರಗಿನ ಸರಸರ ಸಪ್ಪಳ. ಆದರೆ ಕಲೆಯ ಬೇರೊಂದು ಪ್ರಪಂಚದಲ್ಲಿ ವಿಹರಿಸುತ್ತಿದ್ದ ಅವನಿಗೆ ಮೊದಲುಮೊದಲು ಅದು ಕೇಳಿಸಲಿಲ್ಲ. ಇಂದ್ರಿಯಗಳೆಲ್ಲವೂ ಒಂದು ಕೇಂದ್ರದಲ್ಲಿ ಸ್ಥಿರಪಟ್ಟಿದ್ದುದರಿಂದ ಕೇಳಿಸಿದ್ದರೂ ಆಕಡೆ ಲಕ್ಷ್ಯವಿರಲಿಲ್ಲ. ಅವನ ವ್ಯವಧಾನವೆಲ್ಲಾ ವೇಶ್ಮದ ಮೇಲೆ ಜೀವಕಳೆ ತುಂಬುವ ಧಾವತಿಯಲ್ಲಿ.

ಚಿತ್ರ ಮುಕ್ಕಾಲುಪಾಲು ಮುಗಿದು ಬಂದಿತ್ತು. ತಾನು ರಚಿಸಿದ ಕೃತಿ ನೋಡಿ ತನಗೇ ಆಶ್ಚರ್ಯ. ಕೊಂಚ ಹೊತ್ತು ಆ ಅಪೂರ್ಣ ವರ್ಣವಿಲಾಸದಲ್ಲಿ ಕಣ್ಣು ಕೀಲಿಸಿ ದಿಟ್ಟಿಸುತ್ತಾ ನಿಷ್ಪಂದನಾದ ಆ ಚಿತ್ರಶಿಲ್ಪಿ. ನೋಡು ನೋಡುವಂತೆಯೆ ಸಮಾಧಿ ಮೇಲಣ ಮಟ್ಟದಿಂದ ಹರಿದು ನಿಮ್ನ ಮಟ್ಟದಲ್ಲಿ ಸ್ಥಾಯಿಯಾಯಿತು. ಹಾಗೆಯೆ ದಿಟ್ಟಿ ತನ್ನ ಕೃತಿಯ ಬೃಹದ್ರೂಪದ ಕಡೆ ಹೊರಳಿತು. ಅಪರದಲ್ಲಿ ಸೂರ್ಯ ಮುಳುಗಿದ್ದ ಕಡೆ ಆರಕ್ತ ರಾಗವು ರಂಜಿಸಿತ್ತು. ಪಶ್ಚಿಮ ದಿಗಂಗನೆ ರಮಣನ ಬರವನ್ನು ಕಂಡು ಓಕುಳಿಯ ಕಾರಂಜಿ ಪುಟಿಸಿದ್ದಳು.

ನಿರೀಕ್ಷಣೆಯಲ್ಲಿರುತ್ತಿದ್ದಹಾಗೆಯೆ ಮೇಲೆತ್ತಿದ್ದ ಕುಂಚದ ಕೈ ಸೋತುಬಂದು, ಬಲಗಡೆ ಇದ್ದ ಪೆಟ್ಟಿಗೆಯ ಮೇಲೆ ಊರಿಕೊಂಡಿತು. ಊರಿದ ಭಾರಕ್ಕೆ ನಡುವೆ ಸಿಕ್ಕಿಬಿದ್ದ ಫೌಂಟನ್‌ಪೆನ್ ಪುಳಕ್ಕನೆ ಜಗುಳಿ ಕೆಳಗೆ ಬಿತ್ತು. ಆ ಸ್ಪರ್ಶದಿಂದ, ಆ ಸಣ್ಣ ಸದ್ದಿನಿಂದ, ಚಿತ್ರಕಾರ ಮೈತಿಳಿದ. ಪೆನ್ ಎತ್ತಿ ಯಥಾಸ್ಥಿತಿ ಇಡುತ್ತಿರಲು ಪೆಟ್ಟಿಗೆಯ ಮೇಲೆ ಬರೆದಿದ್ದ 'ಶಶಿಕಾಂತ' ಎನ್ನುವ ಹೆಸರು ಅವನ ಕಣ್ಣು ಕೋರೈಸಿ, ಮಿದುಳನ್ನು ಮೆಟ್ಟಿ ನಿಜಸ್ಥಿತಿಗೆ ಅವನನ್ನು ತಂದಿಳಿಸಿತು. ಅಲ್ಲಿಗೆ ಚಿತ್ರಕಾರನ ಕಲಾಸಮಾಧಿ ಪೂರ್ಣ ಭಂಗವಾಯಿತು.

CC-0. Jangamwadi Math Collection. Digitized by eGangotri

ಒಂದೇ ವರಸೆಯಲ್ಲಿ ಕುಳಿತು ಕುಳಿತು ನೋವಾಗಲು, ಅದನ್ನು ನೀಗುವುದಕ್ಕಾಗಿ ಹಾಗೆ ಹೊರಳಲು ಮುಖವೂ ಎಡಗಡೆಗೆ ತಿರುಗಿತು. ಯಾರೋ ವೇಗವಾಗಿ ಬಂದು ಏದುತ್ತಾ, ಶೀಘ್ರಗತಿಯಿಂದ ಉಸಿರಾಡಿಸುತ್ತಾ ಇರುವಂತೆ ಖಚಿತವಾಗಿ ಕೇಳಿಸಿತು ಶಶಿಕಾಂತನಿಗೆ. ನಿಂತಲ್ಲಿಯೇ ಅಸ್ವಸ್ಥತೆಯಿಂದ ಯಾರೋ ಚಲಿಸುತ್ತಿರುವ ಹಾಗೆ........ ತಟ್ಟನೆ ಕತ್ತು ತಿರುಗಿಸಿ ಹಿಂದುಗಡೆ ನೋಡಿದ. ನೋಡಿದ ಕ್ಷಣವೇ ಬೆಕ್ಕಸ ಬೆರಗಾದ; ಮರುಕ್ಷಣವೆ ಹೌಹಾರಿ ಎದ್ದುನಿಂತುಬಿಟ್ಟ. ಆ ಎರಡೇ ಕ್ಷಣಗಳಲ್ಲಿ ಅವನಲ್ಲಿ ಎಂಥ ಮಾರ್ಪಾಡು ಉಂಟಾಯಿತು! ಏನೋ ದಿವ್ಯವನ್ನು ಕಂಡಂತೆ ಹೃದಯ ಪುನೀತವಾಯಿತು; ಮನಸ್ಸು ಹರುಷಗೊಂಡಿತು. ಸೀಸದಂತಿದ್ದ ದೇಹ ಉಣ್ಣೆಯಂತೆ ಹಗುರವಾಯಿತು. ಜೀವನ ಸ್ವರ್ಗವಾಸದಂತೆನಿಸಿತು. ಎಲ್ಲಾ ಎರಡು ನಿಮಿಷದಲ್ಲಿ. ಅದೆಷ್ಟು ದೊಡ್ಡ ಪರಿವರ್ತನೆ! ಹಿಮಾಲಯವೂ ಕಿರಿದಾಗಿತ್ತು ಅವನ ಅಚ್ಚರಿಯ ಮುಂದೆ.

'ನನಗೇನಾಗಿದೆ? ನಾನಿರುವುದು ಆಕಾಶವೋ, ಪಾತಾಳವೋ? ಗಾಳಿಯಲ್ಲಿ ಭ್ರಮಿಸುತ್ತಿದ್ದೇನೆಯೆ, ಭೂಮಿಯ ಮೇಲೆ ಚರಿಸುತ್ತಿದ್ದೇನೆಯೆ, ಎಲ್ಲಿ?' ಎಂಬ ಸಂಶಯ ಬೇರು ಬಿಟ್ಟಿತು. ಅವನಿಗೆ, ತನಗೆ ಭ್ರಾಂತಿಯೋ, ಉನ್ಮಾದವೋ ಆನಂದೋನ್ಮತ್ತತೆಯೋ, ದಾರುಣದುಃಖವೋ, ಏನೂ ತಿಳಿ ಯಲಿಲ್ಲ.

ಇದಿರಿಗೆ ಒಬ್ಬ ಸುಂದರ ತರುಣಿ ಅತಿಸಂಕೋಚದಿಂದ ಮೈಮುರಿದುಕೊಂಡು ನಿಂತಿದ್ದಾಳೆ. ಅವಳು ಎಡಗಾಲನ್ನು ನೆಲದ ಮೇಲೆ ನೇರವಾಗಿ ನೆಟ್ಟು ಬಲಗಾಲನ್ನು ಅವಳ ಸ್ವಭಾವೋಚಿತವಾಗಿ ಬಿಲ್ಲಿನ ಡೊಂಕಿನಂತೆ ನಸುಬಾಗಿಸಿ, ಕೊಂಚ ಹಿಂದಕ್ಕೆ ಒಲೆದವಳಂತೆ ಚಿತ್ರಾದರ್ಶಳಾಗಿದ್ದಾಳೆ. ಪಾದಾಂತ್ಯ-ದಿಂದ ಹಿಡಿದು ನಡುವಿನ ವರೆಗೆ ಅವಳ ಅಂಗರೇಖೆ ಮನೋ-ಹರವಾಗಿ ನಿಡಿದಾಗುತ್ತಾ, ಸರಳವಾಗಿ ನಯವಾಗಿ ಸ್ಥೂಲವಾಗುತ್ತಾ ಕೊಂಚವೂ ವಿಕೃತಿಯಿಲ್ಲದೆ ಕಟಿಯ ಕಂಪಿನೊಂದಿಗೆ ಲಯಹೊಂದಿದೆ. ನಡುವಿನೊಡನೆ ಸೇರುವ ಸ್ಥಳ ಕೆಳಭಾಗಕ್ಕಿಂತ ಹೆಚ್ಚು ಸ್ಥೂಲವಾಗಿದ್ದರೂ ಪೂರ್ಣದೇಹದ ಪರಿಮಾಣಕ್ಕೂ ಪರಿಣಾಮಕ್ಕೂ ಹೊಂದಿಕೊಂಡಿದೆ. ನಿಮ್ನಾಂಗದ ರೇಖೆ ಮಧ್ಯಸ್ಥಳದೊಡನೆ ವಿಲಯ ಹೊಂದುವುದು ಗಮನಕ್ಕೆ ಬರುವುದಿಲ್ಲ. ನದಿಯ ನಯವಾದ ಪೂರ್ಣ ಪ್ರವಾಹ ಏರಿಳಿತಗಳನ್ನು ಹತ್ತಿ ಧುಮುಕಿ ಹರಿಯುತ್ತಿದ್ದರೂ ಜಲಪೃಷ್ಠವನ್ನು ಮಾತ್ರ ನೋಡುವ ನಮಗೆ ಅದು ಹೇಗೆ ಅದೃಶ್ಯವಾಗಿರುವುದೋ ಹಾಗೆಯೇ ಇದೂ ಕಣ್ಣಿಗೆ ತೋರು-ತ್ತಿದ್ದರೂ ಚಿತ್ರಕ್ಕೆ ವೇದ್ಯವಾಗದೆ ಸಮಸ್ಯೆ ಅತಿ ಜಟಿಲ-ವಾಗಿದೆ. ವಸ್ತ್ರಾಪರಣದಲ್ಲಿ ಅಡಗಿದ್ದ ಅವಳ ಕಟಿಪ್ರದೇಶ ವಾದರೂ ಅವನ ಕಲಾದೃಷ್ಟಿಗೆ ತೋರಿಸಿಕೊಳ್ಳದೆ ಹೋಗಲಿಲ್ಲ. ಶಶಿಕಾಂತನು ಸ್ವತಃ ಚಿತ್ರಕಾರ. ಆದರೆ ಅಂದಿನವರೆಗೆ ಅವನು ಅಂಥ ಸೂಕ್ಷ್ಮವೂ ಸರಸವೂ ಆದ ಕಿರಿದಾದರೂ ಅಭಾವವೆನಿಸಲಾರದ ನಡುವನ್ನು ಚಿತ್ರಿಸಿಯೂ ಇರಲಿಲ್ಲ. ನೋಡಿಯೂ ಇರಲಿಲ್ಲ. ನೋಡಿ ಮುಗ್ಧನಾದ ನಡುವಿನ ಗೆರೆಗಳು ದೀರ್ಘವಾಗುತ್ತಾ ವಿಸ್ತಾರಗೊಳ್ಳುತ್ತಾ ಪೆಂಪಿನಿಂದ ತೀವಿ ಸೊಂಪಾದ ಸುರತುಲ್ಯ ಉರೋಭಾಗದಲ್ಲಿ, ಲಲಿತವಾಗಿ ಕಲೆತುಹೋಗುವುದನ್ನು ನೋಡಿಯಂತೂ ದಿಙ್ಮೂಢನಾದ. ತನ್ನ ಕಲಾಕೌಶಲ್ಯವೆಲ್ಲವೂ ಈ ಅಪಾರ್ಥಿವ ಚಾತುರ್ಯದ ಮುಂದೆ ಹುಲ್ಲುಕಡ್ಡಿಯೆಂದು ಮನಗಂಡು ನಾಚಿ, ಆ ಅಲೌಕಿಕ ಕೈವಾಡವನ್ನು ಆದರದಿಂದ ಸ್ಮರಿಸಿದನು.

ಇಷ್ಟೆಲ್ಲವನ್ನೂ ಕ್ಷಣಾರ್ಧದಲ್ಲಿ ಅವಲೋಕಿಸಿಬಿಟ್ಟ. ಅಷ್ಟರಲ್ಲಿ ಶಿಷ್ಟಾಚಾರ ಅಡ್ಡ ಬರಲು, ತನ್ನ ನೋಡುವಿಕೆಯನ್ನು ಅವಳು ಅಪಾರ್ಥವಾಗಿ ತಿಳಿದರೆ.... ಎಂದು ಅಳುಕಿದ. ಮುಖ ನೋಡಿ ಮನೋಭಾವವನ್ನಾದರೂ ತಿಳಿಯೋಣ-ವೆಂದರೆ, ಏನೋ ಎಂತೋ, ಅವಳು ಏನು ಗ್ರಹಿಸುವಳೊ ಎಂಬ ಭೀತಿ. ಸಂಕೋಚ ಸ್ವಲ್ಪಮಾತ್ರವೂ ಇರಲಿಲ್ಲ ಅವನಲ್ಲಿ. ಪ್ರಥಮ ದೃಷ್ಟಿದರ್ಶನದಿಂದಲೆ ಏನೋ ಪರಿಚಿತ ಭಾವನೆ. ಆದರೆ ಆದರ ಗೂಢ ಎಷ್ಟು ಅಳೆದು ಸುರಿದರೂ ಅವನಿಗೆ ಬೇರೆ ತೋರಲಿಲ್ಲ. ಇದೆಂಥ ಶುಭದೃಷ್ಟಿಯೋ ?....

ಶಿಷ್ಟಾಚಾರ ಕಾಪಾಡುವುದಕ್ಕೆ, ನಿಂತ ಕಡೆಯಿಂದಲೇ ಸಮುದ್ರದ ಕಡೆ ನೋಡಿದ. ಅನತಿದೂರದಲ್ಲಿ ಇಬ್ಬರು ಪಠಾಣರು ನಿಂತು ಗುಜುಗುಜು ಮಾತಾಡಿಕೊಳ್ಳುತ್ತಿದ್ದರು. ಆಗಾಗ ಕಳ್ಳನೋಟದಿಂದ ಅರ್ಥಪೂರ್ಣವಾಗಿ ತಮ್ಮಕಡೆ ದೃಷ್ಟಿವಿಕ್ಷೇಪಗೈಯುವಂತೆ ಅವನಿಗೆ ತೋರಿತು. ಆದರೆ ಆಕ್ಷಣದಲ್ಲಿ ಅದು ಅವನಿಗೆ ಅಷ್ಟು ಗಮನಾರ್ಹವಾಗಿ ಕಾಣಲಿಲ್ಲ.

ಒಂದು ಮನಸ್ಸು, ಕಣ್ಣೆತ್ತಿ ಮುಖ ನೋಡಿ ಮಾತಿನ ಪ್ರಸ್ತಾವನೆಗೆ ಪ್ರಾರಂಭಿಸೋಣವೇ ಎಂದು; ಅಷ್ಟು ದಿಟ್ಟ-ತನ ಮಾಡಿದರೆ ಅವಳೇನು ತಿಳಿದುಕೊಳ್ಳುವಳೋ, ತನಗೇಕೆ ಮುಂದಾಳುತನ, ಎಂದು ಮತ್ತೊಂದು ಮನಸ್ಸು. ಮನಸ್ಸಿನಲ್ಲಿಯೇ ತುಮುಲಯುದ್ಧವು ಮಸಗಿ ಮೊದಲ ಪಕ್ಷವೇ ಕೊನೆಗೆ ಜಯಿಸಿತು. ಒಂದೇ ಸಲ ಮನಸ್ಸು ಗಟ್ಟಿಮಾಡಿ

CC-0. Jangamwadi Math Collection. Digitized by eGangotri

ಮುಖಾವಲೋಕನ ಗೈಯೋಣವೆಂದು ಸರ್ರನೆ ಮುಖ ತಿರುಗಿಸಿ ನೋಡಿದ. ಅದೇ ಹೊತ್ತಿಗೆ ಸರಿಯಾಗಿ ಅವಳೂ ಶಶಿಕಾಂತನ ಮುಖದ ಮೇಲೆ ನೋಟಬೀರಿದ್ದಳು. ಇಬ್ಬರ ದೃಷ್ಟಿಯೂ ಮಿಲನಹೊಂದಿತು. ತಟ್ಟನೆ ವಿದ್ಯುಚ್ಛಕ್ತಿಯ ಪ್ರವಾಹ ಹರಿದಂತೆ ಶಶಿಕಾಂತನ ದೇಹಾದ್ಯಂತ್ಯವೆಲ್ಲಾ ಝುಮ್ಮೆಂದು ರೋಮಾಂಚಿತವಾಯಿತು. ಆದರೂ ಆ ಅನಿವಾರ್ಯ ಅನುಭವವನ್ನು ಅದುಮಿಹಿಡಿದು ಮರಳಿಯೂ ಈಕ್ಷಿಸಿದ........ಅವಳ ಹುಬ್ಬಿನ ಗೆರೆಗಳು ತಮ್ಮ ಅನುನಿತ್ಯದ ಡೊಂಕಿನ ಮೇರೆ ಮೀರಿ ಸಂಕುಚಿತಗೊಂಡು ಸಂಕೀರ್ಣವಾಗಿ ನಸುಗೋಪ ಪ್ರಕಟಿಸುತ್ತಿದ್ದುವು. ಬಿಂಬಾಧರಗಳು ತುಸುಮಾತ್ರ ಮುಂದಕ್ಕೆ ಚಾಚಿ, ಒಂದರಮೇಲೊಂದು ದೃಢವಾಗಿ ಊರಿಕೊಂಡು ಹೃದಯದಲ್ಲಿ ಮೂಡಿದುದನ್ನು ಸಂಯಮಶಾಲಿಯಾದ ಮನಸ್ಸು ಖಂಡಿಸುತ್ತಿರುವುದು ತೋರ್ಪಡುತ್ತಿತ್ತು. ಆ ಸಾಹಸದಿಂದಲೂ ಹೆಚ್ಚಾಗಿ ಲಜ್ಜೆಯಿಂದಲೂ ಕದಪುಗಳಲ್ಲಿ ಕೆನ್ನೀರು ಕಂಗೊಳಿಸಿತ್ತು.

ಅವಳ ಮುಖ ನೋಡಿದಾಗ ಶಶಿಕಾಂತನ ಮನೋಭಾವ ವೈಪರೀತ್ಯಗೊಂಡಿದ್ದರೂ ಆ ಬಿಕ್ಕಟ್ಟಿನಲ್ಲಿ ಸಹ ಅವನ ಕಲಾದೃಷ್ಟಿ ಮಂದವಾಗಿರಲಿಲ್ಲ. ಅವಳ ವಿಪುಲವಾದ ಭ್ರಮರನಿಂದಕ ಕೇಶರಾಶಿಯನ್ನು ಕಂಡು, ರವಿವರ್ಮನ ಊಯ್ಯಾಲೆಯ ಮೇಲಿನ 'ಮೋಹಿನಿ' ಯನ್ನು ಅವಲೋಕಿಸಿದಾಗ ಇಂಥ ಕುಂತಲ-ನಿವಹವೂ ಇರಬಹುದೇ ಎಂದು ಪಟ್ಟ ಸಂಶಯ ತೊಡೆದುಹೋಯಿತು. ಮೊದಲ ಸಂಶಯದ ಜಾಗದಲ್ಲಿ ಹೊಸತೊಂದು ಶಂಕೆ ಆವರಿಸಿತು; ಕಾಳಿದಾಸನ ' ಶಕುಂತಲೆ 'ಯಾದರೂ ಹೀಗೆ ಸುನೀಲ-ಸುಕೇಶಮಂಡಿತಳಾಗಿದ್ದಿರಬಹುದೇ ಎಂದುಕೊಂಡು, ದೊಡ್ಡ ತುತ್ತನ್ನು ಚಿಕ್ಕಬಾಯಿಂದ ನುಂಗಲು ಯತ್ನಿಸಿದ. ಶುಭ್ರವಾದ ಹಣೆಯ ಮೇಲೆ ಒಲೆದಾಡುತ್ತಿದ್ದ ಮುಂಗುರುಳುಗಳ ವೈಖರಿ ಬಹು ಮೋಹಕವಾಗಿತ್ತು. ಭ್ರೂಯುಗ್ಮಗಳಂತೂ ಬಣ್ಣಗೊಟ್ಟು ನೀಳವಾಗಿ ತಿದ್ದಿ ರೂಪಿಸಿದಂತಿದ್ದುವು. ಎಸಳಾದ ವಿಸ್ಫಾರಿತ ನಯನಗಳಿಗೆ ಸಾಮ್ಯವೇ ಇರಲಿಲ್ಲ. ಕೋಮಲವಾದ ಸ್ಫಟಿಕಸಮಾನ ರೆಪ್ಪೆಗಳು ರಮ್ಯವಾದ ರಯತೆಯಿಂದ ಮುಚ್ಚಿ ತೆರೆಯುತ್ತಿದ್ದವು. ರೆಪ್ಪೆಗಳ ತುದಿಗೂದಲುಗಳು ಕಾಡಿಗೆಯಂತೆ ಬಹು ಕಪ್ಪು; ರೇಷ್ಮೆಯಂತೆ ಅತಿಮೃದು. ಏನನ್ನೋ ಕರೆಯುವಂತೆ ನಯವಾಗಿ ಆಶಾಮಯವಾಗಿತ್ತು ಅವುಗಳ ಎದ್ದುಬೀಳುವಿಕೆ. ಕಣ್ಣಾಲಿ ಕಮಲಪುಷ್ಪದಲ್ಲಿ ಸಿಕ್ಕಿಬಿದ್ದ ತುಂಬಿಯಂತೆ ಹೊರಳುತ್ತ, ಹರಿಣಿಯ ಚಪಲ ನೋಟವನ್ನೇಳಿಸಿ, ಮನಸ್ಸು ಸೂರೆ ಒಯ್ಯುತ್ತಿತ್ತು.

ಶಶಿಕಾಂತನ ಶುಭದೃಷ್ಟಿ ಹಾಗೆಯೆ ಹಾರಿ, ಎಳಸಾದ ನಾಸಿಕದಿಂದ ಮುಖದ ಕೆಳಭಾಗವನ್ನೆಲ್ಲಾ ಒಂದು ಸರ್ತಿ ಸಿಂಹಾವಲೋಕನ ಮಾಡಿತು. ನೋಡಿದ ಕೂಡಲೆ ಬೆರಗು ಪಡೆದು ಬೆಪ್ಪಾದ. 'ಅದು ಹೇಗೆ? ಕಾರಣವೇನು?' ಎಂಬುದೇ ಸೂಚಿಸಲಿಲ್ಲ. ಅವಳ ಮೂಗು, ಬಾಯಿಗಳು Raphael's "Madonna" ರಮಣಿಯ ನಾಸಿಕಾಧರಗಳಂತೆ ಚಾಚು ತಪ್ಪಿಲ್ಲದೆ ಊನತೆಯಿಲ್ಲದೆ ಇದ್ದು, ಅದೇ ಇದು ಎನ್ನುವಷ್ಟು ಭ್ರಮೆ ಹುಟ್ಟಿಸುತ್ತಿದ್ದುವು. ಶಶಿಕಾಂತನ ವಿಮರ್ಶೆ ಕುಂಠಿತವಾಯಿತು. ಆ ಚಿತ್ರಕ್ಕೂ, ಈ ಸಜೀವ ಕೃತಿಗೂ ಸಂಬಂಧವೇನು ? ಅಥವಾ ತನ್ನ ದೃಷ್ಟಿದೋಷವೇ ಎಂದು ಹಲವು ತರದಿಂದ ತರ್ಕಿಸಿದ. ನಿಷ್ಫಲ! ಅವಳ ವದನದಷ್ಟು ಭಾಗ ಮೆಡೊನ್ನಾದ ತದ್ರೂಪ! ಏಕೋ ಅವನ ಹೃದಯ ತೋಷ-ಸಂತೃಪ್ತಿಮಯವಾಯಿತು.

ಮಾತಿಗೆ ಹೇಗೆ ಪ್ರಾರಂಭವಾಯಿತೋ ಅವನಿಗೇ ತಿಳಿಯಲಿಲ್ಲ;—"ನೀವ್ಗೂss........ನಿತ್ಯ ಸಂಜೆಹೊತ್ತು ಈ ಕಡೆ ಬರೋ ಹಾಗಿದೆ. ಇಲ್ಲಿ ನಿಂತು ನೋಡಿದರೆ, ಕಾಣುವ ದೃಶ್ಯ ಬಹು ಚೆನ್ನಾಗಿದೆ. ನಾನೂ........"

ತನ್ನ ಮಾತೇಕೊ ಅಸಂಬದ್ಧವಾಗಿರುವ ಹಾಗೆ ತೋರಿತು ಅವನಿಗೆ. ಏನು ಉತ್ತರ ಕೊಡುತ್ತಾಳೊ ನೋಡೋಣವೆಂದು ಅಲ್ಲಿಗೆ ನಿಲ್ಲಿಸಿದ. ಅವಳು ನೀರವ. ಏಕೆಂದರೆ ತಲೆಯೆತ್ತಿ ಮುಖ ನೋಡಿದರೆ, ಬೆದರಿದವಳಂತೆ ಅವಳ ಮುಖಭಾವ. ಕಣ್ಣುಗಳು ದೊಡ್ಡವಾಗಿ ತೆರೆದುಕೊಂಡು ಒಂದು ಕಡೆ ಸ್ಥಿರವಾಗಿರದೆ ನಾಲ್ಕು ಕಡೆಗೂ ಚರಿಸುತ್ತಾ, ಕೊನೆಗೆ ಮೈಯ ಆದ್ಯಂತ ಕಂಪನದೊಡನೆ ಪಠಾಣರ ಕಡೆಗೆ ನಿಟ್ಟಿಸುತ್ತಿವೆ. ಈಗ ವಿಲಗ್ನವಾಗಿರುವ ಹವಳ-ದುಟಿಗಳು ಪಲ್ಲವದಂತೆ ತರತರ ನಡುಗುತ್ತಿವೆ. ವಕ್ಷಃಸ್ಥಳ ತಿದಿಯೊತ್ತುವಂತೆ ಮೇಲೆ ಕೆಳಗೆ ಏರಿಮುರಿಯುತ್ತಿದೆ. ಇಷ್ಟು ಹೊತ್ತು ಅವಸ್ಥಾವಿಶೇಷಗಳನ್ನು ದಾಟಬರುತ್ತಿದ್ದ ಅವನಿಗೆ ಅದು ಕಂಡಿರಲಿಲ್ಲ. ಆಗಷ್ಟೆ ನಿಚ್ಚಳವಾದ ಅವನ ದೃಷ್ಟಿ ಅದನ್ನೆಲ್ಲಾ ಗ್ರಹಿಸಿತು. ಅವಳ ಅರ್ಥವತ್ತಾದ ಕಣ್ಣಾಟದ ಗುಟ್ಟೂ ಸುಲಭವಾಗಿ ತಿಳಿಯಿತು. ಈಕೆ ಯಾವುದೊ ಸಂಕಟದಲ್ಲಿ ಸಿಲುಕಿ ಇಲ್ಲಿಗೆ ಬಂದಿದ್ದಾಳೆ; ಅವಳಿಗೊದಗಿರುವ ಆಪತ್ತಿಗೂ ಅಲ್ಲಿ ಸುಳಿದಾಡುತ್ತಿರುವ ಪಠಾಣರಿಗೂ ಏನೋ ಸಂಬಂಧ-ಸೂತ್ರವಿರಬೇಕು ಎಂಬುದಾಗಿ ಊಹಿಸಿ ತಿಳಿದುಕೊಂಡ. ಅಷ್ಟು ಹೊತ್ತಿಗೆ ಅವನ ಮನಶ್ಚಾಂಚಲ ನಶಿಸಿಹೋಗಿತ್ತು.

CC-0. Jangamwadi Math Collection. Digitized by eGangotri

'ಸಂಕೋಚ ಬೇಡ. ನಿಮ್ಮ ಬಂಧುವೆಂತಲೇ ನನ್ನ ತಿಳೀರಿ. ನನ್ನ ಮಟ್ಟಿಗೆ ಯಾವ ಹೆದರಿಕೆಯೂ ಅವಶ್ಯವಿಲ್ಲ. ಸನ್ನಿವೇಶ ನೋಡಿದರೆ, ನೀವು ಕಷ್ಟದಲ್ಲಿರೋ ಹಾಗಿದೆ, ಹೇಳೋ ಹಾಗಿದ್ದರೆ ಹೇಳಬಹುದು. ಪರಿಹಾರ ಮಾಡೋ ಹಾಗಿದ್ದರೆ ನೋಡುತ್ತೇನೆ. ನೋಡಿ, ವೃಥಾ ಅನುಮಾನ ಪಟ್ಟುಕೊಳ್ಳಬಾರದು.'

ಅವನು ಕೊಂಚವೂ ಅಳುಕದೆ, ಸುಲಲಿತವಾಗಿ ಗುರುತು ಕಂಡವರೊಡನೆ ಮಾತಾಡುವಂತೆ ಜಳಜಳ ಹೇಳಿಬಿಟ್ಟ. ಅಂಥಾ ಧಾಟಿ ತಾನಾಗಿ ಹೃದಯದಲ್ಲಿ ನುಡಿದುಕೊಂಡು ಹೊರಗೆ ಮಾರ್ದನಿಯಾಗಿತ್ತು. ಕೊನೆಯ ವಾಕ್ಯದಲ್ಲಂತೂ ಆತ್ಮೀಯತೆ ಚೆನ್ನಾಗಿಯೂ ತೋರುತ್ತಿತ್ತು. ರಮಣಿಯ ಅಸ್ವಸ್ಥತೆ ಅವನ ಮೃದುನುಡಿಗಳಿಂದ ಶಾಂತವಾಗುತ್ತಾ ಬಂತು. ಅವನ ಮಾತಿನಲ್ಲಿ ಒಳತಿರುಳಾಗಿ ಹರಿಯುತ್ತಿದ್ದ ಸಹಾನುಭೂತಿಗೆ ಅವಳ ಅಂತಃಕರಣ ಎಡೆಗೊಟ್ಟಿತು. ಸಹಾನುಭೂತಿಗಿಂತ ಹೆಚ್ಚಾದ ಆತ್ಮೀಯತೆ ಅವಳ ಆತ್ಮವನ್ನು ತಟ್ಟಿ ಕುದುರಿಸಿದರೂ ಅನುಭವ ಬಂದಿತೇ ವಿನಹ ಅದು ಇಂಥದೆಂದು ತಿಳಿಯಲಿಲ್ಲ.

ಅಲ್ಲಿಗೆ ಅವಳ ಭಯ ಸುಮಾರು ಕಡಿಮೆಯಾಗಿತ್ತು. ಸಭ್ಯರ ಸಹಾನುಭೂತಿಯ ವೃಷ್ಟಿಯೂ ಆಯಿತು. ಇನ್ನು ಚಿಂತೆಗೆ ಕಾರಣವಿಲ್ಲ. ಎಂದುಕೊಂಡು ಧೈರ್ಯವಾದಳು. ಒಂದಷ್ಟು ಹೊತ್ತು ಸುಧಾರಿಸಿ ಉಗುಳುನುಂಗಿ, "ತಮ್ಮ ವಿಷಯವಾಗಿ ಅನುಮಾನವೇ?.... ಎಲ್ಲೀ ಮಾತು! ತಾವು ಅಂದ ಹಾಗೆ ನನಗೆ ಅಷ್ಟೇನು ಮಹಾಕಷ್ಟ ಒದಗಿ ಬಂದಿರಲಿಲ್ಲ. ಕೊಂಚ ಭಯವಾಯ್ತಷ್ಟೆ—" ಎಂದು ಹೇಳಿ ನಿಲ್ಲಿಸಿ ಮಧುರವಾಗಿ ಸಣ್ಣ ನಗೆ ನಕ್ಕಳು. ಹುಸಿ ಹೆಮ್ಮೆಯಿಂದ, ತಾನು ಅಂಜುಬುರುಕಿಯಲ್ಲ, ಧೈರ್ಯವಾಗಿಯೆ ಇದ್ದೇನೆ ಎಂಬ ಭಾವ ತೋರಿಸುತ್ತಿತ್ತು ಆ ನಗೆ. "ಹಾಗೆ ಹೇಳೋದಕ್ಕೆ ಹೋದರೆ ಅದೊಂದು ಚಿಕ್ಕ ರಾಮಾಯಣ. ಕೇಳೋ ಅಷ್ಟು ತಾಳ್ಮೆ ತಮಗಿರಲಾರದು.... ತಮ್ಮ ಕೆಲಸಕ್ಕೆ ವ್ಯತ್ಯಯ...." ಎಂದು ಅರ್ಧಕ್ಕೆ ವಿರಮಿಸಿ ಅವನ ಅಪೂರ್ಣ ಚಿತ್ರದ ಕಡೆ ಕಣ್ಣಿನಿಂದ ಸೂಚಿಸಿದಳು.

"ಅದೇ—ಅದೇನು ಪರವಿಲ್ಲ. ತಾಳ್ಮೆ-ಗೀಳ್ಮೆ ಬೇಕಾದಷ್ಟಿದೆ. ಆ ಚಿತ್ರ ನಾಳಿದ್ದು ಮುಗಿಸಿದರೆ ಕೊಳ್ಳೆಹೋಗೋದು ಅಷ್ಟೇ ಇದೆ. ಎಷ್ಟೊ ಸಮಯವಾಯ್ತು ನಿಂತುಕೊಂಡೇ. ನೀವು ಹಾಗೆ ಕುಳಿತುಕೊಳ್ಳಿ. ನಾನು ಈ ಕಡೆ........" ಎಂದುಸುರಿ ಕಟ್ಟನಿಂದ ಆರಿದ ವೇಶ್ಮವನ್ನು ಸುತ್ತಿ ಒಳಗಿಟ್ಟು ಉಳಿದ ಸಾಮಾನುಗಳನ್ನೆಲ್ಲಾ ಪೆಟ್ಟಿಗೆಯಲ್ಲಿ ಬಂದಹಾಗೆ ತುಂಬಿಸಿ ಅಲ್ಲಿಯೆ ಕೂತುಕೊಂಡ. ಅವಳು ಅವನಿಂದ ಮರ್ಯಾದೆಗೆ ಬಾಧಕ ಬಾರದಷ್ಟು ಅಂತರದಲ್ಲಿ ಕೂತುಕೊಂಡಳು. ಆ ಅತಿನಿಯಮಿತ ಹೊತ್ತಿನೊಳಗೆಯೇ ಬಹುಚಮತ್ಕಾರವಾಗಿ ಇಬ್ಬರಿಗೂ ಪರಿಚಯ ಕೂಡಿಬಂದು ಪರತ್ವ ಅಳಿದುಹೋಗಿ ನಿಕಟತಮ ಬಾಂಧವ್ಯ ಕೊನರಿ ಬಿಟ್ಟಿತ್ತು. ಇಂಥ ಅಪೂರ್ವ ಯೋಗಾಯೋಗ ಕೆಲವರ ಜೀವಮಾನದಲ್ಲಿ ಮಾತ್ರ ಸಂಭಾವ್ಯ. ಈ ರೀತಿಯ ಯೋಗಾಯೋಗದಿಂದ ಸಂಬಂಧಪಟ್ಟವರ ಜೀವನದ ಓಘವೇ ಪರಿವರ್ತಿತವಾಗಬಹುದು. ಈ ಪರಿವರ್ತನೆ, ಸ್ವರ್ಗಸುಖಕ್ಕಾಗಲೀ, ದುರ್ನಿವಾರ್ಯ ದುಃಖಕ್ಕಾಗಲೀ, ಕಾರಣವಾಗಿಯೇ ತೀರುತ್ತದೆ.

ಚೋದ್ಯವಾಗಿ ನಗುತ್ತಾ ಶಶಿಕಾಂತನು, "ಎಲ್ಲಿ, ನಿಮ್ಮ ಚಿಕ್ಕರಾಮಾಯಣದ ಪುಟ್ಟ ಪ್ರಸ್ತಾವನೆ ಪ್ರಾರಂಭವಾಗಲಿ" ಎಂದು ಹೇಳಿದ.

ಅವನ ಭಾವವನ್ನರಿತು ಅವಳೂ, ಹಿಮ್ಮೆಟ್ಟದೆ "ವಾಲ್ಮೀಕಿ ಅಂಥಾ ದೊಡ್ಡ ರಾಮಾಯಣ ಬರೆದ. ಆದರೂ ಅವನು ಅದಕ್ಕೆ ಪ್ರಸ್ತಾವನೆ ಬರೆದಹಾಗಿಲ್ಲ. ಮೊದಲೇ ಹೇಳಿಬಿಟ್ಟಿದ್ದೇನೆ, ನನ್ನದು ಚಿಕ್ಕ ರಾಮಾಯಣ ಎಂತ. ಆದಕ್ಕೆ ಎಷ್ಟು ಚಿಕ್ಕ ಪ್ರಸ್ತಾವನೆ ಬೇಕೊ ನೀವೆ ಯೋಚಿಸಿ—ತಾವೇ ಯೋಚಿಸಿ" ಎಂದು ನಾಲಿಗೆ ಕಚ್ಚಿದಳು. ತಾನು ಜಾರಿಬಿದ್ದುದು ಅವನಿಗೆ ತಿಳಿದಿರಲಾರದೆಂದು, ಅಷ್ಟು ಹೊತ್ತು ಸಮುದ್ರದ ಅಲೆಗಳ ಕಡೆ ನೋಡುತ್ತಿದ್ದವಳು ಅವನ ಮುಖದೆಡೆ ಕಣ್ಣು ತಿರುಗಿಸಿದಳು. ಶಶಿಕಾಂತನು ಅವಳನ್ನೇ ನಿರೀಕ್ಷಿಸುತ್ತಿದ್ದ. ಮೊದಲೇ ಅವನ ಕಣ್ಣುಗಳು ಹಾಸಪೂರ್ಣವಾಗಿರುತ್ತವೆ. ಈಗಂತೂ ಕುಚೋದ್ಯದ ಕೋಲ್ಮಿಂಚು ಅದರಲ್ಲಿ ಕಲೆತಿದೆ. ತುಟಿಗಳಲ್ಲಿ ತುಂಟನಗೆ ಸುಳಿದಾಡುತ್ತಿದೆ. ತರುಣಿ ಆ ನೂತನ ಬಗೆಯನ್ನು ಕಂಡು ಮಾರುಹೋದಳು. ಸ್ಪರ್ಶಮಣಿಯಂತಿದ್ದ ಅವನ ನಗು ಅವಳ ಮುಖದ ಮೇಲೂ ತೋರಿತು. ಆಕ್ಷಣ ಸುಗಂಧರಾಜನ ಹೂವು ಚೆಲ್ಲಿದಂತಾಯಿತು.

ಶಶಿಕಾಂತನು ತನ್ನ ಮಾತಿಗೆ ಸಂಭಾವನೆ ಪಡೆದು "ವಾಲ್ಮೀಕಿ ಪ್ರಸ್ತಾವನೆ ಬರೆದಿದ್ದನೋ ಇಲ್ಲವೋ ಆ ಗೋಜು ನಮಗೆ ಬೇಡ. ಪ್ರಸ್ತಾವನೆ ಬೇಕಿಲ್ಲ. ನಿಮ್ಮ ರಾಮಾಯಣವನ್ನಾದರೂ ಹೇಳಬಹುದಷ್ಟೆ." ಎಂದು ಸ್ವಲ್ಪ ಅಂಗಲಾಚುವ ಸ್ವರದಲ್ಲಿ ಹೇಳಿದ.

CC-0. Jangamwadi Math Collection. Digitized by eGangotri

ಆಗಷ್ಟೆ ಹೊರಸೂಸಿದ್ದ ಅವಳ ಮೊಗದ ನಗೆಮಲ್ಲಿಗೆ ಮಿಂಚಿನಂತೆ ಎಲ್ಲಿಂದ ಎಲ್ಲಿಗೊ ಮಾಯವಾಗಿ ಹೋಗಿತ್ತು. ಅದರ ಬದಲು ಅಸಮಾಧಾನ, ಅಸಂತೋಷ, ಅಪವಿತ್ರತೆಯ ಭಾವನೆ ಎಲ್ಲ ಸೇರಿ ಕಲಸುಮೇಲೋಗರವಾಗಿ, ಒಂದು ವಿಚಿತ್ರ ವಿನ್ಯಾಸವನ್ನು ತಾಳಿತ್ತು ಮುಖ. ಭ್ರುಕುಟಿ ಗಂಟಿಕ್ಕಿಕೊಂಡಿತ್ತು. ತುಟಿಗಳೆರಡೂ ಚಾಚಿಕೊಂಡು ಸ್ವಯಂಕೋಪದಿಂದ ದೃಢವಾಗಿ ಮುಚ್ಚಿಕೊಂಡಿದ್ದುವು. ನಾಸಿಕಪಲ್ಲವಗಳು ಅಧೀರತೆಯಿಂದ ಅಲ್ಲಾಡುತ್ತಿದ್ದವು.

'ನಾನೇಕೆ ಇವರೊಡನೆ ಇಷ್ಟು ಸಲಿಗೆಯಿಂದ ಮಾತನಾಡುತ್ತಿದ್ದೇನೆ? ಹಿಂದಿನ ಪರಿಚಯವೇ? ಅಲ್ಲ. ಸಂಬಂಧಿಕರೇ? ಆ ಮೊದಲೇ ಅಲ್ಲ. ಹಾಗಾದರೆ ಇಷ್ಟು ಲಾಘವವಾಗಿ ವರ್ತಿಸಲು ಕಾರಣ? ಇವರು ನನ್ನ ವಿಷಯವಾಗಿ ಪಟ್ಟ ಸಹಾನುಭೂತಿಯೆ? ಸಹಾನುಭೂತಿಗೆ ಅಷ್ಟು ಶಕ್ತಿ ಎಲ್ಲಿ? ಮತ್ತೇನು ?.... ಏನು....ಏನಿರಬಹುದು? ಇವರ ಕಣ್ಣಿನ ತೇಜ-ನೋಡಿ ನನ್ನ ಅಂತರ್ಯವೆಲ್ಲಾ ಕಲಕಿ ಹೋದುದೇಕೆ? ಅಂತರ್ಯವೆಂದರೆ ಆತ್ಮವೆ?....ಇದರಲ್ಲಿ ಆತ್ಮದ ಸಂಬಂಧವೇನು? ಏನು.... ಏನು?....ಆಂ! .... ಆತ್ಮೀಯತೆ!....ಏಕೆ....ಏಕೆ? .... ಇವರು ಯಾರು ನನಗೆ .... ಊಂ—ನನಗೆ ಗಂಡನಿದ್ದಾನೆ. ಇದ್ದಾನೆ. ನನಗೆ ಬೇರೆ ಯಾರೂ ಏನೂ ಆಗಬೇಕಿಲ್ಲ.'

ಅವಳಲ್ಲಿ ಒಳಗೊಳಗೆ ಹೊಗೆಯಾಡುತ್ತಿದ್ದ ವಹ್ನಿಯಿದು. ಅದರ ಜ್ವಾಲೆ ಹೆಚ್ಚಿದಂತೂ ಅವಳ ವಿಮರ್ಶಕತೆ ಕಾದು ಕೆಂಪಗಾಯಿತು. ರೇಗಿಕೊಂಡಳು. ಯಾರ ಮೇಲೆ? ತನ್ನ ಮೇಲೆಯೆ. ತಪ್ಪು ತನ್ನದೆ. ಮನಸ್ಸಿನ ಸ್ಥಿರತ್ವ ಶಿಥಿಲವಾದುದು ಅವಳಿಂದಲೆ. ಅಭಿಮಾನ ನಡುವೆ ಇದೆ ತಾನೆ. ಹಾಗೆ ಒಪ್ಪಿಗೆ ಕೊಡಲು ಆ ಅಭಿಮಾನ ಬಿಡಬೇಕಲ್ಲ. ಅವರೇಕೆ ತನ್ನ ಕಡೆ ಹಾಗೆ ನೋಡಬೇಕು? ನೋಡುವ ದೃಷ್ಟಿಯಲ್ಲಿ ಅಂಥಾ ಕ್ರಾಂತಿಕಾರಕ ಕಣೆಗಳನ್ನು ಹೂಡಿ ತನ್ನನ್ನೇಕೆ ಕೆಣಕಬೇಕು? ಅವರ ಆ ನಗು! ಅದೆಂಥ ಅಂಟು ಜಾಡ್ಯದ ನಗು. ಶಶಿಕಾಂತನ ಸರ್ವವನ್ನೂ ದೂಷಿತ ದೃಷ್ಟಿಯಿಂದ ನೋಡಿ ಶಿಷ್ಟವಾದುದನ್ನು ವಿಕೃತಿಗೊಳಿಸಲು ಪ್ರಯತ್ನಪಟ್ಟಳು. ಸಾಧ್ಯವಾಗಲಿಲ್ಲ. ಕೈಲಾಗದವಳಂತೆ ಮುನಿದು ನಾಗಿಣಿಯಂತಾದಳು. ದ್ವೇಷ ಕಾರುವ ದೃಷ್ಟಿಯಿಂದ ಶಶಿಕಾಂತನ ಕಡೆ ದುರುದುರು ದುರುಗುಟ್ಟುತ್ತಿದ್ದಳು.

ಶಶಿಕಾಂತನು ಅವಳ ರೀತಿ ನೋಡಿ, — ಹೇಳಲು ಇನ್ನೂ ಸಂಕೋಚವೇನೊ—ತನ್ನ ಊಹೆ ತಪ್ಪಾಗಿರಲೂ ಬಹುದು — ಬುಡದಲ್ಲಿ ಇನ್ನೂ ಏನೇನಿರಬಹುದೋ — ಎಂದು ಬಗೆದು, ಮತ್ತೂ ಅಷ್ಟು ಹೊತ್ತು ಹೋಗಲಿ ಅನ್ನುತ್ತಾ, ತನ್ನ ಸ್ವಂತ 'ಚಿತ್ರಸಂಚಯ' ಗಾಳಿಗೆ ತೆರೆದು ಕೊಳ್ಳಲು ಅದರಲ್ಲಿದ್ದ ಒಂದು ಬಿಡಿ ಹಾಳೆ ಅಷ್ಟು ದೂರ ಹಾರಿ ಹೋಗಿದ್ದುದನ್ನು ತರಲು ಹೋಗಿದ್ದ.

ಅವಳಿಗೆ ಏನು ತೋರಿತೊ! ಅದೇ ಸಮಯವೆಂದುಕೊಂಡು ಎದ್ದು ಹೊರಟುಹೋಗುತ್ತಿದ್ದಳು. ಪವಿತ್ರತೆಯ ಉನ್ಮಾದದಲ್ಲಿ ಅವಳಿಗೆ ಒಬ್ಬರ ಆತಂಕವೂ ಎನಿಸಲಿಲ್ಲ. ಮನಸ್ಸು ಅವಳ ಸ್ವಾಧೀನದಲ್ಲಿ ಇದ್ದಿಲ್ಲವೆಂದರೆ ಹೆಚ್ಚು ಸಮಂಜಸ.

ಶಶಿಕಾಂತನು, ಚದುರಿದ್ದ ಪುಸ್ತಕ ಜೋಡಿಸಿಡುತ್ತಿದ್ದವನು, ಅವಳ ಅಕಲ್ಪಿತ ವರ್ತನೆ ನೋಡಿ ಅವಾಕ್ಕಾದ, ಮುಗ್ಧನಾದ. ಉಸಿರು ಅರ್ಧದಲ್ಲಿ ಸಿಕ್ಕಿಕೊಂಡು, ಒಳಗೂ ಇಲ್ಲ ಹೊರಗೂ ಇಲ್ಲ ಎನ್ನುವ ರೀತಿಯಾಯಿತು ಅವನದು. ಒಳ್ಳೆ ಕಷ್ಟಕ್ಕಿಟ್ಟುಕೊಂಡಿತಲ್ಲಾ ಎಂದು ಕುರುಕಿದ.

ಅವಳು ಐದಾರು ಹೆಜ್ಜೆ ಹೋಗಿರಲಾರಳು. ಅವನಿಗೇನು ಬಗೆಯಾಯಿತೊ? "ಏನು! .... ಏಕೆ? ಹೊರಟುಬಿಟ್ಟರಲ್ಲಾ.... ವಿಶೇಷವೇನು?" ಎಂದು ತಡೆತಡೆದು ತೊದಲಿದ.

ಅವನ ಕಂಠಸ್ವರ ಕಿವಿಗೆ ಬೀಳಲು ಏನೋ ಎಡವಿದವಳಂತೆ, ಏನೋ ನೆನೆದವಳಂತೆ ಕಾಲೆತ್ತಿದ ಹಾಗೆ ಸ್ತಬ್ಧಳಾದಳು.

ಅಂತರಂಗದಲ್ಲಿ ಎದ್ದು ಭೋರೆಂದು ಬೀಸುತ್ತಿದ್ದ ಬಿರುಗಾಳಿಯ ಹೊಯಿಲಿಗೆ ಸಿಕ್ಕಿ ತೂರಿ ಹೋಗುತ್ತಿದ್ದಳು ರಮಣಿ. ಆದರೆ, ಒಣಗಿಸುವ ಸಲುವಾಗಿ ಗಾಳಿಯಲ್ಲಿ ಹರವಿ ಹಿಡಿದುಕೊಂಡ ಬಟ್ಟೆಯಂತೆ ಅವಳ ಸ್ಥಿತಿಯಾಯಿತು. ಆ ಬಟ್ಟೆ ಗಾಳಿಯಲ್ಲಿ ಪಟಪಟ ತುಡಿದುಕೊಳ್ಳುತ್ತಿದ್ದರೂ ತುದಿಯ ಹಿಡಿತ ಸಡಿಲವಾಗದೆಹೋಗಲು ರೇಗಿ ಹೆಚ್ಚು ಹೆಚ್ಚು ಬಡಿದುಕೊಳ್ಳುವುದಿಲ್ಲವೆ? ಹಾಗೆಯೆ, ಒಂದು ಕಡೆಯಿಂದ ಅವಳನ್ನು ಯಾರೋ ಬಲವಾಗಿ ಹಿಡಿದುಕೊಂಡು ಬಿಟ್ಟಿದ್ದರು. ಹಿಡಿತ ಮಾತ್ರ ಅದೃಶ್ಯವಾಗಿತ್ತು. ಬಲೆಯಲ್ಲಿ ಬಿದ್ದ ಮೀನಿನಂತೆ ಚಡಪಡಿಸಿದರು. ಅವಳ ಮನಸ್ಸು ಹಾಗೊ ಹೀಗೊ ಎಂದು ಅನುಮಾನಿಸುತ್ತಾ, ಅಡ್ಡಗೋಡೆಯ ಸೊಡರಿನಂತಿತ್ತು.

ಬಹು ಪ್ರಯಾಸಪಟ್ಟಳು. ಆದರೆ ಆ ತುದಿಯ ಲೋಹಚುಂಬಕ ಹೆಚ್ಚು ಬಲವಾದುದರಿಂದ ಅವಳನ್ನು ಪೂರ್ಣವಾಗಿ ತನ್ನ ಕಡೆಗೆ ಎಳೆದುಕೊಂಡೇ ಬಿಟ್ಟಿತು. ತನಗೆ

CC-0. Jangamwadi Math Collection. Digitized by eGangotri

ತಿಳಿಯದೆ ಮೊದಲು ಕೂತಿದ್ದ ಜಾಗದಲ್ಲಿಯೇ ಬಂದು ಕುಳಿತುಬಿಟ್ಟಿದ್ದಳು. ಅವಳು ರೋಷದಿಂದ ಭುಸುಗುಟ್ಟು-ತ್ತಿದ್ದುದನ್ನು ನೋಡಿ ಶಶಿಕಾಂತನು ನೀರಿನಿಂದ ತೆಗೆದು ಮೇಲೆ ಹಾಕಿದ ಮೀನಿನಂತಾದ.

ಅವಳ ಮನಸ್ಸಿನ ಕ್ಷೋಭೆಗೆ ಕಾರಣವೇ ಬೇರೆ. ಈ ಮನುಷ್ಯ ತನ್ನನ್ನು ಈ ರೀತಿ ಆಕರ್ಷಣೆ ಮಾಡುತ್ತಾನೆ ಎಂದಲ್ಲ. ಅವನು ಆಕರ್ಷಣೆ ಮಾಡುವುದಕ್ಕಿಂತ ಹೆಚ್ಚಾಗಿ ತಾನೇ ಅವನ ಸ್ವರದ, ಮೋಹವೆರಚುವ ನಯನದ ಮನೋಹರ ಶಕ್ತಿಗೆ ಇಂಬಾಗುತ್ತಿದ್ದೇನಲ್ಲಾ ಎಂಬ ನಿಜ-ಸ್ಥಿತಿ ಅವಳಿಗೆ ಹೆಚ್ಚು ಕಿರುಕುಳ ಕೊಡುತ್ತಿತ್ತು.

ಶಶಿಕಾಂತನಿಗಂತೂ ಜಂಘಾಬಲವೇ ಹಾರಿಹೋಗಿತ್ತು. ಎದೆಯ ನಡುಕದೊಡನೆ, ಒಂದು ನವೀನವಾದ ನೋವು ಒಳಗೇ ನವೆಯಲಾರಭಿಂಸಿತ್ತು. ಅದರೊಡನೆಯೇ ಬಂದ ಒಂದು ಅನಿರ್ವಚನೀಯವಾದ ಭಾವನೆ ರೂಪುಗೊಳ್ಳ-ದಿರಲಿಲ್ಲ.

'ಅವಳ ಮನಃಕ್ಷೋಭೆಗೆಲ್ಲಾ ನಾನೇ ಅಲ್ಲವೆ ಕಾರಣ ? ಅವಳು ಬಂದಾಗಣಿಂದ ನೋಡುತ್ತೇನೆ. ಅವಳು ಬಹಳ ವೇದನೆ ಪಟ್ಟುಕೊಳ್ಳುತ್ತಿದ್ದಳು. ಆ ಮೇಲೆ ಅದು ಹೆಚ್ಚಾ-ಗುತಾಗುತ್ತಾ, ಹದ್ದುಮೀರಿ, ಅವಳ ನಿರ್ಗಮನದಲ್ಲಿಯೇ ಕೊನೆಯಾಗುವುದರಲ್ಲಿತ್ತು. ನಾನು ಊಹಿಸಿದ ಹಾಗೆ ಅವಳನ್ನು ಯಾರಾದರೂ ತರುಬಿಕೊಂಡು ಬಂದಿದ್ದರೆ ಅವಳು ಇಲ್ಲಿಂದ ಏಕಾಏಕಿ ಹೊರಟುಹೋಗುವ ಸಾಹಸ-ಪಡುತ್ತಿರಲಿಲ್ಲ. ತಿರುಗಾಡಿ ಹೋಗಲು ಬಂದಿದ್ದವಳಿಗೆ ನನ್ನನ್ನು ನೋಡಿ ನಿರಾಶೆಯಾಗಿರಬೇಕು. ಏಕಾಂತವಾಸದ ಸಂತೋಷ ಸವಿಯುವುದಕ್ಕೂ ಎಡೆಯಿಲ್ಲವಲ್ಲಾ ಈ ವಿಶಾಲ ಪ್ರಪಂಚದಲ್ಲಿ, ಎಂದು ಮುನಿದುಕೊಂಡಿರಬೇಕು. ಅಷ್ಟು ಹೊತ್ತು ಮಾತುಕತೆ ನಡೆಯುತ್ತಿದ್ದಾಗ ಕ್ಷಣ ಬಿಟ್ಟು ಕ್ಷಣ ಒಂದು ವಿಪರೀತಭಾವ ತೋರಿ ಮಾಯವಾಗುತಿ-ದ್ದಿತಲ್ಲಾ ಅದೇ ಮುನಿಸು. ಒಂದು ರೀತಿಯಿಂದ ನಾನು ಅವಳ ಸುಖಕ್ಕೆ ಅಡ್ಡಬಂದದ್ದೂ, ಆ ಮೇಲೆ ಏಕೋ ಏನೋ ಅವಳೊಡನೆ ಮೇರೆಮೀರಿ ಸಲಿಗೆಯಿಂದ ಮಾತ-ನಾಡಿದ್ದೂ, ಅವಳಲ್ಲಿ ತನ್ನ ವಿಷಯವಾಗಿ ದುರಾಗ್ರಹ ಹುಟ್ಟಿಸಿರಬೇಕು. ಒಂಟಿಯಾಗಿರುವ ಅವಳಮೇಲೆ ನಾನು ಒಂದುವೇಳೆ ವಿಪರೀತಪ್ರಸಂಗ ತಂದೊಡ್ಡುವೆನೊ ಏನೊ ಎಂಬ ಸಂಶಯ ತಟ್ಟನೆ ಹೊಳೆಯಲು ತಪ್ಪಿಸಿಕೊಳ್ಳುವ ಆಲೋಚನೆಯಿಂದ ಅವಳು ಹೊರಟು ನಿಂತಿದ್ದಿರಬೇಕು. ನಾನು 'ಏನು, ಹೊರಟಿರಲ್ಲಾ' ಎಂದು ಕೇಳಿದ್ದಕ್ಕೆ ಬಲಾತ್ಕಾರಮಾಡಿಯೇನೆಂದು ಹೆದರಿ ಉಪಾಯದಿಂದ ನುಸುಳಿ ಹೋಗೋಣವೆಂದು ಮರಳಿ ಬಂದಿರಬೇಕು.'

ಅವನ ವಿಚಾರಮಾಲೆ ಇಲ್ಲಿಗೆ ಅಂತ್ಯವಾಗಲು ಅದರ ಫಲಿತಾಂಶ ಅವನ ಕಣ್ಣೆದಿರು ವಿಕಟಾಕಾರವಾಗಿ ಹೆಣೆದು-ಕೊಂಡಿತು. ಅವನು ಅವಳನ್ನು ಎಷ್ಟು ಹತ್ತಿರದವಳೆಂದು ತಿಳಿದು ಮಾತಾಡುತ್ತಿದ್ದ ! ಅವಳೇ ಈಗ ಅವನಿಂದ ದೂರ ಜಾರಿ ಹೋಗುತ್ತಿದ್ದಾಳೆ.... ಅಯ್ಯೊ!.... ಜೇಳು ಕುಟಕಿ ದಂತಾಯ್ತು ಅವನಿಗೆ. ಇದು ಯಾವತರದ ನಂಟು? ಅವಳು ಅವನ ವಿಷಯವಾಗಿ ಕೆಟ್ಟ ಗ್ರಹಿಕೆ ಪಟ್ಟರೆ ಅವನಿಗಾದ ನಷ್ಟವೇನು ?

ಹೌದು, ಅವನು ಸಭ್ಯರೊಡನೆ ಇದ್ದು ನಡೆದುಕೊಳ್ಳಲು ಯೋಗ್ಯನಲ್ಲ. ಅವನು ಹೀನವಂಶಜ; ಮೇಲೆ ತಂದೆ ಈತ, ತಾಯಿ ಈಕೆ ಎಂದು ನಿರ್ಧರವಾಗಿ ಹೇಳಲು ಬಾರದಂಥ ಪರದೇಶಿ. ಅವನ ಸ್ವಭಾವವೋ ಯಾರಿಗೂ ಮೆಚ್ಚಿಕೆಯಾಗುವಂತಿದ್ದಿಲ್ಲ.ಅವನೊಬ್ಬ ಲಹರೀ ಮನುಷ್ಯ. ಪ್ರಪಂಚದಲ್ಲಿ ಎಷ್ಟು ತರದ ಹಾಸ್ಯ-ವಿನೋದಗಳೆಲ್ಲಾ ತುಂಬಿವೆಯೋ, ಅವನ್ನೆಲ್ಲಾ ಸವಿದು, ಅನುಭವಿಸಿ, ಸುಖಿಸಬೇಕೆಂದೇ ಅವನ ಕಲಾವಿದ ಕರುಳಿನ ಅತಿ ಬಯಕೆ. ಅತಿ ಬಯಕೆಯ ಹುಚ್ಚಿನಿಂದಲೇ ಅಲ್ಲವೇ ಅವನು ಒಂದು ಸರ್ತಿ ವೇಶ್ಯಾಗೃಹ ಪ್ರವೇಶಿಸಿದ್ದೂ, ಆಮೇಲೆ ಅಲ್ಲಿಯ ಹೇಯ ಲಾಲಸೆಗಳು ವಿಲಾಸಗಳೂ, ಅಪವಿತ್ರ ಪಿಪಾಸೆ-ಗಳೂ, ಅವನಲ್ಲಿ ಭೀಕರಸ್ಥಿತಿ, ಜುಗುಪ್ಸೆ ಹುಟ್ಟಿಸಲು, ಅವನು ಯಮನ ದಾಡೆ ನೋಡಿ ಓಡಿಹೋಗುವ ಕುರಿ-ಮರಿಯಂತೆ ಅಲ್ಲಿಂದ ಧಾವಿಸಿ ಬಂದಿದ್ದೂ,ಅದನ್ನು ನೋಡಿದ ಒಬ್ಬಿಬ್ಬರು ಗುಲ್ಲು ಎಬ್ಬಿಸಿದ್ದೂ....ಎಲ್ಲಾ ನೆನಪಾಯಿತು. ಇಷ್ಟೇ ಅಲ್ಲ. ಅವನ ಅಪಖ್ಯಾತಿಗೆ ಕಾರಣ, ಅವನು ಬಂದು ಹೋದವರೊಡನೆ ಸಿಕ್ಕಾಬಟ್ಟೆ ಹಾಸ್ಯಮಾಡುತ್ತಾನೆ; ಗೇಲಿ ಎಬ್ಬಿಸುತ್ತಾನೆ. ಲೇವಡಿಮಾಡಿ ಬಂದವರು ನಾಚಿಕೆ ಯಿಂದ ಹಣ್ಣಾಗಿ ಬೆಕ್ಕಿನ ಕೈಗೆ ಸಿಕ್ಕಿದ ಇಲಿಯ ಅವಸ್ಥೆಗೆ ಬರುವಂತೆ ಮಾಡುತ್ತಾನೆ. ಆಗ, ವಿಚಿತ್ರವಾಗಿ ವಕ್ರವಕ್ರವಾಗುವ ಅವರ ಮುಖಗಳನ್ನು ಅವರ ಇದಿರೇ ಒಂದು ನಿಮಿಷದಲ್ಲಿ ಗೆರೆಗಳಲ್ಲಿ ಎಳೆದು, ಅವರ ಕೈಗೇ ಒಪ್ಪಿಸಿ ''ಬೆಲೆ ಮುಂಗಡವಾಗಿಯೇ ಕೊಟ್ಟುಬಿಟ್ಟಿದ್ದೀರಿ. ನೀವು ನನಗೆ ಕಲ್ಪಿಸಿಕೊಟ್ಟ ಸಂತೋಷವೇ ಸಾಕು'' ಎಂದು ಹೇಳಿ ಗಟ್ಟಿಯಾಗಿ ನಕ್ಕುಬಿಡುತ್ತಾನೆ. ಮೊದಲೇ ಮಿದುವಾದ ಅವನ ಬೇಟೆ ನೀರಾಗಿ ಹೋಗುವುದು....

CC-0. Jangamwadi Math Collection. Digitized by eGangotri

ಏನು ಮಾಡುವುದು? ಅದು ಅವನ ಹುಟ್ಟುಸ್ವಭಾವ. ಎಷ್ಟೆಲ್ಲಾ ಕೋಪಿಸಿಕೊಳ್ಳುತ್ತಾರೆ ಅವರು. ಒಬ್ಬರೂ ಸರಿಯಾಗಿ ಮಾತನಾಡಿಮದಿಲ್ಲ ಅವನೊಡನೆ. ಉಪಚಾರ ವಂತೂ ಅವನಿಂದ ಒಂದು ಯೋಜನ ದೂರ....ಅವನಿಗೆ ಸ್ನೇಹಿತರಿದ್ದಾರೆಯೆ?....ಒಬ್ಬನಿದ್ದ. ಈಗಿಲ್ಲ. ಅಂತರ್ಯದ ಗೆಳೆತನವಿತ್ತು ಅವರಿಬ್ಬರಲ್ಲಿಯೂ. ಆದರೆ ಅದು, ಅವನು ಹೋದ ಪ್ಲೇಗುಜಾಡ್ಯದಲ್ಲಿ ತೀರಿಕೊಳ್ಳಲು, ಅವನ ಜತೆಯಲ್ಲಿ ಹಾರಿಹೋಯಿತು. ದುರ್ಗುಣವೆಷ್ಟಿದ್ದರೂ ಮನ್ನಿಸಿ ಕೌತುಕಪಡುವ ಅವನ ತಾಯಿ-ತಂದೆ-ಒಡಹುಟ್ಟುಗಳು ಎಂದೋ ಪರಲೋಕ ಕಂಡುಬಿಟ್ಟಿದ್ದಾರೆ........ಅವನೊಬ್ಬ ಅನಾಥ, ದೇಶಿಗ. ಏಕೆ? ಅಹರ್ನಿಶವೂ ಮನವೊಲಿಸಿ, ಚಿತ್ರರಂಗದಮೇಲೆ ನಲಿಯುವ, ನಲಿಸಿ ನಾಚುವ ಜತೆಗಾರನಾದ ಕುಂಚವಿದೆಯಲ್ಲಾ? ಇದ್ದು ಪ್ರಯೋಜನ? ಯಾರೂ ಅವನು ಬರೆದ ಚಿತ್ರಕ್ಕೆ ಸನ್ಮಾನಮಾಡುವುದಿಲ್ಲ. ಎಲ್ಲರೂ ಅದು ಒಂದು ಹೀನಕೃತಿಯೆಂದು ತಿಳಿಯುತ್ತಾರೆ. ನಿರರ್ಥ—ನಿಸ್ಸಾರ, ತಲಗೇಡಿ ಬರೆದುದು ಎನ್ನುತ್ತಾರೆ. ದುರ್ಗುಣಿ ಮನುಷ್ಯ ಎಷ್ಟೇ ಪ್ರತಿಭಾವಂತನಾಗಿದ್ದರೂ ಮನ್ನಣೆಗೆ ಅರ್ಹನಲ್ಲವೇನೋ! ಗುಣಕ್ಕೆ ಮತ್ಸರ ಪಡುವವರೇ ಈ ಬಹುಜನ ವಿಶ್ವದಲ್ಲಿ ಬಗ್ಗಡವಾಗಿದ್ದಾರೆ.

ಶಶಿಕಾಂತನು ಈ ರೀತಿಯಾಗಿ ಬಹುವ್ಯಥೆಪಟ್ಟ. ಬೇಗುದಿಗೊಂಡು ಹತಾಶನಾದ. ಕಣ್ಣೆತ್ತಿ ನೋಡಿದರೆ ಅವಳು ಯಥಾಪ್ರಕಾರ ಭಾರವಾಗಿ ಕೂತಿದ್ದಾಳೆ. ಅವಳು ಮನದಲ್ಲಿಯೇ ತನ್ನ ಮೇಲೆ ಸಹಸ್ರ-ಸಹಸ್ರ ಶಾಪಗಳ ಸುರಿಮಳೆಗರೆದಿರಬಹುದೋ ಏನೋ? ತನ್ನನ್ನು ಒಂದು ಹೀನ, ಅಸ್ಪೃಶ್ಯ ಕೀಟಕವೆಂದು ತಿಳಿದಿರಬಹುದು ಎಂದು ಯೋಚಿಸಿದ. ಆಗ ಅನುಭವಿಸಿದ ನರಕಯಾತನೆ ಅದು ಅವನಿಗೇ ಅರಿದು.

ಊಂ........ ಇನ್ನು ತನ್ನ ಅಗತ್ಯವಿಲ್ಲ ಇಲ್ಲಿ. ಹೊರಟು ಹೋಗಬಹುದು ಎಂದು ಸೂಚನೆ ಕೊಡುತ್ತದೆ ಅವಳ ಮೌನ. ಇನ್ನೇಕೆ ಇಲ್ಲಿ ತಡೆಯುವದು? ಹೀಗೆ ನಾನಾ ವಿಧವಾಗಿ ಎಣಿಕೆ ಹಾಕುತ್ತಾ ಅವನು ತನ್ನ ಪೆಟ್ಟಿಗೆ ಕಟ್ಟಿದ. ಪೆಟ್ಟಿಗೆಯ ಮುಚ್ಚಳ ಬಿಗಿಯುವಾಗ ಕಣ್ಣೀರು ಉಕ್ಕಿ ಉಕ್ಕಿ ಬಂದು ಧಾರಾಳವಾಗಿ ಸುರಿಯತೊಡಗಿತು. ಅದು ತಡೆದು ಹಿಡಿಯಲು ಅವನ ಕೈಯಳತೆಯೊಳಗಿರಲಿಲ್ಲ. ಅಷ್ಟು ದಿನದ ತಾಳ್ಮೆ ಅಣೆಕಟ್ಟು ಹರಿದುಕೊಂಡು ಉಷ್ಣೋದಕ ಪ್ರವಾಹವಾಗಿ ಸುರಿಯುತ್ತಿತ್ತು. ದೇವತೆಯೊಬ್ಬಳ ದುರಾಗ್ರಹಕ್ಕೆ ಪಾತ್ರನಾದೆನಲ್ಲಾ ಎಂಬ ಪಶ್ಚಾತ್ತಾಪದ ಕೂರಲಗು ಅವನ ಎದೆಯಿರಿದುದರಿಂದ ಆ ಕಣ್ಣೀರಿನೊಡನೆ ರುಧಿರವೂ ಬೆರಸಿತ್ತು.

ಕುಳಿತು ಗುಡುಗುಟ್ಟುತ್ತಿದ್ದ ಲಲನೆಯ ಮನಸ್ಸು ಅಷ್ಟು ಹೊತ್ತಿಗೆ ಸಮಾಧಾನಕ್ಕೆ ಬಂದಿತ್ತು. ಮೊದಲ ಕೋಮಲವಿನೂತನ-ತರಲಭಾವ ಆ ತಪಿಸುವುದರಲ್ಲಿ ಪುಟಕ್ಕಿಟ್ಟುಕೊಂಡು ಮತ್ತೂ ಪ್ರಸ್ಫುಟವಾಗಿ, ಪ್ರಸನ್ನತೆಯೊಂದಿಗೆ ಕಲೆತು ವಿಲೋಪವಾಗಿತ್ತು.

'ಏಕೆ?....ಏನಾಯಿತು!....ನನ್ನ ವರ್ತನೆ ನಿನ್ನ ಮನಸ್ಸಿಗೆ........'ಎಂದು ಸಕಂಪವಾಗಿ, ಸಪ್ರೇಮವಾಗಿ ಇಂಚರದಲ್ಲಿ ನುಡಿಯುವ ಮುಂಚೆಯೆ ಶಶಿಕಾಂತನು ತನ್ನ ಪೆಟ್ಟಿಗೆ ತೂಗಾಡಿಸಿಕೊಂಡು, ಅಷ್ಟು ದೂರದಲ್ಲಿ, ಭರದಿಂದ ಕಾಲು ಬೀಸಿ ಹೆಜ್ಜೆಯಿಡುತ್ತಾ, ದುಃಖದಿಂದ ಕುಗ್ಗಿಹೋದ ಮುದುಕನಂತೆ ಭುಜಗಳನ್ನು ಒಳಗೆ ಸೇದಿಸಿಕೊಂಡು ಹೊರಟು ಹೋಗುತ್ತಿದ್ದ.

ನೀರೆಯು ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು, ಬಿಕ್ಕಿ ಬಿಕ್ಕಿ ಅಳುತ್ತಾ ಅಲ್ಲಿಯೆ ಒರಗಿದಳು. ಆಗಾಗ ಮೈ ಗದಗದನೆ ಕಂಪಿಸುತ್ತಿತ್ತು. ಅವಳ ನೀಳವಾದ ನಳನಳಿಸುವ ಬೆರಳುಗಳ ಸಂದುಗಳಿಂದ ಬಾಷ್ಪಗಳು ಅವಿರಳವಾಗಿ ತೊಟ್ಟಿಕ್ಕುತ್ತಿದ್ದುವು.

ವನವಿಹಾರಕ್ಕೆ ಹೋಗಿದ್ದ ಸಭ್ಯ ಪುರಜನರ ತಂಡವೊಂದು ಗುಲುಗುಲು ಮಾತಿನೊಡನೆ ಮುಂದುಗಡೆ ಹಾದು ಹೋಗುತ್ತಿತ್ತು.

ಗಗನದಂಚಿನಲ್ಲಿ ಶಶಿಕಾಂತನು, ತನ್ನ ಪ್ರತಿಸ್ಪರ್ಧಿಯಾದ ಲೌಕಿಕ ಶಶಿಕಾಂತನ ನಿಷ್ಕ್ರಮಣವನ್ನು ನೋಡಿ ಈರ್ಷ್ಯಾಯುಕ್ತ ಗೆಲುವಿನ ನಗುವನ್ನು ಬಿತ್ತರಿಸಲು ಸಂಭ್ರಮದಿಂದ ಏರಿಬರುತ್ತಿದ್ದ.



CC-0. Jangamwadi Math Collection. Digitized by eGangotri

ಬಿಡುವಿನ ಹೊತ್ತನ್ನು ಆನಂದದಲ್ಲಿ ಕಳೆಯಲು




ಮತ್ತು




ನಿಮ್ಮ ಮನೆಯಲ್ಲಿ ಅಗತ್ಯ ಬೇಕು.








ಇದಲ್ಲದೆ ಮುಂಬಯಿಯಲ್ಲಿ ದೊರೆಯುವ ಬೇರೆ ಎಲ್ಲ ಬಗೆಯ ಮಾಲನ್ನು ಅಲ್ಪ ಕಮಿಶನ್ನಿನ ಮೇಲೆ,

ಅಗ್ಗವಾಗಿ ಕೊಂಡುಕೊಂಡು ಅತ್ಯಂತ ಜಾಗರೂಕತೆಯಿಂದ ಮತ್ತು ಹೊತ್ತಿಗೆ ಸರಿಯಾಗಿ ಕಳಿಸುತ್ತೇವೆ.

ಹೆಚ್ಚಿನ ವಿವರಗಳಿಗಾಗಿ ಹೊಸ ದೊಡ್ಡ ೧೦೦ ಪುಟಗಳ ಸಚಿತ್ರ ಮರಾಠಿ ಕ್ಯಾಟಲಾಗನ್ನು, ೨ ಆಣೆಯ ಅಂಚೇಚೀಟಿ ಕಳಿಸಿದಲ್ಲಿ ಉಚಿತವಾಗಿ ಕಳಿಸಲಾಗುವುದು.

## ಗೋಪಾಳ ಸಖಾರಾಮ ಮತ್ತು ಕಂಪನಿ,

೩೯೭-೯೯ ಕಾಳಬಾದೇವಿ ರೋಡ
ಮುಂಬಯಿ ನಂ. ೨.

## ಡಾಕ್ಟರ್ ಮಹಿಷಿ ಇವರ ಅನುಭವಸಿದ್ಧ ಔಷಧಿಗಳು

### ಅಶೋಕಾ ಕಾರ್ಡಿಯಲ್

ಇದು ಸ್ತ್ರೀಯರ ಮುಟ್ಟಿನ ಹಾಗು ಗರ್ಭಾಶಯದ ಎಲ್ಲ ವಿಕಾರಗಳಿಗೆ ಸಿದ್ಧೌಷಧಿಯು.

### ವ್ಹಾಯಬರನಮ್ ಕಂಪೌಂಡ್

ಇದರ ಯೋಗದಿಂದ ಬಂಜೆತನದ ದೋಷಗಳು ನಾಶವಾಗಿ ಗರ್ಭಧಾರಣೆಯಾಗುವುದು. ಗರ್ಭವತಿಯರು ೩ ನೆಯ ತಿಂಗಳಿನಿಂದ ಇದನ್ನು ಸಾಧಿಸಿದಲ್ಲಿ ಗರ್ಭವು ಬಲಪಡುವುದು. ಅಲ್ಲದೆ ಹಲೆಯುಳಿಯುವ ಭೀತಿಯು ಇಲ್ಲದಂತಾಗುವುದು. ಸುಖಪ್ರಸೂತಿಯಾಗುವುದು.

ಸೂಚನೆ:— ಈ ಔಷಧಿಗಳ ಹಾಗು ಇನ್ನೂ ಕೆಲವು ಔಷಧಿಗಳ ಸಂಪೂರ್ಣ ಮಾಹಿತಿಗಾಗಿ, ಇಂದೇ ನಮ್ಮ ಕ್ಯಾಟಲಾಗಿಗೆ ಬರೆಯಿರಿ.

ಮ್ಯಾನೇಜರ್,
ಸ್ವಾಸ್ಥ್ಯನಿಲಯ ಫಾರ್ಮಸಿ, ಧಾರವಾಡ


CC-0. Jangamwadi Math Collection. Digitized by eGangotri

# ಕರ್ನಾಟಕ ಸಂಶೋಧನೆಯಲ್ಲಿ ಒಂದು ಕ್ರಾಂತಿ!

ಲೇಖಕರು:— ಶ್ರೀ॥ ದೇಸಾಯಿ ಪಾಂಡುರಂಗರಾಯರು, ಎಮ್. ಎ. (ಆನರ್ಸ) ಧಾರವಾಡ.

★

**ಸಿಂಧು ನದಿಯ ಕಣಿವೆಗಳಲ್ಲಿ ಕನ್ನಡದ ಹುಟ್ಟಿನ ಕುರುಹುಗಳು! ಹತ್ತು ಸಾವಿರ ವರ್ಷಗಳ ಹಿಂದೆ, ಮಹಾಭಾರತದ ಪೂರ್ವದಲ್ಲಿ, ಅಶೋಕನ ಪೂರ್ವದಲ್ಲಿ, ಬುದ್ಧನ ಪೂರ್ವದಲ್ಲಿ, ಉಪ-ನಿಷತ್ತುಗಳ ಪೂರ್ವದಲ್ಲಿ, ಹೆಚ್ಚೇನು ವೇದಗಳು ಹುಟ್ಟುವ ಪೂರ್ವದಲ್ಲಿ ಕನ್ನಡವು ಬಾಳಿತ್ತು, ಬಾಳಿ-ಬದುಕಿ ಜನಾಂಗವೆನಿಸಿತ್ತು!.... ಮಹೇಂಜೊದಾರೊವಿನ ಕೊರೆದ ಆಕೃತಿಗಳುಳ್ಳ ಮಣ್ಣುಕಲ್ಲಿನ ಮುದ್ರೆಗಳ ಬ್ರಹ್ಮಬರೆಹವನ್ನೋದಿ ಫಾ. ಹೆರಾಸ ಮಹಾನುಭಾವರು ಧೈರ್ಯದಿಂದಿದನ್ನು ಸಾಧಿಸುತ್ತಿರುವರು! ಕನ್ನಡಿಗರೆ ಕನ್ನಡದ ಹುಟ್ಟು-ಗುಟ್ಟುಗಳನ್ನು**

**§ § § ಸಂಶೋಧಿಸುವ ಕಾಲವೆಂದು ಬಂದೀತು? § § §**

★

ಕನ್ನಡದ ಮೂಲವನ್ನು ಗೊತ್ತುಹಚ್ಚಲು ಈತ್ತೀಚೆಗೆ ಹಲವು ಸಂಶೋಧಕರು ಹಲವು ಬಗೆಯಿಂದ ಪ್ರಯತ್ನಿಸುತ್ತಿರುವರಷ್ಟೆ. ಈ ವಿಷಯವನ್ನು ಕುರಿತು ಹೆಚ್ಚು ಹೆಚ್ಚು ಪರಿಶ್ರಮ ಮಾಡುತ್ತ ಹೋದಂತೆ ಕನ್ನಡದ ಪ್ರಾಚೀನತೆ ಮತ್ತು ವಿಸ್ತಾರ ಇವುಗಳು ಹೆಚ್ಚು ಹೆಚ್ಚು ಬೆಳಕಿಗೆ ಬರುತ್ತಲಿವೆ. ಈತ್ತೀಚಿನ ಪರಿಶೋಧನೆಗಳಿಂದ ಇದುವರೆಗೆ ಸಂಶೋಧಕರಲ್ಲಿ ಗ್ರಹಿಕೆಯಾಗಿರುವ ಕನ್ನಡದ ದೇಶಕಾಲಗಳ ಎಲ್ಲೆಕಟ್ಟುಗಳು ಒಡೆದುಹೋಗುತ್ತ ಕನ್ನಡದ ಸಂಶೋಧನೆಯು ಯಾವುದೋ ಒಂದು ಹೊಸತಾದ ಲೋಕದಲ್ಲಿ ಹೆಜ್ಜೆಯಿಕ್ಕುತ್ತಲಿದೆ

ಇದೀಗ ಉತ್ತರಕ್ಕೆ ಕೃಷ್ಣೆಯ ಅಕ್ಕಪಕ್ಕದಲ್ಲಿಯೆ ಹರಕ-ಮುರಕಾಗಿ ಹೇಗೋ ಬಾಳಿಕೊಂಡಿರುವ ಕನ್ನಡದ ನೆಲೆಯನ್ನು ಆ ನೃಪತುಂಗನನ್ನು ನಂಬಿ ಗೋದಾವರಿಯ ವರೆಗೆ ಎಳೆದು ಹೇಳಬೇಕೆಂದರೆ, ಕೆಲವರ್ಷಗಳ ಹಿಂದೆ, ಎಷ್ಟೋ ಜನರಿಗೆ ಗಾಬರಿಗಾಬರಿಯಾಗುತ್ತಲಿತ್ತು. ಶ್ರೀ. ಶಂಕರರಾಯ ಜೋಶಿಯವರು, ನರ್ಮದೆ, ಮಾಳವದ ವರೆಗೆ ಅದನ್ನು ನೂಕುವ ಧೈರ್ಯಮಾಡಲು, ಅವರೀ ಊಹೆಯನ್ನು ಅಭಿನಂದಿಸಿ, ಇದರಲ್ಲಿ ನಿಜಾಂಶವು ಇದೆ ಎಂದು ಅವರ ಬೆನ್ನು ತಟ್ಟಲು ಕೆಲವು ಪಂಡಿತರು ಮುಂದುವರಿದರು.

ಇದರ ಜೊತೆಗೆ ಕಾಲವಿಚಾರದಲ್ಲಿಯೂ ಮತಪರಿವರ್ತನೆಯು ಉಂಟಾಯಿತು. ಕ್ರಿಸ್ತಯುಗಾರಂಭಕ್ಕೆ ಬಂದು ನಿಂತಿದ್ದ ಕನ್ನಡ ಜೀವನದ ಉಗಮವು; ಕ್ರಿಸ್ತಯುಗದ ಹಿಂದುಹಿಂದಿನ ಕಾಲನ ಗವಿಯಲ್ಲಿ ಇಣಿಕಿಹಾಕತೊಡಗಿತು.

ಇತ್ತೀಚಿನ ಕೆಲವು ಸಂಶೋಧನಗಳಿಂದ ಇಂತಹ ಊಹೆಗಳಿಗೆ ಬಲವಾದ ಚಾಲನೆಯು ದೊರೆತು ಕನ್ನಡದ ಹುಟ್ಟನ್ನು ಇತಿಹಾಸಕಾಲದಿಂದ ಇತಿಹಾಸಪೂರ್ವಕಾಲದಲ್ಲಿ ಹೊಕ್ಕು ಹುಡುಕುವ ಸಂಧರ್ಭವು ಒದಗಿದೆ. ಕೆಲವು ಸಂಶೋಧಕರ ಈಗಿನ ಒಲವನ್ನು ನೋಡಿ, ಅವರ ಮಾತುಗಳನ್ನು ನಂಬಬಹುದಾದಲ್ಲಿ ಕ್ರಿಸ್ತಪೂರ್ವ ಸಾವಿರಾರು ವರ್ಷಗಳ ಹಿಂದಕ್ಕೆ, ಉತ್ತರದಲ್ಲಿ, ಉತ್ತರ ಭಾರತದಲ್ಲಿ, ಸಿಂಧುನದಿಯ ಕಣಿವೆಗಳಲ್ಲಿ ಕನ್ನಡದ ಹುಟ್ಟಿನ ಕುರುಹುಗಳನ್ನು ಎಣಿಸಿ ನೋಡಬೇಕಾಗುವುದು.

CC-0. Jangamwadi Math Collection. Digitized by eGangotri

ಕಾಲನ ಒಡಲಲ್ಲಿ ಏನೇನು ಅಡಗಿರುವುದೋ ಯಾರು ಹೇಳಬಲ್ಲರು? ಸುಮಾರು ೧೫ ವರ್ಷಗಳ ಹಿಂದೆ ಸಿಂಧ ಪಂಜಾಬ ಪ್ರಾಂತಗಳಲ್ಲಿ ಸಿಂಧು ನದಿಯ ದಂಡೆಯಲ್ಲಿ ನೆಲಸಿರುವ ಮಹೆಂಜೊ ದಾರೊ ಮತ್ತು ಹರಪ್ಪ ಎಂಬ ಸ್ಥಳಗಳ ಪಕ್ಕದಲ್ಲಿ ಅಗಿತವು ನಡೆದು ಅಪೂರ್ವವಾದ ಒಂದು ನಾಗರಿಕತೆಯ ಅವಶೇಷಗಳು ಬಯಲಿಗೆ ಬಂದುವು. ಮಾನವರು ಮಾಡಿ ಬಳಸಿದ ಬಗೆಬಗೆಯ ಒಡವೆಗಳಿಂದ ಕೂಡಿದ ಮನೆಗಳೂ ಊರುಗಳೂ ಹೊರಟುವು. ಚಾನ್ಹು-ದಾರೊ ಮುಂತಾದ ಬೇರೆಡೆಯಲ್ಲಿಯೂ ಇದೇ ಮಾದರಿಯ ಇನ್ನೂ ಹಲವು ವಸ್ತುಗಳು ದೊರೆತುವು.

ಈ ನಾಗರಿಕತೆಯ ಅಧ್ಯಯನವು ನಡೆಯಿತು. ಅನೇಕ ಸಂಶೋಧಕರು ಇದರಲ್ಲಿ ಬಹಳ ಪರಿಶ್ರಮ ಪಟ್ಟರು, ಇನ್ನೂ ಪಡುತ್ತಿರುವರು. ಇದರಲ್ಲಿ ಸಾಮಾನ್ಯವಾಗಿ ಎಲ್ಲ ಪಂಡಿತರು ಒಪ್ಪುವಂತಹ ಕೆಲವು ಮಾತುಗಳು ಸ್ಪಷ್ಟವಾಗಿ ನಿದರ್ಶನಕ್ಕೆ ಬಂದುವು. ಅವು ಯಾವುವೆಂದರೆ:

ಈ ಪ್ರದೇಶದಲ್ಲಿ **ಅಪೂರ್ವವಾದ ಒಂದು ಜನಾಂಗವು** ವಾಸಿಸುತ್ತಿರಬೇಕು. ಈ ಜನಾಂಗವು ನಾಗರಿಕತೆಯ ಲಕ್ಷಣಗಳಿಂದ ಕೂಡಿದುದಾಗಿತ್ತು. ಅದಕ್ಕೂ, ಈಗ ಜ್ಞಾತವಿರುವ ಲೋಕದಲ್ಲಿಯ ಬೇರಾವ ಜನಾಂಗಕ್ಕೂ ಸಾಕಷ್ಟು ಹೋಲಿಕೆಯು ಸಿಕ್ಕುವುದಿಲ್ಲ. ಈ ಜನಾಂಗದ ಕೆಲವು ಲಕ್ಷಣಗಳು ಬೇರೆ ಜನಾಂಗಗಳೊಡನೆ ಹೋಲುವಂತಹವಾಗಿದ್ದರೂ ಈ ಜನಾಂಗದ ಸಂಸ್ಕೃತಿಯು ವಿಲಕ್ಷಣವಾಗಿದೆ.

ಈ ಜನಾಂಗವು **ಅತಿ ಪ್ರಾಚೀನಕಾಲದಲ್ಲಿ** ಬಾಳಿರಬೇಕು. ಇದರ ಪ್ರಾಚೀನತೆಯ ಬಗೆಗೆ ಭಿನ್ನಾಭಿಪ್ರಾಯಗಳಿದ್ದು, ಇದರ ಕಾಲವು ಕ್ರಿಸ್ತಪೂರ್ವ ಮೂರು ಸಾವಿರದಿಂದ ಹತ್ತು ಸಾವಿರ ವರ್ಷಗಳ ವರೆಗೆ ಆಗಬೇಕೆಂದು ಬೇರೆ ಬೇರೆ ಪರಿಶೋಧಕರು ಅಭಿಪ್ರಾಯಪಟ್ಟಿರುವರು.

ಈ ಜನಾಂಗವು ಯಾವ ಜನಾಂಗವಾಗಿರಬೇಕು?

ಕೆಲವರ ಅಭಿಪ್ರಾಯದಂತೆ ಇವರು ಭಾರತದಲ್ಲಿ ಬಂದು ನೆಲಸಿದ ಆರ್ಯರೆ ಆಗಿರಬೇಕು.

ಈ ಜನಾಂಗವು ಸುಮೇರಿಯನ್ ಎಂಬ ಪಶ್ಚಿಮ ಏಶಿಯದ ಇನ್ನೊಂದು ಜನಾಂಗಕ್ಕೆ ಹೋಲುವುದು ಎಂದು ಡಾಕ್ಟರ್ ಪ್ರಾಣನಾಥರು ಸಾಧಿಸಿರುವರು.

ಭಾರತೀಯ ಪ್ರಭುತ್ವದ ಸೇವೆಯಲ್ಲಿದ್ದು, ಈ ಶೋಧನೆಗಳನ್ನು ಕುರಿತು ಪ್ರಮಾಣಗ್ರಂಥವನ್ನು ಪ್ರಕಟಗೊಳಿಸಿದ ಪುರಾತತ್ತ್ವವಿಶಾರದ ಸರ್ ಜಾನ್ ಮಾರ್ಶಲ್ ಇವರು ಇದು ಆರ್ಯಪೂರ್ವ ಜನಾಂಗವಾಗಿದ್ದು, ಮುಂದೆ ದ್ರಾವಿಡವೆಂದು ನಾಮಾಭಿಧಾನವನ್ನು ಪಡೆದ ಜನಾಂಗವಾಗಿರಬಹುದು ಎಂದು ತಮ್ಮ ಮತವನ್ನು ವ್ಯಕ್ತಪಡಿಸಿದರು. ಪ್ರೊ. ಆರ್. ಡಿ. ಬಾನರ್ಜಿಯವರು ಇವರೀ ಅಭಿಪ್ರಾಯವನ್ನು ಎತ್ತಿಹಿಡಿದು ಮಹೆಂಜೊ ದಾರೊ, ಹರಪ್ಪ ಇವುಗಳ ಸಂಸ್ಕೃತಿಯನ್ನು ಕಟ್ಟಿದವರು ದ್ರಾವಿಡರು ಅಥವಾ ಆದಿದ್ರಾವಿಡರು ಆಗಿರಬೇಕು ಎಂದು ಸಾರಿದರು. ಶ್ರೀ. ಹಂಟರ ಸಾಹೇಬರು ಸಿಂಧದ ನೆರೆಯಲ್ಲಿ, ಬಲುಚಿಸ್ಥಾನದಲ್ಲಿ ಈಗಲೂ ನೆಲಸಿರುವ ಬ್ರಾಹುಇ ಎಂಬ ದ್ರಾವಿಡ ಜನಾಂಗದ ಉದಾಹರಣೆಯನ್ನು ಆಧಾರವಾಗಿಟ್ಟುಕೊಂಡು, ಈ ಜನರು ದ್ರಾವಿಡರು ಆಗಿರಬೇಕು ಎಂದು ನುಡಿದರು.

ಇಲ್ಲಿ ದೊರೆತಿರುವ ಆಕೃತಿಗಳ ಒಲವು, ಈ ಜನರ ನಡೆವಳಿಕೆಯ ಕುರುಹುಗಳು ಮುಂತಾದ ಈ ಜನಾಂಗದ ಇರುವಿಕೆಯ ರೀತಿಯ ಮೇಲಿಂದ ಇದು ದ್ರಾವಿಡ ಜನಾಂಗವು ಎಂದು ಪಂಡಿತರು ಅಭಿಪ್ರಾಯಪಟ್ಟರೂ, ಹೆಚ್ಚು ಬಲವಾದ ಪ್ರಮಾಣಗಳು ಮುಂದೆ ಬರುವ ವರೆಗೆ ಈ ಅಭಿಪ್ರಾಯದ ಬಗೆಗೆ ಸಂದೇಹಗೊಳ್ಳಲು ಸಾಕಷ್ಟು ಎಡೆಯಿರುವುದು. ಈ ಕುಂದನ್ನು ನೀಗಿ ಈ ಜನಾಂಗದ ಜಾತಿಯನ್ನು ನಿರ್ಧರಿಸಲು ಇನ್ನೊಬ್ಬ ಸಂಶೋಧಕರು ಇದೀಗ ಮುಂದೆ ಬಂದಿರುವರು.

ಈ ಜನಾಂಗದ ಜಾತಿಯನ್ನು ನಿರ್ಧರಿಸಲು ಸಹಾಯಕರಾಗಬಲ್ಲ ಹಲವು ಮಹತ್ತ್ವದ ವಸ್ತುಗಳು ಅಲ್ಲಿಯ ಅಗಿತದಲ್ಲಿ ಸಿಕ್ಕಿರುವುವು. ಕೊರೆದ ಆಕೃತಿಗಳುಳ್ಳ ಒಂದು ಬಗೆಯ ಮಣ್ಣು ಕಲ್ಲಿನ ಮುದ್ರೆಗಳೇ (Steatite Seals) ಈ ಮಹತ್ತ್ವದ ವಸ್ತುಗಳು. ಈ ಆಕೃತಿಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿದಲ್ಲಿ ಇವು ಒಂದು ಬರೆಹವಾಗಿವೆ ಎಂದು ಕಂಡುಬಂದಿತು. ಆದರೆ ಈ ಬ್ರಹ್ಮಬರೆಹವನ್ನು ಓದಿ ತಿಳಿದುಕೊಳ್ಳುವ ಬಗೆ ಹೇಗೆ? ಏಕೆಂದರೆ ಈ ಬರೆಹದಲ್ಲಿಯ ಭಾಷೆ ಮತ್ತು ಲಿಪಿ ಇವೆರಡೂ ಅಷ್ಟೇ ಅರಿಯದ ಗೂಢವಾಗಿದ್ದುವು. ಈ ಬರೆಹದ ಓದಿನಿಂದ ಈ ಜನಾಂಗದ ಸಮಸ್ಯೆಯನ್ನು ಬಿಡಿಸಲು ಬಹಳ ಸಹಾಯವಾಗುವುದೆಂದು ಬೇರೆ ಹೇಳಬೇಕಾಹುದಾಗಿಲ್ಲ.

ಈ ಬರೆಹವನ್ನು ಓದಲು ಪ್ರಯತ್ನಿಸಿದವರಲ್ಲಿ, 'ಕೊನೆಗಾಣಿಸಿ ಜಯಶಾಲಿಯಾಗಿದ್ದೇನೆ' ಎಂದು ಧೈರ್ಯವಾಗಿ

CC-0. Jangamwadi Math Collection. Digitized by eGangotri

ಸಾರಿ ಹೇಳಲು ಇದೀಗ ಮುಂಬಯಿಯ ಫಾದರ ಹೆರಾಸರು ಮುಂದುವರಿದಿದ್ದಾರೆ. ಇವರು ಈ ಸ್ಥಳದಲ್ಲಿ ದೊರೆತಿರುವ ಸುಮಾರು ಎರಡು ಸಾವಿರ ಮುದ್ರೆಗಳ ಮೇಲಿನ ಬರೆಹಗಳನ್ನು ಓದಿ ಅರ್ಥವನ್ನು ಅನುಗೊಳಿಸಿ ಪ್ರಕಟಿಸುತ್ತಲಿದ್ದಾರೆ. ಇವರು ಹೇಳುತ್ತಿರುವ ಕೆಲವು ಮಾತುಗಳ ಪರಿಯನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು.

ಈ ಲಿಪಿಯು ಚಿತ್ರ-ಧ್ವನಿವಾಹಕ ಲಿಪಿಯು (picto-phonographic) ಆಗಿದೆ. ಇದರಲ್ಲಿಯ ಕೆಲವು ಮಾತುಗಳನ್ನು ಪ್ರಾಣಿಗಳು, ಅವುಗಳ ಅವಯವಗಳು ಮುಂತಾದ ಆಕೃತಿಗಳಿಂದ ತೋರಿಸಲಾಗಿದೆ. ಉದಾಹರಣಾರ್ಥವಾಗಿ ( ಎಂಬುದು ಕಾಲಿನ ಗುರುತು; △ ಎಂದರೆ ಕಣ್ಣಿನ ಗುರುತು; ಬಿಲ್ಲನ್ನು ಹಿಡಿದ ಮನುಷ್ಯನನ್ನು ತೋರಿಸಿದರೆ 'ಬಿಲವ'ಇ.... ಇದು ಇಮ್ಮಗ್ಗುಲ ಬರೆಹವಾಗಿದೆ (boustrophedon); ಎಂದರೆ ಇದರ ಸಾಲುಗಳು ಕ್ರಮವಾಗಿ ಬಲದಿಂದ ಎಡಕ್ಕೆ ಮತ್ತು ಎಡದಿಂದ ಬಲಕ್ಕೆ ಈ ಪರಿಯಾಗಿ ಹೋಗುವುವು. ಈ ಬರೆಹದ ಕೆಲವು ಚಿನ್ಹಗಳು ತಿನವೆಲ್ಲಿ, ನೀಲಗಿರಿ, ನಲಗೊಂಡ (ಹೈದರಾಬಾದ ಸಂಸ್ಥಾನ) ಮುಂತಾದೆಡೆಗಳಲ್ಲಿ ದೊರೆತ ಇತಿಹಾಸಪೂರ್ವಕಾಲೀನ ಬರೆಹಗಳ ಚಿನ್ಹಗಳಿಗೆ ಹೋಲುತ್ತವೆ. ಆರ್ಯರು ಈ ಬರೆಹದ ಕೆಲವು ಅಕ್ಷರಗಳನ್ನು ತೆಗೆದುಕೊಂಡು 'ಬ್ರಾಹ್ಮೀ-ಲಿಪಿ' ಯನ್ನು ವಿಕಾಸಗೊಳಿಸಿದರು ಎಂದು ಊಹಿಸಲು ಅವಕಾಶವಿದೆ.

ಈ ಬರೆಹದ ಭಾಷೆಯು ಆದಿದ್ರಾವಿಡವಾಗಿದೆ. ಈ ಭಾಷೆಯೊಳಗಿನ ಕೆಲವು ಶಬ್ದಗಳು ಈಗಿನ ಕನ್ನಡ, ತಮಿಳು ಮುಂತಾದ ದ್ರಾವಿಡ ಭಾಷೆಗಳ ಶಬ್ದಗಳಿಗೆ ಹೊಂದಿಕೆಯಾಗುವುವು. ಉದಾ:—

ಕನ್=ಕಣ್ಣು
ಕಾಲ್=ಕಾಲು
ಮೂನ್=ಮೂರು
ಮೀನ್=ಮೀನ
ಮುಗಿಲ್=Rainless cloud
ಕರ್ಮುಗಿಲ್=Rain cloud
ಕಲ್=Glitter
ಊರ್=Country
ಏಲ್=ಸೂರ್ಯ
ಅಲರ್=ಹೂ
ಮಲೆ=ಮಳೆ

ಮಾದರಿಗಾಗಿ ಈ ಭಾಷೆಯ ಕೆಲವು ನುಡಿಗಳನ್ನು ಕೊಡಬಹುದು:—

(೧) "ಮೂನೂರ್ ಬಿಲವ ಆರೇಲ್ ಮೂನ್ ಕೆಲಕಿಲ ಇರೆ ಅಲುಕೆಲಕುಲ ಅಜುಪ್ ಅಲರ್ ಊರಿಲ್ ಬಿಲವ."

ಇದರ ಅರ್ಥ:—ಮೂನೂರ (ಒಂದು ಊರ ಹೆಸರು) ಬಿಲವನೆಂದರೆ ಮೂವರು ಕೆಲಕಿಲರಿಂದ (ಒಂದು ಕುಲದ ಹೆಸರು) ಆರು ತಿಂಗಳುಗಳಲ್ಲಿ ಉಂಟಾದ, ವ್ಯಗ್ರವಾದ ಸಂಮ್ಮೇಲನದ ಹುಲುಗಾವಲಿನ ಬೆಳೆಯ ಹೂವುಳ್ಳ ನಾಡಿನ ಬಿಲವನು (ಬಿಲವ ಕುಲದ ಹಿರಿಯನು).

(೨) "ಕಾಲರ್ ಮೀನವರ್ ಕನ್ ಕದ ಏರ್ ವಲ್ಲಿದದು ಕಲ ಕೂರರ್ ವಲ್ ಕುರಂಗರ್ ನಾಲ್."

ಇದರ ಅರ್ಥ:— ಕಂಗೊಳಿಸುವ ಕೋಟೆಯುಳ್ಳ ಸಂಯುಕ್ತ ದೇಶಗಳ ಜನಗಳಿಗೆ ಸೇರಿದ ನಾಲ್ವರು ಗಟ್ಟಿಗರಾದ ಕುರಂಗರು ದಾಟಿದರು ಮತ್ತು ಬಲವಾದ ಕಾಲುಗಳುಳ್ಳ ಮೀನರಿಗೆ ಸೆರೆಸಿಲುಕಿದರು.

ಕುರಂಗರೆಂದರೆ ಸಂಸ್ಕೃತ ಸಾಹಿತ್ಯದಲ್ಲಿ ಬರುವ ವಾನರರು, ಮೀನರು ಎಂಬುದು ಮತ್ಸ್ಯ ಎಂದು ಸಂಸ್ಕೃತ ಸಾಹಿತ್ಯದಲ್ಲಿ ಬರುವ ಜನಾಂಗದವರು.

ಈ ಭಾಷೆಯಲ್ಲಿ ಪದ್ಯಗಳೂ ಉಂಟು. ಅವುಗಳ ಮಾದರಿ:—

(೧) "ಕಾಲೊರ್ ಮೀನನ್ ಮೀನ್ ಕಾನ್ ಕದ ಏರ್ ವಲಿಲ್ ಅದು | ಕಲಕೂರಿರ್ ವಲ್ ಕೈ ಕುಡಗ ನಾಲ್ ||"

ಇದರ ಅಭಿಪ್ರಾಯ :—ಮೀನದ ಪೂರ್ಣತೆಯುಳ್ಳುದಾಗಿ ಕಂಗೊಳಿಸುವ ಬಲವಾದ ಮನೆಯುಳ್ಳ ಸಂಯುಕ್ತ ದೇಶಗಳ ಜನಗಳಲ್ಲಿ ಹಲವು ಬಲ್ಲಿದರಾದ ಕಾಡಗರು ದಾಟಿದರು. ಮತ್ತು ಕಾಲೋರರ ಮೀನನಿಗೆ ಕೈಸೆರೆಯಾದರು.

ಕಾಲೋರ ಎಂದರೆ ತ್ರಿಚನಾಪಳ್ಳಿಯ ಬಳಿಯಲ್ಲಿರುವ ಜನಾಂಗದ ಹೆಸರು (ಇದೆ ಮುಂದೆ ಕಳ್ಳರ್ ಎಂದು ಹೆಸರು ಪಡೆಯಿತು), ಕುಡಗರು ಎಂದರೆ ಕೊಡಗಿನವರು. ಮುಂದೆ ಇವರೇ ವಾನರರಾದರು. ಮೀನನೆಂಬುದು ಅರಸಿನ ಹೆಸರು.

CC-0. Jangamwadi Math Collection. Digitized by eGangotri

ಇನ್ನೊಂದು ಲಾವಣಿಯ ಪಲ್ಲವಿ ( ದ್ವಿಪದಿ ) :—

(೨) " ಇರ್ ಅಬುಸ್ ಕೆಲಕೂರ್ ಓದುಗ್ ರು ।
ಇರ್ ಅರಮರಂ ಅದು ರು ॥ "

ಅರ್ಥ:— ಬೆಳೆಯುಳ್ಳ ಎರಡು ಸಂಯುಕ್ತ ದೇಶಗಳ ಹೊಲದಲ್ಲಿ ಹಾಯುವ ನೀರಿನ ಸದ್ದು ಎರಡು ಅರಳಿಯ ಗಿಡಗಳ ಎಲೆಯ ಸಪ್ಪಳದಂತೆ ಇದೆ.

ಭಾಷೆಯ ಈ ಪ್ರಮಾಣವು ಮಿಕ್ಕ ಪ್ರಮಾಣಗಳಿಗಿಂತ ಬಲವತ್ತರವಾದುದು. ಅದರ ಬಲದಿಂದ, ಮೇಲೆ ಕಾಣಿಸಿದಂತೆ ಈಗಿನ ದ್ರಾವಿಡ ವರ್ಗಕ್ಕೆ ಸೇರಿದ ಕನ್ನಡ, ತಮಿಳು ಮುಂತಾದ ಭಾಷೆಗಳ ಮಾತುಗಳಿಗೆ ಈ ಜನಾಂಗದ ಮಾತುಗಳು ಕೆಲಮಟ್ಟಿಗೆ ಹೋಲುತ್ತಿರುವದರಿಂದ ಈ ಜನಾಂಗವು ದ್ರಾವಿಡ ಅಥವಾ ಆದಿದ್ರಾವಿಡವಾಗಿರಬೇಕು ಎಂದು ನಿರ್ಧರಿಸಬಹುದಾಗಿದೆ. ಇಲ್ಲಿ ಆದಿದ್ರಾವಿಡ ಎಂಬುದಕ್ಕೆ ಸರಿಯಾಗಿ ಅರ್ಥವನ್ನು ಅರಿತುಕೊಳ್ಳಬೇಕಾದುದು. ಈಗಿನ ದ್ರಾವಿಡ ಜನಾಂಗಗಳಲ್ಲಿ ವಿಂಗಡಿಸಿ ಕಾಣುವ ಕನ್ನಡ, ತಮಿಳು ಮುಂತಾದ ಸೂಕ್ಷ್ಮವಾದ ಪ್ರಭೇದಗಳು ಹುಟ್ಟುವ ಪೂರ್ವದ ಒಂದು ಸ್ಥಿತಿಯು ಇದ್ದಿರಬೇಕು. ಆಗ ಸಣ್ಣಪುಟ್ಟವಾದ ಕೆಲವು ವ್ಯತ್ಯಾಸಗಳು ಇರಬಹುದಾದರೂ ದ್ರಾವಿಡಭಾಷೆಯನ್ನಾಡುವ ದ್ರಾವಿಡ ಸಂಸ್ಕೃತಿಯನ್ನು ಜೀವಿಸುವ ಒಂದೇ ಒಂದು ಜನಾಂಗವು ಬಾಳಿರಬೇಕು. ಇದೇ ಆ ಆದಿದ್ರಾವಿಡ ಜನಾಂಗವು. ಇದರ ಒಡಲಲ್ಲಿ ಕನ್ನಡ ಮುಂತಾದ ಜನಾಂಗಗಳ ಕುರುಹುಗಳು ಹೆಚ್ಚುಹೆಚ್ಚು ಒಡೆದು ಮೂಡುತ್ತ ಮುಂದೆ ಅವು ಸ್ವತಂತ್ರ ಜನಾಂಗದ ರೂಪಗಳನ್ನು ಹೊಂದಿದುವು. ಈ ರೀತಿಯಿಂದ ನೋಡಲು, ಈ ಆದಿದ್ರಾವಿಡ ಜನಾಂಗದ ಹೊಟ್ಟೆಯಲ್ಲಿ ಅಡಕವಾಗಿರುವ ಕನ್ನಡವು ಅಂದು ಅಷ್ಟು ಪ್ರಾಚೀನ ಕಾಲದಲ್ಲಿ ಹುಟ್ಟಿ ಒಂದು ಪರಿಯಿಂದ ಬಾಳುವಂತಹದಾಗಿತ್ತು—ಎಂದು ಕನ್ನಡದ ಜೀವನ ಕಥೆಯನ್ನು ವಿವರಿಸುವಾಗ ಹೇಳಬೇಕಾದುದು.

ಆದರೆ ಕನ್ನಡಕ್ಕೂ ಆದಿದ್ರಾವಿಡಕ್ಕೂ ಸಂದಿಗ್ಧವಾದ, ಸಾಮಾನ್ಯವಾದ ಈ ಸಂಬಂಧವಲ್ಲದೆ ಅಸಂದಿಗ್ಧವಾದ, ವಿಶೇಷವಾದ ಸಂಬಂಧವೂ ಇದ್ದಿತು ಎಂದು ಇನ್ನೊಂದು ಹೆಜ್ಜೆಯನ್ನು ಮುಂದಕ್ಕೆ ಇಕ್ಕಿ ಫಾದರ ಹೆರಾಸರು ಹೇಳುತ್ತಿರುವರು. ಈ ಕಾಲದಲ್ಲಿ ಕನ್ನಡ ನಾಡು, ಕನ್ನಡ ನುಡಿ, ಕನ್ನಡ ಜನಾಂಗ ಇವುಗಳು ಖಂಡಿತವಾಗಿ ಮೈದಾಳಿದ್ದುವು ಎಂದು ಹೇಳಲು ಅವಕಾಶವಿದೆ. "ಕಣ್ನಿರ್" ಎಂಬುದು ಈಕಾಲದ ಕನ್ನಡಿಗರ ಹೆಸರು. ಇವರದೊಂದು ಸ್ವತಂತ್ರವಾದ ಕುಲವು ಆಗಿದ್ದಿತು. ಮೇಲೆ ಉದಾಹರಿಸಿದ ಪದ್ಯಗಳಲ್ಲಿ ಮೊದಲನೆಯ ಪದ್ಯದಲ್ಲಿ ಹೇಳಿರುವ "ಕುಡಗರು" ಎಂಬುದು ಈ ಕನ್ನಡಿಗರಿಗೆ ಗೆಳೆಯರಾದ ಕುಲವು.

ಈ ಭಾಷೆಯಲ್ಲಿಯ ಕೆಲವು ಶಬ್ದಗಳು ಈಗಿನ ತಮಿಳಿಗಿಂತ ಕನ್ನಡಕ್ಕೆ ಸಮೀಪವಾಗಿರುವುವು. ಈ ಭಾಷೆಯಲ್ಲಿ ಬಳಕೆಯಿರುವ ಬಹುವಚನದ ಮೂರು ಪ್ರತ್ಯಯಗಳಲ್ಲಿ ( ಇರ್, ಓರ್, ರು ) ರು ಎಂಬುದು ಅಚ್ಚಗನ್ನಡವಾಗಿದೆ.

ಈ ಮುಂತಾದ ಆಧಾರಗಳಿಂದ ಮುಹೆಂಜೊ ದಾರೊ, ಹರಪ್ಪಗಳ ಜನಾಂಗದಲ್ಲಿ ಕನ್ನಡದ ಬೆರಕೆಯೂ ಪ್ರಭಾವವೂ ಹೆಚ್ಚಾಗಿರಬೇಕು ಎಂದು ಊಹಿಸಬಹುದಾಗಿದೆ.

ಎಂತಹ ಅದ್ಭುತಸಂಶೋಧನವದು ! ಇದೇನು ! ನಮ್ಮೀ ಕೀಳು ಕನ್ನಡವು ಹತ್ತು ಸಾವಿರ ವರುಷಗಳ ಹಿಂದೆ, ಮಹಾಭಾರತ ಪೂರ್ವದಲ್ಲಿ, ಅಶೋಕನ ಪೂರ್ವದಲ್ಲಿ, ಬುದ್ಧನ ಪೂರ್ವದಲ್ಲಿ, ಉಪನಿಷತ್ತುಗಳ ಪೂರ್ವದಲ್ಲಿ, ಹೆಚ್ಚೇನು ವೇದಗಳು ಹುಟ್ಟುವ ಪೂರ್ವದಲ್ಲಿ ಬಾಳಿತ್ತೇ ? ಬಲವಾಗಿ ಬಾಳಿತ್ತೇ ? .... ಹಿಗ್ಗಿನಿಂದ ಹೊಟ್ಟೆಯುಬ್ಬಿ ಹರಣ ಹಾರಿ ಹೋಗುವ ಆಟ ! ಆಟವೊ ಹುಡುಗಾಟವೊ ? ಮಾಯದ ಮಾಟವೊ ?

ಅಕೋ ನೋಡಿ ! ಸಂಶಯಗೊಳ್ಳಬೇಡಿರಿ ! ಸಂದೇಹದಿಂದ ಸರ್ವನಾಶ ! ತಮ್ಮ ಮಾತುಗಳು ನಿಜವೆಂದು, ಪ್ರಮಾಣಸಿದ್ಧವೆಂದು ಹಟದಿಂದ ಸಾಧಿಸುತ್ತ, ಎದೆತಟ್ಟಿ ಲೋಕಕ್ಕೆ ಸಾರಿ ಸಾರಿ ಹೇಳುತ್ತ ಹೆರಾಸ ಸಾಹೇಬರು ನಿಶ್ಚಲವಾಗಿ ನಿಂತಿರುವರು. ಅವರನ್ನು ಅಲ್ಲಗಳೆಯುವಿರಾ? ಅಂತಹ ಎಂಟೆದೆಯು ನಿಮಗುಂಟೆ ? ಹಾಗಾದರೆ ಮುಂದೆ ಬನ್ನಿ.

ಸಂಶೋಧನೆಯಲ್ಲಿಯೂ ಒಂದು ಉನ್ಮಾದಾವಸ್ಥೆಯಿರುವುದು. ಸಂಶೋಧನೆಯಲ್ಲಿಯೂ ಒಮ್ಮೊಮ್ಮೆ ಕಾವ್ಯದ ಹಕ್ಕಿಗಳು ಹಾರಾಡುವುವು. ಆ ಉಬ್ಬು, ಆ ಗಾಳಿ, ಆ ಕಾವು ಆರಿಹೋದಮೇಲೆ, ಹಿಂದಿನ ಮಾತುಗಳೆಲ್ಲ ಅಪ್ಪಟವಾಗಿ ಸುಳ್ಳೆನಿಸಿ ಹೊಸಮಾತುಗಳ ಮುಂದೆ ಬಂದ ಸಂದರ್ಭಗಳೂ ಉಂಟು. ಇದು ಇಂತಹದೆ ಆದ ಒಂದು ಸಂದರ್ಭವೊ? ಈಗ ಯಾರು ಹೇಳಬೇಕು? ಕಾಲನನ್ನು ನಂಬಿ ಕಾಯ್ದುಕೊಂಡಿರುವ !

ಫಾದರ ಹೆರಾಸರ ಮಾತುಗಳಲ್ಲಿ 'ಇದು ಕೂಡದು' ಎಂದು ಹೇಳಲಿಕ್ಕೆ ಬಾರದ ಕೆಲವು ಮಾತುಗಳು ಇವೆ-

CC-0. Jangamwadi Math Collection. Digitized by eGangotri

ಆದರ ಜೊತೆಗೆ ಆಕ್ಷೇಪಣೆಗೆ ಗುರಿಯಾಗುವಂತಹ ಕೆಲವು ಮಾತುಗಳೂ ಇವೆ. ಈಗಿನ ಮಟ್ಟಿಗೆ ವಿಚಾರಿಸಿ ಹೇಳುವು-ದಾದಲ್ಲಿ ಅವರ ಈ ಸಂಶೋಧನ ಫಲಗಳಿಗೆ ಸಾಧಕವೂ ಬಾಧಕವೂ ಆದ ಮಾತುಗಳನ್ನು ಹೀಗೆ ಮಂಡಿಸಬಹುದು.

### ಸಾಧಕ

(೧) ಫಾ. ಹೆರಾಸರ ದೃಷ್ಟಿಯಲ್ಲಿ ಬಣ್ಣವಿಲ್ಲ. ಅವರು ಕನ್ನಡಿಗರನ್ನಾಗಲಿ, ಮಿಕ್ಕ ದ್ರಾವಿಡರನ್ನಾಗಲಿ ಮೆಚ್ಚಿಸಿ ಏನನ್ನೂ ಪಡೆಯಬೇಕಾಗಿಲ್ಲ.

(೨) ಕನ್ನಡಿಗರು ದ್ರಾವಿಡ ಜನಾಂಗವೆಂಬುದು ನಿರ್ವಿವಾ-ದವಷ್ಟೆ. ಸರ್ ಜಾನ್ ಮಾರ್ಶಲ್ ಪ್ರಭೃತಿಗಳು ದ್ರಾವಿಡ ಅಥವಾ ಆದಿದ್ರಾವಿಡವೆಂದು ಹೇಳುವ ಈ ಜನಾಂಗದ ಭಾಷೆಯಲ್ಲಿ ಕನ್ನಡ ಶಬ್ದಗಳು, ಕನ್ನಡ ಪ್ರಯೋಗಗಳು ದೊರೆಯುವುವು ಎಂದು ತೋರಿಸಿದ ಕೂಡಲೆ ಬೇರೆಯವರು ಬೆಚ್ಚಿಬೀಳಲು ಕಾರಣ-ವೇನು ?

(೩) ಈ ಭಾಷೆ-ಲಿಪಿಗಳನ್ನು ಕುರಿತು ಒಂದು ಸೂತ್ರವನ್ನು ಗೊತ್ತುಹಚ್ಚಿ, ಆ ಸೂತ್ರದ ಕೈಯಿಂದ ಇಲ್ಲಿಯ ಬರೆಹದ ಗುಟ್ಟನ್ನು ಇದುವರೆಗೆ ಸಂಪೂರ್ಣವಾಗಿ ಒಡೆದು ತೋರಿಸಿದವರೆಂದರೆ ಫಾ. ಹೆರಾಸರು ಒಬ್ಬರೆ. ಇವರು ಒಂದು ಸಂಕೇತವನ್ನು ನಿರ್ಮಿಸಿ ಅದರ ಬಲದಿಂದ ಎಲ್ಲ ಒಡಪನ್ನು ವಿಶದವಾಗಿ ವಿಂಗಡಿಸಿ, ಸಮರ್ಪಕ ವಾಗಿ ಬಿಡಿಸಿ ತೋರಿಸಿದ್ದಾರೆ. ಈ ಪ್ರಮೇಯದಲ್ಲಿ ಬೇರೆಯವರು ಮಾಡಿದ ಪ್ರಯತ್ನಗಳು ಯಾವುವೂ ಇಷ್ಟು ಸಮರ್ಪಕವೂ ಫಲಕಾರಿಯೂ ಆಗಿಲ್ಲ.

### ಬಾಧಕ

(೧) ಫಾ. ಹೆರಾಸರ ದೃಷ್ಟಿಯಲ್ಲಿ ಬಣ್ಣವಿಲ್ಲದಿದ್ದರೂ ಅವರ ಸಂಶೋಧನೋತ್ಸಾಹದಲ್ಲಿಯೂ ಅವರ ಗೃಹಿಕೆಯ-ಲ್ಲಿಯೂ ಅವರಿಗೆ ತಿಳಿಯದಂತೆ ಬಣ್ಣವು ಕೂಡಿರುವುದು ಸಾಧ್ಯವಿದೆ.

(೨) ಅಷ್ಟು ಪ್ರಾಚೀನಕಾಲದ ಪೂರ್ವದ್ರಾವಿಡ ಭಾಷೆಯಲ್ಲಿ ಈಗಿನ ಕನ್ನಡ ಮುಂತಾದ ಶಬ್ದಗಳು ಇದ್ದಕ್ಕಿದ್ದಹಾಗೆ ಸಿಕ್ಕೇ ತೀರಬೇಕು ಎಂದು ಊಹಿಸುವುದು ತಪ್ಪು. ಅದು ಒಂದು ಯಾವುದೊ ಹೊಸದಾದ ಭಾಷೆಯೂ ಆಗಿರಬಹುದು. ಮೇಲಾಗಿ ಫಾದರರು ಈಗ ತಮಗೆ ಜ್ಞಾತವಿರುವ ಭಾಷೆಯ ಆಧಾರದಿಂದ ಆ ಅಜ್ಞಾತ ಭಾಷೆಯ ಕಡೆಗೆ ಹೊರಟಿರುವರು. ಅವರ ಗೃಹಿಕೆಯ ಮೆಟ್ಟಿಲುಗಳೆಲ್ಲ ಹುಸಿಯಾಗಿರುವುದು ಸಂಭವವಿದೆ.

(೩) ಬೇರೊಬ್ಬ ಸಂಶೋಧಕ ಮೇಧಾವಿಯು ನಾಳೆ ಹುಟ್ಟಿ, ತನ್ನದಾದ ಇನ್ನೊಂದು ಸೂತ್ರವನ್ನು ಕಂಡುಹಿಡಿದು ಇನ್ನೊಂದು ವಿಧವಾಗಿ ಭಾಷೆ-ಲಿಪಿಗಳ ಈ ಕೂಟ-ವನ್ನು ಬಿಡಿಸಿ ತೋರಿಸಬಹುದು. ಆತನ ಮೀಮಾಂ-ಸೆಯೂ ನಿರ್ಣಯವೂ ತೀರ ಭಿನ್ನವೆ ಆಗುವುದು ಶಕ್ಯವಿದೆ.

ಕನ್ನಡವೆ! ಬಡಪಾಯಿಯಾದ ಕನ್ನಡವೆ! ಒಬ್ಬ ಸಂಸ್ಕೃತ ಕವಿಯು ಹೆಣ್ಣಿನ ವಿಷಯದಲ್ಲಿಯೂ ಗಂಡಿನ ವಿಷಯ-ದಲ್ಲಿಯೂ ಹೇಳುವಂತೆ, ನಿನ್ನ ಚರಿತ್ರೆಯನ್ನೂ ಭಾಗ್ಯ-ವಿಲಾಸವನ್ನೂ ಅರಿಯುವವರಾರು ? ವಿಧಿಯು ನಿನ ಹಣೆಬರೆಹದಲ್ಲಿ ಏನೇನನ್ನು ಬರೆದಿರುವನೊ! ಒಮ್ಮೆ ನೀನು ಮುಗಿಲ ತುತ್ತುದಿಯಲ್ಲಿ ಮಿಂಚಿ ಮೆರೆಯುವೆ. ಇನ್ನೊಮ್ಮೆ ಪಾತಾಳಖಾತಕ್ಕೆ ಇಳಿದು ತುತ್ತುಳಿಸಿಕೊಳ್ಳುವೆ !

ಕನ್ನಡಿಗರಿರ ! ನೀವು ಗೋಳಿಡುವಂತೆ ನಿಮ್ಮನ್ನು ತುಳಿ-ದೊತ್ತಿದವರು ಹೆರವರು ! ನಿಮ್ಮನ್ನು ಮೇಲಕ್ಕೆತ್ತುವವರು ಹೆರವರೆ! ಕನ್ನಡದ ಈ ಆಗುಹೋಗುಗಳಲ್ಲಿ ನಿಮಗೆ ಯಾವ ಸಂಬಂಧವೂ ಇಲ್ಲವಷ್ಟೆ ? ನೀವು ಯಾವಾಗಲೂ ಯೋಗಿ-ಯಂತೆ ನಿರಾಮಯರು, ನಿರ್ಲಿಪ್ತರು, ನಿಶ್ಚಲರು ! ಅವಿ-ಶ್ರಾಂತ ಸಾಹಸಪಟ್ಟು ಮಹೆಂಜೊದಾರೊ-ಹರಪ್ಪದ ರಹಸ್ಯವನ್ನು ಪ್ರಕಟಗೊಳಿಸಿ ಕನ್ನಡದ ಮೇಲ್ಮೆ-ಯನ್ನು ಬೀರುವ ಒಬ್ಬ ಫಾದರ ಹೆರಾಸನಾದರೂ ನಿಮ್ಮಲ್ಲಿ ಹುಟ್ಟಿದನೆ? ಹೋಗಲಿ; ನಿಮ್ಮ ಕನ್ನಡದಲ್ಲಿ ಫಾದರ ಹೆರಾಸನು ಹುಟ್ಟಬೇಡ. ಫಾದರ ಹೆರಾಸನು ಮಹೆಂಜೊದಾರೊದಲ್ಲಿ ನಿಮ್ಮ ಕನ್ನಡವನ್ನು ಹುಟ್ಟಿಸಿದ ಮೇಲಾದರೂ ಆ ನಿಮ್ಮ ಕನ್ನಡದ ಮೂಲಸ್ಥಾನವನು ಪರೀಕ್ಷಿಸಲು, ನೋಡಿ ನಲಿಯಲು ಹಂಬಲಿಸುವ ಕನ್ನಡಿಗರಾದರೂ ಎಷ್ಟು ಜನರಿದ್ದಾರೆ? ಮಹೆಂಜೊ-ದಾರೋದ ಸಂಸ್ಕೃತಿಯನ್ನು ಕಂಡು ಮಾರ್ಶಲ್ ಪ್ರಭೃತಿಗಳು ಅಚ್ಚರಿಗೊಂಡು ಬೊಟ್ಟುಕಚ್ಚಿಕೊಂಡರು. ಮಹೆಂಜೊದಾರೊವನ್ನು ನಿರ್ಮಿಸಿದವರು ಮೂಲ ಕನ್ನಡಿಗರು ಎಂದು ಸಿದ್ಧಗೊಳಿಸಲು ಹೆರಾಸರು ಪಂಥ ಹಿಡಿದರು. ಕನ್ನಡಿಗರಾದ ನಮಗೆ ಇದೆಲ್ಲವೂ ಇನ್ನೂ ಕೆರೆಮರೆ, ಮಾಯದ ಮುಸುಕು, ಬಿಸಿಲುಗುದುರೆ!!!

CC-0. Jangamwadi Math Collection. Digitized by eGangotri

# ಶರಣಸಂದೇಶ

**ನೀವು ಹಿಂದುಗಳೋ?**

**ಹಾಗಾದರೆ ಜಾಗ್ರತೆ ಚಂದಾದಾರರಾಗಿರಿ !**

ಇದು ವಿಚಾರಕ್ರಾಂತಿಯ ವಾರಪತ್ರಿಕೆ

**ಸಂಪಾದಕರು:**

**ಶ್ರೀ. ಹರ್ಡೇಕರ ಮಂಜಪ್ಪನವರು**

ಹಿಂದೂಸಮಾಜಸುಧಾರಣೆ, ಹಿಂದೂ ಸಂಘಟನೆ, ಧಾರ್ಮಿಕ ಸತ್ಯಸಿದ್ಧಾಂತಗಳ ಪ್ರತಿಪಾದನೆ, ಶ್ರೀ ಬಸವಾದಿ ಪ್ರಮಥರ ತತ್ತ್ವಪ್ರಸಾರಣೆ ಮತ್ತು ರಾಜಕೀಯ ಗುಣದೋಷ ವಿಮರ್ಶನೆ ಇವೇ ಈ ಪತ್ರಿಕೆಯ ಪಂಚಪ್ರಾಣ.

**ಮ್ಯಾನೇಜರ್, ಶರಣಸಂದೇಶ**
**ಪೋ. ಆಲಮಟ್ಟಿ, ಜಿ. ವಿಜಾಪೂರ.**

# ಕಲಿಯುಗ

ಕಾಮವಿಜ್ಞಾನ, ಆರೋಗ್ಯವಿಜ್ಞಾನ, ಸಮಾಜ-ವಿಜ್ಞಾನಗಳಿಗೆ ಮೀಸಲಾದ, ಕನ್ನಡಸಾಹಿತ್ಯದ ಇತಿಹಾಸದಲ್ಲೇ

**ಪ್ರಥಮ ಮಾಸಪತ್ರಿಕೆ**



ಸಂಪಾದಕರು:
ಆಯುರ್ವೇದವಿದ್ವಾನ್

**ಡಾ॥ ಎಂ. ಗೋಪಾಲಕೃಷ್ಣರಾಯರು**

ವಾರ್ಷಿಕ ಚಂದಾ ೧॥ ರೂ. ಬಿಡಿಸಂಚಿಕೆ ೨ ಆಣೆ

**ಕಲಿಯುಗ ಕಾರ್ಯಾಲಯ, ಧಾರವಾಡ.**

೨ನೆಯ ವರ್ಷದ ಯೋಜನೆ! ಹೊಸ ವರ್ಷದ ಪ್ರಾರಂಭ!!

# ಒಂದೇ ಒಂದು ವರ್ಷದಲ್ಲಿ

ಅಖಿಲ ಕರ್ನಾಟಕದ ಮನವನ್ನೆಳೆದುಕೊಂಡ

**ಅರವಿಂದ ಗ್ರಂಥಮಾಲೆ**

ಸಂಪಾದಕರು—ಮಧುರಚೆನ್ನ

ವಿಚಾರಪ್ರಚುರ ವಾಙ್ಮಯವನ್ನು ಒದಗಿಸುವ ಹಾಗೂ ಸರಸ ಸಾಹಿತ್ಯವನ್ನು ಸೂರೆಮಾಡುವ ಆರು ಪುಸ್ತಕಗಳಲ್ಲದೆ ಮೇಲೊಂದು ಕಾಣಿಕೆಯ ಪುಸ್ತಕ ಕೊಡಲಾಗುವದು. ಅಚ್ಚುಮೆಚ್ಚಿನ ಅಚ್ಚು-ಕಟ್ಟುಗಳಿಂದ ಮನೋಹರವಾದ ಪುಸ್ತಕಗಳಿಗಾಗಿ ಇಂದೇ ಚಂದಾದಾರರಾಗಿರಿ. ಹಿಂದಿನ ಪುಸ್ತಕಗಳಿಗೆ ಎಪ್ರಿಲದಿಂದ ಹೊಸವರ್ಷದ ಪ್ರಾರಂಭವಾಯಿತು.

ವಾರ್ಷಿಕ ಚಂದಾ (ಅಂಚೆವೆಚ್ಚಸೇರಿ) ೩—೮—೦

**ಅರವಿಂದ ಗ್ರಂಥಮಾಲೆ, ಪೋ-ಹಲಸಂಗಿ**
**ಜಿಲ್ಲಾ ವಿಜಾಪುರ**

೫೬ ವರ್ಷಗಳಿಂದ ದಿನದಿನಕ್ಕೆ ಹೆಚ್ಚುತ್ತಲಿರುವ

**ಪ್ರಸಿದ್ಧಿಗೆ**

ಏನಾದರೂ ಮಹತ್ತ್ವವಿರುತ್ತಿದರೆ, ನೀವು

## ಆತಂಕನಿಗ್ರಹ ಗುಳಿಗೆ

ಗಳನ್ನೇ ಉಪಯೋಗಿಸುವದು ವಿಹಿತ.

ಈ ಗುಳಿಗೆಗಳಿಂದ ಶಾಶ್ವತ ಯೌವನವೂ ಶಕ್ತಿಯೂ ಬರುವವು.

**೩೨ ಗುಳಿಗೆಗಳ ಡಬ್ಬಿಗೆ ರೂ. ೧-೦-೦**

ಆರೋಗ್ಯ ವೈಭವ, ಸಮೃದ್ಧಿಗಳ ಮಾರ್ಗ ತೋರಿಸುವ ಕಾಮಶಾಸ್ತ್ರವನ್ನೋದಿರಿ. ಅಂಚೆಯ ವೆಚ್ಚವಿಲ್ಲದೆ ಪುಕ್ಕಟೆಯಾಗಿ ದೊರೆಯುವದು.

ಇಂದೇ ಬರೆಯಿರಿ:—

**ಆತಂಕನಿಗ್ರಹ ಫಾರ್ಮಸಿ,**
೨೬ ಬ್ರಾಡ್ವೇ, ಮದ್ರಾಸ

CC-0. Jangamwadi Math Collection. Digitized by eGangotri

# ಕಾಗೆಯ ಮೀಮಾಂಸೆ

 ( ವಿನೋದ-ಧ್ವನಿಬಂಧ ) 

ಲೇಖಕರು: ಶ್ರೀಮಾನ್ " ಶ್ರೀರಂಗ "

'ಪರಪುಟ್ಟ' ಕೋಗಿಲೆಯ ಮರಿಯನ್ನು ಕಾಗೆಯು ಉಣ್ಣಿಸಿ ಬೆಳಸುವುದು! ಪಂಢರಪುರದಲ್ಲಿ ಅನಾಥ–ಬಾಲಕಾಶ್ರಮಗಳನ್ನು ಸ್ಥಾಪಿಸುವುದಕ್ಕೆ ಮುಂಚೆ ಸಾವಿರಾರು ವರ್ಷಗಳಿಂದ **ಕಾಕಾಶ್ರಮಗಳು** ನಡೆದಿರುವುವು!.... ಈಗಿನ ರೆಡಿಯೊ, ವಾಯರ್‌ಲೆಸ್, ಸ್ಪಿರಿಚುಯಾಲಿಝುಂಗಳಿಂದ ಸಾಧ್ಯವಾಗ–ದಿದ್ದುದು ' ಕಾಕಪಿಂಡ ' ಗಳಿಂದ ಸಾಧ್ಯವಾಗಿದೆ!.... ನಗರಸ್ವಚ್ಛತೆಯ ಕಾರ್ಯದರ್ಶಿ ಕಾಕ–ಮಹಾಶಯ! **ಕಾಕ ಬ್ಲ್ಯಾಕ್-ಕ್ರಾಸ್ ಪಥಕ** ಹೆಸರಾದುದು! ಇಂತಹ ಇಹ–ಪರಜ್ಞಾನಿ, ಜಾತಿಭೇದಾತೀತ, ಲೋಕೋಪಕಾರಿ ಕಾಗೆಪ್ಪನವರಿಗೇ ನಗರ ಸಭೆಗೆ ಸದಸ್ಯರನ್ನು ಆರಿಸಿಕಳು–ಹಿಸುವ ಹಕ್ಕನ್ನು ಕೊಟ್ಟು ಋಣಮುಕ್ತರಾಗಬೇಕಾದುದು ನಮ್ಮ ಪವಿತ್ರತಮ ಕರ್ತವ್ಯವು.



ಅಣ್ಣ-ತಮ್ಮದಿರು ಜಗಳಾಡುವುದೆಂದರೆ ಸನಾತನ ವೈದಿಕ ಧರ್ಮಕ್ಕಿಂತ ಪುರಾತನವಾದ ಪದ್ಧತಿ; ಅದೊಂದು ನಿಸರ್ಗದ ನಿಯಮು ಎನುವಂತಿದೆ. ಆದರೆ ಮೊನ್ನೆ 'ಆ ಅಣ್ಣತಮ್ಮದಿರು ಕಾಗೆ ಕಚ್ಚಾಡಿದ ಹಾಗೆ ಕಡಿದಾಡಿದರು' ಎಂದು ನನ್ನ ಗೆಳೆಯ ನುಡಿದ. ನನಗೆ ಯಾಕೋ— ಯಾವ ವೃತ್ತಪತ್ರದಲ್ಲಾದರೂ ಹೊಗಳಿದ್ದರೊ ಏನೊ ನನ್ನನ್ನು!— ಮನನೊಂದವನಾದುದರಿಂದ ನನ್ನ ಗೆಳೆಯನ ಮಾತಿಗಾಗಿ ಕೋಪ ಬಂದಿತು. ಆ ಅಣ್ಣ-ತಮ್ಮದಿರ ಜಗಳದಲ್ಲಿ ಕಾಗೆಗಳದೇನು ಸಂಬಂಧ? ಅಣ್ಣ-ತಮ್ಮದಿರು ಒಬ್ಬರೊಬ್ಬರಿಗೆ ಆಡಿರಬಹುದಾದ ಅಪಶಬ್ದಗಳನ್ನು ಕಾಗೆಗಳು ಕನಸು-ಮನಸುಗಳಲ್ಲೂ ಉಪಯೋಗಿಸುತ್ತಿರಲಿಕ್ಕಿಲ್ಲ. ಅಣ್ಣ-ತಮ್ಮದಿರಲ್ಲಿದ್ದ ಸ್ವಾರ್ಥಮದಾಂಧತೆಯು ಕಾಗೆಗಳಲ್ಲಿರುವುದಾದರೂ ಶಕ್ಯವಾದೀತೆ? ಒಂದು ತುತ್ತಿಗಾಗಿ ಕೆಲವು ಕಡಿದಾಡಿದುವು ಎಂದು ತಿಳಿಯೋಣ, ಆದರೆ ಮರುಗಳಿಗೆಯಲ್ಲಿ ಮತ್ತೊಂದು ತುತ್ತಿಗಾಗಿ ಅವೇ ಕಾಗೆಗಳು ಮತ್ತೆ ಕೂಡಿ ಬರುವುವು. ಒಮ್ಮೆ ಕಡಿದಾಡಿದ ಅಣ್ಣ-ತಮ್ಮದಿರು ಇನ್ನೊಂದು ಕೆಲಸಕ್ಕಾಗಿ ಹಾಗೆ ಎಂದಾದರೂ ತಮ್ಮತಮ್ಮೊಳಗೆ ಕೂಡಬಹುದೆ? ಸಾಹಿತ್ಯದಲ್ಲಂತೂ ಕಾಗೆಗೆ ಪರಪೋಷಕ ಎಂಬ ಬಿರುದು. ಕೋಗಿಲೆ ತನ್ನ ಮರಿಯನ್ನು ಕಾಗೆಯ ಗೂಡಿನಲ್ಲಿಟ್ಟು ಹೋಗುವುದಂತೆ, ತಾಯಿ ಕಾಗೆಯು ಆ ಕೋಗಿಲೆಮರಿಯನ್ನು ಉಣ್ಣಿಸಿ ಬೆಳೆಸುವುದಂತೆ! ಪಂಢರಪುರದಲ್ಲಿ ಅನಾಥಬಾಲಕಾಶ್ರಮವನ್ನು ಸ್ಥಾಪಿಸುವದಕ್ಕಿಂತ ಎಷ್ಟೋ ಸಾವಿರಾರು ವರ್ಷಗಳ ಮುಂಚಿನಿಂದ ಕಾಕಾಶ್ರಮಗಳು ನಡೆದಿರುವುವು. ಮನೆಯಲ್ಲಿ ಮುದಿತಾಯಿ-ತಂದೆಗಳಿಗೆ, ತನ್ನ ಸಹೋದರರ ಹೆಂಡಿರು-ಮಕ್ಕಳಿಗೆ ಅನ್ನ-ಆಸರಗಳನ್ನು ಕೊಡಲು ತಕರಾರು ಹೂಡುವ ಅಣ್ಣತಮ್ಮದಿರು ಕಾಗೆಗಳಿಗೆ ಯೋಗ್ಯತೆಯಲ್ಲಿ ಎಂದಿಗಾದರೂ ಸರಿಗಟ್ಟುವರೆ?

ಇಷ್ಟೊಂದು ಘನತೆಯು ತನ್ನಲ್ಲಿದೆಯೆಂದೆ ಕಾಗೆಯು ಕಿರುಬುದ್ಧಿಮಾನವನ ಬಿರುನುಡಿಗಳಿಗೆ, ಛುಚ್ಚುವಾತುಗಳಿಗೆ ಲಕ್ಷ್ಯವನ್ನೆ ಕೊಟ್ಟಿಲ್ಲ. ಮೊನ್ನೆ ಒಂದು ಕಡೆ 'ಕರ್ನಾಟಕ ಏಕೀಕರಣ' ಎಂಬ ವಿಷಯದಮೇಲೆ ಒಂದು ಚರ್ಚೆಯನ್ನು ನಡೆಸಲಾಯಿತು. ಅದೇ ಸಮಯಕ್ಕೆ ಅಲ್ಲಿ ಒಬ್ಬ ಕರ್ನಾಟಕ ಮುಂದಾಳು—ಅಲ್ಲಲ್ಲ, ತಪ್ಪಿದೆ ಕ್ಷಮೆ ಇರಲಿ— ಕರ್ನಾಟಕದಲ್ಲಿ ಹುಟ್ಟಿ-ಬೆಳೆದ ಅಖಿಲಭಾರತೀಯ ಮುಂದಾಳು ಅಕಸ್ಮಾತ್ತಾಗಿ ಬಂದರು. ಜನರ ಆಗ್ರಹ-

CC-0. Jangamwadi Math Collection. Digitized by eGangotri

ಕ್ಕಾಗಿ ಅವರೂ ಚರ್ಚೆಯಲ್ಲಿ ಭಾಗವಹಿಸಿ 'ಕರ್ನಾಟಕ' ಎಂಬ ಅಭಿಮಾನವು ಸಣ್ಣದು, ನಿಮ್ಮ ಹೃದಯವು ದೊಡ್ಡದು, ಅಂತಹ ದೊಡ್ಡದಾದ ಹೃದಯಕ್ಕೆ ದೊಡ್ಡದಾದ ಭಾರತದ ಅಭಿಮಾನವೇ ಇರತಕ್ಕದ್ದು. ಇದಲ್ಲದೆ ಕರ್ನಾಟಕವು ಏಕೀಕೃತವಾಯಿತೆಂದರೆ ನಮ್ಮನಮ್ಮೊಳಗೆ ಜಾತಿಯ ಜಗಳವಾಗುವುದು, ಅದನ್ನು ಬಿಡಿಸಲು ಹೊರಗಿನವರು ಬರುವಂತಿಲ್ಲ—ಮುಂತಾಗಿ ಮುಕ್ಕಾಲು ಗಂಟೆ ಆವೇಶಯುಕ್ತವಾಗಿ ಭಾಷಣ ಮಾಡಿದರು. ಕೊನೆಗೆ 'ಕರ್ನಾಟಕವು ಏಕೀಕೃತವಾಗಲೇಬೇಕು' ಎಂಬ ಅಭಿಪ್ರಾಯವು ಬಹುಮತಸಮ್ಮತವಾಯಿತು. ಅಖಿಲಭಾರತೀಯ ವ್ಯವಹಾರದಲ್ಲಿ ಬಹುಮತಕ್ಕೆ ಮಾನಕೊಡುವ ಮುಂದಾಳು ಒಮ್ಮೆಲೆ ತಿರಸ್ಕಾರದಿಂದ ಮೂಗು ಏರಿಸಿ 'ಇದೇನು—ಕಾಕತಾಲೀಯ ನ್ಯಾಯ!' ಎಂದರು. ನಮ್ಮಲ್ಲಿ ಕೆಲವರಿಗೆ ಸಿಟ್ಟು ಬಂದಿತು. ನನಗೂ ಸಿಟ್ಟು ಬಂದಿತು, 'ಕಾಗೆಗಳ ಅಪಮಾನವನ್ನು ಇವರು ಮಾಡಿದರಲ್ಲ' ಎಂದು ನನ್ನ ಸಿಟ್ಟು. ಕಾಗೆ ಕೂಡುವುದಕ್ಕೂ ಟೊಂಗೆ ಮುರಿದುಬೀಳುವುದಕ್ಕೂ ಸಮಯ ಕೂಡಿಬಂದರೆ ಕಾಕತಾಲೀಯ ನ್ಯಾಯ; ಎಂದರೆ ಟೊಂಗೆಯು ಮುರಿದು ಬಿದ್ದುದರ ಶ್ರೇಯಸ್ಸು ಕಾಗೆಗೆ ಇಲ್ಲವಂತೆ! ಇಂತಹ ಹುಚ್ಚು ಕಲ್ಪನೆಯವರೊಡನೆ ನಾನು ವಾದಿಸಲಾರೆ. ಮುರಿದು ಬೀಳಲಾದ ಟೊಂಗೆಯ ಮೇಲೆ ಯಾವ ಗಂಡಸು ಕುಳಿತುಕೊಳ್ಳುವ ಧೈರ್ಯ ಮಾಡುವನು? ಕಾಗೆಪ್ಪನಲ್ಲಿದ್ದ ಧೈರ್ಯವು ಈ 'ಸೋಗಪ್ಪ'-ನವರಿಲ್ಲಿದೆಯೆ? ಮಾತಿನಲ್ಲಿ ಔಚಿತ್ಯವಿರಲಿ. ಕಾಗೆಯು ಉದಾರಮನಸ್ಸಿನಿಂದ ಸುಮ್ಮನಿರುವುದೆಂದು ಮನಬಂದಂತೆ ಮಾತನಾಡಬಹುದೆ?

ಇಂದಿನ ಸತ್ಯ-ಅಹಿಂಸೆಗಳ ಯುಗದಲ್ಲಿ ಈ ಅನ್ಯಾಯವನ್ನು ತೆಗೆದೊಗೆಯಲೇಬೇಕೆಂದು ನನ್ನ ಅಭಿಪ್ರಾಯ. ಇಷ್ಟೆ ಅಲ್ಲದೆ, ಇದು ವರೆಗೆ ಬಗೆದ ಅನ್ಯಾಯಕ್ಕಾಗಿ ಪ್ರಾಯಶ್ಚಿತ್ತ ರೂಪವಾಗಿ ಕೆಲವು ವಿಶಿಷ್ಟ ಹಕ್ಕುಗಳನ್ನೂ ಕಾಗೆಗಳ ವಿಷಯವಾಗಿ ಒಪ್ಪಿಕೊಳ್ಳುವದು ನಮ್ಮ ಧರ್ಮ. ಹಿಂದಿನ ಧರ್ಮದಲ್ಲಿ ಕೂಡ ಕಾಗೆಗೆ ಎಷ್ಟೋ ವಿಶಿಷ್ಟ ಅಧಿಕಾರಗಳಿವೆ. ಸತ್ತವರ ಅರಿಕೆ-ಬಯಕೆಗಳನ್ನು ಇದ್ದವರಿಗೆ ತಿಳಿಸುವ ಅಧಿಕಾರ ಮತ್ತು ಯೋಗ್ಯತೆ ಸಂಪ್ರದಾಯದಿಂದ ಕಾಗೆಗೆ ಸಲ್ಲುತ್ತಿದೆ. ಈ ಹೊತ್ತಿನ ರೇಡಿಯೊ, ವಾಯರ್‌ಲೆಸ್, ಸ್ಪಿರಿಚುಯಾಲಿಝಂ ಮೊದಲಾದ ವಿಜ್ಞಾನ ಸಾಧನಗಳಿಂದಲೂ ಶಕ್ಯವಾಗದ ಸಾಹಸವೂ ಸಿದ್ಧಿಯೂ ಕಾಕಪಿಂಡದಿಂದ ಶಕ್ಯವಾಗಿದೆ ಎಂಬುದು ಯಾವ ಧರ್ಮಾಭಿಮಾನಿಗೆ ಅರಿಯದ ವಿಷಯ? ಇಂದು ನಾವು ಈ ಅಧಿಕಾರವನ್ನು ಕಾಯಿದೆಯಿಂದ ಸ್ಥಿರಪಡಿಸಬೇಕಲ್ಲದೆ ಆ ಅಧಿಕಾರದ ಕ್ಷೇತ್ರವನ್ನೂ ವಿಸ್ತಾರಗೊಳಿಸಬೇಕು. ಉದಾಹರಣಾರ್ಥವಾಗಿ, ಇದ್ದವರ ಮನದ ಬಯಕೆಗಳನ್ನು ತಿಳಿದುಕೊಳ್ಳಲೂ ಕಾಗೆಗೆ ಪಿಂಡದ ದಾನವನ್ನು ಮಾಡಬೇಕು; ಅರ್ಥಾತ್, ಸರಕಾರವು ಪ್ರತಿಯೊಬ್ಬ ನಾಗರಿಕನಿಗೆ ಏನಿಲ್ಲೆಂದರೂ ಒಂದು ಅನ್ನದ ಪಿಂಡವಾದರೂ ದೊರೆಯುವಂತೆ ಮಾಡಬೇಕಾಗುವುದು. ಆದರಂತೆಯೆ ಪ್ರತಿಯೊಬ್ಬನು ತನ್ನ ಉತ್ಪನ್ನ ಮತು ಸಂಬಳಗಳಿಗೆ ಯೋಗ್ಯವೆನಿಸುವಂತೆ ಮುತ್ತುವ ಕಾಗೆಗಳಲ್ಲಿ ಎಷ್ಟಕ್ಕೆ ಸಾಧ್ಯವೊ ಅಷ್ಟು ಕಾಗೆಗಳಿಗೂ ಒಂದೊಂದು ಅನ್ನದ ಪಿಂಡವನ್ನು ಕೊಡಲೇಬೇಕು ಎಂಬ ನಿಯಮವಿರತಕ್ಕದ್ದು. ಕಾಗೆಗಳು ಸ್ವಾರ್ಥಕ್ಕಾಗಿ ಮುತ್ತುವುದಿಲ್ಲ ಎಂಬುದನ್ನು ಲಕ್ಷ್ಯದಲ್ಲಿಡತಕ್ಕದ್ದು. ಪರಜನರ ಸಲುವಾಗಿ ತಮ್ಮ ಜೀವನವನ್ನು ಎರವಾಗಿ ಇಟ್ಟ ಮಹಾನುಭಾವಿಗಳು 'ಕಾಗೆ ಕಾಕಾ ಎಂದು' ಎಂದು ನಮ್ಮ ಪಠ್ಯಪುಸ್ತಕದಲ್ಲಿ ಕವಿ ಹೇಳಿದಂತೆ, ಬೆಳಗಿನಲ್ಲಿ ಜಾಗ್ರತೆಯಾಗಿ ನಮ್ಮನ್ನು ಎಚ್ಚರಗೊಳಿಸುವ ಕೆಲಸವನ್ನು ಹಿಡಿದು ಸಾಯಂಕಾಲದ ವರೆಗೆ ನಮ್ಮೆಲ್ಲರ ಹಿತಕ್ಕಾಗಿಯೆ ಹೆಣಗುವ ಈ ಪರೋಪಕಾರಿಗಳಿಗೆ ಅನ್ನ-ಆಸರವಿಲ್ಲದಿರಲು, ನಾವು — ಹುಲುಮನುಜರು—ಸಾವಿರಗಟ್ಲೆ ಸಂಪಾದನೆ ಮಾಡಿ ಸುಖಲೋಲುಪರಾಗಬಹುದೆ? ದೇಶ-ಪ್ರಾಂತ-ಭಾಷೆ ಮೊದಲಾದ ಯಾವ ಸಂಕುಚಿತ ಭಾವನೆಗೂ ಒಳಗಾಗದ ವಿಶಾಲಮತಿಗಳು ಇವರು. ಅದಕಾಗಿ ನನ್ನ ದೃಷ್ಟಿಯಿಂದ ಪ್ರತಿಯೊಬ್ಬ ನಾಗರಿಕನ ಆದಾಯದಿಂದ ಇಂತಿಷ್ಟು ಒತ್ತಾಯವಾಗಿ ತೆಗೆದುಕೊಂಡು ಕಾಕಪಿಂಡಗಳ ಅವ್ಯಾಹತ ವ್ಯವಹಾರವನ್ನು ನಡೆಸಲಿಕ್ಕೂ ಮೇಲ್ವಿಚಾರಣೆಗೂ ಒಂದು ಡಿಪಾರ್ಟಮೆಂಟನ್ನು ಏರ್ಪಡಿಸುವುದು ಉಚಿತವೆಂದು ತೋರುತ್ತದೆ.

ಮೇಲಿನ ಮಾತುಗಳಿಂದ ಕಾಕಮಹಾಶಯರು ಕೇವಲ ನಮ್ಮಿಂದ ಅನ್ನವನ್ನು ದೊರಕಿಸಲು ಸೇವೆಯ ಸೋಗನ್ನು ಹಾಕುವರೆಂದು ಮಾತ್ರ ಯಾರೂ ತಿಳಿಯಕೂಡದು. ನಿಜವಾಗಿ ನೋಡಿದರೆ ಸಂನ್ಯಾಸವೃತ್ತಿ ಅವರದು. ನಗರದಲ್ಲಿ ಬಂದು ವಾಸಮಾಡುವುದು ಲೋಕಸಂಗ್ರಹಕ್ಕಾಗಿ. ಹಳ್ಳಿ-ಪಳ್ಳಿಗಳಲ್ಲಿ, ಗಿಡ-ಗುಡ್ಡಗಳಲ್ಲಿ ಅಲೆದಾಡುವ ಕಾಕರಾಯರು ಯಾವಾಗಲೂ ಸ್ವತಂತ್ರೋಪಜೀವಿಗಳು. ನಗರದಲ್ಲಿರುವವರಿಗೆ ಮಾತ್ರ ದಣಿದೆನೆಂದರೆ ಬಿಡುವಿಲ್ಲ, ಇನ್ನು ಉಪಜೀವನಕ್ಕಾಗಿ ದುಡಿಯುವುದೆಂತು? ಆದುದರಿಂದ

CC-0. Jangamwadi Math Collection. Digitized by eGangotri

ನಗರವಾಸಿ ಕಾಕಮಹಾಶಯರ ಸೇವೆ ನಮ್ಮ ಹೆಚ್ಚಿನ ಹೊಣೆಯಾಗಿರಬೇಕು. ಅವರಿಗೆ ಮೊದಲು ಯೋಗ್ಯ ಸ್ಥಾನ-ಮಾನಗಳನ್ನುಕೊಟ್ಟು, ಇದು ವರೆಗೆ ನಾವು ತೋರಿಸಿದ ಪಾಪಬುದ್ಧಿಗಾಗಿ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಬೇಕು. ಪ್ರತಿಯೊಂದು ನಗರದಲ್ಲೂ ನಗರಸಭೆಗೆ ಸದಸ್ಯರನ್ನು ಆರಿಸಿ ಕಳುಹಿಸುವ ಹಕ್ಕನ್ನು ಕಾಗೆಪ್ಪನವರುಗಳಿಗೆ ಕೊಡಬೇಕು. ನಗರವ್ಯವಸ್ಥೆಯ ಅನೇಕ ಹೊಣೆಗಳು ಈಗಲೂ ಅವರ ತಲೆಯ ಮೇಲೆಯೆ ಇವೆ. ನಮ್ಮ ನೆರೆಮನೆಯವರಿಗೆ ನಮ್ಮಲ್ಲಿ ತುಂಬಾ ಸ್ನೇಹ. ಅವರ ಮನೆಯೊಳಗಿನ ಬೆಕ್ಕು-ನಾಯಿ-ದನ-ಕರುಗಳು ಕೂಡ ದಿನಾಲು ನಮ್ಮ ಕಡೆ ಬಂದು, ನಮ್ಮನ್ನು ಕಂಡು ಕೇಳಿಕೊಂಡು ಹೋಗುವುವು. ಇಷ್ಟೇಕೆ? ಅವರ ಮನೆಯೊಳಗಿನ ಅಚೇತನ ಪದಾರ್ಥಗಳು ಕೂಡ—ಉದಾಹರಣಾರ್ಥವಾಗಿ ಎಂಜಲೆಲೆಗಳು—ನಮ್ಮ ಮನೆಯೊಳಗೆಯೆ ಬಂದು ಕಾಲ ಕಳೆದು ಸ್ನೇಹ-ಸಂಬಂಧ ಬೆಳೆಸುತ್ತಿರುವುವು. ಆ ಎಂಜಲೆಲೆಯು, ಮೊದಲನೆಯ ಸಾರೆ ಅತ್ತೆಯ ಮನೆಗೆ ಹೋಗುವ ವಧುವು ತವರ್ಮನೆಯಿಂದ ಕಾಲೆತ್ತದಂತೆ ನಮ್ಮ ಮನೆಯಿಂದ ಕಾಲೆತ್ತಲು ಒಲ್ಲೆನ್ನುತ್ತಿರುವುದು. ಆಗ ಕಾಕಮಹಾಶಯನೆ ಬರಬೇಕು, ತನ್ನ ಕೌಶಲ್ಯದಿಂದ ಅದರ ಶೋಕಭಾರವನ್ನು ಕಡಿಮೆ ಮಾಡಬೇಕು, ಆ ಮೇಲೆ ಹರ್ಷದಿಂದ ಹಗುರಾಗಿ ಅದು ಕುಣಿಯುತ್ತ ಹೊರಡಬೇಕು. ಇದು ಕಾಕಮಹಾಶಯನ ನಾಗರಿಕತೆಯ ದ್ಯೋತಕವಲ್ಲವೆ? ನಗರದ ಸ್ವಚ್ಛತೆಯ ಮೇಲಂತೂ ಕಾಗೆಯು ಕಣ್ಣಿನಿಂದಾದಷ್ಟು 'ದೇಖರೇಖಿ'ಯು ಮತ್ತೆ ಯಾರಿಂದಲೂ ಆಗುವಂತಿಲ್ಲ. ಅದೊ—ಅಲ್ಲಿ ಯಾರೊ ಮನೆಮುಗ್ಗುಲಲ್ಲಿ ಮುಸುರೆ ತಿಕ್ಕಿ ಹೊಲಸಿನ ಹೊರೆಯನ್ನು ಹತ್ತಿರದಲ್ಲಿಯೆ ಕೂಡಿಸುತ್ತಿದ್ದಾರೆ. ಹೀಗೊ! ನಡೆಯಿತು ನಮ್ಮ ಕಾಕಸ್ವಯಂಸೇವಕ ಸಮೂಹ. ಅದೊ—ಆ ಮನೆಯ ಮುಂದೆ ಬೆಕ್ಕೊಂದು ಸತ್ತು ಬಿದ್ದು ಸುತ್ತಲಿನ ಹವೆ ದುರ್ಗಂಧಮಯವಾಗುತ್ತಿದೆ. ಹೀಗೋ! ನಡೆಯಿತು ನಮ್ಮ ಕಾಕ ಬ್ಲ್ಯಾಕ್-ಕ್ರಾಸ್ ಪಥಕ. ಅದೊ—ಅಲ್ಲಿ ಯಾರೊ ಕಟುಕರು ಅತ್ಯಂತ ನಿರ್ದಯರಾಗಿ ಆ ಟಾಂಗಾದ ಕುದುರೆಯ ಬೆನ್ನಿಗೆ ರಕ್ತ ಸುರಿಯುವಂತೆ ಹೊಡೆದಿದ್ದಾರೆ. ಹೀಗೊ? ನಡೆಯಿತು ನಮ್ಮ ಕಾಕವೈದ್ಯನ ಚಂಚುಪ್ರವೇಶದ ಇಂಜೆಕ್ಶನ್. ಒಟ್ಟಾರೆ ಇಂದಿನ ಸಮಾಜಸುಧಾರಕರಿಗೂ ಸಾಮಾಜಿಕ ನಾಟಕಕಾರರಿಗೂ ದೋಷಗಳನ್ನಾಯ್ದು ಲಕ್ಷ್ಯಕ್ಕೆ ತರುವಲ್ಲಿ ಕಾಕಮಹಾಶಯನು ಆದರ್ಶಪುರುಷನೆಂದು ಹೇಳಲು ಅಭ್ಯಂತರವಿಲ್ಲ. ಇಂತಹ ಕಾಕಸಂಘಗಳಿಗೆ ಸದಸ್ಯನನ್ನು ಆರಿಸಿ ಕಳುಹಿಸುವ ಹಕ್ಕನ್ನು ಕೊಡಿಸಿದರೆ ನಮ್ಮ ನಗರಗಳ ಭಾಗ್ಯವೆ ತೆರೆಯುವುದೆಂದು ಹೇಳಬಹುದು. ಇಷ್ಟೇಕೆ? ತಮ್ಮ ಸದಸ್ಯನನ್ನು ಆರಿಸುವಾಗ ಚುನಾವಣೆಯ ಉತ್ತಮ ಮಾದರಿಯನ್ನೆ ನಮ್ಮ ಮುಂದಿಡಬಹುದು ಈ ಕಾಕಸಂಘಗಳು. ಇದಲ್ಲದೆ ಕಾಕಗಳಿಗೆ ಯಾವಾಗಲೂ ಮುಂದಿಯ ಅನ್ನ-ಆಸ್ತಿಯ ವ್ಯವಸ್ಥೆ-ವಿನಿಯೋಗಗಳನ್ನು ಮಾಡುವ ರೂಢಿ ಇದ್ದುದರಿಂದ ಸ್ವಾರ್ಥ-ಪರಾರ್ಥ ಭೇದವು ಅವುಗಳಲ್ಲಿಲ್ಲ. ಇದಕ್ಕೂ ಹೆಚ್ಚಿನದೆಂದರೆ ಜಾತಿ-ಆಚಾರಗಳ ಭೇದ-ಬುದ್ಧಿಯು ಅವುಗಳಲ್ಲಿಲ್ಲ. ಒಂದೇ ಬಣ್ಣದ ವ್ಯಕ್ತಿಗಳು. ಬಂದು ನಿಂತರೆ ಕಪ್ಪು ಸಮವಸ್ತ್ರಗಳನ್ನು ತೊಟ್ಟು ನಿಂತ ಫಾಸಿಸ್ಟ (Fascist) ಮತದ ಮೂರ್ತಿಯಂತೆ ಕಾಣಬಹುದು.

ನಾನು ಹೇಳುವುದು ಯಾರಿಗಾದರೂ ಅತಿಶಯೋಕ್ತಿ ಎನಿಸುತ್ತಿದ್ದರೆ ಅವರು ಸ್ವಲ್ಪ ವಿಚಾರ ಮಾಡಿ ನೋಡಲಿ. ಇಂದಿನ ಪ್ರತಿಯೊಂದು ನಗರಸಭೆಯಲ್ಲಿ ಒಬ್ಬನಾದರೂ ಕಾಕಸದಸ್ಯನಿರುತ್ತಿದ್ದರೆ ಆಡಳಿತೆಯಲ್ಲಿ ಒಮ್ಮೆಲೆ ಎಂತಹ ಕ್ರಾಂತಿಯಾಗುವುದೆಂಬುದನ್ನು ಸಯುಕ್ತಿಕವಾಗಿ ಊಹಿಸಿ ನೋಡಲಿ. ಉದಾಹರಣಾರ್ಥವಾಗಿ ಒಬ್ಬನೇ ಕಾಕಸದಸ್ಯನಿದ್ದಾನೆಂದು ತಿಳಿಯುವಾ. ಏನಾಗುವುದು ಬಲ್ಲಿರಾ? ಏಕಮತದಿಂದ ಅವನು ನಗರಸಭೆಯ ಅಧ್ಯಕ್ಷನಾಗುವನು. ಪ್ರತಿಯೊಬ್ಬ ಸದಸ್ಯನು ಜಾತಿ-ಮತ-ಪಂಥಗಳ ಭೇದವಿಲ್ಲದೆ ಕಾಕರಾಯನಿಗೆಯೆ ತನ್ನ ಮತವನ್ನು ಕೊಡುವನು. ಕಾಕವು ತನ್ನ ಬಲವಾಗಿರಬೇಕೆಂಬ ಅಭಿಲಾಷೆಯು ಪ್ರತಿಯೊಬ್ಬ ಭಾರತೀಯನಿಗೆ ಇಲ್ಲವೆ? ಆದುದರಿಂದ ಇದಿರಾಳು ಇಲ್ಲದಲೆ ಕಾಕರಾಯನು ಅಧ್ಯಕ್ಷನಾಗಿ ಆರಿಸಲ್ಪಡುವುದು ನಿರ್ವಿವಾದ-ವಾದ ಮಾತು. ಅಧ್ಯಕ್ಷನಾದುದೊಂದೆ ತಡ, ಕಾರ್ಯಕ್ಕೆ ತೊಡಗುವನು; ಕ್ಷಣಾರ್ಧದಲ್ಲಿ ವಿಹಂಗಮದೃಷ್ಟಿಯಿಂದ ಕಾರ್ಯಕ್ಷೇತ್ರವನ್ನು ನಿರೀಕ್ಷಿಸುವ ಅಗಾಧ ಸಾಮರ್ಥ್ಯವಿದೆ ಅಧ್ಯಕ್ಷಕಾಕನಿಗೆ. ತನ್ನದು ಮಾನವಜಾತಿಯಲ್ಲ—ಅದೇಕೆ? ಯಾವ ಜಾತಿಯೂ ಅಲ್ಲ—ಆದುದರಿಂದ ನಿಷ್ಪಕ್ಷಪಾತಬುದ್ಧಿಯಿಂದಲೆ ಅಧ್ಯಕ್ಷಕಾಕನು ವ್ಯವಹರಿಸುವನು. ಇನ್ನೆಂತಹ ಕ್ರಾಂತಿ ಬೇಕು ಸಂಕುಚಿತದೃಷ್ಟಿಯ ಮಾನವನ ವ್ಯವಸ್ಥೆಯಲ್ಲಿ? ತಪ್ಪಿ ನಡೆವವನ ತಲೆ ಕುಕ್ಕುವ ಸಾಮರ್ಥ್ಯವು ಕಾಕನಲ್ಲಿದೆ ಎಂಬುದನ್ನು ಇದರ ಜೊತೆಯಲ್ಲಿಯೇ ಲಕ್ಷ್ಯದಲ್ಲಿಟ್ಟುಕೊಂಡರೆ ಏಕಾಗ್ರದೃಷ್ಟಿಯ ಕಾಕರಾಜ್ಯವು ರಾಮರಾಜ್ಯಕ್ಕಿಂತ ಕಡಮೆ ಎನಿಸದು ಎಂದು ಧೈರ್ಯವಾಗಿ ಹೇಳಬಹುದು.

CC-0. Jangamwadi Math Collection. Digitized by eGangotri

ಇಷ್ಟಕ್ಕೂ ಮೀರಿ ಯಾರಾದರೂ ಒಪ್ಪದಿದ್ದರೆ ಮತ್ತೊಮ್ಮೆ ಹೇಳುವೆ. ಕಾಕನಿಗೆ ಇದುವರೆಗೆ ಬಗೆದ ಅನ್ಯಾಯದ ಪ್ರಾಯಶ್ಚಿತ್ತವೆಂದು ನಾವು ಇನ್ನೂ ಹೆಚ್ಚಾಗಿ ಸ್ಥಾನ-ಮಾನಗಳನ್ನು ಕೊಡುವುದಗತ್ಯ. ಕಾಕಸಮೂಜದ ಕೈಯಲ್ಲಿ ನಮ್ಮ ರಾಜ್ಯಸೂತ್ರವನ್ನು ಕೂಡ ಒಪ್ಪಿಸಬಹುದು. ಅನ್ಯಾಯದ ತಳಹದಿಯ ಮೇಲೆ ನಿಂತ ಇಂದಿನ ಸಮಾಜದ ಕ್ಷೇಮವು ನ್ಯಾಯದೃಷ್ಟಿಯ ಕಾಕನನ್ನೆ ಕೂಡಿಕೊಂಡಿದೆ ಎಂದು ಹೇಳಬಹುದು. ಎಲ್ಲಿಯೊ ಯಾರೊ ನೀಡಿದ ಒಂದು ತುತ್ತು ಅನ್ನವನ್ನು ಅವಸರದಿಂದ ನುಂಗಿ ಬಾಳುವ ಕಾಕನ ಜೀವನವು ನಮ್ಮೆಲ್ಲರಿಗೆ ಮಾದರಿಯಾಗುವುದು. ಅತ್ಯಾಶೆಯಿದ್ದ ಮಾನವನನ್ನು ಬಣ್ಣಿಸುವಾಗ 'ಅವನದು ಕಾಗೆಯ ಮನಸ್ಸು' ಎನ್ನುವೆವು. ಎಂತಹ ಅನ್ಯಾಯ! ಅತ್ಯಾಶೆ ಎಂಬ ದುರ್ಗುಣ ಇದ್ದದ್ದು ಮಾನವನಲ್ಲಿ, ಆದಕಾಗಿ ಬಯ್ಯಿಸಿಕೊಳ್ಳುವುದು ಕಾಕ! ಈ ವೃಥಾ-ರೋಪಣೆಗೆ ಪ್ರಾಯಶ್ಚಿತ್ತವೆಂದು ಕೊನೆಗೆ ಕಾಕನನ್ನು ಅರ್ಥಿಕಸಚಿವನೆಂದಾದರೂ ನಿಯಮಿಸಿಕೊಳ್ಳಬೇಕು. ಒಂದು ತಿಂಗಳ ಅವಧಿಯಲ್ಲಿ ಪ್ರತಿಯೊಬ್ಬನಿಗೂ ಒಂದು ಅನ್ನದ ಪಿಂಡಕ್ಕಿಂತ ಹೆಚ್ಚು ಆಸ್ತಿ ಇರಲಾರದಂತೆಯೂ, ಅರ್ಥ-ವಿಭಜನೆಯು ಸಮವಾಗಿರುವಂತೆಯೂ ವ್ಯವಸ್ಥೆಯಾಗಿ ದೇಶದಲ್ಲೆಲ್ಲ ಸ್ವಾಸ್ಥ್ಯ-ಶಾಂತಿ-ಸುಖಗಳು ನೆಲೆಗೊಳ್ಳುವುವು. ಆಶೆಯಿಂದಲ್ಲವೆ ಜಗತ್ತಿನಲ್ಲಿ ದುಃಖವಿದ್ದುದು? ಅರ್ಥ-ವಿಭಜನೆಯ ವೈಷಮ್ಯದಿಂದಲ್ಲವೆ ಜಗತ್ತಿನಲ್ಲಿ ಅಸಂತೋಷ ಹೆರಡುವುದು? ಇನ್ನೊಬ್ಬನಿಗಿಂತ ಹೆಚ್ಚಿನ ಹಣಕ್ಕೆ ನನಗೇಕೆ ಅಧಿಕಾರವಿರಬೇಕು? ಅದರಲ್ಲಂತೂ ನಿಸ್ವಾರ್ಥಬುದ್ಧಿ-ಯಿಂದ ಸಮಾಜಸೇವೆ ಮಾಡಬೇಕಾದ ಶಿಕ್ಷಕರ ವರ್ಗಕ್ಕೆ ಸೇರಿದವನು ನಾನು. ಮತ್ತೆ ಯಾವನಿಗೂ ಹೆಚ್ಚು ಹಣ ವಿರುವುದು, ಆದಕಾಗಿ ನನಗೂ ಬೇಕು ಎಂಬುದೆ ನನ್ನ ಒಳಬಯಕೆ. ಹೊರಗೆ ಮಾತ್ರ ಗ್ರಂಥಗಳನ್ನು ತರಿಸಿಕೊಂಡು ಓದುವ, ಪ್ರವಾಸಾದಿಗಳಿಂದ ಹೆಚ್ಚು ಜ್ಞಾನ ಸಂಪಾದಿಸಿ ವಿದ್ಯಾರ್ಥಿಗಳಿಗೆ ಉಪಯುಕ್ತವೆನಿಸುವ ಕಾರ್ಯಕ್ಕೆ ಮನಸ್ಸನ್ನೂ ಬುದ್ಧಿಯನ್ನೂ ಪೂರ್ತಿಯಾಗಿ ಒಪ್ಪಿಸಲು ಮನೆ—ಮಡದಿ—ಮಕ್ಕಳ ಕ್ಷೇಮವಿರಬೇಕೆನ್ನುವ, ಇನ್ನೂ ಅನೇಕತರದ ಹೊಣೆಗಾರಿಕೆಯ ನೆವಗಳನ್ನು ಹೇಳ ಬಹುದು ಆದರೆ ಸಮಾಜಸೇವಕನಾದ ನಾನು ಧರ್ಮಾರ್ಥ ವಾಚನಾಲಯಗಳಿಂದ—ಭ್ರಮರವು ಮಧು-ವನ್ನು ಹೂಗಳಿಂದ ಸಂಗ್ರಹಿಸುವಂತೆ—ಜ್ಞಾನವನ್ನು ಗಳಿಸಬೇಕು, ಕಾಲುನಡಿಗೆಯ ಪ್ರವಾಸದಲ್ಲಿಯೆ ನಿಜವಾದ ಅನುಭವವಿದೆ ಎಂಬದನ್ನು ಅರಿಯಬೇಕು, ಹೆಂಡಿರು-ಮಕ್ಕಳ ಮೋಹವನ್ನು ಬಿಡಬೇಕು ಮುಂತಾದ ತತ್ವಗಳನ್ನು ಸ್ವಾರ್ಥಮದಾಂಧನಾದ ನಾನು ಮರೆತಿದ್ದೇನೆ! ಪಶು-ಪಕ್ಷಿ-ಗಳೆಲ್ಲ ನೈಸರ್ಗಿಕ ಆಹಾರದಿಂದ ಹೊಟ್ಟೆತುಂಬಿ-ಕೊಳ್ಳುತ್ತಿರಲು ನಿನಗೇಕೆ ಅಟ್ಟ- ಅಡಿಗೆಯ ಆಹಾರ ಎಂದು ಕಾಕರಾಯನು ನನ್ನನ್ನು ಯಾಕೆ ಕೇಳಬಾರದು? ಅಟ್ಟ ಅಡಿಗೆಯ ಅಟ್ಟಹಾಸಕ್ಕಾಗಿಯೆ ಹಣದ ಆಶೆಯಲ್ಲವೆ? 'ತೃಣಂ ನ ಖಾದತಿ' ಎಂದು ಹಿಂದಿನ ಕಾಲದಲ್ಲಿ ಭರ್ತೃ-ಹರಿಯು ಹೇಳಿರಬಹುದು; ಆದರೆ ಇಂದಿನ ಸಮ-ಸ್ವಾತಂತ್ರ್ಯದ ಕಾಲದಲ್ಲಿ ಆ ಜಂಬ ನಡೆಯುವುದಿಲ್ಲ—ನಡೆಯಕೂಡದು ಎಂದು ತನ್ನ ಜೀವನದ ಉದಾಹರಣೆ-ಯಿಂದ ಕಾಕರಾಯನು ನಮ್ಮೆಲ್ಲರಿಗೆ ಬುದ್ಧಿ ಕಲಿಸಬಹುದು.

ಕೊನೆಯ ಮಾತು. ರಾಮಾಯಣ ಕಾಲದಲ್ಲಿ ಕಾಕ-ರಾಯನಿಗೆ ಕಾಕಾಸುರ ಎಂಬ ಹೆಸರು ಇದ್ದುದರಿಂದ ಕಾಕನ ದುಷ್ಟಬುದ್ಧಿಯವನು ಎಂದು ಯಾರೂ ಹಟ ಹಿಡಿಯು-ವಂತಿಲ್ಲ. ಏಕೆಂದರೆ, ಕಾಕನ ಪತಿಯಿಂದ ಯಾರಾದರೂ ಕಾವ್ಯ ಬರೆದಿದ್ದರೆ ಅದರಲ್ಲಿ ರಾಮನಿಗೆಯೆ ರಾಮಾಸುರು ಎನಬಹುದು. ಮನುಷ್ಯನ ಸ್ವಭಾವವದು. ತನಗೆ ಬೇಡಾ-ದವರೆಲ್ಲ ಅಸುರರು—ರಾಕ್ಷಸವೃತ್ತಿಯವರು ಎಂದೇ ಅವನ ತಿಳಿಯುವನು. ಆದರೆ ಇಂದು ನಾವು ಕಾಕನನ್ನೆ ನಮ್ಮ ಹಿರಿಯನೆಂದು ಒಪ್ಪಿಕೊಂಡರೆ ಕಾಕೇತರರು ಅಸುರರೆನಿಸು ವರು. ಅದರಲ್ಲೇನು? ಆದರೆ ಕಾಕನನ್ನು ಹಿರಿಯನೆನ್ನಲು ನಾವು ಒಪ್ಪಿಕೊಂಡಿಲ್ಲವಲ್ಲ ಎಂದು ಹಟ ಹಿಡಿಯಬೇಡಿರಿ. ಏಕೆಂದರೆ, ನಿಮ್ಮ ಮನಸಿನಲ್ಲಿ ಆ ವಿಚಾರವು ನಿಜವಾಗಿಯೆ ಇದ್ದಿಲ್ಲವಾದರೆ ನೀವು ಕೊಟ್ಟ ಅನ್ನದ ಪಿಂಡವನ್ನು ಕಾಕವು ಸ್ವೀಕರಿಸುವುದೆ ಶಕ್ಯವಿಲ್ಲ. ಆದುದರಿಂದ ನಿಮ್ಮ ಮನಸಿನ ಒಳಒಳಗೆ ಪ್ರಾಯಶ್ಚಿತ್ತವನ್ನು ಈ ರೀತಿ ತೆಗೆದುಕೊಳ್ಳುವ ಸುವಿಚಾರವು ಇರಲೇಬೇಕು. ಈ ಕಾರಣದಿಂದಲೆ ಕಾಕ-ರಾಜ್ಯವು ನಿಜವಾದ ಪ್ರಜಾಸತ್ತಾತ್ಮಕರಾಜ್ಯವಾಗುವುದು. ಚುನಾವಣೆಯ ವೆಚ್ಚ-ಗಲಭೆಗಳು ಇಲ್ಲದಲೆ—ಬರಿಯ ಅನ್ನದ ಪಿಂಡವನ್ನು ತಿನ್ನುವುದರಿಂದಲೆ—ನಮ್ಮ ಅಭಿ-ಮತವನ್ನು ಗೊತ್ತು ಹಚ್ಚಲು ಸಾಧ್ಯವಾಗುವುದು. ದೂರ-ದರ್ಶಿಗಳಾದ ಲೋಕಮಾನ್ಯತಿಲಕರು, ಪಿಂಡದಿಂದ ಬ್ರಹ್ಮಾಂ-ಡಜ್ಞಾನ ಎಂದು ಗೀತಾರಹಸ್ಯದಲ್ಲಿ ಹೇಳಿಕೊಟ್ಟ ಸೂತ್ರದ ಅರ್ಥವು ಇಂದು ನಮಗಾಯಿತು. ಬೋಲೋ ಕಾಕ ನಾಮಕೀ ಜಯ! ಕಾಗೆಯ ಕಿಲಾಟ ಝಿಂದಾಬಾದ!!

(ಎಲ್ಲರು ಎದ್ದು ನಿಂತು)

ಕಾಗೆಯು ಬಲವಿರೆ ಆದುವೆ ಬಲವಿನ್ನಾತರ ಬಲವಯ್ಯಾ।
ಸೋಗಿನ-ಸೊಕ್ಕಿನ ಭೋಗಗಳಿಂದಿನ್ನೇತಕೆ ಭಯವಯ್ಯಾ॥

CC-0. Jangamwadi Math Collection. Digitized by eGangotri

# ಜಗತ್ತಿನಲ್ಲಿಯ ಸಮಾಜಕ್ರಾಂತಿಯೂ ಹಿಂದುಸ್ಥಾನವೂ

( ಎರಡನೆಯ ಭಾಗ )

ಲೇಖಕರು: ವೈದ್ಯಭಾನು ಶ್ರೀ. ಡಿ. ಕೆ. ಭಾರದ್ವಾಜ ಎಂ. ಡಿ. ( ಆಯುರ್ವೇದ ) ಬೆಂಗಳೂರು

## ರಶಿಯಾದೇಶದ ಹದಿನೈದು ವರುಷಗಳ ಕ್ರಾಂತಿ

### ಲೇಖನಮಾಲೆ ೩*

ರಶಿಯವು ಸಾಮ್ಯವಾದದ ಪ್ರಚಂಡಪ್ರಯೋಗವನ್ನು ಪ್ರಾರಂಭಿಸಿದಾಗ ಔದ್ಯೋಗಿಕ ವೈಭವದ ಶಿಖರವನ್ನು ಮುಟ್ಟಿದ ಯುರೋಪಿಯನ್ ರಾಷ್ಟ್ರಗಳ ಮತ್ತು ಅಮೆರಿಕದ ಆದರ್ಶ-ವನ್ನೆ ಎದುರಿಗಿಟ್ಟುಕೊಂಡಿದ್ದಿತು; ಆದರೆ ತನ್ನ ಪರಿಸ್ಥಿತಿ, ದೇಶಕಾಲಗಳ ಅಗತ್ಯ-ಅಡಚಣೆ-ಗಳು ಮೊದಲಾದುವನ್ನು ಮರೆಯಲಿಲ್ಲ. ಹಿಂದುಸ್ಥಾನವಾದರೂ ತನ್ನದನ್ನು ಮರೆಯದಲೆ § ಹೊರಗಿನದನ್ನು ( ರಸ್ಯದ್ದನ್ನು ಕೂಡ ) ಅರಗಿಸಿ-ಅಳವಡಿಸಿಕೊಳ್ಳಬೇಕಾಗಿದೆ. §

### ೧೪. ನಿಶ್ಚಿತಧ್ಯೇಯವೂ ಸುಸಂಗತಕಾರ್ಯಕ್ರಮವೂ.

ಮಾವಿನಗಿಡದಲ್ಲಿ ಹೂ ಬಿಟ್ಟದ್ದನ್ನು ನೋಡಿ, ಇದರಲ್ಲಿ ಇಂತಿಷ್ಟು ಫಲವಾಗುವುದೆಂದು ಅಂದಾಜು ಕಟ್ಟು-ವುದು ಸರಿಯಲ್ಲ. ಮೋಡಗಳು ಕವಿದು, ಮಂಜುಬಿದ್ದು ಆ ಹೂ-ಗಳು ಯಾವಾಗ ಉದುರುವವೊ, ಮತ್ತೆ ಆ ಉಳಿದ ಹೀಚುಪೀಚು ಗಳಲ್ಲಿ ಮೋಡ-ಗಾಳಿಗಳನ್ನೆದುರಿಸಿ ಎಷ್ಟು ಹಣ್ಣು-ಗಳಾಗುತ್ತವೆ ಎಂಬುದನ್ನು ನಿಶ್ಚಿತವಾಗಿ ಹೇಳಲಾಗದು.

ಅಂಧಾನುಕರಣವೊ ಕಲ್ಪಕತೆಯೊ ?

ಇಂದು ರಶಿಯದಲ್ಲಿ ಎಲ್ಲ ವಿಷಯಗಳೂ ಮಹತ್ವದ್ದಾಗಿಯೂ ಆಶಾದಾಯಕವಾಗಿಯೂ ಕಾಣುತ್ತಿವೆ. ಆದರೆ ನವೀನ ವಿಚಾರಗಳ ಕಾರ್ಮುಗಿಲುಗಳಿಂದ, ಕಾಲಗತಿಯಿಂದ ಇವು-ಗಳಲ್ಲಿ ಎಷ್ಟು ವಿಷಯಗಳು ದೃಢವಾಗಿ ನೆಲೆಗೊಳ್ಳುವವು, ಮತ್ತೆ ಎಷ್ಟು ಸಿದ್ಧಿಹೊಂದದೆ ನಿರ್ಮೂಲವಾಗುವವು ಎಂಬುದನ್ನು ಹೇಳುವುದು ಅಸಾಧ್ಯ. ಆದಾಗ್ಗೂ ಒಂದು ವಿಷಯ ಮಾತ್ರ ನಿಶ್ಚಿತವಾಗಿದೆ. ಕಳೆದ ೧೫ ವರುಷ ಗಳಲ್ಲಿ ರಶಿಯಾದೇಶವು ಮಾನವಪ್ರಯತ್ನವನ್ನೆಲ್ಲ ವೆಚ್ಚ-ಮಾಡಿ ಜಗತ್ತಿನ ಇತರ ಎಲ್ಲ ರಾಷ್ಟ್ರಗಳಿಗಿಂತಲೂ ಹೆಚ್ಚು ವೇಗದಿಂದ ಪ್ರಗತಿಯನ್ನು ಹೊಂದಿರುವುದು. ಇದೇ ವೇಗವೆ ನೆಲೆಗೊಂಡರೆ ಮುಂದೆ ೧೫—೨೦ ವರುಷಗಳಲ್ಲಿ ಜಗತ್ತಿನ ಇತರ ಶ್ರೇಷ್ಠ ರಾಷ್ಟ್ರಗಳ ಶ್ರೇಣಿಯಲ್ಲಿ ರಶಿಯವೂ ಬಂದು ನಿಲ್ಲುವುದಲ್ಲದೆ, ಅದರ ವಿಚಾರಪ್ರವಾಹದ ಪರಿಣಾಮವು ಎಲ್ಲ ರಾಷ್ಟ್ರಗಳ ಸಮಾಜದ ಮೇಲೂ ಬೀಳದಿರದು. ಮನೆ-ಯಲ್ಲಿ ಕುಳಿತುಕೊಂಡಾಗ ತನ್ನಷ್ಟಕ್ಕೆ ತಾನೆ ಬಂದ ವಿಚಾರ ಗಳನ್ನು ಚಿಕಿತ್ಸಾಹೀನವೃತ್ತಿಯಿಂದ ಅನುಕರಿಸುವುದು ಒಂದು ಬಗೆಯ ವೃತ್ತಿ. ಹೊಸದಾಗಿ ಹುಟ್ಟಿದ ವಿಚಾರ ಪ್ರವಾಹದಲ್ಲಿ ಧುಮುಕಿ ಅದರಲ್ಲಿ ತ್ಯಾಜ್ಯ—ಗ್ರಾಹ್ಯ ಭಾಗಗಳನ್ನು ಪರೀಕ್ಷಿಸಿ, ಧ್ಯೇಯಸಾಧನಾನುಕೂಲವಾದ ಭಾಗವನ್ನು ತನ್ನದಾಗಿ ಮಾಡಿಕೊಳ್ಳುವುದು ಮತ್ತೊಂದು ಬಗೆಯ ವೃತ್ತಿ. ಹಿಂದುಸ್ಥಾನವು ಇದುವರೆಗೆ ಮೊದಲನೆಯ ವೃತ್ತಿಯ ಅನುಕರಣ ಮಾಡಿದೆ. ಯುರೋಪಿನಲ್ಲಿ ಡೆಮಾ-ಕ್ರಸಿಯ ಘೋಷವು ಆರಂಭವಾದಕೂಡಲೆ ಅದರ ಪ್ರತಿ-ಧ್ವನಿಯು ಹಿಂದುಸ್ಥಾನದಲ್ಲಿಯೂ ಕೇಳಿಸಲಾರಂಭಿಸಿತು. ಯುರೋಪಿನಲ್ಲಿ 'ಕಮ್ಯೂನಿಜ್ಮ್' 'ಫಾಸಿಜ್ಮ್'ಗಳ ಜಯ-ಘೋಷಕ್ಕಾರಂಭವಾದಕೂಡಲೆ ಭಾವನಾಪ್ರಧಾನವಾದ ಭಾರತೀಯರ ಅಂತಃಕರಣದಲ್ಲಿ ಅದರ ಅಲೆಗಳೆದ್ದುವು.

* ಡಾ|| ಜಿ. ಎಸ್. ಹೈರ ಅವರ ಗ್ರಂಥಾಧಾರದಿಂದ

CC-0. Jangamwadi Math Collection. Digitized by eGangotri

ಆಕ್ಸ್‌ಫರ್ಡ್ ಬ್ಲೋಮ್ಸ್‌ಬರಿನ ಅನುಕರಣಮಾಡುವುದು, ಮತ್ತೆ ಯುರೋಪಿನಲ್ಲಿ ಈಗ ಉಂಟಾಗಿರುವ ರಾಜಕೀಯ ತತ್ವಜ್ಞಾನ ವಿಚಾರವಾಗಿ ಹರಟೆ ಕೊಚ್ಚುವುದು:—ಇವುಗಳೆಲ್ಲ ಕಾಲಾಂತರದಲ್ಲಿ ಒಂದು ಬಗೆಯ 'ಫ್ಯಾಶನ್' ಆಗಿಬಿಡುವುವು! ಆದರೆ ಇದರಲ್ಲಿ ಬೌದ್ಧಿಕ ಆಲಸ್ಯ ಮತ್ತು ಕಲ್ಪಕತೆಯ ಅಭಾವದೋಷಗಳು ಉಂಟಾಗುವುವು. ಇತರ ರಾಷ್ಟ್ರಗಳು ತಮ್ಮ ಸ್ವಂತ ಪರಿಸ್ಥಿತಿಗನುಸಾರವಾಗಿ ಉಂಟುಮಾಡಿಕೊಂಡ ರಾಜಕೀಯ ವೇದಾಂತ ಮತ್ತು ತದನುಕೂಲವಾದ ಸಾಧನೆಗಳನ್ನು ಇದ್ದಕ್ಕಿದ್ದಂತೆಯೆ ಸ್ವೀಕರಿಸುವುದರಲ್ಲಿ ಸೌಕರ್ಯವಿದೆ, ಆದರೆ ಪ್ರಯೋಜನವಿಲ್ಲ. ಹಿಂದುಸ್ಥಾನದ ರಾಜಕೀಯ ವೇದಾಂತವು ಭಾರತೀಯ ಕ್ಷೇತ್ರದಿಂದ-ಪರಿಸ್ಥಿತಿಯಿಂದ-ಧ್ಯೇಯದಿಂದ ಹೊರಹೊಮ್ಮಿದುದಾಗಿರಬೇಕು. ಯಾವ ಕಲ್ಪಕತೆಯಿಂದಲೂ ಧಿಟ್ಟತನದಿಂದಲೂ ಭಾರತೀಯ ತತ್ವಜ್ಞರು ಅಧ್ಯಾತ್ಮಶಾಸ್ತ್ರದಲ್ಲಿ ಉನ್ನತಿಯನ್ನು ಪಡೆದು ಜಗತ್ತಿನಲ್ಲಿ ಪ್ರಥಮಸ್ಥಾನವನ್ನು ಪಡೆದರೊ, ಅದೇ ಕಲ್ಪಕತೆ, ಅದೇ ಧಿಟ್ಟತನವು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ತಾಂಡವಮಾಡಲಾರಂಭಿಸಿದರೆ, ಅದರಿಂದ ನವೀನ ಸಮಾಜ, ರಾಜಕಾರಣ, ಅರ್ಥಶಾಸ್ತ್ರಗಳ ಧ್ಯೇಯ ಮತ್ತು ಯೋಜನೆಗಳು ನಿರ್ಮಾಣವಾಗುವವು. ಅನಂತರ ಜಗತ್ತಿನಲ್ಲಿ ಹೊಸಹೊಸ ಪ್ರಯೋಗಗಳ ಅಂಧಾನುಕರಣವನ್ನು ಇದ್ದಕ್ಕಿದ್ದಂತೆಯೆ ಮಾಡದೆ ಅವುಗಳಲ್ಲಿರುವ ತಂತ್ರ ಮತ್ತು ಸಾಧನೆಗಳಿಂದ ಸ್ವಂತ ಧ್ಯೇಯ ಕಾರ್ಯಗಳಲ್ಲಿ ಪ್ರಯೋಜನ ಪಡೆದುಕೊಳ್ಳುವುದು ಸುಲಭವಾಗುವುದು.

**ಔದ್ಯೋಗಿಕ ಪ್ರಗತಿಯ ತಡೆಯಿಲ್ಲದ ವೇಗ**

ಸಮಾಜದ ಔದ್ಯೋಗಿಕ, ರಾಜಕೀಯ ಮತ್ತು ಸಾಂಸ್ಕೃತಿಕ ವಿಷಯಗಳೆಲ್ಲದರ ಮೇಲೂ ರಶಿಯವು ಸಮಾನ ಗಮನವನ್ನಿಟ್ಟಿದೆ. ಅಮೆರಿಕ, ಇಂಗ್ಲಂಡ್ ಮತ್ತು ಜರ್ಮನಿ ಈ ಮೂರು ರಾಷ್ಟ್ರಗಳೂ ಔದ್ಯೋಗಿಕ ಕಸಬುಗಳ ದೃಷ್ಟಿಯಿಂದ ಮುಂದುವರಿದವೆನ್ನಿಸಿವೆ. ಆದರೆ ಕಳೆದ ಐದು ವರುಷಗಳಲ್ಲಾಗಿರುವ ಈ ರಾಷ್ಟ್ರಗಳ ಪ್ರಗತಿಯನ್ನು ತುಲನೆಮಾಡಿ ನೋಡಿದರೆ ಅವುಗಳ ಪ್ರಮಾಣವು ಈ ರೀತಿಯಾಗಿ ಕಂಡುಬರುವುದು:— ಜರ್ಮನಿ ೮೩, ಅಮೇರಿಕಾ ೯೭ ಮತ್ತು ರಶಿಯಾ ೨೧೯. 'ಖನಿಜತೈಲ ಮತ್ತು ಕಲ್ಲಿದ್ದಲು ಇಂದಿನ ಉದ್ಯೋಗಪ್ರಗತಿಯ ಮುಖ್ಯ ಸಾಧನಗಳು. ಇವುಗಳ ಉತ್ಪಾದನೆಯಲ್ಲಿ ರಶಿಯವು ತನ್ನ ಐದು ವರುಷಗಳ ಯೋಜನೆಗಿಂತಲೂ ಮುಂದುವರಿದಿದೆ. ಇದುವರೆಗೆ ತಯಾರಾದ ಮಾಲು ಇತರ ದೇಶಗಳಿಂದ ರಶಿಯಕ್ಕೆ ಆಮದಾಗಿ ಬರುತ್ತಿತ್ತು. ಈಗ ರಶಿಯವು ತಾನು ತಯಾರಿಸಿದ ಮಾಲನ್ನು ಇತರ ದೇಶಗಳಿಗೆ ರಫ್ತು ಮಾಡುತ್ತಿದೆ. ರಶಿಯದ 'ಟೆಕ್ಸ್‌ಟೈಲ್' (ಬಟ್ಟೆಯ) ಕಸಬಿನ ಯಂತ್ರಸಾಮಗ್ರಿಗಳು ಜರ್ಮನಿಗೆ ರಫ್ತಾಗಲಾರಂಭಿಸಿವೆ. ಆದರ ಮೋಟಾರಗಾಡಿ ಮೊದಲಾದ ಮಾಲುಗಳು ತುರ್ಕಸ್ಥಾನವೇ ಮೊದಲಾದ ಪೌರ್ವಾತ್ಯ ದೇಶಗಳಿಗೆ ಹೋಗಲಾರಂಭಿಸಿವೆ. ತುರ್ಕಸ್ಥಾನದವರು ರಶಿಯನ್ ಎಂಜಿನಿಯರ್ಸರನ್ನು ಕರೆಸಿ, ತಮ್ಮ ಔದ್ಯೋಗಿಕ ಬೆಳವಣಿಗೆಯ ಪುನರ್ಘಟನೆಗಾಗಿ ಅವರಿಂದ ಸಹಾಯಪಡುತ್ತಿರುವರು. ಮತ್ತೆ ತುರ್ಕಿಯ ವಿದ್ಯಾರ್ಥಿಗಳು ರಶಿಯಾಕ್ಕೆ ಹೋಗಿ ಕಸಬು ಶಿಕ್ಷಣದ ಪಾಠವನ್ನು ಕಲಿಯಲಾರಂಭಿಸಿದ್ದಾರೆ. ಇತರ ದೇಶಗಳಲ್ಲಿ ಹರಡುತ್ತಿರುವ ನಿರುದ್ಯೋಗ-ಸಮಸ್ಯೆಗೆ ಎಡೆಗುಡದೆ ರಶಿಯವು ತನ್ನಲ್ಲಿಯ ನಿರುದ್ಯೋಗವನ್ನು ನಿರ್ಮೂಲವಮಾಡಿ, ತನ್ನ ಕಾರ್ಖಾನೆಗಳು ಹಗಲಿರುಳೂ ನಡೆಯುವಂತೆ ಮಾಡಿರುವುದು; ಅಲ್ಲದೆ ಕೆಲಸದ ಕಾಲವನ್ನು ದಿನಕ್ಕೆ ಏಳು ಗಂಟೆಗಳಿಗೆ ಮಿತಿಗೊಳಿಸಿದೆ.

ಇದುವೆ ವೇಗದಿಂದ ಶಿಕ್ಷಣದ ವಿಷಯದಲ್ಲಿಯ ಪ್ರಗತಿಯು ನಡೆದಿದೆ. ನಿರಕ್ಷರತೆಯನ್ನು ಕೇವಲ ೧೫ ವರುಷಗಳ ಕಾಲದಲ್ಲಿ ಅದು ನಿರ್ಮೂಲಗೊಳಿಸಿದೆ. ಶಾಲೆ, ಶಿಕ್ಷಣಸಂಸ್ಥೆ ಮತ್ತು ವಿದ್ಯಾರ್ಥಿಗಳ ಸಂಖ್ಯೆಯು ವೇಗವಾಗಿ ಬೆಳೆಯುತ್ತಿದೆ. ಈ ಪ್ರಗತಿಯ ಸಂಖ್ಯೆಯನ್ನು ಕೊಡಲು ಸ್ಥಳಾವಕಾಶವಿಲ್ಲ.

**ನವೀನ ಅಧಿಕಾರದ ಶಾಶ್ವತಿ**

ರಾಜಕೀಯ ದೃಷ್ಟಿಯಿಂದಲೂ ಅಲ್ಲಾಗಿರುವ ಪ್ರಗತಿಯನ್ನು ಸಂಖ್ಯೆಯಲ್ಲಿ ತಿಳಿಸುವುದು ಅಸಾಧ್ಯ. ಅದನ್ನು ಕೇವಲ ಕಲ್ಪನೆಯಿಂದಲೆ ಊಹಿಸಬೇಕು. ಕ್ರಾಂತಿಯ ಆರಂಭಕಾಲದಲ್ಲಿ ರಶಿಯಕ್ಕೆ ಆ ದೇಶದ ಒಳಗಿನ ಮತ್ತು ಹೊರಗಿನ ಶತ್ರುಗಳು ಹೆಚ್ಚಾಗಿದ್ದರು. ರಾಜಕೀಯ ಕ್ರಾಂತಿಯಿಂದ ನಷ್ಟಹೊಂದಿದ್ದವರೆಲ್ಲರೂ ಹೊಸ ಪ್ರಭುತ್ವವನ್ನು ತಲೆಕೆಳಗೆ ಮಾಡಲು ಪ್ರಯತ್ನಿಸುತ್ತಿದ್ದರು. ಮತ್ತೆ ರಶಿಯದಲ್ಲಿಯ ಈ ನವೀನ ಸಮಾಜಕ್ರಾಂತಿಯ ಗಾಳಿಯು ತಮ್ಮ ದೇಶದಲ್ಲೂ ಪ್ರವೇಶಿಸಬಹುದೆಂಬ ಭೀತಿಯಿಂದ ಯುರೋಪಿಯನ್ ರಾಷ್ಟ್ರಗಳ ಎದೆ ಹೊಡೆದುಕೊಳ್ಳುತ್ತಿತ್ತು. ಈ ಮೂಲಕ ರಶಿಯಕ್ಕೆ ಇತರ ದೇಶಗಳಲ್ಲಿ ಮಹತ್ವವನ್ನು ಕೊಡುತ್ತಿರಲಿಲ್ಲ, ಮತ್ತೆ ನ್ಯಾಯವಾದ ಮಾನ್ಯತೆಯೂ ದೊರೆತಿರಲಿಲ್ಲ. ಆದ್ದರಿಂದ

CC-0. Jangamwadi Math Collection. Digitized by eGangotri

ಅದರ ಆರ್ಥಿಕ ಸಂಬಂಧವೂ ಮರ್ಯಾದಿತವಾಗಿತ್ತು. ೧೫ ವರುಷಗಳ ನಂತರ ರಶಿಯಕ್ಕೆ ಅಮೆರಿಕವು ಮಾನ್ಯತೆಯನ್ನಿತ್ತುದರಿಂದ, ಅಮೆರಿಕನ್ ಬಂಡವಾಳಗಾರರಿಗೆ ರಶಿಯನ್ ಪ್ರಭುತ್ವದ ಸ್ಥಿರತೆಯ ಭರವಸೆಯುಂಟಾಯಿತು. ರಾಷ್ಟ್ರದ ಮುಂದಾಳುಗಳ ಸ್ಥಾನದಲ್ಲಿ ವಿಚಾರವಂತರೂ, ಕಲ್ಪಕರೂ, ಧ್ಯೇಯನಿಷ್ಠರೂ, ಧೈರ್ಯಶಾಲಿಗಳೂ ಆದ ಮುಂದಾಳುಗಳಿರದಿದ್ದರೆ ಜಗತ್ತಿನ ವಿರೋಧವನ್ನೆದುರಿಸಿ, ಇಷ್ಟು ಪ್ರಗತಿಯನ್ನು ಮಾಡುವುದು ಶಕ್ಯವಿಲ್ಲ.

ಯಶಸ್ಸಿನ ಬೀಜವಾವುದು?

ರಶಿಯದ ಯಶಸ್ಸಿಗೆ ಮೂಲ ಕಾರಣವಾವುದು ಎಂಬ ಪ್ರಶ್ನೆಯು ಸಹಜವಾಗಿ ಹುಟ್ಟುವುದು. ಧ್ಯೇಯದ ನಿಶ್ಚಿತತೆ ಮತ್ತು ಸಾಧನಗಳ ವೈವಿಧ್ಯ ಇವು ರಶಿಯನ್ ಪ್ರಯೋಗದಲ್ಲಿ ನಮಗೆ ಕಂಡುಬರುವವು. ಹಿಂದಿನ ಮತ್ತು ಈಗಿನ ಪರಿಸ್ಥಿತಿ ಹಾಗೂ ಮುಂದಿನ ಸಾಧ್ಯತೆ, ಇವುಗಳ ಕಡೆ ಗಮನವಿಟ್ಟು ರಶಿಯವು ತನ್ನ ಧ್ಯೇಯವನ್ನು ನಿರ್ಮಾಣಮಾಡಿಕೊಂಡಿತು. ಈ ಧ್ಯೇಯಕ್ಕನುಕೂಲವಾದ ಸಾಧನಗಳು ಸಿಕ್ಕುವೆಡೆಯಿಂದ ಅವುಗಳನ್ನು ತರಿಸಿಕೊಂಡು, ನವೀನ ಸಾಧನಗಳನ್ನು ತಾನೇ ನಿರ್ಮಿಸಿಕೊಂಡಿತು. ಯಾವ ಸಾಧನಗಳನ್ನು ತಾನು ಆರಿಸಬೇಕು, ಯಾವುದನ್ನು ಬಿಡಬೇಕು ಎಂಬುದಕ್ಕಾಗಿ ರಶಿಯವು ತನ್ನ ಧ್ಯೇಯದ ಕಸೋಟಿಯನಿಟ್ಟುಕೊಂಡಿದೆ. ಆದ್ದರಿಂದ ಬಂಡವಾಳಗಾರರು ಇಂಥಾದ್ದನ್ನು ಉಪಯೋಗಿಸುತ್ತಿರುವರು ಎಂಬ ಭಾವನೆಯಿಂದ ರಶಿಯನ್ ಮುಂದಾಳುಗಳು ಯಾವ ಸಾಧನವನ್ನೂ ತ್ಯಜಿಸುವುದಿಲ್ಲ. ಮತ್ತೆ ತಾವು ಯಾವುದಾದರೊಂದು ಕಾರಣದಿಂದ ಸ್ವೀಕರಿಸಿದ್ದೇವೆ, ಅದನ್ನು ಬಿಡಲಿಕ್ಕಾಗದು ಎಂಬ ಭಾವನೆಯಿಂದ ಯಾವುದೊಂದು ಸಾಧನವನ್ನು ಅವರು ಎದೆಗೆ ಕಟ್ಟಿಕೊಳ್ಳುವುದಿಲ್ಲ. ಅಮೆರಿಕನ್ ಶಿಕ್ಷಣಪದ್ಧತಿಯಲ್ಲಿ 'ಪ್ರೊಜೆಕ್ಟ್ ಮೆಥಡ್' ಎಂಬ ಶಿಕ್ಷಣಪದ್ಧತಿಯನ್ನು ರಶಿಯವು ಕೆಲಕಾಲ ಸ್ವೀಕರಿಸಿತ್ತು. ಆದರೆ ಅದು ತನ್ನ ಧ್ಯೇಯಕ್ಕೆ ಪ್ರತಿಕೂಲವಾಗಿದೆ ಎಂದು ಅನುಭವದಿಂದ ತಿಳಿದುಕೊಂಡಕೂಡಲೆ, ರಶಿಯದವರು ಅದನ್ನು ಬಿಟ್ಟುಕೊಟ್ಟರು. ಅದರಂತೆಯೆ ನವೀನ ಸಾಧನಗಳನ್ನು ನಿರ್ಮಿಸುವಾಗ ಈ ವಿಚಾರವನ್ನು ಇತರ ರಾಷ್ಟ್ರಗಳವರು ಮಾಡಿಲ್ಲ, ನಾವು ಮಾಡಿದರೆ ಹೇಗೆ? ಎಂದು ರಶಿಯನ್ ಮುಂದಾಳುಗಳು ಅಂಜುಬುರುಕುತನವನ್ನು ತೋರಲಿಲ್ಲ. **ರಾಜಕೀಯ, ಶೈಕ್ಷಣಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಪ್ರತಿಯೊಂದ, ಹೆಜ್ಜೆಯನ್ನೂ ಯುರೋಪಿನ ಮಾನದಂಡದಿಂದ ಅಳೆಯಬೇಕೆಂಬ ವೃತ್ತಿಯನ್ನು ಅವರು ಸ್ವೀಕರಿಸಲಿಲ್ಲ.** ರಶಿಯನ್ ಮುಂದಾಳುಗಳ ಈ ಧಿಟ್ಟತನವು ಇತರರಿಗೆ ಮಾರ್ಗದರ್ಶಕವಾಗಿದೆ. ನವೀನ ಮಾರ್ಗನಿರ್ಮಾಣವು ಜಗತ್ತಿಗೆ ಅಗತ್ಯವಾಗಿದೆ. ಮೊದಲಿನ ಉಪಹಾಸ ಮತ್ತು ಉಪೇಕ್ಷೆಯಿಂದ ಹೊರಬಿದ್ದಂಥ ಸಮಾಜದ ಕಡೆ ಜಗತ್ತು ಆದರದಿಂದಲೂ ಕುತೂಹಲದಿಂದಲೂ ನೋಡುತ್ತಿರುವುದು. ಧ್ಯೇಯ ಮತ್ತು ಸಾಧನಗಳ ಮಿಲನವನ್ನು ರಶಿಯವು ಹೇಗೆ ಸಾಧಿಸಿದೆ ಎಂಬುದು ಅದರ ಉದಾಹರಣೆಯಿಂದಲೆ ತಿಳಿದು ಬರುವುದು. ವಿದ್ಯಾರ್ಥಿಗಳ ಒಂದು ವಸತಿಗೃಹದಲ್ಲಿ ೨೫೦ ಮಂದಿ ವಿದ್ಯಾರ್ಥಿಗಳಿದ್ದರು. ಈ ವಿದ್ಯಾರ್ಥಿಗಳ ಅಭ್ಯಾಸ ಕ್ರಮವನ್ನು ನೋಡಿದರೆ ಅದರಲ್ಲಿ, ಮತ್ತು ರಶಿಯನ್ ಔದ್ಯೋಗಿಕ ಧ್ಯೇಯದಲ್ಲಿ ಎಷ್ಟು ಸುಸಂಗತತೆ ಇದೆ ಎಂಬುದು ಕಂಡುಬರುವುದು. ದೇಶದ ಅವಶ್ಯಕತೆಯ ಕಡೆ ಲಕ್ಷ್ಯವಿಡದೆ ಕೇವಲ ಪುಸ್ತಕೀಯ ಶಿಕ್ಷಣಕ್ಕಾಗಿ ಕಲ್ಲಿನಮೇಲೆ ಕಲ್ಲು ಏರಿಸಿ ಕಟ್ಟಡ ರಚಿಸುವವರು ಈ ವಿಷಯದ ಕಡೆ ವಿಶೇಷ ಲಕ್ಷ್ಯವಿಡಬೇಕು. ವಿದ್ಯಾರ್ಥಿಗಳ ಅಭ್ಯಾಸಕ್ರಮದ ಈ ವಿಷಯಗಳು ರೀತಿಯಾಗಿರುವವು:—ಮೆಕಾನಿಕಲ್ ಎಂಜಿನಿಯರಿಂಗ ೩೦, ಇಲೆಕ್ಟ್ರಿಕಲ್ ೫೦, ಟೆಕ್ಸ್‌ಟೈಲ್ (ನೇಯಿಗೆ) ೩೦, ಕೆಮಿಕಲ್ ೧೫, ಸೈನಿಕ ಕಾಲೇಜ್ ೧೫, ಟ್ರಾನ್ಸ್‌ಪೋರ್ಟ್ ಎಂಜಿನಿಯರಿಂಗ್ ೬, ಆಟೊಮೆಕಾನಿಕ್ಸ ೧೫, ಸ್ಟೀಲ್ ಇಂಡಸ್ಟ್ರಿ ೧೨, ಟೂಲ್ ಕಂಟ್ರಾಕ್ಶನ್ ೧೦, ಉಚ್ಚ ಕೃಷಿ (ಬೇಸಾಯ) ಶಾಸ್ತ್ರ ೮.

ಪಾಶ್ಚಾತ್ಯ ಸುಧಾರಣೆ ಮತ್ತು ಶಾಸ್ತ್ರೀಯ ಪ್ರಗತಿಯ ಉಪಯೋಗವನ್ನು ರಶಿಯವು ಚೆನ್ನಾಗಿ ಪಡೆದಿದೆ. ವಿಜ್ಞಾನ, ಯಂತ್ರಕಲೆ, ಶಿಕ್ಷಣಶಾಸ್ತ್ರ, ಸಂಶೋಧನ ಪದ್ಧತಿ, ವೈದ್ಯಕ, ಇವೇ ಮೊದಲಾದ ಶಾಸ್ತ್ರಗಳಲ್ಲಿ ಪಾರಂಗತರಾದ ಅಮೆರಿಕನ್, ಜರ್ಮನ್ ಮತ್ತು ಇಂಗ್ಲಿಷ್ ತಜ್ಞರು, ಶಾಸ್ತ್ರಜ್ಞರು ಮತ್ತು ಎಂಜಿನಿಯರ್ಸರನ್ನು ತನ್ನಲ್ಲಿಗೆ ಕರೆಸಿಕೊಂಡು, ರಶಿಯವು ದೊಡ್ಡದೊಡ್ಡ ಕಾರ್ಖಾನೆಗಳನ್ನು ಕಟ್ಟಿಸಿತು, ಮತ್ತೆ ಅವರೊಂದಿಗೆ ತನ್ನವರು ಕೆಲಸಮಾಡುವಂತೆ ಮಾಡಿ, ತನ್ನ ಜನರನ್ನೂ ತಯಾರುಮಾಡಿಕೊಂಡಿತು. ಈ ವಿಷಯದಲ್ಲಿ ರಶಿಯವು ಪಾಶ್ಚಾತ್ಯ ರಾಷ್ಟ್ರಗಳೊಂದಿಗೆ ಸರಿಹೋಲುವಂತಾಗಿರುವುದಲ್ಲದೆ, ಕೆಲವು ವಿಷಯಗಳಲ್ಲಿ ಅವುಗಳಿಗಿಂತಲೂ ಮುಂದೆ ಹೋಗಿದೆ ಎಂದು ಹೇಳಬಹುದಾಗಿದೆ.

CC-0. Jangamwadi Math Collection. Digitized by eGangotri

ಇಷ್ಟಾದಾಗ್ಯೂ ರಶಿಯವು ಇನ್ನೂ ತನ್ನ ಸ್ವಂತ ಧ್ಯೇಯ ವೈಶಿಷ್ಟ್ಯವನ್ನು ಬಿಟ್ಟಿಲ್ಲ.

**ಧ್ಯೇಯದಲ್ಲಿ ಸುಸಂಗತಿ**

ರಶಿಯನ್ ಮುಂದಾಳುಗಳಲ್ಲಿ ನವೀನ ತತ್ವಜ್ಞಾನ, ನವೀನ ಅರ್ಥಶಾಸ್ತ್ರ, ನವೀನ ಸಮಾಜಶಾಸ್ತ್ರ ಇವುಗಳ ತಳಹದಿಯಮೇಲೆ ತನ್ನ ಸಮಾಜವನ್ನು ನಿಲ್ಲಿಸಬೇಕು ಎಂಬೀ ಜಾಗೃತಿಯ ಅರಿವು ನೆಲೆಗೊಂಡಿರುವುದರಿಂದ, ಈ ಧ್ಯೇಯ ವೈಶಿಷ್ಟ್ಯವನ್ನು ಪ್ರತಿಯೊಂದು ಕ್ಷೇತ್ರದಲ್ಲೂ ಹೇಗೆ ಪ್ರತೀತಿಗೊಳಿಸಬೇಕು ಎಂಬ ವಿಚಾರವಾಗಿ ಅವರು ಹಗಲಿರುಳೂ ಚಿಂತಿಸುತ್ತಿರುವರು. ವೈಶಿಷ್ಟ್ಯ ಸಾಧನೆಯ ಈ ಧ್ಯೇಯವು ಕೆಲವು ಸಂದರ್ಭಗಳಲ್ಲಿ ಅಚಾತುರ್ಯದಿಂದ ಹಾಸ್ಯಾಸ್ಪದವಾಗುವಷ್ಟು ಮಿತಿಮೀರಿದ ಧ್ಯೇಯನಿಷ್ಠೆಯು ಈ ಜನರಲ್ಲಿ ಉಂಟಾಗಿದೆ. ಯಾವ ಶಾಸ್ತ್ರವೇ ಆಗಲಿ, ಅದಕ್ಕೆ "ಮಾರ್ಕ್ಸಿಯನ್"* ಎಂಬ ವಿಶೇಷಣವನ್ನು ಹಚ್ಚದೆ ರಶಿಯನ್ ಜನರು ಅದನ್ನು ಸ್ವೀಕರಿಸರು. ಅವರಲ್ಲಿ ಮಾರ್ಕ್ಸಿಯನ್ ಸಾಯನ್ಸ್ ಕಾಲಜ್, ಮಾರ್ಕ್ಸಿಯನ್ ಪೆಡಾಗಾಗಿ ಮೊದಲಾದ ಶಬ್ದಸಮೂಹಗಳನ್ನು ನೋಡಿ, ನನಗೆ ಆಶ್ಚರ್ಯವಾಗಿ, ನಾನು ಅಲ್ಲಿ ಒಬ್ಬ ಶಾಸ್ತ್ರಜ್ಞರನ್ನು ಕುರಿತು ಹೀಗೆ ಪ್ರಶ್ನಿಸಿದೆನು:—"ಈಗ ನ್ಯೂಟನ್ನನ ಗುರುತ್ವಾಕರ್ಷಣದ ಶಾಸ್ತ್ರೀಯ ಸಿದ್ಧಾಂತವನ್ನು ತೆಗೆದುಕೊಳ್ಳಿರಿ. ಆ ಸಿದ್ಧಾಂತದಲ್ಲಿ ಮಾರ್ಕ್ಸಿಯನ್ ಗ್ರಾವಿಟೇಶನ್ ಮತ್ತು ಕ್ಯಾಪಿಟಲಿಸ್ಟಿಕ್ ಗ್ರಾವಿಟೇಶನ್ ಎಂಬ ಭೇದವಿರುವಂತೆ ಕಂಡುಬರುವುದಿಲ್ಲವಲ್ಲ!" ಅದಕ್ಕೆ ಆ ರಶಿಯನ್ ಶಾಸ್ತ್ರಜ್ಞನು ಹೀಗೆ ಉತ್ತರವಿತ್ತನು: "ಮಾರ್ಕ್ಸ್ ಮತ್ತು ಲೆನಿನ್ ಇವರು ತಂತಮ್ಮ ಗ್ರಂಥಗಳಲ್ಲಿ ಅಲ್ಲಲ್ಲಿ ಭೌತಿಕಶಾಸ್ತ್ರ ಮತ್ತು ಸಂಶೋಧನೆಗಳ ಮೇಲೆ ತಮ್ಮ ವಿಚಾರಪ್ರದರ್ಶನ ಮಾಡಿರುವರು. ಅವರಾ ಅನುರೋಧದಿಂದ ಇನ್ನುಮುಂದೆ ಸಂಶೋಧನಗಳನ್ನು ನಡೆಸುವುದು ರಶಿಯದ ಕಾರ್ಯವಾಗಿದೆ." ಮಾಸ್ಕೊದಲ್ಲಿರುವ ಶಾಸ್ತ್ರೀಯ ವಿಷಯಗಳ ಸಂಸ್ಥೆಯೆಂದರೆ 'ಮಾರ್ಕ್ಸಿಯನ್ ಸ್ಯಾನ್ಸ್' ಎಂದರ್ಥ. ಬಲಶಾಲಿಗಳಾದ ರಾಷ್ಟ್ರಗಳು ಇದುವರೆಗೆ ತಮ್ಮ ಸಾಮ್ರಾಜ್ಯಸಂವರ್ಧನೆಗಾಗಿಯೂ ಇತರರೊಂದಿಗೆ ಯುದ್ಧಮಾಡುವುದಕ್ಕಾಗಿಯೂ ಶಾಸ್ತ್ರದ ಉಪಯೋಗವನ್ನು ಮಾಡಿಕೊಂಡಿರುವರು. ಯುದ್ಧಕ್ಕಾಗಿ ವಿಷಧೂಮವನ್ನು ಹೇಗೆ ತಯಾರಿಸಬೇಕು, ಹೊಸ ಯುದ್ಧವು ಪ್ರಾರಂಭವಾದಾಗ 'ಕೆಮಿಕಲ್ ವಾರ್‌ಫೇರ್' (ರಾಸಾಯನಿಕ ಯುದ್ಧಪದ್ಧತಿಯನ್ನು) ಹೇಗೆ ಉಪಯೋಗ ಮಾಡಿಕೊಳ್ಳಬೇಕು ಇವೇ ಮೊದಲಾದ ವಿಷಯಗಳ ಸಂಶೋಧನೆಗಳ ಕಡೆ ಈಗಿನ ಬಲಶಾಲಿ ರಾಷ್ಟ್ರಗಳ ಶಾಸ್ತ್ರಜ್ಞರ ಪ್ರಯತ್ನ ನಡೆಯುತ್ತಿದೆ. ಈ ದೃಷ್ಟಿಯನ್ನು ಬಿಟ್ಟು ಮಾನವಜಾತಿಯ ಹಿತಕ್ಕಾಗಿ ಶಾಸ್ತ್ರಗ ಪ್ರಯೋಜನವನ್ನು ಹೇಗೆ ಪಡೆಯಬಹುದು ಎಂಬುದನ್ನು ನಿದರ್ಶಿಸುವುದಕ್ಕಾಗಿ ಯಾವ ಸಂಶೋಧನೆಗಳು ನಡೆಯುವವೊ, ಅವುಗಳಿಗೇ 'ಮಾರ್ಕ್ಸಿಯನ್ ಸಂಶೋಧನ'ವೆಂದು ಕರೆಯುವುದೆ ರಶಿಯನ್ನರ ಪ್ರಯತ್ನವಾಗಿರಬಹುದು.

**ವಿಭೂತಿಪೂಜೆಯ ಅತಿರೇಕ**

ಇಂಥವನು ಮುಖಂಡನೆಂದು ಒಬ್ಬ ವ್ಯಕ್ತಿಯನ್ನು ಸಮಾಜವು ಸ್ವೀಕರಿಸಿದಕೂಡಲೆ, ಅವನ ಮೇಲೆ ನಿಜವಾದ ಮತ್ತು ಕಾಲ್ಪನಿಕ ಸದ್ಗುಣಗಳ ಮತ್ತು ಸರ್ವಜ್ಞತೆಯ ಹೊರೆಯನ್ನು ಹೊರಿಸುವುದು ರೂಢಿಯಾಗಿದೆ; ರಾಜಕಾರಣ ಮತ್ತು ಅರ್ಥಶಾಸ್ತ್ರದ ಲೇಖಗಳನ್ನು ಬರೆಯುವ ರಶಿಯನ್ ಜನರು ಮಾರ್ಕ್ಸನ ಸಂಗ್ರಹದಿಂದ 'ಸ್ಯಾನ್ಸ್' ತೆಗೆಯುವಂತೆ ಸದ್ಯದ ಜರ್ಮನರ ಸ್ಥಿತಿಯೂ ಆಗಿದೆ. ಹಿಟ್ಲರ್‌ನ ಗ್ರಂಥ ಸಂಗ್ರಹದಿಂದ ಅವರು ಮಾನಸಶಾಸ್ತ್ರಾದಿ ವಿಷಯಗಳನ್ನು ಶೋಧಿಸಲಾರಂಭಿಸಿರುವರು! ಭಾವನಾವಶತೆಯ ಭರದಲ್ಲಿ ವಿಭೂತಿಪೂಜೆಯ ಅತಿರೇಕವಾಗುವುದು ಆದರೆ ಕೆಲ ಕಾಲವಾದ ಬಳಿಕ ವಿವೇಚಕ ದೃಷ್ಟಿಯು ಜಾಗೃತವಾಗಿ ಅದು ಶಾಶ್ವತ ತತ್ವವನ್ನೆ ಅಂಗೀಕರಿಸಿ, ಆನುಷಂಗಿಕ ವಿಷಯಗಳನ್ನು ಬಿಟ್ಟುಬಿಡುವುದು.

ಸಮಾಜದಲ್ಲಿ ಜಾತಿಕಲಹಗಳನ್ನು ನಿರ್ಮೂಲಗೊಳಿಸಿ ವರ್ಗಹೀನ ಸಮಾಜವನ್ನು ನಿರ್ಮಿಸುವುದು, ಬಂಡವಾಳಗಾರರ ಖಾಸಗಿ ಮಾಲು ಮತ್ತು ಸಂಸ್ಥೆಗಳನ್ನು ತಳ್ಳಿ ಭೌತಿಕಸುಖಗಳ ಸರ್ವಸಾಧನೆಗಳ ಮೇಲೆ ಸಮಾಜ ಸತ್ತೆಯನ್ನು ಸ್ಥಾಪಿಸುವುದು, ಧರ್ಮ ಮತ್ತು ಗೂಢವಾದ ಮೊದಲಾದವುಗಳಿಂದ ಸಮಾಜದ ಮನಸ್ಸನ್ನು ಮುಕ್ತಗೊಳಿಸಿ, ಅದನ್ನು ಭೌತಿಕಶಾಸ್ತ್ರದ ಕಡೆ ತಿರುಗಿಸುವುದು,

---

* ಕಾರ್ಲ್ ಮಾರ್ಕ್ಸ್ ಎಂಬಾತನ ಸಂಕ್ಷಿಪ್ತ ಜೀವನಚರಿತೆ, ಅವನ ತತ್ವ, ಧ್ಯೇಯಾದಿಗಳಿಗೆ 'ಜಯಕರ್ನಾಟಕ' ಸಂಪುಟ ೧೩, ಪುಟ ೩೮೫-೮೮ ರಲ್ಲಿ ಶ್ರೀ। ದ. ಕೃ. ಭಾರದ್ವಾಜರ ಲೇಖವನ್ನು ಓದಿರಿ.
—ಸಂ.

CC-0. Jangamwadi Math Collection. Digitized by eGangotri

ಪಾರಲೌಕಿಕ ಧ್ಯೇಯಕ್ಕಿಂತ ಐಹಿಕ ಧ್ಯೇಯದ ಮೇಲೆ ಹೆಚ್ಚು ಗಮನಕೊಡುವುದು—ಇವು ಸಾಮ್ಯವಾದ ಅಥವಾ ಸಮಾಜಸತ್ತಾವಾದದ ಮೂಲ ಉದ್ದೇಶಗಳಾಗಿವೆ. ಅದನ್ನು ಸಾಧ್ಯಗೊಳಿಸುವ ಪ್ರಯೋಗವನ್ನು ೧೬ ಕೋಟಿ ಜನಸಂಖ್ಯೆಯ ಸಮಾಜದ ಮೇಲೆ ರಶಿಯನ್ನರು ಮಾಡುತ್ತಿರುವರು. ಈ ತತ್ವಗಳ ಆಚರಣೆಯು ಪ್ರತ್ಯಕ್ಷ ವ್ಯವಹಾರದಲ್ಲಿ ಎಷ್ಟರಮಟ್ಟಿಗೆ ಸಾಧ್ಯವಾಗಿದೆ, ಅಥವಾ ಆಗುತ್ತಿದೆ, ಅಥವಾ ಆಗುವ ಸಂಭವವಿದೆ ಎಂಬುದರ ಮೇಲೆ ರಶಿಯದ ಕೀರ್ತಿ-ಅಪಕೀರ್ತಿಗಳು ಅವಲಂಬಿಸಿವೆ.

## ೧೫. ರಸಿಯದ ಪ್ರಯೋಗವೂ ಭಾರತೀಯ ಮನೋವೃತ್ತಿಯೂ

**ಸಾಮ್ಯಪ್ರಭುತ್ವದ ಸುಪರಿಣಾಮ**

ರಶಿಯನ್ ಸರಕಾರವು ರಾಜಕೀಯ ಅಧಿಕಾರದ ಬಲದಿಂದ ಭೂವ್ಯವಸಾಯ, ಕಾರ್ಖಾನೆಗಳು, ವಸತಿಸ್ಥಾನ, ವ್ಯಾಪಾರ ಮೊದಲಾದ ವಿಷಯಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಿದೆ. ಈ ವಿಷಯಗಳ ಆಡಳಿತವೆಲ್ಲ ಕೇಂದ್ರೀಭೂತವಾದ ಒಂದೇ ಪ್ರಭುತ್ವದ ಕೈಯಲ್ಲಿರುವುದರಿಂದ, ಒಂದೇ ಬಗೆಯ ಧ್ಯೇಯ ಮತ್ತು ಧೋರಣೆಯಿಂದ ಅವುಗಳ ಪ್ರಗತಿ ಮಾಡುವುದು ಶಕ್ಯವಾಗಿದೆ. ಚಿಕ್ಕಪುಟ್ಟ ಜಮೀನುಗಳನ್ನೆಲ್ಲ ಒಂದುಗೂಡಿಸಿ ವಿಸ್ತರಿಸಿರುವುದರಿಂದ ಅಲ್ಲಿ ಯಾಂತ್ರಿಕ ಸಾಮುಗ್ರಿಯನ್ನು ಉಪಯೋಗಿಸಿ, ಶಾರೀರಿಕ ಶ್ರಮವನ್ನು ಕಡಿಮೆಮಾಡಿ, ಹೆಚ್ಚು ಬೆಳೆಯನ್ನು ಬೆಳೆಸಲು ಅನುಕೂಲವಾಗುವುದು. ಕಾರ್ಖಾನೆಗಳನ್ನೂ ಸರಕಾರವು ತನ್ನ ಅಧೀನದಲ್ಲಿಟ್ಟುಕೊಂಡಿರುವುದರಿಂದ ದೊಡ್ಡ ಪ್ರಮಾಣದಲ್ಲಿ ಯಂತ್ರಸಾಮುಗ್ರಿಗಳನ್ನು ಖರೀದಿ ಮಾಡಿ, ಪರದೇಶದಿಂದ ಎಂಜಿನಿಯರ್ರನ್ನು ಕರೆಸಿ, ಕೆಲಸಕ್ಕಾರಂಭಿಸಿ, ಶೀಘ್ರವಾಗಿ ಹೊಸಹೊಸ ಕಾರ್ಖಾನೆಗಳನ್ನು ಸ್ಥಾಪಿಸುವ ಕಾರ್ಯವು ಶಕ್ಯವಾಗಿದೆ. ಇದೇ ಧೋರಣೆಯನ್ನು ಅನುಸರಿಸಿ, ವಸತಿಗೃಹ, ಚಿಕಿತ್ಸಾಲಯ ಮತ್ತು ಪಾಠಶಾಲೆಗಳ ಸಂಖ್ಯೆಯೂ ದೊಡ್ಡ ಪ್ರಮಾಣದಲ್ಲಿ ಹೆಚ್ಚುತ್ತಿದೆ.

ನವೀನ ಸಮಾಜರಚನೆಯ ಉತ್ಸಾಹವು ಜನರಲ್ಲಿರುವುದು. ಮತ್ತೆ ಈ ರಚನೆಯು ಬಾಲ್ಯಾವಸ್ಥೆಯಲ್ಲಿರುವ ವರೆಗೆ ಅದು ಸರಿಯಾಗಿರುವುದು.

**ಅಪೇಕ್ಷಿತ ದುಷ್ಪರಿಣಾಮ ಮತ್ತು ಅದಕ್ಕೆ ಚಿಕಿತ್ಸೆ**

ಆದರೆ ಈ ತತ್ವಗಳಿಗನುಸಾರವಾಗಿ ಮಾನವರ ವ್ಯವಹಾರಗಳ ಎಲ್ಲ ಸಂಸ್ಥೆಗಳೂ ಸಮಾಜಸತ್ತಾಧಾರಿಯಾದ ಸರಕಾರದ(ಸ್ಟೇಟ್‌ದ)ಕೈಗೆ ಹೋದರೆ ಅದರಲ್ಲಿ ಮನುಷ್ಯತ್ವದ ಭಾಗವು ಕ್ರಮವಾಗಿ ಕಡಿಮೆಯಾಗುತ್ತ ಹೋಗುವುದು. ಎಲ್ಲ ವ್ಯವಹಾರಗಳೂ ಆಗ ಕಾನೂನು-ನಿಯಮ-ಗಳನ್ನನುಸರಿಸುವುದರಿಂದ, ವ್ಯಕ್ತಿವ್ಯಕ್ತಿಗಳಲ್ಲಿ ಪರಸ್ಪರ ಸಂಬಂಧ ಅಗತ್ಯವಾಗಿರಬೇಕಾದ ಭಾವನೆಯು ಇಲ್ಲದಂತಾಗಿ ಲೋಭಿತನವುಂಟಾಗುವ ಸಂಭವವಿರುವುದು. 'ಸರಕಾರಿ' ಎಂದು ಹೇಳಿಸಿಕೊಳ್ಳುವ ಎಲ್ಲ ಸಂಸ್ಥೆಗಳಲ್ಲಿ ಅನುಭವಕ್ಕೆ ಬರುವ ಕಠೋರತೆಯು ಮಾನವನ ವ್ಯವಹಾರದಲ್ಲಿಯೂ ಉಂಟಾದರೆ ಸಮಗ್ರ ಜೀವನವು ರುಕ್ಷವಾಗುವುದು. ಈ ಬಗೆಯ ಅನುಭವವು ರಶಿಯದಲ್ಲಿ ಅಲ್ಪ ಪ್ರಮಾಣದಲ್ಲಿ ಕಂಡುಬರಲಾರಂಭಿಸಿದೆ. ಬಣ್ಣದ ಅಂಗಡಿ ಮತ್ತು ಹೋಟೆಲ್ (ಖಾನಾವಳಿ) ಯಿಂದ ತೀರ ಮೇಲಿನ ವರೆಗೆ ಆಯಾ ವಿಷಯಗಳಿಗೆ ಸಂಬಂಧಪಟ್ಟ ಅಧಿಕಾರಿಗಳು. ಪ್ರತಿಯೊಬ್ಬ ವ್ಯಕ್ತಿಯೂ ನಿಯಮ-ಕಾನೂನುಗಳ ಕಡೆ ಬೊಟ್ಟು ತೋರಿಸುವವನೆ! ವೈಯಕ್ತಿಕ ಆವಶ್ಯಕತೆಯಂತೆ ನಿಯಮವನ್ನೂ ಹಿಂದೆಮುಂದೆ ಮಾಡಬಹುದು, ಎಂಬ ತತ್ವಕ್ಕೆ ಇಲ್ಲಿ ಮನ್ನಣೆ ಇಲ್ಲ. ಅಥವಾ ಅದಕ್ಕೆ ಅಪವಾದವನ್ನು ಕಲ್ಪಿಸುವ ಹೊಣೆಯನ್ನು ವಹಿಸುವುದಕ್ಕೂ ಅಲ್ಲಿ ಯಾರೂ ಸಿದ್ಧರಿರುವುದಿಲ್ಲ. ಇದರಿಂದ ಕೆಲವು ಸಂದರ್ಭಗಳಲ್ಲಿ ನಮಗೆ ಬಂಡವಾಳಗಾರರ ಪ್ರಭುತ್ವವೆ ಸಾಕಾಗಿದೆ, ಈ ಸರಕಾರದ—ದರಬಾರು ಬೇಡ ಎನಿಸುವುದು. ಲೋಕಶಿಕ್ಷಣದಿಂದ ಈ ಬಂಧನವು ಸಡಿಲಾಗಬಹುದೆಂದು ಭಾವಿಸಿ ಮುಂದುವರಿಯಬೇಕಾಗಿದೆ.

ಹಿಂದಿನ ವ್ಯಕ್ತಿಸ್ವಾತಂತ್ರ್ಯ ತತ್ವ ಮತ್ತು ರಶಿಯದ ಸಮಾಜಸತ್ತೆಯ ತತ್ವಗಳಲ್ಲಿ ಮಧ್ಯಬಿಂದುವೊಂದನ್ನು ಸಾಧಿಸುವುದು ಶಕ್ಯವೇ ಎಂಬುದನ್ನು ವಿಚಾರಮಾಡಬೇಕು. ಸಮಾಜದ ಆರ್ಥಿಕಹಿತ ಮತ್ತು ಸುರಕ್ಷಣೆಗಳ ದೃಷ್ಟಿಯಿಂದ ಸಾಕಷ್ಟು ಸತ್ತೆಯನ್ನೂ ಸಂಪತ್ತನ್ನೂ ಸಾಮುದಾಯಿಕ ರೂಪವಾಗಿಟ್ಟುಕೊಂಡು ಉಳಿದುದನ್ನು ಜೀವನ ವ್ಯವಹಾರ ಕ್ಷೇತ್ರದಲ್ಲಿ ವ್ಯಕ್ತಿಯ ಕೈಯಲ್ಲಿಟ್ಟರೆ, ಇವೆರಡು ಪದ್ಧತಿಗಳಲ್ಲಿರುವ ದೋಷವು ನಿವಾರಣೆಯಾಗಬಹುದು. ಇದರಿಂದ ಸಾಮುದಾಯಿಕ ಸಂಪತ್ತಿಯ ಲಾಭವೆಲ್ಲ ಸಮಾಜಕ್ಕೆ ದೊರೆಯುವುದಲ್ಲದೆ, ಅದರೊಂದಿಗೆ ವೈಯಕ್ತಿಕ ವ್ಯವಹಾರದ

CC-0. Jangamwadi Math Collection. Digitized by eGangotri

ಭಾವನಾಪ್ರವಾಹವೂ ನೆಲೆಯಾಗಿ ನಿಲ್ಲುವುದು.

ವರ್ಗರಹಿತ ಸಮಾಜ ನಿರ್ಮಾಣ ಮಾಡುವ ದೃಷ್ಟಿಯಿಂದ ರಶಿಯನ್ ಪ್ರಭುತ್ವವು ಮುಂಚಿನ ವರ್ಗಪ್ರಧಾನ ಸಮಾಜವನ್ನು ನಿರ್ಮೂಲಗೊಳಿಸಿ ಎಲ್ಲರೂ ಕೆಲಸಗಾರರಾಗಿರುವ ಒಂದೇ ಜಾತಿಯ ಸಮಾಜವನ್ನು ನಿರ್ಮಿಸಿದೆ, ಅಥವಾ ಅದಕ್ಕಾಗಿ ಪ್ರಯತ್ನಿಸಿದೆ ಎಂದು ಹೇಳಿದೆ. ಆದರೆ ಈ ನವೀನ ವರ್ಗದಲ್ಲಿಯೂ ಉಚ್ಚ, ಮಧ್ಯಮ ಅಧಮವೆಂಬ ವರ್ಗೀಕರಣವಾಗಲಾರಂಭಿಸಿದೆ. ಏಕೆಂದರೆ ವ್ಯಕ್ತಿಯ ಕರ್ತೃತ್ವಶಕ್ತಿ ಮತ್ತು ಮಹತ್ವಕ್ಕನುಸಾರವಾಗಿ ಅವನಿಗೆ ಸರಕಾರಿಸಂಬಳವು ದೊರೆವುದು. ಆ ಸಂಬಳದ ದರ್ಜೆಯಂತೆ ಸಮಾಜದಲ್ಲಿ ಬೇರೆ ಬೇರೆ ವರ್ಗಗಳಾಗಿವೆ. ಹೆಚ್ಚು ಸಂಬಳದ ಅಧಿಕಾರಿಗಳ ಸಂಘವೇ ಬೇರೆ, ಅವರ ಜೀವನಪದ್ಧತಿಯೆ ಬೇರೆ, ಅವರ ಊಟದ ಹೊಟೆಲ್ಸ್ (ಖಾನಾವಳಿ) ಗಳೆ ಬೇರೆ! ಈ ಆರ್ಥಿಕ ವಿಷಮತೆಯಿಂದ ಸಮಾಜದಲ್ಲಿ ಬೇರೆಬೇರೆ ವರ್ಗಗಳಾಗ್ಗುವುದು ಸಹಜವಾಗಿದೆ. ಸಮಾನದರ್ಜೆಯ ಜನರು ತಂತಮ್ಮ ವರ್ಗಗಳನ್ನು ಮಾಡಿಕೊಳ್ಳುವರು. ಈ ವಿಚಾರದ ಕಡೆ ರಶಿಯನರ ಗಮನವನ್ನು ತಿರುಗಿಸಿದಾಗ ಅವರು ಹೀಗೆ ಹೇಳುತ್ತಾರೆ:—: "ಇದು ಆತ್ಯಂತಿಕ ಸಮಾಜಸತ್ತೆಯು ಬರುವುದಕ್ಕೆ ಮುಂಚೆ ಇರುವ 'ಸೋಶಲಿಜ್ಮ್' ಕಾಲ. ಈ ಕಾಲದಲ್ಲಿ ವೈಯಕ್ತಿಕ ಕೆಲಸಕ್ಕನುಸಾರವಾಗಿ ಸಂಬಳವನ್ನು ಕೊಡಲಾಗುವದು. ಆದರೆ ಮುಂದೆ ಕಾಲಕ್ರಮೇಣ ಕಮ್ಯೂನಿಜ್ಮ್ ಪ್ರಾರಂಭವಾದಾಗ ಪ್ರತಿಯೊಬ್ಬನೂ ತನ್ನ ತನ್ನ ಶಕ್ತಿಗನುಸಾರವಾಗಿ ಕೆಲಸ ಮಾಡುವನಲ್ಲದೆ, ಅವನಿಗೆ ಆಗತಬಿದ್ದಂತೆ ಸಾಮೂಹಿಕ ಸಂಪತ್ತಿಯಿಂದ ಬೇಕಾದಷ್ಟನ್ನು ತೆಗೆದುಕೊಳ್ಳುವನು." ಸುಖಸ್ವಪ್ನದ ದೃಷ್ಟಿಯಿಂದ ಈ ವಿಚಾರಸರಣಿಯು ಚೆನ್ನಾಗಿದೆ. ಆದರೆ ಇಂಥಾ ಕಾಲವು ಎಂದು ಬರುವುದು? ಆ ಕಾಲವು ಕೇವಲ ಧ್ಯೇಯಸೃಷ್ಟಿಯಲ್ಲಿರುವುದೆಂದು ಹೇಳುವರು. ಆದರೆ ಮನುಷ್ಯಸ್ವಭಾವವನ್ನು ಗಮನಿಸಿದರೆ ಸಮಾಜದಲ್ಲಿ ವರ್ಗಗಳಾಗುವುದು ಅಪರಿಹಾರ್ಯವೆಂದು ಕಂಡುಬರುವುದು. ಈ ವರ್ಗವು ಯಾವ ತತ್ವವನ್ನವಲಂಬಿಸಬೇಕು ಎಂಬ ವಿಚಾರವು ಮಾತ್ರ ಸಮಾಜಶಾಸನವನ್ನವಲಂಬಿಸಬಹುದು. ಸಮಾಜವು ಜನ್ಮದಿಂದಲೊ, ಸಂಪತ್ತಿನಿಂದಲೊ, ಕರ್ಮದಿಂದಲೊ, ಗುಣದಿಂದಲೊ, ಚಾರಿತ್ರ್ಯದಿಂದಲೊ, ಸಂಸ್ಕೃತಿಯಿಂದಲೊ ಅಥವಾ ಮತ್ತಾವ ತತ್ವದಿಂದಲಾದರೂ ವಿಭಾಗಿಸಲ್ಪಡಬೇಕು ಎಂಬುದು ಆಯಾ ಸಮಾಜದ ತತ್ವಜ್ಞಾನವನ್ನೂ ಜೀವನಧ್ಯೇಯವನ್ನೂ ಅವಲಂಬಿಸಿರುವುದು.

**ಆರ್ಥಿಕ ವಿಷಮತೆ ನೆಲೆಯಾಗಿದೆ**

ರಶಿಯನ್ ಸಮಾಜಸತ್ತಾವಾದವು ಬುದ್ಧಿಪೂರ್ವಕವಾಗಿ ಜಡವಾದವನ್ನು ಆಧರಿಸಿಕೊಂಡಿರುವುದು. ಯುರೊಪಿಯನ್ ಮತ್ತು ಅಮೆರಿಕನ್ ಜನರಲ್ಲಿಯೂ ಜಡವಾದವು ಪಸರಿಸಿಕೊಂಡಿದೆ. ಆದರೆ 'ನೀವು ಜಡವಾದಿ (ಮಟೆರಿಯಲಿಸ್ಟಿಕ್) ಆಗಿದ್ದೀರಿ' ಎಂದರೆ ತಮಗೆ ಅಗೌರವವಾಯಿತೆಂದು ಅವರು ಭಾವಿಸುವರು. ರಶಿಯದ ವಿಚಾರವು ಹಾಗಲ್ಲ. ಅವರು ತಿಳಿದುತಿಳಿದೂ ಜಡವಾದವನ್ನೆ ಸ್ವೀಕರಿಸಿದ್ದಾರೆ. ಮನುಷ್ಯನ ದುಃಖ ಮತ್ತು ದಬ್ಬಾಳಿಕೆಗಳ ಭಾವನೆಗಳನ್ನು ನಿರ್ಮೂಲಗೊಳಿಸಬೇಕೆಂದು ಧರ್ಮಶೋಧನೆಗಾರಂಭಿಸಲಾಯಿತು. ಧರ್ಮದಿಂದ ಮಾನವೀಯ ದುಃಖಗಳ ಪರಿಹಾರವಾಗುವುದಿಲ್ಲ; ಭೌತಿಕ ಶಾಸ್ತ್ರಾಧ್ಯಯನ ಮತ್ತು ನಿಸರ್ಗನಿಯಮ-ಜ್ಞಾನಗಳಿಂದ ಅವುಗಳ ನಿವಾರಣೆಯಾಗುವುದು ಎಂಬುದೆ ಸಮಾಜಸತ್ತಾವಾದದ ಸಿದ್ಧಾಂತವಾಗಿದೆ. ಅದರಿಂದ ಭೌತಿಕ ಸಂಪತ್ತಿ ಸಂವರ್ಧನೆ ಮತ್ತು ಅದರ ಉಪಯೋಗಗಳ ಕಡೆ ಅವರ ಮನಸ್ಸು ತಿರುಗಿ ಆ ಕಾರ್ಯದಲ್ಲಿ ಅವರು ಮಗ್ನರಾಗಿರುವರು. ಏಕನಿಷ್ಠೆಯಿಂದ ಈ ಧ್ಯೇಯವನ್ನನುಸರಿಸಿ ಕೆಲಸಮಾಡಿದರೆ ಅಲ್ಪಕಾಲದಲ್ಲಿಯೆ ರಶಿಯನ್ನರು ಭೌತಿಕಕ್ಷೇತ್ರದಲ್ಲಿ ಅಮೆರಿಕನ್ನರಿಗೆ ಸಮಾನರಾಗುವುದರಲ್ಲಿ ಸಂಶಯವಿಲ್ಲ. ಆಗ ಮನೆಮನೆಯಲ್ಲಿಯೂ ರೇಡಿಯೊ, ಟೆಲಿಫೋನ್, ಮೋಟಾರುಗಾಡಿ, 'ಶವರ್‌ಬಾಥ್ ರೂಮ್ಸ್', ಸುಂದರವಾದ ಸೋಫಾ ಕುರ್ಚಿ ಇತ್ಯಾದಿ ವಸ್ತುಗಳು ಶೋಭಿಸಲಾರಂಭಿಸುವವು.

**ರಶಿಯದ ಪ್ರಯೋಗವೂ ಭಾರತೀಯ ಮನೋವೃತ್ತಿಯೂ**

ಈ ಜಡವಾದಕ್ಕೆ ರಶಿಯನ್ನರು ಸಂಸ್ಕೃತಿಸಂವರ್ಧನೆಯನ್ನು ಜೋಡಿಸಿದ್ದಾರೆ. ಸಾಹಿತ್ಯ, ಸಂಗೀತ, ಕಲೆ ಮೊದಲಾದ ವಿಷಯಗಳ ಸಹಾಯದಿಂದ ಪ್ರತಿಯೊಬ್ಬ ವ್ಯಕ್ತಿ ತನ್ನ ವಿಕಾಸಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಕಲಾಸಂಪಾದನೆಯ ಸಾಧನೆಗಳು ಪ್ರತಿಯೊಬ್ಬ ವ್ಯಕ್ತಿಗೂ ಸುಲಭವಾಗಿ ದೊರೆಯುವಂತೆ ಮಾಡಲು ಸರಕಾರವು ಅಲ್ಲಿ ಪ್ರಯತ್ನಿಸುತ್ತಿದೆ. ಆದರಿಂದ ಮೊದಲೆ ಸಂಗೀತ, ನರ್ತನ, ನಾಟ್ಯಗಳಲ್ಲಿ ಮುಂದುವರಿದಿರುವ ಆ ದೇಶದಲ್ಲಿ ಬಹುಜನಸಮಾಜವು ಕಲಾಪ್ರೇಮಿಯೂ ರಸಮರ್ಮಜ್ಞವೂ ಆಗುವುದು ಎಂದು ನಿರೀಕ್ಷಿಸಬಹುದಾಗಿದೆ.

CC-0. Jangamwadi Math Collection. Digitized by eGangotri

**ಇದರಿಂದ ಸುಖ-ಶಾಂತಿಗಳು ದೊರೆಯುವವೆ?**

ಈ ಎಲ್ಲ ವಿಚಾರಗಳೂ ಸಾಧ್ಯವಾದಾಗಲಾದರೂ ಜನರಿಗೆ ನಿಜವಾದ ಸುಖ ಮತ್ತು ಚಿರಕಾಲಾಪೇಕ್ಷಿತ ಶಾಂತಿ ದೊರೆವವೊ ಇಲ್ಲವೊ ಎಂಬ ಪ್ರಶ್ನೆಯು ಹುಟ್ಟುವುದು. ಈಗ ಯಾವ ಬಗೆಯ ಸಮಾಜವನ್ನು ನಿರ್ಮಿಸಬೇಕೆಂದು ರಶಿಯವು ಮಹತ್ವಾಕಾಂಕ್ಷೆಯುಳ್ಳದಾಗಿದೆಯೊ ಆ ಬಗೆಯ ಸಮಾಜದ ಚಿಕ್ಕಚಿಕ್ಕ ಭಾಗಗಳನ್ನು ಇಂದು ಅಮೆರಿಕದಲ್ಲಿಯೂ ಯುರೋಪಿಯನ್ ರಾಷ್ಟ್ರಗಳಲ್ಲಿಯೂ ಅಲ್ಲಲ್ಲಿ ಕಾಣಬಹುದಾಗಿದೆ. ಸುಖವು ಸಿಕ್ಕಿತೆಂದರೆ ಹೆಚ್ಚು ಸುಖದ ಆಸೆಯುಂಟಾಗಿ, ಮನಸ್ಸಿಗೆ ಅಸಮಾಧಾನವಾಗುವುದು; ಅಥವಾ 'ಇದೆಲ್ಲ ಏತಕ್ಕಾಗಿ' ಎಂಬ ವಿಚಾರವು ಮನಸ್ಸಿನಲ್ಲುದಯಿಸಿ ಉದ್ವಿಗ್ನತೆಯಾದರೂ ಉಂಟಾಗುವುದು. ಇಂಥ ಸ್ಥಿತಿಯಲ್ಲಿ ಮನಸ್ಸನ್ನು ಸಮಾಧಾನಸ್ಥಿತಿಯಲ್ಲಿಟ್ಟು ಅದಕ್ಕೆ ಶಾಂತಿಯನ್ನೀಯುವ ತತ್ವಜ್ಞಾನವು ಉದಯಿಸದ ಹೊರತು ನಿಜವಾದ ಸುಖ-ಶಾಂತಿಗಳು ಲಭಿಸಲಾರವು. "ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥" — ಇದು ಭೌತಿಕಸುಖದ ಬಗೆ. ಪ್ರಾಚೀನ ಆರ್ಯರಿಗೆ ಉಂಟಾದ ಈ ಅನುಭವವು ಮುಂದೆ ರಶಿಯನರಿಗೂ ಉಂಟಾದಾಗ ಆಗಿನಿಂದ ಅವರ ತತ್ವಜ್ಞಾನಕ್ಕಾರಂಭವಾಗಬಹುದು ಎಂದೆನಿಸುತ್ತಿದೆ. ಇಂದಿನ ಪರಿಸ್ಥಿತಿಯಾದರೊ, ತಲೆತಲಾಂತರದಿಂದ ಬಡತನದಲ್ಲಿ ಬೇಗೆಯಿಂದ ಬೆಂದುರಿದ ಸಮಾಜಕ್ಕೆ ಇಂದು ಭೌತಿಕ ಜೀವನದ ಹಸಿವು ಹೆಚ್ಚಾಗಿ ಉಂಟಾಗಿದೆ ಎಂಬಂತಿರುವುದು.

**ಈಗಿನ ಜಗತ್ತಿಗೆ ಒಂದು ಹೆಜ್ಜೆ ಮುಂದೆ.**

ಫ್ರೆಂಚ ಮತ್ತು ಅಮೆರಿಕನ್ ರಾಜ್ಯಕ್ರಾಂತಿಗಳಂತೆ ರಶಿಯನ್ ರಾಜ್ಯಕ್ರಾಂತಿಯು ಕೆಲವು ವರ್ಷಗಳಲ್ಲಿ ಕಾಲಗರ್ಭದಲ್ಲಡಗಿಬಿಡುವುದು. ಅದರ ಮೂಲಭೂತತತ್ವಗಳಿಗೆ ವೈಯಕ್ತಿಕ ಪರಂಪರೆ, ವೈಯಕ್ತಿಕ ಸ್ವಾರ್ಥ, ಪಕ್ಷಭೇದ ಮೊದಲಾದ ವಿಷಯಗಳ ಲೇಪವು ಹತ್ತಬಹುದು. ಆದರೆ ಇಷ್ಟಾದಾಗ್ಯೂ ವ್ಯಾಪಕ ದೃಷ್ಟಿಯಿಂದ ನೋಡಿದರೆ ಜಾಗತಿಕ ರಾಜಕೀಯ ವಿಚಾರದಲ್ಲಿ ಈ ಕ್ರಾಂತಿಯು ಒಂದು ಹೆಜ್ಜೆ ಮುಂದೆ ಇಟ್ಟಿರುವುದೆಂಬುದರಲ್ಲಿ ಸಂಶಯವಿಲ್ಲ. ಸಮಾಜದ ಪ್ರಾರಂಭವಾದಾಗಿನಿಂದಲೂ ಇಂದಿನ ವರೆಗೆ ಆದರ್ಶ ಸಮಾಜರಚನೆಯನ್ನು ಹೇಗೆ ಮಾಡಬೇಕೆಂಬ ಸಮಸ್ಯೆಯನ್ನು ಬಿಡಿಸಲು ಮನುಷ್ಯವೃತ್ತಿಯು ಪೇಚಾಡುತ್ತಿದೆ. ಕಾಲಗರ್ಭವನ್ನು ಭೇದಿಸಿ, ಸತ್ಯವನ್ನು ಸಹಜವಾಗಿ ಶೋಧಿಸಿ ತೆಗೆಯುವ ಸಾಮರ್ಥ್ಯವು ಮನುಷ್ಯನಲ್ಲಿ ಇಲ್ಲವಾದುದರಿಂದ, ಪ್ರಯೋಗ ಮಾಡುತ್ತ ಮಾಡುತ್ತ, ಕೀರ್ತಿ ಅಪಕೀರ್ತಿಗಳನ್ನು ಅನುಭವಿಸುತ್ತ, ಮನುಷ್ಯನು ಇದ್ದರ ಶೋಧನೆಯನ್ನು ನಡೆಸಿರುವನು. ಒಂದು ಕಾಲಕ್ಕೆ ನವೀನವಾಗಿ ಕಾಣುವ ತತ್ವವು ಕಾಲಾಂತರದಿಂದ ತಂಗಳಾಗಿ ಸಮಾಜವ್ಯವಹಾರಕ್ಕೆ ಅನುಚಿತವಾಗುವುದು. ಅದರ ಸ್ಥಳದಲ್ಲಿ ಮತ್ತೊಂದು ತತ್ವವು ಅಡಿಯಿಟ್ಟ ಕೂಡಲೆ ಮುಂದಿನ ಸಮಾಜದಲ್ಲಿ ಕ್ರಾಂತಿಯುಂಟಾಗುವುದು. ಈ ಬಗೆಯಾಗಿ ಸಮಾಜಪುರುಷನು, ಎಡಹುತ್ತ ಕುಂಟುತ್ತ, ಒಂದೊಂದೇ ಹೆಜ್ಜೆ ಮುಂದಿಡುತ್ತಿರುವನು. ಸಾಂಕುಶಪ್ರಭುತ್ವ, ನಿರಂಕುಶಪ್ರಭುತ್ವ, ಪ್ರಾತಿನಿಧಿಕಪ್ರಭುತ್ವ, ಸಾಂಕುಶಪ್ರಭುತ್ವ ಮತ್ತು ಪ್ರಜಾಪ್ರಭುತ್ವಗಳ ಮಿಶ್ರಣ, ಇವೇ ಮೊದಲಾದ ಅನೇಕ ಪ್ರಯೋಗಗಳು ಇದುವರೆಗೆ ಆಗಿರುವವು. ಅವುಗಳೆಲ್ಲ ದೋಷವುಳ್ಳವೆಂದು ಕಂಡುಬಂದುದರಿಂದ ಸಮಾಜಸತ್ತೆಯ ನವೀನ ತತ್ವವು ಉದಯಕ್ಕೆ ಬಂದು ಮಾನವ ಇತಿಹಾಸದಲ್ಲಿ ಹೊಸ ಪ್ರಯೋಗಗಳಿಗೆ ಆರಂಭವಾಯಿತು. ಈ ದೀರ್ಘಕಾಲದ ಪೂರ್ವೇತಿಹಾಸದಿಂದ ಕಂಡುಬರುವ ಸಮಾಜದ ವಿಕಾಸಪ್ರವೃತ್ತಿಯನ್ನು ಲಕ್ಷಿಸಿದರೆ, ಸಮಾಜಸತ್ತಾವಾದವೇ ಸಮಾಜದ ಇತಿಹಾಸದಲ್ಲಿ ಕೊನೆಯ ಮುಕ್ತಿಯಾಗಿರದು ಎಂದು ಕಂಡುಬರುವುದು. ಅದರ ಮುಂದೆಯೂ ಅನೇಕ ಸೋಪಾನಗಳಿರಬಹುದು. ಆದಾಗ್ಯೂ ಸಮಾಜತತ್ವದ ಶಾಶ್ವತಸ್ವರೂಪದ ತತ್ವಗಳನ್ನು ಮೈಗೆ ಒಗ್ಗಿಸಿಕೊಂಡು, ಅದರ ತಳಹದಿಯ ಮೇಲೆ ಮುಂದಿನ ಸಮಾಜಪದ್ಧತಿಯನ್ನು ನಿರ್ಮಿಸುವಂಥ ತತ್ವಗಳು ರಶಿಯನ್ ರಾಜ್ಯಕ್ರಾಂತಿಯಲ್ಲಿ ಅಡಗಿರುವವೆಂದು ಹೇಳಬಹುದಾಗಿದೆ.

**ಎರಡರಲ್ಲಿ ಉತ್ತಮವಾದದ್ದು**

ರಾಷ್ಟ್ರದ ಅಥವಾ ಸಮಾಜದ ಸಂಪತ್ತಿಯು ಯೋಗಾಯೋಗದಿಂದ ಮತ್ತು ಪರಂಪರೆಯಿಂದ ಕೆಲವು ವ್ಯಕ್ತಿಗಳ ಕೈಸೇರಿದ್ದರೂ ನಿಜವಾಗಿ ಅದರ ಸಾಮಾಯಿಕ ಒಡೆತನವು ಸಮಾಜಕ್ಕೆ ಸೇರಿದ್ದಾಗಿದೆ. ಬಹುಜನ ಸಮಾಜಕ್ಕೆ ಅದರಿಂದ ಸುಖಸಂಪತ್ತುಗಳು ಸಿಕ್ಕುವ ಬಗೆಯಲ್ಲಿ ಆ ರಾಷ್ಟ್ರೀಯ ಸಂಪತ್ತಿಯ ಉತ್ಪಾದನೆ, ರಕ್ಷಣೆ ಮತ್ತು ಅಭಿವೃದ್ಧಿಗಳಾಗ-

CC-0. Jangamwadi Math Collection. Digitized by eGangotri

ಬೇಕು ಎಂಬೀ ತತ್ವವು ಇಂದಿಲ್ಲ ನಾಳೆಯಾದರೂ ಸಮಾಜ ವ್ಯವಹಾರದಲ್ಲಿ ಮಾನ್ಯವಾಗುವುದು. ಅದು ಯಾವ ಪ್ರಮಾಣದಲ್ಲಿ ಮಾನ್ಯವಾಗುವದು, ಆ ಮಾನ್ಯತೆಯ ವ್ಯಾವಹಾರಿಕ ಸ್ವರೂಪವು ಹೇಗಿರುವುದು ಎಂಬುದನ್ನನುಸರಿಸಿ ಅದಕ್ಕೆ 'ಡಿಮಾಕ್ರಸಿ, ಫಾಸಿಝ್ಮ್ ಅಥವಾ ಸೋಶಾಲಿಝ್ಮ್' ಎಂಬ ಹೆಸರನ್ನಿಡಬಹುದು. 'ಸಾಮಾಜಿಕ ಸಂಪತ್ತಿನ ಮೇಲೆ ಬಹುಜನ ಸಮಾಜದ ಅಧಿಕಾರವಿರುವುದು' ಎಂಬೀ ತತ್ವವು ಅಲ್ಪಪ್ರಮಾಣದಲ್ಲಿ ಪ್ರಜಾಪ್ರಭುತ್ವದ (ಲೋಕಸತ್ತೆಯ) ಪದ್ಧತಿಯಲ್ಲಿ ಅಡಗಿರುವುದು. ಆದರೆ ಅದನ್ನು ಪ್ರಯೋಗದಲ್ಲಿ ತರುವ ತಂತ್ರ (ಟೆಕ್ನಿಕ್) ವನ್ನು ಲೋಕಸತ್ತೆಯು ನಿರ್ಮಿಸಲಾರದೆ ಹೋಯಿತು. ಸ್ವಾರ್ಥಮಯ ವ್ಯಕ್ತಿಸ್ವಾತಂತ್ರ್ಯ ಮತ್ತು ಪಕ್ಷಭೇದಾತ್ಮಕ ಸಮಾಜ ಈ ಸಾಧನೆಗಳನ್ನವಲಂಬಿಸಿದ ಲೋಕಸತ್ತೆಯು ಯಶಸ್ವಿಯಾಗಲಿಲ್ಲ. ಆದ್ದರಿಂದ ತೂಕತಪ್ಪಿದ ತ್ರಾಸುಗೋಲನ್ನು ಸರಿಪಡಿಸಲು 'ಸಮಾಜಸತ್ತೆ ಮತ್ತು ಪಕ್ಷಭೇದವಿಲ್ಲದ ಕೇಂದ್ರೀಭೂತಸತ್ತೆ' ಎಂಬೀ ಎರಡನೆಯ ತಕ್ಕಡಿಯ ಕಡೆ ಯುರೋಪಿಯನ್ ಸಮಾಜವು ತಿರುಗಿಕೊಂಡಿದೆ. ತಂತಿಯ ಮೇಲೆ ನಡೆಯುವವನು ತನ್ನ ತೂಕವನ್ನು ಮಧ್ಯದಲ್ಲಿ ಸಮವಾಗಿಟ್ಟುಕೊಳ್ಳುವಾಗ, ಎಡಬಲ ಪಕ್ಕಗಳಿಗೆ ಕ್ರಮವಾಗಿ ಅವನು ಬಳುಕುತ್ತಿದ್ದರೂ, ಅವನ ಪ್ರವೃತ್ತಿಯು ಮಾತ್ರ ಸ್ಥಿರಮಧ್ಯಸಾಧನೆಯಲ್ಲಿಯೆ ಮಗ್ನವಾಗಿರುವುದು. ಅದೇ ಸ್ಥಿತಿಯೆ ಯುರೋಪಿನ ರಾಜಕಾರಣದಲ್ಲಿಯಾದರೂ ಉಂಟಾಗುವುದು. ವ್ಯಕ್ತಿಸ್ವಾತಂತ್ರ್ಯ-ವಿಚಾರವೈವಿಧ್ಯ ಮತ್ತು ಸಾಮಾಯಿಕ ಸಂಪತ್ತನ್ನು ಬಹುಜನಸಮಾಜದ ಸುಖಕ್ಕಾಗಿ ವಿನಿಯೋಗಿಸುವುದು-ಈ ಮೂರು ಸುವರ್ಣತತ್ವಗಳನ್ನು ಒಂದೇ ಪದ್ಧತಿಯಲ್ಲಿ ಸಮನ್ವಯಗೊಳಿಸುವ ಸಮಾಜಸತ್ತೆಯನ್ನು ಸ್ಥಾಪಿಸುವ ಭಾವೀಕಾಲವನ್ನು ಈಗಲೆ ರಶಿಯವು ತನ್ನ ರಾಜ್ಯಕ್ರಾಂತಿಯಿಂದ ಆವ್ಹಾನ ಮಾಡುತ್ತಿದೆ ಎಂಬುದು ದೂರದೃಷ್ಟಿಯುಳ್ಳವರಿಗೆ ಕಾಣಿಸುವುದು.

**ಆಧ್ಯಾತ್ಮ ಮತ್ತು ಭೌತಿಕ ಭೂಮಿಕೆ**

ಕಮ್ಯೂನಿಝ್ಮ್ ಅಥವಾ ಸಮಾಜಸತ್ತಾವಾದವು ಭಾರತೀಯರ ಮನೋವೃತ್ತಿಗೆ ಮಾನ್ಯವಾಗುವುದೆ ಎಂಬ ಪ್ರಶ್ನೆಯು ಸಹಜವಾಗಿ ಹುಟ್ಟುವುದು. ಇದಕ್ಕೆ ತಾತ್ವಿಕದೃಷ್ಟಿಯಿಂದ 'ಹೌದು', ವ್ಯಾವಹಾರಿಕ ದೃಷ್ಟಿಯಿಂದ 'ಇಲ್ಲ' ಎಂಬ ಎರಡು ಉತ್ತರಗಳು ಕಂಡುಬರುವವು. ಪಾಶ್ಚಾತ್ಯರು ರಾಜಕಾರಣದಲ್ಲಿ ಎಷ್ಟು ವಿಚಾರಮಾಡಿರುವರೊ ಅಷ್ಟೇ ವಿಚಾರವನ್ನು ಭಾರತೀಯರು ಅಧ್ಯಾತ್ಮಕ್ಷೇತ್ರದಲ್ಲಿ ಮಾಡಿದ್ದಾರೆ. ಆದರಿಂದ ಎರಡು ಸಮಾಜಗಳೂ ಎರಡು ಬೇರೆಬೇರೆ ಕ್ಷೇತ್ರಗಳಲ್ಲಿ ಅಂತಿಮ ತತ್ವಕ್ಕೆ ಮುಟ್ಟಿರುವರು. ಜೀವನ ಮತ್ತು ಸಮಾಜಗಳ ವಿಚಾರ ಮಾಡುತ್ತ, 'ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ' ಎಂಬೀ ಉಚ್ಚ ಅಧ್ಯಾತ್ಮತತ್ವಶಿಖರವನ್ನು ಭಾರತೀಯ ತತ್ವಜ್ಞರು ಕಂಡುಕೊಂಡರು. ವಿಚಾರಸ್ವಾತಂತ್ರ್ಯದ ಪ್ರವೃತ್ತಿಯಿಂದ ಸಾಮಾಜಿಕ ಜೀವನದ ವಿಚಾರಮಾಡುತ್ತ 'ರಾಷ್ಟ್ರದ ಅಖಿಲ ಸಂಪತ್ತಿಯು ಸಮಾಜದ ಒಡೆತನಕ್ಕೆ ಸೇರಿರುವುದರಿಂದ ಸರ್ವಸಾಮಾನ್ಯರಿಗೂ ಅದರಿಂದ ಪ್ರಯೋಜನವಾಗಬೇಕು' ಎಂಬೀ ತತ್ವಶಿಖರವನ್ನು ಪಾಶ್ಚಾತ್ಯ ತತ್ವಜ್ಞರು ಕಂಡುಕೊಂಡರು. ವ್ಯಕ್ತಿಯ ಆಧ್ಯಾತ್ಮಿಕ ಮತ್ತು ಭೌತಿಕ ವ್ಯಕ್ತಿತ್ವವು 'ಸಹಸ್ರಶೀರ್ಷ-ಅಕ್ಷ-ಹಸ್ತ-ಪಾದಗಳುಳ್ಳ' ಸಮಾಜದಲ್ಲಿ ವಿಲೀನವಾಗಬೇಕು ಎಂಬೀ ಸಾಮಾನ್ಯ ತತ್ವವು ಈ ಎರಡು ತತ್ವಜ್ಞಾನಗಳಿಗೂ ಮೂಲವಾಗಿದೆ. ಭಾರತೀಯ ತತ್ವವೇತ್ತರು ತತ್ವತುಲನೆಯಲ್ಲಿರುವರು, ಪಾಶ್ಚಾತ್ಯ ತತ್ವವೇತ್ತರು ವ್ಯವಹಾರ ತುಲನೆಯಲ್ಲಿರುವರು. ಭಾರತೀಯ ತತ್ವವೇತ್ತರಿಗೆ ತಮ್ಮ ಆಧ್ಯಾತ್ಮಿಕ ತತ್ವಗಳನ್ನು ವ್ಯಾವಹಾರಿಕ ಸಮಾಜರಚನೆಗೆ ರೂಪಾಂತರಗೊಳಿಸಲು ಅವಕಾಶ ದೊರೆಯಲಿಲ್ಲ; ಪಾಶ್ಚಾತ್ಯ ತತ್ವವೇತ್ತರಿಗೆ ತಮ್ಮ ಸಾಮಾಜಿಕ ತತ್ವಜ್ಞಾನದಲ್ಲಿ ವೇದಾಂತದ ಅಧಿಷ್ಠಾನವನ್ನು ಕಂಡುಹಿಡಿಯಲು ಅವಕಾಶ ಸಿಕ್ಕಿಲ್ಲ. ಸ್ವತಂತ್ರ ಭೂಮಿಕೆಯ ಮೇಲೆ ವಿಚಾರ ಮಾಡುತ್ತ ಒಬ್ಬರು ತತ್ವವನ್ನು ಶೋಧಿಸಿದರು, ಇನ್ನೊಬ್ಬರು ವ್ಯವಹಾರಪದ್ಧತಿಯನ್ನು ಕಂಡುಹಿಡಿದರು.

ಅಂತಿಮಧ್ಯೇಯದ ದೃಷ್ಟಿಯಿಂದ ಕಮ್ಯೂನಿಝ್ಮ್‌ನಲ್ಲಿರುವ ಸಮಾಜಪದ್ಧತಿಯು ವಿಚಾರಶೀಲರಾದ ಭಾರತೀಯರ ಮನೋವೃತ್ತಿಗೆ ಮಾನ್ಯವಾದರೂ ಆಗಬಹುದು. ಆದರೆ ಸಾಧನೆಯ ದೃಷ್ಟಿಯಿಂದ ರಶಿಯನ್ ಕಮ್ಯೂನಿಝ್ಮ್‌ಗೂ ಭಾರತೀಯ ಮನೋವೃತ್ತಿಗೂ ಮಹತ್ವದ ವಿರೋಧವುಂಟಾಗುವುದು.

**ಇತರ ಆಕ್ಷೇಪಗಳು**

ಅತ್ಯಾಚಾರ ಮತ್ತು ರಕ್ತಪಾತಗಳನ್ನಾಧರಿಸಿ ಉಂಟಾದ ಸಮಾಜಕ್ರಾಂತಿಯು ಭಾರತೀಯ ಮನೋವೃತ್ತಿಗೆ ಮಾನ್ಯವಾಗುವುದಿಲ್ಲ. ಕಳೆದ ಆರುಸಾವಿರ ವರ್ಷಗಳಲ್ಲಿ ಹಿಂದುಸ್ಥಾನವು ಅನೇಕ ತೊಡಕಿನ ಸಮಸ್ಯೆಗಳನ್ನು ಬಿಡಿಸಿರುವುದು. ಆದರೆ ಅವುಗಳೆಲ್ಲದರಲ್ಲಿಯೂ ಕ್ರಾಂತಿಯನ್ನು

CC-0. Jangamwadi Math Collection. Digitized by eGangotri

ಬಿಟ್ಟು, ಉತ್ಕ್ರಾಂತಿ ಮತ್ತು ವಿಕಾಸತತ್ವಗಳ ಮೇಲೆ ಅದು ತನ್ನ ಕಟ್ಟಡವನ್ನು ಕಟ್ಟಿರುವುದು. ಕ್ರಾಂತಿಸಾಧನೆಯ ಛಾಯೆಯು ಅದರಿಂದ ಹುಟ್ಟಿದ ಸಮಾಜದ ಮೇಲೆ ಶತಕಾನುಶತಕಗಳ ವರೆಗೆ ಬಿದ್ದಿರುವುದು. ಅತ್ಯಾಚಾರದಿಂದ ನಿರ್ಮಿತವಾದ ಸಮಾಜವು ಅತ್ಯಾಚಾರದಿಂದಲೆ ಬಾಳಬೇಕಾಗುವುದು.

ಅಧೋಗತಿಗೆ ಹೋದಂಥ ಧರ್ಮವಿರೋಧಿ ರಶಿಯವು ಮಾಡಿದ ಬಂಡಾಯವು (ದಂಗೆಯು) ಉಚಿತವೂ ನ್ಯಾಯವೂ ಆಗಿದ್ದರೂ ಅದರನಂತರ ಸ್ವೀಕೃತವಾದ ಅನೀಶ್ವರವಾದ ಮತ್ತು ನಾಸ್ತಿಕವಾದ ವೃತ್ತಿಯು ಅಧ್ಯಾತ್ಮಕ್ಕೆ ತೌರುಮನೆಯೆನಿಸಿದ ಹಿಂದುಸ್ಥಾನಕ್ಕೆ ಮಾನ್ಯವಾಗಲಾರದು. "ಯಾವಜ್ಜೀವೇತ್ ಸುಖಂ ಜೀವೇತ್ ಋಣಂ ಕೃತ್ವಾ ಘೃತಂ ಪಿಬೇತ್। ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ॥" ಎಂಬೀ ಜಡವಾದ ತತ್ವಕ್ಕೆ ಹಿಂದುಸ್ಥಾನದಲ್ಲಿ ಸ್ಥಳ ಸಿಕ್ಕಲಿಲ್ಲ. ಭಾರತೀಯ ತತ್ವಜ್ಞಾನಕ್ಕೆ ತಿಲಾಂಜಲಿಯನ್ನಿತ್ತಿರುವ ನಮ್ಮ ಶಿಕ್ಷಣಸಂಸ್ಥೆಯಿಂದ ಹೊರಬಿದ್ದ ಪೀಳಿಗೆಯವರಿಗೆ ರಶಿಯನ್ ಜಡವಾದವು ದೂರದಿಂದ ರಮ್ಯವಾಗಿದ್ದರೂ ಅದು ಕೊನೆಯವರೆಗೆ ಏಕಪ್ರಕಾರವಾಗಿ ರುಚಿಸಲಾರದು. ಮೂರನೆಯದಾಗಿ, ವ್ಯಕ್ತಿಯ ಆಧ್ಯಾತ್ಮಿಕ ಮತ್ತು ಭೌತಿಕ ಜೀವನಗಳ ಕ್ಷೇತ್ರಗಳಲ್ಲೆಲ್ಲ ಸಮಾಜದ ವರ್ಚಸ್ಸು ಇರಬೇಕೆಂಬ ವಿಷಯವೂ ಹಿಂದುಸ್ಥಾನಕ್ಕೆ ಮಾನ್ಯವಾಗದು. ಸಮಾಜಹಿತದ ದೃಷ್ಟಿಯಿಂದ ಉಚಿತವಾದ ಅಧಿಕಾರಗಳನ್ನು ಸಮಾಜಕ್ಕೆ ವ್ಯಕ್ತಿಯೆ ಒಪ್ಪಿಸುವನು. ಆದರೆ ಆ ಮೇರೆಯನ್ನು ಮೀರಿ ಸಮಾಜಸತ್ತೆಯು ವ್ಯಕ್ತಿತ್ವವನ್ನೆ ನಾಶಗೊಳಿಸಲೆತ್ನಿಸುವುದು ಸಮಾಜದ ದೃಷ್ಟಿಯಿಂದ ಅನಿಷ್ಟವಾಗಿರುವುದು. ವೈಯಕ್ತಿಕ ಸ್ವಾತಂತ್ರ್ಯದಿಂದ ಸಮಾಜಸಂಸ್ಕೃತಿಗಳ ವಿಕಾಸವಾಗಿ ಅದರಲ್ಲಿ ವೈವಿಧ್ಯವುಂಟಾಗುವುದು. ಉಚಿತ ಪ್ರಮಾಣದಲ್ಲಿರುವ ಸಮಾಜಸತ್ತೆಯು ಆ ಆ ಸಂಸ್ಕೃತಿಯನ್ನು ಸಂರಕ್ಷಿಸಬೇಕು.

ಹಿಂದುಸ್ಥಾನವು ಎಚ್ಚರವಾಗಿರಬೇಕು

ಭಾರತೀಯ ಮನೋವೃತ್ತಿಯು ಅತ್ಯಂತಿಕ ಧ್ಯೇಯ ದೃಷ್ಟಿಯಿಂದ ಮತೈಕ್ಯವನ್ನೂ ಸಾಧನೆಯ ದೃಷ್ಟಿಯಿಂದ ಮತಭೇದವನ್ನೂ ತಳೆದುದಾಗಿರುವುದು. ಆದರೆ ಈ ಕೇವಲ ಶುಷ್ಕವಾದವನ್ನು ಹೂಡದೆ ವಿಧಾಯಕ ವಿಚಾರ ಮತ್ತು ಯೋಜನೆಗಳನ್ನು ಮಾಡಿ ಹಿಂದುಸ್ಥಾನವು ಕೆಲಸಕ್ಕೆ ಅಣಿಯಾಗುವ ಕಾಲವು ಈಗ ಬಂದಿದೆ. ಇಂದಿನ ಸ್ವಾತಂತ್ರ್ಯದ ಪ್ರಶ್ನೆಯನ್ನು ಹಿಂದುಸ್ಥಾನವು ಇಂದಿಲ್ಲವಾದರೆ ನಾಳೆಯಾದರೂ ಬಿಡಿಸುವುದೆಂಬುದು ನಿಶ್ಚಿತವಾಗಿದೆ. ಆದರೆ ಸ್ವಾತಂತ್ರ್ಯವು ಸಾಧನೆ ಮಾತ್ರ, ಸಾಧ್ಯ ಅಲ್ಲ. ಸ್ವಾತಂತ್ರ್ಯವು ಬಂದ ಬಳಿಕ ವಿಧಾಯಕವಾಗಿರುವ ನಮ್ಮ ಸಾಮಾಜಿಕ ವೇದಾಂತವಾವುದು ಎಂಬ ಪ್ರಶ್ನೆಯು ಶೀಘ್ರವಾಗಿ ಮುಂದೆ ಬಂದು ನಿಲ್ಲುವುದು. ಪರಕೀಯ ಬಂಡವಾಳಗಾರರ ಪ್ರಭುತ್ವದ ಪಾರತಂತ್ರ್ಯದಿಂದ ಹಿಂದುಸ್ಥಾನವು ಮುಕ್ತವಾದ ಕೂಡಲೆ ದೇಶೀಯ ಬಂಡವಾಳಗಾರರ ಪ್ರಭುತ್ವದ ಉರುಲು ಈ ದುರ್ಭಾಗ ದೇಶದ ಕೊರಳಿಗೆ ಬೀಳುವದಾದರೆ ಅಗ ಹುರಿಯುವ ಬಾಂಡೆಯಿಂದ ತಪ್ಪಿಸಿಕೊಂಡು ಬೆಂಕಿಗೇ ಹಾರಿ ಬಿದ್ದಂತೆ ತೋರುವುದು. ಪಾಶ್ಚಾತ್ಯ ದೇಶಗಳ ಔದ್ಯೋಗಿಕ ಬೆಳವಣಿಗೆಗಳಿಂದ ಬೋಧೆಯನ್ನು ಪಡೆದು ಹಿಂದುಸ್ಥಾನವು ಅದರಲ್ಲಿರುವ ದೋಷಗಳನ್ನು ನಿವಾರಿಸಿ ತನ್ನ ಸ್ವಂತ ಕೈಗಾರಿಕೆಯ ಬೆಳವಣಿಗೆ ಮಾಡಿಕೊಳ್ಳಬೇಕು. ಸಮಾಜಹಿತದ ಮತ್ತು ಬಂಡವಾಳ ಬೇಕಾಗುವ ಕೈಗಾರಿಕೆ ಕಸಬುಗಳು ಸ್ವಾರ್ಥಪರ ವ್ಯಕ್ತಿಗಳ ಕೈಗೆ ಹೋಗದೆ ಸಮಾಜದ ಕೈಯಲ್ಲಿಯೆ ಇರುವಂತಾಗಬೇಕು; ಸಾಮಾನ್ಯ ಜನರನ್ನು ಲೂಟಮಾಡುವುದಕ್ಕಾಗಿ ಅವುಗಳನ್ನು ಉಪಯೋಗಿಸದೆ, ಅವುಗಳ ಮೂಲಕ ಆ ಜನರ ಭೌತಿಕ ಮತ್ತು ಸಾಂಸ್ಕೃತಿಕ ಸುಖಗಳು ಹೆಚ್ಚುವಂತೆ ಇಂದಿನಿಂದ ಎಚ್ಚರಿಕೆ ತೆಗೆದುಕೊಳ್ಳಬೇಕು. ಅಭಿವೃದ್ಧಿ ಹೊಂದಿದ ಕೈಗಾರಿಕೆ ಕಸಬುಗಳು ಖಾಸಗಿ ವ್ಯಕ್ತಿಗಳ ಕೈಗೆ ಹೋಗಿ, ಅವರ ವಂಶವು ಬೆಳೆಯುತ್ತ ಹೋದಂತೆ ಪಾಶ್ಚಾತ್ಯ ದೇಶಗಳಂತೆ ಇಲ್ಲಿಯೂ ಬಂಡವಾಳಗಾರರು ಮತ್ತು ಶ್ರಮಜೀವಿಗಳ ಕಲಹವು ನಡೆಯುತ್ತಲೆ ಇರುವುದು. ಅಷ್ಟು ಮಾತ್ರವಲ್ಲದೆ ಪ್ರತಿ ನಿಮಿಷದಲ್ಲಿಯೂ 'ಕಮ್ಯೂನಿಜ್ಮ್' ಭೂತದ ಹೆದರಿಕೆಯಿಂದ ಪ್ರಭುತ್ವವರ್ಗ ಮತ್ತು ಪ್ರಜೆಗಳಲ್ಲಿ ಹೋರಾಟವುಂಟಾಗುವುದು. ಜಗತ್ತಿನ ವಿಚಾರಪ್ರವಾಹವನ್ನು ಲಕ್ಷ್ಯದಲ್ಲಿಟ್ಟು, ದೂರದ ವರೆಗೆ ದೃಷ್ಟಿಯನ್ನಿಟ್ಟು, ಮುಂದಣ ಪರಿಸ್ಥಿತಿಯನ್ನು ಅರಿತು ನಾವು ನಮ್ಮ ಸಮಾಜವನ್ನು ನೇರ್ಪಡಿಸಿಕೊಳ್ಳುವುದರಲ್ಲಿ ದೂರದರ್ಶಿತ್ವವಿರುವುದು.

ರಶಿಯದಲ್ಲಿರುವ ಎಲ್ಲ ನೋಟಗಳನ್ನೂ ನೋಡಿ ಪ್ರೇಕ್ಷಕನು ಶಾಂತವಾಗಿ ವಿಚಾರಮಾಡಲಾರಂಭಿಸಿದಾಗ — "ನಾನೇನೂ ಕಮ್ಯುನಿಸ್ಟ್ ಅಲ್ಲ, ಆದರೆ ಕಮ್ಯುನಿಜ್ಮ್‌ನಲ್ಲಿ ಭೀತಿಕರವಾದ ವಿಷಯಗಳಾವುವೂ ಇಲ್ಲ"—ಎಂದೆನಿಸು-

CC-0. Jangamwadi Math Collection. Digitized by eGangotri

ವುದು. ಪ್ರತಿಯೊಂದು ಸಮಾಜವೂ ತನ್ನ ಪರಿಸ್ಥಿತಿ ಮತ್ತು ಮನೋವೃತ್ತಿಯ ದೃಷ್ಟಿಯಿಂದ ಅವರ ಔಚಿತ್ಯ ಮತ್ತು ಯುಕ್ತಾಯುಕ್ತತೆಯ ವಿಚಾರಮಾಡಿ, ಅದರಲ್ಲಿರುವ ಉತ್ತಮ ತತ್ವಗಳನ್ನು ತನ್ನ ಸಾಮಾಜಿಕ ವೇದಾಂತದಲ್ಲಿ ಹೇಗೆ ಅಡಗಿಸಬಹುದು. ಎಂದು ವಿಚಾರಮಾಡಬೇಕು. ಎಲ್ಲಿ ಭಿಕ್ಷುಕರಿಗೆ ಬಡವರಿಗೆ ಸಾಕಷ್ಟು ಅನ್ನವಸ್ತ್ರಗಳು ದೊರೆವವೂ ಎಲ್ಲಿ ಶ್ರಮಜೀವಿಗಳ ಮಕ್ಕಳುಮರಿಗಳಿಗೆ ಅವರವರ ನೈಸರ್ಗಿಕ ಪ್ರವೃತ್ತಿಯಂತೆ ಶಿಕ್ಷಣವು ದೊರೆವುದೊ, ಎಲ್ಲಿ ಕಡುಬಡವನಿಗೆ ಕೂಡ ಚಿಕಿತ್ಸಾಸಾಧನೆಗಳ ಎಲ್ಲ ಸೌಕರ್ಯಗಳು ಲಭಿಸುವವೊ, ಎಲ್ಲಿ ಸಾಹಿತ್ಯ-ಸಂಗೀತ-ಕಲೆಗಳನ್ನು ಎಲ್ಲರ ಉಪಯೋಗಕ್ಕೂ ತರುವ ಪ್ರಯತ್ನಗಳು ನಡೆವವೊ—ಅಂಥಾ ಸಮಾಜವು ಇಂದಿನವರೆಗೆ ಸ್ವರ್ಗ-ನಂದನವನಗಳನ್ನು ಸುಖಸ್ವಪ್ನದಲ್ಲಿ ನಿರ್ಮಿಸಬಲ್ಲ ಕವಿಯ ಪ್ರತಿಭೆಯಲ್ಲಿ ಮಾತ್ರವಿತ್ತು. ಇಂದು ಅದು ಮೂರ್ತಸ್ವರೂಪದಲ್ಲಿ, ನಮ್ಮ ಕಣ್ಣೆದುರಿಗೆ, ಈ ಪೀಳಿಗೆಯಲ್ಲಿಯೆ ಅದು ವಿಕಾಸಗೊಳ್ಳಲಾರಂಭಿಸಿದೆ. ಪರಂಪರೆ, ಮನೋವೃತ್ತಿ ಮತ್ತು ಜೀವನ ಧ್ಯೇಯಗಳೊಂದಿಗೆ ಸುಸಂಗತವಾದ ಸಾಧನಗಳೊಂದಿಗೆ ಹಿಂದೆ ಹೇಳಿದ ಆದರ್ಶಸಮಾಜವನ್ನು ನಿರ್ಮಿಸುವುದು ಪ್ರತಿಯೊಂದು ಸಮಾಜದ ಅಂತಿಮ ಧ್ಯೇಯವಾಗಿದೆ.


## ಕಲಾಸಿಂಧು ಮುದ್ರಣಾಲಯ

ನಮ್ಮಲ್ಲಿ ಹಿಂದೀ, ಸಂಸ್ಕೃತ, ಮರಾಟಿ, ಕನ್ನಡ, ಇಂಗ್ಲಿಷುಗಳಲ್ಲಿ ಪುಸ್ತಕಮುದ್ರಣವೂ ಎಲ್ಲಬಗೆಯ ಜಾಬ್ ಕೆಲಸವೂ ಅಚ್ಚುಕಟ್ಟಾಗಿ, ಅಂದವಾಗಿ ಆಗುವುದು; ಮತ್ತು ನಿಯಮಿತ ವೇಳೆಯಲ್ಲಿ ಕೊಡಲ್ಪಡುವುದು.

**ಜಯಕರ್ನಾಟಕ ಪತ್ರಿಕೆಯು ಇಲ್ಲಿಯೇ ಅಚ್ಚಾಗುವುದು.**

ಪ್ರಾಮಾಣಿಕ ವ್ಯವಹಾರ, ಯೋಗ್ಯವಾದ ದರ.

## ಯುನೈಟೆಡ್ ಕರ್ನಾಟಕ ಇನ್ಶುರನ್ಸ್ ಕಂ. ಲಿಮಿಟೆಡ್

### ಪ್ರಧಾನ ಕಾರ್ಯಾಲಯ—ಧಾರವಾಡ.

**ಕಳೆದ ಆರುವರ್ಷಗಳಿಂದಲೂ ಬೆಳೆದು ಬಲಗೊಂಡು ನಿಂತು, ಸರಕಾರದ ಪಂಚವಾರ್ಷಿಕ ವಿಮರ್ಶೆಯಲ್ಲಿ ಜಯಶೀಲವಾಗಿರುವ ಕರ್ನಾಟಕದ ಜೀವವಿಮಾ ಕಂಪನಿ**



**ಈ ಕಂಪನಿಯ ಬಗ್ಗೆ ಜನರಿಗೆ ವಿಶೇಷ ಅಭಿಮಾನವೆನಿಸಲು ಕಾರಣಗಳೇನೆಂದರೆ:**

ಕಂಪನಿಯ ಹಣಕ್ಕೆ ಸರಕಾರದ ಆಧಾರಪತ್ರಗಳ ಮೂಲಕ ಸಂಪೂರ್ಣ ಸುರಕ್ಷಿತತೆಯಿದೆ. ಪಾಲಿಸಿದಾರರ ಹಕ್ಕಿನ ಹಣವನ್ನು ಸಲ್ಲಿಸುವುದರಲ್ಲಿ ತೊಂದರೆ-ತಡೆಗಳೇ ಇಲ್ಲ. ಏಜಂಟರ ಮತ್ತು ಪ್ರಧಾನ ಕಾರ್ಯಾಲಯದ ವ್ಯವಹಾರದಲ್ಲಿ ಸಮಯಶೀಲತೆಯಿದೆ. ಕನಿಷ್ಠ ವೆಚ್ಚದಿಂದ ವಿಶಿಷ್ಟ ಲಾಭವನ್ನು ಕೊಡುವ ವಿಮಾಯೋಜನೆಗಳಿವೆ. ಈ ಕಂಪನಿಯ ಏಳ್ಗೆಯಲ್ಲಿ ಕರ್ನಾಟಕದ ಆರ್ಥಿಕೋನ್ನತಿಯ ಬಲವಾದ ಆಧಾರವಿದೆ.

ಅಲ್ಲದೆ ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಇದರ ಪಾಲುಗಾರರಿದ್ದು, ಇದು ಕನ್ನಡ ನಾಡಿನ ಪ್ರಾತಿನಿಧಿಕ ಸಂಸ್ಥೆಯಾಗಿದೆ. ಆದುದರಿಂದ ಕನ್ನಡದ ಗೆಲವನ್ನು ಬಯಸುವವರು 'ಯುನೈಟೆಡ್ ಕರ್ನಾಟಕ'ದ ಪಾಲಿಸಿಯನ್ನಾಗಲಿ ಪಾಲುಗಳನ್ನಾಗಲಿ ಪಡೆಯಬೇಕು; ವಿಶೇಷವಿವರಕ್ಕೆ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಮುಳಗಿ ಬಂಧುಗಳು<br>ಧಾರವಾಡ ಜಿಲ್ಹೆಯ ಚೀಫ್ ಏಜಂಟರು<br>ಗದಗು

ಎಮ್. ಗೋವರ್ಧನರಾವ್<br>ಮ್ಯಾನೇಜರ್<br>ಯು. ಕ. ಇ. ಕಂ. ಲಿ., ಧಾರವಾಡ


CC-0. Jangamwadi Math Collection. Digitized by eGangotri



ಜನರಲ್ ಫಿಲ್ಮ್ಸ್‌ದವರು

ತಯಾರಿಸಿದ

**' ಚಂದ್ರರಾವ ಮೋರೇ '**

ಎಂಬ

ಹೊಸ ಐತಿಹಾಸಿಕ ಚಿತ್ರಪಟದೊಳಗಿನ

ದೃಶ್ಯಗಳು





CC-0. Jangamwadi Math Collection. Digitized by eGangotri

# ಬಲಿ

[ಟೆನಿಸನ್ನರ " Victim " ಅನುಸರಿಸಿ ಬರೆದುದು. ಲಾವಣಿ ಮಟ್ಟಿನಲ್ಲಿ ಓದುವುದು.]

ಶ್ರೀ. ಮೂರ್ತಿ, " ಸೋದರ ಸಂಘ," ಶಿವಮೊಗ್ಗ



೧

ಹಿಂದಿನ ಬರದಲಿ ನಡೆದ ಕತೆಯು ಇದು, ಕೇಳಿರಿ ಕಿವಿಗೊಟ್ಟು
ಮಂದಿಮಂದಿ ಜನವುರುಳಿ ಬೀಳಲಿದೆಗೆಟ್ಟಿತು ಕಂಗೆಟ್ಟು ||

ಲೆಕ್ಕವಿಲ್ಲದಲೆ ಜನ ಸತ್ತು,
ಬಿಕ್ಕಸಪಡುತಿರೆ ಅತ್ತತ್ತು,
ಜನ ಗುಂಪಿನಲಿ ತಾ ಸೇರಿತ್ತು;
ದೇವಿಯರೆಮ್ಮಲಿ ಮುನಿಸಿರುವುದು ಇದು ಸತ್ಯವೆನ್ನು-ತಲಿ ನುಡಿದಿತ್ತು.

ಮಾತಿದ ಕೇಳುತ ಪೂಜಾರಿ,
ಆತನು ಬಿದ್ದನು ಹೌಹಾರಿ;
ದೇವಿಯ ದೇಗುಲಬಳಿ ಸಾರಿ;
ಎರಡು ಕೈಗಳನು ಮೇಗೆತ್ತುತ ತಾ ಬೇಡಿದನೆಮ್ಮನು ಪೊರೆ ಮಾರಿ.

ಎಮ್ಮ ಮೊರೆಯ ನೀನಾಲಿಪುದು;
ಅಮ್ಮ ಮಾರಿ, ತಪ್ಪ ಮನ್ನಿಪುದು,
ಪ್ರೇಮದೊಳೆಮ್ಮನು ಪಾಲಿಪುದು;
ನಿನ್ನ ಅಣತಿಯ ನಡೆಸುವೆವೆಲ್ಲರು, ಅಮ್ಮ ದುರ್ಗಿ, ನುಡಿನುಡಿ ಯಾವುದೂ.

ಆವುದೆ ಬಲಿ ಬೇಕಾಗಿರಲು—
ಸಿದ್ಧರಿಹೆವು ನಾವದ ಕುಡಲು—
ನಚ್ಚಿನ ನಂಟರೆ ತಾವಿರಲು;
ಜೀವಗೆಳೆಯರವರಾಗಿರಲು;
ನೀ ಬೆಸಸಲು ನಾವ್ಕುಡುವೆವಾತನನು " ಮಾರಿ "ಯೆ ಜವದಲಿ ನಿನಗೆ ಬಲಿ.

೨

ಮಾರಿದುರ್ಗಿಯರು ಕಾತರಿಸಿ,
ಹಸಿಹಸಿವೆನ್ನುತ ಅಬ್ಬರಿಸಿ,
ದೇಶದ ಮೇಗಡೆ ಬಲೆ ಬೀಸೆ,
ಹಕ್ಕಿಪಕ್ಕಿಗಳು ಭೂಮಿಗೆ ಬಿದ್ದುವು ಗರಿಗಳ ಮುದು-ರುತ ತತ್ತರಿಸಿ.

ಸಾಸಿರ ಮಿಗಗಳು ವನದಲ್ಲಿ;
ರಾಶಿಮೀನುಗಳು ನೀರಿನಲಿ;
ಹಿಂಡುಹಿಂಡು ಜನ ದೇಶದಲಿ;
ಎತ್ತ ನೋಡಿದರು ಸತ್ತ ಜೀವಿಗಳೆ! ಅಚ್ಚರಿಯೇನ ಬರದಲ್ಲಿ ?

ಕೊರಗುತಲಿರೆ ತಾ ಪೂಜಾರಿ,
ನುಡಿದಳಾಗಲಾ ಪುರಮಾರಿ:
"ನರಬಲಿಯೊಂದನು ನೀವ್ಕೊಡಿರಿ" ;
ಇಂತೊರೆಯುತ ತಾವ್ಮಾಯವಾದರಾ ಮಾರಿ-ದುರ್ಗಿ-ಯರು ವೈದೋರಿ.

ರಾಜನು ಸುಖದಿಂದಿರುತಿಹನು;
ಹೆಂಡಿರುಮಕ್ಕಳ ಪಡೆದಿಹನು;
ಆತನ ನಚ್ಚಿನ ಜೀವರನು-
ಮೆಚ್ಚಿನ ನಚ್ಚಿನ ಜೀವರನು
ಬೇಗನೆ ಬಲಿಗುಡೆ, ದೇಶವನು
ಬರದಿಂ ಬಿಡಿಸುತ ಪೊರೆಯುವೆನೆನ್ನುವೆ ನುಡಿದರದರ ಪರಿ ಮುಂದೇನು ?

೩

ಮಾರಿಯ ಮೈಮೆಯ ಕೊಂಡಾಡಿ,
ಜನಗಳನೆಲ್ಲರನೊಡಗೂಡಿ,
ರಾಜನ ಹುಡುಕಲು ಮನಮಾಡಿ,
ಕಾಡಿನಲಲೆದನು ಪೂಜಾರಿಯು ಹೆಮ್ಮಾರಿಗೆ ಬಲಿ-ಯನು ಮನಮಾಡಿ.

ರಾಜನು ಬೇಟೆಯ ಬೆಂಬತ್ತಿ
ನಡೆದಿರೆ ತಾನವನೆತ್ತೆತ್ತೊ,
ರಾಣಿಯ ತೊಡೆಯಲಿ ಮಗುವಿತ್ತು;
ಎಂಟೆ ಬರಿಸಗಳು ಆದಕಿತ್ತು;
ಮುಖ ಚಂದ್ರಮನನು ಹೋಲಿತ್ತು;
ಎಳನಗೆ ಮೊಗದಲಿ ಮೂಡಿತ್ತು;
ಗಾಳಿಗೆ ಸುಳಿಗುರುಳಾಡಿತ್ತು;
ಕಂಡಿದನೊಡನೆಯೆ—ಪೂಜಾರಿಯ ದನಿಯೊಮ್ಮೆಲೆ ಹರ್ಷದಿ ನುಡಿದಿತ್ತು.

CC-0. Jangamwadi Math Collection. Digitized by eGangotri

'ಇಲ್ಲಿಹುದಾತನ ನಚ್ಚಿನದು;
ರಾಜನ ನಚ್ಚಿನ ಮೆಚ್ಚಿನದು;
ಅದ ನೀವ್ವೇಗನೆ ಕೊಳ್ಳುವುದು;
ಮುದ್ದಿನ ಮಗುವಿದೆ ಮಾರಿಗೆ ಮೆಚ್ಚುಗೆ' ಎನ್ನಲು
ಸೆಳೆದರು ಕಂದನನು.

೪

ರಾಜನು ಬಂದನು ಹಿಂದಿರುಗಿ
ಬೇಂಟೆಯು ಸಿಕ್ಕದೆ ಬೇಡಾಗಿ;
ಒಡನೆಯೆ ರಾಣಿಯು ಪದಕೆರಗಿ
ಕಂಬನಿಗರೆಯುತ ನುಡಿದಳು 'ನೋಡದೊ ಮಗು-
ವನು ಮಾರಿಯ ಬಲಿಗಾಗಿ,

ಬಂದ ಮಾರಿಯುರಿಗುಣಿಸಾಗಿ,
ನಾಡಿನ ಕ್ಷೇಮದ ಸಲುವಾಗಿ,
ಪ್ರಜೆಗಳ ಪ್ರಾಣದ ಹಿತಕಾಗಿ,
ಒಯ್ವರು, ಕಾಣದೊ ರಮಣನೆ ನುಡಿನುಡಿ ನಿಜವನು
ನೀ ನುಡಿ ಬೇಗೆನಗೆ;

ಅಯ್ಯೊ! ಒಯ್ವರಾ ಮಗುವನ್ನು,
ಎಮ್ಮಯ ನಚ್ಚಿನ ಕಂದನನು,
ಚೆಲ್ಲುವರಾತನ ನೆತ್ತರನು,
ಬೇಗನೆ ನೀ ನುಡಿ ಸತ್ಯವನು.
ಮಗು ಮೇಣೆನ್ನೊಳಗಾರಧಿಕರು ಪ್ರಿಯ, ಮಾಜದೆ
ನುಡಿ ನೀ ನಿಜವನ್ನು.'

೫

ಅರಸನು ಕೈಗಳ ತಲೆಗಿಟ್ಟು,
ಅಯ್ಯೋ! ಎನ್ನುತ ಉಸಿರಿಟ್ಟು,
ನುಡಿದನಿಂತು ತಾ ಧೃತಿಗೆಟ್ಟು,
'ಮಿಂಚಿಹೋಗಿಹುದು ಮಡದಿಯೆ ಕಾರ್ಯವು'
—ಅರಿತು ನೋಡಿದನು ಮನವಿಟ್ಟು.

'ತೀರ್ಪನಿತ್ತನವನೆಮಗಾಗಿ
ಕೊಂಡರು ಕಂದನ ಬಲಿಗಾಗಿ
ಪೂಜ್ಯದೇವತೆಯ ಸಲುವಾಗಿ'
ಎನ್ನುತ ದೇವಿಯ ಕೋಪವ ನೆನೆಯುತ ಮನದಲಿ
ಬೆದರುತ ನಡುನಡುಗಿ.

ಮತ್ತಿಂತೊರೆದನು ಅತ್ತತ್ತು
'ದೇವರ ತೀರ್ಪಿರೆ ಲೇಸಿತ್ತು,
ಈರ್ವರೊಳಗು ಎನ್ನೆದೆಯಿತ್ತು;
ಮಗು ನಿನ್ನೊಳಗೂ ಸಮನಿತ್ತು;
ಇಬ್ಬರು ನಚ್ಚು, ಇಬ್ಬರು ಮೆಚ್ಚು, ಹೆಚ್ಚಾರೆಂಬುದ-
ದೇ ಗೊತ್ತು ?'

'ರಾಜನೊಂಟಿಮಗುವೀಗೆಮಗೆ
ದೊರಕಿತು ದೇವಿಯ ಬಲಿಗಾಗಿ'
ಎನ್ನುತ ಹರ್ಷದಿ ಹಿರಿಹಿಗ್ಗಿ
ಪೂಜಾರಿಯು ಜನಗಳು ನಲಿನಲಿದರು, ಸುಖದಿಂ-
ದಿರುವೆವು ಬರಹೋಗಿ

೬

ಪೂಜೆಗೀಜೆಗಳು ಮುಗಿದಿರಲು,
ಹಸಾದ ಕೂಸಿನ ತಲೆಗಿಡಲು,
ಎದುರಲಿ ಶೂಲವು ಹೊಳೆದಿರಲು,
ಭರದಿಂದಾ ಬಲಿಪೀಠಕೆ ರಾಣಿಯು ಒತ್ತರದಿಂದಲಿ
ಸಾಗಿರಲು;

ಪತಿಯುಬ್ಬಸದಿಂ ಚೀರಿಡುತ
ಸತಿಯನು ಸೆಳೆದಿರೆ ಬೇಡೆನುತ,
'ಇಲ್ಲವಿಲ್ಲವಿಲ್ಲಿಲ್ಲೆ'ನುತ,
'ಕಂದನ ಕೊಲದಿರಿ ನೀವೆ'ನುತ,
'ಎನ್ನನೆ ಬಲಿಗುಡಿ ಬೇಗೆ'ನುತ,
'ನಾನೆ ಆತನಿಗೆ ನಚ್ಚೆ'ನುತ,
'ನಾನೆ ಆತನಿಗೆ ಮೆಚ್ಚೆ'ನುತ,
'ನಾನೇ, ನಾನೇ, ಬಲಿ'ಯೆನುತ,
ನೋವಿಂದೊರಲುತ, ಶೂಲದಿ ಬೀಳುತ ಬಲಿ-
ಯಾದಳು ತಾನಾ ಮಾತೆ.

ಪೂಜಾರಿಯು ನಕ್ಕನು ಕುಣಿದು
ಮಾರಿಯ ಪದದಲಿ ಮಣಿಮಣಿದು
'ನರಬಲಿಯಾದುದು ತಾನಿಂದು.
ಅವುದು ರಾಜನ ಮೆಚ್ಚಿನದೊ?
ಅವುದು ರಾಜನ ನಚ್ಚಿನದೊ?
ದೇವರ ಕಡೆ ತೀರ್ಪಿದುವೆಂದು.'
'ಆತನ ಮೆಚ್ಚಿನ ಮೋಹದ ಸತಿಯನು ಬಲಿಯ-
ನಿತ್ತಿಹೆವು ನಿಮಗಿಂದು!



CC-0. Jangamwadi Math Collection. Digitized by eGangotri

# ಬಿಚ್ಚಿ ಹೇಳಬೇಕಾದ ನಾಲ್ಕು ಮಾತುಗಳು

ಶ್ರೀಮಾನ್ ಗ. ಹ. ಖರೆ, ಭಾರತ ಇತಿಹಾಸ ಸಂಶೋಧಕ ಮಂಡಲ, ಪುಣೆ

ಶ್ರೀ. ಖರೆಯವರು ಮಹಾರಾಷ್ಟ್ರದ ಪ್ರಸಿದ್ಧ ಪರಿಶೋಧಕರಲ್ಲೊಬ್ಬರು. ಈ ಲೇಖನವು ಮರಾಟರ ಕಾರ್ಯತತ್ಪರತೆಯನ್ನೂ ಮರಾಟರ ಇತಿಹಾಸದ ಸಂಶೋಧನೆಗಾಗಿ ಮಹಾರಾಷ್ಟ್ರೇತರ ಪ್ರದೇಶಗಳಲ್ಲಿ ಸುತ್ತಾಡುವುದರಲ್ಲಿ ವ್ಯಕ್ತವಾಗುವ ಅವರ ಕಷ್ಟಸಹಿಷ್ಣುತೆಯನ್ನೂ ವ್ಯಕ್ತಗೊಳಿಸುತ್ತದೆ. ಶ್ರೀಯುತರು ಜಯಕರ್ನಾಟಕದ ಮುಖಾಂತರ ಮಾಡಿಕೊಂಡ ಬಿನ್ನಹವನ್ನು ಕನ್ನಡಿಗರು ಮಾನ್ಯಮಾಡದಿರರೆಂದು ನಮ್ಮ ನಂಬುಗೆ.—ಸಂ. ಜ. ಕ.



ಕಳೆದ ಜನವರಿಯಿಂದ ಎಪ್ರಿಲ ವರೆಗಿನ ೪ ತಿಂಗಳುಗಳಲ್ಲಿ ಸುಮಾರು ೩ ತಿಂಗಳುಗಳ ಕಾಲ ಕರ್ನಾಟಕದಲ್ಲಿ ಐತಿಹಾಸಿಕ ಸಂಶೋಧನದ ಉದ್ದೇಶದಿಂದ ಅಲೆದಾಡುತ್ತಿದ್ದೆನು. ಈ ಅವಧಿಯಲ್ಲಿ ಧಾರವಾಡ, ಬಳ್ಳಾರಿ ಜಿಲ್ಲೆಗಳು ಮತ್ತು ಹೈದರಾಬಾದ ಸಂಸ್ಥಾನ,ಇವುಗಳಲ್ಲಿಯ ಸುಮಾರು ೪೦ ಊರುಗಳಿಗೆ ಹೋಗಿ, ಮುಖ್ಯವಾಗಿ ಹಳೆಯ ಕಾಗದಪತ್ರಗಳನ್ನೂ ಸುಲಭವಾಗಿ ದೊರೆಯಬಹುದಾದ ಬೇರೆ ಐತಿಹಾಸಿಕ ಸಾಮಗ್ರಿಗಳನ್ನೂ ಕಲೆಹಾಕುವ ಪ್ರಯತ್ನ ಮಾಡಿದೆನು. ಈ ಸಂದರ್ಭದಲ್ಲಿ ಸುಮಾರು ೮೦೦ ಪಾರ್ಸಿ, ಮರಾಟಿ ಮತ್ತು ಕನ್ನಡ ಕಾಗದಪತ್ರಗಳನ್ನೂ ಸು. ೫೫೦ ನಾಣ್ಯಗಳನ್ನೂ ಸಂಗ್ರಹಿಸಿದೆನು. ನಾಣ್ಯಗಳಲ್ಲಿ ಕೆಲವು ಕ್ರಯಕ್ಕಾಗಿಯೂ ಕೆಲವು ಕಾಣಿಕೆಯಾಗಿಯೂ ದೊರೆತವು. ಕಾಗದಪತ್ರಗಳನ್ನು ಮರಳಿ ಮುಟ್ಟಿಸುವ ಕರಾರಿನಿಂದ ತಂದೆನು. ಕೆಲವನ್ನು ಈಗಾಗಲೆ ಮುಟ್ಟಿಸಿದ್ದು, ಹಲವನ್ನು ಇನ್ನೂ ಅವರವರಿಗೆ ತಲುಪಿಸಬೇಕಾಗಿದೆ. ಈ ನನ್ನ ಪ್ರವಾಸವು ಕರ್ನಾಟಕದಲ್ಲಿ ಹಲವು ಜನರಲ್ಲಿ ಕುತೂಹಲವನ್ನು ಹುಟ್ಟಿಸಿದ್ದರಿಂದ, ಈ ನಾಲ್ಕು ಮಾತುಗಳನ್ನು ಬರೆಯುತ್ತಿರುವೆನು.

ಪುಣೆಯಲ್ಲಿ ಭಾರತ ಇತಿಹಾಸ ಸಂಶೋಧಕ ಮಂಡಲವೆಂಬ ಸಂಸ್ಥೆಯು ಕಳೆದ ೨೭ ವರ್ಷಗಳಿಂದ ಚರಿತ್ರಸಂಶೋಧನಕಾರ್ಯವನ್ನು ಯಥಾಶಕ್ತಿ ಮಾಡುತ್ತಿದೆಯೆಂಬ ಮಾತನ್ನು ಹಲವರು ಕೇಳಿ ತಿಳಿದಿರಬಹುದು. ಈ ಅವಧಿಯಲ್ಲಿ ಅದರ ಸಂಗ್ರಹದಲ್ಲಿ ೧೦೦೦ ಚಿತ್ರಗಳು, ಮುಕ್ಕಾಲು ಲಕ್ಷ ಕಾಗದಪತ್ರಗಳು, ೫೦೦೦ ಹೊತ್ತಿಗೆಗಳು, ೫೦೦ ಶಿಲಾಲೇಖ, ತಾಮ್ರಪಟ, ಮೂರ್ತಿ ಮತ್ತು ಬೇರೆ ಪ್ರದರ್ಶನೀಯ ವಸ್ತುಗಳು, ೫೦೦೦ ನಾಣ್ಯಗಳು—ಇಂತಿಷ್ಟು ಕೂಡಿದ್ದು, ಸುಮಾರು ೭೫ ಪುಸ್ತಕಗಳನ್ನು ಸಂಸ್ಥೆಯು ಪ್ರಸಿದ್ಧಿಸಿದೆ ಅಥವಾ ಪ್ರಸಿದ್ಧವಾಗುವಂತೆ ಮಾಡಿದೆ. ಸ್ಥಳೀಯ ಪರಿಸ್ಥಿತಿಯ ದೆಸೆಯಿಂದ ಇಲ್ಲಿಯ ಕಾರ್ಯಕರ್ತರ ಗಮನವು ಹೆಚ್ಚಾಗಿ ಮರಾಟರ ಇತಿಹಾಸದ ಕಡೆಗೇ ಒಲಿದಿದ್ದರೂ, ಬೇರೆ ಚರಿತ್ರಾಂಶಗಳನ್ನು ಅವರು ದುರ್ಲಕ್ಷಿಸಿಲ್ಲ. ಮಧ್ಯಯುಗೀನ ಚರಿತ್ರೆಗೆ ಉಪಯುಕ್ತವಾಗಿರುವ ಸುಮಾರು ೫೦ ತಾಮ್ರಪಟ-ಶಿಲಾಲೇಖನಗಳನ್ನು ಈ ಸಂಸ್ಥೆಯು ಬೆಳಕಿಗೆ ತಂದಿದೆಯಲ್ಲದೆ, ಇಂಗ್ಲಿಷ್ ವಿಜಯನಗರ ಸ್ಮಾರಕ ಗ್ರಂಥದ ಮರಾಟಿ ಅವತಾರವನ್ನು ಪ್ರಕಾಶಗೊಳಿಸುವ ಹೊಣೆಯನ್ನು ಮೊನ್ನೆ ಮೊನ್ನೆಯೆ ಪೂರ್ತಿಗೊಳಿಸಿರುತ್ತದೆ. ನಾಣ್ಯಗಳನ್ನು ಕುರಿತು ಒಂದು ಪುಸ್ತಕವನ್ನು ಪ್ರಸಿದ್ಧಿಸಿದ್ದಲ್ಲದೆ, ಪಾರ್ಸಿ ಕಾಗದಪತ್ರಗಳ ೨—೩ ಖಂಡಗಳನ್ನು ಜನರೆದುರಿಗೆ ಇರಿಸಿದ್ದರ ಶ್ರೇಯಸ್ಸು ಇದಕ್ಕೆ ಸಲ್ಲುತ್ತದೆ.

ಈ ಸಂಸ್ಥೆಯ ಕಾರ್ಯಕಲಾಪಗಳಿಂದ ಸಂತುಷ್ಟರಾದ ಮುಧೋಳದ ರಾಜೇಸಾಹೇಬರು ಶಿವಾಜಿಯ ಚರಿತ್ರದ ಉತ್ತಮಸಂಶೋಧನವಾಗಬೇಕೆಂದು ೫೦೦೦ ರೂ.ಗಳನ್ನು

CC-0. Jangamwadi Math Collection. Digitized by eGangotri

೬ ತಿಂಗಳ ಹಿಂದೆಯೆ ಸಂಸ್ಥೆಗೊಪ್ಪಿಸಿದರು. ಮುಧೋಳದ ಅಧಿಪತಿಗಳ ಪೂರ್ವಜರೂ ಶಹಾಜಿ-ಶಿವಾಜಿಯವರೂ ಒಂದೇ ವಂಶದವರಾಗಿದ್ದರೂ ಕಡುಹಗೆಗಳಾಗಿದ್ದರು. ಆದರೆ ಶಿವಾಜಿಯ ಮಹಾವ್ಯಕ್ತಿತ್ವವನ್ನು ಮನದಂದು ರಾಜೇಸಾಹೇಬರು ಈ ಕಾಣಿಕೆಯನ್ನು ದಯಪಾಲಿಸಿದುದು ಅವರ ದೊಡ್ಡ ಮನಸ್ಸನ್ನೆ ಸೂಚಿಸುತ್ತಿದೆ. ಈ ಕಾಣಿಕೆಯಿಂದ ಮುಖ್ಯವಾಗಿ ಶಿವಚರಿತ್ರ-ಶಿವಕಾಲಗಳ ಬಗ್ಗೆ ಜ್ಞಾನವನ್ನು ಹೆಚ್ಚಿಸುವ ಕಾಗದಪತ್ರಗಳನ್ನೂ ಗ್ರಂಥಗಳನ್ನೂ ಪ್ರಸಿದ್ಧಿಸುವುದಿದೆ. ಹೆಚ್ಚಾಗಿ ಕಾಗದಪತ್ರಗಳನ್ನು ಕಲೆಹಾಕುವ ಉದ್ದೇಶದಿಂದಲೆ ನಾನು ಕರ್ನಾಟಕದಲ್ಲಿ ತಿರುಗಾಡಿದುದು.

ಮಹಾರಾಷ್ಟ್ರದಷ್ಟೇ ಕರ್ನಾಟಕದೊಡನೆಯೂ ಶಿವಛತ್ರಪತಿಯ ಸಂಬಂಧವು ಬಂದಿದ್ದಿತು. ಅವನ ಚರಿತ್ರಕ್ಕೆ ಉಪಯುಕ್ತವೆನಿಸುವ ಕಾಗದಗಳು ಮಹಾರಾಷ್ಟ್ರದಷ್ಟೇ ಕರ್ನಾಟಕದಲ್ಲಿಯೂ ದೊರೆಯಲೇ ಬೇಕು. ಮಹಾರಾಷ್ಟ್ರದಲ್ಲಿಯ ಅನೇಕ ಸ್ಥಳಗಳನ್ನು ಕೈ. ರಾಜವಾಡೆ ಮತ್ತಿತರ ಸಂಶೋಧಕರು ಸುತ್ತಾಡಿದಂತೆ ಕರ್ನಾಟಕದ ಗ್ರಾಮಾಂತರಗಳನ್ನು ಸುತ್ತಾಡಲಿಲ್ಲ. ಅಲ್ಲದೆ ಔರಂಗಜೇಬನ ಪ್ರಭುತ್ವಾವಧಿಯಲ್ಲಿ ಅವನ ದಬ್ಬಾಳಿಕೆಯ ರುಬ್ಬುಗುಂಡು ಮಹಾರಾಷ್ಟ್ರದ ಮೇಲೆ ಆಡಿದಷ್ಟು ಕರ್ನಾಟಕದ ಮೇಲೆ ಆಡದಿದ್ದುದರಿಂದ ಅತ್ತಕಡೆ ಕಾಗದಪತ್ರಗಳು ಸುರಕ್ಷಿತವಾಗಿ ಉಳಿದಿರುವ ಸಂಭವವು ಹೆಚ್ಚು. ಈ ಎಲ್ಲ ಮಾತುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು, ಕರ್ನಾಟಕದಲ್ಲಿ ಸಂಚರಿಸಿ, ಕಾಗದಗಳನ್ನು ಕಲೆಹಾಕುವ ಪ್ರಯತ್ನವನ್ನು ನಾನು ಮಾಡಿದೆನು.

ನನ್ನೀ ಪ್ರಯತ್ನದ ಫಲವಾಗಿ ದೊರೆತ ಕಾಗದಗಳೆಲ್ಲವೂ ಉತ್ಕೃಷ್ಟವಾಗಿವೆಯೆಂದು ನಾನು ಹೇಳುತ್ತಿಲ್ಲ. ಹಲವು ಸಲ ಮೇಗರೆಯ ನೋಟಕ್ಕೆ ಇವುಗಳಲ್ಲಿಯ ಹಲವು ನಿರುಪಯುಕ್ತವಾಗಿ ತೋರಬಹುದು. ಆದರೆ ಶಿವಕಾಲವಿಷಯಕ ಸಂಶೋಧಕನು ಇಂತಹ ಸಾಮುಗ್ರಿಯನ್ನು ಕೂಡಿಸದೆ ನಿರ್ವಾಹವಿಲ್ಲ. ಪೇಶವೆಯರ ಕಾಲದ ಕಾಗದಪತ್ರಗಳು ಕರ್ನಾಟಕದೊಳಗಿನ ಹಲವು ಮನೆತನಗಳಲ್ಲಿ ದೊರೆಯುವ ಸಂಭವವಿದೆ. ಪುಣೆಯಲ್ಲಿಯೆ ಪೇಶವೆಯರ ಪ್ರಚಂಡ ದಪ್ತರು ಸಂಗ್ರಹಿಸಲ್ಪಟ್ಟಿದ್ದು, ಅದರಲ್ಲಿ ಐತಿಹಾಸಿಕ ಸಾಮುಗ್ರಿಗಳಿಂದ ತುಂಬಿತುಳುಕುವ ಸುದ್ದಿಯೋಲೆಗಳು ಮತ್ತು ಪತ್ರವ್ಯವಹಾರವು ಸಾವಿರಗಟ್ಟಲೆ ದೊರೆತಿರುತ್ತದೆ; ಮತ್ತು ಅಂತಹ ಸಂಗ್ರಹವು ಇನ್ನೂ ದೊರೆಯಬಹುದಾಗಿದೆ. ಆದರೆ ಇಷ್ಟೇ ಮಹತ್ವದ ಶಿವಕಾಲೀನ ಕಾಗದಗಳು ಒಂದೇ ಕಡೆ ದೊರೆಯುವುದೇ ಅಸಾಧ್ಯವು. ಶಿವಾಜಿಯ ಪ್ರಚಂಡ ದಪ್ತರಖಾನೆಯು ಅವನ ರಾಜಧಾನಿಯಾದ ರಾಯಗಡದಲ್ಲಿತ್ತು. ಆದರೆ ದುರ್ದೈವದಿಂದ ಆ ಕೋಟೆಯು ಔರಂಗಜೇಬನ ಕೈವಶವಾದ ಹೊತ್ತಿನಲ್ಲಿ ಆ ದಪ್ತರೆಲ್ಲ ಸುಟ್ಟುಹೋಯಿತು. ಇದರಿಂದ ತತ್ಕಾಲೀನ ಸಾಧನಗಳಿಗಾಗಿ ಊರೂರು ಅಲೆದಾಡುವುದೆ ಪ್ರಾಪ್ತವಾಗಿದೆ.

ಶಿವಶಾಹಿಯಲ್ಲಿಯೂ ಆದಿಲಶಾಹಿಯಲ್ಲಿಯೂ ದೊಡ್ಡ ದೊಡ್ಡ ಹಿಂದೂಮುಸಲ್ಮಾನ ಸರದಾರರು ಆಳಿಹೋದರು. ಆದರೆ ಅವರಲ್ಲಿ ಬಹುಶಃ ಎಲ್ಲರೂ ಕಾಲಗರ್ಭದಲ್ಲಿ ಲೀನರಾಗಿಹೋಗಿ, ಅವರನ್ನು ಗೊತ್ತುಹಚ್ಚುವುದೂ ದುಃಸಾಧ್ಯವಾಗಿದೆ. ಅಲ್ಪಸಲ್ಪ ಗೊತ್ತಾದರೂ, ಅವರ ವಂಶಜರ ಈಗಿನ ಹೀನಸ್ಥಿತಿಯಲ್ಲಿ ಹೊಟ್ಟೆತುಂಬ ಅನ್ನ ಸಿಕ್ಕುವುದೇ ಬಿಗಿಯಾಗಿರುವಾಗ, ಮನೆಗಳಲ್ಲಿ ಕಾಗದಪತ್ರಗಳು ಸಿಕ್ಕುವುದು ದೂರದ ಮಾತೇ ಆಯಿತು. ಈ ಸರದಾರರೊಡನೆ ಪರಿಹೋಲಿಸಿದಲ್ಲಿ, ದೇಸಾಯಿ, ದೇಶಪಾಂಡೆ, ನಾಡಗೌಡರೇ ಮೊದಲಾದ ವತನದಾರ ಅಧಿಕಾರಿಗಳು ಮಾನಮರ್ಯಾದೆಯಲ್ಲಿ ಕೆಳತರಗತಿಯವರಾಗಿದ್ದರೂ, ಮಹತ್ವದಿಂದ ಮೇಲಣ ದರ್ಜೆಯವರಾಗಿದ್ದು, ರಾಜರ ಪ್ರಭುತ್ವವನ್ನು ಪ್ರಜೆಗಳ ಮೇಲೆ ಚಲಾಯಿಸುವ ಕೆಲಸವನ್ನೂ ಪ್ರಜೆಗಳ ದೂರುಗಳನ್ನು ರಾಜರ ಕಿವಿಗಳಿಗೆ ಮುಟ್ಟಿಸುವ ಕೆಲಸವನ್ನೂ ಇವರೇ ಮಾಡುತ್ತಿದ್ದರು. ಇದರಿಂದ ನೂರಾರು ಬಗೆಯ ಮಹತ್ವದ ರಾಯಸಗಳು ಇವರ ಕಡೆಗೆ ಬರುತ್ತಿದ್ದವು. ಸುದೈವದಿಂದ ಹಲವುಕಡೆ ಇವರ ವಂಶಜರು ಮನೆಮಾರುಳ್ಳವರಾಗಿ ಜೀವಿಸುತ್ತಿದ್ದುದರಿಂದ, ಸಂಶೋಧಕರು ಇವರಂಥವರ ಕಡೆಗೇ ಹೋಗಬೇಕಾಗುತ್ತದೆ. ಈ ದೃಷ್ಟಿಯಿಂದ ವಿಶೇಷವಾಗಿ ದೇಸಾಯರು, ದೇಶಪಾಂಡೆಗಳು, ನಾಡಗೌಡರು ಮೊದಲಾದವರ ಬಳಿಯಲ್ಲಿರುವ ದಪ್ತರುಗಳನ್ನು ಶೋಧಿಸಿದಾಗ, ನನ್ನ ಅಪೇಕ್ಷೆಯ ಮೇರೆಗೆ ಎಷ್ಟೋ ಪತ್ರವ್ಯವಹಾರವು ಉಪಲಬ್ಧವಾಯಿತು.

ನನಗೆ ದೊರೆತ ಕಾಗದಗಳಲ್ಲಿ ಆದಿಲಶಾಹಿ ರಾಜಪತ್ರಗಳು ಬಹುಶಃ ಪಾರ್ಸೀ ಭಾಷೆಯಲ್ಲಿಯವಾಗಿವೆ. ಆದಿಲಶಾಹಿ ಆಡಳಿತದಲ್ಲಿ ಪಾರ್ಸಿಯು ಓಲಗದ ಭಾಷೆಯೆಂದು ಗಣಿಸಲ್ಪಟ್ಟುದರಿಂದ ಆ ಪತ್ರಗಳು ಅದರಲ್ಲಿಯೇ ಬರೆಯಲ್ಪಟ್ಟುವಾಗಿವೆ. ಆದರೆ ದರಬಾರದೊಳಗಿನ ಯಚ್ಚಾವತ್ ಜನರು ಮರಾಟಿಯನ್ನು ಬಳಸುತ್ತಿದ್ದುದಲ್ಲದೆ, ಶಿವಾಜಿಯ ಮತ್ತು ಅವನ ವಂಶಜರ ಆಳಿಕೆಯಲ್ಲಿ ಮರಾಟಿಯು ರಾಜಭಾಷೆಯಾಗಿತ್ತು. ಹೀಗಿರು-

CC-0. Jangamwadi Math Collection. Digitized by eGangotri

ವುದರಿಂದ ಅತ್ತಕಡೆ ಯಾವುದೇ ವತನದಾರರ ದಪ್ತರನ್ನು ಸಂಶೋಧಿಸಿದಾಗ್ಗೂ ಉಪಯುಕ್ತವೆನಿಸುವ ಕಾಗದಗಳಲ್ಲಿ ಬಹುಸಂಖ್ಯವಾದುವು ಮರಾಟಿಯಲ್ಲಿಯೆ ದೊರೆಯುತ್ತಿವೆ. ತೀರ ಕಿರುಕುಳ, ಎಂದರೆ ತಂತಮ್ಮೊಳಗಿನ ಪತ್ರವ್ಯವಹಾರ, ಖಾಸಗಿ ದಾನಪತ್ರಗಳು ಇತ್ಯಾದಿ ಮಾತ್ರ ಕನ್ನಡದಲ್ಲಿ ಬಕಿದುವಾಗಿವೆ. ನನ್ನ ಹತ್ತರ ನೂರಿನ್ನೂರು ಕನ್ನಡ ಕಾಗದಗಳು ಇವೆಯಾದರೂ ಅವುಗಳಲ್ಲಿ ಹತ್ತು ಕೂಡ ಮಹತ್ವದುವಾಗಿಲ್ಲ. ಇದರ ಅರ್ಥವು, ಕನ್ನಡದಲ್ಲಿ ಬರೆಯಲ್ಪಟ್ಟ ಮಹತ್ವದ ಕಾಗದಗಳು ದೊರೆಯಲೇ ಆರವು ಎಂದಲ್ಲ. ನಾನು ಹುಡುಕಿದ ಮನೆತನಗಳಲ್ಲಿ ಅವು ದೊರೆಯುವ ಸಂಭವ ಕಡಿಮೆ. ಬೇರೆಬೇರೆ ರಾಜಗುರುಗಳು, ಧರ್ಮಾಧಿಕಾರಿಗಳು, ವಿದ್ವಾಂಸರು, ಶೈವ ವೈಷ್ಣವ ಮಠಗಳು—ಈ ಮೊದಲಾದ ಕಡೆಯ ದಪ್ತರುಗಳನ್ನು ಪರೀಕ್ಷಿಸಲಾಗಿ ಮಹತ್ವದ ಕನ್ನಡ ಕಾಗದಗಳು ದೊರೆಯುವ ಸಂಭವವಿದೆ. ಆದರೆ ಒಟ್ಟಿನಲ್ಲಿ ಇಂತಹ ಕಾಗದಗಳು ನೋಡಲು ದೊರೆಯುವುದೇ ಕಷ್ಟ; ಐತಿಹಾಸಿಕ ಮಹತ್ವವುಳ್ಳ ಕಾಗದಗಳ ಪ್ರಾಪ್ತಿಯು ಅಲ್ಲಿಯೂ ಕಡಿಮೆಯೇ; ಅಲ್ಲದೆ ಭಾಷಾ-ಲಿಪಿಗಳ ತೊಂದರೆಯೂ ಕೆಲಪ್ರಮಾಣದಲ್ಲಿದ್ದುದರಿಂದ ಅವುಗಳನ್ನು ಸಂಶೋಧಿಸುವ ಪ್ರಯತ್ನವನ್ನು ಅಷ್ಟರಮಟ್ಟಿಗೆ ನಾನು ಮಾಡಲಿಲ್ಲ.

ಸಂಶೋಧಕರಾದ ನಾವು ಕಾಗದಪತ್ರಗಳಿಗಾಗಿ ಹಳೆಯ ದಪ್ತರುಗಳನ್ನು ತಿರುವಿ ಹಾಕುವಾಗ, ಸಂಗ್ರಹದಲ್ಲಿರುವ ಎಲ್ಲ ಕಾಗದಗಳೂ ನೋಡಲು ದೊರೆಯಬೇಕೆಂಬುದೇ ನಮ್ಮ ಅಪೇಕ್ಷೆಯಾಗಿರುತ್ತದೆ. ಎಷ್ಟೋಸಲ ಕಾಗದಗಳ ಒಡೆಯರು —ನಮಗೆ ಬಹಳ ತೊಂದರೆಯಾಗಬಾರದೆಂತಲೊ, ಬೇರೆ ಕಾರಣದಿಂದಲೊ-ತಮಗೆ ಸರಿದೋರುವ ಆರಿಸಿತೆಗೆದ ಕೆಲವು ಕಾಗದಗಳನ್ನೇ ತೋರಿಸುವರು. ಆದರೆ ರೋಗಿಯ ಪರೀಕ್ಷೆಯನ್ನು ಅನಭಿಜ್ಞನು ಮಾಡುವುದಕ್ಕೆ ಮಹತ್ವವಿರುವಷ್ಟೇ ಈ ಆಯ್ಕೆಗೂ ಇರುವುದರಿಂದ, ಸಂಶೋಧಕರಿಗೆ ಆದರಿಂದ ಹಾನಿಯೇ ತಟ್ಟುವುದು. ಆದುದರಿಂದ ಸಂಗ್ರಹದಲ್ಲಿದ್ದ ಕಾಗದಗಳೆಲ್ಲ ಒಂದೂ ಬಿಡದೆ ಸಂಶೋಧಕರಿಗೆ ನೋಡಲು ದೊರೆಯುವುದೇ ಇಷ್ಟವಾಗಿದೆ. ಇಂತಹ ಕಾಗದಗಳು ದೊರೆತರೆ, ಅಕ್ಷರಶೈಲಿಯ ದೃಷ್ಟಿಯಿಂದ ಹಳೆಯವಾದುವನ್ನು, ರಾಜಮುದ್ರಾದಿಗಳೊಡಗೂಡಿದುವನ್ನು, ಬಣ್ಣ ಬಹಿರಂಗಗಳಿಂದ ಹಳೆಯವಾಗಿ ಎದ್ದುಕಾಣುವಂಥವನ್ನು ಸಂಶೋಧಕನು ಮೊದಲು ತೆಗೆದಿಡುವನು. ಹಳೆಯ ಕಾಗದಗಳಲ್ಲಿ ಖಾಸಗಿ ಪತ್ರಗಳು ಅಥವಾ ಲೆಕ್ಕಪತ್ರಗಳ —ಇವೆ ಹೆಚ್ಚಾಗಿರುವುದರಿಂದ, ಹೆಚ್ಚಿನ ಮಹತ್ವದ ಕಾಗದಗಳು ದೊರೆಯುವುದು ಅಪರೂಪ. ಆದರೂ ದೊರೆತ ಕಾಗದಪತ್ರಗಳ ಮಹತ್ವವನ್ನು ಅಲ್ಲಿಂದಲ್ಲಿಯೆ ಅಳೆದು ನೋಡುವುದು ಸಾಧ್ಯವಿರದ್ದರಿಂದ, ಇಂತಹ ಕಾಗದಗಳನ್ನು ಹೆಚ್ಚಿನ ಶೋಧನೆಗಾಗಿ ತನ್ನೊಡನೆ ಒಯ್ಯಲು ಸಂಶೋಧಕನು ಪ್ರಯತ್ನಿಸುವನು. ಎಷ್ಟೋಕಡೆ ಕಾಗದಪತ್ರಗಳ ಒಡೆಯರು ಅವುಗಳನ್ನು ಸಂಶೋಧಕರ ಕಡೆಗೊಪ್ಪಿಸಲು ಸಿದ್ಧರಾಗುತ್ತಿದ್ದರೆ, ಇನ್ನು ಕೆಲಕಡೆ ಅದು ಕೂಡಿಬರದ್ದರಿಂದ ಸಂಶೋಧಕನು ಆ ಕಾಗದಗಳನ್ನು ಮತ್ತೆಮತ್ತೆ ಓದುವ ಕೆಲಸವನ್ನೂ ಪ್ರತೀಕರಣವನ್ನೂ ಆ ಮಹನೀಯರ ಮನೆಬಾಗಿಲಿನಲ್ಲಿಯೆ ಕುಳಿತು ಮಾಡಬೇಕಾಗುವುದು. ಇದು ಹಲದಿನದ ಕೆಲಸವಾಗುತ್ತದೆ, ಮತ್ತು ಅಷ್ಟು ದಿನ ಬಿಡಾರ ಹೂಡುವುದು ಸಂಶೋಧಕನಿಗೆ ಹಲವು ಕಾರಣಗಳಿಗಾಗಿ ಅಸಾಧ್ಯವಾಗಿರುತ್ತದೆ. ಆದುದರಿಂದ ಇಂಥ ಸ್ಥಳಗಳಲ್ಲಿಯ ಕಾಗದಪತ್ರಗಳನ್ನು ಹುಡುಕುವ ಕೆಲಸದಲ್ಲಿ ತುಂಬಾ ಸಡಿಲು ಹುಟ್ಟುವ ಸಂಭವವಿರುತ್ತದೆ. ಕಾಗದಗಳನ್ನು ಸಂಶೋಧನಕೇಂದ್ರಕ್ಕೆ ತಂದಮೇಲೆ ಅವುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ, ಪ್ರತಿಮಾಡಲು ಯೋಗ್ಯವಾದುವುಗಳನ್ನು ಬದಿಗಿಡುತ್ತೇವೆ. ಆ ಕ್ರಿಯೆಯಲ್ಲಿ ಅವುಗಳೊಳಗಿನ ಅಂಶಗಳ ಜ್ಞಾನವು ಸ್ವಲ್ಪಸ್ವಲ್ಪವಾಗಿ ಆಗತೊಡಗುತ್ತದೆ. ಪ್ರತಿಗಳನ್ನು ಕಾಲಾನುಕ್ರಮಗಳಲ್ಲಿ ಹಚ್ಚಿದಮೇಲೆ, ಒಂದರೊಳಗಿನ ಅಂಶಗಳು ಮತ್ತೆಮತ್ತೆ ಹಲವು ಕಾಗದಗಳಲ್ಲಿ ಬರುತ್ತಿದ್ದುದು ಕಂಡುಬರುತ್ತದೆ; ಅಥವಾ ಅವೇ ಅಂಶಗಳು ಮೊದಲು ಪ್ರಕಟವಾದ ಕಾಗದಗಳಲ್ಲಿದ್ದುದು ತಿಳಿದುಬರುತ್ತದೆ. ಇಂಥ ಸಂದರ್ಭದಲ್ಲಿ ಅವುಗಳಲ್ಲಿಯ ಒಂದೇ ಕಾಗದವನ್ನು ಮುದ್ರಿಸುವುದು ಅಥವಾ ಪೂರ್ತಿಯಾಗಿ ಬಿಟ್ಟುಬಿಡುವುದು ಅನಿವಾರ್ಯವಾಗಿರುತ್ತದೆ. ಇತ್ಯರ್ಥವೇನೆಂದರೆ ಕಾಗದಗಳನ್ನು ಈರೀತಿ ಎರಡುಮೂರು ಸಲ ಪರಿಶೋಧಿಸುವುದರಲ್ಲಿ ತೀರ ಸ್ವಲ್ಪ ಕಾಗದಗಳು ಮುದ್ರಣಾರ್ಹವಾಗಿ ಹೊರಬೀಳುತ್ತವೆ.

ಕಾಗದಗಳನ್ನು ಮುದ್ರಿಸಲು ಕೈಕೊಂಡ ಮೇಲೆ, ಮುದ್ರಿತಗಳನ್ನು ತಿದ್ದುವಾಗ ತಾರೀಖು, ವಿಷಯ ಇ. ಗಳನ್ನು ಕುರಿತು ಹಲವು ಕಡೆ ಸಂದೇಹವು ತಲೆದೋರಿ, ಮೂಲ ಕಾಗದವನ್ನು ನೋಡುವುದು ಅಗತ್ಯವೆನಿಸುತ್ತದೆ. ಆದುದರಿಂದ ಮುದ್ರಣ ಮತ್ತು ಟಿಪ್ಪಣಿಗಳನ್ನು ಬರೆಯುವ ಕೆಲಸವು ಪೂರ್ತಿಯಾಗುವ ವರೆಗೂ ಮೂಲ ಪ್ರತಿಗಳನ್ನು

CC-0. Jangamwadi Math Collection. Digitized by eGangotri

ಇರಿಸಿಕೊಳ್ಳುವುದೇ ಲೇಸಾಗುವುದು. ಈ ಕೆಲಸಗಳು ನೆರವೇರಿದ ಮೇಲೆ ಮೂಲ ಕಾಗದಗಳ ತಾದೃಶ ಆವಶ್ಯಕತೆಯು ಉಳಿಯದಿದ್ದುದರಿಂದ ಕಾಗದಗಳನ್ನು ಅವರವರಿಗೆ ತಲುಪಿಸಲು ಅಡ್ಡಿಯಿರುವುದಿಲ್ಲ. ನಾನು ಕರ್ನಾಟಕದಿಂದ ತಂದ ಕಾಗದಗಳಿಗೆ ಸಂಬಂಧಿಸಿದ ಪ್ರಾಥಮಿಕ ಕೆಲಸವು ಮುಗಿದಿದ್ದು, ಇದೀಗ ಮರಾಟಿ ಕಾಗದಗಳನ್ನು ಮುದ್ರಿಸುವ ಕೆಲಸವು ಪ್ರಾರಂಭವಾಗಿದೆ. ಅವುಗಳನ್ನೊಳಗೊಂಡ ಪುಸ್ತಕವು ಸಪ್ಟಂಬರದಲ್ಲಿ ಪ್ರಸಿದ್ಧವಾಗಬಹುದು. ತರುವಾಯ ಪಾರ್ಸಿ ಕಾಗದಗಳ ಮುದ್ರಣದ ಕೆಲಸವನ್ನು ಕೈಕೊಂಡು, ಡಿಸೆಂಬರದೊಳಗೆ ಕೊನೆಗಾಣಿಸಬಲ್ಲೆನೆಂಬ ಅಂದಾಜು ಇದೆ. ಆದುದರಿಂದ ನನ್ನ ಕಡೆ ಕಾಗದಪತ್ರಗಳನ್ನು ಕೊಟ್ಟ ಮಹನೀಯರು ಅದುವರೆಗೂ ಅವುಗಳನ್ನು ನನ್ನ ಕಡೆಗೆ, ಎಂದರೆ ಭಾ. ಇ. ಸಂ. ಮಂಡಳದ ಕಡೆಗೆ ದಯವಿಟ್ಟು ಇರಗೊಡಬೇಕು. ಅಷ್ಟು ಅವಧಿ ಬೇಕೇಬೇಕೆಂದು ತೋರುತ್ತದೆ. ಆ ಪೂರ್ವದಲ್ಲಿಯೂ ಅಗತ್ಯವಿದ್ದವರು ಬರೆದರೆ, ಅವರ ಕಾಗದಪತ್ರಗಳನ್ನು ಕೂಡಲೆ ಕಳಿಸಿಕೊಡಲು ಸಿದ್ಧನಿದ್ದೇನೆ.

ಶಿವಕಾಲೀನ ಮತ್ತು ಶಿವಚರಿತ್ರೋಪಯೋಗಿಯಾದ ಕಾಗದಪತ್ರಗಳಿಗಾಗಿಯೆ ನಾನು ಓಡಿಯಾಡಿದರೂ, ನನ್ನ ಕೈಗೆ ಬಂದುವುಗಳಲ್ಲಿ ಶಿವಚರಿತ್ರಕ್ಕೆ ಉಪಯುಕ್ತವಾದುವುಗಳು ತೀರ ಸ್ವಲ್ಪವಾಗಿವೆ. ಔರಂಗಜೇಬನು ೨೫ ವರ್ಷ ಕಾಲ ದಕ್ಷಿಣಭಾರತದಲ್ಲಿ ದಂಡಯಾತ್ರೆ ಬೆಳಸಿದಾಗಿನ ಸಮಯಕ್ಕೆ ಸಂಬಂಧಿಸಿದುವು ಕೆಲವಿವೆ. ಕೆಲವು ಶಿವಪೂರ್ವಕಾಲೀನವೂ ಇವೆ. ಐತಿಹಾಸಿಕ ಸಮಾಚಾರವನ್ನು ಒಳಗೊಂಡಿದ್ದರೆ ಮಾತ್ರ ಕಾಗದವನ್ನು ಮುದ್ರಿಸಲಾಗುವುದು. ಅದು ಶಿವಾಜಿಯ ಬಗ್ಗೆ ಏನನ್ನಾದರೂ ಹೇಳುತ್ತಿದೆಯೇ ಎಂಬುದನ್ನೆ ಒರೆಯೊಗಿಟ್ಟುಕೊಂಡಿಲ್ಲ. ಉ: ತೀರ ಹಳೆಯ ಕಾಗದವು ಸುಮಾರಾಗಿ ತಾಳೀಕೋಟೆಯ (ರಕ್ಕಸತಂಗಡಿಯ) ಕಾಳಗದ ಹೊತ್ತಿನದಾಗಿದ್ದು, ಅದರಲ್ಲಿ ಲಕ್ಷ್ಮೇಶ್ವರ ದೇಸಾಯರ ಒಬ್ಬ ಪೂರ್ವಜನಾದ ಕೆಂಚಣಗೌಡರ ಸಹಾಯದಿಂದ ಜಾಲೀಹಾಳದ ಮೇಲೆ ದಾಳಿಯಿಕ್ಕುವುದರ ಉಲ್ಲೇಖವಿದೆ. ಇದರಲ್ಲಿ ಶಿವಾಜಿಯ ದೂರದ ಸಂಬಂಧವೂ ಬಾರದು. ಅಲ್ಲದೆ ಕರ್ನಾಟದಲ್ಲಿಯ ಕಾಗದಗಳಲ್ಲಿ— ಅವುಗಳಲ್ಲಿ ಪರಕೀಯರ ಉಲ್ಲೇಖವಿರಲಿ, ಇರದಿರಲಿ— ಕನ್ನಡಿಗರ ಕರ್ತೃತ್ವವು ಒಡಮೂಡಿರದೆ ಇರದು.

ಅಂತೂ, ಇತಿಹಾಸೋಪಯುಕ್ತ ಕಾಗದಗಳ ಮುದ್ರಣವನ್ನು ಕೈಕೊಂಡಿರುವುದರಿಂದ ಕರ್ನಾಟಕ-ಮಹಾರಾಷ್ಟ್ರ ಗಳೆರಡರ ಚರಿತ್ರಾಂಶಗಳ ಮೇಲೂ ಪ್ರಕಾಶವು ಬೀಳಬಹುದಾಗಿದೆ. ಆದುದರಿಂದ ಎರಡೂ ಪ್ರಾಂತಗಳ ಜನರು ಎಲ್ಲಾ ಬಗೆಯಿಂದ ನೆರವಾಗಬೇಕೆಂದು ನನ್ನ ವಿಜ್ಞಾಪನೆ.

SHREENIVAS & Co.




ARTISTS & DESIGNERS.

Beautiful & Faithful - Reproductions
BY
OUR PERFECT LINE, HALF-TONE & COLOUR PROCESS.

-THE PREMIER-
Karnataka
PHOTO ENGRAVERS.



- Malamaddi, DHARWAR.

CC-0. Jangamwadi Math Collection. Digitized by eGangotri

# ಅಖಿಲಭಾರತ ಗ್ರಾಮೋದ್ಯೋಗ ಸಂಘ, ವರ್ಧಾ

ಲೇಖಕರು: ಮೈಸೂರ್ ಪೆನ್



**ವರ್ಧಾ ಕೇಂದ್ರದಲ್ಲಿ ಗಾಂಧಿಜಿಯವರು ನಡೆಯಿಸಿದ ಹಳ್ಳಿಯ ಕೈಗಾರಿಕೆಗಳ ಪ್ರಯೋಗ-ಗಳನ್ನು ಸಾರರೂಪವಾಗಿ ವರ್ಣಿಸಲಾಗಿದೆ. ಹಳೆಯ ಕೈಗಾರಿಕೆಗಳನ್ನೆ ಹೊಸ ಶಾಸ್ತ್ರೀಯ ದೃಷ್ಟಿಯಿಂದ ಸಂಸ್ಕರಿಸಿ, ಪ್ರಸರಿಸುವ ವಿಧಿ-ವಿಧಾನಗಳನ್ನು ಸೂಕ್ತವಾಗಿ ಹೇಳಲಾಗಿದೆ.**



'ವರ್ಧಾ' ಗಾಂಧೀಜಿಯವರ ಕ್ರಿಯಾಶಕ್ತಿಯ ವ್ಯಕ್ತರೂಪ, ದೇಶದ ಮುಂದಿನ ಕೈಗಾರಿಕೆಯ ಪ್ರಯೋ-ಗದ ಅಡಿಗಲ್ಲು. ಭಾರತದ ಮಾದರಿ ಗ್ರಾಮವನ್ನು ಕ್ರಮ-ವಾಗಿ ಸಜ್ಜುಗೊಳಿಸುವುದಕ್ಕೋಸ್ಕರ, ರಾಷ್ಟ್ರೀಯ ರೀತಿಯಲ್ಲಿ ವರ್ಧಾದಲ್ಲಿ ಅಖಿಲಭಾರತ ಗ್ರಾಮ ಕೈಗಾರಿಕೆಯ ಸಂಘವು ಕೆಲಸಮಾಡುತ್ತಲಿದೆ. ಗ್ರಾಮನೈರ್ಮಲ್ಯ, ಆರೋಗ್ಯ, ಶೌಚ, ಆಹಾರ, ಕೈಗಾರಿಕೆ ಇವು ಅಲ್ಲಿ ಪ್ರಯೋಗಿಸ-ಲ್ಪಡುವ ಮುಖ್ಯ ಕಾರ್ಯಕ್ರಮಗಳು. ಅಲ್ಲದೆ ನೂತನ ವಿಷಯಗಳನ್ನು ಹಳ್ಳಿಗಳ ಸ್ಥಿತಿಗೆ ಹೊಂದಿಕೊಳ್ಳುವಂತೆ ಮುಂದುವರಿಸುವುದಕ್ಕೆ ಕಾರ್ಯಕ್ಷೇತ್ರವಾಗಿದೆ. ಈ ಭಾಗ-ದಲ್ಲಿ ಇದುವರೆಗೂ ಫಲಿಸದೇ ಇದ್ದ ಜೇನುವ್ಯವಸಾಯವು ಪ್ರಯೋಗವಿಧಾನದಿಂದ ಕೈಕೊಳ್ಳಲ್ಪಟ್ಟು ಅಭಿವೃದ್ಧಿ-ಗೊಳಿಸಲ್ಪಡುತ್ತಿದೆ. ಆಗುವುದೊ—ಹೋಗುವುದೊ ಎಂಬ ಸ್ಥಿತಿಯಲ್ಲಿ ಪ್ರಾರಂಭಿಸಲ್ಪಟ್ಟ ಈ ವ್ಯವಸಾಯದಲ್ಲಿ ಮೊದಲ ವರ್ಷವೇ (ಅಂದರೆ ಹೋದ ವರ್ಷ) ೧೦ ಪೌಂಡು ಜೇನು-ತುಪ್ಪವು ಬರುವಂತೆ ಮಾಡಲಾಯಿತು. ೨ನೇ ವರ್ಷದ (ಅಂದರೆ ಈ ವರ್ಷದ) ಮೊದಲನೆಯ ೬ ತಿಂಗಳಲ್ಲೇ ೭೫ ಪೌಂಡಿನಷ್ಟು ಶೇಖರಿಸಲಾಗಿದೆ. ಇಷ್ಟಕ್ಕೇ ತಟಸ್ಥರಾಗದೆ, ಇನ್ನೂ ಸಂಪೂರ್ಣ ಫಲ ಪಡೆಯುವುದಕ್ಕೆ ಪ್ರಯತ್ನಿಸು-ತ್ತಿದ್ದಾರೆ. ಶೇಗಾಂವದಲ್ಲಿ ೩, ನಲವಾಡಿಯಲ್ಲಿ ೧.... ಹೀಗೆ ಸುತ್ತುಮುತ್ತಲಿನ ಪ್ರದೇಶಗಳಲ್ಲಿ ಒಟ್ಟು ಜೇನುವ್ಯವಸಾ-ಯಕ್ಕೆ ೧೨ ಉಪನಿವೇಶ (ಕಾಲೊನಿ) ಗಳಿವೆ. ಹನ್ನೆರಡು ಸ್ಥಾನಗಳಲ್ಲಿ ಬೇರೆಬೇರೆ ಸ್ಥಿತಿಗತಿಗಳಿಗೆ ತಕ್ಕಂತೆ ಪ್ರಯೋಗ-ಕಾರ್ಯವು ನಡೆಯುತ್ತಿದೆ. ವರ್ಧಾವು ಇವೆಲ್ಲಕ್ಕೂ ಕೇಂದ್ರ-ಸ್ಥಾನವಾಗಿ, ಮೇಲ್ವಿಚಾರಣೆ ನಡೆಸಿ, ಎಲ್ಲ ಅನುಭವವನ್ನೂ ಕ್ರೋಡೀಕರಿಸಿ, ಕ್ರಮಕ್ಕೆ ತರುವುದು.

ಎಣ್ಣೆ ತೆಗೆಯುವುದು ಇಲ್ಲಿಯ ಮತ್ತೊಂದು ಕೈಗಾರಿಕೆ. ಗುಜುರಾತು ಮತ್ತು ಪಂಜಾಬು ಪ್ರಾಂತಗಳ ಹಳ್ಳಿಗಳಲ್ಲಿ ಉಪಯೋಗಿಸುವ ಗಾಣಗಳನ್ನು ಹೋಲಿಸಿ, ಪರೀಕ್ಷೆ ನಡೆ-ಯಿಸಿ, ಗುಜರಾತಿನ ಮಾದರಿಯು ಪಂಜಾಬಿನ ಮಾದರಿ-ಗಿಂತ ೨% ಹೆಚ್ಚಿಗೆ ಎಣ್ಣೆ ತೆಗೆಯುವುದೆಂದು ಗೊತ್ತು-ಮಾಡಿಕೊಂಡರು. ಅಲ್ಲದೆ ಗುಜರಾತಿನ ಗಾಣದಲ್ಲಿ ೨ ಗಂಟೆ-ಯಲ್ಲಿ ಆಗುವ ಕೆಲಸಕ್ಕೆ ಪಂಜಾಬಿನ ಗಾಣದಲ್ಲಿ ೩ ಗಂಟೆ ಕಾಲ ಹಿಡಿಯುತ್ತದೆ. ಇಂವಕ್ಕೆ ಗುಜರಾತಿನ ಗಾಣದೊ-ಳಗೆ ತಕ್ಕ ತಿರುವುಗಳೂ ಹಲ್ಲುಗಳೂ ಇರುವುದೇ ಕಾರಣ.

ಕಾವಾಡಿಗ ಉದ್ಯಮದಲ್ಲಿಯೂ ಈ ಕ್ಷೇತ್ರವು ಪರಿ-ಶ್ರಮಿಸುತ್ತಿದೆ. ಹಾಲಿನಿಂದ ಬೆಣ್ಣೆಯನ್ನು ತೆಗೆಯುವುದು; ಅದರಿಂದ ತುಪ್ಪಮಾಡುವುದು; ಮತ್ತು ನೊಸರು, ಬೆಣ್ಣೆ ತೆಗೆದ ಹಾಲು, ಮತ್ತು ತುಪ್ಪ ಇವುಗಳನ್ನು ಮಾರಾಟ ಮಾಡುವುದು ಈ ಶಾಖೆಯ ಮುಖ್ಯ ಕೆಲಸ. ಬೆಣ್ಣೆತೆಗೆದ ಹಾಲು ಬಹಳ ಪ್ರಯೋಜನಕಾರಿ. ಇದು ಶುದ್ಧ ಹಾಲಿನ ೧/೪ ಮಾತ್ರ ಬೆಲೆಯಾದರೂ ದೊಡ್ಡವರಿಗೆ ಶುದ್ಧ ಹಾಲಿ-ನಿಂದ ಆಗುವ ಪೋಷಣೆಯೇ ದೊರಕುತ್ತದೆ. ಕೊಬ್ಬು, ವಿಟಮಿನ್ ಏ ಮತ್ತು ಡಿ ಇವನ್ನು ಬಿಟ್ಟರೆ ಬಾಕಿ ಎಲ್ಲಾ ಭಾಗದಲ್ಲೂ ಬೆಣ್ಣೆತೆಗೆದ ಹಾಲೂ, ಶುದ್ಧಹಾಲೂ ಎರಡೂ ಒಂದೇ. ಹೀಗೆ ಬೆಣ್ಣೆತೆಗೆದ ಹಾಲು ಸುತ್ತುಮುತ್ತಲಿನ

CC-0. Jangamwadi Math Collection. Digitized by eGangotri

ಹಳ್ಳಿಗಳಲ್ಲಿರುವ ಕೂಲಿಕಾರರಿಗೂ ಒಕ್ಕಲಿಗರಿಗೂ ಪಟ್ಟಣಗಳಲ್ಲಿಯ ವಿದ್ಯಾರ್ಥಿನಿಲಯಗಳಿಗೂ ಮಾರಾಟವಾಗುತ್ತಿದೆ. ಹೀಗೆ ಬೆಣ್ಣೆ ತೆಗೆದ ಹಾಲಿನ ಬಗ್ಗೆ ಇರತಕ್ಕ ಕೆಟ್ಟ ಅಭಿಪ್ರಾಯವನ್ನು ತೆಗೆದುಹಾಕಿ, ಶುದ್ಧ ಹಾಲಿಗೆ ಆಗುವ ೪ ರಷ್ಟು ಬೆಲೆಯನ್ನು ಕೊಡಲಾರದವರಿಗೆ, ಅದರ ೧/೪ ಬೆಲೆಯಲ್ಲಿಯೇ ಹಾಲನ್ನು ಒದಗಿಸಿ, ಹಳ್ಳಿಯ ಜನರ ಆರೋಗ್ಯವನ್ನೂ ದೇಹದಾರ್ಢ್ಯವನ್ನೂ ಉತ್ತಮಗೊಳಿಸಿ ಒಂದು ದೊಡ್ಡ ಉಪಕಾರ ಮಾಡುತ್ತಿದ್ದಾರೆ.

ಈಚಲು, ತಾಳೆಗಿಡಗಳಲ್ಲಿ ಹೆಂಡ ಇಳಿಸುವುದನ್ನು ಬಿಟ್ಟು, ಅವುಗಳಲ್ಲಿ ಮಧುರವಾದ ಬೆಲ್ಲವನ್ನು ತೆಗೆಯುವುದು ಈ ಕ್ಷೇತ್ರದ ಒಂದು ಮುಖ್ಯ ಉದ್ಯಮ. ಈ ಉದ್ಯಮವಲ್ಲಿ ಇನ್ನೂ ಬಹಳ ಮುಂದುವರಿಯುವಂತೆ ಕೆಲಸವು ನಡೆಯುತ್ತಿದೆ.

ದೊಡ್ಡದೊಡ್ಡ ಯಂತ್ರಗಳನ್ನು ಬಿಟ್ಟು, ಮನೆಯ ಕೈಗೆಲಸದ ಮಾದರಿಯಲ್ಲಿ ನಮ್ಮ ದೇಶೀಯ ಕಾಗದ ತಯಾರುಮಾಡುವುದು ಒಂದು ಸೋಜಿಗ. ೨ ವರ್ಷಗಳಿಂದಲೂ ಈ ಶಾಖೆಯಲ್ಲಿ ಬಹಳ ಉತ್ತಮ ಕೆಲಸಸಾಗುತ್ತಿದೆ. ಹಿಂದಿನ ಹಳೇರೀತಿಯಲ್ಲಿ ಕೆಲಸಮಾಡುತ್ತಿದ್ದ ಹಳ್ಳಿಗಳಿಂದ ಕೆಲಸಗಾರರನ್ನು ಸಂಯೋಜಿಸಿ, ಅವರಿಗೆ ಬಂಡವಾಳ ಒದಗಿಸಿ, ತಕ್ಕ ಉತ್ತೇಜನ ಕೊಟ್ಟು, ನಶಿಸಿಹೋಗಿದ್ದ ಈ ನಮ್ಮ ಸ್ವದೇಶೀ ಕೈಗಾರಿಕೆಯು ಪುನರುದ್ಧಾರ ಹೊಂದುವಂತೆ ಮಾಡಲಾಗಿದೆ. ಈ ಹಳೆಯ ಮಾದರಿಯ ಯಂತ್ರಗಳಿಗೆ ಆಧುನಿಕ ಕೈಗಾರಿಕೆಯ ಮಾದರಿಯಲ್ಲಿರುವ ಕೆಲವು ವಿಷಯಗಳನ್ನು ಸೇರಿಸಿ, ಹಳ್ಳಿಗರ ಜೀವನೋಪಾಯಕ್ಕೆ ಶಾಶ್ವತವಾದ ಕಸಬನ್ನಾಗಿ ಇದನ್ನು ಮಾಡಬೇಕೆಂಬುದೇ ಈ ಕ್ಷೇತ್ರದ ಧ್ಯೇಯ. ಗ್ರಾಮದ ತರಗು, ಎಲೆಗಳು, ಬಾಳೆಯ ನಾರು, ಗೋಧಿಹುಲ್ಲು, ಬಟ್ಟೆ ಚಿಂದಿ, ಬಿದಿರು ಮತ್ತು ಎಲ್ಲಾ ತರದ ಕಸಕಡ್ಡಿಯನ್ನೂ ಕಾಗದವನ್ನು ಮಾಡುವುದಕ್ಕೆ ಉಪಯೋಗಿಸಿ, ಕಸಕಡ್ಡಿಯಿಂದ ಊರಿಗೆ ಕೆಡಕಾಗುವ ಬದಲು, ಅದನ್ನು ಚಿನ್ನವನ್ನಾಗಿ ಮಾಡಲಾಗಿದೆ. ನೂಲುವುದು ಮತ್ತು ನೆಯ್ಯುವುದು ಎಲ್ಲ ಖಾದಿಕ್ಷೇತ್ರಗಳಲ್ಲಿಯಂತೆ ಇಲ್ಲಿಯೂ ಧಾರಾವಾಹಿಯಾಗಿ ನಡೆಯುತ್ತಿದೆ.

ಈ ಕ್ಷೇತ್ರವು ಮಾಡುತ್ತಿರುವ ಉತ್ಕೃಷ್ಟ ಕಾರ್ಯವು ಇನ್ನೂ ಉತ್ತಮಗೊಂಡು ದೇಶದಲ್ಲೆಲ್ಲಾ ಪ್ರಸರಿಸುವುದಕ್ಕೆ, ಇಲ್ಲಿ ಒಂದು 'ಗ್ರಾಮಸೇವಕರ ಶಿಕ್ಷಣಶಾಲೆ' ಸ್ಥಾಪಿಸಲ್ಪಟ್ಟಿದೆ. ವಿದ್ಯಾರ್ಥಿಗಳಿಗೆ ಕಾಗದ ಮಾಡುವುದು, ಎಣ್ಣೆ ತೆಗೆಯುವುದು, ಜೇನು ಸಾಕುವುದು, ಬೆಲ್ಲ ಮಾಡುವುದು, ಛತ್ರ ಕುಟ್ಟುವುದು, ಹಿಟ್ಟು ಬೀಸುವುದು, ನೂಲುವುದು ಮತ್ತು ನೇಯ್ಗೆ—ಇವುಗಳಲ್ಲಿ ಸಪ್ರಯೋಗ ಶಿಕ್ಷಣವು ಕೊಡಲ್ಪಡುತ್ತದೆ. ಅಲ್ಲದೆ ಗ್ರಾಮಜೀವನ ಸೌಖ್ಯಕ್ಕೆ ತಕ್ಕಷ್ಟು ಆರೋಗ್ಯ, ನೈರ್ಮಲ್ಯ, ಆಹಾರ, ಲೆಖ್ಖ ಇಡುವುದು, ಈ ರೀತಿಯಾಗಿ ಗ್ರಾಮಪುನರ್ರಚನೆಗೆ ಬೇಕಾದ ವಿಷಯಗಳಲ್ಲೆಲ್ಲಾ ಉತ್ತಮಶಿಕ್ಷಣವು ದೊರೆಯುತ್ತಿದೆ. ಈ ಶಾಲೆಯು ಜುಲೈ ತಿಂಗಳು ಮೊದಲನೆಯ ತಾರೀಖಿಗೆ ಪ್ರಾರಂಭವಾಗಿ, ಅಲ್ಲಿ ಒಂದು ವರ್ಷ ಶಿಕ್ಷಣವನ್ನು ಕೊಡಲಾಗುತ್ತಿದೆ. ಈಗ ಆ ಶಾಲೆಯಲ್ಲಿ ೧೫ ಮಂದಿ ವಿದ್ಯಾರ್ಥಿಗಳು ಇದ್ದಾರೆ. ಮಂದಿ ಕಡಿಮೆಯಾದರೂ ಬಹಳ ಯೋಗ್ಯರಾದವರನ್ನೇ ಆರಿಸಿ ತೆಗೆದುಕೊಳ್ಳಲಾಗುತ್ತದೆ. ಪಾಠ ಹೇಳುವುದು ರಾಷ್ಟ್ರಭಾಷೆಯಾದ ಹಿಂದಿಯಲ್ಲಿರುವುದರಿಂದ ಪ್ರವೇಶಾಪೇಕ್ಷಿಗಳು ಹಿಂದಿಯಲ್ಲಿಯೂ, ರಾಟೆಯಿಂದ ನೂಲುವುದರಲ್ಲಿಯೂ ಉತ್ತೀರ್ಣರಾಗಿರಬೇಕು. ಈ ರೀತಿ ಇನ್ನು ಮುಂದೆ ಗ್ರಾಮಪುನರುದ್ಧಾರಕ್ಕಾಗಿ ಮುಂಬರುವ ಗ್ರಾಮಸೇವಕರು ಈ ಕ್ಷೇತ್ರದಲ್ಲಿ ತರಬೇತುಹೊಂದುತ್ತಾರೆ. ಇದು ನವಯುಗದ ಗ್ರಾಮಜೀವನದ ಅಡಿಗಲ್ಲು. ದೇಶಸೇಕವರು, ಗ್ರಾಮ ಸೇವೆಯಲ್ಲಿ ಆಸಕ್ತಿಯಿದ್ದವರು ಈ ಶಾಲೆಯನ್ನು ಸೇರಬಹುದು.

ಪ್ರಯೋಗಕಾಲಕ್ಕೆ ಸಾಕೆನಿಸುವಷ್ಟು ಮಾತ್ರ ವ್ಯವಸಾಯವು ಇಲ್ಲಿ ಸಣ್ಣದಾಗಿ ನಡೆಸಲ್ಪಡುತ್ತಿದೆ. ಇದು ಶಿಕ್ಷಣ ಕೊಡುವುದಕ್ಕೆ ಮಾತ್ರವಾದ್ದರಿಂದ ದೊಡ್ಡದಾಗಿ ಲಾಭದ ಉದ್ದೇಶದಿಂದ ನಡೆಸಲ್ಪಡುತ್ತಿಲ್ಲ. ಸಣ್ಣ ಪರಿಮಿತಿಯಲ್ಲಿ ಹೊಸಹೊಸ ಗಿಡ, ತರಕಾರಿಗಳನ್ನು ಶಾಸ್ತ್ರೀಯ ರೀತಿಯಲ್ಲಿ ಬೆಳೆಯುವುದನ್ನು ಪ್ರಯೋಗಿಸಲಾಗಿದೆ. ಸಾಮಾನ್ಯವಾದ ತರಕಾರಿ, ಕಬ್ಬು, ಜೋಳ, ಬಜ್ರ, ಕಡಲೇಕಾಯಿ, ಹತ್ತಿ, ದ್ವಿದಳ ಧಾನ್ಯಗಳು, ಅಲ್ಲದೆ ಹಣ್ಣಿನ ಗಿಡಗಳು, ನಿಂಬೆ, ಮಾವು, ಗೋವ—ಇವೇ ಮುಖ್ಯವಾದ ವ್ಯವಸಾಯಗಳು. ಶಾಸ್ತ್ರರೀತಿಯಾಗಿ, ಹಳ್ಳಿಯ ಕಸಕಡ್ಡಿ ಮಲಮೂತ್ರಗಳಿಂದ, ವಿದೇಶದಿಂದ ಬರುವ ಗೊಬ್ಬರದಷ್ಟೇ ಉತ್ತಮರೀತಿಯ ಗೊಬ್ಬರವು ಇಲ್ಲಿ ತಯಾರು ಮಾಡಲ್ಪಡುತ್ತಿದೆ.

ಅಕ್ಕಿಯ ಎಲ್ಲಾ ಸತ್ವವೂ ಅದರ ಮೇಲಿನ ಹೊಟ್ಟಿನಲ್ಲಿಯೇ ಇರುತ್ತದೆ. ಮಿಲ್ಲಿನ ಬಿಳೀ ಅಕ್ಕಿಯಲ್ಲಿ ಯಾವ

CC-0. Jangamwadi Math Collection. Digitized by eGangotri

ಸತ್ವವೂ ಇರುವುದಿಲ್ಲ. ಪುಷ್ಟಿ ಕೊಡುವ ಹೊಟ್ಟು ಇರುವ ರೀತಿ ಅಕ್ಕಿ ಕುಟ್ಟುವ ಕ್ರಮದಲ್ಲಿ ಶಿಕ್ಷಣ ಕೊಟ್ಟು, ಹೊಟ್ಟು ಇರುವ ಅಕ್ಕಿಯೂಟವನ್ನು ಬಳಕೆಗೆ ತಂದು, ತನ್ಮೂಲಕ ದೇಶದ ಜನರ ಆರೋಗ್ಯವನ್ನು ಉತ್ತಮಗೊಳಿಸುವುದು ಈ ಕ್ಷೇತ್ರವು ಕೈಕೊಂಡಿರುವ ಮತ್ತೊಂದು ಉತ್ತಮ ಕಾರ್ಯ.

ಭಾರತ ಗ್ರಾಮೋದ್ಧಾರಕ್ಕಾಗಿ ಈ ಕೇಂದ್ರದ ಆಶ್ರಯದಲ್ಲಿ ನಡೆದ ಸಣ್ಣಸಣ್ಣ ಉಪಸಂಘಗಳು ಹಿಂದೂ ದೇಶದ ತುಂಬೆಲ್ಲಾ ಇವೆ. ಈ ಉಪಸಂಘಗಳೆಲ್ಲವೂ ವರ್ಧಾ-ನಾಯಕತ್ವದಲ್ಲಿ ಒಗ್ಗಟ್ಟಿನಿಂದ ದೇಶಾಭ್ಯುದಯಕ್ಕಾಗಿ ಶ್ರಮಿಸುತ್ತಿವೆ. ಇದರ ಕಾರ್ಯವನ್ನು ಜನರ ತಿಳಿವಳಿಕೆಗೆ ತರುವುದಕ್ಕೂ, ಮತ್ತು ಎಲ್ಲರಿಗೂ ಸಾಮಾನ್ಯವಾದ ಸಮಸ್ಯೆಗಳ ಬಗ್ಗೆ ನಡೆಸಿದ ಸಂಶೋಧನೆಯನ್ನು ಪರಸ್ಪರರಲ್ಲಿ ಪ್ರಚುರಗೊಳಿಸುವುದಕ್ಕೂ 'ಗ್ರಾಮೋದ್ಯೋಗ' ಪತ್ರಿಕೆಯು ಹೊರಡುತ್ತದೆ.

ಈ ಕರ್ಮಯೋಗಿಗಳಿಗೆ ಜಯವು ಲಭಿಸಲೆಂದೇ ಎಲ್ಲರ ಹಾರಯಿಕೆ.


**ನಕಲೀ ಮಾಲು ಕೊಂಡು ಮೋಸಹೋಗಬೇಡಿರಿ !!**

ಆಸೇತುಹಿಮಾಚಲ ಳಂವರುಷಪರ್ಯಂತ




**ಖ್ಯಾತಿಗೊಂಡ ಅಂಜನರಾಜ**
**ಅಮೃತಾಂಜನ**
ಅಮೃತಾಂಜನ ಲಿಮಿಟೆಡ್
ಮದ್ರಾಸು, ಬೊಂಬಾಯಿ, ಕಲ್ಕತ್ತಾ.

AMRUTANJAN LTD., BANGALORE BRANCH,
Krishna Building,
Avenue Road, Bangalore City.



**ದಮ್ಮು ಪೂರ್ಣ ಗುಣವಾಗುವ**
**ಉಪಾಯವನ್ನೇ ಕೈಕೊಳ್ಳಬೇಕು**



ಕೆಮ್ಮು ಮತ್ತು ಕಫವಿಕಾರವಿದ್ದವರು 'ಎಫಿಡಮ' ಮುಂತಾದ ತಾತ್ಕಾಲಿಕ ಆರಾಮವೆನಿಸುವ ಔಷಧಗಳನ್ನು ಎಂದೂ ಉಪಯೋಗಿಸಬಾರದು. ಈ ಔಷಧಗಳು ರೋಗವನ್ನು ಪೂರ್ಣ ಗುಣಪಡಿಸಲು ನಿರುಪಯೋಗಿಗಳೆಂಬದು ನಿಶ್ಚಿತವು; ಮತ್ತು ಇಂಥ ಔಷಧಗಳು ಶ್ವಾಸನಲಿಕೆಯಲ್ಲಿಹೆಚ್ಚಿಗೆ ನೋವುಂಟುಮಾಡಿ ರೋಗವನ್ನುಶಾಶ್ವತಮಾಡುತ್ತವೆ.

ರೋಗಲಕ್ಷಣವನ್ನು ಪೂರ್ಣ ವಿಚಾರ ಮಾಡಿ, ರೋಗಿಗೆ ಬೇಗನೆ ಮತ್ತು ಸಾವಧಾನವಾಗಿ ಪೂರ್ಣ ಗುಣ ಮಾಡುವ ಔಷಧವೇ ನಿಜವಾದ ಉಪಾಯವು; ಮತ್ತು ಇದೇ ದೃಷ್ಟಿಯಿಂದ ಡಾ. ಪುರೋಹಿತ ಇವರ

**'ಶ್ವಾಸಹಾರಿ ಪ್ಲೇನ್' ಮತ್ತು**
**'ಶ್ವಾಸಹಾರಿ ಕಾಂಪಾವುಂಡ್'**

ಈ ಎರಡೂ ಔಷಧಗಳು ದಮ್ಮು ವಿಕಾರವನ್ನು ಪೂರ್ಣ ಗುಣಪಡಿಸುವ ದಿವ್ಯೌಷಧಿಯಲ್ಲಿ ಅಗ್ರೇಸರವೆನಿಸಿವೆ. ದಮ್ಮು, ಶ್ವಾಸ, ಮುಂಜಾನೆಯ ಠಸಕಿ, ಗಂಟಲು ಕೆರೆಯುವ ಹಳೇ ಕೆಮ್ಮು ಮತ್ತು ಫುಪ್ಫುಸದ ಯಚ್ಚಾವತ್ ರೋಗಗಳನ್ನು ಗುಣಪಡಿಸಲು "ಶ್ವಾಸಹಾರಿ ಪ್ಲೇನ್"ಉಪಯೋಗಿಸಬೇಕು. ಆಮ್ಲಪಿತ್ತವಿದ್ದವರು "ಶ್ವಾಸಹಾರಿ ಕಾಂಪೌಂಡ್" (ಕೆಂಪು ಪ್ಯಾಕಿಂಗ್) ಉಪಯೋಗಿಸುವುದು ಹೆಚ್ಚು ಲಾಭಕರವು.

ಬಹುತರವಾಗಿ ಎಲ್ಲ ಶಹರಗಳಲ್ಲಿ ಕೆಮಿಸ್ಟ್ ಸ್ಟೋರ್ಸ್ ಮತ್ತು ಅಂಗಡಿಗಳಲ್ಲಿ ಈ ಔಷಧಗಳು ರೂ. ೨, ೩-೮-೦ ಮತ್ತು ೫-೦-೦ ಹೀಗೆ ಬೇರೆ ಬೇರೆ ಬೆಲೆಯ ೩ ಪ್ಯಾಕುಗಳಲ್ಲಿ ಮಾರಲಿಕ್ಕೆ ಸಿಗುತ್ತವೆ.

ಮುಂಬಯಿ ಏಜಂಟ್—
**ಮೆ. ಓರಿಯಂಟಲ್ ಮೆಡಿಕಲ್ ಸ್ಟೋರ್ಸ್, ಪ್ರಿನ್ಸೆಸ್ ಸ್ಟ್ರೀಟ್ ಮುಂಬೈ**




**ಪುರೋಹಿತ ಶ್ವಾಸಹಾರಿ**
ಡಾ ಪುರೋಹಿತ ಫಾರ್ಮಸಿ, ಕೊಲ್ಹಾಪುರ.


CC-0. Jangamwadi Math Collection. Digitized by eGangotri

# EVIDENCE OF SECURITY & STABILITY

*It Pays you to represent*

## THE BOMBAY LIFE ASSURANCE Co. Ltd. Esfd 1910

FIGURES THAT SPEAK FOR THEMSELVES

# Assets Rs. 80,66,600

| | |
|---|---|
| Total Assets Over | Rs. 80,00,000 |
| Life Fund Over | Rs. 68,00,000 |
| Premium Income Over | Rs. 22,54,000 |
| Interest Income | Rs. 3,16,000 |
| Claims Paid | Rs. 5,75,000 |

Total Claims Paid Over
Rs. 38,50,000
Total Business In Force Over
Rs. 4,42,51,000

*Tooal Business In Force*

**4,42,51,200**

BRANCHES AT:
P. B. 337, Mount Road, **Madras**; Visveswarapuram Circle, **Bangalore City**; Soumyalayam Puthiyara, **Calicut**; Car Street, **Mangalore**; **Udipi**, S. India; Charni Road, **Bombay No. 4.**

*Apply to:*

## KOCHIKAR BROTHERS *Madras Branch Secretaries*

---

**ಡಾ. ಜೀ. ಬೀ. ಯವರ**

## ಸುಗಂಧ ನಶ್ಯದ ಪುಡಿ

ಲೋಕಪ್ರಸಿದ್ಧವಾದ ಈ ಸುಗಂಧನಶ್ಯದ ಪುಡಿಯಿಂದ ಪಿನಸಿ ಒಂಟಿತಲೆನೋವು ಮುಂತಾದ ವ್ಯಾಧಿಗಳು ಪರಿ



ಹಾರವಾಗುವವು. ಕಂಠಕ್ಕೆ ಮೇಲ್ಪಟ್ಟ ೯೬ ವ್ಯಾಧಿಗಳು ಅಡಗಿ, ಜ್ಞಾಪಕಶಕ್ತಿ ಬೆಳೆಯುವದು. ಮೂರು ಬಟ್ಟೆನ ನಶ್ಯದ ಸಂಗಡ ಈ ಸುಗಂಧ ನಶ್ಯದ ಪುಡಿಯಲ್ಲಿ ಒಂದು ಚಿಟಿಕೆಯನ್ನು ಬೆರಸಿದರೆ ಎಲ್ಲವೂ ಪರಿಮಳವಾಗುವದು. ಅನೇಕರು ಕುಟುಂಬ ಔಷಧವಾಗಿ ಉಪಯೋಗಿಸುತ್ತಾರೆ. ಮಾದರಿ ಸೀಸೆ ಪುಕ್ಕಟೆ ಕಳಿಸಲಾದೀತು.

ಬಡ್ಡಿ ೧ಕ್ಕೆ ರೂ. ೦-೪-೦

ವ್ಹಿ. ಪಿ. ೦-೪ ೦. ಡಜನ್ ೧ಕ್ಕೆ ಕ್ರಯ ರೂ. ೨-೦-೦

ವ್ಹಿ. ಪಿ. ಚಾರ್ಜ ೮ ಆಣೆ

**ಗುರುಬಸವ ಆ್ಯಂಡ ಕಂಪನಿ, ಲಿಮಿಟೆಡ್,**
**ಪೋಸ್ಟ ಬಾಕ್ಸ ೮೧೦, ಮದರಾಸು.**

---

# UNEMPLOYMENT

OF EDUCATED MIDDLE CLASSES

is an important item in the news today.

*Send a Post Card and let us tell you*

HOW TO GIVE YOUR BOY A START IN A BUSINESS OR PROFESSION!

**BOMBAY BARODA**
ASSURANCE CO., LTD.

EASTABLISHED 1925. HEAD OFFICE, BARODA.

Wanted immediately Inspectors, Organisers, Chief Agents and Dist. Agents, on most lucrative terms of Salary and Commission, throughout Karnataka and Nizam state.

CC-0. Jangamwadi Math Collection. Digitized by eGangotri

# ವೀಣಾವಾದಕ

ಶ್ರೀಮಾನ್ ವಿಜಯ ಬೆಟಗೇರಿ ಬಿ. ಎ. ( ಆನರ್ಸ )



ಕಲಾವಿದನ ಸೂಕ್ಷ್ಮ ಹೃದಯತಂತ್ರಿಗಳ ಮಿಡಿತವನ್ನು ಬಲ್ಲವರಾರು ? ಅವನೊಬ್ಬ ಭಾವುಕ. ಅವನ ಹೃದಯದ ಸೂಕ್ಷ್ಮ ವೇದನೆ-ಸಂವೇದನೆಗಳು ಸಾಮಾನ್ಯರ ಅವಗಾಹನೆಗೆ ಸಿಲುಕವು-ನಿಲುಕವು. ಆದರ್ಶವನ್ನು ವಾಸ್ತವದಲ್ಲಿ—ತನ್ನೊಳಗಿನ ಭಾವನಿರ್ಭರವನ್ನು ಜೀವಪ್ರತಿಮೆಯಲ್ಲಿ ಕಾಣಲೆಳಸುವುದು ಅವನ ಹುಚ್ಚು ಹಂಬಲ. ವೇಣುವಾದಕನ ಪ್ರಣಯವು ದುರಂತವಾಗಿ

§ § ಕೊನೆಗೊಂಡುದೆ ಈ ಕತೆಯ ವಸ್ತು.* § §



(೧)

ಎಲ್ಲವೂ ನಿನ್ನೆಯೇ ನಡೆದುಹೋಗಿ ಬಿಟ್ಟಂತಾಗಿದೆ. ಸ್ಮೃತಿಪಟಲದಲ್ಲಿ ಮೂಡಿದ ಚಿತ್ರ ಅಷ್ಟೊಂದು ಸುಸ್ಪಷ್ಟ-ವಾಗಿದೆ. ಯಾರೊ ಒಬ್ಬ ಸಿರಿವಂತರ ಮನೆಯಲ್ಲಿ ನಡೆದ ಮದುವೆಯ ಸಂಭ್ರಮದ ಕಾಲದಲ್ಲಿ ಅದೆಲ್ಲ ಆಗಿಹೋದದ್ದು. ವೇಣುವಾದನಕ್ಕಾಗಿ ನಮ್ಮ 'ಗುರುಜಿ'ಯವರಿಗೆ ಆ ದಿನ ಆಮಂತ್ರಣವಿದ್ದಿತು. ಆ ಸಂದರ್ಭದಲ್ಲಿ ನಾನೂ ಗುರುಗಳ ಜತೆಗೆ ಹೋಗಿದ್ದೆ. ದೈವ ತನ್ನ ಘಟನೆಗಳನ್ನೆಲ್ಲ ಅನುಗೊಳಿಸ-ಲಿಕ್ಕೆ ಮಾನವನನ್ನು ಅದೆಷ್ಟೊ ಬಗೆಯ ಸಂದರ್ಭಗಳಲ್ಲಿ ಸಿಲುಕಿಸುವುದು. ಆ ದೈವದ ಅಧೀನನಾಗಿಯೇ ನಾನೂ ಅಲ್ಲಿಗೆ ಹೋಗಬೇಕೆಂದು ಗುರುಗಳನ್ನು ಅನುಸರಿಸಿಬಿಟ್ಟೆ.

ನಮ್ಮ ಗುರುಗಳ ಕೊಳಲಿನ ಕಾರ್ಯಕ್ರಮವಾದ ಮಾರ-ನೆಯ ದಿನ ಭಾವಾಭಿನಯಪ್ರಾಮುಖ್ಯವಾದ ನರ್ತನವನ್ನು ಏರ್ಪಡಿಸಬೇಕೆಂಬ ಕುತೂಹಲವು ಆ ಸಿರಿವಂತ ಮಹ-ನೀಯರ ಮನದಲ್ಲಿ ಮೂಡಿತು. ಮೂಡಿದ ಆಶೆಗಳನ್ನೆಲ್ಲ ಪೂರೈಸಿಕೊಳ್ಳುವಷ್ಟು ಯೋಗ್ಯತೆಯುಳ್ಳವರು. ಹಣವುಳ್ಳ-ವರಿಗೆ ಯಾವುದು ತಾನೇ ಅಸಾಧ್ಯ ? ............ ಆ ನೃತ್ಯದ ಸಮಯದಲ್ಲಿಯೇ ನನ್ನ ಎಳೆಹರಯದ ಮುಗ್ಧಹೃದಯ-ವನ್ನು ಆದೋರ್ವ ಮುದ್ದು ಯುವತಿಗೆ ಮಾರಿಕೊಂಡುದು.

ಆಕೆಯ ಹೆಸರು ರತ್ನಂಬಾಳ್ ಎಂದು. ಸುದೈವದಿಂದಲೇ ಅವಳು ಅಲ್ಲಿ ಬಂದಿರುವಳೆಂದು ನನ್ನ ಭಾವನೆ. ಅವಳ ನರ್ತನದ ಜೊತೆಗೆ ಕೊಳಲು ಬಾರಿಸುವುದಕ್ಕಾಗಿ ನಮ್ಮ 'ಗುರುಜಿ'ಯವರನ್ನು ಅದೆಷ್ಟೊ ಅಂಗಲಾಚಿ ಬೇಡಿ-ಕೊಂಡರು. ಶ್ರೀಮಂತರು ಬೇಡಿಕೊಂಡುದೆಲ್ಲ ಅರಣ್ಯ-ರೋದನವಾಯಿತು. ಅಂತಹ ಅಪಮಾನವನ್ನು ಸಹಿಸು-ವುದು 'ಗುರು' ವಿಗೆ ಅಸಾಧ್ಯವೆನಿಸಿತು. ಅಷ್ಟೊಂದು ಹಟದಿಂದ ಎಲ್ಲರ ಬೇಡಿಕೆಯನ್ನೂ ಅಲ್ಲಗಳೆದುದೇಕೆ ?-ಎಂಬ ಪ್ರಶ್ನೆ ಈಗಲೂ ನನಗೆ ಬಗೆಹರಿಯದುದಾಗಿದೆ. ಅವರ ಅಭಿಪ್ರಾಯವು ಇಷ್ಟು : ಸುಕೀರ್ತಿತನಾದ ಸಂಗೀತ-ಗಾರನಿಗೆ. ಹೆಣ್ಣಿನ ಜೊತೆಗೆ ಹಾಡು ಬಾರಿಸುವುದೆಂದರೆ ಶುದ್ಧ ಕೀಳುತನ. ಅಂತಹ ಹೀನಾವಸ್ಥೆಯು ಅವನ ಜೀವನದಲ್ಲಿ ಬೇರೊಂದಿರಲಾರದು..... ಅದರಲ್ಲಿಯೂ ಕುಣಿಯುವ ಹುಡಿಗೆಯ ಜೊತೆಗೆ....!

ನನ್ನಲ್ಲಿಯೋ ಈ ಬಗೆಯ ರೀತಿನೀತಿಗಳಿಗೆ ಎಡೆಯಿರಲಿಲ್ಲ. ನನ್ನ ಬುದ್ಧಿವಂತಿಕೆಯನ್ನು ಪ್ರದರ್ಶಿಸುವ ಸಂದರ್ಭ-ವೊದಗಿದಾಗ ನಾನೆಂದೂ ಹಿಂಜರಿಯುತ್ತಿದ್ದಿಲ್ಲ. ಅಂತಹೆ ಯಾವ ಸಂದರ್ಭವನ್ನೂ ನಾನು ಕಳೆದುಕೊಳ್ಳಲು ಇಚ್ಛಿಸು-

---

* ಶ್ರೀ. ಪುರಸು ಬಾಲಕೃಷ್ಣನ್ ಅವರ ತಮಿಳು ಕತೆಯನ್ನು ಅನುಸರಿಸಿ ಬರೆದುದು.

CC-0. Jangamwadi Math Collection. Digitized by eGangotri

ತ್ತಿರಲಿಲ್ಲ. ಆದುದರಿಂದಲೇ ನಾನು ಆ ಶ್ರೀಮಂತರ ಬಳಿಯಲ್ಲಿ ಹೋಗಿ ಕೇಳಿದೆ: "ಗುರುಗಳ ಬದಲು ನಾನು ಕೊಳಲನ್ನು ನುಡಿಸಿದರೆ ಆಗಬಹುದೊ?" ಗುರುಗಳು ಇದೆಲ್ಲ ನೋಡಿ ಕೋಪದಿಂದ ಕಿಡಿಕಿಡಿಯಾದರು. ಆವೇಗ ಹೆಚ್ಚಾಗಿ ಅವರ ಮೈಯೆಲ್ಲ ನಡುಕ. ಅದೇ ರಾತ್ರಿ ನೊಂದಬಗೆಯವರಾಗಿ ತಮ್ಮ ಮನೆಗೆ ತೆರಳಿಬಿಟ್ಟರು. ನಾನು ಮಾತ್ರ ಅಲ್ಲಿಯೇ ಉಳಿದುಕೊಂಡೆ.

ಮಾರನೇ ದಿನವೇ ನರ್ತನ ಜರುಗಿತು. ನನ್ನ ಜೀವಮಾನದಲ್ಲಿಯೇ ಅದೊಂದು ಸೊಗಸಾದ ದಿನ. ನರ್ತನಕ್ಕಾಗಿ ಯೋಜಿಸಿದ ಹಾಲು ಜನರಿಂದ ಕಿಕ್ಕಿರಿದು ಹೋಗಿದ್ದರೂ ಎಲ್ಲೆಡೆಯಲ್ಲಿಯೂ ನಿಶ್ಶಬ್ದತೆ. ಉಸಿರು ಬಿಟ್ಟರೆ ಶಾಂತತಾಭಂಗವಾಗುವುದೊ ಎನ್ನುವಂತಿರುವ ವಿಶಾಲವಾದ ಪ್ರೇಕ್ಷಕ ಸಮುದಾಯ. ರತ್ನಂಬಾಳ್ ಮೊದಲು ಭಾವಾಭಿನಯವನ್ನು ಪ್ರದರ್ಶಿಸಿ ಜನರ ಸಾಶ್ಚರ್ಯೋತ್ಸುಕವಾದ ಕಣ್ಮನಗಳಿಗೆ 'ಭರತನಾಟ್ಯ'ದ ಸವಿಯೂಟವನ್ನು ನೀಡಿದಳು. ಈ ಎಲ್ಲ ಭಾವಭಂಗಿ—ನಟನೆ-ನೃತ್ಯಗಳ ಜೊತೆಗೆ ನನ್ನ ಕೊಳಲು ಅವಿರತವಾಗಿ ನುಡಿಯುತ್ತಿದ್ದಿತು. ಆ ಹೊತ್ತಿನ ಕಾರ್ಯಕ್ರಮವನ್ನು ಕೂಡಿದ ಜನರು ಹೊಗಳಿದ್ದೇ ಹೊಗಳಿದ್ದು. ಅವರು ತುಂಬಾ ಅಲಂಕಾರಿಕವಾಗಿ ಉಪಮೇಯೋಪಮವಾಗಿ ನಮ್ಮೀರ್ವರ ಕೆಲಸವನ್ನು ಕೊಂಡಾಡಿದರು. "ಏನ್ರಿ! ಈ ನಾಟ್ಯದ ಯೋಗ್ಯತೆಗೆ ಸಮಾನವಾದುದೆಂದರೆ ಆ ಕೊಳಲು; ಆ ಕೊಳಲಿನ ಮಾಧುರ್ಯದ" ಮೇಲ್ಮೆಗೆ ಸರಿಯಾಗಿ ನಿಲ್ಲಬಹುದಾದುದು ಈ ನಾಟ್ಯ." ಆದರೆ ನನಗೆ ಯಾವುದೂ ಗೊತ್ತಾಗಿರಲಿಲ್ಲ. ರತ್ನಳಿಗೂ ಇದಾವುದೂ ತಿಳಿದಂತೆ ತೋರಲಿಲ್ಲ. ನಮ್ಮನ್ನೇ ನಾವು ಪೂರ್ತಿಯಾಗಿ ಮರೆತುಬಿಟ್ಟಿರುವಾಗ ನಾವು ಚನ್ನಾಗಿ ಕೆಲಸ ಮಾಡಿದೆವೆಂಬುದು ನಮಗೆ ಹೇಗೆ ತಿಳಿಯುವುದು?

ನನ್ನ ತಲೆಯಲ್ಲಿ ವಿಚಾರ: "ಭಾವವೇ ಸಂಗೀತಕ್ಕೆ ಆತ್ಮ; ನಾಟ್ಯಾಭಿನಯಗಳು ಸಮರಸವಾಗಿ ಹರಿದುವೆಂದರೆ ಭಾವದ ಪ್ರದರ್ಶನ ಉದ್ದೀಪನಗಳೇ ಆಗುವುವು. ಆದುದರಿಂದ ಸಂಗೀತ ನೃತ್ಯಗಳು ಆದೆಷ್ಟು ಸೂಕ್ಷ್ಮ ಸಾಮೀಪ್ಯ ಸಂಬಂಧವುಳ್ಳವುಗಳಾಗಿರುವುವು! ಎರಡೂ ಜೊತೆಗೂಡಿದರೆಯೇ ಒಂದು ಬಗೆಯ ಸಂಪೂರ್ಣ ದರ್ಶನ; ಕಲೆಯ ಪರಿಪೂರ್ಣತೆ. ಒಂದರಿಂದ ಇನ್ನೊಂದನ್ನು ಎಂದೂ ಅಗಲಿಸಲಾಗದು. ಒಂದನ್ನು ಬಿಟ್ಟರೆ ಇನ್ನೊಂದಕ್ಕೆ ಪ್ರಗತಿಯಿಲ್ಲ, ಮಹತಿಯಿಲ್ಲ. ಏನಿದು ಆಶ್ಚರ್ಯ! ಅಂತರ್ಯದಿಂದ ಹೊರಟು ನನ್ನನ್ನೂ ರತ್ನಳನ್ನೂ ಕೂಡಿಯೇ ಬಿಗಿಯುತ್ತಿದ್ದ ಸ್ನೇಹರಜ್ಜುವಿಗೂ ಈ ನಮ್ಮ ಉಭಯ ಕಲೆಗಳ ಸಂಬಂಧ ರಜ್ಜುವಿಗೂ ಸೊಗಸಾದ ಸಾದೃಶ್ಯವು ತೋರಿಬರುತ್ತಿಲ್ಲವೇ?" ಈ ವಿಚಾರವು ನನ್ನನ್ನು ಆನಂದಪುಲಕಿತನನ್ನಾಗಿಸಿತು. ನಮ್ಮಿಬ್ಬರ ಆತ್ಮಸಮ್ಮಿಳನದ ವಿಚಾರ ನನ್ನನ್ನು ಮುಗ್ಧನನ್ನಾಗಿಸಿತು. ಆ ವಿಚಾರವನ್ನು ಕೇವಲ ನನ್ನಲ್ಲಿಯೇ ಇಟ್ಟುಕೊಂಡಿರುವುದು ಸಾಧ್ಯವೆನಿಸದೆ ಹೋಯಿತು. ರತ್ನಳನ್ನೂ ಅದರಲ್ಲಿ ಪಾಲಗಾರಳನ್ನಾಗಿಸಿಕೊಳ್ಳುವುದು ಅತ್ಯಗತ್ಯವೆನಿಸತೊಡಗಿತು. ಎಂದೂ ಅನುಭವಿಸಿರದ ಭಾವೋದ್ರೇಕವಾಗಿ ಧಮನಿ-ಧಮನಿಗಳಲ್ಲಿಯೂ ರಕ್ತದ ಕಿರುದೆರೆಗಳು ಉಬ್ಬಿ ತೀವ್ರಗತಿಯಿಂದ ಪರಿಮರಿಯಾಡಿದುವು.

ಅದೇ ದಿನ ನಾನು 'ಗುರು'ವಿನಿಂದ ಅಗಲಬೇಕಾಯಿತು. ನನ್ನ ಯಾಚನೆ ಅವರ ಬಗೆಯನ್ನು ಕದಡಲಿಲ್ಲ. ಮರಣ ಕಾಲಕ್ಕೂ ನನ್ನನ್ನು ಕ್ಷಮಿಸುವಷ್ಟು ಶಾಂತರಾಗಿರಲಿಲ್ಲ. ಹೀಗೆ 'ಗುರು'ವಿಗೆ ನಾನು ಅಕ್ಷಮ್ಯ ಅಪರಾಧಿ. ಈ ಸಂಗತಿಯಾದ ಎರಡು ತಿಂಗಳುಗಳಲ್ಲಿಯೇ ಅವರು ಸ್ವರ್ಗವಾಸಿಗಳಾದರು. ಸ್ವರ್ಗೀಯ ಗುರುವಿನ ಆತ್ಮಕ್ಕೆ ಶಾಂತಿಯಿರಲಿ.

(೨)

ವಿನಯಕ್ಕಾಗಿ ತಮ್ಮನ್ನು ಬೇಕೆಂತಲೇ ಕಡಿಮೆಯ ಯೋಗ್ಯತೆಯವರೆಂದು ಹೇಳಿಕೊಳ್ಳುವವರ ಬಳಗದಲ್ಲಿ ನಾನು ಸೇರುವುದಿಲ್ಲ. ವೇಣುವಾದನದಲ್ಲಿರುವ ನನ್ನ ನಿಪುಣತೆಯನ್ನು ನಾನು ಚನ್ನಾಗಿ ಅರಿತುಕೊಂಡಿದ್ದೇನೆ. ನಾನು ಶ್ರೇಷ್ಠನಾದ ವೇಣುವಾದಕನೆಂದೂ ತಿಳಿದುಕೊಂಡಿದ್ದೇನೆ. ಗುರುಗಳ ಹಾಗೆಯೇ ನನ್ನ ಯೋಗ್ಯತೆ ಗಾಂಭೀರ್ಯಗಳಿಗಾಗಿ ಜಾಗರೂಕನಾಗಿದ್ದೇನೆ; ಹೆಮ್ಮೆಯವನೂ ಆಗಿದ್ದೇನೆ. ಆದರೆ ಈ ಎಲ್ಲ ಅಭಿಮಾನದ ಅನಿಸಿಕೆಗಳನ್ನೂ ಅವಕ್ಕೆ ಬೀಜವಾದ 'ಅಹಂ'ಭಾವವನ್ನೂ ಸಂಪೂರ್ಣವಾಗಿ ತೊರೆದು ರತ್ನಳಿಗೆ ಸಮರ್ಪಿತನಾಗಿಬಿಟ್ಟಿದ್ದೇನೆ. ಅವಳಿಗೆ ದೇಹ, ಮನಸ್ಸು, ಬುದ್ಧಿ—ನನ್ನದೆನ್ನುವುದೇನೆಲ್ಲವನ್ನೂ ಧಾರೆಯೆರೆದುಬಿಟ್ಟೆ. ಅದೆಷ್ಟು ಹೃದಯ ಮಂಥನ, ದುಗುಡ, ಮನಃಪ್ರಕ್ಷುಬ್ಧತೆಗಳು ಈ ಸಮರ್ಪಣೆಯಲ್ಲಿ ಹುದುಗಿದ್ದವೆಂಬುದನ್ನು ಆರು ಅರಿಯಬಲ್ಲರು!! ಪುನರುಕ್ತಿಯಾದರೂ ಇನ್ನೊಮ್ಮೆ ಹೇಳುವೆನು: ನಾನು ಕಲೆಯ ನಿಸ್ಸೀಮ ಸೇವಕನಾಗಿದ್ದರೂ ವಿನಯದ ಸೀಮೆಯಿಂದ ನಾನು ಬಹು ದೂರವಾಗಿದ್ದೇನೆ. ನನ್ನ ಕಲಾನೈಪುಣ್ಯಕ್ಕಾಗಿ ನನಗೆ ಅಭಿಮಾನ, ಹೆಮ್ಮೆ. ಆದರೂ

CC-0. Jangamwadi Math Collection. Digitized by eGangotri

ರತ್ನಳ ಸಲುವಾಗಿ ಸ್ವಪ್ರತಿಷ್ಠೆಯ ಕಲ್ಪನೆಗಳನ್ನೆಲ್ಲ ಕರಗಿಸಿ ಬಿಟ್ಟಿದ್ದೆ. ಗಗನಕುಸುಮಗಳನ್ನು ಆಯ್ದುತರಲು ಮುಗಿಲು-ಗಳೊಡನೆ ನೆಗೆಯುತ್ತಿದ್ದ ನನ್ನ ಮಹತ್ವಾಕಾಂಕ್ಷಿಯಾದ ಮನಸ್ಸು ಆವಳ ಸಾಮೀಪ್ಯದಲ್ಲಿ ಕೀಲಿಸಿಬಿಟ್ಟಿತು. ಕೇವಲ ಅವಳ ಜೊತೆಗಾರನಾಗಿರುವುದೇ ನನ್ನ ಧ್ಯೇಯವಾಗಿಹೋ-ಯಿತು. ಎಲ್ಲ ಶಿಷ್ಯರಿಗಿಂತಲೂ ಗುರುಗಳದು ನನ್ನ ಮೇಲೆ ತುಂಬಾ ವಿಶ್ವಾಸ. ಅವರ ಎಲ್ಲ ಆಶೆಯೂ ನನ್ನನ್ನೇ ಅವಲಂಬಿಸಿದ್ದಿತು. ತಮ್ಮ ಹೆಸರನ್ನು ಉಳಿಸುವ ಶಿಷ್ಯ-ನಿವನೇ ಎಂದು ಅವರ ಗ್ರಹಿಕೆಯಾದಂತಿದ್ದಿತು. ಎಷ್ಟೋ ಬಾರಿ ಈ ರೀತಿಯಾಗಿ ಸ್ಪಷ್ಟವಾಗಿ ಆಡಿ ತೋರಿಸಿದ್ದರು. ಸಂಗೀತದ ಕಣದಲ್ಲಿಯೂ ನಾನು ಒಂದು ಮಂಗಲ ಮೂಹೂರ್ತದಲ್ಲಿಯೇ ಇಳಿದಿರಬೇಕು; ಆದುದರಿಂದ ಸ್ವಲ್ಪ ದಿನಗಳಲ್ಲಿ ಜನಪದರ ಬಾಯಲ್ಲಿ ನನ್ನ ಹೆಸರು ಉಲಿಯ-ತೊಡಗಿತು. ಮನಸ್ಸು ಆಗಾಗ ನನ್ನೊಡನೆ ವಾದಿಸುವುದು; ಪ್ರಚೋದಿಸುವುದು: "ನಿನ್ನ ಗುರುವಿನಷ್ಟೆ ಪ್ರಗತಿಯನ್ನು ಹೊಂದು. ವಿಸ್ತಾರವಾದ ಆಗಸದಲ್ಲಿ ಅಸಮಾನನಾಗಿಯೂ ಸರ್ವಶ್ರೇಷ್ಠನಾಗಿಯೂ ಪ್ರಕಾಶಿಸುವ ಸೂರ್ಯನ ಹಾಗೆ ನಿನ್ನ ಕಲಾಕ್ಷೇತ್ರದಲ್ಲಿ ನೀನು ಬೆಳಗಲು ಯತ್ನಿಸಬೇಕು" ಇತ್ಯಾದಿ. ದುರ್ವಿಧಿಯ ಕೈಚಳಕವೊಂದರಲ್ಲಿ ಸಿಕ್ಕಿ-ಬಿದ್ದು ಕೊಟ್ಟಕೊನೆಗೆ ಪಾರಾಗಿ ಹೊಸದಾಗಿ ನನ್ನ ಕ್ಷೇತ್ರದಲ್ಲಿ ಕಾಲಿಟ್ಟೆ. ಜನರ ಪ್ರಶಂಸೆಯು ನಾನು ನನ್ನ-ಷ್ಟಕ್ಕೇ ಕಟ್ಟಿಕೊಂಡ ಬೆಲೆಯು ಸರಿಯಾದುದು ಎಂಬು-ದನ್ನು ತೋರಿಸಿತು. ಅಂದರೆ ನಾನು ವ್ಯರ್ಥ ಅಭಿಮಾನ ತಾಳಿರಲಿಲ್ಲ ಎಂದು ಅರಿತುಕೊಂಡೆ. ಇಷ್ಟಾದರೂ ಸುಮಾರು ಒಂದು ವರ್ಷ ರತ್ನಳ ಅಜ್ಞಾತ ಜೊತೆಗಾರನಾಗಿ ಉಳಿದು-ಕೊಂಡೆ.

(೩)

ಇನ್ನೂ ರತ್ನಳ ಜೊತೆಗಿದ್ದು ಆರು ತಿಂಗಳಾಗಿರಲಿಲ್ಲ. ಅಷ್ಟರಲ್ಲಿಯೇ ನನ್ನ ಸಂಕಟಪರಂಪರೆಗೆ ಆರಂಭವಾಯಿತು. ವಿಚಿತ್ರವಾದ ಕೆಮ್ಮು. ಉಗುಳಿದರೆ ರಕ್ತಮಿಶ್ರಿತವಾದ ಕಫ ಬೀಳಲಾರಂಭಿಸಿತು. ಕೊನೆಗೆ ನಾನು ಕ್ಷಯಕ್ರಿಮಿಗಳಿಗೆ ತುತ್ತಾಗಿರುವೆನೆಂದು ತಿಳಿಯಿತು. ಈ ವರೆಗೂ ರತ್ನ ನಾನು ಅದೆಷ್ಟೋ ಪ್ರೀತಿಯಿಂದಿದ್ದೆವು. ಅವಳ ಸಹವಾಸದಲ್ಲಿ ದಿವಸಗಳು ನಿಮಿಷದಂತೆ ಕಳೆದು ಹೋದುವು. ಕೇವ-ಲಾನಂದದ ಕನಸೊಂದರ ಹಾಗೆ ಆ ವೇಳೆ ತೂರಿಬಂದು ಜಾರಿಬಿದ್ದು ಹೋಯಿತು. ಎಂತಹ ನಿತಾಂತ ಮನೋ-ಹರವಾದ ದಿನಗಳವು! ಆತ್ಮೀಯತೆ, ಸ್ನೇಹ—ಸಲುಗೆ—ಒಲವು; ಆನಂದೋನ್ಮತ್ತ ಶಬ್ದಲಹರಿಗೆ ಕೊನೆಯಿದ್ದಿತೆ? ನಿರರ್ಗಳವಾದ ಪ್ರವಾಹ. ಅಭಿನಯ ಗೀತಗಳು ಆ ಮನೆಯಲ್ಲಿ. ತಾವೇ ತಾವಾಗಿ ತಾಂಡವವಾಡುತ್ತಿದ್ದುವು. ಒಡನಾಟದಲ್ಲಿದ್ದಾಗ ಆಕೆ ಶೃಂಗಾರಪ್ರೀತಿಯಿಂದ ಒಮ್ಮೆಲೆ ನನ್ನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳುವಳು. ಸಾಕಿ ಬಳೆಯಿಸಿದ ಮುದ್ದುಮುದ್ದು ಮಾತಾಡುವ ಅರಗಿಳಿ ಯನ್ನು ಆಶೆ-ಸ್ನೇಹಗಳಿಂದ ನೋಡುವಂತೆ ನನ್ನ ಕೈಯೆಡೆಗೆ ನೋಡಿ ಮೃದುವಾಗಿ ಕೈಯಾಡಿಸುತ್ತ ಹೇಳುತ್ತಿದ್ದಳು: "ಆಶ್ಚರ್ಯ! ಆದು ಹೇಗೆ ಈ ನಿಮ್ಮ ತುದಿಬೆರಲುಗಳು ಆ ಬಿದಿರುಕೊಳವೆಯ ಮೇಲೆ ಕುಣಿಯುವಾಗ ಅಷ್ಟೊಂದು ರಮಣೀಯವಾದ ಸಂಗೀತರಸವು ಪ್ರವಹಿಸುವುದು!!...."

ನನಗಾಗ ಇಪ್ಪತ್ತೆರಡು ವಯಸ್ಸು; ಆಕೆಗೆ ಹದಿನೇಳು. ರತ್ನ ದೈವೀಸಂದರ್ಯವನ್ನು ಎರಕಹೊಯ್ದು ಮಾಡಿದಂ-ತಿದ್ದಳು. ನಾನು ಆ ಕ್ರೂರರೋಗದ ಪವಡೆಯಲ್ಲಿ ಸಿಕ್ಕು ಒದ್ದಾಡುವಾಗ ಆ ಸೌಂದರ್ಯವು ಪರಿಪೂರ್ಣತೆಯ ಕೊನೆಯ ಮೆಟ್ಟಿಲನ್ನೇರಿ ಬಳುಕಿ ಸಮ್ಮೋಹಿಸುತ್ತಿದ್ದಿತು. ಆದರೆ ದೈವ ನನ್ನಮೇಲೆ ಕ್ರೂರವಾದ ಮೋಸದ ಜಾಲ-ವನ್ನು ಬೀಸಿ ಬಿಗಿದಿತ್ತು; ಬಹು ಕ್ರೂರವಾದ ಜಾಲ....

ನನ್ನನ್ನು ಕ್ಷಯರೋಗವು ಆವರಿಸಿದುದನ್ನು ತಿಳಿಯುತ್ತಲೇ ಆವಳಲ್ಲಿ ವಿಚಿತ್ರ ಬದಲಾವಣೆಯು ತೋರಿತು. ಭೀತಿ ಯಿರಬಹುದೆ? ಆ ಮೊದಲು ಸ್ವಲ್ಪದಿನಗಳ ಹಿಂದೆ ಮದುವೆ ಮಾಡಿಕೊಂಡು ಬಿಡಬೇಕು — ಎಂಬುದನ್ನು ಉಭಯತರೂ ಸಾನಂದಾತುರರಾಗಿ ಒಪ್ಪಿಕೊಂಡಿದ್ದೆವು. ಈಗ ಹೇಳಲು ಆಕೆ ತೊಡಗಿದಳು: "ಇಷ್ಟೇನು ಅವಸರ? ನಿಸ್ಸಂದೇಹವಾಗಿಯೂ ಈಗ ಮದುವೆಗಿಂತ ನಿಮ್ಮ ಆರೋ-ಗ್ಯವು ಮಹತ್ವದ್ದಾಗಿದೆ. ಆದುದರಿಂದ ಈಗ ತಾವು ದಯೆ ಯಿಟ್ಟು ಆರೋಗ್ಯಕ್ಕಾಗಿ ವಿಶೇಷ ಎಚ್ಚರ ತೆಗೆದುಕೊಳ್ಳ-ಬೇಕು. ಮದುವೆಯೇನು? ತಡೆದಿರಬಹುದು." ಈ ಬಗೆಯಾಗಿ ಹೇಳಿ ಆರೋಗ್ಯವನ್ನು ಸರಿಗೊಳಿಸಿಕೊಳ್ಳಲಿಕ್ಕೆ ಸುಮಾರಾಗಿ ನನ್ನನ್ನು ಕಳುಹಿಸಿ ಬಿಟ್ಟಂತೆಯೇ ಮಾಡಿದಳು. ಆದರೂ ನಾನು ಮುಂದೆ ಮೂರು ತಿಂಗಳುಗಳ ವರೆಗೆ ಅವಳ ಜತೆ-ಗಾರನಾಗಿರುವುದನ್ನು ಬಿಡಲಿಲ್ಲ. ಆದರೆ ಆ ವೇಳೆಯಲ್ಲಿ ನನ್ನ ರೋಗ ತೀವ್ರವಾಗಿ ಬಲಿಯಿತು. ಡಾಕ್ಟರರು ಹೇಳಿದರು: "ಕೊಳಲು ಬಾರಿಸುತ್ತಕುಳ್ಳಿರುವುದೆಂದರೆ ಫುಪ್ಪುಸಕ್ಕೆ ಏಟು ಬಿದ್ದು ರೋಗನಿರ್ವಿಣ್ಣವಾದವುಗಳನ್ನು ಹರಿದು ಚೂರು ಚೂರು ಮಾಡುವಂತೆಯೇ ಸರಿ. ನೀವು ಮಾಡುವುದು

CC-0. Jangamwadi Math Collection. Digitized by eGangotri

ಸರಿಯಲ್ಲ." ರತ್ನಳೂ ಈ ಮಾತನ್ನು ಮೊದಲೇ ಹೇಳಿದ್ದಳು. ಆದುದರಿಂದ ಮುಂದೆ ನಾನು ನಡಿಸುವುದನ್ನು ಬಿಡಲೇಬೇಕಾಯಿತು.

ರತ್ನಳನ್ನು ಬಿಟ್ಟು ನನ್ನ ಮನೆಗೆ ಬಂದೆ. ಒಂದು ವರ್ಷದ ವರೆಗೂ ಹಾಸಿಗೆ ಹಿಡಿದೆ. ಹನ್ನೆರಡು ದೀರ್ಘವಾದ ತಿಂಗಳುಗಳು! ಈ ಸುದೀರ್ಘವಾದ ಕಾಲದಲ್ಲಿ ರತ್ನಳು ಒಮ್ಮೆಯೂ ನನ್ನನ್ನು ಕಂಡುಕೊಂಡು ಹೋಗಲು ಬರಲಿಲ್ಲ. ಇಲ್ಲ, ಒಮ್ಮೆಯೂ ಇಲ್ಲ. ರೋಗವು ವಾಸಿಯಾದ ಮೇಲೆ ಡಾಕ್ಟರರು 'ಆರುತಿಂಗಳಾದರೂ ಸಂಪೂರ್ಣ ವಿಶ್ರಾಂತಿ ಬೇಕು. ಆ ವರೆಗೆ ವಿನಾಕಾರಣವಾಗಿ ಕೊಳಲು ಬಾರಿಸುತ್ತ, ಕುಳಿತು ಶ್ರಮಿಸಬೇಡಿ' ಎಂದು ಮೊದಲಾಗಿ ಹೇಳಿದರು. ನನ್ನ ಎಲ್ಲ ಆದರ್ಶ-ಉದ್ದೇಶಗಳು-ನನ್ನ ತೀರ ಒಳವೊಳಗಿನ ಆಸೆಗಳೆಲ್ಲವೂ ಆಗಲೇ ಹುರಿದುಹೋದಂತಾಯಿತು.

(೪)

ರತ್ನಳನ್ನು ಅಗಲಿ ಇದ್ದು ಒಂದೂವರೆ ವರ್ಷಗಳು ಸಂದುಹೋದುವು. ಬೇಸರದಿಂದ ಜಡವಾದ ಜೀವನವನ್ನು ಹೇಗೆಹೇಗೆಯೋ ಎಳೆದುಕೊಂಡು ಸಾಗಿದೆ. ನಿರ್ಜೀವವಾದ ನೀರಸವಾದ ದಿನಗಳು ಒಂದರ ಹಿಂದೊಂದು ಬರುತ್ತಿದ್ದುವು. ಆಮೇಲೆ ಅದು ಹೇಗೊ ನನಗೆ ತಿಳಿಯದು—ರತ್ನಳನ್ನು ಕಾಣಬೇಕೆಂದು ನಾನೇ ಹೋದೆ. ಮೊದಲೇ ನಿರಾಶೆಯಿಂದ ದುರ್ಬಲವಾಗಿದ್ದ ಹೃದಯವು ಅಲ್ಲಿ ಹೋದೊಡನೆಯೇ ಸಹಸ್ರಾರು ಚೂರುಗಳಾಗಿ ಒಡೆದುಹೋಯಿತು. ಅದೆಷ್ಟು ಬದಲಾವಣೆ! ಈ ಬಗೆಯ ಬದಲಾವಣೆಯು ಆಗಬಹುದೆಂದು ನಾನು ಕನಸಿನಲ್ಲಿಯೂ ನೆನೆಸಿರಲಿಲ್ಲ. ಅವಳನ್ನಾದರೂ ದೂಷಿಸುವುದೇಕೆ? ದೂಷಿಸಿದರೆ ಆಗಬಹುದಾದರೂ ಏನು ಅದರಿಂದ? ನಾನೇ ದೋಷಿ, ನಿರ್ಭಾಗ್ಯ. ನನ್ನ ವಿಧಿಗಾಗಿ ಬಳಲುವುದೆ ನನ್ನ ಕರ್ತವ್ಯ. ಬೀಗಿ ಬೀಳುವ ತಾರುಣ್ಯದಲ್ಲಿ ಅಂತಹ ವಿಚಿತ್ರ ರೋಗವು ನನ್ನನ್ನು ಆವರಿಸಿದುದೇಕೆ? ಆವರಿಸಿದರೂ ಆವರಿಸಲಿ, ಹಿಡಿದ ದವಡೆಗಳಲ್ಲಿಯೇ ಹಿಸುಕಿ ಕೊಂದುಹಾಕಲಿಲ್ಲವೇಕೆ? ಅದು ನನ್ನನ್ನು ಉಳಿಸಿ ಹೋದುದೇಕೆ? ಈಕೆ ನನ್ನನ್ನು ಏನೂ ಸಂಬಂಧವಿಲ್ಲದವ ಅಸ್ಪೃಶ್ಯ ಎಂದು ತಿಳಿದುಕೊಳ್ಳುವುದಕ್ಕೆ ತಾನೆ? ಅವಳ ಕಣ್ಣುಗಳಲ್ಲಿ ದಯೆ-ಕರುಣೆಗಳ ಆವಿರ್ಭಾವವಿದೆ. ಯಾವುದೊ ಒಂದು ಬಗೆಯ ಭೀತಿಯ ಕಾತರವೂ ಅವುಗಳಿಂದ ಸೂಚಿತವಾಗುವುದು. ಈಗ ಅವಳ ಜತೆಗೆ ಪ್ರೇಮ—ನನ್ನು, ಒಲವು ಇದನ್ನು ಕುರಿತು ಮಾತನಾಡುವುದು ಹೇಗೆ? ನಾಲಿಗೆಯಲ್ಲಿ ಮೊದಲು ನಲಿಯುತ್ತಿದ್ದ ರಸಯುಕ್ತವಾದ ಮೃದುಮಧುರವಾದ ಶಬ್ದಗಳು ಅಲ್ಲಿಯೇ ಆರಿಹೋದುವು. 'ಬರುತ್ತೇನೆ ಹಾಗಿದ್ದರೆ' ಎಂದು ಅಪ್ಪಣೆ ಪಡೆಯಲು ಕೇಳಿ ಹೊರಟೆ. ಸಮಾಧಾನಕ್ಕಾಗಿ ಒಂದು ಸಣ್ಣ ಮಾತನ್ನು ಕೂಡ ಉಸಿರಲಿಲ್ಲ. ಸೊಗಸು, ಸೌಂದರ್ಯ, ಲಾವಣ್ಯ-ಇವುಗಳಿಂದ ಬೀಗಿ ಬಳುಕುತ್ತಲಿದ್ದ ಆ ಮೋಹನಾಂಗಿಯ ಮುಂದೆ ನನ್ನಂತಹ ಸೊರಗಿ ಕಡ್ಡಿಯಾದ ಹುಲುಮಾನವನು ನಿಲ್ಲುವುದೇ? ಮನೆಗೆ ಬಂದು ಕುಕ್ಕರಿಸಿದೆ.

ಮೂರನೆಯ ದಿನ ಓರ್ವ ಮುದುಕಿ ನನ್ನನ್ನು ವಿಚಾರಿಸುತ್ತ ಬಂದು ಕಾಗದವೊಂದನ್ನು ಕೊಟ್ಟಳು. ಅದೇ ನನಗೆ ಕೊನೆಯ ಪ್ರಹಾರ. ನೀಟಾಗಿ ತಲೆಯ ಮೇಲೆಯೇ ಬಿದ್ದಿತು. ಯಾವುದಕ್ಕೆ ನಾನು ಹೆದರಿದ್ದೆನೋ ಅದೇ ಸಂಗತಿಯು ಸಂಭವಿಸಿತು. ಕಾಗದವನ್ನು ರತ್ನ ಬರೆದು ಕಳುಹಿಸಿದ್ದಳು. ನನ್ನ ಸಲುವಾಗಿ ಅವಳಿಗೆ ದುಃಖ ದೈನ್ಯವೆನಿಸಿತೆಂದು ಬರೆದಿದ್ದಳು. ಇನ್ನು ಏನೂ ಅವಳಿಗೆ ಎನಿಸಿರಲಿಲ್ಲ! ಮುನ್ನಾದಿನ ನಾನು ಹೋದಾಗ ಅವಳು ನನ್ನೊಡನೆ ಮಾತಾಡುವಷ್ಟು ಕೂಡ ಪ್ರಜ್ಞೆಯಲ್ಲಿರಲಿಲ್ಲವಂತೆ. ತಾನೊಂದು ದೊಡ್ಡ ತಪ್ಪು ಮಾಡಿದವಳೆಂದು ಆ ಕಾಗದದ ಮರೆಯಲ್ಲಿ ಅಡಗಿಕೊಳ್ಳಲಿದ್ದಳೆಂದೆನಿಸಿತು. ನನ್ನನ್ನು ಮದುವೆಯಾಗಲು ಸಾಧ್ಯವಿಲ್ಲ—ಎಂದು ಬರೆಯುವಾಗ ಅವಳ ಕಂಬನಿಗಳು ಧಾರೆಯಾಗಿ ಸುರಿದುವಂತೆ! ಕಾಗದದಲ್ಲಿದ್ದುದೆಲ್ಲವನ್ನೂ ಓದಿಕೊಂಡೆ. ನನ್ನ ಸುತ್ತುಮುತ್ತಲಿನ ಪದಾರ್ಥಗಳೆಲ್ಲವೂ ಶೂನ್ಯದಲ್ಲಿ ಲೀನವಾಗಿದ್ದುವು. ಕಾಗದವನ್ನು ಓದಿ ಕೆಲವೇಳೆಯ ಮೇಲೆ ಆ ಮುದುಕಿಯನ್ನು ನೋಡುವುದರಲ್ಲಿಯೇ ಇಲ್ಲದಂತಾಗಿದ್ದಳು. ಅಷ್ಟೊಂದು ತೀವ್ರವಾಗಿ ಅವಳು ಹೊರಟುಹೋಗಿದ್ದಳು. ನನ್ನ ಒಂದು ಕೊನೆಯ ಶಬ್ದವನ್ನು ಕೂಡ ಕೇಳಿಕೊಂಡು ಹೋಗದಷ್ಟು ನಿರ್ಬಂಧನೆಯಿರಬೇಕು ಅವಳಿಗೆ! ಅಸಹಾಯನಾಗಿ ಕಾಗದವನ್ನು ಚೂರುಚೂರುಮಾಡಿ ಬಿಸುಟಿದೆ. ಆದರೆ ಮುರಿದು ಮುದುಡೆಯಾಗಿದ್ದ ಮನಸ್ಸಿಗೆ ಅದರಿಂದ ನಸುವೂ ಶಾಂತಿಸಮಾಧಾನ ಉಂಟಾಗಲಿಲ್ಲ; ಕೊರಗು ಯಥಾಪ್ರಕಾರವಾಗಿ ಇದ್ದಿತು.

(೫)

ಜೀವನವೇ ನಿಸ್ಸಾರವೆನಿಸತೊಡಗಿತು. ನನ್ನನ್ನು ಔದಾಸೀನ್ಯ ವೈರಾಗ್ಯಗಳು ಆವರಿಸಿದವು. ಕೊಳಲನ್ನು ನುಡಿಸು-

CC-0. Jangamwadi Math Collection. Digitized by eGangotri

ವುದೆಂದರೆ ನನ್ನ ಜೀವಕ್ಕೆ ತುಂಬ ಅಪಾಯವೆಂದು ಡಾಕ್ಟರರು ಹೇಳುತ್ತಿದ್ದರು. ಅವರ ಬಗ್ಗೆ ನನಗೆ ಕೋಪ ತಿರಸ್ಕಾರವೆನಿಸಿತು. ನನ್ನ ಜೀವನಕ್ಕೆ ಅಂತಹ ಮೌಲ್ಯವಾದರೂ ಏನಿದ್ದಿತು? ಅದರ ಗೊತ್ತುಗುರಿಗಳಾದರೂ ಏನಿದ್ದುವು? ಮನೆಯನ್ನು ಸ್ವಚ್ಛಗೊಳಿಸಲು ಬಿಸುಟೆ ತೆಗೆದಿಟ್ಟ ಸಾರಿಸುವ ಅರಿವೆಯ ಹಾಗೆಯೇ ಅದರ ಬಾಳು. ಅಹುದು ಬಿಸುಟೆಹಾಕಿದ ರಗಟೆಗಿಂತ ಹೆಚ್ಚು ಬೆಲೆಯುಳ್ಳುದಲ್ಲ! ಜೀವಿಸಲು ಆಶೆ ಮೊಳೆಯಿಸುವಂತಹ ವಸ್ತು ಇನ್ನಾವುದೂ ಇರಲಿಲ್ಲ. ಜಗತ್ತೇ ನಿರ್ಹೇತುಕವಾದಂತೆ ತೋರಿತು.

ತನ್ನ ಸುಕುಮಾರಸುಂದರವಾದ ಪುಟ್ಟ ಪೆಟ್ಟಿಗೆಯಲ್ಲಿ ಈ ವರೆಗೂ ಪ್ರಶಾಂತವಾಗಿ ಮಲಗಿ ವಿಶ್ರಮಿಸುತ್ತಿದ್ದ ನನ್ನ ವೇಣುವನ್ನು ಮತ್ತೆ ಹೊರಕ್ಕೆ ತೆಗೆದೆ. ತುಟಿಗಳನ್ನು ಆರ್ದ್ರವಾಗಿಸಿಕೊಂಡು ಬೆರಳುಗಳಲ್ಲಿ ಸರಿಯಾಗಿ ಒರಗಿಸಿ, ನುಡಿಸಲು ತೊಡಗಿದೆ. ಮೊದಲು ನುಡಿಸುತ್ತಿದ್ದ ಮೂರು ಸ್ವರಗಳು ನುಡಿದುವು. 'ಸಾ—ಪಾ—ಸಾ'. ಆದರೆ ಆ ಮೇಲೆ ನಾನು ನುಡಿಸಲಾರದೆ ಹೋದೆ. ಉದ್ವೇಗದ ಮೂಲಕವಾಗಿ ಕಂಬನಿಗಳು ಸೂಸಿ ಹರಿಯತೊಡಗಿ ನನ್ನನ್ನು ಹೆಣ್ಣುಹೆಂಗಸಿನ ಹಾಗೆ ಅಶಕ್ತ-ಅಸಹಾಯನನನ್ನಾಗಿಮಾಡಿದುವು. ನುಡಿಸಲು ಸಾಧ್ಯವಾಗದೇ ಹೋದುದರಿಂದ ಹಾಸಿಗೆಯಲ್ಲಿ ಹೋಗಿ ಬಿದ್ದುಕೊಂಡೆ. ದುಃಖವು ಹೆಪ್ಪುಗಟ್ಟ ಗಂಟಲಿನಲ್ಲಿ ತುಂಬಿಬಂದಿತು. ಇಷ್ಟು ದಿನಗಳ ವರೆಗೆ ಇದನ್ನು ಹೇಗೆ ಬಿಟ್ಟುಬಿಟ್ಟದ್ದೆನು—ಎಂಬ ವಿಚಾರ ಕಸವಿಸಿಯನ್ನುಂಟುಮಾಡಿತು. ಕೊಳಲನ್ನು ಗಟ್ಟಿಯಾಗಿ ಎದೆಗೆ ಅವಚಿಕೊಂಡೆ. ಕಳೆದುಕೊಂಡ ಮಗುವನ್ನು ಮರಳಿ ಕಂಡು ಗಟ್ಟಿಯಾಗಿ ಅಪ್ಪಿಕೊಂಡು ಕಂಬನಿ ಮಿಡಿವ ತಾಯಿಯ ಅವಸ್ಥೆಯ ಕಲ್ಪನೆಯು ಬಂದುಹೋಯಿತು.

ಕೊನೆಗೆ ಒಂದು ಬಗೆಯ ವೈರಾಗ್ಯವೃತ್ತಿಯಲ್ಲಿ, ದೈವದ ಜೊತೆಗೆ ಎದೆಗುಂದಿದವನಾಗಿ ಹೋರಾಡುವುದೇ ನನ್ನಾ ಗುರಿಯೆಂದು ನಿರ್ಣಯಿಸಿದೆ. ಹೆಚ್ಚು ಪ್ರೀತಿ ಆತುರಗಳಿಂದ ಸಂಗೀತದಲ್ಲಿ ಜೀವನವನ್ನು ಮತ್ತೆ ತೇಲಿಬಿಟ್ಟೆ. ನಾನು ಜರುಗಿಸಿದ ಎಷ್ಟೋ ಕಾರ್ಯಕ್ರಮಗಳು ನನ್ನ ಯಶಃಪತಾಕೆಯನ್ನು ಮರಳಿ ತಂದುವು. ಯಾವ ವಿದ್ಯಾರ್ಥಿಯೂ ಆನಂದತುಂದಿಲನಾಗಬಹುದಾದ ಪ್ರಶಂಸೋದ್ಗಾರಗಳನ್ನು ಕೇಳಿದೆ: "ಸರಿಯಪ್ಪ, ಆ ಗುರುವಿಗೆ ಯೋಗ್ಯನಾದ ಶಿಷ್ಯ!" ಹೀಗೆ ಹೊಗಳಿಸಿಕೊಳ್ಳುತ್ತ ನನ್ನ ಗುರುವಿನ ಪವಿತ್ರ ಪೂಜ್ಯವಾದ ಹೆಸರಿಗೆ ಕುಂದು ಬಾರದಂತೆ ನೋಡಿಕೊಂಡು ಸಾಗಿದೆ.

ಸಂಗೀತ ಕ್ಷೇತ್ರದಲ್ಲಿ ಜೀವನವನ್ನು ಯಶಸ್ವಿಯಾಗಿ ಸಾಗಿಸಹತ್ತಿ ಐದು ವರ್ಷಗಳಾದುವು. ಈ ಎಲ್ಲ ದಿನಗಳಲ್ಲಿ ಸಂಗೀತವೇ ಸಮಾಧಾನ; ನನ್ನಲ್ಲಿ ಜೀವಕಳೆಯನ್ನು ತುಂಬುತ್ತಲಿದ್ದ ಶಕ್ತಿಯೆಂದರೆ ಅದೊಂದೆ.ಎಷ್ಟೋ ಸಾರೆ ನನ್ನಷ್ಟಕ್ಕೆ ನಾನು ಹುಚ್ಚನ ಹಾಗೆ ಕುಕುಕು ಎಂದು ನಗುತ್ತಿದ್ದೆ; ಕೈಯೊಳಗಿನ ಕೊಳಲನ್ನು ಕುರಿತು ಉದ್ಗರಿಸುತ್ತಿದ್ದೆ: "ಎಲೆ ಏ ರೋಗದ ದೆವ್ವೇ! ಅನಿಷ್ಟ ದುಷ್ಟಕ್ರಿಮಿಯೆ! ಕೊಳಲಿನ ಮೂಲಕ ಮತ್ತೆ ನನ್ನನ್ನು ಬಂಧಿಸುವೆನೆನ್ನುವಿಯಾ? ಇಲ್ಲ; ಮೂರ್ಖ ಜಂತುವೇ, ನಿನಗೆ ಅದು ಅಸಾಧ್ಯವಾದುದು. ಛೀ, ಥೂ ಹೊರಟು ನಡೆ! ಇನ್ನು ಮೇಲೆ ನಿನ್ನನ್ನು ಹಿಂದೂಡಿ ಸದೆಬಡೆಯಲು ಈ ಕೊಳಲಿನ ಕೈದೊಂದೇ ಸಾಕು ಎಂಬುದನ್ನು ಅರಿತುಕೊಳ್ಳು. ಇದೇ ನನಗೆ ಔಷಧಿ, ನನ್ನ ಧನ್ವಂತರಿ, ನನ್ನನ್ನು ಅಮರನನ್ನಾಗಿಸುವ ಅಮೃತ! ಹೊರಟು ನಡೆ ಉದ್ಧತ ಕೀಟಕವೇ! ನನ್ನ ಕೊಳಲಿನೆದುರು ನಿಲ್ಲಲು ನಿನಗೆ ಇನ್ನೂ ಧೈರ್ಯವೇ? ಹಂ ಹೇಸಿ ಹೇಡಿ! ಹೋಗು ಒಮ್ಮೆಲೆ ಹೊರಟುಹೋಗು!" ಭೀಮನ ಗದೆಯಂತೆ ಕೊಳಲನ್ನು ಎಷ್ಟೋ ಸಲ ನಾನು ತಿರುಗಿಸಿದುದುಂಟು. ಮರುಕ್ಷಣದಲ್ಲಿಯೇ ನನ್ನ ಬುದ್ಧಿಭ್ರಂಶವೂ ಆಗಿರುತ್ತದೆಯೇ? ಎಂದು ಗಾಬರಿಯಾಗಿ ಸುಮ್ಮನಾಗುತ್ತಿದ್ದೆ.

ಕಳೆದ ಐದು ವರ್ಷಗಳಿಂದಲೂ ಎಷ್ಟೋ ವೇಣುವಾದನದ ಕಾರ್ಯಕ್ರಮಗಳನ್ನು ಜರುಗಿಸಿದ್ದೇನೆ. ಆದರೆ ಅವೆಲ್ಲವುಗಳಲ್ಲಿ ಒಂದೇ ಒಂದು ನವೀನವಾಗಿಯೂ ಸುಸ್ಪಷ್ಟವಾಗಿಯೂ ನನ್ನ ನೆನಪಿನಲ್ಲಿ ಮೂಡಿ ನಿಂತಿರುವುದು. ನನ್ನ ಅಂತರ್ಯದಲ್ಲಿ ಅಷ್ಟೊಂದು ಆಳವಾಗಿ ಹುದುಗಿಕೊಂಡಿದೆ ಆ ಸನ್ನಿವೇಶ.

ಅಂದು ನಡೆದ ಕಾರ್ಯಕ್ರಮದ ನಡುವಣ ವೇಳೆಯದು. ಪಿಟೀಲಿನವನ ಬಾರಿಯಿದ್ದಿತು. ಅವನನ್ನು ಹುರಿದುಂಬಿಸಲು ತಾಳಹಾಕುತ್ತಲೇ ಅವನೆಡೆಗೆ ನೋಡಿದೆ. ಅದೇ ದಿಶೆಯಲ್ಲಿ ಕುಳಿತ ಒಂದು ವ್ಯಕ್ತಿಯಲ್ಲಿ ನನ್ನ ಕಣ್ಣುಗಳು ಸ್ಥಿರವಾಗಿ ನಿಂತವು. ಆ ಬದಿಗೆ ನನ್ನ ರತ್ನ ಕುಳಿತಿದ್ದಳು; ಅಹುದು ಅಲ್ಲಿ ಕುಳಿತವಳು ರತ್ನಳೇ!

ನನ್ನ ಎದೆಯು ತೀವ್ರವಾಗಿ ಬಡಿದುಕೊಳ್ಳಲಾರಂಭಿಸಿತು. ದುಗುಡನ ಆವೇಗದಿಂದ ಉಕ್ಕೇರಿ ಒಂದೆರಡು ರಕುತದ ಹನಿಗಳನ್ನೂ ಹೊರಚಲ್ಲಿರಬಹುದು. ಕೊಳಲನ್ನು ಮತ್ತೆ

CC-0. Jangamwadi Math Collection. Digitized by eGangotri

ತುಟಿಯಲ್ಲಿಟ್ಟು ಬಾರಿಸತೊಡಗಿದೆ. ನಿರರ್ಗಳವಾಗಿ ಹರಿದ ಆ ಸಂಗೀತದ ಮಟ್ಟು ಜಲಪಾತದ ಸೌಂದರ್ಯವನ್ನು ಸೂಸಿತು. ಆ ಮಟ್ಟನ್ನು ಮರೆತುಬಿಟ್ಟೆ, ನನ್ನನ್ನೂ ಮರೆತುಬಿಟ್ಟೆ. ಆದರೆ ಆಶ್ಚರ್ಯ. ಇನ್ನೂ ಆ ಸ್ವರಮಾಲಿಕೆಯ ಉಲಿವೇ ಉಲಿಯುತ್ತಿದ್ದಿತು. ಗಾಳಿಯ ಪ್ರಮಾಣರಚನೆಗಾಗಿ ಏರಿಳಿಯುತ್ತಿದ್ದಿತು ಎದೆ; ತುಟಿಗಳು ಕೊಳಲಿನ ಬಾಯಿಗೆ ಮುತ್ತಿಟ್ಟು ಒರಗಿಕೊಂಡಿದ್ದವು; ಬೆರಳುಗಳು ಪುಟ್ಟಹಕ್ಕಿಗಳ ಹಾಗೆ ಹಾರಾಡುತ್ತಿದ್ದುವು. ವೇಣುವಿನಿಂದ ಪ್ರವಹಿಸುತ್ತಿದ್ದ ಸ್ವರಮಾಧುರ್ಯವು ವಿಶಾಲವಾದ ದಿವಾಣಖಾನೆಯನ್ನೆಲ್ಲ ವ್ಯಾಪಿಸಿದ್ದಿತು. ಆದರೆ ನನ್ನ ಮನಸ್ಸು ಮಾತ್ರ ಇವುಗಳ ಕಡೆಗೆ ಲಕ್ಷ್ಯ ಕೊಡಲಿಲ್ಲ....

ಕೊಳಲನ್ನು ಅವಚಿಕೊಂಡು ನಿಸ್ಸಹಾಯನಾಗಿ ಶೂನ್ಯ-ಮನಸ್ಕನಾಗಿ ಪ್ರೇಮಭಂಗಿತನಾಗಿ ಹಿಂದೆ ಆದೊಂದು ದೀರ್ಘವಾದ ರಾತ್ರಿಯನ್ನು ಕಳೆದುದನ್ನು ಮಾತ್ರ ಜ್ಞಾಪಿಸಿಕೊಂಡೆ. ಹೆಂಗಸರ ಹಾಗೆ ಅತ್ತು ಕಣ್ಣೀರು ಸುರಿಸಿದುದನ್ನು ನೆನೆದುಕೊಂಡೆ. ಉಳಿದುದೆಲ್ಲವೂ ಮರೆದು ಹೋಗಿದ್ದಿತು. ದುಃಖವೇದನೆಗಳಿಂದ ಕೂಡಿದ್ದ ಆ ಅಂದಿನ ರಾತ್ರಿಯೊಂದು ಮಾತ್ರ ನನ್ನ ಮನಸ್ಸಿನೆದುರು ಚಿತ್ರಿತವಾಯಿತು. ಯಾಕೆಂದರೆ ಅದೊಂದೆ ನನಗೆ ಸತ್ಯ-ವೆನಿಸುವುದು; ಉಳಿದುದೆಲ್ಲ ಮಾಯೆ ಭ್ರಮೆ. ಬರೀ ಭ್ರಮೆ....

ಇಂದು ಸಭೆಯಲ್ಲಿ ಇಂದಿನ ರಾತ್ರಿಯಂತೆಯೇ ಅನಿ-ರೀಕ್ಷಿತವಾಗಿ ಕಣ್ಣೀರು ಸುರಿದುವು. ಆ ಭವ್ಯವಾದ ವಿದ್ಯುದ್ದೀಪದ ಬೆಳಕಿನಲ್ಲಿ ಕಂಬನಿಗಳು ಗಲ್ಲಗಳ ಮೇಲಿಳಿಯುವುದನ್ನು ಪ್ರೇಕ್ಷಕರು ನೋಡುವರು ಎಂಬ ಕಲ್ಪನೆಯೇ ನನಗಿರಲಿಲ್ಲ, ಆದರೆ ಆ ಕಂಬನಿಗಳು ದುಗುಡ-ವನ್ನು ತೊಡೆದುಹಾಕಿ ಅದೆಷ್ಟೊ ಸಮಾಧಾನವನ್ನುಂಟು-ಮಾಡಿದವು. ಅದೊಂದು ಬಗೆಯ ವಿಲಕ್ಷಣ ಮತ್ತು ಆಶ್ಚರ್ಯಕರವಾದ ಕಾಂತಿ ಅನಿರೀಕ್ಷಿತವಾಗಿಯೇ ನನ್ನನ್ನು ಆವರಿಸಿಬಿಟ್ಟಿತು. ಅದರ ಸಾತ್ವಿಕ ಬೆಳಗಿನಲ್ಲಿ ಮಿಂದು ಹಾಯಾದೆ. ಆ ಕಂಬನಿಗಳು ಇದುವರೆಗೆ ನನ್ನ ಮನಸ್ಸಿಗೆ ಹತ್ತಿದ್ದ ಒಂದು ಬಗೆಯ ಜಂಗು-ಕೊಳೆಯನ್ನು ತೊಳೆದು ಹಾಕಿದವು. ನನ್ನ ಮನಸ್ಸು ಎಂದೂ ಎನಿಸದಷ್ಟು ಹಗುರಾಯಿತು; ಪ್ರಕಾಶಮಯವಾಯಿತು.

೭

ಅದೇ ರಾತ್ರಿ ನನಗೊಂದು ಕನಸು. ಆಹ ದೇವರೇ, ನನ್ನ ಜೀವನವನ್ನೆಲ್ಲ ಆ ಕನಸಿನಲ್ಲಿಯೇ ಕಳೆದಿದ್ದರೆ! ಅದೇ ದಿನ ರಾತ್ರಿ ಹಾಸಿಗೆಯಮೇಲೆ ಬಿದ್ದುಕೊಂಡಿದ್ದೇನೆ. ನಿನ್ನಿನ ಕಾರ್ಯಕ್ರಮಕ್ಕೆ ಬಂದವಳೇ ಇಂದು ನನ್ನ ಬದಿಯಲ್ಲಿ ಅಳುತ್ತ ನಿಂತಿದ್ದಾಳೆ. ತನ್ನ ಕಾರ್ಯವನ್ನು ತಾನೇ ಹಳಿದುಕೊಂಡು ಬೆಂದು ಬೇಗುದಿಗೊಳುತ್ತಿದ್ದಳು. ತನ್ನನ್ನು ಕ್ಷಮಿಸಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿದಳು, ಸೆರಗೊಡ್ಡಿ ಬೇಡಿಕೊಂಡಳು. ಪಶ್ಚಾತ್ತಾಪದಲ್ಲಿ ಬೆಂದು ನೊಂದಿದ್ದೇನೆ ಎಂದಳು. ಆದರೆ ನನ್ನ ದುಗುಡದ ಬಗೆಯಲ್ಲಿ ಸಹ ಸ್ಥೈರ್ಯವಿದ್ದಿತು. ಎಂತಹ ದೈನ್ಯಪೂರ್ಣ ಜೀವನವೆನ್ನದು! ಅವಳು ನನ್ನನ್ನು ಪ್ರೀತಿಸುತ್ತಿರಲಿಲ್ಲ; ಬರೀ ನನ್ನ ಕೊಳಲನ್ನು ಮಾತ್ರ ಪ್ರೀತಿಸುತ್ತಿದ್ದಳು. ನನ್ನ ಆತ್ಮಕ್ಕೆ ಇದರಿಂದ ಶಾಂತಿ ಉಂಟಾಗುವುದು ಹೇಗೆ? ನನ್ನ ಆಳವಾದ ಸತ್ಯವಾದ ಪ್ರೇಮಪಿಪಾಸೆಯನ್ನು ತಣಿಸಲು ಇದಿಷ್ಟರಿಂದ ಸಾಧ್ಯವೇ? ದೈವವೇ, ನನ್ನ ಸಂಗೀತವನ್ನು ಪ್ರೇಮಿಸದೆ ನನ್ನನ್ನು ಪ್ರೇಮಿಸಬಹುದಾಗಿದ್ದಿತಲ್ಲವೇ ಅವಳು?! ಇಂತಹ ವಿಚಾರಗಳಿಂದ ಕೂಡಿದವನಾದರೂ ಅವಳು ಬಂದು ನಿಂತೊಡನೆಯೇ ಅವಳ ಕಣ್ಣು ದುಕ್ಕದ ನೀರನ್ನುಗುಳುತ್ತಿದ್ದುದನ್ನು ನೋಡಿದೊಡ-ನೆಯೇ ಹುಚ್ಚನಂತೆ ಅವಳನ್ನು ಸೆಳೆದುಕೊಂಡು ತೋಳು-ಗಳಲ್ಲಿ ಬಲವಾಗಿ ಬಂಧಿಸಿದೆ, ಎದೆಯಲ್ಲಿ ಆಶ್ರಯವಿತ್ತೆ. ಪ್ರಬಲವಾದ ಒಲವಿನ ಝರಿಯು ಮೈಯಲ್ಲಿ ಪ್ರವಹಿಸಿತು....

ಇದೇ ವೇಳೆಯಲ್ಲಿ ಕಣ್ಣು ತೆರೆದೆ, ಬದಿಯಲ್ಲಿ ರತ್ನಳನ್ನು ಕಾಣಲಿಲ್ಲ. ಅಲ್ಲಿ ಯಾರೂ ಇರಲಿಲ್ಲ; ಆ ಕೋಣೆಯಲ್ಲಿ ಯಾರೂ ಇರಲಿಲ್ಲ; ನಾನೊಬ್ಬನೇ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದೆ. ನನ್ನ ಮೇಲೆ ನನ್ನ ಕೊಳಲು. ಎದೆಗೆ ಅಪ್ಪಿಕೊಂಡುದು ರತ್ನಳನ್ನಲ್ಲ, ನನ್ನ ವೇಣು ಹೃದಯದ ಮೇಲೊರಗಿ ನಿದ್ರಿಸುತ್ತಿದ್ದಿತು.....



CC-0. Jangamwadi Math Collection. Digitized by eGangotri

# ತೋರಣ

(ಜಿ. ವರದರಾಜರಾವ್, ಬೆಂಗಳೂರು)

ಹಲವು ಕವಿಗಳ ಕಾವ್ಯವಾಣಿಯು
ಮಿಡಿದ ಕನ್ನಡ ದೇವಿಯೆ !
ತಿದ್ದಿ ಬಂದಿಹೆ ನನ್ನ ಮಾತೆಯು
ತೊದಲ ನುಡಿಯನು ತಾಯಿಯೆ !
ಹೊಸಲು ಕಾಣಲು,....ಬಂದೆ ತೋರಣ ಕಟ್ಟಲು.

ಬೆಳೆದ ಬಾಳನು ಎಳೆಯ ಬಾಳಿನ
ತಿಳಿಯ ಮನಸಿಗೆ ಹೊಂದಿಸಿ,
ಕಳೆದ ದಿನಗಳ ನನ್ನ ನೆನಪಿನ
ಬಲಿಯ ಬಿಗಿಯಲಿ ಬಂಧಿಸಿ,
ನಗುತ ನಲಿಯುವೆ....ತಿರೆಯ ತೊಟ್ಟಿಲ ಮಡಿಲಲಿ.

ಪ್ರೇಮದಿಂದಲಿ ಬಾನಿನರಸಿಯು
ಒಲಿದು, ಜೋಗುಳ ಹಾಡಲು,
ನಿದ್ರೆ ನೆಳಲಲಿ ಕನಸ ರಾಣಿಯು
ತನ್ನ ಸಿರಿಯನು ಬಿಚ್ಚಲು,
ಅಲ್ಲಿ ಕಾಣುವೆ....ಕವನ ದೇವಿಯ ಭಾಗ್ಯವ.

ಚೆಲುವಿನಂಕದ ಮೇಲೆ ನಲಿಯುವೆ
ಒಮ್ಮೆ, ಕೇಕೆಯ ಹಾಕುತ.
ಅಳಲ ಬೆಂಕಿಗೆ ಸಿಕ್ಕಿ ಕುದಿಯುವೆ
ಒಮ್ಮೆ, ಕಂಬನಿ ಕರೆಯುತ.
ಆಗ ನುಡಿವೆನು,....ಗೆಲವು ನೋವಿನ ಪರಿಯನು.

ಎಲ್ಲ ಕವಿತೆಯ ತಿರುಳನನಿತನು
ಎಳೆಯ ತಳಿರಲಿ ಹುದುಗಿಸಿ,
ಗುಡಿಗೆ ತೋರಣ ಕಟ್ಟಿ ಮೆರೆವೆನು
ಕವನದೆಲೆಗಳ ಪೋಣಿಸಿ.
ಸೇವೆಗೈಯುವೆ;....ತಳಿರ ಕೊಳಲಲಿ ಹಾಡುವೆ.

ಗಾಳಿ ಬೀಸಲು, ಕೊರಲ ದನಿಯನು
ತೇಲಿ ಬಿಡುವೆನು ಮೆಲ್ಲಗೆ.
ಗಾನ ಸೇರಲು ನಿನ್ನ ಬಳಿಯನು
ಬಯಕೆ ಫಲಿಸಿತು ಅಲ್ಲಿಗೆ.
ಆಶೆ ಸಲ್ಲಿಸು,....ಸಲಹು ಕನ್ನಡ ದೇವಿಯೆ !

☆ **ಲೀಲೆ** ☆

(ಕಲೋಪಾಸಕ)

ಬೆಳ್ಳಿ ಜೊಗಚಿಯ ಚಂದ್ರ ಮುಗಿಲ ಮಂಟಪದಲ್ಲಿ
ತಾರೆಗಳ ಬಳಗದಲಿ ರಂಜಿಸಿರಲು,
ಗಂಧವಾಹಕನಿಂದು ಕುಸುಮವತಿಯರನೆಲ್ಲ,
ಚಂದಿರನ ಸ್ವಾಗತಕೆ ಬಳುಕಿಸಿರಲು,

ಮುಗಿಲ ಮಾನಸದಲ್ಲಿ ರಾಜಹಂಸಗಳಂತೆ
ತಿಳಿಮೋಡಗಳು ಮೆಲನೆ ತೇಲುತಿರಲು,
ಮೇದಿನಿಗೆ ಮೊದಲಾಗಿ ಹುಲ್ಲಿಗೂ ಕಡೆಯಾಗಿ
ಎದೆದುಂಬಿ ಹಿಡಿಸದಲೆ ನಗುತಲಿರಲು,

ಹೊಚ್ಚ ಹೊಸ ಪಲ್ಲವದ ಬೆಚ್ಚನೆಯ ಮನೆಯಲ್ಲಿ
ಈ ಪಕ್ಷಿದಂಪತಿಗದೆಂಥ ನಿದ್ರೆ !
ಮೈಕೊರೆವ ಮಾಗಿಯೂ ಮಧುಮಾಸವಾಗಿರಲು
ನಲ್ಲೆನಲ್ಲರಿಗಾರ ಯೋಗಮುದ್ರೆ ?

ತಂಗದಿರ ಹೊಳೆದಾಗ ಗಾಳಿಯಲೆ ಸುಳಿದಾಗ
ಜೀವಕುಮುದಿನಿ ಮೆಲ್ಲನರಳುತಿತ್ತು,
ಯಾರ ಲೀಲೆಯ ಕನಸು ಎಂಬ ಭಾವನೆ ಬೆಳಗೆ
ನಸುಗುಂದಿ ಕಳೆಹೀನವಾಗುತಿತ್ತು.

ಎಲೆ ಗಾಳಿ, ಉಡುಗಣವೆ, ಪಕ್ಷಿದಂಪತಿಗಳೇ,
ಅರಳಿದಿರಿ ನೀವಾರ ಕನಸದಾಗಿ ?
ಒಂದು ಕ್ಷಣವಾದರೂ, ಕನಸುಗಳ ಕನಸಿಗಾ,
ಮೂಡಿ ಬಾ ! ಎಳೆ ಬಿದಿಗೆಚಂದ್ರನಾಗಿ.

CC-0. Jangamwadi Math Collection. Digitized by eGangotri



**Gujarat and its literature:** ಲೇಖಕರು—ಶ್ರೀ. ಕೆ. ಎಂ. ಮುನ್ಷಿ, ಬಿ. ಎ., ಎಲ್‌ಎಲ್. ಬಿ.; ಪ್ರಕಾಶಕರು — Longmans, Green & Co. Ltd., Bombay. ಡೆ. ಅ. ೪೦೭ ಪುಟಗಳು.

ಗುಜರಾತಿ ಸಾಹಿತ್ಯದ ಹುಟ್ಟು ಹೆಚ್ಚಳಗಳ ಪರಿಚಯವನ್ನು ಮಾಡಿಕೊಡುವ (ಇಂಗ್ಲಿಷ ಭಾಷೆಯಲ್ಲಿ ಬರೆಯಲ್ಪಟ್ಟ) ಮಹತ್ವದ ಒಂದು ಗ್ರಂಥವಿದು. ಇದನ್ನು ಬರೆದವರು ಗುಜರಾತಿ ಆಧುನಿಕ ಸಾಹಿತ್ಯದಲ್ಲಿ ಹೆಸರಾದ ಶ್ರೀ. ಮುನಶಿಯವರು. ಮಹಾತ್ಮಾಜೀಯವರ ಮುನ್ನುಡಿಯಿಂದೊಡಗೂಡಿದೆ. ಸಂಸ್ಕೃತ, ಪ್ರಾಕೃತಗಳ ಉತ್ತುಂಗ ಶಿಖರಗಳೊಳಗಿಂದ ಒಸರುವ ಗುರ್ಜರ ಭಾಷಾ-ಸಾಹಿತ್ಯ ಪ್ರವಾಹವು ಕಾಲಕ್ರಮದಲ್ಲಿ ಬೆಳೆಯುತ್ತ ಇಂದಿನ ಸ್ವರೂಪವನ್ನು ಹೇಗೆ ತಾಳಿತೆಂಬುದನ್ನು ಶ್ರೀ. ಮುನಶಿಯವರು ಮನೋಹರವಾಗಿ ವಿವರಿಸಿ ಹೇಳಿದ್ದಾರೆ.

ಗುಜರಾತಿ ಭಾಷೆಯೊಳಗಿನ ಹಿಂದಿನ ಹಾಗೂ ಇಂದಿನ ಸಾಹಿತ್ಯ ಮತ್ತು ಸಾಹಿತಿಗಳ ಪರಿಚಯವನ್ನು ಮಾಡಿಕೊಳ್ಳಲಿಚ್ಛಿಸುವ ಪರಪ್ರಾಂತೀಯರಿಗೆ ಶ್ರೀಮಾನ್ ಮುನಶಿಯವರ ಈ ಗ್ರಂಥವು ಬಹಳೆ ಉಪಯುಕ್ತವಾಗಿದೆ. ತಮ್ಮವರು ಬರೆದರೆ ಆದರಲ್ಲಿರುವ ಆತ್ಮೀಯತೆ, ವಿಷಯ ವಿವೇಚನೆಗಳಲ್ಲಿರುವ ಹುರುಪು, ಹಿರಿಮೆಯ ಬಿಂಕ, ಬಿಗುಪುಗಳು ಹೆರವರ ಭಾಷೆಯಲ್ಲಿ ಎಂದೂ ಬರಲಾರವು. ಏಕೆಂದರೆ ಎಷ್ಟೆಂದರೂ ಅವರು ಈ ನಾಡಿನೊಡನೆ ಸಮರಸರಾಗದ ಹೆರವರು. ರೈಸರು ಬರೆದ ಕನ್ನಡ ಸಾಹಿತ್ಯದ ಚರಿತ್ರೆ ಮತ್ತು ಮುನಶಿಯವರ ಪ್ರಸ್ತುತ ಗ್ರಂಥಗಳನ್ನು ಸರಿಹೋಲಿಸಿ ನೋಡಿದರೆ ಈ ಮಾತಿನ ಮನವರಿಕೆಯಾಗದೆ ಇರದು.

ಶ್ರೀ. ಮುನಶಿಯವರ ಈ ಗ್ರಂಥದ ಭಾಷೆಯು ಸಾಹಿತ್ಯ ವಿಮರ್ಶಕನ ಕಡುತೂಕದ ನುಡಿಯಾಗಿರದೆ ಪಕ್ಷಾಭಿಮಾನಿಯ ಉತ್ಸಾಹಶಾಲಿ ವಾಣಿಯಾಗಿದೆ. ಈ ಪುಸ್ತಕದಲ್ಲಿ ಶ್ರೀ. ಮುನಶಿಯವರು ತೋರ್ಪಡಿಸುವ ಆರ್ಯಾಭಿಮಾನವು ಹಿಂದುಮುಂದಿನ ಎಚ್ಚರುಳ್ಳ ಇತಿಹಾಸಜ್ಞನಿಗೆ ಒಪ್ಪದಂತಹದಾಗಿದೆ. ತಮ್ಮಲ್ಲಿ ಆರ್ಯಸಂಸ್ಕೃತಿಯು ಅವ್ಯಾಹತವಾಗಿ ಸಾಗಿಬಂದಿದೆ ಎಂದು ಅಭಿಮಾನಪೂರಿತರಾಗಿ ಬರೆದುಕೊಳ್ಳುವ ಶ್ರೀ. ಮುನಶಿಯವರೆ ಒಂದೆಡೆಗೆ They (Aryans) married the daughters of the aboriginese freely. (P 14) ಎಂದು ಹೇಳಿದ್ದಾರೆ! ಗುಜರಾತಿನ ಪೂರ್ವಚರಿತೆಯನ್ನು ಹೇಳುವಾಗ ಅಲ್ಲಿ ಅಸಂಸ್ಕೃತ, ಕಿರುಕುಳ ಜಾತಿಯ ಜನಗಳಿದ್ದರೆಂದು ಅಸಿಮಿಸಿಯಿಲ್ಲದೆ ಆಡಿಬಿಟ್ಟಿದ್ದಾರೆ! ಆರ್ಯಪೂರ್ವಜನಾಂಗವಾದ ದ್ರಾವಿಡರ ಅರಿವು ಶ್ರೀ. ಮುನಶಿಯವರಿಗೆ ಇದ್ದಂತೆ ತೋರಲಿಲ್ಲ. ದ್ರಾವಿಡರೂ ಕೆಲಮಾತುಗಳಲ್ಲಿ ಆರ್ಯರಿಗಿಂತ ಎಷ್ಟೋ ಮುಂದುವರಿದಿದ್ದರೆಂಬುದೂ ಶ್ರೀ. ಮುನಶಿಯವರ ಗಮನಕ್ಕೆ ಬಂದಿಲ್ಲವೆಂದು ತೋರುತ್ತದೆ. ಇವೆರಡೂ ಮಾತುಗಳು ಈಗ ವಿದ್ವಜ್ಜನ ಸಮ್ಮತಿಯನ್ನು ಪಡೆದಿದ್ದು ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿವೆ.

ಆರ್ಯರು ಬರುವ ಮೊದಲು ಪಂಜಾಬ, ಸಿಂಧದಿಂದ ಹಿಂದೂದೇಶದ ಪಶ್ಚಿಮ ಭಾಗದಲ್ಲಿ ಮುಖ್ಯವಾಗಿ "ದ್ರಾವಿಡರೆ" ಪ್ರಬಲರಾಗಿದ್ದರೆಂದು ಈಗ ಸಿದ್ಧವಾಗಿದೆ. ಈಗ ಗುಜರಾತವೆಂಬ ಹೆಸರಿನ ಪ್ರದೇಶವಂತೂ ದ್ರಾವಿಡರ ಒಂದು ಶಾಖೆಯ ನೆಲೆವೀಡಾಗಿದ್ದಿತೆಂದು ಜನಾಂಗ, ಭಾಷೆ, ಸಾಂಸ್ಕೃತಿಕ ಇತಿಹಾಸಗಳಿಂದ ಚೆನ್ನಾಗಿ ಮನದಿಕೆಗೆ ಬಂದ ಸಂಗತಿಯಾಗಿದೆ. ಆದರೆ ಶ್ರೀ. ಮುನಶಿಯವರು ಮಾತ್ರ ತಮ್ಮ ಈ ಮಹಾಗ್ರಂಥದಲ್ಲಿ ಈ ಮಾತನ್ನು ಸಂಪೂರ್ಣವಾಗಿ ಕಡೆಗಣಿಸಿದಂತೆ ಕಾಣುತ್ತಿದೆ.

ಗುಜರಾತವೆಂಬುದು ಇತ್ತೀಚಿನ ಹೆಸರು. ಗುರ್ಜರರೆಂಬ ಜನಾಂಗವು ಬಂದು ನೆಲಸಿದ ಬಳಿಕ ಈ ಹೆಸರು ಬಹಳ ಅರ್ವಾಚೀನ ಕಾಲದಿಂದ ಬಳಕೆಯಲ್ಲಿ ಬಂದಿತು. ಮೊದಲು ಈ ನಾಡಿನ ಬೇರೆಬೇರೆ ಭಾಗಗಳಿಗೆ ನಾಗರದೇಶ, ಅನೂಪದೇಶ, ಶೂರ್ಪಾರಿಕ, ಅಪರಾಂತ, ಲಾಟ ಈ ಮೊದಲಾದ ಹೆಸರುಗಳಿದ್ದುವೆಂದು ಸಪ್ರಮಾಣವಾಗಿ ಶ್ರೀ. ಮುನಶಿಯರು ಕಾಣಿಸಿದ್ದಾರೆ. ಆದರೆ ಈ ನಾಡಿಗೆ 'ಕುಂತಲ'ವೆಂಬ ಹೆಸರೂ ಒಂದು ಕಾಲಕ್ಕೆ ಇದ್ದಿತೆಂಬುದನ್ನು ಶ್ರೀ. ಮುನಶಿಯವರ ಗಮನಕ್ಕೆ ತರಲಿಚ್ಛಿಸುತ್ತೇನೆ. "ದ್ವಾರ-

CC-0. Jangamwadi Math Collection. Digitized by eGangotri

ಕಾಂತಂ.... ಕುಂತಲಾಭಿಧೋ ದೇಶಃ" ಎಂದು ಶಕ್ತಿಸಂಗಮ ತಂತ್ರದಲ್ಲಿ ಹೇಳಿದುದನ್ನು ವಾಚಸ್ಪತ್ಯ ಕೋಶದಲ್ಲಿ ಕೊಡಲಾಗಿದೆ. ಕುಂತಲರೆಂದರೆ ಅವರೇ ಕರ್ಣಾಟರು. ಆದುದರಿಂದ ಗುಜರಾತವು ಅತಿಪ್ರಾಚೀನ ಕಾಲದಲ್ಲಿ ಕನ್ನಡಿಗರ ನಾಡೆ ಆಗಿದ್ದಿತೆಂದು ನಿಃಸಂದೇಹವಾಗಿ ಹೇಳಬಹುದಾಗಿದೆ. ಡಾ. ಸ್ಟೆನ್ ಕೊನೊ ಅವರೂ ಈ ಮಾತನ್ನೇ ಇನ್ನೊಂದು ಬಗೆಯಿಂದ ಹೇಳುತ್ತಾರೆ. ಗುಜರಾತಿ ಮರಾಠಿ ಭಾಷೆಗಳ ಅಭ್ಯಾಸದಲ್ಲಿ ಅವರಿಗೆ ಕಂಡುಬಂದ ಮಾತನ್ನು ಅವರು ಸಾರರೂಪದಲ್ಲಿ ಹೇಳುವುದೇನೆಂದರೆ: The substratum over which **Gujarati** and Marathi have spread was **Dravidian.** ಮಿ. ಮಾಸ್ಟರ I. C. S. ಇವರಂತೂ ನೂರಾರು ಉದಾಹರಣಗಳನ್ನು ಕೊಟ್ಟು, ಗುಜರಾತಿ ಭಾಷೆಯು ಕನ್ನಡಕ್ಕೆ ಎಷ್ಟೊಂದು ಋಣಿಯಾಗಿದೆಯೆಂಬುದನ್ನು, ಒಂದು ಲೇಖಮಾಲೆಯನ್ನೆ ಬರೆದು ವಿದ್ವಾಂಸರೆದುರಿಗಿರಿಸಿದ್ದಾರೆ. ಇವೆಲ್ಲ ಸಂಗತಿಗಳು ಢಾಣಡಂಗುರವಾಗಿ ಪ್ರಸಿದ್ಧವಾಗಿವೆ. ಇವುಗಳನ್ನು ಶ್ರೀ ಮುನಶಿಯವರೂ ಅರಿಯರೆಂದು ಎಣಿಸಲಾಗುವುದಿಲ್ಲ. ತಮ್ಮ ಪುಸ್ತಕದ ೨೦ನೆಯ ಪುಟದ ಒಂದು ಅಡಿಟಿಪ್ಪಣಿಯಲ್ಲಿ ಮಿ. ಮಾಸ್ಟರರ ಲೇಖದ ಉಲ್ಲೇಖಮಾಡಿದ್ದಾರೆ. ತಮ್ಮ ಮುಖ್ಯ ಬರೆಹದಲ್ಲಿ ಈ ವಿಷಯದ ಮಾತನ್ನೆ ಎತ್ತದೆ ಹಾಗೆ ಮುಂದೆ ನುಸುಳಿ ಹೋದಂತೆ ಕಂಡುಬರುತ್ತಲಿದೆ! ಶ್ರೀ. ಮುನಶಿಯವರಂತಹ ಸುವಿಖ್ಯಾತ ವಿದ್ವಾಂಸರೂ ಈ ಬಗೆಯಾಗಿ ಐತಿಹಾಸಿಕ ಸತ್ಯವನ್ನು ದುರ್ಲಕ್ಷಿಸುವುದು—ಮರೆಗಿರಿಸುವುದು ನ್ಯಾಯವೆ ?

ಕರ್ಣಾಟಕ ಮತ್ತು ಗುಜರಾತಗಳ ಪ್ರಾಚೀನ ಇತಿಹಾಸ, ಸಂಸ್ಕೃತಿಗಳಲ್ಲಿ ನಿಕಟ ಸಂಬಂಧವಿದ್ದುದನ್ನು ಶ್ರೀ. ಮುನಶಿಯವರಿಗೆ ಹೊಸತಾಗಿ ತಿಳಿಸಿಕೊಡಬೇಕಾಗಿಲ್ಲ. ಶ್ರೀ. ಮುನಶಿಯವರು ಇದನ್ನು ಎಷ್ಟೇ ಕಡೆಗಣಿಸಿ ಬರೆದಿರುವರಾದರೂ ಇವರ ಗ್ರಂಥದಲ್ಲಿಯೂ ಅಲ್ಲಿ ಇಲ್ಲಿ ಈ ಮಾತು ವ್ಯಕ್ತಾವ್ಯಕ್ತವಾಗಿ ತಲೆಯೆತ್ತದಿರುವುದು ಸಾಧ್ಯವಾಗಿಲ್ಲ!

ಗುಜರಾತವು ಜೈನ ಧರ್ಮದ ಆಗರ. ಕನ್ನಡ ನಾಡು ಇದರ ನೆಲೆವೀಡು. ಆದುದರಿಂದ ಇವೆರಡೂ ಪ್ರದೇಶಗಳಲ್ಲಿ ಒಂದು ಬಗೆಯ ಧಾರ್ಮಿಕ ಬಾಂಧವ್ಯವಿದ್ದುದನ್ನು ಅತಿ ಪ್ರಾಚೀನ ಕಾಲದಿಂದಲೂ ಕಾಣಬಹುದಾಗಿದೆ. ಇದರಂತೆ ಶೈವಮತದ ಸಂಬಂಧವೂ ಇವೆರಡೂ ನಾಡುಗಳಲ್ಲಿದ್ದಿತು. ಕನ್ನಡ, ಜೈನ ಹಾಗೂ (ವೀರ) ಶೈವ ಪುರಾಣ ಕಾವ್ಯಗಳ ಎಷ್ಟೋ ಕಥೆಗಳ ಭೂಮಿಕೆಯು ಗುರ್ಜರ ನಾಡಿನ ಸುತ್ತುಮುತ್ತಲಿನ ಪ್ರದೇಶವೇ ಆಗಿದ್ದುದನ್ನು ಕಾಣಬಹುದು. ಶ್ರವಣ ಬೆಳುಗೊಳದಲ್ಲಿ 'ಚಾವುಂಡರಾಯೆ ಕರವಿಯಲೆ' ಎಂಬುದು ಗುಜರಾತಿನತ್ತಣಿಂದ ಬರುವ ಜೈನರಿಗೆ ತಿಳಿಯಲು ಕೆತ್ತಲ್ಪಟ್ಟ ವಾಕ್ಯವದು. ಮರಾಠಿ ಎಂದು ಆರೇ ಪಂಡಿತರು ಗ್ರಹಿಸಿದುದು ತಪ್ಪಾಗಿದೆ; ಕ್ರಿ. ಶ. ೯೭೦ರ ಸುಮಾರಿಗೆ ಗುಜರಾತಿನಲ್ಲಿಯೂ ಒಬ್ಬ ಚಾವುಂಡ ರಾಜನಾಗಿದ್ದಾನೆ. ಅಲ್ಲದೆ ಮಹಾರಾಷ್ಟ್ರದಲ್ಲಿ ಜೈನಧರ್ಮವು ತಲೆಯನ್ನೆತ್ತಲಿಲ್ಲ. ಇಲ್ಲಿಯ ಯಾತ್ರಿಕರು ಮುಖ್ಯವಾಗಿ ಗುರ್ಜರ ದೇಶೀಯರೇ. ಸೌರಾಷ್ಟ್ರದ ಸೋಮನಾಥನಿಗೂ ಪುರಿಗೆರೆ (ಲಕ್ಷ್ಮೇಶ್ವರ) ಸೋಮನಾಥ ದೇವರಿಗೂ ಇರುವ ನಿಕಟ ಸಂಬಂಧದ ಕಥೆಗಳು ತಲೆತಲಾಂತರಗಳಿಂದ ನಡೆದು ಬಂದಿವೆ.

ಕರ್ಣಾಟದ ಚಾಲುಕ್ಯ ಹಾಗೂ ರಾಷ್ಟ್ರಕೂಟರ ಶಾಖೆಗಳು ಗುರ್ಜರ ದೇಶವನ್ನು ೪-೬ ನೂರು ವರುಷಗಳ ವರೆಗೆ ಆಳಿದುದು ಇತಿಹಾಸಪ್ರಸಿದ್ಧವಿದೆ. ಅಣಹಿಲವಾಡಿನ ಶಾಖೆಯೇ ಚಲುಕ್ಯರ ಆಧುನಿಕ ಗುಜರಾತಿನ ರಾಷ್ಟ್ರನಿರ್ಮಾಣ ಕಾರ್ಯಕ್ಕೆ ಆರಂಭಮಾಡಿದುದಾಗಿ ಶ್ರೀ. ಮುನಶಿಯವರು ಸಪ್ರಮಾಣವಾಗಿ ಸಿದ್ಧಪಡಿಸಿದ್ದಾರೆ. ಪುಲಿಕೇಶಿಯ ತಮ್ಮನಾದ ವಿಷ್ಣುವರ್ಧನನು ರಾಜಮಹೇಂದ್ರಿಯಲ್ಲಿ ನೆಲಸಿ ಆಧುನಿಕ ತೆಲಗುನಾಡಿನ ಅಡಿಗಲ್ಲನ್ನು ಸಿದ್ಧಪಡಿಸಿದನು. ಹೀಗಿದು ಕನ್ನಡಿಗರ ಪರಂಪರೆ ಪ್ರಾಚೀನ ಕಾಲದಿಂದಲೂ ಸಾಗಿಬಂದಿದೆ! ತಮ್ಮತನದ ನೆನಹನ್ನು ಕೊನೆಯ ವರೆಗೂ ಇಟ್ಟುಕೊಂಡು ನಡೆವಷ್ಟು ಕಿರುಕುಳ ಮನಸ್ಸಿನವರು ಕನ್ನಡಿಗರಲ್ಲ; ತಮ್ಮನ್ನು ಮರೆತುಬಿಟ್ಟು, ಹೆರವರ ಹೊರೆಯನ್ನು ಹೊತ್ತು, ಅವರ ಮೇಲ್ಮೆಗಾಗಿ ತಮ್ಮ ಬಲಿದಾನವನ್ನೀಯುತ್ತಿರುವುದು ಕನ್ನಡಿಗರಲ್ಲಿ ಬಹು ಪ್ರಾಚೀನ ಕಾಲದಿಂದಲೂ ಮೈಯುಂಡ ಮಾತಾಗಿದೆ. ಆದುದರಿಂದ ಇಂದಿನ ಆ.... ಈ.... ರಾಯರುಗಳು ಕನ್ನಡಿಗರಿದ್ದು ತಮ್ಮತನವನ್ನು ಬಿಟ್ಟು ಆ.... ಈ.... ನಾಡಿನ ಸಲುವಾಗಿ ಕನ್ನಡದ ಕುತ್ತಿಗೆಗೂ ಉರುಲು ಹಾಕುತ್ತಿದ್ದಾರೆಂದು ಮಿಡುಕುವ ಕಾರಣವೇ ಇಲ್ಲ. ಹೀಗೆ ಮಾಡುವುದೇ ಕನ್ನಡಿಗರ ವೈಶಿಷ್ಟ್ಯವಾಗಿಲ್ಲವೆ?

ಗುಜರಾತಿನಲ್ಲಿ ಆಳಿದ ರಾಷ್ಟ್ರಕೂಟರು ಮಾತ್ರ ತಮ್ಮ ಕನ್ನಡತನವನ್ನು ಬಿಟ್ಟುಬಿಡಲಿಲ್ಲ. ಬಡೋದೆಯ ನೆರೆಹೊರೆಯಲ್ಲಿ ದೊರೆತ ರಾಷ್ಟ್ರಕೂಟರ ತಾಮ್ರಪಟಗಳಲ್ಲಿ ಕನ್ನಡಲಿಪಿಯನ್ನು ಉಪಯೋಗಿಸಿದುದನ್ನು ಕಾಣಬಹುದು. ಅಷ್ಟೇ ಅಲ್ಲ, ನಾಗರಿಲಿಪಿಯಲ್ಲಿ ಬರೆದ ಶಾಸನ-

CC-0. Jangamwadi Math Collection. Digitized by eGangotri

ಗಳ ಕೊನೆಗೆ ರಾಷ್ಟ್ರಕೂಟರಾಜರು ತಮ್ಮ ಅಂಕಿತವನ್ನು (ಸಹಿ) ಕನ್ನಡ ಅಕ್ಷರಗಳಿಂದಲೇ ಮಾಡಿರುವುದು ಸಂಸ್ಮರಣೀಯವಾಗಿದೆ. ಇಂತಹ ಕಾರಣಗಳಿಗಾಗಿಯೋ ಏನೋ ತಿಳಿಯದು, ಶ್ರೀ. ಮುನಶಿಯವರು ಗುಜರಾತದ ತಮ್ಮ ಇತಿಹಾಸದಲ್ಲಿ ರಾಷ್ಟ್ರಕೂಟರು ಆ ನುಡಿಗೆ ಸಲ್ಲಿಸಿದ ಸಾಂಸ್ಕೃತಿಕ ಸೇವೆಯ ಬಗ್ಗೆ ಆಶ್ಚರ್ಯಕರವಾದ ವಮೌನವನ್ನು ತಾಳಿದ್ದಾರೆ!

ಕನ್ನಡಿಗರು ಮಾತ್ರ ಸೂಕ್ಷ್ಮ ಅಭ್ಯಾಸ ನಡೆಯಿಸಿ ಚಲುಕ್ಯ ಹಾಗೂ ರಾಷ್ಟ್ರಕೂಟ ಶಾಖೆಗಳ ರಾಜದಿಂದ ಗುಜರಾತಕ್ಕೆ ಸಲ್ಲಿದ ಕನ್ನಡಿಗರ ಸೇವೆಯ ಸಂಶೋಧನವನ್ನು ಮಾಡುವುದು ಅವರ ಕರ್ತವ್ಯವೆ ಆಗಿದೆ.

ಗುಜರಾತಿನ ೧೧ ನೆಯ ಶತಮಾನದ ಸಾಹಿತ್ಯದಲ್ಲಿ ಕರ್ನಾಟದ ಜೀವಾಳಕ್ಕೆ ಸಂಬಂಧಿಸಿದ ಒಂದು ಕಾವ್ಯವು ದೊರೆತಿದ್ದು, ಶ್ರೀ. ಮುನಶಿಯವರು ಅದರ ಸಾರಾಂಶವನ್ನೂ ಕೊಟ್ಟಿದ್ದಾರೆ. ಕಲ್ಯಾಣ ಚಾಲುಕ್ಯರ ವೈಭವಕ್ಕೆ ಕಾರಣನಾದ ೨ ನೆಯ ತೈಲಪನ ಕಾಲದ ಕಥೆ: ಮುಂಜನೆಂಬವನು ಗುರ್ಜರ ದೇಶದ ಪ್ರತಾಪಶಾಲಿಯಾದ ರಾಜ. ಆತನು ರುದ್ರಾದಿತ್ಯನೆಂಬ ತನ್ನ ಮಂತ್ರಿಯ ಮಾತಿಗೆ ಕಿವಿಗೊಡದೆ ಗೋದಾವರಿಯನ್ನು ದಾಟಿ, ಕರ್ನಾಟದ ಮೇಲೆ ದಾಳಿ ಮಾಡಿದನು. ಆಗಿನ ಅರಸನಾದ ತೈಲಪನ ಎದುರು ಆಟ ಸಾಗದೆ ಮುಂಜನು ಸೆರೆಯಾಳಾಗಿ ತೈಲಪನ ರಾಜಧಾನಿಯಲ್ಲಿ ನೆಲೆಮನೆಯಲ್ಲಿ ಕೊಳೆಯುತ್ತ ಬೀಳಬೇಕಾಯ್ತು. ತೈಲನಿಗೆ ಮೃಣಾಲವತಿಯೆಂಬ ವಿಧವೆಯಾದ ತಂಗಿಯಿದ್ದಳು. ಮೃಣಾಲವತಿಯು ಮುಂಜನಿಗೆ ಮೋಹಿಸಿ ಆತನಿಗೆ ಒಲಿದಳು. ಇವರಿರ್ವರ ಸಂವಾದವೊಂದು ಬಹಳ ಸರಸವಾಗಿ ವರ್ಣಿತವಾಗಿದೆ. ಒಮ್ಮೆ ಮೃಣಾಲವತಿಯು ಕನ್ನಡಿಯಲ್ಲಿ ನೋಡಿ ತನ್ನ ಕೂದಲು ಬೆಳ್ಳಗಾದುದಕ್ಕೆ ಬಳ್ಳನೆ ಬಳಲಿದಳು. ಆದರೆ ಮುಂಜನು ಅವಳಿಗೆ ''ಮೃಣಾಲವತೀ! ಹರೆಯವು ಹೋಯ್ತೆಂದು ಅಳಲಬೇಡ; ಕಲ್ಲುಸಕ್ಕರೆಯು ಎನಿತು ಚೂರುಚೂರಾದರೂ ಅದರ ಸವಿಯು ಮುಗ್ಗಿ ಹೋಗುವುದಿಲ್ಲ''ವೆಂದು ಸಮಾಧಾನಪಡಿಸಿದನು.

ಮುಂಜನ ಗೆಳೆಯರು ಒಳಸಂಚು ನಡಿಸಿ ತಮ್ಮ ಅರಸನನ್ನು ಬಿಡಿಸಿಕೊಂಡು ಹೋಗುವ ಎತ್ನುಗಡೆ ನಡೆಯಿಸಿದರು. ಮೃಣಾಲವತಿಯನ್ನೂ ಒಯ್ಯಬೇಕೆಂದು ಮುಂಜನ ಆಸೆ. ಆದರೆ ಮೃಣಾಲವತಿಯು (ಇದಾವುದನ್ನೂ ಅರಿಯದೆ?) ತನ್ನ ಮನದನ್ನನನ್ನು ಇನ್ನು ಅಗಲಬೇಕಾಗುವುದೆಂಬ ಹೆದರಿಕೆಯಿಂದ ತನ್ನ ಅಣ್ಣನಾದ ತೈಲನಿಗೆ ಮುಂಜನು ನುಸುಳಿ ಹೋಗಲು ನಡೆಯಿಸಿದ ಗುಟ್ಟನ್ನು ಹೇಳಿಬಿಟ್ಟಳು!

ತೈಲಪನು ಮುಂಜನ ಚಂಡನ್ನು ಮುಂಡಾಡುವ ಶಿಕ್ಷೆಯನ್ನು ವಿಧಿಸಿದನು. ಆದರೆ ಅದಕ್ಕೂ ಮೊದಲು ಮುಂಜನು ರಾಜಧಾನಿಯಲ್ಲಿ ಮನೆಮನೆಗೂ ತಿರಿಯಬೇಕೆಂದು ಅಪ್ಪಣೆಕೊಟ್ಟನು. ಆಗ ಮುಂಜನು ಬಾಗಿಲಿನಿಂದ ಬಾಗಿಲಿಗೆ ತಿರಿಯುತ್ತಿರುವಾಗ ಗತ ರುದ್ರಾದಿತ್ಯ ಮಂತ್ರಿಯನ್ನು ನೆನೆದು 'ಮಂತ್ರಿವರ್ಯ, ನಿನ್ನ ಮಾತನ್ನು ಲೆಕ್ಕಿಸದ ಪಾಪಿಯು ನಾನು; ಕ್ಷಮಿಸಿ ನಿನ್ನೆಡೆಗೆ ನನ್ನನ್ನೂ ಬರಮಾಡಿಕೊಳ್ಳಯ್ಯ!' ಎಂದು ಹಲಬುವನು. ಮನೆಯಿಂದ ಮನೆಗೆ ನಡೆದು ಮೃಣಾಲವತಿಯಲ್ಲಿಗೆ ಬಂದನು. "ಮೃಣಾಲವತಿ! ತಲೆಗೆ ತಾಗಿದ ಮೇಲೆ ಬರುವ ಬುದ್ಧಿಯು ಮೊದಲೆ ತಲೆದೋರಿದರೆ ತಲೆಕೆಳಗಾಗುವ ಹೊತ್ತೇ ಯಾರಿಗೂ ಬರಲಿಕ್ಕಿಲ್ಲ" ಎಂದು ಸಿಡಿದು ನುಡಿದನು. ದೈವವನ್ನು ಮೀರಿ ಬಾಳುವವರಾರು?.... ಕೊನೆಗೆ ಮುಂಜನು ತೈಲನ ಆನೆಯ ಕಾಲಿಗೆ ಬಲಿಯಾಗುವನು!*

ಒಂದಾನೊಂದು ಕಾಲದಲ್ಲಿ ಗುರ್ಜರದೇಶವು ಕನ್ನಡರ ನೆಲೆವೀಡಾಗಿದ್ದಿತೆಂಬುದು ನಿಜವಾದರೂ ರಾಜಕೀಯ ಈರ್ಷೆ ಅಸೂಯೆಗಳಿಂದಲೂ, ಆ ನಾಡಿಗೆ ಅಭೀರ, ಗುರ್ಜರಾದಿ ಹೆರವರು ಬಂದು ಅಲ್ಲಿಯ ಮೊದಲಿಗರನ್ನು ಅರಗಿಸಿಕೊಂಡು ಹೇಳಹೆಸರಿಲ್ಲದಂತೆ ಮಾಡಿದುದರಿಂದಲೂ ಆ ನಾಡಿಗೆ ಕನ್ನಡಿಗರ ಸಂಬಂಧವಾದರೂ ಇದ್ದಿತೇ ಇಲ್ಲವೆ ಎನ್ನುವಷ್ಟು ದೂರವಾಗಿ ಬಿಟ್ಟಿತು!

ಕನ್ನಡಿಗರ ದೃಷ್ಟಿಯಿಂದ ಈವರೆಗೆ ವಿವರಿಸಿದ ಕೆಲವು ಕೊರತೆಗಳು ಇದರಲ್ಲಿ ಇರುವವಾದರೂ, ಒಟ್ಟಿನಲ್ಲಿ ಈ ಗ್ರಂಥವು ಬಹಳ ಪರಿಶ್ರಮಪೂರ್ವಕವಾಗಿ ಬರೆಯಲ್ಪಟ್ಟಿದ್ದು, ಗುಜರಾತಿಗಳಿಗೆಲ್ಲ ಅಚ್ಚುಮೆಚ್ಚಿನ ಗ್ರಂಥವಾಗು-

* ಶ್ರೀ. ಮುನಶಿಯವರು ಈ ಕಥಾನಕವನ್ನೆ ಆಧಾರವಾಗಿಟ್ಟುಕೊಂಡು ಒಂದು ಕಾದಂಬರಿಯನ್ನು ಬರೆದಿರುವರು. ಅದರಲ್ಲಿ ಅರ್ಥಾತ್ ತೈಲನನ್ನು ನೀಚ ಪಾತ್ರವೆಂದು ವರ್ಣಿಸಿ ಆತನು ಕ್ರೂರನೂ ಅಸಂಸ್ಕೃತನೂ ಎಂಬಂತೆ ವರ್ಣಿಸಿರುವರಂತೆ! ರನ್ನನಂತಹ ಕವಿಗಳಿಗೆ ಆಶ್ರಯವನ್ನಿತ್ತ ರಾಜನು ಅಸಂಸ್ಕೃತನೆ? ತೈಲನು ಕರ್ನಾಟರಾಜನೆಂದು ಗುಜರಾತಿ ಸಾಹಿತ್ಯದ ಇತಿಹಾಸದಲ್ಲಿ ಬರೆದಿರುವ ಶ್ರೀ. ಮುನಶಿಜೀಯವರೇ ತಮ್ಮ ಕಾದಂಬರಿಯಲ್ಲಿ ಆತನು ತೈಲಂಗಣದ ರಾಜನೆಂದಿರುವರು!

CC-0. Jangamwadi Math Collection. Digitized by eGangotri

ವಂತಿದೆಯೆಂಬುದಕ್ಕೇನೂ ಸಂದೇಹವಿಲ್ಲ. ಈ ಗ್ರಂಥದಲ್ಲಿ ಮೂರು ಮುಖ್ಯ ವಿಭಾಗಗಳನ್ನು ಮಾಡಿಕೊಂಡಿದ್ದು ಒಂದೊಂದು ವಿಭಾಗಗಳಲ್ಲಿ ೭, ೮, ೬ ಹೀಗೆ ಅಧ್ಯಾಯ-ಗಳನ್ನು ಕಲ್ಪಿಸಿಕೊಂಡಿರುವರು. ಗುಜರಾತಿ ಸಾಹಿತ್ಯದ ಉಗಮದಿಂದ ಈಗಿನ ಅದರ ವಿಸ್ತೃತ ಸ್ವರೂಪದ ವರೆಗೂ ಭಾಷೆ, ಗ್ರಂಥವಿಸ್ತಾರ ಹೇಗೆ ಹೇಗೆ ಬೆಳೆಯುತ್ತ ಬಂದಿ-ತೆಂಬುದನ್ನು ಅನೇಕಾನೇಕ ಅವತರಣಿಕೆಗಳೊಡಿಗೆ ಸ್ಪಷ್ಟೀಕರಿಸಿದ್ದಾರೆ. ಇಂದಿನ ಸಾಹಿತಿಗಳ ಪರಿಚಯವನ್ನೂ ಮಾಡಿಕೊಡಲಾಗಿದೆ.

ಈ ಗುಜರಾತಿ ಸಾಹಿತ್ಯದ ಇತಿಹಾಸದಿಂದ ಕನ್ನಡಿಗರು ಕಲಿತುಕೊಳ್ಳಬೇಕಾದ ಹಲವು ಅಂಶಗಳಿವೆ. "ಒಬ್ಬ ಗುಜರಾತಿಯಾದರೂ ಎಲ್ಲಿರುವನೊ ಅಲ್ಲಿ ಇಲ್ಲಿ ಗುಜರಾತ ದೇಶವು ಹಬ್ಬಿದೆ" ಎಂದು ಶ್ರೀ. ಮುನಶಿಯವರು ತಮ್ಮವರ ಬಗ್ಗೆ ಹೇಳಿದ ಮಾತನ್ನೇ, ಕನ್ನಡಿಗರೂ ತಮ್ಮ ಬಗ್ಗೆ ಉಸುರಿದರೆ ಅದಕ್ಕೆ ಪ್ರಾಂತಿಕ ದುರಭಿಮಾನವೆಂದು ಮೂಗುಮುರಿಯುವ ತಿಳಿಗೇಡಿಗಳು ಶ್ರೀ. ಮುನಶಿಯವ-ರಿಂದ ಬದ್ಧಿಗಲಿಯುವರೊ ?

ಗುಜರಾತಿ ಹಿಂದೂಗಳಷ್ಟೆ ಅಲ್ಲ,ಅಲ್ಲಿಯ ಮುಸಲ್ಮಾನರಿಗೆ ಸಹ ಇರುವ ಗುಜರಾತಿ ಭಾಷೆಯ ಮೇಲಣ ಅಭಿಮಾನ-ಪ್ರೀತಿಗಳು ಅವರ್ಣನೀಯವಾಗಿವೆ. ನಮ್ಮ ಕರ್ಣಾಟಕಕ್ಕೆ ವ್ಯಾಪಾರಕ್ಕಾಗಿ ಬಂದ ಕಛ್ಛಿ ವ್ಯಾಪಾರಿಗಳು, ಇತರ ಮುಸಲ್ಮಾನಿ ಅಡತಿನ ಅಂಗಡಿಯವರು ಒಂದೊಂದು ಗುಜರಾತಿ ಪತ್ರಿಕೆಯನ್ನೇ ತರಿಸಿ ಓದುವುದನ್ನು ಯಾರು ತಾನೆ ಕಂಡಿಲ್ಲ ? ಕರ್ಣಾಟದ ಮುಸಲ್ಮಾನರಲ್ಲಿ ಹೀಗೆ ಅಭಿಮಾನ ವಹಿಸುವವರೆಷ್ಟು ಜನ ? ಪಾರ್ಸಿಗಳಿಂದ ಗುಜ-ರಾತಿನ ಬೆಳವಣಿಗೆಗೆ ಆದ ಸಹಾಯವು ಎಣಿಕೆಗೆ ಮೀರಿ-ದ್ದಾಗಿದೆ. ನಿಜವಾಗಿ ಪಾರ್ಸಿಗಳ ಭಾಷೆ ಗುಜರಾತಿ ಅಲ್ಲ. ನಾಡು ಸಹ ಅವರದಲ್ಲ. ಆದರೂ ಗುಜರಾತಿಗಾಗಿ ಅವರು ತುಂಬ ಸಹಾಯಕರಾಗಿದ್ದಾರೆ. ಕನ್ನಡ ನಾಡಿನಲ್ಲಿ ಪಾರ್ಸಿಗಳಿಗಿಂತಲೂ ಹೆಚ್ಚು ಕಾಲ ನೆಲಸಿ ಬೇರೂರಿದ ನಮ್ಮ ಆರೇ, ಕೊಂಕಣಿಗಳ ಅಭಿಮಾನಿಗಳು ಪಾರ್ಸಿ-ಗಳಿಂದ ಪಾಠ ಕಲಿಯುವರೊ ?

ಬಡೋದೆಯ ಮಹಾರಾಜನು ಮರಾಠನಿದ್ದರೂ ತಾನು ಆಳುವ ಸೀಮೆಯು ಗುರ್ಜರ ದೇಶವೆಂಬ ಅರಿವುಳ್ಳ-ವನಾಗಿದ್ದು ಗುಜರಾತಿ ಭಾಷೆಗೂ ತನ್ನ ಆಡಳಿತದಲ್ಲಿ ಮೇಲಣ ಸ್ಥಾನವನ್ನು ಕೊಟ್ಟಿದ್ದಾನೆ. ಹಾಗೆ ನಮ್ಮಲ್ಲಿ ಕೆಲ ಸೀಮೆಗಳನ್ನು ಆಕ್ರಮಿಸಿ ಆಳುತ್ತಲಿರುವ ಜಮಖಂಡಿ ರಾಮದುರ್ಗ, ಸಾಂಗ್ಲಿ, ಮಿರ್ಜಿ, ಕೊಲ್ಲಾಪೂರ ಮೊದಲಾದ ಸಂಸ್ಥಾನಿಕರು ಕನ್ನಡಕ್ಕೆ ಏಕೆ ಇಂಬುಗೊಡಬಾರದು ?

ನಮ್ಮ ನೆರೆಹೊರೆಯ ನಾಡಿನವರು ತಮ್ಮ ನಾಡಿನ ಪುನರುಜ್ಜೀವನಕ್ಕೆ ಹೇಗೆ ಹೆಣಗುತ್ತಿರುವರೆಂಬುದನ್ನು ಕರ್ಣಾಟದ ಪ್ರತಿಯೊಬ್ಬ ನೇತಾರನೂ ಅರಿತುಕೊಳ್ಳಬೇ-ಕಾದ ವಿಷಯ. ಈ ದೃಷ್ಟಿಯಿಂದ ಶ್ರೀ. ಮುನಶಿಯವರು ತಮ್ಮ ನಾಡುನುಡಿಯ ಕತೆಯನ್ನು ಇಂಗ್ಲೀಷಿನಲ್ಲಿ ಬರೆದು ಪ್ರಕಟಿಸಿ ಬಹಳ ಒಳ್ಳೆಯ ಕೆಲಸಮಾಡಿದ್ದಾರೆ. ರಾಜ-ಕೀಯ, ಸಾಮಾಜಿಕ ಚಟುವಟಿಕೆಗಳು, ಮೇಲಾಗಿ ತಮ್ಮ ವಕೀಲಿಯ ದಂದುಗ,ಇಂತಿವೆಲ್ಲವುಗಳನ್ನು ತೂಗಿಸಿಕೊಂಡು, ಮತ್ತೆ ಗುಜರಾತಿ ಸಾಹಿತ್ಯ ಸೇವೆಗೂ ಬಿಡುವನ್ನು ದೊರಕಿ-ಸಿಕೊಳ್ಳುವ ಶ್ರೀ. ಮುನಶಿಯವರು ಈ ವಿಷಯದಲ್ಲಿ ನಮ-ಗೆಲ್ಲ ಆದರಣೀಯವಾದ ಆದರ್ಶವಾಗಿದ್ದಾರೆ.

—ಓರ್ವ ಕನ್ನಡಿಗ

**ಹೇಗಾದರೇನು:** (ಎರಡು ವ್ಯಂಗ ನಾಟಕಗಳು) ಬರೆದ-ವರು ಶ್ರೀ. ಕೊ. ಶಿ. ಕಾರಂತ ಅವರು. ಅರವಿಂದ ಗ್ರಂಥಮಾಲೆಯ ೨ ನೆಯ ಕಮಲ.

ಇದರಲ್ಲಿ ೧. ಹೇಗಾದರೇನು ೨. ನಾಟಕವೆಂಬ ನಾಟಕ —ಎಂದು ಎರಡು ವ್ಯಂಗ ನಾಟಕಗಳಿವೆ. ಶ್ರೀ. ಕೋ. ಶಿ. ಕಾರಂತರು ನುರಿತ ಬರೆಹಗಾರರು. ಅವರ ಪ್ರತಿಭೆಯಾ-ದರೂ ಯಾವಾಗಾದರೊಮ್ಮೆ ಅವರಿಗೆ ಬೆಟ್ಟಿಕೊಡುವಂತ-ಹದಲ್ಲ. ಅದು ಸರ್ವದಾ ಸಿದ್ಧವಾದುದು. ಆದುದರಿಂ-ದಲೇ ಕಾರಂತರು ಬಹಳವಾಗಿ ಬರೆಯುವವರಲ್ಲೊಬ್ಬರು. ಅವರ ಲೆಕ್ಕಣಿಕೆಗೆ ವಿಶ್ರಾಂತಿಯಿಲ್ಲ. ಕಾದಂಬರಿಗಳು, ನಾಟಕಗಳು ಮೊದಲಾದ ಬೇರೆಬೇರೆ ಬಗೆಯ ಸಾಹಿತ್ಯ-ಕ್ಷೇತ್ರಗಳ ಅನುಭವವನ್ನು ಪಡೆದಿರುವುದು. ಅವರೇ ಹೇಳುವಂತೆ ಅದರಲ್ಲಿ 'ಸುತ್ತಲೂ ಲತ್ತೆ ಹೊಡೆಯುವ ಕತ್ತೆ'ತನ ಬಹಳ. ಸಮಾಜದಲ್ಲಿ ಕಂಡುಬರುವ ಕುಂದು-ಕೊರತೆಗಳನ್ನು ಸ್ವಾರ್ಥಮೂಲವಾದ ಬಣಗು ಬಡಿವಾರ-ಗಳನ್ನು, ಅಂಧವಾದ ಪರಂಪರಾಪ್ರೀತಿಯನ್ನು, ವ್ಯಕ್ತಿ-ವಿಶಿಷ್ಟವಾದ ಕುಹಕತನವನ್ನು ನಿರ್ದಾಕ್ಷಿಣ್ಯವಾಗಿ ಬೈಲಿ-ಗೆಳೆಯುವವರು ಶ್ರೀ. ಕಾರಂತರು. ಯಾಕೆಂದರೆ 'ಇವರ ಲೆಕ್ಕಣಿಕೆ ಸತ್ಯದ ಕೆನ್ನೀರನ್ನೇ ಕಾರುವುದು!' 'ಕನ್ಯಾ-ಬಲಿ'ಯು ಹೆಣ್ಣಿನ ಕರುಣ ಜೀವನವನ್ನು ಕರಾಳವಾದ ಕನ್ನಡಿಯಲ್ಲಿ ಚಿತ್ರಿಸಿ ತೋರಿಸಿದರೆ ಬಡತನದ ಭೀಕರ

CC-0. Jangamwadi Math Collection. Digitized by eGangotri

ಚಿತ್ರವು ಚೋಮನ ದುಡಿಯಲ್ಲಿ ಪ್ರದರ್ಶಿತವಾಯಿತು.
ನಿಜವಾಗಿಯೂ ಕಾರಂತರ ಸಾಹಿತ್ಯವು ಅವುಗಳಲ್ಲಿ ಕಳೆ-
ಗೊಂಡು ನಿಂತಿದೆ.

ಪ್ರಸ್ತುತ ನಾಟಕಗಳಲ್ಲಿಯೂ ಕಾರಂತರು ಸ್ವಾರ್ಥಪರ-
ರೆನ್ನಿಸಿಕೊಳ್ಳಬಹುದಾದ ಕೆಲವು ಕಾಂಗ್ರೆಸ್ ಮುಖಂಡ (?)-
ರಿಗೂ ಮೂಢಪರಂಪರೆಯ ವ್ಯಾವಸಾಯಿಕ ನಾಟಕ-
ಕಾರರಿಗೂ 'ಲತ್ತೆ'ಗಳನ್ನು ಕೊಟ್ಟಿದ್ದಾರೆ. ಲತ್ತೆಗಳ-
ನ್ನೇನೋ ಕೊಟ್ಟಿರುವರು; ಆದರೆ ಮುಂಚಿನಷ್ಟು ವ್ಯವಸ್ಥಿ-
ತವಾದ, ಕಲಾಪೂರ್ಣವಾದ ಲತ್ತೆಯ ಕತ್ತೆಗಳಿವು ಎನ್ನಬ-
ಹುದೇ ಎಂದು ಸಂದೇಹವುಂಟಾಗುವುದು. ಕಾರಂತರ
ಮಿಕ್ಕವುಗಳಲ್ಲಿಯ ವಿಡಂಬನೆಗೂ ಇಲ್ಲಿಯ ವಿಡಂಬನೆಗೂ
ವ್ಯತ್ಯಾಸವಿದೆ. ಅವುಗಳಲ್ಲಿ ಗಾಂಭೀರ್ಯವಿದ್ದರೆ, ಇವುಗಳಲ್ಲಿ
ಹುಡುಗಾಟವಿದೆ. ಅವುಗಳಲ್ಲಿ ಬರೆಯೆಳೆಯುವ ಸಾಮರ್ಥ್ಯ-
ವಿದ್ದರೆ ಇವುಗಳಲ್ಲಿ ಕೇವಲ ಸಾಂದರ್ಭಿಕವಾದ ಹುಚ್ಚು-
ನಗೆಯಿದೆ. ಓದಿದಮೇಲೆ ಮನದಲ್ಲಿ ಮಿಡಿಯುವ ಗುಣ
ಅವುಗಳಲ್ಲಿದ್ದರೆ ಇವುಗಳಲ್ಲಿ ಪರಿಣಾಮಪ್ರಖರತೆಯಿಲ್ಲದೆ
ಹೋಗಿದೆ.

ಹೇಗಾದರೇನು ? ಇದರಲ್ಲಿ ರಾಷ್ಟ್ರಸೇವಕರೆನ್ನಿಸಿಕೊಳ್ಳು-
ವವರ ವಿಡಂಬನೆ ಸಾಕಷ್ಟಿದೆ. ನಾಗವೀರ ಅಚ್ಯುತರಾವ
ಪತ್ರಿಕಾಸಂಪಾದಕರು ನಿರ್ವಾಹವಿಲ್ಲದೆ ಪ್ರತಿಯೊಂದು
ಮೀಟಿಂಗಿನಲ್ಲಿಯೂ ಸದಾಸಿದ್ಧರು. ಬೇಕಾದಷ್ಟು ವೇಳೆ,
ಬೇಕಾದಷ್ಟನ್ನು ಬರೆಯಲು ಸ್ಥಳವುಳ್ಳ ಅಗ್ಗದ ಸಂಪಾ-
ದಕರಿವರು. ವಿಶಾಲರಾಯನು ಕಲೆಗಾಗಿ ಕಳೆಗೆಟ್ಟು
ತಿರುಗುವವರಲ್ಲೊಬ್ಬ. ರಾಷ್ಟ್ರದ ಉದ್ಧಾರವಾಗಲು ಇವ-
ನಿಗೊಂದು ರಾಷ್ಟ್ರೀಯ ಥಿಯೇಟರು ಬೇಕು; ಆದರಲ್ಲಿಯೇ
ದೇಶದ ಏಳುಬೀಳುಗಳಿವೆಯೆನ್ನುವ ಕಲೆಯ ಕ್ರಾಂತಿ-
ಕಾರಕನೀತ. ದೇಶಭಕ್ತ ರಾಘವೇಂದ್ರರಾಯರು ಅಖಂಡ
ದೇಶಭಕ್ತರು; ಕರ್ನಾಟಕಕ್ಕೇ ಸರಿ. ಇವರ ಸ್ಥಿತಪ್ರಜ್ಞತೆ
ಯಾರನ್ನೂ ಕೆಣಕಬಹುದಾಗಿದೆ. ಎಲ್ಲದರಲ್ಲಿಯೂ ಇವರ
ಮೇಲುಗೈಯಾದರೂ ಎಲ್ಲದರಲ್ಲಿ ಇವರು ಮಾಡುತ್ತಿದ್ದ
ಕೆಲಸ, ಆಡುತ್ತಿದ್ದ ಮಾತುಗಳು ಶೂನ್ಯ ! ಮಹಮ್ಮದ-
ಖಾನನು ಮುಸಲ್ಮಾನನಾದುದರಿಂದ ಉಪಾಧ್ಯಕ್ಷನಾಗುವೆ-
ನೆನ್ನುವುದು ಸಹಜ ವಿನೋದದಿಂದ ಕೂಡಿದುದಾಗಿದೆ.
ಹರಿಜನರ ನಿಧಿಯನ್ನು ಬಡ ಮುಸಲ್ಮಾನರ ಗೋಳನ್ನು
ದೂರೀಕರಿಸಲು ಕೇಳಿಕೊಳ್ಳುವುದೂ, ಹರಿಜನರನ್ನು
ದೂರೀಕರಿಸುವುದೂ ಇವನ ಮೂರ್ಖತನವನ್ನು ಬಯಲಿ-
ಗೆಳೆಯುತ್ತವೆ. ಅಣ್ಣಪ್ಪಯ್ಯನವರು ಮಿಕ್ಕೆಡೆಗಳಲ್ಲಿ ಆದರ
ಸಿಕ್ಕದೆ ತಮ್ಮ ರಾವಬಹಾದ್ದೂರ ಮೊದಲಾದ ಪದವಿ-
ಗಳನ್ನು ಬಿಸುಟ ಸ್ವಾರ್ಥತ್ಯಾಗ (?) ಮಾಡಿ ಕಾಂಗ್ರೆಸ್
ನಿಷ್ಠರಾಗುವರು. ಮೋಟಾರು ಬಾರದೇ ಮೂರು ಘಂಟೆ
ಮುಂದೆ ನಡೆಯದೆ ಇರುವ ಕಾಂಗ್ರೆಸ್ ಮತ್ತು ಕ್ಲಬ್ಬಿನ
ಶ್ರೀಮಂತಿನಿಯಾದ ಪ್ರಸನ್ನಾದೇವಿಯು ಯಾರ ಪ್ರಸನ್ನ-
ತೆಯನ್ನು ಪಡೆಯಲಾರದ ಸ್ವಾರ್ಥಿ. ಸತ್ತು ಸುಣ್ಣವಾ-
ಗುವಾಗ ಕಂಗಾಲಾಗಿ ಬೇಡುವಾಗ, ಹರಿಜನರಿಗೆ ಅವರ
ನಿಧಿಯು ಸಲ್ಲಲು, ಮೀಟಿಂಗು ಕರೆಯಬೇಕಾಗಿದೆ ಇವರೆಲ್ಲ-
ರಿಗೆ. ಅಂತೂ ಉಂಡು ಉಡಲು ಸಾಕಷ್ಟಿದ್ದು ಆತ್ಮ-
ಪ್ರತಿಷ್ಠೆಗಾಗಿ ಹುಚ್ಚೆದ್ದು ತಿರುಗಾಡುವ ಪುಂಡರಿವರು
ಎಂಬುದನ್ನು ನಾಟಕಕಾರರು ತೋರಿಸಿಕೊಟ್ಟಿದ್ದಾರೆ. ಈ
ಎರಡು ನಾಟಕಗಳಲ್ಲಿ ಹೇಗಾದರೇನು ಎಂಬುದೇ ಗಂಭೀ-
ರವಾದ ವಿಡಂಬನೆಯಿಂದ ಕೂಡಿದುದು. ಆದರೆ ಯಾವು-
ದೊಂದು ಸಾಹಿತ್ಯಕೃತಿಯು ಬೆಳಗಬೇಕಾದರೆ ಅದರಲ್ಲಿ
ಒಂದು ಅಂಗವಾದರೂ ಸೊಗಸಿನಿಂದ ತುಂಬಿರಬೇಕಾಗು-
ವದು. ಕೇವಲ ಜೀವನವನ್ನು ಚಿತ್ರಿಸಿ ತೋರಬೇಕಾ-
ಗಿದ್ದರೆ ಸಾಹಿತ್ಯವೇ ಬೇಕಾಗುತ್ತಿರಲಿಲ್ಲ. ಅದು ಕಲಾ-
ಚಮತ್ಕೃತಿಯಿಂದ ಕೂಡಿದುದರಿಂದಲೇ ಇಷ್ಟು ಮೆಚ್ಚಿಗೆ-
ಯನ್ನು ಪಡೆದುದಾಗಿದೆ. ನಾಟಕ ಕಾದಂಬರಿಗಳಲ್ಲಿ ಭಿನ್ನ
ಭಿನ್ನವಾದ ಪಾತ್ರರಚನೆಗಳಲ್ಲಿಯಾಗಲೀ, ಸನ್ನಿವೇಶಗಳ-
ಲ್ಲಿಯಾಗಲೀ, ಅಥವಾ ಹೇಳುವ ರಂಗಿನಲ್ಲಿಯಾಗಲೀ
ಚಮತ್ಕೃತಿ ಬೇಕು. ವಿಡಂಬನೆಯ ಕೃತಿಗಳಾದರೂ ಇದಕ್ಕೆ
ಸಂಪೂರ್ಣ ಹೊರತಾಗಲಾರವು. ಉದ್ದೇಶ, ವಿಡಂಬನೆಗಳ
ಹಿಡಿತದಲ್ಲಿ ಸಿಕ್ಕು ಪಾತ್ರಗಳು ವ್ಯಕ್ತಿತ್ವವನ್ನು ಕಳೆದು-
ಕೊಳ್ಳಕೂಡದು. ಅವುಗಳ ಕೈಗೊಂಬೆಯಾಗಿ ಕುಣಿಯ
ಬಾರದು. ಸ್ವಂತದ ಆಲೆದಾಟ ಉಲಿದಾಟಗಳಿಂದ (acting
and speech) ನಗಿಸಿ ತಮ್ಮ ಹೀನತೆಯನ್ನು ತಾವೇ
ಪ್ರಕಟಿಸಿಕೊಳ್ಳಬೇಕು. ಈ ಬಗೆಯ ವಿಡಂಬನಾಸಾಹಿ-
ತ್ಯದಲ್ಲಿ ಸತ್ಯದರ್ಶನ ಹೆಚ್ಚಾಗಿರುವುದು. ಸಂಪೂರ್ಣ
ದರ್ಶನವಿಲ್ಲದೆ ವಿಡಂಬನೆಗಾಗಿ ಪಾತ್ರಗಳು ಚಿತ್ರಿತವಾದರೆ
ಜೀವನಕ್ಕೂ ಅವುಗಳಿಗೂ ಇರುವ ಸಂಬಂಧ ತಪ್ಪಿಬಿಡ-
ಬಹುದು. ವಿಡಂಬನೆಯ ಪಾತ್ರಗಳು ರಾವುಗನ್ನಡಿಯಲ್ಲಿಯ
ಪ್ರತಿಬಿಂಬಗಳಾದರೂ ಆ ಪ್ರತಿಬಿಂಬಗಳು ಅಂಗಾಂಗ-
ಗಳನ್ನು ಕಳೆದುಕೊಳ್ಳುವುದಿಲ್ಲ; ವಿಕೃತಿಯನ್ನು ಪಡೆಯು-
ವುವು ಅಷ್ಟೆ. ಕಿರಿದಾಗಿದ್ದ ಮೂಗು ಹಿರಿದಾಗಿ ಕಾಣ-

CC-0. Jangamwadi Math Collection. Digitized by eGangotri

ಬಹುದು. ವಿಕೃತ ಚಿತ್ರದ ಪ್ರಮಾಣದಲ್ಲಿಯೂ ಒಂದು ಬಗೆಯ ಏಕರೂಪತೆ ಇದ್ದೇ ಇದೆ. ಆದುದರಿಂದ ವಿಡಂಬನೆಯ ನಾಟಕಗಳಲ್ಲಿಯೂ ಪಾತ್ರರಚನೆಯಲ್ಲಿ ಒಂದುಬಗೆಯ ಏಕಸೂತ್ರತೆ ಬೇಕು. ಅದಿಲ್ಲದೇ ಹೋದರೆ ಸನ್ನಿವೇಶಗಳಲ್ಲಿಯಾದರೂ ಚಮತ್ಕೃತಿಯಿದ್ದರೆ ಓದುವುದು ಬೇಸರಿಯದೇ ಸಾಗಬಹುದು. ಕೇವಲ ನಗೆಯೂ ಆಭಾಸಕಿಟ್ಟುಕೊಂಡು ಬೇಸರ ಬರಬಹುದು.

ಇನ್ನು 'ನಾಟಕ'ವೆಂಬ ನಾಟಕದ ವಿಚಾರ. ಕೇವಲ ಹರಟೆ, ನಿಂದೆ ಮೊದಲಾದವುಗಳನ್ನು ಇದ್ದ ಹಾಗೆ ಬರೆದಿಟ್ಟರೆ ಅದು ನಾಟಕವೂ ಆಗಬಹುದು, ಕಾದಂಬರಿಯೂ ಆಗಬಹುದು, ಇನ್ನೂ ಏನಾದರೂ ಆಗಬಹುದು. ಆದರೆ ನಿಜವಾದ ಕಲಾಕೃತಿಗಳಾಗಲಾರವು. ಅವುಗಳಿಗೆ ಭವಿಷ್ಯದಲ್ಲಿ ವಿಶೇಷಸ್ಥಾನಮಾನಗಳಿಲ್ಲ. ನಾಟಕವೆಂಬ ನಾಟಕ 'ಕಂಪನಿನಾಟಕ'ಗಳನ್ನು ಮೂದಲಿಸಹೊರಟುದಾದರೂ ಸ್ವತ್ವದ ಕಲ್ಪನೆಯೂ ಆದಕ್ಕಿದೆಯೋ? ಅದೂ ಒಂದು ನಾಟಕವೆಂಬುದು ಆದಕ್ಕೆ ತಿಳಿದಿಲ್ಲವೇ? ಅದರ ಮೇಲೆ ಆಕಾಶ ಭೂಮಿ ಪಾತಾಳಗಳಲ್ಲಿ ಸಿಕ್ಕಲಾರದ ಪಾತ್ರಗಳನ್ನೊಳಗೊಂಡಿರುವುದೇಕೆ? ಆದಕ್ಕೆ ಉದ್ದೇಶವೇನು? ಕಂಪನೀನಾಟಕದ ಕುಂದುಕೊರತೆಗಳನ್ನು ತೋರಿಸುವುದಾಗಿದ್ದರೆ ಒಂದು ಪ್ರಬಂಧವನ್ನು ಬರೆದಿದ್ದರೂ ಸರಿಯಾಗಿತ್ತು. ಆದರೆ ಆದಕ್ಕಿಂತ ಹೆಚ್ಚು ನ್ಯೂನತೆಗಳನ್ನು ಹೆಣೆದುಕೊಂಡು ನಾಟಕವಾಡಿದರೆ ಅದರ ಗೊತ್ತುಗುರಿಗಳೇನು? ವಿಡಂಬನೆಗಿಂತ ಬೇಕೆಂತಲೇ ತುಂಬಿದ ಆಭಾಸಗಳ ಮೊಟ್ಟೆ ಈ ನಾಟಕ ಎಂದು ಹೇಳಬಹುದು. ಆದರೂ ಇಂತಹ ಆಭಾಸಗಳಿಂದೊಡಗೂಡಿದ ನಾಟಕವನ್ನು ಓದಿ ಅಥವಾ ನೋಡಿ ಕಂಪನಿಯ ಮಾಲೀಕರು ತಮ್ಮ ನ್ಯೂನತೆಗಳನ್ನು ಸರಿಪಡಿಸಿಕೊಳ್ಳಬಹುದೋ? ಸರಿಪಡಿಸಿಕೊಳ್ಳಲಿ ಎಂದು ನಮ್ಮದೂ ಬಯಕೆ. ಮೊದಲಿನ ನಾಟಕರೀತಿಯೇ ಬೇರೆ, ಇದು ಬೇರೆ. ಮೊದಲಿನದಕ್ಕೆ ಗೊತ್ತು ಗುರಿಗಳಿವೆ. ಎರಡನೆಯದು ಉದ್ದೇಶಪೂರ್ಣವೆಂದು ಹೇಳಿಕೊಳ್ಳಲ್ಪಟ್ಟರೂ ಅಷ್ಟೊಂದು ಮಹತ್ತರವಾದ ಉದ್ದೇಶವು ನಮಗೆ ಕಂಡುಬರಲಾರದು. ಕೇವಲ ನಗಿಸಲಿಕ್ಕೆ ಹೊರಟುದು ಎಂದು ನಮಗಂತೂ ಸ್ಪಷ್ಟವಾಗಿ ತೋರುವುದು. ಆಭಾಸಗಳ ಸಂಗ್ರಹವಿದಾದುದರಿಂದ ಓದುಗರಿಗೆ ಸಾಕಷ್ಟು ನಗೆಯು ಸಿಗುವುದೆಂಬುದರಲ್ಲಿ ಸಂದೇಹವಿಲ್ಲ.

ತುಲನಾತ್ಮಕ ದೃಷ್ಟಿ ಇದ್ದಾಗ ಒಂದು ಸಾಮಾನ್ಯ ಸುಂದರ ಪದಾರ್ಥವನ್ನು ಸರ್ವಾಂಗಸುಂದರ ಪದಾರ್ಥಗಳೊಡನೆ ಹೋಲಿಸಿ ಆದಕ್ಕೆ ಕುರೂಪತೆಯ ಕಲ್ಪನೆಯನ್ನೂ ಆರೋಪಿಸಬಹುದು. ಬಿಸಿನೀರಿನಲ್ಲಿ ಕೈಯನ್ನು ಅದ್ದಿ ಉಗುರುಬೆಚ್ಚಗಿನ ನೀರಿನಲ್ಲಿ ಅದ್ದಿದರೆ ಅದು ತಣ್ಣಗೆನಿಸುವುದು ಸಹಜ. ಆದುದರಿಂದ ಒಮ್ಮೊಮ್ಮೆ ಅನಿಸಿಕೆಗಳೂ ತರ್ಕಮುಟ್ಟಿಗೆ ದೋಷಪೂರ್ಣವಾಗಿರುವುದು ಸರ್ವಸಹಜವಾಗಿದೆ. ಕಾರಂತರ ಮೊದಲಿನ ಸಾಹಿತ್ಯಕೃತಿಗಳ ಕಲೆಯು ಇವುಗಳಲ್ಲಿ ಬೆಳಗಿ ನಿಂದಿಲ್ಲ. ಅಥವಾ ಇವೇ ಮೊದಲಿನ ಸಾಹಿತ್ಯಕೃತಿಗಳಾಗಿದ್ದು ಆ ಮೇಲೆ ಪ್ರಕಾಶಿತವಾದುವುಗಳೇ ಎಂಬ ಸಂಶಯ ಬರುವ ಹಾಗಿವೆಯೆಂದೂ ಹೇಳಬಹುದು. ಕಾರಂತರ ಯಾವ ಕೃತಿಗಳೂ ಓದುಗರಿಗೆ ಮನೋರಂಜನೆಯನ್ನೀಯದಿರವು. ಅಂತೆಯೇ ಈ ನಾಟಕಗಳೂ ವಿನೋದ ಮನೋಹರವಾಗಿವೆ. ಇವುಗಳನ್ನು ಓದಿಯೇ ತಿಳಿಯಬೇಕಾದುದು ಅವುಗಳ ನಗೆಯ ಬಗೆ. ಆದುದರಿಂದಲೇ ಸಂಪಾದಕರು ಕೃತಿಯು ಚಿಕ್ಕದಾದರೂ ಚೊಕ್ಕವಾದುದೆಂದು ಅಭಿಪ್ರಾಯ ಪಟ್ಟಿರುವುದು. ಕನ್ನಡಿಗರೆಲ್ಲರೂ ಇವುಗಳನ್ನು ಓದಿ, ನಕ್ಕುನಗಿಸಿ ಆನಂದಪಡಲಿ.

—ವಿಜಯ ಬೆಟಗೇರಿ


# ಕರ್ನಾಟಕ ಭಕ್ತವಿಜಯ

ದ್ವಿತೀಯ ಭಾಗ ರೂ. ೨-೮-೦

೪೫೦ ಪುಟಗಳ ಅಪೂರ್ವಗ್ರಂಥ
ಗ್ರಂಥಕರ್ತರು: ಬೇಲೂರು ಕೇಶವದಾಸರು

## ಇತರ ಗ್ರಂಥಗಳು

| | |
|---|---|
| ಕರ್ನಾಟಕ ಭಕ್ತವಿಜಯ ಭಾಗ ೧ | ರೂ. ೨-೮-೦ |
| ಕನ್ಯಕಾ ಪುರಾಣ | ರೂ. ೧-೦-೦ |
| ಶ್ರೀ ರಾಘವೇಂದ್ರ ವಿಜಯ | ರೂ. ೦-೮-೦ |

ದೊರೆಯುವ ಸ್ಥಳ

೧. ಸುಬೋಧ ಪ್ರಕಟನಾಲಯ, ಚಾಮರಾಜ ಪೇಟೆ ಬೆಂಗಳೂರು ನಗರ

೨. ಬೇಲೂರು ಕೇಶವದಾಸರು ಚಾಮರಾಜಪುರಂ ಮೈಸೂರು.


CC-0. Jangamwadi Math Collection. Digitized by eGangotri

# ★ ಜ್ಞಾನ-ವಿಜ್ಞಾನ ★

ನವಜ್ಞಾನ, ನವವಿಚಾರ, ನವವಿಷಯ, ನವರಚನೆ, ನವಶೋಧನೆ, ನವಸಮಾಜ, ನವಪ್ರಪಂಚ
§ § ಇವುಗಳ ಸುಲಭ-ಸೂಕ್ತ-ಸಾರರೂಪ ಪರಿಚಯ § §

ಪ್ರಸಿದ್ಧ ಶಿಕ್ಷಣತಜ್ಞರೂ ಲಖನೌ ವಿಶ್ವವಿದ್ಯಾಲಯದ ವೈಸ್‌ಚಾನ್ಸಲರರೂ ಆದ ರ್‍ಯಾಂಗ್ಲರ (ಡಾ.) ರ. ಪು. ಪರಾಂಜಪೆಯವರ ಸುವಿದ್ಯ ಪುತ್ರಿಯವರಾದ ಶ್ರೀಮತಿ ಶಕುಂತಲಾ ಪರಾಂಜಪೆಯವರು ಈ ವರ್ಷಾದಿಯಲ್ಲಿ ತಮ್ಮ ರಶ್ಯನ್ ಪತಿಯಿಂದ ಘಟಸ್ಫೋಟವನ್ನು ಪಡೆದಿರುವರು. ಅವರು ಬರೆದ ಪತ್ರರೂಪ ಲೇಖನದ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ.

**ಕುಟುಂಬ ಪದ್ಧತಿಯು ಮಾತೃಪ್ರಧಾನವಾಗಬೇಕು**

ಇಂಗ್ಲಂಡಿನಲ್ಲಿ ಕುಮಾರಿ, ಸೌಭಾಗ್ಯವತಿ, ಶ್ರೀಮತಿ, ಗಂಗಾಭಾಗೀರಥಿ ಮೊದಲಾದ ಸ್ತ್ರೀ ಸಂಬೋಧನೆಗಳ ಖಿಚಡಿಯಿರದೆ, ಮಿಸ್ ಮತ್ತು ಮಿಸೆಸ್, ಎಂದರೆ ಅವಿವಾಹಿತ ಮತ್ತು ವಿವಾಹಿತ (ಆ ವಿವಾಹವು ಅಸ್ತಿತ್ವದಲ್ಲಿರಲಿ, ವಿಚ್ಛೇದ ಹೊಂದಿರಲಿ, ಇಲ್ಲವೆ ಪತಿಯ ಮರಣದ ಮೂಲಕ ಭಗ್ನವಾಗಿರಲಿ) ಎಂಬೆರಡೇ ವಿಶೇಷಣದ ಪ್ರಕಾರಗಳಿವೆ. ಈ ಪದ್ಧತಿಯು ಹಿಂದುಸ್ಥಾನಕ್ಕಿಂತ ಕಡಿಮೆ ತೊಡಕಿನದಾಗಿದ್ದರೂ, ಎರಡೂ ಕಡೆ ಅದು ಹೆಂಗಸಿನ ವಿವಾಹಸ್ಥಿತಿಯನ್ನವಲಂಬಿಸಿರುತ್ತದೆಂಬುದನ್ನು ಮರೆಯಕೂಡದು.

ವಿವಾಹಿತ, ಅವಿವಾಹಿತ—ಇವುಗಳ ಬದಲು ಕುಮಾರಿ, ಶ್ರೀಮತಿಯೆಂದು ಸ್ತ್ರೀಯ ಆಯುಷ್ಯದ ೨ ಭಾಗಗಳನ್ನು ಕಲ್ಪಿಸುವುದು ಹೆಚ್ಚು ಸ್ವಾಭಾವಿಕವಾಗುವುದು. ಹುಡುಗಿ ಚಿಕ್ಕವಳಿದ್ದಾಗ 'ಕುಮಾರಿ', ಅವಳು ದೊಡ್ಡವಳಾದಳೆಂದರೆ —ಅವಳು ಅವಿವಾಹಿತಳಿದ್ದರೂ—'ಶ್ರೀಮತಿ';—ಇದು ಸರಿಯಾದ ಸಂಬೋಧನರೀತಿ. ಲಗ್ನವಾಗಿಲ್ಲ, ಗಂಡನಿದ್ದಾನೆ, ಗಂಡ ಬಿಟ್ಟಿದ್ದಾನೆ,ಸತ್ತಿದ್ದಾನೆ—ಈ ಸಂಗತಿಗಳ ಜಾಹೀರಾತನ್ನು ಹೆಣ್ಣಿನ ಹೆಸರ ಹಿಂದೆ ಹಗಲೆಲ್ಲ ಹಚ್ಚುವುದೇಕೆ? ಗಂಡಸರ ಹೆಸರ ಹಿಂದೆ ಇಂಥ ಜಾಹೀರಾತಿರುತ್ತಿದೆಯೇ?

ಇದು ಸಂಬೋಧನೆಯ ಮಾತಾಯಿತು; ಘಟಸ್ಫೋಟಿತ ಸ್ತ್ರೀಯನ್ನು ಶ್ರೀಮತಿಯೆಂದು ಕರೆಯುವುದು ಸರಿಯಾದರೂ ಅವಳ ಅಡ್ಡ ಹೆಸರನ್ನು ಏನೆಂದು ಹಚ್ಚಬೇಕೆಂಬ ಪ್ರಶ್ನೆಯು ಉಳಿದುಬಿಡುತ್ತದೆ. ಈ ಬಗ್ಗೆ ಬೇರೆಬೇರೆ ಕಡೆ ಬೇರೆಬೇರೆ ಕಾನೂನುಗಳಿವೆ. ಸ್ವಿಟ್ಝರ್ಲಂಡ—ಫ್ರಾನ್ಸ ದೇಶಗಳಲ್ಲಿ ವಿವಾಹವಿಚ್ಛೇದ ಪಡೆದ ಸ್ತ್ರೀಯರು ತನ್ನ ಲಗ್ನಪೂರ್ವದ ಅಡ್ಡಹೆಸರನ್ನು ಹಚ್ಚಬೇಕು ಮತ್ತು ಅದರ ಹಿಂದೆ ಮಾತ್ರ ಮ್ಯಾಡಾಮ, ಫ್ರಾಉ ಇಲ್ಲವೆ ಸಿನ್ಯೋರಾ ಎಂದರೆ ಇಂಗ್ಲಿಷ್ 'ಮಿಸೆಸ್'ದ ಪ್ರತಿಶಬ್ದವನ್ನು ಹಚ್ಚಬೇಕು ಎಂದು ಕಾಯಿದೆಯಿದೆ. ಇಂಗ್ಲಂಡಿನಲ್ಲಿಯ ಪ್ರಘಾತವೆಂದರೆ, ವಿವಾಹವಿಚ್ಛೇದದ ವ್ಯಾಜ್ಯದಲ್ಲಿ ಸ್ತ್ರೀಯು ಅಪರಾಧಿಯೆಂದು ತೀರ್ಮಾನವಾದರೆ, ಅವಳು ಬರಿ ತನ್ನ ಪೂರ್ವದ ಹೆಸರನ್ನೆ ಸ್ವೀಕರಿಸುವಳು; ಮಾತ್ರವಲ್ಲ, ಮರಳಿ ತನ್ನನ್ನು 'ಮಿಸ್ ಇಂತಿಂತಹವಳು' ಎಂದು ಕರೆದುಕೊಳ್ಳುವಳು. ಆದರೆ ಅವಳು ನಿರಪರಾಧಿಯೆಂದು ನಿರ್ಣಯವಾದರೆ, ವಿವಾಹವಿಚ್ಛೇದದ ತರುವಾಯವೂ ಗಂಡನ ಅಡ್ಡ ಹೆಸರನ್ನೆ ಅಂಗೀಕರಿಸುವಳು. - ಅಪರಾಧಿಯೊ ನಿರಪರಾಧಿಯೊ ?—ಎಂಬ ನಿಷ್ಕರ್ಷೆಯಾಗದೆ ಇಂಗ್ಲಂಡಿನಲ್ಲಿ ಘಟಸ್ಫೋಟ (ವಿವಾಹವಿಚ್ಛೇದ) ವನ್ನು ಸಾರುತ್ತಿರಲಿಲ್ಲ. ಕಳೆದ ತಿಂಗಳ ವರೆಗಿನ ಉದಾಹರಣೆಯನ್ನು ಹೇಳುವುದಾದರೆ, ಗಂಡನಿಗೆ ಘಟಸ್ಫೋಟವು ಬೇಕಾಗಿದ್ದರೆ ಹೆಂಡತಿಯು ವ್ಯಭಿಚಾರಮಾಡಿದ್ದಳೆಂದು ಕೋರ್ಟಿನಲ್ಲಿ ಸಿದ್ಧಪಡಿಸಿದರೆ ಸಾಕು; ಆದರೆ ಸ್ತ್ರೀಗೆ ಅದು ಬೇಕಾಗಿದ್ದರೆ, ಗಂಡನು ವ್ಯಭಿಚಾರಿಯಾಗಿದ್ದನೆಂದು ಮಾತ್ರವಲ್ಲ—ಅವನು ಕ್ರೂರನೂ ಆಗಿದ್ದನೆಂದು ಸಿದ್ಧಪಡಿಸಬೇಕಾಗುತ್ತಿತ್ತು. ಗಂಡಹೆಂಡಿರಿಬ್ಬರಿಗೂ ಘಟಸ್ಫೋಟವು ಬೇಕಾಗಿದ್ದು, ಇಬ್ಬರಲ್ಲಿ ಯಾರೊಬ್ಬರ ಪಾಲಿಗೂ

CC-0. Jangamwadi Math Collection. Digitized by eGangotri

ವ್ಯಭಿಚಾರವಾಗಲಿ ಕ್ರೌರ್ಯವಾಗಲಿ ಇರದಿದ್ದರೂ, ಬಾಡಿಗೆಯ ಸಾಕ್ಷಿದಾರರನ್ನು ಕರೆತಂದು, ಅಪರಾಧದ ಸೋಗು-ಮಾಡಿ, ಅವರೆದುರಿಗೆ ಹೆಂಡತಿಗೆ ಹೊಡೆತ-ಬಡಿತ ಮಾಡಿ, ಇನ್ನೊಬ್ಬ ಹೆಂಗಸಿನೊಡನೆ ಸಲಿಗೆಯಿದ್ದಂತೆ ನಟನೆ ಮಾಡುವುದು ಪ್ರಾಪ್ತವಾಗುತ್ತಿತ್ತು; ಏಕೆಂದರೆ ಅಪರಾಧದ ಸೋಗು ಮಾಡುವುದೆಂದು ಪರಸ್ಪರರಲ್ಲಿ ನಿರ್ಣಯವಾದ ಮೇಲೆ ಪುರುಷನೇ (ಸ್ತ್ರೀದಾಕ್ಷಿಣ್ಯದಿಂದ!) ಆ ಪಾತ್ರವನ್ನು ವಹಿಸುತ್ತಿದ್ದನು! ಈಗ ವ್ಯಭಿಚಾರ–ಕ್ರೌರ್ಯಗಳ ಹೊರತು ಬುದ್ಧಿಭ್ರಂಶ, ದೀರ್ಘತ್ಯಾಗ, ಬಲಾತ್ಕಾರ, ಅಮಲು ಬರುವ ವರೆಗೆ ಮದ್ಯಪಾನ ಇ. ಕಾರಣಗಳಿಗಾಗಿಯೂ ಘಟಸ್ಫೋಟವನ್ನು ಪಡೆಯುವುದು ಸಾಧ್ಯವಾಗಬೇಕೆಂದು ಎ. ಪಿ. ಹರ್ಬರ್ಟರವರು ಪಾರ್ಲಿಮೆಂಟಿನಲ್ಲಿ ತಂದ ಮಸೂದೆಯು ಮಂಜೂರಾಗಿ, ಅದು ಬೇಗನೆ ಜಾರಿಯಲ್ಲಿ ಬರಲಿದೆ.

ಘಟಸ್ಫೋಟದ ಮಟ್ಟಿಗೆ ಸ್ವಿಟ್ಸರ್ಲಂಡು ತುಂಬಾ ಮುಂದುವರಿದಿದೆ. ಅಲ್ಲಿ ಸ್ವಭಾವವಿಸಂಗತಿ ( incompatibibity of temperament ) ಎಂಬೀ ಕಾರಣವೂ ವಿಚ್ಛೇದಕ್ಕೆ ಸಾಕು; ಗಂಡಹೆಂಡಿರಿಬ್ಬರಿಗೂ ಅದು ಬೇಕಾಗಿದ್ದರಂತೂ ಅದು ಸಹಜವಾಗಿ ಸಿಗುವುದು.

ಘಟಸ್ಫೋಟದ ತರುವಾಯ ಸ್ತ್ರೀಯು ಪತಿಯ ಅಡ್ಡ ಹೆಸರನ್ನು ಹಚ್ಚದೆ ತನ್ನ ಮುಂಚಿನ ಹೆಸರನ್ನೆ ಹಚ್ಚಬೇಕೆಂಬುದು ಯೋಗ್ಯವೆ ಇದೆ. ಆದರೆ ಆಕೆಗೆ ಮಕ್ಕಳಾಗಿದ್ದರೆ? ಮಕ್ಕಳ ಪಾಲನೆಯ ಜವಾಬ್ದಾರಿಯು ತಂದೆಯ ಕಡೆಗೆ ಬಂದಿದ್ದರೆ, ಆ ಮಾತು ಬೇರೆ; ಆದರೆ ಅದು ತಾಯಿಯ ಕಡೆಗೆ ಬಂದಿದ್ದರೆ, ಆಗಲೂ ಮಕ್ಕಳಿಗೆ ಕಾಯಿದೆಯ ಮೇರೆಗೆ ತಂದೆಯ ಅಡ್ಡ-ಹೆಸರನ್ನೇ ಹಚ್ಚಬೇಕಾಗುವುದು. ಇದು ಪಿತೃವಂಶೀಯ ಕುಟುಂಬ ಪದ್ಧತಿಯ ಪರಿಣಾಮವೇ ಸರಿ. ಕೂಸಿನ ಜನ್ಮದ ಮಟ್ಟಿಗೆ ತಂದೆಯ ಹೊಣೆಯು ಕ್ಷಣಿಕವಾದರೂ, ಎಲ್ಲ ದೇಶಗಳಲ್ಲಿಯೂ ತಂದೆಯೇ ಮಕ್ಕಳ ಮೇಲೆ ಹಕ್ಕು ಹೇಳುವನು! 'ಮಾಲಕೀ ಹಕ್ಕಿ'ನ ಮಾಸಲೆಯೇ ಇದು! ಮಕ್ಕಳ ಬಗ್ಗೆ ತಾಯಿಯ ಕರುಳು ಹರಿಯುವಷ್ಟು ತಂದೆಯದು ಹರಿಯುವುದೇ? ಮಕ್ಕಳ ತಾಯಿ ಇಂಥವಳೇ ಎಂದು ಹೇಳುವುದು ಸುಲಭವಿರುವಷ್ಟು ತಂದೆಯ ಬಗ್ಗೆ ಇರಲಾರದು. ಪಿತೃವಂಶೀಯ ಕುಟುಂಬ ಪದ್ಧತಿಯು ಅನೈಸರ್ಗಿಕವು. ಸಾವಕಾಶವೇ ಆಗಲಿ, ಮಾತೃಪ್ರಧಾನ ಕುಟುಂಬ ಪದ್ಧತಿಯೇ ಸ್ಥಾಪಿಸಲ್ಪಡಬೇಕು. 'ಸಾವಕಾಶ' ಎನ್ನುವುದಕ್ಕೆ ಕಾರಣವೇನೆಂದರೆ, ದೇಶದ ಆರ್ಥಿಕ ವ್ಯವಸ್ಥೆಯಲ್ಲಿಯೆ ಬದಲಾವಣೆ ಮಾಡಬೇಕಾಗುವುದು; ಮತ್ತಿದಕ್ಕೆ ಸಾಕಷ್ಟು ಸಮಯವು ಬೇಕಾಗುವುದು. ತಾಯಿಯೆ ತನ್ನ ಮಕ್ಕಳ ಪಾಲನೆಮಾಡುವ ಜವಾಬ್ದಾರಿ ಹೊರಬೇಕಾಗುವುದು; ಇಲ್ಲವೆ ವಿವಾಹಕಾಲದಲ್ಲಿ ಮುಂದಿನ ಬೇಜಿಮೆಯೆಂದು ಪುರುಷನಿಂದ ವಧೂದಕ್ಷಿಣೆಯನ್ನು ತೆಗೆದುಕೊಳ್ಳಬೇಕಾಗುವುದು; ಅಥವಾ ಸರಕಾರವೆ ತಾಯಿಗೆ, ಪ್ರತಿಮಗುವಿಗೆ ಇಂತಿಷ್ಟರಂತೆ, ಹಣ ಸಿಗುವಂತೆ ವ್ಯವಸ್ಥೆಗೊಳಿಸಬೇಕಾಗುವುದು.

—समाजस्वास्थ्य

**ಹಿಟ್ಲರನ ದರ್ಬಾರು**

೧. ಜರ್ಮನ್ ಆಸ್ಪತ್ರಿಯೊಳಗಿನ ದಾಯಿಗಳಿಗೆ ಹುಕುಮು ಬಿಡಲಾಗಿದೆ: ಬಹಳ ಜ್ವರ ಏರಿದ ರೋಗಿಗಳ ಬಳಿಯಲ್ಲಿಯೆ ಇದ್ದು, ನಾಝಿಗಳ ವಿರುದ್ಧ ಅವರು ಏನಾದರೂ ಬಡಬಡಿಸುತ್ತಿದ್ದರೆ, ಅದನ್ನು ಮೇಲಧಿಕಾರಿಗಳಿಗೆ ತಿಳಿಸಬೇಕು.

೨. ಜರ್ಮನ್ ಚಿತ್ರಕಾರರಿಗೂ ಫೊಟೊಗ್ರಾಫರರಿಗೂ ವಿಧಿಸಲಾದ ಅಪ್ಪಣೆ: ನಾಲ್ಕಕ್ಕಿಂತ ಕಡಿಮೆ ಮಕ್ಕಳು ಮೂಡುತ್ತಿರಬಹುದಾದ ಕುಟುಂಬದ ಚಿತ್ರವನ್ನೆ ತೆಗೆಯಕೂಡದು; ಕಡಿಮೆ ಮಕ್ಕಳುಳ್ಳ ಚಿತ್ರಗಳಿಂದ ಜರ್ಮನಿಯ ಜನಸಂಖ್ಯೆಯು ಸೊರಗುತ್ತಿರುವುದು ಜಗತ್ತಿಗೆ ತಿಳಿದುಬಂದೀತು.

೩. ಒಬ್ಬ ಜರ್ಮನ್ ನಾಟಕಗೃಹ ಮಾಲೀಕನು ಒಂದು ಜಾಹೀರಾತು ಕೊಟ್ಟನು: ಇವೊತ್ತು ಹೊಸದೇನಾದರೂ ತೋರಿಸಲಾಗುವುದು, ಮತ್ತದು ಸೇರದಿದ್ದವರಿಗೆ ೫೦ರಷ್ಟು ಮಾರ್ಕು ಬಹುಮಾನ ಕೊಡಲಾಗುವುದು ಎಂತ. ಆ ದಿನ ಥಿಯೇಟರಿನಲ್ಲಿ ವಿಚಿತ್ರ ಜನಸಂದಣಿ. ಆದರೆ ಯಾರೂ ಬಹುಮಾನ ಕೇಳಲಿಲ್ಲ; ಏಕೆಂದರೆ ಚಿತ್ರ ಹಿಟ್ಲರನದಾಗಿತ್ತು.

೪. ಜರ್ಮನಿಯಲ್ಲಿ ಗೃಹ್ಯಸಂಸ್ಕಾರಗಳ ಸುದ್ದಿಯಲ್ಲಿ ಮರಣವಾರ್ತೆಗಳು ಪ್ರಕಟವಾದಾಗಲೆಲ್ಲಾ, ಕೊನೆಯಲ್ಲಿ "ಆಡೊಲ್ಫ ಹಿಟ್ಲರನ ಮೇಲೆ ಶ್ರದ್ಧೆಯಿಟ್ಟು ತೀರಿಕೊಂಡನು" ಎಂದು ಬರೆಯಬೇಕಾಗುವುದು.

—Sunday Dispatch

CC-0. Jangamwadi Math Collection. Digitized by eGangotri

**ಶಿಕ್ಷಾಶಾಲೆಗಳು ಶಿಕ್ಷಣಶಾಲೆಗಳಾಗಬೇಕು**

ಸ್ಟ್ಯಾನ್ಫರ್ಡ್ ಬೇಟ್ಸ್ ಎಂಬವರು ಅಮೇರಿಕದ ಸಂಯುಕ್ತ ಸಂಸ್ಥಾನಗಳ ಕಾರಾಗೃಹಸಂಘದ ಮುಖ್ಯಾಧಿಕಾರಿಗಳು. 'ಸೆರೆಮನೆಗಳು ಮತ್ತು ಅವುಗಳ ಸುಧಾರಣೆ' ಎಂಬ ವಿಷಯವನ್ನು ಕುರಿತು, ಅಂತರ್ರಾಷ್ಟ್ರೀಯ ಮಾನಸ ಚಿಕಿತ್ಸಾಶಾಸ್ತ್ರ ಮಹಾಸಭೆ (First International Congress on Mental Hygiene) ಯಲ್ಲಿ ಉಪನ್ಯಾಸ ಕೊಡಲು ಅವರು ಆಮಂತ್ರಿತರಾಗಿದ್ದರು. ಕಾರಾಗೃಹಗಳಲ್ಲಾಗಬೇಕಾದ ಸುಧಾರಣೆಯ ಬಗ್ಗೆ ಅವರ ವಿಚಾರಗಳು ಅಮೌಲ್ಯವೂ ಪ್ರಾಸಂಗಿಕವೂ ಆಗಿವೆ. ಅವುಗಳ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ.

ಕಾರಾಗೃಹಗಳ ಪ್ರಶ್ನೆಯೊಂದನ್ನೆ ವಿಂಗಡಿಸಿ, ವಿಚಾರಿಸಲು ಬರುವಂತಿಲ್ಲ. ಬಡತನ, ಅನುವಂಶಿಕ ದೋಷಗಳು, ಔದ್ಯೋಗಿಕ ಅಸಮಾನತೆ,ಶಾರೀರಿಕ-ಮಾನಸಿಕ ದೌರ್ಬಲ್ಯ ಇವೆಲ್ಲವುಗಳನ್ನು ಲೆಕ್ಕಕ್ಕೆ ಹಿಡಿಯಬೇಕಾಗುತ್ತದೆ. ಈ ವರೆಗೆ ಕಾರಾಗೃಹಗಳು ತಮ್ಮ ಅತಿಥಿಗಳನ್ನು ವಿಧಿ-ವಿಧೇಯರನ್ನಾಗಿ ಮತ್ತು ಒಳ್ಳೆಯ ನಾಗರಿಕರನ್ನಾಗಿ ಮಾಡಲು ಅಸಮರ್ಥವಾಗಿವೆ. ಮೂಲ ದೃಷ್ಟಿಕೋನದಲ್ಲಿಯೆ ಬದಲಾವಣೆಯಾಗಬೇಕಾಗಿದೆ. ತುಚ್ಛತೆ ತಿರಸ್ಕಾರಗಳ ಬದಲು ಸಹಕಾರ-ಸಹಾನಭೂತಿಗಳು ತಲೆದೋರಬೇಕು.

ಜೀವನಸಂಗ್ರಾಮ ಘೋರವಾಗಿದೆ; ಕೂಲಿಯ ದರ ಇಳಿದಿವೆ; ಹೊಸ ಯಾಂತ್ರಿಕ ಶೋಧಗಳು—ಮೋಟಾರು, ಪಿಸ್ತೂಲು, ಕೆಲಸಲ ಮಶಿನ್ಗನ್ನುಗಳು ಕೂಡ ಅತ್ಯಾಚಾರಿಗಳಿಗೆ ಸುಲಭ ಸೌಲಭ್ಯಗಳನ್ನೊದಗಿಸಿವೆ. ಸ್ವಾತಂತ್ರ್ಯ-ಸ್ವಾತಂತ್ರ್ಯ ಎನ್ನುತ್ತೆನ್ನುತ ಹಳೆಯ ಮತಧರ್ಮಗಳ ಕಟ್ಟುಗಳನ್ನು ಸುಟ್ಟುಹಾಕಲಾಗಿದೆ. ಅಂತೆಯೆ ಕೆಲವು ದೇಶಗಳಲ್ಲಿ ಅತ್ಯಾಚಾರ-ಅಪರಾಧಗಳ ಪ್ರಮಾಣವು ಏರಿದ್ದರೆ ಸೋಜಿಗವಿಲ್ಲ.

ಹಳೆ-ಹೊಸ ಸೆರೆಮನೆಗಳನ್ನು ವಿಂಗಡಿಸುವಾಗ, ಭವಿಷ್ಯತ್ತಿನ ಕಾರಾಗೃಹಗಳ ನಾಲ್ಕು ಲಕ್ಷಣಗಳನ್ನು ಹೇಳಬಹುದು:

೧. ಕಾರಾಗೃಹಗಳನ್ನು ಕಟ್ಟುವ ರೀತಿ ಮತ್ತು ಅವುಗಳ ಸಲಕರಣೆಗಳನ್ನು ಮೊದಲು ಗಮನಿಸಬೇಕು. ಅಪರಾಧಿಯು ಪುನಃ ತನ್ನ ಮುಂಚಿನ ಸಾಮಾಜಿಕ ಪದವಿಯನ್ನು ಪಡೆಯಲು ಅನುಕೂಲವಾಗುವಂತೆ ಅವುಗಳ ರಚನೆಯಾಗಿರಬೇಕು. ಸಲಾಕಿಯ ಬಾಗಿಲುಗಳೇನೋ ಒಟ್ಟು ಅಪರಾಧಿಗಳಲ್ಲಿ ಕೆಲವರಿಗೆ ಅತ್ಯಗತ್ಯವಾಗಿರಬಹುದು; ಆದರೆ ಮನುಷ್ಯಸ್ವಭಾವದೊಳಗಿನ ಉಚ್ಚ-ಉದಾತ್ತ ಅಂಶಗಳು ಪ್ರಸ್ಫುಟವಾಗಲು ಅವುಗಳು ಅಪ್ರಯೋಜಕವಾಗಿರುವವು. ತೀರ ಕೆಲ ಅಪರಾಧಿಗಳಿಗೆ ಯೋಗ್ಯವಾಗಿರಬಹುದಾದ ಪರಿಸ್ಥಿತಿಯಲ್ಲಿ ಹೆಚ್ಚಿನ ಹಲವರನ್ನು ನೂಕುವ ಕಾರ್ಯವನ್ನು ನಾವು ಇದುವರೆಗೆ ಮಾಡುತ್ತಿದ್ದುದು. ಕಾರಾಗೃಹಗಳ ಹೊರಗಿನ ಜೀವನದಲ್ಲಿ ಅಪರಾಧಿಗೆ ಅವಕಾಶಗಳನ್ನೊದಗಿಸುವ ಪ್ರಯೋಗವು ಅಮೇರಿಕದಲ್ಲಿ ಬಹುಯಶಸ್ವಿಯಾಗಿದೆ. ಉಮೇದುವಾರಿ (Probation), ಪ್ಯಾರೋಲ, ಚಿಕ್ಕವರ ಕೋರ್ಟುಗಳು, ಸಂಗೋಪನಾಶ್ರಮಗಳು ಇ. ಉಪಾಯಗಳು ಅಪರಾಧಗಳ ಪ್ರಶ್ನೆಯನ್ನು ಕಲ್ಪಕತೆಯಿಂದಲೂ ಪ್ರಗತಿಪರ ದೃಷ್ಟಿಯಿಂದಲೂ ಬಿಡಿಸುವ ಪ್ರಯತ್ನಕ್ಕೆ ಸಾಕ್ಷಿಯಾಗಿವೆ. ಇವುಗಳನ್ನು ಪ್ರಯೋಗಿಸಿದ ಸಮಾಜಗಳಲ್ಲಿ ಅಪರಾಧಪ್ರವೃತ್ತಿಯು ತೀರ ಕಡಿಮೆಯಾದುದು ಕಂಡುಬರುತ್ತದೆ. ಇನ್ನುಮುಂದಿನ ಸೆರೆಮನೆಗಳಲ್ಲಿ ಆಸ್ಪತ್ರಿ, ಗ್ರಂಥಾಲಯ, ಶಾಲೆ, ಮಾನಸೋಪಚಾರಮಂದಿರ, ಕರ್ಮಶಾಲೆಗಳಿಗೆ ಪ್ರಾಧಾನ್ಯವು ಉಂಟಾಗುವುದು. ಬೇಸಾಯವು ಅದರ ಒಂದು ಅಂಗವಾಗಿರುವುದು. ಅದೊಂದು ಆಸ್ಪತ್ರಿಯಾಗಲಿ, ವಿನೋದಮಂದಿರವಾಗಲಿ, ಕೊಳಚೆಯ ಕೂಪವಾಗಲಿ ಆಗಕೂಡದು. ಅದು ಸ್ವಚ್ಛತೆಯ ತಾಣವಾಗಿದ್ದು, ಸ್ವಚ್ಛ ಕಾರ್ಯರೀತಿಯನ್ನು ಕಲಿಸುವುದು. ಚಟುವಟಿಕೆಯ ತವರುಮನೆಯೂ ಉದ್ಯೋಗಶಿಕ್ಷಣ ಶಾಲೆಯೂ ಅದು ಆಗಿರುವುದು. ನಿಷ್ಠುರ ಕಾರ್ಯನಿಷ್ಠೆಯನ್ನು ಅದು ಕಲಿಸುವುದು.

೨. ಮನುಷ್ಯಸ್ವಭಾವವನ್ನು ಅರಿಯುವ ಶಾಸ್ತ್ರದಲ್ಲಿ ಪರಿಣತರಾದವರೆ ಬರಲಿರುವ ಕಾರಾಗೃಹಗಳಲ್ಲಿ ಅಧಿಕಾರಸ್ಥಾನಗಳನ್ನು ಪಡೆಯುವರು. ದೇಹಪ್ರಮಾಣ, ದೇಹಶಕ್ತಿ, ಬೇರೆ ಸ್ಥಳಗಳನ್ನು ದೊರಕಿಸಲು ಅಶಕ್ತಿ—ಇವೆಲ್ಲ ಈ ವರೆಗಿನ ಆಯ್ಕೆಗಳ ಒರೆಗಳಾಗಿದ್ದವು. ಕಾರಾಗೃಹಗಳ ಅಧಿಕಾರಿಗಳ ಶಿಕ್ಷಣಶಾಲೆಗಳನ್ನು ತೆರೆದು, ಅಲ್ಲಿ ಅಪರಾಧಶಾಸ್ತ್ರದ ತತ್ವ-ಉಪಪತ್ತಿಗಳನ್ನೂ, ಪ್ರಾಥಮಿಕ ವೈದ್ಯಕವನ್ನೂ, ಮನೋರೋಗ ಶುಶ್ರೂಷಾಶಾಸ್ತ್ರವನ್ನೂ, ಪ್ರಥಮ ಚಿಕಿತ್ಸೆಯನ್ನೂ, ಜುಜಿತ್ಸು-ನೆಲಗರುಡಿ-ಸ್ವಸಂರಕ್ಷಣಕ್ರಮಗಳನ್ನೂ ಕಲಿಸುವುದು ಅಗತ್ಯವಾದುದು. ಅಮೆರಿಕೆಯಲ್ಲಿ ಕಾರಾಗೃಹಾಧಿಕಾರಿಗಳ ಕಾರ್ಯಕ್ಷಮತೆಯ ಮಾನವು

CC-0. Jangamwadi Math Collection. Digitized by eGangotri

ಏರಿದುದರ ಫಲವಾಗಿ, ಹಲವು ವಿಶ್ವವಿದ್ಯಾಲಯ ಪದವೀಧರರು ಕಾರಾಗೃಹದ ಕೆಲಸಗಳನ್ನು ಕೈಕೊಂಡಿರುವರು.

೩. ನಿರುದ್ಯೋಗಿಯ ತಲೆಯಲ್ಲಿ ಸೈತಾನನ ಬಿಡಾರವೆಂಬುದನ್ನು ಮರೆಯಕೂಡದು. ಅಖಂಡ ವ್ಯಾಸಂಗ ಮತ್ತು ಉತ್ಪಾದಕ ಶರೀರಶ್ರಮಗಳ ವ್ಯವಸ್ಥೆಯಿರುವ ಯಾವ ಸೆರೆಮನೆಯಲ್ಲಿಯೂ ವಿಶೇಷ ಮಹತ್ವದ ದೊಂಬೆಯು ಬಂದಿಗಳಿಂದ ಸಂಭವಿಸಿಲ್ಲ.

೪ ಭವಿಷ್ಯತ್ತಿನ ಕಾರಾಗೃಹಗಳಲ್ಲಿ ಏರ್ಪಡಿಸಲೇಬೇಕಾದ ಅತಿಕಠಿನ ವಿಷಯವೊಂದಿದೆ: ಅದೆಂದರೆ ವ್ಯಕ್ತಿಗತವಾಗಿ ಲಕ್ಷ್ಯ ಪೂರೈಸುವುದು (Individualisation). ಜನರನ್ನು ಸಾಮುದಾಯಿಕವಾಗಿ ಶಿಕ್ಷಿಸುವುದು ಸುಲಭ, ಆದರೆ ಸಾಮುದಾಯಿಕವಾಗಿ ಸುಧಾರಿಸುವುದು ಬಿಗಿ. ಒಬ್ಬನಿಗೆ ಮೆಚ್ಚುಮದ್ದಾಗಬಹುದಾದುದು ಇನ್ನೊಬ್ಬನಿಗೆ ಹುಚ್ಚುಮದ್ದಾಗಬಹುದು. ಇಲ್ಲಿ ಮನೋರೋಗಚಿಕಿತ್ಸಕನೂ ಮಾನಸೋಪಚಾರಶಾಸ್ತ್ರಜ್ಞನೂ ಕಾರಾಗೃಹದ ಕಾರ್ಯಕ್ರಮವನ್ನು ನಿಶ್ಚಿತಗೊಳಿಸುವುದರಲ್ಲಿ ಪ್ರಮುಖಭಾಗವನ್ನು ವಹಿಸಬಲ್ಲನು. ಶುಶ್ರೂಷೆಯ ಪೂರ್ವದಲ್ಲಿ ರೋಗನಿದಾನವೂ ಅನುಪಾನವೂ ಸಿದ್ಧವಾಗಿರಬೇಕು. ದೇಹ-ಮನೋರೋಗವೈದ್ಯರು, ಅಧ್ಯಾಪಕರು, ಗ್ರಂಥಾಲಯತಜ್ಞರು, ವ್ಯಾಯಾಮ ಶಿಕ್ಷಕರು, ಶಾಲೆಗಳ ಮೇಲ್ವಿಚಾರಕರು—ಇವರೆಲ್ಲ ಕಾರಾಗೃಹಗಳ ಅಧಿಕಾರಿಗಳಿಗೆ ಸಹಾಯಕ ಸೈನ್ಯವಾಗುವ ಹೊತ್ತು ಬಂದಿದೆ. 'ವ್ಯಕ್ತೀಕರಣ' ವಿಧಾನದಲ್ಲಿ ಇವರೆಲ್ಲ ಪರಸ್ಪರ ಪೂರಕರಾಗುವರು.

—The Mysore Economic Journal

**'ಸಂರಕ್ಷಕ ಕರ'**

ಜನವರಿ ೧, ೧೯೩೪ರ ತರುವಾಯ ಜನ್ಮವೆತ್ತಿದ ಮತ್ತು ಸೈನಿಕವೃತ್ತಿಗೆ ಅಯೋಗ್ಯರಾಗಿ ನಿರ್ಣಯಿಸಲ್ಪಟ್ಟ ಪ್ರತಿಯೊಬ್ಬ ಜರ್ಮನ್ ನಾಗರಿಕನು ಇನ್ನು ಮೇಲೆ 'ಸಂರಕ್ಷಣ ಕರ'ವನ್ನು ಕೊಡಬೇಕಾಗುವುದು. ತನ್ನ ವರಮಾನದಲ್ಲಿ ೬%ರಷ್ಟು ಹಣವನ್ನು ಅವನು ತನ್ನ ೪೫ನೆಯ ವಯಸ್ಸಿನ ವರೆಗೆ ಸರಕಾರಕ್ಕೆ ತೆತ್ತಬೇಕಾಗುವುದು. ಸುಮಾರು ೨ ಲಕ್ಷ,೭೦ ಸಾವಿರ ಜರ್ಮನರು ಈ ಕರಕ್ಕೆ ಒಳಪಡುವರೆಂದು ಅಂದಾಜಿದೆ. ಪ್ರಾಪ್ತಿಯ ಮೇಲಿನ ಕರ, ಜಡ್ಡಿನ ವಿಮೆ, ನಿರುದ್ಯೋಗ ವಿಮೆ, ನಾಗರಿಕರ ಕರ ಇ.ಗಳಂತೆಯೇ ಈ ಕರವನ್ನು ಸಪ್ಟಂಬರ ೧ ರಿಂದ ಸಂಬಳದಿಂದ ಮುರಿದುಕೊಳ್ಳಲಾಗುವುದು.

ಒತ್ತಾಯದ ಸೈನಿಕಶಿಕ್ಷಣ ಪಡೆಯಲು ಬಂದ ತರುಣರ ಉದ್ಯೋಗ-ನೌಕರಿಗಳು ಮುಳುಗಿ, ಅವರಿಗೆ ಹಾನಿಯಾಗುತ್ತಿದೆ; ಅದನ್ನು ತುಂಬಿ ತೆಗೆಯಲು ಈ ಮಾರ್ಗವನ್ನು ಕಲ್ಪಿಸಲಾಗಿದೆ. ಕೋಮಲ ಮೈಕಟ್ಟಿನ ತಮ್ಮ ದೇಶಬಾಂಧವರು ದುಡ್ಡು ಗಳಿಸುತ್ತಿರುವಾಗ ತಾವು ೨ ವರ್ಷ ಕಾಲ ಕಠೋರ ಯುದ್ಧಶಿಕ್ಷಣ ಪಡೆಯಲೇಬೇಕಲ್ಲ! —ಎಂಬ ವೈಷಮ್ಯದ ಭಾವನೆಯು ಅಳಿದುಹೋಗಲು ಇನ್ನು ಅಡ್ಡಿಯಿಲ್ಲವಾಯಿತು.

**ಪಾಶ್ಚಾತ್ಯರ ಗೋಪೂಜೆ**

ಕಾನಡಾ ದೇಶದಲ್ಲಿಯ ಒಂದು ಆಕಳಿಗೆ, ಹೆಚ್ಚು ಹಾಲು ಕರೆಯುವ ಜಾಗತಿಕ ಸ್ಪರ್ಧೆಯಲ್ಲಿ ಅಗ್ರಮಾನವು ಸಿಕ್ಕಿತ್ತು. ಈ ವಿಕ್ರಮದ (ರೆಕಾರ್ಡಿನ) ಸ್ಮಾರಕವೆಂದು ಆ ಗೋಮಾತೆಯ ಭವ್ಯ ಪುತ್ರಳಿಯನ್ನು ಮಾಡಿ ಇಡಲಾಗಿದೆ. ಆ ಪುತ್ರಳಿಯು ವಿದ್ಯುತ್ತಿನ ಸಹಾಯದಿಂದ ಪೂರ್ಣ ಪ್ರಕಾಶಿತವಾಗುವಂತೆ ಮಾಡಿದ್ದಾರೆ. ಸ್ಮಾರಕದ ಮಹತ್ವವನ್ನು ಮನದಂದು, ಒಂಟಾರಿಯೊ ಪ್ರಾಂತದ ಲೆಫ್ಟೆನಂಟ ಗವರ್ನರರು ಅದರ ಅನಾವರಣ ಸಮಾರಂಭವನ್ನು ಜರುಗಿಸಿದರು. ಪ್ರತಿಮೆಗೆ ತಗಲುವ ವೆಚ್ಚಕ್ಕಾಗಿ ಒಂದು ಸಂಸ್ಥೆಯು ೧೩೦೦೦ ರೂ.ಯನ್ನು ಕೊಟ್ಟಿತು.

ಗೋಪೂಜಕ ಹಿಂದೂಗಳು ಇದನ್ನು ಗಮನಿಸುವರೇ ?

**ಟೆಲಿಫೋನ ನಂ. ೯೯೯**

ಬೆಂಕಿಯಾರಿಸುವ ಬಂಬು, ಆ್ಯಂಬುಲನ್ಸ್ ಇಲ್ಲವೆ ಪೋಲೀಸರನ್ನು ಅವಸರದಿಂದ ಕರೆತರಲು, ಲಂಡನ್ನಿನಲ್ಲಿ ಒಂದು ಹೊಸ ಸೌಕರ್ಯವನ್ನು ಒದಗಿಸಿದ್ದಾರೆ. ೯೯೯ ನಂಬರಿಗೆ ಫೋನು ಮಾಡಿದ ಕೂಡಲೆ ಟೆಲಿಫೋನು ಮಾಡಿದವನಿಗೆ ಆವಶ್ಯಕವಾದ ನಂಬರನ್ನು ಕೊಡಲಾಗುವುದು; ಮತ್ತಿದರಿಂದ ಹೊತ್ತಿನ ಮಿತವ್ಯಯವಾಗುವುದು. ಲಂಡನ್ನಿನಂಥ ಮಹಾನಗರದಲ್ಲಿ ಇಂತಹ ಏರ್ಪಾಡು ತೀರ ಆವಶ್ಯಕವಾಗಿರು—ವುದು; ಏಕೆಂದರೆ ಇಲ್ಲಿ ಪ್ರತಿವಾರ ೨೪೦೦ ಕರೆಗಳು ಬರುವವು, ೧೨೦೦ ಸಲ ಆ್ಯಂಬುಲನ್ಸ್ ವಾಹನಗಳು ಎಡತಾಕಬೇಕಾಗುವುದು, ಮತ್ತು ಬೆಂಕಿಯಾರಿಸುವ ಬಂಬು ೨೫೦ ಸಲ ಹೊರಬೀಳುವುದು. ಆಧುನಿಕ ಸುಖಸಾಮಗ್ರಿಗಳ ಚಟವು ಜನರಿಗೆ ತಂಬಾ ತಗಲಿಬಿಟ್ಟಿರುವುದರಿಂದ ೯೯೯ ನಂಬರು ದೊರಕಿಸಲು ಟೆಲಿಫೋನಿನ ತಟ್ಟೆಯನ್ನು ಮೂರು

CC-0. Jangamwadi Math Collection. Digitized by eGangotri

ಸಲ ತಿರುಗಿಸಬೇಕಾಗುತ್ತಿರುವುದನ್ನು ತಪ್ಪಿಸಬೇಕೆಂದೂ, ಒಂದೇ ನಂಬರಿನ ಅಂಕೆಯನ್ನು ನಿಶ್ಚಿತಗೊಳಿಸಬೇಕೆಂದೂ ಸೂಚನೆಗಳು ಬರಲಾರಂಭಿಸಿವೆ. ಆದರೆ ಅದು ನೆಚ್ಚದ ಮಾತಾಗಿರುವುದರಿಂದ, ಈಗಲೆ ಅದನ್ನು ಬಳಕೆಯಲ್ಲಿ ತರಬಾರದಾಗಿ ಗೊತ್ತುಮಾಡಿದ್ದಾರೆ.

—ಅರ್ಥ

**ಸಕ್ಕರೆಯ ಪ್ರತಿಸ್ಪರ್ಧಿ**

ಇ. ಸ. ೧೮೭೯ರಲ್ಲಿ ರೆಮ್ಸೆನ ಮತ್ತು ಫಾಲ್ಬರ್ಗರೆಂಬ ಇಬ್ಬರು ಜರ್ಮನ್ ಶಾಸ್ತ್ರಜ್ಞರು ಟೋಲ್ವಿನದಿಂದ ಹೊರಡುವ ಮತ್ತು ಸಲ್ಫ್ಯೂರಿಕ್ ಆಸಿಡ್ಡಿನಿಂದ ಅವುಗಳ ಮೇಲೆ ಆಗುವ ಪ್ರಕ್ರಿಯೆಗಳನ್ನು ಪರೀಕ್ಷಿಸುತ್ತಲಿದ್ದರು. ಒಂದು ದಿನ ಪ್ರಯೋಗದ ತರುವಾಯ ಅವರಲ್ಲೊಬ್ಬನು ನಿತ್ಯದಂತೆ ಕೈತೊಳೆದುಕೊಂಡು ಊಟಕ್ಕೆ ಕುಳಿತನು. ಆ ದಿನದ ಭೋಜನವೆಲ್ಲ ಅವನಿಗೆ ಸವಿಯೆನಿಸಿತು. ಅವನಿಗೆ 'ಸಿಹಿ' ಯೆಂದರೆ ತುಂಬಾ ಸಿಟ್ಟು. ಹಾಟೆಲಿನ ಯಜಮಾನಿತಿಯನ್ನು ಕರೆದು ಚೆನ್ನಾಗಿ ಬಯ್ದನು. ಆಕೆ ತನ್ನದೇನೂ ತಪ್ಪಿಲ್ಲವೆಂದಳು. ಇದರ ಗುಟ್ಟೇನಿರಬಹುದೆಂದು ಅವನು ಪ್ರಯೋಗಶಾಲೆಗೆ ಹೋಗಿ ತೊಳೆದ ನಲಿಕೆ (Test tube) ಯೊಳಗಿನ ನೀರನ್ನು ಸಹಜವಾಗಿ ನೆಕ್ಕಿನೋಡಿದನು. ಅದು ಕುಡಿಯುವಷ್ಟು ಸಿಹಿಯಾಗಿತ್ತು. ಮರುದಿನ ಮಿತ್ರರಿಬ್ಬರೂ ಮುಂಚಿನ ದಿನದ ಪ್ರಕ್ರಿಯೆಗಳನ್ನು ಪುನಃ ಪ್ರಯೋಗಿಸಿದರು. ಹೀಗೆ ಹುಟ್ಟಿದ ಅತಿ ಸ್ವಾದುಪದಾರ್ಥದ ಹೆಸರೇ ಸ್ಯಾಕ್ರಿನ್. ಅಂತು ಇದೊಂದು 'ಸವಿಯಾದ ಅಪಘಾತ'ವೆನ್ನಬಹುದು.

ಸ್ಯಾಕ್ರಿನ್ ಒಂದು ಸ್ವಚ್ಛವಾದ, ಸ್ಫಟಿಕಮಯ ದ್ರವ್ಯವು. ಅದು ನೂರಕ್ಕೆ ನೂರು ಪಾಲು ಶುದ್ಧವಿರುವಾಗ ೨೨೮ ರಿಂದ ೨೨೮.೫೦ ಸೆಂಟಿಗ್ರೇಡಿನ ಉಷ್ಣತಾಮಾನಕ್ಕೆ ಕರಗುತ್ತದೆ. ಅದು ಸ್ವಲ್ಪವಾದರೂ ಅಶುದ್ಧವಿದ್ದರೆ, ಕರಗುವ ಉಷ್ಣತಾಮಾನವು ಒಮ್ಮೆಲೆ ಕೆಳಗಿಳಿಯುವುದು. ಶುದ್ಧ ಸ್ವರೂಪದಲ್ಲಿ ಅದು ಸಕ್ಕರೆಯ ೫೦೦ ಮಡಿ ಸಿಹಿಯಾಗಿರುತ್ತದೆ. ಪೇಟೆಯಲ್ಲಿ ಸಿಕ್ಕುವ ಸ್ಯಾಕ್ರಿನು ೩೦೦ ಮಡಿ ಸಿಹಿಯಾಗಿರುವುದು; ಇದು ಅಷ್ಟು ಶುದ್ಧವಾಗಿರುವುದಿಲ್ಲ.

ಇದರ ಸಿಹಿಯ ಕಲ್ಪನೆ ಬರಲು, ಇದೊಂದು ಮಾತು ಸಾಕು: ಒಂದು ಅಂಶ ಸ್ಯಾಕ್ರಿನನ್ನು ೧೦,೦೦೦ ಅಂಶ ನೀರಿನೊಡನೆ ಬೆರಸಿದರೆ, ಬಾಯಿಯಲ್ಲಿ ಹಾಕಲಾರದಷ್ಟು ಅದು ಸಿಹಿಯಾಗುವುದು.

ಸ್ಯಾಕ್ರಿನು ಬಹಳ ಸಿಹಿಯಾದುದರಿಂದ ಬೇರೆ ಪದಾರ್ಥಗಳನ್ನು ಅದರಿಂದ ಸಿಹಿಮಾಡಲು ಬರುವುದು. ಮಧುಮೇಹದಿಂದ ಬಳಲುವವರಿಗೆ ಸಕ್ಕರೆಯು ವರ್ಜ್ಯವಾದುದರಿಂದ, ಅನ್ನವನ್ನು ಸವಿಗೊಳಿಸಲು ಇದನ್ನು ಉಪಯೋಗಿಸುತ್ತಾರೆ. ಆದರಿಂದ ಶರೀರಕ್ಕೆ ಪೋಷಣೆ ದೊರಕುವುದೋ ಇಲ್ಲವೋ ಎಂಬುದು ವಾದಾಸ್ಪದ ಪ್ರಶ್ನೆಯಾಗಿದೆ.

ಪ್ರಚಲಿತವಿದ್ದ ಅಭಿಪ್ರಾಯವೆಂದರೆ, ಸ್ಯಾಕ್ರಿನು ಬರಿ ನಾಲಿಗೆಗೆ ಸವಿಹತ್ತುತ್ತದೆ, ಆದರೆ ಹೊಟ್ಟೆಯಲ್ಲಿ ಹೋದಾಗ ನಿರುಪದ್ರವಿ ದ್ರವ್ಯವಾಗಿರುತ್ತದೆ. ಈ ಮತವು ಆಧುನಿಕ ಶೋಧಗಳ ಮೂಲಕ ವ್ಯತ್ಯಾಸಹೊಂದುತ್ತಿದೆ. ಆರೋಗ್ಯಸಂಪನ್ನ ಜನರ ಮೇಲೆ ಸ್ಯಾಕ್ರಿನಯುಕ್ತ ಮತ್ತು ಶರ್ಕರಾಯುಕ್ತ ಆಹಾರಗಳ ಪ್ರಯೋಗವನ್ನು ಮಾಡಿನೋಡಲಾಯಿತು. ಆಗ ಸ್ಯಾಕ್ರಿನಿನಲ್ಲಿ ಹಲವು ದೋಷಗಳಿದ್ದುದು ಕಂಡುಬಂದಿತು. ಸ್ಯಾಕ್ರಿನಿನಿಂದ ಹಸಿವು-ಪಚನಶಕ್ತಿಗಳು ಮುಂದವಾಗಿ ಸಣ್ಣ ಕರುಳುಗಳೊಳಗಿನ ಗ್ರಾಹಕತೆಯು ಕಡಿಮೆಯಾಗುವುದೆಂದು ಗೊತ್ತಾಯಿತು.

ಸ್ಯಾಕ್ರಿನಿನ ಬೇರೆ ಕೆಲವು ಉಪಯೋಗಗಳೆಂದರೆ:—

(೧) ಅದು ಸಂರಕ್ಷಕ ದ್ರವ್ಯ (Preservative)ವಾಗಿದೆ.

(೨) ವಾತೋದಕಗಳು (Aerated waters), ಸೋಡಾ, ಲೆಮನ ಮುಂತಾದವುಗಳಲ್ಲಿ ಅದರ ಉಪಯೋಗವಾಗುತ್ತದೆ.

(೩) ಲಿವರದ ಬೇನೆಗಳಲ್ಲಿ ಅದು ಪ್ರಯೋಜನಕಾರಿಯಾಗಿದೆ.

(೪) ಕೆಲಕೆಲವು ಔಷಧಗಳಲ್ಲಿಯೂ ಅದನ್ನು ಉಪಯೋಗಿಸುತ್ತಾರೆ.

ಈಚೆಗೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸ್ಯಾಕ್ರಿನಿನ ಪ್ರಸಾರವು ವಿಪರೀತವಾಗಿ ನಡೆದಿದೆ. ಮಧುಮೇಹದ ರೋಗಿಗಳಿಗೆ ಬೇಕಾಗುವ ಸ್ಯಾಕ್ರಿನಿನ ಎಷ್ಟೋ ಪಟ್ಟು ಹೆಚ್ಚಾಗಿ ಅದರ ಉತ್ಪತ್ತಿಯಾಗುತ್ತಿರಬೇಕು. ಸಿಹಿಗೊಳಿಸುವ ದ್ರವ್ಯವೆಂದು ಅದನ್ನು ಸಿಕ್ಕಸಿಕ್ಕ ಆಹಾರಪದಾರ್ಥದಲ್ಲಿ ಹಾಕತೊಡಗಿರುವರು.

ಅಲ್ಪಪ್ರಮಾಣದ ಮೂಲಕ ಅದನ್ನು ಒಯ್ದಾಡುವುದು ಸಕ್ಕರೆಗಿಂತ ಬಲುಸುಲಭ. ಸಕ್ಕರೆಯ ಮೇಲಿನ ಕರವು ಇದಕ್ಕೆ ಇಲ್ಲ. ಗಿರಾಕಿಗಳ ಆರೋಗ್ಯದ ಪರಿವೆಯಿಲ್ಲದೆ ಹಾಟೆಲಿನ ಮಾಲಿಕರು ಮುಂಬಯಿಯಂತಹ ಪಟ್ಟಣಗಳಲ್ಲಿ ಸಕ್ಕರೆಯ ಬದಲು ಇದನ್ನೆ ಬಳಸುತ್ತಿರುವರು. ಗ್ರಾಹಕರಿಗೆ ಎಚ್ಚರಿಕೆ!

—महाराष्ट्रशारदा

CC-0. Jangamwadi Math Collection. Digitized by eGangotri

ಎಲ್ಲೆಲ್ಲೂ ತಾಂಡವವಾಡುತ್ತಿದ್ದ ಅಲ್ಲೋಲಕಲ್ಲೋಲವು ಇಂದು ವಿಶ್ವಸಂಗ್ರಾಮವಾಗಿ ಹಬ್ಬುವ ಸಂಭವವು ಕಾಣುತ್ತಿದೆ. ಆದರೆ ಇದನ್ನು ತಡೆಯಲು

**ಕಾಡುಜನರ ರಾಷ್ಟ್ರಸಂಘ**

ಅಧಿಕಾರವುಳ್ಳ ಯು ಎನ್ ಓ ದ ರಾಷ್ಟ್ರಸಂಘವು ಕ್ಲೀಬವೃತ್ತಿಯನ್ನವಲಂಬಿಸಿ, ಕೈಲಾಗದಾಗಿ ಕುಳಿತಿದೆ. ಅಮೆರಿಕದ ಕಾಡುಜನರೆನ್ನಿಸುವ ತಾಮ್ರವರ್ಣೀಯರ (ರೆಡ್ ಇಂಡಿಯನ್ನರ) ಪ್ರಾಚೀನ ರಾಷ್ಟ್ರಸಂಘದ ವೃತ್ತಾಂತವನ್ನೊಳಗೊಂಡ ಲೇಖನವನ್ನು ಪ್ರಸಿದ್ಧ ಅಮೆರಿಕನ್ ಇತಿಹಾಸಕಾರರಾದ **ಜೇಮ್ಸ ಟ್ರಸ್ಲೊ ಅಡಾಮ್ಸ** ಎಂಬವರು ಬರೆದಿರುವರು. ಅದರ ಸಾರಾಂಶವನ್ನಿಲ್ಲಿ ಕೊಡಲಾಗಿದೆ.

ರೆಡ್ ಇಂಡಿಯನ್ನರಲ್ಲಿ ಇರೊಕೊಯಿ ( Iroquos ) ಕುಲದ ಪಂಚರಾಷ್ಟ್ರಗಳ ಸಂಯುಕ್ತಸಂಘದ ಕತೆಯಿದು. ಯುರೋಪೀಯರು ಮೊಟ್ಟಮೊದಲು ಅಮೆರಿಕವನ್ನು ಪ್ರವೇಶಿಸಿದಾಗ, ಈಗಿನ ನ್ಯೂಯಾರ್ಕ ಸಂಸ್ಥಾನವಿರುವ ಪ್ರದೇಶವನ್ನು, ಹಡ್ಸನ್ ನದಿಯಿಂದ ಮಹಾಸರೋವರಗಳವರೆಗೂ ಅದು ವ್ಯಾಪಿಸಿತ್ತು. ಬೇಟೆಯೇ ಆ ಕುಲದ ಮುಖ್ಯ ಜೀವನೋಪಾಯವಾಗಿತ್ತು. ಮೃಗಯಾವಸ್ಥೆಯನ್ನು ದಾಟದಿರುವ ಜನಾಂಗಗಳು ಗುಂಪುಗುಂಪಾಗಿ ತಂತಮ್ಮೊಳಗೆ ಕದನವಾಡುವುದೇ ಹೆಚ್ಚು. ಬೇಟೆಗೆ ಹೊಸಹೊಸ ಪ್ರದೇಶಗಳು ಬೇಕೆಂದು, ಒಮ್ಮೊಮ್ಮೆ ಬರಿ ಅಭಿಮಾನಕ್ಕಾಗಿ—ಅಂತೂ ಕಾದಾಡುವುದುಂಟು. ಎಂತಲೇ ಈ ರಾಷ್ಟ್ರಪಂಚಕದಲ್ಲಿ ತಾಳಬಹುದಾದ ಸಂಘಟನೆಯನ್ನುಂಟುಮಾಡಿದುದು ಆಗಿನವರ ರಾಜಕೀಯ ಕಲ್ಪಕತೆಯನ್ನು ತೋರಿಸುತ್ತದೆ.

ಮೊಹಾಕರು, ಒನೀಡರು, ಒನೊಂದಾಗರು, ಸೆನೆಕರು ಮತ್ತು ಕಾಯುಗರು ಎಂದು ಈ ಪಂಚಜನಾಂಗಗಳ ಹೆಸರುಗಳು. ಅವೆಲ್ಲ ಈಗ ನದಿ-ಸರೋವರಗಳ ಹೆಸರುಗಳಾಗಿ ಉಳಿದಿವೆ. ಇವರು ಈ ರಾಜಕೀಯ ಸಂಘಟನೆಯನ್ನು ಪಡೆದುಕೊಳ್ಳಲು ಹಚ್ಚಿದ ಸಂಗತಿ ಯಾವುದೆಂಬುದು, ಅಥೆನ್ಸದ ಗ್ರೀಕರು ಅಷ್ಟು ಸುಸಂಸ್ಕೃತಿಯನ್ನು ಹೇಗೆ ಪಡೆದರೆಂಬುದರಷ್ಟೆ ಊಹಿಸಲು ಕಠಿನವಾಗಿರುವುದು. ಆದರೂ ಅದು ಆಕಸ್ಮಿಕ ಆಪತ್ತಿಯಾಗಿರದೆ, ವಿಚಾರಪೂರ್ವಕವಾಗಿ ಮಾಡಿದ ಏರ್ಪಾಡಾಗಿತ್ತೆಂಬುದು ನಿಜ. ಡಚ್ಚರು ಕ್ರಿ. ಶ. ೧೬೨೪ರಲ್ಲಿ ಬಂದಾಗ ಅದು ಚರಿತ್ರಸಿದ್ಧ ಮಾತಾಗಿತ್ತು. ೧೭೭೬ರಲ್ಲಿ ಅಮೆರಿಕವು ಸ್ವತಂತ್ರವಾಗುವ ಪೂರ್ವದಲ್ಲಿ (ಇದೇ ಕಾಲಕ್ಕೆ ಈ ಜನಾಂಗದವರ ಆಸ್ತಿಪಾಸ್ತಿಯನ್ನು ಕಸಿದುಕೊಳ್ಳಲಾಯಿತು) ಬ್ರಿಟಿಷರು ಇವರೊಡನೆ ಉಳಿದ ಪರರಾಷ್ಟ್ರಗಳಂತೆಯೆ ರಾಜಕೀಯ ಸಂಬಂಧವನ್ನು ಇಟ್ಟುಕೊಂಡಿದ್ದರು.

ಬಿಡುವಿಲ್ಲದೆ ಜಡಿದಾಡುತ್ತಿರುವ ಈ ಪಂಚರಾಷ್ಟ್ರಗಳು ತಂತಮ್ಮೊಳಗೇ ಒಂದು ಸಂಘಟನೆಯನ್ನು ಮಾಡಿಕೊಂಡವಲ್ಲದೆ, ಈಗಿನ ಸಂಯುಕ್ತ ಸಂಸ್ಥಾನಗಳ ೧/೪ ರಷ್ಟು ಭಾಗವನ್ನು ಆಕ್ರಮಿಸಿ, ಬೇರೆ ಗುಂಪುಗಳ ಮೇಲೆಯೂ ಪ್ರಭಾವಯುತವಾಗಿ ಪ್ರಭುತ್ವವನ್ನು ನಡೆಸಿದ್ದವು. ಆಗಿನ ಅಂತರರಾಷ್ಟ್ರೀಯ ಇತಿಹಾಸದ ಮೇಲೆ ಅವು ಕೊನೆಬಾಳುವ ಪರಿಣಾಮವನ್ನು ಮಾಡಿದ್ದವು. ಡಚ್ಚರೂ ಬ್ರಿಟಿಷರೂ ಈ ಪಂಚಕುಲವನ್ನು ಆದರಯುಕ್ತವಾಗಿ ಕಾಣುತ್ತಿದ್ದರು. ಫ್ರೆಂಚರನ್ನು ವಿರೋಧಿಸಿ ತಮ್ಮ ರಾಜಕೀಯ ಮಿತ್ರರನ್ನು ಕಾಯ್ದುಕೊಂಡಿರುವುದು ಈ ರಾಷ್ಟ್ರಸಂಘದ ರಾಜನೀತಿಯಾಗಿತ್ತು.

ತಮ್ಮ ಸಂಘಟನೆಯನ್ನು ಇರೊಕೊಯಿಗಳು 'ಉದ್ದನ್ನ ಮನೆ' ಎಂದು ಕರೆಯುತ್ತಿದ್ದರು. ಹಲವು ಮನೆತನಗಳು ತಮ್ಮ ವ್ಯಕ್ತಿತ್ವವನ್ನು ಕಾಯ್ದುಕೊಂಡಾದರೂ ಒಂದೇ ಮನೆಮಾಡಿ ಬಾಳುವುದರ ಸಂಕೇತವಿದಾಗಿದೆ. ೧೫ರಿಂದ ೭೦ ಸಾವಿರದವರೆಗೂ, ಈ ಪಂಚಕುಟುಂಬಗಳಲ್ಲಿ ಒಂದೊಂದರ ಜನಸಂಖ್ಯೆಯನ್ನು ಲೆಕ್ಕಿಸಲಾಗಿದೆ. ಕೆಲಮಟ್ಟಿಗೆ ಈಗಿನ ಸಂಯುಕ್ತ ಸಂಸ್ಥಾನಗಳ ಘಟನೆಯನ್ನೆ ಅದು ಹೋಲುತ್ತಿತ್ತೆನ್ನಬಹುದು. ಈ ಪಂಚರಾಷ್ಟ್ರಗಳ ಸಾಮಾನ್ಯ ಆಡಳಿತವನ್ನು ೫೦ ಜನ ಹಿರಿಯರು (ಸಾಚೆಮರು) ಸಾಗಿಸುತ್ತಿದ್ದರು. ಇವರಲ್ಲಿ ಇಂತಿಷ್ಟೇ ಎಂದು ಪ್ರತಿರಾಷ್ಟ್ರಕ್ಕೂ ಹಂಚುತ್ತಿದ್ದರು. ವಿಷಮ ಪ್ರಾತಿನಿಧ್ಯವಿದ್ದರೂ 'ಗುಂಪಿನ ಮತದಾನಪದ್ಧತಿ'ಯ ಸಹಾಯದಿಂದ ಪ್ರತಿರಾಷ್ಟ್ರಕ್ಕೂ ಸಮಾನ ಅಧಿಕಾರವು ಸಿಗುವಂತೆ ಮಾಡಲಾಗಿತ್ತು. ಮತಾಧಿಕ್ಯದಿಂದ ನಿರ್ಣಯಗಳನ್ನು ಮಾಡುವ ಈಗಿನ ಪದ್ಧತಿಯ ಬದಲು ಏಕಮತದಿಂದಲೆ ಎಲ್ಲವೂ ತೀರ್ಮಾನವಾಗುತ್ತಿತ್ತು. ಸಾಚೆಮರು (ಕುಲಪತಿಗಳು) ಇಡಿ ರಾಷ್ಟ್ರಸಂಘದ ಪರವಾಗಿ ಪರರಾಷ್ಟ್ರೀಯ ರಾಜನೀತಿಯನ್ನೂ ಯುದ್ಧನೀತಿಯನ್ನೂ ಒಳಆಡಳಿತದ ವಿಚಾರವನ್ನೂ ನಿರ್ಧರಿಸುತ್ತಿದ್ದರು; ಆದರೆ ಒಂದೊಂದು ರಾಷ್ಟ್ರದ ಅಂತರ್ಗತ ವ್ಯವಸ್ಥೆಯಲ್ಲಿ ಅಥವಾ ಒಮ್ಮೆ ಆರಂಭವಾದ ಯುದ್ಧದಲ್ಲಿ ಕೈಹಾಕುತ್ತಿರಲಿಲ್ಲ.

ಈ ಸಂಘಟನೆಯ ಬೇರುಗಳು ಆಳವಾಗಿ ಇಳಿಯಬೇಕೆಂದು ಅವರು ಮಾಡಿದ ಇನ್ನೊಂದು ಹಂಚಿಕೆಯು

CC-0. Jangamwadi Math Collection. Digitized by eGangotri

ವಿಚಾರಾರ್ಹವಾಗಿದೆ. ಈಯೋಜನೆಯಲ್ಲಿ 'ಕುಲ(Tribes)'-ಗಳಿಗೆ ಪ್ರಾಧಾನ್ಯವಿದೆ. ಇಂಥವು ಎಂಟು ಇದ್ದವು. ತೋಳ, ಚಿಗರಿ, ಕರಡಿ, ಆವೆ, ಗಿಡಗ ಮುಂತಾದ ಕುಲಸಂಕೇತಗಳಿಂದಲೆ ಅವನ್ನು ಕರೆಯುತ್ತಿದ್ದರು. ಈ ಕುಲಗಳಲ್ಲಿ ಒಂದೊಂದರಲ್ಲಿ ಯಾರೊಬ್ಬರೂ ಇನ್ನೊಬ್ಬರನ್ನು ಮದುವೆ ಮಾಡಕೂಡದೆಂದಿತ್ತು. 'ಸಗೋತ್ರ'ವೆಂದು ಅವರು ಭಾವಿಸಲ್ಪಡುತ್ತಿದ್ದರು. ಇಷ್ಟೇ ಅಲ್ಲ; ತೋಳ, ಕರಡಿ, ಇತ್ಯಾದಿ ಜಾತಿಗಳು ತಂತಮ್ಮೊಳಗೆ ಮದುವೆ ಮಾಡಕೂಡದೆಂದೂ ಈ ಕುಲದವರು 'ಗಿಡಗ'ವೇ ವೊದಲಾದ ಬೇರೆ ಕುಲದವರೊಡನೆ ಮದುವೆಮಾಡಿಕೊಳ್ಳಬಹುದೆಂದೂ ನಿಯಮವಿದ್ದಿತು. ಈ ಎಂಟು ಕುಲಗಳನ್ನೂ ಸಮಾನವಾಗಿ ೫ ರಾಷ್ಟ್ರಗಳಲ್ಲಿ ಹಂಚಲಾಗಿತ್ತು. ಇದರಿಂದ ಅಂತಃಸಂಗ್ರಾಮವೆಂಬುದೇ ಅಶಕ್ಯವಾಗಿತ್ತು. ೫೦ ಸಾಚೆಮರ ಅಧಿಕಾರವು ವಂಶಪರಂಪರೆಯಾಗಿ ಬರುತ್ತಿತ್ತು. ಆದರೆ ತಂದೆಯಿಂದ ಮಗನಿಗೆ ಇಳಿಯದೆ ಇಡಿಯ ಕುಲದ ಸೊತ್ತಾಗಿರುತ್ತಿದ್ದಿತು. ಆದುದರಿಂದ ಅತ್ಯಂತ ಯೋಗ್ಯವಾದವನನ್ನೆ ಹಕ್ಕುದಾರ ಸಾಚೆಮನಾಗಿ ಆರಿಸುವ ಪದ್ಧತಿಯು ರೂಢವಾಗಿತ್ತು. ಅಂತೆಯೆ ಈಗಿನ ಅಮೇರಿಕದ ಸಂಯುಕ್ತ ಸಂಸ್ಥಾನಗಳ ಒಂದು ಚತುರ್ಥಾಂಶ ಭಾಗದ ಮೇಲೆ ಪ್ರಭುತ್ವ ನಡೆಯಿಸುವುದು ಇವರಿಗೆ ಸಾಧ್ಯವಾಗಿತ್ತು. ಬರಿ ರಾಜಕೀಯ ಮಿತ್ರತ್ವವಲ್ಲ—ಕುಲಗಳ ಸಗೋತ್ರತ್ವ-ಎಂದರೆ ಮಾನವಕುಟುಂಬ ಕಲ್ಪನೆಯು ಈ ಅಸಾಮಾನ್ಯ ಸಂಘಟನೆಯ ಬೆನ್ನೆಲುಬಾಗಿತ್ತೆಂದರೆ ಅತ್ಯುಕ್ತಿಯಾಗದು.

'ಉದ್ದನ್ನ ಮನೆ'ಯವರು ಮಾಡಿದುದನ್ನು ಇಂದಿನವರಾದ ನಮಗೇಕೆ ಮಾಡಲು ಬರಬಾರದು ?

—The Aryan Path

ಇದೇನು ಅಚ್ಚರಿಯೆನ್ನಬಹುದು. ಆದರೆ ಸೂಕ್ಷ್ಮದರ್ಶಕ ಚಿತ್ರಪಟ ( Microfilms ) ಗಳಿಂದ ಇದು ಸಾಧ್ಯವಾಗುತ್ತಿದೆ.

**ಗ್ರಂಥಾಲಯಗಳಿಗೆ ಚಿತ್ರಪಟಗಳ ಸಹಾಯ**

ಜಗತ್ಪ್ರಸಿದ್ಧ ಬ್ರಿಟಿಷ್ ಗ್ರಂಥಾಗಾರ ( British Museum ) ದೊಳಗಿನ ಅಪರೂಪ್ಯ ಗ್ರಂಥಗಳ ಮತ್ತು ಹಸ್ತಪ್ರತಿಗಳ ಪ್ರತಿಮಾಡುವ ಕೆಲಸವನ್ನು ಮೈಕ್ರೊಫಿಲ್ಮುಗಳ ಸಾಧನದಿಂದ ಮಾಡಲಾಗುತ್ತಿದೆ. ಅವನ್ನು ಸಣ್ಣಗೆ ಸುರುಳಿ ಸುತ್ತಿ ಬೇಕಾದಲ್ಲಿ ಕಳಿಸಬಹುದು. ಅವುಗಳ ಛಾಯಾಚಿತ್ರ-(ಫೋಟೊ)ಗಳನ್ನು ತೆಗೆದು ಇಲ್ಲವೆ ಪಟದ ಮೇಲೆ ಪ್ರತಿಬಿಂಬಿಸಿ ಪ್ರದರ್ಶಿಸಲು ಬರುತ್ತಿದೆ. ಹಾಗೆ ಮಾಡಿದುದನ್ನು ಓದಿ ಸುವಾಚ್ಯ ಅಕ್ಷರಗಳಲ್ಲಿ ಪ್ರತಿಮಾಡಲಾಗುತ್ತದೆ.

ಬ್ರಿಟಿಷ್ ಗ್ರಂಥಾಗಾರದಲ್ಲಿಯ ಗ್ರಂಥಸಂಪತ್ತಿಯನ್ನು ಕಣ್ಣುಮುಟ್ಟಿ ಓದಿಕೊಳ್ಳುವುದಾದರೆ, ದೂರದೂರದ ಅಭ್ಯಾಸಕರು ಲಂಡನ್ನಿನ ವರೆಗೆ ಬರಬೇಕಾಗುತ್ತಿತ್ತು. ಈಗ ಅವರು ಮೈಕ್ರೊಫಿಲ್ಮಿನ ಏರ್ಪಾಡಿಗಾಗಿ ಮಾತ್ರ ಹಣ ಕೊಟ್ಟರೆ ಸಾಕು. ಅವರಿಗೆ ಗ್ರಂಥದ 'ನಿಗೇಟಿವ್' ದೊರೆಯುವುದು; ಅದರಿಂದ ಬೇಕಾದಷ್ಟು ಪ್ರತಿಗಳನ್ನು ಮಾಡಲು ಬರುವುದು.

ಇನ್ನು ಮೈಕ್ರೊಫಿಲ್ಮಿನ ಪ್ರಯೋಗಕ್ರಮವನ್ನು ನೋಡುವಾ. ಪ್ರತಿಮಾಡಬೇಕಾಗಿರುವ ಪುಸ್ತಕವನ್ನು 'ಸ್ಟೂಡಿಯೊ'ವಿಗೆ ಒಯ್ದು, ಒಂದು ಗಾಜಿನ ಮೇಜಿನ ಮೇಲೆ ತೆರೆದಿಡುತ್ತಾರೆ. ತೇಜಃಪುಂಜ ಪ್ರಕಾಶಗಳು ಅದರ ಮೇಲೆ ಬೀಳುವಂತೆ ಮಾಡುತ್ತಾರೆ. ಮೇಲಕ್ಕೆ ಒಳ್ಳೆ ದಕ್ಷತೆಯಿಂದ ಸರಿಯಾದ ಕೋನದಲ್ಲಿ ಒಂದು ಫಿಲ್ಮ ಕ್ಯಾಮೆರವನ್ನು ಫೋಕಸ್ಸಿನಲ್ಲಿ ಇರಿಸಲಾಗುತ್ತದೆ. ಕಿತ್ತಳೆ-ಬಣ್ಣದ ವಸ್ತ್ರಗಳಿಂದ ಆಚ್ಛಾದಿತನಾಗಿ, ಕಪ್ಪುಕನ್ನಡಕಗಳನ್ನು ಹಾಕಿಕೊಂಡು, ಚಿತ್ರತೆಗೆಯುವವನು ಛಾಯಾಯಂತ್ರದ ಹತ್ತರ ನಿಂತು, ಪುಟಗಳನ್ನು ಒಂದೊಂದಾಗಿ ತಿರುವುತ್ತ, ಕಾಲಿನಿಂದ ನಡೆಸಲಾಗುವ ಸ್ವಿಚ್ಚಿನ ಮೂಲಕ ಕ್ಯಾಮೆರಾ ನಡೆಸುತ್ತಾನೆ. ಒಂದು ಗಂಟೆಯಲ್ಲಿ ೬ ಅಡಿ ಉದ್ದ ಫಿಲ್ಮಿನಲ್ಲಿ ೨೦೦ ಪುಟಗಳು ತೊಂದರೆಯಿಲ್ಲದೆ ಚಿತ್ರಿತವಾಗುವವು. ಈ ರೀತಿ, ೫" ವ್ಯಾಸದ ಡಬ್ಬಿಯಲ್ಲಿ ೬೪೦೦ ಪುಟಗಳಷ್ಟು ಗ್ರಂಥಭಾಂಡಾರವನ್ನು ಇಡಬಹುದಾಗಿದೆ.

ಈ ಕ್ರಮವಾದರೂ ಬಹಳ ವೆಚ್ಚದ್ದಲ್ಲ. ಒಂದೇ ಆಕಾರದ ಪುಟಗಳಿದ್ದರೆ, ಬ್ರಿಟಿಷ್ ಮ್ಯೂಜಿಯಮ್ಮಿನವರು ೧೦ ಶಿಲಿಂಗುಗಳಿಗೆ ೪೦ ಪುಟಗಳಂತೆ ಚಿತ್ರೀಕರಣವನ್ನು ಮಾಡುವರು. ಫಿಲ್ಮುಗಳ ಉದ್ದಳತೆ ಹೆಚ್ಚಿದ್ದಂತೆ ದರವು ಕಡಿಮೆಯಾಗುವುದು. ೨೦೦ ಪುಟಗಳ ಪುಸ್ತಕಕ್ಕೆ ೩೫ ಶಿಲಿಂಗು ಬೀಳುವುದು. ಪುಟಗಳು ಬೇರೆಬೇರೆ ಅಳತೆಯವಿದ್ದರೆ, ಇಲ್ಲವೆ ಪ್ಯಾಂಕ್ರೊಮ್ಯಾಟಿಕ್ ಫಿಲ್ಮುಗಳನ್ನು ಉಪಯೋಗಿಸಿದರೆ, ಅಥವಾ ಎರಡು ಪುಟಗಳ ಬದಲು ಒಂದೊಂದೇ ಪುಟವನ್ನು ಚಿತ್ರಿಸುವುದಾದರೆ ವೆಚ್ಚವು ಹೆಚ್ಚಾಗುವುದು.

ತಿಂಗಳಿಗೆ ಸರಾಸರಿ ೪೦ ಪುಸ್ತಕಗಳಂತೆ ಬ್ರಿಟಿಷ್ ಮ್ಯುಜಿಯಮ್ಮಿನ ಯಂತ್ರವು ಕೆಲಸಮಾಡುತ್ತಿದೆ. ಅಮೇರಿಕವು ಈಗಾಗಲೆ ಎಷ್ಟೋ ಗ್ರಂಥಗಳ ಪ್ರತಿಗಳನ್ನು ತರಿಸಿಕೊಂಡಿದೆ.

ಮೈಕ್ರೊಫಿಲ್ಮುಗಳ ಮೂಲಕ ಗ್ರಂಥಾಲಯಗಳ ಸ್ಥಳದ ಪ್ರಶ್ನೆಯು ಬಿಡಿಸಲ್ಪಡುವುದೆಂದು ನಿರೀಕ್ಷಿಸಲಾಗಿದೆ.

—Sunday Chronicle

CC-0. Jangamwadi Math Collection. Digitized by eGangotri

# ಕನ್ನಡದ ಮುನ್ನಡೆ

**ಕನ್ನಡಿತಿಯ ವಿದ್ಯಾದರ್ಶ—ಪಾಶ್ಚಾತ್ಯ ಶಿಕ್ಷಣ ಪಾರಂಗತ ಕನ್ನಡ ಯುವಕರು—ಚಿತ್ರದುರ್ಗ- ದಲ್ಲಿ ಮೈಸೂರು ಮಹಾರಾಜರು**

★

### ಕನ್ನಡಿಗರ ಮುಂದಡಿ

ಪುಣೆಯಲ್ಲಿ ಜಿಲ್ಲಾ ನ್ಯಾಯಾಧೀಶರಾಗಿರುವ ಶ್ರೀಮಾನ ಲೋಕೂರ ನಾರಾಯಣರಾಯರ ಸುವಿದ್ಯ ಪುತ್ರಿಯವರಾದ ಸೌ. ವನಮಾಲಾ ಭಾವಳಕರ ಇವರು ಕಲ್ಕತ್ತೆಯ ವಿಶ್ವವಿದ್ಯಾಲಯದ ಎಂ. ಎ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿ ಯಲ್ಲಿ ತೇರ್ಗಡೆಯಾಗಿದ್ದು, ಸುವರ್ಣ ಪದಕವನ್ನು ಪಡೆದಿರುವರು. ಕನ್ನಡ ಮಹಿಳೆಯರು ಇವರ ವಿದ್ಯಾದರ್ಶವನ್ನು ತೀಡಲಿ!



ಸೌ. ವನಮಾಲಾ ಭಾವಳಕರ

ಸಬ್‌ಜಜ್ ಶ್ರೀ. ಚಿನ್ನಮುಳಗುಂದ ಜಯರಾಯರ ಸುಪುತ್ರರಾದ **ಶ್ರೀ. ಚಿನ್ನಮುಳಗುಂದ ಪಾಂಡುರಂಗರಾಯರು** ಈ ಸಲದ ಐ. ಸಿ. ಎಸ್. ಪರೀಕ್ಷೆಯಲ್ಲಿ ಪ್ರಥಮಸ್ಥಾನದಲ್ಲಿ ಪಾಸಾದುದು ಯಾವ ಕನ್ನಡಿಗನಿಗೆ ರೋಮಹರ್ಷವನ್ನುಂಟುಮಾಡಲಿಕ್ಕಿಲ್ಲ?

ವಿಜಾಪುರದ ಸುಪ್ರಸಿದ್ಧ ರಾ. ಬ. ರಾಘವೇಂದ್ರರಾವ ಕೆಂಭಾವಿಯವರ ಐದನೆಯ ಮಕ್ಕಳಾದ **ಶ್ರೀ. ಕೆಂಭಾವಿ ಬಿಂದೂರಾಯರು** ಬ್ಯಾಂಕಿಂಗಿನಲ್ಲಿಯ ಉಚ್ಚಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ತೆರಳಿದರು. ಇವರ ಉದ್ಯೋಗಪ್ರಿಯತೆ ಕುಶಾಗ್ರಬುದ್ಧಿಗಳನ್ನು ಮನಗಂಡು ಇವರ ತಂದೆಯವರು ತಮ್ಮ ದೊಡ್ಡ ದೊಡ್ಡ ಉದ್ಯೋಗಗಳಲ್ಲಿ ತೊಡಗಿಸಿದರು. ಕ್ರಮೇಣ ಇವರು ಏರುತ್ತ ಬ್ಯಾಂಕ ಆಫ್ ಇಂಡಿಯಾ ಪುಣೆ ಶಾಖೆಯ ಮ್ಯಾನೇಜರರಾದರು. ಶ್ರೀಯುತರು ಅಂಕಶಾಸ್ತ್ರ—ಅರ್ಥಶಾಸ್ತ್ರಗಳಲ್ಲಿ ತಜ್ಞರಾಗಿ ಮರಳಲಿ. ಪ್ರಕೃತ 'ಶಿವಾಸ್ತೇ ಸಂತು ಪಂಥಾನಃ' ಎಂದು ಹಾರೈಸುವೆವು.



ಶ್ರೀ. ಕೆಂಭಾವಿ ಬಿಂದೂರಾಯರು

ಬೆಂಗಳೂರಿನ ಟಾಟಾವಿಜ್ಞಾನಶಾಲೆಯ ಭೌತಶಾಸ್ತ್ರದ ಪ್ರೊಫೆಸರರಾದ ರಾಜಸಭಾಭೂಷಣ ಡಾ|| ಸರ್ ಸಿ. ವಿ. ರಾಮನ್ ಅವರು, ಪ್ಯಾರಿಸ್ ನಗರದಲ್ಲಿ ೩ನೆಯ ಸಪ್ಟಂಬರ ತಾ.ನ ದಿನ ನಡೆಯಲಿರುವ ರಸಾಯನ ಮತ್ತು ಭೌತ ಶಾಸ್ತ್ರಗಳ ಸಮ್ಮೇಳನದಲ್ಲಿ ಭಾಗವಹಿಸಲು ಪಯಣ ಬೆಳಸಿದರು.

ಚಿಕ್ಕೋಡಿಯ **ಡಾ. ಚಿಟನೀಸ ಚಿದಂಬರರಾಯರು** ೧೯೨೭ರಲ್ಲಿ ಇಂಗ್ಲಂಡಿಗೆ ಹೋಗಿ, ೧೧ ವರ್ಷ ಅಲ್ಲಿ ವಾಸಿಸಿ, ಉಚ್ಚ ವೈದ್ಯಕೀಯ ಶಿಕ್ಷಣವನ್ನೂ ಅನುಭವವನ್ನೂ ಪಡೆದು ಹಿಂದಿರುಗಿರುವರು. ಲಂಡನ್ ಮತ್ತು ಬರ್ಮಿಂಗ್‌ಹ್ಯಾಂಗಳಲ್ಲಿಯ ಶ್ರೇಷ್ಠ ವೈದ್ಯಕೀಯ ಸಂಸ್ಥೆಗಳಲ್ಲಿ ಶ್ರೇಷ್ಠ ಡಾಕ್ತರರೆಂದು ಕೆಲಸಮಾಡಿದ ಭಾರತೀಯರಲ್ಲಿವರು ಮೂರನೆಯವರಾಗಿರುವರು. ಇವರಿಗೆ ಸುಸ್ವಾಗತವನ್ನು ಕೋರುತ್ತೇವೆ!

CC-0. Jangamwadi Math Collection. Digitized by eGangotri



ಶ್ರೀ. ಶಿವಬಸಪ್ಪ ಬೆಟಗೇರಿಯವರು

ಈಸ್ಟ ಇಂಡಿಯಾ ಕಾಟನ್ ಅಸೋಶಿಯೇಶನ್ನಿಗೆ ಮುಂಬಯಿ ಸರಕಾರದವರು ನಿಯಮಿಸಬೇಕಾದ ೨ ಸ್ಥಲಗಳಲ್ಲಿ ಒಂದಕ್ಕೆ ಧಾರವಾಡದ ಶ್ರೀ. ಶಿವಬಸಪ್ಪ ಬೆಟಗೇರಿಯವರು ನಿಯಮಿಸಲ್ಪಟ್ಟಿದ್ದಾರೆ. ಕರ್ನಾಟಕದ ಅರಳೆಯ ವ್ಯಾಪಾರದ ಅಭಿವೃದ್ಧಿಯು ಇವರಿಂದ ಯಶಸ್ವಿಯಾಗಿ ಜರುಗಲಿ!

## ಚಿತ್ರದುರ್ಗದಲ್ಲಿ ಶ್ರೀಮನ್ಮಹೀಶೂರ ಮಹಾರಾಜರು

ಶ್ರೀಮನ್ಮಹಾರಾಜರು ತಾ. ೧೩ ನೆಯ ದಿನ ಜಿಲ್ಲಾ ಬೋರ್ಡು ಭವನದ ಪ್ರಾರಂಭೋತ್ಸವವನ್ನು ತಮ್ಮ ಶ್ರೀಹಸ್ತದಿಂದ ಜರುಗಿಸಿದರು; ಮತ್ತು ತಮ್ಮ ಭಾಷಣದಲ್ಲಿ ಈರೀತಿ ಅಪ್ಪಣೆಯಿತ್ತರು:—

"ಡಿಸ್ಟ್ರಿಕ್ಟ್ ಬೋರ್ಡಿನವರು ನೆರವೇರಿಸಬೇಕೆಂದಿರುವ ಕಾರ್ಯಗಳು ಪೌರಸಭೆಯವರು ನೆರವೇರಿಸಬೇಕೆಂದಿರುವ ಕಾರ್ಯಗಳಿಗಿಂತಲೂ ಅಗಾಧವಾಗಿವೆ. ಸೇತುವೆಗಳಿಗಾಗಿಯೂ ಮತ್ತು ಸಂಚಾರ ಮಾರ್ಗಗಳಿಗಾಗಿಯೂ ಅವರು ಪಂಚವಾರ್ಷಿಕ ಕಾರ್ಯಕ್ರಮವನ್ನು ಏರ್ಪಡಿಸಿದ್ದಾರೆ. ಅದು ನಮ್ಮ ಸರ್ಕಾರದವರ ಅನುಮೋದನವನ್ನು ಪಡೆದಿದೆ. ಅಲ್ಲದೆ ಅದರ ಪ್ರಾರಂಭ ಮಹೋತ್ಸವವನ್ನು ಸಂತೋಷದಿಂದ ನೆರವೇರಿಸಿ, ದೊಣೇಹಳ್ಳಿಯ ಬಳಿಯಲ್ಲಿ ನಿರ್ಮಿತವಾಗುವ ಸೇತುವಿನ ಅಸ್ತಿಭಾರ ಶಿಲೆಯನ್ನು ನಾವು ನಾಡಿದ್ದು ಪ್ರತಿಷ್ಠಿಸುವೆವು. ಈ ಡಿಸ್ಟ್ರಿಕ್ಟಿನ ೫೩೭ ಗ್ರಾಮಗಳಲ್ಲಿ ಬಾವಿಗಳನ್ನು ತೋಡಿಸಿಕೊಡುವ ಏರ್ಪಾಡಿಗೂ ಅನುಮೋದನವು ಲಭಿಸಿದೆ. ಅವಕ್ಕಾಗಿ ರೈಲ್ವೆ ಸೆಸ್ಸು ನಿಧಿಯ ಮೊಬಲಗಿನಿಂದ ಡಿಸ್ಟ್ರಿಕ್ಟ್ ಬೋರ್ಡಿನವರು ಒಂದು ಲಕ್ಷ ರೂಪಾಯಿಗಳ ಮೊತ್ತವನ್ನು ಸಾಲವಾಗಿ ಪಡೆಯಬಹುದೆಂದು ನಮ್ಮ ಸರ್ಕಾರದವರು ನಿರೂಪವನ್ನು ಹೊರಡಿಸುವುದರಲ್ಲಿದ್ದಾರೆ. ನಾರುಹುಣ್ಣಿನ ರೋಗದ ಹಾವಳಿಯನ್ನಡಗಿಸುವ ಪ್ರಯತ್ನಗಳು ಅನೇಕ ವರ್ಷಗಳಿಂದಲೂ ನಡೆಯುತ್ತಿವೆ. ಅವುಗಳನ್ನು ಮುಂದುವರಿಸಿ ಮತ್ತಷ್ಟು ಸಫಲವಾಗಿ ನೆರವೇರಿಸಲನುಕೂಲಿಸುವಂತೆ ಇನ್ನೂ ೨೦,೦೦೦ ರೂ. ಗಳ ಅಧಿಕ ಮೊತ್ತವನ್ನು ಉಚಿತವಾಗಿ ಕೊಡಲಾಗುವುದೆಂದು ಸಂತೋಷದಿಂದ ಸೂಚಿಸುವೆವು."

ಮಾರನೆಯ ದಿನ ಶ್ರೀ ಮುರಘಾರಾಜೇಂದ್ರ ಸ್ವಾಮಿಗಳ ಬೃಹನ್ಮಠಕ್ಕೆ ಬೆಟ್ಟಿಯಿತ್ತು, ಸ್ವಾಮಿಗಳಿಗೆ ಫಲಪುಷ್ಪ ತಾಂಬೂಲಗಳನ್ನು ಸಮರ್ಪಿಸಿದರು. ೧೫ನೆಯ ತಾ. ದಿನ ದೊಣೇಹಳ್ಳಿಯ ಸೇತುವೆಯ ಶಂಕುಸ್ಥಾಪನೆಯ ಸಮಾರಂಭವನ್ನು ಜರುಗಿಸಿದರು.

## ಧಾ. ಜಿ. ೨ನೆಯ ಸಾಹಿತ್ಯ ಸಮ್ಮೇಲನ

ಗದಗು-ಬೆಟಗೇರಿಯ ಮಹಾನವಮಿ ಉತ್ಸವಮಂಡಲದವರು ನಾಡಹಬ್ಬದಲ್ಲಿ ಅಕ್ಟೋಬರ ೫-೬-೭ರಲ್ಲಿ ಧಾರವಾಡ ಜಿಲ್ಲಾ ದ್ವಿತೀಯ ಸಾಹಿತ್ಯ-ಕವಿ-ನಾಟ್ಯಸಮ್ಮೇಲನಗಳನ್ನು ನೆರವೇರಿಸಲು ಸಂಕಲ್ಪಿಸಿರುವರು. ಮೊದಲನೆಯ ಸಮ್ಮೇಲನವು ಧಾರವಾಡದಲ್ಲಿ ನಾಡಹಬ್ಬದಲ್ಲಿ ಕೂಡಿತ್ತು.



★

ಐ. ಸಿ. ಎಸ್. ಪರೀಕ್ಷೆಯಲ್ಲಿ ಮೊದಲನೆಯ ವರ್ಗದಲ್ಲಿ ಉತ್ತೀರ್ಣರಾದ ಕನ್ನಡಿಗರು.

★

ಶ್ರೀ. ಚಿನ್ನಮುಳುಗುಂದ ಪಾಂಡುರಂಗರಾಯರು

CC-0. Jangamwadi Math Collection. Digitized by eGangotri

### ಕುರುಬರ ಮಹಾಸಭೆ

ಅಕ್ಟೋಬರ ಮಧ್ಯದಲ್ಲಿ ಕರ್ನಾಟಕದ ಕುರುಬರ ಮಹಾ-ಸಭೆಯು ಹೊಸಪೇಟೆಯ ಡಾ. ನಾಗನಗೌಡರ ಅಧ್ಯಕ್ಷತೆ-ಯಲ್ಲಿ ರಾಣೇಬೆನ್ನೂರಿನಲ್ಲಿ ಕೂಡಲಿದೆ. ಉತ್ಸಾಹಯುತ ರಾಷ್ಟ್ರೀಯ ಕಾರ್ಯಕರ್ತರಾದ ಶ್ರೀ. ಕರಿಯಪ್ಪ ಹುಚ್ಚಣ್ಣ-ವರ ಅವರು ಸ್ವಾಗತಾಧ್ಯಕ್ಷರು. ಮುಂಬಯಿಪ್ರಾಂತದ ಡೈರೆಕ್ಟರ ಆಫ್ ಇಂಡಸ್ಟ್ರೀಜ್ ಅವರು ಮಹಾಸಭೆಯ ಕಾಲದಲ್ಲಿ ಕಂಬಳಿಯ ನೇಯ್ಗೆಯ ಸುಧಾರಿಸಿದ ಪದ್ಧತಿ-ಗಳ ಪ್ರಾತ್ಯಕ್ಷಿಕಗಳನ್ನು ತೋರಿಸಲಿದ್ದಾರೆ. ಉತ್ತಮ ಕುರಿಗಳ ಮತ್ತು ಕಂಬಳಿಗಳ ಪ್ರದರ್ಶನವೂ ಆಗಲಿದೆ.

ಕಂಬಳಿಯ ನೇಯ್ಗೆಯು ಕರ್ನಾಟಕದ ಪ್ರಮುಖ ಗ್ರಾಮೋದ್ಯೋಗವಾಗಿದ್ದು, ಭಾರತೀಯ ಕೈಗಾರಿಕೆಗಳಲ್ಲಿ ಶ್ರೇಷ್ಠ ದರ್ಜೆಯನ್ನು ಪಡೆಯಲು ಅರ್ಹವಾಗಿದೆ. ಈ ಉದ್ಯೋಗದ ಅಭಿವೃದ್ಧಿಯ ಮತ್ತು ಕುರುಬರ ಸಾಮಾಜಿಕ ಸಂಘಟನೆಯ ಮಾರ್ಗವನ್ನು ಮಹಾಸಭೆಯು ಹುಡುಕಿ ತೆಗೆಯಲೆಂದು ಕೋರುತ್ತೇವೆ.

### ವಿದ್ಯಾನಂದ ಗುರುಕುಲದ ವಾರ್ಷಿಕೋತ್ಸವ

ಇದು ೧೦-೧೧ ಸಪ್ಟಂಬರ ದಿನಗಳಲ್ಲಿ ಶ್ರೀಮಂತ ರಾಜಾ ಸ್ವಾಮಿರಾವ ದೇಸಾಯಿ ಮೇಣೆಧಾಳ ಅವರ ಘನ ಅಧ್ಯ-ಕ್ಷತೆಯಲ್ಲಿ ಸಾಂಗವಾಗಿ ಜರುಗಿತು. ನೈಜಾಂ ಕರ್ನಾಟಕದ ಈ ರಾಷ್ಟ್ರೀಯ ಕನ್ನಡ ವಿದ್ಯಾಸಂಸ್ಥೆಯು ಉತ್ತರೋತ್ತರ ಅಭಿವೃದ್ಧಿಯನ್ನೈದಲಿ!

### ಸೌ. ನಾಗಮ್ಮಾ ಪಾಟೀಲ

ಮುಂಬಯಿ ಅಸೆಂಬ್ಲಿಯ ಕನ್ನಡ ಸದಸ್ಯೆಯರು



(ಇವರು ತಮ್ಮ ತಿಳಿಗನ್ನಡ ಮಾತುಗಳಿಂದ ಅಸೆಂಬ್ಲಿ ಸದಸ್ಯರಲ್ಲಿ ಕನ್ನಡದ ಬಗ್ಗೆ ಆಸ್ಥೆ-ಆದರಗಳನ್ನು ಹುಟ್ಟಿಸುತ್ತಲಿದ್ದಾರೆ.)

ಗಜಕರ್ಣ, ಹುರುಕು, ತದ್ದು, ನಡ ಮುಂತಾದ ಚರ್ಮರೋಗಗಳಿಂದ
ಪೀಡಿತ ಜನರಿಗೆ ಒಂದೇ ಉಪಾಯವು.
ರಜಿಸ್ಟರ್ಡ್

ಗುಣ ಬರದಿದ್ದರೆ ಹಣ ತಿರುಗಿ ಕೊಡುವೆವು. ಬಾಟಲಿಯ ಬೆಲೆ ೪ ಆಣೆ.

ಸ್ಟಾರ್ ಕಂಪನಿ, ಬೆಳಗಾವಿ

CC-0. Jangamwadi Math Collection. Digitized by eGangotri

# ಸಾಹಿತ್ಯಗೋಷ್ಠಿ

## ರಜಪೂತರ ಚಾರಣಗೀತಗಳು

ಉತ್ತರ ಹಿಂದುಸ್ಥಾನದ ಶ್ರೀ. ದೇವೇಂದ್ರ ಸತ್ಯಾರ್ಥಿಯವರ ಪರಿಚಯವನ್ನು ಹಿಂದೊಮ್ಮೆ ಜ. ಕ. ದ ವಾಚಕರಿಗೆ ಮಾಡಿಕೊಟ್ಟಿದ್ದೇವೆ. ಉತ್ತರದ ವಿವಿಧ ಭಾರತೀಯ ಭಾಷೆಗಳಲ್ಲಿಯ ಜಾನಪದ ಗೀತಗಳನ್ನು ಸಂಗ್ರಹಿಸಿ, ಗ್ರಂಥರೂಪವಾಗಿ ಪ್ರಕಟಿಸುತ್ತಲಿದ್ದಾರೆ. ಭಾರತೀಯ ಜನಪದಸಾಹಿತ್ಯಕ್ಕೆ ಅವರು ಮಾಡಿದ ಸೇವೆಯು ಅಮೌಲ್ಯವಾದುದು ಶ್ರೀಯುತರು P. E. N. ಪತ್ರಿಕೆಯಲ್ಲಿ ಮೇಲಣ ವಿಷಯವನ್ನೆತ್ತಿ ಒಂದು ಲೇಖನವನ್ನು ಬರೆದಿದ್ದಾರೆ. ಅದರ ಸಾರಭಾಗವನ್ನಿಲ್ಲಿ ಕೊಡುತ್ತಿದ್ದೇವೆ.

ರಜಪೂತರ ಚರಿತ್ರೆಯಲ್ಲಿ ವೀರಯೋಧರಿಗೆಷ್ಟು ದೊಡ್ಡ ಸ್ಥಾನವೋ, ಅಲ್ಲಿಯ ಚಾರಣರಿಗೂ ಜನಪದಕವಿಗಳಿಗೂ ಅಷ್ಟೇ ದೊಡ್ಡ ಸ್ಥಾನವಿದ್ದಿತು. ದೇಶದ ತುಂಬೆಲ್ಲ ವೀರರಸ ಪ್ರವಾಹವನ್ನು ಹರಿಬಿಡುವ ಚಾರಣರು—ಭಾಟರೇ ಮೊದಲಾದವರಿಗೆ ರಾಜಾಶ್ರಯವೂ ಲೋಕಾಶ್ರಯವೂ ಅಖಂಡವಾಗಿ ದೊರೆಯುತ್ತಿತ್ತು. ಚಾರಣರ ದೇಹವು ಪವಿತ್ರವೆಂದು ಎಣಿಸಲ್ಪಡುತ್ತಿತ್ತು; ಅವರಿಗೆ ( ಅವರೆಷ್ಟೇ ದೊಡ್ಡ ಅಪರಾಧವನ್ನು ಮಾಡಿರಲಿ) ಮರಣದಂಡನೆಯನ್ನೆಂದೂ ವಿಧಿಸುತ್ತಿರಲಿಲ್ಲ. ರಾಜನನ್ನು ಕೂಡ ಪ್ರತಿಭಟಿಸಲು ಅವರಿಗೆ ಸ್ವಾತಂತ್ರ್ಯವಿದ್ದಿತು. ಸಮಾಜದಲ್ಲಿ ಅವರಿಗೆ ಅಷ್ಟು ಹೆಚ್ಚಿನ ಸ್ಥಾನವಿದ್ದಿತು.

ಚಾರಣರ ಕುಲವು ಕಾಲಗರ್ಭದಲ್ಲಿ ಅಡಗಿ ಹೋಗಿದ್ದರೂ, ಅವರ ವೀರ ರಸವಂತಿಯು ಜನಪದರ ನಾಲಗೆಯ ಮೇಲೆ ನಲಿದಾಡುತ್ತಿದೆ. ಆದರೆ ಈಗಿನ ಹಳ್ಳಿಯ ಹಾಡುಗಳಲ್ಲಿ ಚಾರಣಗೀತಗಳು ಇಷ್ಟು ಬೆರೆತಿವೆಯಲ್ಲ— ಅವುಗಳನ್ನು ವಿಂಗಡಿಸುವುದು ಅತಿ ಕಠಿನವಾಗಿದೆ.

ಮೊಗಲರೊಡನೆ ಶತಮಾನಗಟ್ಟಲೆ ನಡೆದ ಕದನಗಳಲ್ಲಿ ರಜಪೂತ ಮನೋವೃತ್ತಿಯು ಹೊಂದಿದ ಪಲ್ಲಟಗಳೆಲ್ಲ ಅವುಗಳಲ್ಲಿ ಒಡಮೂಡಿವೆ. ವಿಶೇಷತಃ ವೀರಜೀವನದ ವಿವಿಧ ಛಾಯೆಗಳು ಅಲ್ಲಿ ನೋಡಲು ಸಿಕ್ಕುತ್ತವೆ.

ಕೆಲವು ಗೀತಗಳನ್ನಿಲ್ಲಿ ಉದಾಹರಿಸುವೆವು. ಕ್ಷತ್ರಿಯನಿಗೆ ಯುದ್ಧವು ಪ್ರಾಣಕ್ಕಿಂತ ಪ್ರಿಯವೆಂಬ ಆಶಯವು ಈ ನುಡಿಗಳಲ್ಲಿದೆ:—

> ಬಾನಿನ ಮಂಜುವನಿಗಾಗಿ ಚಿಪ್ಪು ಹಾತೊರೆಯುವುದು.
> ಚಕೋರಿ ಪಕ್ಷಿಯು ಮೂಡುವ ನೇಸರಿನ ಬರವನ್ನು ಕಾಯ್ದಿರುವುದು.
> ರಜಪೂತನು ಕಾಳಗವು ಮರಳಿ ಮೊದಲಾಗುವುದನ್ನೆ ನಿರೀಕ್ಷಿಸುವನು.
> ನಲ್ಲೆಯು ಕಡುಬಂಟನನ್ನೆ ಇದಿರ್ಗೊಳ್ಳಲು ಸಜ್ಜಾಗಿರುವಳು.

ರಜಪೂತಸ್ತ್ರೀಯ ಆದರ್ಶವೇನಿತ್ತು ?—

> ವೀರನನ್ನು ಪ್ರಸವಿಸು, ಮಾತೆಯೆ !
> ತನ್ನವನ್ನು ಎಲ್ಲರೊಡನೆ ಉಣ್ಣುವ ತ್ಯಾಗಿಯನ್ನಾದರೂ ಪಡೆ !
> ಹಾಗಿಲ್ಲದೆ, ನಿನ್ನ ಲಾವಣ್ಯವನ್ನೇಕೆ ಕಳೆದುಕೊಳ್ಳುವೆ ?
> ಅದಕಿಂತ ಅಪುತ್ರವತಿಯಾಗಿ ಬಾಳು ತಾಯಿಯೆ !

ಇದೊಂದು ಮಕ್ಕಳಿಗಾಗಿ ಹಾಡುವ ಲಾಲಿ:—

> ಹೆರರ ಕೈಯಲಿ ನಾಡ ಸಿಲುಕಿಸಬೇಡ !
> ಕಳಗುಳದಲಿ ಕಲಿಯಾಗಿ ಕಾದಾಡು !
> ಇಂತು ಪಾಡುವಳು ತಾಯಿ ತೊಟ್ಟಿಲ ತೂಗುತೆ—
> 'ಮಾನ ಮಸುಳದೊಲು ಬದುಕು—ಸಾಯಿ' ಎಂದು.

ರಜಪೂತರಮಣಿ ನಲ್ಲನಿಗಿಂತು ಹೇಳುವಳು:—

> ಇವು ನಿನ್ನ ಸಂಗಾತಿ, ಎಲೆ ಬಂಟ !
> —ಕೆಚ್ಚೆದೆ, ಕೂರಸಿ, ಕಟ್ಟುನಿಟ್ಟಿರದ ಕೈ.
> ಯಾವುದು ನಿನಗೆ ಮೇಲು,
> ಕಾಳಗಕೆ ಹೊರಡಲನುವಾದಾಗ ?

ಪತಿಯನ್ನು ಯುದ್ಧಕ್ಕೆ ಹೊಡಿಸಲನುವಾದಾಗಿನ ಮಾತುಗಳಿವು —

> ಹಯವು ಹೇಂಕರಿಸುತಿದೆ ಬಾಗಿಲ ಬಳಿಯಲಿ.
> ಕರೆಯಬಂದಿಹರು ಕೆಳೆಯರು ಕಳಗುಳಕೆ.
> ಇಕೊ—ವೀರಕಂಕಣ ! ತೊಡು, ನಡೆ ಸಮರಕೆ !
> ಲಾಲಿಪೆಯ ದುಂದುಭಿಧ್ವನಿಯ ?

ಹೇಡಿಯ ಹೆಂಡತಿಯಾಗಿ ಬಾಳುವುದು ರಜಪೂತ ರಮಣಿಗೆ ಬೇಡ !—

> ಹೇಡಿಗಂಡನೊಡನೆ ಬದುಕು —ತೀರಲಾರದ ದುಗುಡ.
> ವೀರಮರಣವ ಪಡೆದ ಪುರುಷನ ಸತಿಗೆ ವೈಧವ್ಯದಲ್ಲಿಯೂ ಮಾಂಗಲ್ಯವಿದೆ !

ಚಂದನವೃಕ್ಷ—ಹಂಸಪಕ್ಷಿಗಳ ಸಂವಾದವಿದು. ರಜಪೂತ ಚಾರಣಸಾಹಿತ್ಯದಲ್ಲಿ ಹಂಸಪಕ್ಷಿಯು ದೇಶಭಕ್ತನ ಸಂಕೇತ:—

CC-0. Jangamwadi Math Collection. Digitized by eGangotri

" ಬೆಂಕಿ ತಗಲಿ ಕಾಡುರಿಯುತಿದೆ, ಕಾಣೆಯ ? "
ಚಂದನದ ಮರ ಒರಲುತಿದೆ.
" ಎಲೆ ಅಂಚೆ! ನನಗೆ ರೆಕ್ಕೆಗಳಿಲ್ಲ ಪಕ್ಕನೆ ಹಾರಿಹೋಗಲು;
ನನ್ನೊಡನೆ ನೀನೇಕೆ ಸುಟ್ಟುಹೋಗಲು ತವಕಿಸುವೆ? "
ಹಂಸವು ಮರುಮಾತಾಡುತ್ತದೆ:—
" ನಿನ್ನ ಎಲೆಗಳೊಡನೆ ಆಡಿಹೆನು; ನಿನ್ನ ಸಂಗಾತಿ ನಾನು.
ನಿನ್ನ ಕಷ್ಟದಲಿ ಸಿನ್ನನಗಲಬಲ್ಲೆನೆ?
ಈಗ ಉಳಿದರೂ, ನಿನ್ನ ಹೊರತು ಎಷ್ಟು ದಿನ
ಬಾಳಬಲ್ಲೆ ಈ ಜಗತ್ತಿನಲ್ಲಿ? "

ರಜಪೂತ ವೀರರಲ್ಲಿ ರಾಣಾಪ್ರತಾಪನು ಪುಣ್ಯಶ್ಲೋಕನು; ಪರಮಮಾನ್ಯನು. ಪ್ರತಿಚಾರಣನೂ ಹಾಡುವ ಹಾಡಿದು:—

ಚಪಲಾಗ್ರೇಸರ ರಾಣಾ ಪ್ರತಾಪ !
ಅಕಬರನ ಚತುರಂಗಬಲದ ನಾಗಾಲೋಟಕ್ಕೂ ಸಿಲುಕ-
ಲರಿಯನು.
ಬೆಟ್ಟ-ಬೆಟ್ಟದಲಿ ಕಡುಗಲಿಯಾಗಿ ಕಾದಾಡುವನು.
ಹೆಜ್ಜೆ-ಹೆಜ್ಜೆಯಲಿ ಅಕಬರನ ಹೆಮ್ಮೆಯ ಮೂದಲಿಸು-
ವನು.
ಮಲ್ಲಿಗೆಯೊಲು ಧವಲ ಪ್ರತಾಪನ ಬೀರಸಿರಿ;
ಅಕಬರ-ಮಧುಪವು ಮುಟ್ಟಲೂ ಅರಿಯದು.
ಭಾರತದ ದುರ್ಜಯ ರಾಜರುಗಳೆಲ್ಲ
ಮಾನವನು ಮಾರಿಕೊಂಡಿಹರು;
ಕಂದ, ಹಾಗಲ್ಲ ರಾಣಾ ಪ್ರತಾಪ !
ತಾಯಿಯ ಬಿಟ್ಟಗಲದಂತೆ, ನಾಡನು ಬಿಟ್ಟಗಲ !

ನಾಡಿನ ಬಂಟರನ್ನು ಮರೆಯುವುದೆಂತು ?—
ತಾಯಿತಂದೆಗಳ ಮರೆಯಲು ಬಹುದು.
ನಲ್ಗೆಳೆಯರನೂ ಮರೆಯಲು ಬಹುದು.
ವೀರರ ನೆನಪನು ಚಿರ ಸ್ಮರಿಸುವೆವು.
ಚಾರಣರವರನು ಕೀರ್ತಿಪರು !

ಆ ಬೀರಸಿರಿ ಬರಿದಾಗಿದೆ; ಅದರೊಡನೆ ಆ ನಾಡಿನ ಹಾಡುಗಳ ಝುರಿಯೂ ಹರಿಗಡಿದಿದೆ. ಚಾರಣರ ಆ ಹಿಂದಿನ ಹೆಚ್ಚಳವು ಮಾಯವಾಗಿದೆ. ಈ ನುಗುಡನನ್ನು ಹೇಳುವ ಹಾಡೊಂದಿದು:—

ಎಲೈ ಚಾರಣನೆ! ಇನ್ನು ಒಕ್ಕಲುಮಗನಾಗು.
ನೇಗಿಲ ಗೆಳೆಯನಾಗು.
ಸುಡು ನಿನ್ನಾ ಹಾಡುಗಳನು !
ಹೂಳಿಬಿಡು ಆಳಿಯ ಹುಡಿಯಲ್ಲಿ !

## ೭೦ ವರ್ಷಗಳ ಅನುಭವೋಕ್ತಿ

ಶ್ರೀಮಾನ್ ಎನ್. ಕೆ. ನಟರಾಜನ್ ಅವರು 'ದಿ ಇಂಡಿಯನ್ ಸೋಶಲ್ ರಿಫಾರ್ಮರ್' ಪತ್ರಿಕೆಯನ್ನು ಕಳೆದ ೪೦ ವರ್ಷಗಳಿಂದ ಯಶಸ್ವಿಯಾಗಿ, ಗೌರವಯುತವಾಗಿ ನಡೆಯಿಸುತ್ತ ಬಂದಿರುವರು. ಸ್ವತಂತ್ರ ವಿಚಾರ, ಉದಾರ ಸಾಮಾಜಿಕ ಧೋರಣೆ, ಅನುಭವಸಂಪನ್ನ ವಿಚಾರಸರಣಿಗಳಿಗಾಗಿ ಅವರ ಪತ್ರಿಕೆಯು ಹಿಂದುಸ್ಥಾನದ ಪತ್ರಿಕಾ ಪ್ರಪಂಚದಲ್ಲಿ ವಿಶಿಷ್ಟ ಮಾನ್ಯತೆಯನ್ನು ಪಡೆದಿದೆ. ಶ್ರೀಯುತರಿಗಿದೀಗ ೭೦ರ ವಯಸ್ಸು. ಅವರು ತಮ್ಮ ದೀರ್ಘಾಯುಷ್ಯದ ಸಿಂಹಾವಲೋಕನವನ್ನು ಮಾಡಿ, ಕೆಲ ನಿಶ್ಚಿತ ವಿಚಾರಗಳನ್ನು ಪ್ರಕಟಪಡಿಸಿರುವರು. 'ಧರ್ಮ'ದ ಬಗ್ಗೆ ಅವರು ಹೀಗೆ ಹೇಳುವರು:—

'ಧರ್ಮ'ದ ವಿರುದ್ಧ ಎಷ್ಟೇ ಪ್ರತಿಕ್ರಿಯೆಯಾಗಿರಲಿ, ಮಾನವಜಾತಿಯ ಚಿತ್ತದ ಮೇಲೆ ಅದು ಸ್ಥಿರಾಸನವನ್ನು ಹೂಡಿರುತ್ತದೆಂಬುದು ಖಂಡಿತ....ಮನುಷ್ಯನ ಅಂತಃಕರಣದಲ್ಲಿ ಧರ್ಮಬುದ್ಧಿಯು ಉದಯಿಸಿದೊಡನೆ ಪಾಪದ ಪ್ರವೃತ್ತಿಯು, ದುಷ್ಕರ್ಮದ ಇಚ್ಛೆಯು ತಾನೆ ಅಡಗುವುದು....

ಬಾಯ್ಬಲಿಗಿಂತಲೂ ಗೀತೆಯಲ್ಲಿಯ ವಾತಾವರಣವು ನನ್ನ ಮನಸ್ಸಿಗೆ ಹತ್ತಿರದ್ದಾಗಿದೆ. ಬಾಯ್ಬಲಿನಲ್ಲಿಯ ಎಲ್ಲ ತತ್ತ್ವಗಳನ್ನೂ ಗೀತೆಯು ಒಳಗೊಂಡಿದೆಯಲ್ಲದೆ, ಅದರಲ್ಲಿ 'ಹತ್ತು ಅಂಗುಲಿ' ಹೆಚ್ಚಿನ ಜ್ಞಾನವಿದೆ. ಜೀವನು ಏಕೆ, ಹೇಗೆ ಬಂದನು? ಅವನ ಗತಿಯೇನು ?— ಎಂಬ ಪ್ರಶ್ನೆಗಳ ಅಂಚನ್ನೂ ಯೇಸುವು ಮುಟ್ಟಲಿಲ್ಲ. ಗೀತೆಯು 'ಕಸ್ತ್ವಂ, ಕುತ ಆಯಾತಃ' ಮುಂತಾದ ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರಗಳನ್ನು ಕೊಟ್ಟಿದೆಯೆಂದು ನನಗನಿಸುತ್ತದೆ. ಯೇಸುವು ಒಮ್ಮೊಮ್ಮೆ ಧೃತಿಗೆಟ್ಟು ಕ್ರೋಧ ಪರವಶನಾಗುತ್ತಿದ್ದನು. ರಾಗದ್ವೇಷವಿಯುಕ್ತನಾಗುವುದು ಗೀತೆಯ ಆದ್ಯತತ್ತ್ವವು. ಮೋಕ್ಷದ ಅಧಿಕಾರವು ಸ್ತ್ರೀ-ಪುರುಷಾದಿ ಸರ್ವರಿಗೂ ಇದ್ದು, ಅದು ಕರ್ಮಕಾಂಡದ ಬದಲು ಶುದ್ಧಾಂತಃಕರಣದಿಂದ ಅರ್ಪಿಸಲಾಗುವ ಪತ್ರ ಪುಷ್ಪ ಫಲ ತೋಯಗಳಿಂದ ಪ್ರಾಪ್ತವಾಗುವುದೆಂಬುದು ಗೀತೆಯ ಬೋಧನೆಯು. ಕಮಂಡಲುವನ್ನು ಕೈಯಲ್ಲಿ ಹಿಡಿದ ಮಾತ್ರಕ್ಕೆ ಮಹಂತನಾಗಲಿ, ಕಾಷಾಯವಸ್ತ್ರವನ್ನು ಧರಿಸಿದ ಮಾತ್ರಕ್ಕೆ ಸನ್ಯಾಸಿಯಾಗಲಿ ಯಾರೂ ಆಗಲಾರರು. ನಿಷ್ಕಾಮ ಕರ್ಮಯೋಗವೆ ಮಾನವನ ಮತ್ತು ಈಶ್ವರನ ಅಂತಿಮಪೂಜೆಯೆಂಬುದು ಗೀತೆಯ ರಹಸ್ಯವು.'

೭೦ ವರ್ಷದ ಸ್ಥಿತಪ್ರಜ್ಞನ ವಚನಗಳಿವು. ಈಗಿನ ವಿಚಾರಸಂಕರದ ಯುಗದಲ್ಲಿ ಇವುಗಳಿಗೆ ತುಂಬ ಬೆಲೆಯಿದೆ.

CC-0. Jangamwadi Math Collection. Digitized by eGangotri



## ಕರ್ನಾಟಕ

### ನಮ್ಮವರೇ ನಮಗೆ ಪ್ರತಿಕೂಲರು

ಕರ್ನಾಟಕ ಏಕೀಕರಣ ಆಂದೋಲನದ ಪ್ರಶ್ನೆಯು ಕಳೆದ ತಿಂಗಳಲ್ಲಿ ಕೆಲ ಘಟನೆಗಳ ಮೂಲಕ ಪ್ರಾಧಾನ್ಯವನ್ನು ಪಡೆಯಿತು. ಏಕೀಕರಣಸಂಘದ ಕಾರ್ಯಾಧ್ಯಕ್ಷರಾದ ಶ್ರೀ. ದಾತಾರ ಬಳವಂತರಾಯರು ಧಾರವಾಡದ ಕನ್ನಡಿಗರ ಸಂಘದ ವಾರ್ಷಿಕೋತ್ಸವದ ಅಧ್ಯಕ್ಷರಾಗಿ ಬಂದಾಗ, ಪ್ರಕಟ - ಅಪ್ರಕಟರೀತಿಯಲ್ಲಿ ಏಕೀಕರಣದ ಪ್ರಶ್ನೆಯು ಚೆನ್ನಾಗಿ ಚರ್ಚಿಸಲ್ಪಟ್ಟು, ಏಕೀಕರಣದ ಹಾದಿಯಲ್ಲಿದ್ದ ತೊಡಕುತಡೆಗಳ ಸರಿಯಾದ ಕಲ್ಪನೆಯು ಮೂಡಿತೆನ್ನಬಹುದು. 'ನಮ್ಮವರೇ ನಮಗೆ ವಿರೋಧಕರಾಗಿದ್ದಾರೆ'ಂದು ಆಗ ಕೇಳಿಬಂದ ಧ್ವನಿಯ ಸತ್ಯತೆಯು ಕೆಲದಿನಗಳ ತರುವಾಯ ಅಸೆಂಬ್ಲಿಯ ಕನ್ನಡ ಸದಸ್ಯರು ನಡೆಯಿಸಿದ ಏಕೀಕರಣದ ಚರ್ಚೆಯಲ್ಲಿ ಸುತರಾಂ ವ್ಯಕ್ತವಾಯಿತು.

ವಿಜಾಪುರದ ಶ್ರೀ. ಪಾಟೀಲ ಶಂಕರಗೌಡರು ಏಕೀಕರಣದ ಶಿಫಾರಸುಮಾಡುವ ಗೊತ್ತುವಳಿ ತಂದುದನ್ನು ಯೋಚಿಸುವುದಕ್ಕಾಗಿಯೇ ಈ ಚರ್ಚೆಯನ್ನು ಏರ್ಪಡಿಸಲಾಗಿತ್ತು. ಇದರಿಂದ ಹೊರಬಿದ್ದ ಅಂಶವೇನೆಂದರೆ, ಅಸೆಂಬ್ಲಿಯಲ್ಲಿ ಅಧಿಕಾರಾರೂಢರಾಗಿರುವ ಕಾಂಗ್ರೆಸ್ಸಿನ ಕನ್ನಡಿಗರೇ ಏಕೀಕರಣದ ವಿಷಯದಲ್ಲಿ ಅಷ್ಟು ಉತ್ಸಾಹಯುತರಾಗಿರುವಂತೆ ತೋರುವುದಿಲ್ಲ. ೧. ಕರ್ನಾಟಕದ ಕೆಲವು ಭಾಗಗಳಲ್ಲಿಯ ಜನತೆಯ ಉತ್ಕಂಠೆಯು ತೀರ ತೀವ್ರಸ್ವರೂಪದ್ದಾಗಿದೆ. ೨. ಮಿಕ್ಕಪ್ರಾಂತಗಳ (ವಿಶೇಷತಃ ಮಹಾರಾಷ್ಟ್ರದ) ಸಹಾನುಭೂತಿಯು ಬೇಕು. ೩. ಸಶಾಸ್ತ್ರ ಅಭ್ಯಾಸ ಬೇಕು; Materials (ಸಾಧನಸಾಮುಗ್ರಿ) ಸಾಕಷ್ಟು ಬೇಕು. ೪. ಪಕ್ಷದ ಪ್ರಶ್ನೆಯಾಗಲು ಇನ್ನೂ ಸಮಯ ಬೇಕು. ೫. ವರ್ಕಿಂಗ್ ಕಮಿಟಿಯಿಂದ ಬರೆದುಬರಬೇಕು. ೬. ಏಕೀಕರಣಕ್ಕೆ ಕೊಡಗು-ನೀಲಗಿರಿಯವರ ಒಪ್ಪಿಗೆಯಿಲ್ಲ. ೭. ನಿರ್ಣಯವು ಅಂಗೀಕೃತವಾಗುವ ಸಂಭವವಿರದ್ದರಿಂದ ಅದನ್ನು ತಿರುಗಿ ತೆಗೆದುಕೊಳ್ಳಬೇಕು. ೮. ಏಕೀಕರಣದ ಕಮಿಟಿಯನ್ನು ನಿಯಮಿಸುವುದರಿಂದ 'ಶಿಸ್ತಿನ ಭಂಗ' ವಾದೀತು. ಪ್ರಾಂತವಿಶಿಷ್ಟ ಅಥವಾ ಜಾತಿವಿಶಿಷ್ಟ ಗುಂಪುಗಳನ್ನು ಮಾಡಬಾರದೆಂದು ಕಾಂಗ್ರೆಸ್ ಪಕ್ಷದ ಕಟ್ಟಳೆಯಿದೆ....ಎಂದು ಮುಂತಾಗಿ ಅವರ ಆಕ್ಷೇಪಗಳನ್ನು ವಿವರಿಸಬಹುದು. ಅಲ್ಲಿಂದಲ್ಲಿಯೇ ವಿಜಾಪುರದ ಶ್ರೀ. ಶಂಕರಗೌಡ ಪಾಟೀಲರೂ ಧಾರವಾಡದ ಶ್ರೀ. ಜೋಗ ವಿಶ್ವನಾಥರಾಯರೂ ಅವರ ಭ್ರಮನಿರಸನೆಯನ್ನು ಮಾಡಿದರು. 'ಇಂತಹದೊಂದು ಪಕ್ಷದ ಪ್ರಶ್ನೆಯಲ್ಲವೆಂದು ಧುರೀಣರು ನಿಷೇಧಾತ್ಮಕ ಆಜ್ಞೆಯನ್ನು ಹೊರಡಿಸದಿರುವ ವರೆಗೆ ಕಾಂಗ್ರೆಸ್‌ಪಕ್ಷದವರೆಲ್ಲರೂ ಅದನ್ನು 'ಪಾರ್ಟಿಪ್ರಶ್ನೆ' ಯೆಂದೇ ಭಾವಿಸಬೇಕೆಂದು ನಿಯಮವಿರುವುದಿಲ್ಲ....ಆಯಾ ವಿಷಯಗಳ ಅಭ್ಯಾಸಮಾಡಲು ಕಮಿಟಿ ನಿಯಮಿಸಿಕೊಂಡರೆ ಕಾಂಗ್ರೆಸ್‌ಪಕ್ಷವು ಆತಂಕಮಾಡಲಾರದು. ಅಸೆಂಬ್ಲಿಯಲ್ಲಿ ಆಯಾ ವಿಷಯಗಳ ಬಗ್ಗೆ ಮತಕೊಡುವಾಗ ಮಾತ್ರ ನಾವು ಜಾತಿವಿಶಿಷ್ಟ ಅಥವಾ ಪ್ರಾಂತವಿಶಿಷ್ಟ ಗುಂಪುಗಳನ್ನು ಮಾಡಿಕೊಳ್ಳಬಾರದೆಂಬುದೇ ಕಾಂಗ್ರೆಸಿನ ಶಿಸ್ತಿನ ಅರ್ಥ.' ಎಂದು ಶ್ರೀ. ಜೋಗರಾಯರು ಅನುಭವದ ಅಧಿಕಾರದಿಂದ ಹೇಳಿದುದರಿಂದ ಆಕ್ಷೇಪಕರ ಶಂಕಾನಿವೃತ್ತಿಯು ಪೂರ್ತಿಯಾಗಿ ಆಗಿರಲು ಸಾಕೆಂದು ಸದ್ಯಕ್ಕಾದರೂ ತಿಳಿಯಲಡ್ಡಿಯಿಲ್ಲ. ಕೊನೆಗೆ ಕಮಿಟಿಯ ಬದಲು ಶ್ರೀ. ಜೋಗರವರೇ ಎಲ್ಲ ಅಂಕೆಗಳನ್ನು ಸಂಗ್ರಹಿಸಿ, ಮುಂದಿನ ಅಧಿವೇಶನಕ್ಕೆ ನಿರ್ಣಯಗಳನ್ನು ಕಳಿಸುವುದಕ್ಕೆ ಒಂದು ತಿಂಗಳು ಮುಂಚಿತ ವರದಿಯನ್ನೊಪ್ಪಿಸಬೇಕೆಂದು ತೀರ್ಮಾನವಾಯಿತು.

### ಮತ್ತು ಹೆರವರು ನಮ್ಮ ಆಪ್ತಮಿತ್ರರು !

ಕಳೆದ ತಿಂಗಳಲ್ಲಿ ಏಕೀಕರಣ ಪ್ರಶ್ನೆಗೆ ತೀವ್ರತೆಯನ್ನು ಕೊಟ್ಟುದರಲ್ಲಿ 'ಸಂಯುಕ್ತ ಕರ್ನಾಟಕ'ದ ವಿಶೇಷ ಸುದ್ದಿಗಾರರೂ ಏಕೀಕರಣ ಸಂಘದ ಕಾರ್ಯದರ್ಶಿಗಳೂ ಆದ ಶ್ರೀ. ಚಿಕ್ಕೋಡಿ ಅನಂತರಾಯರು ಮಾಡಿದ ಕಾರ್ಯವು ಉಲ್ಲೇಖನೀಯವಾದುದು. ಚರ್ಚಾಸಭೆಯ ಪ್ರಮುಖರು

CC-0. Jangamwadi Math Collection. Digitized by eGangotri

‘ಮರಾಟರು ಏಕೀಕರಣದ ಬಗ್ಗೆ ಪೂರ್ವಗ್ರಹದೂಷಿತರಾಗಿದ್ದಾರೆ’ಂದು ಹೇಳಿದ್ದರು. ಮಹಾರಾಷ್ಟ್ರದ ಮುಖಂಡರು ತಾವಿತ್ತ ಸಂದರ್ಶನಗಳಲ್ಲಿ ಹೇಳಿದ ಮಾತುಗಳು ಈ ಅಭಿಪ್ರಾಯವನ್ನು ಅಲ್ಲಗಳೆಯುತ್ತವೆ. ಅಸೆಂಬ್ಲಿಯೊಳಗಿನ ಲೋಕಶಾಹಿ ಪಕ್ಷದ ಪ್ರಭಾವಯುತ ಮುಖಂಡರಾದ ಶ್ರೀ. ಜಮುನಾದಾಸ ಮೆಹತಾ ಅವರು, ಕರ್ನಾಟಕದ ದೈನ್ಯಾವಸ್ಥೆಯು ವಂಗಭಂಗಕ್ಕಿಂತಲೂ ಕರುಣಾಜನಕವಾಗಿದೆಯೆಂದೂ, ಏಕೀಕರಣಕ್ಕಾಗಿ ತಮ್ಮ ವರ್ಚಸ್ಸನ್ನೆಲ್ಲ ಉಪಯೋಗಿಸಲು ಸಿದ್ಧರಿರುವುದಾಗಿಯೂ ಹೇಳಿದರು. ಶ್ರೀ. ನರಸಿಂಹ ಚಿಂತಾಮಣಿ ಕೇಳಕರ ಅವರು ಒಂದು ವಿಸ್ತೃತ ಹೇಳಿಕೆಯನ್ನು ಹೊರಡಿಸಿ, ಸ್ವತಂತ್ರ ವಿಶ್ವವಿದ್ಯಾಲಯಗಳನ್ನು ಕುರಿತಾದ ಕನ್ನಡಿಗರ ಆಕಾಂಕ್ಷೆಗಳ ಬಗ್ಗೆ ಜವಾಬ್ದಾರ ಮಹಾರಾಷ್ಟ್ರೀಯರು ಸಂಪೂರ್ಣ ಸಹಾನುಭೂತಿಯುಳ್ಳವರಾಗಿರುವರೆಂದು ವಿಶದಪಡಿಸಿರುವರು. ಪುನರ್ನಿರ್ಮಿತ ಮಹಾರಾಷ್ಟ್ರ-ಕರ್ನಾಟಕಗಳಲ್ಲಿಯ ಅಲ್ಪಸಂಖ್ಯಾಕರ ಪ್ರಶ್ನೆಯನ್ನು ರಾಷ್ಟ್ರಸಂಘದವರ ಸರ್ವಮಾನ್ಯ ಯೋಜನೆಯ ಮೇರೆಗೆ ಬಿಡಿಸಬೇಕೆಂದೂ ಕನ್ನಡಿಗರು ಮತ್ತು ಮರಾಟರು ತಂತಮ್ಮೊಳಗಿನ ಸಂಶಯಭಾವವನ್ನು ಬಿಟ್ಟುಕೊಟ್ಟು ಪರಸ್ಪರರ ಹಕ್ಕು-ಬಾಧ್ಯತೆಗಳನ್ನು ಆದರಿಸಬೇಕೆಂದೂ ಅವರು ಹೇಳಿದರು. ಉತ್ತರ ಕರ್ನಾಟಕದ ಮರಾಟ ಸಂಸ್ಥಾನಿಕರು ತಮ್ಮ ಕನ್ನಡ ಪ್ರಜೆಗಳ ಬಗ್ಗೆ ಮಾಡಬೇಕಾದ ಕರ್ತವ್ಯವನ್ನು ಕುರಿತು ಶ್ರೀ. ಕೇಳಕರ ಅವರು ಹೇಳಿದುದನ್ನು ವಿಸ್ತೃತವಾಗಿ ಕೊಡದಿರಲಾರೆವು:—



ಶ್ರೀ. ಮೆಹತಾ



ಶ್ರೀ. ಕೇಳಕರ

“ ಕನ್ನಡ ಜನತೆಯ ಬಹುಮತವಿದ್ದ ಭಾಗಗಳನ್ನಾಳುತ್ತಿದ್ದ ಮಹಾರಾಷ್ಟ್ರೀಯ ಸಂಸ್ಥಾನಿಕರು ತಮ್ಮ ಸಂಸ್ಥಾನಗಳಲ್ಲಿ ಕನ್ನಡ ಗಂಡು-ಹೆಣ್ಣುಮಕ್ಕಳ ಶಾಲೆಗಳನ್ನು ಸ್ಥಾಪಿಸಿಲ್ಲ; ಹಾಗೂ ಆಡಳಿತದಲ್ಲಿ ಕನ್ನಡ ಭಾಷೆಯನ್ನುಪಯೋಗಿಸುವ ಸೌಕರ್ಯವನ್ನೊದಗಿಸಿರುವುದಿಲ್ಲ.... ಇಂಥ ಸಂಸ್ಥಾನಗಳ ಮೇಲೆ ರಾಜ್ಯವಾಳುವ ಅಧಿಕಾರ ದೊರೆತದ್ದು ತಮ್ಮ ಸುದೈವವೆಂದೇ ಅವರು ತಿಳಿಯಬೇಕು. ಈ ಕನ್ನಡ ಪ್ರಜೆಗಳ ಮೇಲೆ ತಮ್ಮ ಮಹಾರಾಷ್ಟ್ರ ಭಾಷೆಯ ಮತ್ತು ಸಂಸ್ಕೃತಿಯ ವರ್ಚಸ್ಸನ್ನು ಹಾಕಲು ತಮಗಿದ್ದ ರಾಜಕೀಯ ಅಧಿಕಾರವನ್ನು ಉಪಯೋಗಿಸುವುದು ಅನ್ಯಾಯವು.... ಸಂಸ್ಥಾನದ ಉತ್ಪನ್ನದ ಬಹುಭಾಗವು ಈ ಕನ್ನಡ ಪ್ರಜೆಗಳಿಂದಲೇ ಬರುತ್ತದೆಂಬುದನ್ನು ಸಂಸ್ಥಾನಾಧೀಶ್ವರರು ಮರೆಯಕೂಡದು. ಅಂತೆಯೇ ಆ ಪ್ರಮಾಣದಲ್ಲಿ ತಮ್ಮ ಹಾಗೂ ತಮ್ಮ ಮಕ್ಕಳುಮರಿಗಳ ಶಿಕ್ಷಣ ಸಂಸ್ಕೃತಿಗಳ ಬೆಳವಣಿಗೆಗಾಗಿ ಹಣ ವೆಚ್ಚಮಾಡಬೇಕೆಂದು ಪ್ರಜೆಗಳು ಬೇಡುವುದು ಅವರ ಹಕ್ಕಾಗಿರುವುದು. ”

ಇಂತಹ ಹೊಣೆಗಾರಿಕೆಯ ಹೇಳಿಕೆಗಳು ಆಗಾಗ ಪ್ರಕಟವಾಗಬೇಕು. ಅದರಿಂದ ಪ್ರಾಂತ-ಪ್ರಾಂತಗಳಲ್ಲಿಯ ವೈಷಮ್ಯವು ಕಡಿಮೆಯಾಗಲು ತುಂಬ ನೆರವಾಗುವುದು.

## ಬೇರೆ ಕೆಲ ಅಭಿಪ್ರಾಯ—ಆಶೀರ್ವಾದಗಳು

ಸಂ. ಕ. ಪ್ರತಿನಿಧಿಗಳು ಡಾ. ಅಂಬೇಡಕರ ಅವರನ್ನೂ ಮುಖ್ಯ-ಮಂತ್ರಿಗಳಾದ ಶ್ರೀ. ಖೇರ ಅವರನ್ನೂ ಸಂದರ್ಶಿಸಿದರು. ಡಾಕ್ತರರ ಅಭಿಪ್ರಾಯದಲ್ಲಿ, ಮದ್ರಾಸಾಧಿಪತ್ಯದ ಕನ್ನಡ ಜಿಲ್ಲೆಗಳನ್ನು ಮುಂಬಯಿಗೆ ಕೂಡಿಸುವ ಯೋಜನೆಯು ಯೋಗ್ಯವಾಗಿದೆ; ನೋಕರಿಗಳನ್ನು ಹಂಚುವಾಗ ಕರ್ನಾಟಕಸ್ಥರಿಗೆ ತಕ್ಕ ಪ್ರಾತಿನಿಧ್ಯವನ್ನು ಕೊಡಬೇಕು; ಮಂತ್ರಿಮಂಡಲದಲ್ಲಿಯೂ ತಕ್ಕ ಪ್ರಾತಿನಿಧ್ಯವನ್ನು ಕೊಡಬಹುದು; ಇದಕ್ಕಿಂತ ಮುಂದೆ ಹೋಗುವುದು ಸಾಧ್ಯವಿಲ್ಲ. ಕನ್ನಡ ಜಿಲ್ಲೆಗಳು ಬೇರೆಯಾಗುವುದರಿಂದ ಮುಂಬಯಿ ಪ್ರಾಂತದ ಆರ್ಥಿಕ ಔನ್ನತ್ಯವು ಕೆಳಗಾದೀತಲ್ಲ—ಎಂಬ ಸಂದೇಹವು ಡಾಕ್ತರರ ತಲೆ ಕೆಡಿಸಿರಬೇಕು.

ಏಕೀಕರಣವನ್ನು ತತ್ವತಃ ವಿರೋಧಿಸುವುದು ಶಕ್ಯವೇ ಇಲ್ಲವಾದರೂ ಹೆಚ್ಚು ವಿಚಾರಣೆ ನಡೆಸುವುದು ಮತ್ತು ಸಾಮುಗ್ರಿಯನ್ನು ಕಲೆಹಾಕುವುದು ಅಗತ್ಯವೆಂದೂ ಸದ್ಯಕ್ಕೆ ತಾವೇನೂ ಮಾಡಲಾರರೆಂದೂ ಮುಖ್ಯಮಂತ್ರಿಗಳು ಭರವಸೆಯಿತ್ತರು.

CC-0. Jangamwadi Math Collection. Digitized by eGangotri

ಕರ್ನಾಟಕ ಪ್ರಾಂತಿಕ ಕಾಂ. ಕ. ಕಾರ್ಯದರ್ಶಿಗಳಿಗೆ ವರ್ಕಿಂಗ ಕಮಿಟಿಯ ಕಾರ್ಯದರ್ಶಿಗಳು ಬರೆದ ಪತ್ರದಲ್ಲಿ, ಏಕೀಕರಣದ ಬಗ್ಗೆ ಸಹಾನುಭೂತಿಯನ್ನು ಪ್ರದರ್ಶಿಸಿ, ಸದ್ಯದಲ್ಲಿಯೆ ಪ್ರಾಂತಗಳ ಪುನರ್ಘಟನೆಯನ್ನು



ಮಂತ್ರಿವರ್ಯ ಖೇರರು

ಕೈಕೊಳ್ಳುವುದರ ಯುಕ್ತಾಯುಕ್ತತೆಯನ್ನು ಶಂಕಿಸಿದ್ದಾರೆ. ಆದರೂ ಬರುವ ವರ್ಕಿಂಗ ಕಮಿಟಿಯ ಸಭೆಯ ಮುಂದೆ ಈ ಪ್ರಶ್ನೆಯನ್ನಿರಿಸಲಾಗುವುದೆಂದು ತಿಳಿಸಿದ್ದಾರೆ.

## ಗಾಂಧಿಯವರ ಸ್ಪಷ್ಟಾಜ್ಞೆ

ಜವಾಬ್ದಾರ ಅಧಿಕಾರಿಗಳು ಸಹಾನುಭೂತಿಯ ಒಣ ಮಾತುಗಳನ್ನೇ ಉಚ್ಚರಿಸುವುದರಲ್ಲಿ ಹೊತ್ತು ಕಳೆಯುತ್ತಿರುವಾಗ, ಇಂದಿನ ರಾಜಕೀಯ ನಾಟಕದ ತೆರೆಮರೆಯ ಸೂತ್ರಧಾರರಾದ ಮಹಾತ್ಮ ಗಾಂಧಿಯವರ ಸಂದೇಶವು,—ಅಲ್ಲ ಆದೇಶವು, ಕನ್ನಡಿಗರನ್ನು ಪ್ರೋತ್ಸಾಹಿಸುವುದರಲ್ಲಿ ಸಂದೇಹವಿಲ್ಲ. 'ಕರ್ನಾಟಕ ಪ್ರಾಂತನಿರ್ಮಾಣದ ಗೊತ್ತುವಳಿಯನ್ನು ಯಾರೇ ತಂದರೂ ಅದನ್ನು ಕಾಂಗ್ರೆಸ್ ಮಂತ್ರಿ ಮಂಡಲವು ಸ್ವಾಗತಿಸಬೇಕು. ಅದನ್ನು ಈಗಲೆ ಕಾರ್ಯ ರೂಪದಲ್ಲಿ ತರುವುದಕ್ಕೆ ಅಡ್ಡಲಾದ ತೊಂದರೆಗಳನ್ನು ಜಾಹೀರುಪಡಿಸಬೇಕು. ಈ ಬಗ್ಗೆ ತಮ್ಮ ಧೋರಣೆಯನ್ನೂ ಕೈಕೊಳ್ಳಬಹುದಾದ ಉಪಾಯಗಳನ್ನೂ ಪ್ರಕಟಪಡಿಸಬೇಕು. ಎಲ್ಲವನ್ನೂ ಸ್ಪಷ್ಟಗೊಳಿಸಿ ವಿರುದ್ಧಪಕ್ಷದ (ವಿರೋಧಕರ?) ವಿರೋಧವನ್ನು ತಡೆಗಟ್ಟಬೇಕು.' ಎಂಬುದು ಅವರ ಬರೆವಣಿಗೆಯ ಅಭಿಪ್ರಾಯವಾಗಿದೆ. ೨ ಕನ್ನಡ ದಿನ ಪತ್ರಿಕೆಗಳಲ್ಲಿಯೂ ಮರಾಟಿ ಪತ್ರಿಕೆಗಳಲ್ಲಿಯೂ ಬಂದ ಅಂಶಗಳನ್ನು ತುಲನೆಮಾಡಿ ಮೇಲಣ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ. ಮೂರು-ನಾಲ್ಕು ಕಡೆ ಬಂಡ ಸುದ್ದಿಗಳಲ್ಲಿಯೂ ಸ್ವಲ್ಪ ಹೆಚ್ಚುಕಡಿಮೆಯಿದೆ.

ಗಾಂಧೀಜಿಯವರ ಸ್ಪಷ್ಟಾಜ್ಞೆಯಾದರೂ ನಮ್ಮ ಆಕಾಂಕ್ಷೆಯನ್ನು ಪೂರ್ತಿಯಾಗಿ ಸಫಲಗೊಳಿಸುತ್ತಿಲ್ಲ. ಆದರೆ 'ಹಾರಿಸಿಬಿಡುವ ಧೋರಣೆಯು'ನ್ನು ಸ್ವೀಕರಿಸದೆ, ಅಧಿಕಾರಾರೂಢ ಪಕ್ಷವು ಏಕೀಕರಣ ಪ್ರಶ್ನೆಯನ್ನು ಮುಚ್ಚುಮರೆಯಿಲ್ಲದೆ ಎದುರಿಸಿ, ಜನತೆಯನ್ನು ತನ್ನ ಆಪ್ತಾಲೋಚನೆಯಲ್ಲಿ ಭಾಗಿಯಾಗುವಂತೆ ಮಾಡಬೇಕೆಂದು ಅದು ಮಂತ್ರಿಮಂಡಲವನ್ನು ಒತ್ತಾಯಪಡಿಸುತ್ತದೆ. ಅಸೆಂಬ್ಲಿಯು ಮುಂದಿನ ಸಲ ಸೇರಿದಾಗ ಈ ಪ್ರಶ್ನೆಗೆ ತಕ್ಕ ಪ್ರಾಶಸ್ತ್ಯ ಸಿಕ್ಕೀತೆಂದು ತಿಳಿಯಲು ಅಡ್ಡಿತೋರುವುದಿಲ್ಲ.

## ಆಶ್ವಾಸನ-ಆಶಿರ್ವಾದಗಳು ಸಾಲವು

ಇದು ಮೇಲಣ ವಿವೇಚನೆಯಿಂದ ಸ್ಪಷ್ಟವಾಗುವುದು. ಅಧಿಕಾರಪಕ್ಷವು ಕನ್ನಡಿಗರ ಬೇಡಿಕೆಯನ್ನು ಪೂರೈಸುವಂತೆ ಮಾಡುವುದು ನಮ್ಮ ಕೈಯಲ್ಲಿಯೆ ಇದೆ. ಏಕೀಕರಣ—ಏಕೀಕರಣ ಎಂದು ಕರ್ನಾಟಕವು ಏಕಕಂಠದಿಂದ ಕೂಗಿಹೇಳಬೇಕು. ನಮ್ಮ ಆಂದೋಲನವು ಅಷ್ಟು ಉಗ್ರವಾಗಬೇಕು. ನಮ್ಮೊಳಗಿನ ಜವಾಬ್ದಾರ (?) ಮುಖಂಡರ ಸಂದೇಹವೃತ್ತಿಯು ಹಾರಿಹೋಗುವಂತೆ, ನಮ್ಮೊಳಗಿನ ಮತಮತಾಂತರಗಳ ಬಿರುಕುಗಳಿಗೆ ಗಚ್ಚುಗಾರೆಯೊರಸಿ ಏಕೀಕರಣದ ಸಂಘಟನೆಯು ಅಜಯ್ಯವಾಗುವಂತೆ ಮಾಡಬೇಕು. ಮುಖ್ಯವಾಗಿ, ಏಕೀಕರಣದ 'ತಾತ್ಪೂರ್ತಿಕ ಯೋಜನೆ'ಯ ಚರ್ಚೆಯನ್ನು ಮುಗಿಸಿಬಿಡುವುದೊಳ್ಳೆಯದು. 'ಬೇಡುವುದನ್ನು ಇಡಿಯಾಗಿ ಬೇಡೋಣ; ಇಷ್ಟು ಕೊಟ್ಟರೆ ಇನ್ನಿಷ್ಟು ಬೇಡೋಣ'—ಎಂಬುದೆ ನಮ್ಮ ಕಾದಾಟದ ಸೂತ್ರವಾಗಿರಲಿ. ಈ ಎಲ್ಲ ವಿಚಾರಗಳನ್ನು ಆಮೂಲಾಗ್ರವಾಗಿ ಚರ್ಚಿಸಲು ಏಕೀಕರಣ ಪರಿಷತ್ತಿನ ವಿಶೇಶ ಅಧಿವೇಶನವನ್ನು ಕರೆಯುವ ಆಲೋಚನೆಯನ್ನು ನಾವು ಸ್ವಾಗತಿಸುತ್ತೇವೆ.

CC-0. Jangamwadi Math Collection. Digitized by eGangotri

## ಮದ್ರಾಸದಲ್ಲಿಯೂ ಅದೇ ರಗಳೆ

ಆಂಧ್ರಪ್ರಾಂತವನ್ನು ಬೇರ್ಪಡಿಸಬೇಕೆಂದು ಹೇಳಿದ ಆಂಧ್ರರಿಗೆ ಪ್ರತ್ಯುತ್ತರ ಕೊಡುತ್ತಾ, ಮಾನ್ಯ **ಸಾಂಬಮೂರ್ತಿಗಳು** ಒಮ್ಮೆ ಹೀಗೆಂದರು:—"ಇಂದಿನ ರಾಜ್ಯಸೂತ್ರಗಳು ಪ್ರಾಂತವಿಭಜನೆಗೆ ಅವಕಾಶ ಕೊಡುವ ಹಾಗಿಲ್ಲ. ಸಂಯುಕ್ತ ರಾಜಮಂಡಲಿಯ ನ್ಯಾಯವಿಧಾಯಕ ಸಭೆಯು ಅಸ್ತಿತ್ವಕ್ಕೆ ಬರುವ ಮುಂಚೆ, ಪ್ರಾಂತ ವಿಭಜನದ ಅವಶ್ಯತೆಯನ್ನು ಕುರಿತು ಪ್ರಾಂತೀಯ ನ್ಯಾಯವಿಧಾಯಕ ಸಭೆಗಳೆಷ್ಟು ಆಗ್ರಹಪಟ್ಟರೂ ಕೆಲಸವು ಕೈಗೂಡುವ ಹಾಗಿಲ್ಲ. ಆದುದರಿಂದ, ಅದನ್ನು ಸದ್ಯಕ್ಕೆ ಮುಂದುವರಿಸಿಬಿಡಬಹುದು". ಕೆಲ ಸಮಯದ ಹಿಂದೆ, ಮದ್ರಾಸಿನ ಮಿತ್ರಮಂಡಲಿಯವರ ಸಂಭಾವನಾ ಸಮಾರಂಭದಲ್ಲಿ ನಮ್ಮ ಜಿಲ್ಲೆಯ ಅಚ್ಚುಕನ್ನಡಿಗರಾದ ಶ್ರೀ॥ **ಕೆ. ಆರ್. ಕಾರಂತರು** ಕರ್ನಾಟಕ ಪ್ರಾಂತರಚನೆಯ ಆಲೋಚನೆಯನ್ನು ಸದ್ಯಕ್ಕೆ ಮುಂದುವರಿಸಿಬಿಡಬಹುದೆಂದೂ, ಪ್ರಾಪಂಚಿಕ ರಾಜಕೀಯ ಪರಿಸ್ಥಿತಿಯನ್ನು ಪರಿಶೀಲಿಸಿದಲ್ಲಿ ಇನ್ನು ಐದು ಅಥವಾ ಹತ್ತು ವರ್ಷಗಳೊಳಗೆ ಭಾರತವರ್ಷಕ್ಕೆ ಸ್ವರಾಜ್ಯಪ್ರಾಪ್ತಿಯಾಗಬಹುದೆಂದೂ, ಆಗ ಪ್ರಾಂತವಿಭಾಗಗಳು ಸ್ವಾಭಾವಿಕವಾಗಿ ಆದಾವೆಂದೂ, ತತ್ಪೂರ್ವದಲ್ಲಿ ವಿಭಜನಕ್ಕಾಗಿ ಪೇಚಾಡಿದಲ್ಲಿ ಅನಿಶ್ಚಿತವಾದ ತೊಂದರೆಗಳಿಗೆ ಕಾರಣವಾದೀತೆಂದೂ ಹೇಳಿದರು. ಆಂಧ್ರಪ್ರಾಂತದ ವಿಖ್ಯಾತ ಮುಖಂಡರಾದ ಶ್ರೀ॥ **ಪಟ್ಟಾಭಿ ಸೀತಾರಾಮಯ್ಯನವರು** ಭಿನ್ನಾಭಿಪ್ರಾಯವನ್ನು ಪ್ರಕಟೀಕರಿಸಿದ್ದಾರೆ. ಇಂದಿನ ರಾಜಸೂತ್ರಗಳ ವಿಧಿಯಂತಾದರೂ ಪ್ರಾಂತವಿಭಜನೆಗೆ ಅಡ್ಡಿಯೇನೂ ಇಲ್ಲ. ಸಂಯುಕ್ತ ರಾಜ್ಯಮಂಡಲಿಯ ನ್ಯಾಯಸಭೆಯು ಅಭಾವದಲ್ಲಿ ಈಗಿನ ಕೇಂದ್ರ ನ್ಯಾಯಸಭೆಯು ಆ ಕೆಲಸವನ್ನು ಮಾಡಲು ಅಧಿಕಾರ ಹೊಂದಿದೆ. ಆದುದರಿಂದ ರಾಜ್ಯಸೂತ್ರಗಳ ವಿಘ್ನವೇನೂ ಇಲ್ಲ. ಆಂಧ್ರರು ವಿಶಿಷ್ಟವಾದ ಪ್ರಾಂತನಿರ್ಮಾಣಕ್ಕೆ ಪ್ರಚಂಡವಾಗಿ ಚಳವಳ ಮಾಡಬೇಕು—ಎಂಬುದು ಅವರ ಬೋಧನೆ.

—ರಾಷ್ಟ್ರಬಂಧು

## ಕರ್ನಾಟಕಪ್ರಾಂತವು ಸ್ವಯಂಪೂರ್ಣವಾಗಬಲ್ಲುದು

ಸಂಯುಕ್ತ ಕರ್ನಾಟಕವು ಏಕೀಕೃತ ಕರ್ನಾಟಕದಲ್ಲಿ ಸಮಾವೇಶವಾಗಬಹುದಾದ ಜಿಲ್ಲೆಗಳ ಆಯವ್ಯಯ ವಿವರಗಳನ್ನು ಪ್ರಕಟಿಸಿ (ತಾ ೧೫-೯-೩೮), ದೊಡ್ಡ ಉಪಕಾರ ಮಾಡಿದೆ. ಅವುಗಳಲ್ಲಿ ಅನಂತಪುರ, ಸೇಲಂ, ಕೊಯಿಮತ್ತೂರು, ಸೊಲ್ಲಾಪುರ ಜಿಲ್ಲೆಗಳ ಕನ್ನಡಭಾಗಗಳ ಅಂಕೆಗಳು ಬಂದಿರದಿದ್ದರೂ, ಇದ್ದ ಸಾಮುಗ್ರಿಯಿಂದಲೇ ಕರ್ನಾಟಕ ಪ್ರಾಂತವು ಉಳಿತಾಯದ್ದಾಗುವುದೆಂಬುದು ಸ್ಪಷ್ಟವಾಗುತ್ತಿದೆ.

**೧೯೩೩—೧೯೩೪ ಸಾಲಿನ ಅಂಕೆಗಳು (ಅಧಿಕೃತ)**

| ಜಿಲ್ಲೆಯ ಹೆಸರು | ಮಧ್ಯವರ್ತಿ ಫಂಡಿನಿಂದ ಬರತಕ್ಕ ಆಯ | ಪ್ರಾಂತಿಕಸರಕಾರದಿಂದ ಬರತಕ್ಕ ಆಯ | ಒಟ್ಟು ಆಯ | ಮಧ್ಯವರ್ತೀಬಾಬುಗಳ ಮೇಲಿನ ವೆಚ್ಚ | ಪ್ರಾಂತಿಕ ಬಾಬುಗಳ ಮೇಲಿನ ವೆಚ್ಚ | ಒಟ್ಟು ವ್ಯಯ |
|---|---|---|---|---|---|---|
| ಬೆಳಗಾಂವಿ | ೧,೪೦,೦೦೦ | ೩೯,೧೦,೦೦೦ | ೪೦,೫೦,೦೦೦ | ದೊರೆಯುವುದಿಲ್ಲ | ದೊರೆಯುವುದಿಲ್ಲ | ೩೬,೦೦,೦೦೦ |
| ವಿಜಾಪೂರ | ೧,೫೦,೦೦೦ | ೨೭,೦೦,೦೦೦ | ೨೮,೫೦,೦೦೦ | ,, | ,, | ೨೦,೯೦,೦೦೦ |
| ಧಾರವಾಡ | ೨,೨೦,೦೦೦ | ೪೯,೮೦,೦೦೦ | ೫೨,೦೦,೦೦೦ | ,, | ,, | ೩೯,೬೦,೦೦೦ |
| ಕಾರವಾರ | ೪೦,೦೦೦ | ೧೭,೪೦,೦೦೦ | ೧೮,೮೦,೦೦೦ | ,, | ,, | ೧೮,೧೦,೦೦೦ |
| ಮಂಗಳೂರು | ೧,೫೯,೮೨೭ | ೪೮,೯೦,೩೪೧ | ೫೧,೫೦,೧೬೮ | ೭೪,೧೨೫ | ೨೯,೩೯,೩೫೧ | ೩೦,೧೩,೪೭೬ |
| ಬಳ್ಳಾರಿ | ೧,೯೭,೧೨೬ | ೩೮,೪೮,೬೯೩ | ೪೦,೪೫,೮೧೯ | ೯೧,೫೦೦ | ೩೧,೬೯,೫೩೮ | ೩೨,೬೧,೦೩೮ |
| ಕೊಡಗು | ದೊರೆಯುವುದಿಲ್ಲ | ದೊರೆಯುವುದಿಲ್ಲ | ೧೨,೯೨,೦೦೦ | ದೊರೆಯುವುದಿಲ್ಲ | ದೊರೆಯುವುದಿಲ್ಲ | ೧೩,೫೧,೦೦೦ |
| ನೀಲಗಿರಿ | ೨,೮೫,೮೬೯ | ೧೧,೩೭,೫೦೭ | ೧೪,೨೩,೩೯೬ | ೨,೩೬,೨೧೮ | ೧೬,೪೮,೬೩೫ | ೧೮,೮೪,೮೫೩ |
| | | | ೨,೫೭,೯೧,೩೮೩ | | | ೨,೦೯,೭೦,೩೬೭ |

ವೆಚ್ಚಕ್ಕಿಂತ ಉತ್ಪನ್ನ ಹೆಚ್ಚು ೪೮,೨೧,೧೦೬

CC-0. Jangamwadi Math Collection. Digitized by eGangotri

ಅದೇ ಪತ್ರಿಕೆಯು ಇನ್ನೊಂದೆಡೆಗೆ (ತಾ. ೧೬-೯-೩೭) ಸಂಗ್ರಹಿಸಿದ ಅಂಕೆಗಳಿಂದ, ಸಂಖ್ಯಾಬಲ ದೃಷ್ಟಿಯಿಂದ ಅಕ್ಕಲಕೋಟೆ, ಜಮುಖಂಡಿ, ಮುಧೋಳ, ರಾಮದುರ್ಗ, ವಾಡಿ ಜಹಾಗಿರ, ಸವಣೂರ ಸಂಸ್ಥಾನಗಳು ಅಚ್ಚಕನ್ನಡ-ವೆಂದು ಎಣಿಸಲ್ಪಡಲು ಅಡ್ಡಿಯಿಲ್ಲ. ಕುರುಂದವಾಡ (ಸೀನಿಯರ), ಕುರುಂದವಾಡ (ಜೂನಿಯರ), ಸಾಂಗಲಿ, ಜತ ಸಂಸ್ಥಾನಗಳಲ್ಲಿ ಕನ್ನಡಿಗರು ಒಟ್ಟು ಜನಸಂಖ್ಯೆಯಲ್ಲಿ ೧/೩ ಕ್ಕಿಂತ ಹೆಚ್ಚು ಇದ್ದಾರೆ. ಕೊಲ್ಲಾಪುರದ ಸುಮಾರು ೧೦ ಲಕ್ಷ ಜನಸಂಖ್ಯೆಯಲ್ಲಿ ಸುಮಾರು ೧॥ ಲಕ್ಷ ಜನರು ಕನ್ನಡಿಗರಿದ್ದಾರೆ. ಮಿರಜದಲ್ಲಿ ೧/೪ ಜನರು ಕನ್ನಡಿಗರಿದ್ದಾರೆ. ಅವರ ಸಂಖ್ಯಾಮಾನದಿಂದ ಅವರಿಗೆ ದೊರೆತ ಸೌಲಭ್ಯಗಳು ಇಲ್ಲವೇ ಇಲ್ಲವೆಂದರೂ ಸಲ್ಲುವುದು. ಪ್ರಜಾಪ್ರಭುತ್ವದ ಚಳವಳಿಯು ಸಂಸ್ಥಾನಗಳಲ್ಲಿಯೂ ನುಗ್ಗುತ್ತದೆ. ಸಂಸ್ಥಾನಿಕರು ಸಕಾಲದಲ್ಲಿ ಎಚ್ಚರಿಯಲಿ. ಕನ್ನಡಪ್ರಜೆಗಳೂ ಈಗಿನಿಂದಲೆ ತಮ್ಮ ಹಕ್ಕುಗಳಿಗಾಗಿ ಹೋರಾಡಲಿ.

### ಕರ್ನಾಟಕದಿನ

ನಾಡಹಬ್ಬವು ಸಮಾಪಿಸುತ್ತಲಿದೆ. ಅದರ ಅಂಗವಾಗಿ ಕರ್ನಾಟಕದಿನವನ್ನು ಆಚರಿಸಬೇಕೆಂದು ಧಾರವಾಡದ ಮಹಾನವಮಿ ಉತ್ಸವಮಂಡಲದವರು ತೀರ್ಮಾನಿಸಿ, ಹಾಗೆ ಪ್ರಕಟಿಸಿದ್ದರು. ಇದೀಗ ಕರ್ನಾಟಕದ ಏಕೀಕರಣ ಸಂಘದವರು ಆಶ್ವಿನ ಶು. ಷಷ್ಠಿಯನ್ನು (ಅಕ್ಟೋಬರ ತಾ. ೧೦—ರವಿವಾರವನ್ನು) ಏಕೀಕರಣದಿನವನ್ನಾಗಿ ಆಚರಿಸಬೇಕೆಂದು ಕೇಳಿಕೊಂಡಿದ್ದಾರೆ. ಅದನ್ನೆ ಕರ್ನಾಟಕದಿನವನ್ನಾಗಿ ಜರುಗಿಸುವುದು ಸಾಧ್ಯವಿದೆ. ಆದಿನ ಕರ್ನಾಟಕದ ವಿವಿಧ ಸಮಸ್ಯೆಗಳನ್ನು—ಎಂದರೆ, ಭಾಷಾ-ಪ್ರಶ್ನೆ, ಗಡಿನಾಡಿನ ಪ್ರಶ್ನೆ, ಅಲ್ಪಸಂಖ್ಯಾಕರ ಪ್ರಶ್ನೆ, ಏಕೀಕರಣ ಪ್ರಶ್ನೆ, ವಿಶ್ವವಿದ್ಯಾಲಯ ಪ್ರಶ್ನೆ, ಸಾಮಾಜಿಕ ಪ್ರಶ್ನೆ, ಆರ್ಥಿಕ ಪ್ರಶ್ನೆ, ಸಂಸ್ಕೃತಿಪ್ರಸಾರ ಪ್ರಶ್ನೆ ಮೊದಲಾದುವುಗಳನ್ನು ಸಾಧ್ಯವಿದ್ದಷ್ಟು ಸಾಧನಸಾಮುಗ್ರಿಸಹಿತವಾಗಿ (ತಂತಮ್ಮ ಅನುಕೂಲತೆಯಂತೆ) ಚರ್ಚಿಸುವಂತೆ ಪ್ರತಿ ಉತ್ಸವಮಂಡಲವೂ ಪ್ರಯತ್ನಿಸಬೇಕು.

### ಹೊಸ ವಿದ್ಯಾಸಂಸ್ಥೆಗಳು ಬೇಕು

ಹುಬ್ಬಳ್ಳಿಯ ಕೋ-ಆಪರೇಟಿವ್ ಆಸ್ಪತ್ರಿಯವರು ಒಂದು ವೈದ್ಯಕೀಯ ಶಾಲೆಯನ್ನು ಸ್ಥಾಪಿಸುವ ವಿಚಾರವನ್ನು ಮಾಡಬೇಕೆಂದೂ ಧಾರವಾಡದ ಬಾರ್ ಅಸೋಸಿಯೇಶನ್ನಿನವರು ಒಂದು ಕಾಲೇಜನ್ನು ಸ್ಥಾಪಿಸುವುದರ ವಿಚಾರವನ್ನು ಮಾಡಬೇಕೆಂದೂ ಕ. ಏ. ಸಂಘದ ಕಾರ್ಯಾಧ್ಯಕ್ಷರಾದ ಶ್ರೀ: ದಾತಾರ ಬಳವಂತರಾಯರು ಮಾಡಿದ ಮನವಿಯನ್ನು ನಾವು ಹೃತ್ಪೂರ್ವಕವಾಗಿ ಅನುಮೋದಿಸುತ್ತೇವೆ. ಕರ್ನಾಟಕ ವಿಶ್ವವಿದ್ಯಾಲಯವು ರೂಪುಗೊಳ್ಳಬೇಕಾದರೆ, ಇಂತಹ ಸಂಸ್ಥೆಗಳು ಉದಯಿಸಿ, ಊರ್ಜಿತಸ್ಥಿತಿಗೆ ಬಂದಿರಬೇಕಾಗುವುದು.

### ಮಾದರಿ ಮೈಸೂರಿಗಿದು ಉಚಿತವೇ ?

'ಮಾದರಿ ಮೈಸೂರು' ಎಂದಾಗ ಮೈಸೂರಿನವರಲ್ಲದ ಕನ್ನಡಿಗರಿಗೂ ಅದೆಷ್ಟು ಹೆಮ್ಮೆ-ಹುಮುಸ್ಸು! ಮೈಸೂರಿನ ಔದ್ಯೋಗಿಕ ಪ್ರಗತಿ, ವಿದ್ಯುಚ್ಛಕ್ತಿ ಪ್ರಸಾರ, ಸಾರ್ವಜನಿಕ ಸ್ವಚ್ಛತೆ, ನಗರಸೌಂದರ್ಯ ಮೊದಲಾದುವುಗಳನ್ನು ಬ್ರಿಟಿಷರೂ ಬಾಯಿತುಂಬ ಹೊಗಳುತ್ತಾರೆ! ಇದು ಯಾರನ್ನು ಸಂತೋಷಗೊಳಿಸದು?

ಅಂತಹ ಮೈಸೂರಿನಲ್ಲಿ ಈ ಕೋಲಾಹಲವೇಕೆಂಬುದೇ ಎಲ್ಲರ ಬಾಯಲ್ಲಿಯ ಪ್ರಶ್ನೆಯಾಗಿದೆ. ಖಾಸಗಿ ಕೆಲಸಗಳಿಗಾಗಿಯೂ ಸಂಸ್ಥಾನದ ಹದ್ದಿನಲ್ಲಿ ಕಾಲಿಡುವ ಶ್ರೀಮತಿ ಕಮಲಾದೇವಿ, ಶ್ರೀಮತಿ ಉಮಾಬಾಯಿ ಕುಂದಾಪುರ, ಶ್ರೀಯುತರಾದ ಮಸಾನಿ, ಹರ್ಡಿಕರ ಇತ್ಯಾದಿ ಪ್ರಭೃತಿಗಳಿಗೆ ಬಾಯ್ಬೀಗ ಹಾಕುವುದೇಕೆ? ಪೋಲೀಸ್ ರೆಗ್ಯುಲೇಶನ್ ನಂ. ೩೯, ೪೫ರ ಅರ್ಥವೇನು? ಸಭಾಸ್ವಾತಂತ್ರ್ಯ, ಭಾಷಣಸ್ವಾತಂತ್ರ್ಯ, ಪತ್ರಿಕಾಸ್ವಾತಂತ್ರ್ಯಗಳಿಲ್ಲದಿರುವುದೆಂದರೇನು?

ಮೈಸೂರಿನಲ್ಲಿ ಸೌಲಭ್ಯಗಳಿವೆ, ಸ್ವಾತಂತ್ರ್ಯವಿಲ್ಲ. ಸುರಾಜ್ಯವಿದೆ, ಸ್ವರಾಜ್ಯವಿಲ್ಲ. ಸುಖಸೌಕರ್ಯಗಳ ರಾತ್ರಿಯ ವಿದ್ಯುತ್ಪ್ರಕಾಶದಲ್ಲಿಯಲ್ಲ, ವಿಮುಕ್ತ ವಿಹಾರವನ್ನೊದಗಿಸುವ ಸಮೃದ್ಧ ಸ್ವಾತಂತ್ರ್ಯದ ಸೂರ್ಯಪ್ರಕಾಶದಲ್ಲಿ ಜನಾಂಗದ ಸರ್ವತೋಮುಖ ಪ್ರಗತಿಯಾಗುವುದು. ಅದೆಲ್ಲಿದೆ? ಹೆಜ್ಜೆಹೆಜ್ಜೆಗೂ ಆತಂಕಗಳು! 'ತಾಯಿನಾಡು' ಹೇಳುವಂತೆ, "ನಮ್ಮ ಸರಕಾರದವರು ಜನಗಳನ್ನು ಗಿಣಿಯನ್ನು ಪಂಜರದಲ್ಲಿಟ್ಟು ಸಾಕುವಂತೆ ಸಾಕುತ್ತೇವೆನ್ನುತ್ತಾರೆ. ಆದರೆ ಜನಗಳು 'ನಮಗೆ ಪಂಜರದ ಗಿಣಿಯ ಬಾಳು ಬೇಕಿಲ್ಲ. ನಮ್ಮ ಕೈಕಾಲಾಡಲು ಸ್ವತಂತ್ರ ಕೊಡಿ' ಎಂದು ಕೇಳುತ್ತಿದ್ದಾರೆ."

ಮಾದರಿ ಮೈಸೂರು ತನ್ನ ಪ್ರಜೆಗಳ ದೂರುಗಳನ್ನು ಬೇಗನೆ ಪರಿಹರಿಸಲಿ. ಸತ್ಯಾಗ್ರಹದಂತಹ ತೀವ್ರತಮ ಉಪಾಯಕ್ಕೆ ಇಂಬುಗೊಡದಿರಲಿ.

CC-0. Jangamwadi Math Collection. Digitized by eGangotri

## ವಿಷವಾಹಿನಿ ಬತ್ತುತಿದೆ !

ಮದರಾಸಿನಲ್ಲಿ 'ಜಸ್ಟಿಸ್' ಪಕ್ಷವು ಮಂಜಿನಂತೆ ಮಾಯವಾಗಿ ಹೋಯಿತು. ಮುಂಬಯಿ ಆಧಿಪತ್ಯದಲ್ಲಿ ಬ್ರಾಹ್ಮಣೇತರ ಪಕ್ಷವು ಧ್ವಂಸವಾಗಿ ಹೋಯಿತು. ಮೈಸೂರಿನಲ್ಲಿಯೂ ಅದರ ಅಂತ್ಯಕ್ರಿಯೆಗಳ ಚಟುವಟಿಕೆಯು ಆರಂಭವಾಗಿದೆ. 'ಪ್ರಜಾಸಂಯುಕ್ತ ಪಕ್ಷ'ದ ಮಹಾ ಕಾರ್ಯದರ್ಶಿಗಳಾದ ಶ್ರೀ. ಕೆ. ಚಂಗಲರಾಯ ರೆಡ್ಡಿಗಳು ತಮ್ಮ ಪಕ್ಷದ (ಆಗಸ್ಟ ೨೪ನೇ ತಾ|| ಸಭೆ ಸೇರಿತ್ತು) ಕಾರ್ಯನಿರ್ವಾಹಕ ಸಮಿತಿಯ ಮುಂದೆ:—

"ಪ್ರಜಾ ಸಂಯುಕ್ತ ಸಂಸ್ಥೆಯೆಂಬ ಪ್ರತ್ಯೇಕ ಸಂಸ್ಥೆ ಬೇಡ. ಅದನ್ನು ಕೊನೆಗಾಣಿಸತಕ್ಕದ್ದು. 'ಇಂಡಿಯನ್ ನ್ಯಾಶನಲ್ ಕಾಂಗ್ರೆಸ್' ಸಂಸ್ಥೆಯನ್ನು ಸಂಸ್ಥಾನದಲ್ಲಿ ಬಲಪಡಿಸಲು ಚುರುಕಾದ ಕಾರ್ಯಕ್ರಮಗಳನ್ನು ಆರಂಭಿಸತಕ್ಕದ್ದು"

ಎಂಬ ನಿರ್ಣಯ ತಂದರು. ಆ ಪಕ್ಷದ ಕಾರ್ಯನಿರ್ವಾಹಕ ಸಭೆಯವರು "ಸಂಸ್ಥಾನದಲ್ಲಿ 'ಇಂಡಿಯನ್ ನ್ಯಾಶನಲ್ ಕಾಂಗ್ರೆಸ್' ಬಲಪಡಿಸಲು ಯೋಗ್ಯ ಮತ್ತು ಚುರುಕಾದ ಕಾರ್ಯಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು. ಅಕ್ಟೋಬರ್ ತಿಂಗಳಲ್ಲಿ ಮೈಸೂರಿನಲ್ಲಿ ಈ ಪಕ್ಷದ ಮಹಾಸಭೆ ಕರೆದು, ಆ ಸಭೆಯ ಮುಂದೆ ನಿರ್ಣಯವನ್ನಿಡತಕ್ಕದ್ದು" ಎಂಬದಾಗಿ ನಿರ್ಣಯಮಾಡಿದರು. ಇವೆಲ್ಲ ಮೈಸೂರಿನ ಮುಂಗಳದಿನಗಳ ಸೂಚನೆಗಳು....

—ವಿಶ್ವಕರ್ನಾಟಕ

# ಹಿಂದುಸ್ಥಾನ

## ಅನ್ನಸತ್ಯಾಗ್ರಹದ ತರುವಾಯ

ಕಳೆದ ತಿಂಗಳ ಸಂಚಿಕೆ ವಾಚಕರ ಕೈಗೆ ಬೀಳುವುದರೊಳಗಾಗಿಯೆ, ಅಂದಮಾನದ ಅನ್ನಸತ್ಯಾಗ್ರಹಿಗಳು ಮ. ಗಾಂಧಿಯವರ ಬಿನ್ನಹಕ್ಕೆ ಮಾನವಿತ್ತು, ಸತ್ಯಾಗ್ರಹವನ್ನು ನಿಲ್ಲಿಸಿದುದರ ಸುಖವಾರ್ತೆಯು ಬಂದಿತು. ಹಿಂದುಸ್ಥಾನ ಸರಕಾರದ ಮೇಲೆ ಅನ್ನಸತ್ಯಾಗ್ರಹಿಗಳು ಸಂಪಾದಿಸಿದ ಅಪೂರ್ವ ವಿಜಯವಿದೆನ್ನಬಹುದು. ಏಕೆಂದರೆ, ಅನ್ನಸತ್ಯಾಗ್ರಹವು ನಿಂತ ಮೇಲೆ, ಅವರ ಬೇಡಿಕೆಗಳನ್ನು ಸಹಾನುಭೂತಿಯಿಂದ ವಿಚಾರಿಸಲಾಗುವುದೆಂದು ವೈಸ್ರಾಯರು ಆಶ್ವಾಸನವಿತ್ತರು. ಅದನ್ನನುಸರಿಸಿ ಅಂದಮಾನದ ಬಂದಿಗಳನ್ನು ಹಿಂದುಸ್ಥಾನಕ್ಕೆ ಮರಳಿ ತರುವ ಎತ್ತುಗಡೆಯು ನಡೆದಿದೆ. ಬಂಗಾಲವನ್ನುಳಿದು ಬೇರೆ ಪ್ರಾಂತಗಳು ತಂತಮ್ಮ ರಾಜಬಂದಿಗಳನ್ನು ಈಗಲೆ ಕರೆಯಿಸಿಕೊಳ್ಳುತ್ತಿದ್ದಾರೆ. ಬಂಗಾಲ ಸರಕಾರವು ಮಾತ್ರ ತನ್ನ ಹಿಡಿಯನ್ನು ಸಡಿಲಿಸಲೊಲ್ಲದು. ಮಹತ್ವದ ಪ್ರಶ್ನೆಯು ಬಂಗಾಲದ್ದೇ ಆಗಿದೆ. ಏಕೆಂದರೆ ಅಂದಮಾನದ ಬಂದಿಗಳಲ್ಲಿ ಬಂಗಾಲದ ಕ್ರಾಂತಿಕಾರರೆಂದು ತಿಳಿಯಲ್ಪಟ್ಟವರೇ ಹೆಚ್ಚುಮಂದಿ. ಅಂದಮಾನದ ಬಂದಿಗಳಲ್ಲಿ ಬಂಗಾಲದವರು ೨೪೪ ಜನರಿದ್ದರೆ, ಉಳಿದ ಪ್ರಾಂತಗಳವರು ಬರಿ ೪೦ ಜನರಿದ್ದಾರೆ. ಕಾಂಗ್ರೆಸು ಅಧಿಕಾರಾರೂಢವಾಗಿರುವ ಪ್ರಾಂತಗಳಲ್ಲಿಯ ಮಂತ್ರಿಮಂಡಲಗಳು ಧೈರ್ಯದಿಂದ, ಉದಾರಧೋರಣೆಯಿಂದ ತಮ್ಮ ಸೆರೆಯಾಳುಗಳನ್ನು ಕರೆಯಿಸಿಕೊಳ್ಳುತ್ತಿವೆ. ಬಂಗಾಲದ ಮಂತ್ರಿಮಂಡಲವೊಂದೇ ಹಿಂದೆಗೆಯುತ್ತಿದೆ. ರಾಜಕೀಯ ಸೆರೆಯಾಳುಗಳಲ್ಲಿ ಒಬ್ಬೊಬ್ಬರ ರೆಕಾರ್ಡನ್ನು ಪರೀಕ್ಷಿಸುತ್ತಲಿದೆಯಂತೆ. ಇದರರ್ಥವೇಂದರೆ, ಕೆಲವರನ್ನು ಕರೆತಂದು ಕೆಲವರನ್ನು ಅಲ್ಲಿಯೇ ಬಿಟ್ಟುಬಿಡಬಹುದು. ಇದರಿಂದ ಬಂಗಾಲ ಸರಕಾರದ ಬಗ್ಗೆ ಹಿಂದುಸ್ಥಾನದ ಲೋಕಮತವೆಲ್ಲ ಪ್ರಕ್ಷುಬ್ಧವಾಗಿ, ಪರಿಣಾಮಗಳು ಘೋರವಾಗಬಹುದು.

(ಈ ಬಿಡಿನುಡಿ ಬರೆದಾದ ಮೇಲೆ ಬಂಗಾಲ ಸರಕಾರವು ಅಂದಮಾನದಲ್ಲಿಯ ತನ್ನ ರಾಜಬಂದಿಗಳನ್ನು ಮರಳಿ ಕರೆಯುವುದಾಗಿ ಠೀರ್ಮಾನಿಸಿದೆಯೆಂದು ತಿಳಿದುಬಂದಿದೆ.

—ಸಂ. ಜ. ಕ.)

## ಬಂಗಾಲದಲ್ಲಿಯ ದಬ್ಬಾಳಿಕೆ

ಬಂಗಾಲದಲ್ಲಿಯ ಬರಿ ಚಿತಗಾಂಗ ಜಿಲ್ಲೆಯೊಂದರಲ್ಲಿಯೆ ೨೧,೫೦೦ ಕ್ಕಿಂತ ಹೆಚ್ಚು ತರುಣರು ಬಂದಿಲ್ಲೊಂದು ಸರಕಾರಿ ನಿರ್ಬಂಧಗಳಿಗೊಳಪಟ್ಟಿದ್ದಾರೆಂದು ಬಂಗಾಲ ಸರಕಾರದ ಗೃಹಮಂತ್ರಿಗಳ ಹೇಳಿಕೆಯಿಂದ ತಿಳಿದುಬರುತ್ತದೆ. ಕ್ರಾಂತಿಕಾರಿ ಚಳವಳಿಗೆ ಸಂಬಂಧಪಟ್ಟವರೆಂದು ಅವರ ಬಗ್ಗೆ ಸಂಶಯವಿದೆ. ಅಲ್ಲಿಯ ಗವರ್ನರರಾದ ಸರ್ ಜಾನ್ ಆಂಡರ್ಸನ್ನರ ವಜ್ರಮುಷ್ಟಿಯ ಪ್ರತಾಪದ ಕಲ್ಪನೆಯು ಈಷನ್ಮಾತ್ರವಾಗಿ ಇದರಿಂದ ಬರುವಂತಿದೆ. ಈ ತರುಣರು ಬರಿ ಸಂಶಯಮಾತ್ರದಿಂದಲೆ ಈ ರೀತಿ ಕಟ್ಟುಗಳಿಗೊಳಗಾಗಿದ್ದುದು. ಯಾವ ನ್ಯಾಯಾಧೀಶನೆದುರಿನಲ್ಲಿಯೂ ಬಹಿರಂಗ ವಿಚಾರಣೆಯಾಗಿಲ್ಲ. ತರುಣ ವಿದ್ಯಾರ್ಥಿಗಳು 'ಗುರತಿನ ಕಾರ್ಡು'ಗಳನ್ನಿಟ್ಟುಕೊಳ್ಳುವುದು, ಕಾರ್ಡಿನ

CC-0. Jangamwadi Math Collection. Digitized by eGangotri

ಬಣ್ಣದಿಂದ ಅವರ ಅತ್ಯಾಚಾರವನ್ನು ಗುರುತುಹಿಡಿಯುವುದು!—ಎಂಬೀ ನಿರ್ಬಂಧಕ್ಕೆ ೨೧,೩೮೨ ತರುಣರು ಒಳಪಟ್ಟಿದ್ದಾರೆ. ೧೯೩೦ ರಲ್ಲಿ ಸರಕಾರಿ ಸೈನಿಕಠಾಣ್ಯದ ಮೇಲಾದ ಸಶಸ್ತ್ರದಾಳಿಯ ನಂತರ, ಚಿತಗಾಂಗದಲ್ಲಿಯ ದಬ್ಬಾಳಿಕೆಯು ಅಭೂತಪೂರ್ವವಾಗಿದೆ. ಅಲ್ಲಿಯ ತರುಣರ ಚಟುವಟಿಕೆಗಳು ಅತ್ಯಾಚಾರಗಳಿಗೆ ( Terrorism ) ಪ್ರೋತ್ಸಾಹ ಕೊಡಬಹುದಾಗಿ ತೋರಿದುದರಿಂದ, ಈ ನಿರ್ಬಂಧಗಳನ್ನು ಹೇರಲಾಗಿದೆಯೆಂದು ಗೃಹಮಂತ್ರಿಗಳು ಹೇಳಿದರು. ರಾಜಕೀಯ ವಾತಾವರಣವು ತಿಳಿಯಾಗಿರುವ ಈಗಿನ ಸಂದರ್ಭದಲ್ಲಿಯೂ ಮತ್ತೆಮತ್ತೆ ಅದೇ ಮಂತ್ರವನ್ನು ಜಪಿಸುತ್ತಿರುವರೆಂದ ಮೇಲೆ, ಬಂಗಾಲ ಸರಕಾರವನ್ನು ಮತ್ತಾವ ಭೀತಿಯಾದರೂ ಬಾಧಿಸುತ್ತಲಿರಬೇಕೆಂದು ತೋರುತ್ತದೆ. ಲೋಕಸಿಯುಕ್ತವೆನಿಸುವ ಸರಕಾರವು ಇನ್ನೂ ಎಷ್ಟು ದಿನ ಈ ಆಟವನ್ನು ಆಡುವುದು?

## ಇಬ್ಬರು ಮಹಾಪುರುಷರು

ಎರಡು ಖಂಡಗಳಲ್ಲಿ ಇಬ್ಬರು ಮಹಾಪುರುಷರು ಎರಡು ಮಹತ್ಕಾರ್ಯಗಳಿಗಾಗಿ ಸೊಂಟಕಟ್ಟಿದ್ದರು. ಕಳೆದ ಶತಮಾನದಲ್ಲಿ ಅಮೇರಿಕೆಯಲ್ಲಿ ಅಬ್ರಾಹಮ ಲಿಂಕನನು (೧) ಗುಲಾಮಗಿರಿಯನ್ನು ನಾಶಗೊಳಿಸುವುದು (೨) ಮಧ್ಯಪಾನವನ್ನು ನಿಲ್ಲಿಸುವುದು—ಎಂದು ಎರಡು ಪ್ರತಿಜ್ಞೆಗಳನ್ನು ಮಾಡಿದ್ದನು. ಹಿಂದುಸ್ಥಾನದಲ್ಲಿ, ನಡೆದಿರುವ ಶತಮಾನದಲ್ಲಿ ಮಹಾತ್ಮ ಗಾಂಧಿಯವರು (೧) ಅಸ್ಪೃಶ್ಯರಿಗೆ ಸಮಾನ ಅಧಿಕಾರಗಳನ್ನು ಕೊಡುವುದು (೨) ಸಂಪೂರ್ಣ ಮದ್ಯಪಾನಬಂದಿಯನ್ನು ಜಾರಿಯಲ್ಲಿ ತರುವುದು—ಎಂದು ಎರಡು ದೃಢಸಂಕಲ್ಪಗಳನ್ನು ಪ್ರಕಟಪಡಿಸಿರುವರು. ಅಮೇರಿಕೆಯಲ್ಲಿ ಗುಲಾಮಗಿರಿಗೆ ಹಿಡಿಮಣ್ಣು ಕೊಡುವ ಶ್ರೇಯಸ್ಸು ಲಿಂಕನನಿಗೆ ಲಭಿಸಿತು; ಅಸ್ಪೃಶ್ಯತಾನಿವಾರಣದ ಯಶೋಮುಕುಟವು ಗಾಂಧಿಜಿಯವರ ಮಸ್ತಕವನ್ನು ಭೂಷಿಸುವ ಸುಸಮಯವು ಸಮೀಪಿಸುತ್ತಲಿದೆ. ಆದರೆ ಮಧ್ಯಪಾನ ನಿರೋಧಕ್ಕಾಗಿ ಲಿಂಕನನು ಮಾತ್ರವಲ್ಲ, ಅವನ ತರುವಾಯದ ಸುಧಾರಕರನೇಕರು ಪ್ರಯತ್ನಿಸಿ, ಕೈಸುಟ್ಟುಕೊಂಡರು. ಉಚ್ಚವರ್ಗದ ಜನರ ಮನೋವೃತ್ತಿಗೆ ತಕ್ಕ ಚಾಲನೆಕೊಟ್ಟು, ಗುಲಾಮಗಿರಿಯನ್ನೂ ಅಸ್ಪೃಶ್ಯತೆಯನ್ನೂ ತೊಡೆದುಹಾಕುವುದು ಸಾಧ್ಯವಾಯಿತು—ಸಾಧ್ಯವಾಗುತ್ತಿದೆ; ಆದರೆ ಸಮಾಜದ ತೀರ ಕೆಳಗಿನ ಪದರುಗಳಲ್ಲಿ ಹಬ್ಬಿ ಹರಿಯುತ್ತಿರುವ ಮದ್ಯಪಾನವ್ಯಸನದ ಪ್ರವಾಹವನ್ನು ಅಟ್ಟಿಸುವ ಕೆಲಸವು ಅಮೇರಿಕ ಮಾತ್ರವಲ್ಲ, ಹಿಂದುಸ್ಥಾನದಲ್ಲಿ ಕೂಡ ಬಲುಬಿಗಿಯಾಗಿದೆ. ಎಂತಲೇ ಕ್ಲೃಪ್ತಕಾಲಾವಧಿಯಲ್ಲಿ ಮದ್ಯಪಾನಬಂದಿಯನ್ನು ಜಾರಿಯಲ್ಲಿ ತರುವ ನಿಧಾನದ ಧೋರಣೆಯು ಸ್ವೀಕೃತವಾಗಿದೆ.

ಅಮೇರಿಕೆಯ ದಕ್ಷಿಣ-ಉತ್ತರ ಸಂಸ್ಥಾನಗಳಲ್ಲಿ ಗುಲಾಮಗಿರಿಗಾಗಿ ದೊಡ್ಡ ತುಮುಲವೆ ನಡೆದು, ಕೊನೆಗೆ ಅದು ನಾಶಗೊಳಿಸಲ್ಪಟ್ಟಿತು; ಆದರೆ ಸಾವಿರಾರು ಕಾನೂನುಗಳನ್ನು ಮಾಡಿ, ಲಕ್ಷಾವಧಿ ಮತಗಳನ್ನು ದೊರಕಿಸಿ ಕೂಡ ಅಮೇರಿಕೆಯಲ್ಲಿ ಸುರಾರಾಕ್ಷಸಿಯ ಹಾವಳಿಯು ಅಡಗಲಿಲ್ಲ. ಕಳೆದ ೮೦ ವರ್ಷಗಳಿಂದ ಅಲ್ಲಿ ಮಧ್ಯಪ್ರತಿಬಂಧಕ ಕಾನೂನುಗಳು ನಿರ್ಮಿಸಲ್ಪಡುತ್ತಿವೆ. ಆದರೆ ಅವೆಲ್ಲ ನೀರ ಮೇಲಿನ ಗೆರೆಗಳಾಗಿವೆ. ೧೯೨೮ ರ ಸಾಲಿನಲ್ಲಿ ಮಧ್ಯಪಾನನಿರೋಧವನ್ನು ಜಾರಿಯಲ್ಲಿ ತರಲು ಸರಕಾರವು ೧ ಕೋಟಿ, ೧೬ ಲಕ್ಷ ಡಾಲರುಗಳನ್ನು ವೆಚ್ಚಮಾಡಿತು; ಆದರೂ ಆ ವರ್ಷ ನೂರಾರು ಜನರು ಆ ಕಾಯಿದೆಯನ್ನು ಮುರಿದು, ದಂಡರೂಪವಾಗಿ ೬೧ ಲಕ್ಷ ಡಾಲರುಗಳನ್ನು ಸರಕಾರಕ್ಕೆ ತೆತ್ತಿದರು. ೧೯೨೧ ರಿಂದ ೪॥ ವರ್ಷಗಳಲ್ಲಿ ಸುಮಾರು ೨ ಲಕ್ಷ ಜನರು ಮದ್ಯಪಾನನಿರೋಧ ಕಾನೂನನ್ನು ಅಲ್ಲಗಳೆದರು; ಮತ್ತದರ ಫಲವಾಗಿ ೨ ಕೋಟಿ ಡಾಲರುಗಳನ್ನು ದಂಡರೂಪವಾಗಿ ತುಂಬಿದರು.

'ಮೂರು ವರ್ಷಗಳಲ್ಲಿ ಸಂಪೂರ್ಣ ಮದ್ಯಬಂದಿಯನ್ನು ಹಿಂದುಸ್ಥಾನದಲ್ಲಿ ತಂದೇಬಿಡುವೆವು; ಅದಕ್ಕಾಗಿ ಶಿಕ್ಷಣಾಲಯಗಳ ಬಾಗಿಲುಗಳನ್ನು ಮುಚ್ಚಬೇಕಾದರೂ ಹಿಂಜರಿಯಲಾರೆವು' ಎಂದು ಮ. ಗಾಂಧಿಯವರು ಭೀಷ್ಮಪ್ರತಿಜ್ಞೆಯನ್ನು ಮಾಡಿರುವರು. ತದನುಸಾರವಾಗಿ ಕಾಂಗ್ರೆಸ್ ಪ್ರಭುತ್ವವುಳ್ಳ ಆರು ಪ್ರಾಂತಗಳಲ್ಲಿ ಅದರ ಪ್ರಯೋಗಗಳು ಪ್ರಾರಂಭವಾಗುತ್ತಿರುವಾಗ ಹಲವು ಸಭ್ಯಸಭಾಸದರು ಎಚ್ಚರಿಕೆಯನ್ನು ಕೊಟ್ಟರು: "ಅಣ್ಣಗಳಿರಾ! ಸಮುದ್ರದ ನೀರನ್ನು ತೋಡಿತೆಗೆಯಲು ಪ್ರಯತ್ನಿಸಿದ ಟಿಟ್ಟಿಭದ ಪ್ರಯತ್ನವನ್ನು ಹೋಲುತ್ತಿದೆ ಇದು. ಪ್ರಪಂಚದಲ್ಲಿ ಬೇರೆ ಕಡೆ ದೊರೆಯಲಾರದಷ್ಟು ಮದ್ಯಪ್ರತಿಬಂಧ ಕಾನೂನುಗಳು ಒಂದೇ ಅಮೇರಿಕೆಯಲ್ಲಿವೆ. ಅಲ್ಲಿ ಸ್ತ್ರೀಪುರುಷರಲ್ಲಿ, ಬಡವರು-ಬಲ್ಲಿದರಲ್ಲಿ, ಅಧ್ಯಾಪಕ-ವಿದ್ಯಾರ್ಥಿಗಳಲ್ಲಿ ಪ್ರಕಟ ಅಪ್ರಕಟವಾಗಿ ಮದ್ಯಪಾನದ ವ್ಯಸನವು ಪ್ರಸಾರಹೊಂದಿಯೆ ಇದೆ. ಸರಕಾರದ ಉತ್ಪನ್ನಾಂಶವು ಮಾತ್ರ ವ್ಯರ್ಥವಾಗಿ ಮುಳುಗಿಹೋಯಿತು. ೧೯೧೪ ರಿಂದ ೧೯೨೧ ರ ವರೆಗೆ

CC-0. Jangamwadi Math Collection. Digitized by eGangotri

ಪ್ರತಿವರ್ಷ ೫೦ ಕೋಟಿ ಡಾಲರುಗಳ ಉತ್ಪನ್ನದ ಮೇಲೆ ತಿಲಾಂಜಲಿಯನ್ನಿತ್ತು ರಶಿಯವು ಮದ್ಯಪಾನಬಂದಿಯನ್ನು ರೂಢಗೊಳಿಸಲೆಳಸಿತು; ಆದರೆ ಅದರ ಪ್ರಯತ್ನಗಳೆಲ್ಲ ಜಲಹೋಮವಾಗಿ ಪರಿಣಮಿಸಿದವು. ೧೯೧೯ರಿಂದ ೧೯೨೭ರ ವರೆಗೆ ನಾರ್ವೆಯ ಸರಕಾರಕ್ಕೂ ಅದೇ ಅನುಭವ ಬಂದಿತು. ಕೊನೆಗೆ ಎರಡೂ ದೇಶಗಳು ಆ ಹವ್ಯಾಸವನ್ನು ಬಿಟ್ಟು-ಕೊಟ್ಟವು. ಮದ್ಯಪಾನಬಂದಿಯ ಮೃಗಜಲದ ಬೆನ್ನುಹತ್ತಿ ಕೋಟ್ಯವಧಿ ರೂ.ಗಳ ಉತ್ಪನ್ನವನ್ನು ಕಳೆದುಕೊಳ್ಳು-ವುದೇಕೆ? "

ಇದೆಲ್ಲ ಸರಿ. ಅಮೇರಿಕ, ರಶಿಯ, ನಾರ್ವೆಗಳಿಗಿಂತ ಹಿಂದುಸ್ಥಾನದ ಜನತೆಯು ಧರ್ಮ, ಪರಂಪರೆ, ಹವಾಗುಣ ಮೊದಲಾದ ಅಂಶಗಳಲ್ಲಿ ಭಿನ್ನವಾಗಿದೆ; ಆದುದರಿಂದ ಮದ್ಯನಿರೋಧವು ಅಲ್ಲಿಗಿಂತ ಇಲ್ಲಿ ಹಗುರಾದೀತೆಂದು ತೋರುತ್ತದೆ. ಕಾಲನೇ ಸಟೆದಿಟಗಳನ್ನು ಹೇಳಬಲ್ಲನು!

## ಪರದೇಶ

### ಚೀನದ ಗತಿಯೇನು?

ಈ ಪ್ರಶ್ನೆಯು ಪ್ರತಿಯೊಬ್ಬ ಸ್ವಾತಂತ್ರ್ಯವಾದಿಯ ತಲೆಯಲ್ಲಿ ತಾಂಡವವಾಡುತ್ತಿದೆ. 'ಚೀನದಿನ' ವಾಯಿತು, ರಾಷ್ಟ್ರಸಂಘದ 'ಸ್ವಸ್ತಿವಾಚನ' ವಾಯಿತು; ಚೀನವನ್ನು ಉದ್ಧರಿಸುವವರಾರು?

ಇಟಲಿ-ಅಬಿಸೀನಿಯ ಯುದ್ಧದಲ್ಲಿ ಒಂದು ಮಾತು ಎಲ್ಲರಿಗೂ ಮನದಟ್ಟಾಯಿತು; ಅದೆಂದರೆ ಈಗಿನ ಯುದ್ಧಗಳಲ್ಲಿ ವಿಮಾನಗಳ ದೊಡ್ಡ ಪಡೆಯು ಸನ್ನದ್ಧವಾಗಿರಬೇಕು; ಅಲ್ಲದೆ ದೂರ ಗುಂಡೆಸೆಯುವ ತೋಫುಗಳು, ನಡೆದಾಡುವ ಕೊತ್ತಳಗಳು, ಯಾಂತ್ರಿಕ ಮಶಿನ್ಗನ್ನುಗಳು, ಬಾಂಬುಗಳು ಇ. ಗಳ ಸಾಮುಗ್ರಿಯೂ ದೊಡ್ಡದಾಗಿರಬೇಕು. ಕೈಗೆ ಕೈ ಹತ್ತಿ ಕಾದಾಡುವ ದಿನಗಳು ಹೋದವು. ಆಕಾಶದೊಳ-ಗಿಂದ ಹಾರಿಬಂದು ಕಟ್ಟಡಗಳನ್ನು ಸುಡುವುದು, ಪ್ರಚಂಡ ಪ್ರಮಾಣದಲ್ಲಿ (ಯುದ್ಧ್ಯಮಾನ—ಅಯುದ್ಧ್ಯಮಾನವೆಂಬ ಭೇದವಿಲ್ಲದೆ) ಮನುಷ್ಯಸಂಹಾರವನ್ನು ಮಾಡುವುದು—ಇವು ಇಂದಿನ ಯುದ್ಧಗಳ ಲಕ್ಷಣಗಳಾಗಿವೆ. ಸ್ವಸಂರಕ್ಷಣೆಯ ದೃಷ್ಟಿಯಿಂದಲೂ ಈ ಸಾಧನಗಳು ವಿಪುಲವಾಗಿರಬೇಕು.

ಚೀನದ ಸಂಗ್ರಹದಲ್ಲಿ ಸದ್ಯಕ್ಕೆ ೨೦೦ ವಿಮಾನಗಳಿವೆ. ಆ ವಿಮಾನಗಳು ಶಾಂಘಾಯದಲ್ಲಿ ಜಪಾನಿಗಳಿಗೆ ತಮ್ಮ ಬಾಂಬುಗಳ ಪ್ರಭಾವಗಳನ್ನು ಚೆನ್ನಾಗಿಯೆ ತೋರಿಸಿದವು. ಆದರೆ ಆ ವಿಮಾನಗಳು ಒಮ್ಮೆ ಧ್ವಂಸಮಾಡಲ್ಪಟ್ಟರೆ ಅಥವಾ ಸುಟ್ಟುಹೋದರೆ, ಆ ಕೊರತೆಯನ್ನು ತುಂಬಿ-ತೆಗೆಯಲು ಚೀನದಲ್ಲಿ ವಿಮಾನಗಳ ಕಾರಖಾನೆಗಳಿಲ್ಲ. ರಸಿಯದೊಡನೆ ಚೀನದ ಸಂಧಾನವಾಗಿದೆಯಾಗಿ ತಿಳಿದು-ಬಂದಿದೆ; ಆದರೆ ಅದರಿಂದ ವಿಶೇಷ ಪ್ರಯೋಜನವಾಗುವಂತೆ ತೋರಲಿಲ್ಲ. ಚೀನಕ್ಕೆ ಯುದ್ಧಸಾಹಿತ್ಯವನ್ನು ಪೂರೈಸ-ಬಾರದಾಗಿ ಅಮೇರಿಕನ್ ಸರಕಾರವು ತನ್ನ ದೇಶದ ಕಾರಖಾನೆದಾರರಿಗೆ ಆಜ್ಞೆಯಿತ್ತಿರುತ್ತದೆ. ಚೀನವು ಯುದ್ಧಕ್ಕಾಗಿ ಬೇಡಿದ ಸಾಲವನ್ನೂ ಅಮೇರಿಕವು ನಿರಾಕರಿಸಿದೆ. ಚೀನದಲ್ಲಿ ಜನಬಲವಿದೆ; ಜಪಾನಿಗಳನ್ನು ನುಂಗಿ ನೀರು ಕುಡಿಯುವಷ್ಟು ಜನಸಂಖ್ಯೆಯಿದೆ; ದೇಶದ ಸ್ವಾತಂತ್ರ್ಯಕ್ಕಾಗಿ ಧಾರಾತೀರ್ಥದಲ್ಲಿ ಪ್ರಾಣಗಳನ್ನು ಅರ್ಪಿಸಲು ಅಲ್ಲಿಯ ಯುವಕರು ಸಿದ್ಧರಿದ್ದಾರೆ. ಸೇನಾನಿ ಚಿಯಾಂಗ-ಕೈ-ಶೇಕನ ಪತ್ನಿಯೇ ವಿಮಾನದ ನಾಯಕತ್ವವನ್ನು ವಹಿಸಿ, ಸ್ತ್ರೀಯರಲ್ಲಿ ಪ್ರಚಂಡ ಜಾಗೃತಿಯನ್ನು ಮಾಡಿದ್ದಾಳೆ. ಬರಿ ದೇಶಾಭಿಮಾನದಿಂದ ದೇಶದ ಮರ್ಯಾದೆಯ ರಕ್ಷಣೆಯಾಗುತ್ತಿದ್ದರೆ, ಚೀನಕ್ಕೆ ಭಯವಿಲ್ಲ. ಆದರೆ ನಾವು ಮೇಲೆ ಹೇಳಿದಂತೆ ಅತ್ಯಾಧುನಿಕ ಶಸ್ತ್ರಗಳ ಜೋಡಣೆಯಿರದ ರಾಷ್ಟ್ರವು, ಇಂದಿನ ಸಮರನೀತಿಯು ಅಸ್ತಿತ್ವದಲ್ಲಿರುವ-ವರೆಗೂ ತೀರಾ ಅಸಹಾಯವು. ಅಂತೆಯೆ ಚೀನದ ಸ್ತ್ರೀಸೇನಾ-ನಿಯಾದ ಮೇಡಾಮ ಚಿಯಾಂಗ-ಕೈ-ಶೇಕಳು ಜಗತ್ತಿನಲ್ಲಿ ಮೊರೆಯಿಡುತ್ತಿದ್ದಾಳೆ: 'ಚೀನಕ್ಕೆ ಎತ್ತಣಿಂದಲೂ ನೆರವು ಬಾರದಿದ್ದರೆ, ಚೀನದಲ್ಲಿ ಶಸ್ತ್ರಾಸ್ತ್ರಗಳು ಸಾಲದಂತಾಗಿ, ಅಲ್ಲಿಯ ಸೈನಿಕರು ಸಂದಿಗೊಂದಿಗಳಲ್ಲಿಯ ಬುನಾದಿಯ ಕತ್ತಿ-ಕಟಾರಿಗಳನ್ನು, ಕಲ್ಲು-ಕೋಲುಗಳನ್ನು ಹಿಡಿದು-ಕೊಂಡು ಬಡಿದಾಡಬೇಕಾದೀತು!'

ಯುದ್ಧದ ಪ್ರಗತಿಯನ್ನು ನೋಡಲಾಗಿ, ಉತ್ತರ ಚೀನ-ಕ್ಕೂ ನಾನಕಿಂಗ ರಾಜಧಾನಿಗೂ ಮಹತ್ವದ ಬಂದರವೆನಿಸಿದ ಶಾಂಘಾಯದಲ್ಲಿ ಚೀನವು ಜಪಾನದ ಪ್ರವೇಶವನ್ನು ಚೆನ್ನಾಗಿಯೆ ಪ್ರತಿಭಟಿಸಿತು. ಇಲ್ಲಿಯ ಕದನದಲ್ಲಿ ಭಾಗ-ವಹಿಸಿದ ಚೀನೀ ದಂಡು ಇದಕ್ಕೂ ಸ್ವಲ್ಪ ಮುಂಚಿತ ಬಂದಿದ್ದರೆ, ಜಪಾನವು ಚೀನದ ಭೂಮಿಯ ಮೇಲೆ ಕಾಲಿಡುವುದೂ ಕಠಿನವಾಗುತ್ತಿತ್ತೆಂದು ಚೀನಿಗಳ ಅತುಲ ಶೌರ್ಯವನ್ನು ನೋಡಿದವರು ಉದ್ಗರಿಸಿದರು. ಆದರೆ

CC-0. Jangamwadi Math Collection. Digitized by eGangotri

ಜಪಾನದ ಯುದ್ಧಸನ್ನಾಹವು ಹೆಚ್ಚು ಕಾರ್ಯಕ್ಷಮವಾಗಿ ಕಂಡುಬಂದಿತು. ಜಪಾನವು ಆಗಸ್ಟ ತಿಂಗಳಲ್ಲಿ ೭೦,೦೦೦ ಸೈನ್ಯವನ್ನು ತಂದಿಳಿಸಿತು; ಆ ಅಂಕೆಯೀಗ ೧। ಲಕ್ಷದವರೆಗೆ ಹೋಗಿದೆ. ಪಾಶ್ಚಾತ್ಯ ಪದ್ಧತಿಯ ಮೇರೆಗೆ ಕಲಿತು ತರಬೇತಾದ ಚೀನೀ ಸೈನ್ಯವು ೩ ಲಕ್ಷವಿದೆ. ಅಲ್ಲದೆ ಆಯತ್ತ ಹೊತ್ತಿಗೆ ಇನ್ನೂ ಎಷ್ಟೋ ಲಕ್ಷ ಸೈನ್ಯವು ಸಿದ್ಧವಾಗಬಹುದು. ಮೇಲಣ ಸೈನ್ಯದಲ್ಲಿಯ ಬಹುಭಾಗಕ್ಕೆ ಶಾಂಘಾಯದಲ್ಲಿ ಸೋಲು ಬಂದಿತು. ಇನ್ನೊಂದು ಕಡೆ, ಎಂದರೆ ಪೆಕಿಂಗದ ಸುತ್ತುಮುತ್ತಲಿನಲ್ಲಿ ಚೀನ ಸರಕಾರವು ಸೈನ್ಯವ್ಯೂಹವನ್ನು ರಚಿಸಿತ್ತು. ಅಲ್ಲಿ ಒಂದು ಲಕ್ಷ ಚೀನೀ ಸೈನ್ಯದೊಡನೆ, ಪೆಕಿಂಗದ ಉತ್ತರಕ್ಕೆ ೫೦ ಮೈಲುಗಳ ದೂರದಲ್ಲಿ ಜಪಾನಿಗಳು ತುಮುಲ ಯುದ್ಧವನ್ನು ಹೂಡಿದ್ದಾರೆ. ಆ ಬಗ್ಗೆ ಪ್ರಕಟವಾದ ಸುದ್ದಿಯಿಂದ, ಚೀನವು ಅಲ್ಲಿಯೂ ಪರಾಭವ ಹೊಂದುತ್ತಿದೆಯಾಗಿ ತಿಳಿದು ಬರುತ್ತದೆ. ಜಪಾನಿಗಳು ಭಯಂಕರವೆನಿಸುವ ಸಕಲ ಆಧುನಿಕ ಯುದ್ಧಸಾಹಿತ್ಯವನ್ನು ಉಪಯೋಗಿಸಿದರು. ಚೀನಿಗಳು ಪಲಾಯನ ಹೇಳುವುದಕ್ಕಿಂತ ಪ್ರಾಣಾರ್ಪಣ ಲೇಸೆಂದು ದೇಹಪತನವಾಗುವ ವರೆಗೂ ಕಾದಾಡಿದರು. ಇಂತಹ ಎಷ್ಟೋ ಸೈನ್ಯ ಸಮೂಹಗಳನ್ನು ಜಪಾನು ಧ್ವಂಸಗೊಳಿಸಿದೆ. ಹಲ್ಲ ನದಿಯನ್ನು ದಾಟುವಾಗ ಜಪಾನಿಗಳು ದೂರ ಗುರಿಹೊಡೆಯುವ ತೋಫುಗಳ ಸಹಾಯದಿಂದ ಭೀಕರ ಅಗ್ನಿವೃಷ್ಟಿಯನ್ನು ಮಾಡಿ, ಕಂದಕಗಳೊಳಗಿನ ಚೀನಿ ಸೈನಿಕರನ್ನು ಹುರಿದು ಹಾರಿಸಿಬಿಟ್ಟರು. ನದಿ ದಾಟಿದ ಮೇಲೆ ಚೀನಿ ಸೈನ್ಯವನ್ನು ಒಂಬತ್ತು ಮೈಲುಗಳ ವರೆಗೆ ಬೆನ್ನಟ್ಟಿ ಬೇಟೆಯಾಡಿದರು. ಚೀನದ ಸೈನ್ಯದ ಅವಸ್ಥೆಯು ಇಷ್ಟಕ್ಕೇ ಮುಗಿದಂತೆ ಕಾಣುವುದಿಲ್ಲ. ಉಳಿದ ಸೈನ್ಯವನ್ನೂ ಜಪಾನಿಗಳು ಮುತ್ತುವಂತೆ ಕಾಣುತ್ತದೆ. ಹಾಗೆ ಪೂರ್ತಿಯಾಗಿ ಮುತ್ತಿದರೆ, ಚೀನೀ ಯುದ್ಧವೇ ಮುಗಿತಾಯಕ್ಕೆ ಬಂದಿತೆಂದು ತಿಳಿಯಲಡ್ಡಿಯಿಲ್ಲ.

ಪಾಶ್ಚಾತ್ಯ ರಾಷ್ಟ್ರಗಳೇನು ಮಾಡುತ್ತಿವೆ? ಚೀನದಲ್ಲೆಲ್ಲ ಇಂಗ್ಲಂಡ, ಅಮೇರಿಕಾ, ಫ್ರಾನ್ಸ ಆದಿ ರಾಷ್ಟ್ರಗಳ ವ್ಯಾಪಾರೀ ವಸಾಹತುಗಳಿವೆ. ಚೀನದಲ್ಲಿರುವ ಬ್ರಿಟನ್ನಿನ ಪರರಾಷ್ಟ್ರ ಮಂತ್ರಿಯು ಯಾಂತ್ರಿಕ ಬಂದೂಕಿನ ಗುಂಡಿನೇಟಿಗೆ ಸಿಕ್ಕು, ಮಹತ್ಪ್ರಯಾಸದಿಂದ ಉಳಿದುಕೊಂಡನು. ಇಂಗ್ಲಿಷರು ಶಾಂಘಾಯದೊಳಗಿನ ತಮ್ಮ ಜನರನ್ನು ಹಾಂಗಕಾಂಗ್ ನಡುಗಡ್ಡೆಗೆ ಒಯ್ದಿರುವರು. ಶಾಂಘಾಯದಲ್ಲಿಯ ಅಮೆರಿಕನ್ ಕಟ್ಟಡಗಳು ಸುಟ್ಟವು; ಜನರು ಸತ್ತರು. ಆದರೆ ಅಮೆರಿಕೆಯು ಜಪಾನಿಗೆ ಪ್ರತಿಕಾರ ಮಾಡದೆ, ತನ್ನ ನಾಗರಿಕರನ್ನು ಚೀನದಿಂದ ಹೊರಕ್ಕೆ ಕಳಿಸಿತು. ಅಮೆರಿಕನ್ ಪರರಾಷ್ಟ್ರಮಂತ್ರಿಯೂ ಊರು ಬಿಟ್ಟಿದ್ದನು; ಆದರೆ ಚೀನೀ ಜನತೆಯ ಪ್ರಕ್ಷೋಭಕ್ಕೆ ಮತ್ತೆ ಮರಳಿದನು. ಚೀನ-ಜಪಾನ ಯುದ್ಧದ ಬೇಗೆ ತಮಗೆ ತಾಕಬಾರದೆಂಬುದೇ ಯುರೋಪಿಯನ್ ರಾಷ್ಟ್ರಗಳ ನೀತಿಯಾಗಿದೆ. ಅಬಿಸಿನೀಯ-ಸ್ಪೇನ್‌ಗಳದೇ ಇದು ಪುನರಾವೃತ್ತಿಯು.

---

# ನಮ್ಮ ಮಾತು

### ಉಪಕಾರಸ್ಮರಣೆ

ಈ ಸಂಚಿಕೆಯಲ್ಲಿ ಬಂದ ಶ್ರೀಯುತರಾದ ಚಿನ್ನಮುಳಗುಂದ, ಕೆಂಭಾವಿ, ಬೆಟಗೇರಿ, ಮೆಹತಾ, ಕೇಳಕರ, ಮಂತ್ರಿವರ್ಯ ಖೇರ, ಶ್ರೀಮತಿ ನಾಗಮ್ಮಾ ಪಾಟೀಲ ಇವರ ಪಡಿಯಚ್ಚುಗಳಿಗಾಗಿ 'ಸಂಯುಕ್ತ ಕರ್ನಾಟಕ'ಕ್ಕೂ 'ಚಂದ್ರರಾವ ಮೋರೆ' ಚಿತ್ರಪಟದ ಪಡಿಯಚ್ಚುಗಳಿಗಾಗಿ General Films Ltd., Bombay ಅವರಿಗೂ ಉಪಕೃತರಿದ್ದೇವೆ.

### ಅಖಿಲ ಕರ್ನಾಟಕ ಕುರುಬರ ೩ನೆಯ ಮಹಾಸಭೆ
### ( ಕಂಬಳಿಗಳ ಹಾಗೂ ಕುರಿಗಳ ಪ್ರದರ್ಶನ )

ಕರ್ನಾಟಕದಲ್ಲಿ ರಾಷ್ಟ್ರಪೋಷಕನಾದ ಕಂಬಳಿಯ ಉದ್ಯಮವು ಸಾಯಲಾಗಿದೆ. ಅದು ಅಜ್ಞರಾದ ಕುರುಬರ ಕೈಯಲ್ಲಿರುವುದರಿಂದ ಸರ್ವಾಂಗೀನ ಉನ್ನತಿಗೆ ಅದೆಷ್ಟೋ ತಡೆಯುಂಟಾಗಿದೆ. ಕಂಬಳಿಯ ಉತ್ಪಾದಕರಾದ ಕುರುಬ ಜನಾಂಗಗಳಲ್ಲಿಯೇ ನವಕ್ರಾಂತಿಯನ್ನುಂಟುಮಾಡಿ, ತಮ್ಮ ನೆಲೆಯನ್ನು ತಾವೇ ಕಂಡುಕೊಳ್ಳಲೆಂದು ಈ ಮಹಾಸಭೆಯನ್ನು ಹಮ್ಮಿದ್ದೇವೆ.

ಈ ಪರಿಷತ್ತು ಇದೇ ಅಕ್ಟೋಬರ ೧೭,೧೭ನೆಯ ತಾರೀಖುಗಳಲ್ಲಿ ಧಾರವಾಡ ಜಿಲ್ಹೆಯ ರಾಣೇಬೆನ್ನೂರಲ್ಲಿ, ಡಾ॥ ಆರ್. ನಾಗನಗೌಡರು ಎಮ್. ಎಸ್‌ಸಿ. ಪಿಎಚ್. ಡಿ. (ಯು. ಎಸ್. ಎ.) ಹೊಸಪೇಟೆ, ಇವರ ಅಧ್ಯಕ್ಷತೆಯಲ್ಲಿ ಜರುಗುತ್ತಿದೆ. ಇದೊಂದು ವಿಶಿಷ್ಟ ಜಾತಿಯ ಸಭೆಯಾ-

CC-0. Jangamwadi Math Collection. Digitized by eGangotri

ಗಿರದೆ, ಕರ್ನಾಟಕದಲ್ಲಿ ಒಂದು ವಿಶಿಷ್ಟ ಉದ್ಯಮವೂ, ಜನಾಂಗವೂ ಹಾಳಾಗುತ್ತಿರಲು ಅವುಗಳನ್ನೆತ್ತಿಹಿಡಿಯಲು, ಸಕಲ ಜಾತಿಪಂಗಡಗಳ ಸುಧಾರಕರು ಕೂಡಿ ಮಾಡುವ ಪತಿತೋದ್ಧರಣ ಕಾರ್ಯವಾಗಿದೆ.

ಉತ್ತಮವೆಂದು ಕಂಡ ಕಂಬಳಿಗಳಿಗೂ ಕುರಿಗಳಿಗೂ ಬಹುಮಾನಗಳನ್ನೂ ಪ್ರಶಸ್ತಿಪತ್ರಗಳನ್ನೂ ಕೊಡುತ್ತೇವೆ. ಕಂಬಳಿವ್ಯಾಪಾರಿಗಳು ಈ ಸುಸಂಧಿಯನ್ನು ಕಳೆದುಕೊಳ್ಳಲಿಕ್ಕಿಲ್ಲೆಂದು ನಂಬಿದ್ದೇವೆ.

ಕರ್ನಾಟಕದ ಕುರುಬ ಬಂಧುಗಳೂ, ಕಂಬಳಿಯ ವ್ಯಾಪಾರಿಗಳೂ, ಸಕಲ ಬಂಧುಗಳೂ ಸಭೆಗೆ ಆಗಮಿಸಿ, ಮಹಾಸಭೆಯನ್ನು ಜಯಶಾಲಿಯಾಗಿ ಮಾಡುವರೆಂದು ಆಶಿಸುತ್ತೇವೆ.

ತಾರೀಖು ೨೭—೯—೩೭ **ಕೆರಿಯಪ್ಪ ಹುಚ್ಚಣ್ಣವರ**
ರಾಣಿಬೆನ್ನೂರ ಸ್ವಾಗತಾಧ್ಯಕ್ಷ

### ಕರ್ನಾಟಕ ಪರಿಚಯಗ್ರಂಥ

ಇದೊಂದು ಹೊಸ ಸಾಹಸ. ಕೈಕೊಂಡವರು ಧಾರವಾಡದ 'ಕರ್ನಾಟಕ ಪಬ್ಲಿಸಿಟಿ ಸರ್ವಿಸ'ನವರು. ಕ್ರಾ. ಅ. ಆಕಾರದ ಸುಮಾರು ೪೦೦ ಪುಟಗಳನ್ನೊಳಗೊಳ್ಳುವುದು. ವಿಶಾಲಕರ್ನಾಟಕದ ಪ್ರಮುಖ ಪಟ್ಟಣಗಳು, ಸಂಸ್ಥೆಗಳು, ಉದ್ಯಮಗಳು, ಚಳುವಳಿಗಳು, ವ್ಯಕ್ತಿಗಳು ಮೊದಲಾದವರ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಡುವುದು ಈ ಗ್ರಂಥ ಪ್ರಕಾಶಕರ ಉದ್ದೇಶವು. ೧೯೩೮ರ ಜನವರಿ ೧ ರೊಳಗಾಗಿ ಮುಂಗಡ ಹಣವನ್ನು ಕಳಿಸುವವರಿಗೆ ಈ ಗ್ರಂಥವನ್ನು ರೂ. ೨—೮—೦ಗೆ ಕೊಡಲಾಗುವುದಂತೆ. ಇಲ್ಲವಾದರೆ ಗ್ರಂಥದ ಬೆಲೆಯು ೩ರೂ.ಯಾಗುವುದು. ಪ್ರಕಾಶಕರ ಪ್ರಯತ್ನಕ್ಕೆ ಕನ್ನಡಿಗರೆಲ್ಲರೂ ನೆರವಾಗಲಿ.

### "ವಿಮಾ ವಾಣಿಜ್ಯ" ಸಾಹಿತ್ಯ ಸ್ಪರ್ಧೆ

ಈ ಮೇಲ್ಕಂಡ ಸ್ಪರ್ಧೆಗೆ ಕತೆ, ಕವನವನ್ನು (ವಿಮೆ ವಾಣಿಜ್ಯ, ಕುಸೀದ—Banking ಈ ವಿಷಯಗಳಲ್ಲಿ) ಕಳುಹಿಸಲು ವಿನಾಯಕಚತುರ್ಥಿಯು ಕೊನೆಯ ದಿನವೆಂದ ಗೊತ್ತುಮಾಡಲಾಗಿತ್ತು. ಆದರೆ ಸ್ಪರ್ಧೆಯಲ್ಲಿ ಭಾಗವಹಿಸಬೇಕೆಂದಿರುವ ಹಲವರು ಅವಧಿಯನ್ನು ಮುಂದುವರಿಸಬೇಕೆಂದು ಕೋರಿರುವುದರಿಂದ ೧೯೩೮ ನೇ ಜನವರಿ ೧ ನೇ ತಾರೀಖಿಗೆ ಅವಧಿಯನ್ನು ಹೆಚ್ಚಿಸಿದೆ. ಕನ್ನಡನಾಡಿನ ಎಲ್ಲ ಲೇಖಕ ಲೇಖಕಿಯರೂ ಈ ಸ್ಪರ್ಧೆಯಲ್ಲಿ ಭಾಗವಹಿಸಬೇಕೆಂದು ಬಿನ್ನವಿಸುವೆವು.

ಸಂ. ವಿ. ವಾ.

### ಕಂಠಪಾಠಸ್ಪರ್ಧೆ

ಕರ್ಣಾಟಕ ಸಾಹಿತ್ಯ ಪರಿಷತ್ತಿನವರು ನವಂಬರ ೧೬, ೧೭,೧೮ ನೆಯ ತಾ. ಗಳಲ್ಲಿ **ಬಾಲಕ ಬಾಲಕಿಯರ ಕಂಠಪಾಠಸ್ಪರ್ಧೆ**ಗಳನ್ನಿರಿಸಿರುವರು. ಚಿಕ್ಕಮಕ್ಕಳಲ್ಲಿ ಕಾವ್ಯಪಾಠದ ಅಭ್ಯಾಸವನ್ನು ಪ್ರೋತ್ಸಾಹಿಸುವುದೇ ಅದರ ಗುರಿಯು. ಸ್ಪರ್ಧೆಗೆ ಸೇರಲಿಚ್ಛಿಸುವವರ ಪ್ರಾರ್ಥನ ಪತ್ರಿಕೆಯು ೨ ಆಣೆ ಪ್ರವೇಶಧನದೊಂದಿಗೆ ಆಕ್ಟೋಬರ ೨೨ ನೆಯ ತಾ.ನೊಳಗಾಗಿ ತಲುಪಬೇಕೆಂದು ಗೌ. ಕಾರ್ಯದರ್ಶಿಗಳು ತಿಳಿಸುತ್ತಾರೆ. ಬಾಲಕ—ಬಾಲಕಿಯರು ಇದರ ಲಾಭವನ್ನು ಹೊಂದಲೆಂದು ಅಪೇಕ್ಷಿಸುತ್ತೇವೆ.


## ಸಾಲುದೀಪ

ಇನ್ನೊಂದು ವಾರದಲ್ಲಿ **ಜ. ಕ. ಗ್ರಂಥಮಾಲೆಯ** ೨೩—೨೪ನೆಯ ಸಂಯುಕ್ತ ಪುಷ್ಪವಾದ **'ಸಾಲುದೀಪ'**ವು ಪ್ರಕಟವಾಗುವುದು. ಅದು **ಸು. ೨೦೦ ಪುಟ**ಗಳನ್ನೊಳಗೊಳ್ಳುವುದು. ಪ್ರಸಿದ್ಧ ಹಿಂದೀ ಲೇಖಕರಾದ **ಶ್ರೀ. ಜೈನೇಂದ್ರ ಕುಮಾರರ** ಲೇಖನಿಯಿಂದ ಬಂದ ೭ ಕತೆಗಳ ಸಂಗ್ರಹವದು. ಅವುಗಳಲ್ಲಿ ೫ ದೀರ್ಘಕತೆಗಳಾಗಿವೆ. ಶ್ರೀಯುತರ ಶೈಲಿ ಮರುಳುಗೊಳಿಸುವಂತಹದು; ವಿವಿಧರಸಭರಿತವಾದುದು; ಪರಿಪಕ್ವವಾದುದು. ಪ್ರಸ್ತುತ ಸಂಗ್ರಹವು ಗ್ರಂಥಮಾಲೆಯ ವಾಚಕರಿಗೊಂದು ಪಕ್ವಾನ್ನದೂಟವಾಗುವುದೆಂದು ಭರವಸೆ ಕೊಡಬಲ್ಲೆವು. ಸರಸ—ಸರಲ ಕನ್ನಡದಲ್ಲಿ ಹಿಂದೀ ಜ್ಞಾನಯಾತ್ರಿಮಂಡಲದ **ಶ್ರೀ. ಗುರುನಾಥ ಜೋಶಿಯವರ** ಈ ಸಂಗ್ರಹವನ್ನು ಅನುವಾದಿಸಿದ್ದಾರೆಂದು ಹೇಳಿದರೆ ಸಾಕು.

**ವ್ಯವಸ್ಥಾಪಕ, ಜಯಕರ್ನಾಟಕ**


CC-0. Jangamwadi Math Collection. Digitized by eGangotri

# ಸಾದರಸ್ವೀಕಾರ

೧೪೫ **ಹಣಪ್ರಪಂಚ** (ಅರ್ಥಶಾಸ್ತ್ರವಿಷಯಕ): ಶ್ರೀ. ವಿ. ಸೀತಾರಾಮಯ್ಯ ಎಂ. ಎ. ಶ್ರೀ. ಎನ್. ಎಸ್. ಸುಬ್ಬರಾಯರ ಮುನ್ನುಡಿಯೊಡನೆ. ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆಯ ೯ನೆಯ ಪ್ರಕಟನೆ. ಪುಟಗಳು ಕ್ರಾ. ಅ. ೩೬೬+೧೪. ಬೆಲೆ ರೂ. ೧—೪—೦.

೧೪೬ **ಸಂಸ್ಕೃತ ನಾಟಕ** (ಸಾಹಿತ್ಯೇತಿಹಾಸ): ಶ್ರೀ. ಎ. ಆರ್. ಕೃಷ್ಣಶಾಸ್ತ್ರಿ ಎಂ. ಎ. ಶ್ರೀ. ಬಿ. ಎಂ. ಶ್ರೀಕಂಠಯ್ಯನವರ ಮುನ್ನುಡಿಯೊಡನೆ. ಮೈ. ವಿ. ಕ. ಗ್ರಂಥಮಾಲೆಯ ೧೦ನೆಯ ಪ್ರಕಟನೆ. ಪುಟಗಳು ಕ್ರಾ. ಅ. ೨೯೪+೨೦. ಬೆಲೆ ರೂ. ೧—೪—೦.

೧೪೯ **ಬೆಳಗು** (ಆತ್ಮನಿವೇದನೆ): ಶ್ರೀ. ಮಧುರಚೆನ್ನ. ಹಲಸಂಗಿಯ ಅರವಿಂದ ಗ್ರಂಥಮಾಲೆಯ ೨ನೆಯ ವರ್ಷದ ೩ನೆಯ ಕಮಲ. ಕ್ರಾ. ಅ. ೧೦೮ ಪುಟಗಳು.

೧೫೦ **ಪ್ರಭುವರ್ಯರ ಯುರೋಪ್ ಪ್ರವಾಸ** (ಪ್ರವಾಸವೃತ್ತ): ಶ್ರೀ. ಆರ್. ಎಸ್. ನಾರಾಯಣರಾಯರು. ಪುಟಗಳು ಕ್ರಾ. ಅ. ೩೦. ಶ್ರೀಮನ್ ಮೈಸೂರು ಮಹಾರಾಜರ ವಿದೇಶಸಂಚಾರದ ವೃತ್ತಾಂತವನ್ನು ಮನೋರಂಜಕವಾಗಿ ಉದ್ಬೋಧಕವಾಗಿ ಬರೆಯಲಾಗಿದೆ. ಪ್ರವಾಸಕಾಲೀನ ಸುಂದರ ಚಿತ್ರಗಳನ್ನೊಳಗೊಂಡಿದೆ. ಸಂಗ್ರಾಹ್ಯ.

೧೫೧ **ಭಕ್ತಿಸುಮಾಂಜಲಿ ಮತ್ತು ಪೂಮಾಲೆ** (ಕವನಸಂಗ್ರಹ): ಪಂಡಿತ ಪರಿಮಿ ಪದ್ಮನಾಭಯ್ಯ. ಪುಟಗಳು ಕ್ರಾ. ಅ. ೨೪. ಬೆಲೆ ೪ ಆಣೆ.

೧೫೨ **ಶ್ರೀಕುಮುದೇಂದು ರಾಮಾಯಣಂ** (ಸಂಧಿಗಳು ೧—೮): ಸಂಪಾದಕರು ಶ್ರೀ. ಕೆ. ಜಿ. ಕುಂದಣಗಾರರು ಎಂ. ಎ. ಮುಂಬಯಿ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಪ್ರಕಟಿಸಿದುದು. ಪುಟಗಳು ೨೪೭. ಬೆಲೆ ೩ ರೂ.

೧೫೬ **ಪ್ರಪಂಚದ ಕೆಲಸಗಾರ** (ಶ್ರಮಜೀವಿಸಾಹಿತ್ಯ): ಶ್ರೀ. ದಿನಕರ ದೇಸಾಯಿ ಎಂ. ಎ. ಎಲ್‌ಎಲ್. ಬಿ. ಶ್ರೀ. ಎನ್. ಎಸ್. ಸುಬ್ಬರಾಯರ ಮುನ್ನುಡಿಯೊಡನೆ. ಪುಟಗಳು ಕ್ರಾ. ಅ. ೭೧. ಬೆಲೆ ೪ ಆ.

೧೫೮ **ವಾಕ್ಯವೃತ್ತಿ ಮತ್ತು ಲಘುವಾಕ್ಯವೃತ್ತಿ**: ಅನುವಾದಕರು ಶ್ರೀ. ವೈ. ಸುಬ್ಬರಾವ್, ಅಧ್ಯಾತ್ಮ ಪ್ರಕಾಶಕಾರ್ಯಾಲಯ, ಬೆಂಗಳೂರು. ಪುಟಗಳು ಕ್ರಾ. ಅ. ೩೬. ಬೆಲೆ ೩ ಆ.

೧೫೯ **ಅಧ್ಯಾತ್ಮಸೂಕ್ತಿ ಮಂಜರಿ** (ಆಧ್ಯಾತ್ಮಿಕ): ಅನುವಾದಕರು: ಮೇಲಣವರೆ. ಪುಟಗಳು ಡೆ. ಅ. ೬೭. ಬೆಲೆ ೬ ಆ.

೧೬೦ **ದೃಷ್ಟಿಲಾಭ** (ಕಥಾಸಂಗ್ರಹ): ಮೂಲಲೇಖಕರಾದ ಶ್ರೀ. ವಿ. ಎಸ್. ಖಾಂಡೇಕರರು ಮರಾಟಿಯಲ್ಲಿ ಬರೆದುದನ್ನು ಕನ್ನಡದಲ್ಲಿ ಅನುವಾದಿಸಿದವರು ಶ್ರೀ. ವಿ. ಎಂ. ಇನಾಮದಾರ ಬಿ. ಎ. (ಆನರ್ಸ್), ವಿಜಾಪುರ. ಕ್ರಾ. ಅ. ೯೧ ಪುಟಗಳು. ಕ್ಯಾಲಿಕೊಪ್ರತಿ. ಬೆಲೆ ?

## ಹಿಂದೀ

೧೫೪ **कवितावली (गोस्वामी तुलसीदास विरचित**: ಅನುವಾದರು—ಶ್ರೀ. ಇಂದ್ರದೇವ ನಾರಾಯಣ. ಗೀತಾಪ್ರೆಸ್ ಗೋರಖಪುರದವರ ಪ್ರಕಟನೆ. ಕ್ರಾ. ಅ. ೨೨೯ ಪುಟಗಳು. ಬೆಲೆ ೯ ಆ.

೧೫೫ **भक्त नरसिंह मेहता**: ಶ್ರೀ. ಮಂಗಲ. ಪ್ರಕಾಶಕರು ಮೇಲಣವರೆ. ಕ್ರಾ. ಅ. ೧೬೮ ಪುಟಗಳು. ಬೆಲೆ ೬ ಆಣೆ.

೧೫೭ **ध्यानावस्थामे प्रभुसे वार्तालाप** : ಶ್ರೀ. ಜಯದಯಾಲ ಗೋಯಂದಕಾ. ಪ್ರಕಾಶಕರು ಮೇಲಣವರೆ. ಕ್ರಾ. ಅ. ೪೩ ಪುಟಗಳು. ಬೆಲೆ ೧। ಆಣೆ.

೧೬೧ **हंस (प्रेमचंद-स्मृति अंक** ): ಸಂಪಾದಕರು, ಶ್ರೀ. ಬಾಬೂರಾವ ವಿಷ್ಣು ಪರಾಡಕರ. ಬನಾರಸದ ಹಂಸ ಕಾರ್ಯಾಲಯದವರ ಪ್ರಕಟನೆ. ಸುಪರರಾಯಲ್ ಆಕಾರದ ೨೦೮ ಪುಟಗಳು.




ಹೊದಿಕೆಯ ಪುಟವನ್ನು ನೋಡಿರಿ.

CC-0. Jangamwadi Math Collection. Digitized by eGangotri

ಬಿಡುವಿನ ಹೊತ್ತನ್ನು ಆನಂದದಲ್ಲಿ ಕಳೆಯಲು




ಮತ್ತು




ನಿಮ್ಮ ಮನೆಯಲ್ಲಿ ಅಗತ್ಯ ಬೇಕು.








ಇವಲ್ಲದೆ ಮುಂಬಯಿಯಲ್ಲಿ ದೊರೆಯುವ ಬೇರೆ ಎಲ್ಲ ಬಗೆಯ ಮಾಲನ್ನು ಅಲ್ಪ ಕಮಿಶನ್ನಿನ ಮೇಲೆ, ಅಗ್ಗವಾಗಿ ಕೊಂಡುಕೊಂಡು ಅತ್ಯಂತ ಜಾಗರೂಕತೆಯಿಂದ ಮತ್ತು ಹೊತ್ತಿಗೆ ಸರಿಯಾಗಿ ಕಳಿಸುತ್ತೇವೆ

ಹೆಚ್ಚಿನ ವಿವರಗಳಿಗಾಗಿ ಹೊಸ ದೊಡ್ಡ ೧೦೦ ಪುಟಗಳ ಸಚಿತ್ರ ಮರಾಠಿ ಕ್ಯಾಟಲಾಗನ್ನು, ೨ ಆಣೆಯ ಅಂಚೇಚೀಟಿ ಕಳಿಸಿದಲ್ಲಿ ಉಚಿತವಾಗಿ ಕಳಿಸಲಾಗುವುದು.

**ಗೋಪಾಳ ಸಖಾರಾಮ ಮತ್ತು ಕಂಪನಿ,** ೩೯೭-೯೯ ಕಾಳಬಾದೇವಿ ರೋಡ ಮುಂಬಯಿ ನಂ. ೨.

# SHREENIVAS & Co




-THE PREMIER-
Karnataka
PHOTO ENGRAVERS.

## ARTISTS & DESIGNERS.

Beautiful & Faithful - Reproductions
BY
OUR PERFECT LINE, HALF-TONE & COLOUR PROCESS.



— Malamaddi, DHARWAR.

CC-0. Jangamwadi Math Collection. Digitized by eGangotri

# ಪರಿವಿಡಿ



---

## ಬರಲಿವೆ

ಲಕ್ಷ್ಮೀಶಕವಿಯ ಸ್ಥಳವಿಚಾರ
ನಾ. ಶ್ರೀ. ರಾಜಪುರೋಹಿತರು

ಉಮರನನ್ನು ಕುರಿತು
ವೈ. ಎಂ. ಷಣ್ಮುಖಯ್ಯ ಬಿ. ಎ.

ಪ್ಯಾಲೆಸ್ಟೈನಿನ ಪಾಲುಗಾರಿಕೆ
"ನಾಗರಿಕ"

ರೋಗಿಯ ಕೈಫಿಯತ್ತು (ವಿನೋದ ಪ್ರಬಂಧ)
ಬಿ. ರಂಗಣ್ಣ

CC-0. Jangamwadi Math Collection. Digitized by eGangotri



ಚೀನ ಜಪಾನ ರಣಭೂಮಿಯಲ್ಲಿರುವ

**ಪೇಪಿಂಗ್ ನಗರದಲ್ಲಿಯ ಒಂದು ತಿಬೇಟಿ ಮಂದಿರ**

CC-0. Jangamwadi Math Collection. Digitized by eGangotri



ಸಂಪುಟ ೧೫

ಈಶ್ವರ ಸಂ. ಆಶ್ವಿನ ವದ್ಯ ಚತುರ್ದಶಿ ೧-೧೧-೩೭

ಸಂಚಿಕೆ ೧೧


# ಕನ್ನಡವು

ನಿನ್ನಿನದು ನುಡಿಯಲ್ಲ, ಮೊನ್ನಿನದು ನುಡಿಯಲ್ಲ ।
ಕನ್ನಡವು, ನುಡಿದರಿದನಾ ಪುರಾತನರೊಸೆದು ! ।
ಇದು ಶಕ್ತಿಯಿದು ವೀರವಾಣಿಯೀ ಕನ್ನಡವು ! ।
ಇದು ಗೆಯ್ದು ಗೆಯ್ಮೆ ವಿಶ್ವಕ್ಕೆ ವಿಸ್ಮಯಕರವು ! ।
ಇದಕೊಂದು ರೂಪುಂಟು, ಬಗೆಯುಂಟು, ಚೆಲ್ವುಂಟು ।
ಇದಕೆ ಮಾರ್ದವವುಂಟು, ಕಾಠಿಣ್ಯವಿದಕುಂಟು ! ।
ಇದು ನೃಪೋತ್ತುಂಗ ನೃಪತುಂಗನಿಗೆ ಮೆಚ್ಚಿನದು ! ।
ಇದು ಜಗದ್ವಂದ್ಯ ಕವಿ ಪಂಪನಿಗೆ ಮೆಚ್ಚಿನದು ! ।
ಇದು ಭಕ್ತಬಸವೇಶನೊಲಿದೊಲಿದು ನುಡಿದ ನುಡಿ ! ।
ಇದು ಪೂಜ್ಯದಾಸರಾದರದಿಂದೆ ನುಡಿದ ನುಡಿ ! ।
ಇದುವೆ ತಾಯ್ನುಡಿ ವೀರ ಹುಕ್ಕಬುಕ್ಕರಿಗಲ್ತೆ ? ।
ಇದು ಕುಮಾರವ್ಯಾಸರಳ್ಕರಿನ ನುಡಿಯಲ್ತೆ ? ॥

ಆದರದೆ ಬಂದು ತಲೆವಾಗಿರಿದಿರಿದಿರಲ್ಲಿ ! ।
ಸೋದರರೆ, ಬಂದು ತಲೆವಾಗಿರಿದಿರಿದಿರಲ್ಲಿ ! ॥

—ಸಾಲಿ ರಾಮಚಂದ್ರರಾಯ

CC-0. Jangamwadi Math Collection. Digitized by eGangotri

# ಫಕೀರನು ಅಧ್ಯಕ್ಷನಾದ!

★

**ಯುತಿಮುನಿಗಳಿಂದ ಪುರಸ್ಕೃತವಾದ, ಶಾಕ್ಯಮುನಿ ಅಶೋಕರಿಂದ ಪೋಷಿತವಾದ 'ರಾಜಸನ್ಯಾಸ'ದ ಉಜ್ವಲ ಪ್ರಣಾಲಿಯು ಭಾರತೀಯ ರಾಜಕೀಯ ❖ ರಂಗದಲ್ಲಿ ಮತ್ತೆ ಪ್ರಸ್ಥಾಪಿತವಾಗುತ್ತಿದೆ. ❖**



ಮದರಾಸಿನ ಶಾಸನಸಭೆಯ ಅಧ್ಯಕ್ಷಪೀಠವನ್ನು ಫಕೀರ ವೇಷಧಾರಿಗಳಾದ ಶ್ರೀಮಾನ್ ಬಲುಸು ಸಾಂಬಮೂರ್ತಿಗಳವರು ಅಲಂಕರಿಸಿದ್ದಾರೆ. ಉಡಲೊಂದು ಪಂಚೆ, ಹೊತ್ತುಕೊಳ್ಳಲೊಂದು ಉತ್ತರೀಯ. ರಾಷ್ಟ್ರೀಯರನ್ನು ಇದು ಸಂತೋಷಗೊಳಿಸಿದ್ದರೆ, ಆಡಂಬರಪ್ರಿಯರಿದಕ್ಕೆ ಮೂಗು ಮುರಿಯುತ್ತಲಿದ್ದಾರೆ.

ಹಿಂದುಸ್ಥಾನವನ್ನು ಇಂದು ಎರಡು ಭಾಗಗಳಾಗಿ ವಿಂಗಡಿಸಬಹುದು. 'ರಾಷ್ಟ್ರೀಯ ಹಿಂದುಸ್ಥಾನ'ದಲ್ಲಿ (ಕಾಂಗ್ರೆಸ್ ಪ್ರಭುತ್ವವಿರುವ ಪ್ರಾಂತಗಳಲ್ಲಿ) ಒಂದು ನೋಟವಿದ್ದರೆ, 'ಅರಾಷ್ಟ್ರೀಯ ಹಿಂದುಸ್ಥಾನ'ದಲ್ಲಿ ಇನ್ನೊಂದು. ಬಂಗಾಲದ ಹಕ್ ಮಂತ್ರಿಮಂಡಲದಲ್ಲಿಯ ಶ್ರೀ. ಸರಕಾರ ಅವರು ಒಂದು ಕಾಲಕ್ಕೆ ಅಲ್ಲಿಯ ರಾಷ್ಟ್ರೀಯ ಪಕ್ಷದ ಮುಖಂಡರಲ್ಲೊಬ್ಬರಾಗಿದ್ದರು. ಶುದ್ಧ ರಾಷ್ಟ್ರೀಯ ವಸ್ತ್ರವಾದ ಧೋತ್ರವನ್ನುಟ್ಟು ಶಾಸನ ಸಭಾಗೃಹದಲ್ಲಿ ಕುಳ್ಳಿರಲು ಅವರಿನ್ನೂ ಗವರ್ನರರ ಅನುಮತಿಯನ್ನು ಪಡೆಯಬೇಕಾಗಿದೆ.

ಹಿಂದೀ ರಾಜಕೀಯ ರಂಗದಲ್ಲಿ ಫಕೀರನ ಪ್ರಣಾಲಿಯನ್ನು ತಂದವರು ಮಹಾತ್ಮಾ ಗಾಂಧಿಯವರೆ. ಆ ಮಾತಿಗೆ ೧೮ ವರುಷಗಳಾದುವು. ದೊಡ್ಡದೊಡ್ಡವರು ಕೂಡ ಆಗ ತಿರಸ್ಕಾರದಿಂದ ನಕ್ಕರು. ಆದರೆ ಗವರ್ನರರು, ವೈಸ್ರಾಯರು ಅವರನ್ನು ಆ ವೇಷದಲ್ಲಿಯೆ ಕಾಣಬೇಕಾಯಿತು.

'ಇನರ್ ಟೆಂಪಲಿನ ಬ್ಯಾರಿಸ್ಟರನೊಬ್ಬನು ರಾಜದ್ರೋಹಿ ಫಕೀರನಾಗಿದ್ದಾನೆ; ಅರೆಬತ್ತಲೆಯಾಗಿ ವೈಸ್ರಾಯರ ಅರಮನೆಯ ಮೆಟ್ಟಿಲುಗಳನ್ನು ಹತ್ತುತ್ತಿದ್ದಾನೆ; ಚಕ್ರವರ್ತಿಗಳ ಪ್ರತಿನಿಧಿಯೊಂದಿಗೆ ಸಮಸಮಾನತೆಯ ಮಾತುಕತೆಗಳನ್ನು ನಡೆಸಿದ್ದಾನೆ' ಎಂದು ಚರ್ಚಿಲ್ಲರು ವಿಷಸರ್ಪದಂತೆ ಫೂತ್ಕರಿಸಿದರು.

ಆದರೆ ಆ ಸಂಪ್ರದಾಯವು ಬಲಪಡುತ್ತಲೆ ಬಂದಿತು. ಹಿಂದುಸ್ಥಾನದ ನೆಲ-ನೀರು-ಗಾಳಿಗಳಿಗೆ ಯೋಗ್ಯವಾದುದು ಅದು. ನಮ್ಮ ಸಂಸ್ಕೃತಿಗೆ ಒಪ್ಪುವಂತಹದು ಅದು. ರಾಜರು ಕೂಡ ಯತಿಮುನಿಗಳ ಮುಂದೆ ತಲೆವಾಗುತ್ತಿದ್ದರು. ಯಾಜ್ಞವಲ್ಕ್ಯನ ಕಾಲದಿಂದ ನಡೆದು ಬಂದ, ಸಿದ್ಧಾರ್ಥ-ಅಶೋಕ ಮೊದಲಾದವರಿಂದ ಪರಿಪೋಷಿತವಾದ ಪರಂಪರೆಯನ್ನೆ ಗಾಂಧಿಯವರು ಪುನರುಜ್ಜೀವಿಸಿದರು.

ಚರ್ಚಿಲ್ಲರ ಹೊಟ್ಟೆಯುರಿ ಇನ್ನೂ ಹೆಚ್ಚಾಗುವಂತೆ ಗಾಂಧೀಜಿಯವರು ಈ ವೇಷದಲ್ಲಿಯೆ ಲಂಡನಿನ ವರ್ತುಲ ಪರಿಷತ್ತಿಗೆ ಹೋಗಿಬಂದರು; ರಾಜಪ್ರತಿನಿಧಿಯೇಕೆ, ಸಾಕ್ಷಾತ್ ರಾಜಾಧಿರಾಜರೊಡನೆ ಈ ವೇಷದಲ್ಲಿಯೆ ಸಮಾಲೋಚನ ಮಾಡಿದರು, ಮಾತುಕತೆಯಾಡಿದರು.

CC-0. Jangamwadi Math Collection. Digitized by eGangotri

ಗಾಂಧಿಯವರು ಈ ಮಹಾತ್ಯಾಗವನ್ನು ಮಾಡಿದ ಘಟನೆಯು ೧೯೨೧ರಲ್ಲಿ ನಡೆಯಿತು. ಗಾಂಧಿಯವರಾಗ ದಕ್ಷಿಣಭಾರತದಲ್ಲಿ ಖಾದಿಪ್ರಚಾರಕ್ಕಾಗಿ ವಾಯುವೇಗದಿಂದ ಸಂಚಾರ ನಡೆಸಿದ್ದರು. ತಮಿಳುನಾಡಿನಲ್ಲಿ ಹೊಲಗಳ ನಡುವಿನಿಂದ ಅವರು ಕುಳಿತಿರುವ ಉಗಿಬಂಡೆಯು ಸಾಗಿರುವಾಗ ಬರಿ ಒಂದು ಲುಂಗಿಯನ್ನುಟ್ಟು ದುಡಿಯುತ್ತಿರುವ ಒಕ್ಕಲಿಗರನ್ನು ಕಂಡು ಅವರ ಮನಸ್ಸಿನಲ್ಲೊಂದು ವಿಚಾರ ಮಿಂಚಿತು.

ದಿಂಡಿಗಲ್ಲಿನಲ್ಲಿ ಅವರೊಂದು ಪ್ರಕಟನೆಯನ್ನು ಹೊರಡಿಸಿದರು. "ದುಃಖಸೂಚನೆಯೆಂದು ಒಂದು ತಿಂಗಳ ವರೆಗೆ ಧೋತ್ರ, ಅಂಗಿ, ಟೊಪ್ಪಿಗೆಗಳನ್ನು ಬಿಟ್ಟುಕೊಟ್ಟು ಒಂದು ಪಂಚೆಯನ್ನು ಮಾತ್ರ ಉಡುವುದಾಗಿಯೂ, ಯಾವಾಗಲಾದರೂ ಒಮ್ಮೆ ಒಂದು ಮೇಲುವಸ್ತ್ರವನ್ನು ಮಾತ್ರ ಹೊರುವುದಾಗಿಯೂ" ಅವರು ತಿಳಿಸಿದರು. ಖಾದಿ ಕೊಳ್ಳಲು ಅಶಕ್ತರಾದವರು, ಹಿಂದುಸ್ಥಾನದ ಅಸಂಖ್ಯ ದರಿದ್ರರು ದಿನಾಲು ತೊಡುವ ಈ 'ಕನಿಷ್ಠ ವಸ್ತ್ರವನ್ನೆ ಉಡುವಂತೆ ಕೇಳಿಕೊಂಡರು.

ಬೆಳಗ್ಗೆ ೧೦ ಗಂಟೆಗೆ ನಾಪಿತನೊಬ್ಬನು ಬಂದು, ಅವರ ಮಸ್ತಕದ ಮುಂಡನವನ್ನು ಮಾಡಿದನು. ಅತಿವಿನೀತ ಭಾವದಿಂದ ಕಾಲಿಗೆರಗಿ ತಲೆಗೆ ಕತ್ತಿ ಹಚ್ಚಿದನು. ಪ್ರತಿಫಲವಾಗಿ ಏನನೂ ತಕ್ಕೊಳ್ಳಲಿಲ್ಲ. ಆ ಕಾಲಕ್ಕೆ ಮಹಾತ್ಮರು ತಳೆದ ಗಂಭೀರ ಮುದ್ರೆಯು ನೆರೆದವರಲ್ಲಿ ಭಯಭಕ್ತಿಗಳನ್ನು ಮೂಡಿಸಿತು. 'ಇದು ಒಂದು ತಿಂಗಳ ಮುಟ್ಟಿಗಿನ ಸಂಕಲ್ಪವಲ್ಲ; ಅಖಂಡ ಸನ್ಯಾಸವ್ರತದ ಆರಂಭವಿದೆ'ಎಂದು ಎಲ್ಲರೂ ಅರಿತರು. ರಾಜಗೋಪಾಲಾಚಾರ್ಯರೇ ಮೊದಲಾದವರು ಮೊರೆಯಿಟ್ಟರು. ಅದೆಲ್ಲ ವ್ಯರ್ಥವಾಯಿತು.

ಹಿಂದುಸ್ತಾನದ ದಾರಿದ್ರ್ಯವು ಅವರ ಹೃದಯದ ಮೇಲೆ ಅಚ್ಚೊತ್ತಿದಂತೆ ಮೂಡಿತ್ತು. ತಾನು ಅದರ ಪ್ರತೀಕವಾಗಬೇಕೆಂಬ ಹಂಬಲವೇ ಮಹಾತ್ಮರ ಈ ನಿರ್ಧಾರಕ್ಕೆ ಕಾರಣವಾಯಿತು.

ಈ ಅಭಿನವ ವೇಷದಲ್ಲಿಯೆ ಮಹಾತ್ಮರು ಮುಂದಿನ ಪಯಣ ಬೆಳಸಿದರು. ಮಧುರೆಯ ಜನರು ಹಾದಿಯಲ್ಲಿ ಅವರ ದರ್ಶನ ಪಡೆಯಲು ತಂಡತಂಡವಾಗಿ ನೆರೆದಿದ್ದರು. ಅವರು ಕಾರಿನಲ್ಲಿ ಕುಳಿತೊಡನೆ, ವಿಷಣ್ಣವದನರಾಗಿ ಎಲ್ಲರೂ ತಲೆವಾಗಿದರು. ಕಾರು ಹೊರಟಾಗ, ಮೂಡುವ ಸೂರ್ಯನ ಚೆಂಗದಿರುಗಳು ಅವರ ಬೊಕ್ಕತಲೆಯ—ಬರಿಮೈಯ ಮೇಲೆ ಬಿದ್ದುವು. ಅವರ ಅಂಗಾಂಗಗಳು ಪ್ರಕಾಶದ ರಾಶಿಯಂತೆ ಕಂಡುವು.

**ಗಾಂಧಿಯವರ ೭೮ನೆಯ ಜನ್ಮದಿನೋತ್ಸವದಲ್ಲಿ ಭಾರತೀಯ ಜನತೆಯು ಅವರಿಗೆ ಚಿರಾಯುಷ್ಯವನ್ನು ಕೋರುತ್ತದೆ.**





CC-0. Jangamwadi Math Collection. Digitized by eGangotri

# ಜನರೇಕೆ ಕುಡುಕರಾಗುತ್ತಾರೆ?

( ಕೌಂಟ್ ಲಿಯೊ ಟಾಲ್‌ಸ್ಟಾಯರ ಲೇಖನವೊಂದು )

ಅನುವಾದಕರು: ಶ್ರೀ. ಎನ್. ಎಸ್. ಸೀತಾರಾಮಶಾಸ್ತ್ರಿ, ಮೈಸೂರು

**ಸೇಲಂ ಜಿಲ್ಲೆಯಲ್ಲಿ ಪಾನನಿಷೇಧ ಚಳವಳಿಯು ಪ್ರಾರಂಭವಾಗಿದೆ. ಮಹಾತ್ಮಾ ಗಾಂಧಿಯವರು ಬಹುದಿನಗಳಿಂದ ದುಡಿಯುತ್ತಿದ್ದರೂ ಇತ್ತೀಚಿನ ಈ ಘಟನೆಯು ಈ ಚಳವಳಿಗೆ ಮಹತ್ವ ಕೊಟ್ಟಿದೆ. ಈ ಸಂಬಂಧವಾಗಿ ಅಪಾರ ಸಾಹಿತ್ಯಸೃಷ್ಟಿಯೂ ಆಗುತ್ತಿದೆ. ಆದರೂ ೧೮೯೦ನೆಯ ವರ್ಷದಷ್ಟು ಹಿಂದೆಯೇ ರಶ್ಯದ ಶ್ರೇಷ್ಠ ಸಾಹಿತಿ ಟಾಲ್‌ಸ್ಟಾಯಿಯು ಕುಡಿತದ ವಿಚಾರವಾಗಿ ಪಟ್ಟಿರುವ ಅಭಿಪ್ರಾಯಗಳು ಇಂದಿಗೂ ಎಂದೆಂದಿಗೂ ಅಪ್ರಕೃತವೆನಿಸವು. "Why do men stupefy themselves?" ಎಂಬ ಅವರ ಲೇಖನದ ಸರಳಾನುವಾದವಿದು.**

ವೈನ್, ಬೀರ್, ಸಾರಾಯಿ, ಹೆಂಡ, ಗಾಂಜಾ, ಅಫೀಮು, ತಂಬಾಕು ಮುಂತಾದ ಮಾದಕ ದ್ರವ್ಯಗಳನ್ನು ಜನರೇಕೆ ಸೇವಿಸುತ್ತಾರೆ? ಈ ಅಭ್ಯಾಸವೇಕೆ ಹುಟ್ಟಿತು? ಅನಾಗರಿಕರಿಂದ ಹಿಡಿದು ಸುಸಂಸ್ಕೃತರ ವರೆಗೂ ಇದೇಕೆ ಹರಡಿದೆ? ಮದ್ಯ ಕುಡಿಯದಿದ್ದರೆ ಗಾಂಜಾ, ಅದಿಲ್ಲದಿದ್ದರೆ ಕಡೆಗೆ ತಂಬಾಕನ್ನಾದರೂ ಜನರೇಕೆ ಸೇವಿಸುತ್ತಾರೆ?

ಹೀಗೇಕೆ ಜನರು ಪ್ರಯತ್ನಪೂರ್ವಕವಾಗಿ ಮತ್ತರಾಗುತ್ತಾರೆ?

ಮದ್ಯಪಾಯಿಯನ್ನು ಏಕೆ ಕುಡಿಯುತ್ತೀಯೆಂದು ಕೇಳಿ. "ಹೊ! ಎಷ್ಟು ಹಿತವಾಗಿರುತ್ತದೆ. ಎಲ್ಲರೂ ಕುಡಿಯುತ್ತಾರಲ್ಲ!" ಎಂದುತ್ತರ ಕೊಡುತ್ತಾನೆ. "ಕುಡಿದರೆ ಒಳ್ಳೆ ಗೆಲುವಾಗಿರುತ್ತದೆ" ಎನ್ನುವವರೂ ಉಂಟು. ಕುಡಿತವು ಕೆಟ್ಟದ್ದಿದೆ, ಒಳ್ಳೆಯದೆ ಎಂಬುದು ಕೂಡ ತಲೆಯನ್ನು ಹೊಗದವರು ಕುಡಿತವು ಮೈಗೆ ಒಳ್ಳೆಯದೆನ್ನುತ್ತಾರೆ. "ಕಾಲ ಕಳೆಯುವುದಕ್ಕೋಸ್ಕರ" ಎಂದು ಹೇಳುವ ಖುಷಿಗಾರರೂ ಇದ್ದಾರೆ.

ಕಾಲ ತಳ್ಳುವುದಕ್ಕೂ, ಗೆಲುವಾಗಿರುವುದಕ್ಕೂ, ಮಂದಿಯ ಅನುಕರಣಕ್ಕೂ ಜನರು ಕುಡಿಯುತ್ತಾರೆಯೆ? ಗೆಲುವಾಗಿರಬೇಕು, ಕಾಲ ಕಳೆಯಬೇಕು, ಎಲ್ಲರೂ ಮಾಡುವುದನ್ನು ಮಾಡಬೇಕು ಎಂದು ಬೇಕಾದರೆ ಕೈಬೆರಳನ್ನು ಕಚ್ಚುತ್ತಿರಬಹುದು, ಹಾಡಿಕೊಳ್ಳಬಹುದು. ಪ್ರಕೃತಿಯ ಸಂಪತ್ತನ್ನು ನಾಶಗೊಳಿಸದೆ, ಯಾರ ಕಾಲವನ್ನೂ ಶ್ರಮವನ್ನೂ ಬಳಸಿಕೊಳ್ಳದೆ ಆತ್ಮತೃಪ್ತಿಗಾಗಿ ಯಾರು ಏನು ಬೇಕಾದರೂ ಮಾಡಬಹುದು. ಆದರೆ ವೈನ್, ಗಾಂಜಾ, ಅಫೀಮು, ಮುಂತಾದುವನ್ನು ತಯಾರಿಸಲು ಕೋಟ್ಯವಧಿಜನರ ಶ್ರಮವೂ ಕೋಟ್ಯಂತರ ಎಕರೆಗಳಷ್ಟು ಉತ್ಕೃಷ್ಟ ಭೂಮಿಯೂ ಬೇಕಾಗುತ್ತದೆ. ಇಷ್ಟು ಮಹತ್ಪ್ರಯತ್ನದಿಂದ ತಯಾರು ಮಾಡಿದ ಈ ದ್ರವ್ಯಗಳು ಯುದ್ಧ—ಪಿಡುಗುಗಳಿಗಿಂತಲೂ ಹೆಚ್ಚಿನ ಅನರ್ಥವನ್ನುಂಟುಮಾಡುತ್ತವೆ. ಇದು ಎಲ್ಲರಿಗೂ ಗೊತ್ತು. ಕಾಲಕ್ಷೇಪಕ್ಕೂ, ಮಂದಿಯ ಅನುಕರಣಕ್ಕೂ, ಖುಷಿಗಾರಿಕೆಗೂ ಇದೇನೆ ದಾರಿ?

ಬೇರೆ ಕಾರಣವಿರಬೇಕು. ಮಡದಿ ಮಕ್ಕಳಿಗಾಗಿ ಸರ್ವಸ್ವವನ್ನೂ ತ್ಯಜಿಸುವಷ್ಟು ಮಮತೆ ಇಟ್ಟಿರುವ ಜನರಿದ್ದಾರೆ. ಅವರು ಕುಡಿತಕ್ಕೆ ಬಿದ್ದು, ಕುರುಡಕಾಸನ್ನೂ ಸಂಸಾರಕ್ಕೆ ಕೊಡದೆ ಎಲ್ಲ ಸಂಪಾದನೆಯನ್ನು ಮಾದಕ ವಸ್ತುಗಳಿಗೆ ಸೇರಿಸುವ ನಿದರ್ಶನಗಳಿಲ್ಲವೆ? ತಮ್ಮ ಕಣ್ಣಮುಂದೆಯೆ ಸಂಸಾರವು ನಶಿಸಿ ಹೋಗುತ್ತಿರುತ್ತದೆ. ಆದರೂ ಮಡದಿ ಮಕ್ಕಳ ಮೈಗೆ ಬಟ್ಟೆ, ಹೊಟ್ಟೆಗೆ ಹಿಟ್ಟು ಒದಗಿಸಿ ಕೊಡಬಹುದಾದ ತಮ್ಮ ಸಂಪಾದನೆಯನ್ನೆಲ್ಲ ಅವರು ಕುಡಿತಕ್ಕೆ ಹಾಕದೆ ಇರಲಾರರು. ಜನರನ್ನು ಈ ಜೀವನಕ್ಕೆ ಪ್ರೇರೇಪಿಸಬೇಕಾದರೆ, ಕಾರಣಗಳು ಇನ್ನೂ ಆಳವಾಗಿರಬೇಕು. ಇಷ್ಟೆಲ್ಲ ಎಂದಿಗೂ ಕಾಲಹರಣಕ್ಕಲ್ಲ, ಮಂದಿಯ ಅನುಕರಣಕ್ಕಲ್ಲ, ಖುಷಿಗಾರಿಕೆಗಲ್ಲ.

ನಾನೂ ಅಪೇಯಪಾನ ಮಾಡುತ್ತಿದ್ದೆ. ಕುಡುಕರ ಮನೋಧರ್ಮ ನನಗೆ ಗೊತ್ತು. ಕುಡುಕರನೇಕರನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ್ದೇನೆ. ಆ ವಿಚಾರವಾಗಿ ಬೇಕಾದಷ್ಟು ಅಧ್ಯಯನ ಮಾಡಿದ್ದೇನೆ. ಜಿಜ್ಞಾಸೆ ನಡೆಸಿದ್ದೇನೆ.

CC-0. Jangamwadi Math Collection. Digitized by eGangotri

ಇಷ್ಟು ಪರಿಶ್ರಮದಿಂದ, ಜನರ ಕುಡಿತಕ್ಕೆ ಇದೇ ಮೂಲ ಕಾರಣವೆಂದು ಹೇಳುತ್ತೇನೆ:

ಮನುಷ್ಯನು ಆತ್ಮಪರೀಕ್ಷೆ ನಡೆಸಿಕೊಂಡರೆ, ತನ್ನಲ್ಲಿ ಎರಡು ಬಗೆಯ ಜೀವಿಗಳನ್ನು ಕಾಣುತ್ತಾನೆ. ಒಂದು ಕುರುಡ ಜೀವಿ, ಅದು ದೈಹಿಕವಾದುದು. ಮತ್ತೊಂದಕ್ಕೆ ಕಣ್ಣಿದೆ; ಅದು ನೈತಿಕ ಜೀವಿ. ಕುರುಡ ಜೀವಿಯು ತಿಂದು, ಕುಡಿದು, ವಿಶ್ರಮಿಸಿ, ನಿದ್ರಿಸಿ, ಸೃಷ್ಟಿಸಿ, ಚಲಿಸುತ್ತ ಯಂತ್ರದಂತೆ ಜೀವಿಸುತ್ತದೆ. ದೃಷ್ಟಿಯುಕ್ತವಾದ ಜೀವಿಯು ಕುರುಡ ಜೀವಿಯೊಡನೆ ಕಟ್ಟುಬಿದ್ದು, ಸ್ವತ ಏನ ಯಾವ ಕರ್ಮವನ್ನೂ ಮಾಡುವುದಿಲ್ಲ. ಯಂತ್ರಜೀವನದ ಕಾರ್ಯಗಳಿಗೆ ಮಾತ್ರ ತನ್ನ ಒಪ್ಪಿಗೆಯನ್ನು ಕೊಡುತ್ತದೆ; ಅಥವಾ ತಪ್ಪು ಕಂಡುಹಿಡಿಯುತ್ತದೆ.

ಈ ನೈತಿಕ ಜೀವಿಯನ್ನು ಉತ್ತರಮುಖಿಯಾದ ಸೂಜಿಗೆ ಹೋಲಿಸಬಹುದು. ಈ ಸೂಜಿಯು ಯಾವಾಗಲೂ ದಕ್ಷಿಣೋತ್ತರ ರೇಖೆಯಲ್ಲಿಯೆ ಇರುತ್ತದೆ. ಅದರುದ್ದಕ್ಕೂ ಒಂದು ಸ್ಕ್ರೀನನ್ನು ಹಾಕಿದರೆ, ಅವೆರಡೂ ಒಂದೇ ದಿಕ್ಕಿನಲ್ಲಿರುವವರೆಗೂ ಸೂಜಿಯು ಪ್ರತ್ಯೇಕವಾಗಿ ಕಾಣುವುದಿಲ್ಲ. ಸ್ಕ್ರೀನು ಅಲುಗಿದರೆ ಸಾಕು; ಸೂಜಿಯು ಕಾಣಿಸಿಕೊಳ್ಳುತ್ತದೆ. ಹಾಗೆಯೆ ನೈತಿಕ ಜೀವಿಯು ಅಥವಾ ಅಂತಸ್ಸಾಕ್ಷಿಯು ಯಾವಾಗಲೂ ಸತ್ಪಥವನ್ನೆ ಸೂಚಿಸುತ್ತಿರುತ್ತದೆ. ನಾವು ಆ ಮಾರ್ಗವನ್ನು ಹಿಡಿದಿರುವವರೆಗೂ ನಮಗೆ ಆ ಅರಿವು ಇರುವುದಿಲ್ಲ. ಅಡ್ಡದಾರಿ ಹಿಡಿಯುವುದೇ ತಡ, ಅಂತಸ್ಸಾಕ್ಷಿಯು ಎಷ್ಟು ದೂರ ತಪ್ಪು ದಾರಿಯಲ್ಲಿ ಪಶುಜೀವಿಯು ಪ್ರವರ್ತಿಸಿದೆ ಎಂಬುದನ್ನು ತೋರಿಸುತ್ತದೆ. ಹಡಗು ನಡೆಸುವವನಿಗೆ ಹಡಗು ದಾರಿಕೆಟ್ಟಿರುವುದು ಗೊತ್ತಾಗಿರುವಾಗ, ಪಥವನ್ನು ಸರಿಪಡಿಸಿಕೊಂಡ ಹೊರತು ಅಥವಾ ಹಡಗು ಹಿಡಿದಿರುವ ಹಾದಿಯು ನೆಟ್ಟಗಿಲ್ಲವೆಂಬ ಜ್ಞಾನವನ್ನು ನಾಶಪಡಿಸಿಕೊಂಡ ಹೊರತು ಅವನು ಹಡಗನ್ನು ಮುಂದಕ್ಕೆ ನಡೆಸಲಾರದೆ ಹೇಗೆ ಹೋಗುತ್ತಾನೆಯೊ, ಅದೇ ರೀತಿಯಲ್ಲಿ ಮನುಷ್ಯನಿಗೆ ತಾನು ತಪ್ಪುದಾರಿಯಲ್ಲಿ ಬಿದ್ದಿರುವ ಜ್ಞಾನೋದಯವಾಗಿರುವಾಗ ತನ್ನ ಜೀವನ ಪಥವನ್ನು ಅಂತಸ್ಸಾಕ್ಷಿಯ ಶಾಸನಗಳಿಗೆ ಒಳಪಡಿಸಿ ತಿದ್ದಿಕೊಂಡ ಹೊರತು ಅಥವಾ ಸ್ವಸ್ವರೂಪ ಜ್ಞಾನಬೋಧೆಯನ್ನು ಮಾಡುವ ಅಂತಸ್ಸಾಕ್ಷಿಯ ಬಾಯನ್ನು ಮುಚ್ಚಿಬಿಟ್ಟಹೊರತು ಯಾವ ಕೆಲಸವನ್ನೂ ಅವನು ಮಾಡಲಾರದವನಾಗುತ್ತಾನೆ.

ಮನುಷ್ಯಜೀವನದಲ್ಲಿ ಈ ಎರಡು ಬಗೆಯ ಪ್ರಯತ್ನಗಳು ಕಾಣಬರುತ್ತವೆ: ಅಂತಸ್ಸಾಕ್ಷಿಯ ಅಣತಿಗೆ ಅನುಸಾರವಾಗಿ ವರ್ತಿಸಿ, ಸ್ವಚ್ಛಜೀವನವನ್ನು ನಡೆಸುವುದು; ಅಂತಸ್ಸಾಕ್ಷಿಯ ವಾಣಿಯನ್ನೆ ಮುಳುಗಿಸಿ ಸ್ವೇಚ್ಛಾಪ್ರವರ್ತನೆಯಲ್ಲಿ ನಿರತವಾಗುವುದು.

ಈ ಎರಡು ಬಗೆಯಲ್ಲಿಯೂ ಬದುಕುವವರುಂಟು. ಮೊದಲನೆಯ ಜಾತಿಯ ಜೀವಿಗಿರುವುದು ಒಂದೇ ದಾರಿ; ನೈತಿಕ ವಿಕಾಸ, ಅಂದರೆ ಅಂತರ್ಜ್ಯೋತಿಯನ್ನು ಹೊತ್ತಿಸಿ ಅದರ ಬೆಳಕಿನಲ್ಲಿ ಜೀವನನೌಕೆಯನ್ನು ನಡೆಸುವುದು. ಎರಡನೆಯ ಜಾತಿಯೆ ಅಂತಸ್ಸಾಕ್ಷಿಯ ಅಣತಿಗಳನ್ನು ಕಡೆಗಾಣುವುದು. ಇದಕ್ಕೆ ಎರಡು ಮಾರ್ಗಗಳುಂಟು. ಒಂದು ಬಾಹ್ಯಕವಾದುದು, ಮತ್ತೊಂದು ಆಂತರಿಕವಾದುದು. ಅಂತಸ್ಸಾಕ್ಷಿಯ ವಾಣಿಯನ್ನು ಮರೆಯಲು ಇತರ ಹವ್ಯಾಸಗಳನ್ನು ಹಚ್ಚಿಕೊಳ್ಳುವುದು ಬಾಹ್ಯೋಪಾಯ. ಆಂತರಿಕವಾದುದು ಅಂತಸ್ಸಾಕ್ಷಿಯನ್ನೆ ನಿಸ್ತೇಜಗೊಳಿಸುವುದು. ಯಾವುದೇ ನೋಟವನ್ನು ನೋಡದಿರಬೇಕಾದರೆ ದೃಷ್ಟಿಯನ್ನು ಬೇರೆ ಕಡೆ ಹೊರಳಿಸಬೇಕು; ಅಥವಾ ಕಣ್ಣು ಮುಚ್ಚಿಕೊಳ್ಳಬೇಕು. ಅದೇ ರೀತಿಯಲ್ಲಿ ಅಂತಸ್ಸಾಕ್ಷಿಯನ್ನು ಕಡೆಗಾಣಲು ನಾನಾ ಹವ್ಯಾಸಗಳನ್ನು ಹಚ್ಚಿಕೊಂಡು ಅದನ್ನು ಮರೆಯಬೇಕು, ಇಲ್ಲವೆ ಅದನ್ನೆ ನಿರ್ವೀರ್ಯಗೊಳಿಸಬೇಕು. ಸಾಧಾರಣರಾದ ಮೊದ್ದು ಸ್ವಭಾವದವರಿಗೆ ಇತರ ಹವ್ಯಾಸಗಳೇ ಸಾಕು. ಸೂಕ್ಷ್ಮ ನೈತಿಕ ಪ್ರಕೃತಿಗಳಿಗೆ, ತಮ್ಮ ಜೀವನವು ಹಿಡಿದಿರುವ ಅಪಮಾರ್ಗದ ಅರಿವನ್ನು ಹೋಗಲಾಡಿಸಲು ಬಾಹ್ಯೋಪಾಯಗಳು ಏನೇನೂ ಫಲಕಾರಿಯಾಗುವುದಿಲ್ಲ.

ಅಂತಸ್ಸಾಕ್ಷಿಯ ಅಪೇಕ್ಷೆಗಳಿಗೂ ಜೀವನವಿಧಾನಕ್ಕೂ ಇರುವ ಅಸಾಮರಸ್ಯದ ಅರಿವು ಜೀವನವನ್ನು ಕುಂಠಿತವನ್ನಾಗಿಮಾಡುತ್ತದೆ. ಆದುದರಿಂದ ಜನರು ಅಂತಸ್ಸಾಕ್ಷಿಯನ್ನು ಮೊಬ್ಬುಗೊಳಿಸಿ, ಯಥಾಪ್ರಕಾರ ಜೀವನವನ್ನು ತಳ್ಳುತ್ತಾರೆ. ರುಚಿಗಾಗಲಿ, ಹವ್ಯಾಸಕ್ಕಾಗಲಿ, ಹರ್ಷಕ್ಕಾಗಲಿ ಜನರು ಮಾದಕಪದಾರ್ಥಗಳನ್ನು ಉಪಯೋಗಿಸುವುದಿಲ್ಲ. ಅಂತಃಸಾಕ್ಷಿಯ ಆಕ್ಷೇಪಣೆಗಳಿಂದ ಪಾರಾಗಲು ಬೇರೆ ದಾರಿ ಕಾಣದೆ, ಬೇರೆ ಸ್ವತಂತ್ರ ದಾರಿಯಲ್ಲಿ ನಡೆಯಲು ಇಚ್ಛೆಯೂ ಶಕ್ತಿಯೂ ಇಲ್ಲದೆ ಮದೋತ್ಪಾದಕ ವಸ್ತುಗಳಿಗೆ ಶರಣು ಹೋಗುತ್ತಾರೆ.

ಗಾಡಿಯವರು ಆಡಿಕೊಳ್ಳುತ್ತಿದ್ದ ಮಾತೊಂದು, ರಸ್ತೆಯಲ್ಲಿ ಹೋಗುತ್ತಿದ್ದಾಗ ಒಮ್ಮೆ ನನ್ನ ಕಿವಿಗೆ ಬಿತ್ತು. ಒಬ್ಬ ಹೇಳುತ್ತಿದ್ದ, "ಸ್ಮೃತಿಯಿದ್ದಾಗ ಹಾಗೆ ಮಾಡುವುದಕ್ಕೆ ನಾಚಿಕೆಯಾಗುತ್ತದೆ" ಎಂದು! ಕುಡಿದಾಗ ಯಾವುದು

CC-0. Jangamwadi Math Collection. Digitized by eGangotri

ಸರಿಯೋ ಸಜ್ಞಾನಸ್ಥಿತಿಯಲ್ಲಿ ಅದೇ ನಾಚಿಕೆಗೇಡಾಗಿ ಕಾಣುತ್ತದೆ. ಇಲ್ಲಿ ಮದ್ಯ ಸೇವನೆಯ ಮೂಲ ತತ್ವ ಅಡಗಿದೆ. ಅಂತಸ್ಸಾಕ್ಷಿಗೆ ವಿರೋಧವಾಗಿ ವರ್ತಿಸಿ, ನಾಚಿಕೆಪಡುವುದನ್ನು ತಪ್ಪಿಸಿಕೊಳ್ಳುವುದಕ್ಕಾಗಲಿ, ನಾಚಿಕೆಯೆ ಉಂಟಾಗದಿರುವಂತೆ ಮುನ್ನವೇ ಮಾದಕ ದ್ರವ್ಯ ಸೇವನೆಯಿಂದ ಹೀನಕೃತ್ಯಗಳನ್ನು ಮಾಡಲು ತಕ್ಕಂತೆ ಮನೋಧರ್ಮವನ್ನು ಏರ್ಪಡಿಸಿಕೊಳ್ಳಲಿಕ್ಕಾಗಲಿ ಈ ಉಪಾಯಕ್ಕೆ ಜನರು ಕೈಹಾಕುತ್ತಾರೆ. ಇತರರನ್ನು ಅವರ ಅಂತಸ್ಸಾಕ್ಷಿಗೆ ವಿರೋಧವಾಗಿ ವರ್ತಿಸುವಂತೆ ಮಾಡಲೂ ಮಾದಕ ದ್ರವ್ಯಗಳು ಬೇಕಾಗುತ್ತವೆ. ಮಾಡಿದ ಪಾತಕದ ಪರಿತಾಪವನ್ನು ಸಹಿಸಲಾರದೆ ಜನರು ಕುಡಿತಕ್ಕೆ ಬಿದ್ದಿರುವ ಪ್ರಸಂಗಗಳೆಷ್ಟೋ ಇವೆ. ಪತಿತರೇ ಮದ್ಯಸೇವಕರಲ್ಲಿ ಅತ್ಯಧಿಕರೆಂದು ಎಲ್ಲರಿಗೂ ಗೊತ್ತು. ಅವರಿಗೇ ಆ ಮೋಹ ಹೆಚ್ಚು. ಜ್ಞಾನ ಸರಿಯಾಗಿರುವಾಗ ಸೂಳೆಗಾರಿಕೆ, ಕೊಲೆ, ಕಳ್ಳತನಗಳನ್ನು ಮಾಡಲು ಹೀನಾಯವಾಗುತ್ತದೆ. ಕುಡಿದಾಗ ಇವೇನೂ ಮಹತ್ಕಾರ್ಯಗಳಲ್ಲ. ಕಳ್ಳರು, ಕೊಲೆಪಾತಕರು, ವ್ಯಭಿಚಾರಿಗಳು—ಈ ಪತಿತಪರಂಪರೆ ನಿಷಾವಸ್ತುಗಳಿಲ್ಲದೆ ಬದುಕಲಾರದು.

ಸಜ್ಞಾನಸ್ಥಿತಿಯಲ್ಲಿ ಅಂತಸ್ಸಾಕ್ಷಿಯಾಗಿ ಯಾವುದಾದರೂ ಕೆಲಸವನ್ನು ಮಾಡಲು ಜನರಿಗೆ ಅಸಾಧ್ಯವಾದಾಗ, ಅವರು ಮದ್ಯಕ್ಕೆ ಮೊರೆಹೋಗುತ್ತಾರೆ. ಮಾಡಲಾರದ ಕೆಲಸಗಳೂ, ಆಡಲಾರದ ಮಾತುಗಳೂ, ಯೋಚಿಸಲಾರದ ಆಲೋಚನೆಗಳೂ ಆಗಿಹೋಗುತ್ತವೆ. ಜನರು ಪರಮ ಸದ್ವೃತ್ತಿಯೆಂದೇ ಭಾವಿಸಿರಬಹುದು; ಆದರೆ ವ್ಯಕ್ತಿದೃಷ್ಟಿಯಿಂದ ಅದು ಅಂತಸ್ಸಾಕ್ಷಿಗೆ ವಿರೋಧವಾಗಿರಬಹುದು. ಹೊಟ್ಟೆಯ ಪಾಡಿಗೋ, ಜನಮೆಚ್ಚಿಕೆಗೋ, ಅನಿವಾರ್ಯವಾಗಿಯೋ ಆ ವೃತ್ತಿಯಲ್ಲಿ ಹಲವರು ನಿರತರಾಗಲೇ ಬೇಕಾಗಿ ಬರುತ್ತದೆ. ಅಂತಹವರಿಗೂ ಅಂತಸ್ಸಾಕ್ಷಿಯ ಇರಿತಗಳಿಂದ ಪಾರಾಗಲು ಮಾದಕವಸ್ತುಗಳು ಆವಶ್ಯಕವಾಗುತ್ತವೆ.

ಮೇಲಿನ ಯಾವ ಬಗೆಯ ದುರುದ್ದಿಶ್ಯಗಳೂ ಇಲ್ಲದೆ ಅಲ್ಪ ಪ್ರಮಾಣದಲ್ಲಿ ಮಾದಕ ದ್ರವ್ಯಗಳನ್ನು ಸೇವಿಸುವುದರಿಂದ ಯಾವ ಹಾನಿಯೂ ಆಗುವುದಿಲ್ಲವೆಂದು ಬಹುಜನರಲ್ಲಿ ನಂಬಿಕೆಯಿದೆ. ಅಲ್ಪ ಪ್ರಮಾಣದಲ್ಲಿ ಮಾದಕ ದ್ರವ್ಯಗಳನ್ನು ಸೇವಿಸುವುದರಿಂದ (ಧೂಮಪಾನ ಇತ್ಯಾದಿ) ಮೈಗೂ ಮಿದುಳಿಗೂ ಒಳ್ಳೆಯದೇ ಎಂದು ಹಲವರ ಭಾವನೆ. ಇದೂ ಕೇವಲ ಭ್ರಾಂತಿ. ಮೊಟ್ಟಮೊದಲು ಈ ಅಭ್ಯಾಸವು ಬುದ್ಧಿಪ್ರಚೋದಕವಾಗಿ ಕಂಡರೂ ಕಾಲಾನುಕಾಲಕ್ಕೆ ಅದು ಆರೋಗ್ಯವನ್ನು ನಾಶಗೊಳಿಸುವುದಲ್ಲದೆ ಅಂತಸ್ಸಾಕ್ಷಿಯನ್ನು ಮುದುಡುಗೊಳಿಸುತ್ತದೆ. ಧೂಮಪಾನದ ತೀಟಿಯು ಯಾವಾಗ ಮನುಷ್ಯನಿಗೆ ಉಂಟಾಗುತ್ತದೆ ಎಂಬುದನ್ನು ಪರಿಕಿಸಿದರೂ ಸಾಕು, ಅದು ಅಂತಸ್ಸಾಕ್ಷಿಯನ್ನು ಮೊಬ್ಬುಗೊಳಿಸುವುದಕ್ಕೇ ಎನ್ನುವುದು ಗೋಚರವಾಗುತ್ತದೆ. ಮಾಡಬಾರದುದನ್ನು ಮಾಡಿದಾಗ, ಮಾಡಬೇಕಾದಾಗ ಧೂಮಪಾನ ಮಾಡಬೇಕೆನಿಸುತ್ತದೆ. ಹುಡುಗರು ಬಾಲ್ಯದ ಮುಗ್ಧತೆಯನ್ನು ಕಳೆದಾಗ ಸೇದುವ ದುರಭ್ಯಾಸಕ್ಕೆ ತುತ್ತಾಗುತ್ತಾರೆ. ಜೂಜಾಡಿಗಳೆಲ್ಲ ಸೇದುತ್ತಾರೆ. ಒಳ್ಳೆಯ ದಾರಿಗೆ ಬಂದಾಗ ಜನರಿಗೆ ಈ ದುರಭ್ಯಾಸಗಳು ತಪ್ಪಿ, ಮತ್ತೆ ಕೆಟ್ಟದಾರಿಗೆ ಬಿದ್ದಾಗ ಬೆನ್ನುಹತ್ತುತ್ತವೆ.

ಈ ವಸ್ತುಗಳ ಸೇವನೆಯಿಂದ ಪರಿಣಾಮವು ಎಷ್ಟು ಭಯಂಕರವಾಗಿರಬೇಕೆನ್ನುವುದನ್ನು ಊಹಿಸಿಕೊಳ್ಳಬಹುದು.

ತೂಗುದಾರಕ್ಕೆ ಅನುಸಾರವಾಗಿ ಗೋಡೆಯನ್ನು ನೆಟ್ಟಗೆ ಹಾಕದೆ, ಮೂಲೆಮಟ್ಟಕ್ಕೆ ಅನುರೂಪವಾಗಿ ಮೂಲೆಗಳನ್ನು ಅನುಗೊಳಿಸದೆ, ಗೋಡೆ ಎಷ್ಟು ಡೊಂಕಾಗಿದ್ದರೂ ಅದಕ್ಕೆ ಹೊಂದುಕೊಳ್ಳುವಂತಹ ತೂಗುದಾರವನ್ನೂ ಮೂಲೆ ಎಷ್ಟು ಹೆಚ್ಚುಕಡಿಮೆ ಇದ್ದರೂ ಅದಕ್ಕೆ ಸರಿಯಾಗಿ ಕೂಡುವ ಮೂಲೆಮಟ್ಟವನ್ನೂ ಹೊಂದಿಸಿಕೊಂಡು ಕಟ್ಟಿದ ಕಟ್ಟಡವು ಎಷ್ಟು ವಿಹಿತವಾಗಿರುತ್ತದೆಯೊ ಕುಡುಕನ ಜೀವನವೂ ಅಷ್ಟೆ ವಿಹಿತವಾಗಿರುತ್ತದೆ. ಕುಡುಕನ ಬಾಳು ಅಂತಸ್ಸಾಕ್ಷಿಗೆ ಅನುಕೂಲವಾಗಿ ಏರ್ಪಟ್ಟಿರುವದಿಲ್ಲ. ಬಾಳಿಗೆ ತಕ್ಕಂತೆ ಅಂತಸ್ಸಾಕ್ಷಿಯನ್ನು ಅವನು ಬಗ್ಗಿಸಿಕೊಳ್ಳುತ್ತಾನೆ.

ವ್ಯಕ್ತಿಜೀವನದಲ್ಲೂ, ಇಂತಹ ಕೋಟ್ಯಂತರ ವ್ಯಕ್ತಿಗಳಿಂದ ಕೂಡಿದ ಮಾನವಕುಲದ ಜೀವನದಲ್ಲೂ ಇದೇ ಅನಾಯಕ ಪರಿಸ್ಥಿತಿಯು ಕಾಣಬರುತ್ತದೆ.

ಮಾದಕದ್ರವ್ಯ ಸೇವನೆಯ ಪೂರ್ಣ ಅರ್ಥವನ್ನು ಗ್ರಹಿಸಬೇಕಾದರೆ, ಒಬ್ಬ ವ್ಯಕ್ತಿಯು ಯಾವ ನೈತಿಕ ಪರಿಸ್ಥಿತಿಯಲ್ಲಿ ಜೀವನದ ಅವಸ್ಥೆಗಳನ್ನು ಕಳೆಯುತ್ತಾನೆಂಬುದನ್ನು ಪರಿಶೀಲಿಸಬೇಕು. ಪ್ರತಿ ಅವಸ್ಥೆಯನ್ನು ಮುಟ್ಟುತ್ತಲೆ ಅವನಿಗೆ ಹಲವು ನೈತಿಕ ಸಮಸ್ಯೆಗಳು, ಧರ್ಮಸಂಕಟಗಳು ಪ್ರಾಪ್ತವಾಗುತ್ತವೆ. ಅವುಗಳನ್ನು ಹೇಗೆ ಆ ಮನುಷ್ಯನು ಬಿಡಿಸುತ್ತಾನೆಯೊ ಅದರ ಮೇಲೆಯೆ ಅವನ ಜೀವನಸೌಭಾಗ್ಯವು ಅವಲಂಬಿಸಿರುತ್ತದೆ. ಈ ಸಮಸ್ಯಾ ಪರಿಹಾರಕ್ಕೆ ಹೆಚ್ಚಿನ ಮಟ್ಟದ ತದೇಕಭಾವವೂ ಚಿತ್ತೈಕಾಗ್ರತೆಯೂ ಅತ್ಯಗತ್ಯ. ಅಂದರೆ ಬುದ್ಧಿಶ್ರಮವು ಅಗತ್ಯ.

CC-0. Jangamwadi Math Collection. Digitized by eGangotri

ಯಾವ ಪರಿಶ್ರಮವೆ ಆಗಲಿ, ಪ್ರಾರಂಭದಲ್ಲಿ ಕಷ್ಟವನ್ನೂ ಯಾತನೆಯನ್ನೂ ಕೊಡುತ್ತದೆ. ಮತ್ತು ಪ್ರಯತ್ನವಿಮುಖರಾಗೋಣವೇ ಎಂಬ ಇಚ್ಛೆಯನ್ನು ಮನೋದೌರ್ಬಲ್ಯವು ಪ್ರೇರೇಪಿಸುತ್ತದೆ. ದೇಹಶ್ರಮಕ್ಕಿಂತಲೂ ಬುದ್ಧಿಶ್ರಮವು ದಾರುಣವಾದುದು. ಸಮಸ್ಯಾ ಪರಿಹಾರವು ಕಷ್ಟಸಾಧ್ಯವಾದಾಗ ನಾವು ಯೋಚನಾಕಾರ್ಯವನ್ನು ನಿಲ್ಲಿಸುತ್ತೇವೆ. ಆದರೆ ವಾಸ್ತವವಾಗಿ, ಆಗಲೆ ನಮ್ಮ ಜಿಜ್ಞಾಸೆಯು ಫಲಕಾರಿಯಾಗುವುದು!

ಜೀವನದಲ್ಲಿ ನೈತಿಕ ಸಂಶಯಗಳೂ ಧರ್ಮಸಂಕಟಗಳೂ ಪ್ರಾಪ್ತವಾದಾಗ ಅವುಗಳ ಪರಿಹಾರಕ್ಕಾಗಿ ಧಾವತಿಪಟ್ಟು, ಮನಸ್ಸಿಗೆ ಯಾತನೆಯನ್ನು ಕೊಡಬೇಕಾಗಿ ಬರುತ್ತದೆ. ಇದಕ್ಕೆ ಜನರು ಹಿಂದೆಗೆಯುತ್ತಾರೆ. ಆ ಸಂಶಯ ಸಂಕಟಗಳು, ಓಡಿಸಿದ ಹೊರತೂ ಮನಸ್ಸಿನಿಂದ ಹೋಗುವುದಿಲ್ಲ; ಮತ್ತೆಮತ್ತೆ ಚುಚ್ಚುತ್ತಿರುತ್ತವೆ. ಆದರೆ ಮನುಷ್ಯನು ಈ ಶ್ರಮಸಾಧ್ಯವಾದ ಬುದ್ಧಿಯ ಕೆಲಸವನ್ನು ತಪ್ಪಿಸಿಕೊಳ್ಳಲು ಒಂದು ಸಾಧನವನ್ನು ಗೊತ್ತುಮಾಡಿಕೊಂಡಿದ್ದಾನೆ—ಸಮಯ ಬಂದಾಗ ಅದನ್ನು ಪ್ರಯೋಗಿಸುತ್ತಾನೆ. ಮನಸ್ಸು ಕ್ಲಿಷ್ಟಸಮಸ್ಯೆಗಳ ಪರಿಹಾರಕ್ಕಾಗಿ ತೊಂದರೆಪಡುವುದನ್ನು ಬಿಟ್ಟುಕೊಡುತ್ತದೆ. ಆದರೆ ಇತ್ಯರ್ಥಗೊಳ್ಳದ ಆ ಸಮಸ್ಯೆ ಸಂಶಯಗಳು ಅವನ ಜೀವನದ ಮುಂದಿನ ವಿಕಾಸಾವಸ್ಥೆಯಲ್ಲಿಯೂ ಹಾಗೆಯೆ ಉಳಿದಿದ್ದು, ಮತ್ತೆ ತಲೆಯೆತ್ತುತ್ತವೆ. ನೀತಿಹೇಡಿಯಾದ ಮಾನವನು ಆ ಕಾಲ ಬಂದಾಗಲೂ ಯಥಾಪ್ರಕಾರ ತಪ್ಪಿಸಿಕೊಳ್ಳುತ್ತಾನೆ. ಈ ರೀತಿ ಆ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ತನ್ನ ಜೀವಮಾನವನ್ನೆಲ್ಲ ತಳ್ಳಿಬಿಡುತ್ತಾನೆ. ಈ ಪರಿಸ್ಥಿತಿಯ ನಿವಾರಣೆಯಲ್ಲಿಯೇ ಮಾನವನ ಜಾಗೃತಿ ಅಡಗಿರುವುದು, ವಿಕಾಸವು ಸಾಧ್ಯವಾಗುವುದು. ಅಜೀವವೂ ಅಂತಸ್ಸಾಕ್ಷಿಯನ್ನು ಮುಸುಕುಗೊಳಿಸಿ, ಸ್ವಯಂವಿರುದ್ಧವೂ ಅಪರಿಪಕ್ವವೂ ಆದ ಜೀವನತತ್ವಗಳನ್ನು ನಂಬಿ ಅವನು ನಿಂತುಬಿಡುತ್ತಾನೆ. ವಿಕಾಸಾವಕಾಶವು, ಪ್ರಬೋಧಕಾಲವು ಬಂದಾಗಲೆಲ್ಲ ತಾನೆ ಕಟ್ಟುತ್ತಿರುವ ಅಡ್ಡಗೋಡೆಯನ್ನು ತಡವರಿಸುತ್ತಾನೆ; ಆ ಗೋಡೆಯನ್ನು ಭೇದಿಸಬಲ್ಲ ಜಿಜ್ಞಾಸೆಯ ತೀಕ್ಷ್ಣತೆಯನ್ನು ಉದ್ದೇಶಪೂರ್ವಕವಾಗಿ ಮೊಂಡುಗೊಳಿಸಿರುವುದರಿಂದ, ನಿರುಪಾಯನಾಗುತ್ತಾನೆ.

ನಮ್ಮ ಸಮಾಜದಲ್ಲಿ ಪ್ರಭುತ್ವ, ರಾಜಕಾರಣ, ವಿಜ್ಞಾನ, ಸಾಹಿತ್ಯ, ಕಲೆ ಮುಂತಾದ ಚಟುವಟಿಕೆಗಳನ್ನು ನಡೆಸುವವರೆಲ್ಲ ಅಸಹಜವೂ ಅತಿರೇಕವೂ ಆದ ರೀತಿಯಲ್ಲಿ ಜೀವನವನ್ನು ನಡೆಸುತ್ತಿದ್ದಾರೆಂಬುದನ್ನು ನೆನೆದರೆ, ನಮ್ಮ ಭವಿಷ್ಯವು ಎಷ್ಟುಭಯಂಕರವಾಗಿ ಕಾಣುತ್ತದೆ! ಈ ಮದಮತ್ತರ ಸಾಮ್ರಾಜ್ಯದಲ್ಲಿ, ಕುಡುಕರೆ ನಮ್ಮ ಭಾಗ್ಯವಿಧಾತರು!

ಕುಡಿಯದೆ ಇರುವಾಗಲೆಲ್ಲಾ ಜ್ಞಾನವು ಶುದ್ಧವಾಗಿರುತ್ತದೆ ಎಂದು ಸಾಧಾರಣವಾಗಿ ಭಾವನೆಯಿದೆ. ಇದು ಶುದ್ಧ ತಪ್ಪು. ಕುಡಿದಾಗ ಮನುಷ್ಯನು ಉದ್ರಿಕ್ತನಾಗುತ್ತಾನೆ; ಮದವಿಳಿದಾಗ ಮಂಕನಾಗುತ್ತಾನೆ. ಮನಸ್ಸು ಸಡಿಲುಗೊಳ್ಳುತ್ತದೆ. ಈ ಪರಿಸ್ಥಿತಿಯು ಧೂಮಪಾನದಿಂದ ಮತ್ತಷ್ಟು ಹದಗೆಡುತ್ತದೆ. ಒಮ್ಮೆ ಕುಡಿದ ಮಾತ್ರಕ್ಕೆ ಪೂರ್ವಸ್ಥಿತಿಗೆ ಮನಸ್ಸಿನ ಹತೋಟಿಯು ಬರಬೇಕಾದರೆ ಒಂದು ವಾರ ಬೇಕಾಗುತ್ತದೆ. ನಿತ್ಯಪಾಯಿಗಳಿಗೆ ಬುದ್ಧಿ ಒಂದರಗಳಿಗೆಯಾದರೂ ಸ್ಥಿರವಾಗುಳಿಯುವುದೇ?

ಒಂದು ನಿದರ್ಶನವನ್ನು ತೆಗೆದುಕೊಳ್ಳಿ. ಐರೋಪ್ಯ ರಾಷ್ಟ್ರಗಳಲ್ಲಿ ಎಲ್ಲೆಲ್ಲೂ ಸಮರಸನ್ನಾಹವು ಕಾಣಬರುತ್ತದೆ. ಜನರೆಲ್ಲ ಯುದ್ಧಾಸಕ್ತರಾಗಿದ್ದಾರೆ. ಬಾಲ್ಯಾರಭ್ಯ ಯುವಕರಿಗೆ ಅನ್ಯದೇಶೀಯರನ್ನು ಹೇಗೆ ಕೊಲ್ಲಬೇಕು ಎಂಬುದನ್ನು ಕಲಿಸುತ್ತಿದ್ದಾರೆ. ಶಸ್ತ್ರಾಸ್ತ್ರಗಳನ್ನು ಪರ್ವತಾಕಾರವಾಗಿ ಹೇರಿಡುತ್ತಿದ್ದಾರೆ. ಕಾಡು ಜನರಾಗಲಿ, ರಾಕ್ಷಸರಾಗಲಿ ತಮ್ಮ ಮೇಲೆ ನುಗ್ಗಿ ಬರುವುದಿಲ್ಲವೆಂದು ಇವರಿಗೆ ಹೃದ್ಗತವಾಗಿ ಗೊತ್ತು. ಆದರೂ 'ನೆರೆಹೊರೆಯವರನ್ನು ಪ್ರೀತಿಸುವ' ಈಸಾಯಿ ರಾಷ್ಟ್ರಗಳೆ ಈ ಕೊಲೆಗೆ ಸಿದ್ಧರಾಗುತ್ತಿದ್ದಾರೆ. ಇದೆಲ್ಲ ಅನ್ಯಾಯ, ಅನರ್ಥಕಾರಿ, ವಿನಾಶಮೂಲ, ನಿಷ್ಕಾರುಣ್ಯಮಯ, ಅತಿದಾರುಣ, ಅಧರ್ಮ್ಯವೆಂದು ಎಲ್ಲರಿಗೂ ಗೊತ್ತು. ಆದರೂ ಯಾರು ಯಾರೊಡನೆ ಕಲೆತು ಯಾರ ಜೆಂಡು ಮುರಿಯಬೇಕು ಎಂಬುದನ್ನು ನಿರ್ಧರಿಸಲು ರಾಜಕೀಯ ಸಂಧಾನಗಳನ್ನು ನಡೆಸುತ್ತಿದ್ದಾರೆ, ಸಮರಗಳನ್ನು ಹೂಡುತ್ತಿದ್ದಾರೆ. ಇದೆಲ್ಲವೂ ನೀತಿಹಿತವೂ, ಅಂತಸ್ಸಾಕ್ಷಿವಿರೋಧವೂ ಆಗಿದೆಯೆಂದು ಕಂಡವರೂ ಈ ಹತ್ಯಾಕಾರ್ಯವನ್ನು ನೋಡುತ್ತ ತೆಪ್ಪಗೆ ಕುಳಿತಿದ್ದಾರೆ. ಜ್ಞಾನಶುದ್ಧವಾಗಿರುವವರು ಹೀಗೆಲ್ಲ ವರ್ತಿಸಬಲ್ಲರೆ? ಸರ್ವಥಾ ಇಲ್ಲ. ಶುದ್ಧಜ್ಞಾನಾವಸ್ಥೆಯನ್ನು ಎಂದಿಗೂ ಪಡೆಯದ ಕುಡುಕರು ಮಾತ್ರ ಹೀಗಿರಬಲ್ಲರು. ಜೀವನಕ್ಕೂ ಅಂತಸ್ಸಾಕ್ಷಿಗೂ ಅನಿವಾರ್ಯವಾದ ಅಂತರವು ಯಾರಲ್ಲಿದೆಯೊ ಅವರು ಮಾತ್ರ ಈ ರೀತಿ ನಡೆದುಕೊಳ್ಳಬಲ್ಲರು!

ಇಂದು ಮಾನವ ಜೀವನವು ಸ್ತಂಭಿತವಾಗಿದೆ. ತನ್ನ ಶಕ್ತಿ-ಸಾಧ್ಯತೆಗಳಿಗೆ ತಕ್ಕ ಸ್ಥಾನವನ್ನು ಅದು ಐದಲು

CC-0. Jangamwadi Math Collection. Digitized by eGangotri

ಯಾವುದೋ ಪ್ರಚಂಡವಾದ ಬಾಹ್ಯಕಾರಣವು ಅಡಚಣೆಯಾಗಿರುವಂತೆ ಕಾಣುತ್ತದೆ. ಆ ಕಾರಣವು—ಅದೊಂದೇ ಕಾರಣವಾಗಿರದಿದ್ದರೆ, ಅತ್ಯಂತ ಪ್ರಬಲ ಕಾರಣವು ಯಾವುದೆಂದರೆ, ಹೆಂಡ-ಹೊಗೆಸೊಪ್ಪು ಮುಂತಾದ ಮಾದಕ ದ್ರವ್ಯಗಳ ಸೇವನೆಯಿಂದ ಅತ್ಯಧಿಕಸಂಖ್ಯಾಕರಾದ ಮಾನವರು ತಮ್ಮ ನೈತಿಕಸಂಪತ್ತನ್ನೆಲ್ಲ ನಾಶಗೊಳಿಸಿ ದೈಹಿಕ ಮಾನಸಿಕ ವಿಸ್ಮೃತಿಯನ್ನು ತಂದುಕೊಳ್ಳುವುದೇ ಆಗಿದೆ.

ಎಂದು ಈ ಅನಿಷ್ಟಪೀಡೆಯಿಂದ ಮಾನವಜೀವನವು ಮುಕ್ತವಾಗುತ್ತದೆಯೊ ಮಾನವಕೋಟಿಯ ಇತಿಹಾಸದಲ್ಲಿ ಅದೊಂದು ಸ್ವರ್ಣಯುಗವಾಗುತ್ತದೆಂದು ನಾನು ಭಾವಿಸುತ್ತೇನೆ. ಆ ಕಾಲವೂ ಸಮೀಪಿಸುತ್ತಿದೆಯೆಂದು ನನಗೆ ತೋರುತ್ತದೆ. ಇದು ಕುಲಘಾತಕವಾದ ಪೀಡೆಯೆಂದು ಜನರಿಗೆ ಗೊತ್ತಾಗುತ್ತಿದೆ. ಆ ವಿಚಾರವಾಗಿ ಜನರ ಭಾವನೆಗಳು ಬದಲಾಗುತ್ತಿವೆ. ಅದರಿಂದ ಉಂಟಾಗುವ ದಾರುಣ ಪರಿಣಾಮಗಳು ಜನರ ಮನಸ್ಸನ್ನು ಮುಟ್ಟುತ್ತಿವೆ. ಇದೇ ಪ್ರಚಂಡವಾದ ಕ್ರಾಂತಿಯ ಬೀಜ. ಇದು ಜನರ ಕಣ್ಣನ್ನು ತೆರೆಯುತ್ತದೆ. ಶೀಘ್ರದಲ್ಲಿಯೆ ಜನರು ಈ ದೋಷದಿಂದ ಮುಕ್ತರಾಗುತ್ತಾರೆ. ಅಂತಸ್ಸಾಕ್ಷಿಗೆ ಸಲ್ಲತಕ್ಕ ಗೌರವವನ್ನು ಕೊಡಲು ಜನರು ಶಕ್ತರಾಗುತ್ತಾರೆ. ತಮ್ಮ ಜೀವನದಲ್ಲಿ ಸ್ಥೈರ್ಯವನ್ನು ತಂದುಕೊಳ್ಳುತ್ತಾರೆ.

**ಕರ್ನಾಟಕದ ಸಾಹಸ!** **ಕರ್ನಾಟಕದ ಕೀರ್ತಿ !!**

## " ಮೈಸೂರು ಇನ್ಷ್ಯೂರೆನ್ಸ್ ಕಂಪೆನಿ "

ಪೋಷಕರಿಗೂ ದೇಶಕ್ಕೂ ನಿರ್ವಂಚಿತವಾದ ಶ್ರದ್ಧಾಯುತ ಸೇವೆ ಸಲ್ಲಿಸಲು ಆಡಳಿತಮಂಡಳಿಗಿರುವ ಉತ್ಸಾಹವೇ " ಮೈಸೂರು " ಅಭ್ಯುದಯದ ಜೀವಾಳ.




**ಮೂರನೇ ವರ್ಷದ ಡೈರೆಕ್ಟರುಗಳಿಂದ ಅಂಗೀಕೃತವಾದ ವರದಿಯ ಕೆಲವು ಮುಖ್ಯಾಂಶಗಳು.**

(೧) ಕಳೆದ ವರ್ಷಕ್ಕಿಂತ ಜೀವವಿಮಾ ನಿಧಿಯು ಶೇಕಡ ೨೨ ರಷ್ಟು ಏರಿದೆ. (೨) ಹೊಸ ಉದ್ಯಮವು ಶೇಕಡ ೬೫ ರಷ್ಟೂ, ಪೂರ್ಣವಾದ ಉದ್ಯಮವು ಶೇಕಡ ೫೩ ರಷ್ಟೂ ಏರಿದೆ. (೩) ಆಸ್ತಿ ರೂ.೧ ಲಕ್ಷಕ್ಕೆ ಮೀರಿದೆ.

**ಕಾರ್ಯಕ್ಷೇತ್ರವು ವಿಸ್ತಾರಗೊಳ್ಳುತ್ತಿದೆ.**

**" ಮೈಸೂರು "** ಮಾದರಿಸಂಸ್ಥಾನದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡು, ಕರ್ಣಾಟಕದ ಇತರ ಭಾಗಗಳಲ್ಲೂ ಬ್ರಿಟಿಷ್ ಇಂಡಿಯಾ, ಬರ್ಮಾ, ಸಿಲೋನ್‌ಗಳಲ್ಲೂ ವಿಜಯಿಯೆನಿಸಲು ಮುಂದಡಿಯಿಟ್ಟಿದೆ.

**ಬೇಕು !** ಕರ್ಣಾಟಕದ ಎಲ್ಲ ಊರುಗಳಲ್ಲೂ, ಉಳಿದ ಬ್ರಿಟಿಷ್ ಇಂಡಿಯಾ, ಬರ್ಮಾ, ಸಿಲೋನ್‌ಗಳ ಎಲ್ಲ ಪ್ರಾಂತ್ಯಗಳಲ್ಲೂ ಕೇಂದ್ರಸ್ಥಳಗಳಲ್ಲೂ ಏಜಂಟರುಗಳೂ, ಸ್ಪೇಷಲ್ ಏಜಂಟರುಗಳೂ, ಚೀಫ್ ಏಜಂಟರುಗಳೂ, ಆರ್ಗನೈಜರುಗಳೂ ಬೇಕು. ಪ್ರತಿನಿಧಿಗಳಾಗಲಿಚ್ಛಿಸುವವರು ತಾವು ಕೊಡುವ ಉದ್ಯಮದ ಭರವಸೆಯನ್ನೂ ಕಾರ್ಯಕ್ಷೇತ್ರವನ್ನೂ ತಿಳಿಸುವುದು.

**ಹೆಚ್ಚು ವಿವರಗಳಿಗೆ ಬರೆಯಿರಿ:—**

ಜನರಲ್ ಮ್ಯಾನೇಜರ್,

**ಮೈಸೂರು ಇನ್ಷ್ಯೂರನ್ಸ ಕಂಪೆನಿ ಲಿಮಿಟೆಡ್,**

" ನಾಗೇಶ್ವರ ಬಿಲ್ಡಿಂಗ್ಸ್ ", ಶ್ರೀನರಸಿಂಹರಾಜಾ ರೋಡ್, **ಬೆಂಗಳೂರು ಸಿಟಿ.**

CC-0. Jangamwadi Math Collection. Digitized by eGangotri

# ಚೀನ ಜಪಾನ ಸಂಗ್ರಾಮದ ಪಾರ್ಶ್ವಭೂಮಿ

'ನಾಗರಿಕ' ರಿಂದ

**೧೯೨೭ರಷ್ಟು ಹಿಂದಿನ ಕಾಲದಿಂದಲೂ ಮೊಳೆತು ಬೆಳೆದು ಬಂದ ಜಪಾನಿ ಸೇನಾಮುಖಂಡರ ರಾಜನೀತಿಯ ಫಲದ್ರೂಪವೆ ಈಗಣ ಸಂಗ್ರಾಮ. ಹೊರಚೆಲ್ಲುವ ಜನಸಂಖ್ಯೆ, ಆಯಾತ ವ್ಯಾಪಾರಕ್ಕಾಗಿ ಹೊಸ ಹೊಸ ಪೇಟೆಗಳ ಅಗತ್ಯ, ಸಾಲದುದಕ್ಕೆ ಜಪಾನಿ ವಾಣಿಜ್ಯಸಮ್ರಾಟರ ರಾಕ್ಷಸೀ ಮಹತ್ವಾಕಾಂಕ್ಷೆ — ಇವು ಜಪಾನವು ಮುಂದೊತ್ತುವುದಕ್ಕೆ ಹೇಗೆ ಕಾರಣವಾಗಿವೆ ?**

ಚೀನ-ಜಪಾನ ಯುದ್ಧವನ್ನು ಈಗ ಯಾರೂ ಕಡೆಗಣಿಸುವಂತಿಲ್ಲ. ಆದೊಂದು ಕಿರುಕುಳ ಪ್ರಾದೇಶಿಕ ಸ್ವರೂಪದ ಕದನವಾಗಿರದೆ, ಜಗತ್ತಿನ ಪ್ರಮುಖ ಘಟನೆಗಳಲ್ಲೊಂದಾಗಿ ಪರಿಣಮಿಸಿದೆ. ದೊಡ್ಡದೊಡ್ಡ ರಾಜನೀತಿವಿಶಾರದರಿಗೆ ಅದು ತುಂಬಾ ಯೋಚನೆಯ ವಿಷಯವಾಗಿದೆ. ಸ್ಪೇನದಲ್ಲಿ ಮನುಷ್ಯಮಾಂಸವು ಕುರಿಯ ಕಂಡಕ್ಕಿಂತ ಅಗ್ಗವೆನ್ನುವಂತೆ ನರಮೇಧವು ನಡೆದಿರುವಾಗ, ಈ ಕಡೆ ಅತಿಪೂರ್ವ ಪ್ರದೇಶದಲ್ಲಿ ಪರಿಸ್ಥಿತಿಯು ತುಂಬಾ ತೊಡಕಿನದಾಗಿದೆ. ಈ ಎರಡೂ ಸಂಗತಿಗಳಲ್ಲಿ ಸಂಬಂಧವಿಲ್ಲದೆ ಇಲ್ಲ. ಉತ್ತರಚೀನದಲ್ಲಿಯ ಜಪಾನಿಗಳ ಆಕ್ರಮಣವು ಪೇಪಿಂಗ್-ಟಿಯೆಂಟ್ಸಿನ್‌ಗಳ ಮುಖಾಂತರವಾಗಿದೆಯೆಂದು ತಿಳಿಯುವುದು ತಪ್ಪು; ಅದು ವಾಶಿಂಗ್ಟನ್-ಲಂಡನ್-ಮಾಸ್ಕೋಗಳಲ್ಲಿ ಕುದಿಯುತ್ತಿರುವ ರಾಜಕಾರಣದ ಏರಿಳಿತಗಳನ್ನವಲಂಬಿಸಿದೆ. ಯುರೋಪಿನಲ್ಲಿ ಗಂಡಾಂತರದ ಗಾಳಿ ಬೀಸಿದಾಗಲೆಲ್ಲಾ ಜಪಾನವು ತೂರಿಕೊಂಡಿದೆ; ಈಗ ನಡೆದುದಾದರೂ ಅದರ ಪುನರಾವೃತ್ತಿಯೆ. ಇದನ್ನೆಲ್ಲ ತಿಳಿದುಕೊಳ್ಳುವುದಾದರೆ, ಜಪಾನದ ಸಾಮ್ರಾಜ್ಯವಾದದ ಚರಿತ್ರೆಯನ್ನು ತಿಳಿದುಕೊಳ್ಳುವುದಗತ್ಯ.

ಜಗತ್ತಿನಲ್ಲಿ ಅಸಿದ್ಧ ಸರಕುಗಳ ಆಯಾತ ವ್ಯಾಪಾರದ ಮೇಲೆ ಉಪಜೀವಿಸುವ ಪ್ರಮುಖ ರಾಷ್ಟ್ರಗಳಲ್ಲಿ ಜಪಾನವೂ ಒಂದು. ಅಸಿದ್ಧ ಸರಕುಗಳು, ವಸಾಹತುಗಳು—ಎಂಬಿವೆರಡು ಜಪಾನಕ್ಕೆ ಅನಿವಾರ್ಯವಾಗಿ ಬೇಕಾಗಿವೆ. ತನ್ನ ಕಬ್ಬಿಣದಲ್ಲಿ ೬೬%ರಷ್ಟನ್ನೂ, ಎಣ್ಣೆಯಲ್ಲಿ ೮೭%ರಷ್ಟನ್ನೂ, ಹತ್ತಿಯಲ್ಲಿ ೯೯% ರಷ್ಟನ್ನೂ, ರಬ್ಬರಿನಲ್ಲಿ ೧೮%ರಷ್ಟನ್ನೂ ಅದು ಹೊರಗಿನಿಂದ ತರಿಸುತ್ತದೆ. ಅದರ ಆರ್ಥಿಕ ವ್ಯವಸ್ಥೆಯಲ್ಲಿ ಜಹಾಗಿರದಾರ–ಸರದಾರರೇ ಇನ್ನೂ ಪ್ರಾಧಾನ್ಯವನ್ನು ಪಡೆದಿದ್ದಾರೆ; ಹಳ್ಳಿಗಾಡೆಲ್ಲಾ ಕೃಷಿಪ್ರಧಾನವೇ ಆಗಿದೆ; ಆದುದರಿಂದ ಅದರ ಔದ್ಯೋಗಿಕ ಪ್ರಗತಿಗೆ ತಡೆಯುಂಟಾಗಿದೆ. ಬೆಳೆದ ಜನಸಂಖ್ಯೆಯ ಮೂಲಕ ಭೂಮಿಯು ಸಾಲದಾಗಿ, 'ದೇಶಾಂತರ'ದ ಪ್ರಶ್ನೆಯು ತುಂಬಾ ಮಹತ್ವದ್ದಾಗಿದೆ.

ಅಲ್ಲದೆ, ಜಪಾನದ 'ಬಂಡವಾಳಗಾರಿಕೆ'ಯು ಪರಿಪಕ್ವವಾಗುವ ಪೂರ್ವದಲ್ಲಿಯೆ ಕೊಳೆತು ಹುಳಿತು ಹೋಗಿದೆ. ಅದು ಕೆಲವ ಬ್ಯಾಂಕರರ ಮತ್ತು ವಾಣಿಜ್ಯ ಸಂಸ್ಥೆಗಳ ಕೈಯಲ್ಲಿ ಕೇಂದ್ರೀಕೃತವಾಗಿದೆ. ಮಿತ್ಸುಯಿ ಮನೆತನದವರ ಕೈಯಲ್ಲಿ ಬಟ್ಟೆಯ, ಖನಿಜದ ಮತ್ತು ಸರ್ವಸಾಮಾನ್ಯ ವ್ಯಾಪಾರದ ಸೂತ್ರಗಳಿವೆ. ಮಿತ್ಸುಬುಷಿಯವರು ದೊಡ್ಡ ಉದ್ಯೋಗಗಳನ್ನೂ ಹಡಗು ಕಟ್ಟುವುದನ್ನೂ ಸ್ವಾಧೀನದಲ್ಲಿಟ್ಟುಕೊಂಡಿದ್ದಾರೆ. ಇವರೂ ಇನ್ನು ಕೆಲ ಚಿಕ್ಕವರೂ ಸೇರಿ 'ಸನ್ವಾ' ಎಂಬ ದೊಡ್ಡ ಬ್ಯಾಂಕನ್ನೂ, ರಾಷ್ಟ್ರದ ಔದ್ಯೋಗಿಕ ಆರ್ಥಿಕ ವ್ಯವಹಾರಗಳ ಯಂತ್ರವನ್ನೂ ನಿಯಂತ್ರಣಗೊಳಿಸಿದ್ದಾರೆ. ಜಪಾನಿ ಸಂಪದ್ವ್ಯವಸ್ಥೆಯು ಸಂಕೋಲೆಗಳಿಂದ ಬಿಗಿದುದಾಗಿ, ತಲೆಭಾರವಾಗಿದೆ. ಅಂತಃಸ್ಥ ಕ್ರಾಂತಿಯಿಂದ ಅದರ ಹಿಡಿತ ಸಡಿಲಾಗದಿದ್ದರೆ, ಜಪಾನವು ಹೊರಗಡೆಯ ಸ್ಫೋಟಗಳು ಮತ್ತು ಹೊಸ ಹೊಸ ಪೇಟೆಗಳ ಆಕ್ರಮಣ—ಇವುಗಳಿಂದಲೆ ಬದುಕಬೇಕು.

ಈ ಆರ್ಥಿಕ ನಿಮಿತ್ತವು ಜಪಾನಿ ಯುದ್ಧದೇವತೆಗಳ (ಸೇನಾಧೀಶ್ವರರ) ಕೈಯಲ್ಲಿ ಅನುಕೂಲ ಶಸ್ತ್ರವಾಗಿ ಪರಿಣಮಿಸಿದೆ. 'ಹೊಸ ವಸಾಹತು, ಹೊಸ ಪ್ರದೇಶ' ಎಂಬುದೆ ಅವರು ದೀರ್ಘಕಾಲದಿಂದಲೂ ಸಾರುತ್ತ-ಸಾಧಿಸುತ್ತ ಬಂದಿರುವ ರಾಜನೀತಿ. ಅದರಲ್ಲಿಯೂ ಎರಡು ಪಂಗಡಗಳಿವೆ. ನೌಕಾದಲದವರು 'ದಕ್ಷಿಣಮಾರ್ಗ'ದ ಪಕ್ಷಪಾತಿಗಳು; ದಕ್ಷಿಣಚೀನ - ಡಚ್ ಈಸ್ಟ ಇಂಡೀಜಗಳತ್ತ ಕಡೆ ಕೈಕಾಲು ಪಸರಿಸುತ್ತ, ಅಲ್ಲಿಯ ಸಮೃದ್ಧವಾದ ತೈಲಖನಿಗಳಲ್ಲಿ ಮತ್ತು ರಬ್ಬರ ತೋಟಪಟ್ಟಿಗಳಲ್ಲಿ ಪ್ರಸ್ಥಾನ ಹೂಡಬೇಕೆಂದು ಅವರ ಆಪ್ತಾಲೋಚನೆ. ಸೈನಿಕ ಮುಖಂಡರು 'ಉತ್ತರ ಮಾರ್ಗ'ದ ಪುರಸ್ಕರ್ತರು; ಉತ್ತರ ಏಶಿಯ ಖಂಡದ ಮಾರ್ಗವಾಗಿ ಚೀನ-ರಶಿಯಗಳ

CC-0. Jangamwadi Math Collection. Digitized by eGangotri

ನಡುವೆ ಹಾದಿಯೊಡೆದುಕೊಂಡು ಮುಂದರಿಯಬೇಕೆಂದು ಅವರ ಕಾಯಕ. ೧೯೨೭ರ ಜೂಲೈ ತಿಂಗಳಲ್ಲಿ ಹೊರಡಿಸಿದ 'ತಾನಾಕಾ' ಪ್ರಕಟನೆಯಲ್ಲಿ, ಮಂಚೂರಿಯ-ಮಂಗೋಲಿಯ-ಉತ್ತರ ಚೀನಗಳನ್ನು ಪಾದಾಕ್ರಾಂತ ಮಾಡುವುದು ಚೀನದ ಜೈತ್ರಯಾತ್ರೆಯ ಪೂರ್ವಪೀಠಿಕೆಯೆಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ಎರಡೂ ಪಕ್ಷಗಳಲ್ಲಿ ಮಾರ್ಗಭೇದವಿದ್ದರೂ, ಉದ್ದೇಶಗಳಲ್ಲಿ ಏಕವಾಕ್ಯತೆಯಿದೆ.

ಈ ಎರಡು ಗುಂಪುಗಳಲ್ಲಿ ಮೊದಲಿನವರದೆ ಮೇಲ್ಗೈಯಾಗಿದೆ. 'ಕೃಷ್ಣಸಾಗರ-ಕೃಷ್ಣನಾಗ' ಎಂಬ ಹೆಸರಿನ ಗುಪ್ತಕೂಟಗಳು ಮತ್ತು ಗುಪ್ತ ಪೋಲೀಸ ದಲವು ಅವರ ಸಂಘಟನೆಯಲ್ಲಿ ಪ್ರಾಮುಖ್ಯವನ್ನು ಪಡೆದಿವೆ. ತಮ್ಮ ಉದ್ದೇಶ ಸಾಧನೆಗಾಗಿ ಹತ್ಯೆ-ಹಿಂಸೆ-ದರೋಡೆಗಳನ್ನು ಮಾಡಲೂ ಅವರು ಹಿಂಜರಿಯರು. 'ಪಾಕ್ಷಿಕ ಪಕ್ಷಶುದ್ಧಿ'ಯು ಅವರ ಕಾರ್ಯಕ್ರಮಗಳಲ್ಲೊಂದು;—ಭಿನ್ನಮತದವರನ್ನು ಇಲಿಗಳಂತೆ ಹುಡುಕಿ ತೆಗೆದು ಸಾಯಬಡಿಯುವುದೇ ಆ ಕೆಲಸ. 'ತರುಣ ಅಧಿಕಾರಿಗಳ ಸಂಸ್ಥೆ,' 'ರುಧಿರಸಂಘ'—ಇವು ರಾಜಕೀಯ ಹತ್ಯಾಶಾಸ್ತ್ರದಲ್ಲಿ ತರಬೇತಾದ ಕೂಟಗಳು. ಡಾಯಿ ನಿಪ್ಪನ್ ಸಂಸ್ಥೆ, ದೇಶಭಕ್ತರ ಕೂಟ, ಮತ್ತು ಬೋಲ್ಶೆವಿಜ್ಮ್ ವಿರೋಧಕ ಸಂಘ—ಇವು 'ಅಸುರಕ್ಷಿತ ವಿಚಾರ'ಗಳನ್ನು ಸದೆಬಡೆದು, ಒಳದೇಶವನ್ನು ಕಾಯುತ್ತಿವೆ. ಶಿಂಟೋಯಿಜ್ಮ್ (ದೇವರ ಹಾದಿ), ಕೊಡೊಯಿಜ್ಮ್ (ಸಮ್ರಾಟನ ಹಾದಿ)–ಇವು ರಾಷ್ಟ್ರವನ್ನು ರಕ್ಷಿಸುವ 'ಆಧ್ಯಾತ್ಮಿಕ' ಕೋಟೆ-ಕೊತ್ತಳಗಳು. ಇವರ ಕುಟಿಲ ಕ್ರೂರ ನೀತಿಯೆದುರಿನಲ್ಲಿ ಸಾಧುಗಳ ನಯಶಾಸ್ತ್ರವು ನಿರ್ಜೀವವೆನಿಸುವುದು.

ಸೈನ್ಯದ ಮಧ್ಯಮ ಮತ್ತು ಕನಿಷ್ಠ ವರ್ಗಗಳಲ್ಲಿ ಹಲವರು ತೀವ್ರ ಸುಧಾರಣಾವಾದಿಗಳಿರುವರೆಂಬುದು ನಿಜ. ಆದರೆ ದಂಡಿನ ಮುಖಂಡರು ಒಳಗೊಳಗೆ ವರ್ತಕ ಸಮ್ರಾಟರೊಡನೆ ಒಂದು ತಿಳುವಳಿಕೆಗೆ ಬಂದವರಾಗಿದ್ದಾರೆ. ಸೆಯುಕಾಯು ಮತ್ತು ಮಿನ್ಸೆಟೊ ಎಂಬೆರಡು ಪ್ರಧಾನ ರಾಜಕೀಯ ಪಕ್ಷಗಳ ಸೂತ್ರಗಳು ಅವರ ಕೈಯಲ್ಲಿವೆ. ರಾಜಪುತ್ರ ಇಟೊ ಮತ್ತು ಸೆಯೊಂಜಿ ಎಂಬ ಉದಾರ ಮತವಾದಿಗಳು, ಸಾಮ್ರಾಜ್ಯವಾದಿ ನೀತಿಯು ಸ್ವಲ್ಪ ಮಂದವಾಗಿ ಸಾಗಬೇಕೆಂದೆ ವಾದಿಸುತ್ತಿರುವರೇ ವಿನಾ, ಹೆಚ್ಚಿಗೇನನ್ನೂ ಮಾಡುತ್ತಿಲ್ಲ.

ಸಮಯ ಸಾಧಿಸಿ ಗುರಿಹೊಡೆಯುವುದು ಜಪಾನದ ಬಹುದಿನದ ರಾಜನೀತಿಯಾಗಿದೆ. ಮಹಾಯುದ್ಧದ ಪೂರ್ವದಲ್ಲಿ ಯುರೋಪಖಂಡದಲ್ಲಿಯ ಸಂಶಯಿತ ವಾತಾವರಣದ ಲಾಭ ಪಡೆದುಕೊಂಡು, ಫೊರ್ಮೊಸಾ, ಪೋರ್ಟ ಆರ್ಥರ ಮತ್ತು ಕೊರಿಯಾ ದ್ವೀಪಗಳನ್ನು ಅದು ಹಿಡಿದುಕೊಂಡಿತು. ಮಹಾಯುದ್ಧ ನಡೆದಾಗ ಪ್ರಸಿದ್ಧವಾದ ೧೨ ಬೇಡಿಕೆಗಳನ್ನು ಚೀನದ ಮುಂದೆ ಚಾಚಿ, ಅದನ್ನೊಂದು ಸಾಮಂತರಾಜ್ಯವನ್ನಾಗಿ ಮಾಡಿಬಿಡುವ ಹಂಚಿಕೆಯನ್ನು ಹಾಕಿತ್ತು. ೧೯೨೧ ರಲ್ಲಿ ವಾಶಿಂಗ್ಟನ್ನಿನಲ್ಲಾದ ನವರಾಷ್ಟ್ರ ಸಂಧಾನದಿಂದ ಚೀನದ ಸ್ವಾಯತ್ತತೆಗೆ ಮಾನ್ಯತೆ ದೊರೆತು, ಜಪಾನಿಗಳ ಮಹತ್ವಾಕಾಂಕ್ಷೆಗೆ ಮೂಗುದಾಣ ಹಾಕಲ್ಪಟ್ಟಿತು. ಆದರೆ ೧೯೩೧ ರಲ್ಲಿ—ಯುರೋಪ್ ಅಮೆರಿಕೆಗಳು ಆರ್ಥಿಕ ಮಾಂದ್ಯದಿಂದ ತಲ್ಲಣಗೊಂಡಾಗ—ಮಂಚೂರಿಯವನ್ನು ಪಾದಾಕ್ರಾಂತಮಾಡಿ, ಅಲ್ಲಿ ಸಾಮಂತರಾಜ್ಯವನ್ನು ಪ್ರಸ್ಥಾಪಿಸಿತು. ಜರ್ಮನಿ, ಆಸ್ಟ್ರಿಯ, ಸ್ವಿಟ್ಝರ್ಲಂಡುಗಳನ್ನು ಒಟ್ಟು ಸೇರಿಸಿದರೂ ಮಂಚೂರಿಯವು ಒಂದು ಮುಷ್ಟಿ ದೊಡ್ಡದಾಗುತ್ತದೆ; ಮತ್ತು ಅಲ್ಲಿ ಮರ, ಕಬ್ಬಿಣ, ಕಲ್ಲಿದ್ದಲು, ಖನಿಜತೈಲಗಳು ಹೇರಳವಾಗಿ ಸಿಕ್ಕುತ್ತವೆ. ಅಲ್ಲದೆ ಮಂಚೂರಿಯವು ರಾಜನೈತಿಕವಾಗಿ ಆಯಕಟ್ಟಿನ ಸ್ಥಾನವಾಗಿದೆ. ಚೀನವು ರಾಷ್ಟ್ರಸಂಘಕ್ಕೆ ಮೊರೆಯಿಟ್ಟಿತು; ಸಂಘವು ಜಪಾನದ ಅಪರಾಧವನ್ನು ಪರ್ಯಾಲೋಚಿಸುತ್ತಿರುವಷ್ಟರಲ್ಲಿಯೇ, ಜಪಾನವು ಮಂಚೂರಿಯವನ್ನು ಸೆಳೆದುಕೊಂಡೇ ಬಿಟ್ಟಿತು. ಜೆಹೋಲದಲ್ಲಿ ಪ್ರವೇಶವನ್ನೂ ಜಿನೀವದಿಂದ ನಿಷ್ಕ್ರಮಣವನ್ನೂ ಒಂದೇ ಸಮಯಕ್ಕೆ ಅಭಿನಯಿಸಿತು. ೧೯೩೩ ರಲ್ಲಿ ಚೀನವು ಟಂಕೂ ಒಪ್ಪಂದಕ್ಕೆ ಒಪ್ಪಿಕೊಳ್ಳುವಹಾಗೆ ಮಾಡಿತು. ಮಂಚುಕುವೊ ಎಂಬ ಕೃತಕ ಸಂಸ್ಥಾನವನ್ನು ನಿರ್ಮಿಸಿ, ಅದಕ್ಕೊಬ್ಬ ಕೃತಕ ಚಕ್ರವರ್ತಿಯನ್ನು ತಂದು ತನ್ನ ಗೊಂಬೆಯಾಟವನ್ನು ಪೂರೈಸಿತು. ಸೈನ್ಯವು ಬ್ಯಾಂಕು-ರೇಲ್ವೆಗಳನ್ನೂ ಅಧಿಕಾರಸ್ಥಲಗಳನ್ನೂ ಕೈವಶಪಡಿಸಿಕೊಂಡಿತು. ಜಪಾನಿ ಅಧಿಕಾರಿಗಳು ಸರಕಾರಿ ಖಾತೆಗಳ ಮೇಲ್ವಿಚಾರಕರಾದರು. ದಕ್ಷಿಣ ಮಂಚೂರಿಯ ರೇಲ್ವೆಯಲ್ಲಿ ಜಪಾನಿಗಳು ಅಪಾರ ದ್ರವ್ಯವನ್ನು ತೊಡಗಿಸಿದರು; ೧೯೩೨ರಲ್ಲಿ ೨೯೦ ಲಕ್ಷ ಯೆನ್‌ಗಳಷ್ಟಿದ್ದ ನಿಧಿಯು ೧೯೩೮ರಲ್ಲಿ ೭೪೦ ಲಕ್ಷಕ್ಕೇರಿತು. (ಒಂದು ಯೆನ್ ಅಂದರೆ ಸುಮಾರು ೨ ರೂಪಾಯಿ ೧೦ ಆಣೆ.)

ಆದರೆ ಜಪಾನಿಗಳು ಕೊಂಚ ದುಡುಕಿದರು; ಬಯಸಿದ್ದೊಂದು ಆದದ್ದೊಂದು ಆಯಿತು. ಅವರ ದಂಡಯಾತ್ರೆಯಲ್ಲಿ ಸೈನಿಕದೃಷ್ಟಿಯೊಂದೆ ಪ್ರಾಮುಖ್ಯವನ್ನು ಹೊಂದಿದ್ದರಿಂದ, ವೆಚ್ಚ ಮಿತಿಮೀರಿತು; ಹಾಕಿದ ದುಡ್ಡಿನ ಬಡ್ಡಿ ಹೊರಡದಂತಾಯಿತು. ಮಂಚುಕುವೊ ಸಂಸ್ಥಾನವು

CC-0. Jangamwadi Math Collection. Digitized by eGangotri

ಸರಕುಗಳನ್ನು ಹೊರಗೆ ಕಳಿಸುವುದಂತಿರಲಿ, ಖಾದ್ಯ ಪದಾರ್ಥಗಳನ್ನು ತಾನೆ ಪರದೇಶಗಳಿಂದ ತರಿಸತೊಡಗಿತು. ಹೊಟ್ಟೆಗಿಲ್ಲದ ರೈತರಲ್ಲಿ ಅಸಂತೋಷ ಹಬ್ಬಿದುದರಿಂದ, ೧೯೩೪—೩೫ರಲ್ಲಿ ಅವರನ್ನು ನಿಃಶಸ್ತ್ರಗೊಳಿಸಬೇಕಾಯಿತು. ಜಪಾನದ ಜನತೆಗೂ ಲಾಭ ಮುಟ್ಟಲಿಲ್ಲ. ಮಂಚೂರಿಯದ ಅಗ್ಗ ಕಲ್ಲಿದ್ದಲು ಸಿಗಬಹುದೆಂದು ಅವರು ಭಾವಿಸಿದ್ದರು; ಅದು ಸುಳ್ಳಾಯಿತು. ಅಲ್ಲಿ ಲೆಕ್ಕವಿಲ್ಲದಷ್ಟು ಜನ ಒಕ್ಕಲಾಗಬಹುದೆಂದು ತಿಳಿದಿದ್ದರು. ಅದು ಹುಸಿಯಾಯಿತು. ಮಂಚೂರಿಯದಿಂದ ಪ್ರಾಪ್ತವಾದದ್ದೆಂದರೆ ಹೆಚ್ಚಿಸಿದ ಕರಭಾರ, ಮತ್ತು ಕೃತ್ರಿಮವಾಗಿ ಹಿಗ್ಗಿಸಿದ ಚಲನ. ಅಂತೂ ಮಂಚೂರಿಯದ ಅಭಿಯೋಗ ಪ್ರಯೋಗವು ಹುಸಿಮದ್ದಾಯಿತು. ಜಪಾನದಲ್ಲಿಯ ಸತ್ತಾಧೀಶರು ಪಶ್ಚಿಮಕ್ಕಾಗಲಿ ದಕ್ಷಿಣಕ್ಕಾಗಲಿ ಮುಂದೊತ್ತುವ ಯೋಜನೆಯನ್ನು ಹೂಡುವುದು ಅನಿವಾರ್ಯವೆ ಆಯಿತು.

'ತಾನಾಕಾ' ಯೋಜನೆಯಲ್ಲಿಯ ಎರಡನೆಯ ಕೆಲಸದ ನಂತೆ, ಬಾಹ್ಯಮಂಗೋಲಿಯವು ಇದೀಗ ಅವರ ಗುರಿಯಾಯಿತು. ೧೯೩೦ರಲ್ಲಿಯೆ ಅದನ್ನು ಸೆಳೆದುಕೊಳ್ಳಬೇಕೆಂದು ಹೂಡಿದ್ದ ಹೂಟವು ಸೋವಿಯೆಟ್ ರಸ್ಯವು ಅಡ್ಡ ಬಂದುದರಿಂದ ಹುಸಿಯಾಗಿತ್ತು. ೧೯೩೬ರಲ್ಲಿ ಅಲ್ಲಿಯ ಲಾಮಾಗಳನ್ನೂ ಸೋವಿಯೆಟ್ ದ್ರೋಹಿ ರಸ್ಯನರನ್ನೂ ಸಂಘಟನೆಗೊಳಿಸಲು ಮಾಡಿದ ಪ್ರಯತ್ನವೂ ಈಡೇರದೆ ಹೋಯಿತು. ೧೯೩೬ರಲ್ಲಿ ರಸ್ಯದ ಸೋವಿಯೆಟ್ ಸರಕಾರವೂ ಮಂಗೋಲಿಯವೂ ಪರಸ್ಪರ ಸಹಾಯದ ಸೈನಿಕ ಸಂಧಾನವನ್ನು ಮಾಡಿಕೊಂಡಾಗ, ಗಡಿನಾಡಿನಲ್ಲಿಯ ವೈಮನಸ್ಯವು ಮೇರೆದಪ್ಪಿತು. ಆದರೆ ರಸ್ಯದೊಡನೆ ಯುದ್ಧ ಹೂಡಿಬಿಡುವಷ್ಟು ಜಪಾನದ ಮನಸ್ಸಿನ ಸಿದ್ಧತೆಯಿರಲಿಲ್ಲ. ಎಂತಲೇ ಉತ್ತರ ಚೀನದ ಕಡೆಗೇ ತನ್ನ ಬಕದೃಷ್ಟಿಯನ್ನು ಹೊರಳಿಸಿತು.

ಹೊಪೇ, ಚಹಾರ, ಶಾನ್ಸಿ, ಶಾಂಟುಂಗಗಳಲ್ಲಿ ಒಟ್ಟು ೯ ಕೋಟಿ ಜನಸಂಖ್ಯೆಯಿದೆ; ಅಲ್ಲದೆ ಆ ಪ್ರದೇಶವು ವ್ಯಾಪಾರದ ಪಡಿಮೂಲೆಯಾಗಿದೆ. ೨೦ ಕೋಟಿ ಡಾಲರ ಬೆಲೆಬಾಳುವಷ್ಟು ಅಲ್ಲಿಯ ಆಯಾತ ವ್ಯಾಪಾರವಾಗಿದೆ. ಕಚ್ಚಾ ಕಬ್ಬಿಣ, ಎಣ್ಣೆ, ಟಿನ್, ತಾಮ್ರ, ಬಂಗಾರಗಳು ಅಲ್ಲಿಯ ಕಣಿಗಳಲ್ಲಿ ಸಿಗುತ್ತವೆ. ಚಹಾರವನ್ನು ಹತ್ತಿಯ ಸಾಗುವಳಿಯ ದೊಡ್ಡ ಕ್ಷೇತ್ರವನ್ನಾಗಿ ಮಾರ್ಪಡಿಸಬಹುದಾಗಿದೆ. ಪಶುಸಂವರ್ಧನ, ಹಾಲಿನ ಪುರವಠೆ, ತೊಗಲು ಹದಮಾಡುವುದು, ದೊಡ್ಡ ಪ್ರಮಾಣದಲ್ಲಿ ಕೈಕೊಳ್ಳಲ್ಪಡಬಹುದಾಗಿದೆ. ಅಲ್ಲದೆ ಯುದ್ಧಶಾಸ್ತ್ರದ ದೃಷ್ಟಿಯಿಂದಲೂ ಆ ಸ್ಥಾನಕ್ಕೆ ಹೆಚ್ಚಿನ ಮಹತ್ವವಿದೆ. ಪೇಪಿಂಗ್-ಹ್ಯಾಂಕೋ, ಟಿಯೆಂಟ್ಸಿನ್-ಪುಕೋ, ಪೇಪಿಂಗ್-ಮುಕ್ಡೆನ ಮತ್ತು ಪೇಪಿಂಗ್ ಸುಯಿಯುಆನ್ ಗಳಿಂದ ಹೊರಡುವ ರೇಲ್ವೆ ಮಾರ್ಗಗಳು ಸಮುದ್ರತೀರವನ್ನು ನಿಯಂತ್ರಿಸಬಲ್ಲವಲ್ಲದೆ, ಒಳಮಂಗೋಲಿಯದೊಳಗೆ ಮತ್ತು ಯಾಂಗ್‌ತ್ಸಿ ಕೊಳ್ಳಕ್ಕೆ ವ್ಯಾಪಾರದ ರಹದಾರಿಗಳನ್ನು ಒದಗಿಸಿಕೊಡುತ್ತವೆ. ಉತ್ತರ ಚೀನವು ಮಂಚೂರಿಯದ ಪ್ರತ್ಯಂಗವಾಗಿದೆಯೆಂದು ಜಪಾನವು ಮುಂಚಿನಿಂದಲೂ ಪ್ರಚಂಡ ಪ್ರಚಾರವನ್ನು ನಡೆಸಿದೆ. ೧೯೩೨ರಲ್ಲಿ ಒಳಮಂಗೋಲಿಯದ ಲಾಮಾಗಳಿಗೂ ಸಂಸ್ಥಾನಿಕರಿಗೂ ಯುದ್ಧಸಾಹಿತ್ಯವನ್ನು ಪೂರೈಸಿ ಪ್ರೋತ್ಸಾಹಿಸಲಾಯಿತು. ೧೯೩೫ರ ನವಂಬರದಲ್ಲಿ ಹೋಪೇ-ಚಹಾರ ಪ್ರಾಂತಗಳನ್ನು ಜಪಾನವು ಆಕ್ರಮಿಸಿ, ಜಪಾನಿ ವರ್ಚಸ್ಸವುಳ್ಳ ಹೋಪೇ-ಚಹಾರ ರಾಜಕೀಯ ಮಂಡಳವು ಸ್ಥಾಪಿತವಾಗುವಂತೆ ಚೀನವನ್ನು ಒತ್ತಾಯಪಡಿಸಿತು. ೧೯೩೬ರ ಮೇ ತಿಂಗಳಲ್ಲಿ ಜಪಾನವು ಉತ್ತರ ಚೀನದಲ್ಲಿಯ ತನ್ನ ಸೇನಾಬಲವನ್ನು ಮುಮ್ಮಡಿಗೊಳಿಸಿತು ನವಂಬರದಲ್ಲಿ ಜರ್ಮನಿಯೊಡನೆ ಮೈತ್ರಿಯ ಸಂಧಾನ ಮಾಡಿ, ರಸ್ಯಾದಿಂದಾಗಬಹುದಾದ ತೊಂದರೆಯನ್ನು ತಪ್ಪಿಸಿಕೊಂಡಿತು. ಡಿಸೆಂಬರದಲ್ಲಿ 'ಎಲ್ಲಾ ಮತಭೇದಗಳನ್ನು ಬಗೆಹರಿಸುವ' ಯೋಜನೆಯೊಂದನ್ನು ಚೀನ ಸರಕಾರಕ್ಕೆ ಕಳಿಸಿತು. ಉತ್ತರ ಚೀನದಲ್ಲಿ ಬರಿ ವರ್ಚಸ್ಸಕ್ಕಿಂತ ಹೆಚ್ಚಿನದಾದ ಅಧಿಕಾರವನ್ನು ಅದು ಬಯಸಿತ್ತೆಂಬುದು ಸ್ಪಷ್ಟವಾಯಿತು. ಜಪಾನವು ಕ್ಷಿಪ್ರದಲ್ಲಿಯೇ 'ಹಾಕಪ್ಪ'ನ ಕಾಯಕವನ್ನು ಹೂಡಲಿದೆಯೆಂದು ಸೂಕ್ಷ್ಮ ರಾಜಕೀಯ ನಿರೀಕ್ಷಕರು ಈ ವರ್ಷದ ಆದಿಯಲ್ಲಿಯೆ ಕಾಲಜ್ಞಾನವನ್ನು ಹೇಳಿದ್ದರು.

ಏತನ್ಮಧ್ಯೆ, ಜಪಾನವು ತನ್ನ ನೌಕಾದಲದ ಧೋರಣೆಯನ್ನು ಬಿಟ್ಟುಕೊಟ್ಟಿತೆಂತಲ್ಲ. ಪ್ಯಾಸಿಫಿಕ್ ಮಹಾಸಾಗರದಲ್ಲಿ ಜಪಾನದ ಚಟುವಟಿಕೆಗಳು ತೀವ್ರತರವಾಗಿ ಸಾಗುತ್ತಿವೆ. ಮಲಾಯದ ದೊಡ್ಡದೊಡ್ಡ ಉದ್ಯಮಗಳು ಜಪಾನಿ ವರ್ತಕ ಸಂಘಗಳಿಂದಲೆ ನಡೆಸಲ್ಪಟ್ಟಿವೆ. ತನ್ನ ಎಂಜಿನಿಯರರುಗಳಿಗಾಗಿಯೂ ನೌಕಾಧಿಕಾರಿಗಳಿಗಾಗಿಯೂ ಅದು ಜಪಾನದ ನೋರೆಯನ್ನೆ ನೋಡುತ್ತಿದೆ. ಪೂರ್ವವಲಯದ ಆಕಾಶಮಾರ್ಗಗಳ ಸಂಧಿಸ್ಥಾನವೆಂದೂ ದಕ್ಷಿಣ ಪ್ಯಾಸಿಫಿಕ್ ಮಹಾಸಾಗರದಲ್ಲಿಯ ಸೈನಿಕ ಚಲನವಲನಗಳಿಗಾಗಿ ಒಳ್ಳೆಯ ತಳವೆಂದೂ ಸಯಾಮದ ಮಹತ್ವವು ಜಪಾನದ ಗಮನಕ್ಕೆ ಬಾರದೆ ಇಲ್ಲ. ಸಿಂಗಾಪುರದಲ್ಲಿಯ ಬ್ರಿಟಿಷ್ ಸೈನಿಕ ಠಾಣ್ಯದ ಮಹತ್ವವು ಹೊರಟುಹೋಗುವಂತೆ 'ಕ್ರಾ'ಕಾಲುವೆ

CC-0. Jangamwadi Math Collection. Digitized by eGangotri

ಯನ್ನು ಕಟ್ಟುವ ಯೋಜನೆಯನ್ನು ದೂರದರ್ಶಿ ಜಪಾನವು ಮಾಡಿಟ್ಟಿಆದೆ. ದರೂ ಈಗಲೆ ದಕ್ಷಿಣದ ದಾಳಿಯ ಭೀತಿ ಯಿಲ್ಲ. ಮೊದಲೇ ಹೇಳಿದಂತೆ, ಉತರ್ರ ಚೀನವೇ ಜಪಾನಿಗಳ ಸಾಮ್ರಾಜ್ಯದಾಹಕ್ಕೆ ಆಹುತಿಯಾಗಬೇಕಾಯಿತು.

ಜಪಾನದ ಅತಿಕ್ರಮಣವನ್ನು ತಡೆಯಲು ಚೀನವು ಅಂತಃಕಲಹಗಳ ಮೂಲಕ ಅಸಮರ್ಥವಾಗಿದೆ. ದಣ್ಣಾಯಕ ಚಿಯಾಂಗ-ಕೈ-ಶೇಕನು ಅಜಯ್ಯ ರಾಷ್ಟ್ರೀಯ ಸಂಘಟನೆಯನ್ನುಂಟುಮಾಡಲು ಭಗೀರಥ ಪ್ರಯತ್ನ ನಡೆಸಿದ್ದಾನೆ. ಈಚೆಗೆ ಸಕಲ ಪಕ್ಷಗಳ ಪ್ರಬಲೈಕ್ಯವು ಸಾಧಿಸಿದೆಯೆಂಬು ತಿಳಿದುಬರುತ್ತಿದೆ. ಇತ್ತ ಜಪಾನದ ಪರಾಟವನ್ನು ಎದುರಿಸಬೇಕು; ಸೈನ್ಯದ ಸೂತ್ರಧಾರಿಗಳಾದ ಸಂಪತ್ಪತಿಗಳನ್ನು (ಬ್ಯಾಂಕರರೇ ಮೊದಲಾದವರನ್ನು) ಸಂತೋಷಗೊಳಿಸಬೇಕು; ಇಂಗ್ಲಂಡ್ ಮೊದಲಾದ ಪರಕೀಯ ಸಹಾಯಕರ್ತರನ್ನು ಕಾಯ್ದುಕೊಳ್ಳಬೇಕು; ಉಗ್ರಕ್ರಾಂತಿವಾದಿಗಳಾದ ಕಮ್ಯುನಿಸ್ಟರನ್ನು ಪ್ರತಿಭಟಿಸಬೇಕು. ಈ ಡೊಂಬರಾಟದಲ್ಲಿಯೆ ಅವನ ಶಕ್ತಿಯೆಲ್ಲ ವೆಚ್ಚವಾಗಿದೆ. ಈ ಅಡ್ಡಿಗಳ ಗುಡ್ಡಗಳನ್ನು ದಾಟಿಯೂ ಅವನು 'ಪ್ರಾಥಮಿಕ ಸಂಸ್ಕೃತಿ ದಶೆ'ಯಲ್ಲಿದ್ದ ಚೀನವನ್ನು ಶಸ್ತ್ರಾಸ್ತ್ರ ಸುಂಸಪನ್ನವಾಗಿ ಮಾಡಿ, ಆಧುನಿಕ ನಾಗರಿಕತೆಯ ಸಾಧನಗಳಿಂದ ಸುಸಜ್ಜಿತವಾಗಿ ಮಾಡುತ್ತಿದ್ದಾನೆ. ಆದರೆ ಅವನ ಪ್ರಯೋಗ ಹದಕ್ಕೆ ಬರುವುದರೊಳಗಾಗಿಯೆ ಜಪಾನವು ಪರಾಟಕೆಯನ್ನು ನಡೆಯಿಸಿಬಿಟ್ಟಿತು.

ಕೊನೆಯದಾಗಿ, ಚೀನದ ಭವಿತವ್ಯವು ಇಂಗ್ಲೆಂಡ್-ಅಮೆರಿಕ-ರಸ್ಯಗಳೆಂಬ 'ಮೂವರು ಧೂರ್ತ'ರ ನಡೆವಳಿಕೆಯನ್ನು ಅವಲಂಬಿಸಿದೆ ಚೀನದಲ್ಲಿ ಬ್ರಿಟನ್ನು ವಸಾಹತು, ಬಂಡವಾಳಗಳ ರೂಪದಲ್ಲಿ ಹೆಚ್ಚಿನ ಹಿತಸಂಬಂಧಗಳನ್ನಿಟ್ಟುಕೊಂಡಿದೆ. ಅದರಿಂದ ಜಪಾನದ ನಡತೆಯ ಬಗ್ಗೆ ಸಾಶಂಕವಾಗಿದೆ. ತರುವಾಯ ಬರುತ್ತದೆ ಅಮೇರಿಕೆ ಅದರ ವ್ಯಾಪಾರದ ಸಂಬಂಧಗಳೂ ತೊಡಕಿನವೂ ಮಹತ್ವವೂ ಆಗಿವೆ. ಆದರೆ ಅದರ ಧೋರಣೆಯು ಹೆಚ್ಚುಹೆಚ್ಚು ಸಂಕುಚಿತವಾಗುತ್ತಿದೆ. ಇಲ್ಲದಗಲಾಟೆ ಬೇಡಾ ಎನ್ನುತ್ತಿದೆ. ಅಂತೂ ಬ್ರಿಟನ್-ಅಮೆರಿಕಗಳ ಸೈನಿಕಸಹಕಾರವು ಅಷ್ಟು ಸುಸಾಧ್ಯವಾಗಿ ತೋರುವುದಿಲ್ಲ ಇನ್ನುಳಿದುದು ಸೋವಿಯೆಟ್ ಅದರ ಧೋರಣೆಯು ಹೆಚ್ಚಾಗಿ ಸ್ವಸಂರಕ್ಷಕವಾಗಿದೆ. ಜಪಾನವು ಏರಿಬರದಿದ್ದರೆ ಅದು ಸುಮ್ಮನಿರುವುದಾಗಿ ತೋರುತ್ತದೆ. ಅಂತೂ ಈ ತ್ರಿವರ್ಗವು ಒಮ್ಮುಖವಾಗಿ ವ್ಯವಹರಿಸುವುದು ಕೊಂಚ ಕಷ್ಟವಾಗಿಯೇ ತೋರುತ್ತದೆ. ಸದ್ಯಕ್ಕಂತೂ ರಸ್ಯೇತರ ಪಾಶ್ಚಾತ್ಯ ರಾಷ್ಟ್ರಗಳು ಹಿಂದೆಗೆಯುತ್ತಿವೆಯೆಂದೇ ಹೇಳಬಹುದು. ಹೀಗಾಗಿ ಚೀನವು ಒಬ್ಬೊಂಟಿಗವಾಗಿಯೆ ಪ್ರಾಣಪಣವಾಗಿ ಕಾದಾಡುತ್ತಿದೆ.

('ತ್ರಿವೇಣಿ' ಯಿಂದ ಸಂಗ್ರಹಿಸಿದುದು)



ಪೇಪಿಂಗ ಯುದ್ಧ ಭೂ[illegible]ಳುತ್ತಿರುವರು.

CC-0. Jangamwadi Math Collection. Digitized by eGangotri

THE

# United India Life Assurance Co. Ltd.

## MADRAS

( Estd: 1906 )

SPECIAL FEATURES

Compound Bonus
Trust Fund under Government Trustee
Directors elected from Policy-holders

Assets exceed 87 lakhs
Annual Income 21 lakhs
Claims paid till now exceed 30 lakhs

**Branches all over India, Burma & Ceylon.**

*For Agency terms and other particulars, apply to:*

*The Organiser,*

**The United India Life ssurance Co. Ltd.,**
**Madiman Building, HUBLI ( Dt. Dharwar )**

★

# ಡೋಂಗರೆ ಇವರ ಬಾಲಾಮೃತವು



**ಇದ್ದದ್ದಾದರೂ ಏನು ?**

(೧) ಅದು ಅಶಕ್ತ ಮತ್ತು ರೋಗಿಷ್ಟ ಮಕ್ಕಳನ್ನು ಬೇಗ ವಾಸಿಪಡಿಸುತ್ತದೆ.
(೨) ಅದರಲ್ಲಿ ಎಲುಬುಗಳನ್ನು ಗಟ್ಟಿಗೊಳಿಸುವ ಎಲ್ಲ ಸತ್ತ್ವಾಂಶಗಳೂ ಇವೆ.
(೩) ಅದು ಚಿಕ್ಕಮಕ್ಕಳಿಗೆ ಉತ್ಕೃಷ್ಟ ಪೌಷ್ಟಿಕ ಔಷಧಿಯಾಗಿದೆ.
(೪) ಅದು ಕೆಮ್ಮಿನ ಕೆಟ್ಟ ವಿಕಾರವನ್ನು ಗುಣಪಡಿಸುವುದಲ್ಲದೆ, ಹಲ್ಲು ಬರುವ ಹೊತ್ತಿನಲ್ಲಿ ಮಕ್ಕಳಿಗೆ ಉಪಯುಕ್ತವಾಗಿದೆ.

ಎಲ್ಲೆಲ್ಲಿಯೂ ಸಿಗುತ್ತದೆ.

CC-0. Jangamwadi Math Collection. Digitized by eGangotri

# ಆಲ್ಸೆಸ್ಟಿಸ್

ಲೇಖಕರು: 'ಡಿ. ವಿ. ಎಸ್.' ಬೆಂಗಳೂರು

( ಯೂರಿಪಿಡಿಸ್ ಮಹಾಕವಿಯ ನಾಟಕ ಕಥೆ )

**ಶಾಪಿತ ಜೀವನವನ್ನು ಸಾಗಿಸಲು ಗೋಪಾಲಕನಾಗಿ ಬಂದ ಅಪಾಲೋ, ತನ್ನ ಅಲ್ಪಾವಧಿಯ ಒಡೆಯನಾದ ಅಡ್ಮೆಟಸ್‌ಗೆ ಆಯುರ್ವೃದ್ಧಿಯ ವರವನ್ನು ಕೊಡುವನು. ಆದರೆ ಅದಕ್ಕಾಗಿ ಇನ್ನೊಬ್ಬರು ತಮ್ಮ ಆಯುರ್ದಾನವನ್ನು ಮಾಡಬೇಕಾಗಿತ್ತು. ಸಾಯಲಾದ ತಂದೆಯು ಇನ್ನೂ ಜೀವಿಸಿರಲು ಬಯಸಿದನು. ಆದರೆ ಅವನ ಎಳೆವರಯದ ಸತಿ ಈ ಆತ್ಮತ್ಯಾಗಕ್ಕೆ ಸಿದ್ಧಳಾದಳು. ಆದರೆ ಅಷ್ಟರಲ್ಲಿ .... ಅವಳನ್ನುಳಿಸಲು ಅಡ್ಮೆಟಸ್‌ನಲ್ಲಿಗೊಬ್ಬ ಅತಿಥಿ ಬಂದನು. ....**

**ಅಪಾಲೋ:** ಹಾ, ಬಂದೆಯಾ, ಯಮದೂತ. ಈ ದಿನಕ್ಕಾಗಿಯೇ ಕಾದುಕೊಂಡಿದ್ದೆ.

**ಯಮದೂತ:** ಇಲ್ಲಿಗೂ, ಈ ಅರಮನೆಗೂ, ಬಂದೆಯಾ. ಭಗವಂತನ ವಿಧಿಗೂ ಭಂಗ ತರುವವನು ನೀನು. ಆಯುಷ್ಯ ಮುಗಿದವಳನ್ನು ಕರೆದೊಯ್ಯಲು ಬಂದಿದ್ದೇನೆ. ನೀನು ನನಗೆ ಅಡ್ಡಿಮಾಡಬೇಡ.

**ಅಪಾಲೋ:** ಹೆದರಬೇಡ, ನಾನು ಮಾಡಿರುವುದೆಲ್ಲಾ ನ್ಯಾಯವಾಗಿಯೇ ಇದೆ.

**ಯಮದೂತ:** ಏನು ? ಹಾಗಿದ್ದರೆ ಈಕೆಯನ್ನೂ ನನ್ನಿಂದ ಕಸಿದುಕೊಳ್ಳುವೆಯಾ ?

**ಅಪಾಲೋ:** ಯಾರನ್ನೂ ಬಲಾತ್ಕಾರದಿಂದ ಕರೆದೊಯ್ಯಲಿಲ್ಲ.

**ಯಮದೂತ:** ಹಾಗಿದ್ದರೆ ಭೂಲೋಕಕ್ಕೇಕೆ ಬಂದೆ ?

**ಅಪಾಲೋ:** ನೀನು ಯಾರಿಗೋಸ್ಕರ ಬಂದಿರುವೆಯೋ ಆಕೆಯು ಆತನ ಮೃತ್ಯುವಿಮೋಚಕಳು.

**ಯಮದೂತ:** ಅವಳನ್ನು ಪಾತಾಳಲೋಕಕ್ಕೆ ಕರೆದೊಯ್ಯುವೆನು.

**ಅಪಾಲೋ:** ಕರೆದೊಯ್ಯಿ: ನಿನ್ನನ್ನು ತಡೆಯಲಾರೆ.

**ಯಮದೂತ:** ಸಾವಿಗೆ ಈಡಾದವರನ್ನು ಕೊಲ್ಲುವುದೇ ನನ್ನ ಅಧಿಕಾರ.

**ಅಪಾಲೋ:** ಆದರೆ ವಯಸ್ಸಾಗಿ ಸಾವಿಗೆ ಸಿದ್ಧರಾಗಿರುವವರನ್ನು ಕೊಲ್ಲುವುದು ನಿನ್ನ ಅಧಿಕಾರ.

**ಯಮದೂತ:** ನಿನ್ನ ಉದ್ದೇಶವು ಅರ್ಥವಾಯಿತು. ಅದು ಒಳ್ಳೆಯದೇ ಸರಿ.

**ಅಪಾಲೋ:** ಹಾಗಾದರೆ ಆಲ್ಸೆಸ್ಟಿಸ್ಸಳು ವೃದ್ಧಾಪ್ಯವನ್ನು ಹೊಂದಬೇಡವೆ ?

**ಯಮದೂತ:** ನಾನು ನನ್ನ ಅಧಿಕಾರವನ್ನು ಸರಿಯಾಗಿ ನಡೆಸಬೇಡವೇ ?

**ಅಪಾಲೋ:** ಇಂದೋ ನಾಳೆಯೋ ನೀನು ಒಂದು ಜೀವವನ್ನು ಅಪಹರಿಸುವೆಯಲ್ಲವೆ ?

**ಯಮದೂತ:** ಚಿಕ್ಕವರನ್ನು ಯಮನಲ್ಲಿಗೊಯ್ದರೆ ನನಗೆ ಹೆಚ್ಚಿನ ಫಲವುಂಟು.

**ಅಪಾಲೋ:** ವಯಸ್ಸಾಗಿ ಸತ್ತರೆ ಆಕೆಗೆ ರಾಜಯೋಗ್ಯವಾದ ಉತ್ತರಕ್ರಿಯೆಗಳು ಲಭಿಸುವುವು.

**ಯಮದೂತ:** ಅಪಾಲೋ, ನೀನೇ ಹೀಗೆ ಐಶ್ವರ್ಯವಂತರಿಗೆ ಆಶ್ರಯ ಕೊಡಬಹುದೇ ?

CC-0. Jangamwadi Math Collection. Digitized by eGangotri

ಅಪಾಲೋ: ಹಾಗಾದರೆ ನನಗೆ ನೀನು ಉಪಕಾರವನ್ನು ಮಾಡಲಾರೆ!

ಯಮದೂತ: ನಿನ್ನ ಯೋಗ್ಯತೆಗೆ ಮಿಾರಿದುದನ್ನು ನೀನು ಹೊಂದಲಾರೆ!

ಅಪಾಲೋ: ಈಗ ನಿಷ್ಠುರನಾಗಿದ್ದರೂ ಮುಂದೆ ಆಡ್ಮೆಟಸ್ ನಲ್ಲಿಗೆ ಅಥಿತಿಯಾಗಿ ಬರುವ ದೊಡ್ಡ ಮನುಷ್ಯನ ಮಾತನ್ನು ನಡೆಸುವೆ. ಆತನು ಆಕೆಯನ್ನು ಬಲಾತ್ಕಾರ ದಿಂದ ನಿನ್ನ ಕೈ ತಪ್ಪಿಸುವನು.

ಯಮದೂತ: ಗಳಹು, ಮನಸ್ಸಿ ಗಳಹು. ಅದರಿಂದ ನಿನಗೆ ಪ್ರಯೋಜನವಾಗದು. ಆಕೆಯು ಯಮಲೋಕವನ್ನು ಸೇರತಕ್ಕವಳೇ. ನಾನು ಹೋಗಿ ಈ ಕತ್ತಿಯಿಂದ ಆಕೆಯ ತಲೆಯಲ್ಲಿನ ಕೆಲವು ಕೂದಲುಗಳನ್ನು ಕತ್ತರಿಸುವೆನು. ಹಾಗೆ ಈ ಕತ್ತಿಯು ಯಾರ ತಲೆಕೂದಲನ್ನು ಕಡಿಯುವುದೋ ಅಂಥವರು ಅಧೋಲೋಕದ ದೇವತೆಗಳಿಗೆ ಪ್ರಿಯರು.

ಯಮದೂತನು ಆಡ್ಮೆಟಸ್‌ನ ಹೆಂಡತಿಯಾದ ಅಲ್ಸೆಸ್ಟಿಸ್‌ಳನ್ನು ಕರೆದೊಯ್ಯಲು ಬಂದಿದ್ದನು.

ಆಡ್ಮೆಟಸ್‌ನು ಥೆಸಲಿಯ ಒಂದು ಭಾಗದ ರಾಜ. ಅಲ್ಸೆಸ್ಟಿಸ್‌ಗೆ ಅವಸಾನ ಕಾಲವು ಯಾವ ವ್ಯಾಧಿಯಿಂದಲೂ ಬಂದಿರಲಿಲ್ಲ. ಆದರೆ ಆಡ್ಮೆಟಸ್‌ನ ಆಯುಷ್ಯವನ್ನು ಹೆಚ್ಚಿಸುವುದಕ್ಕಾಗಿ ಆಕೆಯು ತನ್ನ ಜೀವವವನ್ನು ಒಪ್ಪಿಸುತ್ತಿದ್ದಳು. ಹೀಗಾಗಲು ಒಂದು ಕಾರಣವಿತ್ತು. ಜ್ಯೂಸ್ ದೇವನು ಅಪಾಲೋವನ್ನು ಯಾವುದೋ ಕಾರಣದಿಂದ ಶಿಕ್ಷಿಸಿ, ಆತನು ಭೂಮಿಯಲ್ಲಿ ಹುಟ್ಟಿ ಗೋಪಾಲಕನಂತೆ ಒಂದು ವರ್ಷ ಆಡ್ಮೆಟಸ್‌ನನ್ನು ಸೇವಿಸಬೇಕೆಂದು ವಿಧಿಸಿದನು. ಅದೇ ರೀತಿಯಲ್ಲಿ ಅಪಾಲೋ ಆಡ್ಮೆಟಸ್‌ನಲ್ಲಿಗೆ ಬಂದು ಒಂದು ವರ್ಷ ಕಾಲ ಸೇವಿಸಿದನು. ಈ ಕಾಲದಲ್ಲಿ ಆಡ್ಮೆಟಸ್ ರಾಜನು ಅಪಾಲೋವನ್ನು ಬಹಳ ಮರ್ಯಾದೆಯಿಂದಲೂ ಆದರದಿಂದಲೂ ಕಂಡುದಕ್ಕಾಗಿ ವರ್ಷಾಂತ್ಯದಲ್ಲಿ ಅಪಾಲೋ ದೇವನು ಆಡ್ಮೆಟಸ್‌ನಿಗೆ ಒಂದು ವರವನ್ನು ದಯಪಾಲಿಸಿದನು. ಅದೇನಂದರೆ ಆಡ್ಮೆಟಸ್‌ನ ಅವಸಾನ ಕಾಲದಲ್ಲಿ ಅವನಿಗೆ ಬದಲು ಮತ್ತೆ ಯಾರಾದರೂ ಸಾಯಲು ಸಿದ್ಧರಾದರೆ ಆಗ ಆಡ್ಮೆಟಸ್‌ನ ಆಯುಷ್ಯವು ದ್ವಿಗುಣಿಸುವುದೆಂದು. ಅಂತಾಗಿ ಆಡ್ಮೆಟಸ್‌ನ ಅವಸಾನದಲ್ಲಿ ಅವನನ್ನು ಮೃತ್ಯುವಿನಿಂದ ತಪ್ಪಿಸಬಲ್ಲ ಆತ್ಮತ್ಯಾಗವುಳ್ಳವರು ಇದ್ದಾರೆಯೇ ಎಂದು ಹುಡುಕಲು ಒಬ್ಬಳು ಮಾತ್ರ ದೊರೆತಳು. ಆಕೆಯೇ ಆತನ ಹೆಂಡತಿ ಅಲ್ಸೆಸ್ಟಿಸ್.

ಆಡ್ಮೆಟಸ್‌ನ ಅರಮನೆಯು ಮೌನಮುದ್ರೆಯಲ್ಲಿತ್ತು. ಅಲ್ಸೆಸ್ಟಿಸ್‌ಳು ಮೃತ್ಯುಮುಖದಲ್ಲಿದ್ದಳು. ಆಕೆಯ ಯೋಗಕ್ಷೇಮವನ್ನು ವಿಚಾರಿಸಲು ಬಂದಿದ್ದ ಕೆಲವು ಪಟ್ಟಣಿಗರ ಮೆಲುದನಿ ಮಾತ್ರ ಕೇಳಬರುತ್ತಿತ್ತು. ಅವರಲ್ಲಿ ಮುಖಂಡನು "ನಾವು ಹೊತ್ತು ಮೀರಿ ಬಂದೆವು." ಎಂದು ಹೇಳುತ್ತಿದ್ದನು. ಆತನ ನುಗನು "ಇಲ್ಲ, ಆಕೆ ಸತ್ತಿಲ್ಲ. ಏಕೆಂದರೆ ಸತ್ತಿದ್ದರೆ ರೋದನವು ಕೇಳಬರುತ್ತಿತ್ತು. ಮತ್ತು ಸತ್ತಮನೆಯ ಮುಂದೆ ಇರುವ ಗುರುತುಗಳಾವುವೂ ಇಲ್ಲಿ ಇಲ್ಲ" ಎಂದನು. ಮತ್ತೊಬ್ಬನು "ಆಕೆಯು ಸಾಯಲು ಗೊತ್ತಾಗಿರುವ ದಿನವು ಇದೇ" ಎಂದು ಭವಿಷ್ಯ ಹೇಳಿದನು. ನೆರೆದವರೆಲ್ಲ "ಪ್ರಿಯ ರಾಣಿಯೆ, ಆದರದ ಸ್ನೇಹಿತಳೇ, ಪತಿಭಕ್ತಿಯುಳ್ಳ ಹೆಂಡತಿಯೇ" ಎಂದು ಮೆಲ್ಲಗೆ ಮರುಗುತ್ತಿದ್ದರು.

ಈ ವೇಳೆಗೆ ಅಲ್ಸೆಸ್ಟಿಸ್‌ಳ ಸಖಿಯೊಬ್ಬಳು ಅಳುತ್ತ ಅಲ್ಲಿಗೆ ಬರಲು ಅಲ್ಸೆಸ್ಟಿಸ್‌ಳ ಯೋಗಕ್ಷೇಮವನ್ನು ಕುರಿತು ಅವರು ಆಕೆಯನ್ನು ವಿಚಾರಿಸಿದರು. ಅವರ ಕುತೂಹಲದ ಪ್ರಶ್ನೆಗಳಿಗೆ ಅವಳು "ಆಕೆ ಬದುಕಿಯೂ ಇದ್ದಾಳೆ, ಮೃತಿಯೂ ಹೊಂದಿದ್ದಾಳೆ" ಎಂದು ಹೇಳಿದಳು. ಅದು ಹೇಗೆ ಸಾಧ್ಯವೆಂದೂ ಆಕೆಯು ಬದುಕಿದ್ದರೂ ಆಕೆಯನ್ನು ಉಳಿಸಬಹುದೆಂಬ ನಂಬಿಕೆಯಿಲ್ಲವೆ ಎಂದೂ ಪಟ್ಟಣಿಗರು ಪ್ರಶ್ನಿಸಲು "ಯಾರೂ ರಕ್ಷಿಸರು, ವಿಧಿನಿಯತ ದಿನವು ಸಾರಿ ಬಂದಿದೆ" ಎಂದಳು ಸಖಿ. ಅನಂತರ ಸಖಿಯು ಅಲ್ಸೆಸ್ಟಿಸ್‌ಳ ಅಂತಿಮ ಕಾಲದ ನಡೆವಳಿಕೆಗಳನ್ನು ಈ ರೀತಿ ವಿವರಿಸಿದಳು. "ಗೊತ್ತಾದ ದಿನ ತಾನು ನದಿಯಲ್ಲಿ ಮಿಂದು ಶುಭ್ರ ವಸ್ತ್ರಗಳನ್ನೂ ಆಭರಣಗಳನ್ನೂ ಧರಿಸಿ ಅಗ್ನಿಕುಂಡದ ಮುಂದೆ ಕುಳಿತು ಈ ರೀತಿ ಪ್ರಾರ್ಥಿಸಿದಳು: ಓ ದೇವರೇ, ನಿನ್ನನ್ನು ನಾನು ಪ್ರಾರ್ಥಿಸುವುದು ಇದೇ ಕೊನೆಯ ಸಲ. ನನ್ನ ಅನಾಥ ಮಕ್ಕಳಿಗೆ ತಾಯಿಯಾಗು. ಈ ಮಕ್ಕಳು ತಾಯಿಯಂತೆ ಅಕಾಲ ಮರಣಕ್ಕೆ ತುತ್ತಾಗದೆ ಬಹುಕಾಲ ಸುಖವಾಗಿರಲಿ."—ಈ ರೀತಿಯಲ್ಲಿ ದೇವರುಗಳನ್ನು ಪೂಜಿಸಿದಳು. ಈ ವೇಳೆಯಲ್ಲಿ ಅವಳು ಒಂದು ತೊಟ್ಟು ಕಣ್ಣೀರಿಡದೆಯೂ ಒಂದು ನಿಟ್ಟುಸಿರನ್ನು ಬಿಡದೆಯೂ ಇದ್ದಳು. ಇದೆಲ್ಲ ಮುಗಿದ ಮೇಲೆ ತನ್ನ ಕೊಟಡಿಗೆ ಹೋಗಿ ಅಲ್ಲಿ "ನನ್ನ ಸುಖದ ಮನೆಯೇ, ಪ್ರಿಯತಮ ಪತಿಯೇ, ನಿನ್ನೊಡನೆ ಸೇರಲು ಇದೇ ಕೊನೆ. ನನ್ನ ಜೀವವನ್ನೇ ನಿನಗೆ ಧಾರೆಯೆರೆದಿದ್ದೇನೆ ಆದರೆ ಇಲ್ಲಿ ಬೇರೆಯ

CC-0. Jangamwadi Math Collection. Digitized by eGangotri

ವಳು ಬಂದು ಮುಂಡಿಸುವಳು. ಆಕೆಯು ನನ್ನಷ್ಟು ಸುಚರಿತೆ ಯಲ್ಲದಿರಬಹುದು; ಆದರೆ ನನಗಿಂತಲೂ ಹೆಚ್ಚು ಸುಖಪಡ ಬಹುದು."—ಎಂದು ರೋದಿಸಿದಳು. ಹಾಸಿಗೆಯ ಮೇಲೆ ಬಿದ್ದು ಕಣ್ಣೀರಿನ ಕಾಲುವೆ ಹರಿಸಿದಳು. ಆಕೆಯ ಮಕ್ಕಳು ಆಕೆಯ ಬಟ್ಟೆಯನ್ನು ಹಿಡಿದು ಅಳುತ್ತಿದ್ದರು. ಆಕೆಯು ಅವರನ್ನು ಎತ್ತಿ ಮುದ್ದಾಡಿದಳು. ಅರಮನೆಯಲ್ಲಿದ್ದ ಸೇವ ಕರೆಲ್ಲರೂ ಅಳುತ್ತಿದ್ದರು; ಆಕೆಗಾಗಿ ಮರುಗುತ್ತಿದ್ದರು. ಅಡ್ಮೆಟಸ್‌ನು ಸತ್ತಿದ್ದರೆ ಅವನೊಂದಿಗೆ ಎಲ್ಲ ಮುಗಿಯು ತ್ತಿತ್ತು. ಆದರೆ ಅವನ ಸಾವನ್ನು ತಪ್ಪಿಸಿಕೊಳ್ಳುವುದರಲ್ಲಿ ಯಾವಜ್ಜೀವವೂ ಮರೆಯಲಾರದ ದುಃಖವನ್ನನುಭವಿ ಸುವನು.

ಪುರಪ್ರಮುಖ: ಅಡ್ಮೆಟಸ್‌ನು ಇಷ್ಟು ಶ್ರೇಷ್ಠ ಹೆಂಡತಿಯ ಮರಣಕ್ಕಾಗಿ ವ್ಯಥೆಪಡುವುದಿಲ್ಲವೆ ?

ಸಖಿ: ರೋದಿಸುವನು; ಆಕೆಯನ್ನು ಆಲಂಗಿಸಿಕೊಂಡು "ನನ್ನನ್ನು ಆಗಲಬೇಡ" ಎಂದು ಬೇಡಿಕೊಳ್ಳುವನು. ಇದು ಸಾಧ್ಯ; ಆತನು ಹೀಗೆ ಹೇಳುತ್ತಿರುವಾಗಲೇ ಆಕೆಯು ನಶಿಸಿ ಹೋಗುತ್ತಿರುವಳು. ನಾನು ಹೋಗಿ ನಿಮ್ಮ ಬರವನ್ನು ತಿಳಿಸುವೆನು. ಅವರು ಪೂರ್ವ ದಿಂದಲೂ ನಿಮ್ಮ ಪ್ರೀತಿಗೆ ಪಾತ್ರರಾಗಿದ್ದಾರೆ.

ಇದಾದ ಸ್ವಲ್ಪ ಹೊತ್ತಿಗೆ ಸಖಿಯರ ಸಹಾಯದಿಂದ ಆಲ್ಸೆಸ್ಟಿಸ್ ತೂಗಾಡುತ್ತಾ ಅಡ್ಮೆಟಸ್ ಮತ್ತು ಅವನ ಮಕ್ಕಳ ಜೊತೆಯಲ್ಲಿ ಬಂದಳು. ಅವಳ ಬುದ್ಧಿಯು ಚಂಚಲ ವಾಗಿತ್ತು. ಅವಳ ಮನಸ್ಸಿನಲ್ಲಿ ಅನೇಕ ಚಿತ್ರಗಳು ಹೊಳೆ ದುವು. ಒಂದು ಸಲ "ಅಗೋ, ಆಗೋ ಯಮದೂತನು ಸಂಸಾರ ಸಮುದ್ರವನ್ನು ದಾಟಿಸಲು ದೋಣಿಗಳನ್ನು ಸಿದ್ಧ ಪಡಿಸಿಕೊಂಡಿರುವನು. "ಜಾಗ್ರತೆ ಮಾಡು, ಏಕೆ ತಡ, ನಾನು ನಿಲ್ಲಲಾರೆ. ಅವನು ಕೋಪಗೊಂಡಿರುವನು." ಎಂದು ಕೂಗಿದಳು. ಮತ್ತೊಮ್ಮೆ ಭಯದಿಂದ "ಅವನು ಬಂದ, ಆಗೋ ಬಂದ, ರೆಕ್ಕೆಯುಳ್ಳ ಯಮದೂತ. ಅವನು ನನ್ನನ್ನೇ ನೋಡುವನು, ಕೈ ಕೊಡಿ. ನಾನು ಹೋಗಲಾರೆ." ಪುನಃ "ಕತ್ತಲು, ಕಗ್ಗತ್ತಲು, ನನ್ನ ಕಥೆ ಮುಗಿಯಿತು" ಎಂದು ಹೇಳುತ್ತ ಮೂರ್ಛೆಬಿದ್ದಳು. ಸಖಿಯರು ಆಕೆಯನ್ನು ಹಿಡಿದು ಹಾಸಿಗೆಯಲ್ಲಿ ಮಲಗಿಸಿ ಉಪಚರಿಸಿದರು.

ಮೇಲಿನ ಸನ್ನಿವೇಶದಲ್ಲಿ ಅಡ್ಮೆಟಸ್‌ನು ನೆರೆದ ಪಟ್ಟಣಿ ಗರಿಗೆ ತನ್ನ ದುಃಸ್ಥಿತಿಯನ್ನು ಹೇಳಿಕೊಂಡನು. ಸ್ವಲ್ಪ ಹೊತ್ತಿನ ಮೇಲೆ ಆಲ್ಸೆಸ್ಟಿಸ್‌ಳು ಮೂರ್ಛೆ ತಿಳಿಯುವ ಸೂಚನೆಗಳು ಕಂಡುಬಂದುವು. ಎಲ್ಲರೂ ಆಕೆಯ ಮಾತನ್ನು ಕೇಳಲು ತವಕಿಸುತ್ತಿದ್ದರು. ಆಕೆಯ ಧ್ವನಿಯಲ್ಲಿ ನಿಶ್ಶಕ್ತಿ ಮೂಡಿದ್ದರೂ ಅದರಲ್ಲಿ ದೃಢತೆಯಿತ್ತು. "ಹೇ ಪ್ರಿಯನೇ, ನಾನು ಸಾಯುವುದಕ್ಕೆ ಮೊದಲು ನನ್ನ ಮನಸ್ಸಿನ ಅಭಿ ಲಾಷೆಯನ್ನು ನಿನಗೆ ತಿಳಿಸಬೇಕೆಂದಿರುವೆನು. ನಾನು ನಿನ್ನನ್ನು ನನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಭಾವಿಸಿ ಗೌರವಿಸಿದೆ. ನಿನಗಾಗಿ ಈಗ ನಾನು ಪ್ರಾಣತ್ಯಾಗ ಮಾಡುತ್ತಿರುವೆನು. ನಾನು ಬೇರೆ ಯಾರನ್ನಾದರೂ ಮದುವೆಯಾಗಿ ಸುಖದಿಂದ ರಾಜಗೃಹದಲ್ಲಿರಬಹುದಾಗಿತ್ತು. ಆದರೆ ನಿನ್ನನ್ನೂ ಮಕ್ಕ ಳನ್ನೂ ಅಗಲಿದ ಮೇಲೆ ಬಾಳು ವ್ಯರ್ಥವಾಗಿ ತೋರುವುದು. ನನಗಿರುವ ಯೌವನ ಸಂಪತ್ತನ್ನು ನಿನ್ನಲ್ಲಿ ಹಂಚಿಕೊಳ್ಳಲಿಲ್ಲ. ನಿನ್ನ ತಂದೆತಾಯಿಗಳು ಮುದುಕರಾಗಿ ಸಾಯುವುದಕ್ಕೆ ಸಿದ್ಧರಾಗಬೇಕಾದ ಸಮಯ ಬಂದಿದ್ದರೂ ನಿನ್ನನ್ನು ಉಳಿಸಿ ಕೊಳ್ಳಲು ಸಮ್ಮತಿಸಲಿಲ್ಲ. ನೀನು ಅವರ ಏಕಮಾತ್ರ ಪುತ್ರನಾಗಿದ್ದೀಯೆ. ನಿನ್ನನ್ನು ಕಳೆದುಕೊಂಡ ಮೇಲೆ ಅವರು ಬೇರೆ ಪುತ್ರನನ್ನು ನೋಡರು. ನಿನಗೆ ಬಂದಿದ್ದ ಸಾವನ್ನು ಅವರು ವಹಿಸಬಹುದಾಗಿದ್ದರೆ ನಿನಗೆ ಈಗ ಒದ ಗಿರುವ ಪತ್ನೀವಿಯೋಗವು ಒದಗುತ್ತಿರಲಿಲ್ಲ. ಮತ್ತು ನಿನ್ನ ಮಕ್ಕಳು ತಾಯಿಯಿಲ್ಲದವರಾಗುತ್ತಿರಲಿಲ್ಲ. ಹೇಗಾ ದರೂ ಇದು ಯಾವುದೋ ದೇವರ ನಿಯಮವಾಗಿದೆ. ನಡೆ ಯಲಿ. ಆದುದರಿಂದ ಈಗ ನಿನ್ನ ಕರ್ತವ್ಯವೊಂದುಂಟು. ನನ್ನನ್ನೆಂದಿಗೂ ಮರೆಯಬೇಡ ಮತ್ತು ಬೇರೆ ಯಾವ ಸ್ತ್ರೀಯೂ ನಿನ್ನ ಹೃದಯದಲ್ಲಿರುವ ನನ್ನ ಚಿತ್ರಕ್ಕೆ ಅಡ್ಡಿ ಬರದಿರಲಿ; ಮಕ್ಕಳನ್ನು ಬೇರೆ ಯಾರ ಕೈಗೂ ಒಪ್ಪಿಸದೆ ತಾಯಿಯೋಪಾದಿಯಲ್ಲಿ ಪೋಷಿಸು. ಮಕ್ಕಳಿರಾ, ನನಗೆ ನಿಮ್ಮ ಮದುವೆಯನ್ನು ನೋಡುವ ಪುಣ್ಯವಿಲ್ಲ. ಮೃತ್ಯುವು ಸಮೀಪಿಸುತ್ತಿದೆ, ಇಂದೇ ಆಗಬೇಕು. ಪ್ರಿಯನೇ, ಉತ್ತಮ ಪತ್ನಿಯನ್ನು ಪಡೆದ ಹೆಮ್ಮೆ ನಿನ್ನದು; ಮಕ್ಕಳಿರಾ, ಶ್ರೇಷ್ಠ ತಾಯಿಯಿಂದ ಜನಿಸಿದ ಹೆಮ್ಮೆ ನಿಮ್ಮದು. ಎಲ್ಲರೂ ಸುಖವಾಗಿರಿ."

ಅಡ್ಮೆಟಸ್‌ನು ಬಹಳ ದೈನ್ಯದಿಂದ ಆಲ್ಸೆಸ್ಟಿಸ್‌ಗೆ ಹೀಗೆ ಹೇಳಿದನು: "ನೀನು ಭಯಪಡಬೇಡ. ನೀನು ಹೇಳಿದಂತೆಯೇ ನಡೆಸುವೆನು. ನೀನು ಜೀವಿಸಿದ್ದಾಗ ನನ್ನ ಏಕಮಾತ್ರ ಪತ್ನಿಯಾಗಿದ್ದಂತೆಯೇ ಸತ್ತಮೇಲೆಯೂ ಆಗುವೆ. ನಿನ್ನ ಸ್ಥಾನವನ್ನು ಯಾರೂ ತೆಗೆದುಕೊಳ್ಳಲಾ ರರು. ಯಾವ ಸ್ತ್ರೀಯ ಸೌಂದರ್ಯವೂ, ಐಶ್ವರ್ಯವೂ,

CC-0. Jangamwadi Math Collection. Digitized by eGangotri

ಪದವಿಯೂ ನನ್ನ ಮನಸ್ಸನ್ನು ಚಲಿಸದು. ನನಗೆ ಮಕ್ಕಳಿರುವರು. ಅವರ ಸೌಖ್ಯಕ್ಕಾಗಿ ದೇವರನ್ನು ಪ್ರಾರ್ಥಿಸುತ್ತೇನೆ. ನಿನಗಾಗಿ ಒಂದು ವರ್ಷ ಮಾತ್ರವಲ್ಲ, ನನ್ನ ಜೀವಾವಧಿ ಪ್ರಲಾಪಿಸುವೆನು. ವಾಸ್ತವವಾಗಿಯೂ ನನ್ನ ತಂದೆತಾಯಿಗಳ ಪ್ರೀತಿಯೂ ಕೂಡ ಬರಿಯ ಮಾತಿನಲ್ಲಿ ಮುಗಿಯಿತು. ಅವರು ನನಗಾಗಿ ಸಾಯಲು ಸಿದ್ಧರಾಗಲಿಲ್ಲ. ನೀನು ನನಗಾಗಿ ನಿನ್ನ ಸರ್ವಸ್ವವನ್ನೂ ಕೊಟ್ಟು ನನ್ನನ್ನು ಉಳಿಸಿದ್ದೀಯೆ. ಇನ್ನು ಮೇಲೆ ನನ್ನ ಮನೆಯಲ್ಲಿ ಸಂತೋಷಕೂಟಗಳ ಸಂಭ್ರಮವು ನಿಲ್ಲುವುದು. ನೀನು ನನ್ನ ಹೃದಯದಿಂದ ಸಂತೋಷವನ್ನು ಕಸಿದುಕೊಂಡು ಬಿಟ್ಟಿದ್ದೀಯೆ. ನೀನು ಕನಸುಗಳಲ್ಲಿ ನನಗೆ ದರ್ಶನಕೊಡು ಕ್ಷಣಕಾಲವಾದರೂ ಕನಸುಗಳಲ್ಲಿ ನೋಡಲು ಎಷ್ಟೋ ಆನಂದ. ನಾನು ಸತ್ತಮೇಲೂ ನನ್ನನ್ನು ನಿನ್ನ ಗೋರಿಯ ಬಳಿಯಲ್ಲಿ ಸೇರಿಸುವಂತೆ ಹೇಳುವೆನು. ಸತ್ತಮೇಲೂ ನಮಗೆ ಅಗಲಿಕೆ ಬೇಡ. ನನಗಿರುವ ಆಪ್ತಳು ನೀನೊಬ್ಬಳೇ.

ಅಲ್ಸೆಸ್ಟಿಸ್: ನನಗೆ ಬದಲು ಈ ಮಕ್ಕಳಿಗೆ ತಾಯಿಯಾಗಿರು.

ಅಡ್ಮೆಟಸ್: ನಿನ್ನ ವಿಯೋಗವನ್ನು ಹೆಚ್ಚು ಅನುಭವಿಸುವವರು ಇವರು.

ಆಲ್ಸೆಸ್ಟಿಸ್: ಮಕ್ಕಳೇ, ನಾನು ಬದುಕಿರಬೇಕಾಗಿತ್ತು. ಆದರೆ ಸಾಯುತ್ತಿದ್ದೇನೆ.

ಅಡ್ಮೆಟಸ್: ಅಯ್ಯೋ, ನಿನ್ನ ವಿಯೋಗವನ್ನು ನಾನೆಂತು ಅನುಭವಿಸಲಿ!

ಆಲ್ಸೆಸ್ಟಿಸ್: ಕಾಲವು ನನ್ನಿಂದಾಗುವ ಅಳಲನ್ನು ಶಮನ ಮಾಡುವುದು. ಸತ್ತವರ ಚಿಂತೆಯೇಕೆ?

ಅಡ್ಮೆಟಸ್: ನನ್ನನ್ನೂ ನಿನ್ನ ಜೊತೆಯಲ್ಲಿ ಮೃತ್ಯುವಿನಲ್ಲಿಗೆ ಕರೆದೊಯ್ಯಿ

ಆಲ್ಸೆಸ್ಟಿಸ್: ಒಬ್ಬಳು ಸಾಯುವುದು ಸಾಕು,—ಅವಳು ನಿನಗಾಗಿಯೇ ಸಾಯುವುದು.

ಅಡ್ಮೆಟಸ್: ಓ ಮೃತ್ಯುವೇ, ಎಂಥ ಪ್ರಿಯೆಯನ್ನು ಕೊಂಡೊಯ್ಯುವೆ!

ಆಲ್ಸೆಸ್ಟಿಸ್: ಕತ್ತಲು, ಕತ್ತಲು, ಕಣ್ಣುಗಳು ಸೇದುತ್ತಿರುವುವು.

ಅಡ್ಮೆಟಸ್: ನೀನು ಅಗಲಿದರೆ ನಾನು ಮುಳುಗಿದೆ.

ಆಲ್ಸೆಸ್ಟಿಸ್: ಸತ್ತೆ, ನಾನು ಸತ್ತೆ, ಹೋಗಿಬರುವೆನು. ನಿಮಗೆ ಶುಭವಾಗಲಿ, ಮಕ್ಕಳೇ!

ಅಲ್ಸೆಸ್ಟಿಸ್ ಹೀಗೆ ಪ್ರಲಾಪಿಸಿ ದೈವಾಧೀನಳಾದಳು. ಅಡ್ಮೆಟಸ್‌ನೂ ಅವನ ಮಗ ಎಮೆಲಸ್‌ನೂ ತಮ್ಮ ಬದುಕಿನ ಸಾರಸರ್ವಸ್ವವೂ ನಾಶವಾಯಿತೆಂದು ಬಹುವಾಗಿ ದುಃಖಿಸಿದರು. ಅಲ್ಲಿ ನೆರೆದಿದ್ದ ಪಟ್ಟಣಿಗರು ಅವರನ್ನು ಸಂತೈಸಿದರು. ಅಡ್ಮೆಟಸ್‌ನು ಧೈರ್ಯ ತಂದುಕೊಂಡು ಶವಸಂಸ್ಕಾರಕ್ಕೆ ಸಿದ್ಧಗೊಳಿಸಲುಪಕ್ರಮಿಸಿದನು.

ಈವೇಳೆಗೆ ಹೆರಾಕ್ಲೆಸ್ ಎಂಬ ಒಬ್ಬ ಅತಿಥಿಯು ಅರಮನೆಯನ್ನು ಪ್ರವೇಶಿಸಿ ಅಡ್ಮೆಟಸ್‌ನನ್ನು ನೋಡಲಾಗುವುದೇ ಎಂದು ವಿಚಾರಿಸಿದನು. ಅರಮನೆಯ ಮುಂಭಾಗದಲ್ಲಿದ್ದ ಅಡ್ಮೆಟಸ್‌ನ ಪೂರ್ವೋತ್ತರಗಳನ್ನು ಕೇಳುತ್ತಿರುವಲ್ಲಿ ಅವನೇ ಅಲ್ಲಿಗೆ ಬಂದನು. ಒಬ್ಬರನ್ನೊಬ್ಬರು ನೋಡಿ ವಂದಿಸಿದಮೇಲೆ ಹೆರಾಕ್ಲೆಸ್‌ನು ರಾಜನ ದುಃಖಕ್ಕೆ ಕಾರಣವನ್ನು ಕೇಳಿದನು.

ಅಡ್ಮೆಟಸ್: ಈ ದಿನ ನಾನು ಒಂದು ಶವಸಂಸ್ಕಾರ ಮಾಡಬೇಕು.

ಹೆರಾಕ್ಲೆಸ್: ನಿನ್ನ ಮಕ್ಕಳಿಗಾಗಿ ನೀನು ಶೋಕಿಸುವುದನ್ನು ದೇವರು ತಪ್ಪಿಸಲಿ!

ಅಡ್ಮೆಟಸ್: ನನ್ನ ಮಕ್ಕಳು ಜೀವಿಸಿದ್ದಾರೆ.

ಹೆರಾಕ್ಲೆಸ್: ನಿನ್ನ ತಂದೆಯೇ ಗತಿಸಿದ್ದರೆ, ಆತನು ಮುದುಕನಾಗಿರಬೇಕು.

ಅಡ್ಮೆಟಸ್: ಆತನೂ ನನ್ನ ತಾಯಿಯೂ ಜೀವಿಸಿದ್ದಾರೆ.

ಹೆರಾಕ್ಲೆಸ್: ಸತ್ತಿರುವುದು ನಿಜವಾಗಿಯೂ ನಿನ್ನ ಹೆಂಡತಿಯಲ್ಲ, ಅಲ್ಲವೇ?

ಅಡ್ಮೆಟಸ್: ಈ ವಿಷಯದಲ್ಲಿ ಹಾಗೂ ಹೇಳಬಹುದು, ಹೀಗೂ ಹೇಳಬಹುದು.

ಹೆರಾಕ್ಲೆಸ್: ನೀನು ಹೇಳುವುದೇನು, ಆಕೆ ಸತ್ತಿರುವಳೆಂದೋ ಅಥವಾ ಜೀವಿಸಿರುವಳೆಂದೋ?

ಅಡ್ಮೆಟಸ್: ಅವಳು ಇದ್ದಾಳೆ, ಆದರೂ ಇಲ್ಲ; ಇದೀಗ ನನ್ನ ವ್ಯಥೆ.

ಹೆರಾಕ್ಲೆಸ್: ನಿನ್ನ ಮಾತು ನನಗೆ ಅರ್ಥವಾಗದು; ಆದರೂ ಅದು ವ್ಯಸನಕರವಾದುದೇ.

ಅಡ್ಮೆಟಸ್: ಆಕೆಗೆ ಒದಗಬೇಕಾಗಿರುವ ಆಪತ್ತು ನಿನಗೆ ತಿಳಿಯದೇ?

ಹೆರಾಕ್ಲೆಸ್: ನಿನಗಾಗಿ ಆಕೆಯು ಪ್ರಾಣತ್ಯಾಗ ಮಾಡುವುದಾಗಿ ವಾಗ್ದಾನಮಾಡಿದ್ದನ್ನು ತಿಳಿದಿದ್ದೇನೆ.

ಅಡ್ಮೆಟಸ್: ಅವಳು ಪ್ರಾಣತ್ಯಾಗಕ್ಕೆ ಸಮ್ಮತಿಸಿದ ಮೇಲೆ ಜೀವಿಸಿರುವುದೆಂತು?

CC-0. Jangamwadi Math Collection. Digitized by eGangotri

ಹೆರಾಕ್ಲೆಸ್: ಆಕೆಯು ಸಾಯುವುದಕ್ಕೆ ಮೊದಲೇ ಶೋಕಿಸ ಬೇಡ. ಆ ಕಾಲ ಬರಲಿ.

ಅಡ್ಮೆಟಸ್: ಸಾಯಬೇಕಾದವರು ಸತ್ತಂತೆಯೇ, ಸತ್ತವರು ಇಲ್ಲದಂತೆಯೆ !

ಹೆರಾಕ್ಲೆಸ್: ನಿನ್ನ ಮಾತು ಇಬ್ಬಗೆಯಾಗಿದೆ—ಇದ್ದಂತೆ ಮತ್ತು ಇಲ್ಲದಂತೆ.

ಅಡ್ಮೆಟಸ್: ನಾನು ಹಾಗೆಯೇ ಹೇಳಿದ್ದು.

ಹೆರಾಕ್ಲೆಸ್: ನೀನು ಈಗ ಶೋಕಿಸುವುದೇಕೆ? ಯಾವ ಪ್ರಿಯ ಸ್ನೇಹಿತನು ಗತಿಸಿದನು ?

ಅಡ್ಮೆಟಸ್: ಒಬ್ಬ ಹೆಂಗಸು—ಆಕೆಗಾಗಿಯೇ ನಾವೀಗ ದುಃಖಿಸುತ್ತಿರುವುದು.

ಹೆರಾಕ್ಲೆಸ್: ಆಕೆ ಯಾರು ಅಪರಿಚಿತಳೊ, ಅಥವಾ ಹತ್ತಿರ ಬಂಧುವೋ ?

ಅಡ್ಮೆಟಸ್: ಅಪರಿಚಿತನಲ್ಲಿ ಹುಟ್ಟಿದವಳೇ, ಆದರೂ ನಮಗೆ ಕೇವಲ ಸಮೀಪಬಂಧುವೂ ಆಪ್ತಳೂ ಆಗಿದ್ದಾಳೆ.

ಹೆರಾಕ್ಲೆಸ್: ಹಾಗಿದ್ದರೆ ಇಲ್ಲಿ ಸತ್ತವಳು ಅಪರಿಚಿತಳು ಹೇಗೆ ?

ಅಡ್ಮೆಟಸ್: ಆಕೆಯ ತಂದೆ ತೀರಿಹೋದುದರಿಂದ ಇಲ್ಲಿ ಆಕೆಯು ದಿಕ್ಕಿಲ್ಲದವಳಾಗಿದ್ದಳು.

ಹೆರಾಕ್ಲೆಸ್: ನಿನ್ನನ್ನು ಈ ದುಃಖಕಾಲದಲ್ಲಿ ನೋಡದಿದ್ದರೆ ಚೆನ್ನಾಗಿತ್ತು, ಅಡ್ಮೆಟಸ್.

ಅಡ್ಮೆಟಸ್: ಅದು ಹೇಗೆ, ನಿನ್ನ ಮಾತಿನ ಅಭಿಪ್ರಾಯ ವೇನು ?

ಹೆರಾಕ್ಲೆಸ್: ಆತಿಥ್ಯ ದೊರೆಯುವ ಬೇರೆ ಎಡೆಗೆ ಹೋಗುತ್ತೇನೆ.

ಅಡ್ಮೆಟಸ್: ಅದೆಂದಿಗೂ ಆಗದು; ಅದರಿಂದೊದಗುವ ಪಾಪವು ನನಗೆ ಬರದಿರಲಿ.

ಹೆರಾಕ್ಲೆಸ್: ವ್ಯಸನದಲ್ಲಿರುವವನಿಗೆ ಅತಿಥಿಯು ಒಂದು ಭಾರ.

ಅಡ್ಮೆಟಸ್: ಸಾಯಬೇಕಾದವರು ಸತ್ತರು; ನೀನು ನನ್ನ ಮನೆಯನ್ನು ಪ್ರವೇಶಿಸು.

ಹೆರಾಕ್ಲೆಸ್; ವ್ಯಸನಕ್ಕೀಡಾಗುವವರ ಮನೆಯಲ್ಲಿ ಆತಿಥ್ಯ ಪಡೆಯುವುದು ನಾಚಿಕೆಗೇಡು.

ಅಡ್ಮೆಟಸ್: ಅರಮನೆಗೆ ಸಂಬಂಧವಿಲ್ಲದಿರುವ ಅತಿಥಿ ಮಂದಿರದಲ್ಲಿ ನಿಮ್ಮನ್ನು ಬಿಡಾರ ಮಾಡಿಸುವೆನು.

ಹೆರಾಕ್ಲೆಸ್: ನನ್ನ ಅನಂತ ವಂದನೆಗಳನ್ನು ಸ್ವೀಕರಿಸಿ; ನಾನು ಮುಂದೆ ಹೋಗುವೆನು.

ಅಡ್ಮೆಟಸ್: ಬೇರೊಬ್ಬರ ಮನೆಗೆ ಹೋಗಕೂಡದು. (ಸೇವಕರನ್ನು ಕರೆದು) ಇವರನ್ನು ಅತಿಥಿಮಂದಿರದಲ್ಲಿ ಇಳಿಸಿ ಯಾವ ನ್ಯೂನತೆಯೂ ಇಲ್ಲದಂತೆ ಇವರನ್ನು ಉಪಚರಿಸಿ. ಅಲ್ಲಿನ ಬಾಗಿಲುಗಳನ್ನೆಲ್ಲ ಮುಚ್ಚಿ. ನಮ್ಮ ರೋದನವು ಅವರಿಗೆ ಕೇಳದಂತಿರಲಿ.

ಹೆರಾಕ್ಲೆಸ್‌ನು ರಾಜಸೇವಕನ ಜೊತೆಯಲ್ಲಿ ಹೊರಟು ಹೋದನು.

ಅಡ್ಮೆಟಸ್‌ನು ತನ್ನ ಹೆಂಡತಿಯೇ ಸತ್ತಿರುವುದೆಂದು ಹೆರಾಕ್ಲೆಸ್ಸಿಗೆ ಸ್ಪಷ್ಟವಾಗಿ ಹೇಳಲಿಲ್ಲ. ಏಕೆಂದರೆ ಹಾಗೆ ಹೇಳಿದರೆ ಅತಿಥಿಯು ಹೊರಟುಹೋಗಬಹುದೆಂಬ ಭೀತಿಯಿತ್ತು. ಹೀಗೆ ಮನೆಗೆ ಬಂದ ಅತಿಥಿಯನ್ನು ಆದರಿಸದೆ ಕಳುಹಿಸುವುದು ಸಚ್ಚರಿತವಾಗಿರಲಿಲ್ಲ.

ಶವವನ್ನು ಸಂಸ್ಕಾರಕ್ಕೆ ತೆಗೆದುಕೊಂಡು ಹೋಗಲು ಸಿದ್ಧವಾಗಿದ್ದ ವೇಳೆಗೆ ಅಡ್ಮೆಟಸ್‌ನ ತಂದೆ ಫೆರಸ್ ಅಲ್ಲಿಗೆ ಬಂದನು. ಅವನು ತನ್ನ ಮಗನನ್ನು ಕುರಿತು "ಮಗನೇ, ಮಾನ್ಯಳೂ ಸದ್ಗುಣಿಯೂ ಆದ ಹೆಂಡತಿಯನ್ನು ನೀನು ಕಳೆದುಕೊಂಡಿರುವೆ. ಆದರೂ ಈ ದುಃಖವನ್ನು, ಅದು ಎಷ್ಟೇ ದುಸ್ಸಹವಾಗಿದ್ದರೂ ಸಹಿಸಲೇಬೇಕು. ಈ ಆಭರಣಗಳಿಂದ ಅವಳನ್ನು ಅಲಂಕರಿಸು. ನಿನಗಾಗಿ ಪ್ರಾಣತ್ಯಾಗ ಮಾಡಿದ ಅವಳನ್ನು ಗೌರವಿಸು. ಈ ಮುದಿತನದಲ್ಲಿ ಆಕೆಯು ನನ್ನನ್ನು ಪುತ್ರಶೋಕಕ್ಕೆ ಈಡುಮಾಡಲಿಲ್ಲ. ಅವಳು ತನ್ನ ನಡತೆಯಿಂದ ಆಕೆಯ ಸೋದರಿಯರಿಗೆಲ್ಲ ಮಾನ್ಯಳಾಗಿದ್ದಾಳೆ. ಇಂಥ ಮದುವೆಯೇ ಲೋಕದಲ್ಲಿ ಯಶಸ್ವಿಯಾಗತಕ್ಕದ್ದು."—ಎಂದನು.

ಅಡ್ಮೆಟಸ್: ನಿನ್ನನ್ನು ನಾನು ಇಲ್ಲಿಗೆ ಕರೆಸಲಿಲ್ಲ. ಮತ್ತು ನಿನ್ನನ್ನು ಆಪ್ತನೆಂದು ನಾನು ಗಣಿಸುವುದಿಲ್ಲ. ನಿನಗೆ ವ್ಯಥೆಯೋ! ವಾಸ್ತವವಾಗಿ ನಿನಗೆ ವ್ಯಥೆಯಾಗಿದ್ದಲ್ಲಿ ನನಗೆ ಸಾವು ಬಂದಾಗ ವ್ಯಥೆಪಡಬೇಕಾಗಿತ್ತು. ವಯಸ್ಸಾದ ನೀನು ಚಿಕ್ಕವಳು ಸಾಯುತ್ತಿದ್ದಾಗ ಸುಮ್ಮನಿದ್ದು ಈಗ ಶವದ ಹತ್ತಿರ ರೋದಿಸುತ್ತೀಯಾ? ನೀನಾಗಲಿ ನನ್ನ ತಾಯಿಯಾಗಲಿ ನನ್ನ ವಿಷಯದಲ್ಲಿ ನಿಜವಾದ ಮಾತಾಪಿತೃಗಳಂತೆ ವರ್ತಿಸಲಿಲ್ಲ. ಸಮಯ ಒದಗಿದಾಗ ನಿಮ್ಮ ಸಹಜವಾದ ಗುಣಗಳನ್ನು ವ್ಯಕ್ತಪಡಿಸಿರುವಿರಿ. ಎಂಥ ಅಸಾಮಾನ್ಯ ಹೇಡಿಗಳು! ಮರಣಕಾಲವು ಪ್ರತಿಭಟಿಸುತ್ತಿದ್ದರೂ ಮಗನಿಗಾಗಿ ಸಾಯು

CC-0. Jangamwadi Math Collection. Digitized by eGangotri

ವುದಕ್ಕೆ ಧೈರ್ಯವೂ ಮನಸ್ಸೂ ಬರಲಿಲ್ಲ. ಹೊರ ಮನೆಯ ಈ ಹೆಣ್ಣನ್ನು ಸಾವಿಗೆ ಗುರಿಮಾಡಿದಿರಿ. ನನಗಾಗಿ ನೀವು ಪ್ರಾಣತ್ಯಾಗಮಾಡಿದ್ದರೆ ನಾನೂ ಅವಳೂ ಇನ್ನೂ ಬಹುಕಾಲ ಜೀವಿಸಿರಬಹುದಾಗಿತ್ತು, ಮತ್ತು ಈಗಿನಂತೆ ವಿಯೋಗ ವ್ಯಥೆಗೆ ಗುರಿಯಾಗಬೇಕಾದುದಿರಲಿಲ್ಲ. ನನ್ನನ್ನು ನೀವು ಮಗನೆಂದು ಭಾವಿಸಬೇಕಾದುದಿಲ್ಲ. ನಿಮ್ಮ ಪಾಲಿಗೆ ನಾನು ಸತ್ತಂತೆಯೇ.

ಫೆರೆಸ್: ಹಣಕೊಟ್ಟು ಕೊಂಡ ಸೇವಕನೆಂದು ತಿಳಿದಿರುವೆಯಾ ನನ್ನನ್ನು? ನಿನಗೆ ಜನ್ಮಕೊಟ್ಟು ನಿನ್ನನ್ನು ಸಾಕಿ ರಾಜ್ಯಕ್ಕೆ ಅಧಿಕಾರಿಯಾಗಿ ಮಾಡಿದೆ. ನಿನಗಾಗಿ ಸಾಯಬೇಕಾದುದೇನೂ ನನ್ನ ಋಣವಲ್ಲ. ಈ ಪದ್ಧತಿಯು ಪೂರ್ವಿಕರಿಂದ ನಮಗೆ ಬಂದಿಲ್ಲ. ಇದು ಗ್ರೀಕರ ಕಟ್ಟಳೆಯಲ್ಲ. ನಿನ್ನ ಸುಕೃತದಿಂದಲೋ ದುಷ್ಕೃತದಿಂದಲೋ ನೀನೇ ಜನ್ಮವೆತ್ತಿದೆ. ನಮ್ಮಿಂದ ಹೊಂದಬಹುದಾದುದನ್ನೆಲ್ಲ ಹೊಂದಿರುವೆ. ನೀನು ದೊಡ್ಡ ನಾಡಿಗೆ ರಾಜನಾಗಿರುವೆ. ನಾನು ನಿನಗೆ ಮಾಡಿದ ಅಪರಾಧವೇನು? ನಾಚಿಕೆಯಿಲ್ಲದೆ ಮೃತ್ಯುವಿನೊಂದಿಗೆ ಹೋರಾಡಿದ್ದೀಯೆ. ನಿನ್ನ ಜೀವನವು ವಿಧಿಗೆ ವಿರುದ್ಧವಾಗಿಯೂ ನಿನ್ನ ಹೆಂಡತಿಗೆ ಸಾವು ಒದಗಿಸುವುದಾಗಿಯೂ ಇದೆ. ಎಂದೂ ಸಾಯದಿರಲು ಒಳ್ಳೆಯ ಉಪಾಯ ಹುಡುಕಿದ್ದೀಯೆ. ಒಬ್ಬಳಾದ ಮೇಲೊಬ್ಬ ಹೆಂಡತಿಯನ್ನು ಪ್ರೋತ್ಸಾಹಿಸಿ, ಮೃತ್ಯುವಿಗೆ ಗುರಿಮಾಡುವವನು ನೀನು ಹೇಡಿ! ನಿನ್ನ ಪ್ರಾಣದಲ್ಲಿ ನಿನಗೆ ಅಭಿಮಾನವಿದ್ದರೆ ಹಾಗೆಯೇ ಇತರರಿಗೂ ಉಂಟೆಂದು ತಿಳಿ.

ಅಡ್ಮೆಟಿಸ್: ಹೇಳು, ಹೇಳು, ನಿನ್ನ ಮನಸ್ಸಿ ಹೇಳು. ವಾಸ್ತವಾಂಶವನ್ನು ಕೇಳುವುದು ಕಟುತರವಾಗಿದ್ದರೆ ನನಗೆ ಕೇಡನ್ನು ಮಾಡದಿರಬೇಕಾಗಿತ್ತು.

ಫೆರೆಸ್: ನಿನಗಾಗಿ ನಾನು ಸತ್ತಿದ್ದರೆ ಹೆಚ್ಚು ಕೇಡಾಗುತ್ತಿತ್ತು.

ಅಡ್ಮೆಟಿಸ್: ಏನು, ಸಾವು ದೊಡ್ಡವರಿಗೂ ಚಿಕ್ಕವರಿಗೂ ಎರಡೂ ಒಂದೇನೇ?

ಫೆರೆಸ್: ಎಲ್ಲರೂ ಒಂದು ಜೀವನವನ್ನು ಬಾಳಬೇಕಾದುದು ನಿಯಮವು.

ಅಡ್ಮೆಟಿಸ್: ನಿನ್ನ ಕೋರಿಕೆಯು ನೆರವೇರಲಿ—ಜ್ಯೂಸ್ ದೇವನಿಗಿಂತಲೂ ಹೆಚ್ಚುಕಾಲ ಬದುಕು.

ಫೆರೆಸ್: ನಿರಪರಾಧಿಗಳಾದ ನಿನ್ನ ತಂದೆತಾಯಿಗಳಲ್ಲಿ ನಿಷ್ಠುರವಾಗಿ ನುಡಿಯುವೆಯಾ?

ಅಡ್ಮೆಟಿಸ್: ಅನಂತಕಾಲ ಪ್ರಾಣದ ಮೇಲೆ ಆಶೆಯುಳ್ಳವನಾಗಿ ಜೀವಿಸು.

ಫೆರೆಸ್: ನಿನಗೆ ಬದಲಾಗಿ ಅವಳನ್ನು ನೀನೇ ನಿಧನ ಮಾಡುತ್ತಿಲ್ಲವೇ?

ಅಡ್ಮೆಟಿಸ್: ಇದು ನಿನ್ನ ಹೇಡಿತನದ ಫಲ.

ಫೆರೆಸ್: ನಾನು ಅವಳನ್ನು ಕೊಲ್ಲಲಿಲ್ಲ. ನೀನು ನನ್ನ ಮೇಲೆ ತಪ್ಪುಹೊರಿಸಲಾರೆ.

ಅಡ್ಮೆಟಿಸ್: ನನ್ನ ಸಹಾಯವು ನಿನಗೆ ಎಂದಾದರೂ ಬೇಕಾದೀತು.

ಫೆರೆಸ: ಅನೇಕ ಸ್ತ್ರೀಯರನ್ನು ವರಿಸು. ಏಕೆಂದರೆ ನೀನು ಅನೇಕಾವರ್ತಿ ಸಾಯಬಹುದು.

ಹೀಗೆ ತಂದೆ ಮಕ್ಕಳಿಗೆ ನಿಷ್ಠುರವಾಗಿ ಮಾತು ನಡೆದು ಫೆರೆಸ್ ಹೊರಟು ಹೋದನು. ಅಡ್ಮೆಟಿಸ್‌ನು ತನ್ನ ಹೆಂಡತಿಯ ಶವವನ್ನು ನಿಧನಕ್ಕೆ ತೆಗೆದುಕೊಂಡು ಹೋದನು.

ಮನೆಗೆ ಅತಿಥಿಯಾಗಿ ಬಂದ ಹೆರಾಕ್ಲೆಸ್‌ನಿಗೆ ಮನೆಯಲ್ಲಿ ನಡೆದಿದ್ದ ವಿಪತ್ತು ತಿಳಿಯದಿದ್ದುದರಿಂದ ಆತನು ತನಗೊದಗಿದ ಸತ್ಕಾರದಲ್ಲಿ ಮಗ್ನನಾಗಿ ತಿಂದು ತೇಗಿ ಲೋಲುಪ್ತನಾಗಿದ್ದನು. ಈತನ ಲೋಲುಪ್ತಿಯನ್ನು ನೋಡಿ ಅರಮನೆಯ ಸೇವಕನು ಅಸಹ್ಯಪಟ್ಟುಕೊಂಡನು. "ಇವನು ಎಲ್ಲಿಯೋ ಕಳ್ಳನೋ ದರೋಡೆಕಾರನೋ ಇರಬೇಕು. ಯಜಮಾನನ ಇಂಥ ದುರ್ದೆಶೆಯಲ್ಲಿ ಬಂದು ಇಲ್ಲಿ ತಿಂದು ಮೆರೆಯುವನು. ಇವನಿಗಾಗಿ ನಾವೂ ಮನೆಯಲ್ಲಿಯೇ ನಿಂತು ಇವನ ಸೇವೆಯಲ್ಲಿ ನಿರತರಾಗಬೇಕು. ಮನೆಯ ಯಜಮಾನಿಯನ್ನು ನಿಧನಕ್ಕೆ ಕೊಂಡೊಯ್ಯುತ್ತಿರುವರು. ಆಕೆಯು ಎಷ್ಟು ದಯಾಳು. ನಮಗೆಲ್ಲರಿಗೂ ತಾಯಿಯಂತಿದ್ದು ನಮ್ಮ ತಪ್ಪುಗಳನ್ನು ಮನ್ನಿಸಿ ಕಾಪಾಡುತ್ತಿದ್ದಳು. ಇಂಥವಳನ್ನು ಕೊನೆಯಾವರ್ತಿ ಹೋಗಿ ನೋಡಿ ಬರೋಣವೆಂದರೆ ಇಲ್ಲವಾಗಿದೆ."— ಈ ರೀತಿ ಹೇಳುತ್ತ ಅವನು ಖಿನ್ನನಾಗಿದ್ದನು.

ಸ್ವಾಮಿನಿಷ್ಠನಾದ ಸೇವಕನ ಈ ದುಃಖದ ಮಧ್ಯದಲ್ಲಿ ಹೆರಾಕ್ಲೆಸ್‌ನ ಮಾತು ಕೇಳಬಂತು. "ಏನಯ್ಯಾ, ಏತಕ್ಕೆ ಈ ವ್ಯಸನ. ಅತಿಥಿಯು ಮನೆಗೆ ಬಂದಿರುವಾಗ ಆತನನ್ನು ಹಸನ್ಮುಖದಿಂದ ಆದರಿಸಬೇಕು. ನನ್ನ ಮಾತಿಗೆ ಕಿವಿಕೊಡು. ಮಾನವನಿಗೆ ಮರಣವು ತಪ್ಪಿದ್ದಲ್ಲ. ನಾಳೆ ಏನಾಗುವುದೆಂದು ಯಾರೂ ತಿಳಿಯಲಾರರು. ಆದುದರಿಂದ ತಿಂದು ಮೆರೆ. ಇರುವ ಈ ದಿನವು ನಿನ್ನದೆಂದೇ ತಿಳಿ. ಆದು

CC-0. Jangamwadi Math Collection. Digitized by eGangotri

ದರಿಂದ ನಿನ್ನ ದುಃಖವನ್ನು ದೂರಮಾಡಿ ನನ್ನ ಜೊತೆಯಲ್ಲಿ ಮದ್ಯಪಾನ ಮಾಡು. ಮನುಷ್ಯನು ಮರ್ತ್ಯಧರ್ಮವನ್ನನುಸರಿಸಬೇಕು. ಬದುಕಿನಲ್ಲಿ ಬರಿಯ ದುಃಖವಲ್ಲದೆ ನಿಜವಾಗಿಯೂ ಸುಖವಿಲ್ಲ.

**ಸೇವಕ:** ಇದೆಲ್ಲ ನಮಗೆ ತಿಳಿದಿದೆ. ಆದರೆ ನಾವು ಈಗ ತಿಂದು ಮೆರೆಯುವ ಸ್ಥಿತಿಯಲ್ಲಿಲ್ಲ.

**ಹೆರಾಕ್ಲಿಸ್:** ಮೃತಳು ನಿಮಗೆ ಸಂಬಂಧವಿಲ್ಲದವಳು. ಅದಕ್ಕಾಗಿ ಹೆಚ್ಚಾಗಿ ಶೋಕಿಸಬೇಡಿ. ಮನೆಯ ಒಡೆಯರು ಸ್ವಸ್ಥರಾಗಿಯೇ ಇರುವರು.

**ಸೇವಕ:** ಸ್ವಸ್ಥರೆ ದೆಯಾ! ಈ ಮನೆಯಲ್ಲೊದಗಿದ ವಿಪತ್ತು ನಿನಗೆ ತಿಳಿಯದೋ?

**ಹೆರಾಕ್ಲಿಸ್:** ನಿಮ್ಮ ಒಡೆಯನು ನನಗೆ ಸುಳ್ಳುಹೇಳಲಿಲ್ಲ ವೆಂದು ಭಾವಿಸುತ್ತೇನೆ.

**ಸೇವಕ:** ಅವನಿಗೆ ಅತಿಥಿಗಳೆಂದರೆ ವಿಶೇಷ ಪ್ರೀತಿ.

**ಹೆರಾಕ್ಲಿಸ್:** ಯಾರೋ ಸತ್ತರೆ ನನ್ನನ್ನು ಆದರಿಸಕೂಡದೆ?

**ಸೇವಕ:** ಹೋ, ಅನ್ಯಳೆ ಅವಳು; ಅನ್ಯರಿಗೆ ಅನ್ಯಳು.

**ಹೆರಾಕ್ಲಿಸ್:** ಹಾಗಿದ್ದರೆ ಅಡ್ಮೆಟಸ್‌ನು ತನ್ನ ದುಃಖವನ್ನು ಮರೆಮಾಚಿದನೇ?

**ಸೇವಕ:** ಹೋಗಯ್ಯಾ, ನಮ್ಮ ಯಜಮಾನರ ದುಃಖಗಳು ನಮಗೆ.

**ಹೆರಾಕ್ಲಿಸ್:** ಹಾಗಾದರೆ ನನ್ನ ಅನ್ನದಾತನ ಮನಸ್ಸನ್ನು ನೋಯಿಸಿದೆನೇ?

**ಸೇವಕ:** ನಿನ್ನನ್ನು ಸತ್ಕರಿಸಲು ಸಮಯವಿಲ್ಲದಾಗ ಬಂದಿರುವೆ ನೀನು. ಏಕೆಂದರೆ ನಾವು ದುಃಖಮಗ್ನರಾಗಿದ್ದೇವೆ. ನಾವು ವಸನ ಮಾಡಿಕೊಂಡಿರುವುದನ್ನೂ ಕಪ್ಪುಬಟ್ಟೆಯುಟ್ಟಿರುವುದನ್ನೂ ನೋಡುತ್ತಿದ್ದೀಯೆ.

**ಹೆರಾಕ್ಲಿಸ್:** ಹಾಗಾದರೆ ಸತ್ತವರಾರು? ಮಕ್ಕಳೋ ಮುದುಕರೋ?

**ಸೇವಕ:** ಅಡ್ಮೆಟಸ್‌ನ ಹೆಂಡತಿ ಸತ್ತಿರುವಳು.

**ಹೆರಾಕ್ಲಿಸ್:** ಹಾ, ಏನು ಹೇಳಿದೆ. ಆದರೂ ನೀನು ನನಗೆ ಆತಿಥ್ಯ ಕೊಟ್ಟಿರುವೆ.

**ಸೇವಕ:** ಅಪವಾದಕ್ಕೆ ಹೆದರಿ ನಿನ್ನನ್ನು ಬೇರೆಯೆಡೆಗೆ ಕಳುಹಿಸಲಿಲ್ಲ.

**ಹೆರಾಕ್ಲಿಸ್:** ಎಂಥ ಗೃಹಿಣಿಯನ್ನು ಕಳೆದುಕೊಂಡಿರಿ.

**ಸೇವಕ:** ಆಕೆಯೊಬ್ಬಳೇ ಸಾಯಲಿಲ್ಲ, ನಾವೂ ಸತ್ತೆವು

**ಹೆರಾಕ್ಲಿಸ್:** ಆತನ ಕಣ್ಣುಗಳನ್ನೂ ಮಂಡೆಯನ್ನೂ ನೋಡಿದಾಗ ನನಗೆ ಹಾಗೆಯೇ ಎನ್ನಿಸಿತು. ಆದರೂ ಅವನು ತನ್ನ ಸ್ನೇಹಿತನೊಬ್ಬನನ್ನು ನಿಧನಮಾಡಲು ಹೊರಟಿರುವುದಾಗಿ ಹೇಳಿದ. ಅವನು ಆ ಸ್ಥಿತಿಯಲ್ಲಿರುವಾಗ ನಾನು ಇಲ್ಲಿ ತಿಂದು ತೇಗಿ ಮೆರೆಯುತ್ತಿರುವೆನು. ಮನೆಯನ್ನು ಈ ದುಃಖವು ಕವಿದಿರುವಾಗ ನೀವಾದರೂ ಹೇಳಬಾರದೇ? ಅವನು ಆಕೆಯನ್ನು ಎಲ್ಲಿ ನಿಧನ ಮಾಡುವನು? ನಾನು ಆಕೆಯನ್ನು ಎಲ್ಲಿ ಕಾಣಲಿ?

ಸೇವಕನು ನಿಧನಮಾಡುವ ಸ್ಥಳವನ್ನೂ ಅಲ್ಲಿಗೆ ದಾರಿಯನ್ನೂ ತಿಳಿಸಿದನು. ಹೆರಾಕ್ಲಿಸ್‌ನಲ್ಲಿ ಲೋಲುಪ್ತಿಯು ಹೋಗಿ ಉದಾತ್ತಭಾವವು ಮೂಡಿತು. "ಈಗ ತಾನೆ ಗತಿಸಿದ ಹೆಣ್ಣನ್ನು ನಾನು ಉಳಿಸಬೇಕು. ಆಲ್ಸೆಸ್ಟಿಸ್‌ಳನ್ನು ಪುನಃ ಈ ಮನೆಯಲ್ಲಿ ಪ್ರತಿಷ್ಠಿಸಬೇಕು. ಅಡ್ಮೆಟಸ್‌ನು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರ ಮಾಡಬೇಕು. ಮೃತ್ಯುವಿನ ಜೊತೆಯಲ್ಲಿ ಹೋರಾಡಿ ಅದನ್ನು ಹಿಂಬಾಲಿಸಿ ಆಲ್ಸೆಸ್ಟಿಸ್‌ಳನ್ನು ನನ್ನ ಅನ್ನದಾತನಿಗೆ ಒಪ್ಪಿಸಬೇಕು. ಆತನು ತನಗೊದಗಿದ ಅತ್ಯಂತ ದುಃಖದಲ್ಲಿಯೂ ಅದನ್ನು ಮರೆಮಾಚಿ ನನ್ನನ್ನು ಪ್ರೀತಿಯಿಂದ ಆದರಿಸಿರುವನು. ಇಂಥವನನ್ನು ತಕ್ಕ ರೀತಿಯಲ್ಲಿ ಮನ್ನಿಸಬೇಕು."—ಎಂದು ಅಲ್ಲಿಂದ ಹೊರಟನು.

ಅಡ್ಮೆಟಸ್‌ನು ತನ್ನ ಪ್ರಾಣದ ವಿಷಯದಲ್ಲಿ ಸ್ವಾರ್ಥಪರನಾಗಿದ್ದರೂ ಹೃದಯ ಮಾರ್ದವವಿಲ್ಲದವನಲ್ಲ. ಆಲ್ಸೆಸ್ಟಿಸ್‌ಳಲ್ಲಿ ಅವನಿಗೆ ಸಹಜವಾದ, ನಿರ್ಮಲವಾದ ಪ್ರೇಮವಿದ್ದುದರಿಂದ ಆಕೆಯ ವಿಯೋಗದಿಂದ ವಿದ್ರಾವಿತ ಹೃದಯಿಯಾಗಿದ್ದನು ಆಲ್ಸೆಸ್ಟಿಸ್‌ಳ ನಿಧನದ ಸಮಯದಲ್ಲಿ ಅವನೂ ಶವದೊಂದಿಗೆ ಸೇರುವುದನ್ನು ಬಹು ಪ್ರಯಾಸದಿಂದ ತಪ್ಪಿಸಬೇಕಾಯಿತು. ಅವನ ಸ್ನೇಹಿತರು ನಿರ್ಬಂಧದಿಂದ ಅವನನ್ನು ಮನೆಗೆ ತಂದು ಸೇರಿಸಿದರು. ಅರಮನೆಯ ಹೊಸ್ತಿಲನ್ನು ದಾಟಿದಕೂಡಲೆ ಅವನ ದುಃಖವು ಮೇರೆಮೀರಿ ಹರಿಯಿತು. "ನಾನು ಹುಟ್ಟದೆ ಇದ್ದಿದ್ದರೆ ಚೆನ್ನಾಗಿತ್ತಲ್ಲ. ನನ್ನ ಜೀವನದಲ್ಲಿನ ಬೆಳಕು ನಂದಿತು. ನಾನು ಇನ್ನು ಒಂದು ಗಂಟೆಯ ಸೌಖ್ಯವನ್ನು ಕಾಣಲಾರೆ. ನನ್ನ ಹೆಂಡತಿಯು ನನಗಿಂತಲೂ ಹೆಚ್ಚು ಅದೃಷ್ಟಶಾಲಿ. ಏಕೆಂದರೆ ಅವಳನ್ನು ಇನ್ನು ಯಾವ ದುಃಖವೂ ಅಂಟದು. ಅನೇಕ ಕಷ್ಟಗಳಿಂದ ಪಾರಾಗಿ ಸಂಪೂರ್ಣ ಶಾಂತಿಯನ್ನು ಪಡೆದಿರುವಳು. ಆದರೆ ನಾನು, ಜೀವಿಸುವುದಕ್ಕೆ ಅರ್ಹನಲ್ಲದವನು, ಈ ದುಃಖಮಯ

CC-0. Jangamwadi Math Collection. Digitized by eGangotri

ಜೀವನವನ್ನು ಸವೆಸಬೇಕು. ಈ ಮನೆಯಲ್ಲಿ ಯಾರೊಡನೆ ಮಾತನಾಡಿ ಯಾರ ಮಾತನ್ನು ಆಲಿಸಿ ನಾನು ಸಂತೋಷ ಪಡೆಯಲಿ. ಈ ಮನೆಯಲ್ಲಿನ ನಿರ್ಜನತೆಯೇ ನನ್ನನ್ನು ಹೊರಕ್ಕೆ ಅಟ್ಟುತ್ತಿದೆ. ಮನೆಯೊಳಗೆ ನನ್ನ ತೊಡೆಯಮೇಲೆ ಬಿದ್ದು ರೋದಿಸುವ ಮಕ್ಕಳೂ ಶ್ರೇಷ್ಠ ಗೃಹಿಣಿಯನ್ನು ಕಳೆದುಕೊಂಡ ಪರಿವಾರವೂ ದುಃಖಿಸುತ್ತಿರಲು ಮನೆಯ ಹೊರಗೆ ಆಲ್ಸೆಸ್ಟಿಸ್‌ನ ಸ್ನೇಹಿತರು ನನ್ನನ್ನು ನಿಂದಿಸುವರು. "ಸಾಯಲು ಹೆದರಿದ ಹೇಡಿ" ಎನ್ನುವರು. ಇಂತಹ ದುಃಖಕ್ಕೂ ಅಪನಿಂದೆಗೂ ನಾನು ಗುರಿಯಾಗಿದ್ದೇನೆ. ಇಂಥ ಸ್ಥಿತಿಯಲ್ಲಿ ಬದುಕಿ ಫಲವೇನು ಸ್ನೇಹಿತರೇ".—ಎಂದು ವಿಷಾದಿಸಿದನು.

ಹೀಗೆ ಅಡ್ಮೆಟಸ್‌ನು ಆಂತರಿಕವಾದ ದುಃಖದಲ್ಲಿರಲು ಹೆರಾಕ್ಲೆಸ್‌ನು ತನ್ನ ಜೊತೆಯಲ್ಲಿ ಮುಸುಕು ಹಾಕಿಕೊಂಡಿದ್ದ ಸ್ತ್ರೀವ್ಯಕ್ತಿಯೊಂದನ್ನು ಕರೆತಂದನು. ಅವನು ಅಡ್ಮೆಟಸ್‌ನನ್ನು ಕುರಿತು "ನಾನು ಹಿಂದೆ ಬಂದಾಗ ನೀನು ದುಃಖಕ್ಕೀಡಾಗಿದ್ದೆ. ನಿನ್ನ ಹೆಂಡತಿಯು ಗತಿಸಿದ್ದ ಸಮಾಚಾರವನ್ನೇ ನನಗೆ ತಿಳಿಸಲಿಲ್ಲ. ಆದರೂ ಅತಿಥಿಗೆ ಸಲ್ಲಬೇಕಾದ ಆದರಣೆಯನ್ನು ನನಗೆ ಸಲ್ಲಿಸಿರುವೆ. ನನಗಾಗಿ ಈಕೆಯನ್ನು ನಿನ್ನ ಆಶ್ರಯದಲ್ಲಿಟ್ಟುಕೊಂಡಿರು; ಒಂದು ವೇಳೆ ನಾನು ಇಲ್ಲಿಗೆ ಹಿಂದಿರುಗಿ ಬರದಿದ್ದಲ್ಲಿ ಅವಳು ನಿನ್ನ ಸೇವೆಯಲ್ಲಿ ನಿರತಳಾಗಿರುವಳು. ಈಕೆಯನ್ನು ನಾನು ಪಂದ್ಯದಲ್ಲಿ ಗೆದ್ದು ತಂದಿರುವೆನು. ಈಕೆಯನ್ನು ಇಲ್ಲಿಗೆ ಕರೆತಂದುದು ಒಳ್ಳೆಯದೆಂದು ಒಂದಾನೊಂದು ದಿನ ನೀನು ಹೇಳಬಹುದು"—ಎಂದು ಹೇಳಿದನು.

**ಅಡ್ಮೆಟಸ್:** ನನ್ನ ಹೆಂಡತಿಯ ಸಾವನ್ನು ನಿನಗೆ ಹೇಳದಿದ್ದುದು ನಿನ್ನನ್ನು ಮೋಸಪಡಿಸುವುದಕ್ಕಲ್ಲ; ನನಗೆ ಬರಬಹುದಾದ ಅಪವಾದವನ್ನು ಹೋಗಲಾಡಿಸುವುದಕ್ಕೆ. ಈಕೆಯನ್ನು ನನ್ನಂತೆ ದುಃಖದಲ್ಲಿಲ್ಲದಿರುವ ಬೇರೆ ಮಹನೀಯನಲ್ಲಿಗೆ ಕರೆದೊಯ್ಯಿ. ಈಕೆಯಿಂದ ನನ್ನ ದುಃಖವು ಹೆಚ್ಚುವುದು. ನನ್ನ ವ್ಯಥೆಯಲ್ಲಿ ಮನೆಗೆ ಬಂದ ಅತಿಥಿಗಳನ್ನು ಹೇಗೆ ಆದರಿಸಲಿ? ನನ್ನ ಹೆಂಡತಿಯು ಸತ್ತಿರುವಾಗ ಈಕೆಯು ಈ ಮನೆಯಲ್ಲಿ ಅಪನಾದಕ್ಕೀಡಾಗದೆ ಹೇಗಿರುವಳು? ಜನರ ನಿಂದೆಯನ್ನು ನಾನು ಹೇಗೆ ತಪ್ಪಿಸಿಕೊಳ್ಳಲಿ; ಈಕೆಗೆ ಹೇಗೆ ತಪ್ಪಿಸಲಿ? ಈಕೆಯು ಸತ್ಕುಲದಲ್ಲಿ ಹುಟ್ಟಿದವಳಂತೆ ಕಾಣುವಳು. ಈಕೆಗೆ ಇದು ಸರಿಯಾದ ಸ್ಥಳವಲ್ಲ.

ಇದುವರೆಗೂ ಅಡ್ಮೆಟಸ್‌ನು ಮುಸುಕುಹಾಕಿದ್ದ ವ್ಯಕ್ತಿಯ ಕಡೆ ನೋಡಿರಲಿಲ್ಲ. ಆಕೆಯನ್ನು ನೋಡಿ ಗಾಬರಿಯಿಂದ "ಈಕೆಯು ಆಕಾರದಲ್ಲಿಯೂ ರೀತಿಯಲ್ಲಿಯೂ ನನ್ನ ಹೆಂಡತಿ ಆಲ್ಸೆಸ್ಟಿಸ್‌ಳನ್ನೇ ಹೋಲುವಳು. ದೈವವು ನನ್ನನ್ನು ಹಾಸ್ಯ ಮಾಡಲು ಈ ಒಂದು ಸ್ವರೂಪವನ್ನು ಕಳುಹಿಸಿರುವುದು. ಈಕೆಯನ್ನು ನನ್ನೆದುರಿನಿಂದ ಕರೆದುಕೊಂಡು ಹೋಗು. ಈಕೆಯನ್ನು ನೋಡುವ ಒಂದೊಂದು ನೋಟವೂ ನನ್ನ ನೊಂದ ಎದೆಯನ್ನು ಹೊಸದಾಗಿ ಇರಿಯುತ್ತಿದೆ."—ಎಂದನು.

**ಹೆರಾಕ್ಲೆಸ್:** ಈಗ ನಿನ್ನ ವ್ಯಥೆಯು ಹೊಸದಾಗಿದೆ. ಕಾಲವು ಅದನ್ನು ಗುಣಪಡಿಸುವುದು.

**ಅಡ್ಮೆಟಸ್:** ನನ್ನನ್ನು ಗುಣಪಡಿಸತಕ್ಕದ್ದು ಒಂದೇ—ಸಾವು.

**ಹೆರಾಕ್ಲೆಸ್:** ಹೊಸ ಹೆಂಡತಿಯೂ ಅವಳ ಅನುರಾಗವೂ ನಿನ್ನ ಮನಸ್ಸಿಗೆ ಸಮಾಧಾನವನ್ನು ತರುವುವು.

**ಅಡ್ಮೆಟಸ್:** ಸುಮ್ಮನಿರು. ಆ ಮಾತೆತ್ತಬೇಡ. ನಾನು ಹಾಗೆ ಮಾಡಲಾರೆ.

**ಹೆರಾಕ್ಲೆಸ್:** ಮದುವೆಯಾಗುವುದಿಲ್ಲವೆ? ಸತ್ತವರನ್ನು ಕುರಿತು ತಪಿಸುವೆಯಾ?

**ಅಡ್ಮೆಟಸ್:** ನನ್ನ ಮನಸ್ಸೆಲ್ಲ ಆ ಸಮಾಧಿಯಲ್ಲಿ ಇದೆ.

**ಹೆರಾಕ್ಲೆಸ್:** ಇದರಿಂದ ಸತ್ತವರಿಗೇನಾದರೂ ಪ್ರಯೋಜನವುಂಟೆಂದು ತಿಳಿದಿರುವೆಯಾ?

**ಅಡ್ಮೆಟಸ್:** ಅವಳಿಲ್ಲದ್ದರೂ ಅವಳನ್ನು ನಾನು ಗೌರವಿಸಲೇಬೇಕು.

**ಹೆರಾಕ್ಲೆಸ್:** ನಿನ್ನ ಈ ಅಭಿಮಾನಕ್ಕಾಗಿ ಹೊಗಳುವೆನು. ಈ ಸ್ತ್ರೀಯನ್ನು ನಿನ್ನ ಅರಮನೆಯಲ್ಲಿ ಇರಿಸಿಕೋ.

**ಅಡ್ಮೆಟಸ್:** ಆಗದು, ಭಗವಂತನಾಣೆಗೂ.

**ಹೆರಾಕ್ಲೆಸ್:** ಇದನ್ನು ಮಾಡದಿದ್ದರೆ ಅಪರಾಧವಾಗುವುದು.

ಅಡ್ಮೆಟಸ್‌ನು ಅವಳನ್ನು ಸ್ವೀಕರಿಸಲು ಇಷ್ಟಪಡಲಿಲ್ಲ. ಹೆರಾಕ್ಲೆಸ್ ಬಹುವಾಗಿ ಒತ್ತಾಯಪಡಿಸಲು ಆ ಹೆಂಗಸನ್ನು ಕರೆದುಕೊಂಡು ಹೋಗುವಂತೆ ತನ್ನ ಸೇವಕರಿಗೆ ಅಪ್ಪಣೆ ಮಾಡಿದನು. ಹೆರಾಕ್ಲೆಸ್‌ನು "ಆವಾಗದು, ಈಕೆಯನ್ನು ಮತ್ತಾರೂ ಮುಟ್ಟಲಾಗದು; ನೀನೇ ನಿನ್ನ ಬಲಗೆಯಿಂದ ಸ್ವೀಕರಿಸಬೇಕು" ಎಂದನು. ಹೆರಾಕ್ಲೆಸ್‌ನು ಅಡ್ಮೆಟಸ್‌ನ ಬಲಗೈಯಿಂದ ಆಕೆಯ ಕೈಯನ್ನು ಹಿಡಿಯುವಂತೆ ಮಾಡಿದನು. ಮತ್ತು ಆಕೆಯ ಮುಸುಕನ್ನು ಕಳಚಿದನು.

CC-0. Jangamwadi Math Collection. Digitized by eGangotri

"ನೋಡು, ಈಕೆಯನ್ನು; ಈಕೆಯು ನಿನ್ನ ಹೆಂಡತಿಯಂತೆ ಕಾಣುವುದೇ? ನಿನ್ನ ದುಃಖವನ್ನು ಬಿಟ್ಟು ಸಂತೋಷಪಡು" ಎಂದು ಹೇಳಿದನು. ಅಡ್ಮೆಟಸ್‌ನು ಆಶ್ಚರ್ಯಚಕಿತನಾಗಿ "ನನಗೆ ಕನಸೇ? ನನ್ನನ್ನು ಹುಚ್ಚುಹಿಡಿಸಲು ಕಲ್ಪಿಸಿರುವ ಮಾಯೆಯೋ ಇದು?" ಎಂದುಕೊಂಡನು. ಹೆರಾಕ್ಲೆಸ್‌ನು ಆ ಹೆಂಗಸು ಅವನ ಹೆಂಡತಿಯೆಂದೂ ಅವನು ಅವಳನ್ನು ಮುಟ್ಟಿ ಮಾತನಾಡಬಹುದೆಂದೂ ಮೃತ್ಯುವಿನೊಂದಿಗೆ ಕಾದಿ ಆಕೆಯನ್ನು ಉಳಿಸಿಕೊಂಡು ಬಂದಿರುವುದಾಗಿಯೂ ತಿಳಿಸಿದನು. ಅಡ್ಮೆಟಸ್‌ನು ಹೆರಾಕ್ಲೆಸ್‌ನನ್ನು ಬಹುವಾಗಿ ಕೊಂಡಾಡಿದನು. ಹೆರಾಕ್ಲೆಸ್‌ನು ಅತಿಥಿಗಳನ್ನು ಎಂದಿನಂತೆಯೇ ಪ್ರೀತಿಯಿಂದ ಆದರಿಸಬೇಕೆಂದು ಹೇಳಿದನು. ಅಡ್ಮೆಟಸ್‌ನು ಎಷ್ಟು ಕೇಳಿಕೊಂಡರೂ ಅವನು ಅಲ್ಲಿ ನಿಲ್ಲದೆ ಮುಂದೆ ಪ್ರಯಾಣಮಾಡಿದನು.

ಅಡ್ಮೆಟಸ್‌ನ ಅನುಭವಗಳನ್ನು ನೋಡಿ ಅವನ ಸ್ನೇಹಿತರು "ಭಗವಂತನ ಕಾರ್ಯಗಳು ಅನೇಕ ರೂಪಗಳಲ್ಲಿ ಹೊರಪಡುವುವು. ನಾವು ನಿರೀಕ್ಷಿಸದಿರುವುದನ್ನು ಭಗವಂತನು ಆಗ ಮಾಡಿಸುವನು; ನಾವು ನಿರೀಕ್ಷಿಸಿದುವನ್ನು ಭಗವಂತನು ಆಗ ಮಾಡಿಸಲು ಇಚ್ಛಿಸನು. ಮಾನವನ ಕಣ್ಣಿಗೆ ಗೋಚರವಾಗದುದನ್ನು ಭಗವಂತನು ವ್ಯಕ್ತಪಡಿಸುವನು" ಎಂದು ಹೇಳಿದರು.


ಯುನೈಟೆಡ್ ಕರ್ನಾಟಕ ಇನ್ಸ್ಯುರನ್ಸ್ ಕಂ. ಲಿಮಿಟೆಡ್

ಕಾರ್ಯಾಲಯ—ಧಾರವಾಡ.

ಕಳೆದ ಆರುವರ್ಷಗಳಿಂದಲೂ ಬೆಳೆದು ಬಲಗೊಂಡು ನಿಂತು, ಸರಕಾರದ ಪಂಚವಾರ್ಷಿಕ ವಿಮರ್ಶೆಯಲ್ಲಿ ಜಯಶೀಲವಾಗಿರುವ ಕರ್ನಾಟಕದ ಜೀವವಿಮಾ ಕಂಪನಿ ● ● ●



ಈ ಕಂಪನಿಯ ಬಗ್ಗೆ ಜನರಿಗೆ ವಿಶೇಷ ಅಭಿಮಾನವೆನಿಸಲು ಕಾರಣಗಳೇನೆಂದರೆ: ● ● ●

ಕಂಪನಿಯ ಹಣಕ್ಕೆ ಸರಕಾರದ ಆಧಾರಪತ್ರಗಳ ಮೂಲಕ ಸಂಪೂರ್ಣ ಸುರಕ್ಷಿತತೆಯಿದೆ. ಪಾಲಿಸಿದಾರರ ಹಕ್ಕಿನ ಹಣವನ್ನು ಸಲ್ಲಿಸುವುದರಲ್ಲಿ ತೊಂದರೆ-ತಡೆಗಳೇ ಇಲ್ಲ. ಎಜಂಟರ ಮತ್ತು ಪ್ರಧಾನ ಕಾರ್ಯಾಲಯದ ವ್ಯವಹಾರದಲ್ಲಿ ಸಮಯಶೀಲತೆಯಿದೆ. ಕನಿಷ್ಠ ವೆಚ್ಚದಿಂದ ವಿಶಿಷ್ಟ ಲಾಭವನ್ನು ಕೊಡುವ ವಿಮಾಯೋಜನೆಗಳಿವೆ. ಈ ಕಂಪನಿಯ ಏಳ್ಗೆಯಲ್ಲಿ ಕರ್ನಾಟಕದ ಆರ್ಥಿಕೋನ್ನತಿಯ ಬಲವಾದ ಆಧಾರವಿದೆ.

ಅಲ್ಲದೆ ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಇದರ ಪಾಲುಗಾರರಿದ್ದು, ಇದು ಕನ್ನಡ ನಾಡಿನ ಪ್ರಾತಿನಿಧಿಕ ಸಂಸ್ಥೆಯಾಗಿದೆ. ಆದುದರಿಂದ ಕನ್ನಡದ ಗೆಲವನ್ನು ಬಯಸುವವರು 'ಯುನೈಟೆಡ್ ಕರ್ನಾಟಕ'ದ ಪಾಲಿಸಿಯನ್ನಾಗಲಿ ಪಾಲುಗಳನ್ನಾಗಲಿ ಪಡೆಯಬೇಕು; ವಿಶೇಷವಿವರಕ್ಕೆ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಮಳಗಿ ಬಂಧುಗಳು
ಧಾರವಾಡ ಜಿಲ್ಹೆಯ ಚೀಫ್ ಏಜಂಟರು
ಗದಗು

ಎಮ್. ಗೋವರ್ಧನರಾವ್
ಮ್ಯಾನೇಜರ್
ಯು. ಕ. ಇ. ಕಂ. ಲಿ., ಧಾರವಾಡ


CC-0. Jangamwadi Math Collection. Digitized by eGangotri

# ಮಹೆಂಜೊದಾರೋದ ಒಡಪು

ಲೇಖಕರು: ಶ್ರೀ. ದೇಸಾಯಿ ಪಾಂಡುರಂಗರಾಯರು ಎಮ್. ಎ., ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ, ಧಾರವಾಡ



'ಏಳು ಸಾವಿರ ವರ್ಷಗಳ ಹಿಂದಿನ ತಮಿಳು ಪದ್ಯಸಾಹಿತ್ಯ'—ಎಂದು ಈಗಾಗಲೆ ತಮಿಳು ಸಂಶೋಧಕರು ಮಹೇಂಜೊದಾರೋದ ಚಿತ್ರಲಿಪಿಯನ್ನು ಕುರಿತು ಸಾಧಿಸುತ್ತಿರುವರು. ಕನ್ನಡಕ್ಕೂ ಆ ಮಾನ ದೊರೆಯಬಹುದಾಗಿದೆ ಎಂದು ಈಗಿನ ಮಟ್ಟಿಗಿನ ಸಂಶೋಧನೆಯಿಂದ ವ್ಯಕ್ತವಾಗುತ್ತದೆ. ಕನ್ನಡಿಗರು ತಮ್ಮ ಆರ್ಯಪೂರ್ವ ಐತಿಹ್ಯವನ್ನು ಆಸ್ಥೆಯಿಂದ ಪರಿಶೋಧಿಸಲಿ.

§ § § § § §

'ಜಯಕರ್ನಾಟಕ'ದ ಕಳೆದ ಸಂಚಿಕೆಯಲ್ಲಿ ಮಹೆಂಜೊದಾರೋದಲ್ಲಿಯ ಸಂಶೋಧನೆಯನ್ನು ಕುರಿತು ಕೆಲವು ಮುಖ್ಯಾಂಶಗಳನ್ನು ವಿವೇಚಿಸಿದೆನು. ಈ ವಿಷಯವನ್ನು ಕುರಿತು ಇನ್ನೂ ಅನೇಕ ಮಾತುಗಳನ್ನು ಹೇಳಬಹುದು. ಮಹೆಂಜೊದಾರೋ ಸಂಶೋಧನೆಯ ಸಾಂಗೋಪಾಂಗ ನಿರೂಪಣೆಯನ್ನು ಮಾಡುವುದಾದರೆ, ಅದೊಂದು ಮಹಾಭಾರತವನ್ನೆ ಬರೆಯಬೇಕಾದೀತು. ನಾನಿಲ್ಲಿ ಅಷ್ಟು ಉದ್ದಕ್ಕೆ ಹೋಗದೆ ಒಂದೆರಡು ಹೆಚ್ಚಿನ ವಿಚಾರಗಳನ್ನು ಸೂಚಿಸುವೆ.

ಮಹೆಂಜೊದಾರೋ ಬೆಳಕಿಗೆ ಬಂದುದು ಆರ್ಯ ಸಂಸ್ಕೃತಿಯ ಅಗ್ಗಳಿಕೆಯನ್ನು ಕುಂದಿಸಲಿಕ್ಕೆ ಕಾರಣವಾಗಿದೆ. ಮಹೆಂಜೊದಾರೋವನ್ನು ಕಟ್ಟಿದವರು ಪ್ರಾಚೀನತೆ, ಬುದ್ಧಿವಂತಿಕೆ, ನಾಗರಿಕತೆ ಮುಂತಾದ ಯಾವ ವಿಚಾರದಲ್ಲಿಯೂ ಆರ್ಯರಿಗಿಂತ ಹೀನರಂತೂ ಆಗಿರಲೇ ಇಲ್ಲ, ಶ್ರೇಷ್ಠರೇ ಆಗಿದ್ದರು—ಎಂದು ಅನೇಕ ಸಂಶೋಧಕರು ಒತ್ತಿ ಒತ್ತಿ ಸಾರಿರುವರು.

ಡಾ. ಪ್ರಾಣನಾಥರೊಬ್ಬರನ್ನುಳಿದರೆ, ಮಹೆಂಜೊದಾರೋದ ಸಂಸ್ಕೃತಿಯು ಆದಿದ್ರಾವಿಡವೆಂಬುದಕ್ಕೆ ಸಂಶೋಧಕರಲ್ಲಿ ವಿಶೇಷವಾದ ಭಿನ್ನಾಭಿಪ್ರಾಯಗಳಿಲ್ಲ. ದ್ರಾವಿಡ ಸಂಸ್ಕೃತಿಯಂತೆ ಸುಮೇರಿಯ ಸಂಸ್ಕೃತಿಯಾದರೂ ಅತಿ ಪ್ರಾಚೀನವಾದುದು. ಇವೆರಡು ಸಂಸ್ಕೃತಿಗಳನ್ನು ಕಟ್ಟಿದ ಜನಾಂಗಗಳಲ್ಲಿ ವಿಶೇಷವಾದ ಬಳಕೆಯೂ ಇದ್ದಿತೆಂದು ತೋರುತ್ತದೆ. ಆದುದರಿಂದ ಅತಿಪ್ರಾಚೀನವಾದ ಮಹೆಂಜೊದಾರೋದ ಆದಿದ್ರಾವಿಡ ಸಂಸ್ಕೃತಿಯಲ್ಲಿ ಸುಮೇರಿಯ ಸಂಸ್ಕೃತಿಯ ಹೋಲಿಕೆಗಳು ಕಂಡುಬಂದರೆ ಆಶ್ಚರ್ಯವಲ್ಲ. ಆದರೆ ಈ ಹೋಲಿಕೆಗಳು ಹೋಲಿಕೆಗಳೆ ಅಲ್ಲವೆ ಸ್ವರೂಪಲಕ್ಷಣಗಳಲ್ಲ. ಆದುದರಿಂದ ಮಹೆಂಜೊದಾರೋದ ಸಂಸ್ಕೃತಿಯು ಆದಿದ್ರಾವಿಡವೆಂದು ದೃಢಪಡುತ್ತದೆ.

ಆದಿದ್ರಾವಿಡವೆಂಬುದು ಇನ್ನೂ ಸಂದಿಗ್ಧವಾದ ಪ್ರಯೋಗ. ನಿಶ್ಚಿತವಾದ ಅದರ ಸ್ವರೂಪದ ರೂಪರೇಖೆಗಳನ್ನು ನಿರ್ಧರಿಸಿ ಹೇಳುವುದು ಇದುವರೆಗೆ ಸಾಧ್ಯವಾಗಿಲ್ಲ. ಆದಿದ್ರಾವಿಡದ ಮೇಲೆ ಎರಡು ಜನಾಂಗಗಳಿಗೆ ಹೆಚ್ಚಿನ ಬಾಧ್ಯತೆಯು ಉಂಟಾಗುತ್ತದೆ. ಒಂದು ತಮಿಳು, ಇನ್ನೊಂದು ಕನ್ನಡ. ಏಕೆಂದರೆ ದ್ರಾವಿಡ ಜನಾಂಗಗಳಲ್ಲಿ ಇವೆರಡೂ ಬಹಳ ಹಳೆಯವು. ಇವೆರಡರ ಮಾತು ಬಂದೊಡನೆ ಮತ್ತೆ ಮತಭೇದವು ತಲೆದೋರುತ್ತದೆ.

ತಮಿಳು ಹೆಚ್ಚು ಹಳೆಯದು ಎಂದು ಅನೇಕರು ಹೇಳುವರು. ಏಕೆ? ಕನ್ನಡವು ಹೆಚ್ಚು ಹಳೆಯದು ಏಕಾಗಬಾರದು? ಎಂದು ಈಗೀಗ ಕೆಲವು ಕನ್ನಡ ಸಂಶೋಧಕರಲ್ಲಿಯೂ ಕಲ್ಪನೆಯ ಮಿಂಚು ಸುಳಿಯುತ್ತಲಿದೆ. ಕನ್ನಡಕ್ಕೂ ಪ್ರಾಚೀನತೆಯ ಕುರುಹುಗಳುಂಟು. ಇದನ್ನು ಈಗಲೇ ನಿರ್ಣಯಿಸುವುದು ಹಗುರಲ್ಲ. ಇವೆರಡರಲ್ಲಿ ಗೆದ್ದವರ ಕೊರಳಲ್ಲಿ ಮಹೆಂಜೊದಾರೋದ ಮಾಲೆಯು ಬೀಳುವಂತೆ ಕಾಣುತ್ತದೆ.

CC-0. Jangamwadi Math Collection. Digitized by eGangotri

ತಮಿಳರು ಕನ್ನಡಿಗರಿಗಿಂತ ಜಾಣರು; ಮುಂದುವರಿದವರು. ಅವರು ಅನೇಕ ಪ್ರಕಾರದಿಂದ ತಮಿಳಿನ ಪ್ರಾಚೀನತೆಯನ್ನು ಸಾಧಿಸುತ್ತಿರುವರು. ಮಹೆಂಜೊದಾರೋದ ಈ ಸಂದರ್ಭದಿಂದಂತೂ ಅವರ ಮಹತ್ವಾಕಾಂಕ್ಷೆಗೆ ಪುಟವು ದೊರೆತಿದೆ. ಲಂಕಾದ್ವೀಪನಿವಾಸಿಗಳೂ ಪ್ರಸಿದ್ಧ ದ್ರಾವಿಡ ಭಾಷಾಶಾಸ್ತ್ರಜ್ಞರೂ ಆದ ರೆವರಂಡ ಗ್ನ್ಯಾನ ಪ್ರಕಾಸರ್ ಎಂಬವರು ಮಹೆಂಜೊದಾರೋದ ಭಾಷೆಯಲ್ಲಿಯ ಕೆಲವು ಪದ್ಯಗಳನ್ನು ಉದಾಹರಿಸಿ ತಮಿಳು ಏಳು ಸಾವಿರ ವರುಷಗಳ ಹಿಂದೆ ಬಾಳಿತ್ತು (Tamil Verse Seven Thousand Years Ago) ಎಂದು ಈಗಾಗಲೆ ಪ್ರತಿಪಾದಿಸಿ ಬಿಟ್ಟಿರುವರು. ಆದರೆ ಕನ್ನಡ ಸಂಶೋಧಕರು? ಕನ್ನಡ ಸಂಶೋಧಕರಿಗೆ ಮುಂದುವರಿಯಲು ಇದೊಂದು ಆಹ್ವಾನವೆ ದೊರೆತಂತಾಗಿದೆ. ಈಗ ಅವರು ಎಂದಿನಂತೆ ಉದಾಸೀನತೆಯನ್ನೇ ಅವಚಿಕೊಂಡು ಕುಳಿತರೆ, ತಮಿಳರು ಮಹೆಂಜೊದಾರೋದ ಮೇಲೆ ತಮ್ಮ ಧ್ವಜವನ್ನು ಹಚ್ಚುವರು ಎಂಬುದರಲ್ಲಿ ಸಂದೇಹವಿಲ್ಲ. "ಹೋಗಲಿ, ಯಾವ ರಾಜನಿಗೆ ಪಟ್ಟವಾದರೇನು, ರಾಗಿ ಬೀಸೋದು ತಪ್ಪಿದ್ದಲ್ಲ." ಎಂಬ ಬಡ ಮುದುಕಿಯ ಸನಾತನ ವೇದಾಂತವನ್ನು ಕನ್ನಡಿಗರು ಇನ್ನೂ ಅವಲಂಬಿಸುವರೋ?

ಮಹೆಂಜೊದಾರೋದ ಒಡಪನ್ನು ಬಿಡಿಸಲು ದ್ರಾವಿಡ ಭಾಷೆಯಷ್ಟು ಬೇರಾವ ಭಾಷೆಯೂ ಸಹಾಯಕಾರಿಯಾಗಿಲ್ಲ. ಕೆಲವರು ಅದನ್ನು ಸಂಸ್ಕೃತವೆಂದು ತಿಳಿದು ಓದಲು ಯತ್ನಿಸಿರುವರು. ಕೆಲವರು ಅದರಲ್ಲಿ ಸುಮೇರಿಯವನ್ನೂ ಎತ್ತಿ ನಿಲ್ಲಿಸಲು ಹೆಣಗಿರುವರು. ಆದರೆ ಈ ಪ್ರಯತ್ನಗಳಾವುವೂ ಫಾ: ಹೆರಾಸರ ಪ್ರಯತ್ನಗಳ ಒಂದಂಶದಷ್ಟಾದರೂ ಯಶಸ್ವಿಯಾಗಿಲ್ಲ. ದ್ರಾವಿಡ ಭಾಷೆಯಲ್ಲಿ ಒಂದು ಅಪೂರ್ವವಾದ ಸೌಕರ್ಯವು ಉಂಟು. ಅದು ಇದುವರೆಗೆ ಪರಮಶ್ರೇಷ್ಠವೆಂದು ಹೊಗಳಿಸಿಕೊಳ್ಳುವ ಸಂಸ್ಕೃತ ಭಾಷೆಯಲ್ಲಿ ಇಲ್ಲ. ಒಂದೆರಡು ಉದಾಹರಣೆಗಳನ್ನು ಹೇಳಬಹುದು.

ಮಹೆಂಜೊದಾರೋದ ಚಿತ್ರಲಿಪಿಯಲ್ಲಿ ಮೀನದ ಆಕೃತಿಯು ಮೇಲಿಂದಮೇಲೆ ಬರುವುದು. ಆದರೆ ಅದರ ಅರ್ಥವು ಮಾತ್ರ ಎಲ್ಲಕಡೆಯಲ್ಲಿಯೂ ಒಂದೇ ಬಗೆಯಾಗಿ ಸ್ವೀಕರಿಸಿದರೆ ಸರಿಯಾಗುವುದಿಲ್ಲ. ಸಂದರ್ಭದಂತೆ ಬೇರೆಬೇರೆಯಾಗಿ ಅರ್ಥಸೂಚನೆ ಇದೆ ಎಂಬುದು ಸ್ಪಷ್ಟವಾಗುತ್ತದೆ. (ಈ ಮೀನದ ಆಕೃತಿಯನ್ನು ಮುಂದೆ ಕಾಣಿಸಿದ ಕೊನೆಯ ಚಿತ್ರಲಿಪಿಯ ಉದಾಹರಣೆಯಲ್ಲಿ ಗುರುತಿಸಿಕೊಳ್ಳಬೇಕು.) ಈ ಮೀನಾಕೃತಿಯನ್ನು ಸಂಸ್ಕೃತಭಾಷೆಯ ವ್ಯುತ್ಪತ್ತಿಯಂತೆ ಓದಿದರೆ 'ಮತ್ಸ್ಯ'ವೆಂದು, ಅಥವಾ ದ್ರಾವಿಡದಿಂದ ಕಡ ತೆಗೆದುಕೊಂಡ ಶಬ್ದವನ್ನು ಉಪಯೋಗಿಸಿ ಓದುವುದಾದರೆ 'ಮೀನ' ಎಂದು ಹೇಳಬೇಕಾಗುವುದು. ಇಷ್ಟರಿಂದ ಮಹೆಂಜೊದಾರೋದಲ್ಲಿ ಹಲವು ಕಡೆ ಬರುವ ಈ ಆಕೃತಿಯ ಒಡಪು ಬಿಡಿಸಲಾಗುವುದಿಲ್ಲ. ಅದಕ್ಕಾಗಿ ದ್ರಾವಿಡಭಾಷೆಗೇ ಶರಣು ಹೋಗಬೇಕಾಗುತ್ತದೆ. ದ್ರಾವಿಡದಲ್ಲಿ 'ಮೀನ್' ಎಂಬ ಶಬ್ದವು ಮೂರು ಅರ್ಥಗಳನ್ನು ಕೊಡುತ್ತದೆ. ೧. ಮೀನ (Fish); ೨. ಮಿನುಗುವ, ಹೊಳೆಯುವ (ಮೀನ್-ಧಾತು); ೩. ಚಿಕ್ಕೆ (Star), ಅಥವಾ ಮನುಷ್ಯನ ಹೆಸರು.

ಇನ್ನುಮುಂದೆ ಮಹೆಂಜೊದಾರೋ ಲಿಪಿಯಲ್ಲಿಯ ಕೆಲವು ಶಬ್ದಗಳನ್ನೂ ವಾಕ್ಯಗಳನ್ನೂ ಸಚಿತ್ರವಾಗಿ ಉದಾಹರಿಸಿ ವಿಂಗಡಿಸಿ ತೋರಿಸುವೆನು.

 ಎಂದರೆ 'ಕಣ್' (ಮಹೆಂಜೊದಾರೋ ಭಾಷೆಯಲ್ಲಿ)

ಈ ಗುರುತಿನ ಮೇಲೆ ಒಂದು ಕೊಂಡೆಯ ಛತ್ರನ್ನು ಇಳಿಬಿಟ್ಟರೆ ಕಣ್ಣುಳ್ಳ ಮನುಷ್ಯನು ಎಂದು ಅರ್ಥವಾಗುತ್ತದೆ:

 = 'ಕಣನ್'=ಕಣ್ಣುಳ್ಳವನು.

ಇದಕ್ಕೆ ಇನ್ನೂ ಎರಡೆರಡು ಗೆರೆಗಳನ್ನು ಎರಡು ಮಗ್ಗಲಿಗೆ ಹಾಕಿದರೆ, ಬಹುವಚನವು ಉಂಟಾಗುತ್ತದೆ. ಹೇಗೆಂದರೆ—

 =ಕಣನಿರ್—ಕಣ್ಣಿದ್ದ ಜನರು, ಜನಾಂಗವು; ಕನ್ನಡ ಜನಾಂಗದ ಹೆಸರು, ಕನ್ನಡಿಗರು.

 ಎಂದರೆ 'ರು', ಕನ್ನಡ ಬಹುವಚನಾರ್ಥಕ ಪ್ರತ್ಯಯ.

ಇದನ್ನು 'ವೇಲ್' ಎಂದರೆ ತ್ರಿಶೂಲ ಎಂದು ಸೂಚಿಸುವ ಈ ಮುಂದಿನ ಮೊದಲನೆಯ ಆಕೃತಿಯೊಂದಿಗೆ ಕೂಡಿಸಿ, (ಬಲದಿಂದ ಎಡಕ್ಕೆ)

 = ವೇಲ್ರು = ತ್ರಿಶೂಲಗಳು.

CC-0. Jangamwadi Math Collection. Digitized by eGangotri

 = 'ಆಳೊರ್' = ಆಳುಗಳು, ಮನುಷ್ಯರು; ಇಲ್ಲಿ ಎಲ್ಲಕ್ಕೂ ಕೆಳಗಿನ ಗೆರೆಯು ಒಂದೇ ಆಗಿದ್ದರೂ ಅದು ಬಹುವಚನವನ್ನು ಸೂಚಿಸುತ್ತದೆ.

 ='ಕೂಡು'; ಈ ಆಕೃತಿಯು ಕರ್ನಾಟಕದ ವೀರಶೈವರಲ್ಲಿ ಈಗಲೂ ಬಳಕೆಯಲ್ಲಿದೆ.

  ಎಂದರೆ 'ಪರವಿರ್ ಪಲಿ' = ಪರವರ (ಜನಾಂಗ) ಪಟ್ಟಣ (ಬಲದಿಂದ ಎಡಕ್ಕೆ).

ಇಲ್ಲಿ ಹಕ್ಕಿಗಳು ಎರಡು ಇದ್ದುದರಿಂದ 'ಇರ್' ಎಂದು ಜೋಡಿಸಿ 'ಪರವಿರ್' ಎಂದು ಓದಲಾಯಿತು. 'ಇರ್' ಇದು ಇಲ್ಲಿ ಬಹುವಚನಾರ್ಥಕ (ಸಂಸ್ಕೃತದ ದ್ವಿವಚನವಲ್ಲ. ಕನ್ನಡ ಮುಂ. ಭಾಷೆಗಳಲ್ಲಿ ಎರಡಿದ್ದರೂ ಬಹುವಚನ). ''ಪರವ" ಎಂಬುದು ಪಕ್ಷಿಸೂಚಕ; ಕನ್ನಡದಲ್ಲಿ 'ಪಾರಿವಾಳ' ಎಂಬುದನ್ನು ಹೋಲಿಸಿಕೊಳ್ಳಬಹುದು.

ಇನ್ನೆರಡು ಹೆಚ್ಚು ದೀರ್ಘವಾದ ಬರೆಹಗಳನ್ನು ಕೊಟ್ಟು ಮುಗಿಸುವೆನು.



ಇದನ್ನು ಹೀಗೆ ಓದಬಹುದು. (ಬಲದಿಂದ ಎಡಕ್ಕೆ) **''ಕಣನಿರ್ ಏರ್ ಇರ್ ತೆನ್ ವೇಲೂರ್ ಅರುಪ್."** ಇದರ ಅರ್ಥ: ಕಣನಿರ್ (ಒಂದು ಜನಾಂಗ, ಕನ್ನಡಿಗರು) ಹುಟ್ಟಿ ಬೆಳೆದಂತಹ (ಕಣನಿರ್ ಏರ್) ಎರಡು ತೆಂಗಿನ ತೋಟಗಳುಳ್ಳ (ಇರ್ ತೆನ್—ಎರಡು ತೆಂಗು, ತೆಂಗಿನ ತೋಟ) ವೇಲೂರ (ಈಗಿನ ವೆಲ್ಲೂರು, Vellore) ಹುಲಸಾದ ಬೆಳೆ (ಅರುಪ್). ಕನ್ನಡ ಜನಾಂಗದವರು ವೇಲೂರ ಬಳಿಯಲ್ಲಿ ನೆಲಸಿದ್ದರು ಎಂಬುದು ಇದರಿಂದ ವಿಶದವಾಗುತ್ತದೆ.



ಇದನ್ನು ಹೀಗೆ ಓದಲಾಗಿದೆ; ಒಂದನೆಯ ಸಾಲನ್ನು ಬಲದಿಂದ ಎಡಕ್ಕೆ ಎರಡನೆಯದನ್ನು ಎಡದಿಂದ ಬಲಕ್ಕೆ:

**''ಕಾಲೊರ್ ಮೀನನ್ ಮೀನ್ ಕಾನ್ ಕೆದ ಏರ್ ವಲಿಲ್ ಅದು । ಕೆಲಕೂರಿರ್ ವಲ್ ಕೈ ಕುಡಗ ನಾಲ್ ॥"**

ಇದರ ಅಭಿಪ್ರಾಯ:—ಮೀನದ ಪೂರ್ಣತೆಯುಳ್ಳುದಾಗಿ ಕಂಗೊಳಿಸುವ ಬಲವಾದ ಮನೆಯುಳ್ಳ, ಸಂಯುಕ್ತ ದೇಶಗಳ ಜನಗಳಲ್ಲಿ ಹಲವು ಬಲ್ಲಿದರಾದ **ಕುಡಗರು** ದಾಟಿದರು. ಮತ್ತು **ಕಾಲೋರರ ಮೀನನಿಗೆ ಕೈಸೆರೆಯಾದರು.**

**ಕಾಲೋರ್** ಎಂದರೆ ತ್ರಿಚನಾಪಳ್ಳಿಯ ಬಳಿಯಲ್ಲಿರುವ ಜನಾಂಗದ ಹೆಸರು (ಇದೆ ಮುಂದೆ ಕಳ್ಳರ್ ಎಂದು ಹೆಸರು ಪಡೆಯಿತು). ಕುಡಗರು ಎಂದರೆ ಕೊಡಗಿನವರು. ಮುಂದೆ ಇವರೇ **ವಾನರರಾದರು.** ಮೀನನೆಂಬುದು ಅರಸಿನ ಹೆಸರು.

(ಈ ಪದ್ಯವು ನನ್ನ ಹಿಂದಿನ ಲೇಖನದಲ್ಲಿ ಬಂದಿದೆ.)*

* ಈ ಲೇಖನದಲ್ಲಿ ಉಪಯೋಗಿಸಲು ಪಡಿಯಚ್ಚುಗಳನ್ನು ಒದಗಿಸಿ ಕೊಟ್ಟುದಕ್ಕಾಗಿ ಧಾರವಾಡದ ಕರ್ನಾಟಕ ಇತಿಹಾಸ ಸಂಶೋಧಕ ಮಂಡಲಕ್ಕೆ ಕೃತಜ್ಞರಾಗಿರುವೆವು.—ಲೇಖಕ ಮತ್ತು ಸಂಪಾದಕ ಜ. ಕ.


# ಕಲಾಸಿಂಧು ಮುದ್ರಣಾಲಯ

ನಮ್ಮಲ್ಲಿ ಹಿಂದೀ, ಸಂಸ್ಕೃತ, ಮರಾಟಿ, ಕನ್ನಡ, ಇಂಗ್ಲಿಷುಗಳಲ್ಲಿ ಪುಸ್ತಕಮುದ್ರಣವೂ ಎಲ್ಲಬಗೆಯ ಜಾಬ್ ಕೆಲಸವೂ ಅಚ್ಚುಕಟ್ಟಾಗಿ, ಅಂದವಾಗಿ ಆಗುವುದು; ಮತ್ತು ನಿಯಮಿತ ವೇಳೆಯಲ್ಲಿ ಕೊಡಲ್ಪಡುವುದು.

**ಜಯಕರ್ನಾಟಕ ಪತ್ರಿಕೆಯು ಇಲ್ಲಿಯೇ ಅಚ್ಚಾಗುವುದು.**

ಪ್ರಾಮಾಣಿಕ ವ್ಯವಹಾರ, ಯೋಗ್ಯವಾದ ದರ.


CC-0. Jangamwadi Math Collection. Digitized by eGangotri

# ಶರಣಸಂದೇಶ

ನೀವು ಹಿಂದುಗಳೋ ?

ಹಾಗಾದರೆ ಜಾಗ್ರತೆ ಚಂದಾದಾರರಾಗಿರಿ !

ಇದು ವಿಚಾರಕ್ರಾಂತಿಯ ವಾರಪತ್ರಿಕೆ

ಸಂಪಾದಕರು:

ಶ್ರೀ. ಹರ್ಡೇಕರ ಮಂಜಪ್ಪನವರು

ಹಿಂದೂ ಸಮಾಜಸುಧಾರಣೆ, ಹಿಂದೂ ಸಂಘಟನೆ, ಧಾರ್ಮಿಕ ಸತ್ಯಸಿದ್ಧಾಂತಗಳ ಪ್ರತಿಪಾದನೆ, ಶ್ರೀ ಬಸವಾದಿ ಪ್ರಮಥರ ತತ್ತ್ವಪ್ರಸಾರಣೆ ಮತ್ತು ರಾಜಕೀಯ ಗುಣದೋಷ ವಿಮರ್ಶನೆ ಇವೇ ಈ ಪತ್ರಿಕೆಯ ಪಂಚಪ್ರಾಣ.

ಮ್ಯಾನೇಜರ್, ಶರಣಸಂದೇಶ

ಪೋ. ಆಲಮಟ್ಟಿ, ಜಿ. ವಿಜಾಪೂರ.

# ಕಲಿಯುಗ

ಕಾಮವಿಜ್ಞಾನ, ಆರೋಗ್ಯವಿಜ್ಞಾನ, ಸಮಾಜ ವಿಜ್ಞಾನಗಳಿಗೆ ಮೀಸಲಾದ, ಕನ್ನಡಸಾಹಿತ್ಯದ ಇತಿಹಾಸದಲ್ಲೇ

ಪ್ರಥಮ ಮಾಸಪತ್ರಿಕೆ

ಸಂಪಾದಕರು:
ಆಯುರ್ವೇದವಿದ್ವಾನ್

ಡಾ॥ ಎಂ. ಗೋಪಾಲಕೃಷ್ಣರಾಯರು

ವಾರ್ಷಿಕ ಚಂದಾ ೧॥ ರೂ. ಬಿಡಿಸಂಚಿಕೆ ೨ ಆಣೆ

ಕಲಿಯುಗ ಕಾರ್ಯಾಲಯ, ಧಾರವಾಡ.

೨ನೆಯ ವರ್ಷದ ಯೋಜನೆ! ಹೊಸ ವರ್ಷದ ಪ್ರಾರಂಭ ! !

# ಒಂದೇ ಒಂದು ವರ್ಷದಲ್ಲಿ

ಅಖಿಲ ಕರ್ನಾಟಕದ ಮನವನ್ನೆಳೆದುಕೊಂಡ

## ಅರವಿಂದ ಗ್ರಂಥಮಾಲೆ

ಸಂಪಾದಕರು: ಮಧುರಚೆನ್ನ

ವಿಚಾರಪ್ರಚುರ ವಾಙ್ಮಯವನ್ನು ಒದಗಿಸುವ ಹಾಗೂ ಸರಸ ಸಾಹಿತ್ಯವನ್ನು ಸೂರೆಮಾಡುವ ಆರು ಪುಸ್ತಕಗಳಲ್ಲದೆ ಮೇಲೊಂದು ಕಾಣಿಕೆಯ ಪುಸ್ತಕ ಕೊಡಲಾಗುವದು. ಅಚ್ಚುಮೆಚ್ಚಿನ ಅಚ್ಚು ಕಟ್ಟುಗ ಳಿಂದ ಮನೋಹರವಾದ ಪುಸ್ತಕಗಳಿಗಾಗಿ ಇಂದೇ ಚಂದಾದಾರರಾಗಿರಿ. ಹಿಂದಿನ ಪುಸ್ತಕಗಳಿಗೆ ಬರೆಯಿ ರಿ. ಎಪ್ರಿಲದಿಂದ ಹೊಸವರ್ಷದ ಪ್ರಾರಂಭವಾಯಿತು.

ವಾರ್ಷಿಕ ಚಂದಾ (ಅಂಚೆವೆಚ್ಚಸೇರಿ) ೩—೮—೦

ಅರವಿಂದ ಗ್ರಂಥಮಾಲೆ, ಪೋ-ಹಲಸಂಗಿ

ಜಿಲ್ಹಾ ವಿಜಾಪುರ

೫೬ ವರ್ಷಗಳಿಂದ ದಿನದಿನಕ್ಕೆ ಹೆಚ್ಚುತ್ತಲಿರುವ

ಪ್ರಸಿದ್ಧಿಗೆ

ಏನಾದರೂ ಮಹತ್ತ್ವವಿರುತ್ತಿದರೆ, ನೀವು

## ಆತಂಕನಿಗ್ರಹ ಗುಳಿಗೆ

ಗಳನ್ನೇ ಉಪಯೋಗಿಸುವದು ವಿಹಿತ.

ಈ ಗುಳಿಗೆಗಳಿಂದ ಶಾಶ್ವತ ಯೌವನವೂ ಶಕ್ತಿಯೂ ಬರುವವು.

೩೨ ಗುಳಿಗೆಗಳ ಡಬ್ಬಿಗೆ ರೂ. ೧-೦-೦

ಆರೋಗ್ಯ ವೈಭವ, ಸಮೃದ್ಧಿಗಳ ಮಾರ್ಗ ತೋರಿ ಸುವ ಕಾಮಶಾಸ್ತ್ರವನ್ನೋದಿರಿ. ಅಂಚೆಯ ವೆಚ್ಚ ವಿಲ್ಲದೆ ಪುಕ್ಕಟೆಯಾಗಿ ದೊರೆಯುವದು.

ಇಂದೇ ಬರೆಯಿರಿ:—

ಆತಂಕನಿಗ್ರಹ ಫಾರ್ಮಸಿ,

೨೬ ಬ್ರಾಡ್ವೇ, ಮದ್ರಾಸ


CC-0. Jangamwadi Math Collection. Digitized by eGangotri

# ಬಡವರ ಗೋಳು

(ಶ್ರೀ. ಪ್ರೇಮಚಂದರ ಕಥೆ)

ಅನುವಾದಕರು: ಶ್ರೀ. ಗುರುನಾಥ ಜೋಶಿ, ಹಿಂದೀ ಜ್ಞಾನಯಾತ್ರಿ ಮಂಡಲ



ಮುನಶೀ ರಾಮಸೇವಕರು ಧೈರ್ಯವಂತರು, ಎದೆಗಾರರು. ದಿವಾಣಿಯ ವ್ಯಾಜ್ಯದ, ಫೌಜದಾರಿಯ ವ್ಯಾಜ್ಯದ ಅಂಜಿಕೆಯು ಅವರಿಗಿರಲಿಲ್ಲ. ಆದರೆ ಗಂಗೆಯ ಭಯಂಕರ ಕೂಗು ಕೇಳಿ ಬೆಚ್ಚಿ ಬೀಳುತ್ತಿದ್ದರು!....ಅಂಜಿಕೆಯಲ್ಲಿ ನಂಜಿದೆ. ಭಯದಲ್ಲಿ ಭಯಾನಕ ಶಕ್ತಿಯಿದೆ. ಮನುಷ್ಯ ಗಾಳಿಯಲ್ಲಿ ಗೋಪುರ ಕಟ್ಟಲಾರ, ಆದರೆ ಇದು ಗಾಳಿಯಲ್ಲಿಯೇ ತನ್ನ ದೊಡ್ಡ ಸಂಸಾರವನ್ನು ನಿರ್ಮಿಸಿದೆ.

## ೧

"ಈ ಹಾಳು ಬಾಳುವೆಗಿಂತ ಸಾಯುವುದೇ ಲೇಸು" ಎಂದು ಮುನಶೀ ರಾಮಸೇವಕರು ಮನೆಯ ಹೊಸ್ತಿಲಿನ ಹೊರಗೆ ಕಾಲಿಡುತ್ತಲೇ ಎಂದರು. ಈ ಬಗೆಯಾಗಿ ಎಷ್ಟೋ ಜನರು ಸಾವನ್ನು ಸ್ವಾಗತಿಸುವರು. ಇವರೆಲ್ಲರ ಸ್ವಾಗತವನ್ನು ಸ್ವೀಕರಿಸಿ ಸಾವು ಅವರ ಮನೆಗೆ ಹೋಗಿದ್ದರೆ, ಇವೊತ್ತು ಸಂಸಾರ ಸೂರ್ಯನಿಲ್ಲದ ಆಗಸದಂತೆ, ಮರಗಳಿಲ್ಲದ ಅರಣ್ಯದಂತೆ ಹಾಳು ಹಾಳು ಸುರಿಯುತ್ತಿದ್ದಿತು.

ಮುನಶೀ ರಾಮಸೇವಕರು ರಾಮಪುರದ ದೊಡ್ಡ ಶ್ರೀಮಂತರು. ಶ್ರೀಮಂತರಲ್ಲಿರಬೇಕಾದ ಸರ್ವಸಂಪನ್ನ ಗುಣಗಳೆಲ್ಲವೂ ಅವರಲ್ಲಿದ್ದುವು. ಮಾನವಜೀವನದ ಕುಂದು ಕೊರತೆಗಳೇ ಅವರ ಜೀವನದ ಆಧಾರಗಳಾಗಿದ್ದುವು. ದಿನಾಲು ಮುನಿಸಿಫ್ ಕಚೇರಿಯ ಅಂಗಳದಲ್ಲಿದ್ದ ಒಂದು ಮರದ ನೆರಳಿನಲ್ಲಿ ತಮ್ಮ ಕಾಗದಪತ್ರದ ಗಂಟನ್ನು ಬಿಚ್ಚಿಕೊಂಡು ಕುಳಿತುಕೊಳ್ಳುತ್ತಿದ್ದರು. ಬಿರುಗಾಳಿ ಬೀಸಲಿ, ಮಳೆ ಸುರಿಯಲಿ, ಆಣೆಕಲ್ಲು ಬೀಳಲಿ; ರಾಮಸೇವಕರು ಮಾತ್ರ ತಮ್ಮ ಸ್ಥಾನ ಬಿಟ್ಟು ಕದಲುತ್ತಿರಲಿಲ್ಲ. ಕಚೇರಿಯಿಂದ ಅವರು ಮನೆಗೆ ಹೊರಟಕೂಡಲೆ ಹಳ್ಳಿಗರ ಹಿಂಡಿಗೆ ಹಿಂಡೇ ಅವರ ಹಿಂದೆ ಹೊರಡುತ್ತಿದ್ದಿತು. ಅವರೆಲ್ಲರೂ ಮುನಶೀ ರಾಮಸೇವಕರನ್ನು ಆದರ-ನಂಬಿಕೆಗಳಿಂದ ಕಾಣುತ್ತಿದ್ದರು. ರಾಮಸೇವಕರ ಇನ್ನೊಂದು ವೈಶಿಷ್ಟ್ಯವೇನೆಂದರೆ ಅವರ ನಾಲಿಗೆಯ ಮೇಲೆ ಸರಸ್ವತಿಯು ಕುಣಿಯುತ್ತಿರುವಳೆಂಬ ಪ್ರಸಿದ್ಧಿ. ಅದಕ್ಕೆ ನೀವು ವಕಾಲತ್ತು ಎನ್ನಬಹುದು, ಲಾಯರಿ ಎನ್ನಬಹುದು, ಏನು ಬೇಕಾದುದನ್ನು ಎನ್ನಬಹುದು. ಈ ಪ್ರಸಿದ್ಧಿಯು—ಪ್ರತಿಷ್ಠೆಯು ಅವರಿಗೆ ಪರಂಪರೆಯಿಂದಲೆ ಬಂದಿದ್ದಿತು. ಈ ಕಾರ್ಯದಿಂದ ಅಷ್ಟು ಲಾಭವೇನೂ ಅವರಿಗೆ ಆಗುತ್ತಿರಲಿಲ್ಲ. ಬೆಳ್ಳಿಯ ನಾಣ್ಯಗಳು, ಒಂದೊಂದು ಸಲ ತಾಮ್ರದ ನಾಣ್ಯಗಳೂ ಅವರ ಬಳಿ ಸಾರಲು ಅಂಜುತ್ತಿದ್ದುವು. ಅದೇನೆ ಇರಲಿ, ಮುನಶೀ ರಾಮಸೇವಕರ ಕಾಯಿದೆಯ ಜ್ಞಾನ ಅಗಾಧವಾಗಿದ್ದಿತು. ಅದರಲ್ಲಿ ಸಂಶಯವೇನೂ ಇರಲಿಲ್ಲ. ಈ ಕೆಲಸವನ್ನು ಅವರು ಕೇವಲ ಪ್ರತಿಷ್ಠಾಪಾಲನೆಗಾಗಿ ಮಾತ್ರ ಮಾಡುತ್ತಿದ್ದರು. ಆದರೆ ಅವರ ನಿರ್ವಾಹವು ಈ ಉದ್ಯೋಗದಿಂದಾಗುತ್ತಿರಲಿಲ್ಲ. ಉಡಲಿಕ್ಕೂ ತಿನ್ನಲಿಕ್ಕೂ ಸಾಕಷ್ಟು ಇದ್ದು ಅನಾಥರಾದ ವಿಧವೆಯರ ವಿಶ್ವಾಸ, ಶ್ರೀಮಂತ ಮುದುಕರ ಶ್ರದ್ಧೆ ಇವುಗಳಿಂದ ಅವರ ಉಪಜೀವಿಕೆಯು ಸಾಗುತ್ತಿದ್ದಿತು. ವಿಧವೆಯರು ತಮ್ಮ ಧನವನ್ನು ಅವರ ಬಳಿ ಅಮಾನತ್ತಾಗಿ ಇಡುತ್ತಿದ್ದರು. ಮುದುಕರು ತಮ್ಮ ಕುಪುತ್ರರ ಹೆದರಿಕೆಯಿಂದ ತಮ್ಮ ಧನವನ್ನು ಅವರ ಬಳಿಯಲ್ಲಿ ಇಟ್ಟುಕೊಳ್ಳಲು ಕೊಡುತ್ತಿದ್ದರು. ಆದರೆ ಒಂದು ಸಲ ರೂಪಾಯಿಗಳು ಅವರ ಪೆಟ್ಟಿಗೆಯಲ್ಲಿ ಹೋಗಿ ಬಿದ್ದುವೆಂದರೆ ಪುನಃ ಅವಕ್ಕೆ ಹೊರಬರಲಾಗುತ್ತಿರಲಿಲ್ಲ. ಅವರು ಸಮಯ ಬಂದರೆ ಸಾಯಂಕಾಲ

CC-0. Jangamwadi Math Collection. Digitized by eGangotri

ಹಿಂತಿರುಗಿ ಕೊಡುವ ಕರಾರಿನಿಂದ ಮುಂಜಾನೆ ಸಾಲವನ್ನೂ ಮಾಡುತ್ತಿದ್ದರು. ಆದರೆ ಆ ಸಾಯಂಕಾಲ ಅವರ ಜೀವನದಲ್ಲಿ ಪುನಃ ಉಂಟಾಗುತ್ತಿರಲಿಲ್ಲ. ಒಟ್ಟಾರೆ ಹೇಳಬೇಕೆಂದರೆ ಮುನಶೀ ರಾಮಸೇವಕರು ಸಾಲ ಮುಟ್ಟಿಸುವುದನ್ನು ಕಲಿತಿರಲಿಲ್ಲ. ಇದರಲ್ಲಿ ಅವರ ತಪ್ಪು ಅಷ್ಟೇನೂ ಇರಲಿಲ್ಲ. ಇದು ಅವರ ಪರಂಪರಾಗತ ಕುಲದ ರೂಢಿಯಾಗಿದ್ದಿತು. ಇವೆಲ್ಲ ಸಂಗತಿಗಳು ಮುನಶೀ ರಾಮಸೇವಕರ ಸುಖಾನಂದದಲ್ಲಿ ವಿಘ್ನಗಳನ್ನು ತಂದೊಡ್ಡುತ್ತಿದ್ದುವು. ಕಾಯಿದೆ ಕಾನೂನಿನ ಅಂಜಿಕೆಯೆ ಅವರಿಗಿದ್ದಿಲ್ಲ. ಈ ಪ್ರಕಾರ ಕಾಯಿದೆಯಿಂದ ಅವರೊಡನೆ ವ್ಯಾಜ್ಯ ಮಾಡುವುದೆಂದರೆ ನೀರಿನಲ್ಲಿ ಮೊಸಳೆಯೊಡನೆ ಸಂಗ್ರಾಮ ಹೂಡಿದಂತೆಯೆ ಸೈ. ಆದರೆ ಯಾವನಾದರೂ ಒಬ್ಬ ದುಷ್ಟ ಅವರೊಡನೆ ಬಡಿದಾಡಲು ಸಿದ್ಧನಾದರೆ, ಅವರ ಪ್ರಾಮಾಣಿಕತನವನ್ನು ಸಂಶಯದಿಂದ ಕಂಡರೆ, ಅವರ ಎದುರಾ ಎದುರಾ ಬಾಯಿಗೆ ಬಂದಹಾಗೆ ಆಡತೊಡಗಿದರೆ ಅವರಿಗೆ ಕೆಡುಕೆನ್ನಿಸುತ್ತಿದ್ದಿತು. ಈ ಬಗೆಯ ದುರ್ಘಟನೆಗಳು ಆಗಿಂದಾಗ್ಗೆ ಆಗುತ್ತಲೆ ಇದ್ದುವು. ಅನ್ಯರ ಮುಖದ ಮೇಲಿಂದ ನೀರು ಇಳಿಸುವುದರಲ್ಲಿ ಆನಂದ ಹೊಂದುವಂಥ ಜನರೂ ಎಲ್ಲ ಕಡೆಗೆ ಇರುವರು. ಇಂಥವರ ಸಹಾಯದಿಂದ ಸರ್ವಸಾಧಾರಣ—ಸಾಮಾನ್ಯ ಜನರೂ ಮುನಶೀಯವರನ್ನು ಏಡಿಸುತ್ತಿದ್ದರು. ಇಲ್ಲದೆ ಹೋಗಿದ್ದರೆ ಒಬ್ಬ ಬಾಗವಾನಗಿತ್ತಿಗೆ ಅವರ ಮನೆಗೆ ಹೋಗಿ ಸಿಕ್ಕಾಪಟ್ಟೆ ಬೈಯುವ ಧೈರ್ಯವಾಗುತ್ತಿದ್ದಿತೆ? ಮುನಶೀಯವರು ಆಕೆಯ ಹಳೆಯ ಗಿರಾಕಿ. ಅದೆಷ್ಟೋ ವರ್ಷಗಳಿಂದ ಅವಳ ಬಳಿಯಲ್ಲಿಯೆ ತರಕಾರಿ ಕೊಳ್ಳುತ್ತ ಬಂದಿದ್ದರು. ಹಣ ಕೊಡದಿದ್ದರೂ ಅವಳು ಸಂತೋಷಪಟ್ಟುಕೊಳ್ಳಬೇಕಾಗಿದ್ದಿತು. ಹಣವು ಇಂದಿಲ್ಲದಿದ್ದರೆ ನಾಳೆಯಾದರೂ ಸಿಕ್ಕುತ್ತಿತ್ತು. ಆದರೆ ಏಕೋ ಆ ಬಾಗವಾನಗಿತ್ತಿಗೆ ಎರಡು ವರ್ಷಗಳಲ್ಲೇ ಅಂಜಿಕೆಯಾಯಿತು. ಅವಳು ಮುನಶೀಯವರನ್ನು ಸಾಲಮುಟ್ಟಿಸಲು ಹೇಳಿದಳು. ಅವರು ಇವೊತ್ತು ನಾಳೆಯೆಂದು ಪಾರಾಗುತ್ತಿದ್ದರು. ಆದರೆ ಆಕೆ ಬಿಡಬೇಕಲ್ಲ! ಅವರ ಮುಖವನ್ನು ಬಾಡಿಸಿಬಿಟ್ಟಳು. ರಾಮಸೇವಕರು ಸಾಯಲು ಸಿದ್ಧರಾದರು. ಪಾಪ, ಅವರದೇನು ತಪ್ಪು ಇದರಲ್ಲಿ!

೨

ಅದೇ ಊರಿನಲ್ಲಿ ಒಬ್ಬ ವಿಧವೆಯಿದ್ದಳು. ಆಕೆಯ ಹೆಸರು ಗಂಗಾ. ಆಕೆಯ ಗಂಡ ಬ್ರಹ್ಮದೇಶದ ಸೈನ್ಯದಲ್ಲಿ ಹವಾಲದಾರನಾಗಿದ್ದ. ಕಳೆದ ಮಹಾಸಮರದಲ್ಲಿ ಮಡಿದ. ಅವನು ಯುದ್ಧದಲ್ಲಿ ಸಾಹಸ ಪರಾಕ್ರಮಗಳನ್ನು ತೋರಿಸಿದುದರಿಂದ ಸರಕಾರದವರು ಸಂತುಷ್ಟರಾಗಿ ಗಂಗೆಗೆ ಐದು ನೂರು ರೂಪಾಯಿಗಳನ್ನು ಇನಾಮಾಗಿ ಕೊಟ್ಟಿದ್ದರು. ತಾನು ವಿಧವೆ; ಕಾಲ ಬಹಳ ಸೂಕ್ಷ್ಮ; ಬಡವೆ; ಆದುದರಿಂದ ಅವಳು ರೂಪಾಯಿಗಳನ್ನು ರಾಮಸೇವಕರ ಬಳಿ ಇಟ್ಟುಕೊಳ್ಳಲಿಕ್ಕೆ ಕೊಟ್ಟಳು. ತಿಂಗಳಿಗೆಷ್ಟು ಬೇಕಾಗುತ್ತಿದ್ದಿತೊ ಅಷ್ಟನ್ನು ಬೇಡಿ ತೆಗೆದುಕೊಂಡು ತನ್ನ ನಿರ್ವಾಹ ಸಾಗಿಸುತ್ತಿದ್ದಳು.

ಮುನಶೀ ರಾಮಸೇವಕರು ಈ ತಮ್ಮ ಕರ್ತವ್ಯವನ್ನು ಕೆಲವು ವರ್ಷ ಪ್ರಾಮಾಣಿಕತನದಿಂದ ಮಾಡಿದರು. ಗಂಗೆಯು ಮುದುಕಿಯಾದರೂ ಸಾಯಲಿಲ್ಲ. ತನ್ನ ಸ್ವರ್ಗಯಾತ್ರೆಗಾದರೂ ಸ್ವಲ್ಪ ಹಣ ತಮ್ಮ ಬಳಿ ಉಳಿಯಗೊಡುವಳೊ ಇಲ್ಲವೊ ಎಂಬ ಚಿಂತೆ ರಾಮಸೇವಕರಿಗೆ. ಒಂದು ದಿನ ಅವರು ಆಕೆಯನ್ನು ಕರೆಯಿಸಿ "ಗಂಗಾ, ನೀನು ಸಾಯುವಿಯೊ ಇಲ್ಲವೊ? ಸ್ಪಷ್ಟವಾಗಿ ಹೇಳಿಬಿಡು. ಇಲ್ಲದೆ ಹೋದರೆ ನಾನೇ ಸಾಯುವ ಸಿದ್ಧತೆ ಮಾಡುವೆ." ಎಂದರು. ಅವೊತ್ತು ಗಂಗೆಯ ಕಣ್ಣುಗಳು ತೆರೆದುವು; ಆಕೆಯ ನಿದ್ರಾಭಂಗವಾಯಿತು. ಲೆಕ್ಕ ಮಾಡಿ ಬಾಕಿ ಉಳಿದ ಎಲ್ಲ ರೂಪಾಯಿಗಳನ್ನು ಕೊಟ್ಟುಬಿಡಿರೆಂದು ಹೇಳಿದಳು. ಲೆಕ್ಕಪತ್ರ ಸರಿಯಾಗಿಯೆ ಇದ್ದಿತು. ಆಕೆಯನ್ನು ಕರೆಯಿಸುವ ಪೂರ್ವದಲ್ಲಿಯೆ ರಾಮಸೇವಕರು ಲೆಕ್ಕ ಮಾಡಿಯೆ ಇಟ್ಟಿದ್ದರು. "ಅಮಾನತ್"ನಲ್ಲಿ ಒಂದು ಕಾಸೂ ಇಲ್ಲವೆಂದು ಹೇಳಿಬಿಟ್ಟರು. ಗಂಗೆಯು ಬಹಳ ಕಸುವಿನಿಂದ ಮುನಶೀಯವರ ಕೈಹಿಡಿದು "ಈಗಳೆ ನನ್ನ ಬಾಕೀ ಉಳಿದ ಎರಡೂವರೆ ನೂರು ರೂಪಾಯಿಗಳನ್ನು ವಾಪಸು ಕೊಟ್ಟುಬಿಡಿರಿ" ಎಂದಳು.

ಅನಾಥರ ಕೋಪ ಪಟಾಕಿಯ ಶಬ್ದದ ಹಾಗೆ. ಅದಕ್ಕೆ ಚಿಕ್ಕಮಕ್ಕಳು ಅಂಜುವರು, ಅದರ ಪರಿಣಾಮವೇನೂ ಆಗುವುದಿಲ್ಲ. ನ್ಯಾಯಾಲಯದಲ್ಲ ಅವಳ ವರ್ಚಸ್ಸಿರಲಿಲ್ಲ ಆಕೆಯ ಬಳಿ ಕಾಗದಪತ್ರಗಳಿರಲಿಲ್ಲ, ಅವಳು ಕಲಿತವಳೂ ಇರಲಿಲ್ಲ. ಹೌದು, ಅವಳಿಗೊಂದು ಆಧಾರವು ಇದ್ದಿತು. ಅದು ಪಂಚಾಯತಿಯದು. ಪಂಚರೆಲ್ಲರೂ ಒಟ್ಟಾದರು. ಸಭೆ ನೆರೆಯಿತು. ಮುನಶೀಯವರಿಗೇನು ಭಯ? ಎದ್ದು ನಿಂತು "ಬಂಧುಗಳೇ! ತಾವೆಲ್ಲರೂ ಸತ್ಯಪರಾಯಣರೂ ಕುಲೀನರೂ ಇರುವಿರಿ. ನಾನು ತಮ್ಮಂಥ ಮಹನೀಯರುಗಳ ದಾಸನು. ತಮ್ಮ ಔದಾರ್ಯ, ಕೃಪೆ, ಕರುಣೆ

CC-0. Jangamwadi Math Collection. Digitized by eGangotri

ಪ್ರೀತಿಯಿಂದ ನನ್ನ ರೋಮರೋಮವೆಲ್ಲವೂ ತಮಗೆ ಕೃತಜ್ಞವಾಗಿದೆ. ನಾನು ಈ ವಿಧವೆಯ ಧನವನ್ನೆಲ್ಲ ನುಂಗಿರುವೆನೆಂದು ತಿಳಿದಿರುವಿರಾ ?"

ಪಂಚರು ಒಂದೇ ಸ್ವರದಲ್ಲಿ "ಇಲ್ಲ, ಇಲ್ಲ ! ನಿಮ್ಮಿಂದ ಈ ತರದ ಕೆಲಸವಾಗದು" ಎಂದರು.

ಪುನಃ ಮುನಶೀ ರಾಮಸೇವಕರು "ತಾವು ಒಂದು ವೇಳೆ ನಾನು ರೂಪಾಯಿಗಳನ್ನು ಸ್ವಾಹಾ ಮಾಡಿರುವೆನೆಂದು ತೀರ್ಮಾನಿಸಿದರೆ ನೀರಿನಲ್ಲಿ ಮುಳುಗಿ ಸಾಯಬೇಕೇ ವಿನಾ ಬೇರೊಂದು ಮಾರ್ಗವೇ ನನಗುಳಿಯುವುದಿಲ್ಲ. ನಾನು ಧನಿಕನಿಲ್ಲ, ಉದಾರನೆಂಬ ಹೆಮ್ಮೆಯೂ ನನಗಿರುವುದಿಲ್ಲ. ನನ್ನ ಲೆಕ್ಕಣಿಕೆಯ ಕೃಪೆಯಿಂದ, ತಮ್ಮಗಳ ಕೃಪೆಯಿಂದ ಇದು ವರೆಗೆ ಹೊಟ್ಟೆಗಾಗಿ ಬೇರೆಯವರ ಬಾಗಿಲೆದುರು ಹೋಗುವಂತಹ ಪ್ರಸಂಗ ಬಂದಿಲ್ಲ. ವಿಧವೆಯ ರೂಪಾಯಿಗಳನ್ನು ಮುಳುಗಿಸುವಷ್ಟು ನಾನು ನೀಚ ಕಾರ್ಯ ಮಾಡಬಲ್ಲೆನೆ ?"

ಮತ್ತೆ ಪಂಚರು ಒಂದೇ ಸ್ವರದಲ್ಲಿ "ಇಲ್ಲ ಇಲ್ಲ ! ತಮ್ಮಿಂದ ಈ ತರದ ಕೆಲಸವಾಗಲಾರದು" ಎಂದರು.

ಮುಖ ನೋಡಿ ಮಣೆ ಹಾಕಬೇಕು. ಪಂಚರು ಮುನಶೀಯವರ ಮೇಲೆ ದೋಷಾರೋಪಣೆ ಮಾಡದೆ ತಮ್ಮ ತಮ್ಮ ಮನೆಗಳಿಗೆ ಹೋದರು. ಗಂಗೆಯು ನಿಟ್ಟುಸಿರು ಬಿಟ್ಟು ಸಂತೋಷಿತಳಾದಳು. ಸರಿ ! ಇಲ್ಲಿ ಇಲ್ಲದಿದ್ದರೆ ಇಲ್ಲ, ಅವನೆಲ್ಲಿಗೆ ಹೋಗುವನೊ ನೋಡುವೆನೆಂದು ಮನದಲ್ಲಿಯೆ ಎಂದುಕೊಂಡಳು.

೩

ಈಗ ಗಂಗೆಯ ದುಃಖವನ್ನು ಕೇಳುವವರು ಯಾರೂ ಇರಲಿಲ್ಲ. ಈ ಸಂಕಟ ಸಮಯದಲ್ಲಿ ಆಕೆಗೆ ನೆರವಾಗುವವರೂ ಇರಲಿಲ್ಲ. ಬಡತನದ ಗೋಳನ್ನೆಲ್ಲ ಈಗ ಅವಳು ಅನುಭವಿಸಬೇಕಾಯಿತು. ಅವಳು ಅಷ್ಟು ಅಶಕ್ತಳಿರಲಿಲ್ಲ. ಪೂರ್ವಕಾಲದ ಹೆಂಗುಸು. ಮನಸ್ಸು ಮಾಡಿದ್ದರೆ ದುಡಿದು ಹೊಟ್ಟೆ ತುಂಬಿಕೊಳ್ಳಬಹುದಾಗಿತ್ತು. ಪಂಚರು ಎದ್ದು ಹೋದ ದಿನವೇ ಇನ್ನು ದುಡಿಯುವುದಿಲ್ಲನೆಂದು ನಿಶ್ಚಯಿಸಿದ್ದಳು. ಈಗ ಅವಳಿಗೆ ಒಂದೇ ಒಂದು ಕೆಲಸ—ಹಗಲೂ ಇರುಳೂ ರೂಪಾಯಿಗಳ ಜಪಮಾಡುವುದು, ಮುನಶೀ ರಾಮಸೇವಕರ ಕಲ್ಯಾಣ ಬಯಸುವುದು. ತನ್ನ ಗುಡಿಸಲಿನ ಬಾಗಿಲ ಬಳಿ ಕುಳಿತು ಒಳ್ಳೆಯ ಮನದಿಂದ ಆಶೀರ್ವದಿಸುತ್ತಿದ್ದಳು, ಆದರೆ ಆಕೆಯು ಉಪಯೋಗಿಸುತ್ತಿದ್ದ ಉಪಮೆಗಳು ಮಾತ್ರ ವಿಚಿತ್ರವಾಗಿರುತ್ತಿದ್ದುವು. ಅವನ್ನು ಕೇಳಿದವರಿಗೆ ಆಶ್ಚರ್ಯವಾಗದೆ ಇರುತ್ತಿರಲಿಲ್ಲ. ಬರುಬರುತ್ತ ಗಂಗೆಗೆ ಹುಚ್ಚು ಹಿಡಿಯತೊಡಗಿತು. ಬಕ್ಕದೆಲೆ, ಬೆತ್ತಲೆ ಶರೀರ, ಕೈಯಲ್ಲಿ ಕೊಡಲಿಯನ್ನು ಹಿಡಿದುಕೊಂಡು ನಿರ್ಜನ ಸ್ಥಾನಗಳಿಗೆ ಹೋಗಿ ಕುಳಿತುಕೊಳ್ಳುತ್ತಿದ್ದಳು. ಮನೆಯನ್ನು ಬಿಟ್ಟಳು. ನದೀತೀರದ ಮೇಲೆ, ಸ್ಮಶಾನದಲ್ಲಿ, ಹಾಳಾದ ಊರಿನಲ್ಲಿ ತಿರುಗಾಡತೊಡಗಿದಳು. ಕೆದರಿದ ಕೂದಲು, ಕೆಂಪಾದ ಕಣ್ಣು, ಹುಚ್ಚು ಮುಖ, ಬಾಡಿದ ಕೈಕಾಲು ನೋಡಿ ಜನಗಳು ಹೆದರುತ್ತಿದ್ದರು. ಅವಳನ್ನು ಈಗ ತಮಾಷೆಗಾಗಿಯೂ ಪೀಡಿಸುತ್ತಿರಲಿಲ್ಲ. ಒಂದೊಂದು ಸಲ ಅವಳು ಊರಲ್ಲಿ ಬಂದರೆ ಊರವರೆಲ್ಲ ತಮ್ಮ ಮನೆಯ ಬಾಗಿಲುಗಳನ್ನು ಮುಚ್ಚಿಕೊಳ್ಳುತ್ತಿದ್ದರು. ಹೆಣ್ಣು ಮಕ್ಕಳು ಹೊರಗೇ ಬರುತ್ತಿರಲಿಲ್ಲ. ಗಂಡುಸರು ಅವಳನ್ನು ನೋಡಿ ಬಂದ ಹಾದಿಯಿಂದಲೇ ಹಿಂತಿರುಗುತ್ತಿದ್ದರು. ಮಕ್ಕಳು ಚಿಟ್ಟನೆ ಚೀರಿ ಹೆದರಿ ಓಡಿಹೋಗುತ್ತಿದ್ದರು. ಆದರೆ ಮುನಶೀ ರಾಮಸೇವಕರ ಸುಪುತ್ರ ಮಾತ್ರ ಈ ಮುದುಕಿಗೆ ಹೆದರುತ್ತಿದ್ದಿಲ್ಲ, ಓಡಿಯೂ ಹೋಗುತ್ತಿರಲಿಲ್ಲ. ತಂದೆಯಲ್ಲಿ ಇರದೆ ಇದ್ದ ಗುಣಗಳು ಮಗನಲ್ಲಿ ಬಂದುಬಿಟ್ಟಿದ್ದುವು. ಇವನ ಗೆಳೆಯರು, ಹುಡುಗರು ಬೇಸತ್ತು ಹೋಗಿದ್ದರು ಇವನಿಗಾಗಿ. ಕಿವುಡರು, ಕುಂಟರು ಅವನನ್ನು ಕಂಡರೆ ಕಿಡಿ ಕಾರುತ್ತಿದ್ದರು. ಅವನಿಗೆ ಬೈಗಳಿಂದ ಆಗುತ್ತಿದ್ದಷ್ಟು ಆನಂದ ಅತ್ತೆಯ ಮನೆಗೆ ಹೋಗುವ ಅಳಿಯನಿಗೂ ಆಗುತ್ತಿರಲಿಲ್ಲ. ಗಂಗೆಯು ಊರುಬಿಟ್ಟು ಹೋಗುವ ತನಕ ಆತ ಅವಳ ಹಿಂದೆ ನಾಯಿಯನ್ನು ಬಿಟ್ಟು ಬೆನ್ನಟ್ಟುತ್ತಿದ್ದ. ಹಣ, ಮನೆಮಾರು, ಸ್ಮೃತಿ ಎಲ್ಲವನ್ನೂ ಕಳೆದುಕೊಂಡುದರಿಂದ ಅವಳಿಗೆ 'ಹುಚ್ಚಿ' ಎಂಬ ಹೆಸರು ಬಂದಿತ್ತು. ಅವಳೀಗ ನಿಜವಾದ ಹುಚ್ಚಿ. ಗಂಟೆಗಂಟೆಗಳ ಕಾಲ ತನ್ನಷ್ಟಕ್ಕೆ ತಾನೆ ಮಾತನಾಡಿಕೊಳ್ಳುತ್ತಿದ್ದಳು. ರಾಮಸೇವಕರ ಮಾಂಸ ತಿನ್ನುವ, ಎಲುಬು ಪುಡಿಮಾಡುವ, ಚರ್ಮ ಸುಲಿಸುವ, ಕಣ್ಣು ಕಿತ್ತಿಸುವ, ರಕ್ತ ಕುಡಿಯುವ ಬಯಕೆಯ ಮಾತುಗಳೇ ಅವು. ಮುನಶೀ ರಾಮಸೇವಕರ ಮನೆಯ ಕಡೆಗೆ ತಿರುಗಿ, ಜೋರಿನಿಂದ ಎದೆ ಬಿರಿಯುವ ಹಾಗೆ ಕಿರುಚುತ್ತಿದ್ದಳು—"ನಿನ್ನ ರಕ್ತ ಹೀರುತ್ತೇನೆ, ಬಿಡುವುದಿಲ್ಲ."

ಸಂಸಾರದ ವ್ಯಾಪಾರವು ನಿಂತು ಸರ್ವತ್ರ ಸ್ತಬ್ಧತೆಯಾದ ಮೇಲೆ ರಾತ್ರಿಯಲ್ಲಿ ಈ ಕೂಗು ಕೇಳಿಸಿದರೆ ಹೆಣ್ಣು ಮಕ್ಕಳು ನಡುಗುತ್ತಿದ್ದರು. ಈ ಕಿರುಚುವಿಕೆಗಿಂತಲೂ

CC-0. Jangamwadi Math Collection. Digitized by eGangotri

ಅವಳ ನಗೆಯು ಭಯಾನಕವಾಗಿದ್ದಿತು. ಮುನಶೀಯವರ ರಕ್ತ ಹೀರುವ ಆನಂದದಿಂದ ಆಕೆ ಆಗಾಗ್ಗೆ ಗಹಗಹಿಸಿ ನಗುತ್ತಿದ್ದಳು. ಈ ನಗೆಯನ್ನು ಕೇಳಿದವರ ನೆತ್ತರು ನೀರಾಗುತ್ತಿತ್ತು. ಬಳಿಕ ಹೆಪ್ಪುಗಟ್ಟುತ್ತಿತ್ತು. ಮುನಶೀ ರಾಮಸೇವಕರು ಧೈರ್ಯವಂತರು, ಎದೆಗಾರರು. ದಿವಾಣಿಯ ವ್ಯಾಜ್ಯದ, ಫೌಜದಾರಿಯ ವ್ಯಾಜ್ಯದ ಅಂಜಿಕೆಯು ಅವರಿಗೆ ಇರಲಿಲ್ಲ. ಆದರೆ ಗಂಗೆಯ ಈ ಭಯಂಕರ ಕೂಗು ಕೇಳಿ ಬೆಚ್ಚಿಬೀಳುತ್ತಿದ್ದರು. ಮನುಷ್ಯನ ನ್ಯಾಯದ ಅಂಜಿಕೆ ಇರದಿದ್ದರೂ ದೇವರ ನ್ಯಾಯದ ಭಯ ಮನುಷ್ಯನ ಮನದಲ್ಲಿ ಸ್ವಾಭಾವಿಕವಾಗಿಯೆ ಇರುವುದು. ಗಂಗೆಯ ರಾತ್ರಿಯ ಸಂಚಾರ, ಆಕೆಯ ಕೂಗು. ರಾಮಸೇವಕರನ್ನು ಅಷ್ಟು ಹೆದರಿಸದಿದ್ದರೂ ಅವರ ಹೆಂಡತಿಯ ಹೃದಯವನ್ನು ತಲ್ಲಣಗೊಳಿಸುತ್ತಿದ್ದುವು. ರಾಮಸೇವಕರ ಹೆಂಡತಿ ಬಹು ಚದುರೆ. ಅವಳೇ ರಾಮಸೇವಕರ ಸಲಹೆಗಾರ್ತಿ. ಮುನಶೀಯವರ ನಾಲಿಗೆಯ ಮೇಲೆ ಸರಸ್ವತಿ ನಲಿದಾಡುತ್ತಾಳೆಂದು ಜನಗಳು ತಿಳಿದುಕೊಂಡಿದ್ದರೆ ಅದು ತಪ್ಪು. ಸರಸ್ವತಿ ಅವರ ಹೆಂಡತಿಯಲ್ಲಿ ನೆಲಸಿದ್ದಳು. ಮುನಶೀಯವರು ಬರವಣಿಗೆಯಲ್ಲಿ ನಿಪುಣರಿದ್ದಷ್ಟು ಅವರ ಹೆಂಡತಿ ಮಾತನಾಡುವುದರಲ್ಲಿ ನಿಪುಣೆಯಾಗಿದ್ದಳು. ಈ ಗಂಗೆಯ ಪ್ರಸಂಗದಲ್ಲಿ ಏನು ಮಾಡಬೇಕೆಂದು ಗಂಡಹೆಂಡಿರಿಬ್ಬರೂ ಯೋಚಿಸುತ್ತಿದ್ದರು.

೪

ಮಧ್ಯರಾತ್ರಿಯಾಗಿತ್ತು. ರಾಮಸೇವಕರು ತಮ್ಮ ಚಿಂತೆಯನ್ನು ದೂರಮಾಡುವುದಕ್ಕಾಗಿ ನಿತ್ಯನಿಯಮದ ಪ್ರಕಾರ ಒಂದೆರಡು ಗುಟುಕು ಸಾರಾಯಿ ಕುಡಿದು ಮಲಗಿದ್ದರು ಒಮ್ಮಿಂದೊಮ್ಮೆ ಗಂಗೆಯು ಅವರ ಬಾಗಿಲ ಬಡಿದು "ನಿನ್ನ ರಕ್ತ ಕುಡಿಯುವೆ" ಎಂದು ಗಹಗಹಿಸಿ ನಕ್ಕಳು. ಈ ನಗೆಯನ್ನು ಕೇಳಿ ರಾಮಸೇವಕರು ಬೆಚ್ಚಿದರು. ಅವರ ಕೈಕಾಲುಗಳು ನಡುಗತೊಡಗಿದುವು. ಎದೆಯು ಹಾರತೊಡಗಿತು. ಸ್ವಲ್ಪ ಧೈರ್ಯ ತಂದುಕೊಂಡು ನಡುಮನೆಯಲ್ಲಿ ಮಲಗಿದ ತಮ್ಮ ಹೆಂಡತಿ ನಾಗೂದೇವಿಯನ್ನು ಎಬ್ಬಿಸಿದರು. ಅವಳು ಕೋಪದಿಂದ "ಏನದು? ಏನಂತೀರಾ?" ಎಂದು ಕೇಳಿದಳು. ಮುನಶೀಯವರು ಮೆಲ್ಲಗೆ "ಗಂಗಾ ಹೊರಗೆ ನಿಂತಿದ್ದಾಳೆ" ಎಂದರು.

ನಾಗೂದೇವಿ ಎದ್ದು ಕುಳಿತು "ಏನೆನ್ನುತ್ತಾಳೆ?" ಎಂದಳು.

"ನಿನ್ನ ತಲೆ!"

"ಬಾಗಿಲ ಬಳಿ ಬಂದಿದ್ದಾಳೆಯೆ?"

"ಹೌದು, ದನಿ ಕೇಳಿಸುವುದಿಲ್ಲೇನು?"

ನಾಗೂದೇವಿ ಗಂಗೆಗೆ ಅಂಜುತ್ತಿರಲಿಲ್ಲ. ಆದರೆ ಆಕೆಯ ನೆನಪಾದ ಕೂಡಲೆ ಹೌಹಾರಿಹೋಗುತ್ತಿದ್ದಳು. ಹೀಗಿದ್ದರೂ ಮಾತಿನಲ್ಲಿ ಗಂಗೆಯನ್ನು ಸೋಲಿಸುವಷ್ಟು ಶಕ್ತಿಯು ಅವಳಲ್ಲಿದ್ದಿತು. ಅವಳು ಗಂಡನನ್ನು ಕೇಳಿದಳು. ಗಂಡ 'ಬೇಡ' ಎಂದು ಹೇಳಿದರು.

ದಂಪತಿಗಳು ಮೆಲ್ಲಗೆ ಕಳ್ಳರಂತೆ ಹೆಜ್ಜೆಯಿಕ್ಕುತ್ತ ಬಾಗಿಲ ಬಳಿ ಬಂದು ಸಂದಿನೊಳಗಿಂದ ಇಣಿಕಿ ನೋಡಿದರು. ಗಂಗೆಯು ನೆಲದ ಮೇಲೆ ಬಿದ್ದುಕೊಂಡಿದ್ದಳು. ಅವಳ ಶ್ವಾಸವು ಜೋರಿನಿಂದ ಆಡುತ್ತಿರುವುದು ಕೇಳಿಸುತ್ತಿದ್ದಿತು. ರಾಮಸೇವಕರ ರಕ್ತಮಾಂಸ ಹೀರುವುದಕ್ಕೋಸ್ಕರ ತನ್ನ ರಕ್ತಮಾಂಸಗಳನ್ನು ಒಣಗಿಸಿಬಿಟ್ಟಿದ್ದಳು. ಒಬ್ಬ ಚಿಕ್ಕ ಹುಡುಗನು ಕೂಡ ನೂಕಿ ಅವಳನ್ನು ಕೆಡಹಬಹುದಾಗಿದ್ದಿತು. ಆದರೆ ಊರಿಗೆ ಊರೇ ಅವಳಿಗೆ ಹೆದರಿ ನಡುಗುತ್ತಿದ್ದಿತು. ಮನುಷ್ಯರು ಬದುಕಿದ್ದಾಗ ಅವರಿಗೆ ಅಷ್ಟು ಅಂಜುವುದಿಲ್ಲ! ಸತ್ತಮೇಲೆ ಅಂಜುತ್ತೇವೆ. ಅಂತೂ ರಾತ್ರಿಯು ಕಳೆಯಿತು. ಬಾಗಿಲು ಮುಚ್ಚಿಕೊಂಡೇ ದಂಪತಿಗಳು ಇಡೀ ರಾತ್ರಿಯನ್ನು ಕಳೆದರು. ಗಂಗೆಯು ಮನೆಯೊಳಕ್ಕೆ ಹೋಗುತ್ತಿರಲಿಲ್ಲ. ಆದರೆ ಆಕೆಯ ಬಾಯಿಗೆ ಬೀಗ ಹಾಕುವವರಾರು? ಗಂಗೆಗಿಂತಲೂ ಹೆಚ್ಚು ಭಯಂಕರವಾದುದು ಅವಳ ದನಿ.

ಬೆಳಗಾದ ಮೇಲೆ ಬಾಗಿಲ ತೆರೆದು "ಇಲ್ಲೇಕೆ ಬಿದ್ದುಕೊಂಡೀಯೆ?" ಎಂದು ಗಂಗೆಯನ್ನು ಕೇಳಿದರು ರಾಮಸೇವಕರು.

"ನಿನ್ನ ರಕ್ತ ಕುಡಿಯುತ್ತೇನೆ" ಎಂದಳು ಗಂಗೆ.

"ನಿನ್ನ ಬಾಯಿಗೆ ಬರಗುಡಿ ಕೊಡುತ್ತೇನೆ" ಎಂದಳು ಕೋಪದಿಂದ ನಾಗೂ.

ಆದರೆ ಈ ನಾಗೂನ ಮಾತಿನ ಪರಿಣಾಮವಾಗಲಿಲ್ಲ ಗಂಗೆಯ ಮೇಲೆ. ಗಂಗೆ ನಕ್ಕುಬಿಟ್ಟಳು. ನಾಗೂ ಬೆಪ್ಪಾದಳು. ನಗೆಯ ಎದುರಿನಲ್ಲಿ ಬಾಯಿ ಬಂದಾಗಿಹೋಗುತ್ತದೆ. ಮುನಶೀಯವರು ಗಂಗೆಗೆ ಎದ್ದು ಹೋಗಲಿಕ್ಕೆ ಹೇಳಿದರು.

ಎದ್ದು ಹೋಗುವುದಿಲ್ಲೆಂದು ಗಂಗೆಯು ಹೇಳಿದಳು.

"ಎಲ್ಲಿಯ ವರೆಗೆ ಹೀಗೆ ಬಿದ್ದುಕೊಂಡಿರುವೆ?"

CC-0. Jangamwadi Math Collection. Digitized by eGangotri

"ನಿನ್ನ ರಕ್ತ ಕುಡಿದು ತೃಪ್ತಿಯಾಗುವ ವರೆಗೆ."

ಮುನಶೀಯವರ ಪ್ರಖರ ಲೆಕ್ಕಣಿಕೆಯಲ್ಲಿದ್ದ ಕಸುವು ಇಲ್ಲಿ ತನ್ನ ಶಕ್ತಿಯ ಪ್ರದರ್ಶನ ಮಾಡಲಿಲ್ಲ. ನಾಗೂನ ಕಿಡಿಯಂಥ ಮಾತುಗಳು ಇಲ್ಲಿ ನಾಟಲಿಲ್ಲ. ಎಲ್ಲವೂ ತಣ್ಣಗಾದುವು. ಈ ಪೀಡೆ ಹೇಗೆ ಹೋದೀತು ?....ಈ ಸಂಕಟದಿಂದ ಹೇಗೆ ಬಿಡುಗಡೆಯಾದೀತೆಂಬುದನ್ನೆ ಇಬ್ಬರೂ ವಿಚಾರ ಮಾಡತೊಡಗಿದರು.

ದೇವತೆಗಳು ಕುರಿಯ ರಕ್ತ ಪಾನಮಾಡಿ ಹೋಗುವರು. ಆದರೆ ಈ ರಕ್ಕಸಿಯು ಮಾನವರಕ್ತ ಕುಡಿಯಲು ಬಂದಿದ್ದಾಳೆ. ರಾಮಸೇವಕರು ಲೆಕ್ಕಣಿಕೆ ಕೆತ್ತುವಾಗ ಚಾಕುವಿನ ಗಾಯವಾದರೆ ತಿಂಗಳ ತನಕ ಗುಣವಾಗುತ್ತಿರಲಿಲ್ಲವೆಂಬುದು ಊರಿಗೆಲ್ಲಾ ಗೊತ್ತು. ಆದರೆ ಇವರ ರಕ್ತವನ್ನೇ ಕುಡಿದು ಗಂಗೆಯ ಒಣಗಿದ ಶರೀರವು ಕೊನರುವುದೇನು ?

ಗಂಗೆಯು ಮುನಶೀಯವರ ಬಾಗಿಲೆದುರು ಕುಳಿತು ಪಿಕೆಟಿಂಗ್ ಮಾಡುತ್ತಿರುವಳೆಂಬ ಸುದ್ದಿ ಊರಲ್ಲೆಲ್ಲ ಹರಡಿತು. ಮುನಶೀಯವರಿಗೆ ಅಪಮಾನವಾಗುವುದನ್ನು ನೋಡಿದರೆ ಜನಗಳಿಗೆ ತುಂಬಾ ಆನಂದ. ಜನಗಳು ಗುಂಪುಗುಂಪಾಗಿ ಮುನಶೀಯವರ ಮನೆಯ ಮುಂದೆ ನೆರೆದರು. ಈ ಮೊದಲೂ ಜನಗಳು ಇಲ್ಲಿ ನೆರೆದೇ ನೆರೆಯುತ್ತಿದ್ದರು. ಆದರೆ ಈ ಜನಗಳ ನೆರೆಯುವಿಕೆ-ಗಲಾಟೆಯನ್ನು ಕಂಡರೆ ರಾಮಸೇವಕರ ಮಗನಿಗೆ ತುಂಬಾ ಕೋಪ ಗಂಗೆಯನ್ನು ಬಾವಿಯಲ್ಲಿ ಎತ್ತಿಹಾಕಬೇಕೆಂದು ಅವನಿಗೆ ಎನಿಸುತ್ತಿದ್ದಿತು. ಈ ವಿಚಾರವು ಸುಳಿಯುತ್ತಲೆ ಅವನಿಗೆ ನಗು ಬಂದಿತು. ಪ್ರಯತ್ನಪೂರ್ವಕವಾಗಿ ತಡೆದ! ಆಹಾ! ಅವಳು ಬಾವಿ ಬಿದ್ದರೆ ಎಷ್ಟು ಚೆನ್ನು! ಆದರೆ ಆ ಚಾಂಡಾಲಿ ಇಲ್ಲಿಂದ ಕದಲುವುದಿಲ್ಲ. ಏನು ಮಾಡಲಿ? ಎಂದು ಒಳಕ್ಕೆ ಹೋದ. ಮನೆಯ ಹಸುವು ಸಾಕಷ್ಟು ಬೇರೆಯವರ ಗದ್ದೆ ಮೇಯ್ದು ಸಾಕಷ್ಟು ಸಗಣಿ ಹಾಕಿದ್ದಿತು. ಅದನ್ನು ಒಂದು ಬಕೆಟ್ಟಿನಲ್ಲಿ ಕಲಿಸಿ ಬಡ ಗಂಗೆಯಮೇಲೆ ಎರಚಿದ. ಅದರ ಹನಿಗಳು ನೋಡಬಂದ ಜನಗಳಿಗೂ ಸಿಡಿದುವು. ಗಂಗೆಯ ದೇಹ ಸಗಣಿಯ ನೀರಿನಿಂದ ಪೂರ್ತಿ ತೊಯ್ದುಹೋಯಿತು. ಜನರು ಓಡಿಹೋದರು. "ಇದು ಮುನಶೀ ರಾಮಸೇವಕರ ಮನೆಯು. ಇಲ್ಲಿ ಇದೇ ಬಗೆಯ ಶಿಷ್ಟಾಚಾರ. ಓಡಿರಿ, ಇಲ್ಲವಾದರೆ ನಿಮ್ಮ ಪಾಡು ಚೆನ್ನಾಗಲಿಕ್ಕಿಲ್ಲ" ಎಂದು ಜನಗಳು ಎನ್ನತೊಡಗಿದರು. ಜನರ ಗುಂಪು ಚದರಿತು, ರಾಮಸೇವಕರ ಮಗ ರಾಮುಗುಲಾಮ ಮನೆಯೊಳಗೆ ಹೋಗಿ ನಕ್ಕೇನಕ್ಕ. ಜನಗಳನ್ನು ಚದರಿಸುವ ಮಗನ ಈ ಉಪಾಯವನ್ನು ನೋಡಿ ತಮ್ಮ ಸುಶೀಲ ಮಗನ ಬೆನ್ನು ಚಪ್ಪರಿಸಿದರು ರಾಮಸೇವಕರು. ಜನರು ಚದರಿದರೂ ಗಂಗೆಯು ಕುಳಿತ ಜಾಗ ಬಿಟ್ಟೇಳಲಿಲ್ಲ.

ಮಧ್ಯಾಹ್ನವಾಯಿತು. ಗಂಗೆಯು ಏನನೂ ಉಣಲಿಲ್ಲ. ಸಾಯಂಕಾಲವಾಯಿತು. ಎಷ್ಟು ಹೇಳಿದರೂ ಆಹಾರವನ್ನು ಸ್ಪರ್ಶಿಸಲಿಲ್ಲ. ಊರಿನ ಯಜಮಾನನೂ ಪರಿಪರಿಯಿಂದ ಹೇಳಿದ. ರಾಮಸೇವಕರೂ ಕೈಜೋಡಿಸಿ ಬಿನ್ನವಿಸಿಕೊಂಡರು. ದೇವಿಯು ಪ್ರಸನ್ನಳಾಗಲಿಲ್ಲ. ಮುನಶೀಯವರು ಮನೆಯೊಳಗೆ ಹೋದರು. ಗಂಗೆಯು ನೀರು ಆಹಾರವಿಲ್ಲದೆ ರಾತ್ರಿಯನ್ನು ಅಲ್ಲಿಯೆ ಕಳೆದಳು. ರಾಮಸೇವಕರೂ ಇಡೀ ರಾತ್ರಿಯನ್ನು ತಮ್ಮ ಹೆಂಡತಿಯೊಡನೆ ಎಚ್ಚತ್ತೇ ಕಳೆದರು. ಇವೊತ್ತು ಗಂಗೆಯ ಗರ್ಜನೆ, ನಗು ಕಡಮೆ ಕೇಳಿಸುತ್ತಿದ್ದಿತು. ಪೀಡೆ ಹೋಯಿತೆಂದು ಮನೆಯವರು ತಿಳಿದುಕೊಂಡರು. ಆದರೆ ಮುಂಜಾನೆ ಬಾಗಿಲು ತೆರೆದು ನೋಡಲು ಅವಳು ಅಲ್ಲಿಯೆ ಅಸ್ತವ್ಯಸ್ತವಾಗಿ ನಿಶ್ಚೇತನಳಾಗಿ ಬಿದ್ದಿದ್ದಳು. ಮುಖದ ಮೇಲೆ ನೊಣಗಳು ಮುಕುರಿದ್ದುವು. ಆಕೆಯ ಪ್ರಾಣಪಕ್ಷಿ ಹಾರಿಹೋಗಿದ್ದಿತು. ರಾಮಸೇವಕರ ಮನೆಯ ಎದುರಿನಲ್ಲಿ ಜೀವತ್ಯಾಗ ಮಾಡಲು ಬಂದಿದ್ದಳು. ತನ್ನ ಜೀವನೋಪಾಯದ ಹಣವನ್ನು ಹೀರಿದವನಿಗೇ ತನ್ನ ಜೀವವನ್ನೂ ಅರ್ಪಿಸಿದಳು. ತನ್ನ ಶರೀರದ ಮಣ್ಣನ್ನು ಕೂಡ ಅವರಿಗೆ ಕಾಣಿಕೆಯಾಗಿ ಕೊಟ್ಟಳು. ಮಾನವನಿಗೆ ಹಣದ ಮೇಲೆಷ್ಟು ಪ್ರೀತಿ! ಹಣವು ಪ್ರಾಣಕ್ಕಿಂತಲೂ ಪ್ರಿಯ, ವೃದ್ಧಾಪ್ಯದಲ್ಲಿ ಇನ್ನಿಷ್ಟು ಪ್ರಿಯ. ಸಾಲ ತೀರಿಸುವ ದಿನಗಳು ಬಂದಂತೆ ಅದರ ಬಡ್ಡಿಯ ಬಾಲವು ಹನುಮನ ಬಾಲದಂತೆ ಬೆಳೆಯುತ್ತಲೇ ಹೋಗುವುದು.

ಇದರಿಂದ ಊರಲ್ಲಿ ಎಷ್ಟು ಗಲಭೆಯುಂಟಾಯಿತು, ರಾಮಸೇವಕರ ಅಪಮಾನವೆಷ್ಟು ಆಯಿತೆಂಬುದನ್ನು ಇಲ್ಲಿ ಹೇಳುವುದು ವ್ಯರ್ಥ. ಈ ಸಣ್ಣ ಸಂಗತಿಯಿಂದ ಎಷ್ಟು ಗಡಿಬಿಡಿಯಾಗಬೇಕಾಗಿದ್ದಿತೊ ಅದಕ್ಕೂ ಹೆಚ್ಚಾಯಿತು. ರಾಮಸೇವಕರ ಅಪಮಾನವೂ ಹೆಚ್ಚಾಗಿ ಆಯಿತು. ಇದರಿಂದ ಅವರಲ್ಲಿದ್ದ ನೀರೆಲ್ಲಾ ಹರಿದುಹೋಯಿತು ಊರಲ್ಲಿನ ಹೊಲೆಯರು ಕೂಡ ಅವರನ್ನು ಮುಟ್ಟುವುದಿಲ್ಲ, ಅವರ ಮನೆಯವರಿಂದ ನೀರು ಹಾಕಿಸಿಕೊಳ್ಳುವುದಿಲ್ಲ. ಹಸುವು ಸತ್ತರೂ ಅವರ ಮನೆಯಲ್ಲಿ ಯಾರೂ ಪ್ರವೇಶಿ

CC-0. Jangamwadi Math Collection. Digitized by eGangotri

ಸುವುದಿಲ್ಲ. ಯಾರೂ ಹಜಾಮತಿ ಮಾಡುವುದಿಲ್ಲ. ಅವರ ಮನೆಗೆ ಯಾರೂ ನೀರು ಹಾಕುವುದಿಲ್ಲ. ಇದು ಗೋಹತ್ಯೆಗೆ ಪ್ರಾಯಶ್ಚಿತ್ತ, ದಂಡ. ಆದರೆ ಬ್ರಹ್ಮಹತ್ಯ ಮಾಡಿದವನಿಗೆ ಇದಕ್ಕಿಂತ ಕಠಿಣವಾದ ದಂಡವಿದೆ, ಅಪಮಾನವಿದೆಯೆಂದು ಗಂಗೆಗೆ ಗೊತ್ತಿದ್ದಿತು. ಆದುದರಿಂದಲೇ ಅವಳು ರಾಮ ಸೇವಕರ ಮನೆಯ ಮುಂದೆ ಸತ್ತಳು. ಜೀವಿಸಿದ್ದರೆ ಏನನೂ ಮಾಡಲಾಗುವುದಿಲ್ಲ, ಸತ್ತರೆ ಮಾಡಲಾಗುತ್ತದೆಂದು ಅವಳು ತಿಳಿದಿದ್ದಳು. ಕಾಕಟಳ್ಳು ಸುಟ್ಟು ಬೂದಿಯಾದರೆ ಸಾಧುಗಳು ಅದನ್ನು ಭಾಲಕ್ಕೆ ಲೇಪಿಸಿಕೊಳ್ಳುತ್ತಾರೆ. ಆದರೆ ಕಲ್ಲಿನ ತುಂಡು ಬೆಂಕಿಯಲ್ಲಿ ಕಾಯ್ದರೆ ಬೆಂಕಿಗಿಂತ ಪ್ರಖರ ವಾಗಿ ಸಂಹಾರಕವಾಗುತ್ತದೆ.

೫

ಮುನಶೀ ರಾಮಸೇವಕರು ಕಾಯಿದೆ ಬಲ್ಲವರು. ಕಾಯಿದೆಯು ಅವರ ಮೇಲೆ ಯಾವ ಅಪರಾಧವನ್ನೂ ಹೊರಿಸಿರ ಲಿಲ್ಲ. ಗಂಗೆಯೂ ಕಾಯಿದೆಯ ಯಾವ ಕಲಮಿನನ್ವಯವೂ ಸತ್ತಿರಲಿಲ್ಲ. ಇಂಡಿಯನ್ ಪಿನಲ್ ಕೋಡಿನಲ್ಲಿ ಯಾವ ಇಂಥ ಉದಾಹರಣೆಯೂ ಸಿಕ್ಕುತ್ತಿರಲಿಲ್ಲ. ಅದಕ್ಕೋಸ್ಕರ ಜನಗಳು ಅವರಿಗೆ ಬಹಿಷ್ಕಾರ ಹಾಕಬೇಕೆಂದು ಯೋಚಿಸುತ್ತಿದ್ದರೆ ಅದು ಅವರ ತಪ್ಪು. ಅವರ ಮನೆಗೆ ಯಾರೂ ನೀರು ಹಾಕದಿದ್ದರೆ ಅವರು ತಾವೇ ನೀರು ತುಂಬಿಕೊಳ್ಳುವರು; ತಮ್ಮ ಮನೆಗೆಲಸ ತಾವು ಮಾಡಿಕೊಳ್ಳಲು ನಾಚಿಕೆಯೆ! ಹಜಾಮತಿ ಮಾಡದಿದ್ದರೆ ಇಲ್ಲ; ಯಾರು ಮಾಡಿಸಿಕೊಳ್ಳ ಬೇಕೆನ್ನುತ್ತಾರೆ? ಗಂಡುಸರಿಗೆ ಉದ್ದನ್ನ ಗಡ್ಡಮೀಸೆಗಳು ಅಲಂಕಾರಗಳು. ಆದರೂ ಗಡ್ಡ ಬೋಳಿಸಿಕೊಳ್ಳಬೇಕೆಂ ದರೆ ಸೇಫ್ಟೀ ರೇಜರ್ ಸಿಕ್ಕೇ ಸಿಕ್ಕುತ್ತದೆ. ಆದರಿಂದ ತಾವೇ ಕ್ಷೌರಮಾಡಿಕೊಳ್ಳಬಹುದು. ಅಗಸರು ಅವರ ಬಟ್ಟೆಯೊಗೆಯದಿದ್ದರೆ ಯಾವ ಚಿಂತೆಯೂ ಇಲ್ಲ; ಪ್ರತಿಯೊಂದು ಅಂಗಡಿಯಲ್ಲಿ ಸೋಪ್ ಸಿಕ್ಕೇ ಸಿಗುವುದು. ನಮ್ಮಷ್ಟು ಸ್ವಚ್ಛವಾಗಿ ಅಗಸನೇನು ಬಟ್ಟೆ ಒಗೆಯಬಲ್ಲ? ಸ್ವತಃ ಕೆಲವು ದಿವಸ ಬಟ್ಟೆ ಧರಿಸಿ, ಬೇರೆಯವರಿಗೆ ಬಾಡಿಗೆಗೆ ಧರಿಸಲು ಕೊಟ್ಟು, ಕೊನೆಗೆ ಕಲ್ಲಿನ ಮೇಲೆ ಬಡಿದು ಬಡಿದು ಒಗೆದು ತಂದರೆ. ಬಟ್ಟೆಗಳು ಬಾಳಿಕೆ ಬರುವುದೇ ಇಲ್ಲ. ನಮ್ಮ ತಾತ ಐದು ವರ್ಷಕ್ಕೊಂದು ಸಲ ಬಟ್ಟೆ ಹೊಲಿಸಿಕೊಳ್ಳುತ್ತಿದ್ದ. ಈ ರೀತಿಯಾಗಿ ರಾಮಸೇವಕರೂ ನಾಗೂದೇವಿಯೂ ತಮ್ಮಷ್ಟಕ್ಕೆ ತಾವೇ ಬುದ್ಧಿವಾದ ಹೇಳಿಕೊಂಡು ಸಮಾಧಾನಪಟ್ಟುಕೊಳ್ಳುತ್ತಿದ್ದರು. ಆದರೆ ಸಾಯಂಕಾಲವಾದೊಡನೆ ಅವರ ಈ ತರ್ಕಗಳೆಲ್ಲ ಹಾರಿ ಹೋದುವು. ಗಾಳಿಯಲ್ಲಿ ಕಟ್ಟುತ್ತಿದ್ದ ಗೋಪುರಗಳೆಲ್ಲವೂ ಉರುಳಿದುವು.

ಈಗ ಅವರ ಮನಸ್ಸನ್ನು ಅಂಜಿಕೆಯು ಆವರಿಸಿತು. ರಾತ್ರಿಯು ಆದ ಆದಹಾಗೆ ಹೆದರಿಕೆಯೂ ಹೆಚ್ಚಾಗತೊಡಗಿತು. ಹೊರಗಿನ ಬಾಗಿಲನ್ನು ಮುಚ್ಚಲು ಮರೆತುಬಿಟ್ಟರು ಹೆದರಿಕೆಯಿಂದ ಪುನಃ ಮುಚ್ಚಲು ಬರಲು ಅವರಿಗೆ ಧೈರ್ಯ ಸಾಲಲಿಲ್ಲ. ಕೊನೆಗೆ ನಾಗೂದೇವಿ ಕೈಯಲ್ಲಿ ದೀಪ ತೆಗೆದುಕೊಂಡು ಹೊರಟಳು. ಜೊತೆಗೆ ಮಗ, ಗಂಡ ಹೊರಟರು. ರಾಮುಗುಲಾಮು ಕೈಯಲ್ಲಿ ಕೊಡಲಿ, ರಾಮಸೇವಕರು ಬಡಿಗೆ ತಂದಿದ್ದರು. ರಾಮಸೇವಕರು ಹೆಂಡತಿಗೆ ದೊಡ್ಡದನಿಯಿಂದ ಹೆದರುವಿಯೇಕೆ? ಅವಳೇನು ಇಲ್ಲಿ ಕುಳಿತಿರುವಳೇನು? ಎಂದು ಹೇಳುತ್ತ ಧೈರ್ಯದಿಂದ ಬಾಗಿಲು ಹಾಕಿದರು. ಈ ಮಹತ್ತರವಾದ ಸಾಹಸದಲ್ಲಿ ಯಶ ಪಡೆದುಕೊಂಡು ಮೂವರೂ ಅಡಿಗೆಮನೆಗೆ ನಡೆದರು. ಅಡಿಗೆಗೆ ಆರಂಭವಾಯಿತು

ಆದರೆ ಗಂಗೆಯು ಅವರ ಕಣ್ಣು ಮುಂದಿನಿಂದ ಕದಲಿರಲಿಲ್ಲ. ತಮ್ಮ ನೆರಳು ನೋಡಿ ಗಂಗೆಯೆಂದು ಬೆದರುತ್ತಿದ್ದರು. ಕತ್ತಲೆಯ ಮೂಲೆಯಲ್ಲಿ ಗಂಗೆಯು ಕುಳಿತಂತೆ ಕಾಣುತ್ತಿತ್ತು—ಅದೇ ಎಲುಬಿನ ಹಂದರ, ಅದೇ ಕೆದರಿದ ಕೂದಲು, ಅದೇ ಹುಚ್ಚುತನ, ಅವೇ ಭಯಾನಕ ಕಣ್ಣುಗಳು, ಅವೇ ಗಂಗೆಯ ಅಂಗ-ಪ್ರತ್ಯಂಗಗಳು. ಒಂದು ಮಣ್ಣಿನ ಕುಡಿಕೆ, ಹರಿದ ಬಟ್ಟೆಯ ಮೂಟೆಗಳು ಮೂಲೆಯಲ್ಲಿದ್ದುವು. ಒಂದು ಇಲಿಗೆ ಬಹಳ ಹಸಿವೆಯಾಯಿತು. ಅದು ಆಹಾರ ಹುಡುಕುವುದಕ್ಕಾಗಿ ಮಡಿಕೆಯಲ್ಲಿ ಹೊಕ್ಕು ಅಲ್ಲಿಂದ ಹರಿದ ಬಟ್ಟೆಯ ಮೂಟೆಯ ಮೇಲೆ ಬಿದ್ದಿತು. ಬಟ್ಟೆಗಳನ್ನು ಅತ್ತಿತ್ತ ಹರವಿತು. ಇದರಿಂದ ಕೊಂಚ ಶಬ್ದವಾಯಿತು. ಹರಿದ ಬಟ್ಟೆಯ ಚೂರುಗಳು ಗಂಗೆಯ ಕಾಲಿನಂತೆ ಕಂಡವು. ನಾಗೂ ಅದನ್ನು ನೋಡಿ ಚೀ[illegible] ದಳು. ಮುನಶೀಯವರು ಭಯದಿಂದ ಬಾಗಿಲ ಕಡೆ[illegible] ಸಾಗಿದರು. ಅವರ ಮಗ ಅವರ ಕಾಲು ಹಿಡಿದುಕೊಂ[illegible] ಇಷ್ಟರಲ್ಲಿ ಇಲಿಯು ಗಂಟಿನಿಂದ ಹೊರಗೆ ಬಂದಿತು. ಅದನ್ನು ನೋಡಿದ ಮೇಲೆ ಅವರ ಜೀವಗಳು ಹಿಂತಿರುಗಿದು[illegible] ಮುನಶೀ ರಾಮಸೇವಕರು ಮಡಿಕೆಗಳ ಕಡೆಗೆ ಸಾಗಿದ[illegible] ಆಗ ಅವರ ಹೆಂಡತಿ ನಾಗೂದೇವಿ "ಇರಲಿ ಬಿಡಿ, ಕಂಡಿತ್ತು ನಿಮ್ಮ ಗಂಡುಸುತನ ಈವಾಗ!" ಎಂದಳು.

ತಮ್ಮ ಪ್ರಿಯಪತ್ನಿಯ ಈ ನುಡಿಗಳನ್ನು ಕೇಳಿ ಅವ[illegible] ಸ್ವಲ್ಪ ಕೋಪ ಬಂದಿತು. ಅವರು ಎಂದರು "ನಾನು [illegible]

CC-0. Jangamwadi Math Collection. Digitized by eGangotri

ದೇನೆಂದು ನೀನೇನು ತಿಳಿದುಕೊಂಡೆಯಾ? ಇದರಲ್ಲಿ ಹೆದರುವುದೇನಿದೆ? ಗಂಗೆಯೇನು ಕುಳಿತಿರುವಳೆ ಇಲ್ಲಿ? ನಿನ್ನೆ ರಾತ್ರಿ ನಾನು ಬಾಗಿಲು ಹಾಕಿ ಬರಲಿಲ್ಲವೆ?"

ಹೀಗೆಯೆ ಅವರು ಮಾತನಾಡುತ್ತಿದ್ದರು. ಮನಸ್ಸಿಗೆ ಸಮಾಧಾನ ಹಚ್ಚಿಕೊಳ್ಳುತ್ತಿದ್ದರು. ನಾಗೂ ರಾಜಾ ಹರದೌಲ, ರಾಣೀ ಸಾರಂಧಾ ಮೊದಲಾದವರ ಕತೆಗಳನ್ನು ಹೇಳಿದಳು. ಮುನಶೀಯವರು ಫೌಜದಾರೀ ದಾವೆಗಳನ್ನು ವರ್ಣಿಸಿದರು. ಇಷ್ಟಾದರೂ ಗಂಗೆಯ ಮೂರ್ತಿ ಅವರ ಎದುರಿನಿಂದ ಮಾಯವಾಗಲಿಲ್ಲ. ಸ್ವಲ್ಪ ಶಬ್ದವಾದೊಡನೆ ಮೂವರೂ ಬೆಚ್ಚಿಬೀಳುತ್ತಿದ್ದರು. ಇತ್ತ ಎಲೆಗಳಲ್ಲಿ ಶಬ್ದವಾದರೆ ಅತ್ತ ಮೂವರ ಮೈಗಳು ನವಿರುತ್ತಿದ್ದುವು. ಆಗಾಗ್ಗೆ ಭೂಮಿಯಿಂದ "ನಿನ್ನ ರಕ್ತ ಕುಡಿಯುತ್ತೇನೆ" ಎಂಬ ವಾಕ್ಯವು ಎದ್ದು ಬಂದು ಕೇಳಿಸಿದಂತಾಗುತ್ತಿತ್ತು.

ನಡುರಾತ್ರಿ. ನಾಗೂ ಬೆಚ್ಚಿದಳು. ಅವಳು ಗರ್ಭವತಿ. ಕೆಂಡದಂಥ ಕಣ್ದೆರೆದು, ಹದನವಾದ ತನ್ನ ಹಲ್ಲುಗಳನ್ನು ಕಿರಿದು ಗಂಗೆಯು ತನ್ನ ಎದೆಯ ಮೇಲೆ ಕುಳಿತಂತೆ ಭಾಸವಾಯಿತು. ನಾಗೂ ಚೀರಿದಳು. ಹುಚ್ಚಳಂತೆದ್ದು ಅಂಗಳಕ್ಕೆ ಓಡಿದಳು. ಒಮ್ಮೆಗೆ ಕಣ್ಣು ಕತ್ತಲುಗೂಡಿದುವು. ಥಮ್ಮೆಂದು ಭೂಮಿಯ ಮೇಲೆ ಬಿದ್ದುಬಿಟ್ಟಳು. ಮೈಯಿಂದ ಬೆವರು ಕೋಡಿಟ್ಟು ಹರಿಯಿತು. ಮುನಶೀಯವರು ಈ ಚೀರಾಟ ಕೇಳಿ ಬೆಚ್ಚಿದರು. ಹೆದರಿಕೆಯಿಂದ ಕಣ್ದೆರೆಯದೆ ಕುರುಡರಂತೆ ಕೈಯಾಡಿಸುತ್ತ ಬಾಗಿಲು ಹುಡುಕುತ್ತ ನಡೆದರು. ಅದೆಷ್ಟೊ ಹೊತ್ತಿನ ಮೇಲೆ ಬಾಗಿಲು ಸಿಕ್ಕಿತು. ಅಂಗಳಕ್ಕೆ ಬಂದರು! ನಾಗೂ ಭೂಮಿಯ ಮೇಲೆ ಬಿದ್ದು ಕೈಕಾಲು ಅಪ್ಪಳಿಸುತ್ತಿದ್ದಳು. ಅವಳನ್ನೆತ್ತಿಕೊಂಡು ಒಳಕ್ಕೆ ಬಂದರು. ಆದರವಳು ಮುಚ್ಚಿದ ಕಣ್ಣುಗಳನ್ನು ತೆರೆಯಲೇ ಇಲ್ಲ. ಬೆಳಗಿನ ಹೊತ್ತಿಗೆ ಜ್ವರ ಬಂದುವು. ಬಡಬಡಿಕೆಗೆ ಪ್ರಾರಂಭವಾಯಿತು. ಶರೀರವೆಲ್ಲ ಅತ್ಯಂತ ಕಾಯ್ದು ಹೋಯಿತು. ಸಾಯಂಕಾಲದ ಹೊತ್ತಿಗೆ ಸನ್ನಿಪಾತವಾಯಿತು. ನಡುರಾತ್ರಿಯ ಹೊತ್ತಿಗೆ ನಾಗೂ ಎಲ್ಲರೂ ಮಲಗಿರುವಾಗ ಈ ಸಂಸಾರ ಬಿಟ್ಟು ಹೊರಟು ಹೋದಳು. ಗಂಗೆಯು ಅಂಜಿಕೆಯೆ ಅವಳ ಜೀವ ಹೀರಿತು. ಜೀವಿಸಿರುವ ವರೆಗೆ ಗಂಗೆಯು ನಾಗೂಗೆ ಹೆದರುತ್ತಿದ್ದಳು. ಹುಚ್ಚು ಹಿಡಿದ ಮೇಲೂ ನಾಗೂನೊಡನೆ ಆಕೆ ಜಗಳಾಡಿದ್ದಿಲ್ಲ. ಆದರೆ ಇವೊತ್ತು ತನ್ನ ಜೀವ ಕೊಟ್ಟು ನಾಗೂನ ಜೀವ ತೆಗೆದುಕೊಂಡಳು. ಅಂಜಿಕೆಯಲ್ಲಿ ನಂಜಿದೆ. ಭಯದಲ್ಲಿ ಭಯಾನಕವಾದ ಶಕ್ತಿಯಿದೆ. ಮನುಷ್ಯ ಗಾಳಿಯಲ್ಲಿ ಗೋಪುರ ಕಟ್ಟಲಾರ, ಆದರೆ ಇದು ಗಾಳಿಯಲ್ಲಿಯೆ ತನ್ನ ದೊಡ್ಡ ಸಂಸಾರವನ್ನು ನಿರ್ಮಿಸಿದೆ.

ರಾತ್ರಿಯು ಕಳೆಯಿತು. ಹೊತ್ತು ಏರಹತ್ತಿತು. ಆದರೆ ಯಾರೂ ನಾಗೂನ ಶವ ಹೊರಲು ಬರಲಿಲ್ಲ. ಮುನಶೀಯವರು ಪ್ರತಿಯೊಬ್ಬರ ಮನೆಗೆ ಹೋಗಿ ಕರೆದರು. ಯಾರೂ ಬರಲಿಲ್ಲ. ಕೊಲೆಗಡಕರ ಮನೆಗೆ ಯಾರು ಹೋಗುತ್ತಾರೆ? ಮುನಶೀಯವರ ಕಾಯಿದೆಯ ಪಾಂಡಿತ್ಯ, ಲೆಕ್ಕಣಿಕೆಯ ಜೋರು ಇಲ್ಲಿ ನಡೆಯಲಿಲ್ಲ. ಅವರು ಸೋತು ಮನೆಗೆ ಬಂದರು. ಅವರಿಗೆ ಮನೆಯಲ್ಲಿ ಕತ್ತಲೆಯ ವಿನಾ ಏನೂ ಕಾಣಿಸುತ್ತಿರಲಿಲ್ಲ. ಮನೆಯಲ್ಲಿ ಮುಂದುವರಿಯಲು ಅವರಿಗೆ ಧೈರ್ಯವಾಗಲಿಲ್ಲ. ಹೊರಗೆ ನಿಲ್ಲಲಿಕ್ಕೂ ಭಯ. ಹೊರಗೆ ಗಂಗೆಯ ಭಯ, ಒಳಗೆ ನಾಗೂನ ಹೆಣ. ಕೊನೆಗೆ ವಾಯುಸ್ತುತಿ, ರಾಮರಕ್ಷೆ ಪಠನ ಮಾಡುತ್ತ ಮನೆಯೊಳಕ್ಕೆ ಹೋದರು. ಅವರ ಮನದಲ್ಲಿ ಯಾವ ಭಾವನೆಗಳು ಏಳುತ್ತಿದ್ದುವೊ! ಮನೆಯೊಳಗೆ ಹೆಣವಿದೆ. ಮುಂದಾರೂ ಇಲ್ಲ, ಹಿಂದಾರೂ ಇಲ್ಲ. ಮುನಶೀಯವರಿಗೆ ವಯಸ್ಸೇನೂ ಆಗಿರಲಿಲ್ಲ. ಎರಡನೆಯ ಮದುವೆಯಾಗಬಹುದಾಗಿತ್ತು. ಮದುವೆಯಾಗಿ ಐದು ವರ್ಷ ಮಾತ್ರ ಕಳೆದಿದ್ದುವು. ಆದರೆ ಇಂತಹ ಸುಯೋಗ್ಯ ಸವಿಮಾತಿನ ಹೆಂಡತಿ ಸಿಕ್ಕುವುದು ದುರ್ಲಭ. ಬಹು ದುಃಖ, ಬಹು ದುಃಖ. ಮನೆಯ ವೆಚ್ಚದ ಲೆಕ್ಕ ಇಟ್ಟು ಸಂಸಾರವನ್ನು ಸುಸೂತ್ರವಾಗಿ ಸಾಗಿಸಿಕೊಂಡು ಹೋಗುತ್ತಿದ್ದ ಮುದ್ದಿನ ಮಡದಿ, ಗೃಹಲಕ್ಷ್ಮಿ ನಾಗೂ ತೀರಿದಳು. ಇದರಿಂದ ಮುನಶೀಯವರಿಗೆ ಬಹಳ ಹಾನಿಯಾಯಿತು. ಇದನ್ನು ತುಂಬಿಕೊಳ್ಳುವುದು ಕಠಿನ. ಮರುದಿನ ಎಕ್ಕಾಗಾಡಿಯಲ್ಲಿ ನಾಗೂನ ಹೆಣ ಹೇರಿಕೊಂಡು ಗಂಗೆಯ ಕಡೆ ನಡೆದರು.

ಶವದ ಕೂಡ ಇಬ್ಬರೇ ಇಬ್ಬರು; ರಾಮಸೇವಕರು, ರಾಮಸೇವಕರ ಮಗ ರಾಮಗುಲಾಮ! ಇವರ ಹೊರತಾಗಿ ಯಾರೂ ಇರಲಿಲ್ಲ.

ಗಂಗೆಯು ನಾಗೂನ ಅಸು ಹೀರಿದ ಬಳಿಕ ರಾಮಸೇವಕರ ಬೆನ್ನು ಬಿದ್ದಳು. ಶನಿಯಂತೆ ಅವರನ್ನು ಬೆನ್ನಟ್ಟಿದಳು. ಅವರ ಮನಸ್ಸಿನಲ್ಲಿ ಯಾವಾಗಲೂ ತನ್ನ ಮೂರ್ತಿಯನ್ನು ಮೂಡಿಸುತ್ತಿದ್ದಳು. ಮುನಶೀಯವರು ಎಷ್ಟು ಪ್ರಯತ್ನಿಸಿದರೂ ಅವರ ಆ ಮನ ಗಂಗೆಯ ಕಡೆಗೆ ಹೋಗದೆ ಇರುತ್ತಿರಲಿಲ್ಲ. ಜನಗಳನ್ನು ನೋಡಿ ಮನರಂಜನೆ ಮಾಡಿಕೊಳ್ಳಬೇಕೆಂದರೆ ಜನಗಳು ಇವರ ಮನೆಯ ಮುಂದೆ ಹಾಯ್ದು ಹೋಗುತ್ತಿರಲಿಲ್ಲ. ಪಾಪ, ತಾನೇ ನೀರು ತುಂಬಿ

CC-0. Jangamwadi Math Collection. Digitized by eGangotri

ಕೊಳ್ಳುತ್ತಿದ್ದರು, ಅಡುಗೆ ಮಾಡಿಕೊಳ್ಳುತ್ತಿದ್ದರು, ಪಾತ್ರೆ ತಿಕ್ಕಿಕೊಳ್ಳುತ್ತಿದ್ದರು. ವಿಚಾರ-ಕ್ರೋಧ; ಚಿಂತೆ-ಭಯ. ಇಷ್ಟು ಶತ್ರುಗಳ ಎದುರಿನಲ್ಲಿ ಒಂದು ಮಿದುಳು ಎಲ್ಲಿಯ ವರೆಗೆ ತಾಳಬಲ್ಲುದು ?

ಕತ್ತಲೆಕೋಣೆಯ ಕೈದಿಯಂತೆ ಹಾಗೂ ಹೀಗೂ ಅವರು ಹತ್ತು ಹನ್ನೆರಡು ದಿನಗಳನ್ನು ಕಳೆದರು. ಹದಿಮೂರನೆಯ ದಿನ ಮನೆಯಲ್ಲಿಯೆ ಇರಬೇಕಾಗಿತ್ತು. ಹದಿನಾಲ್ಕನೆಯ ದಿನ ಒಗೆದ ಬಟ್ಟೆಗಳನ್ನು ಧರಿಸಿ ಕಾಗದಪತ್ರಗಳನ್ನು ತೆಗೆದುಕೊಂಡು ಮುನಶೀ ರಾಮಸೇವಕರು ಕಚೇರಿಗೆ ಹೊರಟರು. ಇವೊತ್ತು ಸ್ವಲ್ಪ ಅರಳಿತ್ತು ಅವರ ಮುಖ. “ಕಚೇರಿಗೆ ಹೋಗುತ್ತಲೆ ಪಕ್ಷಗಾರರು ನನ್ನನ್ನು ಮುತ್ತುವರು, ದುಃಖಪ್ರದರ್ಶನ ಮಾಡುವರು, ನಾನು ಕಂಬನಿಗಳನ್ನು ದುರಿಸುವೆ, ಅರ್ಜಿಗಳನ್ನು ಬರೆಯುವೆ, ಕೈ ಬೆಚ್ಚಗಾಗುವುದು—ಹಣ ಸಿಕ್ಕುವುದು, ರಾತ್ರಿ ಸುರಾಪಾನ ಮಾಡಲು ಅನುವಾಗುವುದು” ಎಂದು ವಿಚಾರಮಗ್ನರಾಗಿ ಮುನಶೀಯವರು ಕಚೇರಿಯನ್ನು ಸೇರಿದರು.

ಅಲ್ಲಿ ಅರ್ಜಿಗಳ ಹೊಳೆ, ಪಕ್ಷಗಾರರ ಮುತ್ತಿಗೆಯ ಬದಲು ನಿರಾಶೆಯೆ ಗೋಚರಿಸಿತು. ತಮ್ಮ ಹಳೆಯ ಸ್ಥಾನದಲ್ಲಿಯೆ ಕುಳಿತು ಎರಡು ಗಂಟೆಗಳನ್ನು ಕಳೆದರು. ಯಾವನೊಬ್ಬನೂ ಬಳಿ ಸುಳಿಯಲಿಲ್ಲ. ಒಬ್ಬನೂ ಅವರ ಕ್ಷೇಮ ಸಮಾಚಾರ ವಿಚಾರಿಸಲಿಲ್ಲ. ಬಹು ಪರಿಚಯದ ವಕೀಲರೂ ಅವರಿಗೆ ಮುಖ ತೋರಿಸಲಿಲ್ಲ. ಯಾವ ರಮಜಾನನಿಗೆ ಏನನೂ ಬರೆಯಲು ಬರುತ್ತಿರಲಿಲ್ಲವೊ, ಯಾವನನ್ನು ಮುನಶೀಯವರು ಹೀಯಾಳಿಸುತ್ತಿದ್ದರೊ ಅವನಿಂದು ಪಕ್ಷಗಾರರ ಮಧ್ಯದಲ್ಲಿ ಗೋಪಿಯರಲ್ಲಿ ಕೃಷ್ಣನಂತೆ ಒಪ್ಪುತ್ತಿದ್ದ. ಭಾಪು ಭಾಗ್ಯವೆ! ಇಡೀ ದಿನ ಕಚೇರಿಯಲ್ಲಿ ನೊಣ ಹಾರಿಸಿದ ಮೇಲೆ ಮುನಶೀಯವರು ಮನೆಗೆ ಹೊರಟರು. ನಿರಾಶೆಯಿಂದ ಚಿಂತೆಯಿಂದ ಬೆಂದು ಬರುತ್ತಿರುವಾಗ ಪುನಃ ಮೆಲ್ಲನೆ ಗಂಗೆಯ ಮೂರ್ತಿ ಅವರ ಮನದಲ್ಲಿ ಮೂಡುತೊಡಗಿತು. ಬಾಗಿಲು ತೆರೆದ ಕೂಡಲೆ ರಾಮಗುಲಾಮನು ಸಾಕಿದ ಎರಡು ನಾಯಿಗಳು ಬೊಗಳುತ್ತ ಮೈಮೇಲೆ ಬಂದವು. ಮುನಶೀಯವರು ಹಾಹಾರಿ, ಚೀರಿ ಭೂಮಿಯ ಮೇಲೆ ಬಿದ್ದುಬಿಟ್ಟರು.

ಮನುಷ್ಯನ ಮನಸ್ಸು-ಮಿದುಳಿನ ಮೇಲೆ ಬೀಳುವ ಭಯದ ಪ್ರಭಾವದಷ್ಟು ಮತ್ತಾವ ಶಕ್ತಿಯದೂ ಬೀಳುವುದಿಲ್ಲ. ಪ್ರೇಮ, ಚಿಂತೆ, ಮೊದಲಾದುವು ಗಾಳಿಯ ಮಿದುವಾದ ಏಟುಗಳು; ಭಯವು ಪ್ರಚಂಡವಾದ ಬಿರುಗಾಳಿಯ ಹೊಯ್ಲು. ಇದಾದ ಬಳಿಕ ಮುನಶೀಯವರಿಗೆ ಏನಾಯಿತು ಗೊತ್ತಿಲ್ಲ. ಆದರೆ ದಿನಾಲು ಅವರು ಕಚೇರಿಗೆ ಹೋಗಿಬರುವುದನ್ನು ಜನಗಳು ನೋಡಿದ್ದರು. ಕಚೇರಿಗೆ ಹೋಗುವುದು ಅವರ ಕರ್ತವ್ಯವಾಗಿದ್ದಿತು. ಯಾವ ಲಾಭವಾಗದಿದ್ದರೂ ಸಾಲಗಾರರ ಕಾಟದಿಂದ ತಪ್ಪಿಸಿಕೊಳ್ಳಲು ಇದೇ ಆಧಾರವಾಗಿದ್ದಿತು. ಹಾಗೂ ಹೀಗೂ ಕೆಲವು ದಿನಗಳನ್ನು ಕಳೆದ ಮೇಲೆ ಅವರು ಗೋಚರವಾಗಲಿಲ್ಲ. ಬದ್ರೀನಾಥಕ್ಕೆ ಹೊರಟು ಹೋದರು. ಒಂದು ದಿನ ಒಬ್ಬ ಸಾಧು ಊರಿಗೆ ಬಂದ. ಶರೀರದ ಮೇಲೆ ಭಸ್ಮ, ಉದ್ದವಾದ ಗಡ್ಡ, ಕೈಯಲ್ಲಿ ಕಮಂಡಲು ಇದ್ದಿತು. ಅವರ ಮುಖ ಮುನಶೀ ರಾಮಸೇವಕರಂತೆಯೆ ಕಾಣುತ್ತಿದ್ದಿತು. ನಡೆನುಡಿಯಲ್ಲೂ ಅಷ್ಟು ಅಂತರವು ಕಾಣುತ್ತಿರಲಿಲ್ಲ. ಅವನೊಂದು ಮರದ ಕೆಳಗೆ ಅಗ್ನಿಯನ್ನು ಹೊತ್ತಿಸಿಕೊಂಡು ಕುಳಿತಿದ್ದ. ಅದೇ ರಾತ್ರಿ ಮುನಶೀ ರಾಮಸೇವಕರ ಮನೆಯೊಳಗಿಂದ ಹೊಗೆ ಬಂದಿತು. ಕಿಡಿಗಳು ಹಾರತೊಡಗಿದುವು. ಬೆಂಕಿಯು ಧಗಧಗ ಉರಿಯಲಾರಂಭಿಸಿತು. ಊರಿನ ಜನರು ಅತ್ತ ಓಡಿದರು—ಬೆಂಕಿಯನ್ನು ಆರಿಸಲಿಕ್ಕಲ್ಲ, ತಮಾಷೆ ನೋಡಲಿಕ್ಕೆ.

### ಒಬ್ಬ ಬಡವೆಯ ಗೋಳು !

ಅಬ್ಬಬ್ಬ ! ಅದರಲ್ಲೆಂತಹ ಪ್ರಚಂಡ ಶಕ್ತಿಯಿದೆ ! ಉರಿಯಿದೆ ! !

ಮುನಶೀಯವರು ಮಾಯವಾದ ಮೇಲೆ ರಾಮಗುಲಾಮ ತನ್ನ ಮಾವನ ಮನೆಗೆ ಹೋದ. ಅಲ್ಲಿ ಕೆಲವು ದಿನಗಳಿದ್ದ. ಅವನ ನಡತೆ ಯಾರಿಗೂ ಸರಿಬರಲಿಲ್ಲ.

ಒಂದು ದಿನ ಅವನು ಒಬ್ಬನ ಹೊಲದೊಳಗಿನ ಮೂಲಂಗಿಗಳನ್ನು ಕಿತ್ತು ಏಟು ತಿಂದಿದ್ದ. ಈ ಸಿಟ್ಟಿನಿಂದ ಆ ಒಕ್ಕಲಿಗನ ಬಣವೆಗೆ ಬೆಂಕೀ ಹಚ್ಚಿದ. ಬಣವೆ ಸುಟ್ಟು ಹೋಗಿ ಸಾವಿರಾರು ರೂಪಾಯಿಗಳ ಹಾನಿಯಾಯಿತು. ಪೋಲೀಸರು ರಾಮಗುಲಾಮನನ್ನು ಹಿಡಿದರು. ಶಿಕ್ಷೆಗೆ ಗುರಿ ಮಾಡಿದರು. ಈಗ ರಾಮಗುಲಾಮ ಚುನಾರದ ರಿಫಾರ್ಮೇಟರಿ ಸ್ಕೂಲಿನಲ್ಲಿದ್ದಾನೆ.

---

CC-0. Jangamwadi Math Collection. Digitized by eGangotri

# ಇಂಗ್ಲಿಷು ಶಬ್ದನಿಘಂಟು ಶಾಸ್ತ್ರದ ಚರಿತ್ರೆ

( ಕ್ರಿ. ಶ. ೬೦೦ರಿಂದ ೧೭೬೧ರ ವರೆಗೆ )

ಲೇಖಕರು: ಶ್ರೀಮಾನ್ ಮಂ. ಅ. ದೊರೆಸ್ವಾಮಿ ಅಯ್ಯಂಗಾರ್ಯರು, ಎಂ. ಎ. ಬಿ. ಎಲ್.

**ಲ್ಯಾಟಿನ್-ಫ್ರೆಂಚ್‌ಗಳ ವರ್ಚಸ್ಸವನ್ನು ಕಿತ್ತೊಗೆದು, 'ವಿದ್ಯೋದಯ (Renaissance)' ಆಂದೋಲನದಿಂದ ಚೈತನ್ಯ ಪಡೆದವರಾಗಿ, ಇಂಗ್ಲಿಷರು ಲೋಕಾಶ್ಚರ್ಯಕರವಾದ ಸಾಹಿತ್ಯನಿರ್ಮಾಣವನ್ನು ಮಾಡಿ ಕ್ರಮೇಣ ಶಬ್ದಕೋಶಗಳನ್ನು ಹೇಗೆ ರಚಿಸಿದರು ? ಎಂಬುದರ ಪ್ರಾಥಮಿಕ ಇತಿಹಾಸ.**

ಇಂಗ್ಲಿಷು ಕುಲದವರು ಬ್ರಿಟನ್ ದ್ವೀಪಕ್ಕೆ ಕ್ರಿ. ಶ. ೪೪೯ ರಲ್ಲಿ ದಾಳಿಯಿಟ್ಟು ಸ್ವಲ್ಪದರಲ್ಲೇ ದೇಶವನ್ನೆಲ್ಲಾ ಆಕ್ರಮಿಸಿ ನೆಲೆಸಿದರು. ಕ್ರಿ. ಶ. ೬೫೦ ರಿಂದ ಈಚೆಗೆ ಈ ಜನರು ಕ್ರಿಸ್ತಮತವನ್ನು ಅವಲಂಬಿಸಿದರು. ಈಗ ಲೋಕದ ಜನಗಳಲ್ಲಿ ಇಂಗ್ಲಿಷರಷ್ಟು ಸಮೃದ್ಧವೂ ಶ್ರೇಷ್ಠವೂ ಆಗಿರುವ ಸಾಹಿತ್ಯಭಂಡಾರವನ್ನು ಕಟ್ಟಿರುವವರು ಯಾರೂ ಇಲ್ಲ. ಆದರೆ ಇವರಲ್ಲಿ ಕ್ರಿ. ಶ. ೧೪೦೦ ರ ವರೆಗೂ ಏಳೆಂಟು ಅಲ್ಪ ಕಾವ್ಯಗಳು ಮಾತ್ರವೇ ಹುಟ್ಟಿದ್ದವು. ಇದಕ್ಕೆ ಅನೇಕ ಕಾರಣಗಳಿದ್ದವು. ಇವರ ಭಾಷೆಯು ಕಾವ್ಯಕ್ಕೆ ಯೋಗ್ಯವಾಗುವಂತೆ ಇನ್ನೂ ಸಮರ್ಪಕವಾಗಿ ಅಭಿವೃದ್ಧಿಯನ್ನು ಪಡೆದಿರಲಿಲ್ಲ. ಇಂಗಿಷರು ಕ್ರಿ. ಶ. ೧೦೬೬ ರ ವರೆಗೂ ನಾಗರಕತೆಯಲ್ಲಿ ತೀರ ಹಿಂದುಳಿದಿದ್ದರು. ಸುಮಾರು ಎರಡು ಶತಮಾನಗಳಿಂದಲೂ ಡೇನರು ಅನವರತವಾಗಿ ಇವರ ದೇಶವನ್ನು ಮುತ್ತಿ, ಕೊಳ್ಳೆಹೊಡೆಯುತ್ತಿದ್ದರು. ದೇಶದಲ್ಲಿ ಶಾಂತಿಯು ಮಾಯವಾಗಿ ಜನರು ಸರ್ವದಾ ರಾಜಿಕದ ಭಯದಿಂದ ಜೀವಿಸುತ್ತಿದ್ದರು. ಸಂತತವಾದ ಯುದ್ಧದಿಂದ ದೇಶೀಯ ರಾಜ್ಯಗಳೆಲ್ಲಾ ನಷ್ಟವಾದವು. ಕಡೆಗೆ ದೇಶವೇ ಡೆನ್ಮಾರ್ಕಿನ ಸಾಮಂತ ರಾಜ್ಯವಾಗಿ ಪರಿಣಮಿಸಿತು. ಕ್ರಿಸ್ತಮತವು ಹರಡಿದ ಮೇಲೆ ವಿದ್ಯೆಯನ್ನು ಕಲಿಯಲು ಕೈಹಾಕತಕ್ಕವರೆಲ್ಲರೂ ಆಗ್ಗೆ ಯೂರೋಪು ಖಂಡಕ್ಕೆಲ್ಲಾ ಧರ್ಮಭಾಷೆಯೂ ಜನಾಂಗ ವ್ಯವಹಾರ ಭಾಷೆಯೂ ಆಗಿದ್ದ ಲಾಟೀನ ಭಾಷೆಯನ್ನು ಕಲಿಯುತ್ತಿದ್ದರೇ ಹೊರತು ದೇಶಭಾಷೆಯನ್ನು ಪುರಸ್ಕರಿಸುತ್ತಿರಲಿಲ್ಲ. ಕ್ರಿ. ಶ. ೧೦೬೬ರಲ್ಲಿ ಫ್ರಾನ್ಸಿನಲ್ಲಿದ್ದ ನಾರ್ಮನರು ಈ ದೇಶವನ್ನು ಜಯಿಸಿ ರಾಜ್ಯವನ್ನು ತಾವು ಆಳತೊಡಗಿದರು. ಈ ಜನರು ನಡೆನುಡಿಯಲ್ಲಿ ಫ್ರೆಂಚರಾಗಿದ್ದರು. ಇವರು ದೇಶಭಾಷೆಯಾದ ಇಂಗ್ಲಿಷನ್ನು ಮೂಲೆಗೊತ್ತಿ ಆಸ್ಥಾನ, ನ್ಯಾಯಶಾಲೆ, ಪಾಠಶಾಲೆ, ಮಠ ಮೊದಲಾದ ಎಲ್ಲಾ ಕಡೆಗಳಲ್ಲೂ ಫ್ರೆಂಚ ಭಾಷೆಯನ್ನು ಸ್ಥಾಪಿಸಿದರು. ಇಂಗ್ಲೆಂಡಿನ ವಿದ್ಯಾವಂತರು, ಅಧಿಕಾರ ವರ್ಗದವರು, ಉತ್ತಮ ಕುಲದವರು, ಧನಿಕರು, ರಾಜಾಶ್ರಿತರು ಮೊದಲಾದವರೆಲ್ಲರೂ ಫ್ರೆಂಚ ಭಾಷೆಯನ್ನೇ ಉಪಯೋಗಿಸುತ್ತಿದ್ದರು. ಇಂಗ್ಲಿಷು ಕೇವಲ ಗ್ರಾಮ್ಯ ಭಾಷೆಯಾಗಿ ಪರಿಣಮಿಸಿತು. ಕ್ರಿ. ಶ. ೧೩೫೦ರ ಸುಮಾರಿನಲ್ಲಿ ಇಂಗ್ಲಿಷರಿಗೂ ಫ್ರೆಂಚರಿಗೂ ಕಡು ವೈರ ಹುಟ್ಟಿ ಸಂತತವಾಗಿ ಒಂದು ಶತಮಾನ ಕಾಲ ಯುದ್ಧವು ನಡೆಯುತ್ತಾ ಹೋಯಿತು. ಆಗ ಇಂಗ್ಲಿಷು ಸರ್ಕಾರದವರು ಈರ್ಷ್ಯೆಯಿಂದ ಫ್ರೆಂಚ ಭಾಷೆಯನ್ನು ಅಧಿಕಾರಪದವಿಯಿಂದ ಕೆಳಕ್ಕೆ ಇಳಿಸಿ ಗ್ರಾಮ್ಯಭಾಷೆಯಾಗಿ ಅಡಗಿದ್ದ ತಮ್ಮ ಸ್ವಭಾಷೆಯಲ್ಲಿ ಅಭಿಮಾನವನ್ನು ತಳೆದು ಅದನ್ನು ಉದ್ಧರಿಸಲಾರಂಭಿಸಿದರು. ಅಷ್ಟರಲ್ಲಿ ಇಟಲಿಯಲ್ಲಿ ತಲೆದೋರಿದ್ದ ವಿದ್ಯೋದಯ (Renaissance) ದ ಪ್ರಭಾವವು ಕ್ರಮವಾಗಿ ಇಂಗ್ಲೆಂಡಿಗೂ ಹರಡಿ ಅಲ್ಲಿನ ಭಾಷೆಯನ್ನು ಕಾವ್ಯಯೋಗ್ಯವಾದ ಭಾಷೆಯಾಗಿ ಅಭಿವೃದ್ಧಿಪಡಿಸಿತು. ಇಂಗ್ಲಿಷು ಭಾಷೆಯು ಇಟಲಿ ಭಾಷೆಯಿಂದಲೂ ಹಾಗೆಯೇ ಫ್ರೆಂಚ ಭಾಷೆಯಿಂದಲೂ ಹೊಸ ಶಬ್ದಗಳನ್ನೂ ಛಂದಸ್ಸುಗಳನ್ನೂ ಅಭಿಪ್ರಾಯಗಳನ್ನೂ ಹೇರಳವಾಗಿ ಪರಿಗ್ರಹಿಸಿ ಬೇಕಾದಷ್ಟು ಕಾವ್ಯಗಳನ್ನು ಪರಿವರ್ತಿಸಿಕೊಂಡು ಸುಮಾರು ಒಂದೂವರೆ

CC-0. Jangamwadi Math Collection. Digitized by eGangotri

ಶತಮಾನ ಕಾಲ ಗುರುಕುಲವಾಸವನ್ನು ಮಾಡಿತು. ಇದಕ್ಕೆ ಫಲವಾಗಿ ರಾಣಿ ಎಲಿಸಬೆತಳ (೧೫೫೮—೧೬೦೩) ಕಾಲದಲ್ಲಿ ಇಂಗ್ಲಿಷ ಸಾಹಿತ್ಯದಲ್ಲಿ ಲೋಕಾಶ್ಚರ್ಯಕರವಾದ ಕಾವ್ಯಮಾಲೆಯು ಉದಯಿಸಿ, ಶೂನ್ಯವೂ ಅನಾಮಧೇಯವೂ ಆಗಿದ್ದ ಆ ಸಾಹಿತ್ಯವನ್ನು ಪ್ರಥಮ ಗೋಷ್ಠಿಗೆ ಏರಿಸಿತು. ಅಲ್ಲಿಂದ ಮುಂದೆ ಇಂಗ್ಲಿಷು ಸಾಹಿತ್ಯವು ಸರ್ವತೋಮುಖವಾಗಿ ಅಭಿವೃದ್ಧಿಯನ್ನು ಪಡೆಯುತ್ತಾ ಹೋಗಿದೆ.

ಶಬ್ದ - ನಿಘಂಟುಗಳೆಂಬುವು ಕಾವ್ಯವ್ಯಾಸಂಗದಲ್ಲಿ ಅತ್ಯುಪಯೋಗಕಾರಿಯಾದ ಸಾಧನಗಳಾಗಿವೆ. ಕಾವ್ಯವ್ಯಾಸಂಗ ಕಾರ್ಯವು ಹೆಚ್ಚಿದ ಹಾಗೆಲ್ಲಾ ನಿಘಂಟುಗಳು ಹುಟ್ಟಿ ವಿಕಾಸವಾಗುತ್ತಾ ಬರುತ್ತವೆ. ಇಂಗ್ಲೆಂಡಿನ ಇತಿಹಾಸದಲ್ಲಿ ಕಾವ್ಯವ್ಯಾಸಂಗದ ಪರಿಸ್ಥಿತಿಯು ಬೇರೆ ಬೇರೆ ಯುಗಗಳಲ್ಲಿ ಹೇಗೆ ಇದ್ದಿತು ?—ಎಂದು ಮೇಲೆ ನೋಡಿದೆವು. ಇದರಿಂದ ಇಲ್ಲಿನ ನಿಘಂಟುಗಳ ಇತಿಹಾಸವನ್ನೂ ಸ್ವಲ್ಪ ದೂರ ಮುಂದಟ್ಟುವಮಾಡಿಕೊಳ್ಳಬಹುದು.

### ಕ್ರಿ. ಶ. ೭೦೦ ರಿಂದ ೧೦೬೬ರ ವರೆಗೆ.

ಈ ಕಾಲದಲ್ಲಿ ಭಾಷೆಯೂ ನಾಗರಕತೆಯೂ ಹಿಂದುಳಿದಿದ್ದವು. ಯುದ್ಧಗಳೂ ಅಶಾಂತಿಯೂ ದೇಶವನ್ನೆಲ್ಲಾ ಕ್ಷೋಭಪಡಿಸುತ್ತಿದ್ದವು. ಇಂಥಾ ಕಾಲದಲ್ಲಿ ವಿದ್ಯಾಭ್ಯಾಸಕ್ಕೂ ಕಾವ್ಯವ್ಯಾಸಂಗಕ್ಕೂ ಕೈಹಾಕತಕ್ಕವರು ಅತಿ ವಿರಳ. ಹಾಗೆ ಮಾಡತಕ್ಕವರೆಲ್ಲರೂ ಲಾಟೀನ ಭಾಷೆಯನ್ನೇ ಕಲಿಯುತ್ತಿದ್ದರು. ಇಂಥಾ ಪರಿಸ್ಥಿತಿಯಲ್ಲಿ ನಿಘಂಟುಗಳು ಎರಡು ಪ್ರಕಾರವಾಗಿ ಹುಟ್ಟಿದವು.

ಈಗಲೂ ನಮ್ಮಲ್ಲಿ ಬಹುಮಂದಿ ಸಂಸ್ಕೃತವನ್ನು ಕಲಿಯುತ್ತಿರುವರಷ್ಟೆ. ಇದನ್ನು ಆಯಾ ಪ್ರಾಂತ್ಯಗಳಲ್ಲಿ ಅಲ್ಲಿನ ದೇಶಭಾಷೆಗಳಲ್ಲಿ ಬೋಧಿಸಿ ಕಲಿಸುವುದು ವಾಡಿಕೆ. ಕನ್ನಡ ದೇಶದಲ್ಲಿ ಸಂಸ್ಕೃತದ ಶಬ್ದಗಳಿಗೂ ವಾಕ್ಯಗಳಿಗೂ ಕನ್ನಡದಲ್ಲಿ ಅರ್ಥವನ್ನು ಹೇಳಿ ತಿಳಿಸುತ್ತಾ ಕಲಿಸುವರು. ಲೋಕದಲ್ಲಿ ಯಾವ ಪರಭಾಷೆಯನ್ನು ಕಲಿಯಬೇಕಾದರೂ ಮುಖ್ಯವಾಗಿ ಪ್ರಾರಂಭದಶೆಗಳಲ್ಲಿ ಇದೇ ಕ್ರಮವು ಸಹಜವೂ ಅಪರಿಹಾರ್ಯವೂ ಆಗಿದೆ. ಇಂಗ್ಲೆಂಡಿನಲ್ಲಿ ಲಾಟೀನ ಭಾಷೆಯ ವ್ಯಾಸಂಗವೂ ಹೀಗೆಯೇ ನಡೆಯಬೇಕಾಗಿತ್ತು. ವಿದ್ಯಾರ್ಥಿಯು ಈ ಭಾಷೆಯ ಪದಗಳನ್ನು ತಿಳಿದು ಸಂಗ್ರಹಿಸಿಕೊಳ್ಳುವ ಸೌಕರ್ಯಕ್ಕಾಗಿ ಬಳಕೆಗೆ ಬೇಕಾದ ವಿಷಯಗಳನ್ನು ಕುರಿತ ಮುಖ್ಯ ಪದಗಳ ಪಟ್ಟಿಗಳನ್ನು ಅರ್ಥಮೊಡನೆ ತಯಾರು ಮಾಡುತ್ತಿದ್ದರು. ಉದಾಹರಣೆಗಾಗಿ, ದೇಹದ ಅಂಗಗಳ ಹೆಸರುಗಳು, ಪಳಗಿದ ಪಶುಪಕ್ಷಿಗಳ ಹೆಸರುಗಳು, ಕಾಡು ಮೃಗಗಳ ಹೆಸರುಗಳು, ದಿನಚರಿ ಬೇಕಾಗತಕ್ಕ ಬಟ್ಟೆಬರೆ ಮರಮುಟ್ಟುಗಳ ಹೆಸರುಗಳು, ಮತಸಂಬಂಧವಾದ ಹೆಸರುಗಳು ಇತ್ಯಾದಿ ಹೆಸರುಗಳ ಪಟ್ಟಿಗಳನ್ನು ತಯಾರು ಮಾಡಿದ್ದರೆ ಬಾಲವಿದ್ಯಾರ್ಥಿಯು ಅವುಗಳನ್ನು ಬಾಯಲ್ಲಿ ಉರು ಹಾಕಿ ಗಟ್ಟಿಮಾಡಿಕೊಳ್ಳುತ್ತಿದ್ದನು. ಈ ಹೆಸರುಗಳಿಗೆ ದೇಶಭಾಷೆಯಲ್ಲಿ ಪ್ರತಿಪದಾರ್ಥವನ್ನೂ ಬರೆದು ಇಟ್ಟರೆ ಇವರ ವ್ಯಾಸಂಗಕ್ಕೆ ಮತ್ತಷ್ಟು ಸೌಕರ್ಯವಾಗುತ್ತಿತ್ತು. ಇಂಥಾ ಪಟ್ಟಿಗಳಿಗೆ ವೊಕಾಬುಲೇರಿ (Vocabulary) ಎಂದರೆ ಶಬ್ದಕೋಶ ಎಂದು ಹೆಸರಿತ್ತು. ವೋಕಬುಲ್ ಎಂದರೆ ಶಬ್ದ, ಪದ ಎಂದು ಅರ್ಥ. ಇಂಥಾ ಶಬ್ದಗಳ ಕೋಶ ಎಂದರೆ ಪಟ್ಟಿಯು ವೊಕಾಬುಲೇರಿಯಾಗಿದೆ. ಆಗಿನ ಕಾಲದಲ್ಲಿ ಮುದ್ರಣವಿರಲಿಲ್ಲ. ಪ್ರಯಾಣ ಸೌಕರ್ಯಗಳು ತೀರ ಕಡಮೆ. ಆದುದರಿಂದ ಪ್ರತಿಯೊಬ್ಬ ಗುರುವೂ ಪ್ರತಿಯೊಂದು ಮಠವೂ ತನತನಗೆ ಇಷ್ಟಬಂದಂತೆ ಇಂಥಾ ಶಬ್ದಕೋಶಗಳನ್ನು ಕಲ್ಪಿಸಿಕೊಳ್ಳಬೇಕಾಗಿತ್ತು. ಕಾಲಾನುಕ್ರಮದಲ್ಲಿ ಈ ಪಟ್ಟಿಗಳು ದೊಡ್ಡದಾಗುತ್ತ ಬರುವುದು ಸಹಜ. ಬೇರೆ ಬೇರೆ ಕಡೆಯ ಶಬ್ದಕೋಶಗಳನ್ನು ಯಾರಾದರೂ ಒಟ್ಟಿಗೆ ಸಂಕಲನ ಮಾಡಿ ದೊಡ್ಡ ಶಬ್ದಕೋಶವನ್ನು ರಚಿಸಲು ಪ್ರಯತ್ನಿಸಬಹುದು. ಅಂಥಾ ಗ್ರಂಥದ ಪ್ರತಿಯನ್ನು ಹತ್ತಾರು ಮಠಗಳು ತಾವು ಪಡೆಯಲು ಪ್ರಯತ್ನಿಸುವುದು ಸಹಜ. ಈ ಕ್ರಮದಲ್ಲಿ ಒಂದು ಜಾತಿಯ ನಿಘಂಟುಗಳು ಹುಟ್ಟುತ್ತಾ ಬರುವುವು.

ಲಾಟೀನ ಭಾಷೆಯ ಪ್ರಸಿದ್ಧವಾದ ಗ್ರಂಥಗಳನ್ನು ಓದುವಾಗಲೂ ಬೋಧಿಸುವಾಗಲೂ ಅದರೊಳಗಿನ ಕ್ಲಿಷ್ಟವೂ ಅಪರೂಪವೂ ಆಗಿರುವ ಪದಗಳ ಅರ್ಥವನ್ನು ಮರೆಯದಂತೆ ಗುರುತಿಟ್ಟುಕೊಳ್ಳದಿದ್ದರೆ ತುಂಬಾ ಕಷ್ಟವಾಗುವುದು. ಈ ದೆಸೆಯಿಂದ ಆ ಗ್ರಂಥಗಳನ್ನು ಓದುವಾಗ ಅಲ್ಲಿ ಬರತಕ್ಕ ಕ್ಲಿಷ್ಟ ಪದಗಳಿಗೆ ಅವುಗಳ ಮಗ್ಗುಲಲ್ಲೇ ಅರ್ಥವನ್ನು ಗುರುತಿಡುತ್ತಾ ಹೋಗುವ ಪದ್ಧತಿ ಹುಟ್ಟಿತು. ಹೀಗೆ ಮಗ್ಗುಲಲ್ಲೇ ಅರ್ಥ ಬರೆಯುತ್ತಾ ಹೋಗುವ ವ್ಯಾಖ್ಯಾನ ಕ್ರಮಕ್ಕೆ ಗ್ಲಾಸ್ (Gloss) ಎಂದು ಹೆಸರು. ಒಂದು ಗ್ರಂಥಕ್ಕೆ ಹೀಗೆ ಅರ್ಥವನ್ನು ಗುರುತಿಸಿದ ಮೇಲೆ ಈ ಕ್ಲಿಷ್ಟ ಪದಗಳನ್ನು ಅವುಗಳ ಪ್ರತಿಪದಾರ್ಥಗಳನ್ನೂ ಬೇರೆ ಒಂದು ಕಾಗದದಲ್ಲಿ ಪಟ್ಟಿಯಾಗಿ ಬರೆದಿಡಲು ಪ್ರಾರಂಭವಾಯಿತು. ಇಂಥಾ ಪಟ್ಟಿಗಳು ಗ್ಲಾಸರಿ (Glossary) ಎಂದರೆ ಅರ್ಥಕೋಶ ಎನ್ನಿಸಿಕೊಂಡವು. ಈ ಬಗೆಯಾದ ಗ್ರಂಥವು

CC-0. Jangamwadi Math Collection. Digitized by eGangotri

ನಮ್ಮ ದೇಶದಲ್ಲಿ ಪ್ರಸಿದ್ಧವಾಗಿರುವ "ವೃತ್ತಿ" ಎಂಬ ಬಗೆಯ ವ್ಯಾಖ್ಯಾನವನ್ನು ಹೋಲುತ್ತದೆ. ಕ್ರಮಕ್ರಮವಾಗಿ ಹಲವು ಗ್ರಂಥಗಳ ಅರ್ಥಕೋಶಗಳು ಸಂಕಲನ ಮಾಡಲ್ಪಟ್ಟವು.

ಕ್ರಮವಾಗಿ ಈ ಎರಡು ಜಾತಿಯ ನಿಘಂಟುಗಳನ್ನೂ ಸಂಕಲನ ಮಾಡತಕ್ಕ ಪದ್ಧತಿ ಹುಟ್ಟಿತು. ಪದಗಳನ್ನು ಸುಲಭವಾಗಿ ಹುಡುಕುವ ಸಲುವಾಗಿ ಅಕಾರಾದಿ ಕ್ರಮವು ಪ್ರಚಾರಕ್ಕೆ ಬಂದಿತು.

ಈ ನಾಲ್ಕೂವರೆ ಶತಮಾನ ಕಾಲದಲ್ಲಿ ಹುಟ್ಟಿ ಗತಶೇಷವಾಗಿರುವ ನಿಘಂಟುಗಳಲ್ಲಿ ನಾಲ್ಕು ಗ್ರಂಥಗಳು ಪ್ರಸಿದ್ಧವಾದುವು. (೧) ಲೈಡೆನ್ ಅರ್ಥಕೋಶ (Leiden Glossary) ವು ಹಲವು ಗ್ರಂಥಗಳ ಅರ್ಥಕೋಶಗಳ ಸಂಗ್ರಹವು. ಶಬ್ದಗಳು ಆಯಾ ಗ್ರಂಥಗಳ ಹೆಸರಿನಲ್ಲೇ ಸಂಗ್ರಹಿಸಲ್ಪಟ್ಟಿವೆ. ಗ್ರಂಥದ ಕಡೆಯ ಭಾಗದಲ್ಲಿ ಹಲವು ಶಬ್ದಕೋಶಗಳನ್ನು ಸಂಗ್ರಹಿಸಿದೆ. ಈ ತೆರದ ನಿಘಂಟುವಿನಲ್ಲಿ ನಮಗೆ ಬೇಕಾದ ಒಂದು ಪದವನ್ನು ಹುಡುಕಬೇಕಾದರೆ ಪೂರ್ತಿ ಗ್ರಂಥವನ್ನೇ ನೋಡದಿದ್ದರೆ ತೀರದು. (೨) ಎಪಿನಾಲ್ ಅರ್ಥಕೋಶವು (Epinal Glossary) ಹಿಂದಲ ಕೋಶಕ್ಕೆ ಹಲವು ಇತರ ಕೋಶಗಳನ್ನು ಸೇರಿಸಿ ಪದಗಳನ್ನು ಅಕಾರಾದಿಯಾಗಿ ಪಟ್ಟಿಮಾಡಿದೆ. ಆದರೆ ಈ ಅಕಾರಾದಿಯು ಪದಗಳ ಪ್ರಥಮಾಕ್ಷರಕ್ಕೆ ಮಾತ್ರ ಅನ್ವಯಿಸಲ್ಪಟ್ಟಿದೆ. ಉದಾಹರಣೆಗಾಗಿ, ಅವಮಾನ, ಅಜಗರ, ಅಕರ್ಮ, ಅಲ್ಪ, ಅತ್ಯಂತ ಎಂಬ ಪದಗಳ ಪಟ್ಟಿಯಲ್ಲಿ ಪದಗಳ ಪ್ರಥಮಾಕ್ಷರವಲ್ಲಿ ಮಾತ್ರ ಅಕಾರಾದಿ ಕ್ರಮವಿದೆ. ಈ ಕ್ರಮವು ಎರಡನೆಯ ಅಕ್ಷರಕ್ಕೂ ವ್ಯಾಪಿಸಿದ್ದರೆ ಈ ಪದಗಳನ್ನು ಅಕರ್ಮ, ಅಜಗರ, ಅತ್ಯಂತ, ಅಲ್ಪ, ಅವಮಾನ ಎಂಬ ಕ್ರಮದಲ್ಲಿ ಪಟ್ಟಿ ಮಾಡಬೇಕಾಗುವುದು. ಈಗಿನ ನಿಘಂಟುಗಳಲ್ಲಿ ಈ ಕ್ರಮವು ಕೊನೆಯ ಅಕ್ಷರದ ವರೆಗೂ ಸಾಂಗೋಪಾಂಗವಾಗಿ ಅನ್ವಯಿಸಲ್ಪಟ್ಟಿದೆ. ಇದರಿಂದ ಅವುಗಳ ಉಪಯೋಗವು ಬಹಳವಾಗಿ ಹೆಚ್ಚಿದೆ. ಉದಾಹರಣೆಗಾಗಿ, ಈ ಎಪಿನಾಲ್ ಶಬ್ದಕೋಶದಲ್ಲಿ ಎ (A) ಕಾರಾದಿಯಾಗಿ ಸುಮಾರು ೫೫೦ ಪದಗಳಿವೆ. ಎಕಾರಾದಿಯಾದ ಒಂದು ಪದವು ಈ ಗ್ರಂಥದಲ್ಲಿ ಇದೆಯೇ ಇಲ್ಲವೇ ಎಂದು ನೋಡಬೇಕಾದರೆ ಈ ೫೫೦ ಪದಗಳನ್ನೂ ಪರೀಕ್ಷಿಸದೆ ತೀರದು. (೩) ಕಾರ್ಪಸ್ ಅರ್ಥಕೋಶ (Corpus Glossary) ವು ತನ್ನ ಹಿಂದಲ ಅರ್ಥಕೋಶಗಳನ್ನೆಲ್ಲಾ ಸಂಕಲನಮಾಡಿ ಪದಗಳನ್ನು ದ್ವಿತೀಯಾಕ್ಷರದ ವರೆಗೂ ಅಕಾರಾದಿಯಾಗಿ ಪಟ್ಟಿಮಾಡಿದೆ. ಇಲ್ಲಿ ಲಾಟೀನ ಪದಗಳಿಗೆ ಇಂಗ್ಲಿಷು ಭಾಷೆಯ ಪ್ರತಿಪದಾರ್ಥವನ್ನು ಬರೆಯುವ ಪದ್ಧತಿ ಹೆಚ್ಚಾಗಿದೆ. (೪) ಏರ್ಫರ್ಟ್ ಅರ್ಥಕೋಶ (Erfart Glosssry) ವು ಮತ್ತೊಂದು ಪ್ರಸಿದ್ಧವಾದ ನಿಘಂಟುವಾಗಿದೆ.

### ಕ್ರಿ. ಶ. ೧೦೬೬ರಿಂದ ೧೪೦೦ರ ವರೆಗೆ

ಈ ಕಾಲದಲ್ಲಿ ಇಂಗ್ಲಿಷು ಕೇವಲ ಗ್ರಾಮ್ಯಭಾಷೆಯಾಗಿ ಪರಿಣಮಿಸಿದ್ದಿತಾದುದರಿಂದ ಎರಡೇ ಎರಡು ಸಣ್ಣ ಶಬ್ದಕೋಶಗಳು ಮಾತ್ರವೇ ಹುಟ್ಟಿ ಅವಶಿಷ್ಟವಾಗಿವೆ.

### ಕ್ರಿ. ಶ. ಹದಿನೈದನೆಯ ಶತಮಾನ

ಈ ಕಾಲದಲ್ಲಿ ಆರು ದೊಡ್ಡ ಶಬ್ದಕೋಶಗಳು ಹುಟ್ಟಿವೆ. ಇವುಗಳಲ್ಲಿ ಒಂದು ಮಾತ್ರವೇ ಅಕಾರಾದಿಯಾಗಿ ಹುಟ್ಟಿದೆ. ಅಲ್ಲದೆ ಮೆಡುಲ್ಲಾ ಗ್ರ್ಯಾಮಾಟಿಸೀಸ್ (Medulla Grammatices = Marrow of Grammar) ಎಂದರೆ ವ್ಯಾಕರಣದ ತಿರುಳು ಎಂಬ ದೊಡ್ಡ ಗ್ರಂಥವು ಈ ಶತಮಾನದ ಮಧ್ಯಭಾಗದಲ್ಲಿ ಹುಟ್ಟಿತು. ಇದೇ ಮೊಟ್ಟಮೊದಲಿನ ನಿಜವಾದ ಲಾಟೀನ — ಇಂಗ್ಲಿಷು ನಿಘಂಟು ಗ್ರಂಥವಾಗಿದೆ. ಈ ಗ್ರಂಥವನ್ನು ಅವಲಂಬಿಸಿ ಹುಟ್ಟಿದ ಶಬ್ದೋದ್ಯಾನ (Ortus Vocabulorum) ಎಂಬ ನಿಘಂಟು ಗ್ರಂಥವು ಪ್ರಥಮತಃ ಅಚ್ಚಾದ ಲಾಟೀನ— ಇಂಗ್ಲಿಷು ನಿಘಂಟು ಗ್ರಂಥವಾಗಿದೆ. ಇದು ೧೫೦೦ನೆಯ ವರ್ಷದಲ್ಲಿ ಅಚ್ಚಾಯಿತು.

ಆದಿಯಿಂದ ಇದುವರೆಗೂ ಹುಟ್ಟಿದ ನಿಘಂಟುಗಳೆಲ್ಲವೂ ಲಾಟೀನ—ಇಂಗ್ಲಿಷು ನಿಘಂಟುಗಳೇ ಆಗಿದ್ದವು. ಜಿಯೋಫ್ರೇ (Geoffrey) ಎಂಬಾತನು ಕ್ರಿ ಶ. ೧೪೪೦ರಲ್ಲಿ ಮೊಟ್ಟಮೊದಲನೆಯ ಇಂಗ್ಲಿಷು—ಲಾಟೀನ ನಿಘಂಟುವನ್ನು ರಚಿಸಿದನು. ಇದಕ್ಕೆ ಇವನು ಪ್ರಾಂಪ್ಚ್ಯುಯೇರಿಯಂ ಪಾರ್ವುಲೋರಮ್ (Promptuarium Parvulorum=Children's Store-room) ಎಂದರೆ ಬಾಲಭಂಡಾರ ಎಂದು ಹೆಸರಿಟ್ಟನು. ಇದು ಸ್ವಲ್ಪ ಕಾಲದಲ್ಲೇ ಅಚ್ಚಾಗಿ ಬಹಳ ಪ್ರಚಾರದಲ್ಲಿದ್ದಿತು. ಇದರಲ್ಲಿ ಸುಮಾರು ಹತ್ತು ಸಾವಿರ ಪದಗಳ ಅರ್ಥಸಂಗ್ರಹವಿದೆ. ಕ್ರಿ. ಶ. ೧೪೮೩ರಲ್ಲಿ ಹುಟ್ಟಿದ ಕೆಥೋಲಿಕಾನ್ ಆಂಗ್ಲಿಕಾನ್ (Catholicon Anglicon) ಎಂದರೆ ಆಂಗ್ಲ ವಿಶ್ವಕೋಶ ಎಂಬುದು ಇದೇ ಜಾತಿಯ ಇಂಗ್ಲಿಷು—ಲಾಟೀನ

CC-0. Jangamwadi Math Collection. Digitized by eGangotri

ನಿಘಂಟುವಾಗಿದ್ದಿತು. ಈ ಗ್ರಂಥವು ೧೮೮೧ರ ವರೆಗೂ ಅಚ್ಚಾಗಲಿಲ್ಲ.

### ಕ್ರಿ. ಶ. ಹದಿನಾರನೆಯ ಶತಮಾನ.

ಈ ಶತಮಾನದಲ್ಲಿ ಸರ್ ಥಾಮಸ್ ಎಲಿಯಟ್ ಎಂಬಾತನು ತನ್ನ ನಿಘಂಟುವಿಗೆ ಈಗ ಇಂಗ್ಲಿಷಿನಲ್ಲಿ ಪ್ರಸಿದ್ಧವಾಗಿರುವ ಡಿಕ್ಷೆನರಿ ( Dictionary ) ಎಂಬ ಹೆಸರನ್ನು ಮೊದಲಾಗಿ ಇಟ್ಟನು. ಡಿಕ್ಷನ್ ಎಂದರೆ ಸೂಕ್ತಿ ಎಂದು ಅರ್ಥ. ಡಿಕ್ಷೆನರಿ ಎಂದರೆ ಸೂಕ್ತಿಕೋಶ ಎಂದರ್ಥ. ಈ ಬಗೆಯ ನಿಘಂಟುಗಳು ಲಾಟೀನ ಭಾಷೆಯಲ್ಲಿ ಹುಟ್ಟಿದ್ದವು. ಆದರೆ ಈಚೆಗೆ ಈ ಪದಕ್ಕೆ ಸೂಕ್ತಿಕೋಶ ಎಂಬ ಮೂಲಾರ್ಥವು ಮಾಸಿ ಶಬ್ದಾರ್ಥಕೋಶ ಎಂಬ ಅರ್ಥವೇ ಆರೂಢವಾಗಿದ್ದಿತು. ಎಲಿಯಟನ ಗ್ರಂಥವು ಈ ಶತಮಾನದಲ್ಲಿ ಆರಾವರ್ತಿ ಮುದ್ರಿತವಾಯಿತು. ಹಾರ್ಮನ್ (Horman) ಎಂಬುವನು ಕ್ರಿ. ಶ. ೧೫೧೯ರಲ್ಲಿ ಒಂದು ಸೂಕ್ತಿಕೋಶವನ್ನು ರಚಿಸಿದನು. ಕೂಪರ್ ಎಂಬುವನ ಶಬ್ದಭಂಡಾರ ( Thesaurus ) ಎಂಬ ಗ್ರಂಥವು ೧೫೬೫ರಲ್ಲಿ ಹುಟ್ಟಿ ಬಹಳ ಪ್ರಸಿದ್ಧಿಗೆ ಬಂದಿತು. ಈ ಶತಮಾನದಲ್ಲಿ ಹತ್ತಾರು ನಿಘಂಟುಗಳು ಹುಟ್ಟಿದುವು.

ಇದು ವರೆಗೂ ಇಂಗ್ಲಿಷಿಗೂ ಲಾಟೀನಿಗೂ ಮಾತ್ರವೇ ಪರಸ್ಪರ ಅರ್ಥ ಹೇಳಲು ನಿಘಂಟುಗಳು ಹುಟ್ಟಿದವಷ್ಟೆ. ಇಲ್ಲಿಂದ ಮುಂದೆ ಇಂಗ್ಲೀಷಿಗೂ ಇತರ ಭಾಷೆಗಳಿಗೂ ನಿಘಂಟುಗಳು ಹುಟ್ಟಲು ಆರಂಭವಾದವು. ಅಲೆಕ್ಸಾಂಡರ ಬಾರ್ಕ್ಲೆ ( Barclay ) ಎಂಬುವನು ೧೫೩೧ರಲ್ಲಿ ಫ್ರೆಂಚ್ ಪದಗಳನ್ನು ಬರೆಯುವ ಮತ್ತು ಉಚ್ಚರಿಸುವ ರೀತಿಯನ್ನು ಸೂಚಿಸಿ ಒಂದು ಸಣ್ಣ ಪುಸ್ತಕವನ್ನು ರಚಿಸಿದನು. ಮೇರಿ ರಾಣಿಯ ಫ್ರೆಂಚ್ ಉಪಾಧ್ಯಾಯನಾಗಿದ್ದ ಡು ವೀಸ ( Du Wes ) ಎಂಬುವನು ೧೫೩೭ರಲ್ಲಿ ಇದೇ ರೀತಿ ಒಂದು ಗ್ರಂಥವನ್ನು ರಚಿಸಿದನು. ಈ ಗ್ರಂಥದಲ್ಲಿ ಇಂಗ್ಲಿಷ್—ಫ್ರೆಂಚ್ ಪದಗಳ ಒಂದು ಪಟ್ಟಿ ಸಹ ಇದ್ದಿತು. ಜಾನ ಪಾಲ್ಸಗ್ರೇವ (Palsgrave) ಎಂಬುವನು ಇದೇ ರೀತಿ ಒಂದು ದೊಡ್ಡ ಗ್ರಂಥವನ್ನು ೧೫೩೦ರಲ್ಲಿ ಪ್ರಕಟಿಸಿದನು. ಈ ಗ್ರಂಥವು ನವೀನ ಭಾಷೆಗಳ ಮೊಟ್ಟಮೊದಲನೆಯ ನಿಘಂಟುವೆಂದು ಪ್ರಸಿದ್ಧವಾಗಿದೆ. ರಿಚರ್ಡ ಪರ್ಸಿವಾಲ ( Perce Vall ) ಎಂಬವನು ೧೫೯೧ರಲ್ಲಿ ಸ್ಪಾನಿಶ — ಇಂಗ್ಲಿಷು ನಿಘಂಟುವೊಂದನ್ನು ರಚಿಸಿದನು. ಜಾನ ಫ್ಲೋರಿಯೋ (Florio) ಎಂಬುವನು ಅದೇ ವರ್ಷ ಶಬ್ದ-ಪ್ರಪಂಚ (World of Words) ಎಂಬ ಅಭಿಧಾನವುಳ್ಳ ಇಟಲಿ-ಇಂಗ್ಲಿಷು ಭಾಷಾ ನಿಘಂಟುವನ್ನು ಪ್ರಕಟಿಸಿದನು. ೧೬೧೧ರಲ್ಲಿ ಇದನ್ನು ಮತ್ತಷ್ಟು ವಿಸ್ತರಪಡಿಸಿ ಹೊರಡಿಸಿದನು. ಅದೇ ವರ್ಷ ಕಾಟ್‌ಗ್ರೇವ್ ( Cotgave ) ಎಂಬುವನ ಸುಪ್ರಸಿದ್ಧವಾದ ಫ್ರೆಂಚ-ಇಂಗ್ಲಿಷು ನಿಘಂಟು ಪ್ರಚುರವಾಯಿತು. ೧೫೪೭ರಲ್ಲಿ ಇಂಗ್ಲಿಷು-ವೆಲ್ಸ ಭಾಷಾ ನಿಘಂಟೊಂದು ಹೊರಟದ್ದಿತು. ೧೬೧೭ರಲ್ಲಿ ಮಿನ್‌ಷ್ಯೂ (Minsheu) ಎಂಬುವನು ದಶ ಭಾಷಾ ನಿಘಂಟುವೊಂದನ್ನು ಪ್ರಕಟಿಸಿದನು.

ಕ್ರಿ. ಶ. ೬೦೦ರಿಂದ ೧೬೦೦ರ ವರೆಗೆ ಹುಟ್ಟಿದ ನಿಘಂಟುಗಳೆಲ್ಲವೂ ಅನ್ಯಭಾಷೆಗೂ ಇಂಗ್ಲಿಷಿಗೂ ಪರಸ್ಪರ ಅರ್ಥ ಹೇಳುವುದಕ್ಕಾಗಿ ಮಾತ್ರವೇ ಕಲ್ಪಿತವಾಗುತ್ತ ಬಂದವು. ಇಲ್ಲಿಂದ ಮುಂದೆ ಇಂಗ್ಲಿಷು ಭಾಷೆಯ ಪದಗಳಿಗೆ ಇಂಗ್ಲಿಷು ಪ್ರತಿಪದಗಳಿಂದ ಅರ್ಥ ಹೇಳತಕ್ಕ ಜಾತಿಯ ನಿಘಂಟುಗಳು ಹುಟ್ಟಲಾರಂಭವಾದವು. ಈ ಹೊಸ ಜಾತಿಯ ನಿಘಂಟುಗಳ ವಿಕಾಸದ ಚರಿತ್ರೆಯನ್ನು ಸಂಗ್ರಹವಾಗಿ ನೋಡಬಹುದು.

### ಕ್ರಿ. ಶ. ೧೬೦೪ ರಿಂದ ೧೭೨೧ರ ವರೆಗೆ.

ರಾಬರ್ಟ ಕಾಡ್ರೆ (Cawdrey) ಎಂಬುವನು ೧೬೦೪ ರಲ್ಲಿ "ಕ್ಲಿಷ್ಟ ಪದಗಳ ಅಕಾರಾದಿ ಪಟ್ಟಿ" (The Table Alphabetical of Hard Words) ಎಂಬ ಅಭಿದಾನದಿಂದ ೧೨೦ ಪುಟಗಳುಳ್ಳ ಒಂದು ಚಿಕ್ಕ ಪುಸ್ತಕದಲ್ಲಿ ಸುಮಾರು ಮೂರು ಸಾವಿರ ಇಂಗ್ಲಿಷು ಪದಗಳಿಗೆ ಅರ್ಥವನ್ನು ಕೊಟ್ಟನು.

೧೬೧೬ ರಲ್ಲಿ ಜಾನ್ ಬುಲ್ಲೋಕರ್ ( Bullokar) ಎಂಬುವನು ಇದೇ ಜಾತಿಯ ಒಂದು ನಿಘಂಟನ್ನು "ಆಂಗ್ಲ ಬೋಧಿನಿ" ( An English Expositor ) ಎಂಬ ಹೆಸರಿನಿಂದ ಪ್ರಕಟಿಸಿದನು. ಇದು ೧೬೮೪ರಲ್ಲಿ ಸಹ ಮುದ್ರಿತವಾಗಿ ಜನರಲ್ಲಿ ಬಹಳ ಕಾಲ ಪ್ರಚಾರದಲ್ಲಿದ್ದಿತು.

ಹೇನ್ರಿ ಕಾಕೆರಾಮ್ ( Cockeram ) ಎಂಬುವನು ೧೬೨೩ರಲ್ಲಿ "ಇಂಗ್ಲಿಷು ನಿಘಂಟು" ( The English Dictionarie ) ಎಂಬ ಹೆಸರಿನಿಂದ ಒಂದು ಗ್ರಂಥವನ್ನು ಪ್ರಕಟಿಸಿದನು. ಈಗಿನ ಇಂಗ್ಲಿಷ ನಿಘಂಟುಗಳಿಗೆ ಇದು ಜನಕ ಎನ್ನಬಹುದು. ಈ ಗ್ರಂಥದಲ್ಲಿ ಮೂರು ಭಾಗಗಳಿದ್ದವು. ಮೊದಲನೆಯ ಭಾಗವಲ್ಲಿ ಕ್ಲಿಷ್ಟವಾದ ಪದಗಳು ಸುಲಭ ಪದಗಳಿಂದ ವಿವರಿಸಲ್ಪಟ್ಟಿವೆ. ಎರಡನೆಯ ಭಾಗದಲ್ಲಿ ಸುಲಭ ಪದಗಳಿಗೆ ಕ್ಲಿಷ್ಟವಾದ ಪದಗಳನ್ನು ಕೊಟ್ಟಿದೆ.

CC-0. Jangamwadi Math Collection. Digitized by eGangotri

ಮೂರನೆಯ ಭಾಗದಲ್ಲಿ ದೇವತೆಗಳು, ಸ್ತ್ರೀಪುರುಷರು, ಯುವಕ ಯುವತಿಯರು, ರಾಕ್ಷಸರು, ಪಶುಪಕ್ಷಿ ಮೃಗಗಳು, ನದೀ ನದ ವಾಪೀ ರೂಪಗಳು, ವನ ಲತೆ ವೃಕ್ಷ ರಾಜಿಗಳು, ಶಿಲೆಗಳು, ನಾಯಿಗಳು, ಮೀನುಗಳು ಮೊದಲಾದ ಅಂಶಗಳ ವಿವರವೆಲ್ಲಾ ಕೊಡಲ್ಪಟ್ಟಿದೆ; ಮತ್ತು ಇತಿಹಾಸ ಪುರಾಣಗಳಲ್ಲಿ ಬರತಕ್ಕ ಹೆಸರುಗಳೂ ವಿಶೇಷಗಳೂ ವಿವರಿಸಲ್ಪಟ್ಟಿವೆ.

೧೬೫೬ರಲ್ಲಿ ಬ್ಲೌಂಟ್ ( Blount) ಎಂಬುವನು ಅರ್ಥ ಕೋಶ ವಿವರ(Glossographia) ಎಂಬ ಒಂದು ನಿಘಂಟು ವನ್ನು ರಚಿಸಿ ಇಂಗ್ಲಿಷ ಭಾಷೆಯಲ್ಲಿ ಬರತಕ್ಕ ದೇಶ್ಯ ಮತ್ತು ಅನ್ಯಭಾಷೆಯ ಸಕಲ ಕ್ಲಿಷ್ಟ ಪದಗಳಿಗೂ ಅರ್ಥ ಬರೆಯಲು ಪ್ರಯತ್ನ ಪಟ್ಟನು.

ಈ ಶತಮಾನದಲ್ಲಿ ಈ ಜಾತಿಯ ಹತ್ತಾರು ನಿಘಂಟು ಗಳು ಹುಟ್ಟಿವೆ. ಅವುಗಳಲ್ಲಿ ಫಿಲಿಪ್ಸ, ಕೋಲ್ಸ್, ಕೋಕರ್, ಕರ್ಸೆ (Kersey) ಎಂಬುವರ ನಿಘಂಟುಗಳು ಬಹಳ ಪ್ರಸಿದ್ಧಿಗೆ ಬಂದಿದ್ದವು. ಈ ಕೊನೆಯ ಗ್ರಂಥದಲ್ಲಿ ಪ್ರಯೋಗದಲ್ಲಿ ಇಲ್ಲದೆ ಖಿಲವಾಗಿ ಹೋಗಿದ್ದ ಅನೇಕ ಪದಗಳನ್ನು ಖಿ. ಎಂದು ಸೂಚಿಸಿ ಅರ್ಥ ಹೇಳಲು ಪ್ರಯತ್ನ ನಡೆದಿತ್ತು.

( ಮುಂದುವರಿಯುವದು )



ವೇರೂಳದಲ್ಲಿಯ ವಿಶ್ವ ವಿಖ್ಯಾತ ಗುಹಾಂತ ರ್ದೇವಾಲಯಗಳ ಒಂದು ಕೋನದೃಶ್ಯ. ಎಡಗಡೆ ವಿಜಯದೀಪ ಸ್ತಂಭವೂ ಬಲಗಡೆ ಕಲ್ಲಿನಮೇಲೆ ರಾಮಾ ಯಣದ ಕೆತ್ತನೆಯೂ ಕಂಡುಬರುತ್ತವೆ.



CC-0. Jangamwadi Math Collection. Digitized by eGangotri

-❋ ಬಾಲ್ಯಜೀವನಚಿತ್ರ ❋-

# ಅಲ್ಲೀಕೋಟೆ

( ಸೌ. ಶ್ಯಾಮಲೆ )

★

**'ಅಲ್ಲೀಕೋಟೆ' ಬಾಲಿಕೆಯರ ಅಚ್ಚುಮೆಚ್ಚಿನ ಆಟ. ದೀವಳಿಗೆಯಲ್ಲಿ ಏಳುದಿನ ಹುಡುಗಿಯರು ಆಟಪಾಟಗಳಲ್ಲಿ, ಪಂಕ್ತಿ ಫಲಾಹಾರಗಳಲ್ಲಿ ಭಿನ್ನಭಾವ ಮರೆತು ಸಮರಸರಾಗಿರುತ್ತಾರೆ. ಅದೊಂದು ಸಂಪೂರ್ಣ ಜೀವನಚಿತ್ರ. ಕೋಟೆ ಹಾಕುವುದು, ಕೋಲಾಟವಾಡುವುದು, ಬಸಪ್ಪನಿಗೆ ನೀರು ಕುಡಿಸುವುದು, ಪಾದ ಹಾಕುವುದು—ಹೀಗೆ ನೂರಾರು ಸಣ್ಣ ಸಂಗತಿಗಳಿಂದ ಅವರಾ ಪುಟ್ಟ ನಾಟಕವು ತುಂಬಿರುತ್ತದೆ. ಅವರ ಸಿಟ್ಟು-ಸೆಡವು, ನಗೆ-ನಲಿವು ಎಲ್ಲವೂ ಮನೋಜ್ಞ. 'ಮಧುಮಧುರವಾ ರಮ್ಯಸ್ಮೃತಿ!'**

★

ಎಲ್ಲ ದೊಡ್ಡ ಹಬ್ಬಗಳಲ್ಲಿಯೂ ದೀವಳಿಗೆಯೊಂದು. ಬಲಿಪ್ರತಿಪದೆಯೆಂದರೆ ದನಗಳ, ಅದರಲ್ಲಿಯೂ ಎತ್ತುಗಳ ಹಬ್ಬವು. ಇಡಿಯ ವರುಷ ಎತ್ತುಗಳು ಪಟ್ಟ ಕಷ್ಟದ ಪರಿಪೂರ್ತಿಯನ್ನು ನೋಡಬೇಕು ಕಾರ್ತಿಕಮಾಸದಲ್ಲಿ! ಹೊಲಗಳೆಲ್ಲವೂ ಜೋಳ, ಗೋದಿ, ಹತ್ತಿ, ಕುಸಿಬೆ ಮುಂತಾದವುಗಳಿಂದ ನಳನಳಿಸುತ್ತವೆ. ಬಲ್ಲಿದರು ಮೊದಲ್ಗೊಂಡು ಬಡವರವರೆಗೂ ಎಲ್ಲರ ಮನೆಯೊಳಗಿನ ಭಾಗ್ಯಲಕ್ಷ್ಮಿಯು ಆಗ ಹೊಲದಲ್ಲಿಯೇ ವಾಸಮಾಡಿರುವಳೆಂಬಂತೆ ತೋರುವದು. ಮಳೆಗಾಲವು ಮುಗಿದಮೇಲೆ ಹೊಸತಾಗಿ ಕುಳ್ಳುಗಳನ್ನು ಬಡಿಯಬೇಕಾದರೂ ದೀವಳಿಗೆಯ ಪ್ರತಿಪದೆಯಂತಹ ಸುಮುಹೂರ್ತವು ಬೇಕಾಗುತ್ತದೆ. ಅಂತೆಯೇ ಕುಳ್ಳುಗಳನ್ನು ಹಚ್ಚುವ ಮೊದಲು ಸಗಣಿಯಿಂದ ದನದ ಹಕ್ಕೆಯಲ್ಲಿ ಪಾಂಡವರನ್ನೂ, ಗೋಕುಲವನ್ನೂ ಮಾಡಿ ಮರುದಿವಸದಿಂದ ಕುಳ್ಳುಗಳನ್ನು ಮಾಡತೊಡಗುತ್ತಾರೆ.

ಪ್ರತಿ ದೀವಳಿಗೆಯಲ್ಲಿಯೂ "ಅಲ್ಲೀಕೋಟೆ" ಎಂಬ ಆಟವನ್ನು ಹುಡುಗಿಯರು ಆಡುತ್ತಾರೆ. ಈಗಲೋ ಸುಧಾರಣೆ ಸುಧಾರಣೆಯೆಂದು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಇದರ ಉತ್ಸಾಹವು ತುಸು ಕುಗ್ಗಿದೆ. ಆದರೆ ಹಳ್ಳಿಹಳ್ಳಿಗಳಲ್ಲಿ, ಚಿಕ್ಕಪುಟ್ಟ ಪಟ್ಟಣಗಳಲ್ಲಿ ಬೆಳೆದ ಹುಡುಗಿಯರು ಸಹ ಇಂದಿಗೂ ಈ ಆಟವನ್ನು ಬಲು ಸಡಗರದಿಂದ ಆಡುತ್ತಾರೆ. ಯಾವುದೇ ಊರಲ್ಲಿಯಾಗಲಿ, ದೀವಳಿಗೆಯ ಪ್ರತಿಪದೆಯ ದಿವಸ ಒಳ್ಳೆಯ ಮುಹೂರ್ತದ ನಿಮಿತ್ತವಾಗಿ ದನಗಳನ್ನು —ವಿಶೇಷವಾಗಿ ಎತ್ತುಗಳನ್ನು ಸಿಂಗರಿಸಿ, ಓಲಗ—ಸಂಬಾಳ—ದೀವಟಿಗೆಗಳೊಂದಿಗೆ ಊರತುಂಬ ಮೆರವಣಿಗೆಯನ್ನು ಹೊರಡಿಸುವಂತೆಯೆ ಹೆಣ್ಣು ಹುಡುಗಿಯರಾಡುವಂಥ ಇದೊಂದು ಎತ್ತಿನ—ಅಂದರೆ ಬಸವಣ್ಣನ ಪೂಜೆಯ ಆಟ. "ಅಲ್ಲೀಕೇರಿ" ಎಂದರೆ, ದೊಡ್ಡವರು ಕಾರ್ತಿಕಮಾಸದಲ್ಲಿ ಪೈರುಗಳ ನಟ್ಟನಡುವೆ ಕುಳಿತು ಊಟ ಉಣಿಸು ಮಾಡಲಿಕ್ಕೆ ಹೋಗುವರಲ್ಲ — ಅದೇ.... ಆ ವನಭೋಜನ; Picnic Party. ಕೋಟೆಯೆಂದರೆ ಆ ಇಡಿಯ ಊರನ್ನೊಳಗೊಂಡ ಕೋಟೆ. "ಅಲ್ಲೀಕೋಟೆ" ಯು ಆ ಊರ ಕೋಟೆಯಲ್ಲಿ, ತುಟ್ಟತುದಿಯಲ್ಲಿರುವ ದೇವಾಲಯದೊಳಗಿನ ಬಸವಣ್ಣನ ಪೂಜೆ, ಅವನೆದುರಿಗೆ ಕುಳಿತು ಸಖಿಯರು ಮಾಡುವ ಪಂಕ್ತಿ—ಫಲಾಹಾರಗಳು, ಆಟ—ನೋಟಗಳು, ಹಾಡು—ಕಥೆಗಳು.

ದಸರೆಯು ಮುಗಿದ ಮರುದಿನನೇ ಏಕಾದಶಿ. ಆವೊತ್ತು ಹಿರಿಯರಿಗೆಲ್ಲ ಉಪವಾಸ. ಕಿರಿಯರಿಗೆಲ್ಲ ವಾಡಿಕೆಯ ಸಂಭ್ರಮದೂಟ ಸಿಗುವದಿಲ್ಲ. ಅಕ್ಕಿಯ ಉಸಳಿ, ಹುಣಸೇಗೊಜ್ಜು, ಮೆಂಥೇ ಹಿಟ್ಟು, ಹೆಚ್ಚಾದರೆ ಹಾಲು. ಕಿರಿಯರಿಗೂ ಅಷ್ಟೇ ಸಾಕಾಗಿರುತ್ತದೆ. ಗೆಳತಿಯರೆಲ್ಲರೂ ತಂಡತಂಡವಾಗಿ ಪ್ರಮುಖಳೊಬ್ಬಳ ಮನೆಯಲ್ಲಿ ಸಭೆ ನೆರೆಯಿಸಿ, ಶಿವಪಾರಿಜಾತ, ಶ್ರೀಕೃಷ್ಣಪಾರಿಜಾತ, ವೆಂಕಟೇಶಪಾರಿಜಾತ ಮೊದಲಾದವುಗಳಲ್ಲಿನ ಹಾಡುಗಳನ್ನು ಕೋಲುಥಟ್ಟೆಯಲ್ಲಿ ಅನ್ನಲಿಕ್ಕೆ ಕಲಿತು ಎಂಟು ದಿನಗಳಲ್ಲಿ ತಯಾರಾಗುತ್ತಾರೆ. ಒಂದು ಊರಲ್ಲಿ, ಪೇಟೆಗೊಂದೊಂದೇ ಎಂದೆಣಿಸಿದರೂ, ಮೂರು ನಾಲ್ಕು ಅಲ್ಲೀಕೋಟೆಗಳನ್ನು ಹಾಕುತ್ತಾರೆ. ಮುನಿಸಿಪಾಲಿಟಿಯಲ್ಲಿ ದೊಡ್ಡ ದೊಡ್ಡ ಕೌನ್ಸಿಲ್ಲುಗಳಲ್ಲಿ ಸಹ ಕಾಣಲು ಸಿಗದಷ್ಟು ಪಕ್ಷಾಭಿಮಾನವು ಈ ಬಾಲಿಕೆಯರ ಪಂಗಡಗಳಲ್ಲಿರುತ್ತದೆ. ಮುನ್ನಾವರುಷ ಕೂಡಿ ಆಡಿದ್ದ ಇಬ್ಬರು ಗೆಳತಿಯರು ಈ ವರುಷದ ದೀವಳಿಗೆಯಲ್ಲಿ ಜಗಳವಾಡಿ, ಬೇರೆ ಬೇರೆ ಕೋಟೆಗಳಿಗೆ ಸೇರ

CC-0. Jangamwadi Math Collection. Digitized by eGangotri

ಬಹುದು; ಹಬ್ಬವೂ ಸೂಟಿಯೂ ಮುಗಿದ ಬಳಿಕ ಶಾಲೆಯಲ್ಲಿ ಇಬ್ಬರೂ ಮತ್ತೆ ಮೊದಲಿನಂತೆ ಕೂಡಿ ಆಡುವದು, ಅಭ್ಯಾಸ ಮಾಡುವದು ಮೊದಲಾದುದನ್ನು ನಡೆಯಿಸಬಹುದು. ಮುಂದಿನ ವರುಷ ಅಲ್ಲೀಕೋಟೆಯ ದಿನಗಳು ಸಮೀಪಿಸಿದ ಕೂಡಲೆ — ಇಬ್ಬರೂ ಸುಖಸುಖವಾಗಿಯೇ, ಕಾರಣ ವಿಲ್ಲದೆಯೇ ಬೇರೆ ಬೇರೆ ಸಂಗಡಗಳಲ್ಲಿ ಮತ್ತೆ ಸೇರು ತ್ತಾರೆ!

"ಅಲ್ಲೀಕೋಟೆ" ಯನ್ನು ಇಂಥವರ ಮನೆಯಲ್ಲಿಯೇ ಹಾಕಬೇಕೆಂದು ಗೊತ್ತುಮಾಡಿದವರಲ್ಲಿ, ಹಬ್ಬವು ಇನ್ನೂ ಎಂಟು ದಿನಗಳಿರುವಾಗಲೇ ಕುಂಬಾರನ ಮನೆಯಿಂದ ಹರಿ ವಾಣಗಳನ್ನು ತಂದು, ಗೋದಿ, ಭತ್ತ, ನವಣೆಗಳನ್ನು ಬಿತ್ತುತ್ತಾರೆ. ದೀವಳಿಗೆಯ ಮುಂದಿನ ಗುರುದ್ವಾದಶಿಯ ದಿನಕ್ಕೆಂದರೆ ಸಸಿಗಳು ಮೊಳೆತು, ಒಂದೊಂದು ಗೇಣುದ್ದ ಬೆಳೆದು, ಗೋದಿ—ಭತ್ತ—ನವಣೆಗಳ ಪುಟ್ಟ ಹೊಲಗಳಂ ಬಂತೆ ಸುಂದರವಾಗಿ ಕಾಣುತ್ತವೆ. ದ್ವಾದಶಿಯ ದಿವಸ ಕ್ಕೇನೇ "ಅಲ್ಲೀಕೋಟೆ" ಯ ಸಿದ್ಧತೆಯು ಮುಗಿಯುತ್ತ ಬಂದು ಮರುದಿವಸ ಆಟಕ್ಕೆ ಮೊದಲಾಗುವುದು. ಅಂದು ಮನೆಯಲ್ಲಿ ಗುಳ್ಳವರಿಗೆ, ಕರಚೀಕಾಯಿ, ಚಕ್ಕುಲಿ ಮುಂತಾದ ರುಚಿಕಟ್ಟಾದ ಫಲಾಹಾರದ ಪದಾರ್ಥಗಳು ಕಣ್ಣಿಗಂದ ಕಾಣುವಂತೆ ಸಿದ್ಧವಾಗುತ್ತವೆ. ಸಾಯಂಕಾಲದಲ್ಲಿ ಬಗೆಬಗೆಯ ಕಟ್ಟಿಗೆಯ ಕೆತ್ತನೆಯ, ಬಣ್ಣಬಣ್ಣದ ಗಾಜಿನ, ಕರ್ಪುರದ, ರಬ್ಬರಿನ, ಮಣಿಗಳಿಂದ ಹೆಣೆದ, ಅಂದಚೆಂದದ ಸಾವಿರಾರು ಸಾಮಾನುಗಳು — ತಾಯಂದಿರು ವಂಶಪರಂ- ಪರೆಯಿಂದ ಹಳೇ ಪೆಟ್ಟಿಗೆಯಲ್ಲಿ ಕಾಯ್ದಿಡುತ್ತ ಬಂದ ಆಟಗೆಯ ಒಡವೆಗಳು ಹೊರಬಿದ್ದು, ತೊಳೆಸಿಕೊಂಡು- ಒರೆಸಿಕೊಂಡು ಲಕಲಕಿಸುತ್ತವೆ; ಎಲ್ಲರೂ ತಮ್ಮ ಊಟ ಗಳನ್ನು ಬೇಗ ಮುಗಿಸುತ್ತಾರೆ; ತಾಯಿಯು, ಹೇಗಾದರೂ ಮಾಡಿ ತಂದೆಯು ಸಹ ಮಗಳಿಗೆ ಆಟದ ಅಣಿ ಮಾಡಿ ಕೊಡುವಂತೆ ಮಾಡುವಳು.

ತೀರ ಹೊರಗೆ ಪಡಸಾಲೆಯೊಳಗಿನ ಒಂದು ಕೋಣೆ ಯನ್ನೇ ಇದಕ್ಕೆ ಮೀಸಲಿಡುವರು. "ಕೋಟೆ"ಯೆಂದರೆ ಸಣ್ಣ ಪ್ರಮಾಣದಲ್ಲಿ ಒಂದು ಊರೇ ಆಗಿರುವದು. ಇಡಿಯ ಒಂದಂಕಣ ಸ್ಥಳವನ್ನು ನಡುವಿಟ್ಟು ಸುತ್ತಲೂ ಮೊಳಕಾಲುದ್ದ ಕೊತ್ತಳದಂತೆ ಗೋಡೆ ಕಟ್ಟುವರು. ಹಿಂಬದಿಯ ಮೂರು ಮಗ್ಗುಲಿಗೆ ನಟ್ಟನಡುವೆ ಗೋಡೆ ಗಳಿಗಿಂತ ಒಂದು ಗೇಣು ಎತ್ತರವಾದ ಚೌಕಟ್ಟನ್ನಿಡುವರು. ಎದುರಿಗಿನ ಗೋಡೆಯಲ್ಲಿಯ ನಟ್ಟನಡುವಿನ ಚೌಕಟ್ಟು ಅದಕ್ಕೂ ಎತ್ತರವಿರುವದು; ಇದೇ ಆ ಕೋಟೆಯ ದೊಡ್ಡ ಹೆಬ್ಬಾಗಿಲು. ಕೋಟೆಯ ಗೋಡೆಯ ನಾಲ್ಕು ಮೂಲೆಗೂ ನಾಲ್ಕು ಸಸಿ ಬೆಳೆದ ಹರಿವಾಣಗಳನ್ನಿಡುವರು; ಇವೇ ಆ ಊರ ಹೊರಗಿನ ಹೊಲಗಳು. ಒಂದು ಮೂಲೆಗೆ ಒಂದು ಕುಟುಂಬವಿರುವಂತೆ ಮನೆ, ಅದಕ್ಕೆ ಕಿಟಕಿ- ಬಾಗಿಲುಗಳು. ಅಡಿಗೆಯ ಮನೆ, ಬಾಣಂತಿಯ ಕೋಣೆ, ಬಚ್ಚಲುಮನೆ, ತೊಟ್ಟಿಲು, ಅಜ್ಜಿಯು ಕಾಳು ಹಸನ ಮಾಡುವದು, ಇತ್ಯಾದಿ. ಇನ್ನೊಂದು ಕಡೆಗೆ ಸರ್ಕಸ್ಸು. ಎದುರಿಗೆ ಕಟ್ಟಿಗೆಯ ಕುರ್ಚಿಗಳ ಮೇಲೆ ಕರ್ಪುರದ ಪ್ರೇಕ್ಷ ಕರು. ಒತ್ತಟ್ಟಿಗೆ ಶಾಲೆ, ಹೋಟಲು, ಹೂದೋಟ, ದವಾ ಖಾನೆ. ಇನ್ನೊಂದು ಕಡೆಗೆ ಪೇಟೆ ಒತ್ತಟ್ಟಿಗೆ ಬಾಂವಿ, ಹೆಣ್ಣುಮಕ್ಕಳು ನೀರಿಗೆ ಹೋಗುವದು ........ ಇತ್ಯಾದಿ. ಎಳೆಹುಡುಗಿಯರ ಕಲ್ಪನಾಶಕ್ತಿಯೆಲ್ಲ ಇಲ್ಲಿ ವ್ಯಕ್ತವಾಗು ತ್ತದೆ. ಈಚೆಗೆ 'ಸದಾಸಿದ್ಧ' (ready-made) ಸೆಲ್ಯು ಲೈಡ್ ಗೊಂಬೆಗಳೇ ಎಲ್ಲಾ ಸ್ಥಳವನ್ನು ತುಂಬಿಕೊಂಡಿರು ತ್ತವೆ. ಹಿಂದಕ್ಕೆ ಕುಂಬಾರರ, ಚಿತ್ರಕಾರರ, ಜೀನಗಾರರ, ಬಡಿಗರ ಕೈವಾಡಕ್ಕೆ ತುಂಬಾ ಪ್ರಾಶಸ್ತ್ಯವಿದ್ದಿರಬೇಕು. ಆದಿ ರಲಿ.... ನಟ್ಟನಡುವೆ ಎತ್ತರವಾದ ಒಂದು ಗದ್ದುಗೆ ಮಾಡಿ, ಅಲ್ಲಿ ದೊಡ್ಡದೊಂದು ಬಸವಣ್ಣನನ್ನಿಡುತ್ತಾರೆ. ಅವನ ಮುಂದೆ ಒಂದು ಮಣ್ಣಿನ ಗೋದನೆಯನ್ನಿಟ್ಟು, ಅದರಲ್ಲಿ ಒಣಹುಲ್ಲನ್ನು ಹಾಕುವರು; ಅವನ ಬಲಗಡೆಗೆ ಅರಸಿಣ- ಕುಂಕುಮದ ತಟ್ಟೆಯನ್ನೂ, ಸುತ್ತಲೂ ಫಲಾಹಾರದ ತಟ್ಟೆ ಗಳನ್ನೂ ಇಡುತ್ತಾರೆ. ಕೋಟೆಯ ಹೊರಮಗ್ಗುಲಿಗೆ ನಾಲ್ಕು ಮೂಲೆಗಳಿಗೆ ಹತ್ತಿ ನಾಲ್ಕು ಎತ್ತರವಾದ ಸಮೆಗಳನ್ನು ಹಚ್ಚಿಟ್ಟು, ಕೋಟೆಯ—ಎಂದರೆ ಇಡಿಯ ಊರ ತುಂಬ ಬೆಳಕು ಬೀಳುವಂತೆ ಮಾಡುವರು. ಈ ಬಸವಣ್ಣನ ಹತ್ತರ ಇನ್ನೊಂದು ಚಿಕ್ಕ ಬಸವಣ್ಣನಿರುವನು. ಈ ಚಿಕ್ಕ ಬಸವಣ್ಣನನ್ನೇ ಹೊರಕ್ಕೆ ಮೆರೆಯಿಸುತ್ತಾರೆ; ಯಾರೂ ಒಳನುಗ್ಗಿ ಅಚ್ಚುಕಟ್ಟನ್ನು ಕೆಡಿಸಬಾರದೆಂತಲೂ, ಸಾಮಾ ನುಗಳನ್ನು ಕದಿಯಬಾರದೆಂತಲೂ ಬಾಗಿಲಿಗೆ ಅಡ್ಡವಾಗಿ ಕೋಲುಗಳನ್ನು ಕಟ್ಟಿಬಿಡುತ್ತಾರೆ; ಇಷ್ಟೆಲ್ಲ ಸಡಗರವು ದ್ವಾದಶೀ ರಾತ್ರಿಯಿಂದ ಧನ ತ್ರಯೋದಶಿಯ ಬೆಳಗು ಹರಿ ಯುವದರ ವರೆಗೆಂದರೆ ಸಿದ್ಧವಾಗುತ್ತದೆ; ಎರಡೂ ಹೊತ್ತು ಸಸಿಗಳಿಗೆ ನೀರು ಹಾಕಲಿಕ್ಕೆ, ದೀಪ ಹಚ್ಚಲಿಕ್ಕೆ, ತಾಯಿ ಯೊಬ್ಬಳು ಮಾತ್ರ ಕೋಣೆಯಲ್ಲಿ ಪ್ರವೇಶ ಮಾಡುತ್ತಾಳೆ.

ತ್ರಯೋದಶಿಯ ದಿವಸ ಸಾಯಂಕಾಲಕ್ಕೆ ಆ ಗದ್ದು ಗೆಯ ಮೇಲಣ ಬಸವಣ್ಣನನ್ನು ಮೆರೆಯಿಸಿ ತಂದು ಸ್ಥಾಪನೆ

CC-0. Jangamwadi Math Collection. Digitized by eGangotri

ಮಾಡುವರು ಎರಡೂ ಬಸವಣ್ಣಗಳಿಗೂ ಬಸಪ್ಪನೆಂದು ಕರೆಯುವದುಂಟು; ಹಾಗೂ ಕೋಟಿ ಹಾಕಿದವಳಿಗೆ "ಬಸಪ್ಪನ ತಾಯಿ" ಯೆನ್ನುವ ಸಂಪ್ರದಾಯ. ಸಂಜೆಗೆ ಆ ಬಸಪ್ಪನನ್ನೂ ಬಸಪ್ಪನ ತಾಯಿಯನ್ನೂ ಕರೆದುಕೊಂಡು, ಅರಸಿಣ ಕುಂಕುಮ, ಚೂರಮರಿಗಳೊಂದಿಗೆ ಒಬ್ಬ ಹುಡುಗಿಯು ಊರಲ್ಲಿ ಸ್ವಲ್ಪ ದೂರವಿರುವ, ಬಸವಣ್ಣನ ಅಥವಾ ಇನ್ನಿತರ ಗುಡಿಯೊಂದರಲ್ಲಿ ಮುಂಚಿತವಾಗಿಯೇ ಹೋಗಿ ಕುಳಿತುಕೊಳ್ಳುವಳು; ಇತ್ತ ಉಳಿದ ಹುಡುಗಿಯರು ಕೋಟಿ ಹಾಕಿದ ಬಾಗಿಲ ಮುಂದೆ ಥಳಿ-ರಂಗೋಲಿ ಹಾಕಿ, ತಳಿರು-ತೋರಣಗಳನ್ನು ಕಟ್ಟಿ, ದೊಡ್ಡ ಹುಡುಗಿಯರು ದುಂಡಗೆ ಕೈಹಿಡಿದು ಕೋಟಿ ಕಟ್ಟಿಕೊಂಡು, ಚಿಕ್ಕವರಿದ್ದವರನ್ನು ಒಳಕ್ಕೆ ಸೇರಿಸಿ, ಒಬ್ಬಳು ಹಾಡು ಹಾಡುತ್ತಲೂ, ಉಳಿದವರೆಲ್ಲ "ಕೋಲು ಕೋಲೆನ್ನ...." ಎಂದು ಹಾಡಿಗೆ ತಕ್ಕ ಧಾಟಿಯಲ್ಲಿ ಪಲ್ಲವಿಯನ್ನು ಹೇಳುತ್ತಲೂ, ಬಸಪ್ಪನನ್ನೂ ಆತನ ತಾಯಿಯನ್ನೂ ಎದುರುಗೊಂಡು ತರಲಿಕ್ಕೆ ಹೊರಡುವರು. ಪೂಜೆ ಪುನಸ್ಕಾರವಾದ ಬಳಿಕ ಬಸಪ್ಪನಿಗೆ "ನೀರು ಕುಡಿಸುವರು". ಪ್ರತಿಯೊಬ್ಬಳ ಹತ್ತಿರವೂ ಒಂದೊಂದು ಗಿಂಡಿಯಿರುತ್ತದೆ. ಅದಕ್ಕೆ "ಅಲ್ಲೀಗಿಂಡಿ" ಎನ್ನುತ್ತಾರೆ; ಗಿಂಡಿಗಳಿಲ್ಲದ ಹುಡುಗಿಯರು ಚೆಂಡುಹೂವುಗಳನ್ನು ನೀರಿನಲ್ಲಿ ಎದ್ದಿ, ಬಸವಣ್ಣನ ತಬಕದ ಸುತ್ತಲು ನಿಂತುಕೊಂಡು, ದುಂಡಗೆ ತಿರುಗುತ್ತ, ನೀರನ್ನು ಅವನ ಮೇಲೆ ಸಿಂಪಡಿಸುತ್ತ, "ಬಸವಕ್ಕ ಬಸವನ್ನಿರೆ, ಬಸವನ ಪಾವಕ ಶರಣನ್ನಿರೆ—ಒಂದು ಸುತ್ತಿನ ಕೋಟಿ, ಆದರೊಳಗ ಒಂದು ಚಂದದ ಬಸವ...." ಎಂದು ಹತ್ತು ಸುತ್ತಿನ ವರೆಗೂ ಹಾಡು ಹೇಳಿ, ಬಳಿಕ ತಮ್ಮತಮ್ಮ ಗಿಂಡಿಗಳನ್ನೂ, ಹೂಗಳನ್ನೂ ತೂರಾಡುತ್ತ, "ಅಲ್ಲ್ಯೋ ಪಿಲ್ಲ್ಯೋ—ಗಿಂಡೀಯ ಬಸವಾ!" ಎಂದು ಕುಣಿದಾಡುವರು. ಬಸಪ್ಪನಿಗೆ ನೀರು ಕುಡಿಸುವದೆಂದರೆ ಇದೇ. ಆ ಮೇಲೆ ಎಲ್ಲರೂ ಕೂಡಿ ಚೂರಮರಿ ತಿಂದು, ಬಸಪ್ಪನೊಡನೆ ಆತನ ತಾಯಿಯನ್ನು ಕೋಟಿಯಲ್ಲಿ ನಡುವೆ ಇಟ್ಟುಕೊಂಡು, ಹಾಡುತ್ತ ಮನೆಗೆ ಬಂದು, ದೊಡ್ಡ ಬಸವಣ್ಣನ ಸ್ಥಾಪನೆ ಮಾಡಿ, ಸಣ್ಣವನನ್ನು ಕೆಳಗಡೆಗೆ ಒಂದು ಮಣೆಯ ಮೇಲೆ ಇಡುತ್ತಾರೆ. ಬಳಿಕ ಸಖಿಯರೆಲ್ಲ ತಮ್ಮತಮ್ಮ ಮನೆಗೆ ಹೋಗುವರು. ಅಂದಿನ ಕಾರ್ಯಕ್ರಮವು ಇಲ್ಲಿಗೆ ಮುಗಿಯಿತು. ಒಂದು ವಾರದ ವರೆಗೂ ಹೀಗೆ ಸಾಗುವದು.

ಕೋಟಿ ಕಟ್ಟಿಕೊಂಡು ಹೊರಟಾಗ ಇನ್ನೊಂದು ಕೋಟಿಯು ಎದುರಿಗೆ ಬಂದಿತೆಂದರೆ, ಬಸಪ್ಪನೊಡನೆ ಬಸಪ್ಪನ ತಾಯಿಯನ್ನು ಕೋಟಿಯಿಂದ ಹೊರಕ್ಕೆ ತೆಗೆದು ಬೀದಿಗುಂಟ ಹಾಗೆಯೇ ನಡೆಸುವರು. ಎರಡೂ ಕೋಟಿಯವರೂ ಹೀಗೆ ಮಾಡುವದುಂಟು. ಬಳಿಕ ಇಬ್ಬರೂ ತಾಯಂದಿರು ಮುಂದೆ ಬಂದು ಪರಸ್ಪರರಿಗೆ ಕುಂಕುಮ ಹಚ್ಚುತ್ತಾರೆ; ಹೀಗೆಂದರೆ ಹಾಡಿನ ವಾದಕ್ಕೆ ಇಬ್ಬರೂ ಸಿದ್ಧರೂ ಸನ್ನದ್ಧರೂ ಆಗಬೇಕೆಂದು ಪರಸ್ಪರರಿಗೆ ಆಮಂತ್ರಣ ಕೊಟ್ಟಂತೆ! ನೂರಾರು ಹಾಡುಗಳನ್ನು ಹಾಡಬಲ್ಲ ಕೋಟಿಯವಳು ಧೈರ್ಯದಿಂದ, 'ವಾದ' ವನ್ನು ಆರಭಿಸುವ ಸ್ಥಳವನ್ನೂ ಕಾಲವನ್ನೂ ಕೇಳತೊಡಗುವಳು; ಹಾಡಲರಿಯದ ಪಕ್ಷದವಳು, ತನ್ನ ಜೊತೆಗಾತಿಯರನ್ನೊಡಗೂಡಿ, ಹಾಡು ಬಲ್ಲವಳ ಕೂಡ ಕುಂಟ ನ್ಯಾಯ ಹೂಡುತ್ತಾಳೆ. ಅಲ್ಲೀಕೋಟಿಯನ್ನು ಹಾಕುವವರಿಗೆ ಒಂದು ಬಂಧನವಿದೆ ಅದೆಂದರೆ ಇಬ್ಬರೂ ವಾದ ಹಾಕಬೇಕು, ಇಲ್ಲವಾದರೆ ವಾದ ಹಾಕಲು ಬಾರದವಳು ತನ್ನ ಬಸಪ್ಪನನ್ನು ವಾದ ಹಾಕಬಲ್ಲಾಕೆಗೆ ಕೊಡಬೇಕು; ಹೀಗೆ ಸೋತಂತೆ ಒಪ್ಪಿಕೊಂಡವಳು ಮರುದಿನ ಗೆದ್ದವಳ ಮನೆಗೆ ಉಡುಗೊರೆ ಒಯ್ದು ಖುಷಿ ಮಾಡಿದಾಗ ಒತ್ತೆ ಬಿದ್ದ ಅವಳ ಬಸಪ್ಪನು ಮರಳಿ ಸಿಗುವನು. ಅವನನ್ನು ಬಿಡಿಸಿ ತರಲೇಬೇಕೆಂಬುದು ಕೋಟಿಯ ಕಾನೂನು; ಆದರೆ ಕೆಲವು (ಸೋತ ಪಕ್ಷದ) ಕಳ್ಳಿಯರು ತುಂಟ ನ್ಯಾಯ ಹೂಡಿ, ಬಸಪ್ಪನನ್ನು ಓಡಿಸಿ ಬಿಡುತ್ತಾರೆ. ಇದನ್ನು ತಿಳಿದುಕೊಂಡು ಮೊದಲನೆಯವಳು ಚದರಿದ ತನ್ನ ಗುಂಪನ್ನು ಸರಿಪಡಿಸಿಕೊಂಡು, ಕೈಯ್ಯ ಒಳ್ಳಿಯನ್ನು ಎಂದರೆ ಕೋಟಿಯನ್ನು ಕಟ್ಟಿಕೊಂಡು ಹೊರಡಲನುವಾಗುವಳು. ಕೂಡಲೆ ಜಗಳಗಂಟ ತಂಡದವರು ಬೀದಿಯ ಎರಡೂ ಸಾಲುಗಳ ಮನೆಯ ಕಟ್ಟೆಗಳ ಮೇಲೆ ಅರ್ಧರ್ಧ ಜನರಾಗಿ ನಿಂತು ಬಿಡುವರು. ಎಂದರೆ ಗೆದ್ದವಳು ಕೋಟಿಯನ್ನು ನಡುವೆ ಹಾಯಿಸಬಾರದಂತೆ; ಹಾಯಿಸಿದರೆ ಬಸಪ್ಪನೂ ಅವನ ತಾಯಿಯೂ ಸತ್ತ ವೈಲಿಗೆ ಬಂದಷ್ಟು ವಾಗತ್ಯವಂತೆ!! ಕೂಡಲೆ ಈ ಕಳ್ಳಿಯರು ಅದನ್ನರಿತು ಬಸಪ್ಪನನ್ನು ಅವನ ತಾಯಿಯ ಸಹಿತ ಬೇರೆ ಹಾದಿಯಿಂದ ಕಳಿಸಿ, ತಾವು ಬರಿಯ ಕೋಟಿಯನ್ನು ಇನ್ನೊಂದು ಹಾದಿಯಿಂದ ಒಯ್ದು, ಕಡೆಗೆ ಅದಾವುದೋ ಒಂದು ಬೀದಿಯ ಕೂಟಕ್ಕೆ ಬಂದು, ಎಲ್ಲರೂ ಮತ್ತೆ ಒಟ್ಟಾಗಿ ಮುಂದಕ್ಕೆ ಸಾಗುವರು. ಬಸಪ್ಪನಿಗೆ ನೀರು ಕುಡಿಸಿ ಮನೆಗೆ ತಿರುಗುವರು.

ಇನ್ನೂ ಇಪ್ಪತ್ತು ಹೆಜ್ಜೆಗಳಷ್ಟು ದೂರವಾಗಿ ಮನೆಯಿರುವಾಗಲೆ, ಕೆಲವು ಹುಡುಗಿಯರು ಮುಂದಕ್ಕೆ ಓಡಿ ಬಂದು

CC-0. Jangamwadi Math Collection. Digitized by eGangotri

ಬಾಗಿಲನ್ನು ಒಳಗಿನಿಂದ ಇಕ್ಕಿಕೊಂಡು ಬಿಡುವರು. ಅಷ್ಟ ರಲ್ಲಿ ಉಳಿದ ಕೋಟೆಯವರು ಬಾಗಿಲಿಗೆ ಬಂದು, "ತಗಿ ಬಾಗಿಲವ ! ಸುಗುಣೆ ಸುಂದರಿ ! ಮುಗಿವೆ ಕರವನು...." ಅಥವಾ "ನಾಗವೇಣಿಯೆ ಬೇಗ ಬಂದು ಬಾಗಿಲಂ ತೆಗೆ...." ಇವೇ ಮೊದಲಾದ ನಾಲ್ಕಾರು ಬಾಗಿಲು ತಡೆಯುವ ಹಾಡು ಗಳನ್ನು ಒಳಗಿನವರಿಗೆ ತೃಪ್ತಿಯಾಗುವಂತೆ ಹೇಳಿದ ಬಳಿಕ, ಒಳಗಿನ ನಾಗವೇಣಿಯರೂ ಸುಂದರಿಯರೂ ಬಾಗಿಲನ್ನು ತೆರೆಯುವರು. ಆ ಮೇಲೆ ಎಲ್ಲರ ಅಲ್ಲೀಗಿಂಡಿಗಳನ್ನು ಎರ ಡೆರಡು ಮೊಳಕ್ಕಿಂತ ಎತ್ತರವಾಗಿ ಅಡಕಲೇರಿಸಿಡುವರು. ಬಳಿಕ ಪ್ರತಿಯೊಬ್ಬಳೂ ತನ್ನ ಸೀರಿಗೆಗಳು ಅಥವಾ ಕಾಲು ತಾಗಿ ಅವು ಉರುಳದಷ್ಟು ಜೋಕೆಯಾಗಿ ಅವುಗಳ ಮೇಲಿಂದ ಜಿಗಿಯಬೇಕು. ಒಂದು ವೇಳೆ ಧಕ್ಕೆ ತಗಲಿ ಅವು ಬಿದ್ದರೆ, ಕೆಡಹಿದವಳು ಗಂಡನ ಹೆಸರನ್ನು ಹೇಳ ಬೇಕು; ಮದುವೆಯಾದವಳಿದ್ದರೆ ಗಂಡನ ಹೆಸರಂತೂ ಸೈಯೇ ! ಆದರೆ ಕುಮಾರಿಕೆಯಿದ್ದರೆ, ಇರುವನಲ್ಲ ಜಗತ್ತಿ ನೊಳಗಿನ ಎಲ್ಲ ಕುಮಾರಿಕೆಯರ ಗಂಡ, ಚಂದ್ರಾಮರಾಯ! ಆತನ ಹೆಸರನ್ನು ಚೆಂದವಾಗಿ ಒಗಟೆ ಹಾಕಿ, "ಚಿಕ್ಕೆ ನನ್ನ ಮಕ್ಕಳು, ಚಂದ್ರಾಮ ನನ್ನ ಗಂಡ" ಎಂದಂತೂ ಹೇಳ ಲಿಕ್ಕೇ ಬೇಕು. ಒಂದು ವೇಳೆಗೆ ಯಾವಳೊಬ್ಬಳು ಜಿಗಿ ಯುವ ಕಾಲಕ್ಕೆ ಮಿಳ್ಳಿಗಳು ಬೀಳುವ ಲಕ್ಷಣ ತೋರದಿದ್ದರೆ ಎಡಬಲದಲ್ಲಿ ನಿಂತ ಸಖಿಯರು, ಅವಳು ಜಿಗಿಯುವ ಹೊತ್ತಿಗೆ ಸರಿಯಾಗಿ ಅಡ್ಡಗಾಲನ್ನು ಹಾಕಿ, ಅವನ್ನು ಉರು ಳಿಸಿ, ಅವಳಿಂದ ಗಂಡನ ಹೆಸರನ್ನು ಹೇಳಿಸಿಕೊಳ್ಳುವ ವಾಡಿ ಕೆಯುಂಟು. ಬಳಿಕ ಎಲ್ಲರೂ ಪಡಸಾಲೆಯಲ್ಲಿ, ಅಥವಾ ಮನೆಗೆ ಅಂಗಳವಿದ್ದರೆ ಅಂಗಳದಲ್ಲಿ ಇದಿರುಬದಿರಾಗಿ ಕುಳಿತುಕೊಂಡು, ಕೆಲವು ಮೋಜಿನ ಹಾಡುಗಳನ್ನೂ, ಒಗಟೆ ಗಳನ್ನೂ ಹಾಡುವರು. ಕೆಲವು ಹಾಡುಗಳು ಪ್ರಶ್ನೋತ್ತರ ರೂಪದಲ್ಲಿರುತ್ತವೆ: ಒಂದು ಬದಿಯವರು ಪ್ರಶ್ನೆ ಕೇಳುವದು, ಇನ್ನೊಂದು ಬದಿಯವರು ಅದಕ್ಕೆ ಉತ್ತರ ಕೊಡುವದು. ಒಗಟದವೂ ಹಾಗೆಯೇ. ಒಬ್ಬರು ಒಗಟೆ ಹಾಕುವದು ಇನ್ನೊಬ್ಬರು ಬಿಚ್ಚುವದು. ಪ್ರತಿದಿನವೂ ಫಲಾಹಾರ ವಾಗಲಿ, ಪಂಕ್ತಿಯಾಗಲಿ ಆಗಲೇಬೇಕು. ಬಾಲಿಕೆಯ ರೆಲ್ಲರೂ ಮನೆಗೆ ಹೋಗಿ ಹೊಸ ಅರಿವೆಗಳನ್ನು ಬದಲಿಸಿ, ತಮ್ಮತಮ್ಮಲ್ಲಿ ಮಾಡಿದ ತಿನಸನ್ನು ತಟ್ಟೆಯಲ್ಲಿ ತುಂಬಿ ಕೊಂಡು ಬರುವರು. ಹರಟೆ ಹೊಡೆಯುತ್ತ ಫಲಾಹಾರ ಮಾಡುವರು. ವೀಳ್ಯವನ್ನು ತಿಂದು ಪಗಡೆಯಾಡುವರು. ನಾಲ್ಕಕ್ಕೆ ಆಟವನ್ನು ಬಿಟ್ಟುಕೊಟ್ಟು, ಮನೆಗೆ ಹೋಗಿ ಶೃಂಗಾರವಾಗಿ ಬಂದು ಮತ್ತೆ ಬಸಪ್ಪನಿಗೆ ನೀರು ಕುಡಿಸ ಲಿಕ್ಕೆ ಹೊರಡುತ್ತಾರೆ. ಅಂತೂ ಇಡಿಯ ದಿನ ಆಟಪಾಟ ಗಳಲ್ಲಿ ಕೂಡಿಯೇ ಕಳೆಯುವರು. ಸಂಜೆಯೂಟವಾದ ಮೇಲೆ ಸಹ ಕತೆಗಳನ್ನು ಹೇಳುತ್ತ ಗುಂಪಾಗಿ ಕಟ್ಟೆಯ ಮೇಲೆ ಕುಳ್ಳಿರುವರು. ಜಾತಿ—ಗೋತ್ರ—ವಯಸ್ಸುಗಳ ಹೆಚ್ಚುಕಡಿಮೆಗಳನ್ನು ಮರೆತು ಸಂಪೂರ್ಣ ಸಮರಸರಾಗಿರು ವರು. "ಮಧುಮಧುರವಾ ರಮ್ಯಸ್ಮೃತಿಯು !"

ಎರಡೂ ಬಣಗಳವರು ಹಾಡುಬಲ್ಲವರಿದ್ದಾಗ, ವಾಡಿಕೆ ಯಂತೆ ಕುಂಕುಮ ಹಚ್ಚಿ ಪರಸ್ಪರರನ್ನು ಆಮಂತ್ರಿಸುವರು. ವಾದದ ಹೊತ್ತಿನಲ್ಲಿ ಸೀರೆಯ ಸೆರಗುಗಳನ್ನು ಕತ್ತರಿಸ ಬಾರದೆಂದು, ಮೈಯ್ಯ ಮೇಲೆ ಸುಣ್ಣದ ನೀರನ್ನು ಎರಚ ಬಾರದೆಂದು, ಅಲ್ಲೀಗಿಂಡಿಯನ್ನು ಅಥವಾ ಬಸವಣ್ಣನನ್ನು ಕಸಿದುಕೊಳ್ಳಬಾರದೆಂದು ಸಾಧ್ಯವಿದ್ದ ಮಟ್ಟಿಗೂ ಎಚ್ಚರ ಪಡುವರು ! ಏಕೆಂದರೆ ಈ ಆಟವಲ್ಲಿ ಹೀಗೆ ಇಬ್ಬರೂ ಮಾಡುವದು ಶತಮಾನಗಳಿಂದ ಬಂದ ರೂಢಿಯು !

ವಾದವನ್ನು ನೋಡಲಿಕ್ಕೆ ಎಷ್ಟೋ ಸ್ತ್ರೀ-ಪುರುಷರು ನೆರೆ ಯುತ್ತಾರೆ; ಅವರು ಜಗಳ ಬಿಡಿಸಬಂದರೆ, ಅವರವರಿಗೆ ಒಪ್ಪುವಂತೆ ಬೈಗುಳ ಮಾಲೆ ಮುಡಿಸುತ್ತಾರೆ; 'ಇಂಥವಳು ಬಂದಾಳ ಅಲ್ಲೋ್ಯೆಪಿಲ್ಲ್ಯೋ' ಎಂದು ಚೀರಾಡುತ್ತಾರೆ. ತನಗೆ ಹಾಡು ಬರದಿದ್ದವಳು ಒಮ್ಮೊಮ್ಮೆ ಕೂಲಿ ಕೊಟ್ಟು ಕೆಲವರನ್ನು ಹಾಡಲಿಕ್ಕೆ ಕರೆತರುವಳು. ಅವರಿಗೂ ಇದಿರು ಬಣದವರು ಬೈಗುಳದ ಮುಯ್ಯಮಾಡಿ ಓಡಿಸಿ ಬಿಡುವರು. ಅಂತೂ ಒಬ್ಬರು ಸೋತು, ಇನ್ನೊಬ್ಬರು ಗೆದ್ದಂತಾಯಿತು.

ಕೋಟೆಯವರು ವಾದ ಹಾಕಲು ಹೆದರಿ ಓಡಿದಾಗ, ಅನ್ನುವ ಪದಗಳೂ ಕೆಲವು ಇರುತ್ತವೆ. ಅವರು ಓಡ ತೊಡ ಗಿದ ಕೂಡಲೆ, ಗೆದ್ದವರೆನ್ನಿಸಿಕೊಂಡವರು ಗಪ್ಪನೆ ಅವರ ಬಸಪ್ಪನನ್ನು ಕಸಿದುಕೊಂಡು, "ವಾದವ ಹಾಕೋಣ ಬರ್ರೆಂತ ಕರೆದರೆ ಸೋತಂಜಿ ಓಡಿ ಹೋದಾರ ಕೋಲು ಮಲ್ಲಿಗಿಕೋಲೆನ್ನಿ" ಎಂತಲೂ, "ಹನ್ನೊಂದು ವರುಷ ದಾಕಿ ಈಕೆಯು ಹಂದಿಯಂಥಾಕಿ ಓಡಿಯೋಡಿ ಹೋಗು ತ್ತಾಳೆ ಝಾಡಿಸಿ ಒದಿರೇ ಕೋಲು ಕೋಲೆನ್ನಿ ಕೋಲ" ಎಂದು ನೂರು ವರುಷದ ವರೆಗೂ ಅವಳಿಗೆ ಬೈಗುಳಗಳಿಂದ ಎರೆಯುತ್ತಾರೆ.

ಮರುದಿವಸ ಸೋತವಳು, ಊದುತ್ತ ಬಾರಿಸುತ್ತ, ಕುಪ್ಪುಸ, ಫಲಾಹಾರ, ಮುಡಿ-ಮಾಲೆ, ಅರಸಿಣ-ಕುಂಕುಮ-ಸುಗಂಧದ್ರವ್ಯಗಳೊಂದಿಗೆ, ಗೆದ್ದವಳಿಗೆ ಮುಯ್ಯ ತರುವಳು. ಗೆದ್ದವಳೂ ಶಿಷ್ಟಾಚಾರದ ಮಟ್ಟಿಗೆ ಹತ್ತಿರಕ್ಕೆ

CC-0. Jangamwadi Math Collection. Digitized by eGangotri

ಹೋಗಿ, ಬಸಪ್ಪನಿಗೆ ನೀರು ಕುಡಿಸಿ ತಂದು, ತನ್ನ ಮನೆಯಲ್ಲಿ ಹಾಸಿಟ್ಟು, ಸಖಿಯರೊಂದಿಗೆ ಅವಳನ್ನು ಕಾಯ್ದಿರುತ್ತಾಳೆ. ಬಜಂತ್ರಿ ಕೇಳಬಂದ ಕೂಡಲೆ, ಇವರು ಬಾಗಿಲು ಹಾಕುವರು. 'ಅತ್ತೆಯ ಸೇಡು ಬಚ್ಚಲಿನಲ್ಲಿ' ಎಂಬಂತೆ, ಒಳಗೆ ಕುಳಿತುಕೊಂಡು ಮನದಣಿಯೆ ಅವರ ಕಡೆಯಿಂದ ಬಾಗಿಲು ತಡೆಯುವ ಹಾಡುಗಳನ್ನು ಹೇಳಿಸಿಕೊಳ್ಳುವರು. ಬಾಗಿಲು ತೆಗೆದ ಬಳಿಕ ಎಲ್ಲರೂ ಒಳಗೆ ಬರುವರು. ಗೆದ್ದ ಪಕ್ಷದ ಬಸಪ್ಪನ ತಾಯಿಯ ಪಾದ ತೊಳೆದು ತನ್ನ ಸೆರಗಿನಿಂದ ಒರೆಸಿ ಪೂಜೆ ಮಾಡಿ, ಉಡಿ ತುಂಬಿ ಆರತಿ ಮಾಡುವಳು, ಸೋತ ಬಸಪ್ಪನ ತಾಯಿ! ಬಳಿಕ ಎರಡೂ ಪಕ್ಷದವರು ಒಬ್ಬರೊಬ್ಬರ ಮುಂದೆ ಊದಬತ್ತಿ-ಅತ್ತರು-ಪನ್ನೀರುಗಳ ಘಮಘಮಾಟವನ್ನು ಮಾಡಿ, ಎಲೆಯಡಿಕೆ ಅರಸಿಣ-ಕುಂಕುಮ ಕೊಟ್ಟುಕೊಳ್ಳುವರು. ಸೋತವರಿಗೂ ತಕ್ಕಮಟ್ಟಿಗೆ ಫಲಾಹಾರ ಕೊಡುವರು.

ಮಾರನೆಯ ದಿವಸ ಗೆದ್ದವಳು ಸೋತವಳ ಮನೆಗೆ ಮುಯ್ಯ ಒಯ್ಯುವಳು. ಎಲ್ಲವೂ ಮುನ್ನಾದಿನದಂತೆ ಕ್ರಮವಾಗಿ ನಡೆಯುವದು. ಹೀಗೆ ಒಂದು ವಾರದ, ಎಂದರೆ ಕಡೆಪಂಚಮಿಯ ವರೆಗೆ ಈ "ಅಲ್ಲೀಕೋಟಿ"ಯ ಆಟವನ್ನು ಬಾಲಿಕೆಯರು ಬಲು ಸಡಗರದಿಂದ ಆಡುವರು.

ಎಷ್ಟು ಹಳೆಯ ಉನ್ಮಾದರೋಗವಾದರೂ, ಎಷ್ಟೇ ಭಯಂಕರವಾಗಿದ್ದರೂ, ಖಂಡಿತ ಗುಣ ಹೊಂದುವುವರಲ್ಲಿ! ಸಂಶಯವೇ ಇಲ್ಲ. ಒಂದೇ ಒಂದು ವಾರದಲ್ಲಿ ಗುಣ ಕಂಡುಬರುವುದು. ಅಪಸ್ಮಾರ, ಹಿಸ್ಟೀರಿಯಾಗಳಿಗೂ ನಮ್ಮಲ್ಲಿ ಸಿದ್ಧೌಷಧಗಳಿವೆ. ೧ ವಾರದ ಔಷಧಕ್ಕೆ ಕ್ರಯ ರೂ. ೩-೮-೦.




**ಸ್ವಪ್ನೇಂದ್ರಿಯ ಸ್ತಂಭನ:—** ಎಲ್ಲ ವಿಧದ ವೀರ್ಯದೋಷ ಮೂತ್ರ ದೋಷಗಳಿಗೆ ಸಿದ್ಧೌಷಧ. ೨ ವಾರಗಳ ಔಷಧಕ್ಕೆ ರೂ. ೩.

ವಿ. ಸೂ. ನಮ್ಮ ಔಷಧದಲ್ಲಿ ಮಾದಕ ಅಥವಾ ವಿಷದ್ರವ್ಯಗಳು ಸೇರಿರುವವೆಂದು ರುಜುಪಡಿಸುವವರಿಗೆ ಮತ್ತು ನಮ್ಮ ಔಷಧಸೇವನೆಯಿಂದ ನಾವು ಹೇಳುವ ರೋಗಗಳು ಗುಣ ಹೊಂದುವದಿಲ್ಲವೆಂದು ಸಿದ್ಧಪಡಿಸುವವರಿಗೆ ರೂ. ೧೦೦ ಬಹುಮಾನ ಕೊಡುತ್ತೇವೆ.

ಕೆಟಲಾಗಿಗಾಗಿ ಬರೆಯಿರಿ. ಏಜಂಟರು ಬೇಕು.

ಮೂಳ ನಾರಾಯಣಭಟ್ಟ, ಸಿದ್ಧೌಷಧ ಭವನ, ಪೋಸ್ಟು ವಿಟ್ಲ (ದ. ಕನ್ನಡ.)

ಡಾಕ್ಟರ್ ಮಹಿಷಿ ಇವರ ಅನುಭವಸಿದ್ಧ ಔಷಧಿಗಳು

**ಅಶೋಕಾ ಕಾರ್ಡಿಯಲ್**

ಇದು ಸ್ತ್ರೀಯರ ಮುಟ್ಟಿನ ಹಾಗು ಗರ್ಭಾಶಯದ ಎಲ್ಲ ವಿಕಾರಗಳಿಗೆ ಸಿದ್ಧೌಷಧಿಯು.

**ವ್ಹಾಯಬರನಮ್ ಕಂಪೌಂಡ್**

ಇದರ ಯೋಗದಿಂದ ಬಂಜೆತನದ ದೋಷಗಳು ನಾಶವಾಗಿ ಗರ್ಭಧಾರಣೆಯಾಗುವುದು. ಗರ್ಭವತಿಯರು ೩ ನೆಯ ತಿಂಗಳಿನಿಂದ ಇದನ್ನು ಸಾಧಿಸಿದಲ್ಲಿ ಗರ್ಭವು ಬಲಪಡುವುದು. ಅಲ್ಲದೆ ಹಳೆಯುಳಿಯುವ ಭೀತಿಯು ಇಲ್ಲದಂತಾಗುವುದು. ಸುಖಪ್ರಸೂತಿಯಾಗುವುದು.

ಸೂಚನೆ:— ಈ ಔಷಧಿಗಳ ಹಾಗು ಇನ್ನೂ ಕೆಲವು ಔಷಧಿಗಳ ಸಂಪೂರ್ಣ ಮಾಹಿತಿಗಾಗಿ, ಇಂದೇ ನಮ್ಮ ಕ್ಯಾಟಲಾಗಿಗೆ ಬರೆಯಿರಿ.

ಮ್ಯಾನೇಜರ್,
ಸ್ವಾಸ್ಥ್ಯನಿಲಯ ಫಾರ್ಮಸಿ, ಧಾರವಾಡ

CC-0. Jangamwadi Math Collection. Digitized by eGangotri

# ಶ್ರೀ ಮ ಧ್ವಾ ಚಾ ರ್ಯ ರ ಶಾ ಖಾ ನಿ ರ್ಣ ಯ

ಲೇಖಕರು:- ಶ್ರೀಮಾನ್ ನಾ. ಶ್ರೀ. ರಾಜಪುರೋಹಿತರು, ಧಾರವಾಡ

**ಕಾಣ್ವಶಾಖೆಯವನಾದ ಶ್ರೀಕೃಷ್ಣನು ಸೂರ್ಯೋದಯಕ್ಕಿಂತ ಮೊದಲೇ ಸ್ನಾನ, ಸಂಧ್ಯಾವಂದನ, ಪ್ರಾತರ್ಹೋಮ, ಬ್ರಹ್ಮಯಜ್ಞ, ದೇವ-ಋಷಿ-ಪಿತೃತರ್ಪಣಗಳೆಂಬ ಪ್ರಾತರಾಹ್ನಿಕ ಕರ್ಮಗಳನ್ನು ಆಚರಿಸಿರುವಂತೆಯೇ ಶ್ರೀಮಧ್ವಾಚಾರ್ಯರೂ ಸದಾಚಾರಸ್ಮೃತಿಯಲ್ಲಿ ಕಾಣ್ವಶಾಖೆಯ ಗೃಹ್ಯ ಸೂತ್ರಕ್ಕನುಸರಿಸಿ, ಸೂರ್ಯೋದಯಕ್ಕಿಂತ ಮೊದಲೇ ಉಪರಿನಿರ್ದಿಷ್ಟ ಪ್ರಾತರಾಹ್ನಿಕ ಕರ್ಮಗಳನ್ನು ಆಚರಿಸುವುದಕ್ಕೆ ಹೇಳಿದುದರಿಂದ, ಶ್ರೀಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.**

ನಾನು ಬರೆದು ಪ್ರಸಿದ್ಧಮಾಡಿದ ಶ್ರೀಮಧ್ವಾಚಾರ್ಯರ ಚರಿತ್ರೆಯ ೨ನೆಯ ಪರಿಶಿಷ್ಟದಲ್ಲಿ ಬಲವತ್ತರವಾದ ಎಂಟು ಪ್ರಮಾಣಗಳಿಂದ ಶ್ರೀಮದಾನಂದತೀರ್ಥರು ಕಾಣ್ವಶಾಖೆಯ ಬ್ರಾಹ್ಮಣರೆಂದು ಸಿದ್ಧಮಾಡಿದ್ದೇನೆ. ಈಗ ಈ ಸಿದ್ಧಾಂತವನ್ನು ದೃಢೀಕರಿಸುವ ಮತ್ತೊಂದು ಒಂಬತ್ತನೆಯ ಬಲವತ್ತರವಾದ ಪ್ರಮಾಣವನ್ನು ಕಂಡುಹಿಡಿದಿದ್ದೇನೆ. ಈ ಪ್ರಮಾಣವನ್ನು ನಿರೂಪಿಸುವುದೇ ಈ ಲೇಖನದ ಉದ್ದೇಶವಾಗಿದೆ.

ಶ್ರೀಮಧ್ವಾಚಾರ್ಯರು ಕಾಣ್ವಶಾಖೆಯ ಪಾರಸ್ಕರ ಗೃಹ್ಯಸೂತ್ರಕ್ಕನುಸರಿಸಿ, "ಸದಾಚಾರಸ್ಮೃತಿ" ಎಂಬುದೊಂದು ಸ್ಮೃತಿಗ್ರಂಥವನ್ನು ಬರೆದಿದ್ದಾರೆ. ಅದು ಹೇಗೆಂದರೆ, ಇಂದಿಗೆ ಮೂರುನೂರು ವರ್ಷಗಳ ಹಿಂದೆ ಆಗಿಹೋದ ಸುಪ್ರಸಿದ್ಧ ಮಾಧ್ವಗ್ರಂಥಕಾರರಾದ ವೇದಮೂರ್ತಿ ಛಲಾರಿ ನೃಸಿಂಹಾಚಾರ್ಯರು ತಾವು ಬರೆದ "ಸ್ಮೃತ್ಯರ್ಥಸಾಗರ" ಎಂಬ ಗ್ರಂಥದಲ್ಲಿ ಆಹ್ನಿಕ ತರಂಗವೆಂಬ ಅಧ್ಯಾಯದಲ್ಲಿ (೯೭ನೆಯ ಪುಟದಲ್ಲಿ) ಹೀಗೆ ಹೇಳಿದ್ದಾರೆ:—

**"ಭಾಗವತೇ ಕೃಷ್ಣಸ್ಯ ಪ್ರಾತಃಕಾಲಾಚರಣೋಕ್ತೇಃ । ಏವಮೇವ ಶ್ರೀಮದಾಚಾರ್ಯವರ್ಯೈರಪಿ ।"**

ಅರ್ಥ:— ಭಾಗವತ ಪುರಾಣ ಗ್ರಂಥದಲ್ಲಿ (ದಶಮ ಸ್ಕಂದದ ೭೦ನೆಯ ಅಧ್ಯಾಯದ ೬ನೆಯ, ೭ನೆಯ ಶ್ಲೋಕಗಳಲ್ಲಿ) ಶ್ರೀಕೃಷ್ಣನ ಪ್ರಾತಃಕಾಲಾಚರಣೆಯು ಹೇಗೆ ನಿರೂಪಿಸಲ್ಪಟ್ಟಿದೆಯೋ ಅದೇ ಮೇರೆಗೆ ಶ್ರೀಮಧ್ವಾಚಾರ್ಯರಿಂದಲೂ (ಸದಾಚಾರ ಸ್ಮೃತಿಯಲ್ಲಿ) ಹೇಳಲ್ಪಟ್ಟಿದೆ.

ಮೇಲೆ ಉಕ್ತವಾದ ಭಾಗವತದ ೧೦ನೆಯ ಸ್ಕಂದದ ೭೦ನೆಯ ಅಧ್ಯಾಯದ ೬ನೆಯ, ೭ನೆಯ ಶ್ಲೋಕಗಳು ಹೀಗೆ ಇವೆ:—

ಅಥಾಪ್ಲುತೋಂಭಸ್ಯಮಲೇ ಯಥಾವಿಧಿ
ಕ್ರಿಯಾಕಲಾಪಂ ಪರಿಧಾಯ ವಾಸಸೀ ।
ಚಕಾರ ಸಂಧ್ಯೋಪಗಮಾದಿ ಸತ್ತಮೋ
ಹುತಾನಲೋ ಬ್ರಹ್ಮ ಜಜಾಪ ವಾಗ್ಯತಃ ॥ ೬ ॥
ಉಪಸ್ಥಾಯಾರ್ಕಮುದ್ಯಂತಂ ತರ್ಪಯಿತ್ವಾತ್ಮನಃ ಕಲಾಃ ।
ದೇವಾನ್ ಋಷೀನ್ ಪಿತೃೀನ್ ವೃದ್ಧಾನ್ ವಿಪ್ರಾನ್
ಅಭ್ಯರ್ಚ್ಯ ಚಾತ್ಮವಾನ್ ॥ ೭ ॥

ಶ್ರೀಧರಸ್ವಾಮಿಗಳು* ಈ ೬ನೆಯ ಶ್ಲೋಕಕ್ಕೆ ಟೀಕೆಯನ್ನು ಬರೆಯುವಾಗ್ಗೆ— "**ಕಾಣ್ವತ್ವಾತ್ ಉದಯಾತ್ ಪೂರ್ವಮೇವ ಹುತಾನಲಃ**" ಎಂದು ಕಂಠೋಕ್ತವಾಗಿ ಹೇಳಿದ್ದಾರೆ. ಅರ್ಥಾತ್ ಈ ೬ನೆಯ ಶ್ಲೋಕದ ಅರ್ಥ

* ಶ್ರೀಧರಸ್ವಾಮಿಗಳು ಬರೆದ ಟೀಕೆಯು ಭಾಗವತ ಪುರಾಣದಲ್ಲಿ ಈ ಅಧ್ಯಾಯವು ೧೦ನೆಯ ಸ್ಕಂದದ ೭೦ನೆಯ ಅಧ್ಯಾಯವಾಗಿದೆ.

CC-0. Jangamwadi Math Collection. Digitized by eGangotri

ವನ್ನು ಈ ಶ್ರೀಧರಪಂಡಿತರು ಘಂಟಾಘೋಷವಾಗಿ ಹೀಗೆ ಹೇಳಿದ್ದಾರೆ:— " ಬಳಿಕ ಸಾಧುಶ್ರೇಷ್ಠನಾದ ಶ್ರೀಕೃಷ್ಣನು ಯಥಾವಿಧಿಯಾಗಿ ಸ್ನಾನವನ್ನು ಮಾಡಿ, ಧೌತವಸ್ತ್ರಗಳನ್ನು ಧರಿಸಿ, ಸಂಧ್ಯಾವಂದನಾದಿ ಪ್ರಾತರಾಹ್ನಿಕ ಕರ್ಮಗಳನ್ನೆಲ್ಲ ನೆರವೇರಿಸಿ, **ಕಾಣ್ವಶಾಖೆಯವನಾದುದರಿಂದ** ಸೂರ್ಯೋದಯಕ್ಕಿಂತ ಮೊದಲೇ ಅಗ್ನಿಹೋತ್ರವನ್ನಾಚರಿಸಿ, ಮೌನದಿಂದ ಗಾಯತ್ರಿಯನ್ನು ಜಪಿಸಿದನು. (ಮುಂದೆ ೭ನೆಯ ಶ್ಲೋಕದಲ್ಲಿ) [ತದನಂತರ ದೇವ, ಋಷಿ, ಪಿತೃಗಳಿಗೆ ತರ್ಪಣವನ್ನು ಕೊಟ್ಟು, ಸೂರ್ಯೋದಯವಾದ ಕೂಡಲೇ ಉಪಸ್ಥಾನವನ್ನು ಮಾಡಿ, ಬ್ರಾಹ್ಮಣರನ್ನು ಪೂಜಿಸಿದನು.]

ಪ್ರಾತರ್ಹೋಮಾನಂತರ ಬ್ರಹ್ಮಯಜ್ಞವನ್ನು ಮಾಡಬೇಕೆಂದು ಕಾಣ್ವಶಾಖೆಯ ಗೃಹ್ಯಸೂತ್ರದಲ್ಲಿ ಹೇಳಿದ್ದರಿಂದ ಇದಕ್ಕನುಸರಿಸಿಯೇ ಶ್ರೀವಿಜಯಧ್ವಜಾಚಾರ್ಯರು, ಈ ೬ನೆಯ ಶ್ಲೋಕದಲ್ಲಿಯ "ಬ್ರಹ್ಮ ಜಜಾಪ" ಎಂಬ ಪದಕ್ಕೆ— "ನಿಯತ ಸ್ವಾಧ್ಯಾಯಾಧ್ಯಯನಂ ಕೃತವಾನ್ । **ಗಾಯತ್ರೀಂ ವಾ ಜಪ್ತವಾನ್** ।" ಎಂದು ಟೀಕೆಯನ್ನು ಬರೆದಿದ್ದಾರೆ. ಈ ಟೀಕೆಯಲ್ಲಿ 'ವಾ' ಎಂಬ ಅವ್ಯಯಕ್ಕೆ '**ಅಥವಾ**', '**ಮತ್ತು**' ಎಂಬ ಎರಡು ಅರ್ಥಗಳಲ್ಲಿ ಯಾವುದನ್ನು ಸ್ವೀಕರಿಸಿದರೂ ನಮಗೆ ಬಾಧಕವಿಲ್ಲ. ಅದು ಹೇಗೆಂದರೆ:—

(೧) **ಅಥವಾ**:— ಬ್ರಹ್ಮಯಜ್ಞವನ್ನು ಮಾಡಿದನು; ಅಥವಾ ಗಾಯತ್ರಿಯನ್ನು ಜಪಿಸಿದನು.

(೨) **ಮತ್ತು**:— ಬ್ರಹ್ಮಯಜ್ಞವನ್ನು ಮಾಡಿದನು; ಮತ್ತು ಗಾಯತ್ರಿಯನ್ನು ಜಪಿಸಿದನು.

'ಅಥವಾ' ಎಂಬ ಅರ್ಥವನ್ನು ಸ್ವೀಕರಿಸಿದರೆ, ಶ್ರೀಕೃಷ್ಣನು ಪ್ರಾತರ್ಹೋಮಾನಂತರ ಬ್ರಹ್ಮಯಜ್ಞವನ್ನು ಮಾಡಲಿಲ್ಲವೆಂಬುದು ವ್ಯಕ್ತವಾಗುತ್ತದೆ. ಬ್ರಹ್ಮಯಜ್ಞಕ್ಕೆ ವಿಕಲ್ಪದಿಂದ ಮೂರು ಕಾಲಗಳನ್ನು ಹೇಳಿದ್ದಾರೆ. (೧) ಪ್ರಾತರ್ಹೋಮಾನಂತರದಲ್ಲಿ (೨) ಮಧ್ಯಾಹ್ನ ಸಂಧ್ಯೋತ್ತರದಲ್ಲಿ (೩) ವೈಶ್ವದೇವಾವಸಾನದಲ್ಲಿ.

ಆತಏವ 'ಅಥವಾ' ಎಂಬ ಅರ್ಥವನ್ನು ಸ್ವೀಕರಿಸಿದರೂ ನಮಗೆ ಬಾಧಕವಿಲ್ಲ. ಆದರೆ ಕಾಣ್ವಶಾಖೆಯ ಗೃಹ್ಯಸೂತ್ರಾನುಸಾರವಾಗಿ ತರ್ಪಣವನ್ನು ಮಾತ್ರ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಪ್ರಾತಃಕಾಲದಲ್ಲಿಯೇ ಮಾಡತಕ್ಕದ್ದು. ಹೇಗೆಂದರೆ:—

| ೧ ಅಗ್ನಿಹೋತ್ರವಿದ್ದವರು | ೨ ಅಗ್ನಿಹೋತ್ರವಿದ್ದವರು | ೩ ಅಗ್ನಿಹೋತ್ರವಿಲ್ಲದವರು |
|---|---|---|
| ಸ್ನಾನ | ಸ್ನಾನ | ಸ್ನಾನ |
| ಸಂಧ್ಯಾವಂದನ | ಸಂಧ್ಯಾವಂದನ | ಸಂಧ್ಯಾವಂದನ |
| ಪ್ರಾತರ್ಹೋಮ | ಪ್ರಾತರ್ಹೋಮ | ತರ್ಪಣ |
| ಬ್ರಹ್ಮಯಜ್ಞ | ತರ್ಪಣ | |
| * ತರ್ಪಣ | | |

(ಮೇಲೆ ಉಲ್ಲೇಖಿಸಿದ ತರ್ಪಣವು, "**ದೇವಋಷಿ ಪಿತೃತರ್ಪಣ**" ವಾಗಿದೆಯೇ ಹೊರತು ಸ್ನಾನಾಂಗ ತರ್ಪಣವೂ ಅಲ್ಲ; ಸಂಧ್ಯಾಂಗ ತರ್ಪಣವೂ ಅಲ್ಲ.)

ಶ್ರೀಮನ್ಮಧ್ವಾಚಾರ್ಯರೂ ಸಹ ತಾವು ಬರೆದ ಸದಾಚಾರಸ್ಮೃತಿಯಲ್ಲಿ ಸೂರ್ಯೋದಯಕ್ಕಿಂತ ಪೂರ್ವದಲ್ಲಿಯೆ ದೇವ ಋಷಿ ಪಿತೃ ತರ್ಪಣವನ್ನು ಮಾಡತಕ್ಕದ್ದೆಂದು ಹೀಗೆ ಹೇಳಿದ್ದಾರೆ:—

> ಮಂತ್ರತಃ ಪರಿವೃತ್ಯಾಥ ಸಮಾಚಮ್ಯ ಸುರಾದಿಕಾನ್।
> **ತರ್ಪಯಿತ್ವಾ ನಿಪೀಡ್ಯಾಥ ವಾಸೋ ವಿಸ್ಮೃತ್ಯ**
> **ಚಾಂಜಸಾ** ॥೭॥

ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರು ದೇವ, ಋಷಿ, ಪಿತೃಗಳಿಗೆ (ಸುರಾದಿಕಾನ್) ತರ್ಪಣವನ್ನು ಕೊಡಬೇಕೆಂದೂ ಹಾಗೂ ವಸ್ತ್ರನಿಷ್ಪೀಡನದ ಉದಕವನ್ನು ಪಿತೃಗಳಿಗೆ ಕೊಡಬೇಕೆಂದೂ ಹೇಳಿರುವುದರಿಂದ ಇದು ದೇವ-ಋಷಿ-ಪಿತೃತರ್ಪಣವೇ ಹೊರತು ಸಂಧ್ಯಾಂಗ ತರ್ಪಣವಲ್ಲೆಂಬುದು ಸಿದ್ಧ. ಇದಲ್ಲದೆ ಶ್ರೀಮದಾಚಾರ್ಯರು ಸದಾಚಾರಸ್ಮೃತಿಯಲ್ಲಿ ಮುಂದೆ ಮಾಧ್ಯಾಹ್ನಿಕ ಕರ್ಮಗಳನ್ನು ಹೇಳುವಾಗ್ಗೆ — ತರ್ಪಣವನ್ನು ಹೇಳಿರುವುದಿಲ್ಲಾದ್ದರಿಂದ ಈ ಸಿದ್ಧಾಂತವು ಮತ್ತಿಷ್ಟು ದೃಢಪಡುತ್ತದೆ. ಮಾಧ್ಯಾಹ್ನಿಕ ಕರ್ಮಗಳನ್ನು ಹೇಳಿದ ಶ್ಲೋಕವು ಹೀಗೆ ಇದೆ:—

> ಸ್ನಾತ್ವಾ ಸಂಪೂಜಯೇದ್ವಿಷ್ಣುಂ
> ವೇದತಂತ್ರೋಕ್ತಮಾರ್ಗತಃ।

---

* ಕಾಣ್ವಶಾಖೆಯಲ್ಲಿ ತರ್ಪಣವು, ಬ್ರಹ್ಮಯಜ್ಞಾಂಗಭೂತವಾಗಿರುವುದಿಲ್ಲ. ಬ್ರಹ್ಮಯಜ್ಞವೇ ಸ್ವತಂತ್ರವಾಗಿದೆ. ತರ್ಪಣವೇ ಸ್ವತಂತ್ರವಾಗಿದೆ. ಆದರೂ ಬ್ರಹ್ಮಯಜ್ಞದ ಅನಂತರ ತರ್ಪಣವನ್ನು ಮಾಡುವುದು ಶ್ರೇಷ್ಠವೆಂದು ತಿಳಿಯಲ್ಪಡುತ್ತದೆ. ಆತಏವ ವಿಜಯಧ್ವಜಾಚಾರ್ಯರು, ಬ್ರಹ್ಮಯಜ್ಞವನ್ನು ಮಾಡಿದನು ಮತ್ತು ಗಾಯತ್ರಿಯನ್ನು ಜಪಿಸಿದನು ಎಂದು ಅರ್ಥವನ್ನು ಬರೆದಿದ್ದಾರೆ. ಶ್ರೀಮಧ್ವಾಚಾರ್ಯರೂ ಈ ಶ್ರೇಷ್ಠಪದ್ಧತಿಯನ್ನೇ ಸ್ವೀಕರಿಸಿದ್ದಾರೆ.

CC-0. Jangamwadi Math Collection. Digitized by eGangotri

ವೈಶ್ವದೇವಂ ಬಲಿಂ ಚೈವ
ಕುರ್ಯಾನ್ನಿತ್ಯಂ ತದರ್ಪಣಂ ||೧೪||

ಅರ್ಥ:—ಯಥಾವಿಧಿಯಾಗಿ ಮಾಧ್ಯಾಹ್ನಿಕಸ್ನಾನವನ್ನು ಮಾಡಿ, ವೇದ ಪಂಚರಾತ್ರ ತಂತ್ರಸಾರಗಳಲ್ಲಿ ಹೇಳಿದ ರೀತಿಯಿಂದ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಪೂಜಿಸಬೇಕು. ಆ ಬಳಿಕ ವೈಶ್ವದೇವವನ್ನೂ ಬಲಿಹರಣವನ್ನೂ ಮಾಡಿ, ಪ್ರತಿದಿನದಲ್ಲಿಯೂ ಮಾಡತಕ್ಕ ಆ ಕರ್ಮಗಳನ್ನೆಲ್ಲ ಪರಮಾತ್ಮನಲ್ಲಿ ಸಮರ್ಪಿಸಬೇಕು.

ಸದಾಚಾರಸ್ಮೃತಿಯಲ್ಲಿ ೮ನೆಯ, ೯ನೆಯ ಶ್ಲೋಕಗಳಲ್ಲಿ ಸೂರ್ಯೋದಯವಾಗುವ ವರೆಗೆ ಗಾಯತ್ರಿಯನ್ನು "ವಾಗ್ಯತಃ ಸರ್ವದಾ ಜಪೇತ್" ಎಂದು ಹೇಳಿರುವುದರಿಂದ ಕೆಲವರು ಇದು, ಸಂಧ್ಯಾಂಗ ಗಾಯತ್ರೀ ಜಪವೆಂದು ತಪ್ಪು ತಿಳಿದುಕೊಂಡು, ಹಿಂದೆ ೭ನೆಯ ಶ್ಲೋಕದಲ್ಲಿ ಹೇಳಿದ ತರ್ಪಣವು ಸಂಧ್ಯಾಂಗತರ್ಪಣವೆಂದು ತಪ್ಪು ಗ್ರಹಿಕೆಯನ್ನು ಮಾಡಿಕೊಂಡಿದ್ದಾರೆ. ಅತಏವ ಭಾಗವತದ ೧೦ನೆಯ ಸ್ಕಂದದ ೭೮ನೆಯ ಅಧ್ಯಾಯದ ೬ನೆಯ ಶ್ಲೋಕದ ಆಧಾರದಿಂದ ಈ ತಪ್ಪುತಿಳುವಳಿಕೆಯನ್ನು ತೆಗೆದುಹಾಕುವುದು ಪ್ರಸ್ತುತ ನಮ್ಮ ಕರ್ತವ್ಯವಾಗಿದೆ.

ಈ ೬ನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ಪ್ರಾತಃಸ್ನಾನವಾದ ಬಳಿಕ ಸಂಧ್ಯಾವಂದನೆಯನ್ನು ಸಂಪೂರ್ಣವಾಗಿ ನೆರವೇರಿಸಿ, ತದನಂತರ ಪ್ರಾತರ್ಹೋಮವನ್ನು, ಆ ಬಳಿಕ ಬ್ರಹ್ಮಯಜ್ಞವನ್ನು ಮಾಡಿ, **ಗಾಯತ್ರಿಯನ್ನು ಜಪಿಸಿದನು**; ಎಂದು ಹೇಳಿರುತ್ತದೆಂಬುದನ್ನು ಹಿಂದೆಯೇ ನೋಡಿದ್ದೇವೆ. ಶ್ರೀಕೃಷ್ಣನು ಪ್ರಾತರ್ಹೋಮಾನಂತರ ಗಾಯತ್ರಿಯನ್ನು ಜಪಿಸಿರುವುದು **ಸಂಧ್ಯಾಂಗ ಗಾಯತ್ರೀ ಜಪವಲ್ಲವೆಂಬುದು** ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ; ಏಕೆಂದರೆ, ಸಂಧ್ಯಾವಂದನೆಯನ್ನು ಪೂರ್ಣಮಾಡಿಕೊಂಡ ಹೊರತು ಪ್ರಾತರ್ಹೋಮವನ್ನು ಮಾಡುವುದಕ್ಕೆ ಬರುವುದಿಲ್ಲ. ಒಂದು ಕರ್ಮವನ್ನು ಪೂರ್ಣ ಮುಗಿಸಿದ ಬಳಿಕವೇ ಎರಡನೆಯ ಕರ್ಮವನ್ನು ಪ್ರಾರಂಭಿಸಬೇಕಾಗುತ್ತದೆ. ಅರ್ಥಾತ್ ಸಂಧ್ಯಾವಂದನೆಯನ್ನು ಅರ್ಘ್ಯದ ವರೆಗೆ ಮಾಡಿ, ಆ ಬಳಿಕ ಪ್ರಾತರ್ಹೋಮವನ್ನು ಮಾಡಿ ಮುಗಿಸಿ, ತದನಂತರ ಸಂಧ್ಯಾಂಗ ಉಪಸ್ಥಾನವನ್ನೂ * ಸಂಧ್ಯಾಂಗ ಗಾಯತ್ರೀ ಜಪವನ್ನೂ ಮಾಡಿ, ಸಂಧ್ಯಾವಂದನೆಯನ್ನು ಮುಗಿಸುವುದು ಕರ್ಮಸಂಕರವಾಗಿದೆ. ಹೀಗೆ ಕರ್ಮಸಂಕರ ಮಾಡಿದರೆ ಇವೆರಡೂ ಕರ್ಮಗಳು ನಿಷ್ಫಲವಾಗುತ್ತವೆ. ಅತಏವ ಕರ್ಮಸಂಕರ ಮಾಡುವುದು, ಶಾಸ್ತ್ರದಿಂದ ಸರ್ವಥೈವ ನಿಷಿದ್ಧವಾಗಿದೆ. ಇತ್ಯರ್ಥವೇನೆಂದರೆ, ಶ್ರೀಕೃಷ್ಣನು ಸಂಧ್ಯಾವಂದನೆಯಲ್ಲಿ ಅರ್ಘ್ಯ, ಉಪಸ್ಥಾನ †, ಗಾಯತ್ರೀ ಜಪಗಳನ್ನು ಮಾಡಿ ಮುಗಿಸಿಕೊಂಡು, ಪ್ರಾತರ್ಹೋಮವನ್ನು ಮಾಡಿದ್ದರಿಂದ ಈತನು ಪ್ರಾತರ್ಹೋಮಾನಂತರ ಮಾಡಿದ ಗಾಯತ್ರೀ ಜಪವು ಸಂಧ್ಯಾಂಗ ಗಾಯತ್ರೀ ಜಪವಲ್ಲವೆಂಬುದು ಸಿದ್ಧ.

ಪ್ರಾತರ್ಹೋಮಾನಂತರ ಮಾಡಿದ ಈ ಗಾಯತ್ರೀ ಜಪವು, ಕರ್ಮದ ಕಾಲದಲ್ಲಿಯಾಗಲಿ, ವಿಧಿಯಲ್ಲಿಯಾಗಲಿ ನ್ಯೂನಾತಿರಿಕ್ತ ದೋಷಗಳು ಉಂಟಾಗಿರಲಿ ಬಿಟ್ಟಿರಲಿ ತದ್ದೋಷ ಪರಿಹಾರಾರ್ಥ (ಅರ್ಥಾತ್ ಪ್ರಾಯಶ್ಚಿತ್ತಾರ್ಥ) ಮಾಡಿದ ಗಾಯತ್ರೀಜಪವಾಗಿದೆ.

ಇದೇ ಮೇರೆಗೆ ಶ್ರೀಮನ್ಮಧ್ವಾಚಾರ್ಯರು ಸದಾಚಾರಸ್ಮೃತಿಯಲ್ಲಿ ತರ್ಪಣಾನಂತರ ೮ನೆಯ, ೯ನೆಯ ಶ್ಲೋಕಗಳಲ್ಲಿ ಹೇಳಿದ ಗಾಯತ್ರೀಜಪವು, ಪ್ರಾಯಶ್ಚಿತ್ತಾರ್ಥ ಗಾಯತ್ರೀಜಪವೇ ಹೊರತು ಸಂಧ್ಯಾಂಗ ಗಾಯತ್ರೀ ಜಪವಲ್ಲವೆಂಬುದು ಸಿದ್ಧ. ಅತಏವ ೭ನೆಯ ಶ್ಲೋಕದಲ್ಲಿ ಹೇಳಿದ ತರ್ಪಣವು **ದೇವ ಋಷಿ ಪಿತೃ ತರ್ಪಣವೇ** ಹೊರತು ಸಂಧ್ಯಾಂಗತರ್ಪಣವಲ್ಲವೆಂಬುದು ಸಿದ್ಧ.

ಸದಾಚಾರಸ್ಮೃತಿಯಲ್ಲಿ ೬ನೆಯ, ೭ನೆಯ ಶ್ಲೋಕಗಳಲ್ಲಿ ಶ್ರೀಮದಾಚಾರ್ಯರು "ಅಥ-ಇತಿ ನ್ಯಾಯ"ವಂತೆ ಪ್ರಾತಸ್ಸಂಧ್ಯಾರ್ಘ್ಯದಿಂದ—ದೇವ ಋಷಿ ಪಿತೃ ತರ್ಪಣದ ವರೆಗೆ ಅರ್ಥಾತ್ ಆದ್ಯಂತಗಳನ್ನು ಹೇಳಿದ್ದರಿಂದ ಇವೆರಡು ಪ್ರಾತರಾಹ್ನಿಕ ಕರ್ಮಗಳ ಮಧ್ಯದಲ್ಲಿ ಆಚರಿಸಲ್ಪಡುವ ಸಂಧ್ಯಾಂಗ ಉಪಸ್ಥಾನ, ಸಂಧ್ಯಾಂಗ ಗಾಯತ್ರೀಜಪ, ಪ್ರಾತರ್ಹೋಮ, ಬ್ರಹ್ಮಯಜ್ಞ ಕರ್ಮಗಳೂ ಪ್ರಾತರಾಹ್ನಿಕದಲ್ಲಿ ಸಮಾವೇಶವಾಗುತ್ತವೆಂದು ಹೇಳಿದ ಹಾಗಾಯಿತು.

ಕಾಣ್ವಶಾಖೆಯವನಾದ ಶ್ರೀಕೃಷ್ಣನು ಸೂರ್ಯೋದಯ

---

* ಕಾಣ್ವಶಾಖೆಯ ಸಂಧ್ಯಾವಂದನೆಯಲ್ಲಿ ಅರ್ಘ್ಯಪ್ರದಾನಾನಂತರ ಮೊದಲು ಉಪಸ್ಥಾನ, ತದನಂತರ ಗಾಯತ್ರೀ ಜಪ.

† ಭಾಗವತದ ೧೦ನೆಯ ಸ್ಕಂದದ ೭೮ನೆಯ ಅಧ್ಯಾಯದ ೬ನೆಯ ಶ್ಲೋಕದಲ್ಲಿ ಹೇಳಿದ ಉಪಸ್ಥಾನವು, ದೇವ ಋಷಿ ಪಿತೃ ತರ್ಪಣದ ಕೊನೆಯಲ್ಲಿ ಮಾಡತಕ್ಕ ಉಪಸ್ಥಾನವೇ ಹೊರತು ಸಂಧ್ಯಾಂಗ ಉಪಸ್ಥಾನವಲ್ಲ.

CC-0. Jangamwadi Math Collection. Digitized by eGangotri

ಕ್ಕಿಂತ ಮೊದಲೇ ಸ್ನಾನ, ಸಂಧ್ಯಾವಂದನ, ಪ್ರಾತರ್ಹೋಮ, ಬ್ರಹ್ಮಯಜ್ಞ, ದೇವ ಋಷಿ ಪಿತೃ ತರ್ಪಣ ಈ ಪ್ರಾತರಾಹ್ನಿಕ ಕರ್ಮಗಳನ್ನು ಹೇಗೆ ಆಚರಿಸಿದ್ದಾನೆಯೋ ಹಾಗೆಯೇ ಶ್ರೀಮನ್ಮಧ್ವಾಚಾರ್ಯರೂ ಸದಾಚಾರಸ್ಮೃತಿಯಲ್ಲಿ ಕಾಣ್ವಶಾಖೆಯ ಗೃಹ್ಯಸೂತ್ರಕ್ಕನುಸರಿಸಿ, ಸೂರ್ಯೋದಯಕ್ಕಿಂತ ಮೊದಲೇ ಸ್ನಾನ, ಸಂಧ್ಯಾವಂದನೆ, ಪ್ರಾತರ್ಹೋಮ, ಬ್ರಹ್ಮಯಜ್ಞ, ದೇವ ಋಷಿ ಪಿತೃ ತರ್ಪಣ ಈ ಪ್ರಾತರಾಹ್ನಿಕ ಕರ್ಮಗಳನ್ನು ಆಚರಿಸುವುದಕ್ಕೆ ಹೇಳಿದ್ದಾರೆ. ಅತಏವ ಶ್ರೀಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.





**ಬಾಲಾರ್ಕಮಧು:** ಮಕ್ಕಳಿಗೆ ಇದನ್ನು ಕೊಡುವುದರಿಂದ ಶಕ್ತಿಯೂ ಆರೋಗ್ಯವೂ ಹೆಚ್ಚುವುದು. ಇದು ಮಧುರವಾಗಿದೆ. ಬೆಲೆ ಶೀಸೆ ೧ಕ್ಕೆ ೦-೧೨-೦. ಟ.ಖ.೦-೧೨-೦

**ಚಕ್ರಬಿಂದು:** ಪಿತ್ತಕೋಶ ಪ್ಲೀಹ (Spleen and Lever Enlargement ) ಎಂಬ ಮಕ್ಕಳ ಗಡ್ಡೆರೋಗಕ್ಕೆ ಪರಮೌಷಧ.

ತಿಂಗಳ ಔಷಧ ಬೆಲೆ V. P. ಸೇರಿ ೩-೮-೦

**ಎಂ. ವಿ. ಪ್ರಾಸಾದಿಕ ಔಷಧಾಲಯ,**
**ಶಿವಮೊಗ್ಗಾ ( ಮೈಸೂರು ಸಂಮೆ )**



## ದಮ್ಮು ಪೂರ್ಣ ಗುಣವಾಗುವ ಉಪಾಯವನ್ನೇ ಕೈಕೊಳ್ಳಬೇಕು



ಕೆಮ್ಮು ಮತ್ತು ಕಫವಿಕಾರವಿದ್ದವರು 'ಎಫಿಡಮ' ಮುಂತಾದ ತಾತ್ಕಾಲಿಕ ಆರಾಮವೆನಿಸುವ ಔಷಧಗಳನ್ನು ಎಂದೂ ಉಪಯೋಗಿಸಬಾರದು. ಈ ಔಷಧಗಳು ರೋಗವನ್ನು ಪೂರ್ಣ ಗುಣಪಡಿಸಲು ನಿರುಪಯೋಗಿಗಳೆಂಬದು ನಿಶ್ಚಿತವು; ಮತ್ತು ಇಂಥ ಔಷಧಗಳು ಶ್ವಾಸನಲಿಕೆಯಲ್ಲಿಹೆಚ್ಚಿಗೆ ನೋವುಂಟುಮಾಡಿ ರೋಗವನ್ನು ಶಾಶ್ವತಮಾಡುತ್ತವೆ

ರೋಗಲಕ್ಷಣವನ್ನು ಪೂರ್ಣ ವಿಚಾರ ಮಾಡಿ, ರೋಗಿಗೆ ಬೇಗನೆ ಮತ್ತು ಸಾವಧಾನವಾಗಿ ಪೂರ್ಣ ಗುಣಮಾಡುವ ಔಷಧವೇ ನಿಜವಾದ ಉಪಾಯವು; ಮತ್ತು ದೇಹದೃಷ್ಟಿಯಿಂದ ಡಾ. ಪುರೋಹಿತ ಇವರ

**'ಶ್ವಾಸಹಾರಿ ಪ್ಲೇನ್' ಮತ್ತು**
**'ಶ್ವಾಸಹಾರಿ ಕಾಂಪಾವುಂಡ್'**

ಈ ಎರಡೂ ಔಷಧಗಳು ದಮ್ಮು ವಿಕಾರವನ್ನು ಪೂರ್ಣ ಗುಣಪಡಿಸುವ ದಿವ್ಯೌಷಧಿಯಲ್ಲಿ ಅಗ್ರೇಸರವೆನಿಸಿವೆ. ದಮ್ಮು, ಶ್ವಾಸ, ಮುಂಜಾನೆಯ ಠಸಕಿ, ಗಂಟಲು ಕೆರೆಯುವ ಹಳೇ ಕೆಮ್ಮು ಮತ್ತು ಪುಪ್ಪುಸದ ಯಚ್ಚಾವತ್ ರೋಗಗಳನ್ನು ಗುಣಪಡಿಸಲು "ಶ್ವಾಸಹಾರಿ ಪ್ಲೇನ್" ಉಪಯೋಗಿಸಬೇಕು. ಆಮ್ಲಪಿತ್ತವಿದ್ದವರು "ಶ್ವಾಸಹಾರಿ ಕಾಂಪೌಂಡ್" (ಕೆಂಪು ಪ್ಯಾಕಿಂಗ್ ) ಉಪಯೋಗಿಸುವುದು ಹೆಚ್ಚು ಲಾಭಕರವು.

ಬಹುತರವಾಗಿ ಎಲ್ಲ ಶಹರಗಳಲ್ಲಿ ಕೆಮಿಸ್ಟ್ ಸ್ಟೋರ್ಸ್ ಮತ್ತು ಅಂಗಡಿಗಳಲ್ಲಿ ಈ ಔಷಧಗಳು ರೂ. ೨, ೩-೮-೦ ಮತ್ತು ೬-೦-೦ ಹೀಗೆ ಬೇರೆ ಬೇರೆ ಬೆಲೆಯ ೩ ಪ್ಯಾಕುಗಳಲ್ಲಿ ಮಾರಲಿಕ್ಕೆ ಸಿಗುತ್ತವೆ.

ಲೋಕಲ್ ಏಜಂಟ್ಸ್:—

**ಪಾಪ್ಯುಲರ ಮೆಡಿಕಲ್ ಸ್ಟೋರ್ಸ್, ಮಂಗಳೂರು.**



**ಪುರೋಹಿತ ಶ್ವಾಸಹಾರಿ**

ಡಾ ಪುರೋಹಿತ ಫಾರ್ಮಸಿ. ಕೊಲ್ಹಾಪುರ.


CC-0. Jangamwadi Math Collection. Digitized by eGangotri

# ಸೂಚಿ ಶಿಲ್ಪ ಶಾಸ್ತ್ರ

**( *Tailoring Artistic Anatomy* )**

ಲೇಖಕರು : ಶ್ರೀ. ಹಳಪೇಟೆ ಚಿಂತಾಮಣಿರಾಯರು, ಟಿ. ಸಿ. ಡಿಪ್ಲೊಮಿಸ್ಟ್, ಸಿಗ್ಗಾವಿ.



**ಹರ್ಷಕಾಲೀನ ಭಾರತದಲ್ಲಿ ಉತ್ತಮೋತ್ತಮವಾದ ಉಡುಪುಗಳನ್ನು ಉಡುತ್ತಿದ್ದರು. ಹಾಗು ಮಾಡುತ್ತಿದ್ದರು. ವೈದಿಕ ಸಾಹಿತ್ಯದಲ್ಲಿ ಉಡುಪುಗಳನ್ನು ಹೊಲಿಯುವ ಪ್ರಮಾಣಗಳ ಉಲ್ಲೇಖವಿದೆ. ಇಷ್ಟು ಪ್ರಾಚೀನ ಕಾಲದಲ್ಲಿ ಊರ್ಜಿತಾವಸ್ಥೆಯಲ್ಲಿದ್ದ ಹೊಲಿಗೆಯ ಕಲೆಯು ಕುಂದಿಕುಂದಿಹೋಗಿ, ಪರೋಪಜೀವಿಯಾದುದರ ಕಾರಣವೇನು ? 'ಹಳೆ–ಹೊಸ' ಸಮನ್ವಯವು ಇಲ್ಲಿಯೂ ಆಗಬೇಕಾಗಿಲ್ಲವೇ ?**



ಜಾಣತನ, ಹಸ್ತಕೌಶಲ್ಯವನ್ನು ತೋರಿಸಲವಕಾಶವುಳ್ಳ ಯಾವ ವಿಷಯವೂ ಕಲೆ ಎನ್ನಿಸುವದು. ಅದಕ್ಕೆ ತಕ್ಕ ನಿಯಮ–ನಿಬಂಧನೆಗಳಿರುವದರಿಂದ ಅದಕ್ಕೊಂದು ಶಾಸ್ತ್ರವೂ ಇರುವದುಂಟು. ಆ ಮೇಲೆ ಅದು ಶಾಸ್ತ್ರಶುದ್ಧ ಕಲೆಯೆಂದು ಹೇಳಿಸಿಕೊಳ್ಳಲು ಅರ್ಹವಾಗುವದು.

ಸೂಚಿ ಶಿಲ್ಪಕಲೆಗೆ ಕೆಲವೊಂದು ಕಟ್ಟುನಿಟ್ಟಿನ ನಿಯಮಗಳಿವೆ. ದೇಹದ ಯಾವುದೋಂದು ಮುಖ್ಯಭಾಗದ ಅಳತೆಯನ್ನು ಆಧಾರವಾಗಿಟ್ಟುಕೊಂಡು, ಇನ್ನುಳಿದ ಅವಯವಗಳ ಅಳತೆಗಳು ಆ ಮುಖ್ಯ ಅಳತೆಯ ಇಂತಿಷ್ಟು ಪಟ್ಟು ಹೆಚ್ಚು ಇಲ್ಲವೆ ಕಡಿಮೆ ಇರುವಂತೆ ಅದರ ಶಾಸ್ತ್ರವು ನಿಯಮಗಳನ್ನು ನಿರ್ಧರಿಸಿದೆ. ಆ ನಿಯಮಗಳ ಪಾಲನೆ ಮಾಡುತ್ತಿರುವಲ್ಲಿ ಹೆಚ್ಚಾದ ಅನುಭವವೂ ಹಸ್ತಕೌಶಲ್ಯವೂ ಬೇಕಾಗುತ್ತವೆ. ಆದ್ದರಿಂದ ಸೂಚಿಶಿಲ್ಪವೂ ಶಾಸ್ತ್ರಶುದ್ಧ ಕಲೆಯು. ಅದರ ಬೆಳವಣಿಗೆಯು ಇಂದು ಪ್ರಪಂಚದಲ್ಲಿಯೇ ಭರದಿಂದ ಸಾಗಿದೆ.

ನಮ್ಮಲ್ಲಿ ಈ ಶಾಸ್ತ್ರವು ಕೇವಲ ಪಾಶ್ಚಾತ್ಯರಿಂದ ಬಂದುದೆಂದು ಬಹುಶಃ ಎಲ್ಲರ ಕಲ್ಪನೆ. ನಮ್ಮಲ್ಲಿ ಹಿರಿಯರಾದ ಎಷ್ಟೋ ಸೂಚಿಶಿಲ್ಪಿಗಳನ್ನು ಕೇಳುತ್ತಿರಲು ನಮ್ಮಲ್ಲಿಯೂ ಪೂರ್ವದಲ್ಲಿ ಸೂಚಿಶಿಲ್ಪಶಾಸ್ತ್ರವನ್ನು ಬಲ್ಲವರಿದ್ದರೆಂದು ಹೇಳುವರು. ಅದಕ್ಕಾಗಿ ಕೆಲ ಉದಾಹಣೆಗಳನ್ನೂ ಕೊಡುವರು. "ಅರಸು ಮನೆತನದ ಉಡುಪುಗಳನ್ನು ತಯಾರಿಸುವ ಎಷ್ಟೋ ಕುಶಲ ಸೂಚಿಶಿಲ್ಪಿಗಳು ನಮ್ಮಲ್ಲಿದ್ದರು. ಅವರು ಕೇವಲ ಎಡಗಾಲಿನ ಹೆಬ್ಬೆರಳಿನ ಅಳತೆ ತೆಗೆದುಕೊಂಡು ಇಚ್ಛಿತವಾದ ಸುಂದರ ಉಡುಪನ್ನು ತಯಾರಿಸಿ ಕೊಡುತ್ತಿದ್ದರು" ಎಂದು ಮೊದಲಾಗಿ ಹೇಳುವರು. ರಾಣಿಯರ ಉಡುಪುಗಳನ್ನು ತಯಾರಿಸುವಾಗ ಈ ರೀತಿಯನ್ನು ಅನುಸರಿಸುವದು ಸಾಧ್ಯವೆಂದು ಕಂಡರೂ ಈ ಸಂಗತಿಯು ಅಷ್ಟೊಂದು ನಂಬುಗೆಗರ್ಹವೆಂದು ಕಾಣುವದಿಲ್ಲ. ಅರಸುಮನೆತನಗಳಲ್ಲಿ ಕೂಡ, ಅವರ ಸಂಗಡ ಸಲುಗೆ ಬೆಳೆಯಿಸಿದ ಕಲೋಪಜೀವಿಗಳ ಕತೆಗಳನ್ನು ನಾವು ಓದುತ್ತೇವೆ, ಕೇಳುತ್ತೇವೆ. ತಮಗಾಗಿಯೆಂದು ಅವರು ಪ್ರತ್ಯೇಕವಾಗಿ ಕಲಾಕೋವಿದರನ್ನು ನಿಯಮಿಸಿಕೊಳ್ಳುತ್ತಿದ್ದುದರಿಂದ ಅರಸುಮನೆತನದ ಹಾಗು ಕಲಾವಂತರ ಈ ಬಗೆಯ ಮುಚ್ಚುಮರೆಯು ಸಾಧ್ಯವೆಂದು ತೋರುವುದಿಲ್ಲ. ಉಡುಪುಗಳ ಸಂಪೂರ್ಣ ಅಳತೆಯನ್ನು ತೆಗೆದುಕೊಳ್ಳಲು ಯಾವದೇ ಆತಂಕವು ಅವರಿಗೆ ಇರುತ್ತಿರಲಿಲ್ಲ. ಕೇವಲ ನಮ್ಮ ಕಲಾಕೋವಿದರ ಹೆಚ್ಚಳವನ್ನು ಹೇಳುವ ಭರದಲ್ಲಿ ಅಸಂಭವನೀಯ ಅಂಶಗಳನ್ನು ಹೇಳಿಬಿಟ್ಟರೆ ಸಾಲದು.

ಶ್ರೀ ಕೃಷ್ಣಚಂದ್ರ ವಿದ್ಯಾಲಂಕಾರರು ಹರ್ಷಕಾಲೀನ ಭಾರತದ ಇತಿಹಾಸವನ್ನು ಬರೆಯುತ್ತ ಆಗಿನ ಕಾಲದ

CC-0. Jangamwadi Math Collection. Digitized by eGangotri

ಉಡುಪಿನ ವಿಷಯವಾಗಿ ಹೇಳುವ ಮಾತುಗಳು ಮಾತ್ರ ಸೂಚಿಶಿಲ್ಪಶಾಸ್ತ್ರವು ನಮ್ಮಲ್ಲಿ ಬಹಳ ಹಿಂದಿನಿಂದ ಬಂದುದೆಂದು ಎನ್ನುವುದಕ್ಕೆ ಹೆಚ್ಚಿನ ಪುಷ್ಟಿಯನ್ನೀಯುತ್ತಿವೆ. ಅವರು ಹೀಗೆ ಬರೆಯುತ್ತಾರೆ:

“ಹರ್ಷಕಾಲೀನ ಭಾರತದಲ್ಲಿ ಉತ್ತಮೋತ್ತಮವಾದ ಉಡುಪುಗಳನ್ನು ಮಾಡುತ್ತಿದ್ದರು, ಹಾಗೂ ತೊಡುತ್ತಿದ್ದರು. ಹುವೆನತ್ಸಾಂಗನು, ಭಾರತೀಯರ ವಸ್ತ್ರಗಳು ಹೊಲಿದಂಥವುಗಳಿರುತ್ತಿದ್ದಿಲ್ಲವೆಂದು ಬರೆಯುತ್ತಾನೆ; ಅದು ಸುಳ್ಳು. ವೈದಿಕಸಾಹಿತ್ಯದಲ್ಲಿ ಉಡುಪುಗಳನ್ನು ಹೊಲಿಯುವ ಪ್ರಮಾಣಗಳು ಸ್ಪಷ್ಟವಾಗಿ ಸಿಕ್ಕುವವು. ಇದರಿಂದ ಪ್ರಾಚೀನಕಾಲದಿಂದಲೇ ನಮ್ಮಲ್ಲಿ ಸೂಚಿಶಿಲ್ಪಕಲೆಯು ಊರ್ಜಿತಾವಸ್ಥೆಯಲ್ಲಿತ್ತೆಂದು ಸಿದ್ಧವಾಗುತ್ತದೆ. ಸ್ತ್ರೀಯರು ಸೀರೆಗಳನ್ನುಡುವಲ್ಲಿ ಪರಕಾರ (ಲುಂಗ) ಗಳನ್ನುಡುವ ಪದ್ಧತಿಯೂ ರೂಢಿಯಲ್ಲಿತ್ತೆಂದು ಪ್ರಾಚೀನ ಚಿತ್ರಗಳಿಂದ ತಿಳಿಯುತ್ತದೆ. ಅಜಂತೆಯೊಳಗಿನ ಒಂದು ಚಿತ್ರದಿಂದ ಹೆಣ್ಣುಮಕ್ಕಳು ಚೀಟಿನ ಅರಿವೆಗಳನ್ನು ಸಹ ತೊಡುತ್ತಿದ್ದರೆಂದು ಕಂಡುಬರುತ್ತದೆ....ಧೋತರದ ಅಂಚುಗಳು ಸುಂದರವಿರುತ್ತಿದ್ದವೆಂಬುದು ಅಜಮೀರದ ಪ್ರದರ್ಶನದಲ್ಲಿಟ್ಟ ಒಂದು ಮೂರ್ತಿಯಿಂದ ತಿಳಿಯುತ್ತದೆ. ಉಡುಪುಗಳು ಕೇವಲ ನೂಲಿನವೇ ಇರುತ್ತಿರಲಿಲ್ಲ. ಹುವೆನ-ತ್ಸಾಂಗನು ನೂಲು-ರೇಶಿಮೆ-ಉಣ್ಣೆಯ ಅರಿವೆಗಳ ಉಲ್ಲೇಖ ಮಾಡಿದ್ದಾನೆ........ಬಾಣನು ಹರ್ಷಚರಿತ್ರದಲ್ಲಿ ಅತಿ ಹೆಚ್ಚಿನ ಬಣ್ಣಬಣ್ಣದ ಉಡುಪುಗಳ ವರ್ಣನೆ ಮಾಡಿದ್ದಾನೆ. (निःश्वासहार्यैः स्पर्शानुमेयैः....)

ಹಾಗೆಯೇ ನೋಡಿದಲ್ಲಿ ನಮ್ಮ ಹಳ್ಳಿಗಳಲ್ಲಿಯ ವಯೋವೃದ್ಧ ಸೂಚಿಶಿಲ್ಪಿಗಳ ಕೃತಿಗಳು ಇಂದಿಗೂ ನಮ್ಮಲ್ಲಿ ಆಶ್ಚರ್ಯವನ್ನುಂಟುಮಾಡುವವು. ಅರಿವೆಯನ್ನು ಅವರು ಒಂದು ವಿಶಿಷ್ಟರೀತಿಯಿಂದ ಮಡಿಕೆಮಾಡಿ ಕತ್ತರಿಸಲು, ಒಂದು ವಸ್ತ್ರದ ಸಂಪೂರ್ಣ ಭಾಗಗಳೆಲ್ಲವೂ ಅಳತೆಗೆ ಸರಿಯಾಗಿ ಸಿದ್ಧವಾಗುವವು. ಇದರಿಂದ ಸೂಚಿಶಿಲ್ಪಶಾಸ್ತ್ರದ ಪ್ರಗತಿಯು ಎಷ್ಟರ ಮಟ್ಟಿಗೆ ಆಗಿತ್ತೆಂಬುದು ಕಂಡುಬರುವದು. ಆದರೆ ನಮ್ಮವರ ಕೂಪಮಂಡೂಕ ವೃತ್ತಿಯಿಂದಲೋ, ಪರದಾಸ್ಯದ ಪ್ರಭಾವದಿಂದಲೋ ಅದೆಲ್ಲವೂ ಇಂದು ನಮಗೆ ಕನಸು.

ನಮ್ಮಲ್ಲಿಯ ತಜ್ಞ ಸೂಚಿಶಿಲ್ಪಿಗಳಲ್ಲಿ ತಾವು ಬಲ್ಲಷ್ಟನ್ನಾದರೂ ತಮ್ಮ ಮುಂದಿನ ಪೀಳಿಗೆಗಳಿಗೆ ಕೊಟ್ಟು ಕಲೆಯ ಅಭಿವೃದ್ಧಿಗೆ ಅನುವು ಮಾಡಿಕೊಟ್ಟವರು ತೀರ ಕಡಿಮೆ. ಇಲ್ಲವೆಂದರೂ ಸಲ್ಲುವದು. ಹೀಗಾಗಿ ಸೂಚಿಶಿಲ್ಪಕಲೆಯು ಕ್ಷೀಣಿಸುತ್ತ ಬಂದಿರಲು ಸಾಕು. ಅಭ್ಯಾಸುಗಳು ಅನುಭವದಿಂದ ಅದನ್ನು ಹಸ್ತಗತ ಮಾಡಿಕೊಳ್ಳಬೇಕಾದರೆ ತಮ್ಮ ಅರ್ಧ ಆಯುಷ್ಯವನ್ನೇ ಹಾಳುಮಾಡಿಕೊಳ್ಳಬೇಕಾಗಿತ್ತಾದ್ದರಿಂದ ಕಲೆಯ ಬೆಳವಣಿಗೆಯು ಮತ್ತಿಷ್ಟು ಕುಗ್ಗಿತು. ಈಗ ಮಾತ್ರ ಆ ಸ್ಥಿತಿಯುಳಿದಿರುವದಿಲ್ಲ. ವಾಯುವೇಗದಿಂದೋಡುತ್ತಿರುವ ಈ ಸುಧಾರಣಾಯುಗದಲ್ಲಿ ಯಾವುದು ತಾನೆ ಹಿಂದಕ್ಕುಳಿಯಬಲ್ಲದು ?

ನಮ್ಮಲ್ಲಿಯ ಉಚ್ಚತರಗತಿಯ ಸೂಚಿಶಿಲ್ಪಿಗಳೆಂದು ಹೆಮ್ಮೆಪಡುವವರೆಲ್ಲರೂ ಪಾಶ್ಚಾತ್ಯರ ಸೂಚಿಶಿಲ್ಪಶಾಸ್ತ್ರದ ಆಧಾರದ ಮೇಲೆಯೇ ಕೆಲಸ ಮಾಡುವರು. ಅದರಲ್ಲಿಯೂ ದಿನದಿನಕ್ಕೆ ಸುಧಾರಣೆಗಳಾಗಹತ್ತಿವೆ. ಅಂತೂ ನಮ್ಮಲ್ಲಿಯೂ ಈ ಕಲೆಯು ಪ್ರಗತಿಪಥದಲ್ಲಿದೆ ಈಗ. ಒಂದು ವಸ್ತ್ರವನ್ನು ತಯಾರಿಸುವಾಗ ಅದರ ವಿಭಾಗಗಳ ಪ್ರಮಾಣಗಳಿಂತಿಷ್ಟೇ ಇರಬೇಕೆಂದು ಮಾತ್ರ ಹೇಳದೆ ಯಾವ ವ್ಯಕ್ತಿಗಾಗಿ ಅದು ತಯಾರಿಸಲ್ಪಡುತ್ತಿದೆಯೋ ಆ ವ್ಯಕ್ತಿಯ ಶರೀರಾವಯವಗಳ ವಿಶಿಷ್ಟತೆಯ ಕಡೆಗೆ ಲಕ್ಷ್ಯಕೊಟ್ಟು ಅದಕ್ಕೆ ತಕ್ಕಂತೆ ಅದರಲ್ಲಿ ಮಾಡಬೇಕಾದ ಹೆಚ್ಚುಕಡಿಮೆಯ ಬಗ್ಗೆಯೂ ಸಶಾಸ್ತ್ರೀಯ ಜ್ಞಾನವೀಗ ಸಿಕ್ಕುತ್ತದೆ.

ಪಾಶ್ಚಾತ್ಯರಲ್ಲಿಯೂ ಕಳೆದ ಸುಮಾರು ೭೫-೮೦ ವರ್ಷಗಳಿಂದ ಸೂಚಿಶಿಲ್ಪಶಾಸ್ತ್ರವು ಬೆಳಕಿಗೆ ಬರಹತ್ತಿತೆಂದು ಹೇಳಬಹುದು. ಜರ್ಮನಿಯ ಬರ್ಲಿನ್ ನಗರದಲ್ಲಿದ್ದ ಡಾ. ವಾಂಪೆನ್ (Wampen) ನೆಂಬ ಗಣಿತಜ್ಞನೊಬ್ಬನು ಈ ವಿಷಯವಾಗಿ ಮೊಟ್ಟಮೊದಲು ಪ್ರಯತ್ನಿಸಿದನು. ನಿಜವಾಗಿ ನೋಡಿದಲ್ಲಿ ಅವನಿಗೂ ಸೂಚಿಶಿಲ್ಪಕಲೆಗೂ ಏನೂ ಸಂಬಂಧವಿರಲಿಲ್ಲ. ಆದರೂ “ಸೂಚಿಶಿಲ್ಪಕಲೆಯು ನಾವು ತಿಳಿದಿರುವಷ್ಟು ಕೀಳು ತರಗತಿಯದಲ್ಲ; ಅದನ್ನು ಇಂದು ಉಚ್ಚವೆಂದು ಗಣಿಸಲ್ಪಡುತ್ತಿದ್ದ ಗಣಿತಶಾಸ್ತ್ರದ ಚೌಕಟ್ಟಿನಲ್ಲಿ ಕೂಡಿಸಬೇಕಾಗಿದೆ” ಎಂದು ಅವನು ವಿಚಾರ ಮಾಡಿದನು. ಅದೇ ದೃಷ್ಟಿಯಿಂದ ಗಣಿತಶಾಸ್ತ್ರಬದ್ಧ ಸೂಚಿಶಿಲ್ಪಕಲೆಯ ಶಾಸ್ತ್ರವನ್ನೊಂದನ್ನು ಬರೆದನು. ಅದು ಆಗಿನ ಕಾಲಕ್ಕೆ ಅಷ್ಟೊಂದು ಯಶಸ್ವಿಯಾಗಲಿಲ್ಲ. ಅವನು ಬರೆದ ಪುಸ್ತಕಗಳ ಪ್ರತಿಗಳು ತೀರ ಸ್ವಲ್ಪ ಖರ್ಚಾದವು. ಆ ಪುಸ್ತಕದ ಮೋರೆಯನ್ನು ಸಹ ನೋಡದ ಎಷ್ಟೋ ಜನರು ಅದರ ವಿಷಯವಾಗಿ ಹಾಸ್ಯಮಾಡಿದರು. ಸ್ವತಃ ಸೂಚಿಶಿಲ್ಪಿಯು ಅವನಿರದ್ದರಿಂದ ಎಷ್ಟು ಪರಿಣಾಮಕಾರಿಯಾಗಿ ಬರೆಯಬೇಕಾಗಿದ್ದಿತೋ ಅಷ್ಟು ಅವನಿಂದ ಸಾಧ್ಯವಾಗ-

CC-0. Jangamwadi Math Collection. Digitized by eGangotri

ಲಿಲ್ಲ. ಹಾಗೂ ಆಗಿನ ಕಾಲದ ಸೂಚಿಶಿಲ್ಪಿಗಳು ಶಾಸ್ತ್ರೀಯ ಜ್ಞಾನವನ್ನು ಗ್ರಹಣ ಮಾಡುವಷ್ಟು ಜಾಣಾಕ್ಷರಿದ್ದಿಲ್ಲ.

ಡಾ. ವಾಂಪೆನ್ನನನಂತರ ಅವನಷ್ಟೇ ಕೌಶಲ್ಯಪೂರ್ಣ ಪುಸ್ತಕಗಳನ್ನನೇಕರು ಬರೆದಿರುತ್ತಾರೆ. ಇತ್ತೀಚಿಗಂತೂ ತಮ್ಮದೊಂದೊಂದು ಪದ್ಧತಿಯನ್ನೇ ನಿರ್ಮಾಣಮಾಡಿಕೊಂಡಿದ್ದಾರೆ. ಆದರೆ ಇವರು ಅನುಕರಿಸಿದ ಪದ್ಧತಿಗಳಿಗೂ ಆಧಾರಗಳಿಗೂ ಚಿತ್ರಗಳಿಗೂ ಡಾ|| ವಾಂಪೆನ್ನನ ಪುಸ್ತಕವೇ ಮೂಲವೆಂಬದನ್ನು ಮರೆಯುವಂತಿಲ್ಲ. ಸದ್ಯಕ್ಕೆ ಆದರ್ಶವೆಂದು ಗಣಿಸಲ್ಪಡುವ ಕಲಾತ್ಮಕ ಶರೀರಪ್ರಮಾಣ ಶಾಸ್ತ್ರ (Artistic Anatomy) ವೆಂಬ ಪುಸ್ತಕವನ್ನು ಪ್ಯಾರಿಸ ನಗರದ ಶಾಸ್ತ್ರೀಯ ಶಾಲೆಯಲ್ಲಿಯ ಡ್ಯುಬಲ್ (Dubel) ನೆಂಬವನು ಬರೆದಿದ್ದಾನೆ. ಅದೇ ಪುಸ್ತಕದ ಆಧಾರದ ಮೇಲೆಯೇ ನಮ್ಮವರನೇಕರು ದೇಶೀಯ ಭಾಷೆಗಳಲ್ಲಿ ಸೂಚಿಶಿಲ್ಪಶಾಸ್ತ್ರದ ಬಗ್ಗೆ ಪುಸ್ತಕಗಳನ್ನು ಬರೆದಿದ್ದಾರೆ; ಸೂಚಿಶಿಲ್ಪಶಾಲೆಗಳನ್ನು ಸ್ಥಾಪಿಸಿ ಅಭ್ಯಾಸುಗಳಿಗೆ ಶಿಕ್ಷಣ ಕೊಡುತ್ತಲಿದ್ದಾರೆ.


## ದಿ ತರುಣ ಅಶ್ಯುರನ್ಸ್ ಕಂಪನಿ ಲಿ., ಅಹಮ್ಮದಾಬಾದ

ನಮ್ಮಲ್ಲಿ ಕುಟುಂಬಸಂರಕ್ಷಕ ಯೋಜನೆ, ಮಲ್ಟಿಪಲ್ ಬೆನಿಫಿಟ್ ಪ್ಲ್ಯಾನ್, ಫಿಕ್ಸ್ಡ್ ಬೋನಸ್ ಎಂಡೌಮೆಂಟ್, ಮಕ್ಕಳ ಸುಖಭವಿಷ್ಯದ ವಿಮೆ ಮೊದಲಾದ ಹಲವು ಲಾಭದಾಯಕ ಯೋಜನೆಗಳಿವೆ.

ತರುಣ ಡಾಯಮಂಡ್ ಪಾಲಿಸಿಯಿಂದ ಸ್ವಸಂರಕ್ಷಣೆ, ಪೆನ್ಶನ್ ಮತ್ತು ಸುರಕ್ಷಿತ ಠೇವುಗಳು ಸಿಗುವವು

ತರುಣ ಬಾಂಡ್: ಇದೊಂದು ಅದ್ಭುತ ಕಾಣಿಕೆ. ಬರಿ ರೂ. ೧೩೮೦ರಲ್ಲಿ ನಿಮ್ಮ ಮತ್ತು ನಿಮ್ಮ ಕುಟುಂಬದ ರಕ್ಷಣೆಯಾಗುವುದಲ್ಲದೆ, ದೈವವಿದ್ದರೆ **೨೫೦೦ ರೂ.** ಸಿಗುವ ಸಂಭವವಿದೆ.

☞ ೧೯೩೭ರ ಆಗಸ್ಟ ತಿಂಗಳಲ್ಲಿ ತರುಣಬಾಂಡುಗಳ ಬಹುಮಾನಗಳನ್ನು ಹಂಚುವ ೩ನೆಯ ಸಮಾರಂಭವು ಜರುಗಿದೆ.

ಕರ್ನಾಟಕದಲ್ಲೆಲ್ಲಾ ಕೆಲಸಮಾಡಲು ಏಜಂಟರು ಬೇಕು. ಕೆಳಗಿನ ವಿಳಾಸಗಳಿಗೆ ಬರೆಯಿರಿ:

ಬ್ರ್ಯಾಂಚ್ ಮ್ಯಾನೇಜರ್,
**ಎ. ಡಿ. ದೇಶಪಾಂಡೆ, ಮೇನರೋಡ್, ಸಾಂಗಲಿ**

ಧಾರವಾಡ ಜಿಲ್ಲೆಯ ಚೀಫ ಏಜಂಟರು
**ಮೇಸರ್ಸ ಲೋಖಂಡೆ, ಸಿದ್ದನಗೌಡರ ಮತ್ತು ಕಂಪನಿ, ಧಾರವಾಡ**

**ಎನ್. ಗುಡಿ ಚೀಫ್ ಏಜಂಟ, ಹೈದರಾಬಾದ (ದ)**

ಬೆಳಗಾಂವಿ ಜಿಲ್ಲೆಯ ಅಸಿಸ್ಟಂಟ್ ಆರ್ಗನೈಜರ್
**ಕೆ. ಎಸ್. ಪಾವಟೆ, ಬನಹಟ್ಟಿ (ಜಿ: ಬೆಳಗಾವಿ)**

## ಸಾಲುದೀಪ

ಇದೀಗ ಜಯಕರ್ನಾಟಕ ಗ್ರಂಥಮಾಲೆಯ ೨೩ನೆಯ ಸಂಯುಕ್ತ ಪುಷ್ಪವಾದ 'ಸಾಲುದೀಪ'ವು ಪ್ರಕಟವಾಗಿದೆ. ಅದು ಸುಮಾರು ೨೦೦ ಪುಟಗಳನ್ನೊಳಗೊಂಡಿದೆ. ಪ್ರಸಿದ್ಧ ಹಿಂದೀ ಲೇಖಕರಾದ ಶ್ರೀ. ಜೈನೇಂದ್ರ ಕುಮಾರರ ಲೇಖನಿಯಿಂದ ಬಂದ ೭ ಕತೆಗಳ ಸಂಗ್ರಹವದು. ಅವುಗಳಲ್ಲಿ ೫ ದೀರ್ಘಕತೆಗಳಾಗಿವೆ. ಶ್ರೀಯುತರ ಶೈಲಿ ಮರುಳುಗೊಳಿಸುವಂತಹದು; ವಿವಿಧರಸಭರಿತವಾದುದು; ಪರಿಪಕ್ವವಾದುದು. ಪ್ರಸ್ತುತ ಸಂಗ್ರಹವು ಕರ್ನಾಟಕದ ವಾಚಕರಿಗೊಂದು ಪಕ್ವಾನ್ನದೂಟವಾಗುವುದೆಂದು ಭರವಸೆ ಕೊಡಬಲ್ಲೆವು. ಸರಸ-ಸರಲ ಕನ್ನಡದಲ್ಲಿ ಹಿಂದೀ ಜ್ಞಾನಯಾತ್ರಿಮಂಡಲದ **ಶ್ರೀ. ಗುರುನಾಥ ಜೋಶಿಯವರೆ** ಈ ಸಂಗ್ರಹವನ್ನು ಅನುವಾದಿಸಿದ್ದಾರೆಂದು ಹೇಳಿದರೆ ಸಾಕು.

**ವ್ಯವಸ್ಥಾಪಕ, ಜಯಕರ್ನಾಟಕ**


CC-0. Jangamwadi Math Collection. Digitized by eGangotri

# ಕನ್ನಡದ ಗಡಿನಾಡಿನಲ್ಲಿ ಕಣ್ಣಾರೆ ಕಂಡದ್ದು

ಲೇಖಕರು: ಶ್ರೀಮಾನ್ ಮುದವೀಡು ಕೃಷ್ಣರಾಯರು

**೬೫ರ ಇಳಿವಯಸ್ಸಿನಲ್ಲೂ ಕೆಡುಗಲಿಗಳಾಗಿದ್ದ ಶ್ರೀ. ಮುದವೀಡು ಕೃಷ್ಣರಾಯರು ಕನ್ನಡದ ಕರೆ ಬಂದಲ್ಲೆಲ್ಲ ಹೋಗಿ, ತಮ್ಮ ಗಂಡುದನಿಯಿಂದ ಜನತೆಯನ್ನು ಹೊಡೆದೆಬ್ಬಿಸುತ್ತಿರುವರು. ಪ್ರಕೃತ, ನಾಡಹಬ್ಬದಲ್ಲಿ ಕೈಕೊಂಡ ಗಡಿನಾಡಿನಲ್ಲಿಯ ತಮ್ಮ ಸಂಚಾರದ ವೃತ್ತಾಂತವನ್ನು ಜ. ಕ. ದ ವಾಚಕರಿಗೆ ಅರುಹಿರುವರು.**



ಬೆನಕನ ಹಬ್ಬ, ಗಾಂಧಿಯವರ ಹುಟ್ಟುಹಬ್ಬ, ಹಾಗು ನಾಡಹಬ್ಬ ಈ ಮೂರೂ ಹಬ್ಬದ ದಿನಗಳು ಈಸಾರೆ ಒಂದಕ್ಕೊಂದು ಹೊಂದಿಕೊಂಡೇ ಬಂದ್ದದರಿಂದ ಕನ್ನಡ ನಾಡಿನಲ್ಲೆಲ್ಲ "ನಾಡಹಬ್ಬ" ಗಳ ಸುಗ್ಗಿಯೇ ಸುಗ್ಗಿ ಬಂದಂತಾಯಿತೆಂದು ಹೇಳಬಹುದು. ಈ ಮೂರೂ ಹಬ್ಬಗಳಲ್ಲಿ ನಾನು ಸುಮಾರು ಒಂದು ತಿಂಗಳಿಗಿಂತ ಹೆಚ್ಚುದಿವಸ ಊರೂರಿಗೆ ತಿರುಗಾಡಿ ನಾಡಸೇವೆ ಗೈಯ್ಯುವ ಭಾಗ್ಯವು ನನಗೆ ಈ ಇಳಿವಯಸ್ಸಿನಲ್ಲಿಯೂ ದೊರೆಯಿತು. ಸಾಮಾನ್ಯವಾಗಿ ರಾಷ್ಟ್ರಮಹಾಸಭೆಯ ಅಧಿಕಾರ ಸ್ವೀಕಾರದಿಂದ ದೇಶದ ಪರಿಸ್ಥಿತಿಯಲ್ಲುಂಟಾದ ಬದಲಾವಣೆ, ಅದರಲ್ಲಿ ಕನ್ನಡ ನಾಡಿನ ವಿಶಿಷ್ಟ ಕಷ್ಟ ತಾಪಗಳ ನಿವಾರಣೋಪಾಯ, ಕರ್ನಾಟಕದ ಏಕೀಕರಣ ಇವುಗಳೇ ಮುಖ್ಯವಾಗಿ ನನ್ನ ವಿವೇಚನೆಯ ವಿಷಯವಾಗಿದ್ದವು.

ನಮ್ಮ ಪಡುವಣ ಗಡಿನಾಡೆಂದು ಗಣಿಸಲಾದಲ್ಲಿ ಕಂಡು ಬಂದ ಕನ್ನಡತನದ ಹೆಜ್ಜೆಗಳು ಎಲ್ಲ ಕನ್ನಡಿಗರಲ್ಲಿ ಹಿರಿದಾದ ಹುಮ್ಮಸವನ್ನು ಹುಟ್ಟಿಸದಿರಲಾರದು. ಬೆಳಗಾಂವಿ ಜಿಲ್ಹೆಯ ಚಿಕ್ಕೋಡಿ ತಾಲೂಕೆಂದರೆ ಮರಾಠಿಯ ಪ್ರಾಬಲ್ಯಕ್ಕೆ ಸಿಕ್ಕಿಕೊಂಡು ನುಗ್ಗಾದ ಭಾಗವೆಂದು ಬಹು ಜನರ ತಿಳುವಳಿಕೆ. ಬೆಳಗಾಂವಿಯಲ್ಲಿ ನೆಲಸಿದ ಮರಾಟರೂ ಅವರ ಮಾತಿಗೆ ಮನ್ನಣೆಗೊಡುವ ನಮ್ಮ ಕನ್ನಡಿಗರೂ ಅಂದರೆ ಸಾಮಾನ್ಯವಾಗಿ "ಮರಾಠೀ" ಭಾಷೆಯ ಅಭಿಮಾನಿಗಳೂ ಪುರಸ್ಕರ್ತರೂ ಅಲ್ಲಿ ಮೇಲೆಮೇಲೆ ಕಾಣುವ ಪರಿಸ್ಥಿತಿಯೇ ಆಳವಾಗಿರುವ ವಸ್ತುಸ್ಥಿತಿಯೆಂಬ ನಂಬುಗೆಯನ್ನು ಹುಟ್ಟಿಸಲು ಕೃತ್ರಿಮತನದಿಂದಲೋ ಅಥವಾ ಅಜ್ಞಾನದಿಂದಲೋ ಮಾಡಿದ ಯಶಸ್ವಿಯಾದ ಪ್ರಯತ್ನದ ಫಲವೇ ಇದೆಂಬ ಮಾತು ಚೆನ್ನಾಗಿಯೇ ನನಗೆ ಮನದಟ್ಟಾಯಿತು. ಬೆನಕನ ಹಬ್ಬದಲ್ಲಿಯ ನನ್ನ ಸಂಚಾರದ ವಿವರಗಳನ್ನು ಬಿಟ್ಟುಕೊಟ್ಟು ನಾಡಹಬ್ಬದಲ್ಲಿಯ ಕಾರ್ಯಕ್ರಮಗಳ ವಿಚಾರವನ್ನಷ್ಟೇ ಇಲ್ಲಿ ಹೇಳುವೆನು.

ಮುಂಚೆ ಮಾತುಕೊಟ್ಟ ಮೇರೆಗೆ ನಾಡಹಬ್ಬದ ೨ನೇ ದಿವಸ ನಾನು ಚಿಕ್ಕೋಡಿಗೆ ಹೋದೆನು. ಈ ಮಾತು ವರ್ತಮಾನಪತ್ರಗಳಲ್ಲಿ ಮೊದಲೇ ಪ್ರಸಿದ್ಧವಾದ ಮೂಲಕ ಚಿಕ್ಕೋಡಿಯ ವಾಯುವ್ಯಕ್ಕೆ ೧೫ ಮೈಲುಗಳ ಮೇಲೆ ಕೊಲ್ಹಾಪುರ ಸಂಸ್ಥಾನದ ಸೀಮೆಗೆ ಸಮೀಪವಾಗಿರುವ "ಸದಲಗೆ" ಗ್ರಾಮದವರು ನನ್ನನ್ನು ತಮ್ಮಲ್ಲಿಯ ನಾಡಹಬ್ಬಕ್ಕಾಗಿ ಕರೆದೊಯ್ಯುವ ಹಂಚಿಕೆ ಹಾಕಿ ಚಿಕ್ಕೋಡಿಯವರ ಸಂಗಡ ಮಾತನಾಡಿ ಗೊತ್ತುಮಾಡಿಕೊಂಡಿದ್ದರು. ಅಂದೇ ಚಿಕ್ಕೋಡಿಯಲ್ಲಿ ಉಪನ್ಯಾಸ ಮುಗಿಸಿಕೊಂಡು ರಾತ್ರಿ ೯ ಗಂಟೆಗೆ ಚಿಕ್ಕೋಡಿಯ ಕಾರ್ಯಕರ್ತರೊಂದಿಗೆ ಕಾರಿನಲ್ಲಿ ಹೊರಟು ಹತ್ತುನರೆ ಗಂಟೆಯ ಸುಮಾರಕ್ಕೆ ಸದಲಗೆಗೆ ಮುಟ್ಟಿದೆವು. ಅಲ್ಲಿಯ ತರುಣರು ಅಲ್ಲೊಂದು ಕರ್ನಾಟಕ ಸಂಘವನ್ನು ಸ್ಥಾಪಿಸಿ ಅದಕ್ಕೆ ಒಂದು ಕರ್ನಾಟಕ ವಾಚನಾಲಯವನ್ನು ಜೋಡಿಸಿದ್ದಾರೆ. ಆ ಪ್ರಶಾಂತವಾದ ರಾತ್ರಿಯಲ್ಲಿ ಗ್ಯಾಸು ದೀಪಗಳ ಪ್ರಶಸ್ತ ಬೆಳಕಿನಲ್ಲಿ ರಾಷ್ಟ್ರಧ್ವಜ ಪತಾಕೆಗಳಿಂದ ಸಿಂಗರಿಸಲ್ಪಟ್ಟ ವಿಶಾಲವಾದ ಆ ಪಟಾಂಗಣದಲ್ಲಿ ಕನ್ನಡ ಭಾಷಣವನ್ನು ಕೇಳಲು ಕೂಡಿದ ಎರಡು ಮೂರು ಸಾವಿರ ಜನರ ನೆರವಿಯನ್ನು ಕಂಡು ನನಗೆ ತುಂಬಾ ಕೌತುಕವಾಯಿತು. ಅಂದಿನ ಸಭೆಗೆ ಅಧ್ಯಕ್ಷರನ್ನು ಸೂಚಿಸಲು ಬಂದವರು ಅಚ್ಚಗನ್ನಡದಲ್ಲಿ ತಮ್ಮ ಊರಸ್ಥಿತಿಯನ್ನು ಹೀಗೆ ಬಣ್ಣಿಸಿದರು. "ನಮ್ಮ ಊರು ಕರ್ನಾಟಕದಲ್ಲಿದೆ. ನಾವು ಕನ್ನಡಿಗರು. ಇತ್ತ ಕೊಲ್ಹಾಪುರ ಸಂಸ್ಥಾನಕ್ಕೆ ನಾವು ನೆರೆಯಲ್ಲಿರುವೆವೆಂಬ ಕಾರಣದಿಂದ ನಮ್ಮ ವಿಷಯವಾಗಿ ತಪ್ಪುತಿಳುವಳಿಕೆಯಾಗಿದೆ. ಈ ತಪ್ಪನ್ನು ತಿದ್ದಬೇಕೆಂದು ನಮ್ಮಲ್ಲಿ ಈಗ ತಿಳುವಳಿಕೆ

CC-0. Jangamwadi Math Collection. Digitized by eGangotri

ಯುಂಟಾಗಿದೆ. ನಾವೂ ಕನ್ನಡಿಗರೇ ಎಂಬ ಅರಿವಿನಿಂದ ನಾವು ಇಲ್ಲಿ ಕರ್ನಾಟಕ ಸಂಘವನ್ನು ಸ್ಥಾಪಿಸಿದ್ದೇವೆ. ಕನ್ನಡ ವಾಚನಾಲಯವನ್ನು ಅದಕ್ಕೆ ಜೋಡಿಸಿದ್ದೇವೆ. ಇಡೀ ದೇಶದ ಹಾಗು ಕನ್ನಡ ನಾಡಿನ ವಿಷಯಗಳನ್ನು ಅರಿತುಕೊಂಡು ನಮ್ಮ ಕನ್ನಡತನವನ್ನು ಬೆಳಿಸಿಕೊಳ್ಳುವ ಬಯಕೆ ನಮ್ಮಲ್ಲಿ ಹುಟ್ಟಿದೆ. ಇನ್ನು ಮುಂದಾದರೂ ಕನ್ನಡನಾಡ ಮುಖಂಡರು ನಮ್ಮ ವಿಷಯವಾಗಿ ಉದಾಸೀನರಾಗದೆ ನಮ್ಮನ್ನು ತಮ್ಮವರನ್ನಾಗಿ ಭಾವಿಸಿ ತಮ್ಮ ಜೊತೆಗೇ ನಮ್ಮನ್ನು ಕರೆದುಕೊಂಡು ಮುಂದೆ ಸಾಗಬೇಕೆಂದು ಬಿನ್ನವಿಸುತ್ತೇವೆ. " ನಿಜವಾದ ಕನ್ನಡತನದ ಕರುಳಿಲ್ಲದೆ ಈ ಕೂಗು ಎಂದಾದರೂ ಹೊರಬಿದ್ದದ್ದು ಉಂಟೆ ?

ಕನ್ನಡಿಗರೊಬ್ಬರು ಅಧ್ಯಕ್ಷರಾಗಿದ್ದರು. ಸುಮಾರು ಒಂದೂವರೆ ಗಂಟೆಯ ವರೆಗೆ ನನ್ನ ಉಪನ್ಯಾಸವಾಯಿತು. ದೇಶಸ್ಥಿತಿ ಕನ್ನಡನಾಡಿನ ಗತಿ ಇವುಗಳ ವಿವೇಚನೆ ಮಾಡಲಾಯಿತು. ನನ್ನ ಮಾತು ಮುಗಿದ ಬಳಿಕ ಒಬ್ಬರು ಸಾಧಾರಣ ವಯಸ್ಸಾದವರೂ ಇನ್ನೊಬ್ಬರು ತರುಣರೂ ಕನ್ನಡದಲ್ಲಿಯೇ ಸರಸ ಭಾಷಣ ಮಾಡಿದರು. ಅಧ್ಯಕ್ಷರ ಸಮಾರೋಪವೂ ಕನ್ನಡದಲ್ಲಾಯಿತು. ರಾತ್ರಿ ೧ ಗಂಟೆಯ ವರೆಗೆ ಸಭೆ ನಡೆದಿದ್ದರೂ ಕೂಡಿದ ಜನರು ಕದಲಲಿಲ್ಲ. ಇಷ್ಟೊಂದು ಮನಸ್ಸುಗೊಟ್ಟು ಮಾತುಗಳನ್ನು ಕೇಳುತ್ತಿದ್ದರು. ಅಂದಿನ ಆ ಸಭೆಯ ಕಾರ್ಯಕಲಾಪಗಳಲ್ಲಿ ಬೆರೆತೇ ಹೋಗಿದ್ದರೆಂದು ಹೇಳಬಹುದು.

ಅಲ್ಲಿಯ ಸಭೆ ಮುಗಿದ ಬಳಿಕ ಅಲ್ಲಿಂದ ತುಸು ದೂರದಲ್ಲಿರುವ ಶಮನೇವಾಡಿ ಮತ್ತು ಬೆಡತೀಹಾಳ ಊರ ಪ್ರಮುಖರು ನನಗೆ ಮರುದಿವಸ ತಮ್ಮಲ್ಲಿಯೂ ಬರಲು ಬಲವಂತಪಡಿಸಹತ್ತಿದರು. ನನಗೆ ಮುಂದಿನ ಕಾರ್ಯಕ್ರಮ ತಪ್ಪಬಾರದೆಂಬ ಸಂಕಲ್ಪವಿದ್ದುದರಿಂದ ಅವರಿಗೆ ಬಹುಪರಿಯಾಗಿ ಹೇಳಿಕೊಂಡು ಅವರ ಅಪ್ಪಣೆ ಪಡೆಯುಬೇಕಾಯಿತು. ಆದರೂ ಇನ್ನೊಮ್ಮೆ ಬರುವೆನೆಂದು ಅವರಿಗೆ ಮಾತು ಕೊಟ್ಟಿದ್ದೇನೆ. ಕೊಲ್ಹಾಪುರ ಸಂಸ್ಥಾನದ ಸೀಮೆಗೆ ಇದೆಲ್ಲ ಪ್ರದೇಶವು ಹೊಂದಿರುವದಾದರೂ ಸಂಸ್ಥಾನದ ಗಡಇಂಗ್ಲಜ ತಾಲೂಕೇ ಅಚ್ಚಕನ್ನಡವಾಗಿರುವ ಮೂಲಕ ಚಿಕ್ಕೋಡೀ ತಾಲೂಕಿನ ಈ ಭಾಗವೆಲ್ಲವೂ ಅಚ್ಚಕನ್ನಡವೇ ಆಗಿರುವದೆಂದು ಅಲ್ಲಿಯ ಜನರೇ ಹೇಳುತ್ತಾರೆ. ೫ ಸಾವಿರ ಜನವಸತಿಯ ಗ್ರಾಮದಲ್ಲಿ ನೂರಿನ್ನೂರು ಜನರು, ಬಹಳವಾದರೆ ಐನೂರು ಜನರು ಮರಾಠೀ ಮಾತನಾಡುವವರಿರಬಹುದೆಂಬದು ಅವರ ಹೇಳಿಕೆ. ಚಿಕ್ಕೋಡಿ ತಾಲೂಕಿನ ಮತದಾರ ಪತ್ರಿಕೆಗಳು ಮರಾಠಿಯಲ್ಲಿ ಪ್ರಕಟವಾದ ಸಂದರ್ಭದಲ್ಲಿ ಏಕೀಕರಣ ಸಂಘದವರು ಪ್ರಸಿದ್ಧಮಾಡಿದ ಜನಗಣನೆಯ ಅಂಕಿಗಳಿಗೆ ಅಲ್ಲಿಯ ವಸ್ತುಸ್ಥಿತಿಯ ನಿರೀಕ್ಷಣೆಯಿಂದ ಚೆನ್ನಾಗಿ ಬೆಂಬಲ ದೊರೆಯುತ್ತವೆ. ನಿಪ್ಪಾಣಿಯಂಥ ದೊಡ್ಡ ಊರು ಅಚ್ಚ ಮರಾಠೀ ಎಂಬ ಹುಚ್ಚು ಕಲ್ಪನೆಯನ್ನು ಕೆಚ್ಚಿದೆಯಿಂದ ಬೀರುವವರು ಬೀರಿದರು; ಎಚ್ಚರಿಲ್ಲದೆ ನಾವೂ ನಂಬಿದೆವು. ಅಲ್ಲಿಯೂ ಕನ್ನಡವು ಹೆಚ್ಚಳವನ್ನು ಹೊಂದುತ್ತಿರುವದು ಮೊನ್ನೆ ಮೊನ್ನೆ ಅಲ್ಲಿ ಸ್ಥಾಪಿತವಾಗಿರುವ ಕರ್ನಾಟಕ ಸಂಘದ ಚಟುವಟಿಕೆಗಳಿಂದ ಕಂಡುಬರುತ್ತದೆ. ಇನ್ನು ಮೇಲಾದರೂ ಕನ್ನಡನಾಡ ಹಿರಿಯರು ಈ ಗಡಿನಾಡನ್ನು ಕಡೆಗಣ್ಣಿನಿಂದ ನೋಡಲಾಗದೆಂದು ಬೇಡಿಕೊಳ್ಳುವದಕ್ಕಾಗಿಯೇ ನಾನು ಕಣ್ಣಾರೆಕಂಡು ಮನವಾರೆ ತಿಳಿದದ್ದನ್ನು ಬರೆದಿದ್ದೇನೆ.

ಇಷ್ಟೆಲ್ಲ ದಿಟವಾದರೂ ಆ ಭಾಗದಲ್ಲಿ ಬಹುದಿವಸದ ಅಪಪ್ರಚಾರದಿಂದ ಕರ್ನಾಟಕದ ಏಕೀಕರಣದ ವಿಷಯವಾಗಿ ಹುಟ್ಟಿದ್ದ ಅಪಸ್ವರದ ಒಡಕ ಧ್ವನಿಯು ಸಣ್ಣಾಗಿ ತನ್ನ ವಿನಾಶಕ ಪ್ರವೃತ್ತಿಯನ್ನು ಹೊರಗೆಡಹುತ್ತಲೇ ಇರುವದೆಂದು ತೋರುತ್ತದೆ. ಮುಂಬಯಿಯಲ್ಲಿ ಈಗ ಅಧಿಕಾರಾರೂಢವಾಗಿರುವ ಕಾಂಗ್ರೆಸ್ ಮಂತ್ರಿಮಂಡಲವು ಹಾಗು ಮುಂಬಯಿ ಅಸೆಂಬ್ಲಿಯೊಳಗಿನ ಕರ್ನಾಟಕದ ಬಹುಜನ ಪ್ರತಿನಿಧಿಗಳು ಕರ್ನಾಟಕದ ಏಕೀಕರಣದ ವಿಷಯದಲ್ಲಿ ಪ್ರಕಟಪಡಿಸಿದ ಉದಾಸೀನಭಾವವು ಕನ್ನಡಿಗರಲ್ಲಿ ಅಲ್ಪಸ್ವಲ್ಪಾದರೂ . ಅಸಮಾಧಾನವನ್ನುಂಟುಮಾಡದಿರಲಾರದೆಂಬದು ಸ್ಪಷ್ಟವಾಗಿದೆ. ಈಗಿನ ಅಧಿಕಾರಿ ಪಕ್ಷದ ಈ ಮನೋವೃತ್ತಿಯ ಪೂರ್ವಾಪರ ವಿಚಾರಗಳನ್ನೆಲ್ಲ ವಿಶದಪಡಿಸಿ ಹೇಳುವಾಗ್ಗೆ ಕರ್ನಾಟಕದ ಕಾಂಗ್ರೆಸ ಧುರೀಣರೆಂದೆನಿಸುವ ಒಬ್ಬಿಬ್ಬರ ಕರ್ನಾಟಕ ವಿರೋಧಕ ಮನೋವೃತ್ತಿಯನ್ನು ಕಡುತರವಾಗಿ ಟೀಕಿಸಿ ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಎಚ್ಚರಿಕೆ ಕೊಡುವದು ಅನಿವಾರ್ಯವಾದದ್ದೆಂದು ಯಾರಾದರೂ ಒಪ್ಪಿಕೊಳ್ಳಲೇಬೇಕು. ಈ ಬಗೆಯ ನನ್ನ ಸ್ಪಷ್ಟ ಮಾತುಗಳ ವಿಪರ್ಯಾಸ ಮಾಡಿ ನಾನು ಏಕೀಕರಣದ ಕಾರ್ಯದಲ್ಲಿ ಕಾಂಗ್ರೆಸ್ ವಿರುದ್ಧ ಅಪಪ್ರಚಾರ ನಡಿಸಿದ್ದೇನೆಂಬ ದೂರನ್ನು ಯಾರೋ ಬುದ್ಧಿವಂತರು ಹರಡುತ್ತಿರುವದಾಗಿ ತಿಳಿದು ಬಂದಿದೆ. ನ್ಯಾಯಮೂರ್ತಿ ಕಮಿಶನ್ನದ ಕಾಲಕ್ಕೆ ಏಕೀಕರಣದ ಪ್ರಶ್ನೆಯನ್ನು ಅವರ ಮುಂದೆ ಮಂಡಿಸುವದಕ್ಕೆ ನಾನು ಪ್ರೋತ್ಸಾಹನ ಕೊಡುತ್ತಿದ್ದೆನೆಂಬ ದೊಡ್ಡದಾದ ಗೊಡ್ಡು ಸುಳ್ಳನ್ನು ಹರಡಿ ನನ್ನ ಕಾಂಗ್ರೆಸ್ ವಿರೋ

CC-0. Jangamwadi Math Collection. Digitized by eGangotri

ಧದ ಅರಾಷ್ಟ್ರೀಯ ಪ್ರವೃತ್ತಿಯ ಡಂಗುರವನ್ನು ಹೊಡೆಯುತ್ತಿರುವ ಮಹಾವೀರರೂ ಕೆಲವರು ಹುಟ್ಟಿರುವರಂತೆ ! ಇವರ ಕಾರಣ ಮೀಮಾಂಸೆಯನ್ನು ನಾನು ಮಾಡುವ ಅಗತ್ಯವೇ ತೋರುವದಿಲ್ಲ. ೧೮೯೮ರಿಂದ ಇಂದಿನವರೆಗಿನ ಈ ೪೨ ವರ್ಷಗಳ ಸಾರ್ವಜನಿಕ ಜೀವನದಲ್ಲಿ ಕಾಂಗ್ರೆಸ್ ವಿರೋಧದ ಅಥವಾ ದ್ರೋಹದ ಮಾತೆಂಬದು ನನ್ನ ಕನಸಿನಲ್ಲಿ ಕೂಡ ಬಂದಿಲ್ಲವೆಂಬದನ್ನು ಮಾತ್ರ ನಾನು ಆತ್ಮಸಾಕ್ಷಿಯಾಗಿ ಹೇಳಬಲ್ಲೆನು. ಏಕೀಕರಣ ವಿಷಯವಾಗಿ ಭಿನ್ನಾಭಿಪ್ರಾಯವಿದ್ದವರು ಗಂಡುಗಲಿತನದಿಂದ ಸಭೆಯಲ್ಲಿಯೇ ಮುಂದೆ ಬಂದು ಎದುರಿಸುವದೇ ಯುಕ್ತವಾಗಿದೆ. ಹಳ್ಳಿಯಾಳದ ಸಭೆಯಲ್ಲಿ ಓರ್ವ ಸದ್ಗೃಹಸ್ಥರು ತಮಗೆ ತಿಳಿದ ಮಟ್ಟಿಗೆ ಶಂಕೆಗಳನ್ನೊಡ್ಡಿ ವಿರೋಧವನ್ನು ಪ್ರಕಟಮಾಡಿದರು. ಅವರನ್ನು ಸಮಾಧಾನಗೊಳಿಸಲು ನಾನೂ ಪ್ರಯತ್ನ ಮಾಡಿದೆ. ಜೊತೆ ಕೆಲವರೂ ಅವರಿಗೆ ಉತ್ತರ ಕೊಟ್ಟರು. ಈ ರಾಜಮಾರ್ಗವನ್ನು ಬಿಟ್ಟು ವಾಮಮಾರ್ಗವನ್ನು ಹಿಡಿಯುವದು ಯಾರಿಗೂ ಶ್ರೇಯಸ್ಕರವಲ್ಲವೆಂದು ನಾನು ಇಲ್ಲಿ ವಿಜ್ಞಾಪಿಸಬಯಸುತ್ತೇನೆ.

ಕೊನೆಗೆ ಒಂದು ವಿಷಾದದ ಸಂಗತಿಯನ್ನು ಇಲ್ಲಿ ಸೂಚಿಸದಿರಲಾರೆನು. ಸದಲಗೆಗೆ ನನ್ನ ಸಂಗಡ ಬಂದ ಚಿಕ್ಕೋಡಿಯ ಕಾರ್ಯಕರ್ತರ ಹಾಗೆಯೇ ಸದಲಗೆಯ ಸಭೆಯಲ್ಲಿ ಮಾತಾಡಿದವರ ಹಾಗು ಶಮನೇವಾಡಿ ಬೆಡತಿಹಾಳದ ಪ್ರಮುಖರ ಹೆಸರುಗಳನ್ನೆಲ್ಲ ನಾನು ಬರೆದುಕೊಂಡ ನನ್ನ ಟಿಪ್ಪಣಿ ಪುಸ್ತಕವು ಈ ದೀರ್ಘಪ್ರವಾಸದಲ್ಲೆಲ್ಲಿಯೋ ಕಾಣದಾಗಿದೆ. ಆ ಹೆಸರುಗಳೆಲ್ಲ ನನಗೆ ನೆನಪಿರಲಾರವೆಂದೇ ನಾನು ಬರೆದುಕೊಳ್ಳುವ ಎಚ್ಚರಪಟ್ಟೆನು. ನನ್ನ ಪ್ರಮಾದದಿಂದಲೋ ಹೇಗೋ ಆ ಪುಸ್ತಕವೇ ಮಾಯವಾಗಿದೆ. ಅದರಲ್ಲಿ ನನ್ನ ನೆನಪಿಗಾಗಿ ಬರೆದಿಟ್ಟ ಅನೇಕ ಸಂಗತಿಗಳೂ ಇದ್ದವು; ಅವೆಲ್ಲವುಗಳಿಗೂ ನಾನು ಎರವಾಗಬೇಕಾದ ಬಗ್ಗೆ ನನಗೆ ತುಂಬಾ ವಿಷಾದವಾಗಿದೆ. ಪ್ರಕೃತಕ್ಕೆ ಚಿಕ್ಕೋಡಿಯ ತಾಲೂಕಿನಲ್ಲಿ ಕನ್ನಡದ ಉತ್ಕರ್ಷಕ್ಕೆ ಅನುಕೂಲ ಪರಿಸ್ಥಿತಿಯನ್ನು ನಿರ್ಮಿಸಿ ಅದನ್ನು ನನ್ನ ಮುಖಾಂತರ ಕನ್ನಡನಾಡಿನ ನಿದರ್ಶನಕ್ಕೆ ತಂದು ಕೊಟ್ಟ ಕನ್ನಡ ವೀರರನೇಕರ ಹೆಸರುಗಳನ್ನು ಈ ಬರೆಹದಲ್ಲಿ ಕಾಣಿಸುವ ಭಾಗ್ಯ ನನಗುಳಿಯಲಿಲ್ಲವಲ್ಲಾ ಎಂದು ಬಹಳವಾಗಿ ಮರುಗುತ್ತೇನೆ. ಅವರೆಲ್ಲರೂ ನನ್ನನ್ನು ಕ್ಷಮಿಸಬೇಕಾಗಿಯೂ ಬೇಡುತ್ತೇನೆ.

ಗಜಕರ್ಣ, ಹುರುಕು, ತದ್ದು, ಸಡ ಮುಂತಾದ ಚರ್ಮರೋಗಗಳಿಂದ ಪೀಡಿತ ಜನರಿಗೆ ಒಂದೇ ಉಪಾಯವು.

ರಜಿಸ್ಟರ್ಡ್

ಗುಣ ಬರದಿದ್ದರೆ ಹಣ ತಿರುಗಿ ಕೊಡುವೆವು. ಬಾಟಲಿಯ ಬೆಲೆ ೪ ಆಣೆ.

ಸ್ಟಾರ್ ಕಂಪನಿ, ಬೆಳಗಾವಿ

CC-0. Jangamwadi Math Collection. Digitized by eGangotri

ಭಿಷಗ್ರತ್ನ ಆಯುರ್ವೇದವಿದ್ವಾನ್ ಬಿ. ವಿ. ಪಂಡಿತರ

ಶ್ರೀಕರ ಕಸ್ತೂರಿಮಾತ್ರೆ

ಮಕ್ಕಳ ಮತ್ತು ದೊಡ್ಡವರ ಸಮಸ್ತ ಶೀತ ವಾತ ರೋಗಗಳಿಗೂ ಸಂಜೀವನ 4 ಅಣೆ

ಬಾಲಸಂಜೀವಿನಿ

ಮಕ್ಕಳಿಗೆ ಸುಖವಾಗಿ ಭೇದಿಮಾಡಿಸಿ ಅಜೀರ್ಣ ಜ್ವರಗಳನ್ನು ನಿಲ್ಲಿಸುತ್ತೆ 4 ಅಣೆ

(ಸದ್ವೈದ್ಯ ಶಾಲಾ ನಂಜನಗೂಡು)



# ಗರತಿಯ ಹಾಡು

(ಹಳ್ಳಿಯ ಹೆಣ್ಣುಮಕ್ಕಳ ಭಾವಪೂರ್ಣ ತ್ರಿಪದಿಗಳು)

ಸಾದಾ: ೧೦ ಆಣೆ. ]　　[ ಕ್ಯಾಲಿಕೊ: ೧ ರೂ.

ಹೆಣ್ಣುಮಕ್ಕಳು ಬೀಸುವಾಗ ತೊಟ್ಟಿಲ ತೂಗುವಾಗ ಇ. ಪ್ರಸಂಗಗಳಲ್ಲಿ ಹಾಡುವ ತ್ರಿಪದಿಗಳ ಸಂಗ್ರಹ. ಮೊದಲನೆಯ ಆವೃತ್ತಿಯು ಮುಗಿದುಹೋದುದರಿಂದ ಎರಡನೆಯದನ್ನು ಅಚ್ಚುಹಾಕಿಸಿದೆ. ಉಪೋದ್ಘಾತರೂಪವಾಗಿ ಶ್ರೀಯುತರುಗಳಾದ ಬಿ. ಎಂ. ಶ್ರೀಕಂಠಯ್ಯ, ದ. ರಾ. ಬೇಂದ್ರೆ, ಮಾಸ್ತಿ ವೆಂಕಟೇಶಯ್ಯಂಗಾರ್ ಇವರ ಬರಹಗಳು. ಅವು ಜನಪದಸಾಹಿತ್ಯದ ಮರ್ಮವನ್ನು ತಿಳಿಸತಕ್ಕ ಶ್ರೇಷ್ಠತರಗತಿಯ ಪ್ರಬಂಧಗಳೆ ಆಗಿವೆ. ಅಪರಿಚಿತ ಮತ್ತು ಬಳಕೆಯ ಮಾತಿನ ಪದಪ್ರಯೋಗಗಳ ಸಾರ್ಥ ವಿವರಣೆ. ಆ್ಯಂಟಿಕ್ ಕಾಗದದ ಮೇಲೆ ಮುದ್ದಾದ ಮುದ್ರಣ. ಹೊದಿಕೆಯ ಮೇಲೆ ಭಾವಗರ್ಭಿತವಾದ ಸುಂದರ ಚಿತ್ರ.

**ಜಯಕರ್ನಾಟಕ ಕಾರ್ಯಾಲಯ, ಧಾರವಾಡ**



# ಸಂಯುಕ್ತ ಕರ್ನಾಟಕ

(ಹುಬ್ಬಳ್ಳಿ

ಅಖಂಡ ಕರ್ನಾಟಕದಲ್ಲಿ ಪ್ರಸಾರವುಳ್ಳ ರಾಷ್ಟ್ರೀಯ ಪಕ್ಷದ

**—: ದಿನಪತ್ರಿಕೆ: —**

ರಾಷ್ಟ್ರೀಯ ವಾಙ್ಮಯಪ್ರಕಾಶನ ಟ್ರಸ್ಟಿನ ಪರವಾಗಿ, ಬೆಳಗಾವಿ—ಧಾರವಾಡ—ಹುಬ್ಬಳ್ಳಿಗಳಲ್ಲಿ ಪ್ರಕಾಶನಗೊಳ್ಳುವುದು.

ನಿರ್ಭಯ ರಾಷ್ಟ್ರೀಯ ವಿಚಾರಸರಣಿಯುಳ್ಳದು.

ಕರ್ನಾಟಕದ ಹಕ್ಕು—ಹಂಗುಗಳನ್ನು ಅತಂದ್ರಿತವಾಗಿ ಕಾಯುವುದು.

**ಜಾಹಿರಾತುದಾರರಿಗೆ ಉತ್ಕೃಷ್ಟ ಪ್ರಚಾರಸಾಧನ.**

ವಿಶೇಷ ವಿವರಗಳಿಗೆ ಬರೆಯಿರಿ:—

ವ್ಯವಸ್ಥಾಪಕ,
**ಸಂಯುಕ್ತ ಕರ್ನಾಟಕ,**
**ಹುಬ್ಬಳ್ಳಿ**


CC-0. Jangamwadi Math Collection. Digitized by eGangotri

# ಸೂಳೆ

ಯಾರಿವಳಿದಾರಿವಳು ರತಿಯ ಜರೆವವಳಿಂತು ?
ಯಾರನಿಂತೆದುರುನೋಡುತಿಹಳಿವಳು ?

ಸೊಗಸಾದ ಇಂದ್ರಭವನದ ಗವಾಕ್ಷದಿ ನಿಂತು
ಹುಣ್ಣಿಮೆಯ ಚಂದ್ರನಂತೆಸೆಯುತಿಹಳು ?

ಮನವ ಮೋಹಿಪ ಹಸುರು ಪೀತಾಂಬರವನುಟ್ಟು,
ರೇಶಿಮೆಯ ಹೊಸತು ಕುಪ್ಪಸವ ತೊಟ್ಟು,

ಮುಂಗುರುಳ ತಿದ್ದುತ್ತ, ಬೊಟ್ಟು ಕುಂಕುಮವಿಟ್ಟು,
ಸೆರಗ ತಂಗಾಳಿಯಲಿ ತೇಲಿಬಿಟ್ಟು,

ನೋಡುತಿರುವಳು ಚಂಚಲೆಯು ಮನವ ಸೆಳೆಯುತ್ತ
ನಾಟುತಿಹ ವಿದ್ಯುತ್ಕಟಾಕ್ಷದಿಂದ.

ಅಚ್ಚರಿಯೊ ? ಕಿನ್ನರಿಯೊ ? ಯಾರ ಮನೆಗಿದು ವಿತ್ತ ?
ಅಲ್ಲ—ಸೂಳೆಯು— ನಮ್ಮ ನಗರದಂದ.

ಬಲೆಯೊಡ್ಡಿ ಬೀಸಿಹಳು; ಮಾರನಂದದ ಮಾಟ.
ಒಲುಮೆಯಿಲ್ಲದ ಮೆಯ್ಯ ಮಾಾರಾಟ.

ರೂಪಸಿಯ ನೋಡುತಿಹೆನೇಕೊ, ಚೆಲುವೆಯ ರೀತಿ
ಮನದಿ ಹುಟ್ಟಿಸುತಿಹುದು ಕರುಣೆ ಭೀತಿ.

ಮನಮುಟ್ಟಿ ಎದೆಯನೊಲಿಯದೆ ಏತಕೀ ಆಟ ?
ರೂಪಿಗೂ ಸಹಿತ ಈ ಗತಿಯೆ ಅಕಟ !

ಹೃದಯವುಳಿದೀ ಆಟವನು ಪಕ್ಷಿ ಪಶು ಕೂಡ
ನೋಡಿ ಹಂಗಿಪುವು: ಈ ಬಾಳು ಬೇಡ.

ಒಲುಮೆಯಿಲ್ಲದ ನೋಟ ಹೀನವಾಗಿಹ ನೋಟ;
ಒಲವಿರದ ಕೂಟ ಪೈಶಾಚಕೂಟ.

ಇಂತಿವಳ ಸೌಧ ಚಲುವಾದರೂ ಬಲು ಘೋರ,
ದೇಹ ಮುದ್ದಾದರೂ ಅಂತರಂಗ ವಿಕಾರ.
ಗಂಧವಿಲ್ಲದ ಹೂವು; ವಿಷಭರಿತ ಜೇಂಬಾವು;
ಇವಳ ಮುಟ್ಟಲು ನೋವು; ಇವಳ ಮುಟ್ಟಲು ಸಾವು.

ಇನಿತಾಗಿ ನಾ ಬೈವುದಲ್ಲಿವಳ ಕಟುನೀತಿ.
ನಾ ಹಳಿವುದಿವಳ ಹಡೆದಿಹ ಸಂಸ್ಕೃತಿಯ ರೀತಿ.

—ಮೂರ್ತಿ

---

# ಹೂಮಳೆ-ಹೂಬಿಸಿಲು !

ಹೂಮಳೆ ಹೂಬಿಸಿಲೂ
ಹೂಬಾನೂ- ಹೂಮುಗಿಲೂ ||ಪಲ್ಲ||

*ಒಂಟಕೊಪ್ಪಲಿನಲಿ ಮಳೆ-
ಬಾಚಿ ಬಿಸಿಲ ತಬ್ಬಿಕೊಳೆ
ಉದಿರುತಿರುವ ಇಂಬನಿ
ಹೂವಾದುದೂ ! ||

ಹಿಮದ ಶಿಶುವು ನಲಿಯುತಿರೆ
ಬಿಸಿಲ ಪಶುವು ಮೇಯುತಿರೆ
ಅದಿರುತಿರುವ ಕಂಬನಿ
ಹೂವಾದುದೂ ! ||

ನೀಲಿ ಮೇಲೆ ನೀಲಿ ನಿಲೆ
ನೆಲದ ಮೇಲೆ ಮುಗಿಲ ಬಲೆ
ಹರಡುತಿರುವ ಜಾಲವೂ
ಹೂವಾದುದೂ ! ||

ಪುಷ್ಪಿತಾವಸುಂಧರೆಗೆ
ಮಿಂಚು ರೋಮಾಂಚ ನೆರಿಗೆ
ಸಡಗರಿಸುವ ದುಗುಲವೂ
ಹೂವಾದುದೂ ! ||

—ಪರಮೇಶ್ವರ

---

*ಮೈಸೂರಿನ ಒಂದು ಬಡಾವಣೆ

CC-0. Jangamwadi Math Collection. Digitized by eGangotri

# ಸೋದರಮಾವ



( ವಾಸ್ತವ ಚಿತ್ರ )



ಕತೆಗಾರ್ತಿಯರು:
ಮಿಸೆಸ್ ಎಸ್. ಕಮಲಾಬಾಯಿ ಎಂ. ಎ.



ತಾನೆ ಚಿಕ್ಕಮಗುವಿನಂತಿರುವ ಲೀಲೆಗೊಂದು ಮಗು! ೪೫ ವರುಷದ ವಿಧುರ ಸೋದರಮಾವ—ಸಂಜೀವರಾಯ ನಿಗೆ ಮಗುವನ್ನು ಕೊಂದ ಮೇಲೆ ಮದುವೆ!....ಹೆಣ್ಣು ಹುಡುಗಿಯರ ಹಾಸ್ಟಲಿನ ಸನ್ನಿವೇಶದಲ್ಲಿ ಈ ಭೀಷಣ ಘಟನೆಯನ್ನು ವಾಸ್ತವರೀತಿಯಲ್ಲಿ, ಆದರೆ ಔಚಿತ್ಯ ಮೀರ ದಂತೆ ಲೇಖಿಕೆಯರು ಚಿತ್ರಿಸಿದ್ದಾರೆ. ಶ್ರೀಮತಿಯವರು ಹೊಸಪೇಟೆಯವರು. ಜನ್ಮತಃ ಮಾಧ್ವರು. ಕನ್ನಡ-ಸಂಸ್ಕೃತಗಳಲ್ಲಿ ಪಾಂಡಿತ್ಯ ಸಂಪಾದಿಸಿ ಹೆಸರಾದುದು ಇವರ ಮನೆತನ. ಇಂಗ್ಲಿಷ್ ಸಾಹಿತ್ಯವನ್ನು ವಿಶೇಷ ವ್ಯಾಸಂಗಕ್ಕಾಗಿಟ್ಟುಕೊಂಡು ಕಾಶೀ ವಿಶ್ವವಿದ್ಯಾಲಯದ ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಜಯಕರ್ನಾಟಕದ ವಾಚಕರಿಗೆ ಇವರ ಪರಿಚಯ ಮಾಡಿಕೊಡಲು ಸಂತೋಷವೆನಿಸುತ್ತದೆ. —ಸಂ. ಜ. ಕ.

ನೀವೆಂದಾದರೂ ಒಂದು ಹೆಣ್ಣುಹುಡುಗಿಯರ ಕಾಲೇಜ ಹಾಸ್ಟಲಿಗೆ ಹೋಗಿದ್ದಿರೊ? ಹೋಗಿದ್ದರೂ ಹೋಗಿರಬಹುದು. ಆದರೆ ಅಲ್ಲಿ ಹೊಸದಾಗಿ ಬಂದ ವಿದ್ಯಾರ್ಥಿನಿಯರ ಪಾಡು ನಿಮಗೆ ತಿಳಿಯಲಾರದು. ಅದರಲ್ಲೂ ಅಲ್ಲಿಯ ಭಾಷೆಯನ್ನರಿಯದವರ ಪಾಡು, ಷೆಲ್ಲಿಯಂತಹ ಪರದುಃಖಾನುಭವಿಗೂ ಬೈರನ್‌ನಂತಹ ಆತ್ಮದುಃಖ ಪ್ರಸಾರಕನಿಗೂ ಇತರರರಿಯುವಂತೆ ವರ್ಣಿಸಿ ಹೇಳಲು ಸಾಧ್ಯವಿಲ್ಲ. ಹೀಗಿರುವಾಗ ನನ್ನಂತಹವರ ಪಾಡೇನು? ಆದರೂ ಒಂದು ನಡೆದ ಸಂಗತಿಯನ್ನು ಹೇಳುತ್ತೇನೆ.

ನಾನೂ ಶಾಂತೆಯೂ ನನ್ನ ರೂಮಿನಲ್ಲಿ ಕುಳಿತುಕೊಂಡು ಅಲ್ಲಲ್ಲಿಯ ಸಮಾಚಾರಗಳನ್ನೇನೋ ಆಡಿಕೊಳ್ಳುತ್ತಿದ್ದೆವು. ಸಾಯಂಕಾಲದ ಹೊತ್ತು. ಸುಮಾರು ಆರು ಘಂಟೆ ಇರಬಹುದು.

ಲೀಲೆಯು, ಪಾಪ, ನಮ್ಮಂತೆ ಹೊಸ ಹುಡುಗಿ. ಹೊಸ ಹುಡುಗಿಯರೆಂದರೆ ಹಳೆ ಹುಡುಗಿಯರಿಗೊಂದು ವಿಧವಾದ ಅಸಡ್ಡೆ. ನಮ್ಮನ್ನು ನೋಡಿ ಪಿಸುಪಿಸುಗುಟ್ಟುವರು. ಕಣ್ಣು ಮಿಟುಕಿಸಿ ಇದ್ದಕ್ಕಿದ್ದ ಹಾಗೆ ನಗುವರು. ಅವರೇನೊ ಎರಡು ವರ್ಷ ಹಾಸ್ಟಲಿನಲ್ಲಿದ್ದರೆ ರಾಜ್ಯಾಭಿಷಿಕ್ತರಾದ ಪ್ರಭುಗಳೆಂದೇ ಭಾವಿಸಿಕೊಂಡು,ತಾವು ಮೊದಲು ಬಂದಾಗ ಅನುಭವಿಸಿದುದನ್ನೆಲ್ಲಾ ಮರೆತುಬಿಡುವರು. ಇದರಿಂದ ಅವರು ಹೊಸ ಹುಡುಗಿಯರಿಗೆ ಮಾಡುವುದೊಂದು ಅಪಕಾರದಲ್ಲಿ ಒಂದು ಉಪಕಾರವನ್ನೇ ಅಡಗಿಸಿರುವರೆಂದು ಹೇಳಬಹುದು. ಯಾಕೆಂದರೆ ಹೊಸ ಹುಡುಗಿಯರು ಒಬ್ಬರ ಮುಖವನ್ನೊಬ್ಬರು ಹಿಂದೆಂದೂ ನೋಡದಿದ್ದರೂ, ಸಮದುಃಖಿಗಳಾದ ಅವರಲ್ಲೊಂದು ವಿಧವಾದ ಬಾಂಧವ್ಯ ವೇರ್ಪಟ್ಟು ಅವರನ್ನೊಂದುಗೂಡಿಸಿ, ತಾಯಿತಂದೆಗಳನ್ನಗಲಿಬಂದ ದುಃಖಾವೇಗವನ್ನಿಳಿಸಿ ವಿದ್ಯಾರ್ಥಿಜೀವನದಲ್ಲಿ ಕುತೂಹಲವನ್ನುಂಟುಮಾಡುವುದು.

ಲೀಲೆಯನ್ನು ನಾವು ನೋಡಿ ಎರಡೇ ದಿನಗಳಾಗಿದ್ದರೂ ನಾವು ಮೂವರಲ್ಲಿ ಅತಿಶಯ ಸ್ನೇಹವುಂಟಾಗುವುದಕ್ಕಿದೇ ಕಾರಣ. ಹಾಸ್ಟಲಿನ ಶಿಷ್ಟಾಚಾರದಂತೆ ಲೀಲೆಯು ಬಾಗಿಲನ್ನು ತಟ್ಟದೆ, ಥಡಮ್ಮನೆ ಬಾಗಿಲನ್ನು ನೂಕಿ ಒಳಗೆ ಬಂದು ಮಂಚದ ಮೇಲೆ ಕುಳಿತಳು. ಲೀಲೆಯು ಕಪ್ಪು ನುತ್ತು ಕುಳ್ಳ. ದಪ್ಪವಾಗಿದ್ದುದರಿಂದ ನಾವವಳನ್ನು ಆಲೂಗಡ್ಡೆಯ ಚೀಲವೆಂದು ತಮಾಷೆ ಮಾಡುತ್ತಿದ್ದೆವು. ಅವಳು ಕಣ್ಣುಮೂಗುಗಳೇನೂ, ಗ್ರೀಕ್ ಶಿಲ್ಪಿಯಿಂದ ಕೊರೆಯಲ್ಪಟ್ಟ 'ವೀನಸ್ಸಿ'ನಂತಿರಲಿಲ್ಲ. ಆದರೆ ಅವಳ ಮುಖದ ಮೇಲೆ ಕುಲಕುಲಿಸುತ್ತಿರುವ ಒಂದು ವಿಧವಾದ ಕಳೆ. ಅವಳ ನಗುಮೊಗವನ್ನು ನೋಡಿದರೆ ಅವಳ ಮೇಲೆ ಏನೋ ಒಂದು ಬಗೆಯ ಅಭಿಮಾನ-ಪ್ರೇಮವುಂಟಾಗುವುದು. ಅವಳ ಸರಳ ಸ್ವಭಾವವು ಮುಖದ ಮೇಲೆ ತೇಲಿಯಾಡುತ್ತಿದ್ದಿತು. ಅವಳಿಗೆ ಹಾಡುವುದಕ್ಕೆ ಚನ್ನಾಗಿ ಬರುವುದು. ನನಗೇನೊ ಸ್ವರಜ್ಞಾನವಿಲ್ಲ. ಆದರೆ ಅವಳ ಸವಿಯಾದ ಸ್ವರವನ್ನು ಕೇಳಿ ಮನಸೋತು, ಆನಂದಬಾಷ್ಪಗಳನ್ನುದುರಿಸದ ರಸಿಕರೇ ಇಲ್ಲ. ಅವಳಿಗೆ ಬಿಗುವು, ಬಡಿವಾರವೆಂಬುದು ಗೊತ್ತೇ ಇಲ್ಲ. ಯಾರಾದರೂ, "ಒಂದು ಹಾಡ್ಹೇಳೆ" ಎಂದರೆ ಸಾಕು; ಸ್ವರವಿಟ್ಟ ಪೆಟ್ಟಿಗೆಯೇ! ಅವಳ ವಯಸ್ಸು ಹದಿನಾರಿರಬಹುದು.

ನಾನೇ, ಪ್ರಾರಂಭಿಸಿದ್ದು:

"ಯಾಕೋ, ಬೇಜಾರಾಗಿದೆ. ಲೀಲಾ ಒಂದು ಹಾಡಾ

CC-0. Jangamwadi Math Collection. Digitized by eGangotri

ದರೂ, ಹೇಳಬಾರದೆ ? ”

“ ಅಯ್ಯೋ, ರಮಾ, ಏನೊ ಮೈ ಸರಿಯಾಗಿಲ್ಲ. ಹೊಟ್ಟೆ ನೋವು. ಅದರಿಂದಲೇ ನಿಮ್ಮನ್ನುಡಿಕಿಕೊಂಡು ಬಂದೆ.”

“ ಹಾಗಾದರೆ, ಸರಿಯಾಗಿ ಮಲಗಿಕೋ. ಸ್ವಲ್ಪ ನಿಂಬೆ ಹಣ್ಣಿನ ರಸ (Lime juice) ಮಾಡಿಕೊಡಲಿ ? ”

ಲೀಲೆಯು “ಹೂಂ” ಅನ್ನುವುದಕ್ಕೆ ಮೊದಲೇ ನಾನೆದ್ದು, ಹಾಸ್ಟಲಿನ ತೋಟದಿಂದ ಕದ್ದುತಂದು ಕಪಾಟಿನಲ್ಲಿಟ್ಟಿದ್ದ ಮೂರು ನಿಂಬೆಹಣ್ಣುಗಳನ್ನು ಕುಯಿದು ರಸಮಾಡಿ, ಮೂರು ಕಪ್ಪುಗಳಲ್ಲಿ ಹಾಕಿ, ಲೀಲೆ ಶಾಂತೆಯರಿಗೊಂದೊಂದು ಕೊಟ್ಟು, ನಾನೂ ಕುಡಿಯುವುದಕ್ಕೆ ಮೇಜಿನ ಮೇಲೆ ಕುಳಿತೆನು. ಇದ್ದಕ್ಕಿದ್ದ ಹಾಗೆ ಎದ್ದುದರಿಂದಲೊ ಏನೋ, ಕಣ್ಣು ಕತ್ತಲೆಕವಿದು, ಲೀಲೆಯು ನೆಲದ ಮೇಲೆ ಬಿದ್ದುಬಿಟ್ಟಳು. ನಾನು ಓಡಿಹೋಗಿ ಮೇಟ್ರಿನ್‌ರನ್ನು ಕರೆತರುವುದರೊಳಗೆ ಹೊಟ್ಟೆನೋವೆಂದು ಲೀಲೆಯು ತಡೆಯಲಾರದೆ ನೆಲದ ಮೇಲೆ ಬಿದ್ದು ಉರುಳಾಡುತ್ತಿದ್ದಳು. ನಮ್ಮ ಮೇಟ್ರನ್ನಿಗೂ ವೈದ್ಯಕಕ್ಕೂ ಬಹಳ ದೂರ. ಅದನ್ನು ನಮ್ಮೆದುರಿಗೆ ತೋರಿಸಿಕೊಳ್ಳಕೂಡದು. ತೋರಿಸಿಕೊಳ್ಳದಿರುವುದಸಾಧ್ಯ. ಆಗವರ ಮುಖವನ್ನು ನೋಡಿದವರಿಗೇ ಗೊತ್ತು ಆ ವಿನೋದದ ಹದ.

“ ಅವಳ ಕಿರುಮನೆಯಲ್ಲವಳನ್ನು ಕರೆದುಕೊಂಡು ಹೋಗಿ ಮಲಗಿಸಿರಿ. ನಾನು ಬರುತ್ತೇನೆ. ” ಎಂದು ಹೇಳಿ ಹೊರಟುಹೋದರು.

ಲೀಲೆಯು ರಾತ್ರಿ ಊಟದ ಮನೆಗೆ ಬರಲಿಲ್ಲ. ನಾನಿದ್ದುದು ಮಹಡಿಯ ಮೇಲೆ. ಲೀಲೆಯ ಚಿಕ್ಕಮನೆ ಕೆಳಗೆ ಮೆಟ್ಟಲುಗಳ ಹತ್ತಿರ. ಊಟಮಾಡಿ ಬರುವಾಗ ಅವಳನ್ನು ಮಾತಾಡಿಸಲು ಹೋದೆ. ತುಂಬಾ ಸಂಕಟಪಡುತ್ತಿರುವಂತೆ ಕಾಣಿಸಿತು. ಅಲ್ಲಿಯೇ ಸ್ವಲ್ಪ ಹೊತ್ತು ಕೂತಿದ್ದೆ. ಏನು ಮಾಡುವುದಕ್ಕೂ ತೋಚಲಿಲ್ಲ.

“ ಸ್ವಲ್ಪ ಜಂಪು ಬಂದರೆ ಸಮಾಧಾನವಾಗಬಹುದು. ಹಾಗೆ ಕಣ್ಣುಮುಚ್ಚಿಕೊಂಡು ಮಲಗಿಕೊ, ನಿದ್ರೆ ಬರಬಹುದು. ”

ಹೀಗೆಂದು ಗುಡ್‌ನೈಟ ಹೇಳಿ ಮೇಲೆ ಬಂದುಬಿಟ್ಟೆ.

* * *

ಮರುದಿನ ಹಾಲನ್ನು ತೆಗೆದುಕೊಳ್ಳುವಾಗ ಲೀಲೆಯು ಕಾಣಿಸಲಿಲ್ಲ. ಅವಳ ರೂಮಿಗೆ ಹೋದೆ. ಅಲ್ಲಿಯೂ ಇರಲಿಲ್ಲ. ಕೊಂಚ ನೆಮ್ಮದಿಯಾಗಿರುವುದರಿಂದ ಸ್ನಾನ ಮಾಡುವುದಕ್ಕೆ ಹೋಗಿರಬಹುದೆಂದುಕೊಂಡು, ಮೇಲೆ ಹೋಗಿ ಓದುತ್ತಾ ಕುಳಿತುಕೊಂಡೆ.

ನಮ್ಮ ಹಾಸ್ಟಲಿನಲ್ಲಿ ಬೆಳಿಗ್ಗೆ ೭ರಿಂದ ೧೦ರ ವರೆಗೆ ಸೈಲಂಟ ಅವರ್ (Silent hour). ಅಂದರೆ ಹುಡುಗಿಯರೆಲ್ಲಾ ತಂತಮ್ಮ ಕಿರುಮನೆಗಳಲ್ಲಿ ಕುಳಿತು ಓದುತ್ತಿರಬೇಕು. ಇಲ್ಲವೆ ಮಾತಾಡುತ್ತಿದ್ದರೂ ಹೊರಗೆ ಬಂದು ಗಲಾಟೆ ಮಾಡಕೂಡದು.

ಇದ್ದಕ್ಕಿದ್ದ ಹಾಗೆ ಒಂದು ಕೋಲಾಹಲವೆದ್ದಿತು. ಒಂದಡವಿಯಿಂದ ಇನ್ನೊಂದಡವಿಗೆ ಪಯಣ ಮಾಡುತ್ತಿರುವ ಹನುಮಂತರಾಯನ ಮಕ್ಕಳ ಪಡೆಗರವು ಹೇಗೋ, ಹಾಗಿದ್ದಿತು ಈ ಕೋಲಾಹಲ. ಯಾವಾಗಲೂ ಇದು ಊಟದ ಘಂಟೆಯಾದ ಮೇಲೆ ಹೊರಡುವ ಉದ್ಗಾರ ! ಘಂಟೆಯು ನನಗೆ ಕೇಳಿಸಲಿಲ್ಲವೇನೋ, ಎಂದು ಮೇಜಿನ ಮೇಲಿದ್ದ ಕೈಘಡಿಯಾರವನ್ನು ತೆಗೆದು ನೋಡಿದೆ. ಒಂಭತ್ತು, ಹತ್ತು ನಿಮಿಷವಾಗಿತ್ತು. ಒಂದು ವೇಳೆ ನಿಂತು ಹೋಗಿರಬಹುದೆಂದು ಕಿವಿಯ ಹತ್ತಿರವಿಟ್ಟು ಕೇಳಲು, ಟಿಕ್, ಟಿಕ್, ಎನ್ನುವ ಶಬ್ದ. ಈ ಗದ್ದಲಕ್ಕೆ ಇನ್ನೇನೋ ಕಾರಣವಿರಬೇಕೆಂದು ಪುಸ್ತಕವನ್ನು ಹಾಸಿಗೆಯ ಮೇಲೆ ಎಸೆದು ಒಂದೇ ಜಿಗಿತಕ್ಕೆ ವರಾಂಡಾಕ್ಕೆ ಬಂದೆ.

ಹಿಂದಿನ ಪಟಾಂಗಣದಲ್ಲಿ ಹುಡುಗಿಯರು ನೆರೆದಿದ್ದರು. ನಾಲ್ಕು ಜನ ಜವಾನರು ಒಂದು ಡೋಲಿಯನ್ನು ಹೊತ್ತುಕೊಂಡು ಬರುತ್ತಿದ್ದರು. ಹಾಸ್ಟಲಿನ ದಾದಿ ನೀಲೆಯು ಬಟ್ಟೆಯಿಂದ ಸುತ್ತಿದ್ದೊಂದು ಚಿಕ್ಕ ಪದಾರ್ಥವನ್ನು ಅತ್ಯಂತ ಜಾಗರೂಕತೆಯಿಂದ ತೆಗೆದುಕೊಂಡು ಹಿಂದೆ ಬರುತ್ತಿದ್ದಳು. ಡೋಲಿಯಮೇಲೆ ಬಿದ್ದಿದ್ದ ಲೀಲೆಯು ಕೈಗಳಿಂದ ಮುಖವನ್ನು ಮುಚ್ಚಿಕೊಂಡಿದ್ದಳು. ಈ ಮೆರವಣಿಗೆಯ ಹಿಂದೆ ಬರುತ್ತಿದ್ದ ಹಾಸ್ಟಲ ಸೂಪರಿಂಟೆಂಡಂಟರನ್ನು ನೋಡಿದ ಕೂಡಲೆ ಹುಡುಗಿಯರು ಅಲ್ಲಲ್ಲಿ ಚದರಿ ಓಡಿದರು. ಸೂಪರಿಂಟೆಂಡಂಟರು, ದಾದಿ ಮುಂತಾದವರು ಕಾಯಿಲೆಯಾದವರಿರುವ ಕಿರುಮನೆಗೆ ಹೋಗಿ ಕದವನ್ನಿಕ್ಕಿದರು.

ತಾನೇ ಚಿಕ್ಕಮಗುವಿನಂತಿರುವ ಲೀಲೆಗೊಂದು ಮಗು. ಅದರ ಜನನೋತ್ಸವದ ಸಂಭ್ರಮವಿದು.

ಹಾಸ್ಟಲಿನಂತಹ ಜನಸಂಪರ್ಕದ ಸ್ಥಳ ಇನ್ನೊಂದಿಲ್ಲ. ನೂರಾರು ಜನ ಕೂಡಿ, ಆಡಿ, ಉಂಡು ಬೆಳೆಯುವ ಸ್ಥಳ. ಅಕ್ಕ ತಂಗಿಯರನ್ನೂ ಮರೆಯಿಸುವಂತಹ ಮೈತ್ರಿಯು ಅಲ್ಲಿ ಅನುಭವಕ್ಕೆ ಬರುವುದು. ಆದರೆ ಪಾಪಿಯಾದ ಲೀಲೆಗಾರು ಸ್ನೇಹಿತಳೆಂದು ಹೇಳಿಸಿಕೊಳ್ಳಲಿಚ್ಛಿಸುವರು !

CC-0. Jangamwadi Math Collection. Digitized by eGangotri

ಇತರರ ವಿಪತ್ತಿನಲ್ಲಿ ನಲಿಯುವಂತಹ ನಿರ್ದಯರಾರೂ ಇಲ್ಲ. ಆದರೂ ಇಂತಹ ವಿಪತ್ಸಂಭವಗಳಲ್ಲಿ ಕುತೂಹಲ ವಿಲ್ಲದಿರುವವರಾರು? ಭೋಜನಶಾಲೆಯಲ್ಲಿಯೂ, ಪ್ರಾರ್ಥನೆಯ ವೇಳೆಯಲ್ಲಿಯೂ, "ಟಿಫಿನ್" ತೆಗೆದುಕೊಳ್ಳುವಾಗಲೂ, ಎಲ್ಲರಿಗೂ ಇದೊಂದೇ "ಟಾಪಿಕ್." ಹಳೆ ಹುಡುಗಿಯರೆಲ್ಲರೂ, ತಮ್ಮ ಉಚ್ಚಸ್ಥಾನವನ್ನು ಬಿಟ್ಟಿಳಿದುಬಂದು ಕಳೆದೆರಡು ದಿನ ಲೀಲೆಯೊಡನೆ ಹೆಚ್ಚಾಗಿ ಮಾತಾಡುತ್ತಾ ತಿರುಗಾಡುತ್ತಿದ್ದ ಹೊಸ ಹುಡುಗಿಯರನ್ನು ಹುಡುಕಿಕೊಂಡು ಬಂದರು.

"ಏನೆ, ನಿಮ್ಮ ಲೀಲೆಯ ಯಜಮಾನರಿನ್ನೂ ಪುತ್ರ ಜನ್ಮೋತ್ಸವವನ್ನು ಸಾಂಗಮಾಡಲು ಬರುವುದು ಯಾವಾಗ?"

"ಅಲ್ಲೆ ಸುಶೀಲಾ! ಅವಳ ಚರಿತ್ರೆಯ ಪುಸ್ತಕವನ್ನು ನಿನ್ನೆ ನೋಡಿದೆ. ಮಿಸ್ ಲೀಲಾಬಾಯಿ ಎಂದು ಬರೆದಿತ್ತು."

"ಏನೋ, ಬಿಡು. ಪಾಪ. ಹೊಟ್ಟೆಯಲ್ಲಿರುವ ಮಗುವಿಗೂ, ತನಗೂ, ಸಾಕಷ್ಟು ಆಹಾರ ಹಾಸ್ಟೆಲಿನಲ್ಲಿ ಸಿಕ್ಕುವುದಿಲ್ಲವೆಂದು 'ಮಿಸೆಸ್'ನಲ್ಲಿ ಎರಡು ಎಸ್ ಇವೆಯಲ್ಲಾ ಎಂತ, ಒಂದೆಸ್ಸನ್ನು ನುಂಗಿದಳೇನೊ" ಎಂದಳು ವಿನೋದ ರತ್ನಾಕರಳಾದ, ಆ ಸುಶೀಲೆ.

"ಅದೆಲ್ಲಾ ಇರಲಿ. ನೀವು ಯಾವಾಗಲೂ, ಅವಳ ಜೊತೆಯಲ್ಲೇ ತಿರುಗುತ್ತಿದ್ದು ದೇಹವೆರಡು ಪ್ರಾಣ ಒಂದೇ ಬಂತಿದ್ದಿರಲ್ಲೆ, ಅನ್ನಪೂರ್ಣ! ನಿನಗೆ ಗೊತ್ತಿರಲಿಲ್ಲವೆ ಆವಳ ಸಮಾಚಾರ?"

ಮೇಲೆ ಹೇಳಿದ ಮಾತುಕತೆಗಳು ಆ ದಿನ ನಮ್ಮ ಹಾಸ್ಟೆಲಿನಲ್ಲಾದ ಸಂಭಾಷಣೆಗಳಲ್ಲೊಂದು "ಸ್ಯಾಂಪಲ್."

ಹುಡುಗಿಯರಾರೂ, ಸಿಕ್‌ರೂಮ್ (ಕಾಯಿಲೆಯವರಿರುವ ಚಿಕ್ಕಮನೆ) ಕಡೆ ಹೋಗಕೂಡದೆಂದು ಸೂಪರಿಂಟೆಂಡೆಂಟರ ಕಟ್ಟಪ್ಪಣೆ. ಆದರಿಂದ ಇವತ್ತು ಬ್ಯಾಡ್‌ಮಿಂಟನ್ ಆಡುವುದಕ್ಕೆ ಎಲ್ಲರಿಗೂ, ಎಂದೂ ಇಲ್ಲದ ಆಕ್ಕರೆ. ಬ್ಯಾಡ್‌ಮಿಂಟನ್ ಕೋರ್ಟು ಸಿಕ್‌ರೂಮಿನ ಹಿಂದಿರುವುದೇ ಇದಕ್ಕೆ ಕಾರಣ. ಹಿಂದಣ ಗೋಡೆಯಲ್ಲಿದ್ದ ಒಂದು ಚಿಕ್ಕ ಕಿಟಕಿಯೂ ಇಂದು ಮುಚ್ಚಿದೆ. ಆದರೆ ಚಿಕ್ಕ ಮಗುವೊಂದು ಅಳುತ್ತಿರುವ ಶಬ್ದವನ್ನು ಕೇಳಿ, ಹುಡುಗಿಯರಿಗೆಲ್ಲಾ ಹಸಿದ ಬಾಯಿಗೆ ಹಾಲೆರೆದಷ್ಟು ತೃಪ್ತಿಯಾಯಿತು.

ದಾದಿಯು ಸಾಯಂಕಾಲ ತನ್ನ ಕಿರುಮನೆಗೆ ಬಂದಳು. ಅವಳಿಗೆ ಬೆಳಗ್ಗಿನಿಂದ ಅನ್ನಾಹಾರಗಳಿರಲಿಲ್ಲ. ಒಬ್ಬ ಕೆಲಸಗಾತಿಯನ್ನು ಚಿಕ್ಕ ಮನೆಯಲ್ಲಿ ಕೂರಿಸಿ, ಸ್ನಾನ ಮಾಡುವುದಕ್ಕೆ ಹೊರಗೆ ಬಂದಳು. ಸೂಪರಿಂಟೆಂಡೆಂಟರೂ ಹೊರಗೆಲ್ಲಿಯೋ ಹೋಗಿದ್ದರು.

ಆದರಿಂದ ಹುಡುಗಿಯರೆಲ್ಲರು ನೀಲೆಯ ಕಿರುಮನೆಯಲ್ಲಿ ನುಗ್ಗಿ ಮುತ್ತಿಗೆ ಹಾಕಿದರು. ಕಲ್ಪಿತ ಕಾದಂಬರಿಯನ್ನು ಸೋಲಿಸುವ ಲೀಲೆಯ ಚರಿತ್ರೆಯನ್ನು ಕೇಳುವ ಔತ್ಸುಕ್ಯದಿಂದೆಲ್ಲರೂ ಸೇರಿ ನೀಲೆಯನ್ನೆಳೆದುತಂದು ವರಾಂಡದಲ್ಲಿ ಕುಳ್ಳಿರಿಸಿದರು. ಅವಳು ಹೇಳಿದ ಕಥಾಸಾರಾಂಶವಿದು. ಲೀಲೆಯು ಬೆಳಗ್ಗಿನಿಂದಲೂ ನೀಲೆಯ ಮುಂದೆ ರೋದಿಸುತ್ತಾ ತನ್ನ ಕಥೆಯನ್ನು ಹೇಳಿರಬೇಕು.

ಲೀಲೆಯು ತಾಯಿಗೊಬ್ಬಳೇ ಮಗಳು. ತಂದೆಯು ತೀರಿಹೋಗಿ ಎಂಟು ವರ್ಷಗಳಾದುವು. ಆದರಿಂದ ಲೀಲೆಯ ತಾಯಿ ನಾಗಮ್ಮನು ಮಗುವಿನೊಂದಿಗೆ ಅಣ್ಣ ಸಂಜೀವರಾಯನ ಮನೆಯಲ್ಲಿರುತ್ತಿದ್ದರು. ನಾಗಮ್ಮನ ಮನೆಯಲ್ಲಿ ಸಂಜೀವರಾಯನು ಧ್ವಜಪೂರಿದನೆಂದೂ ಹೇಳಬಹುದು. ಹನ್ನೊಂದು ತಿಂಗಳುಗಳ ಕೆಳಗೆ ನಾಗಮ್ಮನು ಅಕ್ಕನ ಮಗಳು ಗೌರಿಯ ಹೆರಿಗೆಗೆಂದು, ಲೀಲೆಯನ್ನೂ ಸಂಜೀವರಾಯನನ್ನೂ ಮನೆಯಲ್ಲಿಯೆ ಬಿಟ್ಟು ಹೊರಟುಹೋದರು. ಲೀಲೆಯು ಆ ವರ್ಷ ಮೆಟ್ರಿಕ್ ಪರೀಕ್ಷೆ ಕಟ್ಟಬೇಕಾಗಿದ್ದುದರಿಂದ ತಾಯಿಯ ಜೊತೆಯಲ್ಲಿ ಹೋಗಲಿಲ್ಲ. ಅಣ್ಣನ ಮೇಲಿನ ಭರವಸೆಯಿಂದ "ಮಗು, ಜೋಕೆ ನೋಡಿಕೊಳ್ಳಪ್ಪಾ" ಎಂದು ಹೇಳಿ ಬಂಡಿ ಏರಿದರು. ಲೀಲೆಯ ಮಾವನಿಗೆ ಸುಮಾರು ೪೫ ವರ್ಷಗಳಿರಬಹುದು. ಚಿಕ್ಕಂದಿನಲ್ಲಿಯೇ ಮದುವೆಯಾಗಿ ಹೆರಿಗೆಯಲ್ಲಿ ಹೆಂಡತಿಯು ತೀರಿಕೊಂಡಳು. ಮಗುವು ತಾಯಿಯನ್ನು ಹಿಂಬಾಲಿಸಿತು. ಬೇರೊಂದು ಮದುವೆಯಾದರೆ, ಸಂಪಾದಿಸಿ ಹೆಂಡತಿ ಮಕ್ಕಳನ್ನು ಸಾಕಬೇಕು, ಇದರ ಗೋಜು ಯಾಕೆಂದು ವಿಧವೆಯಾದ ತಂಗಿಯ ಮನೆಗೊಂದು ಗಂಡುಸಾಗಿದ್ದ ಸಂಜೀವರಾಯ.

ಬೆಳಗ್ಗೆ ಎದ್ದು ನದಿಗೆ ಹೋಗಿ ಪ್ರಾಂತಃಸಂಸ್ಕಾರಗಳನ್ನು ತೀರಿಸಿಕೊಂಡು ಹೂತುಳಸಿ ತಂದು ದೇವರ ಪೂಜೆ ಮಾಡುವನು. ಕಾಫಿ ಕುಡಿದು ಹೊರಗೆ ಹೋದರೆ ಪುನಃ ಎಂಟು ಘಂಟೆಗೆ ಮನೆಗೆ ಬರುವನು. ಊಟವಾದ ಮೇಲೆ ಲೀಲೆಗೆ ಪಾಠ ಹೇಳಿಕೊಡುವನು. ಇಂಗ್ಲೀಷು ಓದಿ ಎಫ್. ಎ. ಫೇಲಾಗಿದ್ದನು. ಲೀಲೆಯು ಕಲಿಯುವವಳು. ಅವನು ಹೇಳಿಕೊಡುವವನು. ಅದರ ವಿಷಯವಾಗಿ ಇನ್ನಾರಿಗೂ ಏನೂ ತಿಳಿಯದು.

CC-0. Jangamwadi Math Collection. Digitized by eGangotri

ಯಾರ ಪರಾಮರಿಕೆಯನ್ನು ಮಾಡಲು ಲೀಲೆಯ ತಾಯಿಯು ಹೋಗಿದ್ದರೋ, ಆ ನಿರ್ಭಾಗ್ಯ ಗೌರಿಯ ಪತಿಯು ಹೆಂಡತಿಯು ಮಗುವನ್ನು ಹೆತ್ತೆರಡನೆಯ ದಿನವೇ ಪರಲೋಕವನ್ನೈದಿದರು. ವೈಧವ್ಯದ ಪ್ರಥಮ ವರ್ಷ ಮುಗಿಯುವ ವರೆಗೂ ನಾಗಮ್ಮನು ಗೌರಿಯನ್ನು ಬಿಟ್ಟುಬರಲಾಗಲಿಲ್ಲ. ಲೀಲೆಯನ್ನು ಪರೀಕ್ಷೆಯಾದ ಕೂಡಲೆ ಅಲ್ಲಿಗೆ ಕಳಿಸೆಂದು ಕಾಗದ ಬರೆದರು. "ಅವಳ ಪರೀಕ್ಷೆಯ ವೃತ್ತಾಂತವು ತಿಳಿದ ಕೂಡಲೆ ಕರೆತರುತ್ತೇನೆಂ"ದು ಸಂಜೀವ ರಾಯರು ಉತ್ತರ ಬರೆದರು. ಪರೀಕ್ಷೆಯಲ್ಲಿ ತೇರ್ಗಡೆಯಾಯಿತು. "ಹುಡುಗಿ ಬುದ್ಧಿವಂತಳು. ಆ ಹಳ್ಳಿಯಲ್ಲಿ ಬಂದಿದ್ದು ಮಾಡುವಳೇನು? ಹಾಸ್ಟಲಿನಲ್ಲಿದ್ದು ನೀನು ಬರುವವರೆಗೂ ಓದುತ್ತಿರಲಿ. ದೂರದೇಶವಾದರೂ ಪುಣ್ಯಸ್ಥಳ. ನೀನು ಬಂದ ಮೇಲೆ ಅಲ್ಲಿಯೇ ಮನೆಮಾಡಿಕೊಂಡಿದ್ದು ಅವಳನ್ನು ಓದಿಸುತ್ತಾ, ದಿನಾಲು ದೇವರ ದರ್ಶನ ಮಾಡಿಕೊಂಡು ರಾಮ ಕೃಷ್ಣ ಎಂದು ಕಾಲ ಹಾಕುತ್ತಿರಬಹುದು." ಎಂದು ಒಂದು ಕಾಗದ ಬರೆದನು.

ಪಾಪ. ಬಡ ಹೆಂಗಸು. ಒಪ್ಪಿದಳು. ಒಪ್ಪಿ ಮಗಳ ಕತ್ತನ್ನು ಒತ್ತಿದಳು.

ಸೋದರಮಾವನು ಲೀಲೆಗೆ "ಮಗುವು ಹುಟ್ಟಿದ ಕೂಡಲೆ ಕೊಂದುಹಾಕಿ ಬಂದುಬಿಡು. ದೂರದೇಶ, ಯಾರಿಗೂ ತಿಳಿಯುವುದಿಲ್ಲ. ಹೆಸರೂ ಬದಲಾಯಿಸಿ ಬಿಟ್ಟರಾಯಿತು. ನಾಗು ಬರುವ ವೇಳೆಗೆಲ್ಲಾ ಮುಗಿದುಹೋಗುವುದು. ಆ ಮೇಲೆ ಬೇರೆ ವರ ಸಿಕ್ಕದಿದ್ದರೆ ನಾನೇ ಮದುವೆ ಮಾಡಿಕೊಳ್ಳುವೆನು." ಎಂದು ಭರವಸೆ ಕೊಟ್ಟನು.

ಇವನಿಗೆ ಮಗುವನ್ನು ಕೊಂದ ಮೇಲೆ ಮದುವೆ!

ಮಾವನ ಮಾತನ್ನು ನಡೆಯಿಸಬೇಕೆಂದು ಲೀಲೆಯು ಬೆಳಿಗ್ಗೆದ್ದು ಕಾಂಪೌಂಡಿನ ಕೊನೆಯಲ್ಲಿದ್ದ ಹಾಳುಬಾವಿಗೆ ಹೋಗಿದ್ದಳು. ಆದರೆ ಹಸುಗಳನ್ನು ಮೇಯಿಸುವ ರಾಮಿಯು ಅಲ್ಲಿರುವಳೆಂದು ಇವಳಿಗೆ ಹೇಗೆ ಗೊತ್ತು?

ಮಾರನೆಯ ದಿನ ಹುಡುಗಿಯರು ಕಾಲೇಜಿಗೆ ಹೋಗಿದ್ದಾಗ ಸೂಪರಿಂಟೆಂಡೆಂಟರು ಲೀಲೆಯನ್ನು ರಾಮಕೃಷ್ಣ ಮಿಷನ್ನಿನ ಅನಾಥಾಲಯಕ್ಕೆ ಕಳುಹಿಸಿಬಿಟ್ಟಿದ್ದರು.

ಮೂರು ದಿನಗಳಾದ ಮೇಲೆ ನಾವೊಂದು ದಿನ ಟೆನ್ನಿಸ್ಸಾಡಿ ಬರುತ್ತಿದ್ದೆವು. ಹಾಸ್ಟಲಿನ ಕಾರಂಜಿಯ ಬಳಿಯಲ್ಲೊಬ್ಬ ಪ್ರೌಢ ಹೆಂಗಸು ಕುಳಿತಿದ್ದಳು. ಅವಳು ತಲೆಯನ್ನು ಬಾಚಿ ನಾಲ್ಕು ದಿನಗಳಾಗಿರಬಹುದು. ಮುಖವೆಲ್ಲಾ ಬಾಡಿದ್ದಿತು. ಉಟ್ಟಿದ್ದ ಸೀರೆ ಮಲಿನವಾಗಿ ಅಸ್ತವ್ಯಸ್ತವಾಗಿದ್ದಿತು. ಅವಳ ವಯಸ್ಸು ಸುಮಾರು ಮೂವತ್ತೈದಿರಬಹುದು. ಬಹಳ ದೂರದಿಂದ ಪ್ರಯಾಣ ಮಾಡಿ ಬಂದಂತೆ ತೋರುತ್ತಿದ್ದಿತು. ಅನ್ನ-ನೀರಿನ ಮೇಲೆ ಅವಳ ಲಕ್ಷ್ಯವಿದ್ದಂತೆ ಕಾಣುತ್ತಿರಲಿಲ್ಲ. ನಮ್ಮನ್ನು ನೋಡಿದ ಕೂಡಲೆ ಅವರು ಎದ್ದು:

"ಏನಮ್ಮ ಲೀಲೆಯು ಹೇಗಿದ್ದಾಳೆ? ಅವಳ ಬಳಿ ನನ್ನನ್ನು ಕರೆದುಕೊಂಡು ಹೋಗುವಿರಾ?"

"ಲೀಲೆ ಇಲ್ಲಿಲ್ಲ."

"ಎಲ್ಲಿ, ಮತ್ತೆ ಆಸ್ಪತ್ರಿಯಲ್ಲೆ? 'ಅವಳಿಗೆ ಮೈ ಸರಿಯಾಗಿಲ್ಲ. ತಕ್ಷಣ ಹೊರಟುಬರಬೇಕು' ಎಂದು ನಿಮ್ಮ ಸೂಪರಿಂಟೆಂಡೆಂಟರು ತಂತಿಕೊಟ್ಟಿದ್ದರು. ಕಾಯಿಲೆ ಏನು, ನಿಮಗೆ ಗೊತ್ತುಂಟೆ?"

"ನಮಗೆ ಗೊತ್ತಿಲ್ಲ. ಸೂಪರಿಂಟೆಂಡೆಂಟರನ್ನು ಕರೆದು ತರುತ್ತೇನೆ. ನೀವಿಲ್ಲೇ ಕುಳಿತಿರಿ."

ಸೂಪರಿಂಟೆಂಡೆಂಟರು ಅವರೊಡನೆ ಮಾತಾಡುತ್ತಿರುವುದನ್ನು ಒಳಬಾಗಿಲಲ್ಲಿ ನಿಂತು ಕೇಳುತ್ತಿದ್ದೆವು.

"ನಿಮ್ಮ ಲೀಲೆಗೆ ಒಂದು ಹೆಣ್ಣುಮಗು ಹುಟ್ಟಿ ಮೂರು ದಿನಗಳಾದುವು. ಮಗುವು ನಿನ್ನೆ ರಾತ್ರಿ ತೀರಿಕೊಂಡಿತು. ಲೀಲೆಯು ಅನಾಥಾಲಯದಲ್ಲಿದ್ದಾಳೆ."

"ಲೀಲೆಗೆ....ಮಗು....ಅಯ್ಯೋ ದೇವ!"

ಹಾಗೇ ಅವರು ಹೊರಟುಹೋದರು. ಅವರು ಹೋಗುವುದನ್ನು ನೋಡುವುದು ನಮ್ಮಿಂದಾಗಲಿಲ್ಲ.



CC-0. Jangamwadi Math Collection. Digitized by eGangotri

# ಜ್ಞಾನ-ವಿಜ್ಞಾನ



ನವಜ್ಞಾನ, ನವವಿಚಾರ, ನವವಿಷಯ, ನವರಚನೆ, ನವಶೋಧನೆ, ನವಸಮಾಜ, ನವಪ್ರಪಂಚ
⁘ ⁘ ⁘ ಇವುಗಳ ಸುಲಭ—ಸೂಕ್ತ—ಸಾರರೂಪ ಪರಿಚಯ ⁘ ⁘ ⁘



### ಶಸ್ತ್ರೋದ್ಯೋಗಿಗಳ ಗತ್ತುಗಾರಿಕೆ

'ಎಲೆನ್ ಹೆರಪ್' ಎಂಬವಳು ೭೦ರ ವಯಸ್ಸು ಮೀರಿದ ಭಾರತಮಿತ್ರಳೊಬ್ಬಳು. ಸುಪ್ರಸಿದ್ಧ ಪತ್ರಿಕಾಕರ್ತಳು. ಪ್ರಮುಖ ಶಾಂತತಾವಾದಿಯು. ರೊಮೆ ರೊಲಾ, ಗಾಂಧಿಯವರ ಸ್ನೇಹಿತಳು. ಆಕೆಯ ಲೇಖನದ ಸಾರಾಂಶವಿದು:—

ಶಾಂತಿಕಾಲದಲ್ಲಿಯೂ ಶಸ್ತ್ರಾಸ್ತ್ರಗಳ ಕಾರಖಾನೆದಾರರು ಹಣ ಸಂಪಾದಿಸಬಲ್ಲರು. ಅವರ ಗತ್ತುಗಾರಿಕೆ ಎಂತೆಂತಹರಿಗೂ ಗೊತ್ತಾಗದು. ಭಯ-ಸಂಶಯ-ದ್ವೇಷಗಳನ್ನು ರಾಷ್ಟ್ರರಾಷ್ಟ್ರಗಳಲ್ಲಿ ಗುಪ್ತವಾಗಿ ಅವರು ಹೊತ್ತಿಸುತ್ತಿರುವರು. ಆದರಿಂದಲೆ ಅವರ ಸರಕುಗಳಿಗೆ ತೇಜಿ ಬರುವುದು. ಅವುಗಳ ಮಾರಾಟ ಹೆಚ್ಚಿದಂತೆ ಭೀತಿಯ ವಾತಾವರಣವು ಇನ್ನೂ ಮಲಿನವಾಗುವುದು. ಈ ರೀತಿ ಸರಾಗವಾಗಿ ತಿರುಗುವುದು ಈ ಕರಾಲವರ್ತುಲ.

ಅವರೂ 'ಪ್ರಚಾರ-ಪ್ರಕಟನೆ' ಮಾಡುವರು. ಆದರೆ ಬಹಿರಂಗವಾಗಿಯಲ್ಲ. ದೊಡ್ಡದೊಡ್ಡ ಚಿತ್ರಪಟಗಳನ್ನು ಗೋಡೆಗಳಿಗೆ ಅಂಟಿಸುವುದಿಲ್ಲ; ದೊಡ್ಡದೊಡ್ಡ ಜಾಹಿರಾತುಗಳನ್ನು ಕೊಡುವುದಿಲ್ಲ. ಒಂದು ಫ್ರೆಂಚ್ ಪತ್ರಿಕೆಯಲ್ಲಿ ಒಂದು ಸುದ್ದಿ ಪ್ರಕಟವಾಗುವುದು—ಜರ್ಮನರು ಒಂದು ಹೊಸ ಬಂದೂಕನ್ನು ತಯಾರಿಸಿರುವರಲ್ಲದೆ, ತಮ್ಮ ಸೈನ್ಯಕ್ಕೆಲ್ಲ ಅದನ್ನು ಪೂರೈಸಲಿರುವರೆಂದು. ಇದು ಕಟ್ಟುಕತೆಯಾಗಿರಬಹುದು. ಆದರೆ ಮರುದಿನವೇ ಫ್ರೆಂಚ ಸರಕಾರವು ಈ ಹೊಸ ಬಂದೂಕುಗಳಿಗೆ ಆರ್ಡರು ಕೊಡುವುದು ಖಂಡಿತ; ಕೂಡಲೆ ಜರ್ಮನಿಯೂ ಈ ಬಂದೂಕುಗಳನ್ನು ತರಿಸುವುದೂ ನಿಶ್ಚಿತ! ಅಂತೂ ಸುಳ್ಳಿನಿಂದಲೂ ಸತ್ಯವನ್ನು ಹೊರಡಿಸಬಲ್ಲರು ಈ ಸಮರಕುಬೇರರು.

ಇವರು ಪ್ರಚಾರಕ್ಕಾಗಿ ಹಣ ವೆಚ್ಚ ಮಾಡುವುದರಲ್ಲಿ ಆಸಿಮಿಸಿ ಮಾಡುವುದಿಲ್ಲ. ಹೊಸ ಬ್ರಿಟಿಷ್ ಮಂತ್ರಿಯೊಬ್ಬನು ನೇಮಕವಾದ ಕೂಡಲೆ ಅವನ ದೆಸ್ಕಿನ ಮೇಲೆ ಮದ್ದಿನ ಗಿರಣಿಗಳ ಶೇರುಗಳು ಬಂದು ಬಿದ್ದಿರುತ್ತವೆಂದು ಹೇಳುವುದರಲ್ಲಿ ಸ್ವಲ್ಪ ಅತಿಶಯೋಕ್ತಿಯಿರಬಹುದು; ಆದರೆ 'ಶಸ್ತ್ರಸಂನ್ಯಾಸ ಪರಿಷತ್ತು' ಒಳ್ಳೆ ಗಂಭೀರವಾಗಿ ಸಾಗಿರುವಾಗ, ಅದರ ಸದಸ್ಯರಾಗಿರುವ ಹಲವು ಜನ ಬ್ರಿಟಿಷ್ ಮಂತ್ರಿಗಳು ಮದ್ದಿನ ಗಿರಣಿಗಳಲ್ಲಿ ಪಾಲುಗಳನ್ನು ಪಡೆದವರಾಗಿದ್ದರೆಂಬುದು ನಿಜ. ಆಗ ಹುಟ್ಟಿದ ಪ್ರಕ್ಷೋಭವನ್ನು ತಾಳಲಾರದೆ, ಹಲವರು ಆ ಪಾಲುಗಳನ್ನು ಮಾರಿಬಿಡಬೇಕಾಯಿತೆಂಬುದೂ ನಿಜ.

ಫ್ರೆಂಚ್ ಶಸ್ತ್ರಾಸ್ತ್ರ ವ್ಯಾಪಾರಿಗಳು ಪ್ರತಿವರ್ಷ ೭|| ಕೋಟಿ ಫ್ರಾಂಕುಗಳನ್ನು ಬರಿ ಪ್ರಚಾರಕ್ಕಾಗಿ ವೆಚ್ಚಮಾಡುವರು. ಈ ಹಣದಲ್ಲಿ ಒಂದು ಫ್ರೆಂಚ್ ಪತ್ರಿಕೆಗೇ ೧ ಕೋಟಿ ಫ್ರಾಂಕುಗಳು ಮುಟ್ಟುವವು. ( ಒಂದು ಫ್ರಾಂಕೆದರೆ ಸುಮಾರು ಹತ್ತಾಣೆ. )

ಲಾಭ ಪಡೆಯುವುದಕ್ಕೆ ಅವರು ಏನು ಮಾಡಿಯಾರು, ಹೇಳಲಿಕ್ಕೆ ಬಾರದು. ಮಹಾಯುದ್ಧದಲ್ಲಿ ಜರ್ಮನಿಗೆ ಸಲ್ಫರೇಟ್ ಆಫ್ ಕಾರ್ಬನ್ನಿನ ತುಂಬಾ ಕೊರತೆ ಬಿದ್ದಿತು.

CC-0. Jangamwadi Math Collection. Digitized by eGangotri

ಸ್ವಿಸ್ ಪತ್ರಿಕೆಗಳಲ್ಲಿ ಆ ಬಗ್ಗೆ ಪ್ರಕಟನೆಯನ್ನು ಕೊಡಲಾಯಿತು. ೧೦,೦೦೦ ಕಿಲೋಗ್ರಾಮುಗಳಿಗೆ ಫ್ರೆಂಚ್ ಸರಕಾರವು ಆಗ ೫,೦೦೦ ಫ್ರಾಂಕುಗಳನ್ನು ಕೊಡುತ್ತಲಿತ್ತು. ಜರ್ಮನರು ಅಷ್ಟೇ ಮೊತ್ತಕ್ಕೆ ೫೦,೦೦೦ ಫ್ರಾಂಕುಗಳನ್ನು ಕೊಡುವ ಆಶೆ ಹಚ್ಚಿದರು. ೪೫ ಸಾವಿರದ ಲಾಭವು ಫ್ರೆಂಚ್ ಕಾರಖಾನೆದಾರರ ಬಾಯಲ್ಲಿ ನಿರೂರಿಸಿತು. ಜರ್ಮನಿಯು, ಅದೇ ದ್ರವ್ಯದಿಂದ ತಾನು ತಯಾರಿಸಿದ ವಿಷ. ಧೂಮವನ್ನು ಫ್ರೆಂಚ್ ಸೈನಿಕರ ಕಂದೆರಗಳಿಗೆ ಕಳಿಸಿ, ಮುಯ್ಯಿ ಮುಟ್ಟಿಸಿತು.

ಸಹಕಾರಶಾಸ್ತ್ರವು ಈ ಕಾರಖಾನೆದಾರರ ಕೈಯಲ್ಲಿ ಒಂದು ಸುಂದರ ಕಲೆಯಾಗಿದೆ. ಬ್ಯಾಂಕುಗಳು, ಶಸ್ತ್ರ ತಯಾರಿಸುವವರು ಮತ್ತು ಸರಕಾರ— ಈ ತ್ರಿಕೂಟಗಳ ಮೈತ್ರಿ ಅವರ್ಣನೀಯವಾದದ್ದು. ಶಸ್ತ್ರ ತಯಾರಿಕೆಯ ಉದ್ಯೋಗಗಳಿಲ್ಲದ ರಾಷ್ಟ್ರಗಳು ಸಾವುಕಾರ-ರಾಷ್ಟ್ರಗಳಿಂದ ಯುದ್ಧಸಾಹಿತ್ಯವನ್ನು ಕೊಳ್ಳಲೊಪ್ಪಿದರೆ, ಅವಕ್ಕೆ ಸಾಲ ಕೊಡಲಾಗುವುದು. ಇದೊಂದು ನಡೆದ ಸಂಗತಿ: ಹಂಗೇರಿ ದೇಶವು ಫ್ರೆಂಚರಿಗೆ ಜೀವಾಳದಂತಿರುವ 'ವರ್ಸಾಯ' ಒಪ್ಪಂದವನ್ನು ಮುರಿಯುವುದರಲ್ಲಿತ್ತು; ಫ್ರಾನ್ಸಿನ ಮಿತ್ರರಾಷ್ಟ್ರವೆನಿಸಿದ ಝೆಕೊಸ್ಲೊವಾಕಿಯಕ್ಕೆ ವಿರುದ್ಧವಾಗಿ ೩೦೦,೦೦೦ ಸೈನ್ಯವನ್ನು ಸಜ್ಜುಗೊಳಿಸಿತ್ತು. ಆದರೆ ಫ್ರೆಂಚ್ ಸರಕಾರದ ಅನುಮತಿಯಿಂದ ಅಲ್ಲಿಯ ಶಸ್ತ್ರಾಸ್ತ್ರವ್ಯಾಪಾರಿಗಳು ಹಂಗೇರಿ ರಾಷ್ಟ್ರದ ಯುದ್ಧಸಿದ್ಧತೆಗೆ ಎಲ್ಲಾ ಬಗೆಯಿಂದ ನೆರವಾದರು.

ಯುದ್ಧೋಪಯುಕ್ತ ಉದ್ಯೋಗಗಳಲ್ಲಿ ಹಾಕಿದ ಹಣವು ಇಡಿಯ ರಾಷ್ಟ್ರದಿಂದ ಬಂದಿರುತ್ತದೆ. ಈ ಕಾರಖಾನೆದಾರರು ಶಸ್ತ್ರನಿರ್ಮಾಣದ ಉದ್ಯೋಗವೊಂದನ್ನೆ ಅಲ್ಲ, ಕಬ್ಬಿಣದ ಗಣಿಗಳನ್ನೂ ಉಕ್ಕಿನ ಕಾರಖಾನೆಗಳನ್ನೂ ರಸಾಯನಶಾಲೆಗಳನ್ನೂ ನೌಕಾಶಿಲ್ಪವನ್ನೂ ರೇಲ್ವೆ ಮೊದಲಾದ ಮಾರ್ಗನಿರ್ಮಾಣವನ್ನೂ ದೊಡ್ಡದೊಡ್ಡ ಬ್ಯಾಂಕುಗಳನ್ನೂ ಪತ್ರಿಕೋದ್ಯೋಗಗಳನ್ನೂ ವಿದ್ಯುನ್ನಿರ್ಮಾಣವನ್ನೂ ನಡೆಸುವರು. ಫ್ರಾನ್ಸ್ ದೇಶದ ಶ್ನೀಡರ್ ಕ್ರೂಸೊ, ಬ್ರಿಟನ್ನಿನ ವ್ಹಿಕರ್ಸ್-ಆರ್ಮಸ್ಟ್ರಾಂಗ, ಜಪಾನದ ಮಿತ್ಸುಯಿ, ಜರ್ಮನಿಯ ಫಾರ್ಬೆನಿಂಡಸ್ಟ್ರಿ— ಇವು ಇಂತಹ ಕೆಲವು ಜಗದ್ವಿಖ್ಯಾತ ಶಸ್ತ್ರಪುರವಠೆಯ ಸಂಸ್ಥೆಗಳಾಗಿವೆ.

ಜಗತ್ತಿನ ವಾಣಿಜ್ಯದಂತೆಯೆ ರಾಜಕಾರಣದಲ್ಲಿಯೂ 'ಕಲ್ಲೆಣ್ಣೆ'ಗೆ ಬಹಳ ದೊಡ್ಡ ಸ್ಥಾನವಿದೆ. ಇದರ ವ್ಯಾಪಾರಕ್ಕೂ ಶಸ್ತ್ರಪುರವಠೆಯ ಉದ್ಯೋಗಕ್ಕೂ ಕರುಳುಬಳ್ಳಿಯ ನಂಟಿದೆ. 'ತೈಲ'ದಿಂದಲೆ ಈಚೆಯ ಕನಿಷ್ಠ ೨೦ ಯುದ್ಧಗಳಾದರೂ ಹುಟ್ಟಿದುವು.

ಹಿಟ್ಲರನು ಸತ್ತಾಧಾರಿಯಾಗಲು ನೆರವಾದವನು ಯಾರು ಬಲ್ಲಿರಾ? ಥಿಸ್ಸೆನ್ ಎಂಬ ಪ್ರಸಿದ್ಧ ಯುದ್ಧೋದ್ಯಮ-ಸಮ್ರಾಟ. ತನ್ನ 'ಮೀನ್ ಕಾಂಪ್ಫ್' ಎಂಬ ಪುಸ್ತಕದಲ್ಲಿ ಹಿಟ್ಲರನು "ಆರು ಕೋಟಿ ಜನತೆಯಲ್ಲಿ ತನ್ನ ಪಾಡಿನ ಬಗ್ಗೆ ನಾಚಿಕೆಯನ್ನೂ ತನ್ನನ್ನು ದಬ್ಬುವವರ ಬಗ್ಗೆ ದ್ವೇಷವನ್ನೂ ಬಿಂಬಿಸಿ, ಆ ಸಮ್ಮಿಲಿತ ಭಾವನೆಯು ಬೆಂಕಿಯಾಗಿ ಹೊತ್ತಿ, ಬೇಗೆಯಾಗಿ ಹಬ್ಬಿ, 'ನಮ್ಮ ಶಸ್ತ್ರ ನಮಗೆ ಕೊಡಿರಿ!' ಎಂಬ ದುರ್ದಮನೀಯ ಸಂಕಲ್ಪದ ಏಕಸ್ವರವಾಗಿ ಹೊರಡುವಂತೆ ಏನು ಮಾಡಬೇಕು?" ಎಂಬ ಪ್ರಶ್ನೆಯನ್ನೆತ್ತಿದ್ದ. ತನಗೆ ತಕ್ಕ ಮನುಷ್ಯನೀತನೆಂದು ಥಿಸ್ಸೆನ್ನನು ಎಣಿಕೆಹಾಕಿದ. ಹಿಟ್ಲರನ 'ರಾಷ್ಟ್ರೀಯ ಸಾಮ್ಯವಾದಿ' ಪಕ್ಷಕ್ಕೆ ದುಡ್ಡಿನಿಂದ ನೆರವಾಗಲು ನಿಶ್ಚಯಿಸಿದ. ತನ್ನ ಕೈಕೆಳಗಿನ ಕಲ್ಲಿದ್ದಲಿನ ಮತ್ತು ಉಕ್ಕಿನ ಉದ್ಯಮಗಳು ಇಂತಿಷ್ಟೆಂದು ಕರ ಕೊಡುವಂತೆಯೂ ಕಲ್ಲಿದ್ದಲಿನ ಧಾರಣೆ ಏರಿಸಿ ಈ ಉದ್ಯಮಗಳಿಗೆ ತಗಲಬಹುದಾದ ಹಾನಿ ತುಂಬಿ ಬರುವಂತೆಯೂ ಏರ್ಪಾಡು ಮಾಡಿದ. ಹೀಗಾಗಿ ಇಡಿಯ ಜರ್ಮನ್ ಜನತೆಯು ಗೊತ್ತಿಲ್ಲದೆಯೆ ಹಿಟ್ಲರನ ಪ್ರಚಾರಕಾರ್ಯಕ್ಕೆ ತನ್ನ ಹಮ್ಮಿಣಿ ಬಿಚ್ಚಿತು. ಹೀಗೆಯೆ ಇನ್ನು ಹಲವರು ಮಹನೀಯರು ನೆರವಾದರು.

ಜಗತ್ತಿನ ಸೌಭಾಗ್ಯದುರ್ಭಾಗ್ಯಗಳು ಈ ರುಧಿರಪ್ರಿಯರ ಮನೋಲಹರಿಯನ್ನೆ ಅವಲಂಬಿಸಿವೆಯೆಂದರೆ ತಪ್ಪಾಗದು.

—THE SUNDAY CHRONICLE

**ಮಣ್ಣಿಲ್ಲದೆ ಬೆಳೆ ಬೆಳೆಯುವುದು**

ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಡಾ. ಡಬ್ಲ್ಯು. ಎಫ್. ಗೆರಿಕ್ ಎಂಬವರು ಕೃಷಿಕ್ಷೇತ್ರದಲ್ಲಿ ಒಂದು ಕ್ರಾಂತಿಕಾರಕ ಪ್ರಯೋಗವನ್ನು ಮಾಡಿರುವರು. Hydroponics, ಇಲ್ಲವೆ ಮಣ್ಣಿಲ್ಲದೆ ರಾಸಾಯನಿಕದ್ರವ್ಯಮಿಶ್ರಿತ ನೀರಿನಲ್ಲಿ ಬೆಳೆಗಳನ್ನು ಬೆಳೆಯುವುದೇ ಅದು. ಗ್ರೀಕಭಾಷೆಯಲ್ಲಿ Hydro ಎಂದರೆ ನೀರು, Ponos ಎಂದರೆ ದುಡಿತ, ಕೃಷಿ. '**ಜಲಕೃಷಿ**' ಎಂತಲೂ ನಾವು ಇದನ್ನು ಕರೆಯಬಹುದು.

೧೯೨೭ರಿಂದ ಅವರು ಈ ಪ್ರಯೋಗವನ್ನು ನಡಸಿರುವರು. ಇದನ್ನು ಕಂಡವರು, ಇದು ಇಪ್ಪತ್ತನೆಯ ಶತಮಾನದ ವೈಜ್ಞಾನಿಕ ಸಿದ್ಧಿಗಳಲ್ಲೊಂದೆಂದು ಎನ್ನುವರು. ಜಗ

CC-0. Jangamwadi Math Collection. Digitized by eGangotri

ತ್ರಿನಲ್ಲಿಯ ಕೃಷಿಯ ಪದ್ಧತಿಗಳನ್ನೇ ಇದು ಆಮೂಲಾಗ್ರವಾಗಿ ಬದಲಾಯಿಸಬಹುದಾಗಿವೆಯೆಂದು ಅವರು ಅಭಿಪ್ರಾಯಪಡುವರು.

ಇದೀಗ ಇದು ಪ್ರಯೋಗಾವಸ್ಥೆಯನ್ನು ದಾಟಿ ಹೊರಬಿದ್ದಿದೆ. ಡಾ. ಗೆರಿಕ್ಕರು ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಲ ಪ್ರಾಯೋಗಿಕ ಕ್ಷೇತ್ರಗಳನ್ನು ಇದಕ್ಕಾಗಿ ಮೀಸಲಾಗಿರಿಸಿರುವರು. ವ್ಯಾಪಾರೀ ದೃಷ್ಟಿಯಿಂದ ಕಲ್ಪನೆ ಮೀರಿ ಲಾಭದಾಯಕವಾಗುವಂತೆ ಬೆಳೆಗಳನ್ನು ಬೆಳೆಸಬಹುದೆಂಬುದೇ ಈ ಶೋಧದ ವಿಶೇಷ. ಈಗಾಗಲೆ (೧೯೩೫ ರಲ್ಲಿ) ಅಮೆರಿಕದ ಹಲವು ತರಕಾರಿಯ ಮತ್ತು ಹೂಗಳ ವ್ಯಾಪಾರಸ್ಥರು ಈ ಪದ್ಧತಿಯಿಂದ ಕೃಷಿಮಾಡಿ, ಸಾಮಾನ್ಯ ಪದ್ಧತಿಯಿಂದ ತಯಾರಿಸಿದುವುಗಳನ್ನು ಪ್ರಮಾಣದಲ್ಲಿಯೂ ಪ್ರಯೋಜನದಲ್ಲಿಯೂ ಮೀರಿಸಿದ್ದಾರೆ.

ಈ ಪದ್ಧತಿಯು ಹೊರಗಿನ ಹುಳುಹುಪ್ಪಡಿಗಳ ಹಾವಳಿಯನ್ನೂ ಒಳಗಿನಿಂದ ಹುಟ್ಟಿಬರುವ ಕೀಟಕಗಳ ಮತ್ತು ರೋಗಗಳ ಉಪದ್ರವವನ್ನೂ ತಪ್ಪಿಸುವುದಲ್ಲದೆ, ಬೆಳೆ ಕುಯ್ಯುವ ಮತ್ತು ಒಟ್ಟುವ ಕೆಲಸವನ್ನು ಹಗುರಾಗಿಸುತ್ತದೆ; ಅಲ್ಲದೆ, 'ಹಸಿರುಮನೆ (Greenhouses)' ಗಳಲ್ಲಿ ಕೃತ್ರಿಮಶಾಖದ ರಾಸಾಯನಿಕ ಜಲದಿಂದ ಬೆಳೆಸಿದಾಗ, ವರ್ಷದ ತುಂಬೆಲ್ಲಾ ಬೇರೆಬೇರೆ ಸುಗ್ಗಿಯ ಬೆಳೆಗಳನ್ನು ತೆಗೆದುಕೊಳ್ಳಬಹುದಾಗಿದೆ. ಒಂದೇ ಕ್ಷೇತ್ರದಲ್ಲಿ ಸರತಿಯಿಂದ ಬೆಳೆಯುವುದೂ ಇದರಿಂದ ತಪ್ಪುತ್ತದೆ; ಏಕೆಂದರೆ ಇಲ್ಲಿ ಬೀಳಾಗಲು ಮಣ್ಣೇ ಇರುವುದಿಲ್ಲ. ಮತ್ತು ಆಯಾ ಸಸ್ಯಗಳಿಗೆ ಬೇಕಾಗುವ ರಾಸಾಯನಿಕ ಗೊಬ್ಬರವನ್ನು ಬೇಕಾದ ಪ್ರಮಾಣದಲ್ಲಿ ನೀರಿನಲ್ಲಿ ಬೆರಸಲು ಬರುವುದು.

ಈ ಜಲಕೃಷಿಗೆ ಬೇಕಾಗುವ ಸಲಕರಣೆಗಳೆಂದರೆ, ಹೂಜೆಗಳು, ಇಲ್ಲವೆ ನೀರು ಸೋರದಂತೆ ಮಾಡಿದ (ಎಂಟಿಂಚು ಆಳವಿರುವ) ಪಾತ್ರಗಳು; ಇವುಗಳ ಮೇಲೆ ಸಸಿಗಳು ನಿಲ್ಲುವಂತೆ ಒಂದು ಆಧಾರ,—ಸಾಮಾನ್ಯವಾಗಿ ಒಂದು ತಂತಿಯ ಜಾಳಿಗೆ, ಅದರ ಮೇಲೆ ಎಕ್ಸೆಲ್ಸಿಯರದ ಮತ್ತು ಕರಗಸದಿಂದುದುರುವ ಕಟ್ಟಿಗೆಯ ಪುಡಿಯ ಎರಡು ಮೂರು ಇಂಚಿನ ಒಂದು ತರ. ಕೆಳಗಿನ ಪಾತ್ರಗಳಲ್ಲಿ ೬ ಇಂಚೆತ್ತರ ನೀರನ್ನು ತುಂಬಿ, ಒಳಗೆ ಪೋಷಕ ರಾಸಾಯನಿಕ ಕ್ಷಾರಗಳಿಂದ ತುಂಬಿದ ಒಂದು ಸೀಸೆಯನ್ನಿಡುವರು. ಈ ಕ್ಷಾರಗಳಿಗೆ Fertilizing Units ಎಂದೆನ್ನುವರು. ಈ ಕ್ಷಾರಗಳು ಅತಿಸಾವಕಾಶವಾಗಿ ನೀರಿನಲ್ಲಿ ಕರಗುತ್ತಿರುವಂತೆಯೂ, ತೀರಿದಾಗ ಮತ್ತೆ ತುಂಬಿಡುವಂತೆಯೂ, ವ್ಯವಸ್ಥೆ ಮಾಡಲ್ಪಟ್ಟಿರುವುದು. ಸಸಿಗಳ ತಾಯಿಬೇರು (Feeder roots) ಗಳಷ್ಟೇ ರಾಸಾಯನಿಕ ಮಿಶ್ರಣವನ್ನು ಪ್ರವೇಶಿಸುವವು.

ಕೃತ್ರಿಮ ಶಾಖವು ಬೇಕಾದಾಗಲೆಲ್ಲಾ, ಡಾ. ಗೆರಿಕ್ಕರು ಮಣ್ಣು ಕಾಯಿಸುವ ವಿದ್ಯುತ್ತಿನ ಕೇಬಲ್ಲುಗಳನ್ನು (ಹುರಿಗಳನ್ನು) ಪಾತ್ರಗಳ ತಳದಲ್ಲಿರಿಸಿ ಕಾವು ಹುಟ್ಟಿಸುವರು. ಫ್ಯಾರೆನ್‌ಹೈಟದ ೬೫ರಿಂದ ೭೫ ಅಂಶಗಳ ವರೆಗೆ ಉಷ್ಣತಾಮಾನವು ಇರುವಂತೆ ಈ ಯೋಜನೆಯನ್ನು ಮಾಡಲಾಗಿದೆ. ಈ ವ್ಯವಸ್ಥೆಯಿಂದ ಎಲ್ಲಾ ಬೇರುಗಳಿಗೂ ಅಷ್ಟೇ ಉಷ್ಣತೆ ಹತ್ತುವುದು. ಈ 'ಜಲಕೃಷಿ ಪಾತ್ರ' ಗಳನ್ನು ಡಾ. ಗೆರಿಕ್ಕರು ಎಲ್ಲಾ ಕಡೆ,—ಹೊಲ, 'ಹಸಿರುಮನೆ', ಇರುವ ಮನೆ, ಗಚ್ಚಿನ ಮಾಳಿಗೆಯಲ್ಲಿ ಕೂಡಾ ಇಟ್ಟು ಪ್ರಯೋಗವನ್ನು ಯಶಸ್ವಿಗೊಳಿಸಿರುವರು.

'Agricultural Engineering' ಪತ್ರಿಕೆಯಲ್ಲಿ ಬಣ್ಣಿಸಲ್ಪಟ್ಟ ಅವರ ಪ್ರಯೋಗವು ಟೊಮ್ಯಾಟೊಗಳಿಗೆ ಸಂಬಂಧಿಸಿತ್ತು. ಮೂರು ವಾರದ ಬೆಳೆಗೆಯ (ಮಣ್ಣಿನಲ್ಲಿ ಹುಟ್ಟಿದ) ಸಸಿಗಳನ್ನು ಮೇಲೆ ವಿವರಿಸಿದಂತೆ ಪಾತ್ರಗಳಲ್ಲಿಡಲಾಯಿತು. ಶಾಖಕೊಟ್ಟ ಕೆಲವು ಪಾತ್ರಗಳೊಳಗಿನ ಬೆಳೆಗಳು ೨೫ ಫೂಟು ಎತ್ತರವಾಗಿದ್ದುವು. ಪ್ರತಿ ಚೌರಸ ಫೂಟಿಗೆ ೧೦ರಿಂದ ೧೪ ಪೌಂಡು ಬೆಳೆ ಬಂದಿತು. ಎಂದರೆ ಒಂದು ಎಕರೆಗೆ ೨೧೭ ಟನ್ನಿನಷ್ಟು—ಮಣ್ಣಿನಲ್ಲಿ ಬೆಳೆದುದರ ಸರಾಸರಿ ೪೩ ಪಟ್ಟು—ಎನ್ನಬಹುದು.

ಈ ವರೆಗೆ ಡಾ. ಗೆರಿಕ್ಕರು ಬೇರೆಬೇರೆ ನೂರು ಬೆಳೆಗಳನ್ನು ಯಶಸ್ವಿಯಾಗಿ ಬೆಳೆದಿರುವರು. ಅವರು ಬೆಳೆದ ಬಟಾಟೆಗಳು ಒಂದೆಕರೆಗೆ ೨,೪೬೫ ಬುಶೆಲ್ಲುಗಳಾಗಿದ್ದುವು (ಅಮೆರಿಕೆಯಲ್ಲಿ ಒಂದೆಕರೆಗೆ ಬಟಾಟೆ ಸರಾಸರಿ ೧೧೭ ಬುಶೆಲ್ ಬೆಳೆಯುತ್ತದೆ). ಅವರ ತಂಬಾಕ ೨೦ ಅಡಿ ಎತ್ತರವಾಗಿತ್ತು; ಅದೇ ಪ್ರಮಾಣದಲ್ಲಿ ಎಲೆಗಳೂ ದೊಡ್ಡವಾಗಿದ್ದುವು. ಬಟಾಟೆಗಳಂತಹ ಬೆಳೆಯನ್ನು ಆರಿಸುವುದೂ ಬಲು ಸುಲಭ; ಹುಳುತಿನ್ನದೆ ಹಸನಾಗಿದ್ದುವುಗಳನ್ನು ಆರಿಸುವುದಷ್ಟೆ ಮಾಡಬೇಕಾದ ಕೆಲಸ.

ದೊಡ್ಡ ಪ್ರಮಾಣದಲ್ಲಿ ವ್ಯಾಪಾರೀ ದೃಷ್ಟಿಯಿಂದ ಬೆಳೆಯುವುದಕ್ಕೆ ಮತ್ತು ಪ್ರತಿ ಬೆಳೆಯ ವಿಶಿಷ್ಟ ಗುಣಧರ್ಮಗಳಿಗನುಸಾರವಾಗಿ ಬೇಕಾಗುವ ರಾಸಾಯನಿಕ ದ್ರವ್ಯಗಳ ಪ್ರಮಾಣಗಳನ್ನು ಡಾ. ಗೆರಿಕ್ಕರು ಇನ್ನೂ ಪ್ರಕಟಪಡಿಸಿಲ್ಲ. ಈಗ ಉಪಯೋಗಿಸಲಾದ ರಾಸಾಯನಿಕ ದ್ರವ್ಯಗಳು ಅಲ್ಪ ಬೆಲೆಯವೂ ದೊಡ್ಡದೊಡ್ಡ ರಾಸಾಯನಿಕ ಉದ್ಯೋಗ

CC-0. Jangamwadi Math Collection. Digitized by eGangotri

ಶಾಲೆಗಳಲ್ಲಿ ಹುಟ್ಟಿತಕ್ಕಂತಹವೂ ಆಗಿರುತ್ತವೆಂದು ತಿಳಿಯುತ್ತದೆ.

ಜನಸಂಖ್ಯೆ ಮಿತಿಮೀರಿ ಬೆಳೆದು, ಸಾಗುವಳಿಗೆ ಕ್ಷೇತ್ರವು ಕಡಿಮೆಬೀಳುತ್ತಿರುವಲ್ಲಿ, ಈ ಪ್ರಯೋಗದಿಂದ ಅದ್ಭುತ ಪ್ರಯೋಜನವಾಗುವುದರಲ್ಲಿ ಸಂಶಯವಿಲ್ಲ.

—THE MYSORE ECONOMIC JOURNAL

**ಅಶೋಕನ ಪರರಾಷ್ಟ್ರೀಯ ಪ್ರಚಾರಕರು**

ಪ್ರಸಿದ್ಧ ವಿದ್ವಾಂಸರೂ ಚರಿತ್ರಕಾರರೂ ಅಶೋಕಕಾಲೀನ ಇತಿಹಾಸದ ಸಂಶೋಧಕರೆಂದು ಹೆಸರುಪಡೆದವರೂ ಆದ ಡಾ. ರಾಧಾಕುಮುದ ಮುಕರ್ಜಿಯವರ ಲೇಖನದ ಸಾರಸಂಗ್ರಹ:—

'ಪಶ್ಚಿಮದ ನವವಿಚಾರಗಳ ಆಂದೋಲನದ ಮೇಲೆ ಬೌದ್ಧಮತವು ತನ್ನ ಅಡಿವಣಿಗೆಗಳನ್ನು ಮೂಡಿಸದೆ ಇಲ್ಲ' ವೆಂದು ವಿನ್ಸೆಂಟ್ ಸ್ಮಿತ್ತರೆ ಹೇಳುವರು. ಅಪರಾಧ ನಿವೇದನೆ (Confession), ಉಪೋಷಣೆ, ಧರ್ಮೋಪದೇಶಕರ ಬ್ರಹ್ಮಚರ್ಯ, ಜಪಮಾಲೆಗಳ ಉಪಯೋಗ— ಇವುಗಳನ್ನು ಕ್ರಿಸ್ತಮತವು ಬೌದ್ಧರಿಂದಲೆ ಸ್ವೀಕರಿಸಿತೆಂದು ಮೋಕ್ಷಮುಲ್ಲರ ಭಟ್ಟರು (ಮ್ಯಾಕ್ಸ ಮುಲ್ಲರರು) ಹೇಳಿರುವರು. ಇದೇ ರೀತಿ ಹಲವು ಕ್ರಿಸ್ತಪೂರ್ವ ಮತಗಳ ಮೇಲೂ ಬೌದ್ಧಧರ್ಮವು ತನ್ನ ಪ್ರಭಾವವನ್ನು ಬೀರದೆ ಇರಲಿಲ್ಲ.

ಈ ವಿಚಾರಪ್ರಸಾರದ ಕಾರ್ಯವು ಹೆಚ್ಚಾಗಿ ಅಶೋಕ ಸಮ್ರಾಟನ ಕಾಲದಲ್ಲಿಯೆ (ಕ್ರಿ. ಪೂ. ೨೭೪ರಿಂದ ೨೩೨) ಆಯಿತು. ಇದಕ್ಕೆ ಆಧಾರಗಳೆಂದರೆ, ತಾಡವಾಲೆಯ ಗ್ರಂಥಗಳು, ಶಿಲಾಲೇಖಗಳು ಮತ್ತು ದಂತಕಥೆಗಳು. ಆವನು ಬೇರೆಬೇರೆ ಕಡೆ ನಿಲ್ಲಿಸಿದ ಮೂರು (೨, ೬ ಮತ್ತು ೧೩ನೆಯ) ಶಿಲಾಸ್ತಂಭ ಲೇಖಗಳಲ್ಲಿ ಇದರ ಉಲ್ಲೇಖವು ದೊರೆಯುತ್ತದೆ. ಆತನು ಯಾವ ಯಾವ ಪ್ರದೇಶಗಳಿಗೆ ಮತ್ತು ಜನಾಂಗಗಳಿಗೆ ತನ್ನ ಧರ್ಮಪ್ರಚಾರಕರನ್ನು ಕಳಿಸಿದ್ದನೆಂಬುದು ಇವುಗಳಿಂದ ತಿಳಿದುಬರುವುದು:—

(೧) ಚೋಳರು, ಪಾಂಡ್ಯರು, ಸತಿಯಪುತ್ರರು, ಕೇರಲಪುತ್ರರು ಮತ್ತು ದಕ್ಷಿಣದ ತಾಮ್ರಪರ್ಣಿ (ಸಿಂಹಲದ್ವೀಪ);

(೨) ವಾಯುವ್ಯ ಗಡಿನಾಡಿನ ಯೋನರು, ಮತ್ತು ಗಾಂಧಾರರು;

(೩) ಅಪರಾಂತದ (ಪಶ್ಚಿಮ ಭಾರತದ) ರಾಷ್ಟ್ರಿಕರು, ಪಿತೀನಿಕರು ಮತ್ತು ಬೇರೆ ಜನಾಂಗಗಳು;

(೪) ಗಡಿನಾಡಿನವರಾದ 'ಅಂತ'ರ ೬೦೦ ಯೋಜನ ವಿಸ್ತೀರ್ಣ ಪ್ರದೇಶವು;

(೫) ಕೆಳಗಿನ ರಾಜರಿಂದ ಆಳಲ್ಪಡುವ ೫ ಹೆಲೆನಿಸ್ಟಿಕ್ ಸಂಸ್ಥಾನಗಳು ಹಾಗೂ ದೇಶಗಳು:—

ಅ) ಆಂಟಿಕೊಸ್ II ಸಿರಿಯಾದ ಥಿಯೊಸ್ (ಕ್ರಿ. ಪೂ. ೨೬೧—೨೪೬)

ಆ) ಟೊಲೆಮಿ II ಇಜಿಪ್ತದ ಫಿಲಾಡೆಲ್ಫೊಸ್ (ಕ್ರಿ. ಪೂ. ೨೮೫—೨೪೭)

ಇ) ಮ್ಯಾಸಿಡೋನಿಯದ ಆಂಟಿಗೊನಾಸ್ ಗೊನಾಟಾಸ್ (ಕ್ರಿ. ಪೂ. ೨೭೮—೨೩೯)

ಈ) ಪಶ್ಚಿಮ ಇಜಿಪ್ತದ ಮಾಗಾಸ್ (ಕ್ರಿ. ಪೂ. ೩೦೦—೨೮೫) ಮತ್ತು

ಉ) (ಎಪಿರಸದ?) ಅಲೆಕ್ಸಾಂಡರ್ (ಕ್ರಿ. ಪೂ. ೨೭೨—೨೫೮)

ಇದು ಬಹಳ ಮಹತ್ವದ ಆಧಾರವು. ಈ ಎಲ್ಲ ಅರಸರೂ ಕ್ರಿ. ಪೂ. ೨೫೮ರ ವರೆಗೆ ಜೀವಿಸಿದ್ದುದರಿಂದ, ಅಶೋಕನ ಪರರಾಷ್ಟ್ರೀಯ ಧರ್ಮೋಪದೇಶಕರು ದೂರದೂರದ ಪಶ್ಚಿಮದ ದೇಶಗಳಲ್ಲಿ ಧರ್ಮಪ್ರಸಾರವನ್ನು ಮಾಡುತ್ತಿದ್ದರೆಂದು ನಿರ್ವಿವಾದವಾಗಿ ಹೇಳಬಹುದು.

ಇನ್ನು ಇವರ ಪ್ರಚಾರಕಾರ್ಯದ ಸ್ವರೂಪವನ್ನು ಅರಿತುಕೊಳ್ಳುವಾ. ೨ನೆಯ ಶಿಲಾಸ್ತಂಭದ ಬರಹದ ಮೇರೆಗೆ, ಇದು ಲೋಕೋಪಕಾರದ ಕಾರ್ಯವಾಗಿದ್ದಿತು. ಮನುಷ್ಯನಿಂದ ಮೂಕಪ್ರಾಣಿಗಳ ವರೆಗೆ ಎಲ್ಲರಿಗೂ, ಚಿಕಿತ್ಸೆಯಿಂದ (ಔಷಧೋಪಚಾರದಿಂದ), ಔಷಧಸಾಹಿತ್ಯ-ಗಿಡಮೂಲಿಕೆಗಳೇ ಮೊದಲಾದುವುಗಳ ಪೂರೈಕೆಯಿಂದ, ತಕ್ಕ ವೈದ್ಯರ ಸನ್ನಾಹದೊಂದಿಗೆ ದುಃಖಪರಿಹಾರವನ್ನೊದಗಿಸುವುದು ಇದರ ಮುಖ್ಯಾಂಶವು. ೫ನೆಯ ಶಿಲಾಸ್ತಂಭದ ಮೇರೆಗೆ ಶಾರೀರಿಕ ದುಃಖಪರಿಹಾರದ ಜೊತೆಗೆ ನೀತಿಮಾರ್ಗ ಬೋಧನೆಯೂ ಕೊಡಲಾಗುತ್ತಿತ್ತು. 'ಧರ್ಮಸ್ಥಾಪನೆ-ಧರ್ಮಪ್ರಸಾರ' ಗಳೂ ದೈಹಿಕ ದುಃಖಪರಿಹಾರದೊಡನೆ ಸೇರಿದುವು.

ಎಲ್ಲಾ ರಾಷ್ಟ್ರಗಳೂ ಎಲ್ಲಾ ಜನಾಂಗಗಳೂ ಎಲ್ಲಾ ಜಾತಿಮತಗಳೂ ಈ ಬೋಧನೆಗೆ ಪಾತ್ರವಾಗಿದ್ದುವು. ಭಾರತೀಯ-ಪರದೇಶೀಯ, ಹಿಂದು-'ಯೋನ' ಎಂಬ ಭೇದವಿರಲಿಲ್ಲ. "ಯತಿಗಳು, ಗೃಹಸ್ಥರು, ಸೈನಿಕರು, ಸೇನಾಪತಿಗಳು, ಮತಪಂಥಗಳು" ಎಲ್ಲರಲ್ಲಿಯೂ ಈ ಧರ್ಮಪ್ರಸಾರ ಕಾರ್ಯವು ಸಾಗಿದ್ದಿತು (೫ನೆಯ ಶಿಲಾಸ್ತಂಭ). ಬಡಬಗ್ಗರು-ಊನದೀನರು ಈ ಪ್ರಚಾರಕರ ಕರುಣೆಗೆ ಪಾತ್ರರಾಗಿದ್ದರು. ಅಗತ್ಯವಿದ್ದಾಗ ಕಾನೂನಿನ ಬಿಗುಹನ್ನು

CC-0. Jangamwadi Math Collection. Digitized by eGangotri

ಸಡಲಿಸಿ ದಯೆಯ ನೀರೆರೆಯಲೂ ಇವರು ಅಧಿಕೃತರಾಗಿದ್ದರು. ೧೩ನೆಯ ಶಿಲಾಸ್ತಂಭದ ಲೇಖನದಲ್ಲಿ, ಶಾರೀರಿಕ ನೈತಿಕ ದುಃಖವಿಮೋಚನಾತ್ಮಕವಾದ ಈ ಸಮಾಜಸೇವಾ ಯೋಗವನ್ನು ವಿಸ್ತರಿಸಿ, ಅದನ್ನು 'ಧರ್ಮವಿಜಯ' ಎಂದು ಹೆಸರಿಸಲಾಗಿದೆ. ಅಹಿಂಸೆಯಿಂದ ಜನಗಳನ್ನು ನೀತಿ ಮಾರ್ಗಕ್ಕೆ ಹಚ್ಚುವುದೇ ಇದು. "ತನ್ನ ಸ್ವಾಮಿತ್ವದ ನಾಡುಗಳಲ್ಲಿಯಷ್ಟೇ ಅಲ್ಲ, ತನ್ನ ಎಲ್ಲ ಗಡಿನಾಡುಗಳ ಪ್ರಜೆಗಳಲ್ಲಿಯೂ ಮೇಲೆ ಹೇಳಿದ ೫ ಪಶ್ಚಿಮದ ಅರಸುಗಳ ರಾಷ್ಟ್ರಗಳಲ್ಲಿಯೂ" ಈ ಧರ್ಮವಿಜಯವನ್ನು ಬಾರಿಬಾರಿಗೆ ಗೈಯಲಾಗಿದೆಯೆಂದು ಅಲ್ಲಿ ಹೇಳಿದ್ದಾನೆ. "ನನ್ನ ಪ್ರಚಾರಕರು ಹೋಗದ ಎಡೆಗಳಲ್ಲಿಯೂ ಬರಿ ಕೇಳಿಕೆಯಿಂದಲೂ ನನ್ನ ತತ್ವಗಳ ಪ್ರಚಾರವಾಗುತ್ತಿದೆ" ಯೆಂದು ಅದೇ ಸ್ತಂಭ ಲೇಖನದಲ್ಲಿ ಮತ್ತೆ ಹೇಳಿದ್ದಾನೆ. ಕ್ರಿ. ಪೂ. ೨೫೮ರ ವರೆಗೂ ಅಶೋಕನ ಧರ್ಮಪ್ರಸಾರ ಸಂಸ್ಥೆಗಳು ಪಾಶ್ಚಾತ್ಯ ದೇಶಗಳಲ್ಲಿ ವಿಜೃಂಭಿಸುತ್ತಿದ್ದುವೆಂದು ಇದರಿಂದ ಹೇಳಬಹುದು.

ಇವುಗಳ ಉದ್ದೇಶವೇನಿದ್ದಿತು? ಪಡಿಯಚ್ಚಿನ ಮತಪಂಥಗಳ ಪ್ರಚಾರವಲ್ಲ. ಹಿಂದೂ ದೇವದೇವತೆಗಳ ರಫ್ತು ವ್ಯಾಪಾರವಲ್ಲ. 'ಧರ್ಮವಿಜಯ'—ಜಗತ್ತಿನಲ್ಲೆಲ್ಲ ಶಾಂತಿ, ಮಾನವ ಮಾನವರಲ್ಲಿ ಸುಪ್ರೀತಿ, ಕತ್ತಿಗಿಂತ ಸತ್ಯದ ಹೆಚ್ಚಳವನ್ನು ಹೇಳುವುದು—೪ನೆಯ ಸ್ತಂಭಲೇಖನದ ಮಾತುಗಳನ್ನೆತ್ತಿ ಹೇಳುವುದಾದರೆ 'ಭೇರಿಘೋಷಕ್ಕಿಂತ ಧರ್ಮಘೋಷ ಹಿರಿದಾದುದೆ'ಂದು ಸಾರುವುದು.

ಅಶೋಕನು ಬೇರೆಬೇರೆ ದೇಶಗಳಿಗೆ ಬೇರೆಬೇರೆ ಧರ್ಮೋಪದೇಶಕರನ್ನು ಕಳುಹಿ, ಬೇರೆಬೇರೆ ರಾಷ್ಟ್ರಗಳಿಗಾಗಿ ಬೇರೆಬೇರೆ ಧರ್ಮಬೋಧನೆಗಳನ್ನು ಆರಿಸಿದ್ದನು. ಆದರಿವು ವಿಶಿಷ್ಟಮತದ ಪ್ರಸಾರವಾಗಿರದೆ, ಬೌದ್ಧನೀತಿ, ಬೌದ್ಧಜೀವನ, ಬೌದ್ಧಬೋಧೆಗಳನ್ನು ಪ್ರಚುರಪಡಿಸುವುದಕ್ಕಾಗಿ ಇದ್ದುವು.

ತನ್ನ ಸ್ತಂಭಗಳಲ್ಲಿ ಅವನು ಕೊರೆಯಿಸಿದ ವಿವಿಧ ಬೌದ್ಧ ಧರ್ಮಗ್ರಂಥಗಳಲ್ಲಿಯ ನೀತಿಸೂತ್ರಗಳನ್ನು ನೋಡಿದರೆ ಅವನ ಮನಸ್ಸಿನ ರಚನೆಯು ಯಾವ ರೀತಿಯದಾಗಿತ್ತೆಂಬುದು ತಿಳಿದುಬರುವುದು. ಸಂನ್ಯಾಸ—ಆಧ್ಯಾತ್ಮ ಜೀವನಗಳ ಕಡೆ ಒಲವು, ಮತಮತಾಂತರಗಳ ವಿಧಿನಿಯಮಗಳಲ್ಲಿ ನಿರುತ್ಸಾಹ, ಸಂಘದ ಸಾಮುದಾಯಿಕ ಮತಜೀವನದ ಬದಲು ಏಕಾಂತಿಕ ವೈಯಕ್ತಿಕ ತತ್ವನಿದಿಧ್ಯಾಸದಲ್ಲಿ ಆಸಕ್ತಿ—ಎಂಬಿವೆ ಆ ನಿದರ್ಶನೆಗಳಾಗಿದ್ದುವು. ಎಲ್ಲ ಮತಗಳವರಿಗೂ ಸಾಮಾನ್ಯವಾದ ನೀತಿಯ ನೆಲಗಟ್ಟನ್ನು ಅರಸಿ, ಅರುಹುವುದೇ ಅವನ ಪರರಾಷ್ಟ್ರೀಯ ಧರ್ಮ ಪ್ರಸಾರದ ಉದ್ದೇಶವಾಗಿದ್ದಿತು.

—The Aryan Path

### ಅನಾಗರಿಕರ ನಾಣ್ಯಗಳು

ಸುಧಾರಿಸಿದ ರಾಷ್ಟ್ರಗಳು ವಿವಿಧ ಧಾತುಗಳ ನಾಣ್ಯಗಳನ್ನು ಉಪಯೋಗಿಸುತ್ತಿವೆ. ಆದರೆ ನವನಾಗರಿಕತೆಯ ಗಾಳಿ ತಗಲದ ಹಲವು ಪ್ರದೇಶಗಳಲ್ಲಿ ನಾಣ್ಯದ ಬದಲು ಹಲವು ವಿಚಿತ್ರ ವಸ್ತುಗಳನ್ನು ಅದೇ ಪ್ರಯೋಜನಕ್ಕಾಗಿ ಈಗಲೂ ಉಪಯೋಗಿಸುತ್ತಿರುವರು. ಪ್ಯಾಸಿಫಿಕ್ ನಡುಗಡ್ಡೆಗಳಲ್ಲಿಯ ಕಾಡುಜನಾಂಗಗಳ ನಾಣ್ಯಪ್ರಕಾರಗಳು ತುಂಬಾ ಮನೋರಂಜಕವಾಗಿವೆ.

ನಾವುಗಳು ಬಳಸುವ ಹಣವು (ಅದು ನಾಣ್ಯರೂಪದಲ್ಲಿರಲಿ, ನೋಟುಗಳ ರೂಪದಲ್ಲಿರಲಿ) ಒಂದೇ ಜೇಬಿನಲ್ಲಿ, ಒಂದೇ ರೊಕ್ಕದ ಚೀಲದಲ್ಲಿ ಬೇಕಾದಷ್ಟು, ಬೇಕಾದತ್ತ ಒಯ್ಯಲು ಬರುವಂತಿದೆ. ಎಂತಲೇ ಕಳೆದುಹೋಗುವ ಸಂಭವವೂ ಇದೆ. ಆದರೆ ಮಧ್ಯ ಪ್ಯಾಸಿಫಿಕ್ ಮಹಾಸಾಗರದ 'ಯಾಪ್' ದ್ವೀಪದಲ್ಲಿ ನೆಗಹಲು ಬಾರದ, ಸರಿಸಲು ಬಾರದ ಭಾರವಾದ ನಾಣ್ಯಗಳು ಪ್ರಚಾರದಲ್ಲಿವೆ. ಒಂದೊಂದನ್ನು ಕೂಡ ಒಯ್ಯಲು ಬರುವಂತಿಲ್ಲ. ಅವು ಇಷ್ಟು ದೊಡ್ಡವಿವೆಯಲ್ಲ—ಅವು ಕಳೆಯುವುದೇ ಇಲ್ಲ.

ಅನಾದಿಕಾಲದಿಂದ 'ಯಾಪ್' ದ್ವೀಪನಿವಾಸಿಗಳು ಬಿರುಸಾದ ಬಂಡೆಗಲ್ಲಿನ ದೊಡ್ಡದೊಡ್ಡ ವರ್ತುಲ ಫಲಕಗಳನ್ನು ಹಣವಾಗಿ ಉಪಯೋಗಿಸುತ್ತಿದ್ದಾರೆ. ಅವುಗಳ ವ್ಯಾಸ ೮ರಿಂದ ೧೨ ಅಡಿಯಿದ್ದು, ದಪ್ಪ ೬ರಿಂದ ೮ ಅಂಗುಲಿ ಇರುತ್ತದೆ. ಪೆಲಾವ್ ದ್ವೀಪದಲ್ಲಿ ಅವನ್ನು ಒಡೆದು ತೆಗೆದು, ದೊಡ್ಡದೊಡ್ಡ ತೆಪ್ಪಗಳ ಮೇಲೆ ಹೇರಿ, ದೋಣಿಗಳಿಂದೆಳೆದು ತರುತ್ತಾರೆ. ಕೆಲಕೆಲ ದೊಡ್ಡ ನಾಣ್ಯಗಳು ೩/೪ ಟನ್ನಿನಷ್ಟು ಭಾರವಾಗಿದ್ದು, ಅವಕ್ಕೆ ನಡುವೆ ತೂತು ತೆಗೆದು ಅದರಲ್ಲಿ ಕೋಲು ಹಾಯಿಸಿ, ಗಾಲಿಯಂತೆ ಓಡಿಯಾಡಿಸುವರು. ಒಂದೊಂದು ನಾಣ್ಯ ಒಯ್ಯಲು ಎರಡೆರಡು ಗಂಡಾಳು ಬೇಕಾಗುವವು.

ಈ ನಾಣ್ಯಗಳಿಗೆ 'ಫೆಯಿ' ಎಂದು ಹೆಸರು. ಗೇಣುಗಳ ಲೆಕ್ಕದಿಂದ ಇವುಗಳ ಬೆಲೆಯನ್ನು ಸ್ಥಿರಪಡಿಸಿರುವರು. ೧೨ ಅಡಿ ವ್ಯಾಸವುಳ್ಳ ಅತಿದೊಡ್ಡ ನಾಣ್ಯದ ಬೆಲೆಯು ೩೦ ಪೌಂಡುಗಳಷ್ಟಾಗುತ್ತದೆ. "ಚಿಲ್ಲರೆ" ಗಾಗಿ ಅಲ್ಲಿಯವರು

CC-0. Jangamwadi Math Collection. Digitized by eGangotri

ಸಣ್ಣ ಚಿಪ್ಪಿನ ಲಕಲಕಿಸುವಂತೆ ತಿಕ್ಕಿದ ತುಂಡುಗಳನ್ನು ಉಪಯೋಗಿಸುತ್ತಾರೆ. ಶ್ರೀಮಂತರು ಸಾಧಾರಣವಾಗಿ ದೊಡ್ಡ ಶಿಲಾಫಲಕಗಳನ್ನೆ ಬಯಸುತ್ತಾರೆ; ಯಾಕೆಂದರೆ ಅವು ಕಳವಾಗುವುದಿಲ್ಲ. ಇವನ್ನು ಮನೆಯಲ್ಲಿ ಒಟ್ಟುವುದಂತೂ ಅಸಾಧ್ಯವೇ; ಆದುದರಿಂದ ಹಲವು ಜನ ಧನವಂತರು ತಮ್ಮ ಮನೆಗೆ ಇವುಗಳದೊಂದು ಬೇಲಿಮಾಡಿ, ತಮ್ಮ ಶಿಲಾಸಂಪತ್ತನ್ನು ಪ್ರದರ್ಶಿಸುವರು !

ಸಾಲೊಮನ್ ದ್ವೀಪಗಳಲ್ಲಿ ನಾಯಿ-ಹೆಮ್ಮೀನುಗಳ ಹಲ್ಲುಗಳನ್ನು ನಾಣ್ಯವಾಗಿ ಉಪಯೋಗಿಸುವರು. ಒಬ್ಬ ಸುಧಾರಿಸಿದ ಜಾತಿಯ ವರ್ತಕನೊಬ್ಬ ಇಲ್ಲಿಯ ಮೂಲ ನಿವಾಸಿಗಳನ್ನು ಮೋಸಗೊಳಿಸಹೋಗಿ ತಾನೇ ಪೆಟ್ಟು ತಿಂದ ಕತೆಯೊಂದಿದೆ. ನಾಣ್ಯದ ಹಲ್ಲುಗಳಂತೆಯೇ ಕಾಣುವ ಚೀನೀಮಣ್ಣಿನ ಹಲ್ಲುಗಳನ್ನು ಅವನು ಮಾಡಿಸಿಕೊಂಡು ಹೋದ. ಯಾವ ತಪ್ಪೂ ತೆಗೆಯುವಂತಿರಲಿಲ್ಲ—ಅಷ್ಟು ತದ್ರೂಪವಾಗಿದ್ದವು. ಮುಂಚಿನ ವ್ಯಾಪಾರದ ಸಂಬಂಧಗಳ ಮೂಲಕ ಅವರು ಅವನನ್ನು ವಿಶ್ವಾಸದಿಂದ ಬರಮಾಡಿಕೊಂಡರು. ಮುತ್ತುಗಳಿಗೆ ವಿನಿಮಯವಾಗಿ ಅವನ್ನು ಅವರ ನಾಯಕನಿಗೆ ಕೊಟ್ಟಕೂಡಲೆ, ಅವರ ಮುಖಮುದ್ರೆಗಳೆ ಬದಲಾದುವು. ನಾಣ್ಯಪರೀಕ್ಷೆಯಲ್ಲಿ ಅವರು ತುಂಬಾ ಚತುರರು. ಇದು ಜೀವಂತ ಪ್ರಾಣಿಯ ಹಲ್ಲು, ಇದು ಸತ್ತುದರ ಹಲ್ಲು ಎಂದು ಅವರು ಬರಿ ದೃಷ್ಟಿಕ್ಷೇಪದಿಂದ ಕಂಡುಹಿಡಿಯಬಲ್ಲರು. ಈ ವರ್ತಕನು ಕೊಟ್ಟವು ಖೊಟ್ಟಿಯೆಂದು ಆ ನಾಯಕನಿಗೆ ಕೂಡಲೆ ತಿಳಿಯಿತು. ಇನ್ನಿಷ್ಟು ಒರೆಗೆ ಹಚ್ಚಬೇಕೆಂದು ಕಡಿದು ತಿನ್ನಲು ತೊಡಗಿದೊಡನೆ, ವರ್ತಕನು ಪಲಾಯನ ಹೇಳಿ ದೋಣಿಯನ್ನು ಮುಟ್ಟಲು ಯತ್ನಿಸಿದ. ಸ್ವಲ್ಪ ದೂರ ಹೋಗುವುದರಲ್ಲಿಯೆ, ಎಸೆದ ಬರ್ಚಿಯೊಂದು ಅವನ ಎಡಹೆಗಲಿನಲ್ಲಿ ನೆಟ್ಟಿತು. ತನ್ನ ಹಿಂಬಾಲಿಗರೊಂದಿಗೆ ನಾಯಕನು ಬಂದು ಹಿಡಿಯುವುದರೊಳಗೆ ಈತ ತನ್ನ ದೋಣಿ ಮುಟ್ಟಿ ಪಾರಾದ; ಆದರೆ ಆ ನೆನಪನ್ನು ಜೀವಮಾನದಲ್ಲಿಯೂ ಮರೆಯಲಿಲ್ಲ.

ಇನ್ನು ಬೇರೆ ಕಡೆ ಬೇರೆಬೇರೆ ಪ್ರಾಣಿಗಳ ಹಲ್ಲುಗಳನ್ನು ನಾಣ್ಯವಾಗಿ ಬಳಸುತ್ತಾರೆ. ಫಿಜಿ ದ್ವೀಪದಲ್ಲಿ ತಿಮಿಂಗಲದ ಹಲ್ಲುಗಳು ಹೆಚ್ಚಿನ ಬೆಲೆಯ ನಾಣ್ಯಗಳಾಗಿವೆ. ಮತ್ತು ದೊಡ್ಡದೊಡ್ಡ ವ್ಯವಹಾರಗಳಲ್ಲಿಯೆ ಉಪಯೋಗಿಸಲ್ಪಡುತ್ತವೆ. ಹೆಂಡತಿಯನ್ನು ಪಡೆಯುವುದಕ್ಕೆ ಹಿಂಸ್ರಮೀನ (Shark) ದ ಹಲ್ಲುಗಳೆ ಬೇಕಾಗುತ್ತವೆ. ಅವುಗಳಿಗಾಗಿ ವರನು ಈ ಹಿಂಸ್ರಜಲಜಂತುಗಳನ್ನು ಬೇಟೆಯಾಡಲು ಈಸಬಿದ್ದು ಪ್ರಾಣವನ್ನು ಕಳೆದುಕೊಳ್ಳುವುದುಂಟು.

ವಿಶಿಷ್ಟ ಬಣ್ಣಗಳ ಚಿಪ್ಪಿನ ಹಣವನ್ನು ಉಪಯೋಗಿಸುವುದು ಪ್ಯಾಸಿಫಿಕ್ ದ್ವೀಪಗಳಲ್ಲೆಲ್ಲ ಸಾಮಾನ್ಯವಾದುದು. ಬಿಳಿಯವುಗಳನ್ನು ಸಾಮಾನ್ಯರೂ ಕೆಂಪುಗಳನ್ನು ತಂಡಗಳ ನಾಯಕರೂ ಉಪಯೋಗಿಸುವರು. ಸಾವುಕಾರರು ಚಿತ್ರದ ಗಾಲಿಗಳಿಗೆ ಅವನ್ನು ಹೊಲಿದು ದೊಡ್ಡದೊಡ್ಡ ಸಮಾರಂಭಗಳಲ್ಲಿ ಪ್ರದರ್ಶಿಸುವರು. ಬೇರೆ ದಿನಗಳಲ್ಲಿ ಒಂದು ಪ್ರತ್ಯೇಕವಾದ ಗುಡಿಸಲಿನಲ್ಲಿ ಬ್ಯಾಂಕಿನಲ್ಲಿಯಂತೆ ಭದ್ರವಾಗಿಡುವರು. ಇನ್ನು ಕೆಲಕಡೆ ಚಿಪ್ಪುಗಳ ಆಭರಣಗಳನ್ನು ಮಾಡಿ ತೋಳುಗಳಲ್ಲಿ ಕೊರಳುಗಳಲ್ಲಿ ಹಾಕಿಕೊಳ್ಳುವರು; ಅವುಗಳ ಸಂಖ್ಯೆಯಿಂದ ಶ್ರೀಮಂತನನ್ನು ಪತ್ತೆಹಿಡಿಯಬಹುದು.

ಇದಂತಿರಲಿ. ಪ್ಯಾಸಿಫಿಕ್ ದ್ವೀಪಗಳಲ್ಲಿ ಉಪಯೋಗಿಸಲ್ಪಡುವ ಇನ್ನೊಂದು ನಾಣ್ಯದ ಜಾತಿಯೆಂದರೆ ಫರ್ ಜಾತಿಯ ತುಪ್ಪುಳ, ಹಂದಿಗಳ ಬಾಲಗಳು ಮತ್ತು ಅಪರೂಪವಾಗಿ ಸಿಕ್ಕುವ ಪಕ್ಷಿಗಳ ಗರಿಗಳು. ಅವು ಕೆಡದಂತೆ ಒಲೆಗಳ ಮೇಲೆ ಕಟ್ಟಿಡುತ್ತಾರೆ. ಹೆಂಡತಿಯನ್ನು ಸಂಪಾದಿಸಲು ಸಾಂತಾಕ್ರೂಝುದಲ್ಲಿ ಇವನ್ನೆ ಕೊಡಬೇಕಾಗುವುದು.

ಇನ್ನೊಂದು ಈ ಕಡೆಯ ವಿಶೇಷವೆಂದರೆ, ಹೆಣ್ಣುಮಕ್ಕಳಿಗೆ ಹಣ ಬಳಸಲು ಅಧಿಕಾರವೇ ಇಲ್ಲ. ವಿವಾಹವಾಗಿದ್ದರೆ ಗಂಡ, ಅವಿವಾಹಿತೆಯರಿದ್ದರೆ ತಂದೆ, ಅವರಿಗೆ ಕೊಡಲಾದ ಹಣಕ್ಕೆ ಹಕ್ಕುದಾರನು.

ಪ್ಯಾಸಿಫಿಕ್ ದ್ವೀಪಗಳಲ್ಲಿಯ ಕೆಲ ಭಾಗಗಳಲ್ಲಿ ಹಣವೇ ಬುದನ್ನೆ ಉಪಯೋಗಿಸದಿರುವ ಜನಾಂಗಗಳಿವೆ. ಅಲ್ಲಿ ವ್ಯವಹಾರವು ವಿನಿಮಯದಿಂದಲೆ ಸಾಗುವದು. ತಮತಮಗೆ ಬೇಕಾದುದನ್ನು ಕೊಟ್ಟು-ಕೊಂಡು ವ್ಯಾಪಾರ ನಡಸುವರು.

—EMPIRE REVIEW

**ಕಿರುಕುಳ ಬಿಕರಿಯ ಅಂಗಡಿಗಳು**

ವ್ಯಕ್ತಿಗಳಷ್ಟು ಪ್ರಕೃತಿಗಳು ! ಒಬ್ಬರಿಗೆ ಒಂದು ಸೇರುತ್ತದೆ, ಇನ್ನೊಬ್ಬರಿಗೆ ಇನ್ನೊಂದು. ಬಟ್ಟೆಯಲ್ಲಿ ಬಣ್ಣ, ಅಂಚು, ನೈಗಳ ಬಗ್ಗೆ ಸ್ತ್ರೀ-ಪುರುಷರ ಅಭಿರುಚಿಗಳು ಎಷ್ಟು ಭಿನ್ನವಾಗಿರುತ್ತವೆ! "ಅ: ! ಇದೆಷ್ಟು ಚೆನ್ನ!.... ಚಿ:! ಅದು ಸರಿಯಾಗಿಲ್ಲ!" ಎಂದು ಗಿರಾಕಿಗಳು ಎಂದರೆ, ಅಂಗಡಿಯೊಡೆಯನು ಮರುಮಾತಾಡದೆ ಸುಮ್ಮನಿರಬೇಕಾಗುತ್ತದೆ. ಇಂಥ ವಿವಿಧ ಪ್ರಕೃತಿಗಳವರನ್ನು ಕಾಯ್ದು

CC-0. Jangamwadi Math Collection. Digitized by eGangotri

ಕೊಳ್ಳಬೇಕಾದರೆ, ಅಂಗಡಿಯವನು ಹಲವು ಬಗೆಯ ಸಾಮಾನುಗಳನ್ನಿಡಬೇಕಾಗುತ್ತದೆ. ಮನಸ್ಸಿಗೆ ಬಂದುದನ್ನು ಆರಿಸಿಕೊಳ್ಳಲು ತುಂಬಾ ಅವಕಾಶವಿರುವಲ್ಲಿಯೆ ಗಿರಾಕಿಗಳು ಮುಗಿಬೀಳುವುದು ಸ್ವಾಭಾವಿಕ. ಹಲತೆರದ ಮಾಲನ್ನಿಡುವ ಸಾಮರ್ಥ್ಯವು ಚಿಕ್ಕಪುಟ್ಟ ವ್ಯಾಪಾರಿಗಳಿಗಿಲ್ಲದುದರಿಂದ ದೊಡ್ಡದೊಡ್ಡ ಸ್ಟೋರುಗಳೆ ಒಳ್ಳೆ ಲಾಭದಾಯಕವಾಗಿ ನಡೆಯುತ್ತಿವೆ.

ಇಂಗ್ಲಂಡಿನಲ್ಲಿ ಸೆಲ್‌ಫ್ರಿಜ್ ಎಂಬ ಹೆಸರಿನ ಒಂದು ಪ್ರಚಂಡ ಸ್ಟೋರು ಇದೆ. ಅದರ ಅನೇಕ ಶಾಖೆಗಳಿವೆ. ಅದರ ಒಡೆಯರ ಹೇಳಿಕೆಯಿಂದ, ಕಿರುಕುಳ ಮಾರಾಟಕ್ಕಾಗಿ ಎಷ್ಟು ವೆಚ್ಚ ಬರುತ್ತಿದೆ ಎಂಬುದು ತಿಳಿಯುತ್ತದೆ. ೧೦೦ ರೂ. ಬೆಲೆಬಾಳುವ ಮಾಲು ಮಾರಾಟವಾದರೆ, ಅದರಲ್ಲಿ ೩೦ ರೂಪಾಯಿ ಕಿರುಕುಳ ಬಿಕರಿಯ ಒಟ್ಟು ವ್ಯವಸ್ಥೆಗಾಗಿ ವೆಚ್ಚವಾಗುತ್ತಿದೆ. ಗ್ರೇಟಬ್ರಿಟನ್ನಿನಲ್ಲಿಯ ಈ ವೆಚ್ಚದ ಒಟ್ಟು ಮೊತ್ತ ಪ್ರತಿವರ್ಷಕ್ಕೆ ೬೮೦ ಕೋಟಿ ರೂ. ಯಷ್ಟಾಗುವುದು. ತಮಗೆ ಅಗತ್ಯವೆನಿಸಿದ ಸೌಲಭ್ಯಗಳಿಗಾಗಿ ಬ್ರಿಟಿಷ್ ಜನತೆಯು ಇಷ್ಟು ಹಣವನ್ನು ಕೊಡುತ್ತಿದೆ. ಪ್ರತಿವ್ಯಕ್ತಿಯ ಇಷ್ಟವನ್ನು ಪೂರೈಸಲು ಅಂಗಡಿಕಾರನು ಪ್ರಯತ್ನಿಸುತ್ತಾನೆ; ಮತ್ತು ಅದಕ್ಕಾಗಿ ಜಡಿದು ಲಾಭ ಪಡೆಯುತ್ತಾನೆ. ಮೇಲೆ ಹೇಳಿದ ಅಂಗಡಿಯಲ್ಲಿ ೧೦,೭೬೩ ಜಾತಿಗಳ ಬೇರೆಬೇರೆ ಸ್ಟಾಕಿಂಗುಗಳನ್ನಿಟ್ಟಿದ್ದಾರೆ. ಒಂದು ದಂತಮಂಜನದ (ಟೂಥ್‌ಪೇಸ್ಟಿನ) ೧೩೫ ವಿಧಗಳಿವೆ. ಗಿರಾಕಿಗಳಲ್ಲಿ ೮೦% ಜನರು ಆರೇ ಪ್ರಕಾರಗಳನ್ನು ಸಾಮಾನ್ಯವಾಗಿ ಕೊಳ್ಳುತ್ತಿದ್ದರೂ ೧೩೫ ಜಾತಿಗಳ ಸಂಗ್ರಹವನ್ನು ಅಂಗಡಿಯವನು ಮಾಡಲೇ ಬೇಕಾಗುತ್ತದೆ. ತಮ್ಮ ಇಷ್ಟದ ಸಾಮಾನು ಸಿಗಬೇಕೆಂದಿಷ್ಟೇ ಅಲ್ಲ, ಇನ್ನು ಹಲತೆರದ ಸುಖಸೌಕರ್ಯಗಳನ್ನು ಗಿರಾಕಿಗಳು ಅಪೇಕ್ಷಿಸುತ್ತಾರೆ; ಮತ್ತದಕ್ಕಾಗಿ ಕೋಟ್ಯವಧಿ ರೂಪಾಯಿಗಳನ್ನು ಅಂಗಡಿಯೊಡೆಯನ ಉಡಿಯಲ್ಲಿ ಹಾಕುತ್ತಾರೆ. ಮಾಲು ತಂತಮ್ಮ ಮನೆಗೆ ಮುಟ್ಟಬೇಕೆಂದು ಗಿರಾಕಿಗಳ ಇಚ್ಛೆ; ಅಂಗಡಿಯವನು ಹಾಗೆ ವ್ಯವಸ್ಥೆಮಾಡಿ ಹೇರಳವಾಗಿ ಲಾಭವನ್ನು ಮಾಡಿಕೊಳ್ಳುತ್ತಾನೆ. ಈ ವಿಶಿಷ್ಟ ಸೌಕರ್ಯಗಳಿಗಾಗಿ ತಗಲುವ ವೆಚ್ಚವು ಎಲ್ಲಾ ಗಿರಾಕಿಗಳ ಪಾಲಿಗೂ ಏಕೆ ಬರಬೇಕು ಮತ್ತು ಎಲ್ಲರೂ ಈ ತಲೆದಂಡವನ್ನು ಏಕೆ ಸೋಸಬೇಕು ಎಂಬ ಪ್ರಶ್ನೆಯು ಇಲ್ಲಿ ಹುಟ್ಟುತ್ತಿದೆ. ಹೆಚ್ಚಿನ ಅನುಕೂಲ ಬಯಸುವವರೇ ಇದನ್ನು ವಹಿಸಬೇಕೆಂಬುದು ಸ್ಪಷ್ಟವಿದೆ. ಆದರೆ ದೊಡ್ಡ ಅಂಗಡಿಕಾರರು ಶಕ್ತಿಸಂಪನ್ನರಿದ್ದು, ಅವರ ವ್ಯವಸ್ಥಿತ ಕಾರ್ಯಪದ್ಧತಿಯ ಎದುರಿನಲ್ಲಿ ಕಿರುಕುಳ ಗಿರಾಕಿಗಳ ಆಟ ಸಾಗದೆ, ಅವರು ಹೇಳಿದ ಧಾರಣೆಯನ್ನೇ ಕೊಡಬೇಕಾಗಿ ಬರುತ್ತದೆ.

ತಜ್ಞ, ಅಧಿಕಾರಸಂಪನ್ನ ಬ್ರಿಟಿಷ್ ಶಾಸ್ತ್ರಜ್ಞರು ಈ ರೀತಿ ಹೇಳುತ್ತಿರುವರು:—

**ವಧುಗಳ ಬರಗಾಲ ಬರುವುದು!**

ಗ್ರೇಟ್‌ಬ್ರಿಟನ್ನಿನಲ್ಲಿ ೧೮೭೫ ರಲ್ಲಿ ಜನನದ ಪ್ರಮಾಣವು ಸಾವಿರಕ್ಕೆ ೩೫.೪ರಷ್ಟಿದ್ದುದು, ಈಗ ೧೪.೮ ಕ್ಕಿಳಿದಿದೆ. ಜನನದ ಪ್ರಮಾಣವು ಇದೇ ರೀತಿ ಇಳಿಯುತ್ತ ಹೋದರೆ, ೧೦೦ ವರ್ಷಗಳ ಅವಧಿಯಲ್ಲಿ ಬ್ರಿಟನ್ನಿನ ಜನಸಂಖ್ಯೆಯು ೫೦ ಲಕ್ಷಕ್ಕೆ ಬರುವುದು. ೧೯೪೩ರ ಸುಮಾರಿಗೆ ಆ ದೇಶದಲ್ಲಿ ವಿವಾಹಯೋಗ್ಯರಾದ ಹುಡುಗಿಯರ ಕೊರತೆಯು ಕಾಣತೊಡಗುವುದು; ಮತ್ತು ಪ್ರಾಪ್ತವಯಸ್ಕರಾದ ಹುಡುಗಿಯರನ್ನು ಮದುವೆಮಾಡಿಕೊಳ್ಳಲೆಳಸುವವರಲ್ಲಿ ತೀವ್ರ ಸ್ಪರ್ಧೆಯುಂಟಾಗುವುದು. ೧೯೪೫ಕ್ಕೆ ಮುಂಚೆ ಮತ್ತು ತರುವಾಯ ೨-೩ ವರ್ಷ, ನವ ವಧೂವರರ ಸಂಸಾರವನ್ನು ಸಜ್ಜುಗೊಳಿಸಲಿಕ್ಕೆ ಬೇಕಾಗುವ ಸಾಮಾನುಗಳ ಮಾರಾಟವು ಕಡಿಮೆಯಾಗಿ, ಆ ವ್ಯಾಪಾರದಲ್ಲಿ ಮುಗ್ಗಟ್ಟು ಉಂಟಾಗುವುದು.

ಇ. ಸ. ೧೮೭೯ರ ಪೂರ್ವದಲ್ಲಿ ದಾರ್ಜಿಲಿಂಗಕ್ಕೆ ಹೋಗಲು ರೇಲ್ವೆಮಾರ್ಗವಿರಲಿಲ್ಲ. ೧೮೭೮ರಲ್ಲಿ ಈಸ್ಟರ್ನ್ ಬಂಗಾಲ ರೇಲ್ವೆಯ ಏಜಂಟರಾದ ಫ್ರ್ಯಾಂಕ್ಲಿನ್

**ಕೊಡಲುಪಿನ್ನಿನಿಂದ ಕಲ್ಪನೆ ಹೊಳೆಯಿತು!**

ಪ್ರೆಸ್ಟೇಜ ಎಂಬವರು ಉಗೆಯ ಟ್ರಾಮ್ವೆಯ ಕಲ್ಪನೆಯನ್ನು ಕಂಡುಹಿಡಿದು, ಆ ಮೇರೆಗೆ ರೇಲ್ವೆದಾರಿ ಕಟ್ಟುವ ಕೆಲಸವನ್ನು ಕೈಕೊಂಡರು. ಮುಂಚಿನ ಎತ್ತಿನ ಬಂಡಿಯ ಹಾದಿಯಲ್ಲಿಯೆ ಹಳಿಗಳನ್ನು ಹಾಕಲಾಯಿತು; ಆದರೆ ನಡುನಡುವೆ ಹಾದಿಯಲ್ಲಿ ಹತ್ತಲು ಬಾರದಷ್ಟು ಏರು ಬಂದುದರಿಂದ ಕೆಲಸ ನಿಂತುಬಿಟ್ಟಿತು. ಕೆಲಕಡೆಯಂತೂ ೧೫ ಫೂಟು ಹಾದಿಗೆ ೧ ಫೂಟಿನಂತೆ ಏರು ಬರಹತ್ತಿತು. ರೇಲ್ವೆ ಎಂಜಿನುಗಳಿಗೆ ಇಷ್ಟು ಏರು ಹತ್ತುವುದು ಸಾಧ್ಯವಿರದ್ದರಿಂದ, ಕಟ್ಟುವ ಕೆಲಸವನ್ನು ಹೇಗೆ ಮುಂದರಿಸಬೇಕೆಂಬುದು ತೋಚದೆ ಕೂತುಬಿಟ್ಟರು. ಆಗ ಮಿಸೆಸ್ ಪ್ರೆಸ್ಟೇಜರ ತಲೆಯಲ್ಲೊಂದು

CC-0. Jangamwadi Math Collection. Digitized by eGangotri

ಕಲ್ಪನೆ ಬಂದಿತು. "ಮುಂಚೆ ಹಿಂದಕ್ಕೆ ಸರಿದು ಆ ಮೇಲೆ ಏಕೆ ಮುಂದಕ್ಕೆ ಹೋಗುವುದಿಲ್ಲ ?" ಎಂದು, ಅವರು ತಮ್ಮ ತಲೆಗೂದಲಲ್ಲಿಯ ೨ ಪಿನ್ನುಗಳನ್ನು (ಆಕಡಾಗಳನ್ನು) ಟೇಬಲ್ ಮೇಲೆ ಇಟ್ಟು ತೋರಿಸಿದರು. ಈ ವಿಚಾರವು ರೇಲ್ವೆ ತಜ್ಞರಿಗೆ ಒಮ್ಮೆಲೆ ಒಪ್ಪಿಗೆಯಾಗಿ, 'ರಿವ್ಹರ್ಸಿಂಗ್' ಎಂದು ಹೆಸರಾಗಿರುವ ಪದ್ಧತಿಯನ್ನವಲಂಬಿಸಿ ಕೆಲಸವನ್ನು ಪೂರೈಸಿದರು. ಮುಂಚೆ ಪೂನಾ-ಮುಂಬಯಿ ಹಾದಿಯಲ್ಲಿಯೂ ಇದೇ 'ರಿವ್ಹರ್ಸಿಂಗ್' ಪದ್ಧತಿಯಿತ್ತು. ಉಗಿಬಂಡಿಗೆ ಪಕ್ಕಕ್ಕೆ ಸರಿಯಲು ಸ್ಥಳವಿರದಿದ್ದರೆ, ಅದನ್ನು ಹಾಗೆಯೆ ಹಿಂದ ಕ್ಕೊಯ್ದು ಸಂದು ಬದಲಿಸಿ ಮಾರ್ಗಕ್ಕೆ ಹಚ್ಚುವ ಕಲ್ಪನೆಯ ಉಗಮವು ಒಬ್ಬ ಹೆಣ್ಣುಮಗಳ ವ್ಯವಹಾರಚಾತುರ್ಯ ದಲ್ಲಿದೆ. ದಾರ್ಜಿಲಿಂಗ ಉಗಿಮಾರ್ಗದಲ್ಲಿ ಈ ಬಗೆಯ ಹಲವು 'ರಿವ್ಹರ್ಸಿಂಗ್ ಸ್ಟೇಶನು' ಗಳಿವೆ. ಪ್ರಪಂಚದ ಬೇರೆ ದೇಶಗಳಲ್ಲಿಯೂ ಪರ್ವತಪ್ರಾಂತಗಳಲ್ಲಿಯ ರೇಲ್ವೆ ಗಳವರು ಈ ಯುಕ್ತಿಯನ್ನೇ ಅವಲಂಬಿಸಿದ್ದಾರೆ.

—ಅಥ

## ಸೋವಿಯೆಟ್ ರಶ್ಯದಲ್ಲಿ ಸಾಮುದಾಯಿಕ ಶಾರೀರಿಕ ಶಿಕ್ಷಣ



ಮಾಸ್ಕೋವಿನ 'ರಕ್ತಪಟಾಂಗಣ'ದಲ್ಲಿ, ರಶ್ಯನ್ ರಾಜ್ಯಕ್ರಾಂತಿಯ ೨೦ನೆಯ ವಾರ್ಷಿಕೋತ್ಸವದ ನಿಮಿತ್ತವಾಗಿ, ಸೋವಿಯೆಟ್ ವಿದ್ಯಾರ್ಥಿನಿಯರು ಅದ್ಭುತ ಶಕ್ತಿಪ್ರದರ್ಶನವನ್ನು ಮಾಡುತ್ತಿರುವರು. ಕೈಕೈ ಹಿಡಿದು, ಬಳ್ಳಿ ಕಟ್ಟಿ, 'ಚಲಿಸುವ ಈಜುವ ಕೊಳ'ವನ್ನೆ ರಚಿಸಿ, ಶಿಸ್ತಿನಲ್ಲಿ ಸಾಗಿರುವರು. ಕೊಳದಲ್ಲಿ ಬೇರೆ ವಿದ್ಯಾರ್ಥಿನಿಯರು ಈಜುಬಿದ್ದಿರುವರು.

CC-0. Jangamwadi Math Collection. Digitized by eGangotri

# ಸಾಹಿತ್ಯಗೋಷ್ಠಿ

ಲೇಖಕರು:—ಶ್ರೀ. ಮಧುರಚೆನ್ನ

## ಸದ್ಯಕ್ಕೆ ದ್ಯಾಂಪುರವೆಂಬ ಚಿಕ್ಕ ಹಳ್ಳಿಯಲ್ಲಿ

(ಕವಿಕಾವ್ಯ ಪರಿಚಯ)

ನಮ್ಮ ವಾಙ್ಮಯಾವಲೋಕನದ ದೃಷ್ಟಿಯು ಈಗ ಮೂರು ಬಗೆಯದಾಗಬೇಕೆಂದು ನನಗೆ ಅನಿಸುತ್ತದೆ. ಯಾಕೆಂದರೆ ವಾಙ್ಮಯವೇ ಹಾಗೆ ಮೂರು ತೆರನಾಗಿದೆ. ವಿಶ್ವಸಾಹಿತ್ಯದ ಪರಿಚಯವುಳ್ಳವರ ವಾಙ್ಮಯ, ಕೇವಲ ಪೂರ್ವಕೃತಿಗಳ ವ್ಯಾಸಂಗವುಳ್ಳವರ ವಾಙ್ಮಯ ಮತ್ತು ಸಂಸ್ಕೃತಿಯ ಸಂಘರ್ಷಣವಿಲ್ಲದ ಸುಲಭಜೀವನದ ಹಳ್ಳಿವಾಡದವರಿಗೊಪ್ಪುವ ವಾಙ್ಮಯ.

ಇದೀಗ ಹಲವರು ನವಸಾಹಿತ್ಯವನ್ನು ಪ್ರೀತಿಸುವರಾದರೆ ಕೆಲವರು ಇನ್ನೂ ಹಳೆಯ ಶೈಲಿಯನ್ನು ಪುರಸ್ಕರಿಸುವರು. ಇವರಿಬ್ಬರ ವಿವಾದವೇನೇ ಇರಲಿ; ಇಬ್ಬರಿಗೂ ಬೆಲೆಯಿದೆ. ಆದರೆ ಇವರಿಬ್ಬರನ್ನು ಬಿಟ್ಟು ಇನ್ನೂ ಒಂದು ಬಗೆಯ ಅನಾಥ (ಕೇಳುವವರ ದಿಕ್ಕಿಲ್ಲದ) ಸಾಹಿತಿಗಳುಂಟು. ಅವರ ಬಗೆಗೆ ಪ್ರಸ್ತುತ ಲೇಖನದಲ್ಲಿ ಯಾವ ಮಾತನ್ನೂ ಹೇಳಬೇಕಾಗಿರದಿದ್ದರೂ ಸಾಹಿತ್ಯಕ್ರಮದಲ್ಲಿ ಅವರ ಬಗೆಗೂ ಒಂದು ಮಾತನ್ನು ಹೇಳಬೇಕಾಯಿತು. ಆದರೆ ನನ್ನ ಸದ್ಯದ ಉದ್ದೇಶವು ಈ ಎರಡನೆಯ ಬಗೆಯ ಸಾಹಿತಿಗಳಲ್ಲೊಬ್ಬರಾದ ದ್ಯಾಂಪುರದ ಶ್ರೀ. ಚೆನ್ನಕವಿಗಳ ಕಾವ್ಯಪರಿಚಯವನ್ನು ನಾಡಿನ ಅಣ್ಣಂದಿಗೆ ಮಾಡಿಕೊಡುವುದಾಗಿದೆ. ಈ ಕವಿಯು ೬೨೬ ವಾರ್ಧಿಕ ಷಟ್ಪದಿಗಳುಳ್ಳ "ಹೇಮರಡ್ಡಿಯ ಮಲ್ಲಮ್ಮನ ಚರಿತ್ರ" ವನ್ನೂ, ೧೩೧೭ ಭಾಮಿನೀ ಷಟ್ಪದಿಗಳುಳ್ಳ (ಆಧುನಿಕ ಶಿವಶರಣರೊಬ್ಬರ ಚರಿತ್ರವನ್ನೊಳಕೊಂಡ) "ಶ್ರೀ ವೀರೇಶ್ವರ ಪುರಾಣ" ವನ್ನೂ ಬರೆದಿದ್ದಾರೆ. ಇವರೇ ಬರೆದ ಇನ್ನೂ ಒಂದೆರಡು (ಆಧುನಿಕ ಮಹಾನುಭಾವರ ಚರಿತ್ರಕ್ಕೆ ಸಂಬಂಧಿಸಿದ) ಪುರಾಣಗಳೂ ಇವೆಯೆಂದು ಕೇಳಿದ್ದೇನೆ. ಕವಿಗಳು ಇನ್ನೂ ಒಂದೆರಡು ಕಾವ್ಯಗಳನ್ನು ಬರೆಯುವ ಆಲೋಚನೆಯಲ್ಲಿಯೂ ಇದ್ದಾರಂತೆ.

ದ್ಯಾಂಪುರವು ನೈಜಾಮ್ ರಾಜ್ಯಕ್ಕೆ ಸೇರಿದ ಕೊಪ್ಪಳ ತಾಲೂಕಿನಲ್ಲೊಂದು ಚಿಕ್ಕ ಹಳ್ಳಿ. ಜನಸಂಖ್ಯೆಯು ಸುಮಾರು ಐದು ನೂರಕ್ಕಿಂತ ಹೆಚ್ಚಿಗಿಲ್ಲವೆಂದು ಕೇಳಿದ್ದೇನೆ. ಅಲ್ಲಿ ಇನ್ನೂ ಒಬ್ಬಿಬ್ಬರು ಕವಿಗಳಿದ್ದಾರೆಂದೂ ಅವರೂ ಒಂದೆರಡು ಪುರಾಣಗಳನ್ನು ಬರೆದಿದ್ದಾರೆಂದೂ ಸಹ ಕೇಳಿದ್ದೇನೆ. ಈ ಹಳ್ಳಿಯ ಒಬ್ಬ ಜಂಗಮಸ್ವಾಮಿಗಳ ಮನೆತನದವರೇ ಈ ಚೆನ್ನಕವಿಗಳು. ಇವರಿಗೆ ಈಗ ಸುಮಾರು ೪೫ ವಯಸ್ಸು.

ನನ್ನ ಕೈಗೆ ಬಿದ್ದಿರುವ ಇವರ ಎರಡು ಮುದ್ರಿತ ಕಾವ್ಯಗಳೊಳಗಿನ ಕೆಲವು ಪದ್ಯಗಳನ್ನು ವಾಚಕರ ಅವಗಾಹನೆಗಾಗಿ ನಾನಿಲ್ಲಿ ಕೊಡಲಿಚ್ಛಿಸುತ್ತೇನೆ. ಈ ಪದ್ಯಗಳನ್ನು ನೋಡಿದರೆ ಶ್ರೀ. ಚೆನ್ನಕವಿಗಳ ಕಾವ್ಯಶಕ್ತಿಯು ಎಷ್ಟೋ ಹದಕ್ಕೆ ಬಂದಿದೆಯೆಂದು ಸ್ಪಷ್ಟವಾಗಿ ತೋರದಿರದು. ಇಂಥವರ ಜೀವಮಾನಕಾಲದಲ್ಲಿಯೇ ಅವರ ಕವಿತೆಗಳ ತಕ್ಕ ಬೆಲೆಯಾಗಿ ಲೋಕಾನುಗ್ರಹಕ್ಕೆ ಪಾತ್ರವಾದರೆ, ಅವರ ಆತ್ಮಕ್ಕೆ ಎಷ್ಟು ಧನ್ಯತೆಯೆನಿಸಲಿಕ್ಕಿಲ್ಲ? ಮುಡಿಯುವ ಭೋಗಿಗಳು ಲಭಿಸದಿದ್ದರೆ ಮಾಲೆಗಾರನು ಏನು ಬಾಸಿಗಗಳನ್ನು ಕಟ್ಟಿ ಏನು ತಾನೆ ಫಲ ? ಇದಿರಲಿ. ಇದೀಗ ವಾಚಕರು ಈ ಕವಿಯ ಕವಿತಾಲಹರಿಯಲ್ಲಿಷ್ಟು ಓಲಾಡಲಿ.

### ೧. ವೀರೇಶ್ವರ ಪುರಾಣ

ಸೊಲ್ಲಾಪುರದಲ್ಲಿ ಹದಿನೈದು ವರುಷಗಳ ಹಿಂದೆ ಲಿಂಗೈಕ್ಯರಾದ, ನಾಲತ್ತವಾಡದ ಶಿವಶರಣರೆಂದು ಹೆಸರುಗೊಂಡ ಶ್ರೀ. ವೀರಯ್ಯ ಮಹಾನುಭಾವರ ಚರಿತ್ರವು ಈ ಕಾವ್ಯದ ವಿಷಯವಾಗಿದೆ. ಈ ಕಾವ್ಯದಲ್ಲಿ ಭಾಮಿನೀ ಷಟ್ಪದಿಯಲ್ಲಿ ಬರೆದ ಇಪ್ಪತ್ತೊಂದು ಸಂಧಿಗಳಿವೆ. ಪದ್ಯಸಂಖ್ಯೆ ೧೩೧೭. ಈ ಕಾವ್ಯವನ್ನು ಕವಿಯು ೧೯೩೧ರಲ್ಲಿ ಬರೆದು ಮುಗಿಸಿದ್ದಾರೆ. ಮಂಗಳೂರಿನ ಧರ್ಮಪ್ರಕಾಶ ಪ್ರೆಸ್ಸಿನಲ್ಲಿ ಮುದ್ದಾಗಿ ಮುದ್ರಿಸಲಾಗಿದೆ. ಗದುಗಿನ ಆನಂದಾಶ್ರಮದ ಸ್ವಾಮಿಗಳಾದ ಶ್ರೀ ಮಹಾಂತ ಶಿವಯೋಗಿಗಳ ಆಶ್ರಯದಲ್ಲಿ ಈ ಕಾವ್ಯವು ಬರೆ

CC-0. Jangamwadi Math Collection. Digitized by eGangotri

ಯಲ್ಪಟ್ಟಿದೆ. ಬೆಲೆ ೩ ರೂಪಾಯಿಗಳು. ಕವಿಯ ಕವಿತಾ ಶಕ್ತಿದ್ಯೋತಕವಾದ ಕೆಲವು ಪದ್ಯಗಳನ್ನು ಕೆಳಗೆ ಬರೆಯಲಾಗಿದೆ:—

**ತನ್ನ ಕಾವ್ಯ**

ಬೆಳಸಿ ಬರೆದ ಚರಿತ್ರಮಲ್ಲಂ
ಕಳೆದಳೆಯಲೆಂದೊರೆದ ಪುಸಿನುಡಿ-
ಗಳ ಬಳಗದೊಂದಿಕ್ಕೆಯಲ್ಲಂ ಪಾಳು ಮಾತಲ್ಲ ||
ಗಳಿತ ರಸಮಯಮಲ್ಲ ಲಕ್ಷಣ-
ವಳಿದ ಪದ್ಯಪ್ರಯುತಮಲ್ಲಂ
ಮಿಲಿತ ಶಿಥಿಲಕ್ಲಿಷ್ಟಮಲ್ಲಂ ಮತ್ತ್ರಬಂಧಮಿದು ||

—ಸಂಧಿ ೧—ಪದ್ಯ ೨೨

**ಪುತ್ರದೋಹಳ**

ಚಿಕ್ಕ ಹರೆಯದೊಳೆಳೆಯನಂ ಪೆ-
ತ್ತಕ್ಕರದೆ ಮೃದುಕರಗಳಿಂ ಮೇ-
ಲಕ್ಕೆ ರಯ್ಯನೆ ನೆಗಹುತೆತ್ತುತೆ ನಗಿನಗಿಸಿ ನೋಡಿ ||
ಗಕ್ಕನವನೆಳೆಗಲ್ಲದೊಳು ಮನ
ವುಕ್ಕಿ ಬಾಯಿಟ್ಟಲುಗಿಸುತ್ತಂ
ಜಕ್ಕುಲಿಸಿ ಮುದ್ದಿಸುವುದಂ ಪಡೆದಿಲ್ಲವಾಂ ಮೊದಲು ||

೨—೩೧

**ಕಥಾನಾಯುಕನ ಬಾಲ್ಯ**

ಕಾಡಲಿಲ್ಲಂ ತಂದೆತಾಯ್ಗಳ
ಬೇಡಲಿಲ್ಲಂ ರಮ್ಯವಸ್ತುವ
ನಾಡಲಿಲ್ಲಂ ಸಿಷ್ಮರವನನುಚಿತವ ಮರೆದೊಮ್ಮೆ ||
ಮಾಡಲಿಲ್ಲಂ ಕೆಟ್ಟ ಕೆಲಸವ
ಕೂಡಲಿಲ್ಲಂ ದುಷ್ಟಜನದೊಳು
ನೋಡಲಿಲ್ಲಂ ಪರಪದಾರ್ಥವನೀ ಕುಮಾರಕನು ||

೩—೧೫

**ಸುಮಂಗಲೆಯರು**

ಮಂದಗಮನೆಯರಬ್ಜಗಂಧಿಯ-
ರಿಂದುಮುಖಿಯರ್ಕೋಕಕುಚೆಯರು
ಕುಂದರದನೆಯರಂಗಭವದರ್ಪಣಕಪೋಲೆಯರು ||
ಸುಂದರಾಂಗಿಯರಳಿಕಬರಿಯರು
ಚೆಂದುಟಿಯ ರಮಣೀಮಣಿಯರರ-
ವಿಂದಲೋಚನಯುಗಳೆಯರು ಕಲಕೀರವಾಣಿಯರು ||
ಕಲಶ ಕುಚಯುಗ ಭರಕೆ ಬಡನಡು
ಬಳುಕೆ, ಜಘನಂ ಪೊಡರೆ, ನೂಪುರ-
ಮುಲಿಯೆ, ಸುತ್ತಂ ಚಂದ್ರಿಕಾಚಂಚಲ ಕಟಾಕ್ಷಗಳು ||
ಪೊಳೆಯೆ, ಕಜಗಂಧಕ್ಕೆ ಭ್ರಮರಂ-
ಗಳು ಭರದೆ ಮೊರೆದೆರಗೆ, ವಿಭವಂ
ದಳೆದು ಪರಿತಂದರ್ವಿವಾಹ ಸುಮಂಟಪಕೆ ಮುದದೆ ||

೩—೩೪, ೩೫

**ಕಾಯಕ ಮಹತ್ವ**

ಬೇಡಿ ತಂದೊಡೆ ಋಣಮದೆಂಬಂ
ಕಾಡಿ ತಂದೊಡೆ ಪಾಪಮೆಂಬಂ
ಕಾಡದಲೆ ಬೇಡದಲೆ ಜನರಿಂ ತಾನೆ ಬಂದುದದು ||
ರೂಢಿಯೊಳು ಹಂಗಂಬನೀತಂ
ನಾಡೆ ಕಾಯಕ ರೂಪದಿಂದಂ
ಕೂಡದಿಹ ವಸ್ತುಗಳನೊಲ್ಲನೆ ಮೋಹವಿರಹಿತನು ||

೮—೧೨೦

**ಬನಸಿರಿ**

ಕುಸುಮಮಂಜರಿದಳೆದ ಲತೆಯಾ
ಮಿಸುಪ ಲತೆಗಡರಿದ ಮರಂ, ತ-
ದ್ವಸುಮತೀಜವ ಬಾಗಿಸಿದ ಫಲವಾ ಫಲವ ಸೀಳ್ದು ||
ರಸವನೀಂಟುವ ಕೀರಮಾ ಶುಕ-
ವಿಸರ ವರ್ಣವನೆಳೆದಳಿರ್ಗೆ-
ತ್ತೊಸೆದು ಬಳಿಸಾರುವ ಪಿಕಂಗಳ್ಮೆರೆದವಾ ಬನದೆ ||

ತಳಿರಡಿಗಳಿಂ, ಬಾಳೆಗಂಬಂ-
ಗಳ ತೊಡೆಗಳಿಂದಂ, ಕಪಿತ್ಥೋ-
ತ್ಫಲ ಕುಚಗಳಿಂ, ಪೂಗಭುಜಯುಗದಿಂದ, ದಾಡಿಮದ ||
ಚೆಲುರದಗಳಿಂ, ಚಂಪಕದ ಸ-
ಲ್ಲಲಿತ ನಾಸಿಕದಿಂದಲರ ಕಂ-
ಗಳಿನಳಿಯ ಕುಂತಲದಿನೆಸೆದಳು ವನಕಮಲನಿಲಯೆ ||

೯—೩೩, ೩೫

**ನಾಯಕನ ಮಹಿಮೆ**

ಕೆಲಬರಿವನಂ ಮರುಳನೆಂದರ್
ಕೆಲಬರೀತಂ ಮುಗ್ಧನೆಂದರ್
ಕೆಲರು ದಂಭಾಚಾರಪರನಿವನೆಂದು ಗಳಪಿದರು ||
ಕೆಲಬರಿವನತಿ ಕುಟಿಲನೆಂದರು
ಕೆಲಬರೂಹಿಸಲರಿಯೆವೆಂದರು
ಹಲವು ಬಗೆಯಿಂದಿಂತು ನುಡಿದರು ಜನರು ತಿಳಿದಂತೆ ||

CC-0. Jangamwadi Math Collection. Digitized by eGangotri

ಶರಣರೊರೆದೊಡೆ ಶರಣರುಗುಳ್ದೊಡೆ
ಪರಮಶರಣರು ದುಡಿಸಿಕೊಂಡೊಡೆ
ಶರಣವರ್ಯರು ಕಾಡಿದೊಡೆ ಬೈದೊಡೆ ಬಡಿದೊಡವರ ||
ಕರುಣವೆಂದೇ ಭಾವಿಸದೆ ಶಿವ-
ಶರಣನಂ ದಂಡಿಸಿದ ಮನುಜನ
ದುರಿತಸಂಚಯಕೊಳವೆ, ನಿಷ್ಕೃತಿ ಸರ್ವಶಾಸ್ತ್ರದೊಳು ||

೧೦--೧೨, ೩೧

ಮುರಿದ ಬೆತ್ತಂ, ಹರಿದ ಜೋಳಿಗೆ,
ಕಿರಿಯ ಕೋವಣಮುಗುವ ಜೊಲ್ಲುಂ,
ನೆರೆನವಿರು, ಪಳೆಸಜ್ಜೆ, ಮಾಸಿದ ಭಸಿತರೇಖೆಗಳು ||
ವಿರಸವಚನಂ, ನಿರಿದೊವಲ್ಪೊಂ-
ದಿರುವ ಗಣನಂ ಕಂಡು ಶಿವನೆಂ-
ದೆರಗಿ ತತ್ಕೃಪೆವಡೆಯದಾತಂ ಭಕ್ತನೆನಿಸುವನೇ ||

೧೨—೩೭

ವರದ ಶಿವಭಕ್ತಿಯ ಕುರುಹು, ಭಾ-
ಸುರ ಶಿವಜ್ಞಾನದ ತಿರುಳು, ಬಂ-
ಧುರ ವಿರಾಗದ ಸುಗ್ಗಿ, ಶೈವಾನುಭವದೈಸಿರಿಯು ||
ಪರಮ ಲಿಂಗಾಂಗಗಳ ಸಮರಸ-
ದಿರವವಿರಳಾನಂದಗೃಹವೀ
ಪುರುಷನಿವನೆಂದಾಡುತಿರ್ದಂ ತಚ್ಚರೋತ್ತಮನು ||

೨೦—೭

## ೨. ಮಲ್ಲಮ್ಮನ ಚರಿತ್ರ

ಇದೀಗ ಉತ್ತರ ಕರ್ನಾಟಕದಲ್ಲಿ ಎಲ್ಲೆಲ್ಲಿ ನೋಡಿದರೆ ಅಲ್ಲಲ್ಲಿ ಈ ಪುಣ್ಯಾತ್ಮಳ ನಾಟಕದ ಸುಗ್ಗಿ. "ಹೇಮರಡ್ಡಿ ಮಲ್ಲಮ್ಮನ ಪುರಾಣ" ವೆಂಬ ಹೆಸರಿನಿಂದ ಜೈನಾಪುರದ ರುದ್ರಾಖ್ಯ ಕವಿಗಳು (ಇತ್ತೀಚೆ ಕೆಲ ವರುಷಗಳ ಹಿಂದೆ) ಸಾಂಗತ್ಯ ರೂಪದಿಂದ ಬರೆದುದನ್ನೇ ಆಧಾರವಾಗಿ ಇಟ್ಟು ಕೊಂಡು, ಬಹು ಪರಿಶ್ರಮದಿಂದ ಹೊಸ ವಿಷಯಗಳನ್ನು ಸಂಶೋಧಿಸಿ ಸೇರಿಸಿ ನಮ್ಮ ಚೆನ್ನಕವಿಗಳು ಇದನ್ನು ವಾರ್ಧಿಕ ಷಟ್ಪದಿಯಲ್ಲಿ ಬರೆದಿದ್ದಾರೆ. ಈ ಗ್ರಂಥವು ೧೯೩೨ರಲ್ಲಿ ಬರೆದು ಮುಗಿಸಲ್ಪಟ್ಟಿದೆ. ಇದರದೂ ಮಂಗ ಳೂರಿನ ಮುದ್ದಾದ ಮುದ್ರಣವೇ. ಬೆಲೆ ಈಗ ೨ ರೂಪಾಯಿ ಗಳು. ಇದರಲ್ಲಿ ಹದಿನೆಂಟು ಸಂಧಿಗಳೂ ೬೩೭ ಪದ್ಯಗಳೂ ಇವೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಆರಿಸಿ ಬರೆ ಯುತ್ತೇನೆ:—

### ಶ್ರೀಶೈಲ ಪರ್ವತ

ಶಿವಯೋಗಿಗಳ ಬೀಡು, ಮಂಗಲದ ನೆಲೆ, ಮುನಿಪ-
ನಿವಹಗಳ ಗೊತ್ತು, ಸೈಪಿನ ಸೀಮೆ, ಪರಮುಕ್ತಿ
ಯುವತಿಯ ತವರ್ಮನೆ, ಗಣಾಧಿನಾಯಕರಿರ್ಕೆ,
ಸ್ವೈರಣೆಯ ಜನ್ಮಭೂಮಿ ||
ದಿವಿಷದುದ್ಯದ್ವಿರಾಮಸ್ಥಲಂ, ಪ್ರಥಮ ಪುಂ-
ಗವ ಸಮೂಹ ನಿಕೇತನಂ, ಮೇನಕಾತ್ಮಜಾ
ಧವ ರಾಜಧಾನಿಯೆನಲೊಪ್ಪಿದುದು ಪೆಂಪಿನಿಂ-
ದುರುತರದ ಶ್ರೀಶೈಲವು ||

— ಸಂಧಿ ೨, ಪದ್ಯ ೧

### ಮಲ್ಲಮ್ಮನ ಮೇಲ್ಮೆ

ನಡೆಯ ಬಂದರು ಮುಂದೆ ಸೊಸೆಯರವರೊಳಗೊಬ್ಬ
ನಡುವಿನವಳಾದ ಮೂರನೆಯ ಪುತ್ರನ ಸತಿಯು
ಕಡು ಚೆಲುವೆ ಪರಮ ಪಾತಿವ್ರತ್ಯ ಸಂಪನ್ನೆ
ಮಲ್ಲಮ್ಮನೆಂಬ ಸೊಸೆಯು ||
ಬಿಡದತ್ತೆಮಾವರಂ ಮನಮುಟ್ಟಿ ಸೇವಿಸು—
ತ್ತೆಡರಿಗಂಜದೆ ಸಂಪದಕ್ಕೆ ಹಿಗ್ಗದೆ ಶಾಂತಿ
ಗೆಡದೆ ಲೌಕಿಕ ಚಮತ್ಕೃತಿಯರಿದಿರ್ದಳಾ
ಮುಗ್ಧೆ ಭಕ್ತಿಯ ವಿದಗ್ಧೆ ||
ಮಂದಗಮನದ, ಭ್ರಮರಕುಂತಲದ, ಗುರುಕುಚದ,
ಕುಂದರದನದ, ಕಂಬುಕಂಠದ, ಪಿಕಾಲಾಪ-
ದಿಂದುವದನದ, ಮೃದುಲಕರದ, ಬಿಂಬಾಧರದ,
ರಾಜೀವದಳ ನೇತ್ರದ ||
ಸುಂದರಾಂಗಿಯ ಚೆಲ್ವಿಕೆಯನಾರು ಬಣ್ಣಿಪರು
ಕಂದರ್ಪವೀರನೀರೇಳು ಲೋಕಗಳನಾ-
ಸಿರ್ಂದ ಗೆಲಿಯಲ್ಕಿದೊಂದಾಯುಧಮೊ ಎಂಬಂತೆ
ರಂಜಿಸಿದಳಾ ಮಾನಿನಿ

೨—೧೦, ೧೧

ಬಿಸಿಲಿಂದ ಬಸವಳಿದು ಪಸಿದು ನೀರಡಿಸಿ ಮನೆ-
ಗಸವಸದೊಳಡವಿಯಿಂ ಬಂದ ಮಲ್ಲಮ್ಮನಂ
ಮುಸುಡೆತ್ತಿ ನೋಡಿ ಮರುಗದೆ, ಮುನಿದು ಪೊತ್ತಿದೊಣ-
ಗಿದ ಹಳಸಿದಂಬಲಿಯನು ||
ಹಸಿಬಿಸಿಯ ರಸಮಡಗಿ ನಾರುತಿಹ ಶಾಕಮಂ
ಮುಸಗಿ ತಂಗುಳ ಚೂರನೊಡಲಿಗಂ ಸಾಲದನಿ-
ತಶನಮಂ ನೆಗೆವೆಣ್ಣೆಯರು ಕೊಡುತಲಿರ್ದ-

CC-0. Jangamwadi Math Collection. Digitized by eGangotri

ರವರಂ ಪೋಲ್ವ ನೀಚರೊಳರೇ ||

೨—೨೭

ತನಗತ್ತೆ ಬೇಸರಂ ಗೈವಳೆನ್ನದೆ ತನ್ನ-
ನಿನನುದಾಸೀನವೆಸಗುವನೆಂದು ಚಿಂತಿಸದೆ
ಮುನಿದು ನೆಗೆವೆಣ್ಣೆಯರ್ದ್ವೇಷಿಸುವರೆಂದು ಸಿಡಿ-
ಮಿಡಿಗೊಳದೆ ವೃಷ್ಟಾನ್ನವ ||
ಮನೆಯ ಜನರೆಲ್ಲರುಂ ಬುವರೆಂದು ಮರುಗದನು-
ದಿನಮಿವರ್ ತಂಗಳವನೀವರೆನ್ನದೆ ತುರುಗ-
ಳನು ಕಾವುದೆನಗೆ ನೆಲೆಯಾದುದೆಂದಳು ಸದಾ
ಮುಗ್ಧೆ ಸುಖದಿಂದಿರ್ದಳು ||

ಮಳೆಯೊಳಗೆ ಚಳಿಯೊಳಗೆ ಬೇಸಿಗೆಯ ಬಿಸಿಲೊಳಗೆ
ಬಲಿದರಣ್ಯದೊಳು ಬರಿಗಾಲಿಂದ ಬಲುಹರಕು
ಹಳೆಯ ಸೀರೆಯನುಟ್ಟು ನಡುಗುತಂ ಮುಲುಗುತಂ
ಬಳಲಿ ಬೆಂಡಾಗುತ್ತಲಿ ||
ತೊಳಲುತಂ ಕಲ್ಮುಳ್ಳುಗಳನೊತ್ತಿ ತುಳಿವುತಂ
ಪಲವು ಕಷ್ಟಗಳಾದಡುಂ ಮನದ ಧೃತಿಗೆಡದೆ
ಚೆಲುವೆ ಮಲ್ಲಮ್ಮನಾವುಗಳ ಹಿಂಡಂ ಕಾವು-
ತಿರ್ದಳತಿ ಸಂತಸದೊಳು ||

ಮಲಗುವಾಸನವಿಲ್ಲ ಹೊದಿವ ಹಚ್ಚಡವಿಲ್ಲ
ತಲೆಗಿಂಬದೆಲ್ಲಿ ಮತ್ತೊಂದು ಕುಪ್ಪಸವಿಲ್ಲ
ಹೊಳೆವ ಮಂಗಳಸೂತ್ರಮಲ್ಲದಿನ್ನೊಂದಿಲ್ಲ
ಬೇಡಲಿಕೆ ಬಾಯಿಲ್ಲವು ||
ತಲೆಗೆ ನೇಹಮದಿಲ್ಲ ಮರುಗುತಿಪ್ಪವರಿಲ್ಲ
ಪಳಿಯದವರಾರುಮಿಲ್ಲಂ ನಿಳಯದೊಳು, ಕೈಗೆ
ಬಳೆಗಳಿಲ್ಲೀ ಪರಿಯೊಳಿರ್ದೊಡುಂ ಮುಗ್ಧ ಭ-
ಕ್ತೆಯ ಮನಂ ಕದಡಲಿಲ್ಲ ||

ನಡೆವಲ್ಲಿ ನುಡಿವಲ್ಲಿ ಹಿಡಿವಲ್ಲಿ ಬಿಡುವಲ್ಲಿ
ಕೊಡುವಲ್ಲಿ ಕೊಳ್ಳುತ್ತಿಪ್ಪಲ್ಲಿ ಕುಳ್ಳಿರುವಲ್ಲಿ
ಬಿಡದೇಳುವಲ್ಲಿ ಮಲಗುವ ಸಮಯದಲ್ಲಿ ಪ್ರತಿ
ಕಬಳಮಂ ನುಂಗುವಲ್ಲಿ ||
ತಡೆಯದೆಲ್ಲೆಡೆಗಳೊಳು ಸಂತತಂ ಚಂದ್ರಧರ-
ನಡಿಗಳಂ ಸಡಗರದೆ ನೆನೆಯುತಂ ವಿನಯದಿಂ
ದುಡಿವುತಿರ್ದಳ್ ಮನೆಯ ತೊತ್ತಿನಂತೆಡೆವಿಡದೆ
ಜಗವಿದಚ್ಚರಿವಡುತಿರೆ

ಎನಿತರುಚಿಯರೆಗೂಳನುಂಡಡುಂ ಸೊರಗಲಿ-
ಲ್ಲೆನಿತಡವಿಯೊಳ್ಬಾಳ್ದಡುಂ ಕಾಂತಿಗುಂದಲಿ-
ಲ್ಲೆನಿತು ಹಳೆ ಹರಕುಸೀರೆಯನುಟ್ಟೊಡುಂ ಶೋಭೆ-
ಗೆಡಲಿಲ್ಲ ಚಳಿಮಳೆಯೊಳು ||
ಎನಿತು ದುಡಿದೊಡನಾಕೆಗಾಮಯಂ ಬರಲಿಲ್ಲ-
ಮೆನಿತು ದಣಿದಡಮುಮಳವಾರಲಿಲ್ಲೆಂತಿರ್ದ-
ಡೆನಿತಾದಡುಂ ಕುಂದಡಸಲಿಲ್ಲಮುಭವ ಪ್ರ-
ಸಾದ ಪ್ರಭಾವದಿಂದ ||

—ಸಂಧಿ ೨—ಪದ್ಯ ೩೬,೩೭,೩೮,೪೦,೪೧

---


# ನಮ್ಮಲ್ಲಿ ದೊರೆಯುವ ವಿಜಯನಗರ ಸಾಹಿತ್ಯ

೧. **Vijayanagara Sexcentenary Commemoration Volume:** ವಿಜಯನಗರ ಸ್ಮಾರಕೋತ್ಸವ ಮಂಡಲದವರ ಇಂಗ್ಲಿಷ್ ಪ್ರಕಟನೆ: ಭಾರತದ ವಿದ್ವನ್ಮಣಿಗಳ ಪ್ರಬಂಧಗಳು; ೩೪ ಇಡಿಪುಟದ ಚಿತ್ರಗಳು; ೩೮೦ ಪುಟಗಳು. ೧೦—೦—೦

೨. ವಿಜಯನಗರ ಸಾಮ್ರಾಜ್ಯ— ದೇಸಾಯಿ ಪಾಂಡುರಂಗರಾಯರು ಬರೆದುದು. ಕನ್ನಡದಲ್ಲಿಯ ವಿಜಯನಗರ ಚರಿತ್ರಾತ್ಮಕ ಪ್ರಥಮ ಸಮಗ್ರ ಗ್ರಂಥವೆಂದರೆ ಇದೇ. ೨—೦—೦

೩. ಸಚಿತ್ರ ವಿಜಯನಗರ—ಆಲ್ಬಂ—ಕನ್ನಡ ವಿವರಣೆ ಸಹಿತ. ಪ್ರಯಾಣಿಕರಿಗೆ ಅತ್ಯುಪಯುಕ್ತ. ೦—೧೨—೦

೪. ಜಯಕರ್ನಾಟಕ ವಿಜಯನಗರ ವಿಶೇಷಾಂಕ— ವಿಪುಲಚಿತ್ರಗಳು, ಸಂಗ್ರಾಹ್ಯ ಲೇಖನಗಳು ೦—೬—೦

೫. ನಾಗರಿಕ—ಎಂ. ಆರ್. ಶ್ರೀ. ವಿರಚಿತ ಪದ್ಯನಾಟಕ ೦—೧೨—೦

೬. नागरिक— ಮೇಲಿನದರ ಹಿಂದೀ ಅನುವಾದ. ಹಿಂದೀ ಜ್ಞಾನಯಾತ್ರೀಮಂಡಲದ ಪ್ರಕಟನೆ. ೦—೮—೦

೭. ವಿದ್ಯಾರಣ್ಯವಿಜಯ— (ನಾಟಕ) ಡಿ. ವಿ. ಗುಂಡಪ್ಪನವರು ಬರೆದುದು. ಸಾದಾ ೧—೪—೦

೮. " " ಕ್ಯಾಲಿಕೊ ೨—೦—೦

೯. ವಿದ್ಯಾರಣ್ಯರ ಸಮಕಾಲೀನರು— (ಐತಿಹಾಸಿಕ ಗ್ರಂಥ) ಕ್ಯಾಲಿಕೊ ೨—೪—೦

೧೦. ಕೃಷ್ಣದೇವರಾಯ—(ನಾಟಕ)ಶ್ರೀ. ಎಸ್. ಆರ್. ಕರೂರ ಅವರು ಬರೆದುದು. ೦—೮—೦

೧೧. ಪಂಪಾಯಾತ್ರೆ— (ಸಚಿತ್ರ) "ವಿ. ಸೀ." ೦—೧೨—೦

೧೨. ತಾಳೀಕೋಟೆ— (ಏಕಾಂಕದೃಶ್ಯ) "ಶ್ರೀನಿವಾಸ" ೦—೧೦—೦

**ಜಯಕರ್ನಾಟಕ ಪುಸ್ತಕಾಲಯ, ಧಾರವಾಡ**


CC-0. Jangamwadi Math Collection. Digitized by eGangotri

# ಕನ್ನಡದ ಮುನ್ನಡೆ



ಕುಮಾರಿ ಪದ್ಮಾವತಿಯವರು

ಜ. ಕ. ವಾಚಕರಿಗೆ ಸುಪರಿಚಿತರಾಗಿರುವ **ಕುಮಾರಿ ಪದ್ಮಾವತಿಯವರು** ಇಂಗ್ಲಂಡಿನಲ್ಲಿ ತಮ್ಮ ವ್ಯಾಸಂಗವನ್ನು ಯಶಸ್ವಿಯಾಗಿ ಜರುಗಿಸಿ ಮರಳಿರುವರು. ಅಲ್ಲಿಯ ಬೆಡ್‌ಫರ್ಡ ಕಾಲೇಜಿನಲ್ಲಿ ೨ ವರ್ಷ " ಸಾಮಾಜಿಕ ಸೇವಾವಿಧಾನ " (Social Studies) ಎಂಬ ವಿಷಯವನ್ನು ಅಭ್ಯಾಸಮಾಡಿ, ತಕ್ಕ ಪ್ರಶಸ್ತಿಪತ್ರವನ್ನು ದೊರಕಿಸಿರುವರು. ವಿಶ್ವವಿದ್ಯಾಲಯದ ವ್ಯಾಸಂಗಕ್ಕೆ ಪೂರಕವಾಗಿ--ಅದರ ಭಾಗವೆಂದು, ಇಂಗ್ಲಂಡಿನ ಮತ್ತು ಯುರೋಪ ಖಂಡದ ಇತರ ದೇಶಗಳ ಸರಕಾರಿ ಮತ್ತು ಖಾಸಗಿ ಸಾಮಾಜಿಕ ಸೇವಾಕ್ರಮಗಳನ್ನು ನಿರೀಕ್ಷಿಸಿರುವರು. ಈ ಕನ್ನಡ ಕುವರಿಯು ಭಾರತದಲ್ಲಿ ತನ್ನ ಬೆಳ್ಜಸವನ್ನು ಬೀರಲಿ !

ಧಾರವಾಡದ ಶ್ರೀಮತಿ **ಕಮಲಾಬಾಯಿ ಜಮಖಂಡಿಯವರು** ಮುಂಬಯಿ ವಿಶ್ವವಿದಾಲಯದ ಪದವೀಧರರು. ಇಂಗ್ಲಂಡಿಗೆ ಹೋಗಿ 'ಟ್ರೇನಿಂಗ್' ಶಾಲೆಯಲ್ಲಿ ಶಿಕ್ಷಣಪಡೆದು ಭಾರತಕ್ಕೆ ಹಿಂದಿರುಗಿದವರು. ಇವರು ಝಾಂಜಿಬಾರದಲ್ಲಿರುವ ಶ್ರೀ. ಆಗಾಖಾನರ ಅಂಗ್ಲೋ-ಗುಜರಾತಿ ಹೈಸ್ಕೂಲಿನ ಪ್ರಿನ್ಸಿಪಾಲರಾಗಿ ಒಂದು ವರ್ಷದ ಕೆಳಗೆ ನಿಯಮಿಸಲ್ಪಟ್ಟಿದ್ದರು. ಅಲ್ಲಿಗೆ ಹೋಗಿ ಕೆಲವು ಕಾಲ ಆ ಅಧಿಕಾರದಲ್ಲಿದ್ದು ಈಗ ಭಾರತಕ್ಕೆ 'ಪಕ್ಲೀವ' ಎಂಬ ಹಡಗಿನಲ್ಲಿ ಹಿಂದಕ್ಕೆ ಬಂದಿರುತ್ತಾರೆ.

## ಬೀಬಿ ಅಮೀನಾ ಅವರ ಹಿಂದೂಧರ್ಮ ಸ್ವೀಕಾರ

ವಿಜಾಪುರದ ಸೇವಾನಿವೃತ್ತ ಸಬ್ ಇನ್‌ಸ್ಪೆಕ್ಟರರಾದ ಜಮಾಲುದ್ದೀನ ಸಾಹೇಬರ ಪುತ್ರಿ **ಬೀಬಿ ಅಮೀನಾ** ಇವರು ಹಿಂದೂ ಧರ್ಮದ ತತ್ವಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದು ಹಿಂದೂಧರ್ಮವನ್ನು ಸ್ವೀಕರಿಸಿರುವರು. ಬೀಬಿ ಅಮೀನಾ ಇವರು ಚಿಕ್ಕಂದಿನಿಂದ ಧಾರ್ಮಿಕ ಸಾಹಿತ್ಯದ ವ್ಯಾಸಂಗದಲ್ಲಿಯೇ ವೇಳೆ ಕಳೆಯುತ್ತಿರುವರು. ಅವರ ವಯಸ್ಸು ೨೦-೨೨ ಮಾತ್ರ ಇದೆ. ಸಾಲೆ ಕಾಲೇಜುಗಳಲ್ಲೋದದೆ ಮನೆಯಲ್ಲಿಯೇ ಇಂಗ್ಲಿಷ್ ಮತ್ತು ಪರ್ಶಿಯನ್ ಭಾಷೆಗಳಲ್ಲಿ ಒಳ್ಳೇ ಪ್ರವೀಣರಾಗಿದ್ದಾರೆ. ಸರ್ ಮಹಮ್ಮದ ಇಕ್ಬಾಲರು ಇವರು ಕಟ್ಟಿದ ಕವನಗಳನ್ನು ಓದಿ ಬೆರಗಾಗಿರುವರು. ಅನೇಕ ಪ್ರಸಿದ್ಧ ಸಾಹಿತಿಗಳು ಇವರ ಭಾಷಾ ಶೈಲಿಯನ್ನೂ ವಿಚಾರಗಳನ್ನೂ ಕಂಡು ಅಚ್ಚರಿಗೊಂಡಿರುವರು. 'ಜ್ಞಾನೇಶ್ವರೀ ಹೃದಯ' ಎಂಬ ಗ್ರಂಥವನ್ನು ಇವರು ಇಂಗ್ಲೀಷಕ್ಕೆ ಕವನರೂಪವಾಗಿ ಭಾಷಾಂತರಿಸಿರುವರು. ಇವರು ಯಾವಾಗಲೂ ಆಧ್ಯಾತ್ಮಿಕ ವಿಚಾರದಲ್ಲಿಯೆ ನಿಮಗ್ನರಾಗಿರುವರು. ಜತ್ತ ಊರಿನ ನ್ಯಾಯಾಧೀಶರಾದ ಶ್ರೀ. ಖಾಸನೀಸರು ಇವರಿಗೆ ಹಿಂದೂಧರ್ಮದ ದೀಕ್ಷೆಯನ್ನು ಕೊಟ್ಟು " ಸರಸ್ವತೀದೇವಿ " ಎಂದು ಹೆಸರಿಟ್ಟಿದ್ದಾರೆ.

ಟೋಕಿಯೋ ವಾಣಿಜ್ಯ ವಿಶ್ವವಿದ್ಯಾಲಯದಲ್ಲಿ ಅಂತರರಾಷ್ಟ್ರೀಯ ವಾಣಿಜ್ಯ ವ್ಯಾಸಂಗಕ್ಕಾಗಿ ೨ ವರ್ಷಗಳಿದ್ದು, ನಮ್ಮ ಪತ್ರಿಕೆಯಲ್ಲಿ ಜಪಾನದ ಜೀವನವನ್ನು ಕುರಿತು ವಿವಿಧ ಲೇಖನಗಳನ್ನು ಬರೆಯುತ್ತಿರುವ ಶ್ರೀಮಾನ್ **ಕೆರಾಚೂರು ಎಲ್. ನಂಜಪ್ಪನವರು** ಮೊನ್ನೆ ಮಾರ್ಚ್ ತಿಂಗಳಲ್ಲಿ ನಡೆದ ಪರೀಕ್ಷೆಯಲ್ಲಿ ೭ ವಿಷಯಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿರುವರಲ್ಲದೆ, ಅವರಿಗೆ ಒಂದುವರ್ಷದವರೆಗೆ ಪ್ರತಿತಿಂಗಳು ೧೦೦ ಯೆನ್ನುಗಳ (ಸು. ೧೫೦ ರೂ.ಗಳ) ಶಿಷ್ಯವೃತ್ತಿಯನ್ನು ಕೊಡಲಾಗಿದೆ. ಶ್ರೀಯುತರಿಗೆ ಉತ್ತರೋತ್ತರ ಯಶಸ್ಸನ್ನು ಕೋರುತ್ತೇವೆ.



ಕೆ. ಎಲ್. ನಂಜಪ್ಪನವರು

CC-0. Jangamwadi Math Collection. Digitized by eGangotri

ಶ್ರದ್ಧಾಂಜಲಿ

# ನಮ್ಮನ್ನಗಲಿದ ಪಂಜೆ ಮಂಗೇಶರಾಯರು

★

ಹಿರಿಯ ಕನ್ನಡ ಸಾಹಿತಿಗಳಲ್ಲಿ ಗಣ್ಯಸ್ಥಾನವನ್ನು ಪಡೆದ ಶ್ರೀಮಾನ್ ಪಂಜೆ ಮಂಗೇಶರಾಯರ ನಿಧನ ವಾರ್ತೆಯನ್ನರುಹಲು ತುಂಬಾ ವ್ಯಸನವಾಗುತ್ತಿದೆ. ಅವರೊಡನೆ ಬಂದ—ಅಲ್ಪ ಸಮಯದ್ದಾದರೂ ಆತ್ಮೀಯ ಸಂಬಂಧದಿಂದಲೋ ಏನೋ, ಆ ವ್ಯಸನವು ತೀವ್ರತರವಾಗಿದೆ. ಹತ್ತಿರ ಬಂದವರೊಡನೆ ಎಡೆಯ ಹತ್ತುಗಡೆ ಬೆಳೆಯಿಸುವ ಸೂಜಿಗಲ್ಲಿನ ಸ್ವಭಾವವು ಅವರದಾಗಿತ್ತು, ನಮಗೆ ಕಿರಿಯರಿಗೆ ದಾ ದೀಪಗಳಾಗಿ ತೋರು ಕೆಲವು ಜನ ಹಿರಿಯರಲ್ಲಿ ಅ ರೊಬ್ಬರಾಗಿದ್ದರು. ಹಿರಿಯ ರಲ್ಲಿ ಹಿರಿಯರಾಗಿದ್ದರೂ ಕಿ ಯರಲ್ಲಿ ಕಿರಿಯರಾಗಿದ್ದರು. ಅವರಾ ತಿಳಿತನ, ಎಳೆತನ, ಸಹಜತೆ, ಸರಲತೆ ಎಂತೆಂತಹರನ್ನೂ ಎಳೆದುಕೊಳ್ಳುತ್ತಿದ್ದಿತು. ರಾ.ಬ.ಆರ್. ನರಸಿಂಹಾಚಾರ್ಯರ ವಿಯೋಗದ ತರುವಾಯ ಕನ್ನಡಕ್ಕೆ—ಕರ್ನಾಟಕಕ್ಕೆ ಒದಗಿದ ಹಿರಿದಾದ ಆಪತ್ತಿಯಿದು.



ಶಿಶುಹೃದಯವನ್ನು ಅರಿತವರಾದ ಅವರ ಶಿಶುಗೀತಗಳು ಕನ್ನಡ ಸಾಹಿತ್ಯದಲ್ಲಿ ಮನ್ನಣೆಯ ಸ್ಥಾನವನ್ನು ಪಡೆದಿರುವವು. ಅವರ ಭಾವಗೀತಗಳು ಚಿಕ್ಕ, ಸುಲಭ, ಲಲಿತ, ಹಾಡಲು ಯೋಗ್ಯವಾದುವು. ಅವರ ಕೃತಿಗಳಲ್ಲಿ ಹುಲುಸಾದ ಅಚ್ಚಗನ್ನಡ ನುಡಿಗಳು ತುಂಬಿರುವವು. ಅವರ ಭಾಷಾಭ್ಯಾಸವು ಆಳವಾಗಿದ್ದಿತು; ಆದರೆ ಅವರದು ವೈಯಾಕರಣಿಯ ರೀತಿಯಲ್ಲ, ನಿರುಕ್ತಕಾರನದು. ಭಾಷೆಯು ಜೀವನದ ಪ್ರತೀಕ, ಕಾಲಗತಿಯ ಪ್ರತಿಬಿಂಬ ಎಂದು ತಿಳಿದಿರುವ ಸಮಾಜ ವಿಜ್ಞಾನಿಯ ದೃಷ್ಟಿಕೋನವು ಅವರದಾಗಿತ್ತು. ಕನ್ನಡ-ಕೊಂಕಣಿ, ಕನ್ನಡ-ತುಳುಗಳ ಒಳಬಳಕೆಯನ್ನು ಅಭ್ಯಾಸಿಸಿ, ಅವುಗಳಿಂದ ಕನ್ನಡದ ಕುಲಕಥೆಯನ್ನು ಹೇಳಿಸುವ ಅವರ ಕೈಚಳಕವು ವಿಸ್ಮಯಕಾರಕವಾಗಿದ್ದಿತು. ಅವರ ಸಾಹಿತ್ಯ ನಿರ್ಮಿತಿಯು ಶಿಕ್ಷಣದ ಅನುಭವದ ವಾತಾವರಣದಲ್ಲಿ ನಡೆದುದರಿಂದ ಜನಮನಕ್ಕೆ ನೇರವಾಗಿ ಮುಟ್ಟುತ್ತದೆ. ಅವರು ತಮ್ಮ ಜೀವಮಾನವನ್ನು ಶಿಕ್ಷಕರಾಗಿಯೂ ಶಿಕ್ಷಣಾಧಿಕಾರಿಗಳಾಗಿಯೂ ಕಳೆದರು. ಶಿಕ್ಷಕವೃತ್ತಿಯಿಂದ ನಿವೃತ್ತರಾದರೂ, ಶಿಕ್ಷಣಪ್ರೀತಿಯು ಅವರನ್ನು ಕೊನೆಯವರೆಗೂ ಬಿಡಲಿಲ್ಲ. ಶಿಕ್ಷಣದ ಬಗ್ಗೆ ಅವರದು ಅಭಿನವದೃಷ್ಟಿಯಾಗಿದ್ದಿತು. ಮಕ್ಕಳನ್ನು ಆಟ-ಪಾಟ, ಕವನ-ಕುಣಿತ, ಚಿತ್ರ-ಸಂಗೀತಗಳ ಸಹಾಯದಿಂದ ಕಲಿಸಬೇಕೆಂಬ ನವಪ್ರಯೋಗವಾದಿಗಳ ಗುಂಪಿಗೆ ಅವರು ಸೇರಿದ್ದರು. ಮಂಗಳೂರಿನ 'ಬಾಲಸಾಹಿತ್ಯಮಂಡಲ'ವು ಅವರ ಕಲ್ಪಕತೆಗೂ ಕರ್ತೃತ್ವಕ್ಕೂ ಸಾಕ್ಷಿಯಾಗಿದೆ. ದಕ್ಷಿಣಕನ್ನಡ ಜಿಲ್ಲೆಯ ಶಿಕ್ಷಕವರ್ಗಕ್ಕೆ ಶಿಕ್ಷಣದ - ಕನ್ನಡದ ಸೇವೆಯ ಉಚ್ಚಾದರ್ಶವನ್ನು ಅವರು ಕೊಟ್ಟಿರುವರು.

(ಸಂಪಾದಕರಿಂದ)

CC-0. Jangamwadi Math Collection. Digitized by eGangotri

ರಾಯರು ಬಿ. ಎ. ತರಗತಿಯಲ್ಲಿ ತೇರ್ಗಡೆಹೊಂದಿದೊಡನೆಯೇ ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿ ನೇಮಕಹೊಂದಿದರು. ಕ್ರಮವಾಗಿ ವಿದ್ಯಾಖಾತೆಯ ಇನ್‌ಸ್ಪೆಕ್ಟರರಾಗಿ, ತರುವಾಯ ಟ್ರೇನಿಂಗ್ ಕಾಲೇಜಿನ ಮುಖ್ಯಾಧ್ಯಾಪಕರಾಗಿ ಕೆಲಸಮಾಡಿದರು. ನಿವೃತ್ತರಾಗುವ ಸಮಯದಲ್ಲಿ ಮದ್ರಾಸ ಎಜುಕೇಶನಲ್ ಸರ್ವಿಸ್ ಗ್ರೇಡಿನಲ್ಲಿ ಪ್ರೊಫೆಸರರಾಗಿ, ಮಡಿಕೇರಿ ಹಾಯ್‌ಸ್ಕೂಲಿನ ಪ್ರಿನ್ಸಿಪಾಲರಾದರು. ಅಂತೂ ಶಿಕ್ಷಣ ತಜ್ಞರಾಗಿಯೆ ಆಯುಷ್ಯದ ಬಹುಭಾಗವನ್ನು ಕಳೆದರು.

ಕನ್ನಡಕ್ಕೆ ಇವರು ಮಾಡಿದ ಉಪಕಾರವನ್ನು ನೆನೆದು, ಕರ್ನಾಟಕವು ಇವರನ್ನು ರಾಯಚೂರಿನ ಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷರನ್ನಾಗಿ ಆರಿಸಿ, ಸತ್ಕರಿಸಿತು.

ಮಂಗಳೂರಿನಲ್ಲಿ ಒಂದೆರಡು ದಿನ ಅವರ ಆತಿಥ್ಯವನ್ನು ಹೊಂದುವ ಸುಯೋಗ ಬಂದಾಗ, ಅವರ ಸವಿಯಾದ ನಡೆವಳಿಕೆಯು ಅನುಭವಕ್ಕೆ ಬಂದಿತು. ಮನೆತನದಿಂದ ಸಾರಸ್ವತರಾಗಿದ್ದರೂ ಮಕ್ಕಳಿಗೆ ಕನ್ನಡವನ್ನು ಕಲಿಸುತ್ತಿದ್ದರು; ಅಲ್ಲದೆ ಮನೆಯಲ್ಲಿ ಕನ್ನಡವನ್ನೆ ಬಳಕೆಯ ಮಾತನ್ನಾಗಿಟ್ಟುಕೊಂಡಿದ್ದರು. ಅವರ ಕನ್ನಡದ ಅಭಿಮಾನವು ಹೃದಯದಿಂದ ಬಂದುದಾಗಿದ್ದಿತು.

ರಾಯರು ಕಳೆದ ತಿಂಗಳ ೨೫ನೆಯ ತಾ.ನ ದಿನ ಹೈದರಾಬಾದಿನಲ್ಲಿ, ತಮ್ಮ ಚಿರಂಜೀವರಾದ ಶ್ರೀ. ಜಿ. ಎಂ. ಪಂಜೆಯವರ ಮನೆಯಲ್ಲಿ, ರಾತ್ರಿಯ ೯ ಗಂಟೆಗೆ ಇಹಲೋಕಯಾತ್ರೆಯನ್ನು ಮುಗಿಸಿದರು. ಅವರ ಮಕ್ಕಳು ನಮಗೆ ಬರೆದ ಕಾಗದ ತೀರ ಆಂತರಂಗಿಕವಾಗಿದ್ದರೂ, ರಾಯರ ಪರಲೋಕಯಾತ್ರೆಯ ಗಂಭೀರ ಸನ್ನಿವೇಶವನ್ನು ಕನ್ನಡ ವಾಚಕವರ್ಗಕ್ಕೂ ತಿಳಿಸುವುದು ಅಗತ್ಯ ತೋರಿದ್ದರಿಂದ, ಕೆಲವು ಮಾತುಗಳನ್ನಿಲ್ಲಿ ಬರೆಯುತ್ತಿರುವೆವು.

ಐದು ದಿನಗಳಿಂದಲೂ ಅವರ ಮೈಯಲ್ಲಿ ಕಾಯಿಲೆಯಿದ್ದಿತು. ಮುಪ್ಪಿನ ಮುದುಕರಾಗಿದ್ದರೂ, ಕನ್ನಡ ಮತ್ತು ಕಲಿಸುವಿಕೆ—ಈ ಎರಡು ಹುಚ್ಚುಗಳ ಸಲುವಾಗಿ ರಾತ್ರಿ-ಅಪರಾತ್ರಿಯೆನ್ನದೆ ದೇಹಶ್ರಮವನ್ನು ಲೆಕ್ಕಿಸದಿದ್ದುದಕ್ಕೋ, ಹವೆಯಲ್ಲಿ ಒಮ್ಮೆಲೆ ಬದಲಾವಣೆಯಾದುದಕ್ಕೋ, ಅವರಿಗೆ ಶೀತಬಾಧೆಯಾಗಿ, ತೀವ್ರವಾಗಿಯೇ ಅದು ನ್ಯುಮೋನಿಯದಲ್ಲಿ ಪರಿಣಮಿಸಿತು. ತಜ್ಞ ಔಷಧೋಪಚಾರವು ನಡೆದು, ಅವರು ಗುಣಮುಖರಾಗುತ್ತಿರುವಂತೆ ತೋರಿತು. ೨೩-೨೪ನೆಯ ತಾ.ನ ದಿನಗಳಲ್ಲಿ ಅವರಿಗೆ ಜ್ವರವಿರಲಿಲ್ಲ. ಆದರೆ ವಾರ್ಧಕ್ಯ ಮತ್ತು ಹೃದಯದ ಅಶಕ್ತಿಯ ಮೂಲಕ ಅವರ ಪ್ರಕೃತಿಯಲ್ಲಿ ಒಮ್ಮೆಲೆ ಪಲ್ಲಟವಾಗಿ, ಮರುದಿನ ಸಂಜೆಗೆ ನಾಡಿಯು ಅತಿಮಂದವಾಗಿ ಚಲಿಸತೊಡಗಿತು. ಕೊನೆಯ ವರೆಗೂ ಅವರ ಮೈಯ ಮೇಲೆ ಪ್ರಜ್ಞೆಯಿದ್ದಿತು. ತಮ್ಮ ಸ್ನೇಹಿತರನ್ನೆಲ್ಲಾ ಹೆಸರುಗೊಂಡು ನೆನಸಿ, ಅವರಿಗೆ ತಮ್ಮ ಅಭೀಷ್ಟಚಿಂತನವನ್ನು ತಿಳಿಸಲು ಹೇಳಿದರು. ಹಳೆಯ ಗೆಳೆಯರಾದ ದಕ್ಷಿಣ ಕನ್ನಡದ ಹಳ್ಳಿಗಳಲ್ಲಿಯ ಶಾಲೆಯ ಉಪಾಧ್ಯಾಯರು, ನಚ್ಚಿನ ನಲುಮೆಯ ಆಳುಮಗ, ಅಡಿಗೆಯವ — ಪ್ರತಿಯೊಬ್ಬರನ್ನೂ ಸ್ಮರಿಸಿದರು. ಕೊನೆಯ ಗಳಿಗೆ ಸಮೀಪಿಸಿತೆಂದು ತಿಳಿದವರಾಗಿದ್ದರೂ, ಮನಃಶಾಂತಿಯನ್ನು ಅಚಲವಾಗಿಟ್ಟುಕೊಂಡಿದ್ದರು. ಚರಮನಿಮಿಷ ಬಂದಾಗ ಹೈದರಾಬಾದಿನ ಸ್ನೇಹಿತರನ್ನೂ ನೆರೆಹೊರೆಯವರನ್ನೂ ಕರೆಕಳುಹಿ, ಅವರನ್ನು ವ್ಯಕ್ತಿಶಃ ಬೀಳ್ಕೊಂಡರು.

ಅವರ ತುಟಿಯ ಮೇಲೆ ಜಿನುಗಿದ ಕೊನೆಕೊನೆಯ ಶಬ್ದಗಳೆಂದರೆ ಕುಮಾರವ್ಯಾಸ ಭಾರತದೊಳಗಿನ ಕೆಲವು ನುಡಿಗಳು. ಭಾರತಸಂಬಂಧವಾಗಿ ಮೈಸೂರು ವಿದ್ಯಾನಿಲಯದ ಆಜ್ಞೆಯ ಮೇರೆಗೆ ತಾವು ಕೈಕೊಂಡ ಕಾರ್ಯವು ಕೊನೆಗಾಣದೆ ಉಳಿಯಿತಲ್ಲಾ ಎಂದು ಮರುಗುತ್ತಿದ್ದರು. ಕರ್ನಾಟಕ-ಕರ್ನಾಟಕ, ಏಕೀಕರಣ-ಏಕೀಕರಣ ಎಂದು ಕೊನೆತನದ ಕನವರಿಸಿದರು.

ಜಯಕರ್ನಾಟಕವನ್ನೂ ಅದಕ್ಕಾಗಿ ಕೆಲಸಮಾಡುವ ಈ ಅಲ್ಪರನ್ನೂ ಅವರು ಸ್ಮರಿಸಿದರು. ಹೆಚ್ಚು ಬರೆದರೆ ಔಚಿತ್ಯಭಂಗವಾದೀತು. ಜಯಕರ್ನಾಟಕದ ಮೇಲೆ ಅವರ ಆಶೀರ್ವಾದವು ಅಖಂಡವಾಗಿರಲಿ, ಕೊನೆಯ ಹೊರೆಯಿಂದ ಮನ ನಡುಗಿದಾಗ ಎಂಟೆದೆಯ ಬಂಟತನವನ್ನು ನೀಡಲಿ—ಎಂದು ಲೀನ-ದೀನಭಾವದಿಂದ ಪರಮಾತ್ಮನಲ್ಲಿ ಪ್ರಾರ್ಥಿಸುವೆವು; ದಿವಂಗತರ ಆತ್ಮಕ್ಕೆ ಸದ್ಗತಿಯಾಗಲೆಂದು ಕೋರುವುದಲ್ಲದೆ, ಅವರ ಕುಟುಂಬೀಯರಿಗೆ ನಮ್ಮ ಹೃತ್ತಾಪವನ್ನು ಸೂಚಿಸುವೆವು.

CC-0. Jangamwadi Math Collection. Digitized by eGangotri




## ನಾಡಹಬ್ಬ

ಕಳೆದ ತಿಂಗಳ ವೃತ್ತಪತ್ರಗಳನ್ನು ಪರಿಶೀಲಿಸಿದರೆ, ನಾಡಹಬ್ಬವು ಕರ್ನಾಟಕದ ಸಂದಿಗೊಂದಿಗಳಲ್ಲಿಯೂ ಪ್ರಸರಿಸಿ, ಗಡಿನಾಡಿನಲ್ಲಿಯೂ ಗುಡುಗಾಡಿ, ಹೊರನಾಡುಗಳಲ್ಲಿಯೂ ಹರಿದಾಡಿದುದು ಪ್ರತೀತವಾಗುವುದು. ಪುತ್ತೂರಿನಲ್ಲಿ ಎಂದಿನಂತೆ ಕರ್ನಾಟಕಕ್ಕೇ ಮಾದರಿಯಾಗುವ ರೀತಿಯಲ್ಲಿ ನೆರವೇರಿತು; ಮಂಗಳೂರಿನಲ್ಲಿ ಮಿತ್ರಮಂಡಳಿಯಿಂದ 'ಕರ್ನಾಟಕ ದೃಷ್ಟಿ'ಯಿಂದ ಆಚರಿಸಲ್ಪಟ್ಟಿತು; 'ಕನ್ನಡ ಹಬ್ಬ'ದ ಹೆಸರಿನಲ್ಲಿಯೇ ಆಗಲಿ, ಮೈಸೂರು ಸೀಮೆಯಲ್ಲಿಯೂ ಕಾಲಿಕ್ಕಿತು— ಶಿವಮೊಗ್ಗೆಯೇ ಇದಕ್ಕೆ ಸಾಕ್ಷಿ: ಸೊಲ್ಲಾಪುರದಲ್ಲಿಯೂ 'ಕನ್ನಡವು ಮುನ್ನಡೆ'ಯುವ ರೀತಿಯಲ್ಲಿ ಸಾಂಗವಾಯಿತು — ಕರ್ನಾಟಕ ಸಂಘಕ್ಕೆ ಪ್ರಸಿದ್ಧ ಶ್ರೀಮಂತರೊಬ್ಬರು ಭವ್ಯ ಜಾಗೆಯನ್ನು ಉಚಿತವಾಗಿ ಕೊಟ್ಟಿರುವರಲ್ಲದೆ, ಕನ್ನಡದಲ್ಲಿಯೆ ಹಲಿಗೆಗಳನ್ನು ಬರೆದು ಹಚ್ಚುವ ಚಳವಳಿ ಅಲ್ಲಿ ಬಲಗೊಳ್ಳುತ್ತಿದೆ; ಚಿಕ್ಕೋಡಿ-ಗೋಕಾಕ ಮೊದಲಾದ ಮರಾಟಿಯ ನೆರಳಲ್ಲಿರುವ ಊರುಗಳಲ್ಲಿಯೂ ವಿಜೃಂಭಿಸಿತು; ಕೊಲ್ಲಾಪುರ-ಬೆಳಗಾವಿ ಗಡಿನಾಡಿನಲ್ಲಿಯ ಸದಲಗೆ-ಶಮನೇವಾಡಿ-ಬೆಡಕೀಹಾಳ ಮೊದಲಾದ ಗ್ರಾಮಗಳಲ್ಲಿಯೂ ಬೀಡುಬಿಟ್ಟಿತು; ಬಳ್ಳಾರಿ ಜಿಲ್ಲೆ-ಹೈದರಾಬಾದ ಸಂಸ್ಥಾನಗಳ ನಗರೋಪನಗರಗಳಲ್ಲಿಯೂ ಜರುಗಿತು; ಅಹಮ್ಮದನಗರ ಮೊದಲಾದ ಪರಪ್ರಾಂತೀಯ ಪಟ್ಟಣಗಳಲ್ಲಿಯೂ ಕನ್ನಡದ ಗುಡಿಯನ್ನು ಎತ್ತಿಹಿಡಿಯಿತು.

ನಾಡಿಗೆ ನಾಡೇ ಒಂದು ದೇಹ—ಒಂದು ಜೀವ--ಒಂದು ಜನವೆಂಬ ರೀತಿಯಲ್ಲಿ ನಡೆನುಡಿಯುವಂತೆ ಮಾಡಿದ ಈ ಹಬ್ಬದ ಹೆಸರು ಸಾರ್ಥಕವಾಗಿದೆಯೆಂದು ಹೇಳಬಹುದು.

## ಕಾಂಗ್ರೆಸ್ಸು ಕನ್ನಡಿಗರ ಆಕಾಂಕ್ಷೆಗಳನ್ನು ಪೂರೈಸುವುದೇ ?

"ತತ್ತ್ವತಃ ಹೌದು, ವ್ಯವಹಾರತಃ ಅಲ್ಲ" ಎಂಬ ನಿಷ್ಕರ್ಷೆಯು, ಕಾಂಗ್ರೆಸ್ಸಿನ ಅಧಿಕಾರವರ್ಗದವರು ವಹಿಸಿದ ಧೋರಣೆಯಿಂದ ನಿಷ್ಪನ್ನವಾಗುತ್ತಿದೆ.

ಮುಂಬಯಿ ಸರಕಾರದ ಉಪಮಂತ್ರಿಗಳಾಗಿದ್ದ ಶ್ರೀ. ನೇಸ್ವಿಯವರು ಹುಬ್ಬಳ್ಳಿಯ ಮಾನವಮಿ ಉತ್ಸವದ ಬಹುಮಾನ ವಿನಿಯೋಗ ಸಮಾರಂಭದಲ್ಲಿ ಏಕೀಕರಣವನ್ನು ಕುರಿತು ಕೆಲಮಾತುಗಳನ್ನು ಹೇಳಿದರು. ಅವರ ಭಾಷಣವನ್ನು ನಾವು ಪುನಃ ಪುನಃ ಓದಿದ್ದೇವೆ. ಆದರೆ ನಮಗೆ ಅವರ ಮಾತುಗಳಲ್ಲಿ ಹೊಸ ವಿಷಯವೇನೂ ತೋರಿಬರಲಿಲ್ಲ. 'ಏಕೀಕರಣಕ್ಕಿಂತ ಸ್ವರಾಜ್ಯವು, ಹೆಚ್ಚಿನ ಮಹತ್ವದ ವಿಷಯ; ಮೊದಲು ಸ್ವರಾಜ್ಯ, ಆ ಮೇಲೆ ಏಕೀಕರಣ; ಕಾಂಗ್ರೆಸ್ಸಿನ ಚುನಾವಣೆಪತ್ರಿಕೆಯಲ್ಲಿ ಏಕೀಕರಣದ ನಿರ್ದೇಶವಿಲ್ಲ; ಗಾಂಧಿಯವರೇ ಏಕೀಕರಣಕ್ಕೆ ಪ್ರತಿಬಂಧವಿರಕೂಡದೆಂದು ಆಜ್ಞೆ ಮಾಡಿರುವಾಗ, ಯಾವ ಕಾಂಗ್ರೆಸ್ ಮಂತ್ರಿಗಳೂ ಆದನ್ನು ವಿರೋಧಿಸಲಾರರು; ಕಾಂಗ್ರೆಸ್ಸು ಭಾಷಾನ್ವಯ ಪ್ರಾಂತರಚನೆಗೆ ೧೭ ವರ್ಷಗಳಿಂದಲೂ ಮನ್ನಣೆ ಕೊಟ್ಟಿದೆ; ಕನ್ನಡವು ಸ್ವತಂತ್ರ ಪ್ರಾಂತವಾಗುವುದೆಂಬುದರ ಬಗ್ಗೆ ಯಾವ ಸಂದೇಹವೂ ಇಲ್ಲ.' ಎಲ್ಲಾ ಚರ್ವಿತಚರ್ವಣ, ಪಿಷ್ಟಪೇಷಣ. ಆಭಾಸಗಳ ದೊಡ್ಡದೊಂದು ಮೊಟ್ಟೆ. ಈ ಮಾತು



CC-0. Jangamwadi Math Collection. Digitized by eGangotri

ಗಳಿಂದ ಹಲವರು ಸ್ವಾಭಾವಿಕವಾಗಿ ರೇಗಿದ್ದಾರೆ. ನಾವೂ ರೇಗಬಹುದಾಗಿತ್ತು. ಆದರೆ ರೇಗಬಾರದೆಂದು ನಿಶ್ಚಯ ಮಾಡಿಕೊಂಡಿರುವೆವು. ಉಪಮಂತ್ರಿಗಳಿಗೆ ನಾವಿಷ್ಟೇ ಹೇಳುವೆವು; 'ಏಕೀಕರಣವಾದಿಗಳಿಗೂ ದೇವರು ಕೊಂಚ ದೇಶಾಭಿಮಾನವನ್ನು ಕೊಟ್ಟಿದ್ದಾನೆ; ಅಲ್ಲದೆ ಗಟ್ಟಿ ಯಾವುದು, ಟೊಳ್ಳು ಯಾವುದು ಎಂದು ತಿಳಿದುಕೊಳ್ಳುವ ಬುದ್ಧಿಯನ್ನೂ ದಯಪಾಲಿಸಿದ್ದಾನೆ. ಕಾಂಗ್ರೆಸ್ ಮುಖಂಡರು, ವಿಶೇಷತಃ ಹೊಣೆಗಾರ ಅಧಿಕಾರಿಗಳು ಇದ್ದುದನ್ನು ಜಳಜಳ ಹೇಳಬೇಕಲ್ಲದೆ, ಹಿಂದಿನ ರಾಜಕೀಯ ಮುಖಂಡರಂತೆ ದುಂಡುಸುತ್ತುವ ಮಾತುಗಳನ್ನಾಡಬಾರದು.'

ಮೇಲೆ ಉದಾಹರಿಸಿದ ಅವರ ಮಾತುಗಳ ಮಾಲಿಕೆಯಲ್ಲಿ ಹೆಚ್ಚಿನ ಮಹತ್ವದ (ಸರಕಾರದ ಧೋರಣೆಯ ಮೇಲೆ ಪ್ರಕಾಶ ಕೆಡಹುವ) ಇನ್ನೊಂದು ಮಾತನ್ನು ನಾವು ಬೇಕೆಂತಲೆ ಕೊಟ್ಟಿಲ್ಲ. ಅದು ಹೀಗಿದೆ: 'ಗುಜರಾಥ, ಮಹಾರಾಷ್ಟ್ರ ಮತ್ತು ಕರ್ನಾಟಕ—ಈ ಮೂರು ಪ್ರಾಂತಗಳೂ ಒಟ್ಟಾಗಿ ಒಂದೇ ಮಂತ್ರಿಮಂಡಳದ ಸರಕಾರದ ಅಧೀನದಲ್ಲಿರುವುದು ಇಲಾಖೆಯ ಶಕ್ತಿಯನ್ನು ಹೆಚ್ಚಿಸಿದೆ. ಹೀಗೆ ಮೂರು ಪ್ರಾಂತಗಳೂ ಒಗ್ಗಟ್ಟಾಗಿ ಚುನಾವಣೆಯ ಪತ್ರಿಕೆಯಲ್ಲಿ ನಿರೂಪಿತವಾಗಿರುವ ಸಾರ್ವತ್ರಿಕ ಪ್ರಶ್ನೆಗಳನ್ನು ಬಿಡಿಸುವುದರಲ್ಲಿ ತಮ್ಮ ಸರ್ವಶಕ್ತಿಯನ್ನು ಮೊಟ್ಟಮೊದಲಿಗೆ ಹಾಕಬೇಕು....'

ಇದೊಂದು ಬಹಳ ಮಹತ್ವದ ಹೇಳಿಕೆಯಾಗಿದೆ. ಇದೀಗ ಮುಂಬಯಿ ಪ್ರಾಂತದ ರಾಜಧಾನಿಯೆನಿಸಿರುವ ಪುಣ್ಯನಗರಿಯಲ್ಲಿ ತೆರೆಮರೆಯಲ್ಲಿ ನಡೆದ ರಾಜಕೀಯ ಆಪ್ತಾಲೋಚನೆಗಳಲ್ಲಿ ಕೆಲವಂಶಗಳು ಗಾಳಿಯ ಮೇಲೆ ತೇಲಿಬರುತ್ತಿವೆ. ಅವು ನಮ್ಮ ಅನುಮಾನವನ್ನು ಸಮರ್ಥಿಸುತ್ತಿವೆ. ಅದೆಂದರೆ ಗುರ್ಜರರು ಮುಂಬಯಿಪ್ರಾಂತದ ವಿಭಜನೆಗೆ ವಿರುದ್ಧರಾಗಿರುವರು; ಮುಂಬಯಿನಗರದ — ಅದೇಕೆ ಇಡಿಯ ಪ್ರಾಂತದ—ಸಂಪತ್ಸೂತ್ರಗಳು ಇದೀಗ ಅವರ ಕೈಯಲ್ಲಿವೆ;—ಪ್ರಾಂತವನ್ನು ವಿಭಾಗಿಸುವುದರಿಂದ ಅವರಾ ಹೆಚ್ಚಳವು ಕಂದಿಕುಂದಿಹೋಗುವುದು. ಪ್ರಾಂತವಿಭಜನೆಯಿಂದ ಮಹಾರಾಷ್ಟ್ರಕ್ಕೇನೂ ಬಾಧಕವಿಲ್ಲ; ಅದು ಕ. ಏಕೀಕರಣಕ್ಕೆ ಅನುಕೂಲವಾಗಿಯೇ ಇದೆ. ಆದರೆ ಬೇರೆ ಕಾರಣಗಳ ಬಲದಿಂದ ಗುರ್ಜರರು ಕರ್ನಾಟಕರ ಮನವೊಲಿಸಿದ್ದಾರೆ. ಉಪಮಂತ್ರಿಗಳ ಭಾಷಣದಲ್ಲಿ ಧ್ವನಿತವಾಗುತ್ತಿರುವಂತೆ, ಪ್ರಾಂತದ ಆಡಳಿತದ ಬಗ್ಗೆ ಸರಕಾರದ ನೀತಿಸೂತ್ರಗಳು ಈಗಾಗಲೆ ನಿಶ್ಚಿತವಾಗಿವೆ; ಅವುಗಳನ್ನು ಜಾರಿಯಲ್ಲಿ ತರುವ ಕೆಲಸಕ್ಕೆ ಮಂತ್ರಿಗಳು ವಾಗ್ಬದ್ಧರಾಗಿದ್ದಾರೆ. ಇದೀಗ ಏಕೀಕರಣದ ವಿಚಾರವನ್ನು ಕೈಕೊಳ್ಳಲು ಮಂತ್ರಿಮಂಡಲಕ್ಕೆ ಬಿಡುವಿಲ್ಲ. ಆದರೆ ಪೂರ್ವಘೋಷಿತ ಧೋರಣೆಗನುಸಾರವಾಗಿ ಶಾಬ್ದಿಕ ಪುರಸ್ಕಾರವನ್ನು ಕೊಡಲೇಬೇಕು.

ನಮ್ಮ ಅನುಮಾನವು ತಳಬುಡವಿಲ್ಲದುದಾಗಿರಬಹುದು; ಆದರೆ ಅದರ ಅಯಥಾರ್ಥತೆಯನ್ನು ತೋರಿಸಿಕೊಡುವುದು ಅಧಿಕಾರಿವರ್ಗದ ಕೈಯಲ್ಲಿದೆ. ಏಕೀಕರಣದಿಂದ ಮುಂಬಯಿ ಪ್ರಾಂತಕ್ಕೆ, ಅದರಲ್ಲೂ ಮುಂಬಯಿ ನಗರಕ್ಕೆ ದೊಡ್ಡ ಹಾನಿ ತಟ್ಟುವುದರಲ್ಲಿ ಸಂಶಯವಿಲ್ಲ. ಆದರೆ ಈವರೆಗಿನ ಸುಲಿಗೆ ಸಾಕು. ಕರ್ನಾಟಕವು ತಾನು ಬೀಸಿದ ಹಿಟ್ಟಿನಿಂದ ಹೆರರ ಹೊಟ್ಟೆ ತುಂಬಿಸುವ ಕಾಯಕಕ್ಕೆ ಇನ್ನು ಸೈಯಿಕ್ಕಬಾರದೆಂದು ನಿಶ್ಚಯಿಸಿದೆ. ಈ ಮಾರ್ಗದಲ್ಲಿ ತನ್ನವರಿಂದ, ಪರರಿಂದ ಬಂದ ಎಂತಹ ತೊಂದರೆಗಳನ್ನು ನೀಗಲೂ ಅದು ಪ್ರತಿಜ್ಞಾಬದ್ಧವಾಗಿದೆ.

ಮದ್ರಾಸ ಪ್ರಾಂತದಲ್ಲಿಯೂ ಇದೇ ಪ್ರಶ್ನೆಯು ಪ್ರಾಂತವಿಭಜನೆಗೆ ಅಡ್ಡಿಯಾಗಿದೆಯೆಂಬುದು ಅಲ್ಲಿಯ ಪ್ರಧಾನಸಚಿವರಾದ ಶ್ರೀ. ರಾಜಗೋಪಾಲಾಚಾರ್ಯರ ಮಾತುಗಳಿಂದ ವ್ಯಕ್ತವಾಗುವುದು:—'ಮದ್ರಾಸದ ಒಂದು ಪ್ರಾಂತವು ನಾಲ್ಕು ಪ್ರಾಂತಗಳಾಗಿ ಒಡೆದುಹೋಗುವ ಸಂದರ್ಭದಲ್ಲಿ ಪ್ರತಿಯೊಂದು ಪ್ರಾಂತವೂ ಸ್ವತಂತ್ರವಾಗಿ ಆಡಳಿತದ ಖರ್ಚುಗಳನ್ನು ವಹಿಸಬಲ್ಲುದೆ? ಬಹುಶಃ ಹೊಸದ ಕರವನ್ನು ಏರ್ಪಡಿಸಿ, ಈಗ ಇರುವುದಕ್ಕಿಂತಲೂ ಎರಡು ಪಾಲು ಹೆಚ್ಚಿಸಿದರೆ ತಾನೆ ಖರ್ಚುಗಳನ್ನು ನಿರ್ವಹಿಸುವುದು ಸಾಧ್ಯ.'



CC-0. Jangamwadi Math Collection. Digitized by eGangotri

ಮದ್ರಾಸದಲ್ಲಿಯ ಕಾಂಗ್ರೆಸ್ ಸಂಘಟನೆಯು ಅನ್ಯಾದೃಶವಾದುದು; ಅದರ ಕರ್ಣಧಾರರಾದ ಶ್ರೀ. ರಾಜಗೋಪಾಲಾಚಾರ್ಯರವರ ಕಾರ್ಯಶಕ್ತಿಯು ಅಸದೃಶವಾದುದು. ಬಯಸಿದುದನ್ನು ಮಾಡಿಬಿಡುವ ಹಟವೂ ಹುಮ್ಮಸ್ಸೂ ಅವರಲ್ಲಿದೆ. ಮುಂಬಯಿ-ಮದ್ರಾಸ ಪ್ರಾಂತಗಳ ಕಾಂಗ್ರೆಸ್ ಸರಕಾರಗಳ ನೀತಿಯು ಕ. ಏಕೀಕರಣಕ್ಕೆ (ಪ್ರಕೃತಕ್ಕೇ ಆಗಲಿ) ಪ್ರತಿಕೂಲವಾಗಿದ್ದರೆ, ಕನ್ನಡಿಗರು ಎಂತೆಂತಹ ತೊಂದರೆಗಳನ್ನೆದುರಿಸಬೇಕಾಗಿದೆಯೆಂಬದು ವ್ಯಕ್ತವಾಗದೆ ಇರದು.

(ಇದು ಬರೆದಾದ ಮೇಲೆ, ಎ. ಐ. ಸಿ. ಸಿ. ಸಭೆಯಲ್ಲಿ ಭಾಷಾನ್ವಯ ಪ್ರಾಂತವಿಭಜನೆಯ ನಿರ್ಣಯವು ಸ್ವೀಕೃತವಾಗಿದೆ. ಅದರ ಪರಿಣಾಮವು ಮುಂಬಯಿ-ಮದ್ರಾಸ ಮಂತ್ರಿಮಂಡಳಗಳ ಮೇಲೆ ಏನಾಗುವುದೆಂಬುದು ನಿರೀಕ್ಷಿಸಬೇಕಾದುದು. ಸಂ. ಜ. ಕ.)

## ಏಕೀಕರಣಕ್ಕೆ ಸಾರ್ವತ್ರಿಕ ಬೆಂಬಲ

ಅಧಿಕಾರಿವರ್ಗವು ಅನಾಸ್ಥೆಯುಳ್ಳದಾದರೂ ಏಕೀಕರಣದ ಬಗ್ಗೆ ಜನತೆಯಲ್ಲಿ ಸಾರ್ವತ್ರಿಕವಾದ—ಅಭೂತಪೂರ್ವವಾದ ಉತ್ಸಾಹವು ತೋರಿಬರುತ್ತಿದೆ. ನಾಡಹಬ್ಬದಲ್ಲಿ ಅಕ್ಟೋಬರ ತಾ. ೧೦ನೆಯ ದಿನ ಏಕೀಕರಣದಿನವು ಕರ್ನಾಟಕದ ಮೂಲೆಮೂಲೆಗಳಲ್ಲಿಯೂ ಆಚರಿಸಲ್ಪಟ್ಟಿತು. ಗಡಿನಾಡಿನಲ್ಲಿಯೂ ತುಂಬಾ ಜಾಗೃತಿಯಾಗಿದೆ. (ಬೇರೆ ಕಡೆ ಬಂದ ಶ್ರೀ. ಮುದವೀಡು ಕೃಷ್ಣರಾಯರ ಲೇಖನವನ್ನು ನೋಡಿರಿ.) ಮಹಾರಾಷ್ಟ್ರದ ಮುಖಂಡರಾದ ಶ್ರೀ. ನ. ಚಿ. ಕೇಳಕರ ಅವರು ತಮ್ಮ ಕರ್ನಾಟಕ ಸಂಚಾರದಲ್ಲಿ ಏಕೀಕರಣಕ್ಕೆ ಹಾರ್ದಿಕ ಪುರಸ್ಕಾರವನ್ನಿತ್ತಿರುವರು. ಅವರ ಅಧ್ಯಕ್ಷತೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಚಿತ್ಪಾವನ (ನಮ್ಮ ಕಡೆ ಕೊಂಕಣಸ್ಥರೆಂದು ಕರೆಯಲ್ಪಡುವ) ಬ್ರಾಹ್ಮಣರ ಪರಿಷತ್ತು ಮುಂಡಾಜೆಯಲ್ಲಿ ಅಕ್ಟೋಬರ ೧೯ನೆಯ ತಾ.ನ ದಿನ ಸೇರಿ, ಕರ್ನಾಟಕ ಏಕೀಕರಣಕ್ಕೆ ಬೆಂಬಲವನ್ನಿತ್ತಿತು. ಮಂಗಳೂರಿನಲ್ಲಿ ೧೦ನೆಯ ತಾ.ನ ದಿನದ ಸಭೆಯಲ್ಲಿ, ಅಧ್ಯಕ್ಷರಾದ ದಿ. ಬ. ಮಹಾಬಲ ಹೆಗ್ಗಡೆಯವರು ಇಂತು ಮಾತನಾಡಿದರು:—

ಒಂದು ವೇಳೆ ಪ್ರಾಂತರಚನೆಯಾಗದಿದ್ದರೆ ಆಗುವ ಕೆಡಕೇನು? ಮಂಗಳೂರಿನಿಂದ ಮದ್ರಾಸು ಸುಮಾರು ೬೦೦ ಮೈಲು ದೂರದಲ್ಲಿದೆ. ನಮ್ಮ ನ್ಯಾಯಸ್ಥಾನವು ಅಲ್ಲದೆ ವಿಶ್ವವಿದ್ಯಾಲಯವೂ ಅಲ್ಲಿದೆ. ನಮಗೆ ಅಲ್ಲಿಗೆ ಹೋಗಿ ವ್ಯವಹರಣೆ ನಡೆಸುವುದು ಮತ್ತು ನಮ್ಮ ಯುವಕರನ್ನು ವಿದ್ಯೆಗಾಗಿ ಅಲ್ಲಿಗೆ ಕಳುಹಿಸುವುದು ಕಷ್ಟದ ಮತ್ತು ನಷ್ಟದ ಕೆಲಸ. ಮದ್ರಾಸ್ ನ್ಯಾಯವಿಧಾಯಕ ಸಭೆಗಳಲ್ಲಿ ಇರುವ ಕರ್ನಾಟಕದ ಪ್ರತಿನಿಧಿಗಳ ಸಂಖ್ಯೆಯು ಬಹಳ ಕಡಿಮೆಯಾದ್ದರಿಂದ ಕ. ಜಿಲ್ಲೆಗೆ ಯಾವ ಅನುಕೂಲತೆಯೂ ದೊರೆಯುವುದಿಲ್ಲ. ಆಂಧ್ರರೂ ತಮಿಳರೂ ಅಧಿಕ ಸಂಖ್ಯೆಯಲ್ಲಿರುವ ಮದ್ರಾಸ್ ನ್ಯಾಯವಿಧಾಯಕ ಸಭೆಯು ದಕ್ಷಿಣ ಕನ್ನಡದ ಕಡೆಗೆ ತನ್ನ ದೃಷ್ಟಿಯನ್ನು ಬೀರುವುದಿಲ್ಲ. ಈ ಜಿಲ್ಲೆಯಿಂದ ಸುಮಾರು ೬೦ ಲಕ್ಷ ರೂಪಾಯಿಗಳು ಸರಕಾರಕ್ಕೆ ಹೋಗುತ್ತವೆಯಾದರೂ ನಮ್ಮ ಜಿಲ್ಲೆಯ ನದಿಗಳಿಗೆ ಸೇತುವೆಗಳಿಲ್ಲ; ಬೇಸಾಯಗಾರರ ಉಪಯೋಗಾರ್ಥವಾಗಿ ನೀರಾವರಿ ಕೆಲಸಗಳಿಲ್ಲ. ನಮ್ಮದೊಂದು ಪ್ರಾಂತವಿರುತ್ತಿದ್ದರೆ ಈ ಜಿಲ್ಲೆಯು ಅಲಕ್ಷ್ಯದಿಂದ ಕಾಣಲ್ಪಡುತ್ತಿದ್ದಿಲ್ಲ. ನಮ್ಮ ಮಾತನ್ನು ನಮ್ಮ ಬಂಧುಗಳು ಕೇಳುವಂತೆ ನಮ್ಮ ಪ್ರಾಂತದಲ್ಲಿ ಮಾಡಬಹುದು.

ಸಭೆಯಲ್ಲಿ ಶ್ರೀ. ಕಡೆಂಗೋಡ್ಲು ಶಂಕರಭಟ್ಟರೂ ಇನ್ನಿತರರೂ ಬೆಂಬಲವಿತ್ತು ಮಾತನಾಡಿದರು.

## ತಾತ್ಪೂರ್ತಿಕ ಏಕೀಕರಣದ ಯೋಜನೆಯು ಘಾತಕ!

ಮಂಗಳೂರಿನ ರಾಷ್ಟ್ರಬಂಧು ಪತ್ರಿಕೆಯಲ್ಲಿ ಕುಂದಾಪುರದ ಶ್ರೀ. ಭಾಸ್ಕರರಾವ್ ಎಂಬವರು ತಾತ್ಪೂರ್ತಿಕ ಏಕೀಕರಣದ ವಿಚಾರದ ಅವ್ಯವಹಾರ್ಯತೆಯನ್ನೂ ಅನಿಷ್ಟತೆಯನ್ನೂ ಈ ಬಗೆಯಾಗಿ ವಿಶದಪಡಿಸಿರುವರು:—

ಕೊಡಗು ನೀಲಗಿರಿ ಮುಂತಾದ ಕನ್ನಡ ಪ್ರದೇಶದ ಜನರು ಈ ಸಲಹೆಗಳಿಗೆ ಸಮ್ಮತಿಸುವರೆಂದು ಹೇಳಲು ಬರುವುದಿಲ್ಲ. ಕೊಡಗು ದೇಶದ ಜಮೀನ್ದಾರ ಸಂಘದವರು ಮುಂತಾದವರು ಸ್ವತಂತ್ರ ಕರ್ನಾಟಕ ಪ್ರಾಂತರಚನೆಯಾಗುವಾಗ ತಾವು ಅದರಲ್ಲಿ ಸಂತೋಷದಿಂದ ಸೇರುತ್ತೇವೆಂದು ಠರಾವು ಪಾಸುಮಾಡಿದ್ದು ನಿಜವಾದರೂ ದೂರದ ಮುಂಬಯಿ ಪ್ರಾಂತಕ್ಕೆ ಸೇರಿಕೊಳ್ಳಲು ಅವರು ಒಪ್ಪಿಗೆ ಕೊಡುವುದು ಅಸಂಭವವಾಗಿ ತೋರುವುದು. ಒಂದು ವೇಳೆ ಅವರು ಒಪ್ಪಿದರೂ ಕೊಡಗು ಹಿಂದುಸ್ಥಾನ ಸರಕಾರದ ಕೈಕೆಳಗಿರುವುದರಿಂದ ವೈಸರಾಯರು ಸಮ್ಮತಿಯನ್ನು ಇತ್ತರೆ ಮಾತ್ರ ಸಾಧ್ಯವಾಗಬಹುದು. ಆದುದರಿಂದ ನಮ್ಮ ಮುಖಂಡರ ಈ ಸಲಹೆಯೇನೋ ಯೋಗ್ಯವಾಗಿರಬಹುದು; ಸುಲಭಸಾಧ್ಯವೆಂದು ತೋರಬಹುದು. ಆದರೆ ವಿಚಾರಮಾಡಿದರೆ ಸ್ವತಂತ್ರ ಕರ್ನಾಟಕ ಪ್ರಾಂತದ ಪ್ರಶ್ನೆಯಷ್ಟೆ, ಇದು ಸಹ ಕಠಿಣ ಸಮಸ್ಯೆಯಾಗಿ ಪರಿಣಮಿಸುವುದು ಖಂಡಿತವೆಂದು ಹೇಳಬಹುದು. ಮಾತ್ರವಲ್ಲ, ಇನ್ನೂ ಅನೇಕ ಎಡರುತೊಡರುಗಳು ಬರುವ ಸಂಭವವುಂಟು. ನೀಲಗಿರಿ ಜಿಲ್ಲೆಯ ಊಟಾಕ್‌ಮಂಡು ಮದ್ರಾಸು ಗವರ್ನರರ ಬೇಸಿಗೆಕಾಲದ ವಾಸಸ್ಥಳವಾಗಿರುವುದರಿಂದ ಅಂಥ ಒಳ್ಳೆಯ ಪ್ರದೇಶವನ್ನು ಬಿಟ್ಟುಕೊಡಬೇಕಾಗಿ ಬರಬಹುದು. ಮತ್ತು ಆಂಧ್ರ ಮತ್ತು ತಮಿಳುನಾಡಿನ ಜಿಲ್ಲೆಗಳಲ್ಲಿ ಅಂತರ್ಭೂತವಾಗಿರುವ ೫-೬ ಕನ್ನಡ ತಾಲೂಕುಗಳನ್ನು ಸಹ ಪ್ರಕೃತಕ್ಕೆ ನಾವು ಬಿಟ್ಟುಕೊಡಬೇಕಾಗಿ ಬರಬಹುದು. ನಾವು ಒಂದು ಸಲ ಮುಂಬಯಿ ಪ್ರಾಂತಕ್ಕೆ ಸೇರಿದ ಮೇಲೆ ಆ ತಾಲೂಕು

CC-0. Jangamwadi Math Collection. Digitized by eGangotri

ಗಳನ್ನು ಕನ್ನಡಿಗರು ಕಳೆದುಕೊಂಡಂತೆಯೇ ಎಂದು ಭಾವಿಸಬೇಕು. ಆಂಧ್ರರು ಈಗಾಗಲೇ ಆಂಧ್ರಪ್ರಾಂತ ನಿರ್ಮಾಣದ ವಿಷಯವಾಗಿ ಚಳವಳ ಹೂಡಿರುವುದರಿಂದ ಆ ಕನ್ನಡ ತಾಲೂಕುಗಳು ಆಂಧ್ರರ ಬಗಲಿಗೆ ಬೀಳುವುದು ಖಂಡಿತವೆಂದು ಹೇಳಬಹುದು. ಆದುದರಿಂದ ಕನ್ನಡಿಗರು ಅನೇಕ ಶುದ್ಧ ಕನ್ನಡ ಪ್ರದೇಶದ ಭಾಗಗಳನ್ನು ಕಳೆದುಕೊಂಡು ಮುಂಬಯಿ ಪ್ರಾಂತಕ್ಕೆ ಸೇರುವುದರಿಂದ ಕನ್ನಡಿಗರಿಗೆ ಸಿಗುವ ಪುರುಷಾರ್ಥವೇನು! ಕನ್ನಡಿಗರು ಅಲ್ಪಸಂತುಷ್ಟಿಗಳಾಗದೆ ಕರ್ನಾಟಕ ಪ್ರಾಂತನಿರ್ಮಾಣವು ಕೂಡಲೇ ಆಗುವುದು ಅವಶ್ಯವೆಂದು ಚಳವಳ ಹೂಡಿದರೆ ನಮ್ಮ ಇಷ್ಟಸಿದ್ಧಿಯಾಗುವುದರಲ್ಲಿ ಸಂದೇಹವೇ ಇಲ್ಲ!

## ಅಭಿಮಾನದ ಅತಿರೇಕವಾಗದಿರಲಿ

ಕಾಂಗ್ರೆಸ್ಸು ಅಧಿಕಾರಸ್ವೀಕಾರ ಮಾಡಿದ ಮೇಲೆ ತನ್ನ ಸ್ವೀಕೃತ ಕಾರ್ಯಕ್ರಮಗಳನ್ನು ಉತ್ಸಾಹದಿಂದ ಕೊನೆಗಾಣಿಸುತ್ತಿರುವುದು. ಅವುಗಳಲ್ಲಿ ಹಿಂದೀಭಾಷಾಪ್ರಸಾರವೂ ಒಂದು. ತಕ್ಕ ವಯಸ್ಸಿಗೆ, ತಕ್ಕ ಉದ್ದೇಶಸಾಧನೆಗಾಗಿ ಅದನ್ನು ಕಲಿಸುವುದಕ್ಕೆ ಯಾರ ಆಕ್ಷೇಪವೂ ಇಲ್ಲ. ಆದರೆ ಪ್ರಾಥಮಿಕ ಶಾಲಾವಿದ್ಯಾರ್ಥಿಗಳಿಗೂ ಅದನ್ನು ಒತ್ತಾಯದಿಂದ ಕಲಿಸುವುದು 'ನೀರಿಳಿಯದ ಗಂಟಲೊಳ್ ಕಡುಂಬಂ ತುರುಕಿದಂತೆ' ಆಗುವುದಿಲ್ಲವೆ? ಆ ಎಳವಯಸ್ಸಿನಲ್ಲಿ ಮಕ್ಕಳ ತಲೆಗೆ ಎಷ್ಟು ಭಾರ! ಮಾತೃಭಾಷೆಯಲ್ಲಿ ಸರಳವಾಗಿ, ಶುದ್ಧವಾಗಿ ಮಾತನಾಡಲು ಬರೆಯಲು ಬರಬೇಕು ಆ ವಯಸ್ಸಿನಲ್ಲಿ. ೨-೩ ಭಾಷೆಗಳ ಅಭ್ಯಾಸವನ್ನು ಹೇರುವುದು ಶುದ್ಧ ಅನ್ಯಾಯ. ಮದರಾಸಿನಲ್ಲಿ ಶ್ರೀಮಾನ್ ರಾಜಗೋಪಾಲಾಚಾರ್ಯರವರ ನೇತೃತ್ವದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಕ್ರಮದಲ್ಲಿ ಹಿಂದೀಯ ಸೇರ್ಪಡೆಯಾದುದರ ಬಗ್ಗೆ, 'ರಾಷ್ಟ್ರಬಂಧು'ವಿನಲ್ಲಿ ಒಬ್ಬ ಉಪಾಧ್ಯಾಯರು ತಮ್ಮ ತೊಂದರೆಯನ್ನು ತೋಡಿಕೊಂಡಿದ್ದಾರೆ. ನಮ್ಮ ಧಾರವಾಡ ಪ್ರಾಂತಕ್ಕೂ ಅವರ ಮಾತುಗಳು ಸ್ವಲ್ಪ ಹೆಚ್ಚುಕಡಿಮೆಯಾಗಿ ಅನ್ವಯಿಸದೆ ಇಲ್ಲ:—

ನಮ್ಮ ಜಿಲ್ಲೆಯ ವಿಷಯವೇ ನಾವು ಮಾತನಾಡುವುದಾದರೆ ನಮ್ಮ ಮಕ್ಕಳು ಶಾಲೆಗೆ ಹೋಗುವಾಗ ಎಷ್ಟು ಭಾಷೆಗಳನ್ನು ಕಲಿಯುತ್ತವೆಂದು ನೋಡಬಹುದು. ಹೆಚ್ಚಿನ ಮಕ್ಕಳಿಗೆ ಮನೆಯಲ್ಲಿ ಕೊಂಕಣಿ ಅಥವಾ ತುಳು ಭಾಷೆಯು ಇದೆ. ಶಾಲೆಯಲ್ಲಿ ಕನ್ನಡ, ಅನಂತರ ಇಂಗ್ಲಿಷು. ಹೀಗೆ ಸಾಧಾರಣವಾಗಿ ನಾಲ್ಕು ಭಾಷೆಗಳ ಪರಿಚಯವು ಮಕ್ಕಳಿಗೆ ಆಗುತ್ತದೆ. ಇವುಗಳಲ್ಲಿ ಯಾವುದನ್ನೂ ಬಿಡಲಿಕ್ಕೆ ಸಾಧ್ಯವಿಲ್ಲ. ಹೀಗಿರುತ್ತಾ ರೂಢಿಯಲ್ಲಿಲ್ಲದ ಹಿಂದೀ ಭಾಷೆಯನ್ನು ಹೆಚ್ಚಿಗೆ ಸೇರಿಸಿ ಎಳೆ ಬಾಲಕರಿಗೆ ಕಡ್ಡಾಯವಾಗಿ ಅದನ್ನು ಕಲಿಸುವುದು ಯೋಗ್ಯವೇ ಎಂಬುದು ಚರ್ಚಾಸ್ಪದವಾದ ವಿಷಯ. ಆದರೂ ಕಾಂಗ್ರೆಸು ಮಂತ್ರಿಗಳು ಹಾಗೆ ವಿಧಿಸಿದಲ್ಲಿ ಅದರ ಸಾಧಕಬಾಧಕಗಳನ್ನೆಣಿಸದೆ ನಡೆಯುವುದು ಉಪಾಧ್ಯಾಯರ ಕರ್ತವ್ಯವೇ ಆಗಿದೆ.

ಕನ್ನಡಿಗರಾದ ನಾವು ತಟಸ್ಥರಾಗಿ ನಮ್ಮ ಮಾತೃಭಾಷೆಯಾದ ಕನ್ನಡದ ಏಳಿಗೆಗೆ ಪ್ರಯತ್ನಿಸಿದರೆ ಎಲ್ಲವನ್ನೂ ಕಾಂಗ್ರೆಸು-ಕನ್ನಡಕದಿಂದ ನೋಡಿ ಹಿಂದೀ ಭಾಷೆಗೆ ಶರಣುಹೋಗಿ ಅದನ್ನು ಕಡ್ಡಾಯವಾಗಿ ಶಾಲೆಗಳಲ್ಲಿ ಕಲಿಸುವುದು ಯೋಗ್ಯವೇ ಎಂದು ಇನ್ನಾದರೂ ಆಲೋಚಿಸಬೇಡವೆ? ಹಿಂದೀವಿರೋಧಿಯಾಗಿ ನಾನು ಇದನ್ನು ಬರೆದುದಲ್ಲ. ಹಿಂದೀ ಭಾಷೆಯು ಪ್ರಚಾರಕ್ಕೆ ಬರಬೇಕು. ಆದರೆ ಅದನ್ನು ಶಾಲೆಗಳಲ್ಲಿ ಕಡ್ಡಾಯವಾಗಿ ಕಲಿಸದೆ ಪ್ರಚಾರ ಸಮಿತಿಯವರಿಗೆನೇ ಅದನ್ನು ಬಿಟ್ಟು ಅವರೊಡನೆ ಸಹಕರಿಸುವುದು ಎಷ್ಟೋ ಮೇಲೆಂದು ನನ್ನ ಅಭಿಪ್ರಾಯ.

ಎಂದಿನ ವರೆಗೆ ಉಪಾಧ್ಯಾಯರಿಗೆ ರಾಜಕೀಯ ರಂಗದಲ್ಲಿ ಕಾಲಿಡಲು ನಿರ್ಬಂಧವಿದೆಯೋ ಅಂದಿನ ವರೆಗೆ ಚುನಾವಣೆಯಲ್ಲಿ ಬಹಿರಂಗವಾಗಿ ಭಾಗವಹಿಸಲು ಸಾಧ್ಯವಿಲ್ಲ. ಚುನಾವಣೆಯಲ್ಲಿ ಪಾರ್ಟಿಗಳು ಇದ್ದೇ ಇವೆ. ಆದುದರಿಂದ ಅವರ ಸ್ಥಿತಿಯು ಕತ್ತರಿಯ ಮಧ್ಯ ಇರುವ ಅಡಿಕೆಹೋಳಿನಂತಾಗಿರುವುದು.

## ಕೊಡಲಿಯ ಕಾವು ಕುಲಕ್ಕೆ ಮೂಲ

ಕಳೆದ ೩-೪ ವರುಷಗಳಿಂದ ಜಮುಖಂಡಿಯ ಕನ್ನಡಿಗರು ಪ್ರಯತ್ನಿಸಿದುದರ ಫಲವಾಗಿ, ಈ ಸಲ ಸಾಹಿತ್ಯ ಸಮ್ಮೇಲನವನ್ನು ನೆರೆಯಿಸುವ ವಿಚಾರವು ಮೂರ್ತಸ್ವರೂಪವನ್ನು ಪಡೆದಿದ್ದಿತು: ಆದರಿದೀಗ 'ಜಮುಖಂಡಿ ಸಂಸ್ಥಾನದ (ದರ್ಬಾರದ!) ವಿಚಿತ್ರ ಪರಿಸ್ಥಿತಿ'ಯ ದೆಸೆಯಿಂದ ಅಲ್ಲಿ ಸಮ್ಮೇಲನವನ್ನು ಜರುಗಿಸುವುದು ಅಸಾಧ್ಯವಾಗಿದೆಯೆಂದು ತಿಳಿದುಬಂದಿದೆ. ಕನ್ನಡಿಗರ ಅನ್ನವನ್ನುಂಡು ಪುಷ್ಟರಾದುದು ಪರಭಾಷೆ-ಪರಪ್ರಾಂತಗಳ ಪ್ರೋತ್ಸಾಹನಕ್ಕಾಗಿಯೇ—ಎಂದು ಉತ್ತರಕರ್ನಾಟಕದ ಸಂಸ್ಥಾನಿಕರ ಮೇಲೆ ಮಾಡಲಾದ ಆರೋಪವು ತಳಬುಡವಿಲ್ಲದೆ ಇಲ್ಲವೆಂದು ಈ ಉದಾಹರಣೆಯಿಂದ ತೋರುತ್ತಿದೆ.

'ನಾಗರಿಕಾಧಿಕಾರ ಸಂರಕ್ಷಕ ಸಂಘ'ದವರೂ ಸಂಸ್ಥಾನಗಳಲ್ಲಿ ಪ್ರಚಾರಕಾರ್ಯ ಮಾಡಲು ಅಧಿಕಾರವಿದೆಯೆಂದು ವಾದಿಸುವ ಕಾಂಗ್ರೆಸ್ ಕೆಲಸಗಾರರೂ ಕನ್ನಡಪ್ರೇಮಿಗಳೂ ಈ ಅನ್ಯಾಯವನ್ನು ತೊಡೆದುಹಾಕಲು ಕೂಡಲೆ ಟೊಂಕ ಕಟ್ಟಬೇಕು.

## ಕೇರಳ—ಕರ್ನಾಟಕ

ಮೊನ್ನೆ ಧಾರವಾಡದಲ್ಲಿ ನೆರೆದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಸಭೆಯಲ್ಲಿ, ಕೇರಳದ ಅತಿಕ್ರಮಣದ ವಿಚಾರವೂ ಚರ್ಚಿಸಲ್ಪಟ್ಟಿತು.

"೧೯೨೧ರಲ್ಲಿ ಕಾಸರಗೋಡವು ಕರ್ನಾಟಕದ ಘಟನೆಯಲ್ಲಿ

CC-0. Jangamwadi Math Collection. Digitized by eGangotri

ಇತ್ತು. ೩೧ರಲ್ಲಿ ಕೇರಳ ಪ್ರಾಂತದವರು ಅದನ್ನು ತಮ್ಮ ಘಟನೆಯಲ್ಲಿ ಸೇರಿಸಿಕೊಂಡು, ನಂತರ ೧೯೩೫ರಲ್ಲಿ ಒಂದು ಕಮಿಟಿಯನ್ನು ಸ್ಥಾಪನೆಮಾಡಿ ಸದಸ್ಯರನ್ನು ಮಾಡಲಾರಂಭಿಸಿದರು. ಇದು ತಿಳಿದುಬಂದ ಕೂಡಲೆ ದಕ್ಷಿಣ ಕನ್ನಡ ಜಿಲ್ಲೆಯಿಂದ ನಮಗೆ ತಕರಾರು ಬಂತು. ಅದನ್ನು ಅಖಿಲ ಭಾರತ ಕಮಿಟಿಗೆ ಕಳುಹಿದೆವು. ಅವರು ನಮ್ಮ ಫಿರ್ಯಾದಿಯ ಬಗ್ಗೆ ಉತ್ತರ ಕೊಡದೆ, ತಮ್ಮ ಕಾರ್ಯವನ್ನು ಮುಂದೆ ಸಾಗಿಸಿದರು. ಈಗ ಕೇರಳದವರು ೨೦೦೦ ಸದಸ್ಯರನ್ನು ಕಾಸರಗೋಡದಲ್ಲಿ ಮಾಡಿ ಕಮಿಟಿಯನ್ನು ಸ್ಥಾಪಿಸಿದ್ದಾರೆ. ಈ ಸಲದ ವರ್ಕಿಂಗ ಕಮಿಟಿಯಲ್ಲಿ ಈ ಪ್ರಶ್ನೆಯನ್ನಿಟ್ಟಿದ್ದು, ಅಲ್ಲಿ ನಾವು ನಮ್ಮ ಪುರಾವೆಗಳ ಸಹಿತ (೧೯೨೧ರಲ್ಲಿದ್ದ ಖಾದಿಕೇಂದ್ರ ನಮ್ಮ ಘಟನೆಯಲ್ಲಿದ್ದುದೆಂದು) ಸಿದ್ಧಮಾಡುವವರಿದ್ದೇವೆ" ಎಂದು ಕಾರ್ಯದರ್ಶಿಗಳು ವರದಿಯನ್ನು ಕೊಟ್ಟರು.

ಪ್ರಾಂತಿಕ ಕಾಂಗ್ರೆಸ್ ಕಮಿಟಿಯು ತನ್ನ ಹಕ್ಕು-ಬಾಧ್ಯತೆಗಳ ಬಗ್ಗೆ ಈಗಲಾದರೂ ಎಚ್ಚತ್ತಿರಲಿ.

## ಎರಡು ಶಕ್ತಿಗಳ ಸಮನ್ವಯ

ದೇಶದ ಕ್ಷೇಮಕ್ಕೆ ಎರಡು ಶಕ್ತಿಗಳ ಸಹಕಾರವು ಬೇಕಾಗಿರುತ್ತದೆ. ಒಂದು ರಾಜಶಕ್ತಿ, ಇನ್ನೊಂದು ಪ್ರಜಾಶಕ್ತಿ. ಎರಡೂ ಒಂದಕ್ಕೊಂದು ಪೂರಕವಾಗಿರಬೇಕು ಆ ಸುಂದರ ಸಂಗಮದಲ್ಲಿಯೇ ಪ್ರಗತಿಯ ಕೀಲವಿದೆ. ಅವು ಒಂದಕ್ಕೊಂದು ಮಾರಕವಾಗಬಾರದು. ಹಾಗಾದರೆ ದೇಶದಲ್ಲಿ ಅನಾಯಕತೆಯುಂಟಾಗಿ, ಯಾರ ಮನಸ್ಸಿಗೂ ನೆಮ್ಮದಿಯಾಗುವುದಿಲ್ಲ. ಮುಂಚೆ ರಾಜನೇ ರಾಜಶಕ್ತಿಯ ಪ್ರತೀಕವಾಗಿದ್ದನು; ಈಚೆಗೆ ಆ ಶಕ್ತಿಯು 'ಸರಕಾರ' ವೆಂಬ ಸಂಘಟಿತ ಸಂಸ್ಥೆಯಾಗಿ ರೂಪುಗೊಂಡಿದೆ. ಮುಂಚಿನ ಅಸಂಘಟಿತ ಪ್ರಜಾಶಕ್ತಿಯು ಈಗ ಸುಸಂಘಟಿತವಾಗಿದೆ. ರಾಜ-ಪ್ರಜಾಶಕ್ತಿಗಳು ಸಮಬಲವಾಗಿ ಪರಸ್ಪರಸಹಾಯಕವಾದಾಗಲೆ ಪ್ರಜಾಪ್ರಭುತ್ವದ ಸುಂದರ ಫಲಗಳು ಕಾಣತೊಡಗುತ್ತವೆ.

## ಎರಡು ಶಕ್ತಿಗಳ ತಿಕ್ಕಾಟ

ಮೈಸೂರಿನಲ್ಲಿದು ಅಸಾಧ್ಯವೇ? ಮೈಸೂರು ಸರಕಾರವು ಪ್ರಜೆಗಳಿಗೆ ತೆರತೆರನಾದ ಸುಖಸಂಪತ್ತುಗಳನ್ನೊದಗಿಸಲು ಪರಿಶ್ರಮಿಸುತ್ತಿದೆಯಾಗಿ ಪ್ರಸಿದ್ಧಿಯನ್ನು ಹೊಂದಿದೆ. ರಾಜಶಕ್ತಿಯು ಪ್ರಜಾಕ್ಷೇಮಕ್ಕಾಗಿ ಹೆಣಗಾಡುವ ಸವಿನೋಟವನ್ನು ಮೈಸೂರಿನಲ್ಲಿ ನಾವು ಕಾಣುತ್ತಿದ್ದೆವು. ಆ ಸವಿಕಟ್ಟಿಂದು ಸಡಿಲಾಗಿದೆ. ರಾಜಶಕ್ತಿಯು ಅಭಿಮಾನದ ಭಾವನೆಯಿಂದ ಪ್ರೇರಿತವಾಗಿದೆ. ಪ್ರಜಾಶಕ್ತಿಯು ಕ್ರುದ್ಧವಾಗಿ, ಸಿಡಿಮಿಡಿಗೊಳ್ಳುತ್ತಿದೆ. ಮೈಸೂರಿನ ಹಸನಾದ ವಾತಾವರಣವಿಂದು ಕಾರ್ಮೋಡಗಳಿಂದ ಕವಿದು ಹೋಗಿದೆ. ಅಲ್ಲಿಯ ರಾಜ-ಪ್ರಜೆಗಳಲ್ಲಿ ನಡೆದ ತೀವ್ರತರವಾದ ಘರ್ಷಣೆಯನ್ನು ನೋಡಿದರೆ, ಯಾವುದೋ ದೊಡ್ಡ ಘಟನೆಯ ಪ್ರಸವವೇದನೆಗಳಿವು ಎಂದು ನಿರೀಕ್ಷಕರಿಗೆ ತೋರುತ್ತದೆ.



ಸರ್ ಮಿರ್ಝಾ ಇಸ್ಮಾಯಿಲ್

ಪ್ರಭುತ್ವವು ಸಂಸ್ಥಾನದ ಅಭಿವೃದ್ಧಿಗಾಗಿ ಸರ್ವವಿಧದಿಂದಲೂ ಪ್ರಯತ್ನಿಸುತ್ತಿರಬಹುದು; ಆದರೆ ಆ ಅಭಿವೃದ್ಧಿಯ ಮಾರ್ಗಕ್ರಮಣದ ನಿರ್ಧಾರದ ಅಧಿಕಾರವನ್ನು ಕೆಲಮಟ್ಟಿಗಾದರೂ ಪ್ರಜೆಗಳಿಗೆ ಕೊಡದಿರುವುದು ಎಲ್ಲಿಯ ನ್ಯಾಯ? ಕೂಸುತನವನ್ನು ದಾಟಿದ ಮೇಲೂ ತುತ್ತು ಮಾಡಿ ಉಣ್ಣಿಸುವುದು ಎಲ್ಲಿಯ ರೀತಿ? ರಾಜರ ಪರಿಶ್ರಮದಿಂದಲೇ ಎನ್ನೋಣ,—ಮೈಸೂರಿನ ಪ್ರಜೆಗಳಿಂದು ಪ್ರಬುದ್ಧರಾಗಿದ್ದಾರೆ. ತಮ್ಮ ಮನೆಯ ಸಂಸಾರವನ್ನು ನೇರ್ಪಡಿಸುವ ಸ್ವಾತಂತ್ರ್ಯವನ್ನು ಅವರಿಗೆ ಕೊಡಲೇಬೇಕು. ಮಗು ಚಿಕ್ಕದಾಗಿರುವಾಗ ಸಿಟ್ಟುಮಾಡುವುದು, ಬೈಯುವುದು, ಒಮ್ಮೊಮ್ಮೆ ಹೊಡೆಯುವುದು—ಎಲ್ಲಾ ಸರಿಹೋಗುತ್ತದೆ. 'ಪ್ರಾಪ್ತೇ ತು ಷೋಡಶೇ ವರ್ಷೇ ಪುತ್ರೇ ಮಿತ್ರವದಾಚರೇತ್'.... ಎಂದು ಸಂಸ್ಕೃತ ಸುಭಾಷಿತವು ಹೇಳುತ್ತಿದೆ ಪೋಲೀಸ್ ರೆಗ್ಯುಲೇಶನ್ಸ್, ಮುದ್ರಣ-ಭಾಷಣ - ಸಂಘ – ಸಭಾ ಸ್ವಾತಂತ್ರ್ಯಾಪಹಾರ, ಇವೆಲ್ಲಾ ಪ್ರಜಾಸಂಘಟನೆಯ ಕಿಶೋರಾವಸ್ಥೆಯಲ್ಲಿ ಯೋಗ್ಯವಾಗಿರಬಹುದು; ಈಗಿನ ಪ್ರೌಢಾವಸ್ಥೆಯಲ್ಲಲ್ಲ. ತಂದೆಯ ಅಧಿಕಾರವನ್ನು ಯಾರು ಅಲ್ಲಗಳೆಯುವರು? ಆದರೆ ಹಟಕ್ಕೆ ಬಿದ್ದ ಹುಡುಗನನ್ನು ಎಚ್ಚರ ತಪ್ಪುವಂತೆ ಹೊಡೆಯುವರೇ? ಏನೇ ಆದರೂ ಪ್ರಭುತ್ವದ ಅಧಿಕಾರ ದೊಡ್ಡದು. ತಾನಾಗಿಯೆ ದೊಡ್ಡ ಮನಸ್ಸು ಮಾಡಿ ಈ ಕಂಟಕವನ್ನು ಕಿತ್ತೊಗೆಯುವುದು ಅದರ ಕರ್ತವ್ಯ. ಭಾರತವರ್ಷವೆಲ್ಲವೂ ಸ್ವಾತಂತ್ರ್ಯಾಭಿಲಾಷೆಯಿಂದ ಪ್ರದೀಪ್ತವಾಗಿರುವಾಗ, ಮೈಸೂರೊಂದೇ ತಣ್ಣಗಿರುವುದು ಸಾಧ್ಯವೇ? ಮೈಸೂರು ಸರಕಾರವು ಸಕಾಲದಲ್ಲಿಯೆ

CC-0. Jangamwadi Math Collection. Digitized by eGangotri

ಪ್ರಜೊಧಿಕಾರಗಳನ್ನು ವಿಸ್ತರಿಸಬೇಕು. ರಾಜಶಕ್ತಿಯು ತಾನಾಗಿ ಕೊಡಬೇಕು; ಅದರಲ್ಲಿ ಭೂಷಣವಿದೆ. ಇಲ್ಲವಾದರೆ ಪ್ರಜಾಶಕ್ತಿಯು ಕಡುಬಳಲಿಯಾದರೂ ಪಡೆಯುವುದು; ಹಾಗೆ ಮಾಡುವುದರಲ್ಲಿ ಅದು ತಪ್ಪಿದರೂ, ಅದಕ್ಕಾರೂ ದೂಷಣ ಕೊಡುವುದಿಲ್ಲ. ಏಕೆಂದರೆ ಅದು ದೇವಾಯತ್ತ ಅಧಿಕಾರವಾಗಿದೆ.



ಶ್ರೀ. ಕೆ. ಎಫ್. ನಾರಿಮನ್

## ಶಿಕ್ಷಣದ ಚತುರಂಗಗಳು

ಕರ್ನಾಟಕ ಶಿಕ್ಷಣ ಸಪ್ತಾಹದ ೯ನೆಯ ಅಧಿವೇಶನವು ಗದುಗಿನಲ್ಲಿ ತಾ. ೨೫ರಿಂದ ಮುಂದೆ ಸಾಂಗವಾಗಿ ಜರುಗಿತು. ಅಧ್ಯಕ್ಷರಾದ ಡಾ. ಜಿ. ಎಸ್. ಕೃಷ್ಣಯ್ಯನವರ ಭಾಷಣವು ವಿಚಾರಪರಿಪ್ಲುತವಾದುದು, ಶಿಕ್ಷಣದ ನವದೃಷ್ಟಿಯುಳ್ಳುದು. ಅವರ ವಿಚಾರಧೋರಣೆಯಂತೆ ನಮ್ಮ ಬಾಲಕರ ಶಿಕ್ಷಣವು ನೇರ್ಪಟ್ಟರೆ, ನಮ್ಮ ನಾಡು ಮುಂದರಿಯುವುದು ಖಂಡಿತ. ಅವರ ಅಭಿಪ್ರಾಯಗಳ ಸಾರಾಂಶವನ್ನಿಲ್ಲಿ ಕೊಡುತ್ತಿದ್ದೇವೆ.

ಮಾಧ್ಯಮಿಕ ಶಿಕ್ಷಣವು ವಿದ್ಯಾರ್ಥಿಯ ಜೀವನವನ್ನು ಸಂಪೂರ್ಣವಾಗಿ ವ್ಯಾಪಿಸುವಂಥದಾಗಿರಬೇಕು. ಹೈಸ್ಕೂಲಿನ ಶಿಕ್ಷಣವು ವಿದ್ಯಾರ್ಥಿಯ "ಹ್ಯಾಂಡ" "ಹಾರ್ಟ" "ಹೆಡ" "ಹೆಲ್ಥ" (ಹಸ್ತ, ಹೃದಯ, ಬುದ್ಧಿ, ಆರೋಗ್ಯ) ಇವುಗಳ ವಿಷಯದಲ್ಲಿ ಶಿಕ್ಷಣ ಕೊಡಬೇಕು.

### ಕೈಗಾರಿಕೆ

ವಿದಾರ್ಥಿಗಳಿಗೆ ಕೈಗೆಲಸ ಕಲಿಸಿದರೆ ಶಿಕ್ಷಣದ ಕಾರ್ಯವಾಯಿತೆಂದು ಕೆಲವರು ತಿಳಿದುಕೊಂಡಿದ್ದಾರೆ. ಶಾಲೆಯೆಂಬುದು ಅಂಗಡಿಯಾದೀತೇನೋ ಎಂದು ಕೆಲವರು ಶಂಕಿಸುತ್ತಾರೆ. ಇದಲ್ಲದೆ ಸ್ವಾವಲಂಬನ ಶಾಲೆಗಳಾಗಬೇಕೆಂಬ ಹವ್ಯಾಸದಲ್ಲಿ ವಿದ್ಯಾರ್ಥಿಗಳ ಸಂಸ್ಕೃತಿವರ್ಧನವೂ ಮರೆತು ಹೋಗಬಹುದು.

ಆದುದರಿಂದ ಶಿಕ್ಷಣದ ಸ್ವಾವಲಂಬನದ ಹೊಣೆಗಾರಿಕೆಯನ್ನು ವಿದ್ಯಾರ್ಥಿಗಳ ಚಿಕ್ಕ ಕೈಗಳ ಮೇಲೆ ಹಾಕದೆ ತಂದೆ ತಾಯಿಗಳೂ ಸಾರ್ವಜನಿಕರೂ ಅದನ್ನು ಹೊತ್ತುಕೊಳ್ಳಬೇಕು. ಗಾಂಧಿಜಿಯವರು ಶಿಕ್ಷಣ ಸ್ವಾವಲಂಬನವನ್ನು ಸಮರ್ಥಿಸುತ್ತಿದ್ದಾರೆ. ಗಾಂಧಿಜಿಯವರು ಅಸಾಧಾರಣ ಮನುಷ್ಯರು. ಎರಡನೆಯವರು ಯಾವ ಕಾರ್ಯದಲ್ಲಿ ಅಪಜಯಪಟ್ಟರೋ ಅದನ್ನು ಅವರು ಯಶಸ್ವಿಯಾಗಿ ಮಾಡಿ ತೋರಿಸಿದ್ದಾರೆ. ಆದುದರಿಂದ ಅವರ ಈ ಪ್ರಯತ್ನವು ಯಾವ ಪ್ರಕಾರ ಪರಿಣಮಿಸುವುದೆಂಬುದನ್ನು ನೋಡಬೇಕು.

### ಬುದ್ಧಿವಿಕಾಸ

ವಿದ್ಯಾರ್ಥಿಗಳ ಮನಸ್ಸೆಂದರೆ ಎಲ್ಲವನ್ನು ತುಂಬಬೇಕಾದ ಪಾತ್ರೆಯೇನೂ ಅಲ್ಲ. ಅದೊಂದು ಕಿಡಿಯು. ಅದಕ್ಕೆ ಗಾಳಿಹಾಕಿ ಪ್ರಜ್ವಲಿತ ಮಾಡಬೇಕಾಗಿದೆ. ವಿದ್ಯಾರ್ಥಿಗಳು ಸ್ವತಂತ್ರ ರೀತಿಯಲ್ಲಿ ಹೇಗೆ ಅಭ್ಯಾಸ ಮಾಡಬೇಕು ಮತ್ತು ಹೇಗೆ ಜ್ಞಾಪಕದಲ್ಲಿಟ್ಟುಕೊಳ್ಳಬೇಕೆಂಬುದನ್ನು ಅವರಿಗೆ ಕಲಿಸಿಕೊಡಬೇಕು.

### ಹೃದಯ ಸಂಸ್ಕಾರ

ಶಿಕ್ಷಣದಲ್ಲಿ ಮುಖ್ಯವಾದ ವಿಷಯವೆಂದರೆ ನಡತೆಯು. ಶಿಕ್ಷಣ ಪೂರೈಸಿದ ಮೇಲೆಯೂ ಆ ನಡತೆಗಳು ಶಾಶ್ವತವಾಗಿ ಉಳಿಯುತ್ತವೆ. ನಮ್ಮ ಹೈಸ್ಕೂಲಿನಲ್ಲಿ ಸದ್ಯದ ಶಿಕ್ಷಣದಲ್ಲಾದರೋ ಚಾರಿತ್ರ್ಯವನ್ನು ತಿದ್ದುವ ಏರ್ಪಾಡು ಕೂಡಾ ಇಲ್ಲ. ಸತ್ಯ, ಒಳ್ಳೆಯತನ ಮತ್ತು ಸೌಂದರ್ಯಗಳೇನೆಂಬುದನ್ನು ವಿದ್ಯಾರ್ಥಿಗಳು ಕೇವಲ ಸಂಗತಿ ತಿಳಿದುಕೊಂಡಂತೆ ತಿಳಿದರೆ ತೀರಲಿಲ್ಲ. ಅವುಗಳನ್ನು ಅವರು ಕೃತಿಯಲ್ಲಿ ತರುವಂತಾಗಬೇಕು.

### ಆರೋಗ್ಯ

ಮಾಧ್ಯಮಿಕ ಶಿಕ್ಷಣದಲ್ಲಿ ಆರೋಗ್ಯವನ್ನು ಅಲಕ್ಷಿಸಲಾಗದು. ಅಮೇರಿಕೆಯಲ್ಲಿ ಈ ವಿಷಯವನ್ನು ಮೊದಲು ಆಲೋಚಿಸಲಾಗುತ್ತದೆ. ಶರೀರಕ್ಕೂ ಮನಸ್ಸಿಗೂ ಅನ್ಯೋನ್ಯ ಸಂಬಂಧವಿರುವುದರಿಂದ ಈ ವಿಷಯವು ಅತ್ಯಂತ ಮಹತ್ವದ್ದಾಗಿದೆ.

ಈ ಪ್ರಕಾರ ಚತುರಂಗ ಶಿಕ್ಷಣವನ್ನು ವಿದ್ಯಾರ್ಥಿಗೆ ಕೊಡುವದಲ್ಲದೆ ಆತನು ಬಾಹ್ಯಜಗತ್ತಿನ ಜ್ಞಾನವುಳ್ಳವನಾಗುವಂತೆ ಮಾಡುವುದು ಅತ್ಯಗತ್ಯವಾಗಿದೆ.

ಒಟ್ಟಿನ ಮೇಲೆ ನಾವು ವಿದ್ಯಾರ್ಥಿಗೆ ಕೊಡುವ ಶಿಕ್ಷಣವು ಆತನ ಜೀವನದ ಅಂಗೋಪಾಂಗಗಳಿಗೆಲ್ಲಕ್ಕೂ ಸಂಬಂಧಿಸಿದ್ದಾಗಿರಬೇಕು. ಅದು ಆತನ ಜೀವನವನ್ನು ಉದಾತ್ತಗೊಳಿಸಬೇಕು, ಬಲಪಡಿಸಬೇಕು ಮತ್ತು ಉಜ್ವಲಗೊಳಿಸಬೇಕು.

## ಆಯುರ್ವೇದದ ಪುನರುಜ್ಜೀವನ

ಭರತಖಂಡದ ವೈಭವಕಾಲದಲ್ಲಿ ನಮ್ಮ ರಾಷ್ಟ್ರೀಯ ಜೀವನವು ಸಮೃದ್ಧವಾಗಿದ್ದಿತು. ಪರದಾಸ್ಯದ ನಿರಾಶ್ರಿತ ಸ್ಥಿತಿಯಲ್ಲಿ ಅದರ ಅಂಗಗಳು ಒಂದೊಂದಾಗಿ ವಿಕಲವಾದುವು. ಆಯುರ್ವೇದವೂ ಅವುಗಳಲ್ಲೊಂದು. ರಾಷ್ಟ್ರೀಯ ಮಂತ್ರಿಮಂಡಲಗಳು ಸ್ಥಾಪಿತವಾದಂದಿನಿಂದ ನಮ್ಮ ಆಶೆಗಳಿಗೆ ಚಿಗುರೊಡೆಯಹತ್ತಿದೆ. ಬೆಳಗಾಂವಿ ಜಿಲ್ಲಾ ಆಯು

CC-0. Jangamwadi Math Collection. Digitized by eGangotri

ರ್ವೇದ ಸಮ್ಮೇಲನದ ಉದ್ಘಾಟನೆಯನ್ನು ಮಾಡುತ್ತ ಪಂಡಿತ ತಾರಾನಾಥರು ಇಂತೆಂದರು:—

ಆಯುರ್ವೇದ ಮತ್ತು ಯುನಾನಿ ವೈದ್ಯಕ ಪದ್ಧತಿಗಳು ಶತಮಾನಗಳ ಪರಿಶ್ರಮಪೂರ್ವಕವಾದ ಸಂಶೋಧನ ಕಾರ್ಯದಿಂದ ಕಳೆಗೊಂಡಿವೆ. ಅವುಗಳು ಅನಾಗರಿಕ ಪದ್ಧತಿಗಳೆಂದು ಹೇಳುವವರಿಗೆ ಬುದ್ಧಿ ಇಲ್ಲ.

ಮದ್ರಾಸ ಇಲಾಖೆಯಲ್ಲಿ ಒಟ್ಟು ೨೫ ಸಾವಿರ ಮಂದಿ ಚಿಕಿತ್ಸಕರಿದ್ದು, ಅವರಲ್ಲಿ ಕೇವಲ ೫೦೦೦ ಮಂದಿ ಮಾತ್ರ ಅಲೋಪತಿಕ್ ಡಾಕ್ಟರುಗಳು! ಮಿಕ್ಕವರೆಲ್ಲರೂ ಆಯುರ್ವೇದ ಹಾಗೂ ಯುನಾನಿ ವೈದ್ಯರು. ಪ್ರತಿ ೪೫ ಸಾವಿರ ಜನರಿಗೆ ಒಬ್ಬ ವೈದ್ಯನಿರುವಂತಾಯಿತು. ಅಮೇರಿಕದಲ್ಲಿ ಪ್ರತಿ ೮೦೦ ಜನರಿಗೆ ಒಬ್ಬ ಡಾಕ್ಟರನಂತೆ ಇರುವುದು ನಮ್ಮ ಜನಕೋಟಿಯ ರೋಗಸಂಕಟಗಳನ್ನು ಹೊಡೆದೋಡಿಸಲು ನಮಗೆ ವೈದ್ಯರ ಒಂದು ದೊಡ್ಡ ಸೈನ್ಯವೇ ಬೇಕು. ಇದನ್ನು ಆಯುರ್ವೇದ ಮಾತ್ರವೇ ಮಾಡಬಲ್ಲದು."

## ಧಾರವಾಡ ಜಿಲ್ಲೆಯ ದ್ವಿತೀಯ ಸಾ. ಸಮ್ಮೇಲನ

ನಾಡಹಬ್ಬದಲ್ಲಿ ಧಾ. ಜಿ. ದ್ವಿತೀಯ ಸಾಹಿತ್ಯ-ಕವಿ ಸಮ್ಮೇಲನಗಳ ಜತೆಗೆ ನಾಟ್ಯಸಮ್ಮೇಲನವನ್ನೂ ಹೂಡಿ ಗದುಗಿನ ತರುಣರು ಪರಂಪರೆಯನ್ನು ಕಾಯ್ದುಕೊಂಡು ಬಂದರು. ನಾಡಹಬ್ಬವು ಪ್ರತಿಪಟ್ಟಣದಲ್ಲಿಯೂ ಆಚರಿಸಲ್ಪಡುವುದರಿಂದ ಅವರೀ ಕೆಲಸಕ್ಕೆ ತುಂಬಾ ತೊಂದರೆಯಾಗಿರಲು ಸಾಕು. ಎಂತಲೇ ಅವರ ಸಾಹಸವು ಅಭಿನಂದನೀಯವಾಗಿದೆ. ಮುಂದಿನ ಸಲದಿಂದ ಸಾ. ಸಮ್ಮೇಲನವನ್ನು ನಾಡಹಬ್ಬದಲ್ಲಿ ಜರುಗಿಸದೆ ಬೇರೆ ದಿನಗಳಲ್ಲಿ ಕೂಡಿಸಬೇಕೆಂದು ನಮ್ಮ ಸೂಚನೆ. ಅದರಿಂದ ಜಿಲ್ಲೆಯ ಬೇರೆ ಕಾರ್ಯಕರ್ತರ ಸಹಾಯವು ಸಮ್ಮೇಲನದ ಕೆಲಸಗಾರರಿಗೆ ದೊರಕುವುದು.

ಸಾ. ಸ. ಅಧ್ಯಕ್ಷರಾದ ಪ್ರೊ. ಮಾಳವಾಡರು "ವಿಜ್ಞಾನ, ಗಣಿತ, ಅರ್ಥಶಾಸ್ತ್ರ, ವಿಮರ್ಶಾಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಘಟನೆ, ಸಮಾಜಸತ್ತಾವಾದ, ಪರದೇಶೀಯ ರಾಜಕಾರಣ, ಧರ್ಮಗಳ ತುಲನಾತ್ಮಕ ಅಭ್ಯಾಸ, ಜಾಗತಿಕ ವಿಚಾರಪ್ರವಾಹಗಳ ಸಂಕಲನ, ಜಾಗತಿಕ ಜೀವಜ್ಯೋತಿಗಳ ಆತ್ಮಚರಿತ್ರಗಳು ಇ. ವಿಷಯಗಳನ್ನು ಕುರಿತು ಕನ್ನಡದಲ್ಲಿ ಗ್ರಂಥನಿರ್ಮಾಣಮಾಡಿ ಕನ್ನಡಕ್ಕೆ ಮನ್ನಣೆ ದೊರಕುವಂತೆ ಮಾಡಬೇಕೆಂ"ಬ ಹೊಸ ವಿಚಾರವನ್ನು ವಿವರಿಸಿದರು.

ಉಚ್ಚಶಿಕ್ಷಣವು ಕನ್ನಡದಲ್ಲಿಯೇ ನಡೆಯಬೇಕು; ಕನ್ನಡ ಹಳ್ಳಿಗಳಲ್ಲೆಲ್ಲ ಲೋ. ಬೋರ್ಡಿನವರು ವಾಚನಾಲಯಗಳನ್ನು ಸ್ಥಾಪಿಸಬೇಕು; ಮರಾಠಿ ಶಾಲೆಗಳಲ್ಲಿ ಕನ್ನಡವನ್ನು ಕಡ್ಡಾಯವಾಗಿ ಕಲಿಸಬೇಕು; ಬೇರೆಬೇರೆ ಅಧಿಪತ್ಯಗಳಲ್ಲಿರುವ ಕರ್ನಾಟಕದಲ್ಲಿ ಒಂದೇ ಬಗೆಯ ಪಠ್ಯಪುಸ್ತಕಗಳನ್ನು ನಿಯಮಿಸಬೇಕು....ಎಂದು ಮುಂತಾದ ಗೊತ್ತುವಳಿಗಳು ಅಂಗೀಕೃತವಾದುವು.

ಶ್ರೀ. ಅ. ನ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ನಾಟ್ಯಸಮ್ಮೇಲನವು "ನಾಟಕಗಳು ಮನೆಮಾತಿನ ಶೈಲಿಯಲ್ಲಿ ಬರೆಯಲ್ಪಡಬೇಕು; ಸ್ತ್ರೀಪಾತ್ರಗಳನ್ನು ಸ್ತ್ರೀಯರೇ ಅಭಿನಯಿಸಬೇಕು; ನಾಟ್ಯಸಂಘಗಳು ಸ್ವತಂತ್ರ ಕನ್ನಡ ನಾಟಕಗಳನ್ನೆ ಅಭಿನಯಿಸಬೇಕು; ಮಕ್ಕಳ ಸಲುವಾಗಿ ಪ್ರತ್ಯೇಕ ರಂಗಭೂಮಿಯನ್ನು ಏರ್ಪಡಿಸಬೇಕು" ಎಂದು ಮುಂತಾದ ನಿರ್ಣಯಗಳನ್ನು ಅಂಗೀಕರಿಸಿತು.

ಶ್ರೀ. ರಾಜರತ್ನಂ ಅವರ ಅಧ್ಯಕ್ಷತೆಯಲ್ಲಿ ಕವಿಸಮ್ಮೇಲನವು ಸಾಂಗವಾಯಿತು.

## ಕುರುಬರಿಗೆ ಗೆಲುವಾಗಲಿ!

ಸಾರ್ವಜನಿಕರ ಆಶೀರ್ವಾದದಿಂದಲೂ ಸ್ವಾಗತಾಧ್ಯಕ್ಷರಾದ ಶ್ರೀ. ಕರಿಯಪ್ಪ ಹುಚ್ಚಣ್ಣವರ ಅವರ ಸತತಪ್ರಯತ್ನದಿಂದಲೂ ಕರ್ನಾಟಕದ ಕುರುಬರ ಪರಿಷತ್ತು ಕೀರ್ತಿಯುತವಾಗಿ ಜರುಗಿತು. ಅಧ್ಯಕ್ಷರಾದ ಡಾ. ಆರ್. ನಾಗನಗೌಡ ಎಂ. ಎಸ್‌ಸಿ., ಪಿ ಎಚ್. ಡಿ. ಅವರ ಭಾಷಣವು, ಕರ್ನಾಟಕದ ಜಾನಪದ ಅರ್ಥಶಾಸ್ತ್ರದ ಸಮಸ್ಯೆಗಳನ್ನು ವಿವೇಚಿಸುವ ಒಂದು ಅಧಿಕಾರಯುತವಾದ ಪ್ರಬಂಧವಾಗಿದೆಯೆಂದು ಹೇಳಿದರೆ ಅತ್ಯುಕ್ತಿಯಾಗದು. ಅವರಾ ಭಾಷಣವನ್ನು ಎಲ್ಲರೂ ಆಮೂಲಾಗ್ರವಾಗಿ ಓದಬೇಕೆಂದು ಸೂಚಿಸುತ್ತೇವೆ. ಸ್ಥಲಸಂಕೋಚದ ದೆಸೆಯಿಂದ ಅದರಲ್ಲಿಯ ಮುಖ್ಯಾಭಿಪ್ರಾಯಗಳನ್ನು ಸಂಕ್ಷೇಪವಾಗಿ ಕೊಡುವೆವು.

ಕುರುಬರ ವ್ಯವಸಾಯಕ್ಕೆ ಅನುರೂಪವಾಗುವಂತೆ ಅವರ ಪ್ರಾಥಮಿಕ ಅಭ್ಯಾಸಕ್ರಮದಲ್ಲಿ ತಿದ್ದುಪಡೆಯಾಗಬೇಕು; ಉಣ್ಣೆ ನೂಲುವುದು, ನೇಯುವುದು, ಕುರಿ ಸಾಕುವುದು, ಪೀಳಿಗೆಯನ್ನು ಸುಧಾರಿಸುವುದು ಇ. ಗಳ ಶಿಕ್ಷಣವು ಶಾಲೆಗಳಲ್ಲಿಯೆ ದೊರೆಯಬೇಕು....ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳಲ್ಲಿಯ ಒಟ್ಟು ೨೭.೮ ಲಕ್ಷ ಜನಸಂಖ್ಯೆಯಲ್ಲಿ ಕುರುಬರು ೩.೭ ಲಕ್ಷ, ಎಂದರೆ ೧೦೦ಕ್ಕೆ ೧೧ರಂತೆ ಇದ್ದಾರೆ. ಈ ಮೂರು ಜಿಲ್ಲೆಗಳಲ್ಲಿ ಸಾಕಲ್ಪಟ್ಟ ಕುರಿಗಳು ಸುಮಾರು

CC-0. Jangamwadi Math Collection. Digitized by eGangotri

೪ ಲಕ್ಷ; ಎಂದರೆ ಇಡಿ ಇಲಾಖೆಯಲ್ಲಿ ಸಾಕಲ್ಪಟ್ಟ ಕುರಿಗಳ ೧/೪. ಸೊಲ್ಲಾಪುರ-ಸಾತಾರಾ ಜಿಲ್ಲೆಗಳ ಕುರಿಗಳನ್ನೂ ಕೂಡಿಸಿದರೆ ೮ ಲಕ್ಷ, ಎಂದರೆ ಇಡಿ ಇಲಾಖೆಯ ಕುರಿಗಳ ಅರ್ಧದಷ್ಟು ಆಗುವುದು. ಬಳ್ಳಾರಿ ಜಿಲ್ಲೆಯಲ್ಲಿ ೨.೭೫ ಲಕ್ಷ ಮತ್ತು ಅನಂತಪುರ ಜಿಲ್ಲೆಯಲ್ಲಿ ೮.೫ ಲಕ್ಷ ಕುರಿಗಳಿವೆ....ಮುಂಬಯಿ, ಮದ್ರಾಸ ಪ್ರಾಂತಗಳೆರಡರ ಒಟ್ಟು ಕುರಿಗಳ ಸಂಖ್ಯೆ ೧ ಕೋಟಿ, ೩೦ ಲಕ್ಷ; ಎಂದರೆ ಇಡಿ ಹಿಂದುಸ್ತಾನದ ಕುರಿಗಳ ಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು. ಇವುಗಳಲ್ಲಿ ಮುಂಬಯಿ ಪ್ರಾಂತದಲ್ಲಿ ೧೭ ಲಕ್ಷ, ಮದ್ರಾಸ ಪ್ರಾಂತದಲ್ಲಿ ಉಳಿದುವೆಲ್ಲ ಇವೆ. ಮುಂಬಯಿ ಕರ್ನಾಟಕದಲ್ಲಿ ೪ ಲಕ್ಷ, ಮದ್ರಾಸ ಕರ್ನಾಟಕದಲ್ಲಿ ೭ ಲಕ್ಷ—ಹೀಗೆ ಒಟ್ಟು ೧೧ ಲಕ್ಷ ಕುರಿಗಳು ಬ್ರಿಟಿಷ್ ಕರ್ನಾಟಕದಲ್ಲಿವೆ. ಇದನ್ನೆಲ್ಲ ನೋಡಲಾಗಿ ಕರ್ನಾಟಕವು ಹಿಂದುಸ್ತಾನದಲ್ಲಿ ಕುರಿಗಳ ಪಾಲನಕ್ಕೆ ಮುಖ್ಯ ಕೇಂದ್ರವಾಗಿದೆಯೆಂದು ಗೊತ್ತಾಗುವುದು....ಕುರಿಗಳ ಬೆಳವಣಿಗೆಗೆ ಯೋಗ್ಯ ಪ್ರದೇಶವೆಂದರೆ, ಸಾಧಾರಣ ಮಳೆಯಾಗುವ ಅಥವಾ ಮಳೆ ಬೀಳದ ಪ್ರದೇಶವೆಂದರೂ ಸಲ್ಲುವುದು. ಉಳಿದ ಪಶುಗಳು ಉಪವಾಸ ಸಾಯತಕ್ಕ ಪ್ರದೇಶಗಳಲ್ಲಿ ಕುರಿಗಳು ಬದುಕಿ ಬೆಳೆಯಬಲ್ಲವು. ಬೈಲುಸೀಮೆಯೆ ಬಹುಭಾಗವಾಗಿರುವ ಕರ್ನಾಟಕವು ಕುರಿಗಳ ಬೆಳವಣಿಗೆಗೆ ತಕ್ಕುದಾಗಿದೆ. ಆದರೂ ಇಲ್ಲಿಯ ಕುರಿಗಳ ಸಂಖ್ಯೆಯು ಸಾಕಷ್ಟಾಗಿಲ್ಲ.... ಹಿಂದುಸ್ತಾನದ ಕುರಿಗಳು ಬೇರೆ ದೇಶಗಳ ಮಾನದಿಂದ ಬಹಳ ಕಡಿಮೆ ಜಾತಿಯವು. ಉಳಿದ ಕಡೆ ಸಂಪತ್ಸಾಧಕವಾದ ಈ ಉದ್ಯೋಗವು ಹಿಂದುಸ್ತಾನದ ಕುರುಬನಿಗೆ ಜೀವನಾಧಾರವನ್ನೂ ಒದಗಿಸುತ್ತಿಲ್ಲ. ಕುರಿಗಳ ಸಂಖ್ಯೆಯನ್ನು ಮೆಲ್ಲಗೆ ಹೆಚ್ಚಿಸಿ, ಪೀಳಿಗೆಯನ್ನು ಸುಧಾರಿಸಿ, ಈ ಉದ್ಯೋಗವು ಹೆಚ್ಚು ಪ್ರಾಪ್ತಿಕರವಾಗುವಂತೆ ಮಾಡಬೇಕು. ಇದಕ್ಕಾಗಿ ಆಧುನಿಕ ಶಾಸ್ತ್ರೀಯ 'ಜಾತಿಸಂಯೋಗ' ವಿಧಾನಗಳನ್ನು ಅರಿತುಕೊಳ್ಳಬೇಕು. ಮುಂಬಯಿ ಇಲಾಖೆಯ ಕುರಿಗಳ ಉಣ್ಣೆ ಮತ್ತು ಮಾಂಸ ಬಹಳ ಅಲ್ಪವಾಗಿರುವುದೆಂದು ಸರಕಾರಿ ವರದಿ ಹೇಳುತ್ತಿದೆ; ಸುಧಾರಣೋಪಾಯಗಳನ್ನು ಕೈಕೊಂಡರೆ ಫಲಕಾರಿಯಾಗುವುದೆಂತಲೂ ಭರವಸೆ ಕೊಡುತ್ತಿದೆ; ಆ ಪ್ರಕಾರ ತಕ್ಕ ಏರ್ಪಾಡುಗಳನ್ನು ಸರಕಾರವು ಕೈಕೊಳ್ಳಬೇಕು--ಸರಕಾರಿ ಫಾರ್ಮನ್ನು ಏರ್ಪಡಿಸಿ, ಪ್ರತ್ಯಕ್ಷ ಪ್ರಯೋಗಗಳನ್ನು ಕೈಕೊಳ್ಳಬೇಕು....ಕುರಿ ಕಾಯುವುದು ಕಾಡು, ದಡ್ಡತನದ ಕೆಲಸವಲ್ಲ; ಯುರೋಪ್, ಅಮೇರಿಕಾ, ಆಸ್ಟ್ರೇಲಿಯಾಗಳಲ್ಲಿ ಈ ಉದ್ಯೋಗವು ಪಡೆದ ಘನತೆಯು ನಮ್ಮಲ್ಲಿಯ ಉದ್ಯೋಗಕ್ಕೂ ಬರುವಂತೆ ಪ್ರಯತ್ನಿಸಬೇಕು....ಕುರಿ ಸಾಕುವಷ್ಟೇ ಕಂಬಳಿ ನೇಯುವ ಕೈಗಾರಿಕೆಗೂ ತಕ್ಕ ರಕ್ಷಣೆ ಬೇಕು. ಇದೊಂದು ರಾಷ್ಟ್ರೀಯ ಉದ್ಯೋಗ. ಮಧ್ಯಮ ಬೆಲೆಯಲ್ಲಿ ಬಡಜನರಿಗೆ ಸುಖವಾದ, ಬೆಚ್ಚನೆಯ ಹೊದಿಕೆಯನ್ನು ಪೂರೈಸುವ ಈ ಉದ್ಯಮವು ಪರದೇಶಿ ಗಿರಣಿಗಳ ಸ್ಪರ್ಧೆಯನ್ನು ಯಶಸ್ವಿಯಾಗಿ ಎದುರಿಸಿ, ಆಸೇತುಹಿಮಾಚಲದ ವರೆಗೆ ಹಬ್ಬಿದೆ; ಕೈನೂಲಿನ ಕೈಗಾರಿಕೆ ಹಾಳಾಗಿದ್ದರೂ ಕೈಯುಣ್ಣೆಯ ಕೈಗಾರಿಕೆಯು ನಷ್ಟವಾಗದೆ ಉಳಿದಿದೆ. ಅಲ್ಲದೆ ಬಡವರಿಂದ ಶ್ರೀಮಂತರವರೆಗೆ ಅವರವರಿಗೆ ತಕ್ಕ ಕಂಬಳಿಗಳನ್ನು ಒದಗಿಸಿ, ಸರ್ವರಿಗೂ ಉಪಯುಕ್ತವೆನಿಸಿದೆ.

ಶ್ರೀಯುತರ ಭಾಷಣವು ಇನ್ನೂ ಹಲವು ಉಪಯುಕ್ತ ಸೂಚನೆಗಳನ್ನೂ ಕುರುಬರ ಸಾಮಾಜಿಕ ರಾಜಕೀಯ-ಸಮಸ್ಯೆಗಳ ಚರ್ಚೆಯನ್ನೂ ಒಳಕೊಂಡಿರುವುದು. ಕುರುಬರ ಮಹಾಸಭೆಯು ಈ ಭಾಷಣಕ್ಕೆ ಅನುರೋಧವಾಗಿ ಹಲವು ನಿರ್ಣಯಗಳನ್ನು ಕೈಕೊಂಡಿರುವುದು. ಕುರುಬರಿಗೆ ಗೆಲುವಾಗಲಿ! ಕನ್ನಡನಾಡಿನ ಈ ಸರಲ-ಶೀಲಸಂಪನ್ನ-ಕಾಯಕಪ್ರಿಯ ಜನಾಂಗವು ತನ್ನ ಅಜ್ಞತೆಯನ್ನು ನಿವಾರಿಸಿ, ಆಧುನಿಕ ಶಾಸ್ತ್ರೀಯ ಜ್ಞಾನಸಾಧನಗಳಿಂದ ತನ್ನ ವ್ಯವಸಾಯವನ್ನು ಊರ್ಜಿತಗೊಳಿಸಿ, ಸಂಪನ್ನಸ್ಥಿತಿಯನ್ನೈದಲಿ! ಕರುನಾಡಿನ ಸಿರಿ ಮೆರೆಯುವಂತೆ ಬಾಳಿ ಬದುಕಲಿ!




ಫೋಟೋ ಎನ್‌ಲಾರ್ಜಮೆಂಟ

ಬ್ರೊಮಾಯಿಡ್—೨೦"×೧೬"

ತದ್ರೂಪ—ಕಲಾಕೃತಿ

—ಇಂಗ್ಲಿಷ್ ತಜ್ಞರಿಂದ—

ರೂ. ೫ ಮಾತ್ರ

೧ ರೂ. ಮುಂಗಡ ಹಣದೊಡನೆ ಫೋಟೋ ಕಳಿಸಿರಿ:
ಫೋಟೋ ಎನ್‌ಲಾರ್ಜಿಂಗ ವರ್ಕ್ಸ, ಅಮಳನೇರ
(ಪೂರ್ವ ಖಾನದೇಶ)


CC-0. Jangamwadi Math Collection. Digitized by eGangotri

# ನಮ್ಮ ಮಾತು

### ತಿದ್ದುಪಡೆ

ಜ. ಕ. ದಲ್ಲಿ ಸಾಮಾನ್ಯವಾಗಿ ತೋರಿಬರದ ಕೆಲವು ತಪ್ಪುಗಳು ೫೫೦ನೆಯ ಪುಟದಲ್ಲಿ ಉಳಿದುಬಿಟ್ಟಿವೆ. ಅವುಗಳನ್ನು ತಿದ್ದಿಕೊಳ್ಳುವುದು:—

| ಅಂಕಣ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೨ | ಮಾಡಿಟ್ಟಆದೆ. ದರೂ | ಮಾಡಿಟ್ಟದೆ. ಆದರೂ |
| ,, | ೩ | ಉತರ್ತ ಚೀನವೇ | ಉತ್ತರ ಚೀನವೇ |
| ,, | ೧೩ | ಇಂಗ್ಲಡ್ | ಇಂಗ್ಲಂಡ್ |
| ,, | ೧೪ | ಕಾಯ್ದುಕೊಳ್ಳಬೇಕು | ಕಾಯ್ದುಕೊಳ್ಳಬೇಕು |
| ೨ | ೧೧ | ಇಲ್ಲದಗಲಾಟೆ ಬೇಡಾ | ಇಲ್ಲದ ಗಲಾಟೆ ಬೇಡ |

೨ನೆಯ ಅಂಕಣದಲ್ಲಿ ಅಲ್ಲಲ್ಲಿ ಕೆಲವು ಪೂರ್ಣವಿರಾಮಗಳು ಲೋಪವಾಗಿವೆ. ಅವನ್ನು ಸೇರಿಸಿಕೊಂಡು ಓದಬೇಕು.

ಅಲ್ಲದೆ, ಈ ಸಂಚಿಕೆಯಲ್ಲಿ ಕೆಲವು ಪುಟಗಳ ಅಂಕೆಗಳು ತಪ್ಪುಬಿದ್ದಿವೆ. ಆದರೆ ವಿಷಯಗಳನ್ನು ಒಂದರ ಹಿಂದೊಂದು ಅಡೆತಡೆಯಿಲ್ಲದೆ ಓದಬಹುದಾಗಿದೆ.

### ಕೃತಜ್ಞತೆ

ಈ ಸಂಚಿಕೆಯಲ್ಲಿ ಉಪಯೋಗಿಸಲಾದ ಶ್ರೀ. ಪಂಜೆ, ನಾರಿಮನ್, ಸರ್ ಮಿರ್ಝಾ ಇಸ್ಮಾಯಿಲ್, ನೇಸ್ವಿಯವರ ಪಡಿಯಚ್ಚುಗಳಿಗಾಗಿ ಸಂಯುಕ್ತ ಕರ್ನಾಟಕಕ್ಕೆ ಕೃತಜ್ಞರಾಗಿದ್ದೇವೆ.

### 'ಯುನೈಟೆಡ್ ಕರ್ನಾಟಕ' ದ ಪ್ರಗತಿ

ಧಾರವಾಡದ 'ದಿ ಯುನೈಟೆಡ್ ಕರ್ನಾಟಕ ಇನ್ಸೂರನ್ಸ ಕಂಪನಿ'ಯ ೧೯೪೬ನೆಯ ಇಸ್ವಿಯ ಕೊನೆಯ ವರೆಗಾಗುವ ವರ್ಷದ ವರದಿಯು ನಮ್ಮ ಕೈಸೇರಿದೆ.

ಸುಮಾರು ೧೨೦೦೦ ರೂಪಾಯಿಗಳಷ್ಟು ಪ್ರಿಮಿಯಮ್ ರೂಪದಿಂದ ಆದಾಯ ಕೊಡುವ ೨೯೦ ಹೊಸ ಪಾಲಿಸಿಗಳನ್ನು ಕಂಪನಿಯು ಈ ವರ್ಷ ಕೊಟ್ಟಿದೆ. ವಿಮೆಯ ಸಲುವಾಗಿ ಬಂದ ಅರ್ಜಿಗಳಲ್ಲಿ ಉಳಿದ ಸುಮಾರು ೧೫೦ ರಲ್ಲಿ ಕೆಲವ ಅಸ್ವೀಕೃತವಾಗಿಯೂ ಇನ್ನು ಕೆಲವು ವಿಚಾರಣೆಯಲ್ಲಿಯೂ ಇವೆ. ಹೀಗುಳಿದ ಪ್ರಮಾಣವು ತುಸು ದೊಡ್ಡದಾಗಿ ಕಂಡರೂ ಅದು ಆಯ್ಕೆಯಲ್ಲಿಯ ದಕ್ಷತೆಗೆ ದ್ಯೋತಕವಾಗಿದೆ. ಈ ವರ್ಷದ ವ್ಯವಹಾರವು ಕಳೆದ ವರ್ಷಕ್ಕಿಂತ ಬೆಳೆದಿರುವುದಾಗಿ ಕಂಡುಬರುತ್ತದೆ.

ಈ ಅವಧಿಯಲ್ಲಿ ಉತ್ಪನ್ನವಾದ ಎರಡು 'ಕ್ಲೇಮ್'ಗಳ ಹಣವು ( ರೂ. ೨೫೧೨-೮-೦ ) ವಿಲಂಬವಿಲ್ಲದೆ ಆಯಾ ವಾರಸುದಾರರಿಗೆ ಸಿಕ್ಕಿದ್ದರಿಂದಲೂ, ಮೊದಲನೆಯ ಹಕ್ಕಿನ ಹಣವನ್ನು ಜಾಣ್ಮೆಯಿಂದ ವಾರಸುದಾರರ ಊರಲ್ಲಿಯೇ ಸಭೆ ನೆರೆಯಿಸಿ ಸಲ್ಲಿಸಿದ್ದರಿಂದಲೂ, ಈ ಕಂಪನಿಯಲ್ಲಿ ಜನರ ವಿಶ್ವಾಸವು ಬೆಳೆಯದಿರದು. ಆಡಳಿತದ ವೆಚ್ಚವನ್ನು ಶಕ್ಯವಿದ್ದಷ್ಟು ಕಡಿಮೆ ಮಾಡುವ ಧ್ಯೇಯವು ಶ್ಲಾಘನೀಯವಾಗಿದೆ.

ಈ ವರ್ಷದ ಪ್ರಗತಿಯ ಬಗ್ಗೆ, ಕಂಪನಿಯ ಡಾಯರೆಕ್ಟರರನ್ನಲ್ಲದೆ ಕಂಪನಿಯ ಮ್ಯಾನೇಜರರಾದ ಶ್ರೀ. ಎಂ. ಗೋವರ್ಧನರಾಯರನ್ನೂ ಅವರ ಸಹಕಾರಿಗಳನ್ನೂ ಅಭಿನಂದಿಸದಿರೆವು.

### ವಾಚಕರಲ್ಲಿ

ಕಳೆದ ತಿಂಗಳಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದ ಹಲವು ಮಹತ್ವದ ಘಟನೆಗಳು ನಡೆದುದರಿಂದ, ವಿಚಾರವೇದಿಕೆಯಲ್ಲಿ ಅವನ್ನೆಲ್ಲ ಚರ್ಚಿಸಬೇಕಾಗಿ ಬಂದು, ಹಿಂದುಸ್ಥಾನ-ಪರದೇಶಗಳಿಗೆ ಸಂಬಂಧಿಸಿದ ಬಿಡಿನುಡಿಗಳನ್ನು ಹಾಕಲಾಗಲಿಲ್ಲ. ಅದರಂತೆಯೆ ವೀಣಾವಿತಾನ, ಸಾದರಸ್ವೀಕಾರ ಭಾಗಗಳನ್ನೂ ತೆಗೆದಿಡಬೇಕಾಯಿತು. ಈ ಕೊರತೆಯನ್ನು ಮುಂದಿನ ಸಂಚಿಕೆಯಲ್ಲಿ ಸರಿಪಡಿಸಿಕೊಳ್ಳಲಾಗುವುದು.

### ಕರ್ನಾಟಕ ಮಹಿಳಾ ಪರಿಷತ್ತು

ಧಾರವಾಡದಲ್ಲಿ ಅಖಿಲ ಭಾರತೀಯ ಮಹಿಳಾ ಪರಿಷತ್ತಿನ ಕರ್ನಾಟಕ ಶಾಖೆಯು ಸ್ಥಾಪಿತವಾಗಿದೆ. ಕರ್ನಾಟಕ **ಮಹಿಳಾಮಂಡಲದ** ಪ್ರಥಮ ವಾರ್ಷಿಕ ಅಧಿವೇಶನವನ್ನು ನವಂಬರ ೮ನೆಯ ತಾ.ನ ದಿವಸ ಕೂಡಿಸತಕ್ಕದ್ದೆಂದೂ ಬೆಂಗಳೂರಿನ ಮಹಿಳಾಸೇವಾಸಮಾಜದ ಶ್ರೀಮತಿ ಕಮಲಮ್ಮ ದಾಸಪ್ಪಾ ಇವರನ್ನು ಅಧ್ಯಕ್ಷರಾಗಲು ಕೇಳಿಕೊಳ್ಳಬೇಕೆಂದೂ ನಿರ್ಣಯವಾಗಿದೆ. ಧಾರವಾಡದ ಮಹಿಳೆಯರು ಉತ್ಸಾಹದಿಂದ ಕಾರ್ಯ ನಡೆಸಿದ್ದಾರೆ. ಸಾಮಾಜಿಕ ಸುಧಾರಣೆಯಲ್ಲಿ, ಅದರಲ್ಲೂ ಸ್ತ್ರೀಯರ ಶಿಕ್ಷಣವೇ ಮೊದಲಾದ ಚಟುವಟಿಕೆಗಳಲ್ಲಿ ಕರ್ನಾಟಕವು ತೀರ ಹಿಂದುಳಿದಿದೆ. ಕನ್ನಡ ಮಹಿಳೆಯರು ಈ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಹೆಚ್ಚಿನ ಆಸ್ಥೆಯನ್ನು ವಹಿಸಬೇಕಾದುದು ಅವರ ಕರ್ತವ್ಯ.

CC-0. Jangamwadi Math Collection. Digitized by eGangotri

# ಪರಿವಿಡಿ



## ಜನವರಿ ಸಂಚಿಕೆಯಲ್ಲಿ—

ಕುದುರೆಯ ಮೀಮಾಂಸೆ
ಶ್ರೀರಂಗ

ಬಾದಾಮಿಯ ಚಾಲುಕ್ಯರ ಕಾಲದ ಕಲಾಜೀವನ
ದೇಸಾಯಿ ಪಾಂಡುರಂಗರಾಯರು ಎಂ. ಎ.

ಯಾರ ಮಗು ? (ಸಂಣ ಕತೆ)
ಶ್ರೀಮತಿ ಎಸ್. ಕಮಲಾದೇವಿ ಎಂ. ಎ.

ಭೀಕರ ಪಾರುಪತ್ಯ (ಸಂಣ ಕತೆ)
ಸೌ. ಶ್ಯಾಮಲೆ

ಚಿತ್ರಾಂಗದಾ (ಕಾವ್ಯಾವಲೋಕನ)
ಪ್ರೊ. ಎಸ್. ಎಸ್. ಮಾಳವಾಡ ಎಂ. ಎ.

ಜಗತ್ತಿನ ಕೋಲಾಹಲವೂ ಖನಿಜದ್ರವ್ಯಗಳೂ
'ನಾಗರಿಕ'

CC-0. Jangamwadi Math Collection. Digitized by eGangotri

# ಶರಣಸಂದೇಶ

**ನೀವು ಹಿಂದುಗಳೋ ?**

**ಹಾಗಾದರೆ ಜಾಗ್ರತೆ ಚಂದಾದಾರರಾಗಿರಿ !**

ಇದು ವಿಚಾರಕ್ರಾಂತಿಯ ವಾರಪತ್ರಿಕೆ

**ಸಂಪಾದಕರು:**

**ಶ್ರೀ. ಹರ್ಡೇಕರ ಮಂಜಪ್ಪನವರು**

ಹಿಂದೂ ಸಮಾಜಸುಧಾರಣೆ, ಹಿಂದೂ ಸಂಘಟನೆ, ಧಾರ್ಮಿಕ ಸತ್ಯಸಿದ್ಧಾಂತಗಳ ಪ್ರತಿಪಾದನೆ, ಶ್ರೀ ಬಸವಾದಿ ಪ್ರಮಥರ ತತ್ತ್ವಪ್ರಸಾರಣೆ ಮತ್ತು ರಾಜಕೀಯ ಗುಣದೋಷ ವಿಮರ್ಶನೆ ಇವೇ ಈ ಪತ್ರಿಕೆಯ ಪಂಚಪ್ರಾಣ.

**ಮ್ಯಾನೇಜರ್, ಶರಣಸಂದೇಶ**

**ಪೋ. ಆಲಮಟ್ಟಿ, ಜಿ. ವಿಜಾಪೂರ.**



# ಕಲಿಯುಗ

ಕಾಮವಿಜ್ಞಾನ, ಆರೋಗ್ಯವಿಜ್ಞಾನ, ಸಮಾಜ ವಿಜ್ಞಾನಗಳಿಗೆ ಮೀಸಲಾದ, ಕನ್ನಡಸಾಹಿತ್ಯದ ಇತಿಹಾಸದಲ್ಲೇ

**ಪ್ರಥಮ ಮಾಸಪತ್ರಿಕೆ**

ಸಂಪಾದಕರು:
ಆಯುರ್ವೇದವಿದ್ವಾನ್

**ಡಾ|| ಎಂ. ಗೋಪಾಲಕೃಷ್ಣರಾಯರು**

ವಾರ್ಷಿಕ ಚಂದಾ ೧|| ರೂ. ಬಿಡಿಸಂಚಿಕೆ ೨ ಆಣೆ

**ಕಲಿಯುಗ ಕಾರ್ಯಾಲಯ, ಧಾರವಾಡ.**



೨ನೆಯ ವರ್ಷದ ಯೋಜನೆ! ಹೊಸ ವರ್ಷದ ಪ್ರಾರಂಭ ! !

# ಒಂದೇ ಒಂದು ವರ್ಷದಲ್ಲಿ

ಅಖಿಲ ಕರ್ನಾಟಕದ ಮನವನ್ನೆಳೆದುಕೊಂಡ

## ಅರವಿಂದ ಗ್ರಂಥಮಾಲೆ

ಸಂಪಾದಕರು: **ಮಧುರಚೆನ್ನ**

ವಿಚಾರಪ್ರಚುರ ವಾಙ್ಮಯವನ್ನು ಒದಗಿಸುವ ಹಾಗೂ ಸರಸ ಸಾಹಿತ್ಯವನ್ನು ಸೂರೆಮಾಡುವ ಆರು ಪುಸ್ತಕಗಳಲ್ಲದೆ ಮೇಲೊಂದು ಕಾಣಿಕೆಯ ಪುಸ್ತಕ ಕೊಡಲಾಗುವದು. ಅಚ್ಚುಮೆಚ್ಚಿನ ಅಚ್ಚು ಕಟ್ಟುಗಳಿಂದ ಮನೋಹರವಾದ ಪುಸ್ತಕಗಳಿಗಾಗಿ ಇಂದೇ ಚಂದಾದಾರರಾಗಿರಿ. ಹಿಂದಿನ ಪುಸ್ತಕಗಳಿಗೆ ಬರೆಯಿರಿ. ಎಪ್ರಿಲದಿಂದ ಹೊಸವರ್ಷದ ಪ್ರಾರಂಭವಾಯಿತು.

**ವಾರ್ಷಿಕ ಚಂದಾ (ಅಂಚಿವೆಚ್ಚಸೇರಿ) ೩—೮—೦**

**ಅರವಿಂದ ಗ್ರಂಥಮಾಲೆ, ಪೋ. ಹಲಸಂಗಿ**

**ಜಿಲ್ಲಾ ವಿಜಾಪುರ**



೫೬ ವರ್ಷಗಳಿಂದ ದಿನದಿನಕ್ಕೆ ಹೆಚ್ಚುತ್ತಲಿರುವ

**ಪ್ರಸಿದ್ಧಿಗೆ**

ಏನಾದರೂ ಮಹತ್ತ್ವವಿರುತ್ತಿದರೆ, ನೀವು

## ಆತಂಕನಿಗ್ರಹ ಗುಳಿಗೆ

ಗಳನ್ನೇ ಉಪಯೋಗಿಸುವದು ವಿಹಿತ.

ಈ ಗುಳಿಗೆಗಳಿಂದ ಶಾಶ್ವತ ಯೌವನವೂ ಶಕ್ತಿಯೂ ಬರುವವು.

**೩೨ ಗುಳಿಗೆಗಳ ಡಬ್ಬಿಗೆ ರೂ. ೧-೦-೦**

ಆರೋಗ್ಯ, ವೈಭವ, ಸಮೃದ್ಧಿಗಳ ಮಾರ್ಗ ತೋರಿಸುವ ಕಾಮಶಾಸ್ತ್ರವನ್ನೋದಿರಿ. ಅಂಚೆಯ ವೆಚ್ಚವಿಲ್ಲದೆ ಪುಕ್ಕಟೆಯಾಗಿ ದೊರೆಯುವದು.

ಇಂದೇ ಬರೆಯಿರಿ:—

**ಆತಂಕನಿಗ್ರಹ ಫಾರ್ಮಸಿ,**

**೨೬ ಬ್ರಾಡ್ವೇ, ಮದ್ರಾಸ**


CC-0. Jangamwadi Math Collection. Digitized by eGangotri




# ಎಚ್ಚರು !

ನರನ ನೈಜವನರಿವುದೆಂತಯ್ಯ ದಂಭವಾ-
ವರಿಸಿರಲು ? ಪರಹಿತವು, ನೀತಿ, ಸಂಸ್ಕೃತಿಯೆಂಬ
ಬರಿಯ ಬಾಯ್ಮಾತುಗಳ ಬಿರುಪೊಯ್ಲಿಗಿದೊ ನುಚ್ಚು-
ನುರಿಯಾಗಿ ಬಿದ್ದಿಹುದು ಧರ್ಮವೆಂಬುದು, ನೋಡ !
ಬಾಯೊಳೊಂದೆದೆಯೊಳೊಂದಿದು ನೀತಿಯೇನಯ್ಯ ?
ಹೇಯವಾದುದರೊಳಾದರವೆ, ದುರ್ದೈವಿಗಳೆ ?
ಕೊಲುವುದೆಲೆ ನಿಮ್ಮನಾ ಜರ್ಜರಿತ ಧರ್ಮವೇ !
ಬಲದ ದರ್ಪದಲಿಂತು ಮೆರೆಯಬೇಡಿರಿ ಮರೆತು
ದೈವವನು ! ನೂರೊಂದು ತಪ್ಪುಗಳ ಗೆಯ್ವವನು
ಸಾವು ಹಾರುತಲಿಹುದು ಹಲ್ಗಳನು ಮಸೆಯುತ್ತೆ !
ಇದೊ ಸುತ್ತಲೆಲ್ಲಿಯೂ ಹಲ್ಮಸೆವ ದನಿ ತುಂಬಿ-
ಹುದು ! ಸಿಡಿಲ ದನಿಯು ಮೊಳ್ಕೆಯೊಳುಗ್ರವಾಗಿಹುದು !!
ಎಚ್ಚರೆಚ್ಚರು ದಂಭದಾವರಣವನು ನೀವು
ನಚ್ಚಿ ನಡದರೆ, ಬಿಡದು ಬಡದು ನಿಮ್ಮನು ಸಾವು !

—ಸಾಲಿ ರಾಮಚಂದ್ರರಾಯ

CC-0. Jangamwadi Math Collection. Digitized by eGangotri

# ಕಾಮಶಿಕ್ಷಣ

ಲೇಖಕರು: “ನ. ಲ. ಆ.”



**ಮಕ್ಕಳಿಗೆ ಕಾಮಶಿಕ್ಷಣ*ವನ್ನು ಕೊಡಬೇಕು—ಅದನ್ನು ತಾಯಿತಂದೆಗಳೆ ಕೊಡಬೇಕು—ಅವರು ಕೊಡುವುದರಿಂದಲೆ ಮಕ್ಕಳ ಹಾದಿಯಲ್ಲಿಯ ಎಡರುಗಳು ದೂರವಾಗುವವು—ಜೀವನದ ಸುಖಸಾರವನ್ನು ಸವಿಯಲೂ ಕಷ್ಟನಿಷ್ಠುರಗಳನ್ನು ಎದುರಿಸಲೂ ಶಕ್ತಿ ಬರುವುದು.... .... ಎಂದು ಪ್ರತಿಪಾದಿಸುವ ಮಾರ್ಮಿಕ ಲೇಖನ ....**



ಒಂದು ಪ್ರಸಿದ್ಧ ಕಾದಂಬರಿಯಲ್ಲಿ, ಹಲವರು ಸೇರಿ ಸ್ತ್ರೀ-ಪುರುಷರ ಹಕ್ಕುಗಳ ಮತ್ತು ಸಂಬಂಧದ ಬಗ್ಗೆ ಹಗಲೆಲ್ಲ ಚರ್ಚೆ ನಡೆಸುವಂತೆ ತೋರಿಸಲಾಗಿದೆ. ಆಗ ಹಿರಿಯ ಹೆಂಗಸೊಬ್ಬಳು “ಇದರ ಹೊರತು ಬೇರೆ ವಿಷಯವೇ ವಾದವಿವಾದಕ್ಕೆ ದೊರೆಯುವದಿಲ್ಲವೇ?” ಎಂದು ಏಡಿಸಿ ಕೇಳುತ್ತಾಳೆ. ಅದಕ್ಕುತ್ತರವಾಗಿ ಚರ್ಚೆಯ ಮುಖ್ಯಸ್ಥನು ಹೇಳುತ್ತಾನೆ: “ಸ್ತ್ರೀಪುರುಷರ ಹೊರತು ಜಗತ್ತಿನಲ್ಲಿ ಇದ್ದದ್ದಾದರೂ ಏನು?”

ಹೀಗೆಂದೊಡನೆ ಸಮಾಜದ ಹಿತರಕ್ಷಕರೆನ್ನಿಸಿಕೊಳ್ಳುವವರು ಕೋಪದಿಂದ, “ಇದಲ್ಲವೆ ಅನಾಚಾರದ ಅಸಡ್ಡೆ, ಸ್ವೈರಾಚಾರದ ಸಂತೆ, ದುರಾಚಾರದ ದೊಂಬಿ?” ಎಂದು ಮೂಗು ಮುರಿಯುವರು, ಹೇಸಿಕೊಳ್ಳುವರು. ಆದರೆ ಹೀಗೆ ಮಾಡುವದು ಅ-ವಿಚಾರದ ಪ್ರೇರಣೆಯೆಂಬದು ಸ್ವಲ್ಪ ವಿಚಾರ ಮಾಡಿದರೆ ತಿಳಿಯದೆ ಇರದು. ಹೆಣ್ಣು-ಗಂಡು ಎಂಬೆರಡೇ ಜಾತಿಗಳು ಜಗತ್ತಿನಲ್ಲಿ ವ್ಯವಹರಿಸುತ್ತಿವೆ ಎಂಬುದಂತೂ ಸರಿಯೆ! ಅಲ್ಲದೆ ಸ್ತ್ರೀ-ಪುರುಷರಲ್ಲಿಯ ಆದೊಂದು ಆ ಒಲವಿನ—ಪರಸ್ಪರಾಕರ್ಷಣದ ಮೇಲೆಯೆ, ಕುಟುಂಬವ್ಯವಸ್ಥೆ, ನೀತಿಶಾಸ್ತ್ರ, ಸಮಾಜರಚನೆ—ಅದೇಕೆ ಇಡಿಯ ಸಂಸ್ಕೃತಿಮಂದಿರವೆ ಕಟ್ಟಲ್ಪಟ್ಟಿದೆಯೆಂಬದನ್ನು ಎಲ್ಲರೂ ಒಪ್ಪಲೇಬೇಕು. ತುಂಬಾ ಅನುರೂಪರಾಗಿರುವ ದುಷ್ಯಂತ-ಶಕುಂತಲೆಯರ ಜತೆ ನೋಡಿ ಕಾಲಿದಾಸನು “ಇಂತಹ ಸಾಲಾವಳಿಯನ್ನು ಒದಗಿಸುವದು ಬ್ರಹ್ಮದೇವನಿಗೆ ಕೂಡ ಯಾವಾಗಲೋ ಒಮ್ಮೆ ಸಾಧಿಸುವದು” ಎಂದು ನುಡಿಯುವನು. ಈವೊತ್ತಿನ ಸಮಾಜದಲ್ಲಿಯೂ ‘ವಿವಾಹ, ವಧೂ-ವರ’ ಎಂಬೀ ಪ್ರಶ್ನೆಗಳ ಅಚ್ಚಿನ ಸುತ್ತಲೇ ಎಲ್ಲಾ ಸಮಸ್ಯೆಗಳು ತಿರುಗುತ್ತಿದ್ದರೆ ಸೋಜಿಗವೇನು?

### ‘ಹಳೆ-ಹೊಸ’ಗಳ ಜಗಳ

ಸ್ತ್ರೀಪುರುಷರ ಸಂಬಂಧವು ಎಂತಿರಬೇಕು, ಅವರ ಪರಸ್ಪರರ ಹಕ್ಕುಗಳು ಯಾವವು, ಅವರ ಅಧಿಕಾರಗಳ ಮತ್ತು ಕರ್ತವ್ಯಗಳ ಮೇರೆಯೇನು ಎಂಬ ವಿಷಯಕ್ಕೆ ಸಮಾಜದಲ್ಲಿ ತುಂಬಾ ಮಹತ್ವವಿರುವದು ಸ್ವಾಭಾವಿಕವಾಗಿದೆ. ಇದಕ್ಕೆ ಸಂಬಂಧಪಟ್ಟ ಶಿಕ್ಷಣವನ್ನು ಚಿಕ್ಕಂದಿನಿಂದಲೆ ಕೊಡಬೇಕೆಂಬ ತತ್ವವು ಇಂದು ಮಾನ್ಯವಾಗತೊಡಗಿದೆ. ಆದರೆ ಯಾವ ತೆರದಲ್ಲಿ, ಯಾವ ಪ್ರಮಾಣದಲ್ಲಿ ಎಂಬುದೆ ಕೂಟಪ್ರಶ್ನೆಯಾಗಿದೆ. ‘ಕಾಮಶಿಕ್ಷಣ....ಛಿಃ, ಅದನ್ನೇನು ಕೊಡುವದು’ ಎಂದು ಕೇಳುವವರಿಗೂ ಕೊರತೆಯಿಲ್ಲ. ‘ನಮಗೆ ಯಾವದು ಎಂದೂ ದೊರೆತಿಲ್ಲವೋ ಅದನ್ನು ಮಕ್ಕಳಿಗೆ ಕೊಡುವ ಆಗತ್ಯವೆಲ್ಲಿದೆ?’—ಎಂದು ಅವರು ವಾದಿಸುವರು. ಸ್ತ್ರೀಪುರುಷರ ವಿಶಿಷ್ಟ ಶರೀರರಚನೆಯ ಜ್ಞಾನವನ್ನು ಮಾಡಿಕೊಡುವದು, ಪ್ರಜೋತ್ಪತ್ತಿ ಮತ್ತದಕ್ಕೆ ಸಂಬಂಧಪಟ್ಟ ಸೃಷ್ಟಿಕ್ರಮ—ಇವುಗಳ ಬಗೆಗೆ ಚಿಕ್ಕವರಲ್ಲಿದ್ದ ಜಿಜ್ಞಾಸೆಯನ್ನು ತೃಪ್ತಿಗೊಳಿಸುವದು, ಇದಿಷ್ಟೆ ಕಾಮಶಿಕ್ಷಣವೆಂದು ಹಲವರು ತಿಳಿಯುತ್ತಾರೆ. ಸುಸಂಸ್ಕೃತ ಸಮಾಜದಲ್ಲಿಯ ಕುಟುಂಬಗಳಲ್ಲಿ ಕಾಮವಿಷಯಕವಾದ ಸಂಗತಿಗಳ ಬಗ್ಗೆ ಒಂದು ಸ್ವಾಭಾವಿಕ ಲಜ್ಜೆಯು ಇರುವದುಂಟು; ಅದರ ಅತಿರೇಕವಾಗುವದರಿಂದ ಮಕ್ಕಳ ನೈಸರ್ಗಿಕ ಕುತೂಹಲವು ಒತ್ತಿಕ್ಕಲ್ಪಟ್ಟು, ಹಲವು ಸಲ ತುಂಬಾ ಹಾನಿಯಾಗುತ್ತದೆ. ಆದರೀಚೆಗೆ ತೀರ ವಿಪರೀತವಾದ ಸ್ಥಿತಿಯೂ ಉಂಟಾಗುತ್ತಲಿದೆ; ಅಸ್ವಾಭಾವಿಕವಾದ ಸಾಮಾಜಿಕ ಪರಿಸ್ಥಿತಿ, ಚಿತ್ರಪಟ ಪ್ರದರ್ಶನ ಮೊದಲಾದ

---

* Sex Education ಎಂಬುದಕ್ಕೆ ‘ಲೈಂಗಿಕ ಶಿಕ್ಷಣ’ ಎನ್ನುವದಕ್ಕಿಂತ ‘ಕಾಮಶಿಕ್ಷಣ’ ಎನ್ನುವದೆ ಅಧಿಕ ಸಮರ್ಪಕವಾಗಿದೆ.

CC-0. Jangamwadi Math Collection. Digitized by eGangotri

ಗಳಿಂದ, ಮಕ್ಕಳ ಕಾಮಜಿಜ್ಞಾಸೆಗೆ ಮಿತಿಮೀರಿ ಉರು ದೊರೆಯಹತ್ತಿದೆಯೆಂದು ಹಿರಿಯರಿಗೆ ಸಾಧಾರವಾದ ಭೀತಿಯು ಬಾಧಿಸುತ್ತಿದೆ.

## ಹಳೆಯದರಲ್ಲಿಯ ಹುರುಳು

ಹಿಂದಿನ ತಲೆಮಾರಿನಲ್ಲಿ 'ಕಾಮಶಿಕ್ಷಣ' ಎಂಬ ಹಲಿಗೆ ಹಚ್ಚಿ ಶಿಕ್ಷಣ ಕೊಡುತ್ತಿರಲಿಲ್ಲವಾದರೂ, ಅದನ್ನು ಯಾವ ರೀತಿಯಲ್ಲಿಯೂ ಕೊಡುತ್ತಿರಲಿಲ್ಲವೆಂದು ಹೇಳಲಾಗದು. ಸಂಪೂರ್ಣ ಜಿಜ್ಞಾಸಾತೃಪ್ತಿಯೇ ಧ್ಯೇಯವಾಗಿರಲಿಲ್ಲ. ಆದರೆ ಕೌಟುಂಬಿಕ ಜೀವನದಲ್ಲಿ ಸ್ತ್ರೀಪುರುಷ ವಿಷಯಕವಾದ ಶಿಕ್ಷಣವು ಬಹುಮಟ್ಟಿಗೆ ತಾನಾಗಿಯೆ ದೊರೆಯುತ್ತಿತ್ತು. ಘೋಷಾಪದ್ಧತಿಯಿರದ ಏಕತ್ರ ಕುಟುಂಬದಲ್ಲಿ ಸ್ತ್ರೀಪುರುಷರ ಪರಸ್ಪರ ಭಾವನೆಯು ಯಾವ ತೆರನಾಗಿರಬೇಕು, ಪರಸ್ಪರರ ಸಾಮೀಪ್ಯದ ಮೇರೆಗಳು ಯಾವವು, ಕಾಮವಿಷಯಕ ಸಂಗತಿಗಳ ಬಗ್ಗೆ ಎಷ್ಟರ ಮಟ್ಟಿಗೆ ಲಜ್ಜೆಯನ್ನು ಅವಲಂಬಿಸಬೇಕು, ಅಶ್ಲೀಲತೆಯ ಗೊತ್ತು-ಗಡಿಗಳು ಯಾವವು ಎಂಬೀ ಮೊದಲಾದ ವಿಷಯಗಳನ್ನು ಕುರಿತು ಮಕ್ಕಳ ಮನಸ್ಸಿನ ಮೇಲೆ ಸಂಸ್ಕಾರಗಳನ್ನು ಚಿಕ್ಕಂದಿನಿಂದಲೆ ಮೂಡಿಸಲಾಗುತ್ತಿತ್ತು. ಸಭ್ಯತೆಯ ಕಲ್ಪನೆಯ ಅನುಚಿತ ಅತಿರೇಕದಿಂದ, ಸ್ತ್ರೀಪುರುಷರ ವಿಶಿಷ್ಟ ಶಾರೀರಿಕ ಭೇದಗಳನ್ನು ಕುರಿತು ಒಮ್ಮೊಮ್ಮೆ ಅಪೂರ್ಣ ಇಲ್ಲವೆ ಪ್ರಮಾದಪೂರ್ಣ ಜ್ಞಾನವು ದೊರೆಯುತ್ತಿತ್ತು ಎಂಬದೇನೂ ಸುಳ್ಳಲ್ಲ. ಆದರೀ ಲೋಪವನ್ನು ಸರಿಪಡಿಸುವದಕ್ಕಾಗಿ ಕಾಮಶಿಕ್ಷಣದ ವ್ಯಾಪ್ತಿಯನ್ನೆ ಸಂಕುಚಿತಗೊಳಿಸುವ ಪ್ರಯತ್ನವು ಕೆಲವೆಡೆಯಲ್ಲಿ ನಡೆದಿದೆ.

## ಕಾಮಶಿಕ್ಷಣದ ವ್ಯಾಪ್ತಿ

ಕಾಮಶಿಕ್ಷಣವೆಂದರೆ ಸ್ತ್ರೀಪುರುಷರ ಶಾರೀರಿಕ ಸಂಬಂಧದ ಜ್ಞಾನಮಾತ್ರವೆಂಬ ತಪ್ಪು ಕಲ್ಪನೆಯು ತೊಲಗಬೇಕು. ವಿವಾಹಾನಂತರದಲ್ಲಿ ಪತಿಪತ್ನಿಯರ ಸಂಸಾರವು ಸುಖಪೂರ್ಣವಾಗಬೇಕು, ಅವರ ಪರಸ್ಪರ ಗೌರವಭಾವನೆಯು ಪುಟಗೊಳ್ಳಬೇಕು, ಕಾಮವಿಷಯಕ ಸತ್ಯಜ್ಞಾನವು ಒದಗಬೇಕು, ವಿವಾಹದಿಂದ ಅವರ ಕಾರ್ಯಕ್ಷಮತೆಯು ಬೆಳೆಯಬೇಕು, ಜೀವನವು ಆನಂದದ ಆಟವೆನಿಸಿ ಸ್ವಂತದ ವಿಕಾಸಕ್ಕೆ ಸಹಾಯಕವಾಗಬೇಕು ಎಂಬದೆ ಕಾಮಶಿಕ್ಷಣದ ಲಕ್ಷ್ಯವಾಗಿದೆ. ವೈವಾಹಿಕ ಜೀವನದ ಪೂರ್ವಸಿದ್ಧತೆ ಮಾತ್ರವಲ್ಲ; ವಿವಾಹವಾಗಿರಲಿ, ಇಲ್ಲವೆ ಅವಿವಾಹಿತ ಸ್ಥಿತಿಯಲ್ಲಿಯೆ ಜೀವನವು ಸಾಗಿರಲಿ, ಅದೇಕೆ—ವೈಧವ್ಯವು ಅಥವಾ ವಿಧುರತೆಯು ಪಾಲಿಗೆ ಬಂದಿರಲಿ, ಜೀವನವು ಸುಖಮಯವೂ ಸಮೃದ್ಧವೂ ಎಂತಾದೀತೆಂದು ಕಾಮಶಿಕ್ಷಣವು ತಿಳಿಸುತ್ತದೆ. ಕಾಮಜ್ಞಾನವುಳ್ಳವರು ಹೆರರ ಜೀವನವೂ ಸುಖಪೂರ್ಣವಾಗುವಂತೆ ವ್ಯವಹರಿಸಬಲ್ಲರು, ಸಮಾಜವೆ ಪೂರ್ಣಜೀವನವನ್ನು ಪಡೆಯುವಂತೆ ಹೆಣಗಾಡಬಲ್ಲರು.

## ಜೀವನವೆ ಶಾಲೆ

ಸ್ಥೈರ್ಯವಿಲ್ಲದ ಜೀವನವು ತಳವಿಲ್ಲದ ಮಗಿಯಂತೆ ಸಿಕ್ಕಿದತ್ತ ತಿರುಗುವದು. ಸ್ಥೈರ್ಯವೆ ಸುಖದ ತಾಣವು. ದಿನಕ್ಕೊಂದು ಪರಿಯಾಗುವದರಿಂದ ಜೀವನದಲ್ಲಿ ಪೂರ್ತತೆಯೆನಿಸದು. ಸ್ತ್ರೀಪುರುಷ ಸಂಬಂಧ ವಿಚಾರದಲ್ಲಿಯೂ ಜೀವನದ ಆದರ್ಶಗಳು ಮೊದಲಿನಿಂದಲೆ ನಿಶ್ಚಿತವಾಗಿರಬೇಕಾಗುತ್ತದೆ. ನಿಶ್ಚಿತ ಆದರ್ಶಗಳೂ ಅವುಗಳಿಗನುರೂಪವಾದ ಸಂಸ್ಕಾರಗಳೂ ಇರುವಲ್ಲಿ ಕೆಲವೊಂದು ಪರಿಸ್ಥಿತಿಯಲ್ಲಿ ಹೇಗೆ ನಡೆಯಬೇಕು ಎಂಬ ಬಗ್ಗೆ ವ್ಯಾಮೋಹವು ಮೇಲಿಂದ ಮೇಲೆ ಉಂಟಾಗುವದಿಲ್ಲ. ಬರಿ ತತ್ವಚರ್ಚೆಯು ಮರುಭೂಮಿಯ ತೆರನಾಗಿರುವದು. ಆದರೆ ತತ್ವಚರ್ಚೆಯು ಮಾರ್ಗದರ್ಶಕವಾಗಿದ್ದು, ತತ್ಪೂರಕವಾಗಿ ನಡೆವಳಿಕೆಯ ಅಭ್ಯಾಸವು ಮೈಯುಂಡಿದ್ದರೆ ಜೀವನಕ್ಕೆ ನಿಶ್ಚಿತಿ ಬರುವದು. ಕಾಮಶಿಕ್ಷಣಕ್ಕೂ ಇದು ತುಂಬಾ ಅನ್ವಯಿಸುವದು. ಮಕ್ಕಳ ಜಿಜ್ಞಾಸಾತೃಪ್ತಿಯೇನೋ ಅವಶ್ಯಕವೇ; ಅದಕ್ಕಿಂತ ಹೆಚ್ಚಾಗಿ ಸರಿಯಾದ ಆದರ್ಶವೂ, ತದನುರೂಪವಾದ ಸಂಸ್ಕಾರಗಳೂ, ನಡೆವಳಿಕೆಯ ರೀತಿಗಳೂ ಹೆಚ್ಚು ಪರಿಣಾಮಕಾರಿಯಾಗಿರುತ್ತವೆ.

## ಪಾಲಕರೆ ಶಿಕ್ಷಕರು

ಇಷ್ಟು ವ್ಯಾಪಕಾರ್ಥದಲ್ಲಿ ಕಾಮಶಿಕ್ಷಣವನ್ನು ಕೊಡುವದಾದರೆ, ಪಾಲಕರ ಪೂರ್ವತಯಾರಿಯು ಚೆನ್ನಾಗಿರಬೇಕಾಗುವದು. 'ಬೀಜದಂತೆ ಕುಜ.' ಸ್ತ್ರೀ-ಪುರುಷ ಸಂಬಂಧ ವಿಚಾರದಲ್ಲಿ ತೀರಾ ಬಿಚ್ಚುನೊಗ್ಗೆಯೂ ಇರಬಾರದು, ತುಂಬಾ ಮುಚ್ಚುಮರೆಯೂ ಇರಬಾರದು. ಅಶ್ಲೀಲತೆಯೂ ಶಾಸ್ತ್ರೀಯ ವಿವೇಚನೆಯೂ ಎಲ್ಲಿ ಕೂಡುತ್ತವೆ, ಎಲ್ಲಿ ಬಿಡುತ್ತವೆ; ಹೆಣ್ಣು-ಗಂಡಿನ ಬಳಕೆಯು ಸಂಸಾರವನ್ನು ಸವಿಗೊಳಿಸುವದಕ್ಕೇ ವಿನಾ, ಕೊಳಚೆಯ ಕೊಳ ಮಾಡುವದಕ್ಕೆ ಅಲ್ಲ—ಎಂಬೀ ಮಾತುಗಳ ತಿಳಿವಳಿಕೆಯು ಪಾಲಕರಿಗೇ ಚೆನ್ನಾಗಿ ಇರದಿದ್ದರೆ, ಮಕ್ಕಳಿಗೇನು ಅವರು ಕಲಿಸಬಲ್ಲರು ? ಇತಿಹಾಸ ಭೂಗೋಲಗಳಂತೆ ಪಠ್ಯಪುಸ್ತಕಗಳಿಂದ ಕಟ್ಟಿಟ್ಟ ರೀತಿಯಲ್ಲಿ ಕಾಮಶಿಕ್ಷಣವನ್ನು ಕೊಡಲು ಬರುವದಿಲ್ಲ. ತಂದೆತಾಯಿಗಳ ಸಹೃದಯ ಸಹವಾಸವೆ ಮಕ್ಕಳ ಕಾಮಶಿಕ್ಷಣಶಾಲೆಯಾಗಬೇಕು.

CC-0. Jangamwadi Math Collection. Digitized by eGangotri

## ಎಳೆಯ ಕೈಗಳನ್ನು ಅಲಕ್ಷಿಸದಿರಿ !

ವಸಂತರಾಯರು ದಿನವೆಲ್ಲಾ ಹೊಟ್ಟೆಪಾಡಿಗಾಗಿ ಕೆಲಸ ಮಾಡಿ ಮನೆಗೆ ಬಂದಾಗ, ಗೃಹಸ್ವಾಮಿನಿಯರಾದ ಮನೋರಮಾಬಾಯಿಯವರು ಮನೆಯಲ್ಲಿಯ ಕಿರಿಕಿರಿ ಹೇಳಹೇಳುತ್ತಲೆ ಪತಿರಾಯರನ್ನು ಸ್ವಾಗತಿಸುವರು. ಇಲ್ಲವೆ ಮನೋರಮೆಯು ಗುಲಾಮಳಂತೆ ಹಗಲಿರುಳೆನ್ನದೆ ತನ್ನ ಸೇವೆಯನ್ನೆ ಮಾಡಬೇಕು ಎಂದು ವಸಂತರಾಯರು ಅಪೇಕ್ಷೆಯನ್ನಿಟ್ಟುಕೊಂಡಿರುವರು. ಇಂತಹ ತಾಯಿತಂದೆಗಳು ದಾಂಪತ್ಯ ಜೀವನದ ಉಚ್ಚಾದರ್ಶದ ವಿಚಾರವಾಗಿ ಮಕ್ಕಳಿಗೆ ಏನು ತಿಳಿಹೇಳಬಲ್ಲರು? ತಮ್ಮ ಮಡದಿಯರ ಮಾನ ಮುಕ್ಕಾಗುವಂತೆ ಮಾಡಿ ತಮ್ಮ ಗಂಡಸುತನವನ್ನು ಮೆರೆಯಿಸುವ ಹವ್ಯಾಸವುಳ್ಳ ಹಲವು ಸುಶಿಕ್ಷಿತ ಪುರುಷಬ್ರುವರು ನಮ್ಮಲ್ಲಿದ್ದಾರೆ. ಈ ಪೌರುಷ ಪ್ರದರ್ಶನ ಪ್ರಯೋಗಗಳನ್ನು ಅನುದಿನವೂ ನೋಡುವ ಮಕ್ಕಳು, ಸಮಗ್ರ ಸ್ತ್ರೀಜಾತಿಯ ಬಗೆಗೇ ವಿಕೃತ ಕಲ್ಪನೆಯನ್ನು ಮಾಡಿಕೊಳ್ಳುತ್ತಾರೆ. ತೀರ ಚಿಲ್ಲರೆ ಮಾತುಗಳಿಗಾಗಿಯೂ ಘನಘೋರ ಯುದ್ಧವನ್ನೆಸಗುವ ತಾಯಿತಂದೆಯರ ಜೀವನಕ್ರಮವನ್ನು ನಿರೀಕ್ಷಿಸುವ ಮಕ್ಕಳು ವಿವಾಹದ ಉಚ್ಚಾದರ್ಶವನ್ನೂ ವೈವಾಹಿಕ ಜೀವನದ ಆನಂದವನ್ನೂ ಹೇಗೆ ಮನದಟ್ಟು ಮಾಡಿಕೊಳ್ಳುವರು ? ಪುಟ್ಟ ಬಾಬಣ್ಣನಿಗೆ ತಾಯಿ ಹೇಳುತ್ತಾಳೆ—ನೀನು ಕಸ ಗುಡಿಸಬೇಡ ಎಂತ. ಮತ್ತು ಚಿಕ್ಕ ಸರೂಗೆ ಹೇಳುತ್ತಾಳೆ—ಹೋಗೆ, ಬಾಬೂನ ಕೋಣೆಯ ಕಸ ಬಳಿ ಎಂತ. 'ಊಂ, ನಾನೊಲ್ಲೆ' ಎಂದು ಸರೂ ಅಂದರೆ ಸಾಕು, ಕಟ್ಟಿಟ್ಟ ಉತ್ತರ ಬರುತ್ತದೆ—ಹೆಣ್ಣು ಹುಡುಗಿಯಾಗಿ ಕೆಲಸ ಒಲ್ಲೆ, ತಮ್ಮಂದಿರನ್ನು ಸಂಬಾಳಿಸಲಾರೆ ಅಂದರೆ ಹೇಗೆ ಸಾಗೀತು ?.... ದೊಡ್ಡವರಾದ ಮೇಲೆ ಇದೇ ಬಾಬು ಹೆಂಡತಿಯನ್ನು ಕಾಡಹತ್ತಿದರೆ ಮತ್ತು ಸರೂ ಗಂಡನನ್ನು ಕಂಡು ಹುಬ್ಬು ಗಂಟಿಕ್ಕಲಾರಂಭಿಸಿದರೆ, ಅದರಲ್ಲಿ ಸೋಜಿಗವೇನು ? ಸ್ತ್ರೀ ಪುರುಷರ ಪರಸ್ಪರ ಭಾವನೆಗಳನ್ನು ಹಸನುಗೊಳಿಸುವದೊಂದು ಕಾಮಶಿಕ್ಷಣದ ಉದ್ದೇಶವಾಗಿದೆ; ಅದು ಇಂತಹ ಚಿಕ್ಕಪುಟ್ಟ ಸಂಗತಿಗಳಿಂದಲೆ ಒಂದು ಸಲ ಈಡೇರುವದು, ಇನ್ನೊಂದು ಸಲ ಕೆಡುವದು.

### ಸೂಕ್ಷ್ಮಜ್ಞಾನವು ಅಗತ್ಯ

ತಾಯಿತಂದೆಯರ ನಡೆವಳಿಕೆಯೆ ಮಕ್ಕಳಿಗೆ ಪಾಠವಾಗುವದು. ಮಕ್ಕಳ ಮನೋವಿಕಾಸವು ಎಂತಾಗುವದು, ಅವರಿಗೆ ಯೋಗ್ಯ ಪ್ರವೃತ್ತಿಗಳನ್ನು ಯಾವ ದಾರಿಗಳಿಂದ ಹಚ್ಚಬಹುದು ಎಂಬದರ ಸ್ಥೂಲ ಕಲ್ಪನೆಯಲ್ಲದೆ, ಕಾಮಪ್ರವೃತ್ತಿ, ಅದರ ವ್ಯಾಪಕಕ್ಷೇತ್ರ, ವಯೋಮಾನದಂತೆ ಬದಲಾಗುವ ಕಾಮವಿಕಾರದ ಸ್ವರೂಪ, ಸಮಾಜದಲ್ಲಿಯೂ ಸಂಸ್ಕೃತಿಯಲ್ಲಿಯೂ ಕಾಮವಿಕಾರದ ಕಾರ್ಯ ಎಂಬೀ ಮಾತುಗಳ ಸೂಕ್ಷ್ಮಜ್ಞಾನವೂ ಅವರಿಗಿರಬೇಕಾಗುವದು. ಸ್ತ್ರೀಪುರುಷರ ಶರೀರರಚನೆಯ ಸಂಪೂರ್ಣ ಜ್ಞಾನವು ತಾಯಿತಂದೆಗಳಿಗೆ ಸಾಮಾನ್ಯವಾಗಿ ಇರುತ್ತಿಲ್ಲ; ಅದನ್ನವರು ತಮಗಾಗಿ ಪಡೆಯಬೇಕಲ್ಲದೆ, ಮಕ್ಕಳಿಗೆ ಯಾವ ಜ್ಞಾನವನ್ನು ಯಾವ ಅವಸ್ಥೆಯಲ್ಲಿ ಕೊಡಬೇಕು, ಯಾವ ಸಂಗತಿಗಳನ್ನು ಈವೊತ್ತು ಹೇಳತಕ್ಕದ್ದು—ಯಾವವುಗಳನ್ನು ಇನ್ನೊಂದು ಸಲಕ್ಕಾಗಿ ಕಾಯ್ದಿಡತಕ್ಕದ್ದು ಎಂಬದನ್ನು ಚೆನ್ನಾಗಿ ಅರಿತಿರಬೇಕು.

ಆದರೆ ಬರಿ ಶಾರೀರಿಕ ಜ್ಞಾನದಿಂದ ಸಾಗದು. ಕಾಮವಿಕಾರವು ಶರೀರದ ಮಟ್ಟಿಗೆ ಮರ್ಯಾದಿತವಾಗಿರದೆ, ಅದರ ಮಾನಸಿಕ ಅಂಗವು—ವಿಶೇಷವಾಗಿ ಸಮಾಜದ ಮನೋರಚನೆಯ ಮೇಲೆ ಆಗಬಹುದಾದ ಅದರ ಪರಿಣಾಮವು ಹೆಚ್ಚಿನ ಮಹತ್ವವುಳ್ಳದ್ದಾಗಿದೆ. ದಿನಂಪ್ರತಿ ಜರುಗುವ ಹಲವು ಸಂಗತಿಗಳಿಂದ ಮಕ್ಕಳ ಮನಸ್ಸನ್ನು ಈ ವಿಷಯದಲ್ಲ ಸಂಸ್ಕಾರಗೊಳಿಸಬಹುದಾಗಿದೆ.

ಹೊಸದಾಗಿ ಶಾಲೆಗೆ ಹೋಗುವ ಕಿಟ್ಟನು ತನ್ನ ಮನೆಯ ಹುಡುಗಿಯರನ್ನು ವಿಪರೀತವಾಗಿ ಕಾಡುತ್ತಾನೆ. ಅವರನ್ನು ಚಿವುಟುವನು, ಹೆರಳು ಹಿಡಿದು ಎಳೆಯುವನು, ಒಮ್ಮೊಮ್ಮೆ ಹೊಡೆಯುವನು ಕೂಡ. ಹುಡುಗ-ಹುಡುಗಿಯರಲ್ಲಿಯ ಸ್ವಾಭಾವಿಕ ಆಕರ್ಷಣದ ಪೂರ್ವಸ್ವರೂಪವಿದು ಎಂದು ಪಾಲಕರಿಗೊಮ್ಮೆ ಹೊಳೆದರೆ, ಕಿಟ್ಟನ ಕಿಡಿಗೇಡಿತನದ ಊರ್ಮಿಗೆ ತಕ್ಕ ಒಲಿತ ದೊರೆತು ಆತನು ಜೊತೆಗಾತಿಯರೊಡನೆ ಹೆಚ್ಚು ಸೌಹಾರ್ದದಿಂದ ನಡೆಯುವನಲ್ಲದೆ, ಕೃಷ್ಣರಾಯನಾದ ಮೇಲೆಯೂ ಸ್ತ್ರೀಯರ ಬಗ್ಗೆ ಆದರವುಳ್ಳವನಾಗಿರುವನು. ಚಿಕ್ಕ ಶಾರದೆಗೆ ಅಡಿಗೆಯಾಟ, ಗೊಂಬೆಯಾಟ ಆಡುವ ಹುಚ್ಚು ಬಹಳ. ತಂದೆತಾಯಿಯರ ಗೃಹಜೀವನದ ಅನುಕರಣವನ್ನೆ ಅವಳು ಮಾಡುವಳು. ಅವಳೆದುರಿಗೆ ಸಂಸಾರದ ಸುರಮ್ಯ ಚಿತ್ರವನ್ನು ಇರಿಸುವ ಸುಸಮಯವಿದು. ಮನೆಯಲ್ಲೊಂದು ಕೂಸು ಹುಟ್ಟಿತೆಂದರೆ, ಅದು ಎಲ್ಲಿಂದ ಬಂದಿತು, ಹೇಗೆ ಬಂದಿತು ಎಂಬ ಪ್ರಶ್ನೆಗಳು ಸಾಹಜಿಕವಾಗಿ ಅವಳ ತಲೆಯಲ್ಲೇಳುವವು. ಅವುಗಳಿಗೆ ಸತ್ಯವಾದ ಉತ್ತರವನ್ನು ಸ್ವಾಭಾವಿಕವಾಗಿ ತಿಳಿಯುವಂತೆ ಹೇಳಿದರೆ, ಮಕ್ಕಳಿಗೆ ಸಮಾಧಾನವಾಗುವದಲ್ಲದೆ, ತಾಯಿತಂದೆಗಳ ಬಗ್ಗೆ ಅವರಿಗೆ ಆತ್ಮೀಯತೆಯು

CC-0. Jangamwadi Math Collection. Digitized by eGangotri

ಪ್ರಕಟಗೊಳ್ಳತೊಡಗುವದು. ಮನೆಮನೆಯಲ್ಲಿಯೂ ಬೆಕ್ಕಿನ ಪ್ರಾಣಿಗಳು ಇರುವವು. ಅವುಗಳ ಸಹವಾಸವು ಎಷ್ಟೋ ಪ್ರಶ್ನೆಗಳನ್ನು ತಿಳಿಗೊಳಿಸುವದರಲ್ಲಿ ತಾಯಿತಂದೆಯರಿಗೆ ಅನುಕೂಲವಾಗುವದು. ಮನೆಯಲ್ಲಿಯ ಮದುವೆ–ಮುಂಜಿ, ಊಟ-ಉಪಚಾರಗಳಲ್ಲಿ ಸ್ತ್ರೀಪುರುಷರು ಕಲೆಯುವದುಂಟು; ಈ ಸಂಧಿಗಳನ್ನು ಸಾಧಿಸಿ ಎಷ್ಟೋ ಮಾತುಗಳನ್ನು ಕೌಶಲ್ಯದಿಂದ ತಿಳಿಸಬಹುದಾಗಿದೆ.

### ತಾಯಿತಂದೆಗಳೇ ಏಕೆ ಕಲಿಸಬೇಕು?

ಮಕ್ಕಳು ದೊಡ್ಡವರಾದ ಹಾಗೆ ಕಾಮವಿಷಯಕ ಜ್ಞಾನವನ್ನು ಎಲ್ಲಿಂದಲೋ—ಮನೆಯ ಹೊರಗಡೆ—ಪರಿಶ್ರಮದಿಂದ ಪಡೆಯುತ್ತಾರೆ. ಸುಜ್ಞರಾದ ಪಾಲಕರು ತಾವೆ ಆ ಶಿಕ್ಷಣವನ್ನು ಉಚಿತರೀತಿಯಲ್ಲಿ ಕೊಟ್ಟರೆ, ಹೊರಗೆ ಮಕ್ಕಳು ಕಲಿಯಬಹುದಾದ ಕೆಟ್ಟ ಚಟಗಳ ಭಯವು ತೊಲಗುವದಲ್ಲದೆ, ಆವಶ್ಯಕವಾದ ಜ್ಞಾನವು ಅತಿಕ್ರಮವಾಗದ ರೀತಿಯಲ್ಲಿ ದೊರೆತು, ಜೀವನದ ಜವಾಬ್ದಾರಿಯು ಅವರಿಗೆ ಗೋಚರಿಸುವದು. ಮೇಲ್ತರಗತಿಯ ಕಾದಂಬರಿಗಳಲ್ಲಿ ಸ್ತ್ರೀಪುರುಷ ಜೀವನದ ಪ್ರಮೇಯಗಳ ಚಿತ್ರಣ, ಇತಿಹಾಸದಲ್ಲಿ ನಿರೂಪಿಸಲ್ಪಟ್ಟ ಸಾಮಾಜಿಕ ಸ್ಥಿತ್ಯಂತರಗಳು, ಬೇರೆಬೇರೆ ಸಮಾಜಗಳಲ್ಲಿಯ ಸ್ತ್ರೀಪುರುಷರ ನೀತಿವಿಚಾರಗಳು, ಪ್ರತ್ಯಕ್ಷ ನಡೆಯುವ ಸಂಗತಿಗಳು—ಇವೆಲ್ಲವುಗಳನ್ನು ತಂದೆತಾಯಿಗಳೆ ಚರ್ಚಿಸುತ್ತ ಕಾಮವಿಜ್ಞಾನವನ್ನೂ ಅದರ ಪಾರ್ಶ್ವಭೂಮಿಯಾಗಿ ಸಮಾಜವಿಜ್ಞಾನವನ್ನೂ ಸಾಂಗೋಪಾಂಗವಾಗಿ ತಿಳಿಸಬಹುದಾಗಿದೆ.

ಸಭ್ಯತೆಯ ಮರ್ಯಾದೆಯನ್ನು ಅತಿಕ್ರಮಿಸಬೇಕೆಂತಲ್ಲ. ಆದರೆ ಕಾಮಜ್ಞಾನವನ್ನು ಅವಾಸ್ತವವಾಗಿ ಮುಚ್ಚಿಡುವದರಿಂದ ಮಕ್ಕಳಿಗೆ ದುರ್ಮಾರ್ಗವನ್ನು ತೆರೆದುಕೊಟ್ಟಂತಾಗುವದು. ಹುಡುಗರು ಎಂದಾದರೊಮ್ಮೆ ಪ್ರಜೋತ್ಪತ್ತಿಯನ್ನು ಕುರಿತು ಪ್ರಶ್ನೆಯನ್ನು ಕೇಳಿದರೆ ದೊಡ್ಡ ಪ್ರಮಾದವೆ ಆದಂತೆ ತಂದೆತಾಯಿಗಳು ಕಣ್ಣುಚಿವುಟ ವಿಷಯಾಂತರ ಮಾಡುವರು. ಮಸಿಯನ್ನು ಯಾರು ಚೆಲ್ಲಿದರು, ನೀರು ಯಾರು ತುಂಬಿದರು — ಎಂಬಂತೆಯೆ ಮನ್ನಿಗೆ (ಬೆಕ್ಕಿಗೆ) ಕುನ್ನಿಗಳು ಹೇಗಾದವು ಎಂಬ ಪ್ರಶ್ನೆಯೂ ಇದೆ. ಅದಕ್ಕೆ ಕಣ್ಣು ಕಿಸಿದು ಕೆನ್ನೆಯಲ್ಲಿಯೆ ನಕ್ಕು ಮಕ್ಕಳ ಕಡೆಗೆ ನೋಡುವದು ಯಾಕೆ ?

### ಸ್ವಾಭಾವಿಕ ವಿಕಾಸ

ಕಾಮಶಿಕ್ಷಣಕ್ಕೆ ಸಂಬಂಧಿಸಿದ ಇನ್ನೊಂದು ಮಹತ್ವದ (ಮತ್ತಷ್ಟೇ ಉಪೇಕ್ಷಿತವಾದ) ಸಂಗತಿಯೆಂದರೆ, ಕಾಮವು ವಿಕಾಸಶೀಲ ಪ್ರವೃತ್ತಿಯಾಗಿದೆ ಕಾಮವಿಕಾರವು, ವಯಸ್ಸಿಗೆ ಬಂದೊಡನೆ ಒಂದೇ ದಿವಸದಲ್ಲಿ ತೋರಿಸಿಕೊಳ್ಳುವ ಬದುಕಲ್ಲ. ಚಿಕ್ಕಂದಿನಿಂದಲೂ ಸೂಕ್ಷ್ಮರೂಪದಲ್ಲಿ ಅದು ಹುದುಗಿದ್ದೇ ಇರುವದು. ಅವರ ದೃಶ್ಯರೂಪಗಳನ್ನು ಮನದಂದು, ಅದಕ್ಕೆ ಸರಿಯಾದ ದಾರಿ ಕಲ್ಪಿಸಿ, ಸಂಯಮದಲ್ಲಿಡುವದೇ ಕಾಮಶಿಕ್ಷಣದ ಮುಖ್ಯ ಉದ್ದೇಶವಾಗಿದೆ. ರಾಗದ್ವೇಷಾದಿ ಮನೋಭಾವನೆಗಳಂತೆಯೆ ಕಾಮವಿಕಾರದ ಬೆಳವಣಿಗೆಯೂ ಸ್ವಾಭಾವಿಕ ರೀತಿಯಲ್ಲಿಯೆ ನಡೆಯಬೇಕು; ಮತ್ತು ಅದನ್ನು ಹತೋಟಿಯಲ್ಲಿಡುವ ಶಿಕ್ಷಣವೂ ಸಾಮರ್ಥ್ಯವೂ ಕ್ರಮಶಃ ಹಸ್ತಗತವಾಗಬೇಕು. ಕೆಟ್ಟ ನಡತೆಯನ್ನು ಕಂಡು ರೇಗುವದು ಸ್ವಾಭಾವಿಕವಿರುವಂತೆಯೆ ಪ್ರಸಂಗವಿಶೇಷಗಳಲ್ಲಿ ಸಂಯಮದಿಂದಿರುವದೂ ಅಷ್ಟೇ ಸುಸಾಧ್ಯವಾಗಬೇಕು. ಅದೇ ರೀತಿ ಚಾರಿತ್ರ್ಯ, ಪಾವಿತ್ರ್ಯ, ಪಾತಿವ್ರತ್ಯ, ಏಕಪತ್ನೀವ್ರತ ಮೊದಲಾದ ಸದ್ಗುಣಗಳ ಪರಿಪೋಷಣೆಯೂ ಕಾಮಶಿಕ್ಷಣದ ಅಂಗವಾಗಿ ದೊರೆಯಬೇಕು.

ಕಾಮಶಿಕ್ಷಣವು ಅರೆಕ್ಷಣದಲ್ಲಿ ಸಾಧ್ಯವಾಗಬಹುದಾದ ಸಂಗತಿಯಲ್ಲ. ಸ್ತ್ರೀಪುರುಷರ ಶರೀರರಚನಾ ಭೇದವನ್ನು ಚರ್ಚಿಸುವ ಪುಸ್ತಕವನ್ನೋದಿ ಅದು ಬರುವಂತಿಲ್ಲ; ಪ್ರಜೋತ್ಪತ್ತಿಯನ್ನು ಕುರಿತಾದ ಶಾಬ್ದಿಕ ಚರ್ಚೆಯಿಂದಲೂ ಅದು ದೊರಕುವದಿಲ್ಲ. ವಿಷಯಪರಿಚಯವು ಶಿಕ್ಷಣದ ಮುಖ್ಯಹೇತುವೇ ಅಲ್ಲ. ಸಾಮಾನ್ಯ ಸಂಗತಿಗಳ ಜ್ಞಾನವನ್ನು ಕುತೂಹಲತೃಪ್ತಿಗಾಗಿ, ಆರೋಗ್ಯರಕ್ಷಣದ ವಿಭಾಗವೆಂದು ಕೊಡುವದು ಸಾಹಜಿಕವಾಗಿದೆ. ಹಾಗೆ ಮಾಡುವದು ಕ್ರಮಪ್ರಾಪ್ತವೆ ಆಗಿದೆ. ಹಲವು ಸಂಗತಿಗಳ ಜ್ಞಾನವನ್ನು ವಿವಾಹಕ್ಕೆ ಮುಂಚಿತವಾಗಿ ಮಾಡಿ ಕೊಡದಿದ್ದರೂ ನಡೆಯುವಂತಿದೆ. ಮಹತ್ವದ ಮಾತೆಂದರೆ, ಹುಡುಗ-ಹುಡುಗಿಯರು ಕಾಮದ ವ್ಯಾಪಕ ವ್ಯಾಪಾರವನ್ನು ಸಮರ್ಪಕವಾಗಿ ಅರಿತುಕೊಂಡು, ಜೀವನದ ನಿಕಟ ಸುಭವವನ್ನು ಪಡೆಯಲು, ಅವರ ಕಷ್ಟನಷ್ಟಗಳನ್ನು ಎದುರಿಸಲು ಸಿದ್ಧರಾಗುವಂತೆ ನಿಶ್ಚಿತಸಂಸ್ಕಾರಗಳನ್ನು ಪಡೆಯಬೇಕು. 'ಕಾಮ' ಎಂದೊಡನೆ ಮೂರು ಮಾರು ಹಾರುವ ಮಡಿವಂತಿಕೆಯಾಗಲಿ, ಜೊಲ್ಲೊಸರುವ ಲೋಲುಪತೆಯಾಗಲಿ ಇಲ್ಲಿ ಸಲ್ಲವು. ಎಲ್ಲಾ ವಿಕಾರಗಳಲ್ಲಿಯೂ ಅತ್ಯಂತ ಪ್ರಬಲವೆನಿಸಿದ ಕಾಮವಿಕಾರವು ಪೂರ್ಣ ಪ್ರಭಾವಯುತವಾಗಿ ಪ್ರಕಟವಾದಾಗ ಅದಕ್ಕಾಧೀನವಾಗದೆ ಅದನ್ನು ಅಂಕೆಯಲ್ಲಿಟ್ಟುಕೊಂಡು ಜೀವನವನ್ನು ಸುಖಪೂರ್ಣವಾಗಿ ಮಾಡುವ ಸಾಮರ್ಥ್ಯವು ಕ್ರಮವಾಗಿ ದೊರಕುವಂತೆ ಮಾಡುವದೆ ಕಾಮಶಿಕ್ಷಣದ ಉದ್ದೇಶವಾಗಿದೆ.

CC-0. Jangamwadi Math Collection. Digitized by eGangotri

# ಕಾಂಗ್ರೆಸ್ ಸರಕಾರಗಳು ವಿದ್ಯಾಪ್ರಚಾರಕ್ಕೆ ಹಣ ಹೊಂದಿಸುವುದು ಹೇಗೆ?

'ಮೈಸೂರ್ ಪೆನ್'

ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಬಹು ಮುಖ್ಯವಾದುದು ವಿದ್ಯಾಪ್ರಚಾರ. ಆದರೆ ಇದಕ್ಕೆ ಇದುವರೆಗೂ ಅಬಕಾರಿ (Excise) ಬಾಬಿನಿಂದ ಹಣ ಒದಗುತ್ತಿತ್ತು. ಕಾಂಗ್ರೆಸ್ ಸರಕಾರವು ಈಗ ಮದ್ಯಪಾನವನ್ನು ನಿರೋಧಿಸಿದರೆ, ಅಥವಾ ಅದನ್ನು ಸಂಪೂರ್ಣವಾಗಿ ನಿಲ್ಲಿಸಿದರೆ, ವಿದ್ಯಾಪ್ರಚಾರಕ್ಕೂ ಅಭಿವೃದ್ಧಿಗೂ ದುಡ್ಡು ಎಲ್ಲಿಂದ ಬರಬೇಕು? ೧೯೩೨-೩೩ನೇ ಸಾಲಿನಲ್ಲಿ ಇಂಡಿಯಾದಲ್ಲಿ ಅಬಕಾರಿ ಬಾಬಿನಿಂದ ಒಟ್ಟು ರೂ. ೧೫,೦೯,೭೩,೫೩೮ ಆದಾಯವಿತ್ತು. ಇದರಲ್ಲಿ ೩/೫ ಭಾಗ, ಅದರೆ ರೂ. ೯,೪೨,೧೮,೫೨೫ ನಮ್ಮ ದೇಶದಲ್ಲೇ ತೆಗೆದ ಶೇಂದಿ ಇತ್ಯಾದಿಯಿಂದ ಬಂದಿದೆ. ಆಡಳಿತದ ಖರ್ಚು ರೂ. ೧,೮೨,೨೦,೧೩೨ ಕಳೆದರೆ ನಿವ್ವಳ ಆದಾಯವಾಗಿ ರೂ. ೧೪,೮೯,೧೦;೩೭೫ ಉಳಿಯುವುದು. ಬ್ರಿಟಿಷ್ ಇಂಡಿಯಾದಲ್ಲಿ ಅದೇ ವರ್ಷ, ಅಂದರೆ, ೧೯೩೨—೩೩ನೇ ಸಾಲಿನಲ್ಲಿ ವಿದ್ಯಾಭ್ಯಾಸಕ್ಕಾಗಿ ಒಟ್ಟು ಖರ್ಚಾದ ಹಣ ರೂ. ೧೧,೩೫, ೫೦, ೭೯೮.

ಈ ದೊಡ್ಡ ಬಿಕ್ಕಟ್ಟಿನಿಂದ ಕಾಂಗ್ರೆಸ್ ಪಾರಾಗುವುದು ಹೇಗೆ? ಏನೇ ಆಗಲಿ, ಕಾಂಗ್ರೆಸ್ ಸರಕಾರವು ಹಳ್ಳಿಗಾಡಿನಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಅಭಿವೃದ್ಧಿಗೊಳಿಸಲೇ ಬೇಕು ಮತ್ತು ವಿಸ್ತರಿಸಲೇ ಬೇಕು. ಈಗ ಹಳ್ಳಿಗಾಡಿನ ಜನರಲ್ಲಿ ೩-೭%ರಿಗೆ ಮಾತ್ರ ವಿದ್ಯಾಭ್ಯಾಸಕ್ಕೆ ಅವಕಾಶವಿದೆ. ಪಟ್ಟಣಗಳಲ್ಲಾದರೋ ಸ್ಕೂಲುಗಳು ತುಂಬಿಹೋಗಿವೆ. ೧೯೩೧ನೇ ಸಾಲಿನಲ್ಲಿ ಒಟ್ಟು ವಿದ್ಯಾಭ್ಯಾಸಕ್ಕೆ ಖರ್ಚಾದ ಹಣದಲ್ಲಿ ೩೦% ಮಾತ್ರ ಹಳ್ಳಿಗಾಡಿಗೆ ಖರ್ಚಾಗಿ ಬಾಕಿ ೭೦% ಪಟ್ಟಣಗಳಿಗೆ ಖರ್ಚಾಗಿದೆ. ಹಳ್ಳಿಗಾಡಿನಲ್ಲಿರುವ ಒಟ್ಟು ಜನಸಂಖ್ಯೆಯಾದರೋ ಪಟ್ಟಣದಲ್ಲಿರುವುದರ ೧೦ರಷ್ಟಾಗುತ್ತದೆ. ಹಾಗೆಯೇ ೧೯೩೨-೩೩ನೇ ಸಾಲಿನಲ್ಲಿ ಲೆಖ್ಖಾಚಾರ ಹಾಕಿದರೆ, ಹಳ್ಳಿಗಾಡಿನಲ್ಲಿ ವಿದ್ಯಾಪ್ರಚಾರಕ್ಕೆ ಖರ್ಚಾದ ಹಣ, ತಲಾ ಒಂದಕ್ಕೆ ೭ ಕಾಸು ಮಾತ್ರ ಬೀಳುತ್ತದೆ; ಪಟ್ಟಣಗಳಲ್ಲಾದರೋ ತಲಾ ಒಂದಕ್ಕೆ ೯ ಆಣೆ ಬೀಳುತ್ತದೆ.

ಅಬಕಾರಿ ಬಾಬಿನಿಂದ ಬರುವ ಹಣವೆಲ್ಲಾ ಹಳ್ಳಿಯ ಕೀಳುದರ್ಜೆಯ ಜನರಿಂದಲೂ ಮತ್ತು ಪಟ್ಟಣದಲ್ಲಿರುವ ಬಡ ಜನರಿಂದಲೂ ಬಂದಿರುವುದು. ಆದರೆ ಈ ದುಡ್ಡೆಲ್ಲಾ ಪಟ್ಟಣದಲ್ಲಿರುವ ಮಧ್ಯಮ ದರ್ಜೆಯ ಮತ್ತು ಉತ್ತಮ ದರ್ಜೆಯ ಜನಗಳ ವಿದ್ಯಾಭ್ಯಾಸಕ್ಕೇ ಖರ್ಚಾಗಿದೆ. ಇದು ದೊಡ್ಡ ಅನ್ಯಾಯ. ಈ ಉತ್ತಮ ಮತ್ತು ಮಧ್ಯಮ ದರ್ಜೆಯ ಜನರು, ಹೆಚ್ಚು ಫೀಸನ್ನು ಕೊಟ್ಟು ತಮ್ಮ ದುಡ್ಡಿನಲ್ಲೇ ಸ್ಕೂಲುಗಳನ್ನು ಏರ್ಪಡಿಸಿಕೊಳ್ಳಲು ಆಗುವುದಿಲ್ಲವೇ? ಅಲ್ಲದೆ ಈಗಿನ ಕಾಲದಲ್ಲಿ ಪಟ್ಟಣಗಳಲ್ಲಿ ಕೆಲವು ಸಾಹುಕಾರಿ ಸ್ಕೂಲುಗಳು ಹಣಕಾಸಿನ ವಿಚಾರದಲ್ಲಿ ಸರ್ವಸ್ವತಂತ್ರರಾಗಿರುವುದಲ್ಲದೆ, ಬರುವ ವರಮಾನದಿಂದ ಖರ್ಚೆಲ್ಲಾ ಕಳೆದು, ಹೆಚ್ಚಾಗಿ ಲಾಭದಾಯಕವೂ ಆಗಿವೆ.

ಇಷ್ಟಲ್ಲದೆ, ಈಗ ನಾವು ಹಳ್ಳಿಯ ಜನಗಳಿಗೆ ಕೊಡುತ್ತಿರುವ ವಿದ್ಯೆ, ಪ್ರಯೋಜನವಿಲ್ಲದ ವಿದ್ಯೆ. ಅದು ಅವರ ಸುತ್ತುಮುತ್ತಲಿನ ಜೀವನಕ್ಕೆ ಸಂಬಂಧಪಟ್ಟಿಲ್ಲ. ಅವರಿಗೆ ಓದುವುದು, ಬರೆಯುವುದು, ಲೆಖ್ಖಮಾಡುವದು, ಚರಿತ್ರೆ, ವಿಜ್ಞಾನಗಳಲ್ಲದೆ, ಪ್ರಯೋಜನಕಾರಿಯಾಗಿ ಅವರ ದಿನವಹಿ ಉದ್ಯೋಗವನ್ನು ಉತ್ತಮಗೊಳಿಸಿ, ಲಾಭದಾಯಕವಾಗುವ ಹಾಗೆ ವಿದ್ಯೆಯನ್ನು ಕೊಡಬೇಕು. ಇದರಿಂದ ಅವರಿಗೆ ಸಂಪೂರ್ಣ ವಿದ್ಯೆಯು ದೊರಕುವುದಲ್ಲದೆ, ಸ್ವಲ್ಪ ದಿನಗಳಾದ ಮೇಲೆ ಆ ವಿದ್ಯೆಯು ಲಾಭದಾಯಕವಾಗಿ ಅವರು ವಿದ್ಯಾಭ್ಯಾಸಕ್ಕೆ ದುಡ್ಡು ಕೊಟ್ಟು ಕೊಂಡುಕೊಳ್ಳುವ ಹಾಗೆ ಚೈತನ್ಯವನ್ನು ಪಡೆಯುವರು. ಹೀಗೆ ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ವಿದ್ಯೆಗಾಗಿ ಜನಗಳು ದುಡ್ಡನ್ನು ತಾವೇ ಒದಗಿಸಿಕೊಳ್ಳುವ ಹಾಗೆ ಮಾಡಬಹುದು.

ಇದೇ ರೀತಿಯಲ್ಲಿ ವಿಶ್ವವಿದ್ಯಾನಿಲಯಗಳೂ ತಮ್ಮ ಹಣಕಾಸುಗಳನ್ನು ತಾವೇ ಹುಟ್ಟಿಸಿಕೊಳ್ಳುವ ಹಾಗೆ ಮಾಡಬಹುದು. ೧೯೩೨—೩೩ನೇ ಸಾಲಿನಲ್ಲಿ ಒಟ್ಟು ವಿದ್ಯಾಭ್ಯಾಸದ ರೂ. ೨೫,೭೮,೭೫,೮೬೮ ಖರ್ಚಿನಲ್ಲಿ, ವಿಶ್ವವಿದ್ಯಾನಿಲಯಕ್ಕೆ ಆದ ಖರ್ಚು ರೂ. ೩,೭೬,೭೭,೯೮೩ ಇದೆ. ಹಿಂದೆ ಹೇಳಿದಂತೆ ಸ್ಕೂಲುಗಳನ್ನು ದಿನದ ಜೀವನಕ್ಕೆ ಹೊಂದಿಕೆಯಾಗುವಂತೆ ಪುನರ್ಘಟನೆ ಮಾಡುವುದರಿಂದ, ಶಾಲಾ ವಿದ್ಯಾಭ್ಯಾಸದಿಂದಲೇ ಜೀವನೋಪಾಯಕ್ಕೆ ತಕ್ಕಷ್ಟು ಅನುಕೂಲ ಒದಗಿ, ವಿಶ್ವವಿದ್ಯಾನಿಲಯದ ವಿದ್ಯಾಭ್ಯಾಸಕ್ಕೆ ದೊಡ್ಡ ಹುದ್ದೆಗೆ ಸೇರಬೇಕೆನ್ನುವವರು ಮತ್ತು ಶಾಸ್ತ್ರ

---

(ಹರಿಜನ ಪತ್ರಿಕೆಯಲ್ಲಿ ಶ್ರೀಯುತ ಭರತನ್ ಕುಮಾರಪ್ಪ M. A., B. D., Ph. D., Edin., Lond. ಅವರು ಬರೆದಿರುವ ಲೇಖನದ ಅನುವಾದ)

CC-0. Jangamwadi Math Collection. Digitized by eGangotri

ಸಂಶೋಧನೆಯಲ್ಲಿ ನಿಜವಾದ ಮತ್ತು ಸಂಪೂರ್ಣ ಜಿಜ್ಞಾಸೆಯುಳ್ಳವರು ಮಾತ್ರ ಬರುತ್ತಾರೆ. ವಿಶ್ವವಿದ್ಯಾನಿಲಯಕ್ಕೆ ಆದರ ಖರ್ಚಿನ ಉತ್ಪತ್ತಿಗೆ ತಕ್ಕಷ್ಟು ಫೀಯನ್ನು ವಿಧಿಸಬೇಕು. ಹೀಗೆ ಮಾಡುವುದರಿಂದ ವಿಶ್ವವಿದ್ಯಾನಿಲಯಕ್ಕೆ ಹೆಚ್ಚು ದರ್ಜೆಯ ಯೋಗ್ಯತೆಯುಳ್ಳವರನ್ನೇ ಚುನಾಯಿಸಿದ ಹಾಗಾಗುತ್ತದೆ. ಅಲ್ಲದೆ ಈಗ ವಿಶ್ವವಿದ್ಯಾನಿಲಯದ ಉಪಾಧ್ಯಾಯರುಗಳಿಗೆ ಕೊಡುತ್ತಿರುವ ಸಂಬಳ ಬಹಳ ಹೆಚ್ಚು. ಈ ಉಪಾಧ್ಯಾಯರಲ್ಲಿ ಅನೇಕರು ದುಡ್ಡಿನ ಆಶೆಗಾಗಿ ಸೇರಿರುತ್ತಾರೆ. ಸಂಬಳವನ್ನು ಬಹಳ ಕಡಿಮೆ ಮಾಡಿದರೆ, ಯಾರಿಗೆ ದುಡ್ಡಿಗಿಂತ ವಿದ್ಯೆಯಲ್ಲಿ ಹೆಚ್ಚಾಗಿ ಅಭಿಮಾನ, ಮಮತೆ, ಶ್ರದ್ಧೆಯುಂಟೋ ಅವರೇ ಬಂದು ಸೇರುತ್ತಾರೆ. ಇದರಿಂದ ದುಡ್ಡಿನ ಖರ್ಚು ತಪ್ಪಿ ಸಹಜವಾದ ಗುರುಗಳು ವಿಶ್ವವಿದ್ಯಾನಿಲಯಕ್ಕೆ ದೊರಕುತ್ತಾರೆ.

ಇಂಡಿಯಾ ದೇಶದಲ್ಲಿ ಸಾರ್ವಜನಿಕ ದುಡ್ಡನ್ನು, ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸಕ್ಕೆ ಒದಗಿಸಬೇಕಾದುದು ಪ್ರಥಮ ಕರ್ತವ್ಯ. ಹಣವೆಲ್ಲಾ ಸಾಮಾನ್ಯ ಜನತೆಯಿಂದ ಬಂದುದು; ಅದನ್ನು ಅವರಿಗೆ ಉಪಯುಕ್ತವಾದ ವಿದ್ಯೆಗಾಗಿಯೇ ಖರ್ಚು ಮಾಡಬೇಕು. ನಮ್ಮ ದೇಶದಲ್ಲಿ ಯೂನಿವರ್ಸಿಟಿಗಳೇ ಹೆಚ್ಚು ದುಡ್ಡನ್ನು ತಿಂದು ಬಿಡುತ್ತವೆ. ೧೯೩೨—೩೩ನೇ ಸಾಲಿನಲ್ಲಿ ೩ ಜನ ಹೈಸ್ಕೂಲು ವಿದ್ಯಾರ್ಥಿಗಳಿಗೆ, ಒಬ್ಬರು ಕಾಲೇಜು ವಿದ್ಯಾರ್ಥಿಗಳಿದ್ದರು. ಅದೇ ವರ್ಷದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಾದರೋ ಪಬ್ಲಿಕ್ ಹೈಸ್ಕೂಲಿನಿಂದ ೧೧·೩ % ಮಂದಿ ಮಾತ್ರವೂ ಮತ್ತು ಪ್ರೈವೇಟ್ ಹೈಸ್ಕೂಲಿನಿಂದ ೨೫·೩ % ಮಾತ್ರವೂ ಕಾಲೇಜು ವ್ಯಾಸಂಗಕ್ಕೆ ಹೋಗುತ್ತಾರೆ. ಇದನ್ನು ಪರಿಶೀಲಿಸಿದರೆ ನೂರಕ್ಕೆ ೧೮·೩ ಮಾತ್ರ ಆಗುತ್ತದೆ. ಇಂಡಿಯಾದಲ್ಲಿ ಈ ಶೇಕಡಾವಾರು ಅಮೆರಿಕದ ಎರಡರಷ್ಟಾಗುತ್ತದೆ. ಅಲ್ಲದೆ ನಾವು ವಿಶ್ವವಿದ್ಯಾನಿಲಯಕ್ಕೆ ಅತಿಮುಖ್ಯ ಪ್ರಾಶಸ್ತ್ಯವನ್ನು ಕೊಟ್ಟಿರುತ್ತೇವಾದ್ದರಿಂದ, ಅದರ ದೆಸೆಯಿಂದ ಸೆಕೆಂಡರಿ ಮತ್ತು ಪ್ರೈಮರಿ ಸ್ಕೂಲುಗಳನ್ನು ಕೀಳುಮಾಡಿದ್ದೇವೆ, ಸಾಕಷ್ಟು ಆಸಕ್ತಿ ವಹಿಸದೆ ಉದಾಸೀನರಾಗಿದ್ದೇವೆ. ಸ್ಕೂಲುಗಳಲ್ಲಿ ದಿನಂಪ್ರತಿಯ ಜೀವನಕ್ಕೆ ಉಪಯೋಗವಾಗುವ ವಿದ್ಯೆಯನ್ನು ಕಲಿಸದೆ ಅವು ಯೂನಿವರ್ಸಿಟಿಗಳ ಭಾರವನ್ನು ಹೊತ್ತು ಅವುಗಳ ಗುಲಾಮರಾಗುವಂತೆ ಮಾಡಿದ್ದೇವೆ. ವಿಶ್ವವಿದ್ಯಾನಿಲಯದ ವಿದ್ಯಾಭ್ಯಾಸದ ಖರ್ಚು ವಿಪರೀತವಾಗಿದೆ. ೧೯೩೨—೩೩ನೇ ಸಾಲಿನಲ್ಲಿ ಇಂಡಿಯಾದಲ್ಲಿ ಕಾಲೇಜಿನ ವಿದ್ಯಾರ್ಥಿಗಳಿಗೆ ಸರಾಸರಿ ತಲಾ ಒಂದಕ್ಕೆ ರೂ. ೨೦೦—೧೨—೦ ಖರ್ಚಾಗಿದೆ. ಆದರೆ ಸೆಕೆಂಡರಿ ಸ್ಕೂಲಿನ ವಿದ್ಯಾರ್ಥಿಗಳಿಗೆ ತಲಾ ಒಂದಕ್ಕೆ ರೂ. ೧೮—೫—೦ ಮಾತ್ರ ಖರ್ಚಾಗಿದೆ. ಸರಕಾರದಲ್ಲಿ ಹೆಚ್ಚು ದುಡ್ಡಿಲ್ಲದೆ ಮುಗ್ಗಟ್ಟಿನ ಸ್ಥಿತಿಯಿರುವಾಗ ವಿಶ್ವವಿದ್ಯಾನಿಲಯಗಳಿಗೆ ದುಡ್ಡು ಕಡಿಮೆ ಮಾಡಿದರೂ ಚಿಂತೆಯಿಲ್ಲ, ಪ್ರೈಮರಿ ಮತ್ತು ಸೆಕೆಂಡರಿ ಸ್ಕೂಲುಗಳಿಗೆ ಕಡಿಮೆ ಮಾಡಕೂಡದು. ಅಂಥ ಮುಗ್ಗಟ್ಟಿನ ಸ್ಥಿತಿಯಲ್ಲಿ ಮೊದಲು ಹೆಚ್ಚಾಗಿ ಎಲ್ಲವನ್ನೂ ಸ್ಕೂಲು ವಿದ್ಯಾಭ್ಯಾಸಕ್ಕೆ ವಿನಿಯೋಗಿಸಬೇಕೇ ವಿನಾ, ವಿಶ್ವವಿದ್ಯಾನಿಲಯಕ್ಕೆ ಹೆಚ್ಚು ಗಮನ ಕೊಡಕೂಡದು. ಜನಸಾಮಾನ್ಯತೆಗೆ 3 Rs ಗಳನ್ನು (ಅಂದರೆ ಓದುವುದು, ಬರೆಯುವುದು ಮತ್ತು ಲೆಖ್ಖ ಮಾಡುವುದು) ಕಲಿಸುವುದು, ಪ್ರತಿವರ್ಷವೂ ಯೂನಿವರ್ಸಿಟಿ ಪದವೀಧರರನ್ನು ತಯಾರು ಮಾಡುವುದಕ್ಕಿಂತಲೂ ಹೆಚ್ಚಿನ ಕರ್ತವ್ಯ. ನಮ್ಮ ಜನಸಾಮಾನ್ಯರಲ್ಲಿ ಲೆಕ್ಕವಿಲ್ಲದಷ್ಟು ಅವಿದ್ಯಾವಂತರನ್ನು ಇಟ್ಟುಕೊಂಡು, ವಿಶ್ವವಿದ್ಯಾನಿಲಯಗಳಿಗೆ ದುಡ್ಡು ಸುರಿಯುವುದು ಬರಿ ದುಂದುಗಾರಿಕೆ.

ಹೀಗೆ ವಿಶ್ವವಿದ್ಯಾನಿಲಯ ಮತ್ತು ಸ್ಕೂಲುಗಳನ್ನು ಪುನರ್ರಚನೆ ಮಾಡುವುದರಿಂದ ಸರ್ಕಾರಕ್ಕೆ ವಿದ್ಯಾಖಾತೆಯ ಖರ್ಚಿನ ಬಾಬನ್ನು ಉಳಿಸಬಹುದು; ಮತ್ತು ವಿದ್ಯೆಯ ನೆವ ಹೇಳಿ ಜನರ ಆರೋಗ್ಯ, ನೀತಿ, ಸಂಸ್ಕೃತಿ, ಪ್ರಗತಿಗಳನ್ನು ಹಾಳು ಮಾಡುವ ಕುಡಿತವನ್ನು ನಿಲ್ಲಿಸಕೂಡದೆಂದು ಹೇಳುವ ಹಟವಾದದ ಬಾಯಿ ಮುಚ್ಚಿದ ಹಾಗಾಗುತ್ತದೆ.

## ಸಣ್ಣ ದನಿ

ಎದೆ ಕಾಯ್ದು, ಮನ ಬೇಯ್ದು ಬಿಸಿಯುಸಿರು ನುಸುಳುತಿರೆ
"ಹೆದರದಿರು ಎಲೆ ಗೆಳೆಯ" ಎಂಬುದೀ ಸಣ್ಣ ದನಿ !
—ನನ್ನ ಜೀವದ ಗೆಳತಿ ನುಡಿಯುತಿಹಳು !

ಸವಿಗನಸಿನಲ್ಲಿ ನಿನ್ನ ಮಲ್ಲಿಗೆಯ ಮುಗುಳುನಗೆ
ಮೂಲೋಕವನೆ ಮರಸಿ ಜೀವನಕೆ ಮುತ್ತಿರಿಸಿ,
ಭಾವಗಳ ಕೆರಳಿಸುವುದು !

ಕಂಪಲರ ಗುಂಪಿನಿಂ ತಂಬೆಲರನೇರಿ ಬಹ
ಸೊಂಪುಸೊಂಪಿನ ದನಿಗೆ ಔತಣವನೀಯದಿರೆ
ಮನಕೆಲ್ಲಿ ಸೌಖ್ಯಶಾಂತಿ ?

ಆ ದನಿಯ ಕೇಳುವೆನು; ಆ ದನಿಯ ನೆನೆಯುವೆನು;
ಆ ದನಿಗೆ ಮನಸೋತು ವೇದನೆಯ ತಾಳುತಿಹೆ
—ಸಣ್ಣ ದನಿ—ಸಣ್ಣ ದನಿಗಾಗಿ !

—ತಿರುಮಲೆ ಶ್ರೀನಿವಾಸಶರ್ಮ, ವ. ಹೈದ್ರಾಬಾದ

CC-0. Jangamwadi Math Collection. Digitized by eGangotri

## ವಿಮರ್ಶಕನಿಗೆ

ಹಿಸುಕದಿರು ವನಸುಮವ; ಕವಿಯ ಹೃದ್ವನ ಸುಮವ!
ಹಿಸುಕಿ ಪಾಳ್ಗೆಯ್ಯದಿರು ಸುಮದ ಸುರಭಿಯ, ಚಲುವ!
ಬಳ್ಳಿಯೊಳು ಮೆರೆಯುತಿಹ ಮಲ್ಲಿಗೆಯ ಸೊಬಗೆಲ್ಲಿ?
ಮಂದ ಶೀತಳ ಪವನನೊಯ್ದು ತಹ ತಂಪೆಲ್ಲಿ?
ಆ ಸುಮವ ಕೀಳ್ದು, ದಳಗಳ ಹಿಸುಕೆ, ಆ ನೋಟ
ಚಲುವಹುದೆ? ಅದರ ಕಟು ದುರ್ಗಂಧತಮ ಕೀಟ
ವಾಸನೆಗದೇನೆಂಪೆ? ಓ, ವಿಮರ್ಶಕನೆ, ತಿಳಿ!
ಏನೆಂಬೆ? ನನ್ನಿಯರಸುವೆನೆಂದೊ? ಆ ಕೇಳಿ,
ಬರಿಪುರ್ಚು! ಸೊಬಗೆ ನನ್ನಿಯದಲ್ತೆ? ಸೊಬಗ ಕೊಲೆ-
ಯಿಂ ನನ್ನಿಯರಿವಹುದೆ? ಬರಿ ಭ್ರಾಂತಿಯದು ಗೆಳೆಯ;
ಗಾಳಿವಟ್ಟೆಯೊಳ್ಮನೆಯ ಕಟ್ಟುವೋಲ್—ಆ ಉಕ್ತಿ-
ಯನ್ನುಳಿದು, ಕವಿಹೃದಯಮಂ ಪೊಕ್ಕು, ಅವನ ಕಲೆ-
ಯಾನಂದಮನೊಡನೆ ಸವಿಯಲೀ ಧಾರುಣಿಯ
ಜನರೆಲ್ಲ ಸಾರ್ಥಕವು,—ಕವಿಕರ್ಮಕದೆ ಮುಕ್ತಿ!

—ಟಿ. ಎನ್. ಶ್ರೀನಿವಾಸ ಮೂರ್ತಿ (ಬಾಲ ಕನ್ನಡ ಸೇವಾಮಂಡಲಿ)
ಮೈಸೂರು.

## ಕಾವ್ಯಸುಂದರಿ

ಕಾವ್ಯಜೀವವು ಭಾವ,
ಒಡಲೆ ಪದಜೋಡಣೆಯು.

ಭಾವವಿಲ್ಲದ ಕಾವ್ಯ, ಜೀವವಿಲ್ಲದ ದೇಹ.
ಭಾವವಿಲ್ಲದ ಭಕುತಿ ಬೇವ ಸವಿದಂತೆ.

ಭಾವಸಾಗರದಲ್ಲಿ ಬೇರೂರಿ ನಿಂತಿರುವ
ಅನುಭವದ ನಿಡುಗಲ್ಲೆ ಕವಿಯ ವೇದಿಕೆಯು.

ಸನ್ನಿವೇಶಗಳೆಂಬ ಬಿರುಗಾಳಿ ಬೀಸುತಿರೆ,
ಭಾವಸಿಂಧುವಿನಲೆಗಳೆದ್ದು ನಾಲ್ದೆಸೆಯಿಂದ,
ಅನುಭವದ ನಿಡುಗಲ್ಲಿನೊಡನೆ ಕಾದಾಡುತಿರೆ,
ಕಾರ್ಮುಗಿಲು ಬಾನಿನಲಿ ಕವಿದು ಘೋರ್ಗರೆಯುತಿರೆ,
ಪ್ರತಿಭೆಯದು ಮಿಂಚಿನೊಲು ಝಳಪಿಸುತ ಹೊಳೆಯುತಿರೆ,
ಭಾವಮುತ್ತುಗಳೆಲ್ಲ ಮಾಲೆಮಾಲೆಗಳಾಗಿ,
ಚಿತ್ತಭಿತ್ತಿಯ ಮೇಲೆ ಬಿತ್ತರಿಸಿ ಬೆಳಗುವವು.

—ಎಂ. ಜಿ. ನಂಜುಂಡಾರಾಧ್ಯ, 'ಅಮರವಾಣಿ'



ಜರ್ಮನ್ ರಾಷ್ಟ್ರದ ಕಲಾಭಿವೃದ್ಧಿಗಾಗಿ ಮ್ಯೂನಿಚ್ ನಗರದಲ್ಲಿ German House of Art ಎಂಬ ವಿಶಾಲಭವನವನ್ನು ನಿರ್ಮಿಸಿರುವರು. ಅದರ ಅನಾವರಣ ಸಮಾರಂಭದ ಚಿತ್ರವಿದು. ಹೆರ್ ಹಿಟ್ಲರನೂ ಜನರಲ್ ಗೋರಿಂಗನೂ ಮುಂದುಗಡೆ (ಬಲಗಡೆಯಿಂದ ೩ ಮತ್ತು ೪) ಕುಳಿತಿರುವರು. ಪ್ರಚಾರಾಧಿಕಾರಿಯಾದ ಡಾ. ಗೆಬೆಲ್ಸನು ಎಡಗಡೆಯಿಂದ ೩ನೆಯವನು.

CC-0. Jangamwadi Math Collection. Digitized by eGangotri

ವಿನೋದ ನಿರ್ಬಂಧ §-

-§

# ಬೆಕ್ಕಿನ ಮೀಮಾಂಸೆ

* ( ಶ್ರೀರಂಗ ) *

★

ಮಂತ್ರಿಯೊಬ್ಬನೆ ಇರಬೇಕು, ಯಾವ ಮನುಷ್ಯನೂ ಮಂತ್ರಿಯಾಗಬಾರದು—ಅಲ್ಲ, ಮಾರ್ಜಾರನೆ ಮಂತ್ರಿಯಾಗಬೇಕು. ಮನೆಮನೆ ಅಲೆದು, ಮಕ್ಕಳಿಂದ ಚಪಾಕುಳಿಗಳ ವರೆಗೂ ಆರೋಗ್ಯಕಾರಕವೆನಿಸಿದ ಹಾಲಿನ ಇನ್‌ಸ್ಪೆಕ್ಶನ್ ಮಾಡುವನು. ರಾತ್ರಿ ಎಲ್ಲರೂ ಕಣ್ಣು ಮುಚ್ಚುವಾಗ ಈ ಅನಿಮಿಷನು ಕಾವಲಿಕ್ಕುವನು. ಮಕ್ಕಳಿಗೆ ತಾಯಿಯೆ ಶಿಕ್ಷಿಕೆ ಎಂಬ ಪ್ರಾಥಮಿಕ ಶಿಕ್ಷಣದ ಪ್ರಥಮ ಪಾಠವನ್ನು ಕಲಿಸುವನು. ಆದರ್ಶ ಆರೋಗ್ಯ—ಗೃಹ—ಶಿಕ್ಷಣಮಂತ್ರಿಯಿಾತ.

★

ಜಯಕರ್ನಾಟಕದ ಈ ಸಂಚಿಕೆಗೆ ಇನಾಕ್ಯುಲೇಶನ್ (innoculation) ಮಾಡಿಸಿದೆಯೇ ಇಲ್ಲವೇ ನನಗೆ ಗೊತ್ತಿಲ್ಲ; ಆದರೆ ಈ ನನ್ನ ಲೇಖಕ್ಕೆ-ಇಷ್ಟೇಕೆ-ಅದನ್ನು ಬರೆಯುತ್ತಲಿರುವ ಕೈಗೆ ಇನಾಕ್ಯುಲೇಶನ್ ಮಾಡಿಸಿಲ್ಲ ಮತ್ತು ಮಾಡಿಸುವಂತಲೂ ಇಲ್ಲ ಎಂದು ಹಟದಿಂದ ಹೇಳುತ್ತೇನೆ. ನಾನು ಕೇವಲ ಬರೆಯುವಾಗಲೇ ಸುಧಾರಕ, ಆಚರಣೆಯಲ್ಲಿ ಮಾತ್ರ ಸಾಂಪ್ರದಾಯಿಕ ಎಂದು ನನ್ನ ಗೆಳೆಯನು ಹಂಗಿಸುವನು. ಪಾಪ! ಅವನಿಗೆ ವ್ಯವಹಾರದ ಅನುಭವವಿಲ್ಲ. ಯದ್ಯದಾಚರತಿ ಶ್ರೇಷ್ಠಃ. ತತ್ತದೇವೇತರೋ ಜನಃ ಎಂಬ ಭಗವದುಕ್ತಿಯನ್ನನುಸರಿಸಿಯೆ ನಾನು ಹಾಗೆ ವ್ಯವಹರಿಸುತ್ತೇನೆ. ಒಳಗೊಂದು ಹೊರಗೊಂದು ಎಂಬ ಮನೋವೃತ್ತಿ ಇಲ್ಲದಿದ್ದರೆ, ಶಠಂ ಪ್ರತಿ ಶಾಠ್ಯಂ (ಭಕ್ತಂ ಪ್ರತಿ ಕೃಪಾ) ಎಂಬ ಗೀತೋಪದೇಶವು ಕುಂಠಿತವಾಗುವುದು. ಆಚರಣೆಯಲ್ಲಿ ತಾರಲು ಅಶಕ್ಯವೆನಿಸುವುದು. ಇರಲಿ. ಇನಾಕ್ಯುಲೇಶನದ ವಿಷಯದಲ್ಲಿ ಮಾತ್ರ ನನ್ನ ಮನೋವೃತ್ತಿಯು ಹೀಗಿದೆ: ಇನಾಕ್ಯುಲೇಶನದಿಂದ ಪ್ಲೇಗಿನ ಬಾಧೆ ತಪ್ಪುವುದೆಂದು ತಿಳಿಯೋಣ. ಈ ಪಕ್ಷದಲ್ಲಿ ಎಂತಹ ಪಾಪವನ್ನು ನಾನು ಕಟ್ಟಿಕೊಳ್ಳಬೇಕಾಗುವುದು! ೧೯೩೭ ರಲ್ಲಿ ಪ್ಲೇಗಿನಿಂದಲೆ ನನ್ನ ಮಾನವಜನ್ಮಯಾತನಾಭೋಗವು ಮುಗಿಯಬೇಕೆಂದು ಪರಮಾತ್ಮನ ಸಂಕಲ್ಪವಿದ್ದರೆ? ಯಾರಿಗೆ ಗೊತ್ತು? ಇನಾಕ್ಯುಲೇಶನ್ ಮಾಡಿಸಿಕೊಂಡು ಆ ಈಶಚಿತ್ತಕ್ಕೆ ವಿರೋಧವಾಗಿ ಹೊಂಚುಹಾಕಬಹುದೆ? ಹಾಗೆ ಮಾಡುವುದು ಆಸುರೀವೃತ್ತಿಯಲ್ಲವೆ? ಈ ಆರ್ಯಭೂಮಿಯಲ್ಲಿ ಜನ್ಮತಾಳಿ—ಛೆ! ಆ ವಿಚಾರವೆ ಬೇಡ! ಇನ್ನು ಇನಾಕ್ಯುಲೇಶನದಿಂದ ಪ್ಲೇಗಿನ ಬಾಧೆ ತಪ್ಪುವುದಿಲ್ಲ ಎಂದು ತಿಳಿಯೋಣ. ಹಾಗಿದ್ದರೆ, ಚುಚ್ಚಿಸಿಕೊಳ್ಳುವ ನೋವು ಯಾಕೆ? ಹಾಳು ಮಾನವಜನ್ಮದ ಹಂಬಲದ ಪ್ರದರ್ಶನ ಯಾಕೆ?

ಇಂತಹ ತಲೆ-ತಿರುಕ ತರ್ಕಬುದ್ಧಿಯನ್ನು ನನಗೆ ಯಾರು ಹೇಳಿಕೊಟ್ಟರು—ಎಂದು ನನ್ನ ಗೆಳೆಯನ ಹಟ. ಯಾರು ಹೇಳಿದರೇನು? ಬಾಲಾದಪಿ ಗೃಹೀತವ್ಯಂ ಯುಕ್ತಮುಕ್ತಂ ಸುಭಾಷಿತಂ....ಆದರೆ—ಉಹುಂ! ನನ್ನ ಗೆಳೆಯನು ಇಂದಿನ ಯುವಕ. ಆದುದರಿಂದ ಮಹಾತ್ಮಾ ಗಾಂಧಿ, ಪಂಡಿತ ನೆಹರು, ಶೇಕ್ಸಪೀಯರ, ಬರ್ನಾರ್ಡ ಶಾ—ಇಂತಹರಲ್ಲಿ ಯಾರಾದರೊಬ್ಬರು ಹೇಳಿದರೆಯೆ ಅವನಿಗೆ ವಿಶ್ವಾಸ. ಹೀಗಿರುವಾಗ ನನಗೆ ಯಾರು ಹೇಳಿದರೆಂಬುದನ್ನು ತಿಳುಹಿಸಿದಲ್ಲಿ ಅವನ ವಿಶ್ವಾಸ ಕೂಡ್ರುವುದು ಹೇಗೆ? ಅವನವೆ ಯಾಕೆ — ವಾಚಕಮಹಾಶಯರೆ — ತಮ್ಮ ವಿಶ್ವಾಸವೂ ಕೂಡ್ರಲಿಕ್ಕಿಲ್ಲ. ಆದರೇನು? ಸತ್ಯವು ಸ್ವಂತದ ಅನುಭವಕ್ಕಿಂತ ಶ್ರೇಷ್ಠವಾದುದು ಎಂಬುದನ್ನು ಹಿಂದುಧರ್ಮೀಯರಿಗೆ ಬೇರೆ ಹೇಳಬೇಕೆ? ನ-ನ-ಗೆ ಈ ತ-ಲೆ-ತಿ-ರು-ಕ ತ-ರ್ಕ-ಬು-ದ್ಧಿ-ಯ-ನ್ನು ಹೇ-ಳಿ-ಕೊ-ಟ್ಟ ಗು-ರು ಮಾ-ರ್ಜಾ-ರ ಅರ್ಥಾತ್ ಬೆಕ್ಕು.

ತಾವೂ ನನ್ನ ಗೆಳೆಯನಂತೆ ನಗುವಿರೊ ಏನೊ! ನಕ್ಕರೆ ನನ್ನದೊಂದು ಮಾತಿನ ಸಾರ್ಥಕತೆಯನ್ನು ತಾವೇ ಸಿದ್ಧ ಮಾಡಿ ಕೊಟ್ಟಂತಾಗುವುದು. ದಯೆ ಇಲ್ಲವೆ ಭಕ್ತಿಯನ್ನು ಒಂದು ವಸ್ತುವಿಗಾಗಿ ತೋರಿಸುವುದೆಂದರೆ ಆ ವಸ್ತುವನ್ನು ದುರ್ಲಕ್ಷ್ಯ ಮಾಡುವ ಸುಲಭೋಪಾಯ ಎಂದು ನನ್ನ ಮಾತು. ಭಕ್ತಿಯನ್ನು ತೋರಿಸಿ ದೇವನನ್ನು ಕಲ್ಲು ಬೊಂಬೆಯಾಗಿ ಮಾಡಿ ಗುಡಿಯ ಕತ್ತಲಲ್ಲಿ ದುರ್ಲಕ್ಷ್ಯ ಮಾಡಿದೆವು; ಪೂಜ್ಯ ಎಂದು ನಾರಿಯರನ್ನು ಮನೆಯ ಮೂಲೆಯಲ್ಲಿ ಮರೆತೆವು; ಪ್ರಾಣಿದಯೆ ಎಂದು ಪ್ರಾಣಿಗಳನ್ನು ಕಣ್ಣೆತ್ತಿ ಕೈಮುಟ್ಟಿ ನೋಡದಾದೆವು! ಆದರೆ ನನ್ನ ಸುದೈವದಿಂದಲೊ ಸುಬುದ್ಧಿಯಿಂದಲೊ ಚಿಕ್ಕತನದಿಂದಲೂ ನನಗೂ ಬೆಕ್ಕಿಗೂ ಸ್ನೇಹ ಬೆಳೆದುದರಿಂದ ಬೆಕ್ಕಿನ ವಿಷಯವಾಗಿ ನನಗೆ ಭಕ್ತಿಯಾಗಲಿ ದಯೆಯಾಗಲಿ ತೋರಲಿಲ್ಲ. ಶಾಲೆಯಲ್ಲಿ ಕೂಡ ಬೆಕ್ಕೂ ನಾನೂ ಸಂಗಡಿಗರಾಗಿದ್ದೆವು. 'ಬಿಡಾಲ' ಎಂದರೆ ಸಂಸ್ಕೃತದಲ್ಲಿ ಬೆಕ್ಕು ಎಂಬರ್ಥ.

CC-0. Jangamwadi Math Collection. Digitized by eGangotri

ಒಂದು ದಿವಸ ಬಿಡಾಲಾನ್ + ತಾಡಯತಿ ಇವುಗಳ ಸಂಧಿ ಮಾಡುವಾಗ ನಡುವೆ 'ಸ'ಕಾರ ಎಲ್ಲಿಂದ ಬರುವುದು?— ಎಂದು ಶಿಕ್ಷಕರು ಕೇಳಿದರು. ಯಾರಿಗೂ ಸಮರ್ಪಕವಾದ ಉತ್ತರ ತೋಚಲಿಲ್ಲ. ಕೊನೆಗೆ ನಾನೇ ಹೇಳಿದೆ—'ಸ'ಕಾರವು ಬೆಕ್ಕು ಹಾಲು ಕುಡಿಯುವಾಗಿನ ಶಬ್ದ, ಬೆಕ್ಕು ಇದ್ದಲ್ಲಿ ಅದು ಇರಲೇಬೇಕು ಎಂದು. ಮುಂದೆ ನನ್ನ 'ಸ'ಕಾರದ ಪ್ರೇಮಕ್ಕಾಗಿ ನಾನು ಸಿವ್ಹಿಲ್ ಸರ್ಜನನನ್ನು ಕಾಣ ಬೇಕಾಯಿತು. ಇರಲಿ. ಅಂತೂ ಬೆಕ್ಕಿನ ಮೇಲೆ ನನ್ನ ಸ್ನೇಹವು ಇಷ್ಟೊಂದು ಇದ್ದುದರಿಂದಲೆ ಮಹಾಭಾರತದಲ್ಲಿ ಬೈಡಾಲ ವೃತ್ತಿ ಎಂಬ ಬೆಕ್ಕಿನ ತತ್ತ್ವೋಪದೇಶವಿದೆ ಎಂಬುದು ನನಗೆ ತಿಳಿದುಬಂದಿತು. ಸಾಕ್ಷಾತ್ ಶ್ರೀಕೃಷ್ಣನ ಉಪ ದೇಶವನ್ನೊಳಗೊಂಡ ಮಹಾಭಾರತದಲ್ಲಿ ತನ್ನದೊಂದು ತತ್ತ್ವೋಪದೇಶವನ್ನು ಸಾರಿದ ಬೆಕ್ಕಿಗೆ ತರ್ಕಬುದ್ಧಿ ಇಲ್ಲವೆನುವ ಧೈರ್ಯ ಯಾವನದು ?

ಆದರೆ ಮನುಷ್ಯನ ಸ್ವಭಾವ ಬಹಳೇ ಹಟಮಾರಿ. ಇಡಿಯ ಪ್ರಾಣಿಸೃಷ್ಟಿಯಲ್ಲಿ ತನಗೊಬ್ಬನಿಗೆಯೆ ಬುದ್ಧಿ ಇದೆ ಎಂದು ಅವನ ಗ್ರಹಿಕೆ. ಅದಕಾಗಿಯೆ ಇನಾಕ್ಯುಲೇಶನು ಸರಿಯಾದದ್ದು, ಬೆಕ್ಕಿನ ಉಪದೇಶ ತಪ್ಪಾದುದು ಎಂದು ಅವನ ಹಟ. 'ಎಲ್ಲರೂ ನನ್ನೊಡನೆ ಸ್ನೇಹ ಬೆಳೆಸಿದರೆ ಸಾಕು, ಪಾಪಗಳಂತೆ ಇಲಿಗಳೂ ನಾಶವಾಗುವವು' ಎಂದು ನಮ್ಮ ಮನೆಯ ಬೆಕ್ಕು ನನಗೊಂದು ದಿನ ಹೇಳಿತು. ಅಂದಿನಿಂದ ವಿಚಾರ ಮಾಡಿಮಾಡಿ ನನಗೂ ಆ ಮಾತು ಸಮಂಜಸ ಎಂದು ತೋರುತ್ತಲಿದೆ. ಬೆಕ್ಕಿನ ಉಪಯುಕ್ತತೆ ಮಾನವನ ವ್ಯವಹಾರದಲ್ಲಿ ಎಷ್ಟರ ಮಟ್ಟಿಗಿದೆ ಎಂಬುದು ನನಗೀಗ ಹೊಳೆಯಹತ್ತಿದೆ. 'ಎಲೈ ಅರ್ಜುನನೆ, ಪ್ರತಿ ಯೊಂದು ಹೃದಯದಲ್ಲಿ ಹುದುಗಿಕೊಂಡು ಸೂತ್ರದ ಗೊಂಬೆ ಗಳಂತೆ ಎಲ್ಲ ಪ್ರಾಣಿಗಳನ್ನು ಈಶ್ವರನು ಆಡಿಸುವನು' (ಗೀತಾ ಅ. ೧೮, ಶ್ಲೋ. ೬೧) ಎಂಬ ಮಾತು ನನ್ನ ತಲೆ-ತಿರುಕ ತರ್ಕದಿಂದ ಈಶ್ವರನಿಗಿಂತ ಬೆಕ್ಕಿಗೆ ಹೆಚ್ಚು ಅನ್ವಯಿಸುವುದು. ಮಾಡಬಾರದ ಕೆಲಸವನ್ನು ಮಾಡುವ ಮುಂಚೆ ನಮ್ಮ ಕಾಲಿಗೆ ಅಡ್ಡಬಂದು 'ಬೇಡ, ಬೇಡ' ಎಂದು ಬೇಡಿಕೊಂಡು ದುರ್ಮಾರ್ಗದಿಂದ ನಮ್ಮನ್ನು ನಿವೃತ್ತ ಮಾಡುವವರು ಯಾರು ? ಪರಮಾತ್ಮನೊ ಇಲ್ಲವೆ ಮಹಾತ್ಮಾ ಮಾರ್ಜಾರನೊ? ಪೋಲೀಸರಿದ್ದಾರೆ, ಜೇಲು ಗಳಿವೆ, ಜಜ್ಜಸಾಹೇಬರಿದ್ದಾರೆ, ಸೈನ್ಯವಿದೆ—ಇಷ್ಟೆಲ್ಲ ಇರು ವಾಗಲೂ ಜಗತ್ತಿನಲ್ಲಿ ದುಷ್ಕೃತ್ಯಗಳು ತಡೆದಿಲ್ಲ. ಆದರೆ ಒಂದೇ ಒಂದು ಬೆಕ್ಕು ಒಮ್ಮೆ 'ಟೂರಿಂಗ'ಕ್ಕೆಂದು ಅಡ್ಡ ಸಂಚಾರ ಮಾಡಿದರೆ ಎಂತೆಂತಹ ಕೃತ್ಯಗಳು ತಡೆಯಬಹು ದೆಂದು ಬೇರೆ ಹೇಳಬೇಕಾಗಿಲ್ಲ.

ದುಷ್ಕೃತ್ಯಗಳನ್ನೂ ದುರ್ಬುದ್ಧಿಯನ್ನೂ ದುಃಖ-ದಾರಿ ದ್ರ್ಯಗಳನ್ನೂ ನಮ್ಮ ಜೀವನದಿಂದ ಹೊಡೆದೋಡಿಸುವ ಪ್ರಶ್ನವು ಇಂದು ನಮ್ಮ ಸಂಸಾರಸಾಗರದಲ್ಲಿ, ವ್ಯವಹಾರ ಪ್ರವಾಹದಲ್ಲಿ ಬುರುಗು-ಗುಳ್ಳೆಯಂತೆ ಮೇಲೆದ್ದು ನಿಂತಿದೆ. ಅಧಿಕಾರಾರೂಢರಾದ ಕಾಂಗ್ರೆಸಿನವರು ಅನೇಕ ಹರಕೆ-ಹೇಳಿಕೆಗಳನ್ನು ಇದಕಾಗಿ ಹುಡುಕುತ್ತಲಿದ್ದಾರೆ. ಸಂಕಟ ಕಾಲದಲ್ಲಿ ಸಾಮಾನ್ಯರು ಸತ್ಯನಾರಾಯಣನನ್ನು ಬೇಡಿ ಕೊಳ್ಳುವಂತೆ ನಾನು ಭಗವಾನ್ ಬೆಕ್ಕನನ್ನು ಬೇಡುತ್ತಿ ರುತ್ತೇನೆ. ಇಂದು ನಮ್ಮ ಜೀವನದ ಪುನರ್ಘಟನೆಯ ವಿಷಯವಾಗಿ ನನ್ನ ಭಗವಂತನು ನನಗೆ ತೋರಿದ ಉಪಾ ಯಗಳನ್ನು ಅವನ ಆಜ್ಞೆಗನುಸರಿಸಿಯೆ ಹೇಳುತ್ತಲಿದ್ದೇನೆ. ಓದುಗರ ಕ್ಷಮೆ ಇರಲಿ. 'ನಾಹಂ ಕರ್ತಾ ಬರೆಯುವಾತಾ ಮ್ಯಾಂವ್ಯಾಂ ಎಂದು ಹಾರಿಸೈ.'

ಇಂದಿನ ಮೊದಲನೆಯ ಸಮಸ್ಯೆ ಯಾವುದು ? ಮಂತ್ರಿ ಪದವನ್ನೇರುವುದು. ಮಂತ್ರಿಗಳು ಯಾರಿರಬೇಕು, ಎಷ್ಟು ಜನರಿರಬೇಕು—ಎಂಬ ಪ್ರಶ್ನೆಯ ಮಹತ್ವವನ್ನು ಬಂಧು ಬಿಡಾಲರಾಯನು ನನಗೆ ಮೊದಲು ತಿಳುಹಿಸಿಕೊಟ್ಟನು. ಮಂತ್ರಿಗಳು ಎಷ್ಟೇ ಸಂಬಳವನ್ನು ತೆಗೆದುಕೊಳ್ಳಲಿ, ಎಲ್ಲಿಯವರೆಗೆ ಹಣದ ಉಳಿತಾಯವು ಅತ್ಯವಶ್ಯಕ ವಾಗಿದೆಯೋ ಅಲ್ಲಿಯವರೆಗೆ ಕಡಿಮೆ ಜನ ಮಂತ್ರಿ ಗಳಿದ್ದಷ್ಟು ದೇಶಕ್ಕೆ ಹಿತ, ವೆಚ್ಚಕ್ಕೆ ಮಿತ. ಒಬ್ಬನಿಗಿಂತಲೂ ಕಡಿಮೆ ಜನ ಮಂತ್ರಿಗಳಿರಬಹುದೆ ಎಂಬುದನ್ನು ವಿಚಾರಿಸಲು ಒಂದು ತಜ್ಞರ ಸಮಿತಿಯನ್ನು ಗೊತ್ತು ಪಡಿಸಬೇಕು. ಅಲ್ಲಿಯವರೆಗೆ ಒಬ್ಬನನ್ನೆ ಮಂತ್ರಿಯನ್ನಾಗಿ ಮಾಡಬೇಕು. ಧನದ ಉಳಿತಾಯವಲ್ಲದೆ ಮನದ ಉಳಿ ತಾಯವಾದರೂ ಆಗುವುದು. ಗಂಡಸ-ಹೆಂಗಸ ಭೇದ, ಜಾತಿಭೇದ, ಪ್ರಾಂತಭೇದ, ಭಾಷಾಭೇದ, ಸ್ವಾರ್ಥ ತ್ಯಾಗದ ತಾರತಮ್ಯ—ಮುಂತಾದ ತತ್ತ್ವಗಳನ್ನನುಸರಿಸಿ ಮಂತ್ರಿಪದದ ಅರ್ಹತೆಯ ಮೀಮಾಂಸೆ ಮಾಡುವುದಕ್ಕಿಂತ ಒಬ್ಬನನ್ನೆ ನಿಯಮಿಸುವುದು ಒಳಿತಲ್ಲವೆ? ಒಬ್ಬನೆ ಎಂದರೆ ಇಂತಹನೆ ಯೋಗ್ಯ, ಇಂತಹನು ಅಯೋಗ್ಯ ಎಂದು ನಿರ್ಣಯಿಸುವುದು ಹೇಗೆ ಎಂದು ತಾವು ಕೇಳಬಹುದು. ಬೈಡಾಲತಂತ್ರದಲ್ಲಿ ಅದಕ್ಕೆ ಸಮರ್ಪಕವಾದ ಉತ್ತರವಿದೆ. ಅದರ ತತ್ವವು ಹೀಗೆ. ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನನ್ನು ಆಳುವುದು ಅನ್ಯಾಯ, ಆಸುರೀ ಪದ್ಧತಿ;

CC-0. Jangamwadi Math Collection. Digitized by eGangotri

ಎಲ್ಲ ಮನುಷ್ಯರಿಗೂ ಸಮನಾದ ಅಧಿಕಾರ, ಅರ್ಹತೆ, ಸ್ವಾತಂತ್ರ್ಯ ಇದೆ— ಎಂದು ನೀವು ಕೂಡಾ ಒಪ್ಪುವಿರಲ್ಲವೆ? ಇದರಿಂದ ಸಿದ್ಧವಾಗುವುದೇನು? ಅತ ಏವ ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನನ್ನು ಆಳಬಾರದು, ಅರ್ಥಾತ್ ಒಬ್ಬ ಮನುಷ್ಯನು ಮಂತ್ರಿ ಇನ್ನೊಬ್ಬನು ಅವನ ಪರತಂತ್ರಿ ಆಗಕೂಡದು, ಅಥವಾ ಮಂತ್ರಿಪದವನ್ನು ಯಾವ ಮನುಷ್ಯನಿಗೂ ಕೊಡಬಾರದು! ತರ್ಕದಿಂದ ಸಿದ್ಧವಾದ ಈ ಮಾತನ್ನು ವ್ಯವಹಾರವನ್ನು ಬಲ್ಲವರು ಒಪ್ಪುವುದರಲ್ಲಿ ಸಂದೇಹವೆ ಇಲ್ಲ, ಅನುಭವಿಕರು ಅಹುದೆನ್ನಲು ಅನುಮಾನಿಸುವಂತಿಲ್ಲ.

ಮಂತ್ರಿಯು ಒಬ್ಬನೇ ಇರಬೇಕು, ಯಾವ ಮನುಷ್ಯನೂ ಮಂತ್ರಿಯಾಗಬಾರದು ಎಂಬ ಮಾತನ್ನು ಒಪ್ಪಿಕೊಂಡ ಮೇಲೆ ಮುಂದಿನ ಹೆಜ್ಜೆಯನ್ನು ನಾವು ಸುಲಭವಾಗಿಯೆ ಇಡಬಹುದು. ಅದೆಂದರೆ, ಮಾರ್ಜಾರನೆ ಮಂತ್ರಿಯಾಗಬೇಕೆಂದು. ಆದರೆ ಮಂತ್ರಿಯಾಗುವವನಲ್ಲಿ ಜ್ಞಾನಬಲ, ಕರ್ತವ್ಯಬಲ ಇರಬೇಕಲ್ಲವೆ? ಇದೆಂತಹ ಹುಡುಗಾಟದ ಸಂದೇಹ! ಮಾರ್ಜಾರ ಮಹಾಶಯನಲ್ಲಿ ಯಾವ ಜ್ಞಾನವಿಲ್ಲ, ಯಾವ ಕರ್ತವ್ಯಶಕ್ತಿ ಇಲ್ಲ? ಇದಲ್ಲದೆ ಜನತಾಜನಾರ್ದನನ ಸೇವೆಯನ್ನು ಮೈಮುರಿ ಮಾಡುವ ಉತ್ಸಾಹ-ಶಕ್ತಿಗಳೂ ಅವನಲ್ಲಿಯೆ ಇವೆ. ಯಾರಿಗಾದರೂ ಸಂದೇಹವಿದ್ದರೆ ಅವರು ಮಾರ್ಜಾರ ಮಹಾಶಯನ ದಿನಚರಿಯನ್ನು ನೋಡಲಿ. ಬೆಳಗಿನಲ್ಲಿ ಎದ್ದು ಮಾರ್ಜಾರನು ಮೊದಲು ಮನೆಮನೆ ಇನ್‌ಸ್ಪೆಕ್ಶನ್ ಪ್ರಾರಂಭಿಸುವನು. ಚಿಕ್ಕಮಕ್ಕಳಿಂದ ಚಹಾಕುಳಗಳ ವರೆಗೆ ಎಲ್ಲರೂ ಹಾಲನ್ನವಲಂಬಿಸಿರುವ ಕಾಲದಲ್ಲಿ ಮನೆಮನೆ ಹಾಲು ಆರೋಗ್ಯಕಾರಕವಿದೆಯೆ ಎಂದು ನೋಡುವವರು ಯಾರು? ಸರಕಾರೀ ಇಲ್ಲವೆ ಮುನಸೀಪಾಲ್ಟಿ ಹಾಲು-ಇನ್‌ಸ್ಪೆಕ್ಟರರೆ? ಇಲ್ಲವೆ ಮೀಸೆ ತೀಡುತ್ತ ಮೆರೆಯುವ ಮಾರ್ಜಾರನೆ? ಬಂದವನೆ ಹಾಲನ್ನು ಮೂಸಿನೋಡುವನು. ತ್ರಿಕಾಲ ಜ್ಞಾನವುಳ್ಳ ಅವನಿಗೆ ಹಾಲಿನಲ್ಲಿ ಮಳೆಗಾಲವಿದ್ದರೆ ತಟ್ಟನೆ ತಿಳಿಯುವುದು, ಹುಳಿಗಾಲವಿದ್ದರಂತೂ ಪ್ರತಿಬಂಧಿಸುವ ರೇಲ್ವೆ ಸಿಗ್ನಲದ ಕೈಯಂತೆ ಮೀಸೆ ಸೆಟೆದು ನಿಲ್ಲುವುದು. ಹೀಗೆಯೆ ಮನೆಮನೆ ಇನ್‌ಸ್ಪೆಕ್ಶನ್ ಮುಗಿಸುವಷ್ಟರಲ್ಲಿ ಮಧ್ಯಾಹ್ನವಾಗುವುದು. ಆಗ ಸ್ವಲ್ಪ ವಿಶ್ರಾಂತಿ—ಛೀ! ಎಂತಹ ಮಾತು! ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ ಎನ್ನುತ್ತ ಮಧ್ಯಾಹ್ನದ ಅಡಿಗೆಯ ಇನ್‌ಸ್ಪೆಕ್ಶನಕ್ಕೆ ಪ್ರಾರಂಭವಾಗುವುದು. ಹೀಗೆಯೆ ದಿನವನ್ನೆಲ್ಲ ಕಳೆದು ರಾತ್ರಿಯಲ್ಲಿ—ರಾತ್ರಿಯಲ್ಲಿ ಏನು?—ಕಣ್ಣು ಮುಚ್ಚುವುದೆ? ಭಗವಾನ್ ಬಿಡಾಲನು ಅನಿಮಿಷನಾದ ದೇವನು. ಅವನ ಕಣ್ಣು ಮುಚ್ಚುವಂತಲೆ ಇಲ್ಲ. ನಿಮಗೆಲ್ಲರಿಗೂ ಸುಖವಾಗಿ ನಿದ್ದೆ-ವಿಶ್ರಾಂತಿಗಳು ದೊರೆಯುವಾಗ ನಿಮ್ಮನ್ನು ದುಷ್ಟರಿಂದ ಸಂರಕ್ಷಿಸುವನು. ರಾತ್ರಿಯ ವಿಘ್ನಗಳನ್ನು ಹೊಡೆದೋಡಿಸುವ ನಿಜವಾದ ಈ ಮೂಷಕವಾಹನನ ಈ ಅಗಾಧ ಜ್ಞಾನಶಕ್ತಿ-ಕರ್ತವ್ಯಶಕ್ತಿಗಳನ್ನು ನೋಡಿದವರು ಇವನನ್ನು ಏಕಮತವಾಗಿ ಆರೋಗ್ಯಮಂತ್ರಿಯೆಂದು ಒಪ್ಪಿಕೊಳ್ಳುವುದರಲ್ಲಿ ಸಂದೇಹವೇನು?

ಶರೀರದ ಬೆಳವಣಿಗೆಗೆ ಆರೋಗ್ಯಜ್ಞಾನದ ಆವಶ್ಯಕತೆ ಇದ್ದಂತೆ ಮನದ ಬೆಳವಣಿಗೆಗೆ ಶಿಕ್ಷಣದ ಆವಶ್ಯಕತೆ ಇದೆ. ಹಿಂದುಳಿದ ನಮ್ಮ ದೇಶದಲ್ಲಿ ಶಿಕ್ಷಣಪದ್ಧತಿಯೂ ಶಿಕ್ಷಣದ ತತ್ವಗಳೂ ಕೆಲಸಕ್ಕೆ ಬಾರದುವು ಎಂದು ಎಲ್ಲರೂ ಒಪ್ಪುತ್ತಾರೆ. ಆದರೆ—? ಆದರೆ—? ಸರಿಯಾದ ಪದ್ಧತಿಯನ್ನೂ ಶ್ರೇಷ್ಠವಾದ ತತ್ವಗಳನ್ನೂ ಯಾರಾದರೂ ಕಂಡು ಹಿಡಿದಿದ್ದಾರೊ? ಮಾಮನುಸ್ಮರ ಯುಧ್ಯ ಚ — ಎಂದು ಮೆಂವುಗುಡುತ್ತ ಭಗವಾನ್ ಬಿಡಾಲನು ನನಗೆ ಹೇಳುವಂತಹನಾದನು. 'ನನ್ನಲ್ಲಿ ಪ್ರಾಥಮಿಕ ಶಿಕ್ಷಣದ ಪದ್ಧತಿಯನ್ನು ನೋಡಿರುವೆಯಾ?' ಎಂದು ಕೇಳಿದನು. ನಾನು ಹೇಳಬೇಕೆಂದಿದ್ದೆ; ಚಿಕ್ಕಂದಿನಲ್ಲಿ ನನಗೆ ನೋಡುವ ಭಾಗ್ಯ ದೊರೆತಿತ್ತು, ಆದರೆ ನೋಡಬೇಕೆನ್ನುವಷ್ಟರಲ್ಲಿ ನನ್ನ ಹಿರಿಯರು ಅಲ್ಲಿಂದ ನನ್ನನ್ನು ಓಡಿಸಿದ್ದರು. ಈ ಸಂಗತಿಯನ್ನು ಹೇಳಿದರೆ ನನ್ನದೇ ಅವಮಾನವಾದೀತೆಂದು ಸುಮ್ಮನಾದೆ. 'ನನ್ನಲ್ಲಿ ಪ್ರಾಥಮಿಕ ಶಿಕ್ಷಣದ ಪದ್ಧತಿಯನ್ನು ನೋಡಿರುವೆಯಾ?' ಎಂದು ಮತ್ತೆ ಮೆಂವುಗುಟ್ಟಿ ಮುಂದೆ ಹೇಳುವಂತಹನಾಗುತ್ತಾನೆ: 'ನನ್ನ ಮಕ್ಕಳಿಗೆ ಎಳೆತನದಲ್ಲಿ ಶಿಕ್ಷಣಕೊಡುವವರು ಯಾರು? ಬಾಯಿಗೆ ತಂಬಾಕ ತುಂಬಿ, ಮೂಗಿಗೆ ನಸ್ಯ ತುಂಬಿ, ಕೈಯಲ್ಲಿ ಬೆತ್ತವನ್ನೆತ್ತಿ, ಜೆಟ್ಟಿಗಳಂತಹ ಮೀಸೆಯನ್ನು ಹೊತ್ತ ಕಂಸಾಸುರನಂತಹ ಗಂಡಸೆ? ಇಲ್ಲವೆ ಚಿಕ್ಕಮಕ್ಕಳ ನಗೆ-ನಲಿದಾಟಗಳನ್ನು ಸಹಾನುಭೂತಿಯಿಂದ ಸಹಿಷ್ಣುತೆಯಿಂದ ನೋಡುವ ಮಮತೆಯ ಹೆಂಗಸೆ? ನೋಡಿರುವೆಯಾ, ನನ್ನ ಮಕ್ಕಳಿಗೆ ಶಿಕ್ಷಣವನ್ನು ಕೊಡುವವಳು ತಾಯಿ — ಇದು ನಮ್ಮಲ್ಲಿ ಎಂದಿನಿಂದಲೊ ರೂಢವಾಗಿದೆ -- ನಿಮಗೆ ಈಗೀಗ ಇದೊಂದು ದೊಡ್ಡ ತತ್ತ್ವವೆಂದು ತೋಚಹತ್ತಿದೆ. !' ಬೆಕ್ಕುರಾಯನು ಎಡಗೈಯಿಂದ ಮೀಸೆಯನ್ನು ತಿದ್ದಿಕೊಂಡನು. ತನ್ನ ಮಾತಿನಿಂದ ನನಗೆ ಅವಮಾನವೂ ಕೋಪವೂ ಒಳಗೆ ಕುದಿಯತೊಡಗಿ

CC-0. Jangamwadi Math Collection. Digitized by eGangotri

ತೆಂದು ತ್ರಿಕಾಲಜ್ಞನಿಗೆ ಹೊಳೆಯದೆ ಹೋಗಲಿಲ್ಲ. ನನ್ನನ್ನು ಕೆಣಕುವ ಉದ್ದೇಶದಿಂದಲೆ ತನ್ನ ಮಾತನ್ನು ಮುಂದೆ ಸಾಗಿಸಿದನು. ' ನಮ್ಮ ಶಿಕ್ಷಣದ ತತ್ತ್ವಗಳಾದರೂ ಎಂತಹವು ! ವ್ಯವಹಾರಕ್ಕೆ, ಜೀವನದ ಬೆಳವಣಿಗೆಗೆ ಆವಶ್ಯಕವಿದ್ದ ಜ್ಞಾನವನ್ನಷ್ಟೆ ನಾವು ಕಲಿಸುವೆವು. ಆ ವಿದ್ಯೆಯನ್ನು ಕಲಿತು ಹುಟ್ಟಿನ ಸ್ವಲ್ಪೇ ದಿವಸಗಳಲ್ಲಿ ನನ್ನ ಮಕ್ಕಳು ತಮ್ಮ ಇಲಿಗಳನ್ನು ತಾವೇ ಹೊಡೆಯುವವು; ನಿಮ್ಮಂತೆ ನೊಣಗಳನ್ನು ಹೊಡೆಯುವುದಿಲ್ಲ. ಮೆಂವು ಉಲೂ. '

ನನಗೆ ತಡೆಯದಂತಾಯಿತು. ಅವನು ಭಗವಂತನಾದರೂ ನಾನು ಭಕ್ತನಲ್ಲವೆ? ನನಗೆ ಅವನ ಮೇಲೆ ಕೋಪಿಸುವ ಅಧಿಕಾರವಿಲ್ಲವೆ ? ' ನಿನ್ನ ಮಕ್ಕಳನ್ನು ನೀನೇ ತಿನ್ನುವಷ್ಟು ಕ್ರೂರತನ — '. ಬೆಕ್ಕಿನ ಮೆಂವುಗುಡುವುದರಿಂದ ನನ್ನ ಮಾತನ್ನು ಅಲ್ಲಿಯೆ ತಡೆಯಬೇಕಾಯಿತು. ' ಕ್ರೂರತನ ! ' ಬೆಕ್ಕು ಉಪಹಾಸದಿಂದ ನುಡಿಯಿತು; ' ಎಳೆತನದಲ್ಲಿ ತಿನ್ನುವುದು ಕ್ರೂರತನ ! ಬೆಳೆದ ಮಕ್ಕಳನ್ನು ಮುಂದೆ ಸವೆಸಿ ತಿನ್ನುವುದು ಇಲ್ಲವೆ ಮಕ್ಕಳನ್ನು ಬೆಳೆಸುವುದಕ್ಕಾಗಿ ಲಂಚ ತಿನ್ನು — '

ನಾನು ಓಡಿದೆ; ಕಂಗೆಟ್ಟು, ದಿಕ್ಕೆಟ್ಟು ಓಡಿದೆ. ಆದರೇನು? ಬೆಕ್ಕು ಅಡ್ಡಗಟ್ಟಿ ನಿಲ್ಲಲು ನನ್ನ ಕಾಲುಗಳನ್ನು ಸಂಮೋಹಿನಿಯಿಂದ ಕಟ್ಟಿದಂತಾಯಿತು. 'ಹೇ ಮಾರ್ಜಾರಾ, ಮಾನವ ಬಂಧೋ, ಜ್ಞಾನಸಿಂಧೋ, ನನ್ನ ದೇಶದ ಉದಯವಾಗಲಿ ನಿನ್ನಿಂದೊ ! ನೀನೇ ನಮ್ಮ ದೇಶಕ್ಕೆ ಸರ್ವಾಧಿಕಾರಿತ್ವ ( Dictatorship ) ದ ಒಬ್ಬನೇ ಒಬ್ಬ ದೊರೆಯಾಗು ಮಂತ್ರಿಯಾಗು ....' ಎನ್ನುತ್ತ ನಾನೂ ಅಡ್ಡ ಬಿದ್ದೆ. ' ಯಾರಿಗೆ ಮಾಡ್ತಿ ಮ್ಯಾಂ । ಸಂಪದ । ಯಾರಿಗೆ ಮಾಡ್ತಿ ಮ್ಯಾಂ ॥ ' ಎಂಬ ಪುರಂದರದಾಸರ ಶಬ್ದಗಳು ನನ್ನ ಕಿವಿಯಲ್ಲಿ ಕುಣಿಯತೊಡಗಿದುವು.

ಭಿಷಗ್ರತ್ನ ಆಯುರ್ವೇದವಿದ್ವಾನ್ ಬಿ. ವಿ. ಪಂಡಿತರ
ಶ್ರೀಕರ ಕಸ್ತೂರಿ ಮಾತ್ರೆ
ಮಕ್ಕಳ ಮತ್ತು ದೊಡ್ಡವರ ಸಮಸ್ತ ಶೀತ ವಾತ ರೋಗಗಳಿಗೂ ಸಂಜೀವನ
4 ಅಣೆ
ಬಾಲಸಂಜೀವಿನಿ
ಮಕ್ಕಳಿಗೆ ಸುಖವಾಗಿ ಭೇದಿಮಾಡಿಸಿ ಅಜೀರ್ಣ ಜ್ವರಗಳನ್ನು ನಿಲ್ಲಿಸುತ್ತ
4 ಅಣೆ
ಸದ್ವೈದ್ಯಶಾಲಾ ನಂಜನಗೂಡು

CC-0. Jangamwadi Math Collection. Digitized by eGangotri

# ಬಾದಾಮಿಯ ಚಾಲುಕ್ಯರ ಕಾಲದ ಸಾಮಾಜಿಕ ಜೀವನ

ಲೇಖಕರು:— ಶ್ರೀ. ದೇಸಾಯಿ ಪಾಂಡುರಂಗರಾಯರು, ಎಮ್. ಎ, ಧಾರವಾಡ.

(ಬೌದ್ಧಮತವು (ಕ್ಷೀಣದೆಸೆಯಲ್ಲಿಯೆ ಆಗಲಿ) ಬಾಳಿಕೊಂಡಿದ್ದಿತು. ಜೈನಮತಕ್ಕೆ ರಾಜಾಶ್ರಯವಿದ್ದಿತು. ಆದರೆ ವೈದಿಕ ಮತವೆ ಜನಸಾಮಾನ್ಯರಲ್ಲಿ ಪ್ರಭಾವಶಾಲಿಯಾಗಿ ಹರಡಿದ್ದಿತು. ಮತಗಳಲ್ಲಿ ಸ್ಪರ್ಧೆಯಿದ್ದಿತಾದರೂ ಅದು ಸೌಮನಸ್ಯ—ಸೌಹಾರ್ದಗಳಿಂದ ಕೂಡಿದ್ದುದಾಗಿದ್ದಿತು...ಸಂಸ್ಕೃತವು ಸಂಸ್ಕೃತಿಯ ಭಾಷೆಯಾಗಿದ್ದರೂ, ಕನ್ನಡವು ತಲೆಯೆತ್ತುತ್ತಿರುವ ಕಾಲವದು. ಭಾರವಿ, ದಂಡಿ, ದುರ್ವಿನೀತ, ಸಮಂತಭದ್ರ, ಪೂಜ್ಯಪಾದ, ಸರಸ್ವತೀ....ಕರ್ಣಾಟೀ ಎಂದು ಪ್ರಸಿದ್ಧಳಾದ ವಿಜಯಾದೇವಿ–ಇವರು ಮೆರೆದ ಕಾಲವದು. ಸಂಸ್ಕೃತಪ್ರಚುರವಾಗಿರುವ ಶಾಸನಗಳು ಕನ್ನಡದಲ್ಲಿ ಬರೆಯಲ್ಪಡಲಾರಂಭಿಸಿದವು. ಅಲ್ಲದೆ ನೃಪತುಂಗದೇವನಿರ್ದಿಷ್ಟರಾದ ಹಲವು ಕನ್ನಡ ಗ್ರಂಥಕರ್ತರು ಉದಯಿಸಿದರು....ಉಚ್ಚವರ್ಗೀಯರು ಸಿರಿವಂತರು ಸಂಸ್ಕೃತವೇ ಮಾಧ್ಯಮಿಕವಾದ ಶಿಕ್ಷಣ—ಸಾಹಿತ್ಯಗಳಲ್ಲಿ ಅಭಿರುಚಿಯುಳ್ಳವರಾಗಿದ್ದರು. ಜೈನ ಮೊದಲಾದ ಅವೈದಿಕರೇ ಪ್ರಾಕೃತ-ದೇಶ್ಯಭಾಷೆಗಳನ್ನು ಪುರಸ್ಕರಿಸುತ್ತಿದ್ದರಾದರೂ ಸಂಸ್ಕೃತವನ್ನು ಕಡೆಗಣಿಸುವುದು ಸಾಧ್ಯವಿರಲಿಲ್ಲ....ಘಟಿಕಾಸ್ಥಾನಗಳು, ಅಗ್ರಹಾರಗಳು, ಕ್ಷೇತ್ರ-ದೇವಸ್ಥಾನಗಳು ಆಗಿನ ಕಾಲದ ವಿಶ್ವವಿದ್ಯಾಲಯಗಳಾಗಿದ್ದುವು....ಪುರೋಹಿತ, ಜೋಶಿ, ಕರ್ಣಿಕರೇ ಹಳ್ಳಿಗಳ ಪ್ರಾಥಮಿಕ ಶಾಲೆಗಳ ಚಾಲಕರಾಗಿದ್ದರು....ಕೃಷಿ, ವ್ಯಾಪಾರ, ಕೈಗಾರಿಕೆ, ಕಲೆ, ಶಸ್ತ್ರವಿದ್ಯೆ ಇ.ಗಳಲ್ಲಿ ಶಿಕ್ಷಣವು ಪರಂಪರಾಗತವಾದ 'ಅಂತೇವಾಸಿ' ಯ ಪದ್ಧತಿಯಲ್ಲಿ ಕೊಡಲ್ಪಡುತ್ತಿತ್ತು. ಉಚ್ಚ ವರ್ಗದ ಸ್ತ್ರೀಯರು ಸಂಸ್ಕೃತಿಸಂಪನ್ನರಾಗಿದ್ದರು. ವಿಜಯಭಟ್ಟಾರಿಕಾ, ಕುಂಕುಮಮಹಾದೇವಿ, ಲೋಕಮಹಾದೇವಿ, ತ್ರೈಲೋಕ್ಯಮಹಾದೇವಿ ಮೊದಲಾದ ನಾರೀಮಣಿಯರು ಬೆಳಕಿಗೆ ಬಂದರು. ಬಾಲ್ಯವಿವಾಹವು ರೂಢವಾಗುತ್ತ ಬಂದುದರಿಂದ ಸ್ತ್ರೀಶಿಕ್ಷಣವು ಹಿಮ್ಮೆಟ್ಟಲಾರಂಭಿಸಿತ್ತು.)

### ರಾಜಕೀಯ ಸಾಮಾಜಿಕ ಜೀವನಗಳ ಅನ್ಯೋನ್ಯ ಸಂಬಂಧ

ಜನಾಂಗದ ಚೈತನ್ಯವು ಎರಡು ಕಾರ್ಯಕ್ಷೇತ್ರಗಳಲ್ಲಿ ಅಭಿವ್ಯಕ್ತವಾಗುವುದು. ಒಂದು ರಾಜಕೀಯ ಜೀವನ, ಎರಡನೆಯದು ಸಾಮಾಜಿಕ ಜೀವನ. ಇವುಗಳಲ್ಲಿ ಮೊದಲನೆಯದರಲ್ಲಿ ಬಾಹ್ಯಶಕ್ತಿಗಳ ಸ್ಥೂಲ ಪರಿಣಾಮಗಳು ವಿಶೇಷ ಪ್ರಮಾಣದಲ್ಲಿ ಕಾಣಬರುವುದಾದರೆ, ಎರಡನೆಯದರಲ್ಲಿ ಅಂತಃಶಕ್ತಿಗಳ ಸೂಕ್ಷ್ಮವಿಕಾಸವು ಹೆಚ್ಚಾಗಿ ಕಾಣಬರುತ್ತದೆ. ಈ ಎರಡೂ ಜೀವನಗಳು ನಿಕಟವಾಗಿ ಪರಸ್ಪರ ಸಂಲಗ್ನವೂ ದೃಢವಾಗಿ ಪರಸ್ಪರೋಪಜೀವಿಗಳೂ ಆಗಿವೆ. ರಾಜಕೀಯ ಕ್ಷೇತ್ರದಲ್ಲಿ ಉನ್ನತವಾದ ರಾಷ್ಟ್ರದ ಸಾಮಾಜಿಕ ಜೀವನಕ್ಕೆ ಘನವಾದ ಸಂಸ್ಕಾರವು ದೊರೆಯುವುದು. ಸಾಮಾಜಿಕ ಕಾರ್ಯಕ್ಷೇತ್ರದಲ್ಲಿ ಘನವಾದ ಸಂಸ್ಕರಣವನ್ನು ಪಡೆದ ಜನಾಂಗವು ರಾಜಕೀಯ ಕ್ಷೇತ್ರದಲ್ಲಿಯೂ ಉತ್ಕರ್ಷಾಭಿಮುಖವಾಗುವುದು. ರಾಜಕೀಯ ಕ್ಷೇತ್ರದಲ್ಲಿ ಹಿಂದೆ ವಿವರಿಸಿದಂತೆ ಉನ್ನತಿಪಥಾರೂಢವಾದ ಈ ಕಾಲದ ಕನ್ನಡ ಜನಾಂಗದ ಸಾಮಾಜಿಕ ಜೀವನವಾದರೂ ತಕ್ಕ ರೀತಿಯಲ್ಲಿ ಉನ್ನತವೂ ಉದಾತ್ತವೂ ಆಗಿದ್ದಿತು ಎಂದು ಕಾಣಬರುತ್ತದೆ. ಅದು ಹೇಗೆ ಎಂಬುದನ್ನು ಸಾಮಾಜಿಕ ಜೀವನದ ಅಂಗಗಳಾದ ಧರ್ಮ, ಭಾಷೆ, ಸಾಹಿತ್ಯ, ವಿದ್ಯೆ, ಕಲೆ ಮೊದಲಾದುವುಗಳನ್ನು ಒಂದೊಂದಾಗಿ ಪರೀಕ್ಷಿಸಿ ಮನವರಿಕೆ ಮಾಡಿಕೊಳ್ಳುವ.

**ಧಾರ್ಮಿಕಜೀವನ—ಧರ್ಮಗಳೂ ಅವುಗಳ ಪ್ರಭಾವವೂ—ಭಿನ್ನಧರ್ಮೀಯರಲ್ಲಿಯ ಪರಸ್ಪರ ಬಳಕೆ.**

ಭಾರತೀಯರ ಸಾಮಾಜಿಕ ಜೀವನವನ್ನು ರೂಪುಗೊಳಿಸುವ ಶಕ್ತಿಗಳಲ್ಲಿ **ಧರ್ಮವು ಪ್ರಧಾನಶಕ್ತಿ**ಯಾಗಿದೆ. ಆದುದರಿಂದ ಈ ಕಾಲದ ಕರ್ನಾಟಕದ ಸಾಮಾಜಿಕ ಜೀವನವನ್ನು ವಿಚಾರಿಸುವಾಗ ಈ ಸಾಮಾಜಿಕ ಜೀವನವು ಯಾವ ವಿಧದ ಧರ್ಮವಿಚಾರಗಳಿಂದ ಪ್ರೇರಿತವಾಗಿತ್ತು ಎಂಬುದನ್ನು ಅವಲೋಕಿಸುವುದು ಆವಶ್ಯವಾಗಿದೆ. ಕ್ರಿಸ್ತಯುಗದ ಅಕ್ಕಪಕ್ಕದ ಎರಡು ಮೂರು ಶತಮಾನಗಳಲ್ಲಿ ಅಖಿಲ ಭರತಭೂಮಿಯನ್ನು ವ್ಯಾಪಿಸತೊಡಗಿದ ಬೌದ್ಧ ಧರ್ಮಕ್ಕೆ **ಗುಪ್ತರ** ಆಳಿಕೆಯಲ್ಲಿ, ಮೂರುನಾಲ್ಕನೆಯ ಶತಮಾನದಿಂದ ಇಳಿಗಾಲವು ಉಂಟಾಗಿ **ವೈದಿಕ ಧರ್ಮದ ಪುನರುತ್ಥಾನವು** ಪ್ರಾರಂಭವಾಗಿತ್ತು.[೪೩] ಆದರೂ ಉತ್ತರಭಾರತದಲ್ಲಿ ಬೌದ್ಧಮತದ ಗೌರವವು ಭರದಿಂದ ಕಡಿಮೆಯಾಗಲಿಲ್ಲ. ಚೀನೀ ಬುದ್ಧಭಕ್ತನಾದ **ಹುವೆನತ್ಸಾಂಗನು** ಬಣ್ಣಿಸಿದ ಕನೋಜದ ಹರ್ಷವರ್ಧನನ ಸಾಮ್ರಾಜ್ಯದ ಪರಿಸ್ಥಿತಿಯನ್ನು ನೋಡಿದರೆ, ಆ ಕಾಲದ ಉತ್ತರಭಾರತದಲ್ಲಿ ವೈದಿಕ ಧರ್ಮದ ಜೊತೆಗೆ ಬೌದ್ಧಧರ್ಮವಾದರೂ ಇನ್ನೂ ಪ್ರಭಾವಶಾಲಿಯಾಗಿದ್ದಿತು ಎಂದು ತಿಳಿಯಬರುತ್ತದೆ.[೪೪] ದಕ್ಷಿಣಭಾರತದಲ್ಲಿಯೂ ಕರ್ನಾಟಕದಲ್ಲಿಯೂ ಪರಿಸ್ಥಿತಿ ಬೇರೆಯಾಗಿದ್ದಿತು. ಇಲ್ಲಿ ಈ ಕಾಲದಲ್ಲಿ **ಮೂರು** ಧರ್ಮಗಳ ಸ್ಪರ್ಧೆ ನಡೆದಿತ್ತು:— **ವೈದಿಕ, ಜೈನ, ಬೌದ್ಧ. ಬೌದ್ಧಮತವು** ಈ ನಾಡಿನಲ್ಲಿ ಎಂದಿಗೂ ಉತ್ತರದಷ್ಟು ಪ್ರಭಾವಿಯಾಗಲಿಲ್ಲ. ಈಗಂತೂ ನಿಶ್ಚಿತ

(೪೩) V. pp. 320
(೪೪) Ibid pp. 358--59



CC-0. Jangamwadi Math Collection. Digitized by eGangotri

ವಾಗಿ ಅದರ ಅಳಿಗಾಲವು ಆರಂಭವಾಗಿತ್ತು.[೪೫] ಆದರೂ ಆ ಚೀನೀ ಸಂಚಾರಿ ಹೇಳುವಂತೆ, ಏಳನೆಯ ಶತಮಾನದಲ್ಲಿ ಬಾದಾಮಿ, ಬನವಾಸಿ ಮೊದಲಾದ ಪ್ರದೇಶಗಳಲ್ಲಿ ಬೌದ್ಧ ಮಠವಿಹಾರಗಳಿದ್ದು, ಅವುಗಳಲ್ಲಿ ವಾಸಿಸುವ ಬುದ್ಧಭಿಕ್ಷುಗಳ ಬುದ್ಧಮತವ್ಯಾಸಂಗದ ರೂಪದಿಂದ ಬುದ್ಧಧರ್ಮವು ಕ್ಷೀಣದಶೆಯಲ್ಲಿಯೂ ಬಳಕುತ್ತ ಬಾಳುವೆಯನ್ನು ಸಾಗಿಸಿತ್ತು ಎಂದು ತೋರುತ್ತದೆ.[೪೬]

ಬೌದ್ಧಧರ್ಮಕ್ಕಿಂತ ಪೂರ್ವದಿಂದಲೂ, ಬೌದ್ಧಧರ್ಮಕ್ಕಿಂತ ವಿಸ್ತೃತ ಪ್ರಮಾಣದಲ್ಲಿಯೂ ಜೈನಧರ್ಮವು ದಕ್ಷಿಣಭಾರತದಲ್ಲಿ ಮನೆಮಾಡಿಕೊಂಡಿತು. ತಮಿಳುನಾಡಿನಲ್ಲಿಯೂ ಕನ್ನಡನಾಡಿನಲ್ಲಿಯೂ ಆಶ್ರಯವನ್ನು ಪಡೆದ ಈ ಮತವು ಗಂಗ-ಕದಂಬ ಅರಸರ ಪೋಷಣೆಯಿಂದ ಕರ್ನಾಟಕದಲ್ಲಿ ಅಭ್ಯುದಯವನ್ನು ಹೊಂದಿತು.[೪೭] ಮತಪ್ರಸಾರಪರಾಯಣರಾದ ಜೈನರು ಕನ್ನಡ ಜನಾಂಗದೊಡನೆ ಸಮರಸರಾಗಿ ಕನ್ನಡ ನುಡಿಯಲ್ಲಿ ಉಪದೇಶ ಗ್ರಂಥರಚನೆಯನ್ನು ಮಾಡುತ್ತ ಹೆಚ್ಚು ಹೆಚ್ಚು ಪ್ರಾಶಸ್ತ್ಯವನ್ನು ಪಡೆದರು. ಚಾಲುಕ್ಯರು ಸರ್ವಧರ್ಮ ಸಮಭಾವನೆಯ ಉದಾತ್ತ ರಾಜನೀತಿ ತತ್ವವನ್ನನುಸರಿಸಿ ತಮ್ಮ ಸಾಮ್ರಾಜ್ಯದಲ್ಲಿ ಜೈನಮತಕ್ಕೆ ತಕ್ಕ ಮನ್ನಣೆಯನ್ನು ಸಲ್ಲಿಸಿ, ಜೈನ ಆಚಾರ್ಯರಿಗೂ ಜೈನ ಮಠ-ಮಂದಿರಗಳಿಗೂ ದಾನ ಮೊದಲಾದ ರೂಪದಿಂದ ಉದಾರ ಸಹಾಯವನ್ನು ನೀಡಿದುದರಿಂದ, ಈ ಕಾಲದ ಕರ್ನಾಟಕದಲ್ಲಿ ಜೈನಮತಕ್ಕೆ ಹೆಚ್ಚು ಅನುಕೂಲ ಪರಿಸ್ಥಿತಿಯೂ ಪ್ರೋತ್ಸಾಹವೂ ಉಂಟಾಯಿತು. ಅಯ್ಹೊಳೆಯ ಪ್ರಸಿದ್ಧ ಜೈನ ಶಾಸನಕವಿಯಾದ ರವಿಕೀರ್ತಿ ಇಮ್ಮಡಿ ಪುಲಿಕೇಶಿಯಿಂದ ಪೋಷಿತನಾಗಿದ್ದನು. ನಿರವದ್ಯ ಪಂಡಿತದೇವ ಎಂಬ ಜೈನ ಮುನಿ ವಿನಯಾದಿತ್ಯನಿಗೆ ಗುರುವಾಗಿದ್ದನು. ವಿಜಯಾದಿತ್ಯ, ಇಮ್ಮಡಿ ವಿಕ್ರಮಾದಿತ್ಯರು ಜೈನ ಬಸದಿ, ಆಚಾರ್ಯರಿಗೆ ದಾನಗಳನ್ನು ಕೊಟ್ಟರು.[೪೮] ವಿಜಯಾದಿತ್ಯನ ತಂಗಿಯಾದ ಕುಂಕುಮ ಮಹಾದೇವಿ ಲಕ್ಷ್ಮೇಶ್ವರದಲ್ಲಿ ಬಸದಿಯನ್ನು ಕಟ್ಟಿಸಿದಳು.[೪೯] ಈರೀತಿಯಾಗಿ ಜೈನಧರ್ಮವು ಈ ಕಾಲದಲ್ಲಿ ಜನಮಾನ್ಯತೆ ರಾಜಮಾನ್ಯತೆಗಳನ್ನು ಪಡೆಯುತ್ತ ನಡೆದಿತ್ತು.

ಬೌದ್ಧ, ಜೈನ ಈ ಎರಡೂ ಮತಗಳನ್ನು ಮಿಕ್ಕಿ ಮೀರಿ, ವೈದಿಕ ಧರ್ಮವು ಜನತೆಯಲ್ಲಿ ಪ್ರಭಾವಶಾಲಿಯಾಗಿದ್ದಿತು.[೫೦] ಈ ಕಾಲದ ಕರ್ನಾಟಕದ ಬಹುಜನಸಮಾಜವು ವೈದಿಕಮತಾನುಯಾಯಿಯೆ ಆಗಿದ್ದಿತು. ಭರತಭೂಮಿಯಲ್ಲಿಯ ಪಾಖಂಡಮತಗಳನ್ನು ಪ್ರತಿಭಟಿಸಿ ವೈದಿಕ ಧರ್ಮವನ್ನು ಪುನರುದ್ಧಾರಗೊಳಿಸಲು ನಿರ್ಮಾಣವಾದ ಆಂದೋಲನವು ಯಶಸ್ವಿಯಾಗಿ ಅದರ ಪರಿಣಾಮಗಳು ಕರ್ನಾಟಕದಲ್ಲಿಯೂ ಬಲವಾಗಿ ಗೋಚರವಾದುವು. ಚಾಲುಕ್ಯರು ಮೊದಲಿನಿಂದಲೂ ದೃಢವಾದ ವೇದಮಾರ್ಗಾವಲಂಬಿಗಳಾಗಿದ್ದರು. ಮೊದಲಿನ ಕೆಲವು ಅರಸರಂತೂ ಕರ್ಮಪ್ರಧಾನವಾದ ವೇದಮಾರ್ಗವನ್ನು ಆಳವಾಗಿ ಅನುಸರಿಸಿ ವಿಜೃಂಭಣೆಯಿಂದ ಯಜ್ಞಯಾಗಾದಿಗಳನ್ನು ನೆರವೇರಿಸಿದರು. ಪ್ರಥಮ ಪುಲಿಕೇಶಿ ಅಶ್ವಮೇಧವನ್ನು ಮಾಡಿದನು. ಇದಲ್ಲದೆ ಇವನೂ ಇವನ ಮಗನಾದ ಕೀರ್ತಿವರ್ಮನೂ ಅಗ್ನಿಷ್ಟೋಮ, ವಾಜಪೇಯ, ಬಹುಸುವರ್ಣ, ಪೌಂಡರೀಕ ಮೊದಲಾದ ಯಜ್ಞಗಳನ್ನು ಸಾಂಗಗೊಳಿಸಿದರು. ಚಾಲುಕ್ಯ ಅರಸರು ಅನೇಕ ಶ್ರೋತ್ರಿಯರಿಗೆ, ಯಾಜ್ಞಿಕರಿಗೆ ದಾನಗಳನ್ನು ಕೊಟ್ಟರು. ಮೀಮಾಂಸಕರ ಕರ್ಮಪ್ರಧಾನ ವೈದಿಕ ಮತದಂತೆ ಉಪನಿಷತ್ತುಗಳ ಜ್ಞಾನಪ್ರಧಾನ ವೇದಾಂತ ಮತವೂ, ಪೌರಾಣಿಕವಾದ ಭಕ್ತಿಪ್ರಧಾನ ಅನೇಕ ದೇವತೋಪಾಸನೆಯೂ ಈ ಕಾಲದಲ್ಲಿ ರೂಢವಾಗಿತ್ತು.[೫೧] ವೇದಾಂತಮತವೂ ಸಂನ್ಯಾಸಮಾರ್ಗವೂ ಶಂಕರಾಚಾರ್ಯರಿಂದ ಪ್ರೋತ್ಸಾಹ ಹೊಂದಿತು.[೫೧ಅ] ಬ್ರಹ್ಮ, ವಿಷ್ಣು, ಶಂಕರ ಈ ತ್ರಿಮೂರ್ತಿಗಳ ಹಾಗೂ ಕಾರ್ತಿಕೇಯ ಮೊದಲಾದ ಇವರ ಪರಿವಾರದೇವತೆಗಳ ಆರಾಧನೆ ಬಹುಜನರ ಹೃದಯಗಳನ್ನು ಆಕರ್ಷಿಸಿತ್ತು. ಇದರಲ್ಲಿಯೂ ಶಿವಭಕ್ತಿ ಹೆಚ್ಚು ಪ್ರಸಾರವನ್ನು ಹೊಂದಿತ್ತು. ಈ ದೇವತೆಗಳನ್ನು ಕುರಿತು ಅನೇಕ ದೇವಾಲಯಗಳು ನಿರ್ಮಿಸಲಾದುವು.[೫೨] ಸ್ವತಃ ಚಾಲುಕ್ಯ ಅರಸರಲ್ಲಿ ಮೊದಮೊದಲು ವಿಷ್ಣುಭಕ್ತಿ ಪ್ರಬಲವಾಗಿದ್ದು, ಬಳಿಕ ಶಿವಭಕ್ತಿ ಬಲಿಯಿತು ಎಂಬುದು ಮಂಗಳೀಶನು ಬಾದಾಮಿಯಲ್ಲಿ

---

(೪೫) Bh P. 82

(೪೬) I. A. VII P. 9.

(೪೭) म. भा. 1. P. 249

(೪೮) Bh. P. 82

(೪೯) ಕ. ಸಾ. ಪು. ೩೦೯

(೫೦) Bh. pp. 82—83

(೫೧) Ibid & ಕ. ಸಾ. ಪು. ೩೦೮—೧೦

(೫೧ ಅ) ಕ. ಸಾ. ೩೧೩. ಭಾಂಡಾರಕರರ ಅಭಿಪ್ರಾಯದ ಸಾರವನ್ನು ಉದಾಹರಿಸಿದುದು.

(೫೨) ಕ. ಸಾ. ೩೧೧-೧೪.

CC-0. Jangamwadi Math Collection. Digitized by eGangotri

ಕೊರೆಸಿದ ವಿಷ್ಣುಗವಿಗಳಿಂದಲೂ ಮುಂದೆ ವಿಜಯಾದಿತ್ಯ ಇಮ್ಮಡಿ ವಿಕ್ರಮಾದಿತ್ಯ ಮೊದಲಾದವರು **ಅಯ್ಹೊಳೆ**, ಪಟ್ಟದಕಲ್ ಮೊದಲಾದ ಸ್ಥಳಗಳಲ್ಲಿ ಹೆಚ್ಚಾಗಿ ಕಟ್ಟಿಸಿದ ದೇವಾಲಯಗಳಿಂದಲೂ ಪ್ರತೀತವಾಗುತ್ತದೆ. ಈ ಕಾಲದ ಈ ವೈದಿಕಮತ ಪ್ರಭಾವದ ಪ್ರತಿಬಿಂಬವು ವೈದಿಕೇತರ ಕಲ್ಮನೆಗಳ ಜೊತೆಗೆ ಸ್ಪರ್ಧಿಸುತ್ತ ನಿಂತಂತಿರುವ ಅಜಂತೆಯ ವೈದಿಕ ಕಲ್ಮನೆಗಳಲ್ಲಿಯ ಶಿಲ್ಪಕಲೆಯಲ್ಲಿಯೂ ದೃಗ್ಗೋಚರವಾಗುತ್ತದೆ.

ಇಂತು ವೈದಿಕ-ವೈದಿಕೇತರ ಮತಗಳಲ್ಲಿ ತೀಕ್ಷ್ಣವಾದ ಸಂಘರ್ಷವು ಉಂಟಾದ ಈ ಕಾಲದಲ್ಲಿ ಭಿನ್ನಧರ್ಮೀಯ ಪಂಡಿತರಲ್ಲಿಯೂ ಅಭಿಮಾನಿಗಳಲ್ಲಿಯೂ ಸ್ವಮತ ವಿಜಯಾಭಿಲಾಷೆಯಿಂದ ತುಮುಲವಾದ ಅನೇಕ ವಿವಾದಗಳೂ ಮನೋರಂಜಕ ಕಲಹಗಳೂ ಅಲ್ಲಲ್ಲಿ ನಡೆಯುತ್ತಿದ್ದುವು.[೫೩] ಹೀಗೆ ಮತಮತಾಂತರಗಳ ಕಾದಾಟದ ಕಣವೂ ಭಿನ್ನ ಧರ್ಮಗಳ ಸ್ಪರ್ಧಾಭೂಮಿಯೂ ಆದ ಈ ಕಾಲದ ಕರ್ನಾಟಕದ ಧಾರ್ಮಿಕ ವಾತಾವರಣವು ಒಟ್ಟಿನ ಮೇಲೆ ಶಾಂತತಾಪೂರ್ಣವೂ ಸೌಮನಸ್ಯ-ಸೌಹಾರ್ದಗಳಿಂದ ಕೂಡಿದುದೂ ಆಗಿತ್ತು ಎಂಬುದು ಆಶ್ಚರ್ಯಾವಹವಾಗಿದೆ. ಹೀಗಿರಲು ಕಾರಣವೇನೆಂದರೆ, ಈ ಧರ್ಮಗಳ ಯುದ್ಧವು ಉದಾರ ಭಾವನೆಯ ಧರ್ಮಯುದ್ಧವಾಗಿತ್ತಲ್ಲದೆ, ಅದು ಕ್ಷುದ್ರ ಮನೋವೃತ್ತಿಯ ಹೇಯ ಸ್ಪರ್ಧೆಯಾಗಿದ್ದಿಲ್ಲ. ಇದೆಲ್ಲಕ್ಕೂ ಮಿಗಿಲಾಗಿ, ಈ ಕಾಲದ ಅರಸರು ತಮ್ಮ ವೈಯಕ್ತಿಕ ಧರ್ಮಮತಭಾವನೆಗಳು ಏನೆ ಇರಲಿ, **ರಾಜನಿಗೆ ಧರ್ಮವಿಲ್ಲ, ಅಥವಾ ರಾಜನಿಗೆ ಸರ್ವಧರ್ಮಗಳು ಸಮಾನ** ಎಂಬ ಉದಾತ್ತತತ್ವವನ್ನು ಪ್ರತ್ಯಕ್ಷವಾಗಿ ಆಚರಣೆಯಲ್ಲಿ ತಂದು ಸರ್ವಧರ್ಮಮತಗಳಲ್ಲಿಯೂ ಸಮಬುದ್ಧಿ ಸಹಾನುಭೂತಿಗಳನ್ನು ತೋರಿ ಅವುಗಳಿಗೆ ತಕ್ಕುದಾಗಿ ಅವಕಾಶ ಆಶ್ರಯಗಳನ್ನು ಕಲ್ಪಿಸಿಕೊಡುತ್ತಿದ್ದರು. ಆದುದರಿಂದ ಈ ಧರ್ಮವಿಭಿನ್ನತೆ ವಿಕೋಪಕ್ಕೆ ಹೋಗಿ ಧರ್ಮವಿರೋಧವಾಗಿ ಪರಿಣಮಿಸದೆ ಧರ್ಮವೈವಿಧ್ಯವಾಗಿ ಕಂಗೊಳಿಸಿತು.

### ಬೌದ್ಧಿಕ ಜೀವನ—ಭಾಷೆ, ಸಾಹಿತ್ಯ, ಶಿಕ್ಷಣ

ಇನ್ನು ಜನಾಂಗವನ್ನು ಸಂಸ್ಕಾರಗೊಳಿಸುವ ರಾಷ್ಟ್ರದ ಎರಡನೆಯ ಮಹತ್ವದ ಅಂಗವಾದ ಬೌದ್ಧಿಕ ಜೀವನವು ಈ ಕಾಲದಲ್ಲಿ ಹೇಗೆ ಇದ್ದಿತು ಎಂಬುದನ್ನು ಪರೀಕ್ಷಿಸುವಾ. ಹೀಗೆ ಮಾಡುವಾಗ ಬೌದ್ಧಿಕ ಜೀವನದ ಮೂರು ಕ್ಷೇತ್ರಗಳಾದ ಭಾಷೆ, ಸಾಹಿತ್ಯ, ವಿದ್ಯೆ ಅಥವಾ ಶಿಕ್ಷಣ ಈ ಮೂರನ್ನು ಕುರಿತು ಯಥಾಕ್ರಮವಾಗಿ ವಿವೇಚಿಸತಕ್ಕುದಾಗಿದೆ.

ಭಾಷೆ:—ಭಾರತೀಯ ಭಾಷಾಜೀವನ ಪ್ರವಾಹದಲ್ಲಿ **ಸಂಸ್ಕೃತದ ಯುಗವೂ ಪ್ರಾಕೃತದ ಯುಗವೂ** ಅಳಿದು **ದೇಶಭಾಷೆಗಳ ಯುಗವು** ಈ ಕಾಲಖಂಡಕ್ಕೆ ಬರುವಷ್ಟರಲ್ಲಿ ಆರಂಭವಾಗಿದೆ. ಎಲ್ಲೆಡೆಯಲ್ಲಿ ದೇಶಭಾಷೆಗಳೂ ದಕ್ಷಿಣದಲ್ಲಿ ದ್ರಾವಿಡ ಕನ್ನಡ ಮೊದಲಾದ ದ್ರಾವಿಡ ಭಾಷೆಗಳೂ ಮುಂದಡಿಯನ್ನು ಇಡುತ್ತಲಿವೆ. ಕರ್ನಾಟಕದಲ್ಲಿ ಜನಸಾಮಾನ್ಯರು ಆಡುವ ಭಾಷೆ ಪ್ರಾಮುಖ್ಯವಾಗಿ **ಕನ್ನಡವೆ** ಆಗಿದ್ದಿತು ಎಂದು ಧಾರಾಳವಾಗಿ ಹೇಳಬಹುದಾದರೂ ಧರ್ಮ, ರಾಜಕಾರಣ, ಶಿಕ್ಷಣ ಮುಂತಾದ ವ್ಯವಹಾರಗಳಲ್ಲಿ ಆರ್ಯಸಂಸ್ಕೃತಿಯ ದೃಢಮೂಲವಾದ ವರ್ಚಸ್ಸಿನ ಮೂಲಕ, ಸಂಸ್ಕೃತಕ್ಕೆ ಪ್ರಾಶಸ್ತ್ಯವೂ ಪ್ರಾಧಾನ್ಯವೂ ದೊರೆಯುತ್ತಲೆ ಇತ್ತು. ಭರತಖಂಡದಲ್ಲಿ ನಾಲ್ಕು-ಐದನೆಯ ಶತಮಾನದಲ್ಲಿ ಪ್ರಾದುರ್ಭವಿಸಿದ **ಸಂಸ್ಕೃತವಿದ್ಯೆಯ** ಪುನರುಜ್ಜೀವನದ ಆಂದೋಲನದ ಅಲೆಗಳು ದೇಶದಲ್ಲಿ ಎಲ್ಲೆಡೆಯಲ್ಲಿಯೂ ಹಬ್ಬಿ, ಅದರ ಪರಿಣಾಮಗಳು ಕರ್ನಾಟಕದಲ್ಲಿಯೂ ದೃಗ್ಗೋಚರವಾದುವು.[೫೪] **ಎಲ್ಲ ಉಚ್ಚ** ಕಾರ್ಯಕ್ಷೇತ್ರಗಳಲ್ಲಿ ಸಂಸ್ಕೃತದ ಗೌರವವು ಬೆಳೆದು ದೇಶ್ಯಭಾಷೆಗೆ (ಕನ್ನಡಕ್ಕೆ) ಕೆಳಗಿನ ಸ್ಥಾನವು ಪ್ರಾಪ್ತವಾಯಿತು ಈ ಕಾಲದಲ್ಲಿ **ಉಚ್ಚ ಅಧ್ಯಯನವೆಲ್ಲವೂ ಸಂಸ್ಕೃತವಿದ್ಯೆಯದಾಗಿತ್ತು.** ಸಂಸ್ಕೃತ ವಿದ್ಯಾಲಯಗಳು ಇದ್ದುವು.[೫೫] **ಸಂಸ್ಕೃತದಲ್ಲಿ ಗ್ರಂಥರಚನೆಯಾಗುತ್ತ ಸಂಸ್ಕೃತ** ಸಾಹಿತ್ಯವು ಬೆಳೆಯುತಲಿತ್ತು.

ಹೀಗಿದ್ದರೂ ಕನ್ನಡ ಭಾಷೆ ಸಂಸ್ಕೃತದೊಡನೆ **ಹೋರಾಡುತ್ತ**, ಸಂಸ್ಕೃತದ ಮೇಲೆಯೂ ತನ್ನ ಪರಿಣಾಮವನ್ನು ಮಾಡಲೆಳಸುತ್ತ ಸ್ವಸಾಮರ್ಥ್ಯವನ್ನು ಹೆಚ್ಚಿಸಲು ಸಾಹಸ ಪಡುತ್ತಿತ್ತು ಎಂದು ಕಾಣುತ್ತದೆ. ಸಂಸ್ಕೃತದ ಅರಸೊತ್ತಿಗೆಯಲ್ಲಿಯೂ **ಜೈನರ** ಹಾಗೂ ಇತರ **ಕೆಲ ಅಭಿಮಾನಶಾಲಿಗಳ** ಸಹಾಯವನ್ನು ವಿಶೇಷವಾಗಿ ಪಡೆದು ಅವರ ಆಧಾರದಿಂದ ಕನ್ನಡ ಭಾಷೆ ಸಾಹಿತ್ಯದ ಸಂಸ್ಕಾರಗಳನ್ನು ಪಡೆಯುತ್ತಲಿತ್ತು. ಮುಂದೆ **ನೃಪತುಂಗದೇವನ** ಅಲಂಕಾರ ಗ್ರಂಥಕ್ಕೆ ಲಕ್ಷ್ಯರೂಪವಾಗಿ ಪರಿಣಮಿಸಿದ ಅನೇಕ ಸಾಹಿತ್ಯಗ್ರಂಥಗಳ ಸಾಮಗ್ರಿ ಇದೇ ಕಾಲದಲ್ಲಿ

(೫೩) Bh. ೬೨ & I. A. VII. P. 91

(೫೪) प्रा. शि. P. 198

(೫೫) P. K. 157

CC-0. Jangamwadi Math Collection. Digitized by eGangotri

ಬಹುಭಾಗ ಸಿದ್ಧವಾಯಿತು ಎಂದು ಊಹಿಸಬಹುದಾಗಿದೆ. ಈ ದೃಷ್ಟಿಯಿಂದ ಈ ಕಾಲವು ಕನ್ನಡದ ಅಭ್ಯುದಯ ಯುಗವು (The age of Kannada Fermentation) ಎಂದು ಹೇಳಬಹುದು.

**ಸಾಹಿತ್ಯ:**- ಸಾಹಿತ್ಯವನ್ನು ಕುರಿತು ವಿಚಾರಿಸುವಾಗ ಈ ಕಾಲದ ಸಂಸ್ಕೃತ, ಕನ್ನಡ ಸಾಹಿತ್ಯಾಭಿವೃದ್ಧಿಯನ್ನು ಸ್ಥೂಲವಾಗಿ ಇಲ್ಲಿ ಲಕ್ಷಿಸುವುದು ಅಗತ್ಯವಾಗಿದೆ.

**ಸಂಸ್ಕೃತ ಸಾಹಿತ್ಯ**—ಚಾಲುಕ್ಯರ ಅನೇಕ ಶಾಸನಗಳು ಸಂಸ್ಕೃತದಲ್ಲಿ ಬರೆಯಲಾಗಿವೆ. ಅವುಗಳಲ್ಲಿ ಹಲವು ಗುಪ್ತಶಾಸನಗಳ ಮಾದರಿಯಲ್ಲಿ ಅಲಂಕಾರಪ್ರಚುರವಾದ ಗದ್ಯ-ಪದ್ಯ ಶೈಲಿಯಲ್ಲಿ ರಚಿತವಾದುವಾಗಿವೆ. ಇಂತಹ ಶಾಸನಗಳು ಹೆಚ್ಚಾಗಿ ಪ್ರಶಸ್ತಿಸ್ವರೂಪದವಾಗಿದ್ದು, ಅವುಗಳ ರೀತಿ ಕಾಲಿದಾಸ, ಬಾಣ ಮೊದಲಾದ ಕವಿಗಳ ಅಭಿಜಾತ ಬಂಧವನ್ನು (Classical form) ಹೋಲುತ್ತದೆ. ಅಯ್ಹೊಳೆಯಲ್ಲಿ ಕೊರೆದ ರವಿಕೀರ್ತಿಯ ಸುವಿಖ್ಯಾತ ಶಾಸನವು ಈ ರೀತಿಗೆ ಬಲವಾದ ಉದಾಹರಣೆಯಾಗಿದೆ.

ಈ ಕಾಲದಲ್ಲಿ ಜೈನರೂ ಬ್ರಾಹ್ಮಣರೂ ಸಾಹಿತ್ಯ, ವ್ಯಾಕರಣ, ಧರ್ಮ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ಶಾಸ್ತ್ರೀಯ ಗ್ರಂಥರಚನೆಯನ್ನು ಮಾಡಿದರು. ವಿಖ್ಯಾತ ಸಂಸ್ಕೃತ ಕವಿಯಾದ ಭಾರವಿ ಚಾಲುಕ್ಯರ ಮಾಂಡಲಿಕರಾದ ಗಂಗರ ದುರ್ವಿನೀತ ರಾಜನ ಆಸ್ಥಾನದಲ್ಲಿ ಇದ್ದನು.[೫೬] ಸ್ವತಃ ದುರ್ವಿನೀತನು ಪಾಣಿನಿಯ ವ್ಯಾಕರಣಕ್ಕೆ ಶಬ್ದಾವತಾರ ಎಂಬ ಟೀಕೆಯನ್ನೂ, ಬೃಹತ್ಕಥೆಯ ಸಂಸ್ಕೃತ ಅನುವಾದವನ್ನೂ ಕಿರಾತಾರ್ಜುನೀಯದ ೧೫ನೆಯ ಸರ್ಗಕ್ಕೆ ಟೀಕೆಯನ್ನೂ ಬರೆದನೆಂದು ಹೇಳುವರು.[೫೭] ಸುಪ್ರಸಿದ್ಧ ಕಾವ್ಯಾದರ್ಶಕರ್ತನಾದ ದಂಡಿ ಯಾವ ನಾಡಿನವನೆಂದು ಸ್ಥಲನಿಷ್ಕರ್ಷೆಯಾಗಿಲ್ಲವಾದರೂ ಆತನು ದಾಕ್ಷಿಣಾತ್ಯನೂ ಇದೇ ಕಾಲದವನೂ (೭ನೆಯ ಶ.) ಎಂದು ಪಂಡಿತರು ಅಭಿಪ್ರಾಯಪಡುತಾರೆ. ಆತನು ಕರ್ನಾಟಕದಲ್ಲಿ ವಾಸವಾಗಿದ್ದನು ಎಂದೂಹಿಸಲಿಕ್ಕೆ ಕೆಲವು ಆಧಾರಗಳೂ ಸಿಕ್ಕುವವು.[೫೮] ರತ್ನಕರಂಡ ಗ್ರಂಥದ ಕರ್ತರಾದ ಸಮಂತಭದ್ರರು, ಶಬ್ದಾವತಾರ, ಜೈನೇಂದ್ರ ಮೊದಲಾದ ಗ್ರಂಥಗಳನ್ನು ರಚಿಸಿದವರಾದ ಪೂಜ್ಯಪಾದರು, ಈ ಇಬ್ಬರು ಪ್ರಸಿದ್ಧ ಜೈನಪಂಡಿತರು ಈ ಕಾಲದಲ್ಲಿ ಇದ್ದರಾಗಿ ತೋರುತ್ತದೆ.[೫೯] ರವಿಷೇಣಾಚಾರ್ಯರು ಏಳನೆಯ ಶತಮಾನದಲ್ಲಿ ಮಹಾರಾಮಾಯಣವನ್ನು ರಚಿಸಿದರು. ಜೈನ ತತ್ವಜ್ಞಾನಿಯೂ ಅಷ್ಟಶತಿಯ ಜನಕರೂ ಆದ ಅಕಲಂಕರು ಏತತ್ಕಾಲೀನರೆಂದು ತೋರುತ್ತದೆ.[೬೦]

ಈ ಕಾಲಕ್ಕೆ ಸಂಬಂಧಪಟ್ಟವಳಾದ ಒಬ್ಬ ನಾಮಾಂಕಿತ ಕವಯಿತ್ರಿಯ ನಿರ್ದೇಶವನ್ನು ಇಲ್ಲಿ ಮಾಡುವುದು ಪ್ರಸ್ತುತವಾಗಿದೆ. ಈ ವಿದುಷೀಮಣಿ ಯಾವ ವಿಶೇಷ ಸಾಹಿತ್ಯಸೇವೆಯನ್ನು ಮಾಡಿದಳು ಎಂಬುದು ನಮ್ಮ ದುರ್ಭಾಗ್ಯದಿಂದ ಅಜ್ಞಾತವೆ ಆಗಿದ್ದರೂ, ಈಚೆಯ ಹಲವು ಗ್ರಂಥಕಾರರು ಬಹು ಗೌರವಪುರಸ್ಸರವಾಗಿ ಈಕೆಯನ್ನು ಉಲ್ಲೇಖಿಸುವುದರಿಂದಲೂ ಈಕೆಯನ್ನು ಕುರಿತು ಪರಂಪರಾಗತವಾಗಿ ಬಂದ ಕೆಲವು ಆಖ್ಯಾಯಿಕಾ ಪದ್ಯಗಳಿಂದಲೂ ಈಕೆಯ ಅಸ್ತಿತ್ವ ಮತ್ತು ಸಾಹಿತ್ಯಸೇವೆ ಇವುಗಳ ಬಗೆಗೆ ಕೆಲವು ಸಾಮಾನ್ಯ ವಿಚಾರಗಳು ವಿದಿತವಾಗುವುವು. ಈಕೆಯ ಹೆಸರು ವಿಜಯಾ ಅಥವಾ ವಿಜಯಕ್ಕ. ವಿದ್ಯಾಪ್ರೌಢಿಯ ಸೂಚಕವಾಗಿ ಈಕೆಗೆ ಸರಸ್ವತೀ ಎಂಬ ಗೌರವದ ಅಭಿಧಾನವು ಪ್ರಾಪ್ತವಾಗಿತ್ತು.

सरस्वतीव कार्णाटी विजयांका जयत्यसौ ।
या वैदर्भगिरां वासः कालिदासादनन्तरम् ॥

ಎಂದು ರಾಜಶೇಖರನು[೬೧] ಕಾಲಿದಾಸನ ತರುವಾಯ ಎರಡನೆಯ ಸ್ಥಾನವನ್ನು ಈಕೆಗೆ ಕೊಟ್ಟುದನ್ನು ನೋಡಿದರೆ, ಈಕೆಯ ಕಾವ್ಯಪ್ರತಿಭೆ ಎಷ್ಟು ಉಚ್ಚತರಗತಿಯದಾಗಿರಬೇಕು ಎಂಬುದು ಸೂಚಿತವಾಗುತ್ತದೆ.

एकोऽभून्नलिनात्ततश्च पुलिनाद्वल्मीकतश्चापरः ।
ते सर्वे कवयो भवन्ति गुरवस्तेभ्यो नमस्कुर्महे ॥
अर्वाञ्चो यदि गद्यपद्यरचनैश्चेतश्चमत्कुर्वते ।
तेषां मूर्ध्नि ददामि वामचरणं कर्णाटराजप्रिया ॥

ಎಂಬ ಈಕೆಯದೆಂದು ಹೇಳಲ್ಪಡುವ ಅಭಿಮಾನೋಕ್ತಿಯಿಂದಲೂ

नीलोत्पलदलश्यामां विज्जकां मामजानता ।
वृथैव दण्डिना प्रोक्तं सर्वशुक्ला सरस्वती ॥

---

(೫೬) M. G. Vol. II, Part II, p. 626.
(೫೭) Ibid pp. 626 & 27
(೫೮) D. K. Intr. pp. lx—lxii
(೫೯) M. G. Vol II, part. I, p. 406
(೬೦) Ibid p. 407
(೬೧) ೯ನೆಯ ಶತಮಾನ

CC-0. Jangamwadi Math Collection. Digitized by eGangotri

ಎಂಬ. ಈಕೆಯ ಹೆಸರಿನಿಂದ ವಿಶ್ರುತವಾಗಿರುವ ವಿನೋದೋಕ್ತಿಯಿಂದಲೂ ಈಕೆಯ ಉನ್ನತತರವಾದ ಕಾವ್ಯಜೀವನದ ಬಗೆಗೆ ಹೆಚ್ಚು ಕುತೂಹಲವು ಉಂಟಾಗುತ್ತದೆ. ಮೇಲಿನ ಪದ್ಯಗಳಲ್ಲಿ ಉಕ್ತವಾಗಿರುವ **ಕಾರ್ಣಾಟೀ, ಕರ್ಣಾಟ ರಾಜಪ್ರಿಯಾ** ಎಂಬ ಕರ್ಣಾಟಕದ ಅಭಿಮಾನದ್ಯೋತಕ ವಿಶೇಷಣಗಳಿಂದ ಈಕೆ **ಕನ್ನಡದಲ್ಲಿಯೂ ಸಾಹಿತ್ಯಸೇವೆ** ಮಾಡಿರಬಹುದೇನು ಎಂಬ ಶಂಕೆ ಒಂದು ಕ್ಷಣವಾದರೂ ತಲೆಯೆತ್ತುವುದು. ಈಕೆ ಇಮ್ಮಡಿ **ಪುಲಿಕೇಶಿಯ** ಮಗನಾದ **ಚಂದ್ರಾದಿತ್ಯನ ಅರ್ಧಾಂಗಿಯಾಗಿದ್ದು,** ಕ್ರಿ. ಶ ೬೫೦ರಲ್ಲಿ ಬಾಳಿದ್ದಳು ಎಂದು ಊಹಿಸಬಹುದಾಗಿದೆ. [೬೧]

**ಕನ್ನಡ ಸಾಹಿತ್ಯ**—ಈ ಕಾಲದ ಕನ್ನಡ ಸಾಹಿತ್ಯದ ಪರಿಮಿತಿಯನ್ನು ತೃಪ್ತಿಕರವಾಗಿ ನಿರ್ಣಯಿಸುವ ಪ್ರತ್ಯಕ್ಷ ಪ್ರಮಾಣಗಳು ದೊರೆವುದಿಲ್ಲವಾದರೂ, ಅದರ ನಿಶ್ಚಿತವಾದ ಬೆಳವಣಿಗೆಯ ಕುರುಹುಗಳು ಮಾತ್ರ ಸಾಕಷ್ಟು ಸಿಕ್ಕಿವೆ. ಕನ್ನಡ ಸಾಹಿತ್ಯವು ಈ ಕಾಲದಲ್ಲಿ **ಮಂದಮಂದವಾದರೂ** ದೃಢವಾದ **ಪ್ರಗತಿಪಥವನ್ನು** ಆಕ್ರಮಿಸಿತು. ಶಾಸನಗಳಲ್ಲಿ ಸಂಸ್ಕೃತವೆ ಹೆಚ್ಚಾಗಿ ಉಪಯೋಗಿಸಲಾಗುತ್ತಿದ್ದರೂ, ಮುಂದುಮುಂದಿನ ಕಾಲದಲ್ಲಿ **ಎಷ್ಟೋ ಕನ್ನಡ** ಶಾಸನಗಳೂ ದೊರೆಯುತ್ತವೆ. **ಬಾದಾಮಿಯ ವಿಷ್ಣುಗವಿಯಲ್ಲಿಯ ಮಂಗಳೀಶನ ಶಾಸನವೆ ಈ ಕಾಲದ ಮೊದಲನೆಯ ಕನ್ನಡ ಶಾಸನವೆಂದು** ಹೇಳಬಹುದು. [೬೨] ಮುಂದೆ ಇಮ್ಮಡಿ ಪುಲಿಕೇಶಿ, ವಿಕ್ರಮಾದಿತ್ಯ ಮೊದಲಾದವರ ಕಾಲದ ಅನೇಕ ಕನ್ನಡ ಶಾಸನಗಳು ಉಪಲಬ್ಧವಾಗಿರುವುವು. **ಶಾಸನಕ್ಕಾಗಿ ಕನ್ನಡವನ್ನು ಉಪಯೋಗಿಸುವ** ರೂಢಿ ಈ ಕಾಲದಲ್ಲಿಯೆ ಆರಂಭವಾಗಿ, ಮುಂದಿನ ಆಳಿಕೆಗಳಲ್ಲಿ ಈ ಶಾಸನಸಾಹಿತ್ಯವು ಹೆಚ್ಚುಹೆಚ್ಚು ವಿಕಾಸಗೊಂಡು, **ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ** ಕಾಲದಲ್ಲಿ ಅದಕ್ಕೆ ಬಂಧುರವಾದ ಪರಿಣತ ಸ್ವರೂಪವು ಪ್ರಾಪ್ತವಾಯಿತು. ಕನ್ನಡದ ಆದ್ಯಕವಿಗಳಲ್ಲಿ ಎಣಿಸಲ್ಪಡುವ **ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ** ಇವರುಗಳು ಯಾವ ಗ್ರಂಥರಚನೆಯನ್ನು ಮಾಡಿದರು ಎಂಬುದು ತಿಳಿದಿಲ್ಲವಾದರೂ ಇವರು ಈ ಕಾಲದ ಕನ್ನಡ ಕವಿಗಳೆಂದು ಊಹಿಸಲು ಅವಕಾಶವಿದೆ. [೬೩] **ಶ್ರೀವರ್ಧದೇವನು ಸು. ೬೫೦ರಲ್ಲಿ ೯೬೦೦೦ಪದ್ಯಗಳುಳ್ಳ ಚೂಡಾಮಣಿ** ಎಂಬ ಗ್ರಂಥವನ್ನು ಬರೆದು **ಕನ್ನಡವು ಶಾಸ್ತ್ರೀಯ ವಿಷಯಗಳನ್ನು ವಿವೇಚಿಸಲು ಸಮರ್ಥವಾದ ಭಾಷೆಯಾಗಿದೆ ಎಂಬುದನ್ನು ತೋರಿಸಿಕೊಟ್ಟನು.** [೬೪] ಇದೆ ಸುಮಾರಿಗೆ **ಶ್ಯಾಮಕುಂದಾಚಾರ್ಯರು ಪ್ರಾಭೃತ** ಎಂಬ ಕನ್ನಡ ಗ್ರಂಥವನ್ನು ಬರೆದರು. [೬೫] ಇದಲ್ಲದೆ **ನೃಪತುಂಗದೇವನು** ಹೇಳುವ **"ಅಗಣಿತಗುಣ ಗದ್ಯಪದ್ಯ ಸಮ್ಮಿಶ್ರಿತ" ಕನ್ನಡ ಸಾರಸ್ವತಸಮೂಹದಲ್ಲಿಯ** ಹಲವು ಗ್ರಂಥಗಳೂ ಅವುಗಳ ಕರ್ತೃಗಳೂ ಈ ಕಾಲದಲ್ಲಿ ಉದಿಸಿದವರಾಗಿರಬೇಕು. ಬಳಿಕ ನೃಪತುಂಗದೇವನು ಕೊಡುವ ಗ್ರಂಥಕಾರರ ನಾಮಾವಳಿ ಅಲ್ಪವಾಗಿದ್ದು, ದುರ್ದೈವದಿಂದ ಅವರ ಕನ್ನಡ ಸಾಹಿತ್ಯಸೇವೆಯ ಬಗೆಗೆ ವಿಶೇಷ ಸಂಗತಿಗಳು ಅರಿಕೆಯಾಗುವುದಿಲ್ಲ. ಪ್ರಾಯಃ ಈ ಕಾಲದಲ್ಲಿ ಉದಿಸಿರಬಹುದಾದ **ನೃಪತುಂಗದೇವನಿರ್ದಿಷ್ಟ** ಗದ್ಯಗ್ರಂಥಕಾರರು ಯಾರೆಂದರೆ, **ವಿಮಲ, ಉದಯ, ನಾಗಾರ್ಜುನ ಜಯಬಂಧು, ದುರ್ವಿನೀತ** — ಇವರು. ಇವರಲ್ಲಿಯ ದುರ್ವಿನೀತನು ಹಿಂದೆ ಸಂಸ್ಕೃತ ಗ್ರಂಥಕಾರರಲ್ಲಿ ಉಕ್ತನಾದ ದುರ್ವಿನೀತನೆ ಆಗಿರಬೇಕು ಎಂದು ದೃಢವಾಗಿ ಊಹಿಸಲಾಗಿದೆ. ಪ್ರಾಯಃ ಈ ಕಾಲದಲ್ಲಿ ಬಾಳಿರಬಹುದಾದ, ಕೆಳಗೆ ಕಾಣಿಸಿದ ಕವಿಗಳು **ನೃಪತುಂಗದೇವನಿಂದ ಉಕ್ತ**ರಾದ ಪದ್ಯಗ್ರಂಥಕಾರರಾಗಿರುವರು: **ಶ್ರೀವಿಜಯ, ಕವೀಶ್ವರ, ಪಂಡಿತ, ಚಂದ್ರ, ಲೋಕಪಾಲ.** [೬೬]

**ಶಿಕ್ಷಣ:**—ಇನ್ನು ಬೌದ್ಧಿಕಜೀವನದ ಮೂರನೆಯ ಅಂಗವಾಗಿ ಜನಜೀವನವನ್ನು ಉನ್ನತಗೊಳಿಸುವ ಪ್ರಮುಖ ಸಾಧನವಾದಶಿಕ್ಷಣದ ಪರಿಸ್ಥಿತಿ ಈ ಕಾಲದಲ್ಲಿ ಹೇಗೆ ಇದ್ದಿತು ಎಂಬುದು ಇಲ್ಲಿ ವಿಮರ್ಶಾರ್ಹವಾಗಿದೆ.

ಈ ಕಾಲದಲ್ಲಿ ಶಿಕ್ಷಣದ ಮಹತ್ವವು ಕಡಿಮೆ ಇಲ್ಲದಿದ್ದರೂ ಭಿನ್ನವಾದ ಸಾಮಾಜಿಕ ಆರ್ಥಿಕ ಪರಿಸ್ಥಿತಿಯ ಮೂಲಕ ಈಗಿನಷ್ಟು ಬರಿಯ ಪುಸ್ತಕೀಯ ಶಿಕ್ಷಣದ ಆವಶ್ಯಕತೆಯೂ ಆಗ್ರಹವೂ ಇರಲಿಲ್ಲ. ಶಿಕ್ಷಣವು ಸಾರ್ವತ್ರಿಕವಾಗಿ, ಪ್ರತಿಯೊಬ್ಬನೂ ಅಕ್ಷರಿಗನಾಗಬೇಕು ಎಂಬ ವಿಚಾರಕ್ಕಾದರೂ ಅವಕಾಶವಿರಲಿಲ್ಲ. ಬುದ್ಧಿಜೀವಿಗಳು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಮೊದಲಾದ ಉಚ್ಚವರ್ಣೀ

(೬೧) D. K. Intr. pp. lix--lxi
(೬೨) ಕ. ಸಾ. ಪು. ೩೩೨
(೬೩) M. G. II Pt. 1 pp. 40 1 & ಕ.ಚ.ಭಾಗ ೧. ಪು ೧--೬.
(೬೪) Ibid pp. 8--9.
(೬೫) Ibid P. 10
(೬೬) Ibid P. 12



CC-0. Jangamwadi Math Collection. Digitized by eGangotri

ಯರು, ಸಿರಿವಂತರು, ಉತ್ಕಟವಿದ್ಯಾಭಿಲಾಷಿಗಳು ಮಾತ್ರ ಶಿಕ್ಷಣಕ್ಕಾಗಿ ವಿಶೇಷ ಉತ್ಸಾಹವನ್ನು ತೋರಿಸುತ್ತಿದ್ದರು. ಸಮಾಜರಚನೆ ಹೆಚ್ಚಾಗಿ ಪರಂಪರಾಗತ ಜಾತಿವರ್ಣ ನಿಷ್ಠವಾಗಿರುವುದರಿಂದಲೂ, ಕೃಷಿ ಮೊದಲಾದ ಆನುವಂಶಿಕ ಉದ್ಯಮವ್ಯವಸಾಯಗಳಲ್ಲಿ ಜನಾಂಗವು ತೊಡಗಿದ್ದುದರಿಂದಲೂ ಬೌದ್ಧಿಕ ಶಿಕ್ಷಣದ ಆಸ್ಥೆ ಸಾಮಾನ್ಯವಾಗಿ ಕಡಿಮೆಯಾಗಿದ್ದಿತು ಎಂದು ಹೇಳಬಹುದು. ಅರಸರೂ ಅಧಿಕಾರಿಗಳೂ ಪಂಡಿತರಿಗೆ, ಪಾಠಶಾಲೆಗಳಿಗೆ ಅನೇಕ ದಾನ ಮೊದಲಾದುವುಗಳನ್ನು ಕೊಟ್ಟು ಪರ್ಯಾಯದಿಂದ ವಿದ್ಯೆಯನ್ನು ಪ್ರೋತ್ಸಾಹಿಸುತ್ತಿದ್ದರಾದರೂ ಶಿಕ್ಷಣವು ಪ್ರಭುತ್ವದ ನಿಯತ ಕರ್ತವ್ಯಗಳಲ್ಲಿ ಒಂದಾಗಿ ಎಣಿಸಲಾಗುತ್ತಿತ್ತು ಎಂದು ತೋರುವುದಿಲ್ಲ. [೬೭]

ಸಂಸ್ಕೃತಕ್ಕೆ ಗೌರವವಿರುವ ಈ ಕಾಲದಲ್ಲಿ, ಸಂಸ್ಕೃತ ವಿದ್ಯೆಯೆ ಉಚ್ಚ ಶಿಕ್ಷಣಕ್ರಮದ ಎಲ್ಲ ಸ್ಥಾನಗಳನ್ನು ಆಕ್ರಮಿಸಿಕೊಂಡಿತ್ತು. ಮಾಧ್ಯಮಿಕ ಶಿಕ್ಷಣಕ್ರಮದಲ್ಲಿಯೂ ಸಂಸ್ಕೃತಕ್ಕೆ ಪ್ರಾಧಾನ್ಯವಿದ್ದು, ಪ್ರಾಥಮಿಕ ಶಿಕ್ಷಣಕ್ರಮದಲ್ಲಿ ಮಾತ್ರ ಕೆಲಮಟ್ಟಿಗೆ ಕನ್ನಡಕ್ಕೆ ಆಶ್ರಯವು ದೊರೆಯುತಲಿತ್ತು. ಇದರಲ್ಲಿಯೂ ಉಚ್ಚವರ್ಣೀಯರೂ, ಬೌದ್ಧಿಕ ವ್ಯವಸಾಯಿಗಳೂ ಸಂಸ್ಕೃತದ ಕಡೆಗೆಯೆ ಆರಂಭದಿಂದಲೂ ಹೆಚ್ಚು ಆಸಕ್ತಿಯನ್ನು ತೋರಿಸುತ್ತಿದ್ದರು. ಆದರೂ ಜನಾಂಗವು ಕನ್ನಡವಾಗಿರುವುದರಿಂದಲೂ, ದೇಶವ್ಯವಹಾರಕ್ಕೆ ಕನ್ನಡವೆ ಸಾಧನವಾಗಿರುವುದರಿಂದಲೂ, ಸಾಮಾನ್ಯವಾಗಿ ಎಲ್ಲ ಅಕ್ಷರಸ್ಥರಿಗೂ ತಕ್ಕಮಟ್ಟಿಗೆ ಕನ್ನಡದ ಪ್ರಾಥಮಿಕ ಜ್ಞಾನವಿರುತ್ತಿತ್ತು ಎಂದು ಹೇಳಬಹುದು. ಇದಲ್ಲದೆ ಹಿಂದೆ ಸಾಹಿತ್ಯವಿಚಾರದಲ್ಲಿ ನೋಡಿದಂತೆ, ಕನ್ನಡ ಸಾಹಿತ್ಯವು ಪ್ರೌಢಿಯನ್ನು ಹೊಂದುತ್ತಿರಬೇಕಾದರೆ, ಕೆಲವೆಡೆಯ ವಿಶಿಷ್ಟಮಾರ್ಗಗಳಲ್ಲಿಯಾಗಲಿ, ವೃತ್ತಿಪರಂಪರೆಯಲ್ಲಿಯಾಗಲಿ ಉಚ್ಚ ತರಗತಿಯ ಕನ್ನಡ ವ್ಯಾಸಂಗವಾದರೂ ನಡೆಯುತ್ತಿರಲೆಬೇಕು, ಎಂದು ಊಹಿಸಬೇಕಾಗುತ್ತದೆ.

ಮಾಧ್ಯಮಿಕ ಶಿಕ್ಷಣಕ್ರಮದಲ್ಲಿ ಕಾವ್ಯ, ಸಾಹಿತ್ಯ, ವ್ಯಾಕರಣ ಮೊದಲಾದುವುಗಳೂ, ಉಚ್ಚ ಶಿಕ್ಷಣಕ್ರಮದಲ್ಲಿ ವ್ಯಾಕರಣ, ನ್ಯಾಯ, ಮೀಮಾಂಸೆ, ವೇದ, ವೇದಾಂತ, ವೈದ್ಯಕ, ಜ್ಯೋತಿಷ, ಧರ್ಮಶಾಸ್ತ್ರ ಮೊದಲಾದುವುಗಳೂ ಅಧ್ಯಯನವಿಷಯಗಳಾಗಿದ್ದುವು. [೬೮] ಜೈನ - ಬೌದ್ಧರು ಇತರ ಸಾಮಾನ್ಯವಾದ ಸಾಹಿತ್ಯ, ಶಾಸ್ತ್ರಗಳಲ್ಲದೆ, ತಮ್ಮ ತಮ್ಮ ಧರ್ಮ ಮತದ ಉಚ್ಚಗ್ರಂಥಗಳ ವ್ಯಾಸಂಗವನ್ನು ಆಸ್ಥೆಯಿಂದ ಮಾಡುತ್ತಿದ್ದರು. ಸಂಸ್ಕೃತ ಪ್ರಾಬಲ್ಯದ ಈ ಕಾಲದಲ್ಲಿ ಜೈನ ಮೊದಲಾದ ಅವೈದಿಕರು ಪ್ರಾಕೃತ ದೇಶ್ಯ ಭಾಷೆಗಳಿಗೆ ಹೆಚ್ಚು ಲಕ್ಷ್ಯವನ್ನು ಪೂರಯಿಸುತ್ತಿರುವಾಗಲೂ, ವೈದಿಕರೊಡನೆ ಸ್ಪರ್ಧಿಸಬೇಕಾಗಿ ಸಂಸ್ಕೃತವನ್ನೂ ಹೆಚ್ಚಾಗಿ ಪುರಸ್ಕರಿಸಬೇಕಾಗುತ್ತಿತ್ತು.

ಬಾದಾಮಿಯಂತಹ ರಾಜಧಾನಿಯ ಸ್ಥಳಗಳೊ, ಈಗಿನ ಉಚ್ಚ ವಿದ್ಯಾಪೀಠಗಳನ್ನು ಹೋಲುವ ಘಟಿಕಾಸ್ಥಾನಗಳೊ, ಬ್ರಹ್ಮಪುರಿಗಳೂ [೬೮ಅ], ಅಗ್ರಹಾರಗಳೊ, ಪವಿತ್ರ ಕ್ಷೇತ್ರಗಳೂ ದೇವಸ್ಥಾನಗಳೂ ಮಠ-ವಿಹಾರಗಳೂ ಈ ಕಾಲದ ಉಚ್ಚ ಶಿಕ್ಷಣದ ಆಲಯಗಳಾಗಿದ್ದುವು. ಇವುಗಳಲ್ಲಿ ಅನೇಕ ವಿದ್ಯಾವಂತರೂ ಪಂಡಿತರೂ ನೆಲಸಿದ್ದು ಪರಂಪರಾಗತ ಕ್ರಮದಿಂದ ವಿದ್ಯಾದಾನ ಕಾರ್ಯವನ್ನು ಸಾಗಿಸುತ್ತಿದ್ದರು. ಇಂತಹ ಪಂಡಿತರಿಗೆ, ಆಚಾರ್ಯರಿಗೆ ರಾಜರೂ ಅಧಿಕಾರಿಗಳೂ ಸ್ಥಿತಿವಂತರೂ ಉಂಬಳಿ ಮೊದಲಾದ ಅನೇಕ ದಾನಗಳ ರೂಪದಿಂದ ತಕ್ಕ ವೃತ್ತಿಯನ್ನು ಕಲ್ಪಿಸಿ ಕೊಡುತ್ತಿದ್ದರು. ಇಂತಹ ಸಂಸ್ಥೆಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ ಶಿಕ್ಷಣವು ಉಚಿತವಾಗಿ ದೊರೆವುದಲ್ಲದೆ, ಅನ್ನ, ವಸ್ತ್ರ ಮೊದಲಾದ ಇತರ ಸೌಕರ್ಯಗಳೂ ಒದಗುತ್ತಿದ್ದುವು. ಆದುದರಿಂದ ವಿದ್ಯಾರ್ಥಿಗಳಿಗೆ ಈಗಿನಂತೆ ಉಚ್ಚ ಶಿಕ್ಷಣವು ಭಾರವೆನಿಸುತ್ತಿರಲಿಲ್ಲ. [೬೯] ಈ ಕಾಲದಲ್ಲಿ ಅಯ್ಹೊಳೆ ಉತ್ತರ ಕರ್ನಾಟಕದಲ್ಲಿ ಹೆಸರಾದ ವಿದ್ಯಾಪೀಠವಾಗಿತ್ತು ಎಂದು ತೋರುತ್ತದೆ. [೭೦] ಸಾಮಾನ್ಯವಾಗಿ ಹಳ್ಳಿಹಳ್ಳಿಗೆ ಪ್ರಾಥಮಿಕ ಶಾಲೆಗಳು ಇದ್ದುವು. ಪುರೋಹಿತ, ಜೋಶಿ, ಕರ್ಣಿಕ ಮೊದಲಾದವರೆ ಇವುಗಳನ್ನು ನಡೆಸುತ್ತಿದ್ದರು. ಧಾನ್ಯ ಮೊದಲಾದ ನಿಯತ ವಾರ್ಷಿಕ ಆಯದಿಂದಲೂ ಹಬ್ಬ, ಉತ್ಸವ ಮೊದಲಾದ ಪ್ರಸಂಗಗಳಲ್ಲಿ ದೊರೆವ ಕಾಣಿಕೆಗಳಿಂದಲೂ ಈ ಶಿಕ್ಷಕರ ಉಪಜೀವನವು ಸಾಗುತ್ತಿತ್ತು. ಕೆಲವೆಡೆಯಲ್ಲಿ, ಸ್ಥಿತಿವಂತರು ನಿಯಮಿತ ವೇತನಗಳನ್ನು ಕೊಟ್ಟು ಸ್ಥಾಪಿಸಿದ ಶಿಕ್ಷಕರಿಂದ ನಡೆವ ಶಾಲೆಗಳು ಇದ್ದುವು. ಈ ಕಾಲದಲ್ಲಿ ಸಾಕ್ಷರತೆಯ

---

೬೭ प्रा· शि. pp ೧೭೬ & ೭೭

(೬೮) प्रा. शि. p. 28

(೬೮ ಅ) K. K. Chapter an Education

(೬೯) Ibid p. 165

(೭೦) ನಾ. ನ. ಪು. ೨೧೫

CC-0. Jangamwadi Math Collection. Digitized by eGangotri

ಪ್ರಮಾಣವು ನೂರಕ್ಕೆ ೪೦ರಷ್ಟು ಇತ್ತು ಎಂದು ಊಹಿಸಬಹುದಾಗಿದೆ. ೨೧

ಬೌದ್ಧಿಕ ಶಿಕ್ಷಣವಲ್ಲದೆ ಬೇರೆ ಶಿಕ್ಷಣವೂ ಈ ಕಾಲದಲ್ಲಿ ದೊರೆಯುತಲಿತ್ತು. ಕೃಷಿ, ವ್ಯಾಪಾರ, ಕೈಗಾರಿಕೆ, ಕಲೆಗಳು, ಉದ್ಯೋಗ-ವ್ಯವಸಾಯಗಳು, ಶಸ್ತ್ರವಿದ್ಯೆ ಮೊದಲಾದವುಗಳ ಶಿಕ್ಷಣವು ಈ ಕಾಲದಲ್ಲಿ ಒದವುತಲಿತ್ತು. ಈ ಶಿಕ್ಷಣವು ಹೆಚ್ಚಾಗಿ ಕೌಟುಂಬಿಕ ಕ್ರಮದಿಂದಲೂ ಸಾಂಘಿಕ ಪರಂಪರೆಯಿಂದಲೂ ನಡೆಯುತ್ತಿತ್ತು. ವೈಯಕ್ತಿಕ ತಜ್ಞರಲ್ಲದೆ, ಅಲ್ಲಲ್ಲಿ ವರ್ತಕರು, ಬೇಸಾಯಗಾರರು ಮೊದಲಾದವರ ಉದ್ಯಮಸಂಘಗಳೂ (Guilds) ಅವುಗಳ ಕಾರ್ಯಾಲಯಗಳೂ ಇರುತ್ತಿದ್ದು, ಇಂತಹ ಸ್ಥಳಗಳಲ್ಲಿ **ಅಂತೇವಾಸಿ ಪದ್ಧತಿಯಿಂದ** (apprentice-ship method) ಪ್ರತ್ಯಕ್ಷ ವ್ಯವಹಾರದಲ್ಲಿ ಪ್ರಾವೀಣ್ಯವನ್ನು ಪಡೆವಂತೆ **ಪ್ರಾಯೋಗಿಕ ಶಿಕ್ಷಣವನ್ನು** ಪಡೆದು ವಿದ್ಯಾರ್ಥಿಗಳು ಪಾರಂಗತರಾಗುತ್ತಿದ್ದರು. ೨೨ ನೇಕಾರಿಕೆ, ಕಂಚುಗಾರಿಕೆ ಮೊದಲಾದ ಕೈಗಾರಿಕೆಗಳು, ಮೂರ್ತಿಶಿಲ್ಪ, ಮಂದಿರಶಿಲ್ಪ (Architecture), ಚಿತ್ರಶಿಲ್ಪ, ಸಂಗೀತ ಮೊದಲಾದ ಲಲಿತಕಲೆಗಳು ಈ ಕಾಲದಲ್ಲಿ ಇಂತಹ ಪರಿಶ್ರಮ-ಪ್ರಯೋಗಗಳಿಂದಲೆ ಅಭಿವೃದ್ಧಿಯನ್ನು ಹೊಂದಿದುವು. ಅನೇಕ ಜನರು ಸೈನ್ಯದಲ್ಲಿ ಸೇರುತ್ತಿದ್ದುದರಿಂದ ಶಸ್ತ್ರವಿದ್ಯೆಯ ಶಿಕ್ಷಣವಾದರೂ ಚೆನ್ನಾಗಿ ಆಗುತ್ತಿತ್ತು. ಪಟ್ಟಣಗಳಲ್ಲಿಯೂ ಹಳ್ಳಿಯೂರುಗಳಲ್ಲಿಯೂ ನುರಿತ ದಂಡಾಳುಗಳೂ ಹಿರಿಯರೂ ಉತ್ಸಾಹಪೂರ್ವಕವಾಗಿ ನವಯುವಕರಿಗೆ ಶಸ್ತ್ರವಿದ್ಯೆಯ ಶಿಕ್ಷಣವನ್ನು ಕೊಡುತ್ತಿದ್ದರು.

**ಸ್ತ್ರೀಶಿಕ್ಷಣ:**—ಸುಸಂಸ್ಕೃತರೂ, ಧಾರ್ಮಿಕ, ಸಾರ್ವಜನಿಕ ಮೊದಲಾದ ಕಾರ್ಯಗಳಲ್ಲಿ ಮುಂದುವರಿದವರೂ ಆದ ಉಚ್ಚಕುಲದ ವಿಜಯಭಟ್ಟಾರಿಕಾ, ಕುಂಕುಮಮಹಾದೇವಿ, ಲೋಕಮಹಾದೇವಿ, ತ್ರೈಲೋಕ್ಯಮಹಾದೇವಿ ಮೊದಲಾದ ಕೆಲವು ಸ್ತ್ರೀಯರ ಉದಾಹರಣೆಗಳ ಮೇಲಿಂದ ಈ ಕಾಲದ ಸ್ತ್ರೀಸಮಾಜವು ಕೆಲವಂಶದಿಂದಲಾದರೂ ವಿದ್ಯಾಸಂಪನ್ನವಾಗಿರಬೇಕು ಎಂದು ತೋರುತ್ತದೆ. ಬಾಲ್ಯವಿವಾಹವು ರೂಢವಾಗುತ್ತ ನಡೆದುದರಿಂದ ಸ್ತ್ರೀಶಿಕ್ಷಣವಾದರೂ ಹಿಮ್ಮೆಟ್ಟಲಾರಂಭಿಸಿತ್ತು. ೨೩ ಆದರೂ ಉಚ್ಚಮಾನದ, ಉಚ್ಚಕುಲದ ಹಾಗೂ ಸಿರಿವಂತರ ಕೆಲವು ಮನೆತನಗಳಲ್ಲಿ ಸ್ತ್ರೀಯರಿಗೆ ಲೇಖನ, ವಾಚನ, ಕಾವ್ಯ, ಸಾಹಿತ್ಯ, ಧರ್ಮಗ್ರಂಥ, ಸಂಗೀತ, ಚಿತ್ರಕಲೆ, ಮೊದಲಾದುವುಗಳ ಶಿಕ್ಷಣದ ಸೌಕರ್ಯವು ಒದಗಿಸಲಾಗುತ್ತಿತ್ತು ಎಂದು ಹೇಳಬಹುದು. ಕೇವಲ ಸ್ತ್ರೀಯರಿಗಾಗಿ ಎಂದು ಎಲ್ಲಿಯೂ ಶಾಲೆಗಳು ಇದ್ದಂತೆ ಕಾಣುವದಿಲ್ಲ. ಮನೆಯಲ್ಲಿ ಹಿರಿಯರೂ ಗುರುಗಳೂ ಇವರಿಗೆ ಸಾಕಷ್ಟು ವಿದ್ಯೆಯ ಅಧ್ಯಯನವನ್ನು ಮಾಡಿಸುತ್ತಿದ್ದರು. ಅರಸುಮನೆತನದ ಹಾಗೂ ಕ್ಷತ್ರಿಯಕುಲದ ಸ್ತ್ರೀಯರು ಮೇಲಿನ ವಿಷಯಗಳಲ್ಲದೆ ಕುದುರೆಯ ಸವಾರಿ, ಈಸುವುದು, ಶಸ್ತ್ರವಿದ್ಯೆ ಮೊದಲಾದ ಶಿಕ್ಷಣವನ್ನಾದರೂ ಪಡೆಯುತ್ತಿದ್ದರು. ಸ್ತ್ರೀಯರ ಸಾಕ್ಷರತೆ ನೂರಕ್ಕೆ ೧೦ರಷ್ಟು ಇದ್ದಿತು. ೨೪

(೨೧) प्रा. शि. p. 122
(೨೨) Ibid pp. 92—96


## ಕಲಾಸಿಂಧು ಮುದ್ರಣಾಲಯ

ನಮ್ಮಲ್ಲಿ ಹಿಂದೀ, ಸಂಸ್ಕೃತ, ಮರಾಟಿ, ಕನ್ನಡ, ಇಂಗ್ಲಿಷುಗಳಲ್ಲಿ ಪುಸ್ತಕಮುದ್ರಣವೂ ಎಲ್ಲಬಗೆಯ ಜಾಬ್ ಕೆಲಸವೂ ಅಚ್ಚುಕಟ್ಟಾಗಿ, ಅಂದವಾಗಿ ಆಗುವುದು; ಮತ್ತು ನಿಯಮಿತ ವೇಳೆಯಲ್ಲಿ ಕೊಡಲ್ಪಡುವುದು.

**ಜಯಕರ್ನಾಟಕ ಪತ್ರಿಕೆಯು ಇಲ್ಲಿಯೇ ಅಚ್ಚಾಗುವುದು.**

ಪ್ರಾಮಾಣಿಕ ವ್ಯವಹಾರ, ಯೋಗ್ಯವಾದ ದರ.


CC-0. Jangamwadi Math Collection. Digitized by eGangotri

ಬಿಡುವಿನ ಹೊತ್ತನ್ನು ಆನಂದದಲ್ಲಿ ಕಳೆಯಲು




ಮತ್ತು




ನಿಮ್ಮ ಮನೆಯಲ್ಲಿ ಅಗತ್ಯ ಬೇಕು.








ಇದಲ್ಲದೆ ಮುಂಬಯಿಯಲ್ಲಿ ದೊರೆಯುವ ಬೇರೆ ಎಲ್ಲ ಬಗೆಯ ಮಾಲನ್ನು ಅಲ್ಪ ಕಮಿಶನ್ನಿನ ಮೇಲೆ,

ಅಗ್ಗವಾಗಿ ಕೊಂಡುಕೊಂಡು ಅತ್ಯಂತ ಜಾಗರೂಕತೆಯಿಂದ ಮತ್ತು ಹೊತ್ತಿಗೆ ಸರಿಯಾಗಿ ಕಳಿಸುತ್ತೇವೆ

ಹೆಚ್ಚಿನ ವಿವರಗಳಿಗಾಗಿ ಹೊಸ ದೊಡ್ಡ ೧೦೦ ಪುಟಗಳ ಸಚಿತ್ರ ಮರಾಠಿ ಕ್ಯಾಟಲಾಗನ್ನು. ೨ ಆಣೆಯ ಅಂಚೇಚೀಟಿ ಕಳಿಸಿದಲ್ಲಿ ಉಚಿತವಾಗಿ ಕಳಿಸಲಾಗುವದು.

## ಗೋಪಾಳ ಸಖಾರಾಮ ಮತ್ತು ಕಂಪನಿ,

೩೯೭-೯೯ ಕಾಳಬಾದೇವಿ ರೋಡ
ಮುಂಬಯಿ ನಂ. ೨.

# SHREENIVAS & Co.




-THE PREMIER-
Karnataka
PHOTO ENGRAVERS

## ARTISTS & DESIGNERS.

Beautiful & Faithful - Reproductions
BY
OUR PERFECT LINE, HALF-TONE & COLOUR PROCESS.



Malamaddi, DHARWAR.


CC-0. Jangamwadi Math Collection. Digitized by eGangotri

# ಇಂಗ್ಲಿಷು ಶಬ್ದನಿಘಂಟು ಶಾಸ್ತ್ರದ ಚರಿತ್ರೆ

( ಕ್ರಿ. ಶ. ೧೭೨೧ರಿಂದ ಈಚೆಯ ಕಾಲ )

ಲೇಖಕರು: ಶ್ರೀಮಾನ್ ಮಂ. ಅ. ದೊರೆಸ್ವಾಮಿ ಅಯ್ಯಂಗಾರ್ಯರು, ಎಂ. ಎ. ಬಿ. ಎಲ್.

**ಕಳೆದ ಎರಡು ಶತಮಾನಗಳಲ್ಲಿ ಬೇಯಿಲಿಯ ಸಂಪೂರ್ಣ ಭಾಷೆಯ ಮತ್ತು ಮೂಲಾರ್ಥ ನಿರೂಪಕ ನಿಘಂಟು, ಜಾನಸನ್ನನ ಅರ್ಥನಿರ್ಧಾರಕ ನಿಘಂಟು, ವಾಕರನ ಉಚ್ಚಾರಣೆಯ ನಿಘಂಟು, ವೆಬ್‌ಸ್ಟರನ ನಿರ್ವಚನ ಮತ್ತು ಭಾಷಾಸಾದೃಶ್ಯನಿರೂಪಕ ನಿಘಂಟು, ರಿಚರ್ಡಸನ್ನನ ಸೂಕ್ತಿವಿಶ್ರುತಾರ್ಥ ನಿಘಂಟು, ವ್ಹಿಟ್ನಿಯ ವಿಶ್ವಕೋಶಾತ್ಮಕ ನಿಘಂಟು, ವಿವಿಧ ಶಾಖಾ ನಿಘಂಟುಗಳು, ಸರ್ವ ಶಬ್ದೇತಿಹಾಸ ನಿರೂಪಕವಾದ ಆಕ್ಸ್‌ಫರ್ಡ ನಿಘಂಟು ಇವುಗಳು ಪರಂಪರೆಯಾಗಿ ಹುಟ್ಟಿ ನಿಘಂಟು ರಚನಾಶಾಸ್ತ್ರವನ್ನು ಅತ್ಯಗಾಧವಾಗಿ ಬಳೆಯಿಸಿವೆ.**

ಈ ನವೀನಕಾಲದ ನಿಘಂಟುಗಳ ಹೆಸರುಗಳನ್ನು ಬರೆಯಹೋಗುವುದು ಅಸಾಧ್ಯ. ಅದರಿಂದ ಪ್ರಯೋಜನ ಸಹ ಯಾವುದೂ ಇಲ್ಲ. ಆದುದರಿಂದ ಈ ಕಾಲದಲ್ಲಿ ನಡೆದ ನಿಘಂಟುವಿನ ರಚನಾಕ್ರಮದ ವಿಕಾಸಘಟ್ಟಗಳನ್ನು ಮಾತ್ರ ನೋಡಬಹುದು.

೧. ಸಂಪೂರ್ಣ ಭಾಷಾ ನಿಘಂಟು:— ೧೬೦೪ ರಿಂದ ಇಂಗ್ಲಿಷು-ಇಂಗ್ಲಿಷು ನಿಘಂಟುಗಳು ಹುಟ್ಟುತ್ತಾ ಬಂದಿದ್ದರೂ ಅವುಗಳು ಕ್ಲಿಷ್ಟವಾದ ಪದಗಳಿಗೆ ಮಾತ್ರ ಅರ್ಥ ಹೇಳಲು ಪ್ರವರ್ತಿಸಿದವೇ ಹೊರತು ಭಾಷೆಯಲ್ಲಿರುವ ಸಮಸ್ತ ಪದಗಳಿಗೂ ಅರ್ಥವನ್ನು ವಿವರಿಸಲು ಕೈಹಾಕಲಿಲ್ಲ. ಈ ಪ್ರಯತ್ನವನ್ನು ಬೇಯಿಲಿ ( Bailey ) ಎಂಬುವನು ೧೭೨೧ರಲ್ಲಿ ಪ್ರಥಮತಃ ಮಾಡಿದನು. ಅಲ್ಲಿಂದ ಮುಂದೆ ನಿಘಂಟುಗಳೆಲ್ಲವೂ ಈ ಪದ್ಧತಿಯನ್ನೇ ಅವಲಂಬಿಸಿದವು.

೨. ಮೂಲಾರ್ಥನಿಘಂಟು ( Etymological Dictionary ):— ಇದೇ ಬೇಯಿಲಿಯು ತನ್ನ ಗ್ರಂಥದಲ್ಲಿ ಭಾಷೆಯ ಸಮಸ್ತ ಪದಗಳನ್ನೂ ವಿವರಿಸಲು ಪ್ರಯತ್ನಿಸಿದ್ದರ ಜತೆಗೆ ಈ ಪದಗಳ ವ್ಯಾಕರಣ ಮೂಲವನ್ನೂ ವಿವರಿಸಲು ಕೈಕೊಂಡನು. ಈ ಪದ್ಧತಿಯು ಸಹ ನಿಘಂಟುವಿಗೆ ಸರ್ವತ್ರ ಲಕ್ಷಣವಾಯಿತು.

೩. ಉಚ್ಚಾರಣೆಯ ನಿಘಂಟು:— ಪದಗಳ ಉಚ್ಚಾರವನ್ನು ವ್ಯಕ್ತಪಡಿಸಲು ಬೇಯಿಲಿಯು ೧೭೩೧ನೆಯ ವರ್ಷದ ಮುದ್ರಣದಲ್ಲಿ ಪದಗಳ ಮೇಲೆ ಸ್ವರಸಂಕೇತವನ್ನು ಸೂಚಿಸುತ್ತಾ ಬಂದನು. ಜಾನಸನ್ನನ ನಿಘಂಟು ( ೧೭೫೫ )ವೂ ಇದನ್ನೇ ಅನುವರ್ತಿಸಿತು. ಆದರೆ ಇಂಗ್ಲಿಷು ಭಾಷೆಯಲ್ಲಿ ಶಬ್ದಗಳ ಉಚ್ಚಾರವು ಬಹಳ ಪಲ್ಲಟವಾಗಿ ಹೋಗಿರುವುದರಿಂದ ಬರಿಯ ಸ್ವರಸೂಚನೆಯಿಂದ ಪದಗಳ ಉಚ್ಚಾರಣೆಯನ್ನು ತಿಳಿಯಲಾಗುತ್ತಿರಲಿಲ್ಲ. ಉದಾಹರಣೆಗಾಗಿ, Know ಎಂಬ ಪದದ ಉಚ್ಚಾರಣೆಯನ್ನು No ಎಂದು ಬರೆದು ತೋರಿಸದಿದ್ದರೆ ತಿಳಿಯುವುದು ಕಷ್ಟ. ಈ ಪದ್ಧತಿಯು ೧೭೭೩ರಲ್ಲಿ ಕೆನ್ರಿಕ್ ( Kenrick ) ಎಂಬುವನ ನಿಘಂಟುವಿನಿಂದ ಆರಂಭಿಸಿತು. ೧೭೯೧ರಲ್ಲಿ ಹುಟ್ಟಿದ ವಾಕರ್ ( Walker ) ಎಂಬುವನ ನಿಘಂಟು ಈ ಕಾರ್ಯವನ್ನು ಅತ್ಯಂತ ಸಮರ್ಪಕವಾಗಿ ಮಾಡಿದ್ದಿತು. ಆದ್ದರಿಂದ ಬಹುಕಾಲದ ವರೆಗೆ ಉಚ್ಚಾರಣೆಗೆ ಈ ಗ್ರಂಥವೇ ಸಿದ್ಧಾಂತವಾಗಿತ್ತು.

೪. ಅರ್ಥನಿರ್ಧಾರಕ ನಿಘಂಟು ( Standard Dictionary ):— ಹಿಂದೆ ಗ್ರೀಕ ಮತ್ತು ಲಾಟೀನ ಭಾಷೆಗಳು ಅತ್ಯಂತ ಅಭಿವೃದ್ಧಿಯನ್ನು ಹೊಂದಿ ಸರ್ವೋತ್ಕೃಷ್ಟವಾದ ಸಾಹಿತ್ಯವನ್ನು ಹೆತ್ತು ಮೆರೆಯುತ್ತಿದ್ದವು. ಆದರೆ ಸ್ವಲ್ಪ ಕಾಲಾನಂತರ ಈ ಭಾಷೆಗಳು ಕ್ಷೀಣವನ್ನು ಪಡೆದು ತೀರಾ ಅಶುದ್ಧವಾಗಿ ನಶಿಸಿದವು. ಈ ಭಾಷೆಗಳ ಪ್ರಯೋಗಗಳೂ ಲಕ್ಷಣಗಳೂ ಮನಸ್ವಿ ಪಲ್ಲಟವಾದವು. ಪದಗಳು ಎಷ್ಟೋ ಖಿಲವಾದವು, ಎಷ್ಟೋ ಪದಗಳು ಅರ್ಥವಿಕಾರವನ್ನು ಪಡೆದವು. ಹಿಂದುಳಿದ ಜನರ ಕೈಗೆ ಸಿಕ್ಕಿ ಈ ಭಾಷೆಗಳ ವ್ಯಾಕರಣವೂ ಉಚ್ಚಾರಣೆಯೂ ಅರ್ಥಗೌರವವೂ ನಷ್ಟವಾದವು. ಇವು ಉಚ್ಛ್ರಾಯದಶೆಯಲ್ಲಿದ್ದಾಗ ಇವುಗಳ ಶಬ್ದಾರ್ಥಗಳನ್ನೂ ಪ್ರಯೋಗಗಳನ್ನೂ ಉಚ್ಚಾರವನ್ನೂ ವ್ಯಾಕರಣವನ್ನೂ ಹೀಗೆಹೀಗೆಯೇ ಸರಿ ಎಂದು ಅಚಲವಾಗಿ ನಿರ್ಧರಿಸಿ ಬಿಟ್ಟಿದ್ದುದೇ ಆಗಿದ್ದರೆ ಮುಂದೆ ಅವು ವಿಸ್ಖಲಿತವಾಗಲು ಸಾಧ್ಯವಿರುತ್ತಿರಲಿಲ್ಲ. ಫ್ರಾನ್ಸು ಇಟಲಿ ಮೊದಲಾದ ದೇಶಗಳಲ್ಲಿ ಭಾಷಾಶುದ್ಧಿಯನ್ನು ಸಂರಕ್ಷಿಸುವ ಸಲುವಾಗಿ ಪರಿಷತ್ತು ( Academies ) ಗಳು ಕಲ್ಪಿತವಾಗಿವೆ. ಭಾಷೆಯ ಪ್ರಯೋಗಗಳು, ಶಬ್ದಾರ್ಥಗಳು, ಉಚ್ಚಾರಗಳು ಇವುಗಳನ್ನೆಲ್ಲಾ ಒಂದು ನಿರ್ಧಾರಕ ನಿಘಂಟುವಿನಲ್ಲಿ ಸಿದ್ಧಾಂತವಾಗಿ ನಿಬದ್ಧ ಮಾಡಿಟ್ಟುಬಿಟ್ಟರೆ ಈ ಕೆಲಸವು

CC-0. Jangamwadi Math Collection. Digitized by eGangotri

ನೆರವೇರಿದಂತಾಗುವುದು. ಇಂಗ್ಲೆಂಡಿನಲ್ಲಿ ಕ್ರಿ. ಶ. ಹದಿನೆಂಟನೆಯ ಪೂರ್ವಾರ್ಧದಲ್ಲಿ ಇಂಥಾ ನಿಘಂಟುವನ್ನು ರಚಿಸಬೇಕೆಂದು ಬಲವಾದ ಪ್ರಯತ್ನವು ನಡೆಯಿತು. ಈ ಮಹಾಕಾರ್ಯವು ಡಾಕ್ಟರ ಜಾನಸನ್ನನಿಗೆ ವಹಿಸಲ್ಪಟ್ಟಿತು. ಆತನು ಒಂಭತ್ತು ವರ್ಷಕಾಲ ಶ್ರಮಪಟ್ಟು ೧೭೫೫ ರಲ್ಲಿ ಇಂಥಾ ನಿಘಂಟುವನ್ನು ರಚಿಸಿದನು. ಪದಗಳ ವಿವಿಧಾರ್ಥಗಳನ್ನು ಹೊರಪಡಿಸಲು ಈ ನಿಘಂಟುವಿನಲ್ಲಿ ಸಾಹಿತ್ಯಮಾಲೆಯಿಂದ ವಿಸ್ತಾರವಾಗಿ ಸೂಕ್ತಿಗಳು ಉದಾಹೃತವಾಗಿವೆ. ಈ ಗ್ರಂಥವು ಸುಮಾರು ಒಂದು ಶತಮಾನಕಾಲ ಇಂಗ್ಲಿಷು ಭಾಷೆಯನ್ನಾಡತಕ್ಕ ದೇಶಗಳಲ್ಲೆಲ್ಲ ಪ್ರಮಾಣಗ್ರಂಥವಾಗಿದ್ದಿತು. ಟಾಡ್ ಎಂಬವನು ೧೮೧೮ ರಲ್ಲಿ ಇದನ್ನು ಪರಿಷ್ಕರಿಸಿ ವಿಸ್ತರಿಸಿದನು. ಈ ಪರಿಷ್ಕೃತ ಗ್ರಂಥದಲ್ಲಿ ೫೮೦೦೦ ಪದಗಳು ಇದ್ದವು.

೫. ಜನಾಂಗಿಕ ನಿಘಂಟು:—ಅಮೇರಿಕದ ಸಂಯುಕ್ತ ರಾಜ್ಯವು ೧೭೭೬ರಲ್ಲಿ ಸ್ವತಂತ್ರ ರಾಜ್ಯವಾಯಿತಷ್ಟೆ. ಈ ದೇಶದಲ್ಲಿ ಇಂಗ್ಲೆಂಡಿನಲ್ಲಿ ಇಲ್ಲದ ಹೊಸಹೊಸ ಸಂಸ್ಥೆಗಳೂ ಜೀವನಕ್ರಮಗಳೂ ಜನಕುಲಗಳೂ ಸನ್ನಿವೇಶಗಳೂ ಹುಟ್ಟಿ ಬಳೆದವು. ಈ ದೆಸೆಯಿಂದ ಇಲ್ಲಿನವರು ಆಡತಕ್ಕ ಇಂಗ್ಲಿಷು ಭಾಷೆಯಲ್ಲಿ ಎಷ್ಟೋ ಹೊಸ ಪದಗಳು ಹುಟ್ಟಿದುವಲ್ಲದೆ ಹಳೆಯ ಪದಗಳಿಗೆ ವಿಶೇಷಾರ್ಥಗಳು ಕಲ್ಪಿತವಾದುವು. ಇಂಗ್ಲೆಂಡಿನಲ್ಲಿ ಬರೆಯಲ್ಪಟ್ಟ ನಿಘಂಟುಗಳಲ್ಲಿ ಈ ಹೊಸ ಪದಗಳೂ ಹೊಸ ಅರ್ಥಗಳೂ ಸೇರುತ್ತಿರಲಿಲ್ಲ. ಆದುದರಿಂದ ವೆಬ್‌ಸ್ಟರ್ (Webster) ಎಂಬ ಈ ದೇಶೀಯನು (೧೭೫೮-೧೮೪೩) ತನ್ನ ಜನಾಂಗದವರ ಪ್ರಯೋಜನವನ್ನೇ ಮುಖ್ಯವಾಗಿ ಉದ್ದೇಶಿಸಿ ಬಹುಕಾಲದ ಶ್ರಮದಿಂದ ೧೮೨೮ರಲ್ಲಿ "ಅಮೆರಿಕಾ ನಿಘಂಟು" (The American Dictionary) ಎಂಬ ಹೆಸರಿನಿಂದ ಒಂದು ದೊಡ್ಡ ಗ್ರಂಥವನ್ನು ಪ್ರಕಟಿಸಿದನು. ಇದು ಜಾನಸನ್ನನ ನಿಘಂಟುವಿಗಿಂತಲೂ ಮೂರು ನಾಲ್ಕು ವಿಚಾರಗಳಲ್ಲಿ ಮುಂದುವರಿದಿತ್ತು: (೧) ಅಮೆರಿಕಾ ಜನಾಂಗದ ವಿಶೇಷ ಸ್ವರೂಪವನ್ನು ಪ್ರತಿಬಿಂಬಿಸುವುದು ಇದಕ್ಕೆ ಅತಿಮುಖ್ಯ ಉದ್ದೇಶವಾಗಿತ್ತು (೨) ಅಂತರ ಕಾಲದಲ್ಲಿ ಪ್ರಪಂಚದಲ್ಲೂ ಇಂಗ್ಲಿಷು ಕುಲದವರಲ್ಲೂ ಜ್ಞಾನಭಂಡಾರವೂ ವಿದ್ಯೆಗಳೂ ಅತ್ಯಂತ ವಿಸ್ತಾರವಾಗಿ ಅಭಿವೃದ್ಧಿಯನ್ನು ಪಡೆದಿದ್ದವು. ಇದರಿಂದ ಬೇಕಾದಷ್ಟು ಹೊಸ ಪದಗಳೂ ಹೊಸ ಅರ್ಥಗಳೂ ಹುಟ್ಟಿ ಪ್ರಚಾರಕ್ಕೆ ಬಂದಿದ್ದವು. ವೆಬ್‌ಸ್ಟರನ ನಿಘಂಟುವು ಜಾನಸನ್ನನ ಪರಿಷ್ಕೃತ ಮುದ್ರಣದ ಗ್ರಂಥದಲ್ಲಿದ್ದುದಕ್ಕಿಂತ ೧೨೦೦೦ ಹೊಸ ಪದಗಳನ್ನೂ ಮೂವತ್ತು ನಲವತ್ತು ಸಾವಿರ ಹೊಸ ಶಬ್ದಾರ್ಥಗಳನ್ನೂ ನಿರೂಪಿಸಿ ಪದಗಳ ಅರ್ಥಗಳನ್ನೆಲ್ಲಾ ಸಂಪೂರ್ಣವಾಗಿ ಪರಿಷ್ಕರಿಸಿತು. ಈ ನಿಘಂಟುವಿನಲ್ಲಿ ಎಪ್ಪತ್ತು ಸಾವಿರ ಪದಗಳು ಇದ್ದವು. (೩) ಒಂದು ಪದದ ಅರ್ಥವನ್ನು ಮನಸ್ಸಿಗೆ ಬರೆದು ತಿಳಿಸುವುದಕ್ಕೆ ಪ್ರತಿಯಾಗಿ ನಿಷ್ಕೃಷ್ಟವಾದ ಶಾಸ್ತ್ರೀಯ ಕ್ರಮದಲ್ಲಿ ಬರೆಯಬೇಕೆಂದು ವೆಬ್‌ಸ್ಟರನು ಆಶಿಸಿದನು. ಪದಗಳ ಅರ್ಥವು ಅವುಗಳ ತರ್ಕಬದ್ಧವಾದ ನಿರ್ವಚನ (Logical Definition) ವಾಗಿರಬೇಕೆಂದು ಇವನು ಉದ್ದೇಶಿಸಿದನು, (೪) ಪದಗಳ ಉತ್ಪತ್ತಿಯನ್ನು ತಿಳಿಯಬೇಕಾದರೆ ಸಮೀಪ ಸಂಬಂಧವುಳ್ಳ ಹತ್ತಾರು ಭಾಷೆಗಳಲ್ಲಿರುವ ತತ್ಸದೃಶವಾದ ಪದಗಳೊಡನೆ ಹೋಲಿಸಿ ನೋಡದಿದ್ದರೆ ಸಾಧ್ಯವಿಲ್ಲ ಎಂದು ವೆಬ್‌ಸ್ಟರನು ಕಂಡುಕೊಂಡನು. ಅದರಂತೆ ಅವನು ಇಪ್ಪತ್ತು ಭಾಷೆಗಳಲ್ಲಿರುವ ಸಮಾನಾರ್ಥವೂ ಸಮಾನರೂಪವೂ ಉಳ್ಳ ಪದಗಳನ್ನು ಅಕ್ಕಪಕ್ಕದಲ್ಲೇ ಪಟ್ಟಿಯಾಗಿ ಬರೆದುಕೊಂಡು ಒಂದು ಗ್ರಂಥಸಾಮಗ್ರಿಯನ್ನು ಸಂಗ್ರಹಮಾಡಿದನು. ಇದರ ಆಧಾರದಿಂದ ತನ್ನ ನಿಘಂಟುವಿನಲ್ಲಿ ಶಬ್ದೋತ್ಪತ್ತಿಯನ್ನು ವಿವರಿಸಲು ಪ್ರಯತ್ನಿಸಿದನು.

ಈ ಉದ್ಗ್ರಂಥದ ಮುಂದಲ ಮುದ್ರಣಗಳಲ್ಲಿ ಈ ನಾಲ್ಕು ಲಕ್ಷಣಗಳೂ ರೂಪಾಂತರವನ್ನು ಪಡೆಯುತ್ತಾ ಹೋಗಿವೆ. ವೆಬ್‌ಸ್ಟರನೇ ೧೮೪೦ರಲ್ಲಿ ದ್ವಿತೀಯ ಸಂಪುಟವನ್ನು ಪ್ರಕಟಿಸಿದನು. ಸಾವಿರಾರು ಹೊಸ ಪದಗಳನ್ನು ಇದಕ್ಕೆ ಸೇರಿಸಿದನು. ಇಷ್ಟು ಹೊರತಾಗಿ ಇದರಲ್ಲಿ ಮತ್ತಾವ ವ್ಯತ್ಯಾಸವೂ ಇರಲಿಲ್ಲ. ೧೮೪೭ರಲ್ಲಿ ಆತನ ಅಳಿಯನಾದ ಗುಡ್ರಿಚ್‌ನು ಹೊಸ ಪದಗಳನ್ನು ಸೇರಿಸಿ ಮೂರನೆಯ ಸಂಪುಟವನ್ನು ಪ್ರಕಟಿಸಿದನು. ಆದರೆ ಪೋರ್ಟರ್ ಎಂಬಾತನ ಸಂಪಾದಕತ್ವದಲ್ಲಿ ಪ್ರಕಟವಾದ ೧೮೬೪ನೆಯ ವರ್ಷದ "ಅಸಂಕುಚಿತ ಸಂಪುಟ" (Un-abridged Edition) ಎಂಬ ನಾಲ್ಕನೆಯ ಸಂಪುಟದಲ್ಲಿ ಅನೇಕ ಪ್ರಬಲ ವ್ಯತ್ಯಾಸಗಳು ನಡೆದವು. ಶಬ್ದಾವಳಿಯು ೧೧೪೦೦೦ಕ್ಕೆ ಹೆಚ್ಚಿತು. ಪದಗಳ ಅರ್ಥನಿರ್ವಚನವು ಪರಿಷ್ಕರಿಸಲ್ಪಟ್ಟಿತು. ವೆಬ್‌ಸ್ಟರನ ಕಾಲದಿಂದೀಚೆಗೆ "ತಾರತಮ್ಯಾತ್ಮಕ ಭಾಷಾಶಾಸ್ತ್ರ" (Comparative Philology)ವು ಜರ್ಮನ ಪಂಡಿತರಿಂದ ಕಲ್ಪಿತವಾಗಿದ್ದಿತು. ಈ ಶಾಸ್ತ್ರದ ದೆಸೆಯಿಂದ ಶಬ್ದೋತ್ಪತ್ತಿಯನ್ನು ಶಾಸ್ತ್ರೀಯವಾಗಿ ತಿಳಿಯಬಹುದಾಗಿತ್ತು. ವೆಬ್‌ಸ್ಟರನ ಶಬ್ದೋತ್ಪತ್ತಿಯು ಕೇವಲ ಅಶಾಸ್ತ್ರೀಯವಾಗಿ

CC-0. Jangamwadi Math Collection. Digitized by eGangotri

ಕಲ್ಪನೆಯಿಂದ ನಡೆದಿತ್ತು. ಆದ್ದರಿಂದ ಈ ಭಾಷಾಪ್ರವೀಣನಾದ ಒಬ್ಬ ಜರ್ಮನ್ ಪಂಡಿತನ ಸಹಾಯದಿಂದ ಈ ನಿಘಂಟುವಿನ ಸಕಲ ಶಬ್ದಗಳ ಶಾಸ್ತ್ರೀಯ ಉತ್ಪತ್ತಿಯನ್ನೂ ಬರೆಯಿಸಿ ಇದಕ್ಕೆ ಸೇರಿಸಿದರು.

ಇದೇ ಪೋರ್ಟರನ ಸಂಪಾದಕತ್ವದಲ್ಲಿ ಇದರ ಐದನೆಯ ಸಂಪುಟವು ೧೮೯೦ರಲ್ಲಿ ಪ್ರಕಟವಾಯಿತು. ಈ ನಿಘಂಟು ಮೊದಲು ಕೇವಲ ಅಮೇರಿಕಾ ಜನಾಂಗದವರಿಗೆ ಮಾತ್ರ ಉದ್ದೇಶಿಸಲ್ಪಟ್ಟು ಬರೆಯಲ್ಪಟ್ಟಿದ್ದರೂ, ಅದು ಅತ್ಯಂತ ಸುಂದರವೂ ಉಪಯೋಗಕರವೂ ಆಗಿದ್ದುದರಿಂದ ಇಂಗ್ಲಿಷ ಭಾಷೆಯನ್ನಾಡತಕ್ಕ ಅಖಿಲ ಜನಾಂಗಗಳವರೂ ಅದನ್ನು ವಿಶೇಷವಾಗಿ ಆದರಿಸತೊಡಗಿದ್ದರು. ಗ್ರಂಥದ ಈ ಹೊಸ ಅವಸ್ಥೆಯನ್ನು ಅಂಗೀಕರಿಸಿ ಈ ಸಕಲ ಜನಾಂಗಗಳಿಗೂ ಸಮ್ಮತವಾಗಿಯೂ ಪ್ರಯೋಜನಕರವಾಗಿಯೂ ಆಗುವಂತೆ ಇದರ ಅರ್ಥನಿರ್ವಚನಗಳನ್ನು ಬರೆಯಿಸಿ ಈ ಐದನೆಯ ಸಂಪುಟಕ್ಕೆ "ವೆಬ್‌ಸ್ಟರನ ಸರ್ವಜನಾಂಗ ನಿಘಂಟು" (Webster's International Dictionary) ಎಂದು ಹೆಸರಿಟ್ಟರು. ವೆಬ್‌ಸ್ಟರನು ಸ್ವಂತ ಊಹಾಬಲದಿಂದ ಬರೆದಿದ್ದ ನಿರ್ವಚನಗಳನ್ನೆಲ್ಲಾ ಕಿತ್ತೊಗೆದು ಆಯಾ ಶಾಸ್ತ್ರಗಳ ಪದಗಳಿಗೆ ಅವುಗಳ ಉದ್ದಾಮ ಪಂಡಿತರ ಸಹಾಯದಿಂದ ಶಾಸ್ತ್ರೀಯವೂ ಶುದ್ಧವೂ ಆದ ಅರ್ಥನಿರ್ವಚನಗಳನ್ನು ಬರೆಸಿ ಸೇರಿಸಿದರು. ಗ್ರಂಥದ ಪದಾವಳಿಯು ೧೭೫೦೦೦ಕ್ಕೆ ಏರಿತು. ಇದೇ ಕ್ರಮದಲ್ಲಿ ಗ್ರಂಥವು ಪುನಃ ಪರಿಷ್ಕೃತವಾಗಿ ೧೯೧೮ರಲ್ಲಿ ಆರನೆಯ ಸಂಪುಟವಾಗಿ ಪ್ರಕಟಿಸಲ್ಪಟ್ಟಿತು. ಇದಕ್ಕೆ "ನೂತನ ಸರ್ವಜನಾಂಗ ನಿಘಂಟು" (New International Dictionary) ಎಂಬ ಹೆಸರು ಕೊಡಲ್ಪಟ್ಟಿತು. ಶಬ್ದಾವಳಿಯು ನಾಲ್ಕು ಲಕ್ಷಕ್ಕೆ ಏರಿತು.

೬. ಭಾಷಾಶಾಸ್ತ್ರಾತ್ಮಕ ನಿಘಂಟು (Philological Dictionary):—ಶಬ್ದಗಳ ಉತ್ಪತ್ತಿಯನ್ನು ಇತರ ಭಾಷೆಯ ತತ್ಸದೃಶ ಪದಗಳೊಡನೆ ಹೋಲಿಸಿ ಮೂಲವನ್ನು ಶೋಧಿಸಿ ವಿವರಿಸುವ ಕ್ರಮವು ಈಗ ಸರ್ವತ್ರ ಪ್ರಚಾರಕ್ಕೆ ಬಂದಿದೆ. ಇದನ್ನು ಮೊದಲು ವೆಬ್‌ಸ್ಟರನು ೧೮೨೮ರಲ್ಲಿ ಪ್ರಾರಂಭಮಾಡಿದನು. ಆದರೆ ಈ ಪ್ರಯತ್ನವು ಭಾಷಾಶಾಸ್ತ್ರವು ಹುಟ್ಟುವುದಕ್ಕೆ ಹಿಂದೆ ನಡೆದದ್ದರಿಂದ ತೀರಾ ಅಸಮರ್ಪಕವಾಗಿತ್ತು. ಮುಂದೆ ಇದು ಕೆಳಗೆ ಹೇಳುವ ಆಕ್ಸಫರ್ಡ ನಿಘಂಟುವಿನಲ್ಲಿ ಪರಾಕಾಷ್ಠೆಯನ್ನು ಪಡೆಯಿತು.

೭. ಸೂಕ್ತಿವಿಶ್ರುತಾರ್ಥ ನಿಘಂಟು :— ಒಂದು ಶಬ್ದದ ಶಾಸ್ತ್ರೀಯ ನಿರ್ವಚನವನ್ನು ಅದಕ್ಕೆ ಅರ್ಥವಾಗಿ ಬರೆದರೆ ಸರಿಯಾಗಿ ಬೋಧೆಯಾಗುವದಿಲ್ಲ. ನಿರ್ವಚನಗಳು (Definitions) ಒಗಟಿಯಂತೆ ಗಹನವಾಗಿರುವುವು. ಶಬ್ದದ ಅರ್ಥವು ಅದನ್ನು ಸಾಹಿತ್ಯ ಮಾಲೆಯಲ್ಲಿ ಪ್ರಯೋಗಿಸಿರುವ ವಿವಿಧ ವಾಕ್ಯಗಳನ್ನು ಎತ್ತಿ ನೋಡುವುದರಿಂದ ಮನಸ್ಸಿಗೆ ಚೆನ್ನಾಗಿ ಬೋಧೆಯಾಗುವುದು. ಜಾನಸನ್ನನು ಇಂಥಾ ಸೂಕ್ತಿಗಳನ್ನು ಅನೇಕವಾಗಿ ಸಂಗ್ರಹಿಸಿ ತನ್ನ ನಿಘಂಟುವಿನಲ್ಲಿ ಕೊಟ್ಟಿದ್ದನು. ರಿಚರ್ಡಸನ್ ಎಂಬಾತನು ಶಬ್ದಗಳಿಗೆ ನಿರ್ವಚನಗಳನ್ನೇ ನಿರಾಕರಿಸಿಬಿಟ್ಟು ಅವುಗಳ ಅರ್ಥವು ವಿಶ್ರುತವಾಗತಕ್ಕ ಸೂಕ್ತಿಗಳನ್ನು ಸಂಗ್ರಹಿಸಿ ಕೊಡುತ್ತಾ ಒಂದು ನಿಘಂಟುವನ್ನು ೧೮೩೬-೭ ರಲ್ಲಿ ಪ್ರಕಟಿಸಿದನು. ಈ ಕ್ರಮದಲ್ಲಿ ಎರಡು ಕೊರತೆಗಳುಂಟು. ಶಬ್ದದ ಅರ್ಥವು ಸಾಂಗೋಪಾಂಗವಾಗಿ ಗೊತ್ತಾಗಬೇಕಾದರೆ ಆ ಸಾಹಿತ್ಯಮಾಲೆಯಲ್ಲಿ ದೊರೆಯಬಹುದಾದ ಸಮಸ್ತ ಪುಸ್ತಕಗಳನ್ನೂ ತಿರುವಿಹಾಕಿ ಸೂಕ್ತಿಗಳನ್ನು ಎತ್ತಿ ತೆಗೆಯಬೇಕಾಗುವುದು. ಒಂದು ಪದವನ್ನು ಬರೆದು ಅದರ ಕೆಳಗೆ ಸುಮ್ಮನೆ ಹತ್ತಾರು ಸೂಕ್ತಿಗಳನ್ನು ಬರೆದು ಬಿಟ್ಟರೆ ಎಲ್ಲರೂ ಆ ಸೂಕ್ತಿಗಳಿಂದ ವಿಶ್ರುತವಾಗತಕ್ಕ ಅರ್ಥವನ್ನು ಉದ್ಧರಿಸಿಕೊಳ್ಳಲು ಸಮರ್ಥರಾಗಿಲ್ಲ. ಗ್ರಂಥಕರ್ತನು ಆ ಕಾರ್ಯವನ್ನೂ ಜತೆಗೆ ಮಾಡಿಕೊಡಬೇಕು. ಎಂದರೆ ನಿಘಂಟುವು ಪದಗಳ ನಿರ್ವಚನಗಳನ್ನೂ ಬಿಡದೆ ನಿರೂಪಿಸಬೇಕು. ಸೂಕ್ತಿಗಳನ್ನು ಪರಂಪರೆಯಾಗಿ ಉದಾಹರಿಸುವಾಗ ಕಾಲಮಾನಾನುಗುಣವಾಗಿ ವರ್ಷಸಮೇತ ಬರೆಯುವುದರಿಂದ ಒಂದು ಪದದ ಅರ್ಥವಿನ್ಯಾಸಗಳ ಚರಿತ್ರೆಯು ಕರತಲಾಮಲಕವಾಗುವುದು. ಈ ಮಹಾಕಾರ್ಯವನ್ನು ಆಕ್ಸಫರ್ಡ ನಿಘಂಟುವು ನೆರವೇರಿಸಿತು.

೮. ವಿಶ್ವಕೋಶಾತ್ಮಕ ನಿಘಂಟು (Encyclopaedic Dictionary) :— ವಿಶ್ವಕೋಶವು ವಿಚಾರಗಳನ್ನು ಅಕಾರಾದಿಯಾಗಿ ಆರಿಸಿಕೊಂಡು ಸಮಗ್ರವಾಗಿ ವಿವರಿಸುವುದು. ನಿಘಂಟು ಗ್ರಂಥವು ವಿಚಾರಗಳಿಗಿಂತಲೂ ಶಬ್ದಗಳನ್ನು ಅಧಿಕವಾಗಿ ಪುರಸ್ಕರಿಸಿ ಅವುಗಳ ಅರ್ಥವನ್ನು ಮಾತ್ರ ವಿವರಿಸುವುದರಲ್ಲಿ ಪರ್ಯಾಪ್ತವಾಗಿದೆ. ಈ ಎರಡು ಜಾತಿಯ ಗ್ರಂಥಗಳ ಪದ್ಧತಿಗಳನ್ನೂ ಸಂಕಲನಮಾಡಲು ಆಗಾಗ್ಗೆ ಪ್ರಯತ್ನವು ನಡೆದಿದೆ. ಅಮೇರಿಕಾದಲ್ಲಿ ವ್ಹಿಟ್ನೆ (Whitney) ಯು ನೇತೃತ್ವದಲ್ಲಿ ರಚಿತವಾದ "ಶತ

CC-0. Jangamwadi Math Collection. Digitized by eGangotri

ಮಾನ ನಿಘಂಟು" ( Century Dictionary ) ಎಂಬ ಆರು ಭಾಗ ( Volume ) ಗಳುಳ್ಳ ಗ್ರಂಥವು ಇದಕ್ಕೆ ಒಂದು ನಿದರ್ಶನವಾಗಿದೆ. ಈ ನಿಘಂಟುವಿನಲ್ಲಿ ಅಂಕಿತನಾಮಗಳೆಲ್ಲಾ ಸೇರಿಸಲ್ಪಟ್ಟು ವಿವರಿಸಲ್ಪಟ್ಟಿವೆ. ಶಬ್ದಗಳಿಗೆ ಸೂತ್ರದಂತೆ ಅರ್ಥ ಮಾತ್ರ ಬರೆದು ನಿಲ್ಲುವುದಿಲ್ಲ. " ನ್ಯಾಯದರ್ಶನ " ಎಂದರೆ ಆರು ದರ್ಶನಗಳಲ್ಲಿ ಒಂದು ದರ್ಶನ, ಎಂದು ಮಾತ್ರ ಹೇಳಿ ನಿಲ್ಲದೆ ಆ ದರ್ಶನದ ಸಾರಾಂಶಗಳೂ ಚರಿತ್ರೆಯೂ ಸಂಗ್ರಹವಾಗಿ ಹೇಳಲ್ಪಡುವವು. ಫ್ರೆಂಚ್‌ಭಾಷೆಯಲ್ಲಿ ಈ ಜಾತಿಯ ನಿಘಂಟುಗಳು ಬಹು ವಿಸ್ತಾರವಾಗಿ ಹುಟ್ಟಿವೆ.

೯. ಆಕ್ಸಫರ್ಡ ನಿಘಂಟು:— ಇಂಗ್ಲಿಷು ಭಾಷೆಯ ನಿಘಂಟುಗಳೆಲ್ಲಕ್ಕೂ ಸೀಮಂತಮಣಿಪ್ರಾಯವಾಗಿರುವ ಈ ಗ್ರಂಥವು ಮೇಲೆ ಹೇಳಿದ ವಿವಿಧ ಜಾತಿಯ ನಿಘಂಟುಗಳ ರಚನಾ ನಿಯಮಗಳನ್ನು ಇತೋಽಪ್ಯತಿಶಯವಾಗಿ ಪ್ರಯೋಗಿಸಿಕೊಂಡದ್ದಲ್ಲದೆ ಹೊಸ ನಿಯಮಗಳನ್ನೂ ಅನುಸರಿಸಿ ಹುಟ್ಟಿದೆ. ಇದು ಕಳೆದ ಎಂಟು ಶತಮಾನ ಕಾಲದಲ್ಲಿ ಇಂಗ್ಲಿಷು ಭಾಷೆಯಲ್ಲಿ ಪ್ರಚಾರದಲ್ಲಿದ್ದ ಸಮಸ್ತ ಶಬ್ದಗಳ ಅರ್ಥವನ್ನು ಸಂಪೂರ್ಣವಾಗಿ, ವ್ಯಾಕರಣ ಮೂಲ ಉಚ್ಚಾರಣೆಗಳ ಸಮೇತವಾಗಿ, ನಿರ್ಧರಪಡಿಸಲು ಪ್ರಯತ್ನಿಸಿದೆ. ಪದಗಳ ಅರ್ಥವನ್ನು ಶಾಸ್ತ್ರೀಯ ನಿರ್ವಚನದಿಂದಲೂ ಸೂಕ್ತಿಗಳ ಸಹಾಯದಿಂದಲೂ ಕ್ಲೃಪ್ತಪಡಿಸಲು ಬಗೆದಿದೆ. ಶಬ್ದೋತ್ಪತ್ತಿಯನ್ನು ಶುದ್ಧವಾಗಿ ಭಾಷಾಶಾಸ್ತ್ರದ ಸಾರಾಂಶಗಳಿಂದ ಗೊತ್ತುಹಚ್ಚಿದೆ. ಈ ಮಹಾಗ್ರಂಥದಲ್ಲಿ ಹದಿನೈದು ಸಾವಿರ ಪುಟಗಳೂ ಐದು ಲಕ್ಷಕ್ಕೆ ಮೇಲ್ಪಟ್ಟ ಪದಗಳೂ ಹದಿನೈದು ಲಕ್ಷ ಸೂಕ್ತಿಗಳೂ ಇವೆ. ಪದಗಳ ಅರ್ಥವನ್ನು ಐತಿಹಾಸಿಕ ಪರಂಪರೆಯಾಗಿ ನಿರ್ಣಯಿಸಲು ಕಳೆದ ಎಂಟು ಶತಮಾನಗಳಿಂದ ಇಂಗ್ಲಿಷು ಭಾಷೆಯಲ್ಲಿ ಹುಟ್ಟಿರುವ ಸಕಲ ವಿಧವಾದ ಬರವಣಿಗೆಗಳನ್ನೂ ಆದ್ಯಂತವಾಗಿ ಶೋಧಿಸಿ ಐವತ್ತು ಲಕ್ಷಕ್ಕೆ ಮೇಲ್ಪಟ್ಟ ಸೂಕ್ತಿಗಳನ್ನು ಶೇಖರಿಸಿಕೊಂಡು ತತ್ಸಹಾಯದಿಂದ ನಿಘಂಟುವನ್ನು ರಚಿಸಿರುವರು. ಈ ಮಹಾಕಾರ್ಯವನ್ನು ಇಂಗ್ಲೆಂಡಿನ ಭಾಷಾಶಾಸ್ತ್ರಸಂಘ ( Philological Society ) ವು ಕೈಕೊಂಡಿತು. ಸೂಕ್ತಿಗಳ ಸಂಗ್ರಹವು ೧೮೫೭ ರಿಂದ ಪ್ರಾರಂಭವಾಯಿತು. ಹರ್ಬರ್ಟ ಕೋಲರಿಡ್ಜ ೧೮೫೭-೬೧, ಫರ್ನಿವಾಲ್ ೧೮೬೧-೭೮, ಸರ್ ಜೇಮ್ಸ ಮರ್ರೇ ೧೮೭೮-೧೯೧೫, ಬ್ರಾಡ್ಲೇ ೧೯೧೫-೨೮ ಎಂಬುವರು ಇದಕ್ಕೆ ಚಾಲಕರಾಗಿದ್ದರು. ೧೮೭೮ರ ವೇಳೆಗೆ ಇಪ್ಪತ್ತು ಲಕ್ಷ ಸೂಕ್ತಿಗಳೂ ೧೮೮೮ರ ವೇಳೆಗೆ ಮೂವತ್ತೈದು ಲಕ್ಷ ಸೂಕ್ತಿಗಳೂ ಶೇಖರಿಸಲ್ಪಟ್ಟಿದ್ದವು. ಈ ಶೇಖರಣೆಯ ಕಾರ್ಯವನ್ನು ಚಾಲಕರ ಮೇಲ್ವಿಚಾರಣೆಯಲ್ಲಿ ಎರಡು ಮೂರು ಸಾವಿರ ಮಂದಿ ವಿದ್ಯಾವಂತರು ದೇಶದ ಸಕಲ ಭಾಗಗಳಿಂದಲೂ ಉಚಿತವಾಗಿ ಮಾಡಿಕೊಟ್ಟರು. ೧೮೭೯ರಲ್ಲಿ ಮೇಲ್ಕಂಡ ಸಂಘದವರಿಗೂ ಆಕ್ಸಫರ್ಡಿನ ಕ್ಲಾರೆಂಡೆನ್ ಮುದ್ರಣಾಲಯದವರಿಗೂ ಕರಾರು ಹುಟ್ಟಿ ಈ ಗ್ರಂಥದ ಮುದ್ರಣ ಕಾರ್ಯವು ಪ್ರಾರಂಭವಾಯಿತು. ಗ್ರಂಥದ ಪ್ರಥಮ ಭಾಗವು ೧೮೮೪ರಲ್ಲಿ ಹೊರಬಿದ್ದಿತು. ಸಂಪೂರ್ಣ ಗ್ರಂಥವು ೧೯೨೮ರಲ್ಲಿ ಮುಕ್ತಾಯವಾಯಿತು. ಜನಸಾಮಾನ್ಯಕ್ಕೆ ಈ ಗ್ರಂಥದ ಪ್ರಯೋಜನವನ್ನು ಹೆಚ್ಚಿಸುವ ಸಲುವಾಗಿ ಎರಡುಸಾವಿರದ ಐದುನೂರು ಪುಟಗಳುಳ್ಳ ಎರಡು ಭಾಗಗಳಿಂದ ಕೂಡಿದ ಒಂದು ಸಂಗ್ರಹ ಗ್ರಂಥವು " ಹ್ರಸ್ವ ಆಕ್ಸಫರ್ಡ ನಿಘಂಟು " ( The Shorter Oxford Dictionary ) ಎಂಬ ಹೆಸರಿನಿಂದ ೧೯೩೩ರಲ್ಲಿ ಪ್ರಕಟಿಸಲ್ಪಟ್ಟಿದೆ. ಮೂಲಗ್ರಂಥಕ್ಕೆ ನೂತನ ಇಂಗ್ಲಿಷು ನಿಘಂಟು ( The New English Dictionary ) ಎಂಬ ಹೆಸರಿದ್ದರೂ ಅದು ಆಕ್ಸಫರ್ಡ ನಿಘಂಟು ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿದೆ.

ಭಾಷಾಶಾಸ್ತ್ರಾನುಗುಣವಾದ ಶಬ್ದೇತಿಹಾಸವು ಈ ಮಹಾ ನಿಘಂಟುವಿನ ಮುಖ್ಯ ವೈಲಕ್ಷಣ್ಯವಾಗಿದೆ. ಶಬ್ದಗಳ ಅರ್ಥಗಳು ಸರ್ವದಾ ಪಲ್ಲಟವಾಗುತ್ತಿವೆ. ಬಹು ಶಬ್ದಗಳಿಗೆ ನಾನಾರ್ಥಗಳು ಹುಟ್ಟಿವೆ. ಈ ಅರ್ಥಪ್ರಯೋಗಗಳುಳ್ಳ ಸೂಕ್ತಿಗಳನ್ನು ಉದಾಹರಿಸಿ ಈ ವಿವಿಧಾರ್ಥಗಳನ್ನು ಒಂದು ಕಡೆ ಸಂಗ್ರಹಿಸಿ ಪದಾಧಾರದಿಂದ ಈ ಶಬ್ದದ ನಿರ್ವಚನವನ್ನು ಉದ್ಧರಿಸಿಕೊಳ್ಳಬಹುದು. ಈ ಘಟ್ಟದವರೆಗೂ ಹಿಂದಲ ನಿಘಂಟುಗಳು ಬಂದು ಮುಟ್ಟಿವೆ ಆದರೆ ಈ ನಿಘಂಟುಗಳ ಸಹಾಯದಿಂದ ಯಾವುದಾದರೂ ಒಂದು ಪದವು ಭಾಷೆಗೆ ಯಾವಾಗ ಬಂದಿತು ? ಯಾವಾಗ ಖಿಲವಾಯಿತು ? ಯಾವಾಗ ಯಾವ ಯಾವ ಅರ್ಥವನ್ನು ಪಡೆಯಿತು ? ಎಂಬ ಅಂಶಗಳು ತಿಳಿದು ಬರುವುದಿಲ್ಲ. ಈ ಹೊಸ ನಿಘಂಟುವು ಈ ಅಂಶಗಳನ್ನು ವಿವರಿಸಿ ಪ್ರತಿಯೊಂದು ಶಬ್ದದ ಇತಿಹಾಸವನ್ನೂ ಪರಂಪರೆಯಾಗಿ ತಿಳಿಸಲು ಪ್ರವೃತ್ತವಾಯಿತು. ಇದಕ್ಕಾಗಿ ಇದು ಕಳೆದ ಎಂಟು ನೂರು ವರ್ಷಗಳ ಕಾಲದಲ್ಲಿ ಭಾಷೆಯಲ್ಲಿ ಬಳಕೆಯಲ್ಲಿದ್ದ ಸಮಸ್ತ ಪದಗಳನ್ನೂ ಅವುಗಳ ಅರ್ಥಪ್ರಯೋಗಗಳನ್ನೂ ವರ್ಷಾನುಗುಣವಾಗಿ ಶೇಖರಿಸಿಕೊಂಡು, ಶಬ್ದದ ವಿವಿಧಾ

CC-0. Jangamwadi Math Collection. Digitized by eGangotri

ರೂಪಕವಾದ ಸೂಕ್ತಿಗಳನ್ನೂ ಪರ್ಯಾಯಾರ್ಥಗಳನ್ನೂ ತನ್ನ ಕ್ರಮದಿಂದ ತಿಳಿಸುತ್ತಾ ಹೋಗುತ್ತಿದೆ. ಇದರಿಂದ ಇಂಗ್ಲಿಷು ಭಾಷೆಯ ಅಖಿಲ ಪದಗಳ ಚರಿತ್ರೆಯೂ ಆದ್ಯಂತವಾಗಿ ಈ ಗ್ರಂಥದಲ್ಲಿ ಕರತಲಾಮಲಕವಾಗಿ ಪ್ರಯೋಗೋದಾಹರಣೆಗಳ ಸಮೇತ ದೊರೆಯುತ್ತದೆ.

ಇದು ವರೆಗೂ ನಾವು "ಸಾಮಾನ್ಯ ನಿಘಂಟು" (General Dictionaries)ಗಳ ವಿಚಾರವನ್ನು ನೋಡಿದೆವು. ಕಳೆದ ಎರಡು ಶತಮಾನಗಳಿಂದಲೂ ಯಾವುದಾದರೂ ಒಂದು ಕ್ಲೃಪ್ತ ಕಾಲ, ಪ್ರಾಂತ್ಯ, ಭಾಷಾ ಪ್ರಭೇಧ, ಶಾಸ್ತ್ರಭಾಗ, ವಿಷಯ ವಿಚಾರ ಮೊದಲಾದುವುಗಳನ್ನು ಕುರಿತು "ಶಾಖಾ-ನಿಘಂಟು" (Sectional Dictionaries)ಗಳು ಹೇರಳವಾಗಿ ಹುಟ್ಟಿವೆ. ವೆಬ್‌ಸ್ಟರ್ ಮೊದಲಾದವರ ದೊಡ್ಡ ನಿಘಂಟುಗಳು ಇಂಥ ಶಾಖಾ ವಿಚಾರಗಳನ್ನು ಪರಿಶಿಷ್ಟಗಳಲ್ಲಿ ಪ್ರಸ್ತಾಪಿಸುವ ಪದ್ಧತಿ ಹೆಚ್ಚುತ್ತಿದೆ.

ನಿಘಂಟು ರಚನಾ ಶಾಸ್ತ್ರದ ಬಳೆವಣಿಗೆಯು ಆಕ್ಸ್‌ಫರ್ಡ್ ನಿಘಂಟುವಿನಲ್ಲೇ ಮುಗಿಯಿತೇ ಅಥವಾ ಇನ್ನೂ ಮುಂದುವರಿಯಬಲ್ಲುದೇ ?

ಇಂಗ್ಲಿಷು ಶಬ್ದ-ನಿಘಂಟುವಿನ ಚರಿತ್ರೆಯ ಘಟ್ಟಗಳನ್ನು ಸಂಗ್ರಹವಾಗಿ ಹೇಳಿ ಈ ಲೇಖನವನ್ನು ಮುಗಿಸಬಹುದು: (೧) ಆದಿಕಾಲದಿಂದ ೧೪೦೦ರ ವರೆಗಿನ ಕಾಲದಲ್ಲಿ ಲಾಟೀನ ಭಾಷೆಯನ್ನು ಕಲಿಯುವ ಸೌಕರ್ಯಕ್ಕಾಗಿ ಶಬ್ದಕೋಶ (Vocabulary) ಗಳೂ ಅರ್ಥಕೋಶ (Glossary) ಗಳೂ ಅತಿ ಸಂಕುಚಿತವಾಗಿ ಹುಟ್ಟಿದವು. (೨) ಹದಿನೈದನೆಯ ಶತಮಾನದಲ್ಲಿ ಇವುಗಳಿಂದ ಮುಂದುವರಿದ ನಿಜವಾದ ಲಾಟೀನ-ಇಂಗ್ಲಿಷು ಮತ್ತು ಇಂಗ್ಲಿಷು-ಲಾಟೀನ ನಿಘಂಟುಗಳು ತಲೆದೋರಿದವು. (೩) ಹದಿನಾರನೆಯ ಶತಮಾನದಲ್ಲಿ ಇಂಗ್ಲಿಷಿಗೂ ಫ್ರೆಂಚ್ ಮೊದಲಾದ ಇತರ ಭಾಷೆಗಳಿಗೂ ಅರ್ಥ ಹೇಳತಕ್ಕ ನಿಘಂಟುಗಳು ಕಲ್ಪಿತವಾದುವು. (೪) ಹದಿನೇಳನೆಯ ಶತಮಾನದಲ್ಲಿ ಇಂಗ್ಲಿಷು-ಇಂಗ್ಲಿಷು ನಿಘಂಟು ಕೇವಲ ಕ್ಲಿಷ್ಟಪದಗಳನ್ನು ಮಾತ್ರ ಕುರಿತು ಪ್ರಾರಂಭವಾಯಿತು. (೫) ಕಳೆದ ಎರಡು ಶತಮಾನಗಳಲ್ಲಿ ಬೇಯಿಲಿಯ ಸಂಪೂರ್ಣ ಭಾಷೆಯ ಮತ್ತು ಮೂಲಾರ್ಥ ನಿರೂಪಕ ನಿಘಂಟು, ಜಾನಸನ್ನನ ಅರ್ಥ ನಿರ್ಧಾರಕ ನಿಘಂಟು, ವಾಕರನ ಉಚ್ಚಾರಣೆಯ ನಿಘಂಟು, ವೆಬ್‌ಸ್ಟರನ ನಿರ್ವಚನ ಮತ್ತು ಭಾಷಾಸಾದೃಶ್ಯ ನಿರೂಪಕ ನಿಘಂಟು, ರಿಚರ್ಡಸನ್ನನ ಸೂಕ್ತಿ ವಿಶ್ರುತಾರ್ಥ ನಿಘಂಟು, ವ್ಹಿಟ್ನಿಯ ವಿಶ್ವಕೋಶಾತ್ಮಕ ನಿಘಂಟು, ವಿವಿಧ ಶಾಖಾ ನಿಘಂಟುಗಳು, ಸರ್ವಶಬ್ದೇತಿಹಾಸ ನಿರೂಪಕವಾದ ಆಕ್ಸ್‌ಫರ್ಡ ನಿಘಂಟು ಇವುಗಳು ಪರಂಪರೆಯಾಗಿ ಹುಟ್ಟಿ ನಿಘಂಟುರಚನಾಶಾಸ್ತ್ರವನ್ನು ಅತ್ಯಗಾಧವಾಗಿ ಬಳೆಯಿಸಿವೆ.




ಗಜಕರ್ಣ, ಹುರುಕು, ತದ್ದು, ಸಡ ಮುಂತಾದ ಚರ್ಮರೋಗಗಳಿಂದ ಪೀಡಿತ ಜನರಿಗೆ ಒಂದೇ ಉಪಾಯವು.

ರಜಿಸ್ಟರ್ಡ

ಗುಣ ಬರದಿದ್ದರೆ ಹಣ ತಿರುಗಿ ಕೊಡುವೆವು. ಬಾಟಲಿಯ ಬೆಲೆ ೪ ಆಣೆ.

ಸ್ಟಾರ್ ಕಂಪನಿ, ಬೆಳಗಾವಿ




CC-0. Jangamwadi Math Collection. Digitized by eGangotri

THE

# United India Life Assurance Co. Ltd.

## MADRAS

( Estd : 1906 )

**SPECIAL FEATURES**

Compound Bonus
Trust Fund under Government Trustee
Directors elected from Policy-holders

Assets exceed 87 lakhs
Annual Income 21 lakhs
Claims paid till now exceed 30 lakhs

**Branches all over India, Burma & Ceylon.**

*For Agency terms and other particulars, apply to :*

*The Organiser,*

**The United India Life ssurance Co. Ltd.,**
**Madiman Building, HUBLI ( Dt. Dharwar )**



# ಡೋಂಗರೆ ಇವರ ಬಾಲಾಮೃತವು

ಇದ್ದದ್ದಾದರೂ ಏನು ?

(೧) ಅದು ಅಶಕ್ತ ಮತ್ತು ರೋಗಿಷ್ಠ ಮಕ್ಕಳನ್ನು ಬೇಗ ವಾಸಿಪಡಿಸುತ್ತದೆ.
(೨) ಅದರಲ್ಲಿ ಎಲುಬುಗಳನ್ನು ಗಟ್ಟಿಗೊಳಿಸುವ ಎಲ್ಲ ಸತ್ತ್ವಾಂಶಗಳೂ ಇವೆ.
(೩) ಅದು ಚಿಕ್ಕಮಕ್ಕಳಿಗೆ ಉತ್ಕೃಷ್ಟ ಪೌಷ್ಟಿಕ ಔಷಧಿಯಾಗಿದೆ.
(೪) ಅದು ಕೆಮ್ಮಿನ ಕೆಟ್ಟ ವಿಕಾರವನ್ನು ಗುಣಪಡಿಸುವುದಲ್ಲದೆ, ಹಲ್ಲುಬರುವ ಹೊತ್ತಿನಲ್ಲಿ ಮಕ್ಕಳಿಗೆ ಉಪಯುಕ್ತವಾಗಿದೆ.



ಎಲ್ಲೆಲ್ಲಿಯೂ ಸಿಗುತ್ತದೆ.

CC-0. Jangamwadi Math Collection. Digitized by eGangotri

# ಉಮರನನ್ನು ಕುರಿತು



ಕವಿಯೆ,

ಆ ಮಾತುಗಳನ್ನು ನೀನು ಹೇಗೆ ಬರೆದೆ?

ಯಾವ ಭಾವವು ನಿನ್ನ ಹೃದಯವನ್ನು ಅರಳಿಸಿತ್ತು? ಯಾವ ರಾಗವು ನಿನ್ನ ಬುದ್ಧಿಯನ್ನು ರಂಜಿಸಿತ್ತು?

ನೀನು ಕುಡಿದ ಮದಿರೆಯಲ್ಲಿ ನಿನ್ನ ಲೇಖನಿಯನ್ನು ಅದ್ದಿ ಬರೆದಿದ್ದೆಯೊ?

ಚೆಂಗುಲಾಬಿಯ ಕೊನೆಯೊಂದರಲ್ಲಿ ಕುಳಿತು ಹಾಡುವ ಬುಲ್‌ಬುಲನ ಗಾನವನ್ನು ಕೇಳಿ ಪ್ರಮತ್ತನಾಗಿ ಆ ಮಾತುಗಳನ್ನು ಹೇಳಿದೆಯೊ?

ಗೂಢ ನಿಶೀಥ ಸಮಯದಲ್ಲಿ, ಬಾಂದಳದ ತಾರೆಗಳು ಅರಳಿರುವಾಗ, ದೂರದೂರದ ಪೂರ್ವದಿಕ್ಕಿನ ಚಂಪಕವು ಮಂದಾನಿಲನೊಂದಿಗೆ ಪರಿಮಳವನ್ನು—ಜ್ಞಾನಪರಿಮಳವನ್ನು — ಹೇರಿ ಕಳುಹಿದಾಗ, ಅದರ ಗಂಧವನ್ನು ಆಘ್ರಾಣಿಸಿ ಆ ಗೀತಗಳನ್ನು ಹಾಡಿದೆಯಾ?

ಇಲ್ಲವೆ, ನಿನಗೆ ಬಹುಪ್ರೀತನಾದ ಎಳೆಯ ಚಂದಿರನನ್ನು ಹಿಡಿದುಕೊಂಡು ವ್ಯೋಮತಲದಲ್ಲಿ—ಕಾಲದ ಕೊಲೆಯನ್ನು ಮೀರಿ ನಿಲ್ಲಲೆಂದು, ಆ ಮಾತುಗಳನ್ನು ಕೊರೆದೆಯಾ ನಿನ್ನ ಅಮರಹಸ್ತದಿಂದ?

ಮಾಣಿಕದ ಮಧುವನ್ನು ಕುಡಿದು, ಅನುರಾಗದ ರಾಗಗೊಂಡ ನಿನ್ನ ನಲ್ಲೆಯ ಚೆಲುವುದುಟಿಗಳನ್ನು ಚುಂಬಿಸಿ, ಕೃತಕಾಮನಾಗಿ, ರಸಿಕರಾಜನಾಗಿ, ಕಲಾಕೋವಿದನಾಗಿ, ಕವಿಯಾಗಿ ಬರೆದೆಯೊ ಆ ಅಮರಗೀತಿಗಳ?

ನಿನ್ನ ಹೃದಯದ ರಕ್ತದಲ್ಲಿಯೆ ನಿನ್ನ ಕಿರುಬೆರಳನ್ನು ಅದ್ದಿ ಜೀವನದ ದುಃಖವನ್ನು ಸಹಿಸಲಾಗದೆ ಗೋಳಿಟ್ಟು ನಿನ್ನ ಚಿತ್ತಭಿತ್ತಿಯ ಮೇಲೆ ಆ ಅನುಭವದ ಮಾತುಗಳನ್ನು ಬರೆದಿಟ್ಟೆಯೊ?

ಪ್ರಣಯದಿಂದ ನಿನ್ನ ಹೃದಯವು ಪ್ರಫುಲ್ಲಿತವಾಗಿತ್ತೆ?

ಮೃತ್ಯುವಿನ ಭಯದಿಂದ ತಲ್ಲಣಿಸುತಿತ್ತೆ?

ಚಿಂತೆ ವ್ಯಸನಗಳೆಂಬ ರೋಗಗಳಿಂದ ಕ್ಷೀಣವಾಗಿತ್ತೆ?

ಎಲ್ಲವೂ ಕ್ಷಣಿಕ ಎಂಬ ಅರಿವಿನಿಂದ ಜುಗುಪ್ಸೆಗೊಂಡಿತ್ತೆ?

ಈ ಸರ್ವರೋಗಗಳಿಗೂ ಮದ್ದಾದ ಮದಿರೆಯು ಮನವನ್ನು ಅಷ್ಟು ಮೋಹಿಸಿತ್ತೆ?

ಗೆಳೆಯ, ನೀನನ್ನುವಷ್ಟು ನಿನ್ನ ಮನದನ್ನೆಯು ಸುಂದರಿಯೆ? ಮುದುಕನಾದರೂ ನಿನ್ನನ್ನು ಅಷ್ಟು ಪ್ರೀತಿಸುವಳೆ? ಅಥವಾ—ಯಾರು ಬಲ್ಲರು ಕವಿಗಳ ಹುಚ್ಚನ್ನು!—ಹಾಫಿಸನಂತೆ ಒಬ್ಬ ಎಳೆಯ ಚೆಲುವನನ್ನು ಮೋಹಿಸಿ ನಲ್ಲೆಯೆಂದೂ, ರನ್ನೆಯೆಂದೂ, ಚೆಲುವೆಯೆಂದೂ ಬಗೆಬಗೆದು ಕರೆದೆಯಾ?

ಇಲ್ಲವೆ, ಕವಿತಾಗುಣವನ್ನೆ ಸ್ತ್ರೀ ಎಂದು ಕರೆದು ಮೋಹಿತನಾದೆಯೊ? ಪರಮಜ್ಞಾನಿಯಾದ ನೀನು ಸೌಂದರ್ಯವನ್ನೆ ಮನದನ್ನೆಯೆಂದು ಭಾವಿಸಿಕೊಂಡೆಯೊ?

ಅಯ್ಯ, ನಿನ್ನ ಪ್ರಣಯಕಲೆಯಲ್ಲಿ ಸಂದೇಹಪಟ್ಟು ನಿನಗೆ ಅಪಚಾರ ಮಾಡಿದೆನು. ನಿನ್ನವಳು ಮುದ್ದುಗುವರಿ ಎಂದು ಬಲ್ಲೆ. ಆಕೆ ರಸಿಕಳೂ ಎಂದು ಬಲ್ಲೆ. ನಿನ್ನನ್ನು ಅತಿ ಪ್ರೀತಿಸುವವಳು ಎಂದು ಭಾವಿಸುತ್ತೇನೆ. ಕವಿಯೆ, ನೀನು ಹಾಡುವಾಗ, ಆಕೆ—ನಿನ್ನ ಮಾತು ಅರ್ಥವಾಗುವುದಿಲ್ಲವೆಂದೂ, ತಲೆ ನೋಯುವದೆಂದೂ, ಒಂದು ದಿನವೂ ಹೇಳಲಿಲ್ಲವೆ? ಗೂಢ ಗಹನವಾದ ಜಗತ್ತಿನ ಮರ್ಮವನ್ನು ನೀನು ವರ್ಣಿಸುವಾಗ ನಿನ್ನ ಮಾತುಗಳನ್ನು ಕೇಳುವ ನಿನ್ನ ಮನೆಯಾಕೆ ಮೌನವಾಗಿ ನಿದ್ದೆ ಹೋಗುತಲಿರಲಿಲ್ಲವೆ? ಹೇಳು, ನನ್ನೊಂದಿಗೆ ನಿನಗೆ ಸಂಕೋಚವೆ?

ನಿನ್ನನ್ನು ವಿಲಾಸಿಯೆಂದೂ ವಿಟನೆಂದೂ ಜನರು ಕರೆವರಾದರೆ ಅವರೆಂತಹ ಹುಚ್ಚರು!

ದುಃಖದ ಪರಮ ಆಳವನ್ನು ಮುಟ್ಟಿದಿದ್ದರೆ, ನಿರಾಶೆಯ ತುಟ್ಟತುದಿಯನ್ನು ಹತ್ತದಿದ್ದರೆ ಆ ಮಾತುಗಳು ನಿನ್ನ ಬಾಯಿಯಿಂದ ಹೇಗೆ ಬರುತ್ತಿದ್ದವು?

**ಲೇಖಕರು:— ಶ್ರೀಮಾನ್ ವೈ. ಎಂ. ಷಣ್ಮುಖಯ್ಯ ಬಿ. ಎ.**

CC-0. Jangamwadi Math Collection. Digitized by eGangotri

ಬಿದಿಯೆಂಬ ರಾಕ್ಷಸನು ತನ್ನ ಕರಾಲ ದವಡೆಯಿಂದ ಹಸಿವು ದುಃಖ ನಿರಾಶೆ ರೋಗ ಮೃತ್ಯುಗಳೆಂಬ ಫಲಗಳನ್ನು ಭೂಲೋಕಕ್ಕೆ ಉರುಳಿಸುತ್ತಿರುವಾಗ ವಿಷಾದಗೊಂಡು ಮೌನದಿಂದ ಆ ಪರಿಕ್ರಮವನ್ನು ನೋಡುತ್ತ ನಿಂತಿದ್ದೆ ಯಲ್ಲವೆ?

ಜನನ ಮರಣವೆಂಬ ಎರಡು ಬಾಗಿಲುಳ್ಳ ದೊಡ್ಡಿಯೊಳಕ್ಕೆ ಎತ್ತಣಿಂದಲೊ ಬಂದು ಮೇಣೆತ್ತಲೊ ಪೋಗುವ ಅನಂತಾನಂತ ಕುರಿಗಳು ನಿನ್ನ ಕಣ್ಣಿಗೆ ಬೀಳುತ್ತಿದ್ದರಲ್ಲವೆ?

ಅವು ಬಂದುದೆಲ್ಲಿಂದ? ಹೋದವೆಲ್ಲಿಗೆ? ಉತ್ತರವನ್ನು ಎಲ್ಲರೂ ಹೇಳಿದರು. ಅಕಟಾ! ಒಬ್ಬರೂ ಹೇಳಲಿಲ್ಲ.

ಆ ಕುರಿಗಳ ಹಾರಾಟವೇನು! ಅವು ಒದರುವುದೇನು! ಅವುಗಳ ಹೋರಾಟವೇನು! ನೀನು ನಕ್ಕೆಯಲ್ಲವೆ ಅವುಗಳನ್ನು ನೋಡಿ?

ಮುಹಮ್ಮದನ ಐಶ್ವರ್ಯವೇನಾಯಿತು?
ಕಾಲೀಫರ ದೌಲತ್ತು ಎಲ್ಲಡಗಿತು?
ಜಗದ್ವಿಜಯಿ ಚಂಗೀಸ್‌ಖಾನನೆಲ್ಲಿ?
ಕವಿಯಾಗಿ ಬರೆದಾ ಫಿರ್ದೂಸಿಯೆಲ್ಲಿ?

ನಲ್ಲೆಯನ್ನು ಚುಂಬಿಸಿದ ಅಧರವೇನಾಗುವುದು?—ಕೊನೆಯ ದಿನ ಕಟಬಾಯ ಜೊಲ್ಲ ಸುರಿಸುವುದು!

ರಾಜದಂಡವನ್ನು ಹಿಡಿದ ಕೈಯದೆಲ್ಲಿ?—ಗೋರಿಯಲ್ಲಿ ಗೆದ್ದಲು ಹಿಡಿದು ಕೊಳೆಯುತಿಹುದು!

ಪಂಡಿತರ-ತಾರ್ಕಿಕರ ಸಾಧು-ಸನ್ಯಾಸಿಗಳ ಪಾಡೇನು? ಪೇ ದುವನೆ ಪೇಳಿದ ಅರೆಮರುಳುಗಳ ಪಾಡು!

ಕವಿಯೆ, ಇಂತಿದನೊರೆದವರ ಗತಿಯೇನು?—ಬರಿ ಬಯಲೆ ಅವರ ಗತಿ!

ಏತಕ್ಕೆ ಹಾಡಿದೆವು?
ಏತಕ್ಕೆ ಹಾಡುವೆವು?
ಹೂವು ಅರಳುವುದೇತಕ್ಕೆ?
ಕ ಗಾಳಿ ತೀಡುವುದದೇತಕ್ಕೆ?
ಮಗುವು ನಗುವುದೇಕೆ?
ಊ ಕಿಲೆಯ ಗೀತವೇಕೆ?

ಹಾಡುಗಳನ್ನು ಹಾಡಲೆಂದೇ ಬಿದಿಯು ಪುಟ್ಟಿಸಿತೊ? ದುಃಖದ ಕರಕರೆಯ ಕೊನೆಯಲ್ಲಿ, ಕರಿಯ ದುಕೂಲಕ್ಕೆ ಸ್ವರ್ಣದಂಚನ್ನು ಕೋದಂತೆ, ಸುಖದ ಮಾತನ್ನು ಹೇಳಿ, ಸುಂದರ ಶಬ್ದಗಳನ್ನು ಪೋಣಿಸಲೆಂದು ಎಳೆತಂದಿತೊ ವಿಧಿಯು ಈ ಭವದ ಬವಣೆಗೆ?

ಬಾರದ ಭವದಲ್ಲಿ ಬಂದು ಅನುಭವಿಸಿ ಬರೆದೆವು! ಅಪಶಕುನವಾಯಿತೆ? ಅಪಶ್ರುತಿಯಾಯಿತೆ? ಒಂದನ್ನೂ ಲೆಕ್ಕಿಸಲಿಲ್ಲ. ದೈವ ಬರೆವಂತೆ, ಪ್ರತಿದೈವವಾಗಿ ಲೆಕ್ಕಣಿಯು ಬರೆಯುತ್ತ ಹೋಯಿತು. ಕಣ್ಣಿ ಕಿರಿಚಿದರೇನು? ಬಳ್ಳು ಬೊಗಳಿದರೇನು?

ನಿನ್ನ ಗಾನಕ್ಕೆ ಆ ಹುಳುಗಳ ಕೂಗುವಿಕೆಯಿಂದ ವಿಶ್ರುತಿಯಾಯಿತೆ? ಗಾನದ ಹೊನಲು ತಡೆಗಟ್ಟಿತೆ?

ಕವಿಯೆ, ಕವಿಶೀರ್ಷಮಣಿಯೆ, ವಿಶುದ್ಧವಾದ ನಿನ್ನ ರಾಗವೊಂದೆ ನನ್ನ ಕಿವಿಗೆ ಕೇಳಿಸುತ್ತಿರುವುದು.

ಎಲ್ಲರ ಗತಿಯನ್ನು ಹೇಳಿದ ನೀನು, ಎಲ್ಲದೂ ಶೂನ್ಯವೆಂದು ಬರೆದ ನೀನು ನಿನ್ನ ಗತಿಯನ್ನು ಅರಿತುಕೊಂಡಿರಬೇಕು.

ರಾಜಾಧಿರಾಜರಿಂದ ಪುರಸ್ಕೃತನಾದರೆ ನಿನಗೆ ಸುಖವೆನಿಸಿತೆ? ಬೀದಿಯ ಭಿಕಾರಿಯೊಬ್ಬನು ನಿಂದಿಸಿದಾಗ ದುಃಖವಾಯಿತೆ?

ನೀನು ಹೋದ ದಿನ ನಿನ್ನ ದೇಹವನ್ನು, ಅತ್ತರುಗಳಿಂದ ತೊಳೆದು, ಹಿಮಾಲಯದ ಗಂಧಗಳಿಂದ ಪೂಸಿ, ಹಿಂದುಸ್ಥಾನದ ವಸ್ತ್ರಗಳಿಂದ ಮುಚ್ಚಿ, ಗುಲಿಸ್ಥಾನದ ಹೂವುಗಳಿಂದ ಅರ್ಚಿಸಿ, ನಿನ್ನ ಕೊನೆಯ ಪಯಣದ ದಾರಿಯಲ್ಲಿ ನಿನ್ನ ದೇಶದ ಅನರ್ಘ್ಯ ರತ್ನಗಂಬಳಿಗಳನ್ನು ಹಾಸಿ, ಷಿರಾಸ್ ಮಧುವನ್ನು ದಾರಿಯುದ್ದಕ್ಕೂ ಸುರಿದು, ಏಸೊಂದು ಜನ ಸುಲ್ತಾನರು, ಸ್ವರ್ಗದಲ್ಲಿಲ್ಲದ ಸುಂದರಿಯರು ನಿನ್ನ ಶವವನ್ನು ಸುತ್ತುಗಟ್ಟಿ-ಕಣ್ಣೀರು ಕರೆದು-ಹೊತ್ತುಕೊಂಡು ಹೋಗಿದ್ದರೆ ನಿನ್ನ ಆತ್ಮನು ಪುನೀತನಾಗುತ್ತಿದ್ದನೆ?

ಫಕೀರನಾಗಿ ಮುಸಾಫರನಾಗಿ ನೀನು ಹೋಗಿದ್ದರೆ ಆತ್ಮನಿಗೆ ಸಂಕಟವಾಗುತ್ತಿತ್ತೆ?

ಬಾಲರವಿಯು ತನ್ನ ಎಳೆಯ ಕಿರಣಗಳಿಂದ ನಿನ್ನ ಸಮಾಧಿಯನ್ನು ಚಿತ್ರಿಸುವನೆ? ಮಹಾಕವಿಯು ಹೋದನೆಂದು ಶೋಕಾರ್ತವಾದ ಗಿಡವೊಂದು ಬಾಗಿ ನಿನ್ನ ಗೋರಿಗೆ ನೆಳಲನ್ನು ಕೊಡುವುದೆ? ತನ್ನನ್ನು ಮೆಚ್ಚಿದ ಬಲುಪ್ರಿಯನಾದ ಕವಿಯು ಇಲ್ಲಿ ಮಲಗಿಹನೆಂದು ನಿನ್ನ ಗುಲಾಬಿಯ ಹೂವು ನಿನಗೆ ಪರಿಮಳವನ್ನು ನೀಡುವುದೆ? ತುಂಬು ಚಂದಿರನ ಬೆಳಕಿನಲ್ಲಿ, ಗಿಡವೊಂದರಲ್ಲಿ ಕುಳಿತ ಬುಲ್‌ಬುಲವು ನಿನ್ನ ಚರಮಗೀತೆಯನ್ನು ಹಾಡುತ್ತ ಅಳುವುದೆ? ವಿರಹಿಣಿಯಾದ ನಿನ್ನ ಸತಿಯು ನೀನು ತುಡಿದ ಬಟ್ಟೆಲನ್ನು ಬೋರಲಾಗಿಟ್ಟು, ನಿನ್ನ ಗೋರಿಯ ಮೇಲೆ ಬಿದ್ದು ತನ್ನ ರನ್ನದ ಮೈಯನ್ನು ಧೂಳಿನಲ್ಲಿ ಬೆರೆಸುವಳೆ?

ಕವಿಯೆ, ಏನಿದ್ದರೇನು? ಏನಿಲ್ಲದಿದ್ದರೇನು? ನೀನು ಹಾಡಿದೆ; ನಿನ್ನ ಹಾಡನ್ನು ಕೇಳುತ್ತಿದ್ದೇನೆ.

CC-0. Jangamwadi Math Collection. Digitized by eGangotri

# ರೋಗಿಯ ಕೈಫಿಯತ್ತು

★

ಲೇಖಕರು:
"ಬಿ. ರಂಗಣ್ಣ"

★

ಪ್ರಸ್ತುತ ಲೇಖನವನ್ನು ಬರೆದವರು ಕರ್ನಾಟಕದ ಪ್ರಸಿದ್ಧ ದೇಶ ವತ್ಸಲರೊಬ್ಬರು. ನಾಡಿಗಾಗಿ ದುಡಿದುದರ ಫಲವಾಗಿ ರೋಗ ಜರ್ಜರರಾಗಿ, ಕರ್ನಾಟಕದ ಪ್ರಸಿದ್ಧ ಆರೋಗ್ಯಧಾಮವೊಂದರಲ್ಲಿ ವಿಶ್ರಾಂತಿಯನ್ನು ಹೊಂದುತ್ತಲಿದ್ದಾರೆ...ಆತ್ಮಹತ್ಯೆಯು ರೋಗಿಯ ಹಕ್ಕು-ಧರ್ಮ; ಪ್ರಚಲಿತ ಧರ್ಮ-ನೀತಿ-ಕಾಯದೆ-ಕಾನೂನುಗಳು ಅದನ್ನು ಅನ್ಯಾಯವಾಗಿ ಕಸಿದುಕೊಂಡಿವೆ; ರೋಗಿಗೆ ಆ ಪವಿತ್ರ ಹಕ್ಕನ್ನು ಸಮಾಜವು ಕೊಡಬೇಕು,--ಮಾತ್ರವಲ್ಲ, ಸಾರ್ವಜನಿಕ ಆತ್ಮಹತ್ಯಾಗೃಹಗಳನ್ನು ಸರಕಾರವು ಕಟ್ಟಿಸಬೇಕು ಎಂದು ವಿನೋದಪೂರ್ಣವಾಗಿ ಇಲ್ಲಿ ಸಾಧಿಸಿದ್ದಾರೆ. ಶ್ರೀಯುತರ ಸರಸ ವಿಡಂಬನೆಯ ಹಿಂದೆ ಗಂಭೀರ ಮನೋಭಾವವು ಇಣುಕುತ್ತಲೆ ಇದೆ.

### ರೋಗಿಯಾಗಿ ಸಾಯುವದು ಬೇಡ.

ಈಗ ಇಟಾಲಿ ದೇಶದ ರಾಜಧಾನಿಯಾಗಿರುವ ರೋಮ ಪಟ್ಟಣದ ಅತ್ಯಂತ ಪುರಾತನ ಪ್ರಸಿದ್ಧ ಮಹಾ ಯೋಧನಾದ ಜ್ಯೂಲಿಯಸ್ ಸೀಝರನ ಬಗ್ಗೆ ಒಂದು ಕಥೆ ಹೇಳುವರು. ಅವನು ಒಮ್ಮೆ ತನ್ನ ಜೀವದ ಗೆಳೆಯರೊಡನೆ ಕುಳಿತಿರುವಾಗ, ಸಾವಂತೂ ಯಾರಿಗೂ ತಪ್ಪಿದ್ದಲ್ಲ, ಆದರೆ ಯಾವ ಬಗೆಯಿಂದ ಸಾಯುವದು ಲೇಸೆಂಬ ಬಗ್ಗೆ ಚರ್ಚೆ ನಡೆಯಿತು. ಕೂಡಲೆ ಸೀಝರನು, ಆಕಸ್ಮಿಕ ಮರಣವೇ ಲೇಸೆಂದು ಹೇಳಿದನು. ಅವನೇನೋ ತನ್ನ ವೀರವೃತ್ತಿಗೆ ಅನುಸರಿಸಿ ಹೀಗೆ ಹೇಳಿದನೆಂದು ಅವನ ಗೆಳೆಯರು ತಿಳಿದರು. ಆದರೆ ಅವನ ಹೇಳಿಕೆಯಲ್ಲಿ ಆದಕ್ಕೂ ಗೂಢವಾದ ಅರ್ಥವಿದೆ ಎಂದು ನಾನು ಧಾರಾಳವಾಗಿ ಹೇಳಬಹುದು. ರೋಗಿಯಾಗಿ ವೈದ್ಯರ ಕೈಯಲ್ಲಿ ಸಿಕ್ಕು ಒದ್ದಾಡಿ ಸಾಯುವದಕ್ಕಿಂತ ಆಕಸ್ಮಿಕ ಮರಣವು ಹೆಚ್ಚು ಸುಖಕರವೆಂದು ಅವನ ಅಭಿಪ್ರಾಯವಿತ್ತು.

ನಮ್ಮಲ್ಲಿ ಶ್ರೀಕೃಷ್ಣನನ್ನು ಮೊದಲು ಮಾಡಿಕೊಂಡು ಅನೇಕರು, ರಣರಂಗದಲ್ಲಿ ಸಾಯುವದು ಲೇಸು, ಅದರಿಂದ ವೀರಸ್ವರ್ಗವಾಗುವದು, ಎಂದು ಹೇಳಿದ್ದುಂಟು. ಹೇಡಿಗಳನ್ನು ಕೂಡ ರಣಕ್ಕೆ ಅಟ್ಟಬೇಕಾದರೆ ಹೀಗೊಂದೇನಾದರೂ ಆಶೆ ತೋರಿಸಲೇಬೇಕಾಗುವದು. ಯಾಕಂದರೆ ಹೇಡಿಗಳಂಥ ಆಶೆಬುರುಕರು ಜಗತ್ತಿನಲ್ಲಿ ಇನ್ನೊಬ್ಬರಿಲ್ಲ. ಅಥವಾ ತಮ್ಮ ಆಶೆಬುರುಕತನದ ಮೂಲಕವೆ ಅವರು ಇಷ್ಟೊಂದು ಹೇಡಿಗಳಾಗಿರುತ್ತಾರೆಂದು ಹೇಳಬಹುದು. ಅದು ಹಾಗಿರಲಿ. ಹೀಗೆ ನಮ್ಮವರು ಹೇಳುತ್ತ ಬಂದದ್ದರಲ್ಲಿಯೂ ಇನ್ನೊಂದು ರಹಸ್ಯವಿದೆ. ಒಮ್ಮೆಲೆ, ಒಂದೇ ಪೆಟ್ಟಿಗೆ ಸತ್ತರೆ ಆದರಿಂದ ಸ್ವರ್ಗವಾಗುವದು. ಆದರೆ ತೊಳಲುತ್ತ ಬಳಲುತ್ತ ಹಾಸಿಗೆಯ ಮೇಲೆ ಹೊರಳಾಡುತ್ತ ಸಾವಿರ ಔಷಧ ಔಷಧಿಗಳ ಹೊಡೆತಕ್ಕೆ ಸಿಕ್ಕು ವೈದ್ಯರ ಕೈಯಲ್ಲಿ ಒದ್ದಾಡಿ ಸಾಯುವದರಿಂದ ನರಕವೇ ನಿಶ್ಚಿತ ಎಂಬುದೇ ಅವರು ಹೇಳಿದುದರ ತಾತ್ಪರ್ಯ.

ಯೋಗಿಗಳು ಇದೇ ಮಾತನ್ನು ಇನ್ನೊಂದು ರೀತಿ ಹೇಳಿರುವರು. ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಪ್ರಾಣವನ್ನು ಬ್ರಹ್ಮರಂಧ್ರಕ್ಕೇರಿಸಿ ಸತ್ತರೆ—ಅಲ್ಲಿ ಕೊನೆಯ ಸಮಾಧಿಯನ್ನು ಪಡೆದರೆ--ಮೋಕ್ಷವು ದೊರೆಯುವದೆಂದು ಹೇಳಿರುವರು. ಯಾಕಂದರೆ ಪ್ರಾಣವು ಆ ರೀತಿ ಹೋದರೂ ಅದರಲ್ಲಿ ಈ ವೈದ್ಯರು, ಚಿಕಿತ್ಸೆ, ಔಷಧ, ಹಾಸಿಗೆಯ ಮೇಲೆ ಉರುಳಾಟ ಮೊದಲಾದ ಗೋಳುಗಳು ಇಲ್ಲ.

ಒಟ್ಟಿಗೆ, ಆಕಸ್ಮಿಕ ಮರಣವನ್ನೆ ಪ್ರೀತಿಸಲಿ, ವೀರಮರಣವನ್ನೆ ಹೊಗಳಲಿ, ಸಮಾಧಿಯನ್ನೆ ಕೊಂಡಾಡಲಿ ಈ ಜಾಣರೆಲ್ಲರೂ ರೋಗಿಯ ಜೀವನದ ಭವಣಿಯನ್ನೂ ಪೇಚಾಟವನ್ನೂ ಅರಿತುಕೊಂಡು, ಆ ಹಾದಿಗೆ ಮಾತ್ರ ಹೋಗಬೇಡಿ, ಹೇಗಾದರೂ ಆ ವೈದ್ಯರ ಸಂಗತಿಯನ್ನು ತಪ್ಪಿಸಿಕೊಳ್ಳಿರಿ, ಆ ಔಷಧಗಳ ಗೋಳಿಗೆ ಬೀಳಬೇಡಿರಿ ಎಂದು ಖಂಡಿತವಾಗಿ ಪದೇಪದೇ ಹೇಳಿದ್ದಾರೆ.

ಈ ಅವರ ಜಾಣ್ಣುಡಿಯನ್ನು ಕೇಳದವರು ಮೂರ್ಖರು ಎಂದು ಈ ಇಪ್ಪತ್ತನೇ ಶತಮಾನದಲ್ಲಿಯ ಬೇಕಾದ ಅನುಭವಿಕ ರೋಗಿಯು ಹೇಳಬಲ್ಲನು.

### ಇದು ನಿಜವಿದ್ದರೂ ದಾರಿ ಯಾವುದು ?

ಈ ಮಹನೀಯರೆಲ್ಲರೂ ಹೇಳುವದು ನಿಜವಿದ್ದರೂ ಇರಬಹುದು. ಆದರೆ ಇದರಂತೆ ನಡೆಕೊಳ್ಳುವದು ಹೇಗೆ?

CC-0. Jangamwadi Math Collection. Digitized by eGangotri

ಬರುವ ರೋಗವನ್ನು ಪೂರಾ ತಪ್ಪಿಸಿಬಿಡಬಹುದೇ? ರೋಗ ಬಂದೊಡನೆ ಜಗತ್ತಿನಲ್ಲಿ ಯುದ್ಧವು ಎಲ್ಲಿ ನಡೆದಿದೆ ಎಂಬು ವನ್ನು ಗೊತ್ತುಹಚ್ಚಿ ಅಲ್ಲಿ ಪಯಣ ಬೆಳೆಸಬಹುದೇ? ಆತ್ಮಹತ್ಯೆ ಮಾಡಿಕೊಳ್ಳಬಹುದೇ? ರೋಗ ಬಂದರೂ ವೈದ್ಯ ಡಾಕ್ತರರನ್ನು ಕರೆಯಿಸದೆ ಇರಬಹುದೇ? ಔಷಧಾದಿ ಗಳನ್ನು ಕೊಳ್ಳದೆ ಇರಬಹುದೇ? ಏನು ಮಾಡಲಿಕ್ಕಾಗು ವದು? ಅವರು ಹಾಗೇ ಹೇಳುತ್ತಾರೆ, ನಾವು ಹೀಗೇ ಮಾಡುವದು ಎಂದು ಎಲ್ಲರೂ ಅನ್ನಬಹುದು.

ಯಾರು ತಾನೇ ಬೇಡೆನ್ನುವರು? ಜಾಣರೇನೋ ಒಂದು ಮಾತು ಹೇಳಿಬಿಟ್ಟಿದ್ದಾರೆ, ಇನ್ನು ನಿಮ್ಮ ಹಾದಿ ನೀವು ಕಂಡುಕೊಳ್ಳಬೇಕು. ಮದುವೆ ಮಾಡಿಕೊ ಎಂದು ಹೇಳಿ ದವರೆಲ್ಲ ನಿಮ್ಮೊಡನೆ ಸಂಸಾರಕ್ಕೆ ಬರಬಲ್ಲರೇ?

ಹಾಗಲ್ಲ. ಜಾಣರ ಸೂಳುನುಡಿಯಂತೆ ನಡೆಯಬೇಕೆಂ ದರೂ ದಾರಿಯಿಲ್ಲವಲ್ಲ ಎಂದು ಹಲವರು ಆಕ್ಷೇಪಿಸಬಹುದು. ಅಹುದು. ದಾರಿಯೇನೋ ಗಡಚಾಗಿದೆ. ಯಾವ ದಾರಿಯೂ ಸುಲಭವಿಲ್ಲ. 'ಕತ್ತಿಯ ಕೂರ್ಮೊನೆಯಂತೆ ಕಠಿಣ,' ಎಂದು ಈ ದಾರಿಯನ್ನಾದರೂ ವರ್ಣಿಸಬಹುದು. ಮೇಲೆ ಕೇಳಿದ ಪ್ರಶ್ನೆಗಳಿಗೆ ಸಮರ್ಪಕ ಉತ್ತರಗಳನ್ನು ಕೊಡಬಹುದು.

### ರೋಗಗಳ ಉತ್ಪತ್ತಿ—ನಾಗರಿಕತೆ

ರೋಗಗಳನ್ನು ಅಂದರೆ ಹಾಸಿಗೆ ಹಾಸಿ ಮಲಗಿಕೊಳ್ಳುವ ಪ್ರಸಂಗ ಬರುವಂಥ ಅನೇಕ ದೇಹಾಲಸ್ಯಗಳನ್ನು ಪೂರ್ಣ ತಪ್ಪಿಸುವದು ಸಾಧ್ಯವು. ವೈದ್ಯ ಡಾಕ್ತರರಿಗೆ ಮೊರೆ ಹೊಗ ಲಿಕ್ಕೆ ಬೇಕು ಎಂಬುವಂಥ ರೋಗಗಳು ತೀರ ಕಡಿಮೆ. ಇನ್ನು ಮೊರೆ ಹೊಕ್ಕರೆ ರೋಗಿಯು ಸಾಯುವನೊ ಬದು ಕುವನೊ ಎಂಬ ಮಾತು ಬೇರೆ. ಸಾಯುವದೇ ಬಹಳ. ಬದುಕಿದರೆ ವೈದ್ಯ ಡಾಕ್ತರರ ಅಕಾಂಡತಾಂಡವ, ನಿಸರ್ಗದ ಅಗಾಧ ಅಜ್ಞಾನ, ಇವುಗಳನ್ನೆಲ್ಲ ಮೀರಿ ಹಲವರು ದೇವ ವಶಾತ್ ಇಲ್ಲವೆ ದೈವವಶಾತ್, ಹೇಗಂದರೂ ಸೈ, ಬದು ಕುವರು. ರೋಗಿಯು ಸಾಯುವದೇ ವಿಧಿಲಿಖಿತವಿದ್ದರೆ ದೇವರಿಗೆ ಮೊರೆ ಹೊಕ್ಕರೂ ಬದುಕನು. ಇನ್ನು ಯಾವ ಧನ್ವಂತರಿಯು ಅವನನ್ನು ಉಳಿಸಬಲ್ಲನು?

ಅಂಥ ಸಿಜವಾದ ರೋಗಿಗಳೇ ಕಡಿಮೆ ಎಂದು ಮೇಲೆಯೇ ಹೇಳಿದ್ದೇನೆ. ಇನ್ನು ಒಂದೊಪ್ಪತ್ತು ಅಂಥ ರೋಗವು ಬಂದೇ ಬಿಟ್ಟರೆ—ಯಾಕಂದರೆ ಈಗ ಯಾವುದಕ್ಕೆ ಸುಧಾ ರಣೆ, ನಾಗರಿಕತೆ (Civilization) ಎಂದೆನ್ನುವರೊ ಅದಕ್ಕೆ "ರೋಗಪ್ರಸಾರಕ ಮಹಾಯಂತ್ರ" ಎಂಬ ಹೆಸರನ್ನಾ ದರೂ ಇಡಬಹುದು. ಈ ನಾಗರಿಕತೆಯೊಡನೆ ರೋಗ ಪ್ರಸಾರಕ ಕಾರ್ಯವು ಭಯಾನಕ ಗತಿಯಿಂದ ಸಾಗುವದು. ಮೊದಲು ರೋಗಗಳು ಕಾಲುನಡಿಗೆಯಿಂದ ನಡೆಯು ತ್ತಿದ್ದವು. ಮುಂದೆ ಅವು ಓಡಲಾರಂಭಿಸಿದವು. ಬರಬರುತ್ತ ಕುದುರೆ ಮುಂತಾದವುಗಳನ್ನು ಉಪಯೋಗಿಸಲಾರಂಭಿಸಿ ದವು. ಆ ಬಳಿಕ ಉಗಿಬಂಡೆ, ಉಗಿಹಡಗ ಮುಂತಾದವು ಗಳನ್ನು ಏರಿ ಓಡಾಡಲನುವಾದವು. ಈಗ ವಿಮಾನ ಗತಿಯಿಂದ ಅಂದರೆ ವಾಯುವೇಗದಿಂದ ಹರಿದಾಡುವವು. ಇದು ಮನುಷ್ಯರ ಮೇಲೆ ನಾಗರಿಕತೆ ಮಾಡಿದ ಉಪಕಾರ! ಇದಕ್ಕೆ ದೊಡ್ಡದೊಡ್ಡ ಪಾಶ್ಚಾತ್ಯ ವಿದ್ವಾಂಸರೇ ಸಾಕ್ಷಿ ಯಾಗಿದ್ದಾರೆ. ಅಮೇರಿಕೆಯ ರೆಡ್ ಇಂಡಿಯನ್ನರಿಗೆ ಈ ನಾಗರಿಕತೆಯ ಸಂಬಂಧವು ಬಂದೊಡನೆ ಅವರಲ್ಲಿ ಕ್ಷಯ ರೋಗ ಹಬ್ಬಿ ಅವರು ನಿರ್ನಾಮರಾಗುವ ಪಂಥಕ್ಕೆ ಬಿದ್ದರು. ಸುದಂತಿಗಳೆಂದು ಪ್ರಸಿದ್ಧರಿದ್ದ ನಿಗ್ರೋ ಜನರ ಹಲ್ಲು ಕೆಟ್ಟು ಹಾಳಾಗಿ ನಾನಾ ದಂತರೋಗಗಳಿಗೆ ಅವರು ಒಳಗಾದರು. ಪ್ಲೇಗ ಎಂಬ ಗಂಟುರೋಗವು ಹಿಂದುಸ್ಥಾನಕ್ಕೆ ಈ ನಾಗರಿಕತೆಯೊಡನೆಯೆ ಬಂತೆಂಬುದು—ಅದು ಹಡಗದಲ್ಲಿ ಕುಳಿತು ಮೂಷಕವಾಹನನಾಗಿ ಬಂತಂತೆ—ಎಲ್ಲರಿಗೂ ಗೊತ್ತಿದ್ದ ಸಂಗತಿ. ಇನ್‌ಫ್ಲುಯೆಂಝಾ ಅಥವಾ 'ಫ್ಲು' ಎಂಬುದು ವಿಮಾನಮಾರ್ಗವಾಗಿ ಬಂದು ಇಲ್ಲಿ ಒಂದು ಕೋಟಿ ಇಪ್ಪತ್ತು ಲಕ್ಷ ಜನರನ್ನು ಎರಡು ತಿಂಗಳಲ್ಲಿ (೧೯೧೮ರಲ್ಲಿ) ಕೊಂದುಬಿಟ್ಟಿತು. ಫಿರಂಗಿ ರೋಗವು ಎಲ್ಲಿಂದ ಬಂದಿತು ಎಂದು ಹೇಳಲಿಕ್ಕೇ ಬೇಡ. ಅದರ ಹೆಸರೇ ಅದಕ್ಕೆ ಸಾಕ್ಷಿ!

ಹಾಲು ಬಿಟ್ಟು ಚಹಾ ಕುಡಿಯುವದು—ಅದೂ ಹಾಟೆಲ್ಲು ಗಳಲ್ಲಿ ಎಂಜಲು ಬಟ್ಟಲುಗಳೊಳಗಿಂದ ಕುಡಿಯುವದು — ಕಳವಿನಿಂದ ತುಡುಗಿನಿಂದ ಶಿಷ್ಟರು ಕೂಡ— ಮಿಕ್ಕವರಂತೂ ಚೌಪಥದಲ್ಲಿದ್ದ ಅಂಗಡಿಗಳಲ್ಲಿ ಕುಡಿಯ ಬಹುದು—ಶೆರೆ (ಬೆಂಕಿಯ ನೀರು, ಅಮೇರಿಕದ ರೆಡ್ ಇಂಡಿಯನ್ನರು ಶೆರೆಗೆ ಈ ಯಥಾರ್ಥವಾದ ಹೆಸರನ್ನು ಕೊಟ್ಟಿರುವರು) ಕುಡಿಯುವದು, ಜಗತ್ತು ಮುಳುಗುವದೋ ಏನೋ ಎಂಬಂತೆ ಕೆಲಸವಿದ್ದವರು ಇಲ್ಲದವರು ಕೂಡಿಯೇ ದ್ರುತಗತಿಯ ವಾಹನಗಳಲ್ಲಿ ಓಡಾಡುವದು, ಕೈಕೆಲಸ ಮಾಡುವದು ಅಥವಾ ಸ್ವಾವಲಂಬಿಯಾಗುವದೆಂದರೆ ಅಸ ಭ್ಯತನವೆಂದು ತಿಳಿಯುವದು, ಇಸ್ತ್ರೀ ಬಟ್ಟೆಗಳನ್ನು ಹಾಕಿ ಕೊಂಡು ಸಜೀವ ಗೊಂಬೆಗಳಂತೆ ಓಡಾಡುವದರಲ್ಲಿಯೇ ಪೌರುಷವಿದೆಯೆಂದು ತಿಳಿಯುವದು, ಕಾಮೋದ್ರೇಕವಾಗು

CC-0. Jangamwadi Math Collection. Digitized by eGangotri

ಕಾಮೋದ್ರೇಕವೆಂದರೆ ಕೇವಲ ಲಿಂಗೋದ್ರೇಕವಂಥ— ಯಾವದೇ ವಿಷಯೇಚ್ಛೆಯ ಉದ್ರೇಕ—ಸಿನೆಮಾ ವಳ್ಳ, ನನ್ನು ಬಿಟ್ಟುಬಿಡದೆ ನೋಡುವದು, ತಮ್ಮ ಬಟ್ಟೆ ನಾಟಕಗ ಕೆಟ್ಟು ಮೆತ್ತಗಾದಾವು ಎಂದು ತರುಣ ಕುಚಗಳು ರು ಮಕ್ಕಳಿಗೆ ಮೊಲೆಹಾಲು ಬಿಡಿಸಿ ಬಾಟ್ಲಿ ತಾಯಿಂದಿ ಹಾಕುವದು, ಹುಟ್ಟಿ ಹುಡುಗರಾಗುವಷ್ಟರಲ್ಲಿಯೇ ಹಾಲು ಸೃಷ್ಟಿಗಳ ಚಿಂತೆಗೊಳಗಾಗುವದು, ಹೀಗೆ ಒಂದಲ್ಲ ಹೊಟ್ಟೆಬ ಎರಡಲ್ಲ, ಇವೆಲ್ಲ ಹಾಗೂ ಇನ್ನೂ ಅನೇಕ ದುರ್ಲಕ್ಷಣ ಗಳಿಂದ ಈ ನಾಗರಿಕತೆ ಎಂಬುದು ಅಲಂಕೃತವಾಗಿ ಮಾರಿಯಂತೆ ಕಾಳನೃತ್ಯವನ್ನು ಮಾಡುತ್ತಿರುವದು. ನಾವು ಅದನ್ನು ನಿಸ್ಸಂಕೋಚರಾಗಿ ವಿಷಕನ್ಯೆಯೋಪಾದಿಯಲ್ಲಿ ಅಪ್ಪಿ ಸಾವಿಗೀಡಾಗುತ್ತಿರುವೆವು. ಇರಲಿ. ನನಗೇಕೆ ಇದೆಲ್ಲ? ನಾನು ಇಲ್ಲಿ ಸ್ವಲ್ಪ ವಿಷಯಾಂತರ ದೋಷಕ್ಕೆ ಪಾತ್ರನಾದಂತೆ ತೋರುತ್ತದೆ! ಈಗಾದರೂ ತಿದ್ದಿಕೊಳ್ಳುತ್ತೇನೆ.

## ರೋಗನಿವಾರಣೆ

ರೋಗಗಳು ಬರದಂತೆ ಮಾಡುವದು ಸಾಧ್ಯ ಎಂದು ಮೊದಲು ಹೇಳಿದೆನು. ರೋಗ ಬಂದ ಬಳಿಕ ಅದಕ್ಕೆ ಔಷಧವನ್ನು ಕೊಡುತ್ತ ಕೂಡುವ ದ್ರಾವಿಡೀ ಪ್ರಾಣಾಯಾಮವನ್ನು ಮಾಡುತ್ತ ಕೂಡುವದಕ್ಕಿಂತ ರೋಗವನ್ನು ನಿವಾರಿಸುವ ಕಾರ್ಯದಲ್ಲಿ ಈಗಿನ ವೈದ್ಯರಾಜರೂ ಡಾಕ್ತರ ಮಹಾಶಯರೂ ತೊಡಗಿದರೆ ಬಂಗಾರದಂಥ ಕೆಲಸವಾಗಬಹುದು. ಆದರೆ ಹೇಳುವವರಾರು? ಹೇಳಿದರೂ ಕೇಳುವವರಾರು? ಇದು ಈಗ ಕಲಿಯುಗ, ಎಂದು ಹರಿದಾಸರು ಹೇಳಿ ಅದರ ಹಲವು ಲಕ್ಷಣಗಳನ್ನು ಕೊಟ್ಟಿರುವರು. ಆದರೆ ಅದರಲ್ಲಿ ರೋಗನಿವಾರಣೆ ಮಾಡುವದನ್ನು ಬಿಟ್ಟು ವೈದ್ಯರು ಈ ಕಾಲದಲ್ಲಿ ರೋಗಪರಿಹಾರ ಮಾಡಲುಜ್ಜುಗಿಸುವರು ಎಂದು ಜೋಡಿಸಬೇಕು. ಇನ್ನು ಅವರ ಅಡಚಣಿಯನ್ನು ನಾವು ಲಕ್ಷಿಸಲಿಕ್ಕೆ ಬೇಕು. ರೋಗಗಳನ್ನು ನಿವಾರಿಸುತ್ತ ಹೋದರೆ ಪರಿಹಾರಕ್ಕಾಗಿ ಅವರ ಕಡೆಗೆ ಮುಂದೆ ಬರುವವರಾರು, ಅವರ ಒಲೆ ನಡೆಯುವ ಬಗೆ ಹೇಗೆ? ಇದಕ್ಕೂ ಉಪಾಯವನ್ನು ಯೋಜಿಸಬಹುದು. ಆರೋಗ್ಯದ ಕರ ಎಂದು ಊರವರು ಒಂದು ಕರವನ್ನು ಕೂಡಿಸಿ ಅದನ್ನು ಆಯಾ ಊರಲ್ಲಿರತಕ್ಕ ವೈದ್ಯ ಡಾಕ್ತರ ಹಕೀಮ ಮುಂತಾದವರಿಗೆ ಹಂಚಿಕೊಡಬೇಕು. ಏನಾದರೂ ರೋಗವಾದರೆ ಆ ಹಣದಲ್ಲಿ ಕಡಿತ ಮಾಡಬೇಕು ಹಾಗೂ ಆಯಾ ವೈದ್ಯ ಡಾಕ್ತರರು ಪುಕ್ಕಟೆ ಔಷಧೋಪಚಾರ ಮಾಡಿ ರೋಗಿಗಳನ್ನು ನೆಟ್ಟಗೆ ಮಾಡಬೇಕು! ಯಾಕಂದರೆ ಜನರ ರೋಗಪರಿಹಾರಕ್ಕಲ್ಲ, ಜನರ ರೋಗನಿವಾರಣೆಗೆ ಅವರು ಹೊಣೆಗಾರರು! ಇದೇನು ತಿರುವುಮುರುವು ಹೇಳುತ್ತೀ, ಎಂದು ವಾಚಕರು ಅನ್ನಬಹುದು. ಅಲ್ಲ ಮಹಾಜನರೇ, ನೀವು ಈಗ ತಿಳಿದಿರುವದೇ ತಿರುವುಮುರುವು, ಯಾಕಂದರೆ ಈಗ 'ಉಲ್ಟಿ ದುನಿಯಾ'....ಜಗತ್ತು ತಲೆಕೆಳಗಾಗಿ ನಿಂತಿದೆ. ಯಾರು ಆದರೂ ಮನೆಗೆ ಬೆಂಕಿ ಹತ್ತಬಾರದೆಂದು ಯತ್ನಿಸುವರು. ಹತ್ತಿದ ಬಳಿಕ ಆರಿಸುವದು ಅನಿರ್ವಾಹ ಪಕ್ಷ! ಹೊರತು ಅದನ್ನೇ ಇಪ್ಪತ್ತುನಾಲ್ಕು ತಾಸು ಧ್ಯಾನಿಸುತ್ತ ಕೂತರೇನನ್ನಬೇಕು?

## ರೋಗ ಬಂದುಬಿಟ್ಟರೆ?

ಇರಲಿ, ಅಂಥದೊಂದು ರೋಗವು ಬಂದೇಬಿಟ್ಟರೆ ಏನು ಮಾಡಬೇಕು ಎಂಬ ಪ್ರಶ್ನೆಯನ್ನು ಮುಖ್ಯವಾಗಿ ಈಗ ಬಿಡಿಸುವದು ಹಾಗೆಯೇ ಉಳಿಯಿತು. ರೋಗ ಬಂದಡರಿದ ಸ್ಥಿತಿಯಲ್ಲಿ ಯುದ್ಧಮಾಡಿ ವೀರಸ್ವರ್ಗವನ್ನು ಹೊಂದುವದಂತೂ ಅಸಾಧ್ಯ. ಇಂಥ ರೋಗಿಯೊಬ್ಬನು ತಾನು ಯುದ್ಧಕ್ಕೆ ಸಿದ್ಧನೆಂದು ಸಾರಿದರೂ ಅವನನ್ನು ಸೈನ್ಯದಲ್ಲಿ ಸೇರಿಸಿಕೊಳ್ಳಲು ಈ ಡಾಕ್ತರರೇ ಅಡ್ಡೀ ತರುವರು—ಇವನು ಅಯೋಗ್ಯನೆಂದು ಟಿಪ್ಪಣೆ ಜೋಡಿಸಿ ಬಿಡುವರು! ಬೇಡ, ನಾನು ಹಾಸಿಗೆಯಲ್ಲಿ ಸಾಯಲಾರೆ, ವೀರಸ್ವರ್ಗವನ್ನು ಹೊಂದಲಿಚ್ಛಿಸುವೆ ಎಂದು ಹಂಬಲಿಸುವವನನ್ನೂ ಕೂಡ ಇವರು ಹಿಂದೆ ನೂಕಿ, ಇಲ್ಲ ನೀನು ನಮ್ಮ ಕೈಯಲ್ಲಿ ಸಿಕ್ಕು ಒದ್ದಾಡಿ ಸತ್ತು ನರಕದಲ್ಲಿಯೇ ಹೋಗತಕ್ಕದ್ದು ಎಂದು ಹಟ ಹಿಡಿಯುವರು! ಯಮರಾಜನು ಇವರಿಗೇನಾದರೂ ದಲ್ಲಾಳಿ ಕೊಡುತ್ತಿರುವನೋ ಏನೋ ಎಂಬ ಸಂಶಯ ಬರುವದು ನನಗೆ. ನಿಜವಾಗಿ ಇಂಥ ರೋಗಿಯು ಯುದ್ಧಭೂಮಿಗೆ ಹೋಗಿ ಥಡಕ್ಕನೆ ಗುಂಡಿನೇಟಿಗೆ ಬಿದ್ದು ಸತ್ತುಹೋದರೆ ಈ ಡಾಕ್ತರರ ಕೆಲಸವೂ ಎಷ್ಟೋ ಹಗುರಾಗುವದು. ಆದರೆ ಹಾಗೆ ಆಗುವದು ಅವರಿಗೆ ಬೇಡಾಗಿದೆಯೋ ಏನೋ. ಅವರಲ್ಲಿಯೂ ಈಗ ಅನುದ್ಯೋಗ ಪ್ರಸಕ್ತಿ ಇರಬೇಕು....ಮತ್ತಿನ್ನೇನು?

## ವೀರಮರಣವಿಲ್ಲ.

ಯುದ್ಧರಂಗಕ್ಕೆ ಡಾಕ್ತರರು ಹೋಗಗೊಡುವದಿಲ್ಲ. ಮನೆಯವರೂ ಅದೇ ರೀತಿ ಅಡ್ಡ ದಾರೀ ಹಿಡಿಯುವದುಂಟು. ತಮ್ಮೆದುರಿಗೆ ಉರುಳಾಡಿ ಸಾಯಲಿ ಎಂದು ಅವರ ಅಪೇಕ್ಷೆ! ಮಡದಿಮಕ್ಕಳೆಲ್ಲರು ನಮ್ಮನ್ನು ಕೆಳಕ್ಕೆಳೆಯುವವರು, ಅವರು ಮೇಲಕ್ಕೆ ಸ್ವರ್ಗ ಮೋಕ್ಷಗಳಿಗೆ ಹೋಗಗೊಡರು ಎಂದು ಪರಮಾರ್ಥಿಗಳು ಹೇಳುತ್ತ ಬಂದದ್ದು ಇಲ್ಲಿ ಪ್ರತ್ಯ

CC-0. Jangamwadi Math Collection. Digitized by eGangotri

ಯಕ್ಕೆ ಬರುವದು. ಮುಂದೆ ಸತ್ತ ಮೇಲೆ ನರಕಯಾತನೆಗಳನ್ನು ಭೋಗಿಸುವದೊತ್ತಟ್ಟಿಗಿರಲಿ; ಮನೆಯಲ್ಲಿಯೇ ಸಾಯುವದೆಂದರೆ ರೋಗಿಯು ಇಲ್ಲಿಯೇ ಪರಸ್ವಾಧೀನನಾಗಿ, ಮಲಮೂತ್ರಗಳಲ್ಲಿ ಉರುಳಾಡಿ, ಸಾವಿರ ನೋವಿನಿಂದ ನರಳಿ ನರಳಿ, ಮಮತ್ವದ ಮೂಲಕ ಅನೇಕ ಮನೋಯಾತನೆಗಳನ್ನು ಭೋಗಿಸುತ್ತ ಪ್ರಾಣ ಬಿಡುವ ಪ್ರಸಂಗ. ಅಂತೂ ರಣರಂಗದ ವೀರಮಾರ್ಗವು ರೋಗಿಗೆ ಮುಚ್ಚಿಬಿಟ್ಟಂತೆಯೇ? ಸೈ.

## ಆತ್ಮಹತ್ಯೆಯೂ ಬೇಡ !

'ಇನ್ನುಳಿಯಿತು ಆತ್ಮಹತ್ಯೆಯ ಮಾರ್ಗ. ಇದಂತೂ ಕೈಯೊಳಗಿನದು. ಆದರೆ ಇದಕ್ಕೆ ಕಾಯದೆಕಾನೂನುಗಳ ಅಡ್ಡಿಯಂತೆ ! ಈ ಕಾಯದೆಯ ಚಮತ್ಕಾರವೇನಂದರೆ ಆತ್ಮಹತ್ಯೆ ಮಾಡಿಕೊಂಡುಬಿಟ್ಟರೆ ಏನೂ ಶಿಕ್ಷೆಯಿಲ್ಲ, ಖಟ್ಲೆಯಿಲ್ಲ ಏನೂ ಇಲ್ಲ. ಬರೀ ಹೆಣವನ್ನು ಮಾತ್ರ ಡಾಕ್ತರರು ಕೊಯ್ದು, ಹರಿದು, ಸಿಟ್ಟಿನಿಂದ ಹಿಂಜಿ ಬಿಡುವರಂತೆ—ಇವನು ಬದುಕಿರುವಾಗ ತಮ್ಮ ಕೈಗೆ ಸಿಕ್ಕಲಿಲ್ಲವಲ್ಲಾ ಎಂಬ ಮುನಿಸು ಅವರಿಗೆ ! ಸತ್ತರೂ ಬಿಟ್ಟಿಪ್ಪನಲ್ಲ....ಎಂದು ಹೇಳುವರಲ್ಲ, ಆ ಗಾಣ್ಣುಡಿಯಂತೆ ಡಾಕ್ತರರು ಸತ್ತರೂ ರೋಗಿಗಳನ್ನು ಬಿಟ್ಟವರಲ್ಲ ! ಇನ್ನೊಂದು ವಿಷಯ. ಆತ್ಮಹತ್ಯೆ ಮಾಡಿಕೊಂಡವನ ಹೆಣವನ್ನು ಪಂಚನಾಮೆ ಮಾಡದೆ ಎತ್ತಕೂಡದಂತೆ. ಪಂಚನಾಮೆ ಆದ ಬಳಿಕ ಅದನ್ನು ಹರಿಯಲಿಕ್ಕೆ ಹದ್ದುಕಾಗೆಗಳಿಗೆ ಕೊಟ್ಟಂತೆ ಡಾಕ್ತರರ ವಶಕ್ಕೆ ಕೊಡುವರು. ಈ ಗುನ್ಹೆ ಮಾಡುವದರಲ್ಲಿ ನೀವು ಯಶಸ್ವಿಯಾದರೆ ಈ ಪ್ರಕಾರ ನಿಮ್ಮ ವ್ಯವಸ್ಥೆಯಾಗುವದು. ಆದರೆ ಏನಾಗುವುದೆಲ್ಲ ನಿಮ್ಮ ಶವಕ್ಕೆ—ಇದೊಂದು ಸಮಾಧಾನ ! ಈ ಗುನ್ಹೆ ಮಾಡುವ ಪ್ರಯತ್ನ ಮಾಡುವಾಗ ನೀವು ಸಿಕ್ಕರೆ ಮಾತ್ರ ನಿಮಗೆ ಚನ್ನಾಗಿ ಶಿಕ್ಷೆಯಾಗುವದು. ನಿಮ್ಮ ಮೇಲೆ ಖಟ್ಲೆ, ಸಾಕ್ಷಿ ಪುರಾವೆ ಎಲ್ಲ ವಿಧಿವತ್ ಆಗುವದು. ಗುನ್ಹೆ ಮಾಡಿದ್ದಕ್ಕೆ ಶಿಕ್ಷೆಯಿಲ್ಲ, ಗುನ್ಹೆಯ ಪ್ರಯತ್ನಕ್ಕೆ ಶಿಕ್ಷೆ !

ಇದು ಕಾಯದೆಯ ದೃಷ್ಟಿಯಿಂದಾಯಿತು. ಇನ್ನು ನೀತಿ ಧರ್ಮ ಮುಂತಾದವುಗಳ ದೃಷ್ಟಿಯಿಂದಲೂ ಆತ್ಮಹತ್ಯೆ ಮಾಡಿಕೊಳ್ಳಬಾರದಂತೆ. ಒಮ್ಮೊಮ್ಮೆ ಈ ನೀತಿ ಧರ್ಮ ಮುಂತಾದವುಗಳು ಹೇಡಿತನವನ್ನು ಎತ್ತಿ ಹಿಡಿಯುವಂತೆ ತೋರುತ್ತವೆ. ಯಾಕಂದರೆ ತನ್ನನ್ನು ತಾನೆ ಕೊಲ್ಲುವದು ಒಳ್ಳೆ ಧೈರ್ಯದ ಕೆಲಸವೆಂದು ನಾನು ಭಾವಿಸಿರುವೆನು. ಯುದ್ಧದಲ್ಲಿ ಎದುರಾದವನನ್ನು ಕೊಂದರೆ ಅದು ಧೈರ್ಯವಂತೆ ! ನಿಜವಾಗಿ ಅದು ಹೇಡಿತನ. ಅವನು ನಮ್ಮನ್ನು ಕೊಲ್ಲುವನಲ್ಲ ಎಂಬ ಭಯದಿಂದ ನಾವು ಹಂಗು ದೊರೆದು ಅವನನ್ನು ಕೊಲ್ಲುವೆವು. ಅದು ಒಂದು ಹೇಡಿತನವೆಂದಾದರೂ ಎನಿಸಬಹುದು, ಇಲ್ಲವೆ ಒಂದು ಬಗೆಯ ಉನ್ಮಾದವೆನಿಸಬಹುದು, ಹೊರತು ಅದು ಧೈರ್ಯವಲ್ಲ.

## ಆತ್ಮಹತ್ಯೆಗೆ ನಿಜವಾದ ಧೈರ್ಯ ಬೇಕು.

ನಿಜವಾದ ಧೈರ್ಯವು ಆತ್ಮಹತ್ಯೆಯಲ್ಲಿದೆ. ವಿಶೇಷವಾಗಿ ನಿಮ್ಮ ಇಹಲೋಕದ ಯಾತ್ರೆಯು ಮುಗಿಯಿತು ಎಂದು ನಿಮ್ಮ ಭಾವನೆಗೆ ಬಂದ ಬಳಿಕ ಅಥವಾ ಇನ್ನು ನೀವು ನಿಮ್ಮ ಸಮಾಜಕ್ಕೆ ಭಾರವಾಗುವಿರಿ ಎಂದು ನೀವು ಕಂಡ ಬಳಿಕ ನೀವು ಆತ್ಮಹತ್ಯ ಮಾಡಿಕೊಳ್ಳುವದು ನಿಮ್ಮ ಧರ್ಮವೇ ಆಗಿದೆ. ಅಂಥ ಧರ್ಮವನ್ನು ಆಚರಿಸಲು ಧರ್ಮವೇ ಅಡ್ಡ ನಿಲ್ಲುವದು ಸ್ವಲ್ಪ ವಿಚಿತ್ರವಾದ ಸಂವಿಧಾನವೇ ಸೈ! ಇದು ನಿಜವಾಗಿ ಆತ್ಮಹತ್ಯೆಯಲ್ಲ, ಇದು ಆತ್ಮಸ್ವಾತಂತ್ರ್ಯವು—ರೋಗಿಷ್ಟವೂ ಅನುಪಯುಕ್ತವೂ ಆದ ಶರೀರದಿಂದ ಆತ್ಮನನ್ನು ಸ್ವತಂತ್ರಮಾಡುವಿಕೆಯು. ಈಶಾವಾಸ್ಯದಲ್ಲಿ ಆತ್ಮಹನ್ ಜನರು ಎಂದು ಹೇಳಿದ್ದು ಆತ್ಮನಿಶ್ಚಯ ಮಾಡಿಕೊಳ್ಳದೆ ಇದ್ದ ಜನರನ್ನು ಕುರಿತು; ಹೊರತು ಇಂಥ ಆತ್ಮಹತ್ಯೆ ಮಾಡಿಕೊಂಡವರನ್ನು ಕುರಿತು ಅಲ್ಲ. ಆ ಆತ್ಮಹನರು ಸತ್ತ ಬಳಿಕ ಕತ್ತಲೆಯ ಅಂದರೆ ಅಜ್ಞಾನದ ಲೋಕಗಳಿಗೆ ಹೋಗುವರು ಎಂದು ನಿಧಿ ಇರುವದು.

ಆತ್ಮಹತ್ಯೆಯ ಸಾಧನಗಳು ಕೂಡ ಜನರ ಕೈಗೆ ಸಹಜವಾಗಿ ದೊರಕಬಾರದೆಂದು ಸರಕಾರದವರು ಹೆಚ್ಚಿನ ಪ್ರಯತ್ನವನ್ನಿಟ್ಟಿದ್ದಾರೆ. ಅಮಲು ಬರುವಷ್ಟು-- ಬುದ್ಧೀ ಕಳಕೊಳ್ಳುವಷ್ಟು—ಅಫು ಕೊಳ್ಳಲು ಅಡ್ಡಿ ಇಲ್ಲ, ಆದರೆ ಜೀವ ಕಳಕೊಳ್ಳುವಷ್ಟು ಕೊಡಬಾರದೆಂದು ಅಂಗಡಿಕಾರರಿಗೆ ನಿರ್ಬಂಧವಿದೆ ! ಇನ್ನು ಬುದ್ಧೀ ಕಳಕೊಂಡ ಬಳಿಕ ಜೀವವನ್ನಾದರೂ ಇಟ್ಟು ಮಾಡುವದೇನು? ಇದನ್ನು ಆ ನಿಯಮವನ್ನು ಮಾಡಿದವರೇ ಬಲ್ಲರು. ಅದೇ ರೀತಿ ಕೋಕೇನ, ನಿಕೋಟಿನ್, ಹೈಡ್ರೋಸಿನಿಕ್ ಆ್ಯಸಿಡ್, ಆರ್ಸೆನಿಕ್ ಮುಂತಾದ ಪದಾರ್ಥಗಳ ಮೇಲೆ ನಿರ್ಬಂಧವಿದೆ. ಆದರೆ ಇವುಗಳನ್ನು ಬಿಟ್ಟರೂ ಆತ್ಮಹತ್ಯೆ ಮಾಡಿಕೊಳ್ಳುವ ಜನರಿಗೆ ಇನ್ನೂ ಅನೇಕ ವನಸ್ಪತಿಗಳು ಗೊತ್ತಿರುತ್ತವೆ. ಬಚನಾಗ, ಕರೇ ಮದಗುಣಿಕೆ ಇತ್ಯಾದಿಗಳ ಮೇಲೆ ಯಾವ ನಿರ್ಬಂಧವೂ ಇಲ್ಲ. ಮೇಲಾಗಿ ಚೂರಿ, ಕತ್ತಿ, ತುಬಾಕಿ, ಪಿಸ್ತೂಲು ಇವುಗಳ ಮೇಲೇನೋ ನಿರ್ಬಂಧವನ್ನಿಟ್ಟಿದ್ದಾರೆ.

CC-0. Jangamwadi Math Collection. Digitized by eGangotri

ಆದರೆ ಕೆಲವರು ಬೆರಳು ಗಡುತರ ನೂಲಿಯ ನೇಣು ಬೇಕಾದಲ್ಲಿ ಸಿಕ್ಕುವದು. ಅದನ್ನು ಕತ್ತಿಗೆ ಬಿಗಿದು ಉರ್ಲು ಹಾಕಿಕೊಂಡು ನೇತಾಡಿ ಸಾಯುವವರು ಅನೇಕರು ದೊರೆಯುವರು. ಅನ್ನು ಭಾವೀ ಹಾರಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುವ ವಿಷಯದಲ್ಲಿ ನಮ್ಮ ಹೆಣ್ಣುಮಕ್ಕಳು ವಿಶೇಷ ಪ್ರವೀಣತೆ ಪಡೆದಿರುವರು. ಇನ್ನೇನು, ಅವರೆಲ್ಲರೂ ರೋಗಿಗಳಿರುವದಿಲ್ಲ—ಅವರು ಮನದಲ್ಲಿ ರೋಗಿಷ್ಟರು. ಮನೆಯಲ್ಲಿಯ ಕಾಟದ ಮೂಲಕ ಅವರು ಈ ವೀರಮಾರ್ಗವನ್ನು ಅನುಸರಿಸುವರು. ರೋಗಪೀಡಿತರಲ್ಲಿ ಒಬ್ಬ ಮಹಾರೋಗಿಯು ವಿಷ ತಿಂದು ಸತ್ತದ್ದನ್ನು ನಾನು ಬಲ್ಲೆನು. ಅದೇ ರೀತಿ ಒಬ್ಬ ಹೊಟ್ಟೆಕಡಿತವಿದ್ದ ರೋಗಿಯು ಭಾವೀ ಹಾರಿಕೊಂಡು ಸತ್ತದ್ದನ್ನಾದರೂ ನಾನು ನೋಡಿರುವೆನು.

ಈ ಪ್ರಕಾರ ಆತ್ಮಹತ್ಯೆ —ಸ್ವೇಚ್ಛೆಯಿಂದ ಸ್ವಶರೀರ ತ್ಯಾಗ— ಮಾಡಿಕೊಳ್ಳುವವರ ಹಾದಿಯಲ್ಲಿ ನಿಷ್ಕಾರಣವಾದ ಧರ್ಮದ, ನೀತಿಯ, ಕಾಯದೆಯ ಅನೇಕಾನೇಕ ಅಡ್ಡಿಗಳನ್ನೊಡ್ಡಿ ರೋಗಿಗೆ ಇದ್ದ ಒಂದೇ ಒಂದು ಧೈರ್ಯದ ಮಾರ್ಗದಿಂದ ಪರಾವೃತ್ತ ಮಾಡುವದರಿಂದ ಮಾನವ ಕುಲಕ್ಕೆ ಯಾವ ಲಾಭವೂ ನಾನಂತೂ ಅರಿಯೆ. ಮಾನವರ ಈ ಮೂರ್ಖತನವನ್ನು ನೋಡಿ ಅದನ್ನು ಬಿಡಿಸಲರಿಯದೆ ಯೋಗಿಗಳು ಆತ್ಮಹತ್ಯೆಯ ಹೊಸ ಮಾರ್ಗವನ್ನು ಹುಡುಕಿ ಅದರಲ್ಲಿ ಯಶಸ್ವಿಯಾದರು. ಮಾನವರಿಗೆ ಮಂಕುಬೂದಿ ಹಚ್ಚಲಿಕ್ಕೆ ಈ ಯುಕ್ತಿಯನ್ನು ಹೂಡಿದ ಯೋಗಿಗಳು ನಿಜವಾದ ಜಾಣರೆಂದು ಹೇಳಬಹುದು. ಉಸಿರು ಕಟ್ಟಿ ಪ್ರಾಣವನ್ನು ಬ್ರಹ್ಮರಂಧ್ರಕ್ಕೇರಿಸಿ ಜೀವ ಬಿಟ್ಟರೆ ಅದು ಸ್ವೇಚ್ಛೆಯಿಂದ ಶರೀರತ್ಯಾಗ ಅಥವಾ ಆತ್ಮಹತ್ಯೆ ಇದ್ದರೂ ಅದು ಸಮಾಧಿ ಎನಿಸಲಾರಂಭಿಸಿ ಆ ರೀತಿ ಜೀವ ಬಿಟ್ಟವರ ವೃಂದಾವನಗಳನ್ನು ಕಟ್ಟಿ ಅವುಗಳನ್ನು ಜನರು ಪೂಜಿಸಲಾರಂಭಿಸಿದರು. ಜೈನರು ಇನ್ನೊಂದು ಹೊಸ ಮಾರ್ಗವನ್ನು ಹುಡುಕಿ ಉಪವಾಸ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುವ ಕ್ರಮವನ್ನು ಇಟ್ಟು ಅದಕ್ಕೆ ಪ್ರಾಯೋಪವೇಶನವೆಂಬ ದೊಡ್ಡ ವ್ರತ ಎಂದು ಮಾನಮಾನ್ಯತೆಯನ್ನು ಪಡೆದರು!

## ನೀರಿನಲ್ಲಿಯ ಸಾವು

ಜಲಸಮಾಧಿಯು— ನೀರಿನಲ್ಲಿ ಉಸಿರು ಸಿಕ್ಕು ಸಾಯುವದು— ಬಹಳ ಸುಖದಾಯಕವೆಂದು ನಾನು ಕೇಳಿರುವೆನು. ಸತ್ತವರು ಹೇಳಿದರೇನು ಎಂದು ನೀವು ಚೇಷ್ಟೆ ಮಾಡಬಹುದು! ಹೌದು. ಸತ್ತು ಬದುಕಿದವರು ಹೇಳಿದರು. ಹೀಗೆ ಮುಳುಗಿದವನೊಬ್ಬನನ್ನು ಹೊರಕ್ಕೆ ತೆಗೆದ ಮೇಲೆ ತಂಪು ನೀರಿನ ತಣ್ಣನ್ನ ಸುಖಸಮಾಧಿಯಲ್ಲಿದ್ದ ಅವನ ಜೀವವು ಮರಕಳಿಸಿದ ಬಳಿಕ ಅವನು, ಎಂಥ ಸುಖವಾಗಿದ್ದೆನು, ಏಕೆ ಬದುಕಿಸಿದಿರಿ, ಎಂದು ಕೇಳಿದನು! ಒಂದರೆ ಕ್ಷಣದಲ್ಲಿಯೇ ಎಲ್ಲವೂ ಜಲಾಕಾರವಾಗಿ ಜೀವವು ತಣ್ಣನೆ ತಣಿದು ಹೋಗುವದಂತೆ. ಮಾತ್ರ ಮುಳುಗುವಾಗ ನೀರು ಕುಡಿಯಲು ಹಿಂಜರಿಯಬಾರದಂತೆ, ಹಾಗೂ ವಿರೋಧಿಸಬಾರದಂತೆ. ವಿರೋಧಿಸಿದರೆ ವೃಥಾ ಠಸಿಕು ಹತ್ತಿ ಸುಖಮಾರ್ಗವನ್ನು ಬಿಟ್ಟು ಜೀವವು ದುಃಖಮಾರ್ಗದಲ್ಲಿ ಬೀಳುವದಂತೆ. ಏನೇ ಆಗಲಿ, ಸಮಾಜ, ಸರಕಾರ, ಎಲ್ಲರೂ ಕೂಡಿ ಕಾಯದೆ, ನೀತಿ, ಧರ್ಮ, ರೂಢಿ ಮುಂತಾದ ಅನೇಕ ನಿರ್ಬಂಧಗಳನ್ನು ಹಾಕಿದರೂ ಅನೇಕ ವೀರರು ಆತ್ಮಹತ್ಯೆ ಎಂಬ ಧೈರ್ಯದ ಸಮಂಜಸ ಮಾರ್ಗವನ್ನು ವಿವಿಧ ರೀತಿಯಿಂದ ಸ್ವೀಕರಿಸಿ ತಮ್ಮ ಯುಕ್ತಿಕೌಶಲವನ್ನು ತೋರಿಸಿರುವರು. ಅನೇಕ ರೋಗಿಗಳೂ ಅದೇ ಸೂಕ್ತವಾದ ಮಾರ್ಗದಿಂದ ನಡೆದಿರುವರು.

## ಸ್ಟೋಯಿಕರು

ಗ್ರೀಕ ಹಾಗೂ ರೋಮನ್ ಜನರು ನಮಗಿಂತ ಈ ವಿಷಯದಲ್ಲಿ ಹೆಚ್ಚು ಪ್ರಗತಿಪರರೆಂದು ಹೇಳಬಹುದು. ಅವರಲ್ಲಿ ಸ್ಟೋಯಿಕ್ (Stoic) ಎಂಬ ತತ್ವಜ್ಞಾನಿಗಳದೊಂದು ವರ್ಗವಿತ್ತು. ಅವರು ಮನಸಿನ ಸಮತ್ವಕ್ಕೆ ಅತ್ಯಂತ ಮಹತ್ವವನ್ನು ಕೊಡುತ್ತಿದ್ದರು. ಅರ್ಥಾತ್ ಅವರ ನಡೆತೆ ನಡಾವಳಿಗಳಲ್ಲಿ ತಿತಿಕ್ಷೆಗೆ—ಸಹನಗುಣಕ್ಕೆ ಬಹಳ ಪ್ರಮುಖಸ್ಥಾನವು ಕೊಡಲ್ಪಟ್ಟಿತ್ತು. ಅವರಲ್ಲಿ ಅಪರಾಧಿಗೆ ಮರಣದಂಡವನ್ನು ವಿಧಿಸಿದರೂ ಅವನ ಶಿರವನ್ನು ಗಂಡುಗೊಡಲಿಯಿಂದ ಕಡಿಯುವ, ಇಲ್ಲವೆ ಹಿಂದೆ ಕೈಕಟ್ಟಿ ರುಂಡವನ್ನು ಕತ್ತಿಯಿಂದ ಕತ್ತರಿಸುವ, ಇಲ್ಲವೆ ಮೋರೆಗೆ ಕರೀಚೀಲ ಹಾಕಿ ಉರ್ಲು ಹಾಕಿ ಕೊಲ್ಲುವ, ಇಲ್ಲವೆ ಗುಂಡು ಹಾಕುವ ಇತ್ಯಾದಿ ಅಸುರೀ ರೀತಿಯನ್ನು ಅವರು ಅನುಸರಿಸುತ್ತಿರಲಿಲ್ಲ. ಅವನಿಗೆ ವಿಷವನಸ್ಪತಿಯ ರಸವನ್ನು ಕುಡಿಯಲು ಕೊಡುತ್ತಿದ್ದರು, ಇಲ್ಲವೆ ಕಾಲಿನ ಒಂದು ರಕ್ತನಾಳವನ್ನು ಒಡೆದು ಜೀವವು ಹೋಗುವವರೆಗೆ ರಕ್ತವನ್ನು ಹರಿಯಗೊಡುತ್ತಿದ್ದರು. ಪಾಶ್ಚಾತ್ಯ ತತ್ವಜ್ಞಾನದ ಜನಕನೆನಿಸಿದ ಪ್ಲೇಟೋನ ಗುರುವಾದ ಸಾಕ್ರೇಟೀಸನು ಹೆಮ್‌ಲಾಕನ್ನು ಸ್ವಹಸ್ತದಿಂದ ಕುಡಿದು ಮಾತುಕಥೆಗಳನ್ನಾಡುತ್ತ ಸಂತೋಷದಿಂದ ಪ್ರಾಣವನ್ನು ಬಿಟ್ಟನು. ಇನ್ನೊಬ್ಬ ಪ್ರಸಿದ್ಧ ವ್ಯಕ್ತಿಯು ತನ್ನ ರಕ್ತನಾಳವನ್ನು

CC-0. Jangamwadi Math Collection. Digitized by eGangotri

ತಾನೇ ಕಡಿದು ರಕ್ತಪ್ರವಾಹವನ್ನು ನೋಡನೋಡುತ್ತ ಎಚ್ಚರದಪ್ಪಿ ಪ್ರಾಣತ್ಯಾಗ ಮಾಡಿದನು. ಆಕಸ್ಮಿಕ ಮರಣವೇ ಲೇಸು ಎಂದು ತಟ್ಟನೇ ನುಡಿದ ವೀರ ಜ್ಯೂಲಿಯಸ್ ಸೀಝರನು ಸ್ಟೋಯಿಕ್ ವರ್ಗಕ್ಕೆ ಸೇರಿದವನೇ ಇದ್ದಾನೆಂಬುದನ್ನು ಬೇರೆ ಹೇಳಲಿಕ್ಕೆ ಬೇಡ.

## ಮನುಷ್ಯನ ಮೂರ್ಖತನ

ಆತ್ಮಹತ್ಯೆಯು ಇಷ್ಟೊಂದು ಸಮಂಜಸವಾದ ಉಪಾಯವಿರುತ್ತಿರುವಾಗ, ವಿಶೇಷತಃ ರೋಗಿಯಂಥ ನಿರುಪಯುಕ್ತ ಜೀವಕ್ಕೆ ಇದರಂಥ ಉತ್ತಮ ಉಪಾಯವೇ ಇಲ್ಲದಿರುವಾಗ ಜನರು, ಡಾಕ್ತರರು, ಕಾಯದೇ ಪಂಡಿತರು, ಧರ್ಮಾತ್ಮರು ಇದಕ್ಕೆ ವಿರುದ್ಧರೇಕೆ ? ಇದೊಂದು ದೊಡ್ಡ ಸಮಸ್ಯೆಯೇ. ಜನರು ಇಷ್ಟೊಂದು ಬುದ್ಧಿಹೀನರೇ ಎಂದು ವಾಚಕರು ಪ್ರಶ್ನಿಸಬಹುದು. ಅಹುದು. ಮೋರೆಯ ಮೇಲೆ ಹೇಗೆ ಹೇಳಬೇಕು ಇಂಥ ಮಾತನ್ನು, ಎಂದು ಹಲವರು ದಾಕ್ಷಿಣ್ಯದಿಂದ ಇಲ್ಲವೆ ಭಯದಿಂದ ಸುಮ್ಮನಿರುತ್ತಿರಬಹುದು. ಆದರೆ ನಾನೇನು ಅಂಜುವವನಲ್ಲ. ಜನರು ಅನೇಕ ವಿಷಯಗಳಲ್ಲಿ ತಿಳಿಗೇಡಿಗಳು, ಬುದ್ಧಿಹೀನರು, ಮೂಢರು, ಮೂರ್ಖರು, ಕತ್ತೆಗಿಂತ ಕಡೆ ಎಂದು ನಾನು ಎದುರೇ ಹೇಳುವೆನು. ವಿಶೇಷತಃ ತಮ್ಮ ದೇಹ, ಆಹಾರ ವಿಹಾರ, ಜೀವನಕ್ರಮ, ಆರೋಗ್ಯ ಇತ್ಯಾದಿಗಳ ವಿಷಯದಲ್ಲಿ ಮನುಷ್ಯನು ತೋರಿಸುತ್ತಿರುವಷ್ಟು ಮೂರ್ಖತನವನ್ನು ಇನ್ನಾವ ಪ್ರಾಣಿಯೂ—ಕತ್ತೆಯು ಸಹ—ತೋರಿಸುವದಿಲ್ಲ. ಜೀವಕೋಟಿಯಲ್ಲಿ ಮನುಷ್ಯನೇನೋ ಕಡೆಹುಟ್ಟಿದವನೆಂದು ಹೇಳುವರು. ಕಡೆಹುಟ್ಟಿದವರು ಸಾಮಾನ್ಯವಾಗಿ ಜಾಣರು ಎಂದು ಹೇಳುವ ವಾಡಿಕೆ. ಆದರೆ ಬ್ರಹ್ಮನು ಇತರ ಪ್ರಾಣಿಗಳನ್ನು ಮಾಡಿ ಮಾಡಿ ದಣಿದು ಇದ್ದ ಬುದ್ಧಿಯನ್ನೆಲ್ಲ ವೆಚ್ಚಮಾಡಿದ ಬಳಿಕ ಮನುಷ್ಯನನ್ನು ನಿರ್ಮಾಣ ಮಾಡಬೇಕೆಂದು ಆದಕ್ಕೆ ಕೈ ಹಾಕಿರಬೇಕು. ಉಳಿದ ಚೂರುಚಾರು ಬುದ್ಧಿಯನ್ನುಪಯೋಗಿಸಿ ಮನುಷ್ಯನನ್ನು ಮಾಡಿ ಆವನು ನಿದ್ರೆಹೋಗಿರಬೇಕು. ಆದುದರಿಂದ ತನ್ನ ಕಡೆಹುಟ್ಟಿ ಮಗನು ಮಾಡಿದ ತಪ್ಪುಗಳನ್ನು ತಿದ್ದಲು ಬರುವ ಎಚ್ಚರ ಕೂಡ ಅವನಿಗಿಲ್ಲದಾಗಿದೆ! ಏನೋ ಒಂದು ಮಿದುಳು ಮಾತ್ರ ಇತರ ಪ್ರಾಣಿಗಳಿಗಿಂತ ಮನುಷ್ಯನಿಗೆ ದೇವರು ಹೆಚ್ಚು ಕೊಟ್ಟುಬಿಟ್ಟಿದ್ದಾನೆ. ಅದರ ಮೂಲಕವೇ ನಾನು ಎಲ್ಲಕ್ಕೂ ಹೆಚ್ಚಿನವ, ಎಂಬ ಹೆಮ್ಮೆ ಕೊಚ್ಚುತ್ತ ಆ ಮಿದುಳಿನ ದುರುಪಯೋಗ ಮಾಡುತ್ತ ಮನುಷ್ಯನು ತಿರುಗಾಡುತ್ತಿರುವನು !

## ಇವನು ನಿಸರ್ಗಶತ್ರು.

ವ್ಯಕ್ತಿಶಃ ಮನುಷ್ಯನಷ್ಟು ದುರ್ಬಲ ಪ್ರಾಣಿ ಇನ್ನೊಂದಿಲ್ಲ. ಇವನಿಗೆ ಮೊದಲು ವರ್ಷೆರಡು ವರ್ಷ ಕೂಡಲಿಕ್ಕೆ ಏಳಲಿಕ್ಕೆ ಕೂಡ ಬರುವದಿಲ್ಲ. ಇವನನ್ನು ಚಳಿಗಾಳಿಗಳಿಂದ ರಕ್ಷಿಸಬೇಕಾದರೆ ಅರಿವೆ ಅಂಚಡಿ ಬೇಕು, ಮನೆಮಾರು ಬೇಕು. ಹಸಿ ಪದಾರ್ಥಗಳನ್ನು ತಿಂದು ಅರಗಿಸಿಕೊಳ್ಳಲಾರದ ಅಳದಕ್ಕಿ ಇವನು. ಕಟ್ಟಿಗೆ ಕೋಲು ಕೊಡಲಿ ಕೋವಿ ಮುಂತಾವ ಸಾಧನಗಳಿಲ್ಲದೆ ಇವನು ಏನನ್ನೂ ಮಾಡಲಾರನು. ತಿನ್ನುಣ್ಣುವ ಸಾದಾ ಕೆಲಸವನ್ನು ಮಾಡಲು ಕೂಡ ಇವನಿಗೆ ಅನೇಕ ಸಹಾಯಕರು ಬೇಕು. ಹೀಗೆ ಒಂದಲ್ಲ ಎರಡಲ್ಲ, ಇವನ ದುರ್ಬಲತೆಯ ಅನೇಕ ಉದಾಹರಣೆಗಳನ್ನು ಕೊಡಬಹುದು. ಇವನ ವರ್ತನದಲ್ಲಿ ಪ್ರಮಾಣಬದ್ಧತೆ, ಸಮಂಜಸತನ ಎಳ್ಳಷ್ಟೂ ಇಲ್ಲ. ಈ ಆತ್ಮಹತ್ಯೆಯ ವಿಷಯವನ್ನೆ ನೋಡಿದರೆ ಇತ್ತ ಸಾಯಲು ಸಿದ್ಧರಾದ ನಿರುಪಯುಕ್ತ ನಿರುತ್ಸಾಹೀ ಜನರನ್ನು ಬದುಕಿಸಲು ಅನೇಕಾನೇಕ ಕಟ್ಟಳೆಗಳನ್ನು ಕಟ್ಟಿದ ಇದೇ ಮಾನವನು ಚಿಲ್ಲರೆ ಕಾರಣಗಳ ಸಲುವಾಗಿ ಕೋಟ್ಯಾನುಕೋಟಿ ಬಾಂಧವರ ಹಿಂಸೆಯನ್ನು ಕ್ಷಣದಲ್ಲಿ ಮಾಡಲೆಸಗುವನು ! ಎರಡನೆಯ ಪ್ರಾಣಿಗಳೂ ಕಡಿದಾಡುವವು. ಆದರೆ ಈ ರೀತಿ ಸಂಘಟಿತ ಕೊಲೆಸುಲಿಗೆಗಳನ್ನು ಮಾಡುವ ನೀಚತನವು ಮನುಷ್ಯನಲ್ಲಿಯೇ ಕಂಡು ಬರುವದು. ಇವನ ನಡತೆಯಲ್ಲಿ ನಿಸರ್ಗಸಿದ್ಧತೆಯಂತೂ ಎಳ್ಳಷ್ಟೂ ಇಲ್ಲ. ಬೆಳಗಿನಿಂದ ಸಾಯಂಕಾಲದ ವರೆಗೆ, ಹುಟ್ಟಿದಂದಿನಿಂದ ಸಾಯುವ ವರೆಗೆ, ಇವನು ನಿಸರ್ಗಕ್ಕೆ ವಿರುದ್ಧವಾಗಿಯೇ ನಡೆಯುವನು. ಸ್ವಚ್ಛ ಬೈಲು ಹವೆಯಲ್ಲಿರುವದನ್ನು ಬಿಟ್ಟು ಸುಡುಗಾಡು ಊರುಗಳೆಂಬ ತಿಪ್ಪೆಗಳಲ್ಲಿರುವನು. ಬಲವುಳ್ಳ ಪೋಷಕ ಹಸೀ ಆಹಾರವನ್ನು ಬಿಟ್ಟು ನಿಃಸತ್ವವಾದ ಕುದಿಸಿದ ಆಹಾರವನ್ನು ಸೇವಿಸುವನು. ಹಗಲು ಕೆಲಸ, ರಾತ್ರಿ ನಿದ್ರೆ ಇದು ನಿಸರ್ಗನಿಯಮ. ಇದನ್ನು ಬಿಟ್ಟು ದೀಪ ಹಚ್ಚಿ ರಾತ್ರಿ ಕೂಡ ಎಚ್ಚರವಿದ್ದು ಕೆಲಸ ಮಾಡುವನು. ಅನುಭವದ ಶಾಲೆಗಳಲ್ಲಿ ಹುಡುಗರಿಗೆ ಶಿಕ್ಷಣ ಕೊಡುವದನ್ನು ಬಿಟ್ಟು ನಾಲ್ಕು ಗೋಡೆಗಳನ್ನು ಕಟ್ಟಿ ಶಾಲೆಯೆಂದು ಹೆಸರಿಟ್ಟು ಆ ದಡ್ಡಿಯಲ್ಲಿ ಹುಡುಗರನ್ನು ಆಟ್ಟಿಬಿಟ್ಟು ಜೀವನಸಂಪರ್ಕವಿಲ್ಲದ ಒಣಗಿದ ಹೀರೆಕಾಯಿಯಂಥ ದನಗಾವಿಲರ ಕೈಯಲ್ಲಿ ತನ್ನ ಕಂದಮ್ಮಗಳನ್ನು ಕೊಟ್ಟು ಭರದಿಂದ ಬೆಳೆಯುವ ಜೀವಾತ್ಮಗಳನ್ನು ಕುಗ್ಗಿಸುವನು ! ಅಂಗಭೇದದ ಅವಾಸ್ತವ ಸ್ತೋಮವನ್ನು ಬೆಳೆಯಿಸಿ ಸ್ತ್ರೀಯರ ಊಟ ಉಡುಪು,

CC-0. Jangamwadi Math Collection. Digitized by eGangotri

ಆಹಾರವಿಹಾರ, ನಡತೆನಡಾವಳಿ ಇವೆಲ್ಲವು ಉಡಿಗೆತೊಡಿಗೆ, ...ಟ್ಟು ವಿಷಯವಾಸನೆಗೆ ಇಲ್ಲದ ಉತ್ತೇಜನಗಳನ್ನು ಬೇರೆ ... ಅದನ್ನೊಂದು ದೊಡ್ಡ ಕಲಾವಿಷಯವನ್ನು ಕೊಟ್ಟು ... ವನ್ನೆ ಮಾಡಿ ಬಿಟ್ಟಿರುವನು. ತನ್ನ ಅಂಗದ ದುರುಪಯೋಗವನ್ನು ಮಾಡಿಕೊಳ್ಳುವದರಲ್ಲಿ ಮನುಷ್ಯನಷ್ಟು ಅಧೋಗತಿಗೆ ಇನ್ನಾರೂ ಹೋಗಿಲ್ಲ, ಹೋಗುವ ಯತ್ನದೊಳಗೂ ಇಲ್ಲ. ತನ್ನ ಬಾಂಧವರನ್ನು ಸೆರೆಮನೆಯಲ್ಲಿ ಹಿಡಿದು ಹಾಕುವ, ಅವನನ್ನು ಗಲ್ಲಿಗೇರಿಸುವ, ಮುಂತಾದ ಕೃತ್ಯಗಳನ್ನು ಮಾನವನೇ ಮಾಡಬಲ್ಲನು! ತಾನು ಮಾಡುವ ಮೂರ್ಖತನ, ದುರ್ವರ್ತನ ಇವು ಸಾಕಾಗದುದಕ್ಕೆ ಅದರ ನಾಟಕ, ಆಟಪಾಟ, ಚಿತ್ರಪಟ ಮುಂತಾದವುಗಳನ್ನು ಮಾಡಿ ಅವುಗಳನ್ನು ನೋಡಿ ತನ್ನ ಮೂರ್ಖತನದ ಬಿಂಬವನ್ನೆ ಕಂಡುಕೊಂಡು ಕೆಲೆಯುವವನು ಮನುಷ್ಯನೊಬ್ಬನೇ!

## ನಿಸರ್ಗದ ಮುಯ್ಯಿ

ಹೀಗೆ ಒಂದೇ ಸವನೆ ಸಾವಿರಾರು ವರ್ಷ ತನ್ನ ವಿರುದ್ಧ ವರ್ತಿಸಿದುದಕ್ಕೆ ನಿಸರ್ಗವಾದರೂ ಸುಮ್ಮನೇ ಕುಳಿತಿಲ್ಲ. ಅದೂ ತನ್ನ ಮುಯ್ಯವನ್ನು ಚನ್ನಾಗಿ ತೀರಿಸುತ್ತಲಿದೆ. ಮನುಷ್ಯನು ಎಲ್ಲಿ ಹೋದಲ್ಲಿ ಅಲ್ಪಾಯುವಾಗಿ ಬಿಟ್ಟಿದ್ದಾನೆ. ಅವನು ಅನೇಕ ರೋಗಗಳಿಗೆ ಈಡಾಗಿದ್ದಾನೆ. ಮೆತ್ತನ್ನ ಕುದಿಸಿದ ಅನ್ನ ತಿಂದು ಅವನ ಹಲ್ಲು ಹುಳಿತು ಹೋಗಿವೆ. ಅವನ ಕಾಮವಾಸನೆ ಅಸೀಮವಾಗಿ ಅವನಿಗೆ ತೃಪ್ತಿಯೇ ಇಲ್ಲದಂತಾಗಿದೆ. ಅವನಲ್ಲಿಯ ರೋಗವಿರೋಧಕ ಶಕ್ತಿಯೇ ಕಡಿಮೆಯಾಗಿ ಬಿಟ್ಟಿದೆ. ಪ್ರಾಣಶಕ್ತಿ ಎಂಬುದು ತೀರ ಕೀಳು ತರಗತಿಗೆ ಇಳಿದಿದೆ. ಎಲ್ಲಿ ನೋಡಿದಲ್ಲಿ ಆಸ್ಪತ್ರಿಗಳೇ ಆಗಿಹೋಗಿವೆ. ನಿಸ್ತೇಜ ನಿಃಸತ್ವ ಜೀವನ, ಅರೆವಯಸ್ಸಿನಲ್ಲಿಯೇ ಮುಪ್ಪು, ಅತ್ಯಂತ ದುಃಖಮಯ ಸಾವು. ಮಾನವರಿಗೆ ಈ ಪರಿಸ್ಥಿತಿಯುಂಟಾಗಲಿಕ್ಕೆ ಅವರ ನಿಸರ್ಗವಿರುದ್ಧ ಆಚರಣೆಯೇ ಕಾರಣ. ಸ್ತ್ರೀಯನ್ನು ಕಂಡರೆ ಗಲಿತರಾಗುವ ಗಂಡಸರು, ತಾಯ್ತನಕ್ಕೆ ಅಂಜುವ ಅಳುಕುವ ಸ್ತ್ರೀಯರು, ಆಟ ಹುಡುಗಾಟಿಕೆಯಿಲ್ಲದ ಬಾಲ ಬಾಲಿಕೆಯರು ಇವರಿಂದ ನಮ್ಮ ನಗರಗಳೆಲ್ಲ ಗಜಬಜಿಸುತ್ತಲಿವೆ! ಇರಲಿ. ಮೂಲವಿಷಯದತ್ತ ಮರಳುವ.

## ಸುಳ್ಳು ಕಾರಣಗಳು

ಇನ್ನೇನು, ಮಾನವನು ಒಂದು ಸಮಂಜಸವೆಂದು ತೋರುವ ಕಾರಣವನ್ನು ಮುಂದೆ ಮಾಡಿ ಆತ್ಮಹತ್ಯೆಯನ್ನು ವಿರೋಧಿಸುತ್ತಿರಬಹುದು. ಈ ಪರಿ ಆತ್ಮಹತ್ಯೆಗೆ ಎಡೆಗೊಟ್ಟರೆ ತನ್ನ ವಂಶವೆಲ್ಲಿ ನಿರ್ನಾಮವಾಗುವದೋ ಎಂಬ ಭಯವಿರಬಹುದು ಅವನಿಗೆ. ಆದರೆ ಈ ಕಾರಣವು ಕೂಡ ಎಷ್ಟು ಅಸಮಂಜಸವಿರುವದೆಂಬುದನ್ನು ನಾವು ಸಹಜವಾಗಿ ತೋರಿಸಿಕೊಡಬಹುದು. ಜನಸಂಖ್ಯೆಯು ಅತೀವ ಬೆಳೆದಿರುವದರಿಂದ ಸಂತತಿನಿಯಮನಕ್ಕೆ ಈಗ ಅವನು ಅನೇಕ ಉಪಾಯಗಳನ್ನು ಕೈಕೊಳ್ಳುತ್ತಿರುವ ಕಾಲದಲ್ಲಿ ಈ ನಿರ್ವಂಶವಾಗುವ ಭಯವು ತೀರ ವಿಸಂಗತವು ಅಥವಾ ನಿರಾಧಾರವು! ನಗುತ್ತ ಕೆಲೆಯುತ್ತ ಈ ಜಗತ್ತಿನಲ್ಲಿ ಕಾಲಿಡುವ ಹೊಸ ಜೀವಗಳನ್ನು ತಡೆಯಲು ಯತ್ನಿಸುತ್ತಿರುವಾಗ ಇವನು ನೋವಿನಿಂದ ಬೆಂದು ನರಳುತ್ತ ಬಳಲುತ್ತ ಸಾವಿನತ್ತ ಸ್ವಸಂತೋಷದಿಂದ ಸಾಗಿದವರನ್ನು ನಾನಾ ಉಪಾಯಗಳಿಂದ ನಿರ್ಬಂಧಿಸುವದು ಮನುಷ್ಯಪ್ರಾಣಿಯ ಮೂಢತನದ ಪರಮಾವಧಿಯನ್ನೆ ತೋರುವದು!!! ಅವನ ತಲೆ ನನು ಕಂಡರೂ ಒಳಗಿನ ಮಿದುಳು ತಿರುವುಮುರುವು ಆಗಿರಲಿಕ್ಕೆ ಸಾಕು. ಇದಲ್ಲದೆ ಯುದ್ಧಾವೇಶವು ತುಂಬಿತೆಂದರೆ ಇವನು ಚಿಕ್ಕವರು ದೊಡ್ಡವರೆನ್ನದೆ ಎಲ್ಲರನ್ನೂ ಸವರಿಬಿಡುವನು. ಒಳ್ಳೆ ಗಟ್ಟಿಗರನ್ನೆ ಆರಿಸಿ ಆರಿಸಿ ಸಾವಿಗೀಡು ಮಾಡಿ ಅವರಿಂದ ಕೊಲೆಗೆಲಸ ಮಾಡಿಸುವನು. ಅಂದಬಳಿಕ ಯಾವನಾದರೊಬ್ಬ ರೋಗಿಯು ತಾನು ಸಾಯಲು ಸಿದ್ಧನಿದ್ದರೆ ಅವನಿಗೆ ಆತ್ಮಹತ್ಯೆ ಮಾಡಿಕೊಳ್ಳಲು ಅನುವು ಕೊಡದಿರುವದೆಂದರೆ ಅನ್ಯಾಯದ ಚರಮಸೀಮೆಯೇ ಸೈ. ಇಂಥವರನ್ನು ಉಳಿಸಿಕೊಳ್ಳುವದರಿಂದ ವಂಶವೃದ್ಧಿಯಾಗುವದೊತ್ತಟ್ಟಗಿರಲಿ. ನಿರುತ್ಸಾಹಿ, ನಿರ್ಜೀವ, ನಿರುಪಯುಕ್ತ, ಜೀವಂತ ಹೆಣಗಳನ್ನು ಇಟ್ಟುಕೊಂಡಂತೆಯೇ ಸೈ. ರೋಗಿಗಳು, ಸತಕಗಳು ಈ ಕ್ಷಣಕ್ಕೆಲ್ಲರೂ ಸತ್ತರೂ ಮಾನವಕುಲವು ಬಡವಾಗದೆ ಹೆಚ್ಚು ವೀರ್ಯವಂತವಾಗಬಹುದೆಂದೇ ನನ್ನ ಅಭಿಪ್ರಾಯವು.

## ಆತ್ಮಹತ್ಯಾಗೃಹಗಳು

ಆದುದರಿಂದ ಅಲ್ಲಲ್ಲಿ ಆಸ್ಪತ್ರಿಗಳನ್ನಿಟ್ಟಿರುವಂತೆ ಶರೀರತ್ಯಾಗ ಮಂದಿರಗಳನ್ನು ಕಟ್ಟಿಸುವದು ಸರಕಾರದವರ ಕರ್ತವ್ಯವಿದೆ. ಅಲ್ಲಿ ಆತ್ಮಹತ್ಯೆಯ ನಾನಾ ವಿಧದ ಸಾಧನಗಳನ್ನಿಟ್ಟಿರಬೇಕು. ನಾನಾ ವಿಧದ ವಿಷಗಳು, ಕ್ಲೋರೋಫಾರ್ಮ, ಕಾರ್ಬನ್ ಡಾಯ್ ಆಕ್ಸಾಯಿಡ ಮುಂತಾದವುಗಳ ಕೋಣೆಗಳು, ಮುಳುಗುವ ಹೌದುಗಳು, ವಿದ್ಯುತ್ ಧಕ್ಕೆಯ ಕುರ್ಚಿಗಳು, ಪಿಸ್ತೂಲುಗಳು, ಕತ್ತಿಗಳು ಅಲ್ಲಿ ಇಡಲ್ಪಟ್ಟಿರಬೇಕು. ಯಾವ ಸಾವು ಅತ್ಯಂತ ಸುಖಕರವೆಂಬದನ್ನು ಬಂದವರಿಗೆ ತಿಳಿಸಿ ಹೇಳಲು ಅಲ್ಲಿ ಒಬ್ಬ ಶಾಸ್ತ್ರಜ್ಞನನ್ನು

CC-0. Jangamwadi Math Collection. Digitized by eGangotri

ಇಟ್ಟಿರಬೇಕು. ಬಂದವನು ತನ್ನ ಹೆಸರು ಮುಂತಾದವುಗಳನ್ನು ರಜಿಸ್ಟರದಲ್ಲಿ ಬರೆದು, ಸಾಯುವ ಬಗ್ಗೆ ತನ್ನ ಸ್ವಸಂತೋಷದ ದಾಖಲೆ ಇಟ್ಟು, ತಾನು ಯಾವ ರೀತಿ ಶರೀರ ತ್ಯಾಗ ಮಾಡಲಿಚ್ಛಿಸುವನು ಎಂಬುದನ್ನು ತಿಳಿಸಬೇಕು. ಅಂದರೆ ಮುಂದಿನ ಎಲ್ಲ ವ್ಯವಸ್ಥೆಯು ಅಲ್ಲಿ ಆಗುವಂತಿರಬೇಕು. ಪ್ರಾಯೋಪವೇಶನ ಮಂದಿರ ಅಥವಾ ಭವನ ಎಂಬ ದೊಡ್ಡ ಹೆಸರನ್ನು ಬಾಗಿಲ ಮೇಲೆ ಬರೆದರೂ ಒಳಿತೇ.

### ಅನೇಕ ಲಾಭಗಳು

ಹೀಗೆ ಸ್ವೇಚ್ಛೆಯಿಂದ ತಮ್ಮ ನಶ್ವರ ಹಾಗೂ ರೋಗಿಷ್ಟ ದೇಹಗಳನ್ನು ತ್ಯಜಿಸಲಿಚ್ಛಿಸುವ ಧೈರ್ಯಶಾಲಿ ವೀರರೋಗಿಗಳಿಗೆ ಒಂದು ಸರಳವಾದ ಮಾರ್ಗವನ್ನು ಕಲ್ಪಿಸಿಕೊಟ್ಟರೆ ಎಷ್ಟೋ ಜನರ ಪೇಚಾಟವು ಉಳಿಯುವದು. ಎಷ್ಟೋ ಕುಟುಂಬದವರಿಗೆ ಮನೆಯೊಳಗೆ ಕೊಳೆಯುತ್ತ ಬಿದ್ದ ರೋಗಿಯು ಹೋಗುವದರಿಂದ ಪಿಡುಗು ದೂರಾದಂತಾಗುವದು. ಎಷ್ಟೋ ಗಂಡಹೆಂಡಂದಿರಿಗೆ ಎರಡನೇ ಲಗ್ನ ಮಾಡಿಕೊಳ್ಳಲಿಕ್ಕೆ ಹಾದೀ ಮಾಡಿಕೊಟ್ಟಂತಾಗುವದು. ಎಷ್ಟೋ ಆಸ್ಪತ್ರಿಗಳಲ್ಲಿ ವ್ಯರ್ಥ ಕಾಲಾಪವ್ಯಯ ಮಾಡುತ್ತ ಸ್ಥಳ ಹಿಡಿದುಕೊಂಡು ನರಳುತ್ತ ಕುಳಿತ ರೋಗಿಗಳಿಗೆ ಪರಿಹಾರವನ್ನು ಕಲ್ಪಿಸಿ ಕೊಟ್ಟಂತಾಗುವದು. ಜೀರ್ಣರೋಗಿಗಳಿಂದ (chronic patients) ಕ್ಷಣಶಃ ಆಗುತ್ತಿರುವ ರೋಗಪ್ರಸಾರವು ಕಡಿಮೆಯಾಗುವದು. ಹೀಗೆ ಒಂದಲ್ಲ ಎರಡಲ್ಲ. ಅನೇಕ ಲಾಭಗಳು ಈ ಮಾರ್ಗದ ಮೂಲಕ ಜನಸಾಮಾನ್ಯರಿಗೆ ಅಥವಾ ಸಮಾಜಕ್ಕೆ ದೊರೆಕೊಳ್ಳುವವು.

### ರೋಗಿಯು ಏನು ಮಾಡಬೇಕು ?

ಇಲ್ಲ, ಇಲ್ಲ, ರೋಗಿಗಳಿಗೆ ಈ ಪರಿಹಾರವನ್ನು ಕಲ್ಪಿಸಿ ಕೊಡಲು ಆಗುವದಿಲ್ಲ ಎಂದು ಸಮಾಜವು ತನ್ನ ಮೂರ್ಖತನವನ್ನೆ ಈಗಿನಂತೆ ಮುಂದುವರಿಸಿದರೆ ರೋಗಿಯು ಎಂಥ ಪೇಚಾಟದಲ್ಲಿ ಒದ್ದಾಡಬೇಕಾಗುತ್ತಿದೆ ಎಂಬದನ್ನು ಇನ್ನು ಸ್ವಲ್ಪದರಲ್ಲಿ ವರ್ಣಿಸುವೆನು. ಸ್ವೇಚ್ಛೆಯಿಂದ ಸ್ವಶರೀರ ತ್ಯಾಗಮಾಡುವ ಈ ಸ್ವರ್ಗಮಾರ್ಗವು ಮುಚ್ಚಿಡಲ್ಪಟ್ಟಿದ್ದರಿಂದ ಈಗ ರೋಗಿಯು ಔಷಧೋಪಚಾರವಿಲ್ಲದೆ ನೊಂದು ನರಳುತ್ತ ಹಾಸಿಗೆಯ ಮೇಲೆ ಬಿದ್ದುಕೊಂಡು ಪರಾವಲಂಬಿಯಾಗಿ ನರಕಯಾತನೆಗಳನ್ನು ಭೋಗಿಸುತ್ತ ಸಾಯಬೇಕು, ಇಲ್ಲವೆ ವೈದ್ಯ ಡಾಕ್ತರರ ಮಹಾಜಾಲದಲ್ಲಿ ಸಿಕ್ಕು ಒದ್ದಾಡಿ ಸಾಯಬೇಕು;—ಸಾಯುವವನೇ ಇದ್ದರೆ ಯಾವ ರೋಗಿಯನ್ನೂ ನಾವು ಬದುಕಿಸಲಾರೆವು ! ನಾವು ಕೇವಲ ನಿಸರ್ಗಕ್ಕೆ ಸಹಾಯ ಮಾಡುವೆವು ಎಂದು ವೈದ್ಯಶಾಸ್ತ್ರವು ಕಂಠೋಕ್ತವಾಗಿ ತಾನೇ ಹೇಳುತ್ತಿರುವುದು.

### ಬಡ ರೋಗಿಯ ಸ್ಥಿತಿ

ಈ ವಿಷಯದಲ್ಲಿ ಬಡವರ ಭವಣೆಯನ್ನಂತೂ ಕೇಳಲಾಸಲ್ಲ. ಬಡವರಿಗೆ ಹಾಗೂ 'ದುರ್ಬಲ'ರಿಗೆ ಜಗತ್ತಿನಲ್ಲಿ ಎಲ್ಲಿಯೂ ಸ್ಥಾನವಿಲ್ಲ. ದೇವೋ ದುರ್ಬಲಘಾತಕಃ ಎಂಬುದು ಯಥಾರ್ಥವು, ಡಾಕ್ತರರ ಕಡೆಗೆ, ವೈದ್ಯರ ಕಡೆಗೆ, ದವಾಖಾನೆಗಳಲ್ಲಿ ಎಲ್ಲಿ ಹೋದಲ್ಲಿ ಬಡವರಿಗೆ ಒಳ್ಳೇ ಭವಣಿಯೇ ಕಟ್ಟಿಟ್ಟಂತೆ. ರೋಗವು ಬಡವರಿಗೆ ಏಕೆ ಬಡಕೊಳ್ಳುವದೊ ತಿಳಿಯದು. ಒಂದೊಪ್ಪತ್ತು ಯಾವನಾದರೂ ಡಾಕ್ತರನು ಪ್ರಸನ್ನನಾಗಿ ಔಷಧವನ್ನು ಹೇಳಿದರೂ ಆ ಔಷಧವನ್ನು ಕೊಳ್ಳುವ ಸಾಮರ್ಥ್ಯವು ಪಾಪ ಆ ಬಡವನಲ್ಲಿರುವದಿಲ್ಲ ! ಸಾರ್ವಜನಿಕ ಆಸ್ಪತ್ರಿಗಳಲ್ಲಿ ಹೋಗಿ ಬಿದ್ದರೂ ಅಲ್ಲಿ ದುಡ್ಡು ಕೊಡುವವರ ವ್ಯವಸ್ಥೆ ಇದ್ದಂತೆ ಬಡವರ ವ್ಯವಸ್ಥೆ ಇರುವದಿಲ್ಲ. ನಿಯಮದ ಪ್ರಕಾರ ಎಲ್ಲರಿಗೂ ಒಂದೇ ವ್ಯವಸ್ಥೆ—ನಿಯಮಗಳಲ್ಲಿ ಎಲ್ಲಾ ಚೊಕ್ಕಟ ಎಂದು ಇದ್ದರೂ ಈ ರೋಗಿಯು ನೆಟ್ಟಗಾಗಿ ಹೋಗುವಾಗ ತಮಗೇನಾದರೂ ಚಿರಿಮಿರಿ ದೊರೆಯುವದು ಎಂಬ ಆಶೆ ಇದ್ದರೆ ಮಾತ್ರ ಅಲ್ಲಿಯ ಉಪಚಾರಕರು ಸ್ವಲ್ಪ ಲಕ್ಷ್ಯಗೊಡುವರು. ಇಲ್ಲದಿದ್ದರೆ ನಾಯಿ ಸತ್ತಂತೆ ನರಳುತ್ತ ಸಾಯಬೇಕು. ದವಾಖಾನೆಯಲ್ಲಿ ಸತ್ತನೆಂಬ ಸಮಾಧಾನವು ಬೇಕಾಗಿದ್ದರೆ ಮಾತ್ರ ಅಲ್ಲಿ ಹೋಗಬೇಕು ! ರಣದಲ್ಲಿ ಸತ್ತರೆ ಸ್ವರ್ಗ ಎಂದು ಹೇಳಿದೆ; ಹಾಗೆ ಆಸ್ಪತ್ರಿಯಲ್ಲಿ ಸತ್ತರೆ ಅವನಿಗೆ ಎಲ್ಲಿ ಕಳಿಸಲಾಗುವದು ಎಂದು ಶಾಸ್ತ್ರದಲ್ಲಿ ಎಲ್ಲಿಯೂ ಹೇಳಿದಂತೆ ಕಂಡುಬರುವದಿಲ್ಲ—ಈಗ ನಾನು ಹೇಳುವೆನು—ಅನಾಥ ನರಕ !

### ಸಿರಿವಂತ ರೋಗಿಯ ಸ್ಥಿತಿ

ಬಡರೋಗಿಗಳಿಗೇನೋ ಹೀಗೆ ತೊಂದರೆಯಾಗಬಹುದು. ಆದರೆ ಸ್ವಲ್ಪ ಜಾಣರು, ಹಣವಂತರು ಇದ್ದರೆ ಏನೂ ತೊಂದರೆಯಿಲ್ಲ. ಅವರಿಗೆ ಡಾಕ್ತರ ವೈದ್ಯರ ಸಹಾಯವು ದೊರೆತು ನಿರಾಯಾಸವಾಗಿ ಅವರು ವಾಸಿಯಾಗಿ ಹೋಗುವರು ಎಂದು ಹಲವರು ಊಹಿಸಬಹುದು. ಆದರೆ ಪರಿಸ್ಥಿತಿಯು ಹಾಗಿಲ್ಲ. ಒಬ್ಬ ರೋಗಿಯು ಔಷಧೋಪಚಾರವನ್ನು ಪಡೆಯುವ ನಿಶ್ಚಯವನ್ನೆ ಮಾಡಿಬಿಟ್ಟನೆಂದು ತಿಳಿಯುವಾ. ಆತ್ಮತ್ಯಾಗದ ಗೌರವದ ಮಾರ್ಗವನ್ನು ಬಿಟ್ಟು ಹೇಡಿಯಂತೆ ಡಾಕ್ತರರಿಗೆ ಶರಣು ಹೋಗುವ ನಿಶ್ಚಯವನ್ನು ಮಾಡಿದನೆಂದು ತಿಳಿಯುವಾ. ಅವನ ಮಾರ್ಗವು ಸುಕರ

CC-0. Jangamwadi Math Collection. Digitized by eGangotri

ರ ಅಥವಾ ಸರಳವಿದೆ ಎಂದು ಯಾರಾದರೂ ಅಥವಾ ಸುಖ ದು ತಪ್ಪು. ಜನರಲ್ಲಿ ಅಲ್ಲಿ ಇಲ್ಲಿ ಸ್ವಲ್ಪ ಭಾವಿಸಿದ್ದರೆ ಸು ಹೆಚ್ಚು ಇದ್ದವ, ಹೆಚ್ಚು ಜನ ಗೆಳೆಯರಿ ಗುರುತು-ಖೂ ಜನರಿಗೆ ಬೇಕಾದವನಿದ್ದರಂತೂ ಅವನ ದ್ದವ, ನಾಲ್ಕ ಯೇ ಇಲ್ಲ! ಯಾಕಂದರೆ ಪ್ರತಿಯೊಬ್ಬರು ಗೋಳಿಗೆ ಎಣೆ ರೆ ಬೇರೆ ಉಪದೇಶ ಹೇಳುವವರೇ. ಆ ಅವನಿಗೆ ಬೇ ಡಾಕ್ತರರ ಬಳಿಗೆ ಹೋಗಿರಿ, ಇವರತ್ತ ಹೋಗಿರಿ; ಇಲ್ಲಿ ಹೋದರೆ ನೆಟ್ಟಗೆ, ಆ ಆಸ್ಪತ್ರೆ ಚನ್ನಾಗಿದೆ ಅಥವಾ ಅಂಥ ಆರೋಗ್ಯಸ್ಥಾನಕ್ಕೆ ಹೋಗಿರಿ ಇತ್ಯಾದಿ ಹೇಳಿಕೆಗಳ ಸುರಿ ಮಳೆ ನಡೆದು ಎಲ್ಲಿ ಹೋಗಬೇಕು ಏನು ಮಾಡಬೇಕು ಇದರ ಬಗ್ಗೆ ದೊಡ್ಡ ಗೊಂದಲವೇ ಉಂಟಾಗಿ ಬಿಡುವದು.

## ಅನೇಕ ಮಾರ್ಗಗಳು

ಸ್ವತಃ ವಿಚಾರಿ ಇರುವನೆಂದು ತಿಳಿಯುವ. ಆದರೂ ಅವನೆದುರಿಗೆ ಅನೇಕ ಪ್ರಶ್ನೆಗಳು ಬಂದು ನಿಲ್ಲುವವು. ಈಗಿನ ದಿನಗಳಲ್ಲಿಯಂತೂ ಒಂದು ಸಾವಿರ ಔಷಧಪದ್ಧತಿಗಳು ನಾನು ಮುಂದೆ ನೀನು ಮುಂದೆ ಎಂದು ರೋಗ ನಿವಾರಣದ ಪಂಥವನ್ನು ತೊಟ್ಟು ಆರೋಗ್ಯದ ಕಣದಲ್ಲಿ ನಿಂತಿವೆ. ಕುಂಟಗಾಲ ವೈದ್ಯನನ್ನು ಮೊದಲು ಮಾಡಿಕೊಂಡು ಹಠಯೋಗಿಯ ವರೆಗೆ ಅನೇಕರು ನಾನಾ ರೀತಿಯ ಬಗೆಬಗೆಯ ಸಾಧನಗಳಿಂದ ರೋಗವನ್ನು ನಿವಾರಿಸುವೆವೆಂದು ಹೇಳುವರು. ರೋಗಿಯು ಯಾವುದನ್ನೆಂದು ಅನುಸರಿಸಬೇಕು, ಯಾರ ಮೇಲೆ ವಿಶ್ವಾಸವಿಡಬೇಕು, ಯಾವುದರಿಂದ ತನಗೆ ಗುಣವಾಗಬಹುದೆಂದು ಊಹಿಸಬೇಕು? ಆ ಎಲ್ಲ ಪದ್ಧತಿಗಳಲ್ಲಿಯೂ ಗುಣದೋಷಗಳಿರಬಹುದು; ಆದರೆ ರೋಗಿಯ ಇತಿಮಿತಿಜ್ಞಾನವನ್ನು ನಷ್ಟಪಡಿಸುವವರಾರು? ಅವನು ಮತ್ತೆ ಧುಡುಂಪ್ರವೇಶವೆಂದು ಯಾವುದಾದರೊಂದನ್ನು ಅವಲಂಬಿಸಿ ಅದನ್ನು ಹಿಂಬಾಲಿಸಬೇಕಲ್ಲವೆ?

## ಚಿನ್ನ, ಚಿರಂಜೀವಿತ್ವ, ದೇವ

ಇಲ್ಲಿ ಆ ಎಲ್ಲ ಪದ್ಧತಿಗಳ ದಿಗ್ದರ್ಶನ ಮಾಡುವದಂತೂ ಒತ್ತಟ್ಟಿಗಿರಲಿ. ಅವುಗಳೆಲ್ಲವುಗಳ ಹೆಸರುಗಳನ್ನು ಕಾಣಿಸುವದು ಕೂಡ ದುರಾಪಾಸ್ತವು. ಚಿನ್ನ, ಚಿರಂಜೀವಿತ್ವ, ದೇವ ಈ ಮೂರು ಪದಾರ್ಥಗಳ ಶೋಧಮಾಡುವ ವಿಷಯದಲ್ಲಿ ಇಡೀ ಮಾನವಕುಲವು ಇತಿಹಾಸಪೂರ್ವ ಕಾಲದಿಂದ ತನ್ನ ಪರಾಕಾಷ್ಠೆಯ ಯತ್ನ ಮಾಡುತ್ತ ಬಂದಿದೆ: ಇನ್ನೂ ಯಾವುದೂ ಸಾಧಿಸಿಲ್ಲ. ಆದರೆ ಹುಚ್ಚರಂತೆ ಇನ್ನೂ ಪ್ರಯತ್ನವನ್ನೇನೂ ಯಾರೂ ಬಿಟ್ಟಿಲ್ಲ. ಕನಿಷ್ಠ ಧಾತುಗಳನ್ನು ಚಿನ್ನ ಮಾಡಿ ಬಿಡುವದೇ ರಸಶಾಸ್ತ್ರ ಅಥವಾ ಕಿಮಿಯಾ ಅಥವಾ ಆಲ್‌ಕೆಮಿ. ಈ ಶೋಧವನ್ನು ನಡೆಸುತ್ತಲೆ ಮನುಷ್ಯನು ರಸಾಯನಶಾಸ್ತ್ರವನ್ನು (ಕೆಮಿಸ್ಟ್ರಿ) ಶೋಧಿಸಿದನು. ಈ ಶೋಧವು ಈಗ್ಯೂ ಎಲ್ಲ ದೇಶಗಳಲ್ಲಿಯೂ ನಡೆದಿದೆ. ಆದರೆ ಆ ಮಾಯೆ ಇನ್ನೂ ಯಾರಿಗೂ ಹಸ್ತಗತವಾಗಿಲ್ಲ! ಚಿರಂಜೀವಿತ್ವದ ಬಗ್ಗೆ ಔಷಧಗಳ ಶೋಧ ಮಾಡುತ್ತಲೆ ಆಯುರ್ವೇದಾದಿಗಳು ಹುಟ್ಟಿದವು. ಆ ಚಿರಂಜೀವಿತ್ವವೂ ಇನ್ನೂ ಕನ್ನಡಿಯೊಳಗಿನ ಗಂಟೇ ಆಗಿದೆ. ನೂರು ವರ್ಷ ಬಾಳಿಯೇ ತೋರುವೆನು ಎಂದು ಪಣ ತೊಟ್ಟ ಮೆಚಿನ್‌ಕಾಫ್‌ನಂಥವರು ತಮ್ಮ ಎಪ್ಪತ್ತನೇ ವರ್ಷವೇ ಪುಟಿದು ಹೋದರು. ದೇವನ ಶೋಧವನ್ನು ಮಾಡುತ್ತಿರುವಾಗ ಯೋಗಮಾರ್ಗಗಳು ಹುಟ್ಟಿದವು. ಯಾವನೂ ದೇವನನ್ನು ಕಂಡಿಲ್ಲ. ಆದರೂ ಇನ್ನೂ ಯೋಗಮಾರ್ಗದಲ್ಲಿ ಶೋಧಗಳು ನಡೆದೇ ಇರುವವು. ಪ್ರಸ್ತುತ ನಮಗೆ ಔಷಧಶಾಸ್ತ್ರದ ಸಂಬಂಧವು ಮಾತ್ರ ಇದೆ. ಆ ಪದ್ಧತಿಗಳು ಯಾವಯಾವವು ಇದನ್ನು ಸ್ವಲ್ಪ ನೋಡುವ.

## ಪದ್ಧತಿಗಳ ಮೇಲಾಟ

ಹಿಂದುಸ್ಥಾನದಲ್ಲಿ ಈಗ ಅನೇಕ ಔಷಧಪದ್ಧತಿಗಳು ಅಥವಾ ರೋಗಪರಿಹಾರಕ ಪದ್ಧತಿಗಳು ಕಂಡುಬರುವವು. ರೋಗಿಯು ತನ್ನ ರೋಗಪರಿಹಾರಕ್ಕಾಗಿ ಯಾವ ಪದ್ಧತಿಯನ್ನವಲಂಬಿಸಬೇಕು ಇದೊಂದು ದೊಡ್ಡ ಪ್ರಶ್ನೆಯೇ ಇದೆ. ಎಲ್ಲ ಪದ್ಧತಿಯ ಅಭಿಮಾನಿಗಳೂ ತಾವು ಎಲ್ಲಕ್ಕೂ ಶ್ರೇಷ್ಠರೆಂದು ಹೇಳಿಕೊಳ್ಳುವವರೆ! ಮುಂಬಯಿಯಲ್ಲಿ ಅಬ್ದುಲ್ ರಹಿಮಾನ್ ಸ್ಟ್ರೀಟಿನಲ್ಲಿ ಕಚ್ಚಿ ಅಂಗಡಿಗಳ ಮುಂದಿನಿಂದ ಗಿರಾಕಿಯು ಹೊರಟಿತೆಂದರೆ ಪ್ರತಿಯೊಬ್ಬ ಅಂಗಡಿಯವನೂ ಕೈಹಿಡಿದು ಎಳೆಯಲಾರಂಭಿಸುವನು. ಇದಕ್ಕೂ ಇನ್ನೊಂದು ಉದಾಹರಣೆ ಸ್ಟೇಶನ್ನಿನ ಮೇಲಿರುವ ಟಾಂಗಾದವರದು. ಪ್ರಯಾಣಿಕನು ಸ್ಟೇಶನ್ನಿನ ಹೊರಗೆ ಬಂದು ನಿಂತರೆ ಸಾಕು. ಟಾಂಗಾದವರು ಅವನ ಸಾಮಾನುಗಳನ್ನೆ ಕಿತ್ತುಕೊಂಡು ತಮ್ಮತಮ್ಮ ಕಡೆಗೆ ಅವನನ್ನು ಎಳೆಯಲಾರಂಭಿಸುವರು. ನಾನು ನಾನೆಂದು ಅಹಂಭಾವದಿಂದ ಹೇಳಿಕೊಳ್ಳುವ ಈ ಅನಿಶ್ಚಿತ ಡಾಂಭಿಕ ಉಪಚಾರ ಪದ್ಧತಿಗಳಿಗಿಂತ ಆತ್ಮಹತ್ಯೆಯಂಥ ನಿಶ್ಚಿತ ಹಾಗೂ ಸುಖದಾಯಕವಾದ ಮಾರ್ಗವು ರೋಗಿಗಳಿಗೆ ಎಷ್ಟೊಂದು ಸುಸೂತ್ರ!

CC-0. Jangamwadi Math Collection. Digitized by eGangotri

### ವಿವಿಧ ಪದ್ಧತಿಗಳು

ಇರಲಿ. ಹೀಗೆ ಒಂದೊಂದು ಪದ್ಧತಿಯನ್ನು ನಿರೀಕ್ಷಿಸಿದರೆ ಕುಂಟಗಾಲ ವೈದ್ಯನಿಂದ ಪ್ರಾರಂಭವಾಗುವದು. ಹಲವು ಕೆಲಸಿಗರು ಕೂಡ ಕೆಲವು ಶಸ್ತ್ರಕ್ರಿಯೆ ಮಾಡುವ ಸಾಹಸ ಮಾಡುವರು; ಹಾಗೂ ಮಾಲಿಸ—ಎಣ್ಣೆ ಹಚ್ಚಿ ವೈತಿಕ್ಕೋಣ ಮಾಡುವರು. ಅವರನ್ನು ಬಿಟ್ಟುಬಿಟ್ಟರೆ ಕುಂಟಗಾಲ ವೈದ್ಯರೇ ಮೊದಲಿಗರು ಎಂದು ಹೇಳಬಹುದು. ಇವರು ಆಯುರ್ವೇದಾಚಾರ್ಯನಾದ ಧನ್ವಂತರಿಗಿಂತ ಮೊದಲಿನವರಿರಲಿಕ್ಕೆಬೇಕೆಂದು ಹೇಳಬಹುದು. ಕಣ್ಕಿವಿ ವೈದ್ಯರೂ ಅದೇ ವರ್ಗಕ್ಕೆ ಸೇರಿದವರು. ಆ ಮೇಲೆ ಗಿಡಮೂಲಿಕೆ ವೈದ್ಯರು. ಇವರಾರಿಗೂ ಗ್ರಂಥಾಧಾರ ಮುಂತಾದವುಗಳಿಲ್ಲ. ಎಲ್ಲರೂ ಪರಂಪರೆಯಿಂದ ವಿದ್ಯೆ ಕಲಿತವರು. ಈ ಯಾರಿಗೂ ವೈದ್ಯಮಂಡಲಿಯಲ್ಲಿ ಅಧಿಕೃತ ಸ್ಥಾನವಿಲ್ಲ! ಆಯುರ್ವೇದದವರು ಇವರಿಗೆ ಅಡಕಸಬೀ ಜನರು (Quacks) ಎಂದು ಹೇಳುವರು. ಮುಂದೆ ಚರಕ, ಸುಶ್ರುತ, ವಾಗ್ಭಟ, ಶಾರಂಗಧರ ಮುಂತಾದ ಗ್ರಂಥಗಳ ಆಧಾರದಿಂದ ತಮ್ಮ ಕೆಲಸವನ್ನು ಸಾಗಿಸುವ ಆಯುರ್ವೇದ ವಿಶಾರದರು ನಮಗೆ ತೋರುವರು. ಆಯುರ್ವೇದದ ಹಲಕೆಲವು ಮಾತುಗಳೇ ಕಾಲವಶಾತ್ ಪ್ರಸಂಗವಶಾತ್ ಇರಾಣ, ಅರಬಸ್ತಾನದ ಮುಖಾಂತರ ಗ್ರೀಸದ ವರೆಗೆ ಹೋಗಿ ಸ್ವಲ್ಪ ಬೇರೆ ಮಾತುಗಳನ್ನು ಬೆರೆಸಿಕೊಂಡು ಯುನಾನೀ ಪದ್ಧತಿಯೆಂಬ ಅವತಾರ ತಾಳಿ ಪುನಃ ಹಿಂದುಸ್ತಾನಕ್ಕೆ ಬಂದಿದೆ. ಹಕೀಮರು ವಿಶೇಷವಾಗಿ ಈ ಪದ್ಧತಿಯನ್ನು ಅವಲಂಬಿಸಿರುವರು. ಈ ವೈದ್ಯ ಹಾಗೂ ಹಕೀಮರಲ್ಲಿ ಮತ್ತೆ ಎರಡು ಪಂಗಡಗಳು—ಹಲವರು ವನಸ್ಪತಿ ಗಿಡಮೂಲಿಕೆ ಮುಂತಾದವುಗಳನ್ನು ಹೆಚ್ಚು ಉಪಯೋಗಿಸುವವರು, ಇನ್ನು ಹಲವರು ರಸಶಾಸ್ತ್ರವನ್ನವಲಂಬಿಸಿ ಲೋಹ, ಖನಿಜ, ಭಸ್ಮಾದಿಗಳನ್ನು ಹೆಚ್ಚು ಉಪಯೋಗಿಸುವರು. ನಮ್ಮಲ್ಲಿ ಮಾಂತ್ರಿಕರದೊಂದು ಪ್ರತ್ಯೇಕ ವರ್ಗವೇ ಇದೆ ಎಂದು ಹೇಳಬಹುದು. ಹಾವು, ಚೇಳು ಇವುಗಳ ವಿಷ, ತಲೆನೋವು ಮುಂತಾದವುಗಳಿಗೆ ಇವರು ಮಂತ್ರಹಾಕುವರು. ಇದಲ್ಲದೆ ಬರೆ ಕೊಡುವವರು ಬೇರೆ ಇರುವರು. ಇದಲ್ಲದೆ ಯೋಗಿಗಳ ಮಾರ್ಗವೊಂದು ಬೇರೆ. ಅವರು ಆಸನಾದಿಗಳಿಂದ ರೋಗಗಳನ್ನು ಸರಿಪಡಿಸುತ್ತೇವೆನ್ನುವರು. ಈ ಮೇಲೆ ಕಾಣಿಸಿದ ಎಲ್ಲ ಮಾರ್ಗಗಳು ಹಿಂದುಸ್ತಾನದಲ್ಲಿಯೆ ಹುಟ್ಟಿಬೆಳೆದು ಬಂದವೆಂದು ಹೇಳಬಹುದು.

### ಪಾಶ್ಚಾತ್ಯ ಪದ್ಧತಿ

ಆದರೆ ಇತ್ತೀಚೆ ಪಾಶ್ಚಾತ್ಯರ ನೆರಳು ನಮ್ಮ ಮೇಲೆ ಬಿದ್ದ ಬಳಿಕ ಹಾಗೂ ನಮ್ಮದೆಲ್ಲ ಕಾಡು, ಪಾಶ್ಚಾತ್ಯರದು ಶ್ರೇಷ್ಠ, ಎಂಬ ಭ್ರಮವು ನಮಗೆ ಉಂಟಾದಂದಿನಿಂದ ಪಾಶ್ಚಾತ್ಯರ ಮಾನಸಪುತ್ರರಾದ ಇಂಗ್ಲೀಷ ಶಿಕ್ಷಣ ಪಡೆದವರೆಲ್ಲರೂ ಈ ಎಲ್ಲ ಪದ್ಧತಿಗಳನ್ನೂ ಕೀಳುಮಾಡಿ ಅಲೋಪಥಿ ಎಂಬ ಮಾರ್ಗವೇ ಶ್ರೇಷ್ಠ ಎಂದು ಹೊಗಳಲಾರಂಭಿಸಿದರು. ಪಾಪ, ಅಜ್ಞ ಜನರು ಅದರಂತೆ ತಿಳಿಯಲಾರಂಭಿಸಿ ಎಲ್ಲರೂ ವೈದ್ಯ ಎಂಬುದನ್ನು ಬಿಟ್ಟು, ಡಾಕ್ತರ ಡಾಕ್ತರ ಎಂದು ಬೆನ್ನುಬಿದ್ದರು. ಈಗ ಗುರು ಹೋಗಿ ಮಾಸ್ತರ ಆದನು, ವೈದ್ಯ ಹೋಗಿ ಡಾಕ್ತರ ಆದನು, ಹೆಂಡತಿ ಹೋಗಿ ವಾಯಿಫ್ ಆದಳು. ರಾಯರು ಹೋಗಿ ಸಾಹೇಬ ಅಥವಾ ಸರ ಆಗಿಬಿಟ್ಟರು! ಈಗ ವೈದ್ಯ ಹಕೀಮ ಮುಂತಾದವರೆಲ್ಲರೂ ಅಡಕಸಬೀ (Quacks) ಎನಿಸುವರು!

### ಅವರಲ್ಲಿ ಬಗೆಗಳು

ಇರಲಿ. ಅಲೋಪಥಿ ಆದರೂ ಒಂದು ನಿಶ್ಚಿತವಾದ ಶಾಸ್ತ್ರ, ಶ್ರದ್ಧೆಗೆ ಅರ್ಹವಾದದ್ದು, ಮತಭೇದರಹಿತವು ಎಂದು ಹೇಳಿದ್ದರೆ ಆಗುತ್ತಿತ್ತು. ಆದರೆ ಅದೂ ಇಲ್ಲ. ಅದರಲ್ಲಿ ಮತ್ತೆ ಅನೇಕ ಮತ ಮತಾಂತರಗಳು. ಅವರಲ್ಲಿ ಶಸ್ತ್ರಕ್ರಿಯೆಯವರು ಬೇರೆ, ಸಾದಾ ಔಷಧಕೊಡುವವರು ಬೇರೆ. ಕ್ಯಾನ್ಸರ, ಟೀ. ಬೀ. ಮುಂತಾದ ರೋಗಗಳಿಗೆ ಇವರಲ್ಲಿ ಔಷಧಗಳೇ ಇಲ್ಲ. ಮೇಲಾಗಿ ದಿನಾಲು ಹೊಸ ಇನ್‌ಜೆಕ್ಶನ್ ಮುಂತಾದವುಗಳು ಹೊರಡುತ್ತಿರುವದರಿಂದ ಇದಕ್ಕೊಂದೇನು ಸ್ಥಿರಸ್ಥಾವರತೆ ಎಂಬುದೇ ಇಲ್ಲವಾಗಿದೆ. ಈ ನಮ್ಮ ಡಾಕ್ತರಗಳು ಕೇವಲ ಪಾಶ್ಚಾತ್ಯರು ತಯಾರಿಸಿದ ಔಷಧಗಳನ್ನು ಮಾರುವ ಏಜಂಟರಾಗಿ ಪರಿಣಮಿಸಿದ್ದಾರೆ. ಆ ಬಗ್ಗೆ ಅವರಲ್ಲಿಯೇ ಎಷ್ಟೋ ಜನರಿಗೆ ಹೇಸಿಕೆ ಉಂಟಾಗಿದೆ. ಇದಾಗಿ ಈ ಅಲೋಪಥಿಯವರೇ ನಿರ್ವೀರ್ಯಮುರ್ವೀತಲಂ ಎಂದು ನಿಂತಿಲ್ಲ. ಅವರ ತಮ್ಮಂದಿರಾದ ಹೋಮಿಯೋಪಥಿಯವರು ಇವರಿಗೆ ಕೇವಲ ಘಾತಕ ಔಷಧಿ ಕೊಡುವವರು, ಅನೇಕ ಔಷಧಿಗಳನ್ನು ಕೊಟ್ಟು ಪ್ರಕೃತಿಯನ್ನು ಮತ್ತಿಷ್ಟು ಕೆಡಿಸುವರು ಎಂದು ಹೇಳುವರು!

ಮದ್ದು ಮದ್ದಿನಿಂದಲೇ ಗುಣವಾಗಬಲ್ಲದು, ಒಂದೇ ಔಷಧವನ್ನು ಒಂದು ಕಾಲಕ್ಕೆ ನಡೆಸಬೇಕು, ಸೂಕ್ಷ್ಮ ಪ್ರಮಾಣದಿಂದ ಕೊಡಬೇಕು ಎಂಬ ಮುಂತಾದ ತತ್ವ

CC-0. Jangamwadi Math Collection. Digitized by eGangotri

ಮುಂದೆಮಾಡಿ ಇವರು ಬಿಳಿಯ ಸಕ್ಕರೆಯ ಗುಳಿಗೆಗಳನ್ನು ಮಾತ್ರ ಕೊಟ್ಟು ರೋಗಗಳನ್ನು ಪರಿಹರಿಸಲು ಇಲ್ಲವೆ ಪು[illegible]. ಹಾಗೆ ಅನೇಕ ರೋಗಗಳನ್ನು ನೆಟ್ಟಗೂ ಹೊರಟವರುಂಟು. ಆದರೇನು, ಇವರಲ್ಲಿ ಶಸ್ತ್ರಕ್ರಿಯೆ ಮಾಡುವದ[illegible]ಗಿ ಮತ್ತೆ ಆಲೋಪಥಿ ಕಡೆಗೆ ಹೋಗಬೇಕು. ಇಲ್ಲ. ಅದಕ್ಕ[illegible] ಇವರಲ್ಲಿ ಮತ್ತೆ ಟಿಶ್ಯು ರೆಮಿಡೀಜ್ ಎಂಬ ಔಷಧಗಳನ್ನು ಕೊಡುವವರೂ ಉಂಟು!

ಇವೆರಡೆ 'ಪಥಿ'ಗಳು ನಮ್ಮೆದುರಿಗೆ ಇದ್ದರೆ ಹೇಗಾದರೂ ಒಂದನ್ನು ಆರಿಸಬಹುದಾಗಿತ್ತು. ಆದರೆ ನ್ಯಾಚರೋಪಥಿ (ನೈಸರ್ಗಿಕ ನಿಯಮಗಳ ಮೂಲಕ ಪರಿಹಾರ) ಇದೆ, ಹೈಡ್ರೋಪಥಿ (ನೀರಿನಿಂದ ಪರಿಹಾರ) ಇದೆ, ಕ್ರೋಮೋಪಥಿ (ವಿವಿಧ ಪ್ರಕಾಶಕ್ಕೆ ನೀರು ಇಟ್ಟು ಅದರಿಂದ ರೋಗ ಪರಿಹಾರ) ಇದೆ, ಎಕ್ಸರೇ ಥಿರ್‍ಯಾಪಿ (ಕ್ಷ ಕಿರಣಗಳ ಮೂಲಕ ಪರಿಹಾರ) ಇತ್ಯಾದಿಗಳು ಈಗ ನಮ್ಮೆದುರಿಗೆ ಇವೆ. ಮತ್ತೆ ಮೇಲೆ ತಿರುವುಮುರುವು ನಿಲ್ಲಲಿಕ್ಕೆ ಹೇಳಿ ನೆಟ್ಟಗೆ ಮಾಡುವೆವು ಎಂದು ಹೇಳುವ ಹಠಯೋಗಿಗಳೂ ಉಂಟು!

ಒಟ್ಟಿಗೇನು? ಮೊದಲೇ ರೋಗದ ಪೀಡೆಯಿಂದ ತಲ್ಲಣಗೊಳ್ಳುತ್ತಿರುವ ರೋಗಿಗೆ ಏನು ಮಾಡಬೇಕು, ಏನು ಬಿಡಬೇಕು, ಯಾವ ಪದ್ಧತಿಯನ್ನು ಸ್ವೀಕರಿಸಬೇಕು ಎಂದು ತಿಳಿಯದಷ್ಟು ಗೊಂದಲವು ಈ ರೋಗಪರಿಹಾರಕ ವಿವಿಧ ಶಾಸ್ತ್ರಗಳಲ್ಲಿ ಕಂಡುಬರುವದು. ಮೇಲಾಗಿ ಯಾವದೂ ಎಡೆಯ ಮೇಲಿನ ಕೈಯಲ್ಲ. ತಮ್ಮತಮ್ಮ ಪರಿಯಿಂದ ಎಲ್ಲರೂ ತಾವು ಉತ್ತಮರೆಂದು ಹೇಳುವವರೇ. ಇನ್ನು ಪ್ರಯೋಗಮಾಡುತ್ತ ಕೂಡಬೇಕೇ, ಇತ್ತ ಜೀವ ಹಣ ಎರಡೂ ಹೊರಟಿರುತ್ತವೆ!

ಇಂಥ ಪೇಚಾಟದಲ್ಲಿ ಸಿಕ್ಕವನೊಬ್ಬನು ಈ ನಾಲ್ಕು ಮಾತುಗಳನ್ನು ಬರೆದಿರುವನು. ಎಲ್ಲರೂ ಕ್ಷಮಿಸಬೇಕು.

---


# ಯುನೈಟೆಡ್ ಕರ್ನಾಟಕ ಇನ್ಶುರನ್ಸ್ ಕಂ. ಲಿಮಿಟೆಡ್

## ಕಾರ್ಯಾಲಯ—ಧಾರವಾಡ.

**ಕಳೆದ ಆರುವರ್ಷಗಳಿಂದಲೂ ಬೆಳೆದು ಬಲಗೊಂಡು ನಿಂತು, ಸರಕಾರದ ಪಂಚವಾರ್ಷಿಕ ವಿಮರ್ಶೆಯಲ್ಲಿ ಜಯಶೀಲವಾಗಿರುವ ಕರ್ನಾಟಕದ ಜೀವವಿಮಾ ಕಂಪನಿ ● ● ●**



**ಈ ಕಂಪನಿಯ ಬಗ್ಗೆ ಜನರಿಗೆ ವಿಶೇಷ ಅಭಿಮಾನವೆನಿಸಲು ಕಾರಣಗಳೇನೆಂದರೆ: ● ● ●**

ಕಂಪನಿಯ ಹಣಕ್ಕೆ ಸರಕಾರದ ಆಧಾರಪತ್ರಗಳ ಮೂಲಕ ಸಂಪೂರ್ಣ ಸುರಕ್ಷಿತತೆಯಿದೆ. ಪಾಲಿಸಿದಾರರ ಹಕ್ಕಿನ ಹಣವನ್ನು ಸಲ್ಲಿಸುವುದರಲ್ಲಿ ತೊಂದರೆ-ತಡೆಗಳೇ ಇಲ್ಲ. ಎಜಂಟರ ಮತ್ತು ಪ್ರಧಾನ ಕಾರ್ಯಾಲಯದ ವ್ಯವಹಾರದಲ್ಲಿ ಸಮಯಶೀಲತೆಯಿದೆ. ಕನಿಷ್ಠ ವೆಚ್ಚದಿಂದ ವಿಶಿಷ್ಟ ಲಾಭವನ್ನು ಕೊಡುವ ವಿಮಾಯೋಜನೆಗಳಿವೆ. ಈ ಕಂಪನಿಯು ಏಳ್ಗೆಯಲ್ಲಿ ಕರ್ನಾಟಕದ ಆರ್ಥಿಕೋನ್ನತಿಯ ಬಲವಾದ ಆಧಾರವಿದೆ.

ಅಲ್ಲದೆ ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಇವರ ಪಾಲುಗಾರರಿದ್ದು, ಇದು ಕನ್ನಡ ನಾಡಿನ ಪ್ರಾತಿನಿಧಿಕ ಸಂಸ್ಥೆಯಾಗಿದೆ. ಆದುದರಿಂದ ಕನ್ನಡದ ಗೆಲವನ್ನು ಬಯಸುವವರು 'ಯುನೈಟೆಡ್ ಕರ್ನಾಟಕ'ದ ಪಾಲಿಸಿಯನ್ನಾಗಲಿ ಪಾಲುಗಳನ್ನಾಗಲಿ ಪಡೆಯಬೇಕು; ವಿಶೇಷವಿವರಕ್ಕೆ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಮುಳಗಿ ಬಂಧುಗಳು
ಧಾರವಾಡ ಜಿಲ್ಹೆಯ ಚೀಫ್ ಏಜಂಟರು
ಗದಗ



ಎಮ್. ಗೋವರ್ಧನರಾವ್
ಮ್ಯಾನೇಜರ್
ಯು. ಕ. ಇ. ಕಂ. ಲಿ., ಧಾರವಾಡ


CC-0. Jangamwadi Math Collection. Digitized by eGangotri

LONG-LIFE INSURANCE Co., Ltd., POONA 2

೧೯೩೭—೩೮! ಮೊದಲನೇ ಮೂಲ್ಯಮಾಪನದ ವರುಷವು ಆರಂಭವಾಯ್ತು! ಸ್ತ್ರೀಯರ ಆರ್ಥಿಕ ಸ್ವಾತಂತ್ರ್ಯಕ್ಕೆ ಸಹಾಯಮಾಡುವ ಹಿಂದುಸ್ತಾನದೊಳಗಿನ ಆದ್ಯ ವಿಮಾಕಂಪನಿಯೆಂದರೇನೇ:—

# ಲಾಂಗ-ಲಾಯಿಫ ಇನ್ಸೂರೆನ್ಸ ಕಂ. ಲಿ.

ಪ್ರಧಾನಕಾರ್ಯಾಲಯ:— ಲಕ್ಷ್ಮೀರೋಡ, ಪುಣೆ. ೨.

ಸ್ತ್ರೀಯರ ವಿಮೆಯ ಬಗ್ಗೆ ವಿಶೇಷಸವಲತ್ತಿನ ಯೋಜನೆಗಳು ಮತ್ತು "ಮ್ಯಾಟರ್ನಿಟಿ ಬೆನಿಫಿಟ್" ಎಂಬ ಅಭಿನವ ಯೋಜನೆ.

ಸ್ತ್ರೀಪುರುಷರಿಗೂ ಬಡವರಿಗೂ ಶ್ರೀಮಂತರಿಗೂ ಸಲ್ಲತಕ್ಕ ಹಗುರಾದ ವಿಮೆಯ ಯೋಜನೆಗಳು.

ಒಳ್ಳೇ ಕರ್ತವ್ಯದಕ್ಷ ಮತ್ತೂ ಕನಿಷ್ಠ ವೆಚ್ಚದ ಕಾರಭಾರ. ಪಾಲಿಸಿದಾರರ ಹಿತರಕ್ಷಣೆಯ ಬಗ್ಗೆ ತುಂಬಾ ದಕ್ಷತೆ. ಪ್ರಾಮಾಣಿಕ ವ್ಯವಹಾರ.

ಈ ಕಾರಣಗಳಿಂದ ಈ ಕಂಪನಿಯು ಸ್ವಲ್ಪಾವಧಿಯಲ್ಲಿಯೇ ಜನರ ವಿಶ್ವಾಸಕ್ಕೆ ಪಾತ್ರವಾಗಿದೆ. ಇಲ್ಲಿಯೇ ವಿಮೆ ಇಳಿಸಿರಿ.

ಕರ್ನಾಟಕದಲ್ಲೆಲ್ಲ ಕರ್ತವ್ಯದಕ್ಷ ಸ್ತ್ರೀ ಮತ್ತು ಪುರುಷ ಏಜಂಟರು ಬೇಕಾಗಿದ್ದಾರೆ.

ವಿಶೇಷ ವಿವರಕ್ಕೆ ಕೆಳಗಿನ ವಿಳಾಸಕ್ಕೆ ಬರೆಯಿರಿ:—

ಮೆಸರ್ಸ್. ಎಸ್. ಎಲ್. ಆಪಟೆ ಮತ್ತು ಕಂಪನಿ, ಮ್ಯಾನೇಜಿಂಗ ಏಜಂಟ್ಸ್, ಬುಧವಾರಪೇಠ, ಪುಣೆ ೨

ಕರ್ನಾಟಕಭಾಗದ ಆರ್ಗನಾಯಿಝರರು:—

ಶ್ರೀ. ಕೃಷ್ಣರಾವ ಹುಲಕೊಪ್ಪಕರ, ಬಿ. ಏಜಿ. (BOM.), ಎಫ್. ಆರ್. ಎಚ್. ಎಸ್. (ಲಂಡನ್)

ಸಾಧನಕೆರೆ—ಧಾರವಾಡ

# EVIDENCE OF SECURITY & STABILITY

*It pays you to represent*

# THE BOMBAY LIFE ASSURANCE Co. Ltd. Estd 1910

FIGURES THAT SPEAK FOR THEMSELVES

## Assets Rs. 80,66,600

| | |
|---|---|
| Total Assets Over | Rs. 80,00,000 |
| Life Fund Over | Rs. 68,00,000 |
| Premium Income Over | Rs. 22,54,000 |
| Interest Income | Rs. 3,16,000 |
| Claims Paid | Rs. 5,75,000 |

Total Claims Paid Over
Rs. 38,50,000
Total Business In Force Over
Rs. 4,42,51,000

*Total Business In Force*
**4,42,51,200**

BRANCHES AT:
P. B. 337, Mount Road, **Madras**; Visveswarapuram Circle, **Bangalore City**; Soumyalayam Puthiyara, **Calicut**; Car Street, **Mangalore**; **Udipi**, S. India; Charni Road, **Bombay No. 4.**

*Apply to:*

**KOCHIKAR BROTHERS** *Madras Branch Secretaries*


CC-0. Jangamwadi Math Collection. Digitized by eGangotri

## ನಕಲೀ ಮಾಲು ಕೊಂಡು ಮೋಸಹೋಗಬೇಡಿರಿ !!

ಆಸೇತುಹಿಮಾಚಲ




೪೦ ವರುಷ ಪರ್ಯಂತ

ಖ್ಯಾತಿಗೊಂಡ ಅಂಜನರಾಜ

**ಅಮೃತಾಂಜನ**

**ಅಮೃತಾಂಜನ ಲಿಮಿಟೆಡ್**

**ಮದ್ರಾಸು, ಬೊಂಬಾಯಿ, ಕಲ್ಕತ್ತಾ.**

**AMRUTANJAN LTD., BANGALORE BRANCH,**
Krishna Building,
Avenue Road, Bangalore City

---

# ಕರ್ನಾಟಕ ಭಕ್ತವಿಜಯ

**ದ್ವಿತೀಯ ಭಾಗ** ರೂ. ೨-೮-೦

೪೫೦ ಪುಟಗಳ ಅಮೌಲ್ಯಗ್ರಂಥ

ಗ್ರಂಥಕರ್ತರು:: ಬೇಲೂರು ಕೇಶವದಾಸರು

## ಇತರ ಗ್ರಂಥಗಳು

| | |
|---|---|
| ಕರ್ನಾಟಕ ಭಕ್ತವಿಜಯ ಭಾಗ ೧ | ರೂ. ೨-೮-೦ |
| ಕನ್ಯಕಾ ಪುರಾಣ | ರೂ. ೧-೦-೦ |
| ಶ್ರೀ ರಾಘವೇಂದ್ರ ವಿಜಯ | ರೂ. ೦-೮-೦ |

**ದೊರೆಯುವ ಸ್ಥಳ:**

೧. ಸುಬೋಧ ಪ್ರಕಟನಾಲಯ, ಚಾಮರಾಜ ಪೇಟೆ ಬೆಂಗಳೂರು ನಗರ

೨. ಬೇಲೂರು ಕೇಶವದಾಸರು ಚಾಮರಾಜಪುರಂ ಮೈಸೂರು.

---

# UNEMPLOYMENT

OF EDUCATED MIDDLE CLASSES is an important item in the news today.

*Send a Post Card and let us tell you*

HOW TO GIVE YOUR BOY A START IN A BUSINESS OR PROFESSION!

**BOMBAY BARODA**

**ASSURANCE CO., LTD.**

ESTABLISHED 1925. HEAD OFFICE, BARODA

Wanted immediately Inspectors, Organisers, Chief Agents, and Dist. Agents, on most lucrative terms of Salary and Commission, throughout Karnataka aud Nizam State.

---

**ಡಾ. ಜೀ. ಬೀ. ಯವರ**

## ಸುಗಂಧ ನಶ್ಯದ ಪುಡಿ

ಲೋಕಪ್ರಸಿದ್ಧವಾದ ಈ ಸುಗಂಧನಶ್ಯದ ಪುಡಿಯಿಂದ ಪಿನಸಿ ಒಂಟಿತಲೆನೋವು ಮುಂತಾದ ವ್ಯಾಧಿಗಳು ಪರಿಹಾರವಾಗುವವು. ಕಂಠಕ್ಕೆ ಮೇಲ್ಪಟ್ಟ ೯೬ ವ್ಯಾಧಿಗಳು ಅಡಗಿ, ಜ್ಞಾಪಕಶಕ್ತಿ ಬೆಳೆಯುವದು. ಮೂರು ಬಟ್ಟಿನ ನಶ್ಯದ ಸಂಗಡ ಈ ಸುಗಂಧ ನಶ್ಯದ ಪುಡಿಯಲ್ಲಿ ಒಂದು ಚಿಟಿಕೆಯನ್ನು ಬೆರಸಿದರೆ ಎಲ್ಲವೂ ಪರಿಮಳವಾಗುವದು. ಅನೇಕರು ಕುಟುಂಬ ಔಷಧವಾಗಿ ಉಪಯೋಗಿಸುತ್ತಾರೆ. ಮಾದರಿ ಸೀಸೆ ಪುಕ್ಕಟೆ ಕಳಿಸಲಾದೀತು.



ಬುಡ್ಡಿ ೧ಕ್ಕೆ ರೂ. ೦-೪-೦

ವ್ಹಿ. ಪಿ. ೦-೪-೦. ಡಜನ್ ೧ಕ್ಕೆ ಕ್ರಯ ರೂ. ೨-೦-೦

ವ್ಹಿ. ಪಿ. ಚಾರ್ಜ ೮ ಆಣೆ

**ಗುರುಬಸವ ಆ್ಯಂಡ ಕಂಪನಿ, ಲಿಮಿಟೆಡ್,**

**ಪೋಸ್ಟ್ ಬಾಕ್ಸ ೮೧೦, ಮದರಾಸು.**

CC-0. Jangamwadi Math Collection. Digitized by eGangotri

# ಪ್ಯಾಲೆಸ್ಟಾಯಿನಿನ ಪಾಲುಗಾರಿಕೆ

ಅಲ್ಲಾನ ಪ್ರೇರಣೆಯಿಂದ ಬ್ರಿಟಿಷರು ಮತ್ತು ಫ್ರೆಂಚರು ಕಾಡು ತುರ್ಕೀ ಸಾಮ್ರಾಜ್ಯವನ್ನು ಸೋಲಿಸಿ, ಅರಬರನ್ನು ಬಿಡುಗಡೆಗೊಳಿಸಿದರು. ಆದರೆ ಪಡೆದ ಸ್ವಾತಂತ್ರ್ಯವನ್ನು ದಕ್ಕಿಸುವ ಯೋಗ್ಯತೆ ಇರಬೇಕಲ್ಲ ಅವರಿಗೆ ? ಅರಬರ ಹಿತಾರ್ಥವಾಗಿ ಬ್ರಿಟಿಷರು ಅವರ ಪಾಲಕತ್ವವನ್ನು ವಹಿಸಬೇಕಾಯಿತು. ಆದರೆ ಮಹಾಯುದ್ಧಕಾಲದಲ್ಲಿ ಯಹೂದಿಗಳಿಗೆ ಕೊಟ್ಟ ಧರ್ಮ ವಚನವನ್ನು ಮರೆಯುವಷ್ಟು ಕೃತಘ್ನರೆ ಬ್ರಿಟಿಷರು ? ಪ್ಯಾಲೆಸ್ಟಾಯಿನಿನಲ್ಲಿ ಅವರಿಗಾಗಿ ಹಕ್ಕಿನ ಮನೆಯನ್ನು ಮಾಡಿಕೊಡುವುದು ಪ್ರಾಪ್ತವಾಯಿತು. ಈಗ ಯಹೂದಿ-ಅರಬರ ಕುತ್ತಿಗೆಗೊಯ್ಕ ಕದನವನ್ನು ಕೊನೆಗಾಣಿಸಲು, ಅವರಿಗಿಷ್ಟು, ಇವರಿಗಿಷ್ಟು, ತಮಗಿಷ್ಟು ಹಂಚಿಕೊಳ್ಳುವುದು ಅನಿವಾರ್ಯವಾಗಿ ಬಂದಿದೆ. .... .... .... ....

'ನಾಗರಿಕ'

ಕಳೆದ ಮಹಾಯುದ್ಧದಲ್ಲಿ ತುರ್ಕೀ ಸಾಮ್ರಾಜ್ಯವು ಜರ್ಮನಿಯ ಪಕ್ಷವನ್ನು ವಹಿಸಿತು. ಅರ್ಥಾತ್ ಜರ್ಮನಿಯು ಪರಾಭವ ಹೊಂದಿದೊಡನೆ ಆಸ್ಟ್ರಿಯಾ ಜರ್ಮನಿಗಳಂತೆ ತುರ್ಕೀ ಸಾಮ್ರಾಜ್ಯವೂ ಲಯಹೊಂದಿತು; ಮತ್ತು ವಿಜಯಿ ರಾಷ್ಟ್ರಗಳಾದ ಇಂಗ್ಲೆಂಡ್-ಫ್ರಾನ್ಸುಗಳು ತುರ್ಕೀ ಸಾಮ್ರಾಜ್ಯದಲ್ಲಿಯ ಪ್ಯಾಲೆಸ್ಟಾಯಿನ್, ಸೀರಿಯಾ, ಇರಾಕ ಇ. ದೇಶಗಳನ್ನು ತಮ್ಮ ಪ್ರಭುತ್ವಕ್ಕೊಳಪಡಿಸಿದವು. ಆದರೆ ಈ ಸಾಮ್ರಾಜ್ಯವರ್ಧನೆಯ ಭಾಷೆಯು ೨೦ನೆಯ ಶತಮಾನದ ಯುರೋಪೀಯ ಸಂಸ್ಕೃತಿಗೆ ಒಪ್ಪದಂತಹುದಾಗಿದೆ. ಯಾಕೆಂದರೆ, ಮಹಾಯುದ್ಧ ಸಮಯದಲ್ಲಿ ಬ್ರಿಟಿಷ್ ಮತ್ತು ಫ್ರೆಂಚ್ ರಾಜಕಾರ್ಯಧುರಂಧರರು, ತಾವು ಸಾಮ್ರಾಜ್ಯವಿಸ್ತಾರಕ್ಕಾಗಿ ಕಾದುತ್ತಿರದೆ ಪ್ರಜಾಪ್ರಭುತ್ವ, ರಾಷ್ಟ್ರೀಯ ಸ್ವಾತಂತ್ರ್ಯ ಮತ್ತು ಸ್ವಯಂನಿರ್ಣಯಗಳೆಂಬ ತತ್ವಗಳಿಗಾಗಿ ಯುದ್ಧ ಹೂಡಿರುವುದಾಗಿಯೂ, ತಮಗೆ ಜಯಪ್ರಾಪ್ತಿಯಾದರೂ ಪರಾಜಿತರ ದೇಶಗಳನ್ನು ತಾವು ಸೆಳೆದುಕೊಳ್ಳುತ್ತಿಲ್ಲವೆಂದೂ ಉಗ್ಗಡಿಸಿದ್ದರು. ಅಲ್ಲದೆ ಕರ್ನಲ್ ಲಾರೆನ್ಸ್ ಎಂಬ ರಹಸ್ಯಮಯ ಮಹಾನುಭಾವನೊಬ್ಬನು ಈಶಪ್ರೇಷಿತನಂತೆ ಅರಬಸ್ತಾನವನ್ನೆಲ್ಲಾ ಅಲೆದಾಡಿ,ಕಾಡು, ಹಿಂಸಾಪ್ರಧಾನ ತುರ್ಕೀ ಸಾಮ್ರಾಜ್ಯದೊಳಗಿಂದ ಅರಬ್ಬೀ ರಾಜ್ಯಗಳನ್ನು ಬಿಡುಗಡೆ ಮಾಡಲು, ಬ್ರಿಟಿಷ್-ಫ್ರೆಂಚ್ ರಾಷ್ಟ್ರಗಳು ದೇವರಾಜ್ಞೆಯಿಂದ ಜರ್ಮನ್, ಆಸ್ಟ್ರಿಯನ್ ಮತ್ತು ತುರ್ಕೀ ಸಾಮ್ರಾಜ್ಯಗಳಿಗೆ ವಿರೋಧವಾಗಿ ಕಾಳಗ ಹೂಡಿವೆಯೆಂದು ಅರಬರ ಮನಸ್ಸಿನಲ್ಲಿ ಹೊಗಿಸಿಬಿಟ್ಟದ್ದನು. ಇದರ ಪರಿಣಾಮವಾಗಿ ಅರಬ ಸಂಸ್ಥಾನಗಳು ತುರ್ಕೀ ಪ್ರಭುತ್ವಕ್ಕೆ ವಿರುದ್ಧವಾಗಿ ಬಂಡು ಹೂಡಿದವು. ಅಂತೂ ಅಲ್ಲಾನ ಪ್ರೇರಣೆಯಿಂದ ಇಂಗ್ಲಿಷರು ಮತ್ತು ಫ್ರೆಂಚರು ತುರ್ಕೀ ಸಾಮ್ರಾಜ್ಯವನ್ನು ಪರಾಭವಗೊಳಿಸಿದರು. ಆದರೆ ಪ್ಯಾಲೆಸ್ಟಾಯಿನ್, ಸೀರಿಯಾ, ಇರಾಕಗಳಲ್ಲಿಯ ಅರಬರಿಗೆ ಕೂಡಲೆ ಸ್ವತಂತ್ರರಾಷ್ಟ್ರಗಳಾಗಿ ಸಂಸಾರ ಹೂಡುವ ಪಾತ್ರತೆಯಿಲ್ಲವೆಂಬ ಮಹಾಶೋಧವು ಮಹಾಯುದ್ಧ ಮುಗಿದ ಕೂಡಲೆ ರಾಷ್ಟ್ರಸಂಘದ ರಾಜತಂತ್ರಿಗಳಿಗೆ ಏಕಸ್ಮಾತ್ತಾಗಿ ಗೊತ್ತಾಯಿತು. ಹಾಗೂ ಅವರ ಸಲಹೆಯ ಮೇರೆಗೆ, ಪ್ಯಾಲೆಸ್ಟಾಯಿನ್-ಇರಾಕ ದೇಶಗಳು ಮತ್ತು ಸೀರಿಯವು ಅನುಕ್ರಮವಾಗಿ ಬ್ರಿಟಿಷರ ಮತ್ತು ಫ್ರೆಂಚರ ನೇತೃತ್ವದಲ್ಲಿ, ಅತ್ತೆಯ ಮನೆಯ ಸೊಸೆಯಂತೆ ಕೆಲ ದಿನ ಒಗೆತನ ಮಾಡಿ ತಂತಮ್ಮ ರಾಷ್ಟ್ರಗಳ ಆಡಳಿತ ಸಾಗಿಸುವ ಕಲೆಯನ್ನು ಕಲಿಯಬೇಕೆಂಬದಾಗಿ ಆಗಿನ ರಾಜಕೀಯ ತತ್ವವೇತ್ತರಾದ ಪ್ರೆಸಿಡೆಂಟ ವಿಲ್ಸನ್ನರು ನಿರ್ಣಯ ಕೊಡಬೇಕಾಗಿ ಬಂದಿತು. ೧೯೨೦ರ ಆಗಸ್ಟ ೧೦ನೆಯ ತಾ.ಸ ಸೆವ್ರೆಸ ಸಂಧಿಯನ್ವಯ, ತುರ್ಕೀ ಸಾಮ್ರಾಜ್ಯವನ್ನು ಹರಿದು ಹಂಚಲಾಯಿತು ಮತ್ತು ಬ್ರಿಟಿಷ್ ಸಾಮ್ರಾಜ್ಯವು ಪ್ಯಾಲೆಸ್ಟಾಯಿನಿನ ಪಾಲಕ (ಮ್ಯಾಂಡೇಟರಿ) ವಾಯಿತು. ಆಧುನಿಕ ರೀತಿಯಲ್ಲಿ ಆಡಳಿತವನ್ನು ಸಾಗಿಸುವ ಮತ್ತು ದೇಶದ ಔದ್ಯೋಗಿಕ-ಆರ್ಥಿಕ ಉನ್ನತಿಯನ್ನು ಮಾಡಿಕೊಳ್ಳುವ ಕ್ರಮದ ಶಿಕ್ಷಣಕೊಟ್ಟು, ಅಲ್ಲಿಯ ಜನತೆಗೆ ಸ್ವಾತಂತ್ರ್ಯದ ಪಾಠ ಕಲಿಸುವ ಗಡಚಾದ ಜವಾಬ್ದಾರಿಯು ಬ್ರಿಟಿ-

CC-0. Jangamwadi Math Collection. Digitized by eGangotri

ಟಿ ತಾನೆತಾನಾಗಿ ಬಂದು ಬಿತ್ತು; ಮತ್ತು ಆರ ಷರ ವೆ...ಕೀ ಸಾಮ್ರಾಜ್ಯದ ವಿರುದ್ಧವಾಗಿ ಕಾದಾಡುವು ಬರು...ರವಾಗಿ ಜಗತ್ತಿನಲ್ಲಿ ಶಾಂತಿಸ್ಥಾಪನೆಗೂ ಮಾನವ ದರಲ್ಲಿ...ಯ ಉನ್ನತಿಗೂ ಮಾಡಿದ ಸಹಾಯವನ್ನು ನೆನೆದು ಸಂಸ್ಕೃ... ಈ ಬಿಗಿಯಾದ ಕೆಲಸವನ್ನು ಕಡೆಪೂರೈಸಲು ಬ್ರಿಟಿಷ...ಟ್ಟಿದರು. ಟೋಂಕ...

ಈ ...ಗಿ ಕೃತ ಕಾರ್ಯಕ್ಕೆ ಅಡ್ಡಲಾದ ಒಂದೇ ಒಂದು ...ಂದರೆ ಪ್ಯಾಲೆಸ್ಟಾಯಿನಿನ ಔದ್ಯೋಗಿಕ ಉನ್ನತಿಗೆ ಆತ. ...ನ ಬಂಡವಾಳ. ಇಂದಿನ ಯಾವ ರಾಷ್ಟ್ರವೂ ಬೇಕಾ... ದುಡ್ಡಿನ ಬೆಂಬಲವಿಲ್ಲದೆ ತನ್ನ ಸ್ಥಿತಿಯನ್ನು ಉತ್ತಮಗೊಳಿಸಲಾರದು. ಯುರೋಪುಖಂಡದಲ್ಲೆಲ್ಲ ಸಾಹುಕಾರಿಯ ಉದ್ಯೋಗದಲ್ಲಿ ಹೆಸರುವಾಸಿಗಳಾದ ಯಹೂದಿಗಳು ಪ್ಯಾಲೆಸ್ಟಾಯಿನಿನ ಔದ್ಯೋಗಿಕ ಅಭಿವೃದ್ಧಿಯ ಕಾರ್ಯಕ್ರಮಕ್ಕೆ ಸಹಾಯ ಮಾಡಲು ಒಂಟಿಗಾಲಿನ ಮೇಲೆ ಸಿದ್ಧರಿದ್ದರು; ಆದರೆ ತಮ್ಮ ಧರ್ಮಬಾಂಧವರಿಗೆ ಪ್ಯಾಲೆಸ್ಟಾಯಿನಿನಲ್ಲಿ ಹಕ್ಕಿನ ಮನೆ ಮಾಡಿಕೊಳ್ಳಲು ಕೊಡಬೇಕೆಂಬುದೊಂದೆ ಅವರು ಹಾಕಿದ ಕರಾರಾಗಿತ್ತು. ಆಸ್ಟ್ರಿಯಾ-ಜರ್ಮನಿಗಳ ವಿರುದ್ಧವಾಗಿ ಹೋರಾಡುವುದರಲ್ಲಿ ಬ್ರಿಟಿಷರಿಗೂ ಫ್ರೆಂಚರಿಗೂ ಯಹೂದಿ ಸಾಹುಕಾರರೂ ಬ್ಯಾಂಕರರೂ ಅಪಾರ ಸಹಾಯವನ್ನೊದಗಿಸಿದ್ದರು. ಇಷ್ಟೆ ಅಲ್ಲ, ಆ ಸಾಮ್ರಾಜ್ಯಗಳನ್ನು ಒಳಗಿಂದೊಳಗೆ ಕೊರೆದು ಮುರಕಲು ಮಾಡುವ ಮಹೋದ್ಯಮದಲ್ಲಿ ಅವರು ಭಾಗವಹಿಸಿದುದನ್ನು ನೆನೆದೇ ಜರ್ಮನಿಯ ರಾಷ್ಟ್ರೀಯ ವೃತ್ತಿಯ ಜನರು ಅವರನ್ನು ದೇಶದ್ರೋಹಿಗಳೆಂದು ಬಗೆಯುತ್ತಾರೆ. ಆದರೆ ಬ್ರಿಟಿಷರು ಈ ಜನಾಂಗದ ಬಗ್ಗೆ ಕೃತಘ್ನರಾಗುವುದು ಹೇಗೆ? ವ್ಯಾಪಾರೀ-ಸಾಹುಕಾರೀ ವರ್ಗದ ಜನರ ಮಹತ್ವವನ್ನು ಇಂಗ್ಲಿಷರಷ್ಟು ಇನ್ನಾರೂ ಅರಿತಿರಲಾರರು. ಈ ದೃಷ್ಟಿಯನ್ನಿಟ್ಟುಕೊಂಡೇ ಇಂಗ್ಲಿಷರು ಯುರೋಪಿನ ಎಲ್ಲಾ ಯಹೂದಿಗಳ ಸಹಾಯ ಸಿಗಬೇಕೆಂದು, ೧೯೧೭ರ ನವಂಬರ ೨ನೆಯ ದಿನ, ಪ್ಯಾಲೆಸ್ಟಾಯಿನಿನಲ್ಲಿ 'ಯಹೂದಿಗಳ ರಾಷ್ಟ್ರೀಯ ನಿವಾಸವು' (ಜ್ಯೂಯಿಶ್ ನ್ಯಾಶನಲ್ ಹೋಮ್) ನಿರ್ಮಾಣವಾಗುವುದರಲ್ಲಿ ತಾವು ಸಹಕರಿಸುವುದಾಗಿ ಒಂದು ಘೋಷಣೆಯನ್ನು ಮಾಡಿದರು. ಇದಕ್ಕೇ ಬಾಲ್ಫರ-ಘೋಷಣೆಯೆಂದು ಹೆಸರು.

---

**'ನಮಸ್ತೇ'**

ಅರಬರ ಬಂಡಾಯದ ಮುಖ್ಯಸ್ಥನಾದ ಫೌಜಿ ಕವಾದಜಿಯು, ತನ್ನ ಸೇನೆ ಯುದ್ಧರಂಗಕ್ಕೆ ಹೋಗುವ ಮೊದಲು, ಅದರ ಕೂಚನ್ನು ನಿರೀಕ್ಷಿಸುತ್ತಿರುವುದು



CC-0. Jangamwadi Math Collection. Digitized by eGangotri

ಈ ಬಾಲ್ಫುರ-ಪ್ರಕಟನೆಯನ್ನು ಕುರಿತು ಒಂದು ಕತೆ ಹೇಳುತ್ತಾರೆ. ಮಹಾಯುದ್ಧವು ಒಳ್ಳೆ ರಂಗಿಗೆ ಬಂದಾಗ ಒಮ್ಮೆ ಅಸಿಟೋನ ಎಂಬ ದ್ರವ್ಯವು ತೀರಿಹೋಗಲಿಕ್ಕೆ ಬಂದಿತ್ತು. ಮದ್ದುಗುಂಡಿನ ಕೆಲಸಕ್ಕೆ ಅದು ತೀರಾ ಆವಶ್ಯಕವಾಗಿತ್ತು. ಅದೇ ಕಾಲಕ್ಕೆ ಫ್ರೆಂಚ್ ಸೈನ್ಯದಲ್ಲಿ ಬಂಡಾಯವೆದ್ದು, ಇಟಲಿಯು ಪರಾಜಿತವಾಗಿತ್ತು. ಅಮೆರಿಕನ್ ಸರಕಾರವೂ ಇನ್ನೂ ಸಹಾಯಕ್ಕೆ ಬಂದಿರಲಿಲ್ಲ. ಈ ಆಪತ್ಸಮಯದಲ್ಲಿ ಡಾ. ವಾಯಿಜ್ಮನ್ ಎಂಬ ಮ್ಯಾಂಚೆಸ್ಟರ ವಿದ್ಯಾಪೀಠದ ಮಹಾಪಂಡಿತನೊಬ್ಬನು ಅಸಿಟೋನದ ಬದಲು ಉಪಯೋಗಿಸಬಹುದಾದ ಹೊಸ ದ್ರವ್ಯವನ್ನು ಹುಡುಕಿಕೊಟ್ಟು ಬ್ರಿಟಿಷ್ ಸಾಮ್ರಾಜ್ಯಕ್ಕೆ ಜೀವದಾನ ಕೊಟ್ಟನು. ಈ ಶೋಧಕ್ಕಾಗಿ ಆತನು ತನಗಾಗಿ ಧನ-ದೌಲತ್ತು-ಪದವಿ ಮುಂತಾದ್ದೇನನ್ನೂ ಬಯಸದೆ, ಬ್ರಿಟಿಷ್ ರಾಜಕಾರಣಪಟುಗಳಲ್ಲಿ ಪ್ಯಾಲೆಸ್ಟಾಯಿನಿನಲ್ಲಿ ತನ್ನ ಜಾತಿಬಾಂಧವರಿಗೆ ಹಕ್ಕಿನ ವಾಸಸ್ಥಳ ಸಿಗಬೇಕೆಂದು ವರ ಬೇಡಿಕೊಂಡನು; ಆದರ ಫಲವೇ ಈ ಬಾಲ್ಫುರ—ಘೋಷಣೆ. ಸೆವ್ಹರೆಸ ಒಪ್ಪಂದದಿಂದ ಪ್ಯಾಲೆಸ್ಟಾಯಿನಿನ ಪಾಲಕತ್ವವು ಬ್ರಿಟಿಷರ ಕಡೆಗೆ ಬಂದಿತು; ಆದರೊಡನೆ ಈ ವರಪ್ರದಾನದ ಪೂರ್ತತೆಯ ಜವಾಬ್ದಾರಿಯೂ ಅವರ ಮೇಲೆ ಬಂದು ಬಿತ್ತು. ಅರಬರಿಗೆ ರಾಷ್ಟ್ರೀಯ ಸಂಸಾರದ ಶಿಕ್ಷಣ ಕೊಡುವುದು ಮತ್ತು ಯಹೂದಿಗಳಿಗೆ ರಾಷ್ಟ್ರೀಯ ನಿವಾಸವನ್ನು ಮಾಡಿಕೊಡುವುದು—ಇವೆರಡರಲ್ಲಿ ಬ್ರಿಟಿಷರಿಗೆ ವಿರೋಧ ತೋರಿಬರಲಿಲ್ಲ. ಆದರೆ ನಾಗರಿಕತೆಯಲ್ಲಿ ಮುಂದರಿದಿರದ ಅರಬರಿಗೆ ಅವುಗಳಲ್ಲಿ 'ಹಾವು-ಮೊಲ' ಗಳ ಬಾಂಧವ್ಯವು ತೋರಿಬರುತ್ತಿದೆ.

ಪ್ಯಾಲೆಸ್ಟಾಯಿನಿನಲ್ಲಿ ಮಹಾಯುದ್ಧ ಪೂರ್ವದಲ್ಲಿ ಯಹೂದಿಗಳಿದ್ದಿರಲಿಲ್ಲವೆಂತಲ್ಲ. ಬಗದಾದ, ದಮಾಸ್ಕಸ, ಅಲೆಕ್ಝಾಂಡ್ರಿಯಾ ಮೊದಲಾದ ಪಟ್ಟಣಗಳಲ್ಲಿ ಯಹೂದಿ-ಅರಬ್ಬೀ ವ್ಯಾಪಾರಿಗಳು ಸ್ನೇಹಭಾವದಿಂದ ನೆರೆಹೊರೆಯವರಾಗಿ ನಡೆದಿರಲಿಲ್ಲವೆಂತಲ್ಲ. ಆದರೆ ಪಾಲಕರೆಂಬ ಹೆಸರಿನಲ್ಲಿ ಸತ್ತಾಧೀಶರಾಗಿದ್ದ ಬ್ರಿಟಿಷ್ ರಾಜ್ಯಕರ್ತರ ಆಸರೆ ಪಡೆದು ತಮ್ಮ ಸ್ವಾಮಿತ್ವದ ಕ್ಷೇತ್ರವನ್ನು ಬೆಳೆಯಿಸಲೆಳಸುವ ಮತ್ತು ಬೇರೆ ನಾಗರಿಕರಿಗಿಂತ ಹೆಚ್ಚಿನ ದರ್ಜೆಯನ್ನು ಪಡೆಯಲು ಹೊಂಚುಹಾಕಿರುವ ಈ ಹೊಸ ಯಹೂದಿ ಅತಿಥಿಗಳು ಅವರಿಗೆ ತಮ್ಮ ಹಿತಶತ್ರುಗಳಾಗಿ ತೋರುತ್ತಾರೆ. ಇವರು ತಮ್ಮನ್ನು ರಾಜಕೀಯ-ಔದ್ಯೋಗಿಕ ದಾಸ್ಯದಲ್ಲಿ ನೂಕಿ, ಜಮೀನುದಾರ-ಕಾರಖಾನೆದಾರ-ಸಾಹುಕಾರರ ಸಂಬಂಧ ಹೆಚ್ಚಿ ನಾಳೆ ತಮ್ಮ ಭೂಮಿ-ಸೀಮೆಗಳ ಸ್ವಾಮಿಗಳಾಗುವರು ಎಂಬ ಭೀತಿ ಹಿಂದುಳಿದ ಅರಬರಿಗೆ ಅನಿಸುತ್ತಿದೆ. ಕಳೆದ ೧೬—೧೭ ವರುಷಗಳಲ್ಲಿ, ವಿಶೇಷತಃ ಜರ್ಮನಿಯಲ್ಲಿ ಯಹೂದಿಗಳಿಗೆ ಮಾಡಲಾದ ಹಿಂಸೆಯು ಮಿತಿಮೀರಿದಂದಿನಿಂದ, ಪ್ಯಾಲೆಸ್ಟಾಯಿನಿನಲ್ಲಿ ಈ ಜನರ ಆಪಾತವು ತುಂಬಾ ಬೆಳೆದಿದ್ದು, ಇಂದು ಅಲ್ಲಿಯ ಒಟ್ಟು ಜನಸಂಖ್ಯೆಯಲ್ಲಿ ನೂರಕ್ಕೆ ಮೂವತ್ತರಷ್ಟು ತಮ್ಮ ಜನಬಲವನ್ನಿವರು ಬೆಳೆಸಿಕೊಂಡಿದ್ದಾರೆ. ಕೆಲದಿನಗಳಲ್ಲಿಯೇ ಈ ಯಹೂದಿಗಳು ತಮ್ಮೊಡೆಯರಾಗಿ, ತಾವು ಅವರ ಗುಲಾಮರಾಗುವದು ಖಂಡಿತವೆಂದು ಅರಬರಿಗೆ ಅನಿಸತೊಡಗಿದೆ. ಎಂತಲೇ ಅವರನ್ನು ಪರಕೀಯ ಸಾಮ್ರಾಜ್ಯದ ಹಸ್ತಕರೆಂದೂ ಗೃಹಭೇದಿಗಳೆಂದೂ ದೇಶದ್ರೋಹಿಗಳೆಂದೂ ಪರಿಪರಿಯಿಂದ ದೂಷಿಸುತ್ತಿದ್ದಾರೆ.

ಬ್ರಿಟಿಷ್ ಪಾಲಕರ ದೃಷ್ಟಿಯಲ್ಲಿ ಇದು ಶುದ್ಧ ಮೌಢ್ಯ. ಯಹೂದಿಗಳ ಸಹಕಾರ್ಯ-ಸಾನ್ನಿಧ್ಯಗಳಿಂದ ಪ್ಯಾಲೆಸ್ಟಾಯಿನಿನ ಔದ್ಯೋಗಿಕ ಉನ್ನತಿಯು ಭರದಿಂದ ನಡೆದಿದೆಯೆಂದೂ ಅಲ್ಲಿಯ ಹಣ್ಣುಹಂಪಲುಗಳ ತೋಟಗಳೂ ಹೊಲಗಳೂ ಸುಧಾರಿಸಿವೆಯೆಂದೂ ಅವರ ಅಭಿಪ್ರಾಯವಾಗಿದೆ. ಯಹೂದಿಗಳು ಹೆಚ್ಚುಹೆಚ್ಚು ಜನ ಬಂದಹಾಗೆ ಅಲ್ಲಿಯ ಕೂಲಿಯ ದರ ಏರತೊಡಗಿತು. ಅದು ಸುಮಾರು ಎರಡರಷ್ಟು ಏರಿದ್ದರಿಂದ ನೆರೆಹೊರೆಯ ನಾಡುಗಳ ಅರಬರು ಕೂಲಿಗಾಗಿ ಪ್ಯಾಲೆಸ್ಟಾಯಿನಿಗೆ ಬರಲಾರಂಭಿಸಿ, ಇಜಿಪ್ತ, ಟ್ರಾನ್ಸಜಾರ್ಡನ, ಸಿರಿಯಾ, ಇರಾಕ ಮೊದಲಾದ ದೇಶಗಳಿಂದಲೂ ಸುಮಾರು ೧೫-೨೦ ಸಾವಿರ ಕೂಲಿಗಳು ಅಲ್ಲಿ ಬಂದು ನೆಲಸಿದ್ದಾರೆ. ೧೯೨೨ರ ಸಾಲಿನಲ್ಲಿ ಪ್ಯಾಲೆಸ್ಟಾಯಿನಿನಿಂದ ಹೊರಹೋಗುವ ಕಿತ್ತಳೆ ಹಣ್ಣುಗಳ ಪುಟ್ಟಿಗಳ ಸಂಖ್ಯೆಯು ೧೨ ಲಕ್ಷ ಮಾತ್ರವಿದ್ದಿತು, ಅದು ೧೯೩೫ರಲ್ಲಿ ೭೫ ಲಕ್ಷಕ್ಕೇರಿತು; ೧೯೩೭ರ ಕೊನೆಗೆ ಅದು ೧ ಕೋಟಿ ೫೦ ಲಕ್ಷಕ್ಕೆ ಮುಟ್ಟಬಹುದೆಂದು ಲೆಕ್ಕಹಾಕಲಾಗಿದೆ. ಅಲ್ಲದೆ ಮೊದಲು ಬೀಳುಬಿದ್ದಿದ್ದ ಭೂಮಿಗಳು ಈಗ ಸಾಗುವಳಿಯಾರಂಭಿಸಿದ್ದು, ಅವುಗಳಲ್ಲಿ ೨/೩ರಷ್ಟು ಯಹೂದಿಗಳಿಗೆ ದಕ್ಕಾಗಿದ್ದರೂ ೧/೩ರಷ್ಟು ಅರಬರಿಗೆ ದೊರೆಯಲೇಬೇಕೆಂದು ಬ್ರಿಟಿಷ್ ತಂದೆತಾಯಿಗಳು ಏರ್ಪಾಡು ಮಾಡಿಟ್ಟಿದ್ದಾರೆ. ಇಷ್ಟು ಮಾತ್ರವಲ್ಲ, ಯಹೂದಿಗಳ ಆರೋಗ್ಯಕರ ಜೀವನದಿಂದ ಅರಬರ ಆಯುರ್ಮಾನವು ಬೆಳೆಯುತ್ತಿದ್ದು ಅವರ ಮೃತ್ಯುಸಂಖ್ಯೆಯು—ವಿಶೇಷವಾಗಿ ಬಾಲಮೃತ್ಯುಸಂಖ್ಯೆಯು ತೀರಾ ಕಡಿಮೆಯಾಗತೊಡಗಿದೆ. ಬಾಲ

CC-0. Jangamwadi Math Collection. Digitized by eGangotri

ವೃತ್ತಿಶ್ರೃಯಗಳ ಪ್ರಮಾಣವು ಮುಂಚೆ ೧೦೦೦ಂಕ್ಕೆ ೨೧೩ರಷ್ಟಿದ್ದಿತ್ತು; ಅದೀಗ ೧೪೬ಕ್ಕಿಳಿದಿದೆ. ಈ ರೀತಿ ಯಹೂದಿಗಳ ಸಂಪತ್ತಿನಿಂದಲೂ ಜ್ಞಾನದಿಂದಲೂ ಪ್ಯಾಲೆಸ್ಟಾಯಿನಿನ ಅಭಿವೃದ್ಧಿಯಾಗುತ್ತಲಿದೆ. ಹೀಗಿದ್ದರೂ ಅರಬರಿಗೆ ಈ ಪ್ರಗತಿಯು ಅಸಾಯಕರವೂ ತ್ಯಾಜ್ಯವೂ ತೋರಹತ್ತಿದೆ. ತಮ್ಮ ಸ್ವಾತಂತ್ರ್ಯವು ಕಳೆದುಹೋಗಿ ತಾವು ಗುಲಾಮರಾಗುತ್ತಿಲ್ಲೇನಲ್ಲಾ — ಎಂಬ ಭೀತಿಯಿಂದ ಅವರು ಕಕ್ಕಾವಿಕ್ಕಿಯಾಗಿದ್ದಾರೆ. ಬ್ರಿಟಿಷರು ತಮ್ಮ ಪ್ರಭುತ್ವವು ಚಿರಸ್ಥಾಯಿಯಾಗಬೇಕೆಂದೇ ಈ ಶ್ರೀಮಂತ ಜನರನ್ನು ತಮ್ಮಲ್ಲಿ ತಂದು ಹೊಗಿಸಿದ್ದಾರೆ-ಎಂಬೀ ದುಷ್ಟ ರಾಜಕೀಯ ಉದ್ದೇಶದ ಅಪಾದನೆಯನ್ನು ಅವರು ಬ್ರಿಟಿಷ್ ರಾಜಕಾರ್ಯಧುರಂಧರರ ಮೇಲೆ ಮಾಡುತ್ತಿದ್ದಾರೆ; ಮತ್ತು ತಮ್ಮ ಪಾಲಕರ ವಿರುದ್ಧ ಬಂಡಾಯ ಹೂಡುವ ಜತೆಗೆ ಈ ಯಹೂದಿಗಳ ಮೇಲೆಯೂ ಏರಿ ಹೋಗುತ್ತಿದ್ದಾರೆ. ಬ್ರಿಟಿಷ್ ಪಾಲಕ ಸರಕಾರವು ಮಾತ್ರ, ಅರಬರು ತನ್ನ ರಾಜಕೀಯ ಸತ್ತೆಗೆ ಅಥವಾ ಯಹೂದಿಗಳ ಸಾಹುಕಾರೀ ಪಾಶಕ್ಕೆ ಪ್ರತಿಕಾರ ಮಾಡುತ್ತಿದ್ದಾರೆಂದು ತಿಳಿದುಕೊಳ್ಳದೆ, ಇದೊಂದು ಪುರಾತನ ಧಾರ್ಮಿಕ ಸಂಗ್ರಾಮವಾಗಿದೆಯೆಂದೇ ಜಗತ್ತಿಗೆ ತೋರಿಸಿಕೊಡುತ್ತಿದೆ. ಆರ್ಥಿಕ—ರಾಜಕೀಯ ತರಹದ ಕದನವಿದಾಗಿರದೆ ಯಹೂದೀ-ಅರಬ್ಬೀ ಎಂಬ ಪರಸ್ಪರ ವಿಭಿನ್ನ ಧರ್ಮ — ಸಂಸ್ಕೃತಿಗಳ ಅನಾದ್ಯನಂತ ಘರ್ಷಣೆಯಾಗಿದೆಯೆಂದು ಹೇಳುತ್ತಿದೆ. ಈ ಬಡಿದಾಟವು ಬಗೆಹರಿಯಬೇಕಾದರೆ ಪ್ಯಾಲೆಸ್ಟಾಯಿನಿನ ಮೂರು ಹೋಳಗಳನ್ನು ಮಾಡಬೇಕೆಂದು ಲಾರ್ಡ ಪೀಲ ಅವರ ಅಧ್ಯಕ್ಷತೆಯಲ್ಲಿ ನೇಮಿಸಲಾದ ಸಮಿತಿಯು ಅಭಿಪ್ರಾಯಪಟ್ಟಿದೆ. ಅವುಗಳಲ್ಲಿ ಒಂದನ್ನು ಯಹೂದಿಗಳಿಗೂ ಇನ್ನೊಂದನ್ನು ಅರಬರಿಗೂ ಮೂರನೆಯದನ್ನು ಇಂಗ್ಲಿಷರಿಗೂ ಒಪ್ಪಿಸಿಬಿಡಬೇಕೆಂದು ಪೀಲಕಮಿಶನ್ನು ಸೂಚಿಸುತ್ತಿದೆ. ಅವುಗಳ ವಿವರಗಳನ್ನು ಸಾರಾಂಶವಾಗಿ ಇಂತು ಹೇಳಬಹುದು:—




ಜಾನ್ ಬುಲ್:— ತಮ್ಮಗಳಿರಾ, ಈ ಒಂಟೆಯ ಬೆನ್ನಿನ ಮೇಲೆ ಅರಬರು ಕೂಡಲಿ, ಹೊಟ್ಟೆಯ ಮೇಲೆ ಜ್ಯೂಗಳು ಕೂಡಲಿ, ನಾವು ತಲೆಯ ಮೇಲೆ ಕೂಡುವೆವು. ಬಡಿದಾಡಬೇಡಿರಿ, ಸುಖಸಮಾಧಾನದಿಂದ ನಡೆಯಿರಿ !

[ ಬೆನ್ಸೆಲ್, ಬರ್ಲಿನ್

CC-0. Jangamwadi Math Collection. Digitized by eGangotri

(೧) ಅರಬ್ಬೀ - ಯಹೂದೀ ಧರ್ಮಾನುಯಾಯಿಗಳ ಎಂದೂ ಬಗೆಹರಿಯದ ಜಗಳದ ಮೂಲಕ, ಪ್ಯಾಲೆಸ್ಟಾಯಿನಿನ ಪಾಲುಗಾರಿಕೆಯ ಹೊರತು ಶಾಂತತಾರಕ್ಷಣೆಗೆ ಇನ್ನಾವ ದಾರಿಯೂ ಕಾಣುವುದಿಲ್ಲ.

(೨) ಇಂದು ಬ್ರಿಟಿಷರ ಪಾಲಕತ್ವದಲ್ಲಿರುವ ಪ್ಯಾಲೆಸ್ಟಾಯಿನಿನ ಮೂರು ತುಂಡುಗಳನ್ನು ಮಾಡಿ, ಯಹೂದಿಗಳ, ಅರಬರ ಮತ್ತು ಬ್ರಿಟಿಷರ ಕೈಯಲ್ಲಿ ಒಂದೊಂದನ್ನು ಕೊಡತಕ್ಕದ್ದು. ಯಹೂದಿಗಳ ರಾಜ್ಯದಲ್ಲಿ ಸಮುದ್ರ ತೀರದ ಮತ್ತು ಬೈಲುಸೀಮೆಯ ಪ್ರದೇಶವನ್ನು ಸಮಾವೇಶಗೊಳಿಸತಕ್ಕದ್ದು; ಮತ್ತು ಅರಬರ ರಾಜ್ಯದಲ್ಲಿ ಗುಡ್ಡಗಾಡು ಪ್ರದೇಶ, ಜಾರ್ಡನ ನದಿಯ ಕೊಳ್ಳ ಮತ್ತು ಫಲವತ್ತಾದ ಬೈಲುಸೀಮೆಯಲ್ಲಿಯ ಕೆಲವೊಂದು ಭಾಗ—ಇವುಗಳನ್ನು ಸೇರಿಸತಕ್ಕದ್ದು. ಯಹೂದೀ, ಕ್ರಿಸ್ತೀ, ಮುಸಲ್ಮಾನ ಜನರೆಲ್ಲರಿಗೂ ಪವಿತ್ರವೆನಿಸುವ ಧರ್ಮಕ್ಷೇತ್ರಗಳು, ಅಕಾಬಾ ಆಖಾತದ ಸುತ್ತುಮುತ್ತಲಿನ ಪ್ರದೇಶ, ಅದೇ ರೀತಿ ಹೈಫಾ, ಟ್ರಾಯಬೇರಿಯಸ್, ಸಫದ, ಏಕರ ಮುಂತಾದ ಬಂದರಗಳು ಬ್ರಿಟಿಷರ ಪಾಲಕತ್ವಕ್ಕೆ ಒಳಪಡಬೇಕು. ಇದರಿಂದ ಬ್ರಿಟಿಷರು ಕೆಂಪುಸಮುದ್ರದ ಮೇಲೆ ಕಣ್ಣಿಡಬಲ್ಲರಲ್ಲದೆ ಪೂರ್ವದಿಕ್ಕಿನ ತಮ್ಮ ಸಾಮ್ರಾಜ್ಯದ ಜತೆಗೆ ಯಹೂದೀ, ಕ್ರಿಸ್ತೀ, ಮುಸಲ್ಮಾನರೆಲ್ಲರಿಗೂ ಪವಿತ್ರವಾಗ ಮಂದಿರಗಳ ರಕ್ಷಣೆಯನ್ನು ಮಾಡಬಲ್ಲರು; ಮತ್ತು [illegible]ಧರ್ಮೀಯ ಜನತೆಗಳು ಸ್ನೇಹದಿಂದಲೂ ಶಾಂತಿ[illegible]ಲೂ ವ್ಯವಹರಿಸುವಂತೆ ಶಿಕ್ಷಣವನ್ನೂ ಕೊಡ[illegible]. ಈ ಶಿಕ್ಷಣವು ಪೂರ್ತಿಯಾಗಲು ಕಾಲಾವಧಿಯನ್ನು ನಿರ್ಣಯಿಸುವುದು ಅಸಾಧ್ಯವಾದ್ದರಿಂದ, ಬ್ರಿಟಿಷರು ತಮ್ಮ ಭಾಗಕ್ಕೆ ಬಂದ ಸೀಮೆಯ ಮೇಲೆ ನಡೆಯಿಸಬೇಕಾದ ಪಾಲಕತ್ವಕ್ಕೂ ಕಾಲಮರ್ಯಾದೆಯನ್ನು ಹಾಕಲಾಗದು. ಈ ಪ್ರದೇಶಗಳಲ್ಲಿಯ ಭಿನ್ನಧರ್ಮೀಯರು ಒಕ್ಕಟ್ಟಿನಿಂದ ನಡೆ[illegible]ಬೇಕಾದ ದಿನವೆ ಇಂಗ್ಲಿಷರು ಕೃತಕೃತ್ಯರಾಗಿ ಸ್ವ[illegible]ಣವನ್ನು ಸ್ವೇಚ್ಛೆಯಿಂದ ಕೈಕೊಳ್ಳುವರು.

([illegible]) ಅರಬರ ಪಾಲಿಗೆ ಯಹೂದಿ ರಾಜ್ಯದೊಳಗಿಂದ [illegible]ಫಾ ಬಂದರಕ್ಕೆ ಹೋಗಲು, ಹಾಗೇ ಯಹೂದಿಗಳ [illegible]ಲಿಗೆ ಅರಬರ ರಾಜ್ಯದೊಳಗಿಂದ ಇಜಿಪ್ತ, ಇಲ್ಲವೆ [illegible]ಕಾಬಾ ಆಖಾತಕ್ಕೆ ಹೋಗಲು ಪುಕ್ಕಟೆ ಅಪ್ಪಣೆ ದೊರೆಯಬೇಕು. ಇದೇ ಬಗೆಯ ಸವಲತ್ತು ಬ್ರಿಟಿಷ್ ಪಾಲಕತ್ವದಲ್ಲಿಯ ಪ್ರದೇಶ, ಹೈಫಾ ಬಂದರ, ಇಜಿಪ್ತದ ಸೀಮೆ ಮತ್ತು ಆಕಾಬಾ ಆಖಾತಗಳಿಗೆ ಅನ್ವಯಿಸಬೇಕು.

(೪) ಈ ವರೆಗೆ ಪ್ಯಾಲೆಸ್ಟಾಯಿನ್ ಸರಕಾರಕ್ಕೆ ಯಹೂದಿ ಜನಗಳಿಂದ ಬರುವ ಕರಕಂದಾಯಗಳ ಉತ್ಪನ್ನವೇ ಮಹತ್ವದ ಭಾಗವಾಗಿತ್ತು; ಈಗ ಯಹೂದಿ ಮತ್ತು ಅರಬ್ಬೀ ಎಂದು ಎರಡು ಸ್ವತಂತ್ರ ಸಂಸ್ಥಾನಗಳಾಗುವುದರಿಂದ ಮತ್ತು ಅರಬ ಸರಕಾರಕ್ಕೆ ದರಿದ್ರ ದೇಶದ ಹಾಗೂ ದರಿದ್ರ ಜನತೆಯ ಮೇಲಿನ ಆಡಳಿತವನ್ನು ನಡೆಯಿಸುವುದು ಬಿಗಿಹೋಗಬಹುದಾದ್ದರಿಂದ, ಯಹೂದಿ ಸಂಸ್ಥಾನವು ಅರಬ ರಾಜ್ಯಕ್ಕೆ ಪ್ರತಿವರ್ಷ ಕಾಣಿಕೆಯನ್ನು ಸಲ್ಲಿಸಬೇಕು. ಇದರ ಪ್ರಮಾಣವೇನು ಮತ್ತು ಈಗಿನ ಪ್ಯಾಲೆಸ್ಟಾಯಿನ್ ಸರಕಾರದ ಸಾಲದಲ್ಲಿ ಎಷ್ಟರ ಮಟ್ಟಿಗಿನ ಭಾರವನ್ನು ಅರಬ ರಾಜ್ಯವು ಹೊರಬೇಕು ಎಂಬುದನ್ನು ನಿರ್ಣಯಿಸಲು ತಜ್ಞರ ಸ್ವತಂತ್ರ ಸಮಿತಿಯನ್ನ ನಿಯಮಿಸಬೇಕು.

(೫) ಅರಬರ ಭಾವೀ ರಾಜ್ಯದಲ್ಲಿಯ ಯಹೂದಿಗಳು ಮತ್ತು ಯಹೂದಿಗಳ ಭಾವೀ ರಾಜ್ಯದಲ್ಲಿಯ ಅರಬರು ಬೇಕಾದರೆ ದೇಶಾಂತರ ಮಾಡಿ ತಂತಮ್ಮ ಧರ್ಮದ ರಾಜ್ಯದಲ್ಲಿ ಹೋಗಿ ನೆಲಸಬಹುದು. ಹಾಗೆ ಮಾಡಲು ಅವರಿಗೆ ಸಹಾಯ ಮಾಡಬೇಕಲ್ಲದೆ ವಿರೋಧ ಮಾಡಕೂಡದು. ಈ ಯೋಜನೆಯ ಮೇರೆಗೆ ದೇಶಾಂತರ ಮಾಡಬಹುದಾದ ಅರಬರ ಸಂಖ್ಯೆಯು ಸು. ೨| ಲಕ್ಷವಾಗುವುದು; ಆದರೆ ಯಹೂದಿಗಳಲ್ಲಿ ೧೨|| ಸಾವಿರ ಜನರು ಮಾತ್ರ ನಾಡು ಬಿಟ್ಟು ತೆರಳಬೇಕಾಗುವುದು. ಯಹೂದಿಗಳು ಸಂಚಾರವೃತ್ತಿಯವರೂ ವ್ಯಾಪಾರ ವೃತ್ತಿಯವರೂ ಆದುದರಿಂದ ಅವರಿಗೆ ಅದು ಬಿಗಿಯಾಗದು; ಆದರೆ ಅರಬರು ಶಾಶ್ವತ ನಿವಾಸಿಗಳೂ ಹೊಲಮನೆಯುಳ್ಳವರೂ ಆದುದರಿಂದ ಅವರಿಗೆ ದೇಶಾಂತರವು ದೇಹಾಂತಶಿಕ್ಷೆಯಷ್ಟು ಉಗ್ರವಾಗು[illegible]ತ್ತದೆ. ಆದರೆ ಹೊಸ ಏರ್ಪಾಡಿನಂತೆ ಅವರು ಅದ[illegible] 'ಒತ್ತಾಯದ ಸ್ವೇಚ್ಛೆ'ಯಿಂದ ಕೈಕೊಳ್ಳಬೇಕಾಗು[illegible].

(೬) ಯಹೂದಿ, ಅರಬ್ಬೀ ಮತ್ತು ಬ್ರಿಟಿಷ್ ಸಂಸ್ಥಾನಗಳಲ್ಲಿ ವ್ಯಾಪಾರ ವ್ಯವಹಾರಗಳು ಅಪ್ರತಿಹತವಾಗಿ ಸಾಗಬೇಕೆಂದು ಎಲ್ಲಾ ಕಡೆ ಸುಂಕದ ಸಮಾನತೆಯನ್ನೂ ಐಕ್ಯವನ್ನೂ ಸ್ಥಾಪಿಸಲಾಗುವುದು.

ಪೀಲ ಕಮಿಶನಿನ ಮೇಲಣ ಸೂಚನೆಗಳನ್ನು ಪರಿಶೀಲಿಸಿದರೆ, ಅರಬ್ಬೀ-ಯಹೂದಿಗಳಿಬ್ಬರ ಮೇಲೂ ಅನ್ಯಾಯವಾಗಿದೆಯೆಂದೂ 'ಇಬ್ಬರ ನ್ಯಾಯದಲ್ಲಿ ಇನ್ನೊಬ್ಬನ ಆಯ' ವೆಂಬಂತೆ ಬ್ರಿಟಿಷರು ಮಾತ್ರ ಸ್ವಂತದ ಬೇಳೆಯನ್ನು ಚೆನ್ನಾಗಿಯೆ ಬೇಯಿಸಿಕೊಳ್ಳುವರೆಂದೂ ತೋರಿಬರುವುದು. ಪ್ಯಾಲೆಸ್ಟಾಯಿನಿನಲ್ಲಿ ತಮಗೆ ಹಕ್ಕಿನ ಮನೆ ಸಿಗಬೇಕೆಂದು

CC-0. Jangamwadi Math Collection. Digitized by eGangotri

ಸ್ಯಗಳು ಬೇಡಿದಾಗ ಪ್ಯಾಲೆಸ್ಟಾಯಿನಿನ ಮೂರು ಹೋಳುಗಳು ಮಾಡಲ್ಪಟ್ಟು, ಅದರಲ್ಲೊಂದು ನಿರವಧಿಯಾಗಿ ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿಸಲ್ಪಡುವುದೆಂದು ಅವರೆಂದೂ ಭಾವಿಸಿರಲಿಲ್ಲ. ಸ್ವಯಂನಿರ್ಣಯ ತತ್ವಕ್ಕಾಗಿ ಹೂಡಲಾದ ಯುದ್ಧದಲ್ಲಿ ಗೆಲವು ಸಿಕ್ಕ ಮೇಲೆ ತಮ್ಮ ರಾಜಕೀಯ-ಆರ್ಥಿಕ ಸ್ವಾತಂತ್ರ್ಯವು ನಷ್ಟವಾದೀತು ಮತ್ತು ಅದನ್ನು ಮರಳಿ ಪಡೆಯುವ ಪ್ರಯತ್ನವನ್ನು ಭೇದನೀತಿಯಿಂದ—ದೇಶಕೋಶಗಳನ್ನು ಮೂರಾಬಟ್ಟೆಮಾಡಿ—ಹಣಿದು ಹಾಕಲಾದೀತು ಎಂದು ಅರಬರಾದರೂ ಭಾವಿಸಿರಲಿಲ್ಲ. ಅದೇ ಮೇರೆಗೆ ಜ್ಯೂ-ಮುಸಲ್ಮಾನರ ಜಗಳಕ್ಕಾಗಿ ಅವರಿಬ್ಬರ ಪವಿತ್ರ ಕ್ಷೇತ್ರಗಳನ್ನು ಹಾಗೂ ಧರ್ಮಮಂದಿರಗಳನ್ನು ಕ್ರಿಸ್ತೀ ಸಾಮ್ರಾಜ್ಯವು ತನ್ನ ವಶದಲ್ಲಿಟ್ಟುಕೊಳ್ಳುವ ಯೋಜನೆಯು ಇಬ್ಬರಲ್ಲಿ ಯಾರೊಬ್ಬರಿಗೂ ಸಮ್ಮತವೆನಿಸಲಾರದು. ಫಲವತ್ತಾದ ಬೈಲುಸೀಮೆಯ ಭಾಗವೆಲ್ಲ ಯಹೂದಿಗಳಿಗೆ, ಗುಡ್ಡಗಾಡು ನಿಷ್ಫಲ ಪ್ರದೇಶವೆಲ್ಲ ಅರಬರಿಗೆ; ಯಹೂದಿ ರಾಜ್ಯದಿಂದ ಹೊರಹಾಕುವ ೨-೨॥ ಲಕ್ಷ ಮುಸಲ್ಮಾನರನ್ನು ಅವರ ಜಾತಿಬಾಂಧವರು ತಮ್ಮ ಬೆಳೆಬಾರದ ಮರುಭೂಮಿಯಲ್ಲಿ ಬರಗೊಟ್ಟು ಅವರ ಜವಾಬ್ದಾರಿ ಹೊರಬೇಕು—ಇದು ಮೇಗರೆಯ ನೋಟಕ್ಕೂ ಅನ್ಯಾಯವಾಗಿ ತೋರುವುದು; ಎಂತಲೆ ಅರಬರು ಇದನ್ನು ಜೀವದ ಹಂಗುದೊರೆದು ವಿರೋಧಿಸುತ್ತಿರುವರು.

ಯಹೂದಿಗಳಲ್ಲಿ ದೂರದರ್ಶಿಗಳಾಗಿದ್ದವರು ಫೀಲಸಮಿತಿಯ ಯೋಜನೆಯನ್ನು ಸ್ವಾಗತಿಸುತ್ತಿಲ್ಲ. ಸುತ್ತುಮುತ್ತಲು ಹಬ್ಬಿದ ಮುಸಲ್ಮಾನಿ ರಾಜ್ಯಗಳ ವ್ಯೂಹದಲ್ಲಿ ತಮ್ಮ ಪುಟ್ಟ ರಾಷ್ಟ್ರವು ರೂಪಗೊಂಡರೂ, ಅದು ಎಂದಿಗೂ ದುರ್ಬಲ ಮತ್ತು ಪರೋಪಜೀವಿಯಾಗಿಯೇ ಇರಬೇಕಾದುದು ಎಂದು ಅವರು ಅರಿತಿರುವರು. ಹೊಸದಾಗಿ ನಿರ್ಮಿಸಲಾಗುವ ಅರಬ್ಬೀ ಸಂಸ್ಥಾನಕ್ಕೆ ಟ್ರಾನ್ಸಜಾರ್ಡನ ದೇಶವನ್ನೂ ಜೋಡಿಸಿ, ತಮ್ಮ ಹಸ್ತಕನಾಗಿರುವ ಅಲ್ಲಿಯ ಅರಸನನ್ನೆ ಹೊಸ ಅರಬ್ಬೀ ಸಂಸ್ಥಾನಕ್ಕೆ ಅಧಿಪತಿಯನ್ನಾಗಿ

**ದಬ್ಬಾಳಿಕೆ....** ಬ್ರಿಟಿಷರ ಮಶಿನ್ಗನ್ನುಗಳು 'ದೊಂಬೆಗಾರರ ಮೇಲೆ, ಬೆಂಕಿಕಾರಲು ಗುರಿಯಿಟ್ಟು ಸಿದ್ಧವಾಗಿವೆ.



CC-0. Jangamwadi Math Collection. Digitized by eGangotri

ಮಾಡಬೇಕೆಂದು ಬ್ರಿಟಿಷರು ಹೊಂಚು ಹಾಕಿದ್ದಾರೆ. ಇದರಿಂದ, ತಲೆಯೆತ್ತುವ ಅರಬ್ಬೀ— ಯಹೂದೀ ಸಂಸ್ಥಾನಗಳೆರಡೂ ಇಂಗ್ಲಿಷರ ಸಾಮಂತ ಸಂಸ್ಥಾನಗಳೇ ಆಗಬೇಕಾಗುವುದು. ಮೇಲಾಗಿ ಯಹೂದಿ ರಾಜ್ಯದ ಔದ್ಯೋಗಿಕ ಅಭಿವೃದ್ಧಿಯ ಕಾರ್ಯಕ್ರಮಕ್ಕೆ ಪ್ಯಾಲೆಸ್ಟಾಯಿನಿನ ಇಬ್ಭಾಗ ಮಾಡುವುದೊಂದು ದೊಡ್ಡ ಅಡಚಣೆಯೆ ಆಗಿದೆ. ಸುತ್ತಲಿನ ಮಹಮ್ಮದೀಯ ರಾಜ್ಯಗಳು ಬಹಿಷ್ಕಾರ ಹಾಕಿದರೆ ಯಹೂದಿ ರಾಜ್ಯಕ್ಕೆ ತನ್ನ ಮಾಲಿಗೆ ಪೇಟೆ ದೊರೆಯುವುದೂ ಅಶಕ್ಯವಾಗುವುದು. ಅಂತೂ, ರಾಜಕೀಯ, ಔದ್ಯೋಗಿಕ, ಆರ್ಥಿಕ ಕಾರಣಗಳಲ್ಲಿ ಯಾವುದೊಂದನ್ನು ತೆಗೆದುಕೊಂಡರೂ ಬ್ರಿಟಿಷರ ಪಾಲನಾಧಿಕಾರವು ನಷ್ಟವಾಗಬೇಕೆಂದೆ ಯಾರೂ ಹೇಳಬಹುದಾಗಿದೆ. ಒಂದು ದೇಶದಲ್ಲಿ ಎರಡು ಧರ್ಮಗಳವರು ಬಡಿದಾಡುವರೆಂದು ಅದನ್ನು ಇಬ್ಭಾಗಿಸಿ ಇಬ್ಬರಲ್ಲಿ ಹಂಚಿಕೊಟ್ಟು ಮೂರನೆಯ ಭಾಗವನ್ನು ಪರಕೀಯರು ತಮ್ಮ ಕೈಯಲ್ಲಿಟ್ಟುಕೊಳ್ಳಬೇಕೆಂಬ ವಿಚಾರಸರಣಿಯು ಬ್ರಿಟಿಷರಿಗೆ ಒಪ್ಪುವಂತಹದೆ ಆಗಿದೆ. ಒಂದು ರಾಷ್ಟ್ರದಲ್ಲಿ ಒಂದೇ ಧರ್ಮದವರಿರಬೇಕು ಎಂಬುದು ಮಧ್ಯಯುಗೀನ ವಿಚಾರ ಪದ್ಧತಿಯು; ಅದು ಸಾಮ್ರಾಜ್ಯವಾದಿಗಳಿಗೆ ಪಥ್ಯಕರವು. ಪ್ಯಾಲೆಸ್ಟಾಯಿನಿನ ಜ್ಯೂ—ಅರಬರಿಬ್ಬರ ಹಿತದೃಷ್ಟಿಯಿಂದ ಹೇಳುವುದಾದರೆ, ಅಲ್ಲಿ ಇಬ್ಬರನ್ನೂ ಒಳಗೊಂಡ ಒಂದು ಅಖಂಡ ರಾಷ್ಟ್ರವನ್ನು ನಿರ್ಮಿಸಬೇಕು; ಶುದ್ಧ ಪ್ರಜಾಪ್ರಭುತ್ವವನ್ನು ಸ್ಥಾಪಿಸಬೇಕು; ಯಹೂದಿಗಳಿಗೆ ಅರಬ ನಾಗರಿಕರಿಗಿರದ ಹೆಚ್ಚಿನ ಸವಲತ್ತುಗಳನ್ನು ಕೊಡದೆ ಧರ್ಮನಿರಪೇಕ್ಷವಾದ ಸಮಾನ ನಾಗರಿಕತೆಯನ್ನು ನೆಲೆಗೊಳಿಸಬೇಕು; ಬ್ರಿಟಿಷರ ಮೇಲ್ವಿಚಾರಣೆಯನ್ನು ನಾಶಗೊಳಿಸಬೇಕು. ಇದು ಆಧುನಿಕ ರಾಷ್ಟ್ರೀಯ ವಿಚಾರಸರಣಿಯನ್ನು ಅನುಸರಿಸಿದೆ. ಇಂದಿಲ್ಲ ನಾಳೆ, ಎಲ್ಲರೂ ಈ ಹಾದಿಗೇ ಬರಬೇಕಾಗುವುದು.

'ಟೈಮ್ ಅಂಡ್ ಟೈಡ್' ಎಂಬ ಪತ್ರದ ಜೂನ್ ೧೭ರ ಸಂಚಿಕೆಯಲ್ಲಿ ಪ್ರೊ. ಬೆಂಟವಿಚ್ ಎಂಬ ಯಹೂದಿ ಪ್ರೊಫೆಸರರು 'ಪಾಲುಗಾರಿಕೆ'ಯ ವಿರುದ್ಧವಾಗಿ ತಮ್ಮ ಅಭಿಪ್ರಾಯವನ್ನು ಪ್ರದರ್ಶಿಸಿರುವರು. "ಇಬ್ಬರಿಗೂ ಪ್ರಿಯವಾಗಿರುವ ಜನ್ಮಭೂಮಿಯ ಉದ್ಧಾರಕ್ಕಾಗಿ ಮತ್ತು ಸಾಮಾನ್ಯ ಹಿತವೃದ್ಧಿಗಾಗಿ ಪ್ರಯತ್ನ ಮಾಡಲಿಕ್ಕೂ, ಸಾಮುದಾಯಿಕವಾಗಿ ಸ್ವಾತಂತ್ರ್ಯವನ್ನು ಉಪಭೋಗಿಸಲಿಕ್ಕೂ ಐಕ್ಯದಿಂದಿದ್ದು ಪ್ಯಾಲೆಸ್ಟಾಯಿನನ್ನು ಅಖಂಡವಾಗಿಡುವುದು ಸಾಧ್ಯವಿಲ್ಲವೇ?" ಎಂದು ಅವರು ಕೇಳಿದ್ದಾರೆ.

ಜೂಲೈ ೧೬ರ "ಜ್ಯೂಯಿಶ್ ಕ್ರಾನಿಕಲ್" ಪತ್ರವು ಹೀಗೆನ್ನುತ್ತಿದೆ: "ಜ್ಯೂ-ಅರಬರಿಬ್ಬರಲ್ಲಿಯೂ ಸೌಹಾರ್ದವನ್ನುಂಟುಮಾಡಿ ಇಬ್ಬರಿಗೂ ಸಾಮಾನ್ಯವೆನಿಸಬಹುದಾದ 'ರಾಷ್ಟ್ರೀಯ ನಿವಾಸ'ವನ್ನು ನಿರ್ಮಾಣಮಾಡುವುದು ಶಕ್ಯವೂ ಇಷ್ಟವೂ ಆಗಿದೆ." ತಾತ್ಪರ್ಯವೇನೆಂದರೆ, ತಮ್ಮ ಪಾಲಿಗೆ ಬರಬಹುದಾದುದನ್ನು ಕಾಪಾಡಿಕೊಳ್ಳಲು ಸುತ್ತಲಿನ ಅರಬ ರಾಜ್ಯಗಳೊಡನೆ ಕಾದುವದರಲ್ಲಿಯೇ ಶಕ್ತಿ-ವಿತ್ತಗಳನ್ನು ಹಾಳುಮಾಡಿಕೊಳ್ಳುತ್ತ, ಕೊನೆಯವರೆಗೂ ಬ್ರಿಟಿಷರ ಬಗಲುಗೂಸುಗಳಾಗಿಯೆ ಬಾಳುವುದಕ್ಕಿಂತ ಜ್ಯೂ-ಅರಬರ ಧರ್ಮನಿರಪೇಕ್ಷ ಸಮಾನ ನಾಗರಿಕತೆಯ ಸಂಘಟನೆಯನ್ನು ನಿರ್ಮಿಸಿ, ಬ್ರಿಟಿಷರ ಅತಿರಿಕ್ತ ಅಧಿಕಾರಗಳನ್ನು ನಷ್ಟಗೊಳಿಸಬೇಕೆಂಬ ವಿಚಾರೋದಯವು ಯಹೂದಿಗಳಾದ ಕೆಲ ಪ್ರಾಜ್ಞರಲ್ಲೂ ಆಗತೊಡಗಿದೆ. ಆದರಿದು ಬ್ರಿಟಿಷರಿಗೆ ಅಪಥ್ಯವಾದುದರಿಂದ ಅವರಿದನ್ನು ಒಪ್ಪುತ್ತಿಲ್ಲ.

ಇ. ಸ. ೧೯೩೩,೧೯೩೬ರಲ್ಲಿ ಅರಬರು ಮಾಡಿದ ದೊಂಬಿಗಳು ಮುಖ್ಯವಾಗಿ ಯಹೂದಿಗಳಿಗೆ ವಿರುದ್ಧವಾಗಿರದೆ, ಬ್ರಿಟಿಷ್ ಪ್ರಭುತ್ವಕ್ಕೆ ವಿರುದ್ಧವಾಗಿ ಹೂಡಿದ ಬಂಡಾಯವಾಗಿತ್ತೆಂಬ ಮಾತನ್ನು ಪೀಲ್ ಕಮಿಶನ್ನಿನ ವರದಿಯೆ ಒಪ್ಪುತ್ತಿದೆ.* ಅಂತೂ ಪ್ಯಾಲೆಸ್ಟಾಯಿನಿನಲ್ಲಿಯ ತಿಕ್ಕಾಟವು ಧರ್ಮಮೂಲಕವಾಗಿರದೆ, ಅರಬ ರಾಷ್ಟ್ರಭಕ್ತರು ಸಾಮ್ರಾಜ್ಯಸತ್ತೆಯ ವಿರುದ್ಧ ಹೂಡಿದ ಸ್ವಾತಂತ್ರ್ಯಯುದ್ಧವಾಗಿದೆ. ಪೀಲ ಕಮಿಶನ್ನಿನವರು ಸೂಚಿಸಿದ್ದ ಪ್ಯಾಲೆಸ್ಟಾಯಿನಿನ ಪಾಲುಗಾರಿಕೆಯಿಂದ ವ್ಯಕ್ತವಾಗುವ ಮಾತೆಂದರೆ, ದಂಡನೀತಿಗಿಂತ ಭೇದನೀತಿಯೆ ಸಾಮ್ರಾಜ್ಯವಿಸ್ತಾರಕ್ಕೆ ಹೆಚ್ಚು ಉಪಯುಕ್ತವಾದುದು; ಇದನ್ನು ಸಾಮ್ರಾಜ್ಯವಾದಿಗಳಿಗೆ ಕಲಿಸುವುದೆ ಬ್ರಿಟಿಷರ ಈಶನಿಯುಕ್ತ ಕಾರ್ಯವಾಗಿದೆ.

(ಲೋಕಶಕ್ತಿಯಿಂದ ಸಂಗ್ರಹಿಸಿದುದು)

---

* It has been pointed out that the outbreak of 1933 was not only or even mainly, an attack on the Jews, but an attack on the Palestine Government. In 1936 this was still clearer. Jewish lives were taken and Jewish property destroyed, but the outbreak was chiefly and directly aimed at the Government. The word 'disturbances' gives misleading impression of what happened. *It was an open rebellion of the Palestine Arabs against the British mandatory rule.*

CC-0. Jangamwadi Math Collection. Digitized by eGangotri

# ತೋಟದ ಭಾಮೆ

ಲೇಖಕರು: ಶ್ರೀ. ಭಾಸ್ಕರದೇವ, ಬಾಲಕನ್ನಡ ಸೇವಾಮಂಡಳಿ, ಮೈಸೂರು



'ಸೀಮೆಯೆಣ್ಣೆ—ಬಂಗಾರಬಳೆ' ಅಪಶಕುನಗಳು ಸುಳ್ಳಾಗಲಿಲ್ಲ.
ಭೂತದಂತೆ ಸುಳಿಯುವ ಭಾಮೆಯೆ ಕೊನೆಗೆ ಕೈಹಿಡಿದಳು.*



ನಾನು ಮಾಮೂಲಿನ ಮೇರೆಗೆ ತೋಟಕ್ಕೆ ಹೊರಡಲು ಉದ್ಯುಕ್ತನಾದೆ. ಬಾಗಿಲಿಗೆ ಬರುವ ಹೊತ್ತಿಗೆ ಎದುರುಕಡೆಯಿಂದ 'ಚೀಮೆಯೆಣೇ' ಎಂದೂ 'ಬೊಂಬಾಯಿ ಬಳೇ' ಎಂದೂ ಕೂಗಿ ಬರುತ್ತಿರುವ ಎರಡು ವ್ಯಕ್ತಿಗಳನ್ನು ಕಂಡೆನು. ಅಲ್ಲಿಯೇ ಬಿಸಿಲನ್ನು ಕಾಯಿಸಿಕೊಳ್ಳುತ್ತಾ ಕುಳಿತಿದ್ದ ನಮ್ಮ ಅಜ್ಜಿಯು 'ಇದೇನು ಹೊರಡುವ ವೇಳೆಗೆ ಎದುರಿಗೆ ಎಣ್ಣೆ ಬರುತ್ತೆ ಲಕ್ಷಣವಾಗಿ, ಮಗು ಸ್ವಲ್ಪ ಕೂತಿದ್ದು ಹೋಗು' ಎಂದರು. 'ಬಂದರೇನಮ್ಮ, ನಾನೇನು ನೆಂಟರ ಮನೆಗೆ ಹೋಗಬೇಕೆ? ಇಲ್ಲವೆ ನಾವೇನು ಹೆಂಗಸರೇ ಶಾಸ್ತ್ರ ನೋಡುವುದಕ್ಕೆ' ಎಂದು ಹೇಳಿ ಮೊದಲೇ ಯೋಚಿಸಿದ್ದ ಕುಪ್ಪಣ್ಣನ ತೋಟಕ್ಕೆ ಹೋದೆ.

ತೋಟಕ್ಕೆ ನಮ್ಮ ಮನೆಯಿಂದ ಒಂದು ಮೈಲಿಗೆ ಮೀರಿ ಹೋಗಬೇಕು. ದಾರಿಯುದ್ದಕ್ಕೂ ಎಣ್ಣೆ, ಬಳೆ, ಇವುಗಳ ಸಮ್ಮೇಳನವು ಏಕಕಾಲದಲ್ಲಿ ಸಂಭವಿಸಿದ ವಿಷಯವಾಗಿ ಬಹಳ ಯೋಚನೆಯು ಹುಟ್ಟಿ, ನಾನು ನನ್ನ ನಿರ್ದಿಷ್ಟ ಸ್ಥಾನವನ್ನು ಮುಟ್ಟುವ ವರೆಗೂ ಬಗೆಹರಿಯಲೇ ಇಲ್ಲ. ಇದರ ಪರಿಣಾಮವು ನನಗೆ ಆರು ತಿಂಗಳ ಮೇಲೆ ಸ್ಪಷ್ಟವಾಗಿ ತಿಳಿಯಿತು. ಕುಪ್ಪಣ್ಣನ ತೋಟದ ಎದುರಿಗಿರುವ ಇನ್ನೊಂದು ತೋಟದ ಒಂದು ಮೂಲೆಯಲ್ಲಿ ನನ್ನದೊಂದು ಸ್ಥಳ. ಅಲ್ಲಿ ಜನಸಂಚಾರ ಅಷ್ಟಿಲ್ಲ. ಯಾರೂ ಆಕಡೆ ಸುಳಿಯರು. ನನಗೆ ಯಾವ ವಿಧದಲ್ಲಿಯೂ ತೊಂದರೆಯಾಗಬಾರದೆಂಬ ದೃಷ್ಟಿಯಿಂದ ನಾನು ಆ ಸ್ಥಳವನ್ನು ನನಗಾಗಿ ಮಾಡಿಕೊಂಡಿದ್ದೆನು.

ನಾನು ಆ ಸ್ಥಳವನ್ನು ಸೇರುವ ವೇಳೆಗೆ ಭಾಸ್ಕರನು ಪಶ್ಚಿಮಾಂಬುಧಿಯಲ್ಲಿ ಮುಳುಗಿದನು. ತಿಂಗಳ ಬೆಳಕು ಆಗಲೇ ಹೆಚ್ಚುತ್ತಿತ್ತು. ಕೊಂಚ ಹೊತ್ತಿನ ನಂತರ ತಾರಾಗಣವು ಕೂಡ ಅಲ್ಲಲ್ಲಿ ಎದ್ದು ಕಾಣತೊಡಗಿತು. ಆದರೂ ಗಗನದ ಪಶ್ಚಿಮ ಭಾಗವು ಮಾತ್ರ ಇನ್ನೂ ಕೊಂಚಕೊಂಚ ರಕ್ತವರ್ಣವಾಗಿಯೇ ಇತ್ತು. ವಿದ್ಯುದ್ದೀಪಗಳೂ ಹೊತ್ತಿಕೊಂಡವು. ನನ್ನ ಸ್ಥಳದಿಂದ ಹಿಂತಿರುಗಿ ನೋಡಿದರೆ, ಭದ್ರಾವತಿಯಲ್ಲಿ ತಯಾರಾದ ರಂಭಾ-ಶುಕರ ವಿಗ್ರಹಗಳು ಕಾಣುತ್ತಿದ್ದವು. ಇವುಗಳು ಸ್ಥಾಪನೆಯಾಗಿ ಆಗಲೇ ಎರಡೂವರೆ ತಿಂಗಳು ಕಳೆದಿತ್ತು. ಆ ವಿಗ್ರಹಗಳನ್ನು ನೋಡಲು ಆ ಬಳಿಗೆ ಐದಾರು ಜನರು ಬಂದು ನಿಂತಿದ್ದಾರೆ. ನಾನು ಆ ಕಡೆ ನೋಡುವುದನ್ನು ಬಿಟ್ಟು ಏನನ್ನೋ ಆಲೋಚಿಸುತ್ತಾ ತಲೆತಗ್ಗಿಸಿ ಕುಳಿತೆನು. ನಾಲ್ಕು ನಿಮಿಷಗಳ ನಂತರ ತರುಣರ ಮನಸ್ಸನ್ನು ನಿರಾಯಾಸವಾಗಿ ಆಕರ್ಷಿಸಬಹುದಾದ ಒಂದು ವ್ಯಕ್ತಿಯು ಇಬ್ಬರು ಚಿಕ್ಕ ಹುಡುಗರೊಂದಿಗೆ ಮಿಂಚಿನಂತೆ ಸುಳಿದು ಮಾಯವಾಯಿತು.

ನನಗೆ ದಿಗ್ಭ್ರಮೆಯಾಯಿತು. ಮತ್ತೊಂದು ನಿಮಿಷಕ್ಕೆ ಅದೇ ವ್ಯಕ್ತಿ. ಹೀಗೆ ನಾಲ್ಕಾರು ಬಾರಿ ಸುಳಿದಂತಾಯಿತು. ನನಗೆ ಅಷ್ಟರಲ್ಲಿ ಇದು ನಿಜವಾಗಿಯೂ ಸ್ತ್ರೀವ್ಯಕ್ತಿಯೋ? ಅಥವಾ ಭೂತಚೇಷ್ಟೆಯೋ? ಎಂಬ ಸಂಶಯವು ತಲೆದೋರಿತು. ಅಲ್ಲದೆ ಇದಕ್ಕೆ ಮುಂಚೆ 'ಆ ತೋಟದಲ್ಲಿ ದೆವ್ವವಿದೆ' ಎಂದು ಜನರಾಡಿಕೊಳ್ಳುವುದನ್ನು ಕೇಳಿದ್ದೆ. ಅದಕ್ಕೆ ತಕ್ಕಂತೆ ಅಲ್ಲಿಗೆ ಯಾರೂ ಜನಗಳು ಬರುತ್ತಿದ್ದಿಲ್ಲ. ಇದೆಲ್ಲವನ್ನೂ ತಿಳಿದು 'ಇದು ಭೂತಚೇಷ್ಟೆಯೇ ಸರಿ' ಎಂದು ನಿರ್ಧರಮಾಡಿ ಕುಳಿತೆ. ಆ ವೇಳೆಗೆ ನಾನು ಕುಳಿತೆಡೆಯಲ್ಲಿಯೇ ಆ ವ್ಯಕ್ತಿಯು ಕೂಡಾ ಬಂದು ಕುಳಿತು ಸ್ತ್ರೀಸಹಜವಾದ ನಾಚಿಕೆಯಿಂದ ತಲೆತಗ್ಗಿಸಿತು. ಆದರೆ ನನಗೆ ಇನ್ನೂ ಮನಸ್ಸಿನಲ್ಲಿ ಬೇರೂರಿದ್ದ ಸಂದೇಹವು ತೊಡೆದಿರ

---

* ಇದರಲ್ಲಿ ಬರುವ ಸನ್ನಿವೇಶಗಳೂ, ವ್ಯಕ್ತಿಗಳೂ ಕಾಲ್ಪನಿಕವಾದುವು ಮತ್ತು ಯಾವ ವ್ಯಕ್ತಿಯನ್ನು ಉದ್ದೇಶಿಸಿ ಬರೆದಿಲ್ಲ.
—ಲೇಖಕ.

CC-0. Jangamwadi Math Collection. Digitized by eGangotri

ಲಿಲ್ಲವಾದ್ದರಿಂದ ಮೇಲಕ್ಕೆ ಏಳಲು ಕಾಲು ಬರದು. ವ್ಯಕ್ತಿ ಪಕ್ಕದಲ್ಲೇ ಇದ್ದುದರಿಂದ ಭೀತಿಯು ಹೆಚ್ಚಿ ಎದೆಯು ಗಟ್ಟಿಯಾಗಿ ಬಡಿದುಕೊಳ್ಳಲು ಆರಂಭವಾಯಿತು. ಗಟ್ಟಿಯಾಗಿ ಉಸಿರು ಬಿಡಲು ಕೂಡ ಸಾಧ್ಯವಾಗಲಿಲ್ಲ. ದೃಷ್ಟಿ ಚಲನೆಯು ಕೂಡ ನಿಂತು ರೆಪ್ಪೆ ಮುಚ್ಚಿತು. ಎಷ್ಟು ಹೊತ್ತು ಹೀಗೆ ಕುಳಿತಿರಲು ಸಾಧ್ಯ? ಐದು ನಿಮಿಷಗಳ ನಂತರ ಧೈರ್ಯಮಾಡಿ — ಮಾಡದಿದ್ದರೆ ವಿಧಿ ಇಲ್ಲ — ಕೊಂಚ ತಲೆ ಎತ್ತಿ ನೋಡಿದೆ. ನೋಡಿದೆ— ಮನುಷ್ಯ ವ್ಯಕ್ತಿಯೇ ಸರಿ ಎಂದು ನಿರ್ಧರಿಸಿದೆ. ಕೊಂಚ ಹೊತ್ತಿನ ನಂತರ ಸಂಭಾಷಣೆಗೆ ಆರಂಭವಾಯಿತು.

'ನಿಮ್ಮ ಮನೆ ಎಲ್ಲಿ?'

....................

'ನನ್ನನ್ನು ಮರೆತಿರುವಿರಾ?'

(ಎದೆನಡುಕ)

'ಮಾತನಾಡಲು ಆಗುವುದಿಲ್ಲವೆ?'

....................

'ಇಷ್ಟು ನಿರ್ದಯವಾದ ಮೇಲೆ ನಾನು ಇಲ್ಲಿಗೆ ಬಂದು ತಾನೆ ಫಲವೇನು?'

ನಾನು ಇದೇನಿರಬಹುದೆಂದು ಗಾಬರಿಯಿಂದ ಮನಸ್ಸಿನಲ್ಲೇ ಮೆಲಕು ಹಾಕಿ ಕಡೆಗೆ ಕುಗ್ಗಿದ ದನಿಯಿಂದ 'ನನಗೆ ಜ್ಞಾಪಕವಿಲ್ಲ, ನೀನು ಯಾರು?' ಎಂದೆ. 'ತುಮಕೂರಿಗೆ ಬಂದಿದ್ದಾಗ ನಿಮ್ಮ ಮ್ಯಾನೆಜರರೊಡನೆ ನಮ್ಮ ಮನೆಗೆ ಬಂದಿರಲಿಲ್ಲವೆ?' ಎಂದು ಪ್ರಶ್ನರೂಪವಾದ ಉತ್ತರ ಬಂತು. ನಾನು ಬಹಳ ಆಲೋಚಿಸಿದ ಮೇಲೆ 'ನಿಜ' ಎಂದು ತಿಳಿಯಿತು.

'ಸರಿ ನೀನು ಇಂದು ಇಲ್ಲಿ ಬಂದು ಗುರುತು ಹಿಡಿದು ಮಾತನಾಡಿಸಿದ್ದು ಸಂತೋಷ. ವಿಶೇಷವೇನು?' ಎಂದೆ 'ನಮ್ಮ ತಂದೆ ನಿಮ್ಮನ್ನು ನೋಡಬೇಕೆಂದಿದ್ದರು.. ನಾವು ಬಂದು ನಾಲ್ಕು ತಿಂಗಳಾಯಿತು. ನಿಮ್ಮ ಮನೆ ತಿಳಿಯದು. ನೀವೆಲ್ಲಿರುವುದು?' ಎಂದು ಕೇಳಿದಳು. ನನ್ನ ವಿಳಾಸವು ಅವಳಿಗೆ ತಿಳಿಯಿತು. ಹೊತ್ತಾಗಿದ್ದುದರಿಂದ ನಾನು ಮನೆಗೆ ಹೊರಟೆ. ಅವಳು ಬೇರೆಯ ರಸ್ತೆಯಲ್ಲಿ ಕೊಂಚದೂರ ನಡೆದು ಮರೆಯಾದಳು. ನಡೆದ ಸಂಗತಿಯನ್ನು ಮನೆಯಲ್ಲಿ ಬಾಯಿಬಿಡಲಿಲ್ಲ. ಏಕೆಂದರೆ ನನಗೆ 'ಇದು ನಿಜವೆ?' ಎಂದು ಇನ್ನೂ ಸಂಶಯ.

ಎರಡನೆಯ ದಿನ ಸಾಯಂಕಾಲ. ಅದೇ ಸ್ಥಳ, ಅದೇ ಸನ್ನಿವೇಶ. ಇದರ ಪರೀಕ್ಷಾರ್ಥವಾಗಿಯೇ ನಾನು ಅಲ್ಲಿ ಪುನಃ ಕುಳಿತು ಯೋಚಿಸುತ್ತಿದ್ದೆ. ದೀಪ ಹಚ್ಚುವ ವೇಳೆ ಸುಮಾರು ನಲವತ್ತು ವಯಸ್ಸಿನ ಪುರುಷನೂ ಹಿಂದಿನ ದಿನ ಪರಿಚಯವಾಗಿದ್ದ ಕನ್ಯೆಯೂ ಬಂದರು. ಆ ಮನುಷ್ಯ ಬರುತ್ತಲೇ 'ನಾನು ತಮ್ಮ ಮನೆಗೆ ಹೋಗಬೇಕೆಂದಿದ್ದೆ. ಆದರೆ ತಮ್ಮಲ್ಲಿ ಮೊದಲು ಕೆಲವು ಮಾತುಗಳನ್ನಾಡಿದನಂತರ ಮನೆಗೆ ಬರುವುದೆಂದು ಸುಮ್ಮನಾದೆ' ಎಂದರು. ನಾನು 'ಸಂತೋಷ. ವಿಷಯ ಏನು?' ಎಂದೆ. 'ತುಮಕೂರಿಗೆ ಬಂದಿದ್ದಾಗಲೇ ವಿಷಯ ಪ್ರಸ್ತಾಪಿಸಬೇಕೆಂದಿದ್ದೆ. ಆದರೆ ಅವಕಾಶವಾಗಲಿಲ್ಲ. ಚಿಂತೆಯಿಲ್ಲ. ಈ ನಮ್ಮ ಭಾಮೆಯನ್ನು ತಮಗೆ.... ಎಂದು ಅವರು ಹೇಳುವಷ್ಟರಲ್ಲಿಯೇ 'ಏನು? ವಿವಾಹದ ವಿಷಯವೇ? ಅದು ಮಾತ್ರ ಸಾಧ್ಯವಿಲ್ಲ. ಕ್ಷಮಿಸಿ. ಬೇರೆ ಏನಾದರೂ ವಿಷಯವಾದರೆ ಬಹಳ ಸಂತೋಷ' ಎಂದೆ. ಮುಂದೆ ಮಾತನಾಡಲು ತೋರದೆ ಅವರೂ ನಾನೂ ಕೊಂಚ ಕಾಲ ಮೌನವಾಗಿದ್ದೆವು. ಪುನಃ ಅವರು 'ಆದರಿಂದ ತಮಗೆ ಯಾವ ವಿಧವಾದ ತೊಂದರೆಯೂ ಆಗುವಂತಿಲ್ಲ-' ಎಂದರು. ನಾನು 'ನನ್ನ ಬ್ರಹ್ಮಚರ್ಯದಿಂದ ಜಗತ್ತಿನಲ್ಲಿ ಗಣ್ಯನಾಗಬೇಕೆಂದಿದ್ದೇನೆ' ಎಂದೆ. ಅದಕ್ಕವರು 'ಪ್ರೇಮವು ಆತ್ಮಸ್ವರೂಪ. ನಮಗೆ ಪ್ರೇಮದಲ್ಲಿ ವಿಶ್ವಾಸವಿದ್ದರೆ, ಆ ಪ್ರೇಮ ಶಕ್ತಿಯಿಂದ ಜಗತ್ತನ್ನು ಜಯಿಸಬಹುದು, ಮತ್ತು ಗಣ್ಯತೆಯನ್ನೂ ಪಡೆಯಬಹುದು' ಎಂದು ಇನ್ನೂ ಅನೇಕವಾಗಿ ಸುಮಾರು ಮುಕ್ಕಾಲು ಗಂಟೆಯ ತನಕ ವಾದಿಸಿ ಕಡೆಗೆ 'ಹುಡುಗಿಯನ್ನು ನೋಡು. ಕುರೂಪಿಯಲ್ಲ. ನಿನಗಿಂತಲೂ ಮೇಲಾಗಿದ್ದಾಳೆ' ಎಂದರು.... ನನಗೆ ಮನಸ್ಸಿನಲ್ಲಿ ನಿನ್ನೆಯ ದಿನದ ಚಿತ್ರವೆಲ್ಲಾ ಮನಸ್ಸಿಗೆ ಬಂದು—ರೂಪಿನ ವಿಷಯವಂತಿರಲಿ—ಸ್ವತಂತ್ರವಾಗಿ ಮುಂದೆ ನುಗ್ಗಿ ನರ್ತಿಸುವ ವಿಚಾರದಲ್ಲಿ 'ನನಗಿಂತ ಮೇಲೆ' ಎಂದೆನಿಸಿತು. ನಾನೂ ಕೂಡ ಮೊನ್ನೆ ತಾನೆ ಪರೀಕ್ಷೆಯ ಸಲುವಾಗಿ 'ರಾಮಕೃಷ್ಣ ಪರಮಹಂಸ'ರನ್ನು ಚೆನ್ನಾಗಿ ತಿರುವಿ ಹಾಕಿದುದರ ಫಲವಾಗಿ, ನನ್ನ ಕುಶಲತೆಯನ್ನೆಲ್ಲಾ ವೆಚ್ಚಮಾಡಿ ಕಡೆಗೆ ಅವರನ್ನು ಸೋಲಿಸಿದೆ. ಆದರೂ ಅವರು ಬಿಡದೆ ಇನ್ನೂ ಏನೇನನ್ನೋ ಹೇಳಿದರು. ಕಡೆಯ ಮಾತಿಗೆ ಉತ್ತರವಾಗಿ 'ಮನೆಯಲ್ಲಿ ದೊಡ್ಡವರಿದ್ದಾರೆ ವಿಚಾರಿಸಿ' ಎಂದು ಮನೆಗೆ ಹೊರಟು ಬಂದೆ.

ಮೂರನೆಯ ದಿನ ಮಧ್ಯಾಹ್ನ ಮೂರು ಗಂಟೆ ವೇಳೆಗೆ ಬಂದು ಮಾಮೂಲಿನಂತೆ ಜಾತಕ ನೋಡಿದ್ದಾಯಿತು. ನನ್ನ ಗ್ರಹಚಾರಕ್ಕೆ ಅದೂ ಕೂಡಿ ಬಂದಿತು. ಹಾಗೂ ನಾನು ಒಪ್ಪಲಿಲ್ಲ. ಕಡೆಗೆ ನನ್ನ ಅಜ್ಜಿಯವರು ತಮ್ಮ

CC-0. Jangamwadi Math Collection. Digitized by eGangotri

ಬ್ರಹ್ಮಾಸ್ತ್ರವನ್ನು ನನ್ನ ಮೇಲೆ ಬಿಟ್ಟೇಬಿಟ್ಟರು. 'ನಾನು ಇವತ್ತೋ ನಾಳೆಯೋ ಸಾಯುತ್ತೇನೆ. ನನ್ನ ಕಣ್ಣ ಮುಂದೆ ಲಗ್ನಮಾಡಿಕೋ. ನೋಡಿ ಪ್ರಾಣಬಿಡುತ್ತೇನೆ' ಎಂದರು. ನಾನು 'ಪ್ರಾಣಬಿಡುವುದಾದರೆ ಮಾಡಿಕೊಳ್ಳುವುದಿಲ್ಲ' ಎಂದೆ. ಅಂತೂ ಕಡೆಗೆ ಮದುವೆಯು ನಿಶ್ಚಯವಾಯಿತು.

ಮದುವೆಯಾಗಿ ಇಂದಿಗೆ ನಾಲ್ಕು ದಿನಗಳಾಯಿತು. ಅಂತು ಈ ಏರ್ಪಾಡು ಹೊಸದು. ಹೇಗೆಂದರೆ ಹುಡುಗನೇ ಹೋಗಿ ಹುಡುಗಿಯನ್ನು ನೋಡಿಬರುವುದು ಒಂದು. ಇಲ್ಲವೇ ವಧುವನ್ನು ಕರೆ[illegible] ವರನಿಗೆ ತೋರಿಸುವುದು ಇನ್ನೊಂದು. ಇದೆರಡೂ [illegible]ಟ್ಟು ಪಾರ್ಕು ಮುಂತಾದ ವಿಹಾರಸ್ಥಳಗಳಲ್ಲಿ ಉಪಾಯಾಂತರದಿಂದ ಒಂಟಿಯಾಗಿ ಸಿಕ್ಕಾಗ ಮಾತನಾಡಿಸುವುದು (ಹುಡುಗರಾಗಲೀ, ಹುಡುಗಿಯರಾಗಲೀ), ನಂತರ ಸಂಬಂಧ ಬೆಳೆಯಿಸುವುದು. ಅಂತು ಈಗ ನಾನು—ತೋಟದ—ಭಾಮೆಯನ್ನು ನನ್ನವಳನ್ನಾಗಿ ಮಾಡಿಕೊಂಡೆ ಎಂದು ಹೇಳುವ ಬದಲು ಭಾಮೆಯೇ ನನ್ನನ್ನು ಅವಳವನನ್ನಾಗಿ ಮಾಡಿಕೊಂಡಳೆಂದರೆ ಸರಿಯಾಗುವುದು. ಮೊದಲನೆಯ ದಿನ ನಾನು ತೋಟದಲ್ಲಿ ನೋಡಿದಾಗ ಅವಳ ತಂದೆಯೂ ದೂರದಲ್ಲಿದ್ದು ಅವಳನ್ನು ನನ್ನಲ್ಲಿ ಕಳುಹಿಸಿದ್ದರಂತೆ. ಸಮಾಚಾರ ಈಚೆಗೆ ತಿಳಿಯಿತು. ಭಾಮೆಯೂ ಗಟ್ಟಿ. ಅಜ್ಜಿಯ ಬಾಣ ಅದಕ್ಕಿಂತಲೂ ಗಟ್ಟಿ.

ಇನ್ನು ನನಗಾದ ಶಕುನದ ವಿಷಯವಾಗಿ ಒಂದು ಮಾತನ್ನು ಹೇಳಿ ನನ್ನ ಕತೆಯನ್ನು ಕಟ್ಟಿಡುತ್ತೇನೆ. ಅಂದು ನಾನು ಕೋಟಕ್ಕೆ ಹೊರಟಾಗ ನಡೆದ ಸಂಗತಿಯನ್ನು ನನ್ನ ಭಾಮೆಗೆ ತಿಳಿಸಿದೆ. ಅದಕ್ಕವಳು "ಆ ಸೀನು ಎಣ್ಣೆ ಗುರುತು—ನಿಮ್ಮ ಬ್ರಹ್ಮಚರ್ಯ ಸುಡುವುದಕ್ಕೆ ಬಂದದ್ದು! ನಂತರ ಬಳಿ ಬಂದುದಕ್ಕೆ ಗುರುತು.... ನಾನೇ ನಿಮ್ಮೆದುರಿಗೆ ಇರುವೆನಲ್ಲಾ!" ಎಂದಳು. ಇಬ್ಬರೂ ನಕ್ಕೆವು. ನಮ್ಮ ನಗು ದಿಗಂತವ್ಯಾಪ್ತಿಯಲ್ಲಿ ಲೀನವಾಯಿತು.

---


# ಗರತಿಯ ಹಾಡು

(ಹಳ್ಳಿಯ ಹೆಣ್ಣುಮಕ್ಕಳ ಭಾವಪೂರ್ಣ ತ್ರಿಪದಿಗಳು)

ಸಾದಾ: ೧೦ ಆಣೆ.] [ಕ್ಯಾಲಿಕೊ: ೧ ರೂ.

ಹೆಣ್ಣುಮಕ್ಕಳು ಬೀಸುವಾಗ ತೊಟ್ಟಿಲ ತೂಗುವಾಗ ಇ. ಪ್ರಸಂಗಗಳಲ್ಲಿ ಹಾಡುವ ತ್ರಿಪದಿಗಳ ಸಂಗ್ರಹ. ಮೊದಲನೆಯ ಆವೃತ್ತಿಯು ಮುಗಿದುಹೋದುದರಿಂದ ಎರಡನೆಯದನ್ನು ಅಚ್ಚುಹಾಕಿಸಿದೆ. ಉಪೋದ್ಘಾತರೂಪವಾಗಿ ಶ್ರೀಯುತರುಗಳಾದ ಬಿ. ಎಂ. ಶ್ರೀಕಂಠಯ್ಯ, ದ. ರಾ. ಬೇಂದ್ರೆ, ಮಾಸ್ತಿ ವೆಂಕಟೇಶಯ್ಯಂಗಾರ್ ಇವರ ಬರಹಗಳು. ಅವು ಜನಪದಸಾಹಿತ್ಯದ ಮರ್ಮವನ್ನು ತಿಳಿಸತಕ್ಕ ಶ್ರೇಷ್ಠತರಗತಿಯ ಪ್ರಬಂಧಗಳೆ ಆಗಿವೆ. ಅಪರಿಚಿತ ಮತ್ತು ಬಳಕೆಯ ಮಾತಿನ ಪದಪ್ರಯೋಗಗಳ ಸಾರ್ಥ ವಿವರಣೆ. ಆ್ಯಂಟಿಕ್ ಕಾಗದದ ಮೇಲೆ ಮುದ್ದಾದ ಮುದ್ರಣ. ಹೊದಿಕೆಯ ಮೇಲೆ ಭಾವಗರ್ಭಿತವಾದ ಸುಂದರ ಚಿತ್ರ.

ಜಯ ಕರ್ನಾಟಕ ಕಾರ್ಯಾಲಯ, ಧಾರವಾಡ



# ಸಂಯುಕ್ತ ಕರ್ನಾಟಕ

(ಹುಬ್ಬಳ್ಳಿ)

ಅಖಂಡ ಕರ್ನಾಟಕದಲ್ಲಿ ಪ್ರಸಾರವುಳ್ಳ ರಾಷ್ಟ್ರೀಯ ಪಕ್ಷದ

—: ದಿನಪತ್ರಿಕೆ: —

ರಾಷ್ಟ್ರೀಯ ವಾಙ್ಮಯಪ್ರಕಾಶನ ಟ್ರಸ್ಟಿನ ಪರವಾಗಿ, ಬೆಳಗಾವಿ—ಧಾರವಾಡ—ಹುಬ್ಬಳ್ಳಿಗಳಲ್ಲಿ ಪ್ರಕಾಶನಗೊಳ್ಳುವುದು.

ನಿರ್ಭಯ ರಾಷ್ಟ್ರೀಯ ವಿಚಾರಸರಣಿಯುಳ್ಳುದು.

ಕರ್ನಾಟಕದ ಹಕ್ಕು—ಹಂಗುಗಳನ್ನು ಅತಂದ್ರಿತವಾಗಿ ಕಾಯುವುದು.

ಜಾಹಿರಾತುದಾರರಿಗೆ ಉತ್ಕೃಷ್ಟ ಪ್ರಚಾರಸಾಧನ.

ವಿಶೇಷ ವಿವರಗಳಿಗೆ ಬರೆಯಿರಿ:—

ವ್ಯವಸ್ಥಾಪಕ,
ಸಂಯುಕ್ತ ಕರ್ನಾಟಕ,
ಹುಬ್ಬಳ್ಳಿ


CC-0. Jangamwadi Math Collection. Digitized by eGangotri

ಕರ್ನಾಟಕದ ಸಾಹಸ!                ಕರ್ನಾಟಕದ ಕೀರ್ತಿ !!

# "ಮೈಸೂರು ಇನ್‌ಷ್ಯೂರೆನ್ಸ್ ಕಂಪೆನಿ"

ಪೋಷಕರಿಗೂ ದೇಶಕ್ಕೂ ನಿರ್ವಂಚಿತವಾದ ಶ್ರದ್ಧಾಯುತ ಸೇವೆ ಸಲ್ಲಿಸಲು ಆದಳಿತನುಂಡಳಿಗಿರುವ ಉತ್ಸಾಹವೇ "ಮೈಸೂರು" ಅಭ್ಯುದಯದ ಜೀವಾಳ.




**ಮೂರನೇ ವರ್ಷದ ಡೈರೆಕ್ಟರುಗಳಿಂದ ಅಂಗೀಕೃತವಾದ ವರದಿಯ ಕೆಲವು ಮುಖ್ಯಾಂಶಗಳು.**

(೧) ಕಳೆದ ವರ್ಷಕ್ಕಿಂತ ಜೀವವಿಮಾ ನಿಧಿಯು ಶೇಕಡ ೨೨ ರಷ್ಟು ಏರಿದೆ. (೨) ಹೊಸ ಉದ್ಯಮವು ಶೇಕಡ ೬೫ ರಷ್ಟು, ಪೂರ್ಣವಾದ ಉದ್ಯಮವು ಶೇಕಡ ೫೩ ರಷ್ಟು ಏರಿದೆ. (೩) ಆಸ್ತಿ ರೂ. ೧ ಲಕ್ಷಕ್ಕೆ ಮೀರಿದೆ.

**ಕಾರ್ಯಕ್ಷೇತ್ರವು ವಿಸ್ತಾರಗೊಳ್ಳುತ್ತಿದೆ.**

"ಮೈಸೂರು" ಮಾದರಿಸಂಸ್ಥಾನದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡು, ಕರ್ನಾಟಕದ ಇತರ ಭಾಗಗಳಲ್ಲೂ ಬ್ರಿಟಿಷ್ ಇಂಡಿಯಾ, ಬರ್ಮಾ, ಸಿಲೋನ್‌ಗಳಲ್ಲೂ ವಿಜಯಿಯೆನಿಸಲು ಮುಂದರಿಯುಟ್ಟಿದೆ.

**ಬೇಕು!** ಕರ್ನಾಟಕದ ಎಲ್ಲ ಊರುಗಳಲ್ಲೂ, ಉಳಿದ ಬ್ರಿಟಿಷ್ ಇಂಡಿಯಾ, ಬರ್ಮಾ, ಸಿಲೋನ್‌ಗಳ ಎಲ್ಲ ಪ್ರಾಂತ್ಯಗಳಲ್ಲೂ ಕೇಂದ್ರಸ್ಥಳಗಳಲ್ಲೂ ಏಜಂಟರುಗಳೂ, ಸ್ಪೇಷಲ್ ಏಜಂಟರುಗಳೂ, ಚೀಫ್ ಏಜಂಟರುಗಳೂ, ಆರ್ಗನೈಜರುಗಳೂ ಬೇಕು. ಪ್ರತಿನಿಧಿಗಳಾಗಲಿಚ್ಛಿಸುವವರು ತಾವು ಕೊಡುವ ಉದ್ಯಮದ ಭರವಸೆಯನ್ನೂ ಕಾರ್ಯಕ್ಷೇತ್ರವನ್ನೂ ತಿಳಿಸುವುದು.

ಹೆಚ್ಚು ವಿವರಗಳಿಗೆ ಬರೆಯಿರಿ:—

ಜನರಲ್ ಮ್ಯಾನೇಜರ್,

**ಮೈಸೂರು ಇನ್‌ಷ್ಯೂರನ್ಸ ಕಂಪೆನಿ ಲಿಮಿಟೆಡ್,**

"ನಾಗೇಶ್ವರ ಬಿಲ್ಡಿಂಗ್ಸ್", ಶ್ರೀನರಸಿಂಹರಾಜಾ ರೋಡ್, **ಬೆಂಗಳೂರು ಸಿಟಿ.**

# ಡಾಕ್ಟರ್ ಮಹಿಷಿ ಇವರ ಅನುಭವಸಿದ್ಧ ಔಷಧಿಗಳು

## ಅಶೋಕಾ ಕಾರ್ಡಿಯಲ್

ಇದು ಸ್ತ್ರೀಯರ ಮುಟ್ಟಿನ ಹಾಗು ಗರ್ಭಾಶಯದ ಎಲ್ಲ ವಿಕಾರಗಳಿಗೆ ಸಿದ್ಧೌಷಧಿಯು.

## ವ್ಹಾಯಬರನಮ್ ಕಂಪೌಂಡ್

ಇದರ ಯೋಗದಿಂದ ಬಂಜೆತನದ ದೋಷಗಳು ನಾಶವಾಗಿ ಗರ್ಭಧಾರಣೆಯಾಗುವುದು. ಗರ್ಭವತಿಯರು ೩ ನೆಯ ತಿಂಗಳಿನಿಂದ ಇದನ್ನು ಸಾಧಿಸಿದಲ್ಲಿ ಗರ್ಭವು ಬಲಪಡುವುದು. ಅಲ್ಲದೆ ಹಲೆಯುಳಿಯುವ ಭೀತಿಯು ಇಲ್ಲದಂತಾಗುವುದು. ಸುಖಪ್ರಸೂತಿಯಾಗುವುದು.

ಸೂಚನೆ:— ಈ ಔಷಧಿಗಳ ಹಾಗು ಇನ್ನೂ ಕೆಲವು ಔಷಧಿಗಳ ಸಂಪೂರ್ಣ ಮಾಹಿತಿಗಾಗಿ, ಇಂದೇ ನಮ್ಮ ಕ್ಯಾಟಲಾಗಿಗೆ ಬರೆಯಿರಿ.

ಮ್ಯಾನೇಜರ್,

ಸ್ವಾಸ್ಥ್ಯ ನಿಲಯ ಫಾರ್ಮಸಿ, ಧಾರವಾಡ

CC-0. Jangamwadi Math Collection. Digitized by eGangotri

# ಜ್ಞಾನ-ವಿಜ್ಞಾನ



**ನವಜ್ಞಾನ, ನವವಿಚಾರ, ನವವಿಷಯ, ನವರಚನೆ, ನವಶೋಧನೆ, ನವಸಮಾಜ, ನವಪ್ರಪಂಚ**
**ಇವುಗಳ ಸುಲಭ—ಸೂಕ್ತ—ಸಾರರೂಪ ಪರಿಚಯ**



### ಬ್ರಿಟಿಷ್ ಅಸ್ಕಾಟ್

ಇಂಗ್ಲಂಡಿನಲ್ಲಿಯ ಕುದುರೆಜೂಜಾಟದ ಬೈಲಿನ ಈ ಹೆಸರು ಈಚೆಗೆ ಈ ಶರ್ಯತ್ತುಗಳಲ್ಲಿ ಅಭಿರುಚಿಯುಳ್ಳವರೆಲ್ಲರಿಗೂ ಪರಿಚಿತವಾಗಿದೆ. ೨೩೬ ವರ್ಷಗಳ ಹಿಂದೆ ಇ. ಸ. ೧೭೧೧ರಲ್ಲಿ ಅಸ್ಕಾಟದ ಶಂಕುಸ್ಥಾಪನೆಯಾಯಿತು. ಆ್ಯನ್ ಮಹಾರಾಣಿಯು 'ವಿಂಡ್ಸರ'ದಿಂದ 'ಅಸ್ಕಾಟ ಹೀಥ'ದ ವರೆಗೆ ಅಶ್ವಾರೂಢಳಾಗಿ ರಾಜವೈಭವದಲ್ಲಿ ಮೆರವಣಿಗೆಯಲ್ಲಿ ಹೋಗಿ, ಅದರ ಪ್ರಾರಂಭೋತ್ಸವವನ್ನು ಜರುಗಿಸಿದಳು. ಈ ಪ್ರಸಂಗದಲ್ಲಿ ಆ್ಯನ್ ರಾಣಿಯು ಸ್ವಂತವಾಗಿ ೫೦ ಗಿನಿ (ಸರಾಸರಿ ೭೦೦ ರೂ.) ಬೆಲೆಬಾಳುವ 'ರಾಜತಬಕ' (Royal Plate) ವನ್ನು ಕೊಟ್ಟಳು. ಅಂದಿನಿಂದಲೂ ಅಲ್ಲಿಯ- ರೇಸ ಕೋರ್ಸಿನ ಮೇಲೆ ಪ್ರತಿವರ್ಷ ಕುದುರೆಜೂಜಾಟಗಳು ನಡೆದು ಗೆದ್ದವರಿಗೆ ದೊಡ್ಡದೊಡ್ಡ ಬಹುಮಾನಗಳನ್ನು ಕೊಡಲಾಗುತ್ತಿದೆ.

ಇ. ಸ. ೧೭೧೧ರಿಂದ ಪ್ರತಿವರ್ಷವೂ ಬಹುಮಾನದ ಹಣವನ್ನು ಹೆಚ್ಚಿಸಲಾಯಿತು. ೧೮ನೆಯ ಶತಮಾನದಲ್ಲಿ ಒಟ್ಟು ಬಹುಮಾನದ ಹಣವು ೫೦೦ ಪೌಂಡು ಮಿಕ್ಕಿರಲಿಲ್ಲವೆಂದು ಹೇಳುತ್ತಾರೆ. ಇದೀಗ ಅದೇ ರಕಮು ಒಂದೊಂದು ಸಲ ೬೦,೦೦೦ ಪೌಂಡು ಮಿಕ್ಕಿರುತ್ತದೆ.

ವಿಂಡ್ಸರ ಬಳಿ ರಾಯಲ್ ಹೀಥ್ ಇದೆ; ಅದಕ್ಕೇ ಅಸ್ಕಾಟ್ ಹೀಥ ಎಂದೂ ಹೆಸರು. ಅರಸುಮನೆತನದವರು ಅಲ್ಲಿ ಹೋಗುವುದರಿಂದ ಅಲ್ಲಿ ಕಿಕ್ಕಿರಿಯುವ ಜನಸಮೂಹವು ಒಳ್ಳೆ ಡೌಲಿನ ವೇಷದಲ್ಲಿ ಹೋಗುತ್ತದೆ. ಈ ಪ್ರಸಂಗವು ವರ್ಷಕ್ಕೊಂದು ಸಲವೆ ಬರುವುದು. ಅದಕ್ಕಾಗಿ ಕಾದಿಟ್ಟ ದಿನಗಳಲ್ಲಿ ಹವಾಮಾನವೂ ಒಳ್ಳೆ ಅಹ್ಲಾದದಾಯಕವಾಗಿರುತ್ತದೆ. ಇಂಗ್ಲಂಡಿನಲ್ಲಿ ಜೂನ್-ಜೂಲೈ ತಿಂಗಳುಗಳು ಸುಖಕಾರಕವಾಗಿರುತ್ತವೆ; ಅಸ್ಕಾಟ್ ಜೂಜಾಟಗಳನ್ನೂ ಜೂನ್‌ದಲ್ಲಿಯೆ ನೆರವೇರಿಸುತ್ತಾರೆ. ಅವು ನಡೆದ ನಾಲ್ಕು ದಿನಗಳಲ್ಲಿ ಕುದುರೆಗಳ ಜೂಜಾಟದ ಜತೆಗೆ ನವನಾಗರಿಕತೆಯ ಥಳಕುಬೆಳಕುಗಳ ಮೇಲಾಟವೂ ನೋಡಲು ದೊರೆಯುತ್ತದೆ.

ಈ ನಾಲ್ಕು ದಿನಗಳು ಅಸ್ಕಾಟ ಹೀಥದಲ್ಲಿ ದೊಡ್ಡ ಜಾತ್ರೆಯ ದಿನಗಳು. ದಿನಾಲು ಏನಿಲ್ಲೆಂದರೂ ೭ ಜೂಜಾಟಗಳು ಜರುಗುತ್ತವೆ; ಮತ್ತು ಪ್ರತಿ ಪಂದ್ಯಾಟದಲ್ಲಿಯ ಗೆದ್ದ ಕುದುರೆಗೆ (ಎಂದರೆ ಆ ಕುದುರೆಯೊಡೆಯನಿಗೆ) ಕನಿಷ್ಠ ೧೦೦೦ ಪೌಂಡುಗಳ ಪಾರಿತೋಷಿಕವು ಸಿಗುತ್ತದೆ; ಮತ್ತು ೨ನೆಯ ೩ನೆಯ ಯಶಸ್ವಿ ಸ್ಪರ್ಧಾಳುಗಳಿಗೆ ಕನಿಷ್ಠ ೫೦೦ ಪೌಂಡಿನ ಒಂದೊಂದು ಬಹುಮಾನವು ದೊರೆಯುತ್ತದೆ. ೪ ದಿನ ನಡೆಯುವ ೨೮ ಜೂಜಾಟಗಳಲ್ಲಿ ಒಟ್ಟು ೨೮ರಿಂದ ೩೦ ಸಾವಿರ ಪೌಂಡು ಬೆಲೆಯ ಬಹುಮಾನಗಳು ಕೊಡಲ್ಪಡುತ್ತವೆ. ಇವಲ್ಲದೆ ಬಂಗಾರದ ಕಪ್ಪುಗಳೇ ಮೊದಲಾದುವು ಬೇರೆ. ಇದರ ಹೊರತಾಗಿ ಕೆಲವು ಮಹತ್ವದ ಜೂಜುಗಳಲ್ಲಿ ಗೆದ್ದ ಕುದುರೆಗಳಿಗೆ ೩೦೦೦ ಪೌಂಡಿಗಿಂತ ಹೆಚ್ಚಿನ ಬಹುಮಾನಗಳನ್ನು ಕೊಡುತ್ತಾರೆ.

ಪ್ರತಿವರ್ಷವೂ ಅಸ್ಕಾಟ್ ಗೋಲ್ಡ್‌ಕಪ್ ರೇಸು ಜರುಗುತ್ತದೆ. ಈ ಜೂಜಿನಲ್ಲಿ ಗೆಲ್ಲುವ ಕುದುರೆಯು ಮರುವರುಷದ ಡರ್ಬಿ ರೇಸಿನಲ್ಲಿ ಯಶಸ್ವಿಯಾಗುವುದೆಂದು ತಿಳಿಯಲಾಗುತ್ತದೆ. ಈ ಅಪೇಕ್ಷೆಯಿಂದ ಇಡಿಯ ವರ್ಷದ ವರೆಗೆ ಈ ಕುದುರೆಗೂ ಬೇರೆ ಉತ್ತಮ ಕುದುರೆಗಳಿಗೂ ಶಿಕ್ಷಣ ಕೊಡಲಾಗುತ್ತದೆ. ಈ ಶರ್ಯತ್ತಿನಂತೆ ರಾಯಲ್ ಹಂಟ್ ಕಪ್ ಎಂದೂ ಕ್ವೀನ್ ಅಲೆಕ್ಝಾಂಡ್ರಾ ಕಪ್ ಎಂದೂ ರೇಸುಗಳಾಗುತ್ತವೆ. ಅವುಗಳಲ್ಲಿ ಗೆದ್ದ ಕುದುರೆಗೆ ೩೦೦೦ ಪೌಂಡಿನ ಪಾರಿತೋಷಿಕವನ್ನು ಕೊಡಲಾಗುವದು.

CC-0. Jangamwadi Math Collection. Digitized by eGangotri

ಮೇಲಿನ ಜೂಜಾಟಗಳಿಗೆ ಕುದುರೆ ಕಳಿಸುವ ಪ್ರತಿಯೊಬ್ಬ ಹುರಿಯಾಳಿಗೆ ಕುದುರೆ ತರಬೇತು ಮಾಡುವ ಬಗ್ಗೆ ತೀರ ಕಡಿಮೆಯೆಂದರೂ ೨೦೦೦ ಪೌಂಡಿಗಿಂತ ಹೆಚ್ಚು ಹಣವನ್ನು ವೆಚ್ಚಮಾಡಬೇಕಾಗುತ್ತದೆಯೆಂದು ಹೇಳುತ್ತಾರೆ. ಒಂದು ಕುದುರೆಗಾಗಿ ೨೫೦೦೦ ರೂ.ಗಿಂತ ಹೆಚ್ಚು ವೆಚ್ಚಮಾಡುವುದು ನಮಗೆ ವಿಪರೀತವಾಗಿ ತೋರುತ್ತಿದ್ದರೂ, ಅದೇ ಕುದುರೆಯು ಮೂಲಕ ಹೇರಳ ಹಣವನ್ನು ಸಂಪಾದಿಸಬಹುದೆಂಬುದನ್ನೂ ನಾವು ಮರೆಯಕೂಡದು. ಈ ಜೂಜುಗಳಲ್ಲಿ ಮೇಲಕ್ಕೆ ಬಂದ ಕುದುರೆಗೆ ೨೫೦೦೦ ಪೌಂಡಿಗಿಂತ ಹೆಚ್ಚು ಬೆಲೆಯು ಬರುವುದು ಮತ್ತು ಡರ್ಬಿ ವಿನರನಿಗೆ (ಡರ್ಬಿಯಲ್ಲಿ ಜಯಶಾಲಿಯಾದ ಕುದುರೆಗೆ) ಎಷ್ಟೋ ಸಲ ೫೦ ಸಾವಿರ ಪೌಂಡು ಬೆಲೆಯೂ ಬರುವುದುಂಟು.

ಜೂಜಿನ ಬೈಲನ್ನು ಬಹಳ ಅಂದವಾಗಿ ಇಟ್ಟಿರುತ್ತಾರೆ. ಹಸಿರು ಬಣ್ಣದ ರತ್ನಗಂಬಳಿ ಹಾಸಿದಂತೆ ಭಾಸವಾಗುತ್ತದೆ. ಇದಕ್ಕಾಗಿ ಪ್ರತಿವರ್ಷ ಸಾವಿರಾರು ಪೌಂಡು ಹಣ ವ್ಯಯವಾಗುತ್ತದೆ. ೧೯೩೫ರಿಂದ ಕಳೆದ ವರ್ಷದ ಜೂಜಾಟದ ವರೆಗೆ ೧೦ ಸಾವಿರ ಪೌಂಡು ಹಣವು ಬೈಲು ಅಂದವಾಗಿಡುವುದಕ್ಕಾಗಿ ವೆಚ್ಚವಾಗಿದೆಯೆಂದು ಹೇಳುತ್ತಾರೆ.

ಪ್ರೇಕ್ಷಕರ ಜಾಗೆಗಳು ಬೇರೆಬೇರೆಯಾಗಿರುತ್ತವೆ; ಮತ್ತು ಅವುಗಳ ಪ್ರವೇಶಧನವನ್ನಾದರೂ ವಿಶೇಷ ದೃಷ್ಟಿಯಿಂದಲೇ ನಿರ್ಣಯಿಸಿರುತ್ತದೆ. ಬೇರೆಬೇರೆ ಆವಾರಗಳೊಳಗಿನ ಸ್ತ್ರೀಪುರುಷರ ಸೌಂದರ್ಯದ ಮತ್ತು ಫ್ಯಾಶನ್ನುಗಳ ದೃಶ್ಯವನ್ನು ಕಾಣಲೆಂದೇ ಅವನ್ನು ಏರ್ಪಡಿಸಿರಬೇಕು. ಅಲ್ಲಿಯ ವೇಷಭೂಷಣಗಳ ವೈಭವದಿಂದ ನೋಟಕರ ಕಣ್ಣುಗಳು ಕುಕ್ಕುತ್ತವೆ. ಕೋರ್ಟ-ಪ್ರೆಜೆಂಟೇಶನ್ (ರಾಜರಿಗೆ ಪರಿಚಯ ಮಾಡಿಕೊಡುವ) ಕಾಲಕ್ಕೆ ರೂಪವತಿಯರಾದ ಸಿರಿವಂತರ ಹುಡುಗಿಯರ ದಾಳಿಯನ್ನೇ ಕಾಣಬಹುದು. ಅದೇ ಮಾತು ವಿಲಾಸಿ ತರುಣರದು. ಇಲ್ಲಿ ದಿವಾಳಿ ತೆಗೆದ ಸ್ತ್ರೀಪುರುಷರಿಗೂ ಘಟಸ್ಫೋಟ ಪಡೆದವರಿಗೂ ಕಾಲಿಡಲಪ್ಪಣೆಯಿಲ್ಲ. 'ರಾಜವಲಯ'ದಲ್ಲಿ ಹೋಗಲು ಅನುಮತಿ ದೊರೆತವರಿಗೆ ಬ್ಯಾಜುಗಳನ್ನು ಕೊಡುವರು. ಒಂದೊಂದು ಬ್ಯಾಜಿನ ಬೆಲೆ ಗಂಡಸರಿಗೆ ೬ ಪೌಂಡು, ಹೆಂಗಸರಿಗೆ ೪ ಪೌಂಡು.

ಹೀಗೊಂದು ವದಂತಿಯಿದೆ: ಅಸ್ಕಾಟಗೆ ಹೋಗುವವರು ಕುದುರೆಯ ಜೂಜಾಟ ನೋಡದೆಯೆ ಹಿಂತಿರುಗುತ್ತಾರೆಂದು. ಸ್ಥಿತಿವಂತೆಯರೂ ರೂಪವತಿಯರೂ ಆದ—ತಮ್ಮ ಜೀವನದ ಜತೆಗಾತಿಯರಾಗಬಹುದಾದ—ಅವಿವಾಹಿತ ಯುವತಿಯರ ಪರಿಚಯವನ್ನು ನಾಲ್ಕು ದಿನಗಳಲ್ಲಿ ಸಿಕ್ಕಿದಷ್ಟು ಹೊತ್ತು ಮಾಡಿಕೊಳ್ಳಬೇಕೆಂದೇ ಹಲವರು ಅಲ್ಲಿ ಹೋಗುತ್ತಿರಬೇಕು.

ಅಸ್ಕಾಟದ ವೇಷವಿಲಾಸಗಳಿಗೆ (ಫ್ಯಾಶನ್ನುಗಳಿಗೆ) ಜಾಗತಿಕ ಮಹತ್ವವಿದೆ. ಈ ವರ್ಷದ ಸಮಾರಂಭ ಮುಗಿದ ಕೂಡಲೆ ಮುಂದಿನ ವರ್ಷ ಫ್ಯಾಶನ್ನುಗಳಲ್ಲಿ ಯಾವ ಬದಲಾವಣೆ ಮಾಡಬೇಕೆಂದು ವೇಷಗಳನ್ನು ತಯಾರಿಸುವವರು ಯೋಚಿಸುತ್ತಿರುತ್ತಾರೆ. ಪ್ರತಿವರ್ಷವೂ ಹೊಸ ಫ್ಯಾಶನ್ನಿರುವಂತೆ, ಒಂದು ದಿನದ ವೇಷ ಇನ್ನೊಂದು ದಿನ ವಿರಕೂಡದು. ಅಲ್ಲಿ ಹೋಗುವವರು ಕನಿಷ್ಠ ೪ ಡ್ರೆಸುಗಳನ್ನು ಇಲ್ಲವೆ ಸೂಟುಗಳನ್ನು ಇಟ್ಟುಕೊಳ್ಳಬೇಕಾಗುತ್ತದೆಂಬುದು ಸ್ಪಷ್ಟವಿದೆ.

ಪ್ರತಿ ಹೆಂಗಸಿನ ಡ್ರೆಸ್ಸಿಗೆ ೫ ಪೌಂಡಿಗಿಂತ ಕಡಿಮೆಯಿಲ್ಲದ ಬೆಲೆ. ಒಂದೊಂದು ಸಲ ೧೦, ೧೫, ೨೫—ಅದಕ್ಕೂ ಹೆಚ್ಚು ಇರುತ್ತದೆ. ಪ್ರತಿವರ್ಷವೂ ಅಸ್ಕಾಟಗೆ ೨-೨½ ಲಕ್ಷ ಜನರು ಹೋಗುತ್ತಾರೆ. ಇದರಿಂದ ವೇಷಗಳ ಬಗ್ಗೆ ಒಟ್ಟು ಎಷ್ಟು ವೆಚ್ಚವಾಗುವುದೆಂಬುದನ್ನು ಲೆಕ್ಕ ಹಾಕಬಹುದು.

ಈಚೆಗೆ ಮಧ್ಯಮ ವರ್ಗದ ಜನರಿಗಾಗಿ ಕೆಲವು ಸ್ಟೋರುಗಳ ಒಡೆಯರು ಬಾಡಿಗೆಯಿಂದ ಡ್ರೆಸ್ಸುಗಳನ್ನು ಕೊಡ್ಡುತ್ತಿದ್ದಾರೆ. ಅವುಗಳ ಬೆಲೆಯಷ್ಟೆ ಹಣ ಅಡವಿಟ್ಟುಕೊಂಡು ದಿನಕ್ಕೆ ೨೫ ಶಿಲಿಂಗಿನಂತೆ ಬಾಡಿಗೆ ತೆಗೆದುಕೊಳ್ಳುತ್ತಾರೆ. ಇದೊಂದು ಲಾಭದಾಯಕ ಉದ್ಯೋಗವಾಗಿಯೆ ಪರಿಣಮಿಸಿದೆ.

ಈಚೆಗೆ (ನಮ್ಮಲ್ಲಿ ಮುಂಬಯಿಯ ರೇಸಕೋರ್ಸಿನಂತೆ) ಪ್ರತಿ ಕುದುರೆಯ ಮೇಲೆ ಜೂಜಾಡುವ ಹಣವನ್ನು ಟೋಟಿನ ರೂಪದಲ್ಲಿ ಹಚ್ಚಲು ಬರುವಂತೆ ಏರ್ಪಾಡು ಮಾಡಿದ್ದಾರೆ. ಹಾಗೆ ಹಚ್ಚಿದ ಪ್ರತಿರಕಮನ್ನು (ಆ ರಕಮೆಂದರೆ ಒಂದು ಯೂನಿಟ್) ಟೋಟ್ ಬೋರ್ಡಿನ ಮೇಲೆ ಕಾಣಿಸಲಾಗುತ್ತದೆ. ಈ ಅಂಕೆಯ ಆಟ ನೋಡುವುದೂ ಒಳ್ಳೆ ಮನೋರಂಜಕವಾಗಿರುತ್ತದೆ. ಈ ಟೋಟಿನ ಬಳಿಸು. ೬೦೦ ಜನರನ್ನು ವ್ಯವಸ್ಥೆಗಾಗಿ ಇರಿಸಿರುತ್ತಾರೆ. ಟೋಟಿನ ಮೂಲಕ ಸಂಗ್ರಹವಾಗುವ ಹಣದಲ್ಲಿ ವ್ಯವಸ್ಥಾಪಕ ಮಂಡಲವು ೧/೧೦ನ್ನು ತನ್ನಲ್ಲಿಟ್ಟುಕೊಳ್ಳುತ್ತದೆ. ೧೯೩೫ರಲ್ಲಿ ಈ ಮಂಡಲಕ್ಕೆ ೩,೪೦,೦೦೦ ಪೌಂಡು ಲಾಭವಾಯಿತಂತೆ! ಇದರಿಂದ ಟೋಟುಗಳಿಂದ ಕುದುರೆಗಳ

CC-0. Jangamwadi Math Collection. Digitized by eGangotri

ಗಾಗಿ ಪಣಹಚ್ಚುವ ದುಡ್ಡು ಎಷ್ಟಿರಬಹುದೆಂದು ಊಹಿಸಬಹುದು. ಟೋಟನ ಹೊರತು ಬುಕೀಜಗಳ ಬಳಿಯೂ ೨-೩ ಸಾವಿರದ ವರೆಗೆ ಪಣಕಟ್ಟುವ ಜನರು ಬೇರೆ.

ಅಸ್ಕಾಟ ಹೀಥಕ್ಕೆ ಹೋಗುವವರಿಗಾಗಿ ಸುಮಾರು ೫೦ ಸ್ಪೆಶಲ್ ಟ್ರೇನುಗಳನ್ನು ದಿನಾಲು ಸಿದ್ಧವಾಗಿಟ್ಟಿರುತ್ತಾರೆ. ಅಲ್ಲದೆ ೨೦,೦೦೦ ಮೋಟರಬಸ್ಸುಗಳು ಬೇರೆ.

ಈ ಪ್ರದೇಶವು ಅರಸನ ಒಡೆತನಕ್ಕೆ ಒಳಪಟ್ಟಿರದಿದ್ದರೂ ಅವನ ನೇತೃತ್ವಕ್ಕೆ ಸೇರಿದೆ. ಎಂದರೆ ಇಂಗ್ಲಂಡಿನ ರಾಜನೆ ಮುಖ್ಯನಾಗಿ ತಿಳಿಯಲ್ಪಡುವನು. ಹೀಥದ ಮೇಲ್ವಿಚಾರಣೆಯು ಕಾರ್ಯಕ್ಷಮ ವ್ಯವಸ್ಥಾಪಕ ಮಂಡಲದ ಕಡೆಗಿದೆ.

**ವೆಚ್ಚವಿಲ್ಲದ ಅಂಚೆ**

ಅಲಾಸ್ಕಾದಲ್ಲಿಯ ಎಸ್ಕಿಮೊ ಜನರು ಅಂಚೆಯ ಸುದ್ದಿಗಳನ್ನು ಅಂಚೇತಿಕೀಟುಗಳ ವೆಚ್ಚವಿಲ್ಲದೆ ಕಳಿಸುವ ಏರ್ಪಾಡು ಮಾಡಿದ್ದಾರೆ. 'ಅಂಕಲ್ ಸ್ಯಾಮ್ಸ್ ಮೇಲ್ ಸರ್ವಿಸಿ'ನ (ಅಮೆರಿಕೆಯ ವೈಮಾನಿಕ ಅಂಚೆಯ) ಉಪಯೋಗವನ್ನು ಅವರು ಒಳ್ಳೆ ಕುಶಲತೆಯಿಂದ ಮಾಡಿಕೊಳ್ಳುತ್ತಿದ್ದಾರೆ. ವೈಮಾನಿಕರು ವಿಮಾನಗಳನ್ನು ನೆಲಕ್ಕಿಳಿಸಿದ ಕೂಡಲೆ, ಎಷ್ಟೋ ಸಲ ಎಸ್ಕಿಮೊ ಸ್ತ್ರೀಪುರುಷರು ಅವುಗಳ ಸುತ್ತುಮುತ್ತು ನೆರೆದಿರುವುದನ್ನು ಕಂಡದ್ದುಂಟು. ಹಿಂದುಗಡೆ ಆ ವೈಮಾನಿಕರಿಗೆ ತಮ್ಮ ವಿಮಾನಗಳ ಮೇಲೆ ಒಂದು ಬಗೆಯ ಚಿತ್ರಲಿಪಿಯು ಕಂಡುಬಂದ ಮೇಲೆ, ಎಸ್ಕಿಮೊಗಳು ತಮ್ಮ ಆಪ್ತೇಷ್ಟರಿಗೆ ಸುದ್ದಿಗಳನ್ನು ಬರೆದು ಕಳಿಸುವ ಯುಕ್ತಿಯಿದೆಂದು ಅವರಿಗೆ ತಿಳಿಯುವುದು. ಮೇಲ್ ಸರ್ವಿಸಿನ ವೇಲಾಪತ್ರಿಕೆಯನ್ನು ಮತ್ತು ಸರ್ವಿಸ್ ವಿಮಾನಗಳು ನಿಲ್ಲುವ ಸ್ಥಾನಗಳ ವಿವರಗಳನ್ನು ತಿಳಿದುಕೊಂಡು ಈ ಜನರು ವಿಮಾನಗಳ ಹೊರಗಡೆಯ ಬೇರೆಬೇರೆ ಭಾಗಗಳಲ್ಲಿ ಪರಸ್ಪರರಿಗೆ ತಿಳಿಸಬೇಕಾದ ಸಂಗತಿಗಳನ್ನು ಬರೆದು ಕಳಿಸುತ್ತಾರೆ.

—चित्रमय जगत्

**ದೇಶವಿದೇಶಗಳಲ್ಲಿಯ ಚಿತ್ರಪಟ ನಿರ್ಮಾಣ**

ಇಂಗ್ಲಿಷ್ ಚಿತ್ರಪಟ ಉದ್ಯಮವು ಈಚೆಗೆ ಕೆಲವು ವರ್ಷಗಳಿಂದ ಅದ್ಭುತವಾಗಿ ಬೆಳೆದಿದೆ. ಆದರೆ ಗಾತ್ರದಷ್ಟು ಪಾತ್ರತೆಯಿಲ್ಲವೆನ್ನಬೇಕಾಗುವುದು. ಈ ಉದ್ಯೋಗವು ಕೆಲವು ಜನ 'ಸಟ್ಟಾ' ವ್ಯಾಪಾರಿಗಳ ಕೈಯಲ್ಲಿದೆ. ಅವರ ದೃಷ್ಟಿ ಪಟಗಳ ಯೋಗ್ಯತೆಯ ಕಡೆಗಲ್ಲ, ಅಂಕೆಯ ಕಡೆಗೆ. ಕಳೆದ ಕೆಲವು ವಾರಗಳಿಂದ ಅಲ್ಲಿಯ ಚಿತ್ರಪಟ ಉದ್ಯೋಗವು ದೊಡ್ಡ ಗಂಡಾಂತರದಲ್ಲಿದೆ. ಅಲ್ಲಿಯ ದೊಡ್ಡ ದೊಡ್ಡ ಚಿತ್ರಪಟ ಸಂಘಗಳು ದಿವಾಳಿ ತೆಗೆಯುವುದು ಇಲ್ಲವೆ ನಿಂತುಬಿಡುವುದು ವಾಡಿಕೆಯ ಮಾತು. ಒಂದು ದೊಡ್ಡ ಕಂಪನಿಯು ಜೀವಧಾರಣೆ ಮಾಡಲು ತುಂಬಾ ಸಾಹಸಪಡುತ್ತಿದೆ; ಒಂದು ವಾರಕ್ಕೆ ೫ ಪೌಂಡಿಗಿಂತ ಹೆಚ್ಚಿರುವ ಸಂಬಳ-ಕೂಲಿಗಳನ್ನು ಕಡಿಮೆಮಾಡಿಬಿಟ್ಟಿದೆ. ತಮ್ಮ ಪಟಗಳಿಗೆ ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಪೇಟೆ ಹುಡುಕಿ ಈ ಕುತ್ತಿನೊಳಗಿಂದ ಪಾರಾಗಬೇಕೆಂದು ಇಂಗ್ಲಿಷ್ ಚಿತ್ರಪಟೋದ್ಯೋಗಿಗಳು ಹಂಚಿಕೆಹಾಕಿದ್ದರು. ಆದರೆ ಅಮೆರಿಕೆಯ ಪೇಟೆ ಬ್ರಿಟಿಷರಿಗೆ ಮುಚ್ಚಿದ ಬಾಗಿಲು. ಇಂಗ್ಲಿಷರ ಪಟಗಳನ್ನು ತರಿಸಿಕೊಂಡು ಅವರ ಸ್ಪರ್ಧೆಗೆ ಆಧಾರವಾಗಲು ಅಮೆರಿಕನ್ ಉದ್ಯೋಗದವರೆಂದೂ ಸಮ್ಮತಿಸರು. ಆದ್ದರಿಂದ ಅಮೆರಿಕೆಯ ಹೊರತು ಬೇರೆ ದೇಶಗಳಲ್ಲಿ ಪ್ರಸಾರಮಾಡಲು ಪ್ರಯತ್ನಿಸುವ ದಾರಿಯೊಂದೇ ಉಳಿಯಿತೆಂದು ಇಂಗ್ಲಿಷ್ ಚಿತ್ರಪಟೋದ್ಯೋಗಿಯೊಬ್ಬನು ನುಡಿದಿದ್ದಾನೆ.

ಫ್ರೆಂಚ್ ಚಿತ್ರಪಟಗಳ ತಯಾರಿಕೆಯು ಅಲ್ಪ ಬಂಡವಾಳದ ಸಣ್ಣಸಣ್ಣ ಉದ್ಯಮಗಾರರ ಕೈಯಲ್ಲಿದೆ. ಅಲ್ಲಿಯ ಬಂಡವಾಳದ ಅರ್ಧದಷ್ಟು ಇಂಗ್ಲಂಡಿನಿಂದ ಬಂದಿದೆ. ಬಡ್ಡಿಯ ದರ ನೂರಕ್ಕೆ ೩೪ರಷ್ಟು ದುಬಾರಿಯಿರುತ್ತದೆ. ಈಚೆಗೆ ಕೆಲವರ್ಷಗಳಿಂದ ಅಲ್ಲಿಯ ಉದ್ಯೋಗವು ನಷ್ಟದಲ್ಲಿಯೆ ನಡೆಯುತ್ತಿದೆ. ಮಾತಾಡುವ ಪಟಗಳು ಬಂದ ಮೇಲೆ ಸಿಕ್ಕಾಪಟ್ಟೆ ತಯಾರಿಕೆಗೆ ಆರಂಭವಾಗಿ, ಧಾರಣೆಗಳು ಏರತೊಡಗಿದವು. ೧೯೩೪ರಲ್ಲಿ ದೊಡ್ಡ ಬಿಕ್ಕಟ್ಟು ಬಂದಿತು. ಚಿಕ್ಕ ಬಂಡವಾಳದ ಸಣ್ಣ ಸಂಘಗಳು ವರ್ಷಕ್ಕೆ ೫೦ರಿಂದ ೮೦ರಂತೆ ಮಾಯವಾದವು.

ಝೆಕೊಸ್ಲೊವಾಕಿಯೆವು ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಸರಕಾರವು ರಾಷ್ಟ್ರದ ಪಟನಿರ್ಮಾಣದ ಒಟ್ಟು ವೆಚ್ಚದಲ್ಲಿ ಅರ್ಧದಷ್ಟು ಸ್ವತಃ ವಹಿಸುತ್ತದೆ. ನಷ್ಟವೊದಗಿದಲ್ಲಿ, ಆ ಹಣದ ೧೦ %ಕ್ಕೆ ಮಾತ್ರ ಉದ್ಯಮದವರು ಜವಾಬ್ದಾರರು. ೪೦ %ಕ್ಕಿಂತ ಹೆಚ್ಚು ಲಾಭವಾದಲ್ಲಿ ಆದರ ಒಂದು ಭಾಗವನ್ನು ಸರಕಾರದ ಆರ್ಥಿಕ ವಿಭಾಗದವರಿಗೆ ಕೊಡಬೇಕಾಗುವುದು; ಅದು ಸ್ವತಂತ್ರವಾದೊಂದು ನಿಧಿಗೆ ಸೇರ್ಪಡೆಯಾಗುವುದು. ಉತ್ತಮ ಕೃತಿಗಳಿಗಾಗಿ ಆರ್ಥಿಕ ವಿಭಾಗದಿಂದ ೧ ಕೋಟಿ ಕ್ರೋನುಗಳ ವರೆಗೆ ಸಾಲ ಸಿಗುವುದು.(೧ಕ್ರೋನು=ಸು. ೪ ಆಣೆ). ಒಂದೊಂದು

CC-0. Jangamwadi Math Collection. Digitized by eGangotri

ಕೃತಿಗೆ ೭೦,೦೦೦ದಿಂದ ೨೧೦,೦೦೦ ಕ್ರೋನುಗಳು ಸಿಗುವವು. ಇದೆಲ್ಲಾ ಲೆಕ್ಕ ಹಾಕಿದರೆ ಒಟ್ಟು ವೆಚ್ಚದ ೭೦%ರಷ್ಟು ಸರಕಾರದಿಂದ ಸಹಾಯರೂಪವಾಗಿ ಬರುವುದು.

**ಅಮೆರಿಕೆಯು** ಈ ಉದ್ಯೋಗದಲ್ಲಿ ಜಗತ್ತಿನಲ್ಲಿಯೆ ಅಗ್ರಸ್ಥಾನವನ್ನು ಪಡೆದಿದೆ. ಜಗತ್ತಿನಲ್ಲಿ ಎಲ್ಲಕ್ಕೂ ದೊಡ್ಡ ಚಿತ್ರಪಟ ನಿರ್ಯಾತ ವ್ಯಾಪಾರವು ಅಮೆರಿಕೆಯದೇ. ಆದರ ಆಯಾತ ವ್ಯಾಪಾರವು ಮಾತ್ರ ತೀರ ಕಿರಿದು. ೧೯೩೬ರಲ್ಲಿ ೩೦ ಅಮೆರಿಕನ್ ಚಿತ್ರಪಟಗಳು ಜರ್ಮನಿಯಲ್ಲಿ ಪ್ರದರ್ಶಿಸಲ್ಪಡುತ್ತಿದ್ದವು. ಅವುಗಳಿಗಾಗಿ ಜರ್ಮನಿಯು ಕೊಡಬೇಕಾದ ಬಾಡಿಗೆಯು ೩೦ ಲಕ್ಷ ರೀಶ್‌ಮಾರ್ಕುಗಳಾಗುತ್ತಿತ್ತು. ( ಒಂದು ರೀಶ್‌ಮಾರ್ಕ್=ಸು. ರೂ. ೧-೧೦ ). ಬೇರೆ ಎಲ್ಲಾ ದೇಶಗಳು ಮುಗ್ಗಟ್ಟಿಗೆ ಒಳಗಾಗಿದ್ದರೆ, ಅಮೆರಿಕೆಯು ಹೆಚ್ಚುಹೆಚ್ಚಾಗಿ ಚಿತ್ರಪಟನಿರ್ಮಾಣವನ್ನು ಕೈಕೊಂಡಿದೆಯಲ್ಲದೆ, ಆ ಪ್ರಮಾಣದಲ್ಲಿ ಹೆಚ್ಚಿನ ಉತ್ಪನ್ನವನ್ನೂ ಗಳಿಸುತ್ತಿದೆ.

ಇಂದು ಅಮೆರಿಕೆಯಲ್ಲಿ ೮ ಕೋಟಿ ೮೦ ಲಕ್ಷ ಜನರು ಒಂದು ವಾರದವಧಿಯಲ್ಲಿ ಚಿತ್ರಪಟಗೃಹಗಳಿಗೆ ಹೋಗುತ್ತಾರೆ. ೧೯೩೭ರ ಜನವರಿ ೧ನೆಯ ತಾರೀಖಿಗೆ ಅಮೆರಿಕೆಯಲ್ಲಿ ೧೬,೨೫೮ ಚಿತ್ರಪಟಗೃಹಗಳಿದ್ದವು. ಮುಂಚಿನ ವರ್ಷಕ್ಕಿಂತ ೮೮೦ ಹೆಚ್ಚಾದವೆಂದು ಇದರಿಂದ ತಿಳಿಯುತ್ತದೆ. ೧೦,೯೪೮,೯೨೦ರಿಂದ ೧೦,೪೪೦,೬೩೨ರ ವರೆಗೆ ಪ್ರೇಕ್ಷಕರ ಆಸನಗಳ ಸಂಖ್ಯೆ ಏರಿದೆ. ೧೯೩೭ಕ್ಕೆ ಅಮೆರಿಕೆಯ ಚಿತ್ರಪಟ ನಿರ್ಮಾಣದ ಒಟ್ಟು ವೆಚ್ಚದ ಅಂದಾಜು ೧೮ ಕೋಟಿ ಡಾಲರಿನಷ್ಟಾಗಿದೆ. ( ೧ ಡಾಲರು = ಸುಮಾರು ರೂ. ೨-೧೦-೦ ). ಹೀಗೆ ಒಳದೇಶದ ವ್ಯಾಪಾರದ ಪರಿಸ್ಥಿತಿಯು ಅತ್ಯುತ್ತಮವಾಗಿದ್ದರೂ ನಿರ್ಯಾತ ವ್ಯಾಪಾರವು ತುಂಬಾ ಕೆಳತರಗತಿಗಿಳಿದಿರುವುದರಿಂದ ಲಾಭಾಂಶವು ಕಡಿಮೆಯಾಗುತ್ತಿದೆ. ಹಿಂದಕ್ಕೊಮ್ಮೆ ಮೂಕಪಟಗಳ ಒಟ್ಟು ಉತ್ಪನ್ನದಲ್ಲಿ ೫೦ %ರಷ್ಟು ಪರದೇಶ ವ್ಯಾಪಾರದಿಂದಲೆ ಗಳಿಸುವ ಕಾಲವೂ ಅಮೆರಿಕೆಯದಾಗಿತ್ತು. ಈಗಲೋ, ಆ ವ್ಯಾಪಾರದ ಒಂದು ಸಣ್ಣ ಅಂಶ ಮಾತ್ರ ಉಳಿದಿದೆ.

**ಜರ್ಮನಿಯ** ಸ್ಥಿತಿಯು ಅಷ್ಟು ಚೆನ್ನಾಗಿಲ್ಲ. ವಾಕ್ಪಟಗಳ ಸೃಷ್ಟಿಯೂ ಯುರೋಪಿನ ಸಣ್ಣ ರಾಷ್ಟ್ರಗಳು ತಮ್ಮ ಒಳ-ಹೊರ ವ್ಯಾಪಾರವನ್ನು ಸರಿಪಡಿಸುವುದಕ್ಕೆ ನಡೆಸಿದ ಪ್ರಯತ್ನವೂ ಜರ್ಮನಿಗೆ ಆತಂಕಗಳಾಗಿವೆ. ಜರ್ಮನಿಯಲ್ಲಿ ಈಗ ೫,೩೫೦ ಚಿತ್ರಪಟಗೃಹಗಳೂ ಅವುಗಳಲ್ಲಿ ೧,೯೩೫,೦೦೦ ಜನರು ಕೂಡುವ ವ್ಯವಸ್ಥೆಯೂ ಇವೆ. ಆದರೆ ಚಲಚ್ಚಿತ್ರಪ್ರದರ್ಶನಗಳ ಸಮಯದಲ್ಲಿ ನೂರಕ್ಕೆ ೭೦ರಷ್ಟು ಆಸನಗಳು ತೆರವು ಬಿದ್ದಿರುತ್ತವೆ.

ಖಾಸಗಿ ಕೋಷ್ಟಕಗಳಿಂದ, ಆಸ್ಟ್ರೇಲಿಯದಲ್ಲಿ ಒಟ್ಟು ಜನಸಂಖ್ಯೆಯಲ್ಲಿ ೫೪ %, ಇಂಗ್ಲಂಡಿನಲ್ಲಿ ೪೩ %, ಅಮೆರಿಕೆಯಲ್ಲಿ ೩೪ %, ಫ್ರಾನ್ಸಿನಲ್ಲಿ ೧೬ %, ಜರ್ಮನಿಯಲ್ಲಿ ೮.೬ % ಜನರು ಚಿತ್ರಪಟಗಳನ್ನು ನೋಡಲು ಹೋಗುತ್ತಾರೆಂದು ತಿಳಿದುಬರುತ್ತದೆ.

ಯುರೋಪ್-ಅಮೆರಿಕಗಳ ಚಿತ್ರಪಟ ಸೃಷ್ಟಿಗೆ ಕಳೆದ ೧೦ ವರ್ಷಗಳಲ್ಲಿ ಇದು ಎರಡನೆಯ ಸಂಧಿಕಾಲವು. ಎಲ್ಲೆಲ್ಲಿಯೂ ಹುಲುಬು ಕೇಳಬರುತ್ತಿದೆ:

**ಬಣ್ಣದ ಪಟಗಳು ಬರುವವು !**

ಆದೆಂದರೆ 'ಬಣ್ಣದ ಪಟಗಳು!' ಹೊಲಿವುಡ್‌ದಲ್ಲೆಲ್ಲಾ ಇದೇ ಸೊಲ್ಲು. ಲಂಡನ್‌ದಲ್ಲಿಯೂ ಅದೇ ಮಾತು. ಪ್ಯಾರಿಸ್, ಬರ್ಲಿನ್, ವಿಯೆನ್ನಾ, ರೋಮುಗಳಲ್ಲಿ ಇದು ಆಡಿಕೆಯ ವಿಷಯವಾಗಿರದಿದ್ದರೆ, ಅದು ಅಲ್ಲಿಯವರ ದುರ್ದೈವ. 'ನೆರಳು-ಬೆಳಕಿನ ಚಿತ್ರಪಟ'ದ ದಿನಗಳು ತುಂಬಿದವು; ಕಸದ ತಿಪ್ಪೆಯಲ್ಲೆಸೆದು ಸುಟ್ಟರೂ ಸೈ. ನಾಳೆಯು ಪಟ 'ಬಣ್ಣದ ಪಟ.'

ಹೊಲಿವುಡ್ಡಿನ ಸ್ಯಾಮುಎಲ್ ಗೋಲ್ಡ್ವಿನ್ನನು ಈಗಾಗಲೆ ಹೇಳಿಬಿಟ್ಟಿದ್ದಾನೆ, ಇನ್ನು ಮುಂದಿನ ತನ್ನ ಚಿತ್ರಪಟಗಳೆಲ್ಲಾ ಬಣ್ಣದವೆ ಎಂದು. ಇದು ಸತ್ಯವಾಗಿಯೂ ಇರಬಹುದು, ಇಲ್ಲವೆ ಆಶಾಪೂರ್ಣ ಊಹೆಯಾಗಿರಬಹುದು. ಲಂಡನ್‌ದಲ್ಲಿಯೂ 'ಬಣ್ಣದ ಪಟ'ಗಳ ತಯಾರಿಕೆಗೆ ತೇಜಿ ಬರುತ್ತಿದೆ.

ಚಿತ್ರಪಟಗಳು ಮತ್ತು ಟೆಲಿವಿಜನ್, ಎರಡೂ 'ನೆರಳು-ಬೆಳಕಿ'ನ ಮಾಧ್ಯಮವನ್ನು ಅವಲಂಬಿಸಿವೆ; ಟೆಲಿವಿಜನ್ ಪ್ರಚಾರ ಹೊಂದಿದ ಹಾಗೆ ಇವೆರಡರಲ್ಲಿ ತಿಕ್ಕಾಟವುಂಟಾಗಬಹುದಾಗಿದೆ. ಆದರೆ ಪಟಗಳನ್ನು ಬಣ್ಣಗಳಲ್ಲಿ ಈಗಲೆ ತಯಾರಿಸಬಹುದಾಗಿದ್ದರೆ, ಟೆಲಿವಿಜನನ್ನು ಬಣ್ಣಗಳಲ್ಲಿ ತೋರಿಸುವುದು ಇನ್ನೂ ಸಾಧ್ಯವಾಗಿಲ್ಲ.

ಹೊಲಿವುಡ್ಡಿನ ಪ್ರತಿ ಚಿತ್ರಪಟಸಂಘಕ್ಕೂ ವಿದಿತವಾಗಿ ಹೋಗಿದೆ, ಮುಂದೇನು ಬರುವುದೆಂತ. ಅದರ ಸಿದ್ಧತೆಯನ್ನೂ ಚಿತ್ರಪಟ ತಯಾರಕರು ಮಾಡುತ್ತಿದ್ದಾರೆ. ಪಟಪ್ರೇಕ್ಷಕರಿಗೆ ಬಣ್ಣದ ಪಟಗಳ ಸವಿ ಒಮ್ಮೆ ಹತ್ತಿತೆಂದರೆ, ಸಾದಾ 'ನೆರಳು-ಬೆಳಕಿ'ನ ಪಟಗಳನ್ನು ಅವರು ಹಣಕಿಯೂ ನೋಡಲಾರರು ಎಂಬುದು ಅವರಿಗೆ ಗೊತ್ತಿದೆ.

CC-0. Jangamwadi Math Collection. Digitized by eGangotri

ಒಂದೇ ರಾತ್ರಿಯಲ್ಲಿ ಹೊಸ ಬೇಡಿಕೆಗೆ ತಕ್ಕ ಪೂರೈಕೆ ಮಾಡುವಂತೆ ತಮ್ಮ ಚಿತ್ರಪಟಶಾಲೆಗಳಲ್ಲಿ ಎಲ್ಲಾ ಹೊಂದಿಕೆಯನ್ನು ಮಾಡಿಕೊಂಡಿದ್ದಾರೆ.

ಮೂಕಪಟಗಳನ್ನು ವಾಕ್ಪಟಗಳು ಹಿಂದೊತ್ತಿದಂತೆಯೆ ಬಣ್ಣದ ಪಟಗಳು ಸಾದಾ ಪಟಗಳ ಸ್ಥಾನವನ್ನು ಕ್ಷಿಪ್ರದಲ್ಲಿಯೆ ಆಕ್ರಮಿಸುವುದು ಖಂಡಿತ.

—Journal of The Motion Picture Society of India

**ಸದ್ದೋ ಶಾಂತಿಯೋ ?**

ಪ್ರಾಚೀನ ಕಾಲದಲ್ಲಿ ಭಾರತೀಯ ವೇದಾಂತಿಗಳಿಗೆ 'ಶಬ್ದ-ಶಾಂತಿ'ಗಳು ದೊಡ್ಡ ಪ್ರಮೇಯಗಳಾಗಿರುವಂತೆ, ಈಗಿನ ನವನಾಗರಿಕತೆಗೂ ಅವು ಬಿಡಿಸಲು ಬಾರದ ತೊಡಕುಗಳಾಗಿವೆ. ಅದೊಂದು ಪರಿ, ಇದೊಂದು ಪರಿ—ಇಷ್ಟೆ. 'ನಿಃಶಬ್ದ-ನಿರ್ವಿಕಲ್ಪ' ಸ್ಥಿತಿಗೂ 'ಸಗುಣ-ಸಸ್ವರ' ಪ್ರಕೃತಿಗೂ ಇರುವ ತಳಕು ಅವರಿಗೆ ವಿಚಾರದ ವಿಷಯವಾಗಿದ್ದರೆ, ಈಗಿನವರಿಗೆ ಆಧುನಿಕ ಯಂತ್ರೋಪಕರಣಗಳ-ವಾಹನಾದಿಗಳ ಕರ್ಣಕಠೋರ ಕರ್ಕಶತೆಯನ್ನಡಗಿಸಿ, ಜೀವನಕ್ಕೆ ಕೊಂಚವಾದರೂ ನಿಧಾನ-ನಿಶ್ಶಬ್ದತೆ-ವಿರಾಮ-ಶಾಂತಿ ದೊರೆಯುವಂತೆ ಉಪಾಯಗಳನ್ನು ಕಲ್ಪಿಸುವುದು ಜಟಿಲ ಪ್ರಶ್ನೆಯಾಗಿಬಿಟ್ಟಿದೆ.

ಆದರೆ ಪಾಶ್ಚಿಮಾತ್ಯರು ಆಲೋಚನೆ ಮಾಡುತ್ತ ಸುಮ್ಮನೆ ಕೂತಿಲ್ಲ. ಲಾರ್ಡ ಹಾರ್ಡರರೆಂಬ ಪ್ರಸಿದ್ಧ ವೈದ್ಯಶಾಸ್ತ್ರಜ್ಞರ ಆಧ್ಯಕ್ಷತೆಯಲ್ಲಿ ಇಂಗ್ಲಂಡಿನಲ್ಲಿ 'ಕರ್ಕಶತಾ ವಿರೋಧಕ ಸಂಘ (Anti-Noise League)' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಉಲ್ಲೇಖನೀಯವಾದ ಕಾರ್ಯವನ್ನು ನಡೆಸಿರುವರು. ಸಂಸ್ಥೆಯ ಪರವಾಗಿ Quiet ಎಂಬ ಉತ್ತಮ ವರ್ಗದ ಪತ್ರಿಕೆಯೊಂದು ಹೊರಡುತ್ತಿದೆ. ಈ ಆಂದೋಲನದ ಅಂಶಗಳನ್ನು ಜ.ಕ. ವಾಚಕರಿಗಾಗಿಕೊಡುತ್ತಲಿದ್ದೇವೆ.

ಮೇಲಣ ಪತ್ರಿಕೆಯ ನಾಲ್ಕನೆಯ ಸಂಚಿಕೆಗೆ ಹಲವು ಮಹನೀಯರು ಪತ್ರರೂಪವಾಗಿ ಸಂದೇಶಗಳನ್ನು ಕಳುಹಿದ್ದಾರೆ. ಕ್ಯಾಂಟರ್ಬರಿಯ ಆರ್ಚಬಿಶಪ್ಪರು, "ಓಡಾಟದ ಒತ್ತಡ ಹೆಚ್ಚಿ ದೇಶದ ಆತ್ಮವೆ ಗಾಸಿಯಾಗುತ್ತಲಿದೆ, ಮನಸ್ಸು ತಾಳಗೆಟ್ಟಿದೆ, ನರಗಳು ದಿಕ್ಕೆಟ್ಟಿವೆ. ಸಾಲದುದಕ್ಕೆ ನಿರಂತರವಾದ, ಆದರೆ ನಿವಾರ್ಯವಾದ ಸಪ್ಪಳವು ಜತೆಗೂಡಿ, ಪರಿಣಾಮವು ಇನ್ನಿಷ್ಟು ಭೀಕರವಾಗಿದೆ. ಈ ಗದ್ದಲ-ಗಡಿಬಿಡಿಗಳಲ್ಲಿ ಮನುಷ್ಯನು ತನ್ನ ಆತ್ಮವನ್ನೆ ಮರೆಯುವಂತಿದೆ." ಎಂದು ಬರೆದಿದ್ದಾರೆ.

ರೆಬೆಕಾ ವೆಸ್ಟ್ ಎಂಬ ಪ್ರಸಿದ್ಧ ಗ್ರಂಥಕರ್ತರು ಹೀಗೆ ಅಭಿಪ್ರಾಯ ಪಡುವರು: "ಕರ್ಣಪಟಲಗಳ ಮೇಲೆ ಮಾಡುವ ಕ್ರೂರ ದಾಳಿಗಿಂತಲೂ ಹೆಚ್ಚಿನ ದುಷ್ಟತನ ನಡೆಗಿದೆ — ನವನಾಗರಿಕತೆಯ ಗಜಬಜೆಯಲ್ಲಿ. ದೊಡ್ಡ ಪಟ್ಟಣವೆಂದರೆ, ನೂರಾರು ಕೃತಕ ಸಂಕೋಲೆಗಳಿಂದ ಬಿಗಿಯಲ್ಪಟ್ಟ ಜೀವನ; ಸ್ವಲ್ಪ ಸುಖವನ್ನು ಪಡೆಯಲಿಕ್ಕೂ ವೈಯಕ್ತಿಕ ಶಾಂತಿಸಮಾಧಾನಗಳನ್ನೆಲ್ಲ ಮಾರಿಕೊಳ್ಳಬೇಕು. ಲಂಡನ್‌ದಲ್ಲಿಯ ವಾಹನಗಳ ಓಡಾಟದಿಂದ ಹುಟ್ಟುವ ಸದ್ದು ಅಸಹ್ಯವಾಗುವ ಕಾರಣವೆಂದರೆ, ಅದು ಒಂದೇ ಸವನೆ ಕೇಳಿಸಿ ಕಿವಿಗೆ ರೂಢಿಯಾಗಬಹುದಾದ ಒಂದೇ ವಿಧದ ನಾದವಾಗಿರದೆ, ಆಗೊಮ್ಮೆ ಈಗೊಮ್ಮೆ ಪಟಾಕ್ಷಿಯಂತೆ ಸ್ಫೋಟಗೊಂಡು ಮನಸ್ಸಿನ ನೆಮ್ಮದಿಯನ್ನು ಕೆಡಿಸುವಂತಹದಾಗಿದೆ.

ಮಕ್ಕಳ ಆರೋಗ್ಯ ವಿಷಯದಲ್ಲಿ ತಜ್ಞರಾದ ಡಾ. ವಿಲ್ಯಮ್ ಮೂಡಿಯವರು ಹೀಗೆನ್ನುವರು: "ಜಾಗರಣೆ, ನಿದ್ರಾನಾಶ, ಅಸ್ವಾಸ್ಥ್ಯಕರ ಸನ್ನಿವೇಶಗಳ ಹೊರತು ಕೆಲವು ಜಾಡ್ಯಗಳಿಗೆ ಬೇರೆ ಕಾರಣಗಳಿರುತ್ತವೆ. ಸಾಮಾನ್ಯವಾಗಿ 'ಸದ್ದೆ'ಂದೆ ಅವುಗಳ ನಾಮಕರಣವನ್ನು ಮಾಡಬಹುದಾದರೂ, ನಾವು ತಿಳಿಯುವ ಅರ್ಥದಲ್ಲಿ ಅಲ್ಲ. ಅದು ಇನ್ನೂ ಸೂಕ್ಷ್ಮವಾಗಿದೆ. ದೊಡ್ಡವರು ಹೊರಗಡೆಯಿಂದ ರಾತ್ರಿ ತಡಮಾಡಿ ಬಂದು ಬೆಳಗು ಹರಿಯುವುದರೊಳಗಾಗಿ ಕೆಲಸಕ್ಕೆ ಹೋಗುತ್ತಾರೆ. ಕೂಸು ಅದೇ ಕೋಣೆಯಲ್ಲಿ ಮಲಗಿರುತ್ತದೆ—ಇವರ ಧಾಂದಲೆಯಿಂದ ಅದಕ್ಕೆಷ್ಟು ತೊಂದರೆ ಕೊಟ್ಟಂತಾಗುತ್ತದೆ! ತೋರಿಕೆಗೆ ಸುಖನಿದ್ರೆಯಲ್ಲಿದ್ದರೂ, ಮಗುವಿಗೆ ವಿಶ್ರಾಂತಿಭಂಗವಾಗಿ ಅದರ ನರಗಳ ಮೇಲೆ ಕೆಟ್ಟ ಪರಿಣಾಮವಾಗುವುದು. ಎಚ್ಚರಿಕೆಯಿದ್ದಾಗ ತೊಂದರೆ ಕೊಡದೆ, ನಿದ್ರೆಹತ್ತಿದಾಗ ಮೆದುಳಿನ ವರೆಗೂ ನುಗ್ಗಿ ಹಾವಳಿಯೆಬ್ಬಿಸುವ ಕೆಲವು ಧ್ವನಿತರಂಗಗಳಿರುತ್ತವೆ: ಸುರಂಗಮಾರ್ಗವಾಗಿ ಓಡಿಯಾಡುವ ಉಗಿಬಂಡಿಗಳ, ಸಮೀಪದಲ್ಲಿ ಹಾಯ್ದಾಡುವ ಭಾರವಾದ ಲಾರಿಗಳ, ಸ್ವಲ್ಪ ಅಂತರದ ಮೇಲೆ ಕೂಡ ಹಾರಾಡುವ ವಿಮಾನಗಳ ದೀರ್ಘ ಘರ್ಘರ ಧ್ವನಿಯು ಈ ಬಗೆಯದೆಂದು ಹೇಳಬಹುದು.

"ಇದಕ್ಕೂ ಚಿಕ್ಕವಾಗಿದ್ದು ನಿದ್ದೆಹೋದವನಿಗೆ ಹೆಚ್ಚು ತೊಂದರೆಕೊಡುವ ಕೆಲವು ಸಪ್ಪಳಗಳಿವೆ. ಹಿಂಸಿಸಲು, ಅಪಾಯಗೊಳಿಸಲು ಅವು ಬಂದುವಾಗಿ ನಿದ್ರಿತನ ಕಲ್ಪನೆಯಾದರೆ ಸಾಕು; ಅವುಗಳ ಪರಿಣಾಮವಾಗಿ ದುಃಸ್ವಪ್ನ, ಭೀಕರ ದೃಶ್ಯದರ್ಶನಗಳು ಸಂಭವಿಸುತ್ತವೆ. ಹೊರಗಿನ ಕಾಲ ಸದ್ದು, ಏರೋಪ್ಲೇನ ಯಂತ್ರದ ಧ್ವನಿ, ಮೋಟರಿನ ಸಪ್ಪಳ-ಇವು ಒಮ್ಮೊಮ್ಮೆ ಹೀಗೆ ಭಯಂಕರವಾಗಿ ಪರಿಣ



CC-0. Jangamwadi Math Collection. Digitized by eGangotri

ಮಿಸಿವೆ. ಮಕ್ಕಳ ಮನಃಸ್ವಾಸ್ಥ್ಯದ ವಿಚಾರಮಾಡುವಾಗಲೆಲ್ಲಾ ಇದನ್ನು ಯೋಚಿಸುವುದು ಅಗತ್ಯವಿದೆ.

ಮಾರ್ಲಬರೊ ಕಾಲೇಜಿನ ನಿವೃತ್ತ ಸಂಗೀತನಿರ್ದೇಶಕರಾದ ಡಾ. ಜಾನ್ ಇವಿಮೆಯವರು ಒಂದು ಭೋಜನೋತ್ತರ ಭಾಷಣದಲ್ಲಿ ಹೀಗೆಂದರು: "ಮಹಾನಗರದಲ್ಲಿಯ ಜೀವನ, ಸಹಿಸಲಾರದ ಗಲಭೆಯಾಗಿದೆ. ಬೊಗಳುವ ನಾಯಿಗಳು, ಬೀದಿಯ ಕೂಗುಗಳು, ಧ್ವನಿಕ್ಷೇಪಕ ಯಂತ್ರಗಳು ಹೆಚ್ಚಿನ ವೇಗದ ಸ್ಪೋರ್ಟ್ಸ್ ಕಾರುಗಳು, ಯಂತ್ರಶಕ್ತಿಯಿಂದ ನಡೆಯುವ (ಅಗೆಯುವ, ತೂತು ಕೊರೆಯುವ) ಡ್ರಿಲ್‌ಮಶಿನ್ನುಗಳು, ಹಾದಿಯ ಹಾಡುಗಾರರು....ಒಂದೇ ಎರಡೇ! ಮನಸ್ಸಿನ ದುಗುಡ ಮರೆಸಿ, ಶಾಂತಿ-ಸಂತೋಷಗಳನ್ನೀಯಲೆಂದು ಹುಟ್ಟಿದ ಸಂಗೀತವು ಇಂದು ಹೇಳಲಾರದ ಹಿಂಸೆ ಕೊಡುತ್ತಿರುವುದು ದೈವದುರ್ವಿಲಾಸವೆ ಸರಿ! ಕಿರಚುವ ಸಾರುವಯ್ಯ—ಅಲ್ಲ, ಧ್ವನಿಕ್ಷೇಪಕ ಯಂತ್ರ (the too-loud speaker)—ನಮಗೊಂದು ಸಾರ್ವಜನಿಕ ಶತ್ರು; ಯಾರಪ್ಪನಿಗೂ ಬಿಟ್ಟಪ್ಪನಲ್ಲ. ವಿದ್ಯುತ್ತು-ಗ್ಯಾಸು-ನೀರುಗಳಂತೆ ಸಂಗೀತವನ್ನೂ ಬಯಸಿದ ಮಾತ್ರಕ್ಕೆ ಬಳಸಲು ಬರುವಂತೆ ಮಾಡಿದ್ದೊಂದು ಅದಕ್ಕೆ ಮಾಡಿದ ದೊಡ್ಡ ಅನ್ಯಾಯ. ಇನ್ನು ಪ್ರತಿಸ್ನಾನಗೃಹಕ್ಕೂ ವಾಯರ್‌ಲೆಸ್ ಒದಗಿಸುವವರಿದ್ದಾರೆ. ಅದು ಸುಲಭಸಾಧ್ಯವಾದರೂ ಅದನ್ನು ಕಿವಿಗೊಟ್ಟು ಕೇಳುವವರೆ ಕಡಿಮೆ. ಶಾಂತ-ಸೌಖ್ಯ-ಮನಃಪೋಲಿಸುವ ಪ್ರಚಾರದಿಂದ—ಸ್ವಂತದ ಉದಾಹರಣೆಯಿಂದ 'ಜ್ವಾಲಾಮುಖಿಯು ಬಿಡುವಿರದ ಚಟಪಟಿಕೆಗಿಂತಲೂ ಪರ್ವತದ ನಿಶ್ಶಬ್ದ ಶಾಂತತೆಯೆ ಲೇಸೆಂದು ನಾವು ಮನಗಾಣಿಸಲಾರೆವೆ?"

—THE MYSORE ECONOMIC JOURNAL

## "ಮೊದಲ ದ್ರಾಕ್ಷಗಳು"



ಪ್ಯಾರಿಸಿನ ತೋಟಗಳಲ್ಲಿ ಹೆಂಗಳೆಯರು ಮೊದಲದ್ರಾಕ್ಷಗಳನ್ನು ಕುಯಿದು ಮಾರುತ್ತಿರುವರು.
.... .... ಫ್ರಾನ್ಸಿನಲ್ಲಿ ಇದೊಂದು ವಾರ್ಷಿಕ ಉತ್ಸವ .... ....

CC-0. Jangamwadi Math Collection. Digitized by eGangotri

# ಸಾಹಿತ್ಯಗೋಷ್ಠಿ

## ಪ್ರಕಾಶಕರ ಸಲಹೆಗಾರರು

ಪ್ರಸಿದ್ಧ ಇಂಗ್ಲಿಷ್ ಪ್ರಕಾಶಕ 'ಜೊನಾಥನ್ ಕೇಪ'ರಿಗೆ ಸಾಹಿತ್ಯದ ಸಲಹೆಗಾರರಾಗಿದ್ದ 'ಎಡ್ವರ್ಡ ಗಾರ್ನೆಟ'ರು ಕೆಲವು ತಿಂಗಳ ಹಿಂದೆ ತಮ್ಮ ವಯಸ್ಸಿನ ೭೭ನೆಯ ವರ್ಷಕ್ಕೆ ತೀರಿಕೊಂಡರು. ಇಂತಹ ಸಲಹೆಗಾರರಿಗೆ ನಮ್ಮ ಕಡೆಗಿನ್ನೂ ಬೆಲೆಯಿಲ್ಲ; ಆದರೆ ಪಾಶ್ಚಾತ್ಯರು ಅವರ ಮಹತ್ವವನ್ನು ತುಂಬಾ ಅರಿತಿರುವರು. ಅವರ ಹಿತಕಾರಕ ಆಪ್ತಾಲೋಚನೆಯಿಂದ ಅನೇಕ ಪ್ರಕಾಶಕರ—ಲೇಖಕರ ಭಾಗ್ಯೋದಯವಾಗಿದೆ; ವಾಙ್ಮಯವು ಅಭಿವೃದ್ಧಿಹೊಂದಿದೆ.

ಪ್ರಕಾಶಕರ ಸಲಹೆಗಾರರು ಸ್ವತಃ ಸಾಹಿತಿಗಳಿರಲೇ ಬೇಕೆಂತಲ್ಲ; ಆದರೆ ಸಾಹಿತ್ಯಮರ್ಮಜ್ಞರೂ ದೀರ್ಘ ವ್ಯಾಸಂಗಿಗಳೂ ಇರುವುದುಂಟು. ಜಾರ್ಜ ಮೆರೆಡಿಥನು 'ಚ್ಯಾಪ್ಮನ್ ಆ್ಯಂಡ್ ಹಾಲ್' ಎಂಬ ಪ್ರಕಾಶಕಮಂಡಲಿಯ ಸಲಹೆಗಾರನಾಗಿದ್ದನು; ಮತ್ತು ಸ್ವತಃ ಸುರಿತ ಕಾದಂಬರೀ ಕಾರನೂ ಇದ್ದನು. ಆದರಿದು ಅನಿವಾರ್ಯ ಸಂಬಂಧ ವಲ್ಲ. ಗಾರ್ನೆಟರ ಸ್ವಂತದ ಲೇಖನಕರ್ಮವು ಹೆಚ್ಚಾಗಿರ ದಿದ್ದರೂ ಅವರ ಹಿತಸೂಚನೆಗಳು ಪ್ರಕಾಶಕರಿಗೆ ತುಂಬಾ ಉಪಯುಕ್ತವಾಗಿದ್ದವು.

ಪತ್ರಿಕೆಗಳ ಸಂಪಾದಕರೂ ಪ್ರಕಾಶಕರ ಸಲಹೆಗಾರರೂ ಒಂದು ಬಗೆಯಿಂದ ಒಂದೇ ಜಾತಿಯ ಸಾಹಿತ್ಯವ್ಯವಸಾಯಿ ಗಳು. ಇಬ್ಬರಿಗೂ ಇನ್ನೊಬ್ಬರ ಸಾಹಿತ್ಯಸೃಷ್ಟಿಯ ದೋಹದ ಕರ್ಮವನ್ನು ಮಾಡಬೇಕಾಗುತ್ತದೆ. ಈ ದಾಯಿಯ ಕೆಲಸ ವನ್ನು ತೆರೆಮರೆಯಲ್ಲಿಯೇ ಸಾಗಿಸಬೇಕು; ಆದರೆ ಲೇಖನ ರೂಪ ಅಪತ್ಯಗಳು ಜನರೆದುರಿಗೆ ನಲಿದಾಡಬೇಕು. ಕುತ್ತು ದಾಟಿದ ಮೇಲೆ ದಾಯಿಗೆ (ಮರಳಿ ಅಂತಹ ಪ್ರಸಂಗ ಬರುವ ವರೆಗೂ) ಕೇಳುವವರಾರು? ಅವರಿಬ್ಬರಲ್ಲಿ ಸಂಪಾದಕನು, ಜೋಷ್ಟರ್ ಹಚ್ಚಿ ಕೂಡುವ ಈಜೆಯ ಬಿ. ಪಿ. ಎಸ್. ಎ. ದಾಯಿಗಳ ಹಾಗೆ, ಹೆಸರುಪೆಸೆಯಿಂದಲಾದರೂ ಎಲ್ಲರಿಗೂ ಗೊತ್ತಿರುತ್ತಾನೆ. ಆದರೆ ಪ್ರಕಾಶಕರ ಸಲಹೆಗಾರನಿಗೆ ಆ ಭಾಗ್ಯವೂ ಇಲ್ಲ. ಆತನು ಯಾವಾಗಲೂ ಮರೆಯಲ್ಲಿಯೇ ಇರಬೇಕು. ಬಂದ ಬರಹಗಳ ಗುಡ್ಡವನ್ನು ಸಂಶೋಧಿಸು ವುದು, ವರದಿಗಳನ್ನು ಪ್ರಕಾಶನವಿಭಾಗಕ್ಕೊಪ್ಪಿಸುವುದು, ಸಂಸ್ಥೆಯ ಚಾಲಕರೊಂದಿಗೆ ಚರ್ಚೆಮಾಡಿ ಪ್ರಕಾಶನದ ಪುಸ್ತಕಗಳನ್ನು ನಿರ್ಧರಿಸುವುದು, ಆಗುಹೋಗುವ ಬರಹ ಗಾರರಿಗೆ ಸಲಹೆಸೂಚನೆಗಳನ್ನು ಕೊಡುವುದು—ಹೀಗೆ ಒಂದಿಲ್ಲೊಂದು ಕೆಲಸ ಅವನ ಬೆನ್ನಿಗೆ ಇದ್ದೇ ಇರುವುದು.

ಇಂಗ್ಲಂಡಿನಲ್ಲಿಯ ಕೆಲಕೆಲವು ಪ್ರಕಾಶನಸಂಸ್ಥೆಗಳು, ಕಾರ್ಯಭಾರದ ಮೂಲಕ, ಹಲವು ಜನ ಸಲಹೆಗಾರರನ್ನೂ ಅವರ ಕೈಯಲ್ಲಿ ಕರಣಿಕರ ಪಡೆಯನ್ನೂ ಇಟ್ಟಿರುತ್ತವೆ.

'ಲಂಡನ್ ಮರ್ಕ್ಯುರಿ'ಯ ಸಂಪಾದಕರಾದ ಸ್ಕಾಟ್ ಜೇಮ್ಸರು ಗಾರ್ನೆಟರ ಬಗ್ಗೆ ಹೀಗೆನ್ನುತ್ತಾರೆ: 'ಮೇಲ್ತರ ಗತಿಯ ಬರೆವಣಿಗೆಯು ಅವರ ಭೇದಕ-ಶೋಧಕ ದೃಷ್ಟಿ ಪಟಲದಿಂದ ಎಂದೂ ಜಾರುತ್ತಿರಲಿಲ್ಲ. ಅಂತಹದೊಮ್ಮೆ ಕಣ್ಣಿಗೆ ಬಿದ್ದಕೂಡಲೆ, ಆ ಲೇಖಕನನ್ನು ಹುಡುಕಿ ತೆಗೆದು, ತನ್ನ ಲೇಖನಕಾರ್ಯ ಸಾಗಿಸುವಂತೆ ಹುರಿದುಂಬಿಸಿ, ಅದರ ಪ್ರಕಾಶನದ ವ್ಯವಸ್ಥೆಯನ್ನೂ ಮಾಡುತ್ತಿದ್ದರು; ಮತ್ತು ಸಾಹಿತ್ಯಪ್ರಪಂಚದಲ್ಲಿ ಅವನಿಗೆ ತಕ್ಕ ಸ್ಥಾನ ದೊರೆಯುವ ವರೆಗೆ ಅವನ ಗುಣವರ್ಣನೆಯನ್ನು ಬಿಟ್ಟೂಬಿಡದೆ ಮಾಡು ತ್ತಿದ್ದರು. ಈ ಕ್ರಮವು ೪೦ ವರುಷಕಾಲವೂ ನಡೆದಿತ್ತು. ವಾಗ್ರತ್ನಗಳ ಜನ್ಮಕಾಲದ ದಾಯಿಯೆಂದು ಅವರನ್ನೆಲ್ಲರೂ ಕರೆಯುತ್ತಿದ್ದರು.'

ಇದಕ್ಕಿಂತಲೂ ಗಾರ್ನೆಟರ ಒಡೆಯರಾದ ಜೊನಾಥನ್ ಕೇಪರು ತಮ್ಮ ಮೃತ್ಯುಲೇಖದಲ್ಲಿ ಬರೆದ ಮಾತುಗಳು ಹೆಚ್ಚು ಅರ್ಥಪೂರ್ಣವಾಗಿವೆ: "ನಮಗಾಗಿ 'ವಾಚಕ' ರೆಂದು ಅವರು ಕೆಲಸಮಾಡಿದ ಕಾಲದಲ್ಲೆಲ್ಲಾ ಯಾವುದೇ ಲೇಖನದ ಹಣೆಬರಹವನ್ನು ಅವರ ಪರೀಕ್ಷಣವಿಲ್ಲದೆ ನಿರ್ಧರಿಸಲಿಲ್ಲ. 'ಎಲ್ಲಾ ಹಸ್ತಪ್ರತಿಗಳನ್ನೂ ನಾನು ನೋಡಲೇಬೇಕು' ಎಂದು ಅವರೆನ್ನುತ್ತಿದ್ದರು. ಮರು ವಾರ ನಾವೆಲ್ಲರೂ ಉಪಹಾರಕ್ಕೆ ಕುಳಿತಾಗ, ತಮ್ಮ ಕಿಸೆ ಯೊಳಗಿಂದ ವಿಶೇಷ ಮಹತ್ವದ ಬರೆವಣಿಗೆಯ ಮೇಲಿನ ತಮ್ಮ ಅಭಿಪ್ರಾಯಗಳ ಸುರುಳಿಯನ್ನು ಹೊರಕ್ಕೆ ತೆಗೆಯು ತ್ತಿದ್ದರು. ಬೇಸರಿಸುವ, ಸಾಮಾನ್ಯವರ್ಜ್ಯ ಬರಹಗಳ ವ್ಯವಸ್ಥೆಯು ಕೂಡಲೆ ಆಗುತ್ತಿತ್ತು. 'ಕೇಪರಿಗೆ ಒಪ್ಪು ವಂತಹದಿಲ್ಲ, ಇಂತಹರ ಕಡೆಗೆ ಹೋಗಲು ಹೇಳಿರಿ' ಎಂದು ಹೇಳಿಬಿಡುತ್ತಿದ್ದರು. ಎಷ್ಟೋ ಸಲ ಇವರು 'ಬೇಡ' ವೆಂದವನ್ನು ಬೇರೆ ಪ್ರಕಾಶಕರು ಬಯಸಿ, ಪ್ರಸಿದ್ಧಿಸಿ, ಕೀರ್ತಿ ಕೊಟ್ಟದ್ದುಂಟು! ಈ ಜಗತ್ತಿನಲ್ಲಿ ಪ್ರಮಾದಾತೀತರು ಯಾರೂ ಇಲ್ಲ....ಅವರ ವಿವೇಕಪೂರ್ಣ ಪ್ರೋತ್ಸಾಹನ ಕ್ಕಾಗಿ ಹಲವು ವಿಖ್ಯಾತ ಲೇಖಕರು ಋಣಿಗಳಿದ್ದರೆಂಬ ಮಾತಿಗೆ, ಜೋಸೆಫ ಕಾನ್ರಾಡ್, ಗ್ಯಾಲ್ಸವರ್ದಿ, ಹಡ್ಸನ್, ಡಿ. ಎಚ್. ಲಾರೆನ್ಸ್ ಮೊದಲಾದ ಪ್ರಭಾವಯುತ ಲೇಖ ಕರ ಓಲೆಗಳೆ ಸಾಕ್ಷಿಯಾಗಿವೆ.

—'ವಿಹಂಗಮ' ದಿಂದ

CC-0. Jangamwadi Math Collection. Digitized by eGangotri

## ಸಾವಿನ ಕೂಡ ಸರಸ

ಕವಿವರ್ಯರಾದ ರವೀಂದ್ರನಾಥ ಟಾಗೋರರವರು ಮೊನ್ನೆಮೊನ್ನೆ ವಿಪರೀತ ವ್ಯಾಧಿಗ್ರಸ್ತರಾಗಿದ್ದರು. ಆದರೆ ನಮ್ಮೆಲ್ಲರ ಸುದೈವದಿಂದ, ಸಾವಿನ ದವಡೆಯೊಳಗಿಂದ ಮತ್ತೆ ನಮ್ಮೊಡನೆ ಆಡಲು ಪಾಡಲು ಅವರು ಮರಳಿದ್ದಾರೆ. ಮಹಾನುಭಾವರ ವಿಷಮಸಮಯವೂ ಸಾಮಾನ್ಯರಿಗೆ ಮಹತ್ತರವಾದ್ದುದು. ಸಿಜವಾಗಿಯೂ, ದೊಡ್ಡವರು ಸಾವಿನೊಡನೆ ಸರಸವಾಡಬಲ್ಲರು. ನವಂಬರ ೨ರ 'ಹರಿಜನ' ಪತ್ರಿಕೆಯಲ್ಲಿ ಶ್ರೀ. ಮಹಾದೇವ ದೇಸಾಯಿಯವರು ಬರೆದ ಸುಮನೋಹರವಾದ ಶಬ್ದಚಿತ್ರದಿಂದ ಇದನ್ನು ಮನಗಾಣಬಹುದು:—

"ಕವೀಂದ್ರರ ಜೀವಿತವು ಜೀವನ-ಮರಣಗಳ ನಡುವೆ ಹೊಯ್ದಾಡುತ್ತಿದ್ದಾಗಿನ ವೃತ್ತಾಂತವು ವಿವರವಾಗಿ ಹೊರಗಿನ ಜಗತ್ತಿಗೆ ತಿಳಿದಿರಲಾರದು; ಆದರೆ ನೋವು-ಅರೆಮರೆವು-ಅರೆ ಎಚ್ಚರದ ಆ ನಿಮಿಷಗಳ ಸ್ಮೃತಿಯು ಅಪೂರ್ವವಾದುದು. ಮೈಮೇಲೆ ಪ್ರಜ್ಞೆ ಬರುತ್ತಿರುವಾಗ, ಅವರು ತಮ್ಮೊಂದು ಹಳೆಯ ಗೀತದ ಸಾಲುಗಳನ್ನು ಮೆಲ್ಲನೆ ಗುಣಗುಣಿಸುತ್ತಿದ್ದರು: ದಿವಂಗತ ಪಿಯರ್ಸನ್ನರ ವಾರ್ಷಿಕ ಶ್ರಾದ್ಧದಿನದಲ್ಲಿ ಅದನ್ನು ಹಾಡುತ್ತಿರುವುದುಂಟು:—

> ಜೀವನೇ ಜತೋಟುಕು ಹಲೋಸಿ ಸಾರಾ
> ಜಾನಿ ಹೇ ಜಾನಿ ತಾಓ ಹಯನಿಹಾರಾ
> ಯೇ ಫೂಲ ಸಾ ಫುಟಿತೆ ಝರೇಛೇ ಧರಣೀತೇ
> ಯೇ ನದೀ ಮರುಪಕ್ಷೇ ಹಾರಾಲೋ ಧಾರಾ
> ಜಾನಿ ಹೇ ಜಾನಿ ತಾಓ ಹಯನಿಹಾರಾ !

ಇದೊಂದು ಆಶಾಗೀತ. ಸೋಲನ್ನು ಕಡಿಮೆಯೆಣಿಸಲಾಗದು; ನಮ್ಮ ಕಸುಕು ಕನವರಿಕೆಗಳೂ ಅಸ್ಥಿರ ಸಂಕಲ್ಪಗಳೂ 'ಕೊನೆಯ ವರದಿ'ಗೆ ಅಗತ್ಯವಾಗಿ ಬೇಕಾದ ಸಾಮಗ್ರಿ. ನಮ್ಮ ಅಪಯಶಸ್ಸು ಆ ಹಿರಿಯ ಕುಂಬಾರನು ತನ್ನ ತಿಗರಿಯಲ್ಲಿ ಮಾಡುವ ಮಡಿಕೆಗೆ ಮಣ್ಣಾಗುವುದು—ಎಂದು ಅದು ಹೇಳುವುದು. ಬ್ರೌನಿಂಗನು ಇದನ್ನೆ ತನ್ನ ಹುರುಬುರಕಾಗಿದ್ದರೂ ಸಾರವತ್ತಾಗಿರುವ ಮಾತುಗಳಲ್ಲಿ ಹೇಳಿದನು. ನಮ್ಮ ಕವಿವರ್ಯರು ಅದನ್ನೆ ತಮ್ಮ ಕರುಣಪೂರ್ಣ ವಾಣಿಯಲ್ಲಿ ಇಂತು ಹೊರಹೊಮ್ಮಿಸಿದ್ದಾರೆ:—

"ಯಾವುದು ಪೂರ್ಣತೆಯನ್ನು ಪಡೆದಿಲ್ಲವೊ ಅಂತಹದು ಕೂಡ ಎಂದೂ ಹುಸಿಹೋಗುವುದಿಲ್ಲ. ಅರಳದೆ ಕಂದಿ ಕುಂದಿ, ಕಂಪು ಹುಡಿಗೂಡಿ ಹೋಗುವ ಹೂವಾಗಲಿ, ಮರುಳ್ಗಾಡಿನಲ್ಲಿ ಮಾಯವಾಗುವ ಹೊನಲಾಗಲಿ ಅಳಿಯುವುದಿಲ್ಲ...." ಇಂತು ಹಾಡಿ, ಅವರು ತಮ್ಮ ಚಿತ್ರ ಬರೆಯುವ ಸಾಮಗ್ರಿಯನ್ನು ತರಿಸಿ, ತಮ್ಮ ಮನದ ಉಕ್ಕಂದವನ್ನು ಚಿತ್ರರೂಪವಾಗಿ ಹೊರಪಡಿಸಲುದ್ಯುಕ್ತರಾದರು. ಇದನ್ನು ಕಂಡು ಡಾಕ್ತರರು ಗಾಬರಿಯಾದರು. ಎಷ್ಟೆಂದರೂ ಮನುಷ್ಯರಲ್ಲವೇ ? ಈ ಶ್ರಮವನ್ನು ಸಹಿಸಲು ಅವರಿಗೆ ಒಪ್ಪಿಗೆಯನ್ನು ಕೊಡುವುದೆಂತು? ಅವರಿಗೆ ಬೇಕಾಗಿದ್ದುದು ಸಂಪೂರ್ಣ ವಿಶ್ರಾಂತಿ; ಆದರೆ ಒಳಗಿನ ಶಾಂತಿಯು-ಆನಂದದ ಅನುಭವಕ್ಕೆ ಕಲೆಯ ರೂಪ ಕೊಡಲೆಳಸುವ ಅವರ ಮನಸ್ಸಿನ ಊರ್ಮಿಯನ್ನು ತಡೆಗಟ್ಟುವವರು ಯಾರು ? ಕುಂಚ-ಬಣ್ಣ ಮೊದಲಾದ ಸಾಮಗ್ರಿಯನ್ನೆಲ್ಲ ತರಲಾಯಿತು. ಅದೊ ! ಕತ್ತಲೆಯ ಕಾಡನ್ನು ಸೀಳಿ ಚಿಮ್ಮುವ ಬೆಳಕಿನ ಚಿತ್ರವು, ಸಾವನ್ನು ಗೆಲ್ಲುವ ಜೀವನದ ಸ್ವಚ್ಛ ಪ್ರತೀಕವೆನ್ನುವಂತೆ ಪಟದ ಮೇಲೆ ಮೂಡಿತು.

ಈ ಅಮರಕವಿಯು ತನ್ನ ಕವನ-ಚಿತ್ರಗಳನ್ನು ಮತ್ತೆ ನಮಗೆ ನೀಡಲು ಬಂದುದು ನಮ್ಮ ಸುದೈವವೆ. ರವೀಂದ್ರರು ತಮ್ಮ ಕುರ್ಚಿಯಲ್ಲಿ ಒರಗಿದ್ದಾಗ ಅವರ ಮೋರೆಯು ಮೊದಲಿಗಿಂತ ಚಿಕ್ಕದಾಗಿ ಕಂಡಿತು; ರೋಗದಿಂದಲೂ ಡಾಕ್ತರರ ಆರೈಕೆಯಿಂದಲೂ ಕೂದಲು ಕಡಿಮೆಯಾಗಿದ್ದವು. ಕವಿಗಳಿಗೆ ತಮ್ಮ ಕೂದಲೆಂದರೆ ಕೊಂಚ ಅಭಿಮಾನ; ಸ್ಮೃತಿ ತಪ್ಪಿದಾಗ ಡಾಕ್ತರರು ಅವರ ಕೂದಲನ್ನು ಸ್ವಲ್ಪ ಕತ್ತರಿಸಿದುದು ತಿಳಿದೊಡನೆ ಅವರು ತುಸು ಅಸ್ವಸ್ಥರಾದರಂತೆ. ಉಳಿದುದನ್ನೂ ಹಿಂದುಗಡೆ ತೆಗೆಯಗೊಟ್ಟರು, ಆದರೆ ಡಾಕ್ತರರ ಮೇಲೆ ಸಿಟ್ಟಾಗದೆ ಒಳ್ಳೆ ವಿನೋದಪೂರ್ಣ ಶೈಲಿಯಲ್ಲಿ ಹೀಗೆಂದರಂತೆ!—"ಯಮನು ನನ್ನನ್ನು ಎಳೆದೊಯ್ಯಲು ಬಂದಿದ್ದನು. ಆತ ನನ್ನ ಕೂದಲು ಹಿಡಿದು ಸೆಳೆಯುವವನಿದ್ದ; ಅಷ್ಟರಲ್ಲಿ ನನ್ನ ವೈದ್ಯಮಿತ್ರರು ಕೂದಲಿಗೆ ಕತ್ತರಿ ಹಚ್ಚಿ ಆವನ ಹಂಚಿಕೆಯನ್ನು ಹುಸಿಗೊಳಿಸಿದರು. ಪಾಪ ! ಯಮನು ತನ್ನ ಹಿಡಿತವನ್ನು ಬಿಟ್ಟುಬಿಡಬೇಕಾಯಿತು."

---

## ಅಂತ್ಯಸಮಯದ ಉದ್ಗಾರಗಳು

ಬಾಯ್ರನ್:—ನಾನಿನ್ನು ನಿದ್ದೆ ಮಾಡುವೆನು.

ಕೀಟ್ಸ್:—ನನ್ನ ಮುಂದೆ ಅರಳುಗಳ ಸುಗ್ಗಿ ಸುರಿಯುವಂತೆ ತೋರುತ್ತಿದೆ.

ರೂರ್ಥ್ ವೆಲ್ಸ್:—ದಯಮಾಡಿ ದೀಪವಾರಿಸಿರಿ.

CC-0. Jangamwadi Math Collection. Digitized by eGangotri

ಜಾರ್ಜ್ ವಾಶಿಂಗ್ಟನ್:—ಎಲ್ಲಾ ಸರಿಯಾಗಿದೆ.

ಓ ಹೆನ್ರಿ:—ದೀಪ ಹಚ್ಚಿರಿ, ಕತ್ತಲೊಳಗಿಂದ ಮನೆಗೆ ಹೋಗಲು ನನಗೆ ಬಯಕೆಯಿಲ್ಲ.

---

### ವಿಮರ್ಶೆ ಮತ್ತು ಮುಷ್ಟಿಮರ್ದನ

ಎಗ್ಗಿಡದ ವಿಮರ್ಶಕನೆಂದು ರಸ್ಕಿನನು ಹೆಸರಾದ ಕೂಡಲೆ, ತನ್ನ ಟೀಕಾಸ್ತ್ರವನ್ನು ಅಸಿಮಿಸಿಯಿಲ್ಲದೆ ಬಿಡುವುದರಲ್ಲಿ ಅವನಿಗೊಂದು ಬಗೆಯ ಆಸುರೀ ಆದಂದವೆನಿಸ ತೊಡಗಿತು. ಒಮ್ಮೆ ತನ್ನ ಚಿತ್ರಕಾರ ಮಿತ್ರನ ಮೇಲೆ ಬಿರುಮಾತಿನ ಜಡಿಮಳೆ ಸುರಿಸಿ, ಆತನಿಗೆ ಬರೆದು ಕಳಿಸಿದನು: "ನಾನು ನಿನ್ನನ್ನು ಕಠೋರವಾಗಿ ಟೀಕಿಸಿದ್ದರೂ, ನಮ್ಮ ನಿಮ್ಮ ಗೆಳೆತನದಲ್ಲಿ ಭಾಧೆ ಬರಲಾರದೆಂದು ಭಾವಿಸಿದ್ದೇನೆ."

ಮರುದಿನ ಮಿತ್ರನು ಉತ್ತರವಿತ್ತನು: "ಪ್ರಿಯ ರಸ್ಕಿನ್, ನಾನು ನಾಳೆ ನಿನ್ನ ಕಡೆಗೆ ಬರುವವನಿದ್ದೇನೆ; ಮತ್ತು ನಿನ್ನ ಎದೆಯ ಮೇಲೆ ಕೂತು ಪಕ್ಕೆಲಬುಗಳ ಮೇಲೆ ಚೆನ್ನಾಗಿ ಮುಷ್ಟಿಮರ್ದನ ಮಾಡುವವನಿದ್ದೇನೆ. ಆದರಿಂದ ನನ್ನ ನಿನ್ನ ಸೌಹಾರ್ದದಲ್ಲಿ ಕೊರತೆ ಬರಲಿಕ್ಕಿಲ್ಲವೆಂದು ನಂಬಿದ್ದೇನೆ."

### ಚಿತ್ರವೊ, ಕವನವೊ ?

ಜೇಮ್ಸ್ ಮ್ಯಾಕ್ನೀಲ್ ವ್ಹಿಸ್ಲರನು ತನ್ನ ಚಿತ್ರಕಲೆಯಂತೆ ಸ್ಪಷ್ಟವಕ್ತೃತ್ವದ ಬಗೆಗೂ ಪ್ರಸಿದ್ಧನಿದ್ದನು. ಒಂದು ದಿನ ಡಾಂಟೆ ಗ್ಯಾಬ್ರಿಯೆಲ್ ರೊಸೆಟಿಯು ಅರ್ಧಮರ್ಧ ಬರೆದ ಚಿತ್ರವೊಂದನ್ನು ಮನವಾರೆ ಹೊಗಳಿದನು. ಮುಂದೆ ಒಂದು ದಿನ ರೊಸೆಟಿಯು ಭೆಟ್ಟಿಯಾದಾಗ, "ಆ ಚಿತ್ರ ಬರೆದು ಆಯಿತೊ, ಇಲ್ಲವೊ?" ಎಂದು ಕೇಳಿದನು. ರೊಸೆಟಿಯು "ಚಿತ್ರವು ಮುಗಿದುಬಿಟ್ಟಿದೆ; ಇದು ನೋಡು, ಒಂದು ಅಂದದ ಚೌಕಟ್ಟಿನಲ್ಲಿ ಕೂಡಿಸಿಯೂ ಬಿಟ್ಟಿದ್ದೇನೆ."

ಚಿತ್ರವನ್ನು ನೋಡಿ ವ್ಹಿಸ್ಲರನು: "ಹಿಂದೆ ನೋಡಿದ್ದಕ್ಕಿಂತ ಈ ಚಿತ್ರದಲ್ಲಿ ಚೌಕಟ್ಟಿನ ಹೊರತು ಹೊಸದೇನೂ ಕಾಣುವುದಿಲ್ಲ."

"ಇಲ್ಲ ನಿಜ—ಆದರೆ ನಡುವೆಯೊಮ್ಮೆ ಇದೇ ಚಿತ್ರದ ವಿಷಯದ ಬಗ್ಗೆ ಒಂದು ಕವಿತೆಯನ್ನು ಬರೆದಿದ್ದೇನೆ; ಅದ್ದರಿಂದ ಬಿಡುವಾಗಲಿಲ್ಲ."

ವ್ಹಿಸ್ಲರನು ಕವಿತೆಯನ್ನೋದಿ ಸಲಹೆಯಿತ್ತನು: "ಆ ಚಿತ್ರ ಹರಿದು ಹಾಕು ಮತ್ತು ಈ ಕವಿತೆಯನ್ನು ಆ ಚೌಕಟ್ಟಿನಲ್ಲಿ ಕೂಡಿಸು!"

---


## ದಮ್ಮು ಪೂರ್ಣ ಗುಣವಾಗುವ
### ಉಪಾಯವನ್ನೇ ಕೈಕೊಳ್ಳಬೇಕು



ಕೆಮ್ಮು ಮತ್ತು ಕಫವಿಕಾರವಿದ್ದವರು 'ಎಫಿಡಮ' ಮುಂತಾದ ತಾತ್ಕಾಲಿಕ ಆರಾಮವೆನಿಸುವ ಔಷಧಗಳನ್ನು ಎಂದೂ ಉಪಯೋಗಿಸಬಾರದು. ಈ ಔಷಧಗಳು ರೋಗವನ್ನು ಪೂರ್ಣ ಗುಣಪಡಿಸಲು ನಿರುಪಯೋಗಿಗಳೆಂಬದು ನಿಶ್ಚಿತವು; ಮತ್ತು ಇಂಥ ಔಷಧಗಳು ಶ್ವಾಸನಲಿಕೆಯಲ್ಲಿಹೆಚ್ಚಿಗೆ ನೋವುಂಟುಮಾಡಿ ರೋಗವನ್ನು ಶಾಶ್ವತಮಾಡುತ್ತವೆ

ರೋಗಲಕ್ಷಣವನ್ನು ಪೂರ್ಣ ವಿಚಾರ ಮಾಡಿ, ರೋಗಿಗೆ ಬೇಗನೆ ಮತ್ತು ಸಾವಧಾನವಾಗಿ ಪೂರ್ಣ ಗುಣ ಮಾಡುವ ಔಷಧವೇ ನಿಜವಾದ ಉಪಾಯವು; ಮತ್ತು ದೇಹ ದೃಷ್ಟಿಯಿಂದ ಡಾ. ಪುರೋಹಿತ ಇವರ

'ಶ್ವಾಸಹಾರಿ ಪ್ಲೇನ್' ಮತ್ತು
'ಶ್ವಾಸಹಾರಿ ಕಾಂಪಾವುಂಡ್'

ಈ ಎರಡೂ ಔಷಧಗಳು ದಮ್ಮು ವಿಕಾರವನ್ನು ಪೂರ್ಣ ಗುಣಪಡಿಸುವ ದಿವ್ಯಾಷಧಿಯಲ್ಲಿ ಅಗ್ರೇಸರವೆನಿಸಿವೆ. ದಮ್ಮು, ಶ್ವಾಸ, ಮುಂಜಾನೆಯ ತಸಕಿ, ಗಂಟಲು ಕೆರೆಯುವ ಹಳೇ ಕೆಮ್ಮು ಮತ್ತು ಫುಪ್ಫುಸದ ಯಜ್ಞಾವತ್ ರೋಗಗಳನ್ನು ಗುಣಪಡಿಸಲು "ಶ್ವಾಸಹಾರಿ ಪ್ಲೇನ್" ಉಪಯೋಗಿಸಬೇಕು. ಆಮ್ಲಪಿತ್ತವಿದ್ದವರು "ಶ್ವಾಸಹಾರಿ ಕಾಂಪೌಂಡ್" (ಕೆಂಪು ಪ್ಯಾಕಿಂಗ್) ಉಪಯೋಗಿಸುವುದು ಹೆಚ್ಚು ಲಾಭಕರವು.

ಬಹುತರವಾಗಿ ಎಲ್ಲ ನಗರಗಳಲ್ಲಿ ಕೆಮಿಸ್ಟ್ಸ್ ಸ್ಟೋರ್ಸ ಮತ್ತು ಅಂಗಡಿಗಳಲ್ಲಿ ಈ ಔಷಧಗಳು ರೂ. ೨, ೪-೮-೦ ಮತ್ತು ೬-೦-೦ ಹೀಗೆ ಬೇರೆ ಬೇರೆ ಬೆಲೆಯ ಪ್ಯಾಕಿಂಗುಗಳಲ್ಲಿ ಮಾರಲಿಕ್ಕೆ ಸಿಗುತ್ತವೆ.

ಲೋಕಲ್ ಎಜಂಟ್ಸ್:—
ಪಾಪ್ಯುಲರ ಮೆಡಿಕಲ್ ಸ್ಟೋರ್ಸ, ಮಂಗಳೂರು.




ಡಾ ಪುರೋಹಿತ ಫಾರ್ಮಸಿ. ಕೊಲ್ಹಾಪುರ.




CC-0. Jangamwadi Math Collection. Digitized by eGangotri



**ಸಂಸ್ಕೃತ ನಾಟಕ** : ಮೈಸೂರು ವಿ. ವಿ. ನಿಲಯದ ಕನ್ನಡ ಗ್ರಂಥಮಾಲೆಯ ೧ನೆಯ ಪ್ರಕಟನೆ. ಪ್ರಧಾನ ಸಂಪಾದಕರು: ಶ್ರೀ॥ ಬಿ. ಎಂ. ಶ್ರೀಕಂಠಯ್ಯ ಎಂ. ಎ. ಬಿ. ಎಲ್. ಲೇಖಕರು: ಶ್ರೀ॥ ಎ. ಆರ್. ಕೃಷ್ಣಶಾಸ್ತ್ರಿ ಎಂ. ಎ. ಪುಟಗಳು ಕ್ರೌ. ಅ. XXIV+೨೯೪. ಬೆಲೆ ರೂ. ೧-೪-೦

'ಈ ವಿಷಯಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನೂ ವಿದ್ವತ್ ಪತ್ರಿಕೆಗಳಲ್ಲಿ ಚೆದರಿರತಕ್ಕ ಅಸಂಖ್ಯಾತ ಲೇಖನಗಳನ್ನೂ ಪರಿಶೀಲಿಸಿ, ಸಂಸ್ಕೃತ ನಾಟಕಗಳನ್ನೆಲ್ಲಾ ಪರಾಮರ್ಶಿಸಿದ ತಮ್ಮ ಸ್ವಂತ ಅನುಭವವನ್ನು ಸೇರಿಸಿ, ಈ ಸಣ್ಣ ಪುಸ್ತಕದಿಂದ, ಕನ್ನಡದಲ್ಲಿ ಮೊದಲನೆಯ ಸಾರಿ, ಭಾರತೀಯ ಸಾಹಿತ್ಯದ ನಾಯಕರತ್ನ (?) ದಂತಿರುವ ಒಂದು ಭಾಗದ ವಿಚಾರವಾಗಿ ಜ್ಞಾನಪ್ರಸಾರಣೆಗೆ ಅನುಕೂಲ ಮಾಡಿದ್ದಾರೆ' ಎಂದು ಶ್ರೀಮಾನ್ ಶ್ರೀಕಂಠಯ್ಯನವರು ಮುನ್ನುಡಿಯ ಪ್ರಾರಂಭದಲ್ಲಿಯೆ ಹೇಳಿ ವಿಮರ್ಶಕನ ಕೆಲಸವನ್ನು ಹಗುರುಮಾಡಿದ್ದಾರೆ. ಆದರಂತೆಯೆ ಗ್ರಂಥಕರ್ತರಾದರೂ ತಮ್ಮ ಅರಿಕೆಯಲ್ಲಿ (ಪು. XVIII) '....ನಾಟಕಕರ್ತರ ಕಾಲದೇಶಾದಿಗಳನ್ನು ನಿರ್ಣಯಿಸಲು ಪಾಶ್ಚಾತ್ಯ ಪಂಡಿತರ ಗ್ರಂಥಲೇಖನಾದಿಗಳನ್ನು ಹೆಚ್ಚಾಗಿ ಉಪಯೋಗಿಸಿಕೊಂಡಿದ್ದೇನೆ. ಆದರೆ ಯಾರೊಬ್ಬರ ಮತವನ್ನೂ ಸಿದ್ಧಾಂತವಾಗಿ ಅಂಗೀಕರಿಸಿಲ್ಲ; ಅನುಸರಿಸಿಲ್ಲ; ಎಲ್ಲರ ಹೇಳಿಕೆಯನ್ನು ತಿಳಿದು, ತೂಗಿ, ನನಗೆ ಸಪ್ರಮಾಣವೆಂದು ತೋರಿದ್ದನ್ನು ಬರೆದಿದ್ದೇನೆ.'

ಮೇಲೆ ಹೇಳಿದಂತೆ ವಿಮರ್ಶಕನ ಕೆಲಸ ಹಗುರಾದರೂ ಹೃದಯವು ಮಾತ್ರ ಜಡವೆನಿಸುವಂತಿದೆ. ಈ 'ಸಣ್ಣ ಪುಸ್ತಕ'ವು ತೀರಾ ಸಣ್ಣದಾಗಿದೆ; ವಿಷಯ ಸೂಚಿಕೆಯಿಂದ ಕಲ್ಪಿಸಬಹುದಾದ ವಿಷಯವಿಸ್ತಾರಕ್ಕೂ ಗ್ರಂಥದ ಆಕಾರಕ್ಕೂ ಹೊಂದಿಕೆಯಾಗುವುದಿಲ್ಲವಲ್ಲ ಎಂದು ವಿಮರ್ಶಕನ ಖೇದ. ಗ್ರಂಥಕರ್ತರು ಪಂಡಿತರಿದ್ದಾರೆ, ಜ್ಞಾನಾಧಿಕಾರಿಗಳಿದ್ದಾರೆ, ವಿಮರ್ಶಾವಿವೇಕಿಗಳಿದ್ದಾರೆ, ಸರಸವಾಗಿ ಬರೆಯುವ ಕಲೆಗಾರರಿದ್ದಾರೆ ಎಂಬುದನ್ನು ಈ ಗ್ರಂಥದ ಪ್ರತಿಯೊಂದು ವಿವೇಚನೆಯಲ್ಲಿ ನಾವು ಕಾಣುವೆವು. ಆದರೆ ಈ ಎಲ್ಲ ಶಕ್ತಿಗಳು ವಿಶೇಷವಾಗಿ 'ಸಂಗ್ರಹ' ಕಾರ್ಯದಲ್ಲಿಯೆ ತೊಡಗಿವೆ; ಸಂಸ್ಕೃತ ನಾಟಕದ ವಿಷಯವಾಗಿ ಇದುವರೆಗೆ ಗೊತ್ತಿದ್ದ ಅಭಿಪ್ರಾಯ - ಸಂಗತಿಗಳನ್ನೆ ಹೆಚ್ಚಾಗಿ ಕಾಣಿಸಿವೆ; ಇನ್ನೊಬ್ಬರ ಸಿದ್ಧಾಂತವನ್ನು ಸ್ವೀಕರಿಸಿಲ್ಲವೇನೊ ನಿಜ, ಆದರೆ ಯಾವ ಸಿದ್ಧಾಂತವನ್ನೂ ಸೂಚಿಸಿಲ್ಲ. ಸಾಹಿತ್ಯದ ವಿಷಯದಲ್ಲಿ, ಅದರಲ್ಲೂ ಏನೂ ಆಧಾರಪ್ರಮಾಣಗಳು ದೊರೆಯದ ಸಂಸ್ಕೃತ ಸಾಹಿತ್ಯದ ವಿಷಯದಲ್ಲಿ, ಸಿದ್ಧಾಂತವನ್ನು ಸೂಚಿಸಲೇಬೇಕೆಂಬ ಅಸಮಂಜಸ ಅಭಿಪ್ರಾಯವು ನಮಗಿಲ್ಲ. ಆದರೂ ತಂತಮ್ಮ ತರ್ಕ-ಪ್ರಮಾಣ-ಪರಿಶೋಧಗಳಿಗನುಸರಿಸಿ ಪಂಡಿತರು ತಮ್ಮ ಅಭಿಪ್ರಾಯಗಳನ್ನು ಸೂಚಿಸುತ್ತ ಹೋದರೆ ಇಂದಿಲ್ಲ ನಾಳೆ ನಿಶ್ಚಿತವಾದ ಕೆಲವು ಮಾತುಗಳನ್ನು ನಾವು ಅರಿಯಬಹುದು. ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಹೀಗೆ ಮಾಡದುದಕ್ಕೆ ಸಬಲವಾದ ಕಾರಣಗಳಿರಬಹುದು. ನಾವು ಮಾತ್ರ ಅಂತಹ ವಿದ್ವಾಂಸರಿಂದ ಹೆಚ್ಚಿನ ಸಂಗತಿಗಳನ್ನು ಅಪೇಕ್ಷಿಸುತ್ತೇವೆ.

ಗ್ರಂಥದಲ್ಲಿ ಸಿದ್ಧಾಂತವನ್ನೂ ಹೊಸ ಸಂಗತಿಯನ್ನೂ ಹೇಳದಿರುವುದೊಂದು ಕುಂದು ಎಂಬ ಅಭಿಪ್ರಾಯವು ನಮ್ಮದಲ್ಲ. ಗ್ರಂಥಮಾಲೆಯ ಗುರಿಯನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಕನ್ನಡ ವಾಚಕರಿಗೆ (ಅದರಲ್ಲೂ ಕನ್ನಡವನ್ನುಳಿದು ಇನ್ನೊಂದು ಭಾಷೆಯನ್ನರಿಯದವರಿಗೆ) ಈ ಗ್ರಂಥದ ಆವಶ್ಯಕತೆ ಮತ್ತು ಉಪಯುಕ್ತತೆ ಅಪಾರವಾದುದು ಎಂದು ಧೈರ್ಯವಾಗಿ ಹೇಳಬಹುದು. ಮೊದಲನೆಯ ಭಾಗದಲ್ಲಿ ಸಂಸ್ಕೃತನಾಟಕದ ಸ್ವರೂಪ ಮತ್ತು ಉತ್ಪತ್ತಿಗಳ ವಿವರಣೆ ಇದೆ. ಪು. ೧-೩೫ರಲ್ಲಿ ಭರತ ನಾಟ್ಯಶಾಸ್ತ್ರದ ಸಮರ್ಪಕವಾದ ಸಂಗ್ರಹವಿದೆ; ಇದಲ್ಲದೆ ಉಳಿದ ಕೆಲವು ಲಕ್ಷಣಗ್ರಂಥಗಳ ಆಧಾರವನ್ನೂ ಸೇರಿಸಿಕೊಂಡು 'ಸಂಗ್ರಹ-ಕಾರಿಕಾ-ನಿರುಕ್ತಿ' ಪದ್ಧತಿಯಲ್ಲಿ ನಾಟ್ಯದ ಸ್ವರೂಪ-ಸೂಕ್ಷ್ಮ ವಿವರಗಳನ್ನೆಲ್ಲಾ ಹೇಳಿದೆ. ಪು. ೩೬-೪೯ರಲ್ಲಿ ಸಂಪ್ರದಾಯ ಮತ್ತು ಶಾಸ್ತ್ರೀಯ ದೃಷ್ಟಿಗಳಿಂದ ಸಂಸ್ಕೃತ ನಾಟಕದ ಉತ್ಪತ್ತಿಯನ್ನು ಚರ್ಚಿಸಿದ್ದಾರೆ. ಈ ಸಂದರ್ಭದಲ್ಲಿ 'ಸಂಸ್ಕೃತ ನಾಟಕವು ಆರ್ಯಸಂಸ್ಕೃತಿಯಲ್ಲಿಯೆ ಜನಿಸಿತೆಂದೂ ಆದರೆ ಅದರ ಬೆಳವಣಿಗೆಯ ಸ್ಥಿತಿಯಲ್ಲಿ ಗ್ರೀಕ ನಾಟಕಗಳ ಪ್ರಭಾವವು ಅದರ

CC-0. Jangamwadi Math Collection. Digitized by eGangotri

ಮೇಲೆ ಬಿದ್ದಿರಬಹುದೆಂದೂ ಪ್ರತಿಪಾದಿಸಿದ ಹಾಗಾಯಿತು' ಎಂದು ಅಭಿಪ್ರಾಯಪಟ್ಟಿದ್ದಾರೆ. (ಪು. ೪೭). ಇದು ವರೆಗೆ ಬೆಳೆಯುತ್ತಲಿರುವ ಎರಡು ಭಿನ್ನಾಭಿಪ್ರಾಯಗಳ ನಡುವೆ ಸಮತೋಲವನ್ನು ಹಿಡಿಯುವ ಯತ್ನವೆ ಈ ಮಾತಿನಲ್ಲಿ ಹೆಚ್ಚಾಗಿ ಕಾಣುತ್ತದೆ; ಯಾಕೆಂದರೆ, 'ಗ್ರೀಕ್ ನಾಟಕಗಳ ಪ್ರಭಾವ'ದ ವಿಷಯವಾಗಿ ಕೇವಲ ಕೆಲವು ಪಂಡಿತರ ಅಭಿಪ್ರಾಯಗಳನ್ನು ಕಾಣಿಸಿದ್ದಾರಲ್ಲದೆ ಪ್ರಬಲವಾದ ಇಲ್ಲವೆ ನವೀನವಾದ ಆಧಾರಗಳನ್ನು ಕಾಣಿಸಿಲ್ಲ. ಮುನ್ನುಡಿಯಲ್ಲಿ ಶ್ರೀಮಾನ್ ಶ್ರೀಕಂಠಯ್ಯನವರು ಈ ವಿಷಯವಾಗಿ ಹೇಳಿದ ಒಂದು ಮಾತನ್ನೂ ನಾವು ಆಕ್ಷೇಪಿಸುವಂತಿದೆ. 'ಸಂಸ್ಕೃತ ನಾಟಕ ರಾಜಾಸ್ಥಾನಗಳಲ್ಲಿ, ವ್ಯವಹಾರದಲ್ಲಿ ಬಿಟ್ಟು ಹೋಗಿದ್ದ ಭಾಷೆಯಲ್ಲಿ (ಮುಖ್ಯವಾಗಿ), ಆಡುವ ಭಾಷೆಯನ್ನು ಬಿಟ್ಟು ಕಲಿತ ಭಾಷೆಯಲ್ಲಿ ಬರೆದ ಕವಿಗಳಿಂದ, ಅಲ್ಲೊಂದು ಇಲ್ಲೊಂದು ಸ್ಥಾನಾಂತರ ಕಾಲಾಂತರಗಳಲ್ಲಿ ಉತ್ಪನ್ನವಾದದ್ದು, ಅಲ್ಲೊಮ್ಮೆ ಇಲ್ಲೊಮ್ಮೆ ಪ್ರದರ್ಶನವಾದದ್ದು. ಗ್ರೀಕ್ ಇಂಗ್ಲಿಷ್ ನಾಟಕಗಳಂತೆ ಇದು ಸಾರ್ವಜನಿಕ ನಾಟಕಶಾಲೆಯಲ್ಲಿ, ಜನಾಂಗಸಂಪರ್ಕದಲ್ಲಿ ಬೆಳೆದ ಹಾಗೆ ಕಾಣುವುದಿಲ್ಲ.' (ಪು. VIII) ಈ ವಾಕ್ಯದಲ್ಲಿಯ ಪ್ರತಿಯೊಂದು ಮಾತಿಗೂ ಚರ್ಚೆ ಹೂಡಬಹುದು (೧) ನಾಟಕವು ಸಾಮಾನ್ಯ ಜನರ ವೇದ, (೨) ನಾಟಕವನ್ನಾಡುವುದು ಯಾತ್ರೆ-ಉತ್ಸವಗಳ ಕಾಲದಲ್ಲಿ, (೩) ಪಾತ್ರ-ದೇಶಗಳಿಗನುಗುಣವಾದ ಭಾಷೆ—ಎಂದು ನಾಟ್ಯಶಾಸ್ತ್ರದಲ್ಲಿ ಹೇಳಿದೆ. ಗ್ರೀಕ್ ಇಲ್ಲವೆ ಶೇಕ್ಸಪಿಯರನ ನಾಟಕಗಳ ಉದಾತ್ತ ಪಾತ್ರಗಳ ಗದ್ಯ-ಪದ್ಯವು ಆಡುವ ಭಾಷೆಯೆ ? ಕಲಿತ ಭಾಷೆಯೆ ? ಆಡುವಾಗ ರೂಪಾಂತರ ಹೊಂದಿದ ಸಂಸ್ಕೃತವೆ ಪ್ರಾಕೃತ ಭಾಷೆಯಾಯಿತು. ಹೀಗಿರುವಾಗ ಕ್ಷೀಣಕಾಲದ ಅವಸ್ಥೆಗಳನ್ನು ಪ್ರಾಚೀನ ಕಾಲದಿಂದಲೂ ಸಂಸ್ಕೃತನಾಟಕದ ಮೇಲೆ ಹೊರಿಸಬಹುದೆ? ಇದಲ್ಲದೆ, ಇಂತಹ ಸಿದ್ಧಾಂತಕ್ಕಿಳಿಯಲು ಅಧಿಕಾರವನ್ನು ಕೊಡುವಷ್ಟು ಆಧಾರಗಳೇ ಇನ್ನೂ ದೊರೆತಿಲ್ಲ.

ಗ್ರಂಥದ ಎರಡನೆಯ ಭಾಗಕ್ಕೆ 'ಉಚ್ಛ್ರಾಯ ಕಾಲ' ಎಂದು ಹೆಸರಿಟ್ಟು ಅಶ್ವಘೋಷ, ಭಾಸ, ಶೂದ್ರಕ, ಕಾಳಿದಾಸ ಮತ್ತು ವಿಶಾಖದತ್ತ ಇವರ ವಿಮರ್ಶೆ ಇದೆ. 'ಸಂಸ್ಕೃತ ನಾಟಕ' ಎಂಬ ವಿಶಾಲ ದೃಷ್ಟಿಯಿಂದ ಬರೆದ ಈ ಗ್ರಂಥದಲ್ಲಿ ನಾಟಕದ ಕಥಾವಸ್ತುವಿನ ಸಾರಾಂಶವನ್ನು ಇನ್ನಿಷ್ಟು ಕಡಿಮೆ ಮಾಡಿ ಕಲೆಯ ವಿಮರ್ಶೆಯನ್ನು ಅಷ್ಟರ ಮಟ್ಟಿಗೆ ಹೆಚ್ಚಿಸಿದರೆ ಒಳಿತಾಗುತ್ತಿತ್ತು ಎಂದು ನಮ್ಮ ಅಭಿಪ್ರಾಯ. ಈಗಿದ್ದುದರಲ್ಲಾದರೂ ಪಾತ್ರನಿರೂಪಣೆ—ರಚನೆ—ಶೈಲಿ ಮೊದಲಾದುವುಗಳ ವಿಮರ್ಶೆ ಸಮರ್ಪಕವಾಗಿಯೂ ಸಾಕಷ್ಟೆನಿಸುವಂತೆಯೂ ಇದೆ ಎಂದು ಹೇಳಬಹುದು. (ಅಲ್ಲಲ್ಲಿ ಕಾಣಿಸಿದ ಕೆಲವು ಸಂಸ್ಕೃತ ಶ್ಲೋಕಗಳ ಕನ್ನಡ ಭಾಷಾಂತರವನ್ನು ಕೊಟ್ಟಿದ್ದರೆ ವಾಚಕರಿಗೆ ಇನ್ನೂ ಅನುಕೂಲವೆನಿಸಬಹುದಾಗಿತ್ತು. ಉದಾ: ಪು. ೫೭,೯೩,೧೩೧,೧೩೨, ೧೯೧.). ಮೂರನೆಯ ಭಾಗವು ಮಧ್ಯಕಾಲ. ಇದರಲ್ಲಿ ಹರ್ಷವರ್ಧನ, ಭವಭೂತಿ, ಭಟ್ಟನಾರಾಯಣ, ರಾಜಶೇಖರ, ಕ್ಷೇಮೀಶ್ವರ ಮತ್ತು ಕೃಷ್ಣಮಿಶ್ರ (ಕೊನೆಯ ಮೂವರನ್ನು 'ಕ್ಷೀಣಕಾಲ'ದಲ್ಲಿರಿಸಿದರೆ ಅನ್ಯಾಯವಾದೀತೆ?) ಎಂಬವರ ನಾಟ್ಯಕಲಾವಿಮರ್ಶೆ ಇದೆ. ಕೊನೆಯ ಭಾಗದಲ್ಲಿ ಇತ್ತೀಚಿನ ರೂಪಕಗಳ ಸಂಕ್ಷಿಪ್ತ ವಿವರಣೆ ಇದೆ.

ಇಡಿಯ ಸಂಸ್ಕೃತನಾಟಕದ ಇತಿಹಾಸವನ್ನು ಇಷ್ಟು ಸಮಗ್ರವಾಗಿ ಮತ್ತು ಸಂಗ್ರಹವಾಗಿ ಕಾಣಿಸಿದ್ದೊಂದೇ ಕಾರಣಕ್ಕಾಗಿ ಗ್ರಂಥವು ಇಂದಿನ ಕನ್ನಡ ವಾಙ್ಮಯದಲ್ಲಿ ಮಹತ್ತ್ವದ ಸ್ಥಾನವನ್ನು ಪಡೆಯುವಂತಿದೆ. 'ಪ್ರಮಾಣ ಲೇಖನಾವಳಿ' (ಪ್ರತಿಯೊಂದು ವಿಷಯದ ಕೊನೆಗೊಂದಿದೆ) ಮತ್ತು ಸಂಸ್ಕೃತ ರೂಪಕಗಳ ಅಕಾರಾದಿ ಪಟ್ಟಿ (ಕೊನೆಗೆ) ಇವೆರಡರಿಂದ ಗ್ರಂಥದ ಮಹತ್ತ್ವವು ಮತ್ತಿಷ್ಟು ಹೆಚ್ಚಿದೆ. ಇದರಂತೆಯೆ ಅಶ್ವಘೋಷನ ನಾಟಕದ 'ತುಂಡು'ಗಳನ್ನೂ ಹನುಮನ್ನಾಟಕದ ಮಾದರಿಯ ಅಂಕವನ್ನೂ ಕಾಣಿಸಿದ್ದು ಅತ್ಯಂತ ಶ್ಲಾಘನೀಯವಾಗಿದೆ.

ಕನ್ನಡ ಸಾಹಿತ್ಯದ ಬೆಳವಣಿಗೆಗೆ ಸಂಸ್ಕೃತದ ಪ್ರಭಾವವು ಬಹುಮಟ್ಟಿಗೆ ಸಾಧಕವಾಗಿದೆ. ಹೀಗಿರುವಾಗ ಆ ಸಂಸ್ಕೃತಸಾಹಿತ್ಯದ ಪರಿಚಯವನ್ನು ಇಷ್ಟು ಸಮರ್ಪಕವಾಗಿ, ಸಂಗ್ರಹವಾಗಿ, ಸರಸವಾಗಿ ಮಾಡಿಕೊಡುವ ಗ್ರಂಥವನ್ನು ಬರೆದುದಕ್ಕಾಗಿ ಕನ್ನಡ ವಿದ್ವಾಂಸರೂ ವಿದ್ಯಾರ್ಥಿಗಳೂ ಅತ್ಯಂತ ಕೃತಜ್ಞರಾಗಿದ್ದಾರೆ.

**सर्वलक्षण संग्रहः ( ಸರ್ವಲಕ್ಷಣಸಂಗ್ರಹ ):—** ೧೬೦ ಪುಟಗಳ ಚಿಕ್ಕ ಹೊತ್ತಿಗೆ. ಬೆಲೆ ನಾಲ್ಕಾಣೆ. ಸಂಗ್ರಾಹಕರು: ಭಿಕ್ಷು ಗೌರೀಶಂಕರರು. ಸಿಗುವಸ್ಥಳ:- ಮನಭರೀದೇವಿ, ಮುತ್ತೀ ಗ್ರಾಮ, ಪೋ: ಬನಾಸಿಟೇಡ, ಹಿಸ್ಸಾರ.

ಇದೊಂದು ಸಂಸ್ಕೃತದಲ್ಲಿ ಬರೆದ ಚಿಕ್ಕ ಹೊತ್ತಿಗೆ. 'ಯೇ ಜನಾ ನಾನಾಶಾಸ್ತ್ರನಿರೀಕ್ಷಣೇ ಶ್ರಮಭೀಯಃ ತದರ್ಥೋಽಯಂ ಮೇ ಸಂಗ್ರಹಃ, ಅನೇಕ ಶಾಸ್ತ್ರಗಳನ್ನು ಓದಲು ಹೆದರುವ ವಿದ್ಯಾಭಿಲಾಷಿಗಳಿಗಾಗಿ ಇದನ್ನು ಬರೆದದ್ದು' ಎಂದು ಭೂಮಿಕೆಯಲ್ಲಿ ಹೇಳಿವೆ. ಹೆದರುವ ಕಾರಣ

CC-0. Jangamwadi Math Collection. Digitized by eGangotri

ವೇನು ? ಆಯಾ ಶಾಸ್ತ್ರಗಳ ಪರಿಭಾಷೆಯ ಪರಿಚಯವಿಲ್ಲದಿರುವುದಕ್ಕಾಗಿ. ಒಂದೇ ಶಬ್ದಕ್ಕೆ ರೂಢಿಯಲ್ಲಿ ಒಂದು, ಶಾಸ್ತ್ರದ ಪರಿಭಾಷೆಯಲ್ಲಿ ಇನ್ನೊಂದು ಅರ್ಥವಿರಬಹುದು. ಈ ಚಿಕ್ಕ ಹೊತ್ತಿಗೆಯಲ್ಲಿ ಸುಮಾರು ೩೦೦೦ ಶಬ್ದಗಳ ಅರ್ಥ - ವ್ಯಾಖ್ಯೆಗಳಿವೆ. ಕೆಲವೆಡೆ ಉದಾಹರಣೆಗಳನ್ನು ಕೊಟ್ಟು ಅರ್ಥವನ್ನು ಸ್ಪಷ್ಟಮಾಡಿದ್ದಾರೆ. ಕೆಲವೆಡೆ ಮಾತ್ರ ತೀರ ಅರ್ವಾಚೀನ ಅರ್ಥವನ್ನು ಕೊಟ್ಟಂತಿದೆ. ಎಷ್ಟೋ ಸಲ ಕಾಲಾನುಸಾರ ಶಬ್ದದ ಅರ್ಥ ಬದಲಾಗುವುದು. ಇಂತಹ ಶಬ್ದಗಳಿಗೆ ಕಾಲಕಾಲಕ್ಕಿದ್ದ ಬೇರೆ ಬೇರೆ ಅರ್ಥಗಳನ್ನು ಕೊಡುವುದುಚಿತವೆಂದು ನಮಗೆ ತೋರುತ್ತದೆ.

ಉದಾ: ೧) ಪು. ೪೬. ಕರುಣಾ = ಪರದುಃಖಪ್ರಹರೇಚ್ಛಾ. ಆದರೆ ಆ ಇಚ್ಛೆಗಿಂತ ಮೊದಲು, ಆ ಇಚ್ಛೆಗೆ ಕಾರಣವೆನಿಸುವ ಹೃದಯಭಾವನೆಗೆ ' ಕರುಣೆ ' ಎನಬಹುದಲ್ಲವೆ ?

೨) ಪು. ೭೬. ನ್ಯಾಯಶಾಸ್ತ್ರಂ = ಪದಾರ್ಥಾನಾಂ ಸರ್ವೇಷಾಮನುಗಮರೂಪೇಣ ಪ್ರಕಾಶಕೋ ಗ್ರಂಥಃ

೩) ಪು. ೧೨೮. ವೇದಾಂತಃ = ವೇದಾನಾಮಂತೋಽವಸಾನಭಾಗಃ.

ಇವೆರಡರಲ್ಲೂ ಸ್ಪಷ್ಟ ಕಲ್ಪನೆಯಾಗುವಂತಿಲ್ಲ. ನ್ಯಾಯಶಾಸ್ತ್ರವೆಂದರೆ ಇಂತಹದೊಂದು ಗ್ರಂಥ ಎಂದೂ ವೇದಾಂತ ಎಂದರೆ ವೇದದ ಆಳಿಗಾಲ ಎಂದೂ ಸಾಮಾನ್ಯವಾಚಕನ ಕಲ್ಪನೆಯಾಗಬಹುದು.

ಅಥವಾ ಸಂಸ್ಕೃತಭಾಷೆಯಲ್ಲಿದ್ದ ಗ್ರಂಥಗಳನ್ನು ಓದುವವರಿಗಾಗಿಯೆ ಇದನ್ನು ಬರೆದಿದೆ ಎಂದು ತಿಳಿಯಬೇಕೆ ? ಹಾಗಿಲ್ಲದಿದ್ದರೆ ಇದನ್ನು ದೇಶೀಯ ಭಾಷೆಯೊಂದರಲ್ಲಿ ಬರೆದಿದ್ದರೆ ಗ್ರಂಥಕರ್ತರಿಗೆ ನಾವು ಇನ್ನಿಷ್ಟು ಉಪಕೃತರಾಗುತ್ತಿದ್ದೆವು. ಇದ್ದಂತೆಯೆ ಕೂಡ ಪ್ರತಿಯೊಬ್ಬ ವಿದ್ಯಾರ್ಥಿಗೆ ಈ ಚಿಕ್ಕ ಹೊತ್ತಿಗೆಯು ಅತ್ಯಂತ ಆವಶ್ಯಕ ಮತ್ತು ಸಹಕಾರಿಯಾಗಿದೆ ಎಂದು ಹೇಳಬಹುದು.

--ಆರ್. ವ್ಹಿ. ಜಾಗಿರದಾರ

**ರಂಗವಲ್ಲಿ** (೧೪ ಚಿಕ್ಕಕತೆಗಳ ಸಂಗ್ರಹ) ಪ್ರಕಾಶಕರು— ಮನೋಹರ ಗ್ರಂಥಭಾಂಡಾರ, ಧಾರವಾಡ. ಬರೆದವರು— ವಿವಿಧನ್ನಡ ಕತೆಗಾತಿಯರು. 'ಶ್ರೀನಿವಾಸ'ರ ಮುನ್ನುಡಿಯೊಂದಿಗೆ— ಕ್ರಾ. ಅ. ೧೬೨+೧೪ ಪುಟಗಳು. ಬೆಲೆ—೧ ರೂಪಾಯಿ.

" ಪೂರ್ವದೇಶದ ಹೆಂಗಳೆಯರ ಮೊಗದ ಮುಸುಕು ಒರೆಯಾಗುವವರೆಗೆ ಅಲ್ಲಿ ಸಾಮಾಜಿಕ ಸುಖಾಂತ ನಾಟಕಗಳು (Comedies) ಹುಟ್ಟಲಾರವು " ಎಂದು ಮೆರಿಡಿಥ್‌ನು ವಿಧಾನಿಸಿರುವುದುಂಟು. (Essay on Comedy.) ಸಾಹಿತ್ಯದ ಎಲ್ಲ ಅಂಗಗಳಿಗೂ ಎಲ್ಲ ವಾಙ್ಮಯಗಳಿಗೂ ಈ ಮಾತನ್ನು ಅನ್ವಯಿಸಬಹುದಾಗಿತ್ತು. ಮೆರಿಡಿಥ್‌ನು ಈ ಮಾತನ್ನು ಹೇಳಿದ ಕಾಲದಿಂದ ಇಂದಿನ ವರೆಗೆ ಕಾಲಗತಿಯೊಡನೆ ಸಮಾಜದ ಸಾಂಸ್ಕೃತಿಕ ಗತಿಯೂ ಮುಂದುವರಿದಿದೆ. ಅಂತೆಯೆ ಹೆಂಗುಸಿನ ಅಡುಗೆಮನೆಯ ಅನುಭವವು ಬೈಲು ಜಗತ್ತಿನ ಹಗಲು ದೀಪದ ಬೆಳಕಿನಲ್ಲಿ ಪ್ರಕಾಶಮಾನವಾಗತೊಡಗಿದೆ. ' ಲೋಕವೃತ್ತ 'ದ ಅನುಭವದ ಸವಿಯನ್ನು ಹೆಂಗುಸೂ ಉಣ್ಣಹತ್ತಿದ್ದಾಳೆ. ಅಂತೆಯೆ ಆ ಉತ್ಕಟ ಅನುಭವವು ಅವರ ' ಸರಳಹೃದಯ ' ದಿಂದ ಹೊರಟು ವಾಙ್ಮಯದ್ವಾರಾ ಸಾಹಿತ್ಯದಲ್ಲಿ ಜನ್ಮವೆತ್ತುವ ಕಾಲ ಈಗ ಬಂದಿದೆ. 'ಸರಸ್ವತಿಯ ಭದ್ರಗೇಹದ ಕೈಸಾಲೆ' ಯಲ್ಲಿ ಹಚ್ಚಿರುವ ಈ **ರಂಗವಲ್ಲಿ** ಇದಕ್ಕೊಂದು ತಕ್ಕ ದೃಷ್ಟಾಂತ.

ಪ್ರಪಂಚದಲ್ಲಿ ಹೆಂಗುಸಿನ ಅನುಭವಕ್ಕೆ ಬರುವ ಸಂಗತಿಗಳೇ ಬೇರೆ, ಗಂಡುಸಿನ ಅನುಭವಕ್ಕೆ ಬರುವ ಸಂಗತಿಗಳೇ ಬೇರೆ—ಕೆಲಮಟ್ಟಿಗಾದರೂ. ಹೆಂಗುಸಿನ ಅನುಭವವನ್ನು ಗಂಡುಸು ಹೇಳಲೆತ್ನಿಸುವುದರಲ್ಲಾಗಲಿ ಗಂಡುಸಿನ ಅನುಭವವನ್ನು ಹೆಂಗುಸು ಹೇಳಬಯಸುವುದರಲ್ಲಾಗಲಿ ಅನುಭವದ ಆಭಾಸವು ಸ್ವಲ್ಪಾದರೂ ಉಳಿಯದೆ ಇರಲಾರದು. ತನ್ನ ಅನುಭವವನ್ನು ಗಂಡುಸು ತಾನೇ ಮಾರ್ಮಿಕವಾಗಿ ಹೇಳುವ ಹಾಗೆಯೆ " ಹೆಣ್ಣಿನ ಬಾಳನ್ನು ಕುರಿತು ಉಳಿದೆಲ್ಲ ವಿಷಯಗಳಲ್ಲಿಯೂ ಹೆಣ್ಣಿನ ಅನುಭವದಿಂದ ಮಾತ್ರ ಹೇಳಬಹುದಾದ ಅಭಿಪ್ರಾಯವಿರುತ್ತದೆ." ಆದುದರಿಂದಲೇ ಕಥಾಪ್ರಪಂಚದಲ್ಲಿ ಹಿರಿಯರಾದ 'ಶ್ರೀನಿವಾಸರು' " ಈ ಕಾರಣದಿಂದ ನಾನು ನಮ್ಮ ಸೋದರಿಯರು ಬರೆದಿರುವ ಈ ಕತೆಗಳಿಗೆ ಸಾಹಿತ್ಯದಲ್ಲಿ ಬಹು ಮುಖ್ಯವಾದ ಒಂದು ಸ್ಥಾನವನ್ನು ಕೊಡುತ್ತೇನೆ". ಎಂದು ಉಸಿರಿರುವ ಅಧಿಕೃತ ವಾಣಿಯು ಯಥಾಯೋಗ್ಯವೇ ಆಗಿದೆ.

ಸೂಳೆಯರಿಗೂ ಸೌಭಾಗ್ಯವತಿಯರಿಗೂ ಒಂದು ಸೀಮಾರೇಷೆಯಿದೆಯೆಂದು ತಿಳಿದರೂ ಹೆಂಗುಸಿನ ಅಂತರಂಗ ಪ್ರೇಮವೂ, ಅಂತಃಕರಣ ಹೃದಯವೂ ಒಂದೇಯಾಗಿದೆ ಯೆಂಬ ಮಾತನ್ನು 'ಮನುವಿನ ರಾಣಿ'ಯಲ್ಲಿ ಶ್ರೀಮತಿ ಬಿ. ಟಿ. ಜಿ. ಕೃಷ್ಣ ಅವರು ವಿಶದವಾಗಿ ವರ್ಣಿಸಿ ತಮ್ಮ

CC-0. Jangamwadi Math Collection. Digitized by eGangotri

ಅನುಭವ ವಿಸ್ತಾರವನ್ನು ತೋರಿಸಿದ್ದರೆ, 'ಸ್ನೇಹದರ್ಶನ' ದಲ್ಲಿ ಶ್ರೀಮತಿ ಶ್ಯಾಮಲೆಯವರು ಪ್ರೇಮವು ವಿಕ್ರಯ ವಸ್ತುವಲ್ಲವೆಂಬುದನ್ನೂ ರೊಕ್ಕಕ್ಕಾಗಿ ಮಕ್ಕಳ ಹೃದಯ ವನ್ನೇ ಮಾರಲೀಯುವ ಮೂಢ ಆಚಾರವನ್ನೂ ಅನ್ಯೋನ್ಯ ಪ್ರೀತಿಯಿಲ್ಲದ ದಾಂಪತ್ಯದ ಇಜ್ಜೋಡಿನ ವೈಷಮ್ಯವನ್ನೂ ಮನಸ್ಸಿನ ಮಾತಿನ ಮಾತುಗಾರಿಕೆಯಿಂದ ಮತ್ತಷ್ಟು ಸಹಜತೆ ಬರುವಂತೆ ನಿರೂಪಿಸಿದ್ದಾರೆ. ಇವರ ಕಥಾನಕದಲ್ಲಿ ಅಲ್ಲಲ್ಲಿ ತುಸು ಆಭಾಸವೆನಿಸುವಂತಿದ್ದರೂ ಸಾಮಾಜಿಕ ಸಂಪ್ರದಾಯದ ಮುಂದಿನ ಘೋರಣೆಯನ್ನು ಮುಂದಾಗಿ ವಿಚಾರಿಸಿ ಸಮಾಜವನ್ನು ಮೊದಲೇ ಎಚ್ಚರಿಸುವ ಒಂದು ವಿಡಂಬನಾತ್ಮಕ ರೀತಿಯಿರುವುದರಿಂದ ಆ ಆಭಾಸವು ಯುಕ್ತವೆನಿಸಬಹುದಾದ ಅತ್ಯುಕ್ತಿಯೊಡನೆ ಬೆರೆತಿದೆ. ಸಖಿಗಾಗಿ ಮಾಡಿದ ತ್ಯಾಗದಿಂದ ತನ್ನ 'ಜೀವನ ಪರೀಕ್ಷೆಯಲ್ಲಿ ಪ್ಯಾಸಾ'ದ ಸರಳೆಯ ಸರಳ ಹೃದಯವನ್ನು ಅಂತರಂಗ ಸ್ಪರ್ಶಿಯಾಗುವಂತೆ ಶ್ರೀ. ಜಯಲಕ್ಷ್ಮಿಯವರು ಸಾಮಾನ್ಯ ರೀತಿಯಲ್ಲಿ ನಿರೂಪಿಸಿದ್ದರೆ, ತಂಗಿಗೆ ಮೂರು ಪೌನಿನ ಬಂಗಾರದ ಬಳೆಯನ್ನು (?) ತ್ಯಾಗಮಾಡಲಾರದಂತಹ ಸ್ವಾರ್ಥವನ್ನು ಗಂಡನಿಂದ ನೋಸಬಿದ್ದ ಕಮಲೆಯ ಪಾತ್ರ ದಲ್ಲಿ ಕಥಾಚಾತುರ್ಯದೊಂದಿಗೆ. ಪಡಿಮೂಡಿಸಿದ್ದಾರೆ. ಶ್ರೀ. ರತ್ನ ಅವರು. ವಿಧವಾಜೀವನದ ಬಗೆಬಗೆಯ ನಿರಾಶೆಗಳನ್ನು ಬಗೆಬಗೆಯ ಬಣ್ಣದಲ್ಲಿ 'ಅದೇ ಇನ್ನೊಮ್ಮೆ ಯಾಗಲಿ' ಎಂಬಲ್ಲಿ ಶ್ರೀ. ಸುಮಿತ್ರಮ್ಮನವರು ಮನೋವ್ಯಾಪಾರವನ್ನು ಸೂಕ್ಷ್ಮವಾಗಿ ವಿಂಗಡಿಸಿಯೂ, 'ಸುಖವೊ ದುಃಖವೊ' ಎಂಬಲ್ಲಿ ಶ್ರೀ. ಲೀಲಾ ಅವರು ಕಮಲೆಯ ಹೃದಯಕಾಠಿಣ್ಯದೊಂದಿಗೆಯೂ, 'ಒಂದು ಘಟನೆ' ಎಂಬಲ್ಲಿ ಶ್ರೀ.''ಮಾಲಕ್ಷ್ಮಿ'' ಯವರು 'ಟ್ರಾನ್ಸಫರ ಸೀನರಿ' ಯಂತೆ 'ಅದ್ಭುತರಸ್ಯ.' ವಾಗಿಯೂ ಚಿತ್ರವಿಚಿತ್ರವಾಗಿ ವರ್ಣಿಸಿದ್ದಾರೆ. ಮನೋವ್ಯಾಪಾರ (Psychology) ವನ್ನು ಸೂಕ್ಷ್ಮವಾಗಿ, ಮನಹಿಡಿಯುವಂತಾಗಿ ಜೀವನದ ಹುಚ್ಚುತನದ ಮರ್ಮವನ್ನು ಮಾರ್ಮಿಕವಾಗಿ ಕು. ಪದ್ಮಾವತಿ ಯವರು 'ಹುಚ್ಚು'' ಎಂಬ ಕಥೆಯಲ್ಲಿ ಪ್ರತಿರೂಪಿಸಿದ್ದಾರೆ, ಅದೇ ಮನೋವ್ಯಾಪಾರವನ್ನು ಸ್ವಾಭಾವಿಕತೆಯು ತುಸು ಸಡಿಲುವಂತೆ ಶ್ರೀ. ಪಡುಕೋಣ ವಾಸಂತಿಬಾಯಿ ಯವರು 'ಮೋಹಿನಿ'ಯಲ್ಲಿ ಮೂಡಿಸಿದ್ದಾರೆ. 'ಕಳಕೊಂಡ ರತ್ನ'ದ ವಸ್ತು — ಸನ್ನಿವೇಶಗಳು ಸಿನೆಮಾ ಸೃಷ್ಟಿಗೆ ಸಂಬಂಧಪಟ್ಟುವಾಗಿದ್ದರೂ ಇನ್ನಷ್ಟು ಸೂಚ್ಯವಾಗಿದ್ದರೆ ತಕ್ಕಮಟ್ಟಿಗೆ ಸಣ್ಣ ಕತೆಯ ಸೂತ್ರಕ್ಕೆ ಹೊಂದುಗೂಡುತ್ತಿತ್ತು. 'ರಹಸ್ಯಭೇದ'ವು ಸಣ್ಣ ಕತೆಯ ರಹಸ್ಯವನ್ನೂ ಬೋಧಿಸಿದಂತಾಗಿದೆ. 'ಆನಂದಾ ಸೀರೆ'ಯಲ್ಲಿ ಲಂಚಗುಳಿತನದ ತ್ಯಾಗವನ್ನು ಬೋಧಿಸಲೆತ್ನಿಸುವುದರಲ್ಲಿ ಬೋಧೆಗಾಗಿ ಕತೆಯ ಬಿಸುಪನ್ನೆ ಮಾರುಗೊಟ್ಟಂತಾಗಿದೆ. 'ಅವನ ಬಾಳ'ನಲ್ಲಿ ಶ್ರೀ. ಪದ್ಮಾವತಿಯವರು 'ದೂರದೇಶದಲ್ಲಿರುತ್ತಾ ನಾಡನ್ನು ನೆನೆಯುವ ದೇಶಪ್ರೇಮ'ವನ್ನು ಸರಸವಾದ ಶೈಲಿಯಲ್ಲಿ ಅರಳಿಸಿದ್ದಾರೆ. ಶ್ರೀ. ಸುಭದ್ರ ಅವರ 'ಕೋಸ್ತನ ಹಚ್ಚೆ'ಯು ಅನುವಾದವಾಗಿದ್ದರೂ ಆತ್ಮೀಯವಾಗುವಂತೆ ರಂಜಕವಾಗಿ ಕೇವಲ ಭಾಷಾಂತರವೆನಿಸದಂತೆ ರುಚಿಕಟ್ಟಾಗಿ ಬರೆದುದಾಗಿದೆ.

ಪ್ರತಿಯೊಂದು ಕಥೆಯ ಪ್ರಾರಂಭದಲ್ಲಿ ಕತೆಯ ಸಾರವನ್ನೂ ಕತೆಗಾತಿಯ ಪರಿಚಯವನ್ನೂ ಕೊಟ್ಟಿದ್ದಾರೆ. ಆದರೆ ಕತೆಯ ಸಾರವು ಕೆಲನೆಡೆಗಂತೂ ಸೂತ್ರಗಳ ರೂಪ ಕ್ಕಿಳಿದು ತಲೆತುರಿಸಿಕೊಂಡರೂ ಕತೆಯ ರೂಪರೇಷೆ ತಿಳಿಯುವಂತಾಗಿಲ್ಲ. ಹಾಗೆಯೆ ಕತೆಗಾತಿಯರ ಪರಿಚಯದೊಡನೆ ಅವರವರ ಕತೆಯ ವಿಮರ್ಶೆಯನ್ನೂ ಮಾಡಿದ್ದಾರೆ. ಹೀಗೆ ಮಾಡುವಲ್ಲಿ ಅನೇಕ ಕತೆಗಾತಿಯರ ಕತೆಗಳ ಕಟುವಿಮರ್ಶೆಯೂ ಆಗಿದೆ. ಒಂದೆರಡು ಕಡೆಗಂತೂ ಪ್ರಸ್ತುತ ಕತೆಯು ನಿರ್ದುಷ್ಟವೆನಿಸಿದ್ದರೂ ಸಲ್ಲದೆ ಅದನ್ನು ಖಂಡಿಸಿರುವಂತೆ ಕಾಣುತ್ತದೆ. ಅಂತೂ ಕನ್ನಡ ಸಾಹಿತ್ಯದಲ್ಲಿ ಇದೊಂದು ಹೊಸ ರೀತಿಯ ಪರಿಚಯ!

ಒಟ್ಟಾರೆ ಎಲ್ಲ ಕತೆಗಳೂ ಒಂದಿಲ್ಲೊಂದು ರೀತಿಯಿಂದ ರಂಜಕವಾಗಿರುವವಲ್ಲದೆ, ಸರಳ ಮನಸ್ಸಿನಿಂದ ಹೊರಹೊಮ್ಮಿದುದರಿಂದ ಸರಳವಾಗಿ ಅಂತಃಕರಣಕ್ಕೆ ತಾಗುವಂತಹವಾಗಿವೆ. 'ಹೇಳುವ ವಿಷಯವನ್ನು ಸಹಜವಾಗಿ ಹಾಗೆಯೇ ಚೆನ್ನಾಗಿ ಹೇಳುವುದು ಸಾಹಿತ್ಯದ ರಾಜಮಾರ್ಗ....ಈ ಪುಸ್ತಕದ ಕತೆಗಾತಿ ಸಹೋದರಿಯರು ಎಲ್ಲರೂ ಈ ರಾಜಮಾರ್ಗದಲ್ಲಿ ನಡೆದಿದ್ದಾರೆ.' ಎಂಬ ಮಾತಿನ ಮನವರಿಕೆಯು ಈ ಸಂಗ್ರಹದ ಕತೆಗಾತಿಯರ ಕಥಾನಕಗಳನ್ನೋದಿದವರಿಗೆಲ್ಲ ಉಂಟಾಗುತ್ತದೆಂಬ ಭರವಸೆಯೂ ಧೈರ್ಯವೂ ನಮಗಿದೆ. ಈ ಕತೆಗಳೆಲ್ಲವೂ ಜೀವನದ 'ಸತ್ಯವನ್ನು ಸುಂದರವಾಗಿ'ಯೆ ಹೇಳುವುದರಿಂದ 'ರಸವಾಗಬೇಕೆಂದು ಹೊರಟ ದ್ರಾಕ್ಷೆ ಆಹಾರವೂ ಆಗುವಂತೆ' ಆಹ್ಲಾದಗೊಳಿಸಬೇಕೆಂದು ಹೊರಟ ಈ ಕಥೆಗಳು ಆಚಾರವನ್ನೂ ಬೋಧಿಸುತ್ತವೆಯೆಂಬಲ್ಲಿ ಸಂದೇಹವಿಲ್ಲವೆಂದೇ ಹೇಳಬೇಕು.

—ನಾ. ಕು



CC-0. Jangamwadi Math Collection. Digitized by eGangotri

**ಕಾಡುಮಲ್ಲಿಗೆ** (ಕಥಾಸಂಗ್ರಹ): ಬರೆದವರು ಶ್ರೀಮಾನ್ ಸಿ. ಕೆ. ನಾಗರಾಜರಾವ್. ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ ಎಂ. ಎ. ಎಲ್‌ಎಲ್. ಬಿ. ಇವರ ಮುನ್ನುಡಿಯೊಡನೆ. ಕ್ರಾ. ಅ. ೬೨+೬ ಪುಟಗಳು. ಬೆಲೆ: ಎಂಟಾಣೆ. ಸಿಕ್ಕುವ ಸ್ಥಳ— ಸತ್ಯ ಶೋಧನ ಪುಸ್ತಕ ಭಾಂಡಾರ, ಕೋಟೆ, ಬೆಂಗಳೂರು ನಗರ.

ಕನ್ನಡದ ಕಥಾಸಾಹಿತ್ಯವು ಭರದಿಂದ ಬೆಳೆಯತೊಡಗಿದೆ. ಅನೇಕ ಯುವಕರು ಈ ಕ್ಷೇತ್ರದಲ್ಲಿ ಹೆಜ್ಜೆಯಿಕ್ಕುತ್ತಿರುವರು. ಅವರಲ್ಲಿ ಸಿ. ಕೆ. ನಾಗರಾಜರಾವ್ ಅವರೂ ಒಬ್ಬರು. ಇವರ ಕತೆಗಳು ಈಗಾಗಲೆ ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿ ಜನತೆಯ ಮೆಚ್ಚುಗೆಯನ್ನು ಪಡೆದಿವೆ. ಈ ಸಂಗ್ರಹದಲ್ಲಿ ಕಾಡುಮಲ್ಲಿಗೆ, ಇನ್ನೆಲ್ಲಿಯ ರಿಪೇರಿ !, ಬಿಡಿಹೂ, ಅಂದಿನಿಂದ, ಕಾರಣಕರ್ತರಾರು ? ಎಂಬ ಐದು ಚಿಕ್ಕ ಕತೆಗಳಿವೆ.

"ನಮ್ಮ ಸಮಾಜವನ್ನೇ ಪರಿಶೀಲಿಸಿ ಅದರಿಂದಲೇ ಸನ್ನಿವೇಶಗಳನ್ನು — ಊಹೆಯಿಂದ ಕಲ್ಪಿಸಿಕೊಳ್ಳದೆ ಸಮಾಜದಲ್ಲಿ ನಿಜವಾಗಿಯೂ ಇರುವ ಸನ್ನಿವೇಶಗಳನ್ನು— ಆರಿಸಿಕೊಂಡು ಅವುಗಳ ಆಧಾರದ ಮೇಲೆ ಕತೆಗಳನ್ನು ಬರೆದರೆ........ ನಿಜವಾದ ಸಾಹಿತ್ಯಸೇವೆಯಾದೀತೆಂದು" ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು ಮುನ್ನುಡಿಯಲ್ಲಿ ಹಾರೈಸಿದ್ದಾರೆ. ಅವರ ಹಾರೈಕೆಯು ಈ ಕತೆಗಳಲ್ಲಿ ಸಾರ್ಥಕವಾಗಿದೆ.

**ಕಾಡುಮಲ್ಲಿಗೆ** ಮತ್ತು **ಅಂದಿನಿಂದ** ಕತೆಗಳಲ್ಲಿನ ಭಾಗವತರ, ಗಡಿಯಾರದ ಶಾಸ್ತ್ರಿಗಳ, ಹೊಲೆಯನ, ಸಂಗೀತ ಕಲೋಪಾಸಕ ತರುಣನ ಪಾತ್ರಗಳು ಸಾಹಿತ್ಯ, ಸಂಗೀತ, ಕಲೆಗಳ ಆದರ್ಶವನ್ನು, ರಾತ್ರಿಯು ಹೊಳೆಯುವ ತಾರೆಗಳನ್ನು ನಮ್ಮೆದುರು ತಂದು ನಿಲ್ಲಿಸುವಂತೆ, ನಿಲ್ಲಿಸುತ್ತವೆ. ಭಾಗವತರು, ಗಡಿಯಾರದ ಶಾಸ್ತ್ರಿಗಳು 'ಅಲ್ಪವಿದ್ಯಾ ಮಹಾಗರ್ವಿ'ಗಳಲ್ಲ. 'ತುಂಬಿದ ಕೊಡ ತುಳುಕುವುದಿಲ್ಲ' ಎಂಬ ಗಾದೆಯ ಮಾತಿನ ಪ್ರತೀಕದಂತೆ ಅವರು ನಮ್ಮ ಮುಂದೆ ನಿಲ್ಲುತ್ತಾರೆ. ಗುಣಪೂಜಕರು ಅವರು.

'ಕಾಡುಮಲ್ಲಿಗೆ'ಯಲ್ಲಿನ ಭಾಗವತರು ಸಂಗೀತ ಕಲಾಭಿಜ್ಞರು. ಅವರ ಸಂಗೀತ ಎಂತಹವನನ್ನೂ ಮರುಳುಗೊಳಿಸುವಂತಹದು. ಶಂಕರಯ್ಯ ಹಾಲ್‌ನಲ್ಲಿ ಅವರ ಸಂಗೀತ ಕಛೇರಿಯು ನಡೆಯುತ್ತಿದ್ದಾಗ ಒಬ್ಬ ಹೊಲೆಯನು ಬಂದು ಕಿಟಕಿಯ ಬಳಿ ನಿಂತು ಆಲಿಸಿ ಮೈಮರೆಯುವನು. ಅವನನ್ನು ಪೋಲೀಸಿನವನು ಚೆನ್ನಾಗಿ ಥಳಿಸಿ ಇನ್ನಿಷ್ಟು ಮೈಮರೆಸುವನು. ಹೊಲೆಯನ ಚೀತ್ಕಾರವು ಭಾಗವತರನ್ನು ತನ್ನೆಡೆಗೆ ಸೆಳೆದುಕೊಳ್ಳುವುದು. ಹೊಲೆಯನಿಗೆ ತಮ್ಮ ಸಂಗೀತವನ್ನು ಕೇಳಿಸಿ ಅವನನ್ನು ತೃಪ್ತಿಪಡಿಸುವರು. ಹೊಲೆಯನ ಸಂಗೀತಪ್ರೇಮವು ಅವರನ್ನು ಸೆರೆ ಹಿಡಿಯುವುದು. ಇನ್ನೊಮ್ಮೆ ಅದೇ ಸ್ಥಾನದಲ್ಲಿ ಸಂಗೀತ ಕಛೇರಿಯನ್ನು ನಡೆಯಿಸುವಾಗ ಹೊಲೆಯನ ನೆನಹು ಬರುವುದು. ಅವನು ಬಾರದೆ ಇದ್ದುದನ್ನು ಕಂಡು ಮೊದಲೇ ವ್ಯಥೆಗೊಂಡ ಹೃದಯವು ಅವನು ತೀರಿದನೆಂಬ ಸುದ್ದಿಯನ್ನು ಆಲಿಸಿ ಉಕ್ಕಿಬರುವುದು. ಅಂದು ಸಂಗೀತ ಕಛೇರಿಯು ನಡೆಯುವುದಿಲ್ಲ. ಕತೆಯು ಓದುಗರನ್ನು ಕಣ್ಣೀರಿಡಿಸುವುದು.

ಸ್ವಲ್ಪ ಭಿನ್ನವಾದ ಸನ್ನಿವೇಶವು 'ಅಂದಿನಿಂದ' ಕತೆಯಲ್ಲಿ ಚಿತ್ರಿತವಾಗಿದೆ. ಗಡಿಯಾರದ ಶಾಸ್ತ್ರಿಗಳು ಹರಿಕಥಾನಿಪುಣರು, ಸಂಗೀತಕೋವಿದರು, ಕಲಾಪ್ರೇಮಿಗಳು. ಅವರು ತಮ್ಮ ಅನುಪಸ್ಥಿತಿಯಲ್ಲಿ ಒಬ್ಬ ತರುಣನು ಹರಿಕಥೆ ಹೇಳುವುದನ್ನು ಆ ಮೇಲೆ ಬಂದು ಕೇಳುವರು. ತರುಣನ ಕಥಾ ಹೇಳುವ ಪರಿಯು ಅವರನ್ನು ಅಲ್ಲಾಡಿಸುವುದು. ಆ ತರುಣ ಮಹಾನುಭಾವನ ಸಾನ್ನಿಧ್ಯಪಡೆಯಲು ಅವರು ಆಸೆ ಪಡುವರು. ಅದು ಸಾಧ್ಯವಾಗುವುದಿಲ್ಲ. ಅವನನ್ನು ಅರಸುವರು. ಅವನು ಸಿಕ್ಕುವುದಿಲ್ಲ. ಅವನು ತೆಗೆದ ಕಲಾಕೃತಿಯೊಂದು ಸಿಕ್ಕುವುದು. ಅದನ್ನೇ ಅವರು ಪ್ರತಿಲಿಪಿ ಮಾಡಿಸಿ ತಮ್ಮ ಬಳಿ ಇಟ್ಟುಕೊಳ್ಳುವರು. ಅವರು ತಮ್ಮ ಹರಿಕಥೆಯಾಗುವೆಡೆಗಳಲ್ಲೆಲ್ಲ ಈ ತರುಣನ ಉಪಕಥೆಯನ್ನು ಹೇಳುವರು. ಆ ಚಿತ್ರಕಾರನ 'ಅಂದಿನಿಂದ' ಚಿತ್ರವನ್ನು ನೋಡಿ ಕಂಬನಿಗರೆಯುವರು. ಕತೆಯು ಭಾವನಾತರಂಗದಲ್ಲಿ ತೇಲಿಸಿ ಹೃದಯವನ್ನು ಮುಟ್ಟುವುದು.

"**ಇನ್ನೆಲ್ಲಿಯ ರಿಪೇರಿ !**"ಯಲ್ಲಿ ನಿರುದ್ಯೋಗಿತನದ ಕರುಣಾಪೂರಿತವಾದ ದೃಶ್ಯವೊಂದು ಚಿತ್ರಿತವಾಗಿದೆ. ಸಾಲ ಮಾಡಿ ಪದವೀಧರನಾದ ಶ್ರೀನಾಥನು ಉದ್ಯೋಗವನ್ನು ದೊರಕಿಸಲು ಪಡುವ ಹಾಗೂ ಸಾಲವನ್ನು ತೀರಿಸುವುದಕ್ಕಾಗಿ ಪಡುವ ಶ್ರಮ, ಆಶೆ-ನಿರಾಶೆಗಳಲ್ಲಿ ಹರಿದಾಡುವ ಅವನ ಮನಸ್ಸಿನ ಚಿತ್ರ, ಸಾಧ್ವೀ ಲಲಿತೆಯು ಗಂಡನ ದುಃಖದಲ್ಲಿ ಸಮಭಾಗಿಯಾಗಿ ಗಂಡನನ್ನು ಸುಖಿಯಾಗಿಡಲು ಯತ್ನಿಸುವ ಬಗೆ, ಕೊನೆಗೆ ಇಬ್ಬರೂ ಮುದ್ದಾದ ಪ್ರೇಮಿಗಳು ನಿರುದ್ಯೋಗಿತೆಯ ಗೋರಿಯಲ್ಲಿ ಹೂತು ಹೋಗುವ ರೀತಿಯು ಕರುಳನ್ನು ಕೊರೆಯುವುದು.

'ಬಿಡಿ ಹೂ' ರೂಪಕ ಕತೆ. ಲೀಲೂ ಮದುವೆಯಾಗದೆ ಹೂವಿನಂತೆ ಸ್ವತಂತ್ರವಾಗಿರಲು ಆಶಿಸುವ

CC-0. Jangamwadi Math Collection. Digitized by eGangotri

ಮುದ್ದಾದ ಹುಡುಗಿ. ಅವಳು ಪ್ರೀತಿಸುತ್ತಿದ್ದ ಬಿಡಿ ಹೂವನ್ನು ತಾಯಿಯು, ಮಗಳು ಎಷ್ಟು ಹೇಳಿದರೂ ಕೇಳದೆ ಕಿತ್ತು, ಲೀಲೂನ ಕೋಮಲವಾದ ಹೃದಯದ ಮೇಲೆ ಬಲವಾದ ಆಘಾತ ಮಾಡುವಳು. ಅದರ ಮೇಲೆ ಒತ್ತಾಯದಿಂದ ಮದುವೆ ಮಾಡಲು ಯತ್ನಿಸುವುದು ಗಾಯದ ಮೇಲೆ ಉಪ್ಪನ್ನು ಎರಚಿದಂತಾಗುವುದು. ಲೀಲೆಯು ಬಾಯಿಲೆ ಬಿದ್ದು ಕೊಂಚ ವಾಸಿಯಾಗಿ ಮದುವೆಗೆ ಸಿದ್ಧಳಾಗುವಳು. ಒಂದು ದಿನ ಅವಳು ಈಶ್ವರನ ಪೂಜೆಯನ್ನು ನೋಡ ಹೋಗುವಳು. 'ಆ ಬಿಡಿ ಹೂ ಈಶ್ವರನ ಪತದ ಮೇಲೆಯೆ ಬೆಳಗಲಿ' ಎಂದು ಅತ್ಯಾನಂದದಿಂದ ಮೈಮರೆತು ತನ್ನನ್ನೇ ಈಶ್ವರನಿಗೆ ಅರ್ಪಣ ಮಾಡಿ ಬಿಡುವಳು. ಅವಳು ಪುನಃ ಏಳುವುದಿಲ್ಲ. ಬಿಡಿ ಹೂವಿನೊಡನೆ ಚಿಕ್ಕ ಬಾಲಿಕೆಯಾದ ಲೀಲುವಿನ ಜೀವನವನ್ನು ಹೋಲಿಸಿ, ಸ್ತ್ರೀಯರ ಪುಷ್ಪ ಪ್ರೀತಿಯನ್ನು ತೋರಿಸುತ್ತ, ತಂದೆತಾಯಂದಿರು ಮಕ್ಕಳ ಮೇಲೆ ಒಂದೊಂದು ಸಲ ಎಂತಹ ಆಘಾತ ಮಾಡುವರೆಂಬುದನ್ನು ತೋರಿಸುತ್ತ, ಹೇಳುವ ಕತೆಗಾರಿಕೆಯು ಹೃದಯಂಗಮವಾಗಿದೆ. ಲೀಲುವಿನ ಪಾತ್ರವು ಓದುಗರ ಮನದಲ್ಲಿ ಮಾಸದಂತೆ ಮೂಡಿರುವಂತಹ ಪಾತ್ರವು. ಸುಂದರವಾದ ರೂಪಕ ಕತೆಯಿದು.

**ಕಾರಣಕರ್ತರಾರು ?** ಕತೆಯ ಸನ್ನಿವೇಶವೂ ಹೃದಯಸ್ಪರ್ಶಿಯಾಗಿದೆ. ನೂರಳಿಗೆ ಯುದ್ಧಕ್ಕೆ ಹೋದ ಪತಿಯು ಹಿಂತಿರುಗಿ ಬರುವುದಿಲ್ಲವೆಂದು ಒಬ್ಬ ಮಿತ್ರನಿಂದ ತಿಳಿಯುವುದು. ದಿನಾಲೂ ತಂದೆಯನ್ನು ವಿಚಾರಿಸುತ್ತಿದ್ದ ಮಗುವಿನ ಮನಸ್ಸನ್ನು ಸಂತೋಷಪಡಿಸುವುದಕ್ಕಾಗಿ ತನ್ನ ಹೃದಯದಲ್ಲಿ ಏಳುತ್ತಿದ್ದ ದುಗುಡ, ವಿಚಾರಗಳ ಹೊಯ್ದಾಟವನ್ನು ಹತ್ತಿಕ್ಕಿ ಮಿತ್ರನನ್ನೇ ತಂದೆಯೆಂದು ಮಗುವಿಗೆ ತೋರಿಸುವಳು. ಅಕಸ್ಮಾತ್ ಒಂದು ದಿನ ನೂರಳ ಪತಿ ಸುಲೇಮಾನನು ಬರುವನು. ಅವಳಿಗೆ ಅಸಹ್ಯವೇದನೆಯುಂಟಾಗುವುದು. ಎಂಜಲವನ್ನು ತಿನ್ನುವ ಮಿತ್ರನು ಮರ್ಮಾಹತನಾಗಿ ಹೋಗುವನು. ನೂರಳು ತನ್ನ ತಪ್ಪಿಗಾಗಿ ಆತ್ಮಹತ್ಯೆ ಮಾಡಿಕೊಳ್ಳುವಳು. ಈ ದುರಂತ ಕತೆಗೆ ಕಾರಣಕರ್ತರಾರು? ಪತಿಯೆ? ಪತಿಯ ಮಿತ್ರನೆ? ನೂರಳೆ? ಅಥವಾ ಆ ಮಗುವೆ ? ಮಗುವನ್ನೂ ನೂರಳನ್ನೂ ಬಿಟ್ಟು ಉಳಿದವರ ಮನದಲ್ಲೆಲ್ಲ 'ಈ ಆತ್ಮಹತ್ಯೆಗೆ ಕಾರಣಕರ್ತರಾರು ?' ಎಂಬ ಪ್ರಶ್ನೆಯು ಎದ್ದು ತಲ್ಲಣಗೊಳಿಸುವುದು. ಈ ಬಗೆಯ ಕತೆಯ ಸನ್ನಿವೇಶಗಳು ಹಳ್ಳಿಯ ಹೆಣ್ಣು ಮಕ್ಕಳ ಹಾಡುಗಳಲ್ಲಿ ಹೇರಳವಾಗಿ ದೊರೆಯುವವು.

ಶ್ರೀಮಾನ್ ಸಿ. ಕೆ. ನಾಗರಾಜರಾಯರ ಕತೆಗಳಲ್ಲಿ ನಿರಾಶೆ, ದುಃಖದ ಕಾರ್ಮೋಡಗಳು ಗರ್ಜಿಸುವವು. ಆಶೆ ನಿರಾಶೆಗಳ ಉರಿಗೆ ಹಲವರು ತುತ್ತಾಗುವರು. ಆಶೆ-ನಿರಾಶೆಗಳ ಜಗಳದ ಪರಿಣಾಮವು ಆಗಬಾರದೆಂದೊ ಏನೊ ದುರಂತ ಸನ್ನಿವೇಶಗಳಿಗೆ ಸುಖಾಂತದ ಮಸುಕಾದ ಬಣ್ಣವನ್ನೆಳೆದುದು ಹೆಚ್ಚಾಗಿ ಕಂಡುಬರುವುದು. ನಮ್ಮ ದೃಷ್ಟಿಯಿಂದ ದುರಂತ ಸನ್ನಿವೇಶಗಳಿಗೆ ಸುಖಾಂತದ ತಿರುಗು ಕೊಡುವುದು ವಿಹಿತವಾದುದೆಂದೆನಿಸುವುದಿಲ್ಲ.

ಶೈಲಿಯು ಸರಳತೆ, ಮುದ್ದಾದ ಮನೆಮಾತುಗಳು, ವಾಸ್ತವ ಸನ್ನಿವೇಶಗಳು ಹೃದಯವನ್ನು ಸೋಂಕುತ್ತವೆ. **ಕಾಡುಮಲ್ಲಿಗೆಯನ್ನು** ಕನ್ನಡಿಗರು ತಮ್ಮ ಮನೆಗಳಿಗೊಯ್ದು ಮನೆಯನ್ನು ಸುಗಂಧಯುಕ್ತವನ್ನಾಗಿ ಮಾಡಿಕೊಳ್ಳಬೇಕೆಂದೂ ತರುಣ ಕತೆಗಾರರಾದ ಸಿ. ಕೆ. ನಾಗರಾಜರಾಯರಿಂದ ಕನ್ನಡದ ಸೇವೆಯು ಇತೋಪ್ಯಧಿಕವಾಗಲೆಂದೂ ಹಾರೈಸುತ್ತೇನೆ.

—ಗುರುನಾಥ





**ಬಾಲಾರ್ಕಮಧು:** ಮಕ್ಕಳಿಗೆ ಇದನ್ನು ಕೊಡುವುದರಿಂದ ಶಕ್ತಿಯೂ ಆರೋಗ್ಯವೂ ಹೆಚ್ಚುವುದು. ಇದು ಮಧುರವಾಗಿದೆ. ಬೆಲೆ ಶೀಸೆ ೧ಕ್ಕೆ ೦-೧೨-೦. ಟ. ಖ. ೦-೧೨-೦

**ಚಕ್ರಬಿಂದು:** ಪಿತ್ತಕೋಶ ಪ್ಲೀಹ (Spleen and Lever Enlargement ) ಎಂಬ ಮಕ್ಕಳ ಗಡ್ಡೆರೋಗಕ್ಕೆ ಪರಮೌಷಧ.

ತಿಂಗಳ ಔಷಧ ಬೆಲೆ V. P. ಸೇರಿ ೩-೮-೦

ಎಂ. ವಿ. ಪ್ರಾಸಾದಿಕ ಔಷಧಾಲಯ,
ಶಿವಮೊಗ್ಗಾ ( ಮೈಸೂರು ಸೀಮೆ )


CC-0. Jangamwadi Math Collection. Digitized by eGangotri

## ಅಸ್ತಂಗತ ವಿಜ್ಞಾನಸೂರ್ಯ

# ಸರ್ ಜಗದೀಶಚಂದ್ರ ಬೋಸ



ವಿಜ್ಞಾನ ಪ್ರಪಂಚದಲ್ಲಿ ಬಂಗಾಲದ — ತನ್ಮೂಲಕ ಭಾರತದ ಹೆಸರನ್ನು ದಿಂಗತದಲ್ಲಿ ಮೊಳಗಿಸಿದ ಸರ್ ಜಗದೀಶಚಂದ್ರ ಬೋಸರು ತಮ್ಮ ವಯಸ್ಸಿನ ೭೯ನೆಯ ವರ್ಷದಲ್ಲಿ 'ಗಿರೀಧ' ಎಂಬಲ್ಲಿ ಹೃದಯವಿಕಾರದಿಂದ ನಿಧನ ಹೊಂದಿದ ವಾರ್ತೆಯು ಪ್ರತಿ ವಿಚಾರವಂತ ಭಾರತೀಯನಿಗೆ ಪರಮ ವಿಷಾದವನ್ನುಂಟು ಮಾಡದಿರದು. ಮಂಗಳವಾರ (೨೩-೧೧-೩೭) ಪ್ರಾತಃಕಾಲದಲ್ಲಿ ಸ್ನಾನಗೃಹಕ್ಕೆ ಹೋದಲ್ಲಿಯೆ ಶುದ್ಧಿ ತಪ್ಪಿ ಬಿದ್ದು, ಸ್ವಲ್ಪ ಹೊತ್ತಿನಲ್ಲಿಯೆ ಅವರು ಇಹಲೋಕವನ್ನು ಬಿಟ್ಟು ತೆರಳಿದರು.



೧೮೫೮ನೆಯ ಇಸ್ವಿಯ ನವಂಬರ ೩೦ನೆಯ ದಿನ ಬಂಗಾಲದ ವಿಕ್ರಮಪುರ ಎಂಬಲ್ಲಿ ಅವರ ಜನ್ಮವಾಯಿತು. ಆಗ ಆಧುನಿಕ ಭೌತಿಕ ಶಾಸ್ತ್ರದಲ್ಲಿ ಪ್ರವೀಣರಾದ ಹಿಂದೀ ಜನರು ಬೆರಳಿನ ಮೇಲೆ ಎಣಿಸುವಷ್ಟು ಕೂಡ ಇರಲಿಲ್ಲ. ಆಗಿನ ಭಾರತೀಯರಿಗೆ ಉಗಿಬಂಡೆ, ತಾರಾಯಂತ್ರ ಮೊದಲಾದುವುಗಳು ಮಯಾಸುರನ ಮಾಯಾಸೃಷ್ಟಿಯಂತೆ ಕಾಣುತ್ತಿದ್ದವು.

ಮುಂಬಯಿ ವಿಶ್ವವಿದ್ಯಾಲಯದ ಮುಂಚಿನ ಅರ್ಧ ಶತಮಾನದ ದೀರ್ಘ ಕಾಲಖಂಡದಲ್ಲಿ ಭೌತಶಾಸ್ತ್ರದ ಅಧ್ಯಯನ ಮಾಡಿ ಎಂ. ಎ. ಪದವಿ ಪಡೆದವರ ಸಂಖ್ಯೆ ತೀರ ಕಿರಿದು; ಅಂತಹ ಕಾಲದಲ್ಲಿ ಸರ್ ಜಗದೀಶಚಂದ್ರ ಬೋಸರವರು ವಿಲಾಯತಿಯಲ್ಲಿ ಪ್ರಸ್ತುತ ಶಾಸ್ತ್ರದ ಆಳವಾದ ವ್ಯಾಸಂಗ ಮಾಡಿ, ಮೇಧಾವಿಗಳೂ, ಕಲ್ಪಕರೂ, ಸಂಶೋಧನ ಚತುರರೂ ಆದ ಪ್ರಥಮ ಭಾರತೀಯ ವಿದ್ಯಾರ್ಥಿಗಳೆಂದು ಕೇಂಬ್ರಿಜ್ ವಿಶ್ವವಿದ್ಯಾನಿಲಯದಲ್ಲಿ ಹೆಸರಾದುದೊಂದು ವಿಶೇಷವೆ ಸರಿ. ಕೇಂಬ್ರಿಜದಲ್ಲಿ ಪ್ರಸಿದ್ಧ ಶಾಸ್ತ್ರಜ್ಞರಾದ ಲಾರ್ಡ ರ್‍ಯಾಲೆ ಅವರ ನೇತೃತ್ವದಲ್ಲಿ ಪದಾರ್ಥವಿಜ್ಞಾನ ಶಾಸ್ತ್ರದ ಅಭ್ಯಾಸವನ್ನು ಮಾಡಿ, ತಮ್ಮ ವಯಸ್ಸಿನ ೨೫ನೆಯ ವರ್ಷಕ್ಕೆ ಹಿಂದುಸ್ಥಾನಕ್ಕೆ ಮರಳಿದರು. ಆಗ ಕಲಕತ್ತೆಯ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ವಿಜ್ಞಾನ ವಿಷಯದ ಪ್ರಾಧ್ಯಾಪಕತ್ವವು ಅವರಿಗೆ ದೊರೆಯಬೇಕೆಂದು ನಡೆದ ಪ್ರಯತ್ನದಲ್ಲಿ ಅವರ ಭಾರತೀಯತ್ವವು ಕೆಲವಂಶದಲ್ಲಿ ಅಡ್ಡಬಂದಿತು. ಪ್ರಿನ್ಸಿಪಾಲ ರ್‍ಯಾನೆಯವರಿಗೆ ಆ ಕಲ್ಪನೆಯೆ ವಿಚಿತ್ರವಾಗಿ ತೋರಿತು. ಆದರೆ ಲಾರ್ಡ್ ರ್‍ಯಾಲೆ ಪ್ರಭೃತಿಗಳವರ ಪ್ರಶಸ್ತಿಯಿಂದ ಆ ಸ್ಥಳವು ಅವರಿಗೆ ಸಿಕ್ಕಿತು. ಕಾಲೇಜಿನಲ್ಲಿಯ ಸ್ಥಾನದಿಂದ ಅವರಿಗೆ ಸಂಶೋಧನದ ಸುಖಸೌಲಭ್ಯಗಳು ದೊರೆತಂತಾಗಲಿಲ್ಲ. ಆದಕ್ಕಾಗಿ ಅವರು ಸ್ವತಂತ್ರವಾದ ಸ್ವಂತದ ಪ್ರಯೋಗಶಾಲೆಯನ್ನು ಏರ್ಪಡಿಸಿಕೊಂಡು, ಅಖಂಡ ಸಂಶೋಧನವನ್ನು ನಡೆಸಿ, ೧೮೯೫ರಲ್ಲಿ ಲಂಡನ್ನಿನ 'ರಾಯಲ್ ಸೊಸೈಟಿ'ಯ ಕಡೆಗೆ ವಿದ್ಯುತ್ತಿನ ಬಗ್ಗೆ ಒಂದು ಪ್ರಬಂಧವನ್ನು ಬರೆದು ಕಳಿಸಿದರು. ಆದರ ಮಹತ್ವವನ್ನೂ ಅದರಲ್ಲಿಯ ಅಭಿನವ ವಿಚಾರಗಳನ್ನೂ ಅರಿತುಕೊಂಡು, ಆ ಸಂಸ್ಥೆಯು ತನ್ನ ಮುಖಪತ್ರಿಕೆಯಲ್ಲಿ ಅದಕ್ಕೆ ಸ್ಥಾನವನ್ನಿತ್ತದ್ದಲ್ಲದೆ, ತನಗೆ ಪಾರ್ಲಿಮೆಂಟಿನಿಂದ ದೊರೆವ ಕಾಣಿಕೆಯೊಳಗಿಂದ ಕೆಲವೊಂದು ಹಣವನ್ನು ಶ್ರೀ. ಬೋಸರವರಿಗೆ ಸಹಾಯವೆಂದು ಕೊಟ್ಟಿತು. ಅದೇ ಹೊತ್ತಿಗೆ ಲಂಡನ್

CC-0. Jangamwadi Math Collection. Digitized by eGangotri

ವಿದ್ಯಾಪೀಠವು ಅವರಿಗೆ "ಡಾಕ್ಟರ್ ಆಫ್ ಸ್ಯಾನ್ಸ್" ಎಂಬ ಪದವಿಯನ್ನಿತ್ತು ಸತ್ಕರಿಸಿತು. ಪದಾರ್ಥವಿಜ್ಞಾನ ಶಾಸ್ತ್ರದಲ್ಲಿಯ ತಮ್ಮ ಸಂಶೋಧನದ ಫಲವನ್ನು ಅವರು ಇಂಗ್ಲಂಡ್, ಫ್ರಾನ್ಸ್, ಅಮೆರಿಕಾ ಇತ್ಯಾದಿ ದೇಶಗಳಲ್ಲಿ ಸಭೆಗಳ ಮತ್ತು ವಿಜ್ಞಾನಪರಿಷತ್ತುಗಳ ಮೂಲಕ ಅರುಹಿದರು. ಇಂತು ಅವರ ವಿಜ್ಞಾನ ಸೇವೆಗೆ ಜಗತ್ತಿನ ಮನ್ನಣೆ ದೊರೆಯಹತ್ತಿತು.

ಏತಂತು ವಿದ್ಯುತ್ಸಂದೇಶ (ವಾಯರ್‌ಲೆಸ್)ದ ಶೋಧವನ್ನು ಮಾಡಿ ನಭೋವಾಣಿಯ (ರೆಡಿಯೋವಿನ) ಚಮತ್ಕಾರವನ್ನು ಜಗತ್ತಿಗೆ ಗೋಚರಗೊಳಿಸಿದ ಹೆಚ್ಚಳವು ಮಾರ್ಕೋನಿಗೆ ಸಲ್ಲುತ್ತಿದ್ದರೂ, ಅವನಿಗಿಂತ ಮೊದಲು ನಮ್ಮ ವಿಜ್ಞಾನವೀರರು ಆ ಶೋಧವನ್ನು ಮಾಡಿದ್ದರಷ್ಟೆ ಅಲ್ಲ, ಅದರ ಪ್ರಾಯೋಗಿಕವನ್ನೂ ತೋರಿಸಿದ್ದರು. ೧೮೯೫ರಲ್ಲಿ ಕಲಕತ್ತೆಯ ಟೌನ್ ಹಾಲಿನಲ್ಲಿ ಗವರ್ನರರ ಸಮಕ್ಷಮದಲ್ಲಿ ದಿವಂಗತ ಬೋಸರವರು ಒಂದು ಗೋಡೆಯೊಳಗಿಂದ ಈಥರದ ತೆರೆಗಳು ಹಾಯ್ದುಹೋಗುವುದನ್ನು ಪ್ರತ್ಯಕ್ಷ ತೋರಿಸಿದರಲ್ಲದೆ, ಬೇರೊಂದು ಕೋಣೆಯೊಳಗಿನ ಗಂಟೆ ಬಾರಿಸುವುದು, ಜಡವಸ್ತುಗಳು ಅಲ್ಲಾಡುವುದು ಇತ್ಯಾದಿ ಕ್ರಿಯೆಗಳನ್ನೂ ಮಾಡಿ ತೋರಿಸಿದರು.

ರೇಡಿಯೋ ಸಂಬಂಧದ ಸಂಶೋಧನವನ್ನು ನಡೆಸಿರುವಾಗಲೆ ಸರ್ ಜಗದೀಶಚಂದ್ರರಿಗೊಂದು ಗೂಢ ವಿಷಯವು ಗೋಚರಿಸಿತು. ಅದರಿಂದಲೇ ಪದಾರ್ಥವಿಜ್ಞಾನ ಶಾಸ್ತ್ರದಿಂದ ವನಸ್ಪತಿಶಾಸ್ತ್ರದತ್ತ ಅವರ ಮನಸ್ಸು ಹರಿಯಿತು; ಮತ್ತು ದರಲ್ಲಿಯ ನವಸಂಶೋಧನಗಳಿಂದ ಅವರ ಹೆಸರು ಜಗತ್ತಿನಲ್ಲೆಲ್ಲಾ ಕೀರ್ತಿತವಾಯಿತು. ರೇಡಿಯೋವಿನಲ್ಲಿಯ ಧ್ವನಿಗ್ರಾಹಕ ಧಾತುಗಳ ಪಾತ್ರೆಗಳನ್ನು ಬಹುಕಾಲ ಬಳಸುವುದರಿಂದ ಅವಕ್ಕೆ ದಣಿವು ಆಗುವುದಾಗಿಯೂ, ಸ್ವಲ್ಪ ವಿಶ್ರಾಂತಿಯ ತರುವಾಯ ಆ ದಣಿವು ಹೋಗಿಬಿಡುವುದಾಗಿಯೂ ಒಂದು ಅಪೂರ್ವ ದೃಶ್ಯವನ್ನು ಅವರು ಕಂಡರು. ಕುದುರೆ ಬಹುಕಾಲ ನಡೆದು ದಣಿವು ಹೊಂದಿ, ವಿಶ್ರಾಂತಿಯ ತರುವಾಯ ಹೊಸ ಹುರುಪುಳ್ಳದ್ದಾಗುವಂತೆ ಅಚೇತನ ಪದಾರ್ಥಗಳೂ ವಿಶ್ರಾಂತಿಯಿಂದ ನವಚೈತನ್ಯ ಪಡೆಯುವ ದೃಶ್ಯವು ಅವರಿಗೆ ವಿಸ್ಮಯಕರವಾಗಿ ಕಂಡಿತು. ಅದನ್ನು ಸಿದ್ಧಗೊಳಿಸುವುದಕ್ಕೆಂದು ಅವರು ಅಭೂತಪೂರ್ವವಾದ ಅತಿಸೂಕ್ಷ್ಮ ಯಂತ್ರಗಳನ್ನು ನಿರ್ಮಿಸಿದರು. ವನಸ್ಪತಿಗಳೂ ಸಂವೇದನಶೀಲವಾಗಿವೆಯೆಂಬ ಅವರ ಯುಗಪ್ರವರ್ತಕ ಸಂಶೋಧನದ ಬಗ್ಗೆ ಶಾಸ್ತ್ರಜ್ಞರಲ್ಲಿ ಏಕಮತ್ಯವಿರಲಿ, ಇಲ್ಲದಿರಲಿ, ಅವರ ಯಂತ್ರರಚನೆಯು ಅಪೂರ್ವವಾದುದು ಮತ್ತು ಅದ್ಭುತವಾದುದು ಎಂಬುದರಲ್ಲಿ ಸಂದೇಹವಿಲ್ಲ. ವನಸ್ಪತಿಗಳ ಬೆಳೆವಣಿಗೆಯು ಒಂದು ಕೋಟಿ ಪಟ್ಟು ಹೆಚ್ಚು ಕಾಣುವಂತೆ ಒಂದು ಯಂತ್ರದಲ್ಲಿ ಯೋಜನೆ ಮಾಡಿದ್ದಾರೆ. ಅದೇ ರೀತಿ ಸೆಕಂದದ ಒಂದು ಶತಾಂಶದಷ್ಟು ಅತ್ಯಲ್ಪ ಕಾಲಖಂಡವನ್ನು ಹಿಡಿದಿಡುವ ಇನ್ನೊಂದು ಯಂತ್ರವನ್ನು (Resonant Recorder) ಅವರ ಪ್ರಾತಿಭ ಕಲ್ಪನಾಶಕ್ತಿಯು ನಿರ್ಮಿಸಿತು. ಇಂತಹ ವಿವಿಧ ಯಂತ್ರಗಳ ಸಹಾಯದಿಂದ, ವನಸ್ಪತಿಗಳಿಗೂ ಪ್ರಾಣಿಮಾತ್ರಗಳಂತೆ ಹರ್ಷ-ವಿಷಾದ ಮೊದಲಾದ ಸಂವೇದನೆಗಳಾಗುತ್ತಿವೆಯೆಂಬ ಸಂಗತಿಯನ್ನೂ ಸಿದ್ಧಗೊಳಿಸಿದರು. 'ಲಜ್ಜಾವಲ್ಲಿ'ಯನ್ನು ಕುರಿತಾದ ಅವರ ಪ್ರಯೋಗವು ಪ್ರಸಿದ್ಧವಿದೆ. ಯಾವುದೊಂದು ಗಿಡಬಳ್ಳಿಯ ಕಲಮು ಮಾಡುವುದಾದಲ್ಲಿ ಅದನ್ನು ಕಡಿಯಬೇಕಾಗುತ್ತದೆ. ಇದರಿಂದ ಅದಕ್ಕೆ ವೇದನೆಯಾಗುತ್ತದೆ. ಅದನ್ನು ತಪ್ಪಿಸಲು ಸರ್ ಜಗದೀಶಚಂದ್ರರು ಒಂದು ವನಸ್ಪತಿಗೆ ಎಚ್ಚರದಪ್ಪುವ ಔಷಧಿಯನ್ನು ಕೊಟ್ಟರು; ತರುವಾಯ ಅದರ ಟೊಂಗೆಯೊಂದನ್ನು ಕುಯಿದು ಅದರ ಕಲಮು ಮಾಡಲಾಗಿ ಅದು ಯಶಸ್ವಿಯಾಯಿತು. ಮೂಕ ವನಸ್ಪತಿಗಳ ಸುಖದುಃಖಗಳಿಗೆ ಬಾಯೊಡೆಯುವಂತೆ ಮಾಡಿದ ಈ ಮಹನೀಯರ ವಿಜ್ಞಾನಸಿದ್ಧಿಯು ಅದ್ಭುತವಾದುದೇ ಸರಿ.

'ಆಬ್ರಹ್ಮ ಸ್ತಂಬಪರ್ಯಂತಂ'— ಬ್ರಹ್ಮದಿಂದ ಹುಲ್ಲುಕಡ್ಡಿಯ ವರೆಗೆ ಒಂದೇ ಒಂದು ತತ್ತ್ವವು ತುಂಬಿ ತುಳುಕಾಡುತ್ತಿದೆಯೆಂಬ ಮುಂದಿಗೆಯನ್ನು ನಮ್ಮ ಪೂರ್ವಿಕರು ಸಾರಿದ್ದರು; ಅದರ ಯಥಾರ್ಥತೆಯನ್ನು ಭೌತಿಕ ಶಾಸ್ತ್ರದ ಉಪಕರಣಗಳಿಂದ ಸಿದ್ಧಗೊಳಿಸುವ ಮಹಾಕಾರ್ಯವನ್ನು ಶ್ರೀ. ಬೋಸರವರು ಮಾಡಿದರು. ಹುಲ್ಲುಕಡ್ಡಿ (ಸ್ತಂಬ) ಕೂಡ ಸಂವೇದನಶೀಲವಾಗಿರುತ್ತದೆಂದು ತೋರಿಸಿ, ಬ್ರಹ್ಮದೊಡನೆ ಅದರ ಬಾಂಧವ್ಯವನ್ನು ಬೆಳಸಿದರು. ವನಸ್ಪತಿ ಶಾಸ್ತ್ರಕ್ಕೆ ಸಂಬಂಧಿಸಿದ ತಮ್ಮದೊಂದು ಗ್ರಂಥದಲ್ಲಿ, 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂಬ ಬ್ರೀದವಾಕ್ಯವನ್ನು ಅವರು ಬರೆದಿರುವರು. ೧೯೦೧ರಲ್ಲಿ ಇಂಗ್ಲಂಡಿನಲ್ಲಿಯ ರಾಯಲ್ ಇನ್‌ಸ್ಟಿಟ್ಯೂಟನೆದುರಿನಲ್ಲಿ ಮಾಡಿದ ಭಾಷಣದಲ್ಲಿ "ಅಣುರೇಣುಗಳಿಂದ ಸೂರ್ಯಮಾಲೆಯ ವರೆಗೆ ನನಗೊಂದೇ ತತ್ತ್ವವು ತುಂಬಿದುದಾಗಿ ತೋರುತ್ತಿದೆ. ೩೦೦೦ ವರ್ಷಗಳಾಚೆ ಗಂಗಾತೀರವಾಸಿಗಳಾದ ನನ್ನ ಹಿರಿಯರು ಉಪನಿಷತ್ತುಗಳ ಮೂಲಕ

CC-0. Jangamwadi Math Collection. Digitized by eGangotri

ಹೊರಹೊಮ್ಮಿಸಿದ ಏಕತ್ವದ ಸಂದೇಶವು ಅಲ್ಪಸ್ವಲ್ಪವಾಗಿ ನನ್ನ ಅನುಭವಕ್ಕೆ ಗೋಚರವಾಗುತ್ತಿದೆ." ಎಂದು ಹೇಳಿದರು.

ಕಣ್ಣು ಕುಕ್ಕಿಸುವ ಅವರೀ ವನಸ್ಪತಿಶಾಸ್ತ್ರ ಸಂಶೋಧನದಿಂದ ಅವರಿಗೆ ರಾಜಮರ್ಯಾದೆಯು ದೊರೆಯತೊಡಗಿತು. ಕಲಕತ್ತೆ, ಅಲಹಾಬಾದ, ಬನಾರಸ ವಿಶ್ವವಿದ್ಯಾಲಯಗಳ 'ಡಿ. ಎಸ್‌ಸಿ.' ಪದವಿಗಳೂ ಲ್ಯಬರಡೀನ ವಿದ್ಯಾಪೀಠದ 'ಎಲ್‌ಎಲ್. ಡಿ.' ಪದವಿಯೂ ಅವರ ಮನೆಗೆ ನಡೆದು ಬಂದವು. ಅದೇ ರೀತಿ ಸಿ. ಆಯ್. ಇ., ಸಿ. ಎಸ್. ಆಯ್., ಕೆ. ಸಿ. ಆಯ್. ಇ. ಎಂಬ ರಾಜಕೀಯ ಬಿರುದು ಬಾವಲಿಗಳೂ ಅವರನ್ನು ಭೂಷಿಸಿದವು. ೧೯೧೧ರಲ್ಲಿ ವೈಮನಸಿಂಗದಲ್ಲಿ ಸೇರಿದ ಬಂಗಾಲ ಸಾಹಿತ್ಯಪರಿಷತ್ತಿನ ಅಧ್ಯಕ್ಷಪೀಠವನ್ನವರು ಅಲಂಕರಿಸಿದರು. ೧೯೧೭ರಲ್ಲಿ ಸರಕಾರವು ಅವರಿಗೆ 'ಸರ್' ಬಿರುದನ್ನಿತ್ತಿತು. ೧೯೨೭ರಲ್ಲಿ 'ಇಂಡಿಯನ್ ಸ್ಯಾನ್ಸ್ ಕಾಂಗ್ರೆಸಿ'ನ ಅಧ್ಯಕ್ಷಸ್ಥಾನವು ಅವರಿಗೆ ದೊರೆಯಿತು. ಪಂಜಾಬ ವಿಶ್ವವಿದ್ಯಾನಿಲಯವು ಅವರಿಗೆ ಭಾಷಣಕ್ಕಾಗಿ ಔತಣ ಹೇಳಿ ೧೨೦೦ ರೂ.ಯ ಮಾನ ಮೂಲ್ಯವನ್ನಿತ್ತಿತು; ಆದರದನ್ನವರು ಆ ಸಂಸ್ಥೆಗೇ ಮರಳಿ ಕೊಟ್ಟರು. ಅವರ ವನಸ್ಪತಿವಿಷಯಕ ಶೋಧಗಳನ್ನು ವಾಸ್ತವವಾಗಿ ಪರೀಕ್ಷಿಸಲು ಹಿಂದುಸ್ತಾನದ ಮಣ್ಣನ್ನು ಇಂಗ್ಲಿಷ್ ವೈಜ್ಞಾನಿಕ ಸಂಸ್ಥೆಗಳು ಒಯ್ದವು. ಇಂತು ಜಗತ್ತಿಗೆ ಜಗತ್ತೇ ಅವರ ಸಂಶೋಧನಕ್ಕೆ ಸೈಯೆಂದಿತು.

ಆದರೆ ಹಲವು ಎಡರುಗಳನ್ನು ದಾಟಿಯೆ ಅವರೀ ಕೀರ್ತಿಶಿಖರವನ್ನು ಮುಟ್ಟಿದುದು. ಈ ಧೀಮಂತ ಭಾರತೀಯರಿಗೆ ಪ್ರೊಫೆಸರಿಕೆ ದೊರೆತರೂ ಆಯ್. ಇ. ಎಸ್. ದಲ್ಲಿ ಪ್ರವೇಶ ದೊರೆಯಲಿಲ್ಲ. ಅವರ ಮೇಲೆ ಮೊದಮೊದಲು ಕೆಲ ಪಾಶ್ಚಾತ್ಯ ಲೇಖಕರು ಸಂಶೋಧನಚೌರ್ಯದ ಹೀನ ಆಪಾದನೆಗಳನ್ನು ಹೊರಿಸಿದಲ್ಲದೆ, ಅವರ ಅಧಿಕೃತ ಶಾಸ್ತ್ರೀಯ ಪ್ರಬಂಧಗಳಿಗೆ ತಮ್ಮ ನಿಯತಕಾಲಿಕಗಳಲ್ಲಿ ಇಂಬುಗೊಡಲಿಲ್ಲ. ಆದರೀ ಕೀಳು ಹೊಟ್ಟೆಕಿಚ್ಚಿನ ಅಡ್ಡ ಬೆಂಕಿಯನ್ನು ದಾಟಿ ಶ್ರೀ.ಬೋಸರವರು ತಮ್ಮ ಸಂಶೋಧನಗಳ ಸಾರ್ಥತೆಯನ್ನು ಜಗತ್ತಿನ ದೃಕ್ಪಥಕ್ಕೆ ತಂದಿತ್ತೆಂಬುದು ಭಾರತೀಯರಿಗೆಂದಿಗೂ ಭೂಷಣಾಸ್ಪದವು.

ಶ್ರೀ. ಬೋಸರವರು ಕೀರ್ತಿಯ ಅತ್ಯುಚ್ಚ ಶಿಖರವನ್ನು ಮುಟ್ಟಿದ್ದರೂ ತಮ್ಮ ಭಾರತೀಯತ್ವವನ್ನು ಮರೆತಿರಲಿಲ್ಲ. ವಿದೇಶೀಯ ವೈಜ್ಞಾನಿಕರನ್ನು ಬೆರಗುಗೊಳಿಸಿದ ಯಂತ್ರಗಳನ್ನು ಅವರಿಗೆ ತೋರಿಸಿದಾಗ, 'ಇವನ್ನು ತಯಾರಿಸಿದುದೆಲ್ಲಿ?' ಎಂದು ಎಲ್ಲರೂ ಕೇಳಿದರು. ಸ್ವದೇಶವಾತ್ಸಲ್ಯದಿಂದ ಕಣ್ಣುಗಳು ಸ್ಫುರಿಸುತ್ತಿರಲು, ಅವರು ಎದೆಯುಬ್ಬಿಸಿ ನುಡಿದರು— "ಹಿಂದುಸ್ತಾನದಲ್ಲಿ!'.... ಅವರು ತಮ್ಮ ಅಮೌಲ್ಯ ಗ್ರಂಥಗಳನ್ನು ಅರ್ಪಿಸಿದುದು 'ನನ್ನ ದೇಶಬಾಂಧವರಿಗೆ!'....'ಭಾರತದ ಹೆಚ್ಚಳಕ್ಕಾಗಿ' ಎಂಬ ಬಿರುದನ್ನು ಅವರು ತಮ್ಮ ಸಂಶೋಧನ ಸಂಸ್ಥೆಯ ಶಿರೋಭಾಗದಲ್ಲಿ ಬರೆಯಿಸಿ, ದಧೀಚಿ ಋಷಿಯ ತ್ಯಾಗದ ಕುರುಹಾದ ವಜ್ರವನ್ನು ಕೊರೆಯಿಸಿದರು. ಮುದುರೆಯಲ್ಲಿ "ನಮ್ಮ ರಾಷ್ಟ್ರವು ಜೀವಂತವಾಗಿರುವುದೇ?" ಎಂಬ ವಿಷಯವಾಗಿ ಕೊಟ್ಟ ಉಪನ್ಯಾಸದಲ್ಲಿ ಅವರ ದೇಶಭಕ್ತಿಯು ಕಾವ ಎಣ್ಣೆಯಂತೆ ಕಳಕಳಿಸುತ್ತಿದೆ.

ಸರ ಜಗದೀಶರವರ ಮನಸ್ಸು ವಿಶಾಲವಾದುದು. ಪ್ರತಿಯೊಂದು ಪ್ರಾಗತಿಕ ವಿಚಾರಕ್ಕೆ ಅವರ ಬೆಂಬಲವಿರುತ್ತಿತ್ತು. ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯ ವಿಷಯಕ ಚಟುವಟಿಕೆಗಳಲ್ಲೆಲ್ಲಾ ಅವರಿಗೆ ಆಸ್ಥೆಯಿತ್ತು. ನೂರಾರು ಶಿಕ್ಷಣ ಸಂಸ್ಥೆಗಳು ಅವರಿಂದ ಸಹಾಯ-ಪ್ರೋತ್ಸಾಹಗಳನ್ನು ಪಡೆದಿವೆ. ತಮ್ಮ ಮರಣಶಾಸನದಲ್ಲಿ ೪ ಲಕ್ಷ ರೂಪಾಯಿಗಳನ್ನು ಬೇರೆಬೇರೆ ವಿದ್ಯಾಸಂಸ್ಥೆಗಳಿಗೆ ದಾನಮಾಡಿದ್ದಾರೆಂದು ಇದೀಗ ಪ್ರಕಟವಾಗಿದೆ.

ತಮ್ಮ ವಯಸ್ಸಿನ ೬೦ನೆಯ ವರ್ಷದಲ್ಲಿ ಎಂದರೆ ಷಷ್ಠ್ಯಬ್ದಿಪೂರ್ತಿಯ ಸಮಾರಂಭ ನಿಮಿತ್ತವಾಗಿ, ೧೯೧೭ರ ನವಂಬರ ೩೦ನೆಯ ದಿನ ಸರ ಜಗದೀಶಚಂದ್ರರು ಕಲಕತ್ತೆಯಲ್ಲಿ 'ಬೋಸ-ವಿಜ್ಞಾನ-ಮಂದಿರ' ಎಂಬ ಸಂಶೋಧನ ಸಂಸ್ಥೆಯನ್ನು ಸ್ಥಾಪಿಸಿ, ಅದನ್ನು "ಭಾರತ ವರ್ಷದ ಗೌರವಕ್ಕಾಗಿ ಮತ್ತು ಜಗತ್ತಿನ ಕಲ್ಯಾಣಕ್ಕಾಗಿ ಈಶಚರಣದಲ್ಲಿ" ಸಮರ್ಪಿಸಿದರು. ಆ ಸಮರ್ಪಣ ಪ್ರಸಂಗವು ಚಿರಸ್ಮರಣೀಯವಾದುದು. ಆಗ ಕವಿರವೀಂದ್ರರು ಆವಾಹನ ಗೀತವನ್ನು ಹಾಡಿದರು. ಅದರ ಪ್ರಾರಂಭದ ಭಾಗವು ಇಂತಿದೆ:—

ಮಾತೃಮಂದಿರ ಪೂಜ್ಯ ಅಂಗಣ
ಕರ ಮಹೋಜ್ವಲ ಆಜ ಹೇ।
ಶುಭ ಶಬ್ದ ಬಾಜಹ ಬಾಜ ಹೇ।

ಘನತಿಮಿರ ರಾತ್ರಿರ ಚಿರಪರೀಕ್ಷಾ
ಪೂರ್ಣ ಕರಲಹ ಜ್ಯೋತಿ ದೀಕ್ಷಾ
ಯಾಚಿ ಪಲ ಸಬ ಸಾಜ ಹೇ।
ಶುಭ ಶಬ್ದ ಬಾಜಹ ಬಾಜ ಹೇ।
ವೀರಧರ್ಮೇ ಪುಣ್ಯಕರ್ಮೇ

CC-0. Jangamwadi Math Collection. Digitized by eGangotri

ವಿಶ್ವಹೃದಯೇ ರಾಜ ಹೇ
ಶುಭ ಶಬ್ದ ಬಾಜಹ ಬಾಜ ಹೇ ।

ಭಾರತೀಯ ವಿಜ್ಞಾನ ಸಂಶೋಧನದ ಧ್ಯೇಯವನ್ನು ಸರ ಜಗದೀಶಚಂದ್ರರು ತಮ್ಮ ಭಾಷಣದಲ್ಲಿ ಇಂತು ವಿವರಿಸಿದರು:—

" ಇದು ವರೆಗೆ ಹಲವು ಸಾಮ್ರಾಜ್ಯಗಳು ಹುಟ್ಟಿದವು, ಅಳಿದವು; ಅವುಗಳ ಸ್ಮೃತಿಚಿಹ್ನಗಳೂ ಅವಶಿಷ್ಟವಾಗಿಲ್ಲ. ಆದರೆ ಆರ್ಯರು ಪ್ರಾಚೀನ ಕಾಲದಲ್ಲಿ ಸಂಪಾದಿಸಿಟ್ಟ ವಿಜ್ಞಾನನಿಧಿಯು ಅಕ್ಷಯ್ಯವಾಗಿದೆ. ಆ ಅಮರ ವಿದ್ಯೆಯು ಸತ್ಯಜ್ಞಾನವನ್ನು ಮಾಡಿಕೊಳ್ಳುವುದೆ ಮಾನವ ಜಾತಿಯ ಧ್ಯೇಯವಾಗಿರತಕ್ಕದ್ದು; ಆ ಧ್ಯೇಯಪೂರ್ತಿಗಾಗಿಯೆ ಈ ವಿಜ್ಞಾನಮಂದಿರದಲ್ಲಿಯ ಜ್ಞಾನಸಾಧಕರು ಸತತವೂ ಪರಿಶ್ರಮಿಸುವರೆಂದು ನನ್ನ ನಂಬುಗೆಯಿದೆ."

ಇಂತಹ ವಿಜ್ಞಾನಸೂರ್ಯರು ಯುಗಕ್ಕೊಮ್ಮೆ ಉದಯಿಸುವರು. ಅವರ ಜೀವನದ ಸೂತ್ರವನ್ನು ಅವರ ಶಬ್ದಗಳಲ್ಲಿಯೆ ಬಣ್ಣಿಸುವುದಾದರೆ "Not in possessions but in ideals are to be found the seeds of immortality." (ಭೌತಿಕ ಸಂಪತ್ತಿಯಲ್ಲಲ್ಲ, ಉಚ್ಚಾದರ್ಶಗಳಲ್ಲಡಗಿದೆ ಅಮೃತತ್ವದ ಬೀಜ.) ಇಂತಹ ಕುಲದೀಪಕನನ್ನು ಕಳೆದುಕೊಂಡು ಭಾರತಭೂಮಿಯಿಂದು ಬಡವಾಗಿದೆ. ದಿವಂಗತರ ಆತ್ಮಜ್ಯೋತಿಗೆ ಸದ್ಗತಿಯಾಗಲೆಂದೂ ಅವರು ಚೇತರಿಸಿದ ಚೈತನ್ಯದಿಂದ ಮಾತೃಭೂಮಿಯ ಸೇವೆಗೆ ಮತ್ತೆ ಬರಲೆಂದೂ ಕೋರುವುದು ನಮ್ಮ ಕರ್ತವ್ಯ.

# ದಿವಂಗತ ಸಂಗೀತರತ್ನ ಅಬ್ದುಲ್ ಕರೀಮಖಾನ ಸಾಹೇಬರು

ಕಳೆದ ಸಂಚಿಕೆಯು ಪ್ರಕಟವಾಗುತ್ತಿರುವಷ್ಟರಲ್ಲಿಯೆ ಸಂಗೀತರತ್ನ ಶ್ರೀ. ಅಬ್ದುಲ್ ಕರೀಮಖಾನ ಸಾಹೇಬರ ದುಃಖದ ಮೃತ್ಯುವಾರ್ತೆಯು ತಲುಪಿತು. ಉತ್ತರಭಾರತೀಯ ಸಂಗೀತಕ್ಕೆ ಅವರ ನಿಧನದಿಂದ ಆದ ಹಾನಿಯು ಬೇಗನೆ ತುಂಬಿಬರಲಾರದು. ಸವಾಯಿ ಗಂಧರ್ವರೆಂದು ಪ್ರಸಿದ್ಧರಿದ್ದ ಕುಂದಗೋಳದ ರಾಮಭಾವು ಅವರು ದಿವಂಗತರ ಪಟ್ಟಶಿಷ್ಯರು; ಗುರುಗಳ ಗಾಯನ ಪರಂಪರೆಯ ಸಜೀವ ಪ್ರತಿನಿಧಿಗಳು. ಕುಂದಗೋಳದಲ್ಲಿ ತಾ. ೪-೧೧-೩೭ನೆಯ ದಿನ ನೆರೆದ ದುಃಖಸೂಚಕ ಸಭೆಯಲ್ಲಿ ಸಂಗೀತರತ್ನರನ್ನು ಕುರಿತು ಆತ್ಮೀಯವಾಗಿ ಮಾತನಾಡಿದುದನ್ನು ಇದರಡಿಯಲ್ಲಿ ಕೊಡುತ್ತಿರುವೆವು.

" ಇಂದು ತಾವೆಲ್ಲರೂ ದುಃಖದಲ್ಲಿದ್ದೀರಿ. ನನಗಾದ ದುಃಖವನ್ನು ಇಷ್ಟೇ ಎಂದು ಹೇಳಲಿಕ್ಕಾಗದು. ಯಾರು ನನಗೆ ಅನ್ನ-ವಸ್ತ್ರ ಕೊಟ್ಟು ಒಂದೇ ಸನನೆ ೬ ವರ್ಷಗಳ ವರೆಗೆ ಸಂಗೀತ ವಿದ್ಯೆಯನ್ನು ಕಲಿಸಿದರೋ ಅವರ ಬಗ್ಗೆ ನಾನು ಕೃತಜ್ಞನಾಗಿ ಸ್ವಲ್ಪಾದರೂ ಹೇಳಬೇಕೆಂದು ನಿಂತಿದ್ದೇನೆ. ಅವರು ಪಾನಿಪತದ ಹತ್ತರ ಇರುವ ರಾಸಾ ಎಂಬ ಊರವರು, ಧ್ರುಪದ ಧಮಾರ ಈ ಪದ್ಧತಿಯಂತೆ ಹಾಡುವ 'ಧುಂದು ಗಾಯಿಕ' ಗಾಯಕರ ಮನೆತನದವರು. ಚಿಕ್ಕಂದಿನಲ್ಲಿಯೇ ತಮ್ಮ ಕಕ್ಕಂದಿರಲ್ಲಿ ಗಾಯನದ ಅಭ್ಯಾಸ ಮಾಡಿ ತಮ್ಮ ೧೬ನೆಯ ವರ್ಷಕ್ಕೆ ಮೈಸೂರಿಗೆ ಪ್ರಯಾಣ ಬೆಳಸಿ, ಅಲ್ಲಿ ೨೫೦ ರೂಪಾಯಿಯ ಬಹುಮಾನ ಸಂಪಾದಿಸಿದರು. ಆ ಮೇಲೆ ಬಡೋದೆಯಲ್ಲಿ ನೌಕರಿಗಿದ್ದರು. ಕರ್ನಾಟಕದಲ್ಲಿ ನೆರೆದಷ್ಟು ಅವರ ಸಂಗೀತ ಕಚೇರಿಗಳು ಎಲ್ಲಿಯೂ ನೆರೆದಿರಲಿಕ್ಕಿಲ್ಲ. ಅದರಲ್ಲಿಯೂ ಕುಂದಗೋಳದಲ್ಲಿ ಅವರು ಹುರುಪಿನಿಂದ ಹಾಡಿದಷ್ಟು ಇನ್ನೆಲ್ಲಿಯೂ ಹಾಡಿರಲಿಕ್ಕಿಲ್ಲ. ಅವರು ತಮ್ಮ ಆರ್ಯ ಸಂಗೀತ ವಿದ್ಯಾಲಯಗಳನ್ನು ೧೯೧೦ರಲ್ಲಿ ಬೆಳಗಾವಿಯಲ್ಲಿ, ೧೯೧೩ರಲ್ಲಿ ಪುಣೆಯಲ್ಲಿ, ೧೯೧೮ರಲ್ಲಿ ಮುಂಬಯಿಯಲ್ಲಿ ಸ್ಥಾಪಿಸಿದರು. ಅವರ ಸಂಗೀತದ ಪದ್ಧತಿಯು ಹೊಸದಿದ್ದು, ಎಷ್ಟೋ ಜನರು ಮೊದಮೊದಲು ಅವರ ಹಿಂದೆ ಹಳಿಯುತ್ತಿದ್ದವರು ಅವರ ಸಂಗೀತ ಕೇಳಿ ಮುಗ್ಧರಾಗುತ್ತಿದ್ದರು. ಅವರು ತಮ್ಮ ಹೊಟ್ಟೆಯಲ್ಲಿ ಗ್ಯಾಸ ಆದಾಗ ಖರಜಿನಲ್ಲಿ ಹಾಡಿ ಎಲ್ಲ ಗ್ಯಾಸ ಕಳೆದುಕೊಳ್ಳುತ್ತಿದ್ದರು. ಯಾವದೇ ಆಪತ್ತಿಗೂ ತಮ್ಮ ಸಂಗೀತ ಸೇವೆಯಿಂದಲೇ ನಿವಾರಣೋಪಾಯ ಮಾಡಿಕೊಳ್ಳುವಷ್ಟು ಸಂಗೀತದ ಜ್ಞಾನವೂ ಶ್ರದ್ಧೆಯೂ ಅವರಲ್ಲಿತ್ತು. ಅವರು ಬೇಟೆಗೆ ಹೋದಾಗ ಜನರು 'ಹೀಗೆ ತಾವು ಹೋಗಕೂಡದು. ಅಪಾಯ ಸಂಭವಿಸಿದರೆ ತಮ್ಮ ಮಧುರ ಸಂಗೀತ ಧ್ವನಿ ನಮ್ಮೆಲ್ಲರಿಗೆ ಕೇಳಲಿಕ್ಕೆ ದೊರೆಯಲಿಕ್ಕಿಲ್ಲ' ಎಂದು ಹೇಳಿದರೆ, 'ನನಗೆ ಹುಲಿಕರಡಿಗಳಿಂದ ಇಲ್ಲವೆ ಅಪಮೃತ್ಯುವಿನಿಂದ ಮರಣವೊದಗಲಾರದು; ನಾನು ಹಾಡುಹಾಡುತ್ತಲೇ ನನ್ನ ಕೊನೆಯ ಶ್ವಾಸವನ್ನು ಬಿಡುವೆನಲ್ಲದೆ ಹಾಗೇ ಸಾಯುವವನಲ್ಲ' ಎಂದು ಹೇಳುವರು. ಅದೇ ರೀತಿ ಮದ್ರಾಸದಿಂದ ಪಾಂಡಿಚೇರಿಗೆ ಹೋಗುವಾಗ ಒಂದು ಸಣ್ಣ ಸ್ಟೇಶನದಲ್ಲಿ ಇಳಿದು ತಮ್ಮ ಜೀವಾಳದ ಜೊತೆಯಾದ ತಂಬೂರಿಯನ್ನು ತಕ್ಕೊಂಡು ರಾತ್ರಿ ೧೧॥ ಗಂಟೆಗೆ ಕಾಲಕ್ಕೆ ತಕ್ಕುದಾದ ದರ್ಬಾರಿ ರಾಗದಲ್ಲಿ ತಮ್ಮ ಕೊನೆಯ ಪ್ರಾರ್ಥನೆ ಮಾಡುತ್ತಲೆ ದಿವಂಗತರಾದರು."

ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನು ಕೋರುತ್ತೇವೆ.

CC-0. Jangamwadi Math Collection. Digitized by eGangotri

# ಕ್ರಿಸ್ತಲೋಕವಾಸಿ ರ್ಯಾಮ್ಸೆ ಮ್ಯಾಕ್ಡೊನಾಲ್ಡರು

ಇದ್ದಾಗ ಬೆಲೆ ತಿಳಿಯುವುದಿಲ್ಲ, ಹೋದ ಮೇಲೆ ತಿಳಿಯುತ್ತದೆ ಎಂಬ ಮಾತು ಕ್ರಿ. ವಾ. ಮ್ಯಾಕ್ಡೊನಾಲ್ಡರಿಗೆ ತುಂಬಾ ಅನ್ವಯಿಸುತ್ತದೆ. ಇದ್ದಾಗ--ತಮ್ಮ ಜೀವಮಾನದ ಕೊನೆಕೊನೆಯ ಕಾಲದಲ್ಲಿ—ತಮ್ಮ ಬೆಲೆಯನ್ನು ಕೆಲ ಮಟ್ಟಿಗೆ ತಾವೆ ಇಳಿಸಿಕೊಂಡರೆಂಬುದು ಸತ್ಯವಾಗಿದ್ದರೂ, ತಮ್ಮ ಆಯುಷ್ಯದ ಮಹತ್ವದ ಭಾಗವನ್ನು ಅವರು ಕೂಲಿಕಾರರ ಅಭೇದ್ಯ ಸಂಘಟನೆಯನ್ನು ಮಾಡುವುದರಲ್ಲಿಯೂ, ಆ ಪಕ್ಷದ ವರ್ಚಸ್ಸನ್ನು ಬೆಳೆಯಿಸುವುದರಲ್ಲಿಯೂ ಕಳೆದರೆಂಬುದನ್ನು ಮರೆಯುವಂತಿಲ್ಲ. ಅದೇಕೆ, ಅವರ ನಾಯಕತ್ವದಿಂದಲೆ ಕೂಲಿಕಾರ ಪಕ್ಷವು ಇಂಗ್ಲಂಡಿನಲ್ಲಿ ಸರಕಾರದ ಸೂತ್ರಗಳನ್ನು ಕೆಲಕಾಲ ಧರಿಸುವಷ್ಟು ಸಮರ್ಥವಾಯಿತು.

ಮ್ಯಾಕ್ಡೊನಾಲ್ಡರು ಕಳೆದ ತಿಂಗಳ ೯ನೆಯ ತಾ.ನ ದಿನ ಪರಲೋಕವಾಸಿಗಳಾದರು. ಆಗ ಅವರಿಗೆ ೭೧ ವರುಷಗಳು ತುಂಬಿದ್ದುವು. ಸ್ಕಾಟ್ಲಂಡಿನಲ್ಲಿ ೧೮೬೬ರ ಅಕ್ಟೋಬರ ೧೨ರಲ್ಲಿ ಅವರು ಹುಟ್ಟಿದರು. ಬಡತನದ ಮೂಲಕ ತಾರುಣ್ಯದಲ್ಲಿಯೆ ಅವರು ಶಿಕ್ಷಣಕ್ಕೆ ಎರವಾಗಬೇಕಾಗಿ ಬಂದಿತು. ಆದರಿಂದ ವಿಶ್ವವಿದ್ಯಾಲಯಿಾನ ಶಿಕ್ಷಣದ ಲಾಭವು ಅವರಿಗೆ ದೊರೆಯಲಿಲ್ಲವಾದರೂ ವೈಯ್ಯಕ್ತಿಕ ವ್ಯಾಸಂಗದಿಂದಲೇ ಅವರು ಒಳ್ಳೆ ನುರಿತ ಬರಹಗಾರರೂ ಮಾತಾಳಿಗಳೂ ಆದರು.

೧೯೦೬ರಲ್ಲಿ ಅವರು ಕೂಲಿಕಾರ ಪಕ್ಷದ ಮುಖಂಡರೆಂದು ಪಾರ್ಲಿಮೆಂಟಿಗೆ ಚುನಾಯಿಸಿ ಬಂದರು. ೧೯೧೮ರ ವರೆಗೂ ಅವರು ಪಾರ್ಲಿಮೆಂಟಿನ ಸದಸ್ಯರಾಗಿದ್ದರು. ಈ ಅವಧಿಯಲ್ಲೊಮ್ಮೆ ಅವರು ಹಿಂದುಸ್ಥಾನಕ್ಕೆ ಬಂದು ಇಲ್ಲಿಯ ಸ್ಥಿತಿಗತಿಗಳನ್ನು ನೋಡಿಕೊಂಡು ಹೋದರು.

ಮ್ಯಾಕ್ಡೊನಾಲ್ಡರು ಶಾಂತತಾವಾದಿಗಳಾದುದರಿಂದ, ಮಹಾಯುದ್ಧವು ಪ್ರಾರಂಭವಾದ ಕೂಡಲೆ ಯುದ್ಧವಿರೋಧಕ ಪಕ್ಷದ ಮುಂದಾಳುತನವನ್ನು ವಹಿಸಿ ಒಳ್ಳೆ ಸಾತತ್ಯದಿಂದ ತಮ್ಮ ಧೋರಣೆಯನ್ನು ಮುಂದುವರಿಸಿದರು. ಇದರಿಂದ ಅವರಿಗೆ ತುಂಬ ತೊಂದರೆಯಾಯಿತು. ಮಹಾಯುದ್ಧವು ನಿಂತ ಮೇಲೆ ನಾಲ್ಕೈದು ವರ್ಷಗಳಲ್ಲಿಯೆ ಅದರ ದುಷ್ಪರಿಣಾಮಗಳು ಪ್ರಕಟವಾಗತೊಡಗಿ, ಇಂಗ್ಲಿಷ್ ಕೂಲಿಕಾರ ಪಕ್ಷದ ಬಲವು ಬೆಳೆಯತೊಡಗಿತು. ೧೯೨೨ರಲ್ಲಿ ಮ್ಯಾಕ್ಡೊನಾಲ್ಡರು ಮತ್ತೆ ಪಾರ್ಲಿಮೆಂಟನ್ನು ಪ್ರವೇಶಿಸಿ, ೧೯೨೪ರಲ್ಲಿ ಪ್ರತಿಪಕ್ಷದ ಅಗ್ರೇಸರತ್ವವನ್ನು ವಹಿಸಿ,ಕೆಲಕಾಲ ಪ್ರಧಾನಪದವಿಯನ್ನೂ ಅಲಂಕರಿಸಿದರು. ೧೯೨೯ರಲ್ಲಿ ಕೂಲಿಕಾರಪಕ್ಷವು ತುಂಬಾ ಬಲಶಾಲಿಯಾದುದರ ಫಲವಾಗಿ, ಮ್ಯಾಕ್ಡೊನಾಲ್ಡರು ಪ್ರಧಾನರೂ ಪರರಾಷ್ಟ್ರಸಚಿವರೂ ಆದರು.

ತಮ್ಮ ಶಾಂತಿಪ್ರಿಯ ಧೋರಣೆಗನುಸಾರವಾಗಿ ಅವರು ರಶಿಯದೊಡನೆ ಸಖ್ಯ ಬೆಳಸಿದರು. ಆದರಿದು ಸನಾತನಿಗಳಿಗೆ (ಕಾನ್ಸರ್ವೇಟಿವರಿಗೆ) ರುಚಿಸದ್ದರಿಂದ, ಅವರು ಸಾವಿರ ತೆರದ ಕುಟಿಲ ತಂತ್ರಗಳನ್ನು ಹೂಡಿ, ಇವರ ಮಂತ್ರಿಮಂಡಲವು ಧೂಳಿ ಮುಕ್ಕುವಂತೆ ಮಾಡಿದರು.

ಈ ಸಂಧಿಸಮಯದಲ್ಲಿಯೆ ಮ್ಯಾಕ್ಡೊನಾಲ್ಡರು ಧ್ಯೇಯಚ್ಯುತರಾಗಿ, 'ಸಂಯುಕ್ತ ಮಂತ್ರಿಮಂಡಲ'ವನ್ನು ನಿರ್ಮಿಸಿ, ಅದರ ಆಶ್ರಯಹಿಡಿದರು ! ಕೂಲಿಕಾರ ಪಕ್ಷವು ಅವರನ್ನು ತಮ್ಮ ಸಂಘಟನೆಯಿಂದ ಕಿತ್ತೊಗೆಯಿತು; ಆದರೂ ಪ್ರಾಗತಿಕರ ಮತ್ತು ಸನಾತನಿಗಳ ಸಹಾಯದಿಂದ ಅವರು ಸಂಯುಕ್ತ ಮಂತ್ರಿಮಂಡಲದ ಧುರೀಣರೆಂದು ಆರು ವರ್ಷ ಕಾಲ ಮೆರೆದರು. ಕೊನೆಗೆ ಇಳಿವಯಸ್ಸಿನ ಕಾರಣದಿಂದ ಅವರು ಅಧಿಕಾರ ನಿವೃತ್ತರಾದರಷ್ಟೆ ಅಲ್ಲ, ಕಳೆದ ವರ್ಷ ಸಾರ್ವಜನಿಕ ಚಟುವಟಿಕೆಗಳಿಂದಲೂ ಪೂರ್ಣವಿರಾಮವನ್ನು ಪಡೆದಿದ್ದರು. ಸನಾತನಿಗಳು ಅವರ ಸೇವೆಗೆ ಸಂತುಷ್ಟರಾಗಿ 'ಅರ್ಲ' ಪದವಿಯನ್ನು ಕೊಡಲೆಳಸಿದರು; ಆದರೆ ತಮ್ಮ ಕೂಲಿಕಾರ ಪಕ್ಷದ ಧೋರಣೆಗೆ ಇದು ತೀರಾ ವಿರುದ್ಧವಾದುದರಿಂದ, ಅದನ್ನು ನಿರಾಕರಿಸಿದರು.

ಮ್ಯಾಕ್ಡೊನಾಲ್ಡರ ಉದಾರಧೋರಣೆಯ ಫಲವಾಗಿಯೆ ಲಾರ್ಡ ಬರ್ಕನಹೆಡ್ಡರ ಉದ್ದಾಮತನಕ್ಕೆ ಕಡಿವಾಣ ಬಿದ್ದಿತು; ವರ್ತುಲ ಪರಿಷತ್ತಿನ ಕಲ್ಪನೆಗೆ ಮೂರ್ತಸ್ವರೂಪ ಬಂದಿತು; ೧೯೩೦ರ ಶಾಸನಭಂಗದ ಚಳವಳಿಯಲ್ಲಿ ಗಾಂಧಿಯವರ ಬಿಡುಗಡೆಯಾಗಿ, ಗಾಂಧಿ-ಆಯರ್ವಿನ್ ಸಂಧಿಯು ಕೊನೆಗಂಡು, ಗಾಂಧಿಯವರು ವರ್ತುಲ ಪರಿಷತ್ತಿಗೆ ಹೋಗುವ ಸಂದರ್ಭವು ಒದಗಿತು. ಇಷ್ಟರಲ್ಲಿಯೆ ಕೂಲಿಕಾರ ಮಂತ್ರಿಮಂಡಲವು ಉರುಳಿದ್ದರಿಂದ, ಮ್ಯಾಕ್ಡೊನಾಲ್ಡರು ನಾಮಮಾತ್ರ ಪ್ರಧಾನರಾದರೂ, ಹಿಂದುಸ್ತಾನದ ಹಣೆಬರಹದ ಗಲಗು ಸರ್ ಸ್ಯಾಮುಯೆಲ ಹೋರರಂತಹ ನಿಷ್ಠುರ ದುರಾರಾಧ್ಯರ ಕೈಸೇರಿತು. ಅದರ ಫಲವೇ ಆ ವಿಷಪೂರಿತ ಜಾತೀಯ ನಿರ್ಣಯವು; ಮತ್ತದರ ಅನಿಷ್ಟ ಪರಿಣಾಮವಾದ ಈಗಿನ ರಾಜ್ಯಘಟನೆಯ ಆಭಾಸಿಕ ಅಧಿಕಾರಗಳು.

ರ್ಯಾಮ್ಸೆ ಮ್ಯಾಕ್ಡೊನಾಲ್ಡರು ಸೋಶಲಿಸ್ಟ ಪಕ್ಷದ ತತ್ವಜ್ಞಾನವನ್ನೂ ರಾಜಕೀಯ ನೀತಿಯನ್ನೂ ವಿವೇಚಿಸುವಂತಹ ಹಲವು ಗ್ರಂಥಗಳನ್ನು ಬರೆದಿರುವರು. ಇದರಿಂದಲೆ ಅವರ ಕೀರ್ತಿಯು ಶಾಶ್ವತವಾಗಿ ನಿಲ್ಲುವುದು.

CC-0. Jangamwadi Math Collection. Digitized by eGangotri

# ಕನ್ನಡದ ಮುನ್ನಡೆ



★

ಶ್ರೀಮತಿಯವರ 'ಸೋದರಮಾವ' ಲಘುಕಥೆಯನ್ನೂ ಅದರ ಜತೆಗೇ ಅವರ ಸಂಕ್ಷಿಪ್ತ ಪರಿಚಯವನ್ನೂ ಹೋದ ಸಂಚಿಕೆಯಲ್ಲಿ ಪ್ರಕಟಿಸಿರುವೆವು. ಈ ಸಲ ಅವರ ಜೀವನ ಪರಿಚಯವನ್ನು ಸ್ವಲ್ಪ ವಿವರವಾಗಿ ಕೊಡುತ್ತಿರುವೆವು.



ಶ್ರೀಮತಿ
**ಎಸ್. ಕಮಲಾದೇವಿ ಎಂ.ಎ.**

ಶ್ರೀಮತಿಯವರು ಹೊಸಪೇಟೆಯ ಪ್ರಾಚೀನ ಸುಸಂಸ್ಕೃತ ಮಾಧ್ವ ಕುಟುಂಬಕ್ಕೆ ಸೇರಿದವರು. ಅವರ ಅಜ್ಜಂದಿರು ಶ್ರೇಷ್ಠ ಸಂಸ್ಕೃತ ಪಂಡಿತರಾಗಿದ್ದು ಸೊಂಡೂರ ದರಬಾರದ ಆಶ್ರಯವನ್ನು ಪಡೆದಿದ್ದರು. ಅವರ ತಂದೆಯವರು ಸುಸಂಸ್ಕೃತರೂ ಉದಾರ ಧಾರ್ಮಿಕ ಸಾಮಾಜಿಕ ವಿಚಾರದವರೂ ಆದ ವಕೀಲರಾಗಿರುವರು. ಅವರ ಪ್ರೋತ್ಸಾಹನದಿಂದಲೆ ಶ್ರೀಮತಿಯವರು ಚಿಕ್ಕಂದಿನಿಂದ ಶಿಕ್ಷಣದಲ್ಲಿ ಮುಂದುವರಿದರು. ಸಂಸ್ಕೃತ-ಕನ್ನಡಗಳ ಅಧ್ಯಯನವನ್ನು ಮನೆಯಲ್ಲಿಯೆ ನಡೆಯಿಸಿ, ೧೯೩೫ರಲ್ಲಿ (ಅಷ್ಟು ಹೊತ್ತಿಗೆ ಅವರ ಬಾಲ್ಯವು ಕಳೆದಿತ್ತು.) ಥಿಯಾಸಾಫಿಕಲ್ ನ್ಯಾಶನಲ್ ಹೈಸ್ಕೂಲನ್ನು ಸೇರಿದರು.

ಇದು ಕಮಲಾದೇವಿಯವರ ಜೀವನದಲ್ಲಿಯ ಹೊಸಗಾಲ. ಅದು ಸಹಶಿಕ್ಷಣದ ಶಾಲೆಯಾಗಿತ್ತಲ್ಲದೆ ವಸತಿಯ ಏರ್ಪಾಡೂ ಅಲ್ಲಿಯೆ ಇತ್ತು. ಅಲ್ಲಿಯೆ ಅವರಿಗೆ ಪ್ರಥಮ ಜೀವನಸಂಪರ್ಕವು; ಅವರ ವ್ಯಕ್ತಿತ್ವವರಳಲು ದೊರೆತ ಪ್ರಥಮ ಅವಸರವು. ಆಗ ಎಸ್. ಎಸ್. ಎಲ್. ಸಿ. ಪರೀಕ್ಷೆಯ ರುಕ್ಷವ್ಯಾಸಂಗವನ್ನು ತೀರಿಸಿಬಿಡಬೇಕೆಂಬ ಲವಲವಿಕೆ ಹುಟ್ಟಿ ಒಂದೇ ವರ್ಷದಲ್ಲಿ ಇಡಿಯ ಅಭ್ಯಾಸಕ್ರಮವನ್ನು ಮುಗಿಸಿದರು. ಮೊದಲನೆಯ ಬಾರಿಗೇ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಕಾಲೇಜನ್ನು ಸೇರಿದರು ಮತ್ತು ಇಂಟರಮೀಡಿಯೇಟ್ ಪರೀಕ್ಷೆಯಲ್ಲಿ ಮದನಪಲ್ಲೆ ಕಾಲೇಜಿನಿಂದ ತೇರ್ಗಡೆ ಹೊಂದಿದರು.

ಇಂತು ಅವರ ಶಾಲೆ-ಕಾಲೇಜುಗಳಲ್ಲಿಯ ಶಿಕ್ಷಣವು ಯಶಃಪೂರಿತವಾಗಿದ್ದು, ಅದಕ್ಕೆ ಕಲಶವಿಟ್ಟಂತೆ ಬನಾರಸ ಹಿಂದೂ ವಿಶ್ವವಿದ್ಯಾಲಯದಿಂದ ಎಂ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಲೇಖನ-ಅಧ್ಯಾಪನಗಳ ಮೂಲಕ ದೇಶಸೇವೆ ಮಾಡುವ ಧ್ಯೇಯವುಳ್ಳವರಾದುದರಿಂದ ಇದೀಗ ಋಷಿ ವ್ಯಾಲಿಯ ಶಾಲೆಯಲ್ಲಿ ಶಿಕ್ಷಿಕೆಯರಾಗಿ ಕೆಲಸಮಾಡುತ್ತಿದ್ದಾರೆ.

ಕನ್ನಡ ಬಾಲಬಾಲಿಕೆಯರಿಗೆ ಉಚಿತ ಸಂಸ್ಕಾರ ಕೊಡುವ ಕಾರ್ಯವು ಶ್ರೀಮತಿಯವರಿಂದ ಊರ್ಜಿತವಾಗಿ ಸಾಗಲಿಯೆಂಬುದೇ ನಮ್ಮ ಹಾರಯಿಕೆ.

### ಕೊಪ್ಪಳವು ನಡುಕಟ್ಟಿದೆ.

"ಕಣ್ಮರೆಯಾದ 'ನಾ. ಭಾ.' 'ತಿ. ಭಾ.' ಶಾಸ್ತ್ರಿಗಳ ಸ್ಮಾರಕಾರ್ಥವಾಗಿ," ಕೊಪ್ಪಳದಲ್ಲಿ ೧೯-೧೧-೩೭ನೆಯ ಶುಕ್ರವಾರ ದಿನ ಕರ್ನಾಟಕಸಂಘದ ಕಚೇರಿಯಲ್ಲಿ, ಜನಾರ್ದನರಾವ ವಕೀಲರ ಅಧ್ಯಕ್ಷತೆಯಲ್ಲಿ ಕಾರ್ಯಕಾರಿ ಮಂಡಲವನ್ನು ರಚಿಸಿ ಅಲ್ಲಿಯ ಗಂಗಾಧರ ಭಾವು ಶಾಸ್ತ್ರಿಯವರೇ ಮೊದಲಾದ ತರುಣರು ಹೊಸ ಹುರುಪಿನ ಕಾರ್ಯಕ್ರಮವನ್ನು ಹಮ್ಮಿದ್ದಾರೆ. "ಕಳೆದುದಕೆ ಕಳವಳಿಸೆ ಫಲವಿಲ್ಲ. ಇರುವಿನ ಅರಿವೇ ಕಾರ್ಯದ ಕೊನರು. ಇನ್ನಾದರೂ ನಾವು ಹಾಸಿಗೆಯನ್ನು ಸುತ್ತಬೇಕು" ಎಂಬ ಬೀಜವಾಕ್ಯವನ್ನು ನೆನೆಯುತ್ತ ಕಾರ್ಯರಂಗಕ್ಕಿಳಿದಿದ್ದಾರೆ.

### ಬಳ್ಳಾರಿಯಲ್ಲಿ ವಿದ್ವಾನ್ ವೈ. ನಾಗೇಶಶಾಸ್ತ್ರಿಗಳು

ಹೊಸಪೇಟೆಯ ಗೌ. ಟ್ರೇನಿಂಗ್‌ಸ್ಕೂಲ್ ಹೆಡ್ಮಾಸ್ತರಾದ ವಿದ್ವಾನ್ ಎಚ್. ರಾಮರಾವ್ ಎಂ. ಎ. ಅವರು ಅಲ್ಲಿ ಕನ್ನಡದ ಬಳ್ಳಿಯನ್ನು ಕುಶಲತೆಯಿಂದ ಹಬ್ಬಿಸುತ್ತಿರುವರು. ಸರ್ವದರ್ಶನತೀರ್ಥ ವೈ. ನಾಗೇಶಶಾಸ್ತ್ರಿಗಳವರು ೯—೧೧—೩೭ನೆಯ ದಿನ ಹೊಸಪೇಟೆ ಮಾರ್ಗವಾಗಿ ಹೋಗುವ ಸಂಧಿಯನ್ನು ಸಾಧಿಸಿ, ಅವರಿಂದ ತಾವೆ ಏರ್ಪಡಿಸಿದ 'ವಿದ್ಯಾನಗರ ಕನ್ನಡ ಸಾಹಿತ್ಯಸಮಿತಿ'ಯ ವಿದ್ಯಾರ್ಥಿ ಸದಸ್ಯರಿಗೆ ನಾಲ್ಕು ಸವಿಮಾತುಗಳನ್ನು ಹೇಳಿಸಿದರು.

### ಅಹಮ್ಮದನಗರದಲ್ಲಿಯೂ ನವಚೈತನ್ಯ

ಡಿ. ಮತ್ತು ಸೆ. ಜಜ್ಜರಾದ ಶ್ರೀ. ಹುಲಕೋಟಿಯವರ ಅಧ್ಯಕ್ಷತೆಯಲ್ಲಿ ಸೇರಿದ ಕ. ಸಂಘದ ಸಭೆಯಲ್ಲಿ ಕಾರ್ಯಕಾರಿಮಂಡಲವು ಆರಿಸಲ್ಪಟ್ಟು, ಕಾರ್ಯಪ್ರವೃತ್ತವಾಗಿದೆ.

### ಮುಂಬಯಿಯ ರಾತ್ರಿಶಾಲೆ

ಇಲ್ಲಿಯ ಕರ್ನಾಟಕ ರಾತ್ರಿಶಾಲೆಯ ೧೩ನೆಯ ವಾರ್ಷಿಕ ಸಮಾರಂಭವು ಸರ್ ಕವಾಸಜಿ ಜಹಾಂಗಿರ ಹಾಲಿನಲ್ಲಿ ಸಡಗರದಿಂದ ನೆರವೇರಿತು. ಮುಂಬಯಿಯ ಅಕೌಂಟಂಟ ಜನರಲ್‌ರವರಾದ ಸರ್. ಪಿ. ರಾಘವೇಂದ್ರರಾಯರು ಅಧ್ಯಕ್ಷಸ್ಥಾನವನ್ನಲಂಕರಿಸಿದ್ದರು. ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ. ಸಂಜೀವಶೆಟ್ಟಿಯವರು ಓದಿದ ವರದಿಯಿಂದ, ಶಾಲೆಯಲ್ಲಿ ೧೩೨ ಹುಡುಗರೂ ೨ ಹುಡುಗಿಯರೂ ಕನ್ನಡ ಕಲಿಯುತ್ತಿರುವರಾಗಿ ತಿಳಿಯುತ್ತದೆ. '೭೫೦೦೦ ಕನ್ನಡಿಗರ ಜನಸಂಖ್ಯೆಗೆ ಒಂದೆರಡು ಕನ್ನಡ ಶಾಲೆಗಳು ಸಾಕಾಗಲಿಕ್ಕಿಲ್ಲ. ಹಗಲು ಹೊತ್ತು ಚಹದಂಗಡಿಗಳಲ್ಲಿ ದುಡಿಯುವ ಚಿಕ್ಕ ಕನ್ನಡ ಮಕ್ಕಳು ರಾತ್ರಿ ವಿದ್ಯೆ ಕಲಿಯಬೇಕಾಗಿ ಬರುವುದು ನಮ್ಮ ದುರ್ಭಾಗ್ಯ. ಸಣ್ಣ ಸಣ್ಣ

CC-0. Jangamwadi Math Collection. Digitized by eGangotri

ಳನ್ನು ದುಡಿಸಬಾರದೆಂಬ ಕಾಯಿದೆಯನ್ನು ಸರಕಾರದಿಂದ ಮಾಡಿಸಿ, ನಮ್ಮ ಕನ್ನಡ ಮಕ್ಕಳನ್ನು ಉಳಿಸಬೇಕು....' ಎಂದು ಮುಂತಾಗಿ ಶ್ರೀ. ದಿನಕರ ದೇಸಾಯಿಯವರು ಹೇಳಿದರು. ಸರ್ ರಾಘವೇಂದ್ರರಾಯರು ಕನ್ನಡದಲ್ಲಿ ಮಾತನಾಡುತ್ತ ಉಚಿತ ಶಬ್ದಗಳಲ್ಲಿ ಸಂಸ್ಥೆಯ ಕಾರ್ಯವನ್ನು ಪ್ರಶಂಸಿಸಿ, ಸಾರ್ವಜನಿಕರ ಪ್ರೋತ್ಸಾಹವನ್ನು ಕೋರಿದರು....ಮುಂಬಯಿಯ ಮಹಾನಗರಿಯಲ್ಲಿ ಕನ್ನಡದ ಹೀನದೆಸೆಯನ್ನು ಕಳೆಯಲು ಒದ್ದಾಡುವ ಈ ಸಂಸ್ಥೆಗೆ ಗೆಲುವಾಗಲಿ!

### ಮುಂಬರುವ ಚಟುವಟಿಕೆಗಳು

ಬರುವ ಜನವರಿ ೧೭ನೆಯ ತಾ. ನ ದಿನ ಮುಂಬಯಿಯ ಗವರ್ನರರಾದ ಸರ್ ರೋಜರ್ ಲುಮ್ಲೆಯವರ ಹಸ್ತದಿಂದ ಬೆಳಗಾವಿಯಲ್ಲಿ ಕರ್ನಾಟಕ ಕೃಷಿಪ್ರದರ್ಶನದ ಅನಾವರಣ ಸಮಾರಂಭವು ಜರುಗುವುದು. ಇಷ್ಟು ಭವ್ಯವಾದ ಪ್ರದರ್ಶನವು ಕರ್ನಾಟಕದಲ್ಲಿ ಈ ಮೊದಲು ಜರುಗಿರಲಿಲ್ಲ. ಅಹಮದಾಬಾದ—ಪುಣೆಗಳ ಪ್ರದರ್ಶನಗಳಿಗೆ ಹಳ್ಳಿಪಳ್ಳಿಗಳ ರೈತರಿಗೆ ಹೋಗಲನುಕೂಲವಾಗದ್ದರಿಂದ ಈ ಪ್ರದರ್ಶನದ ಯೋಜನೆಯು ಕಾರ್ಯಕರ್ತರಿಗೆ ಹೊಳೆಯಿತು. 'ರಾಣೀಬಗೀಚಾ' ಎಂಬ ೪೨ ಎಕರೆಯ ವಿಸ್ತೀರ್ಣವಾದ ಭೂಮಿಯನ್ನು ಪ್ರದರ್ಶನಕ್ಕಾಗಿ ತೆಗೆದುಕೊಳ್ಳಲಾಗಿದೆ. ತರತರದ ಕಬ್ಬು, ಅಲ್ಲ, ಅರಿಸಿಣ, ಅನನಸ, ದಾಳಿಂಬ, ಸುರಣಗಡ್ಡೆ, ಗೋವಿನ ಜೋಳ ಮೊದಲಾದ ಬಗೆಬಗೆಯ ಬೆಳೆಗಳನ್ನು ಈಗಾಗಲೆ ಪ್ರದರ್ಶನಾರ್ಥವಾಗಿ ಬೆಳೆದಿದ್ದಾರೆ. ಘನ ಅಧಿಕಾರಿ ವರ್ಗವೂ ಸಂಸ್ಥಾನಿಕರೂ ಮಂತ್ರಿಗಳೂ ಪ್ರದರ್ಶನಕ್ಕೆ ಚೆನ್ನಾಗಿ ಬೆಂಬಲವಿತ್ತಿದ್ದಾರೆ. ಸಾರ್ವಜನಿಕ ಆರೋಗ್ಯ, ಶಿಕ್ಷಣ, ಸಹಕಾರ, ಅಡವಿ, ಪಶುರೋಗ ಚಿಕಿತ್ಸೆ, ಉದ್ಯೋಗಧಂದೆ, ಗ್ರಾಮೋದ್ಯೋಗ ಮುಂತಾದ ಖಾತೆಗಳ ಪರವಾಗಿ ಅಂಕಣ (ಸ್ಟಾಲು)ಗಳನ್ನು ಏರ್ಪಡಿಸಿದ್ದಾರೆ. ಒಟ್ಟು ೬೫೦೦೦ ರೂ.ಯ ವೆಚ್ಚದ ಅಂದಾಜು ಮಾಡಲಾಗಿದೆ. ಈ ಅಭೂತಪೂರ್ವ ಪ್ರದರ್ಶನದಿಂದ ಕರ್ನಾಟಕದ ಕೃಷೀವಲರು ಲಾಭ ಹೊಂದಲಿ!

ಜಮಖಂಡಿಯಲ್ಲಿ ನೆರೆಯಲಿರುವ ಕ. ಸಾ. ಸಮ್ಮೇಲನದ ಸಿದ್ಧತೆ ಭರದಿಂದ ಸಾಗಿದೆ. ಎಲ್ಲರೂ ಉತ್ಸಾಹದಿಂದ ದುಡಿಯುತ್ತಲಿದ್ದಾರೆ. ತಾ. ೨೧ನೆಯ ದಿನ ಸ್ವಾಗತಸಮಿತಿಯನ್ನು ಏರ್ಪಡಿಸಲಾಯಿತು. ಶ್ರೀ. ಪಂಡಿತಪ್ಪ ರಾಯಪ್ಪ ಚಿಕ್ಕೋಡಿ ಬಿ. ಎ. ಅವರು ಸ್ವಾಗತಾಧ್ಯಕ್ಷರೂ ಶ್ರೀ. ಬಿಂದೂರಾವ ನರಗುಂದಕರ ಅವರು ಕಾರ್ಯಾಧ್ಯಕ್ಷರಾಗಿಯೂ ಆರಿಸಲ್ಪಟ್ಟರು.

ಕರ್ನಾಟಕದ ಮಹಿಳೆಯರಲ್ಲಿ ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಜಾಗೃತಿಯನ್ನು ಹುಟ್ಟಿಸುವ ಉದ್ದೇಶದಿಂದ ಸ್ಥಾಪಿತವಾದ **ಕ. ಭಗಿನೀಮಂಡಲದ ಪರಿಷತ್ತು** ಹುಬ್ಬಳ್ಳಿಯಲ್ಲಿ ಬರುವ ೨೫—೨೬ ತಾ.ಗಳಲ್ಲಿ ಸೇರುವುದು. ಮದ್ರಾಸ ಅಸೆಂಬ್ಲಿಯ ಉಪಾಧ್ಯಕ್ಷರಾದ ಶ್ರೀಮತಿ ರುಕ್ಮಿಣಿ ಲಕ್ಷ್ಮೀಪತಿ ಬಿ. ಎ. ಅವರನ್ನು ಅಧ್ಯಕ್ಷತೆಗಾಗಿ ಬಿನ್ನವಿಸಲಾಗಿದೆ.

**ಕರ್ನಾಟಕ ಮಹಿಲಾ ಮಂಡಲದ** ಪರವಾಗಿ ಧಾರವಾಡದ ಶ್ರೀ. ಸೌ. ಶ್ಯಾಮಲಾಬಾಯಿ ಬೆಳಗಾಂವಕರ ಅವರು ನಾಗಪುರದಲ್ಲಿ ನೆರೆಯುವ ಅ. ಭಾ. ಮಹಿಳಾ ಪರಿಷತ್ತಿಗೆ ಪ್ರತಿನಿಧಿಗಳಾಗಿ ಹೋಗಲಿದ್ದಾರೆ. ಬಳ್ಳಾರಿಯ ಮಹಿಳಾ ಮಂಡಲವನ್ನು ಅ. ಕ. ಮಹಿಳಾಮಂಡಲಕ್ಕೆ ಜೋಡಿಸಿಕೊಂಡಿದ್ದಾಗಿದೆ. ಅಂತೂ ಆಂಧ್ರ ಶಾಖೆಗೆ ಕೂಡಿಸಬೇಕೆಂದಿದ್ದ ಹೊಂಚು ತಪ್ಪಿತೆನ್ನಬೇಕು.

### ಅಭಿನಂದನೀಯ ದಾನಗಳು

ಚಿತ್ರದುರ್ಗದ ಶ್ರೀಮನ್ನಿರಂಜನ ಮುರಘಾರಾಜೇಂದ್ರ ಸ್ವಾಮಿಗಳವರು ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರಿಯಲ್ಲಿ ಕಟ್ಟಲಿರುವ ಪ್ಯಾಥೊಲಾಜಿಕಲ್ ಲ್ಯಾಬೋರೇಟರಿಗೆ ೫೦,೦೦೦ ರೂ.ಗಳನ್ನು ದಾನಮಾಡಿದ್ದಾರೆ.

ದಾವಣಗೆರೆಯ ಶ್ರೀ. ಮುರಗಪ್ಪಯ್ಯನವರು ಅಲ್ಲಿ ಕಟ್ಟುತ್ತಲಿರುವ ಕ್ಷಯರೋಗದ ಆಸ್ಪತ್ರೆಗೆ ೧೭,೫೦೦ ರೂ.ಗಳ ದಾನವನ್ನು ಮಾಡಿದ್ದಾರೆ.

### ಮೈಸೂರು ವಿ. ವಿ. ಪದವೀದಾನ ಸಮಾರಂಭ

ಮೈಸೂರು ವಿಶ್ವವಿದ್ಯಾನಿಲಯದ ಪದವೀದಾನ ಸಮಾರಂಭ ಮಹೋತ್ಸವವು ಅಕ್ಟೋಬರ ೨೯ನೆಯ ತಾ.ನ ದಿನ ಜಗನ್ಮೋಹನ ಅರಮನೆಯಲ್ಲಿ ವಿಜೃಂಭಣೆಯಿಂದ ನೆರವೇರಿತು. ಶ್ರೀಮನ್ಮಹಾರಾಜರು ವಿಶ್ವವಿದ್ಯಾಲಯಿನ ವೇಷದಲ್ಲಿ ಅಂಗರಕ್ಷಕರೊಂದಿಗೆ ಆಗಮಿಸಿ, ೨೦೦ ಮಂದಿಗಳಿಗೆ ವಿಶ್ವವಿದ್ಯಾಲಯದ ಪದವಿಗಳನ್ನು ಸ್ವಹಸ್ತದಿಂದ ಅನುಗ್ರಹಿಸಿದರು. ಮದ್ರಾಸಿನ ಶ್ರೀ. ಟಿ. ಆರ್. ವೆಂಕಟರಾಮಶಾಸ್ತ್ರಿಯವರು ಮುಖ್ಯಭಾಷಣವೀಯುತ್ತಾ ಇಂತೆಂದರು:—

'ಮೈಸೂರಿನ ವಿ. ವಿ. ನಿಲಯವು ಸ್ಥಾಪಿತವಾಗಿ ೨೫ ವರ್ಷಗಳಾದುವು. ಸ್ವಂತ ವಿಶ್ವವಿದ್ಯಾನಿಲಯವನ್ನು ಸ್ಥಾಪಿ-

CC-0. Jangamwadi Math Collection. Digitized by eGangotri

ಸಲು ಮೈಸೂರು ಮಾಡಿದ ನಿರ್ಣಯವು ಅತಿ ಮುಖ್ಯವಾದುದು. ಯುನಿಟರಿ ಮಾದರಿಯ ವಿಶ್ವವಿದ್ಯಾನಿಲಯವು ಮೈಸೂರಿನದೇ ಮೊಡಲು. ಬಳಿಕ ದಕ್ಷಿಣ ಭಾರತದಲ್ಲಿ ಈ ಬಗ್ಗೆ ಉದ್ಯಮವು ನಡೆಯಿತು. ದೇಶೀಯ ವಿಶ್ವವಿದ್ಯಾನಿಲಯಗಳಿಗೆ ಸ್ವತಂತ್ರ ಪ್ರಯೋಗ ಮಾಡಲು ಅನುಪಮ ಅವಕಾಶವಿದೆ....ಇಲ್ಲಿಯ ಮಿಡಲ್-ಹೈಸ್ಕೂಲುಗಳಲ್ಲಿ ಕನ್ನಡದ ಮೂಲಕವೇ ಪಾಠಪ್ರವಚನಗಳು ನಡೆಯುತ್ತಿರುವುದು ಸ್ತೋತ್ರಾರ್ಹವು. ಆದರೆ ಕಾಲೇಜು ಮೊದಲಾದ ಎಲ್ಲ ಶಿಕ್ಷಣಪ್ರಪಂಚದಲ್ಲಿಯೂ ಕನ್ನಡವೇ ತನ್ನ ಧ್ವಜ ಹಾರಿಸುವ ಕಾಲವನ್ನು ನಿರೀಕ್ಷಿಸಬೇಕು....ಒಂದು ಜನಾಂಗದ ಜ್ಞಾನ-ಸಂಸ್ಕೃತಿಗಳ ಆಳವನ್ನು ಪರೀಕ್ಷಿಸಲು ಆ ಜನಾಂಗದ ಭಾಷೆಯೇ ಶ್ರೇಷ್ಠವಾದ ಸಾಧನ. ಪರಭಾಷೆಯ ಮೂಲಕ ಶಿಕ್ಷಣ ಕೊಡುವುದರಿಂದ ಅಧಿಕವಾಗಿ ಅನೀತಿಯುತ ಪರಿಣಾಮವುಂಟಾಗುತ್ತದೆ....ಸ್ತ್ರೀಯರಿಗೆ ವೇದ ಓದುವ ಹಕ್ಕಿಲ್ಲವೆಂದು ಹೇಳುವ ಪ್ರತೀತಿಯಿದೆ. ಅದು ಸಾಧುವಾದುದಲ್ಲ. ಅವರಿಗೆ ತಾತ್ವಿಕ ನೈತಿಕ ವಿದ್ಯಾಭ್ಯಾಸವು ಅತ್ಯಗತ್ಯ. ಸ್ತ್ರೀಯರಿಂದ ವೇದಕ್ಕೆ ಆಗಿರುವಷ್ಟು ರಕ್ಷಣೆಯು ಪುರುಷರಿಂದ ಆಗಿಲ್ಲವೆಂದು ಹಲವರು ಅಭಿಪ್ರಾಯಪಟ್ಟಿದ್ದಾರೆ. ಪ್ರಾಚೀನ ಕಾಲದಲ್ಲಿ ಋಗ್ವೇದ ಮಂತ್ರಗಳನ್ನು ರಚಿಸಿದ ಮೈತ್ರೇಯಿ ಮೊದಲಾದ ಮಹಿಳೆಯರಿರಲಿಲ್ಲವೆ ? ನಮ್ಮಲ್ಲಿ ಆಧುನಿಕ ಮೈತ್ರೇಯಿಯರು ಕಾಣುವುದಿಲ್ಲ. ಆದರೆ ವೆಬ್, ಹ್ಯಾಮಂಡ್, ರಿಸ್ ಡೇವಿಡ್, ಕ್ಯೂರಿ ನಾಮಕ ಪ್ರತಿಭಾವಂತರು ಇತರ ದೇಶಗಳಲ್ಲಿದ್ದಾರೆ....ಸತ್ಯಶ್ರದ್ಧೆ, ಧರ್ಮಶ್ರದ್ಧೆ ಇವು ಪ್ರಾಚೀನ ಶಿಕ್ಷಣದ ರಹಸ್ಯ. ಜ್ಞಾನಪ್ರಚಾರವೇ ಆ ಶಿಕ್ಷಣದ ಪವಿತ್ರ ಕರ್ತವ್ಯವಾಗಿತ್ತು. ಪ್ರಾಚೀನ ಗುರುಶಿಷ್ಯರ ಜೀವನದ ಆದರ್ಶವು ಇಂದಿಗೂ ಅನುಸರಣೀಯವಾದುದು.

### ವಾಕ್ಪಟು ಸಾವಂತರು

ಗದುಗಿನಲ್ಲಿ ನಡೆದ ಅಖಿಲ ಕರ್ನಾಟಕ ವಾಕ್ಸ್ಪರ್ಧೆಯಲ್ಲಿ ಶ್ರೀ. ಎಸ್. ಕೆ. ಸಾವಂತರು ಪ್ರಥಮ ಬಹುಮಾನ ಪಡೆದರು. ಹುಬ್ಬಳ್ಳಿಯ ನ್ಯೂ ಇಂಗ್ಲಿಷ್ ಹೈಸ್ಕೂಲಿನ ವಿದ್ಯಾರ್ಥಿಗಳಿವರು; ದಲಿತವೆಂಬು ಕರೆಯಲ್ಪಡುವ ವರ್ಗಕ್ಕೆ ಸೇರಿದವರು. ಇವರ ವಾಗ್ವೈಖರಿ ಇನ್ನೂ ಬೆಳಗಲಿಯೆಂದು ನಮ್ಮ ಹಾರಯಿಕೆ !

### ಶ್ರೀಮತಿ ಸೌ. ಕಮಲಾಬಾಯಿ ಜಮಖಂಡಿ

ಬಿ. ಎ. ಬಿ. ಟಿ. (ಬಾಂಬೆ), ಟಿ. ಡಿ. (ಡಬ್ಲಿನ್)



ಇವರ ಪರಿಚಯವನ್ನು ಕಳೆದ ಸಂಚಿಕೆಯಲ್ಲಿಯೆ ಕೊಟ್ಟಿದ್ದೇವೆ. ಅದರಲ್ಲಿ ಒಂದೆರಡು ತಪ್ಪು ಸಂಗತಿಗಳು ಪ್ರಕಟವಾದುದರಿಂದ ಇಲ್ಲಿ ತಿದ್ದಿ ಬರೆಯುತ್ತಿದ್ದೇವೆ.

ಶ್ರೀಮತಿಯವರು ಮುಂಬಯಿ ಸರಕಾರದ ಅನುಮತಿಯಿಂದ ಝಾಂಝಿಬಾರದ ಆಗಾಖಾನರ ಹೈಸ್ಕೂಲಿನ ಪ್ರಿನ್ಸಿಪಾಲರಾಗಿ ೨ ವರ್ಷ ಕೆಲಸಮಾಡಿದರು. ಕಳೆದ ಅಕ್ಟೋಬರ ೩೦ನೆಯ ದಿನ ಹಿಂದುಸ್ತಾನಕ್ಕೆ ಎಸ್. ಎಸ್. ಟೈರಿಯಾ ಎಂಬ ಹಡಗಿನಿಂದ ಮರಳಿದರು.

ಫೋಟೋ ಎನ್‌ಲಾರ್ಜಮೆಂಟ

ಬ್ರೊಮಾಯಿಡ್—೨೦" × ೧೬"

ತದ್ರೂಪ—ಕಲಾಕೃತಿ

—ಇಂಗ್ಲಿಷ್ ತಜ್ಞರಿಂದ—

ರೂ. ೫ ಮಾತ್ರ

೧ ರೂ. ಮುಂಗಡ ಹಣಕೊಡನೆ ಫೋಟೊ ಕಳಿಸಿರಿ:

ಫೋಟೊ ಎನ್‌ಲಾರ್ಜಿಂಗ ವರ್ಕ್ಸ್, ಅಮಳನೇರ

(ಪೂರ್ವ ಖಾನದೇಶ)

CC-0. Jangamwadi Math Collection. Digitized by eGangotri

## ಇವೊತ್ತಿನ ಮೂರು ದೊಡ್ಡ ಪ್ರಶ್ನೆಗಳು ???

೧ ನೆಯದು ? ನಿಮ್ಮ ಮಕ್ಕಳ ಮದುವೆಯೇ ಮೊದಲಾದ ವೆಚ್ಚದ ಚಿಂತೆಯಿಂದ ಹೇಗೆ ಪಾರಾಗಬೇಕು ?

೨ ನೆಯದು ??. ಪಶ್ಚಾತ್ಕಾಲದಲ್ಲಿ ನಿಮ್ಮ ಪ್ರೀತಿಯ ಬಳಗದವರ ಆಪದ್ರಕ್ಷಣೆಗಾಗಿ ಸಾಕಷ್ಟು ಹಣವನ್ನು ಹೇಗೆ ಉಳಿಸಬೇಕು?

೩ ನೆಯದು ??? ಮನೆಮಾಲೀಕರ ತೊಂದರೆಯಿಲ್ಲದಂತೆ ಸ್ವಂತದ ಮನೆ ಕಟ್ಟಿಸಿಕೊಂಡು ಹೇಗೆ ಸುಖವಾಗಿ ಜೀವಿಸಬೇಕು ?

ಮೇಲಿನ ಪ್ರಶ್ನೆಗಳು ಬಿಟ್ಟರೆ ಜೀವನದ ಪ್ರಶ್ನೆಯನ್ನೇ ಬಿಡಿಸಿದಂತಾಗುವದು.

'ಹೈದರಾಬಾದ ಪಾಯೋನೀರ'ವು (ನೀವು ನಿಜವಾಗಿಯೂ ಆತುರರಾಗಿದ್ದರೆ) ನಿಮ್ಮ ಅಪೇಕ್ಷೆಗಳನ್ನು ಅಲ್ಪವೆಚ್ಚದಲ್ಲಿ ಪೂರೈಸುವುದು.

## ಉತ್ತರಗಳು !

೧ ನೆಯದು ? ಒಟ್ಟಿನಲ್ಲಿ ೧೨-೮-೦ ಮಾತ್ರ ತಗಲುವ 'ಹೈದರಾಬಾದ ಪಾಯೋನಿಯರ'ದ ಮ್ಯಾರೇಜ ಡಿಬೆಂಚರ ಬಾಂಡ್. ಇದು ನಿಮ್ಮ ಮಕ್ಕಳ ವಿವಾಹದ ವೆಚ್ಚಕ್ಕೆ ಯೋಗ್ಯ ಇಡುಗಂಟಾಗಿದೆ.

೨ ನೆಯದು ?? ಒಟ್ಟಿನಲ್ಲಿ ೧೨-೮-೦ ಮಾತ್ರ ತಗಲುವ 'ಹೈದರಾಬಾದ ಪಾಯೋನಿಯರ'ದ ಲಾಯಿಫ್ ಬಾಂಡ್. ನಿಮ್ಮ ವಾರ್ಧಕ್ಯದಲ್ಲಿಯೂ ಮರಣಾನಂತರದಲ್ಲಿಯೂ ಹೆಂಡಿರುಮಕ್ಕಳಿಗೆ ಒಳ್ಳೆಯ ಜೀವನವ್ಯವಸ್ಥೆಯಾಗಿದೆ.

೩ ನೆಯದು ??? 'ಹೈದರಾಬಾದ ಪಾಯೋನಿಯರ'ದ ಜೀವವಿಮೆ. ದೊಡ್ಡ ಮುನಿಸಿಪಲ್ ಪಟ್ಟಣಗಳಲ್ಲಿ ಬೇಕಾದ ಒಂದರಲ್ಲಿ ಸ್ವಂತದ ಮನೆ ಮಾಡಿಕೊಳ್ಳುವುದಕ್ಕೆ ಸಾಕಷ್ಟು ಧನಸಹಾಯಮಾಡಿ, ಮನೆ ಮಾಲೀಕರ ಕಾಟತಪ್ಪಿಸುವುದು.

ಹೆಚ್ಚಿನ ವಿವರಗಳಿಗೆ ಬರೆಯಿರಿ :—

ಟೆಲಿಗ್ರಾಮ : "ಪಾಯೋನಿಯರ"

**ದಿ ಹೈದರಾಬಾದ ಪಾಯೋನಿಯರ ಅಶ್ಯೂರನ್ಸ ಕಂ. ಲಿ.**

೮೩/೩ ಪಬ್ಲಿಕ್ ಗಾರ್ಡನ್ ರೋಡ್, ಹೈದರಾಬಾದ (ದಕ್ಷಿಣ)

ಟೆಲಿಫೋನ : ನಂ. ೮೧೦

**ಬೇಕು:**— ಒಳ್ಳೆಯ ವೇತನದ ಮೇಲೆ ಕೆಲಸ ಮಾಡುವ ಜಿಲ್ಲಾ ಆರ್ಗನಾಯಿಝರರು ಬೇಕು. ಕೆಲಸಕ್ಕೆ ತಕ್ಕಂತೆ ಪ್ರತಿಫಲ. ವರ್ಚಸ್ಸುಳ್ಳವರೂ ಯೋಗ್ಯತೆಯುಳ್ಳವರೂ ಮಾತ್ರ ಸಾದ್ಯಂತ ಸಂಗತಿಗಳೊಡನೆ ಬರೆದುಕೊಳ್ಳಬೇಕು.

## ನಮ್ಮಲ್ಲಿ ದೊರೆಯುವ ವಿಜಯನಗರ ಸಾಹಿತ್ಯ

೧. **Vijayanagara Sexcentenary Commemoration Volume:** ವಿಜಯನಗರ ಸ್ಮಾರಕೋತ್ಸವ ಮಂಡಲದವರ ಇಂಗ್ಲಿಷ್ ಪ್ರಕಟನೆ: ಭಾರತದ ವಿದ್ವನ್ಮಣಿಗಳ ಪ್ರಬಂಧಗಳು; ೩೪ ಇಡಿಪುಟದ ಚಿತ್ರಗಳು; ೩೮೦ ಪುಟಗಳು. ೧೦—೦—೦

೨. ವಿಜಯನಗರ ಸಾಮ್ರಾಜ್ಯ— ದೇಸಾಯಿ ಪಾಂಡುರಂಗರಾಯರು ಬರೆದುದು. ಕನ್ನಡದಲ್ಲಿಯ ವಿಜಯನಗರ ಚರಿತ್ರಾತ್ಮಕ ಪ್ರಥಮ ಸಮಗ್ರ ಗ್ರಂಥವೆಂದರೆ ಇದೇ. ೨—೦—೦

೩. ಸಚಿತ್ರ ವಿಜಯನಗರ—ಅಲ್ಬಂ—ಕನ್ನಡ ವಿವರಣೆ ಸಹಿತ. ಪ್ರಯಾಣಿಕರಿಗೆ ಅತ್ಯುಪಯುಕ್ತ. ೦—೧೨—೦

೪. ಜಯಕರ್ನಾಟಕ ವಿಜಯನಗರ ವಿಶೇಷಾಂಕ— ವಿಪುಲಚಿತ್ರಗಳು, ಸಂಗ್ರಾಹ್ಯ ಲೇಖನಗಳು. ೦—೬—೦

೫. ನಾಗರಿಕ—ಎಂ. ಆರ್. ಶ್ರೀ. ವಿರಚಿತ ಪದ್ಯನಾಟಕ ೦—೧೨—೦

೬. नागरिक— ಮೇಲಿನದರ ಹಿಂದೀ ಅನುವಾದ. ಹಿಂದೀ ಜ್ಞಾನಯಾತ್ರೀಮಂಡಲದ ಪ್ರಕಟನೆ. ೦—೮—೦

೭. ವಿದ್ಯಾರಣ್ಯವಿಜಯ— (ನಾಟಕ) ಡಿ. ವಿ. ಗುಂಡಪ್ಪನವರು ಬರೆದುದು. ಸಾದಾ ೧—೪—೦

೮. " " ಕ್ಯಾಲಿಕೊ ೨—೦—೦

೯. ವಿದ್ಯಾರಣ್ಯರ ಸಮಕಾಲೀನರು— (ಐತಿಹಾಸಿಕ ಗ್ರಂಥ) ಕ್ಯಾಲಿಕೊ ೨—೪—೦

೧೦. ಕೃಷ್ಣದೇವರಾಯ—(ನಾಟಕ) ಶ್ರೀ. ಎಸ್. ಆರ್ ಕರೂರ ಅವರು ಬರೆದುದು. ೦—೮—೦

೧೧. ಪಂಪಾಯಾತ್ರೆ— (ಸಚಿತ್ರ) "ವಿ. ಸೀ." ೦—೧೨—೦

೧೨. ತಾಳೀಕೋಟೆ— (ಏಕಾಂಕದೃಶ್ಯ) "ಶ್ರೀನಿವಾಸ" ೦—೧೦—೦

**ಜಯಕರ್ನಾಟಕ ಪುಸ್ತಕಾಲಯ, ಧಾರವಾಡ**


CC-0. Jangamwadi Math Collection. Digitized by eGangotri



## ವಜ್ರಮುಷ್ಟಿಪ್ರದರ್ಶನ

ಪ್ಯಾಲೆಸ್ಟೈಯಿನಿನ ಬಗ್ಗೆ ಪೀಲಕಮಿಶನಿನ ಸೂಚನೆಗಳು ರಾಷ್ಟ್ರಸಂಘದೆದುರಿನಲ್ಲಿ ಬಂದಂದಿನಿಂದಲೂ ಅಲ್ಲಿಯ ಅಸಂತೋಷವು ಮೇರೆದಪ್ಪಿದೆ. ಕಳೆದ ಜೂನದಿಂದ ಹಿಂಸೆ-ಅತ್ಯಾಚಾರಗಳು ಹೆಚ್ಚಿದವು; ಬ್ರಿಟಿಷ್ ಅಧಿಕಾರಿಗಳ ಮತ್ತು ಅವರಿಗೆ ಸಹಾಯಕರಾದ ಅರಬರ ಕೊಲೆಗಳು ಅಳತೆಗೆಟ್ಟು ನಡೆದವು. ೨೬ ಸಪ್ಟಂಬರ ದಿನ ನಡೆದ ಅಂಡ್ರೂಜ್ ಎಂಬ ಬ್ರಿಟಿಷ್ ಅಧಿಕಾರಿಯ ಕೊಲೆಯಿಂದ ಪ್ಯಾಲೆಸ್ಟಾಯಿನೆಲ್ಲ ಗಡಗಡನೆ ನಡುಗಿತು; ಇಂಗ್ಲಂಡಿನಲ್ಲಿಯೂ ಅದರ ಪಡಿನುಡಿ ಕೇಳಬಂದು ಕೋಲಾಹಲವೆದ್ದಿತು. ಕೂಡಲೆ ಪ್ಯಾಲೆಸ್ಟಾಯಿನಿನಲ್ಲಿಯ ಬ್ರಿಟಿಷ್ ಸತ್ತೆಯು ಉಗ್ರ ದಂಡೋಪಾಯಗಳನ್ನು ಕೈಕೊಂಡಿತು. ಅರಬ ಮಹಾಸಮಿತಿ (ಹಾಯ್ ಕಮಿಟಿ) ಯೂ ಅದರ ಸಂಲಗ್ನ ಸಂಸ್ಥೆಗಳೂ ಬಹಿಷ್ಕರಿಸಲ್ಪಟ್ಟವು. ಈ ಸಂಸ್ಥೆಗಳ ಮುಂದಾಳುಗಳನ್ನು ಹಿಡಿದು, ಗಡಿದಾಟಿಸಿ, ಒಂದು ನಡುಗಡ್ಡೆಯಲ್ಲಿರಿಸಲಾಯಿತು. ಉಗೆಬಂಡಿಗಳ ರಾತ್ರಿಯ ಪಯಣವು ನಿಲ್ಲಿಸಲ್ಪಟ್ಟು ದೀಪಬಂದಿಯ (ಕರ್ಫ್ಯೂ) ಶಾಸನವನ್ನು ಸಾರಲಾಯಿತು. ಅರಬ ಮಹಾಸಮಿತಿಯ ಪ್ರಮುಖನೂ ಜೆರುಸಲೆಮದ ಮಹಾಮುಫ್ತಿಯೂ ಆದ ಹಾಜ ಅಮೀನ ಅಲ್ ಹುಸೇನಿಯನ್ನು ಸೆರೆಹಿಡಿಯುವ ಆಜ್ಞೆ ಹೊರಟಿತು; ಆದರೆ ಆತನು ಮಸೀದೆಯಲ್ಲಡಗಿಕೊಂಡು ಕೊನೆಗೊಂದು ದಿನ ಅಧಿಕಾರಿಗಳ ಕಣ್ತಪ್ಪಿಸಿ ಲೆಬಾನನದಲ್ಲಿ ಓಡಿಹೋದನು. ಅಲ್ಲಿದ್ದು ಮತ್ತೆ ಅರಬ ಮಹಾಸಮಿತಿಯನ್ನು ಸ್ಥಾಪಿಸಿ, ಇರಾಕ, ಲೆಬಾನನ, ಸೀರಿಯಗಳ ಮುಖಂಡರನ್ನದರಲ್ಲಿ ಒಳಪಡಿಸಿ, ಮತ್ತೆ ಚಳವಳಿಯನ್ನು ಹೂಡಿರುವನು.

ಇತ್ತ ಜೆರುಸಲೆಮದಲ್ಲಿ ಮಹಾಮುಫ್ತಿಯ ಸ್ವಾಧೀನದಲ್ಲಿದ್ದ ದ್ರವ್ಯರಾಶಿಯನ್ನೆಲ್ಲ ಸರಕಾರವು ಮುಟ್ಟುಗೋಲು ಹಾಕಿ ಹಿಡಿದುಕೊಂಡಿತು; ಹೊಸ ವಾಕಫ್ ಸಮಿತಿಯನ್ನು ನಿಯಮಿಸಿ, ಅದರ ವಶಕ್ಕೆ ಆ ನಿಧಿಯನ್ನು ಕೊಡಲಾಗುವುದು. ದಬ್ಬಾಳಿಕೆಯ ಕಠೋರತೆಯು ಎಲ್ಲೆ ಮೀರುತ್ತಿದೆ. ಒಂದು ಬ್ರಿಟಿಷ್ ಸೈನಿಕ ಠಾಣ್ಯದ ಮೇಲೆ ದೊಂಬಿಗಾರರು ದಾಳಿಯಿಕ್ಕಿ ಬಂದೂಕುಗಳನ್ನು ಕಳವು ಮಾಡಿದ್ದಕ್ಕೆ, ಸಮೀಪದ ಹಳ್ಳಿಯಲ್ಲಿಯ (ಆ ಬಂದೂಕುಗಳ ಸಂಖ್ಯೆಯಷ್ಟು) ಮನೆಗಳನ್ನು ಸುರಂಗ ಹಚ್ಚಿ ಹಾರಹೊಡೆಯಲಾಗಿದೆ; ಎಷ್ಟು ಬಂದೂಕುಗಳು ತಿರುಗಿ ಕೊಡಲ್ಪಡುವವೋ ಅಷ್ಟು ಮನೆಗಳು ಉಳಿಯುವವೆಂತಲೂ ಸಾರಲಾಗಿದೆ. ಇನ್ನೊಂದು ಉದಾಹರಣೆ: ಇರಾಕದ ಎಣ್ಣೆಯ ಕಣಿಗಳೊಳಗಿಂದ ಒಂದು ನಳ್ಳಿಯನ್ನು ಹೈಫಾದ ವರೆಗೂ ತರಲಾಗಿದೆ; ಅದನ್ನೊಂದು ಕಡೆಗೆ ಪುಂಡರು ಒಡೆದರು. ಇದರ ಸೇಡೆಂದು ಹತ್ತಿರದ ಅರಬರ ಮನೆಗಳನ್ನು ತೋಪುಗಳ ಸಹಾಯದಿಂದ ನಾಶಗೊಳಿಸಲಾಗಿದೆ.

ದೊಂಬಿ ಕಡಿಮೆಯಾಗುವ ಲಕ್ಷಣಗಳು ತೋರದ್ದರಿಂದ, ಅದರಲ್ಲಿ ಭಾಗವಹಿಸುವವರನ್ನು ಶಿಕ್ಷಿಸಲು ಸೈನಿಕ ಕೋರ್ಟುಗಳನ್ನು ಸ್ಥಾಪಿಸಲಾಗಿದೆ. ಆಯುಧ ಧಾರಣೆಗೆ ಮರಣದಂಡನೆಯ ಶಿಕ್ಷೆಯನ್ನು ವಿಧಿಸುವ ಅಧಿಕಾರವನ್ನು ಆ ಕೋರ್ಟುಗಳಿಗೆ ಕೊಡಲಾಗಿದೆ. ರಿವಾಲ್ವರ ಹಿಡಿದದ್ದಕ್ಕಾಗಿ ಷೇಕ್ ಫರ್‌ಹಾನ್ ಸಾದಿ ಎಂಬ ಅರಬ್ಬೀ ಮುಖಂಡನನ್ನು ಬಂಧಿಸಿ ನವಂಬರ ೨೪ನೆಯ ತಾ.ನ ದಿನ ಮರಣದಂಡನೆಯ ಶಿಕ್ಷೆಯನ್ನು ಹೇಳಿದ್ದಾರೆ.

ರಾಷ್ಟ್ರಸಂಘದೆದುರಿನಲ್ಲಿ ಪೀಲಕಮಿಶನಿನ ಸೂಚನೆಗಳ ಚರ್ಚೆಯಾಗಿ, ಇನ್ನೊಮ್ಮೆ ಕೂಲಂಕಷ ವಿಚಾರ ಮಾಡುವ ಕಾರ್ಯವನ್ನು ಮತ್ತೆ ಬ್ರಿಟಿಷರಿಗೇ ಒಪ್ಪಿಸಲಾಗಿದೆ. ಸದಸ್ಯರಾಷ್ಟ್ರಗಳಲ್ಲಿ ಮುಸಲ್ಮಾನ ಸರಕಾರಗಳೆಲ್ಲ ಅರಬರಿಗೇ ಬೆಂಬಲವಿತ್ತುದೊಂದು ವಿಶೇಷ. ಪ್ಯಾಲೆಸ್ಟಾಯಿನನ್ನು 'ಸಾರ' ಪ್ರದೇಶದಂತೆ ಸರ್ವರಾಷ್ಟ್ರೀಯ ಆಧಿಪತ್ಯದಲ್ಲಿಡಬೇಕೆಂಬುದೊಂದು ಸೂಚನೆಯು ಜರ್ಮನಿಯಿಂದ ಬಂದಿದೆ. ಪ್ಯಾಲೆಸ್ಟಾಯಿನಿನ ಪರಿಸ್ಥಿತಿಯೂ ಬೇಗನೆ ಸ್ಪೇನದಂತೆಯೆ ಅಂತರರಾಷ್ಟ್ರೀಯ ಮಹತ್ವವನ್ನು ಪಡೆಯುವ ಲಕ್ಷಣಗಳು ಒಡೆದುಕಾಣುತ್ತಿವೆ.

## ಮುಸುಕಿನೊಳಗಿನ ಬೆಣ್ಣೆ

ಸ್ಪೇನದ ಬಹುಭಾಗವನ್ನು ಬಂಡುಗಾರರ ನಾಯಕ ಫ್ರಾಂಕೊ ವಶಪಡಿಸಿಕೊಂಡಿದ್ದಾನೆ. ಈ ಪ್ರದೇಶದ ಮೇಲೆ ರಾಷ್ಟ್ರೀಯ (ಬಂಡುಗಾರ) ಪಕ್ಷದ ಅಧಿಕಾರವು ಸ್ಥಿರಗೊಂಡಿದೆ

CC-0. Jangamwadi Math Collection. Digitized by eGangotri

ಯೆಂಬುದು ಹಲವು ಪ್ರಮಾಣಗಳಿಂದ ಸಿದ್ಧವಾಗುತ್ತಿದೆ. ಜರ್ಮನಿ-ಇಟಲಿಗಳು ಬಂಡುಗಾರರ ಸರಕಾರಕ್ಕೆ ಎಂದೋ ಮಾನ್ಯತೆಯನ್ನು ಕೊಟ್ಟವೆ. ಇಬ್ಬರೂ ಕೊಂಚ ದುಡುಕಿದ ರೆಂದು ಈ ರಾಷ್ಟ್ರಗಳ ಮೇಲೆ ದೋಷ ಹಾಕಲಾಗಿತ್ತು. ಅವ ರಂತಿರಲಿ, ತಟಸ್ಥಶಿರೋಮಣಿಯಾದ ಇಂಗ್ಲಂಡು ಕೂಡ ಕೆಲವೊಂದು ಬಗೆಯ ಮನ್ನಣೆಯನ್ನು ಕೊಡುವ ಯೋಚನೆ ಮಾಡಿದೆ; ಪೋರ್ತುಗಾಲವು ಎಂದೋ ಆ ಮಾರ್ಗದಲ್ಲಿ ಹೆಜ್ಜೆಯಿಕ್ಕಿದೆ. ಅಬಿಸೀನಿಯಕ್ಕಿಂತಲೂ ಸ್ಪೇನದಲ್ಲಿ ಬ್ರಿಟಿಷರ ಅರ್ಥಿಕ ಹಿತಸಂಬಂಧಗಳು ಹೆಚ್ಚು ಮಹತ್ವದುವು. ಅಬಿಸೀನಿಯದ ಮೇಲಿನ ಇಟಲಿಯ ಪ್ರಭುತ್ವಕ್ಕೆ ಮಾನ್ಯತೆ ಕೊಡುವುದರಲ್ಲಿ ಬ್ರಿಟನ್ನು ತುಂಬಾ ವಿರೋಧವನ್ನು ಪ್ರದರ್ಶಿಸಿತು. ಸ್ಪೇನದ ಬಗೆಗೂ ಹಾಗೇ ಮಾಡಬಹುದಾಗಿತ್ತು, ಆದರೆ ಸಾಗುವಂತಿಲ್ಲ. ಆದರೆ ರಾಜಮಾರ್ಗದಿಂದ ಮಾನ್ಯತೆಯನ್ನೂ ಕೊಡುವಂತಿಲ್ಲ. ಹಾಗೆಂದು ಬ್ರಿಟಿಷ್ ರಾಜತಂತ್ರಕೋವಿದರು ನಡುದಾರಿಯನ್ನು ಹುಡುಕಿದ್ದಾರೆ. ಸ್ಪೇನಿನಲ್ಲಿಯ ಬ್ರಿಟಿಷ್ ಪ್ರತಿನಿಧಿಗೆ 'ಕಾನ್ಸಲ್' ಎನ್ನುವಂತಿಲ್ಲ, 'ಏಜಂಟ್' ಎನ್ನತಕ್ಕದ್ದು. ಈ ಸುದ್ದಿ ಕೂಲಿಕಾರ ಪಕ್ಷದವರಿಗೆ ತಿಳಿದೊಡನೆ, ಮುಖ್ಯಪ್ರಧಾನ ಚೇಂಬರ್ಲೇನರನ್ನು ಪಾರ್ಲಿಮೆಂಟಿನಲ್ಲಿ ಕೆಣಕಿದರು; ಚೇಂಬರ್ಲೇನರು ಎಷ್ಟೇ ಹಾರಿಸಿಕೊಂಡು ಉತ್ತರಕೊಟ್ಟರೂ, ಮುಖ್ಯ ಸಂಗತಿಯನ್ನು ನಿರಾಕರಿಸದೆ ಹೋದರು. ಸರಕಾರ ಪಕ್ಷವು ಸ್ಪೇನದಲ್ಲಿ ಹತಬಲವಾಗಿರದಿದ್ದರೆ ಇಂಗ್ಲಂಡು ಈ ಉಪದ್ವ್ಯಾಪಕ್ಕೆ ಕೈಯಿಕ್ಕುತ್ತಿರಲಿಲ್ಲ. ಈ ವಾಮಮಾರ್ಗದ ಸ್ನೇಹಸಂಧಾನಕ್ಕೆ 'ಮುಸುಕಿನೊಳಗಿನ ಬೆಣ್ಣೆ' ಯೆಂದರೆ ತಪ್ಪಾಗದು.

## ನರಮೇಧವು ಕೊನೆಗೊಳ್ಳುವುದೇ ?

ಸ್ಪೇನದ ಬಹುಭಾಗವು ಸೇನಾನಿ ಫ್ರಾಂಕೊವಿನ ಆಧಿಪತ್ಯದಲ್ಲಿ ಭದ್ರವಾಗಿದೆಯಷ್ಟೆ ಅಲ್ಲ, ಸರಕಾರಪಕ್ಷಕ್ಕಧೀನವಾದ ಉಳಿದ ಭಾಗವೂ ರಾಷ್ಟ್ರೀಯ ಪಕ್ಷದ ಕೈಸೇರುವ ಚಿಹ್ನಗಳು ತೋರುತ್ತಲಿವೆ. ಬ್ರಿಟಿಷ್ ಸರಕಾರದಂತೆ ಫ್ರಾಂಕೊ ಕೂಡ ತನ್ನ ಪ್ರತಿನಿಧಿಯಾದ ಡ್ಯೂಕ್ ಆಫ್ ಅಲ್ಬಾನನ್ನು ಇಂಗ್ಲಂಡಿನಲ್ಲಿಟ್ಟಿದ್ದಾನೆ. ಪರಸ್ಪರರ ವ್ಯಾಪಾರ ಸಂಬಂಧಗಳು ಹಿತಕಾರಕವಾಗಿರಬೇಕೆಂದೆ ಈ ಇಬ್ಬರು ಪ್ರತಿನಿಧಿಗಳನ್ನು ನಿಯಮಿಸಲಾಗಿದೆ. ಸ್ಪೇನದಲ್ಲಿಯ ಕಣಿಗಳಲ್ಲಿ ಮತ್ತು ಔದ್ಯೋಗಿಕ ಪ್ರಾಂತಗಳಲ್ಲಿ ಇಂಗ್ಲಿಷರ ಆರ್ಥಿಕ ಸಂಬಂಧಗಳು ನಿಕಟವಾಗಿವೆ. ಹಾಗೆಯೆ ಇಂಗ್ಲಂಡಿನ ಕಲ್ಲಿದ್ದಲು-ಬಟ್ಟೆಗಳ ಅಗತ್ಯವು ಫ್ರಾಂಕೊವಿಗೆ ತುಂಬಾ ಇದೆ. ರಾಷ್ಟ್ರೀಯ ಪಕ್ಷದ ಪ್ರತಿನಿಧಿಯಾದ ಡ್ಯೂಕ್ ಆಫ್ ಅಲ್ಬಾನು, ಸ್ಪೇನದ ೨/೩ ಭಾಗವು ರಾಷ್ಟ್ರೀಯ ಪಕ್ಷಕ್ಕೆ ಕೈಸೇರಿದೆಯೆಂದು ತಿಳಿಸಿದ್ದಾನೆ. ಗೆದ್ದ ಪ್ರದೇಶದಲ್ಲಿ ಸ್ಥಿರಸ್ಥಾವರತೆಯನ್ನುಂಟುಮಾಡಿಕೊಂಡು ಮಾದ್ರಿದ್ ರಾಜಧಾನಿಯನ್ನೂ ಪೂರ್ವ ದಿಕ್ಕಿನ ಪ್ರದೇಶವನ್ನೂ ಪಾದಾಕ್ರಾಂತ ಮಾಡುವುದಾಗಿ ರಾಷ್ಟ್ರೀಯ ಪಕ್ಷವು ಹಂಚಿಕೆ ಹಾಕಿದೆ; ಆ ಗುರಿಯನ್ನಿಟ್ಟುಕೊಂಡೆ ಒಂದು ಲಕ್ಷ ಸೈನ್ಯವು ಉತ್ತರದಿಂದ ಸಾಗಿದೆ. ಮಾದ್ರಿದ್ ಮೇಲಿನ ಬಾಂಬಿನ ದಾಳಿಯೂ ನಡೆದೇ ಇದೆ. ಸರಕಾರ ಪಕ್ಷವು ತನ್ನ ದೌರ್ಬಲ್ಯವನ್ನು ಮನದಂದು ರಾಷ್ಟ್ರೀಯ ಪಕ್ಷಕ್ಕೆ ಶರಣು ಹೋಗುವ ವಿಚಾರ ಮಾಡಿದೆಯೆಂದು ಸುದ್ದಿ ಹಬ್ಬಿದೆ. ಆದರೆ ಬೆನ್ನಿಗೆ ಮಣ್ಣು ಹತ್ತುವವರೆಗೂ ಸೋಲನ್ನೊಪ್ಪುವವರಾರು ?

## ಶಾಂಘಾಯದಲ್ಲಿ ಜಪಾನವು ಕಾಲೂರಿತು

ಜಪಾನವು ಶಾಂಘಾಯವನ್ನು ಗೆದ್ದುಕೊಂಡುದರಿಂದ ಅದನ್ನು ತಕ್ಕ ರೀತಿಯಲ್ಲಿ ಸ್ವಾಧೀನಪಡಿಸಿಕೊಂಡು, ಅಂತರರಾಷ್ಟ್ರೀಯ ಆಧಿಪತ್ಯದಲ್ಲಿದ್ದ ಸುಂಕದ ಖಾತೆಯನ್ನೂ ಪ್ರಸಂಗ ಬಂದಲ್ಲಿ ಒತ್ತಾಯದಿಂದ ಆಕ್ರಮಿಸುವುದಾಗಿ ತನ್ನ ನಿರ್ಧಾರವನ್ನು ಪ್ರಕಟಪಡಿಸಿದ್ದರಿಂದ ದೊಡ್ಡ ಕೋಲಾಹಲ ವೆದ್ದಿದೆ. ಇಂಗ್ಲಂಡ್, ಫ್ರಾನ್ಸ್, ಅಮೇರಿಕಾ ಮೊದಲಾದ ರಾಷ್ಟ್ರಗಳಲ್ಲಿಯ ವರ್ತಕರು ಚೀನಕ್ಕೆ ಹೇರಳವಾಗಿ ಸಾಲ ಕೊಟ್ಟಿದ್ದರಿಂದ, ಅದನ್ನು ತೀರಿಸುವ ವಿಶಿಷ್ಟ ಏರ್ಪಾಡನ್ನು ಅಂತರರಾಷ್ಟ್ರೀಯ ವಿಭಾಗದಲ್ಲಿ ಮಾಡಿದ್ದಾರೆ. ಚೀನವು ಪರದೇಶಗಳಲ್ಲಿಂದ ಬರುವ ಸರಕುಗಳ ಮೇಲೆ ಸುಂಕವನ್ನೆತ್ತಿ, ಆ ಹಣದೊಳಗಿಂದ ಪರರಾಷ್ಟ್ರೀಯ ಸಾಹುಕಾರರ ಸಾಲವನ್ನು ತೀರಿಸಬೇಕೆಂಬುದಾಗಿ ಒಂದು ನಿರ್ಬಂಧವಿವೆ. ಅದನ್ನು ಜಾರಿಯಲ್ಲಿ ತರಲು ಸುಂಕದ ವ್ಯವಸ್ಥೆಯ ಮೇಲೆ ಪಾಶ್ಚಾತ್ಯರ ನಿಯಂತ್ರಣವಿದೆ. ಆದ್ದರಿಂದ ಜಪಾನವು ಸೈನಿಕಬಲದ ಸಹಾಯದಿಂದ ಸುಂಕದ ವ್ಯವಸ್ಥೆಯನ್ನು ವಶಪಡಿಸಿಕೊಂಡರೆ ಪರರಾಷ್ಟ್ರೀಯರು ಸಾಲ ಕೊಟ್ಟಿದ್ದರ ಗತಿಯೇನು ಎಂಬ ಯೋಚನೆಯಿಂದ ಹುಚ್ಚೆದ್ದು, ಪಾಶ್ಚಾತ್ಯರ ಕಣ್ಣುಗಳು ಕತ್ತಲುಗೂಡುತ್ತಿವೆ. ತನ್ನ ಸಾರ್ವಭೌಮತ್ವಕ್ಕೆ ಕೂದಲೆಳೆಯಷ್ಟೂ ಬಾಧೆ ಬರಕೂಡದೆಂದೂ ಶಾಂಘಾಯದಲ್ಲಿಯ ಪಾಶ್ಚಾತ್ಯ ಆಧಿಪತ್ಯಗಳು ಈ ನೀತಿಗೆ ಹೊಂದಿಕೆಯಾಗುವಂತೆ ನಡೆದುಕೊಳ್ಳಬೇಕೆಂದೂ ಜಪಾನಿ ಸೇನಾಧಿಕಾರಿಗಳು ಉದ್ಘೋಷಿಸಿದ್ದಾರೆ.

CC-0. Jangamwadi Math Collection. Digitized by eGangotri

## ಅಭಿಮಾನದ ಮೀಮಾಂಸೆ

ಪ್ರಾಂತಾಭಿಮಾನವೊ, ದೇಶಾಭಿಮಾನವೊ; ದೇಶಭಾಷಾಭಿಮಾನವೊ, ಮಾತೃಭಾಷಾಭಿಮಾನವೊ—ಎಂದು ಮೊದಲಾದ ಹಲವು ವಾದಗಳು ದಿಗ್ಭ್ರಮೆಗೊಳಿಸುತ್ತಿರುವ ಈ ಕಾಲದಲ್ಲಿ, ಪುಣೆಯ ಶ್ರೀ. ನ. ಚಿ. ಕೇಳಕರ ಅವರು ಮುಂಡಾಜೆಯಲ್ಲಿ ಸೇರಿದ ದ. ಕನ್ನಡದ ಚಿತ್ಪಾವನ ಬ್ರಾಹ್ಮಣ ಪರಿಷತ್ತಿನ ಅಧ್ಯಕ್ಷ ಭಾಷಣದಲ್ಲಿ ಕೆಲವು ವಿಚಾರಪೂರಿತವಾದ ಮಾತುಗಳನ್ನು ಹೇಳಿರುವರು. ಹೀಗೇ ವ್ಯವಹರಿಸಬೇಕು ಎಂದು ನಿರ್ದಿಷ್ಟವಾಗಿ ಹೇಳದಿದ್ದರೂ, ಹೇಗೆ ವ್ಯವಹರಿಸಬೇಕೆಂದು ಸಮರ್ಪಕವಾಗಿ ಸೂಚಿಸಿದ್ದಾರೆ. 'ವಿವೇಕಯುತ ಅಭಿಮಾನವಿರಲಿ'— ಎಂಬುದೆ ಅವರ ಸಂದೇಶವಾಗಿದೆ. ಸ್ವತ್ವವನ್ನು ಮರೆಯಬೇಕೆಂದು ಯಾರು ಯಾರಿಗೂ ಹೇಳುವುದಿಲ್ಲ; ಆದರೆ ಪರರ ಹಕ್ಕುಹಂಗುಗಳನ್ನು ಅನ್ಯಾಯವಾಗಿ ಆಕ್ರಮಿಸುವ ಅವಿಚಾರಯುತ ದುರಭಿಮಾನವು ಇರದಿರಲಿ ಎಂದೇ ಸಮಂಜಸ ವಿಚಾರಸರಣಿಯವರು ಹೇಳುತ್ತಾರೆ. ಶ್ರೀಯುತರ ಭಾಷಣವನ್ನು ಶ್ರೀ. ರಾಮ ನಾರಾಯಣ ಭಿಡೆಯವರು ಸುಂದರವಾಗಿ ಸಂಗ್ರಹಿಸಿದ್ದಾರೆ. (ರಾಷ್ಟ್ರಬಂಧು: ೧—೧೧—೩೭). ಸ್ಥಲಾಭಾವಕ್ಕಾಗಿ ಅದರಲ್ಲಿಯ ಮುಖ್ಯಾಂಶಗಳನ್ನಷ್ಟೆ ಇಲ್ಲಿ ಕೊಡುತ್ತಿರುವೆವು.

"ನೀವು ಚಿತ್ಪಾವನರು ಯಾವ ಅಭಿಮಾನವನ್ನು ಇಟ್ಟುಕೊಳ್ಳಬೇಕು? ನಿಮ್ಮ ಊರು ಮುಂಡಾಜೆ. ಆದರೆ ಇಲ್ಲಿಗೆ ೩೦೦ ವರ್ಷಗಳ ಹಿಂದೆ ನೀವು ಬರುವ ಮೊದಲು ನೀವಿದ್ದುದು ಮಹಾರಾಷ್ಟ್ರದಲ್ಲಿ. ಹಾಗಿದ್ದಲ್ಲಿ ನೀವು ಮಹಾರಾಷ್ಟ್ರದ ಅಭಿಮಾನಿಗಳಾಗಬೇಕೆ? ಅದೂ ಕಷ್ಟ. ಸೃಷ್ಟಿಯ ಆದಿಯಿಂದ ನಮ್ಮ ಪೂರ್ವಜರೇನೂ ಮಹಾರಾಷ್ಟ್ರದಲ್ಲೇ ಇದ್ದಿರಲಿಲ್ಲ. ಚರಿತ್ರೆಯು ಈ ರೀತಿಯಲ್ಲಿ ನಮ್ಮ ಮಹಾರಾಷ್ಟ್ರೀಯ ಅಭಿಮಾನಕ್ಕೆ ವಿರೋಧವಿದೆ. ಹಾಗಿದ್ದಲ್ಲಿ ನಾವು ಬಂದುದಾದರೂ ಎಲ್ಲಿಂದ? ಕೆಲವು ಇತಿಹಾಸ ಸಂಶೋಧಕರ ಅಭಿಪ್ರಾಯದಂತೆ ನಾವು ಈಜಿಪ್ತಿನಿಂದ ಬಂದವರು. ಇನ್ನೂ ಕೆಲವರು ಆರ್ಯರೊಟ್ಟಿಗೆ ನಮ್ಮ ಸ್ಥಾನವನ್ನು ಕಾಕೇಸಸ್ ಪರ್ವತಗಳ ಬುಡದಲ್ಲಿ ತೋರಿಸಿ ಕೊಟ್ಟಿದ್ದಾರೆ. ಲೋ. ಟಿಳಕರಂತೂ ಜ್ಯೋತಿಷಶಾಸ್ತ್ರದ, ವೇದಗಳ ಆಧಾರದಿಂದ ಆರ್ಯರ ಮೂಲಸ್ಥಾನವು ಉತ್ತರ ಧ್ರುವದಲ್ಲೆಂದು ನಿರ್ಧರಿಸಿದ್ದಾರೆ. ಇದು ಸತ್ಯವೆಂದಾದರೆ ಹಿಂದೀಯ ಆರ್ಯರು ದಕ್ಷಿಣ ಹಿಂದುಸ್ಥಾನದ, ದ್ರಾವಿಡ ಬಂಧುಗಳನ್ನು ಬಿಟ್ಟು ಆರ್ಯ ಜರ್ಮನರನ್ನು ಪ್ರೀತಿಸಬೇಕು. ನಾವು ಮಹಾರಾಷ್ಟ್ರ—ಹಿಂದೂ ದೇಶಗಳ ಅಭಿಮಾನವನ್ನು ಬಿಟ್ಟು ಸುದೂರ ಉತ್ತರ ಧ್ರುವದ ಎಸ್ಕಿಮೋಗಳನ್ನೆ ಆನಂದಾತಿಶಯದಿಂದ ಆದರಿಸಬೇಕು. ತರ್ಕಶಾಸ್ತ್ರದ ತಕ್ಕಡಿಯಲ್ಲೇ ತೂಗುವುದಾದರೆ ನಮ್ಮ ಉತ್ತರ ಧ್ರುವದ ಅಭಿಮಾನವೂ ತಪ್ಪೆ. ಉತ್ತರ ಧ್ರುವದಲ್ಲಾದರೂ ಎಲ್ಲಾದರೂ ಇರಬೇಕಷ್ಟೇ! ಅಂದರೆ ನಮ್ಮ ನಿಜವಾದ ಮೂಲದ ಮನೆ ಇರುವುದು, ಈಶ್ವರನಲ್ಲಿ. ವರ್ಡ್ಸ್ ವರ್ಥ್ (Wordsworth) ಕವಿಯು ಒಂದು ಸುನೀತದಲ್ಲಿ ಇದೇ ಉದಾತ್ತ ಭಾವವನ್ನು ವ್ಯಕ್ತಗೊಳಿಸಿದ್ದಾನೆ:

> "Trailing clouds of glory we come
> From God who is our home!"

(ನಮ್ಮ ಅಧಿಷ್ಠಾನವಾದ ಈಶ್ವರನಿಂದ ಶ್ಯಾಮಲ ಮೇಘದ ವೈಭವವನ್ನು ಬೆಳಗುತ್ತಾ ಬರುತ್ತೇವೆ.)

"....ಅಭಿಮಾನವನ್ನು ಸಂಪೂರ್ಣ ಬಿಡುವುದೆಂದರೂ ಕಷ್ಟ; ಅಭಿಮಾನದ ಪತಾಕೆಯನ್ನು ಹಾರಿಸುವುದೆಂದರೂ ಅಸಾಧ್ಯ. ಈ ಒಗ್ಗಟ್ಟಿನ, ಏಕಾಂತಿಕ ಮತದ ಚಕ್ರವ್ಯೂಹ ಕೋಟೆಯಿಂದ ಹೊರಗೆ ಬರಬೇಕಾದರೆ ನಮ್ಮಂಥವರು ಅವಲಂಬಿಸುವ ಸುವರ್ಣಪಥವನ್ನೇ ಹಿಡಿಯಬೇಕು. ಈ ಎರಡು ಮಾರ್ಗಗಳಿಗೆ ಭೇದ್ಯ, ಭೇದಕದ ಉಪಮೆಯನ್ನು ಕೊಡುವುದಾದರೆ ಇವೆರಡು ಸಂಖ್ಯೆಗಳ ಭೇದವನ್ನು ಹಾಕಬೇಕು. ಗೀತೆಯು ಕೂಡ ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಗೀತೆಯಲ್ಲಿರುವ ಶುದ್ಧಬುದ್ಧಿ ಮತ್ತು ಕಾರ್ಯಕೌಶಲ್ಯವೆಂಬ ಎರಡು ಶಬ್ದಗಳು ಈ ಮಧ್ಯಮಕ್ರಮ ಅಥವಾ ಸುವರ್ಣ ಬಿಂದುವನ್ನು ಅಂದವಾಗಿ, ರಸವತ್ತಾಗಿ ವಿವರಿಸುತ್ತವೆ. ಈ ಮಧ್ಯಮ ಕ್ರಮುವಾವುದು?

"ಅಭಿಮಾನದ ಸಂಪೂರ್ಣ ತ್ಯಾಗವು ಒಂದು ವೇಳೆ ಆಗತ್ಯವಿದ್ದರೂ ಅಸಾಧ್ಯವೆಂದು ಈ ಮುಂಚೆಯೇ ಸಿದ್ಧವಾಗಿದೆ. ಹಾಗಾದರೆ ಅಭಿಮಾನವಿರುವುದಾದರೆ ಎಷ್ಟು ಮತ್ತು ಎಲ್ಲಿ ಎಂಬುದನ್ನು ಆಲೋಚಿಸಬೇಕು. ನನ್ನ ಅಭಿಪ್ರಾಯದ ಮೇರೆಗೆ ಅಭಿಮಾನವು ಯೋಗ್ಯವೆಂದಾಗಬೇಕಾದರೆ ಅದರ ಹಿಂದೆ ವ್ಯಾಪಕದೃಷ್ಟಿಯಿರಬೇಕು. ಪರಾರ್ಥಕ್ಕಾಗಿ, ಸತ್ ಹೇತುವಿನಿಂದ ಅದನ್ನು ಹಿಡಿದದ್ದಾಗಿರಬೇಕು. ಇನ್ನು ಯಾರ ಹಿತಕ್ಕಾಗಿ ಆ ಅಭಿಮಾನವನ್ನು ಹಿಡಿದುದೋ ಅವರ ಹಿತವನ್ನು ಮಾಡುವ ಸಾಮರ್ಥ್ಯ ಮತ್ತು ಪಾತ್ರತೆಯು ಆ ಅಭಿಮಾನಿಯಲ್ಲಿರಬೇಕು. ಅಭಿಮಾನದ ಯೋಗ್ಯತೆಯು ವಿವೇಕ ಮತ್ತು ವ್ಯವಹಾರದ ಒರೆಕಲ್ಲಿನ ಮೇಲೆ ತಿಕ್ಕುವಾಗ

CC-0. Jangamwadi Math Collection. Digitized by eGangotri

ಗೊತ್ತಾಗಬೇಕು. ಸತ್‌ಹೇತು, ಪರಾರ್ಥ, ಸಾಮರ್ಥ್ಯ, ವಿವೇಕ ಮತ್ತು ವ್ಯವಹಾರಸುಲಭತೆಯಿಲ್ಲದಿದ್ದರೆ ಅಭಿಮಾನವು ಹಾಸ್ಯಾಸ್ಪದವಾಗುತ್ತದೆ. ಈ ನ್ಯಾಯವು ಊರು, ಪ್ರಾಂತ, ದೇಶ, ಮಾನವ್ಯಗಳ ಅಭಿಮಾನಗಳ ವರೆಗೂ ಒಂದೇ ಅಭಿಮಾನವನ್ನು ತೋರಿಸುವ ಇನ್ನೊಂದು ಯೋಗ್ಯ ಸಂಧಿಯಿದೆ. ಅದು ಇತರರು ನಿಷ್ಕಾರಣವಾಗಿ ನಮ್ಮ ಅಭಿಮಾನದ ಕ್ಷೇತ್ರವನ್ನು ಅಥವಾ ವರ್ಗವನ್ನು ನಿಂದಿಸಿದಲ್ಲಿ ಮತ್ತು ಪೀಡಿಸಿದಲ್ಲಿ ತೋರಿಸಲೇ ಬೇಕು. ನನ್ನನ್ನು 'ಅಬ್ರಾಹ್ಮಣ'ರು ಬ್ರಾಹ್ಮಣನೆಂದು ಜರೆದರೆ ನಾನು ಬ್ರಾಹ್ಮಣಜಾತಿಯ ಅಭಿಮಾನವನ್ನು ತಾಳಬೇಕು. ಇತರ ಪ್ರಾಂತದವರು ನನ್ನನ್ನು ಮಹಾರಾಷ್ಟ್ರೀಯನೆಂದು ಹೀಯಾಳಿಸಿದರೆ ನನ್ನ ಪ್ರಾಂತೀಯ ಅಭಿಮಾನವು ಪ್ರಕಟವಾಗಬೇಕು. (ಇದೇ ಮಾತು ಕರ್ನಾಟಕಸ್ಥರಿಗೂ ಅನ್ವಯಿಸುವುದು. —ಸಂ.) ಪರರಾಷ್ಟ್ರದವರು ನನ್ನ ದೇಶವನ್ನು ತುಚ್ಛೀಕರಿಸಿದಲ್ಲಿ 'ನನ್ನ ಹಿಂದೀ ರಾಷ್ಟ್ರವು ಇತರ ಎಲ್ಲಾ ರಾಷ್ಟ್ರಗಳಿಂದಲೂ ಮೇಲೆ'ಂದು ಅಭಿಮಾನಪೂರ್ವಕವಾಗಿ ಹೇಳುವ ಸಾಹಸವು ಬೇಕು. ಮೃಗಜಾತಿಯು ತನ್ನ ಶರೀರದ ಹೆಮ್ಮೆಯನ್ನು ಹುಲಿಯ ಮೂಲಕ ತೋರಿಸಿದರೆ 'ಬುದ್ಧಿವಂತ ಮೇಧಾವೀ ಮಾನವನೆಂದರೆ ನಾನೇ' ಎಂದು ಉಚ್ಚಸ್ವರದಲ್ಲಿ ಹೇಳಬೇಕು.

"ಈ ರೀತಿಯ ವಿವೇಕಯುಕ್ತ ಅಭಿಮಾನದಿಂದ ಯಾವ ಉದಾತ್ತ ತತ್ವಕ್ಕೂ ತೊಂದರೆಯಾಗುವಂತಿಲ್ಲ. ಇಂತಹ ನಿಃಸ್ವಾರ್ಥ ಅಭಿಮಾನವು ಆತ್ಮೋತ್ಕರ್ಷ, ಅಭ್ಯುದಯ, ಮೋಕ್ಷಗಳ ಗುರಿಯನ್ನು ಮುಟ್ಟಲು ಸಹಾಯ ಮಾಡಲೆಂದೇ ನನ್ನ ಇಚ್ಛೆ. ಮಾತ್ರ, ವಿವೇಕಹೀನ ಅಭಿಮಾನದ ಪ್ರದರ್ಶನವನ್ನು ಮಾಡಬೇಡಿರಿ.

"ವಿವೇಕದ ಬೆಳಕು ನಿಮ್ಮ ಅಭಿಮಾನದ ಮಾರ್ಗವನ್ನು ಬೆಳಗಲಿ!"

## ಪುಣ್ಯದ ಕೆಲಸಕ್ಕೆ ವಿಲಂಬ ಬೇಡ

ವೀರ ನಾರಿಮನ್ನರು ಮೈಸೂರು ಪ್ರಾಂತಕ್ಕೆ ಆಗಮಿಸಿದುದಕ್ಕೂ ಅಲ್ಲಿ ಕಾಂಗ್ರೆಸ್ ಚಳವಳಿಗೆ ನೆರೆ ಬಂದುದಕ್ಕೂ ಕೂಡಿಬಂದಿತು. ನಾರಿಮನ್ನರ ಗ್ರಹದಶೆಯು ಇದೀಗ ಚೆನ್ನಾಗಿಲ್ಲ. ಅವರು ಜವಾಬ್ದಾರಿ ಅಧಿಕಾರ ವಹಿಸಲು ಅನರ್ಹರೆಂದು ರಾಷ್ಟ್ರದ ಪ್ರಧಾನ ರಾಜಕೀಯ ಸಂಸ್ಥೆಯಾದ ವರ್ಕಿಂಗ್ ಕಮಿಟಿಯು ರಾಯಸ ಹೊರಡಿಸಿದೆ. ನಾರಿಮನ್ನರ ಗ್ರಹಚಾರ ಮೈಸೂರಿಗೂ ಬಡಿದಂತೆ ಕಾಣುತ್ತದೆ. ಮೈಸೂರಿನ ಪಕ್ಷವಹಿಸಿ ಎ. ಐ. ಸಿ. ಸಿ. ಯು ಕೈಕೊಂಡ ನಿರ್ಣಯವು 'ಸತ್ಯ, ಅಹಿಂಸೆ'ಗಳನ್ನು ಬಿಟ್ಟು ಇದೆಯೆಂದು ಮ. ಗಾಂಧಿಯವರು ತೀರ್ಮಾನವಿತ್ತರು. ಮೈಸೂರಿನವರು 'ಎಲ್ಲಿ ತಪ್ಪುತ್ತಿದೆ, ತೋರಿಸಿರಿ' ಎಂದು ಕೇಳುತ್ತಿರುವರು. ಇತ್ತ ಮೈಸೂರು ಸರಕಾರವು ಗಾಂಧಿಯವರ ಲೇಖನದ ಕನ್ನಡ ಪ್ರತಿಗಳನ್ನು ಹಳ್ಳಿಹಳ್ಳಿಗೂ ಹಂಚುತ್ತಿದೆ; ಮತ್ತು ಕಾಂಗ್ರೆಸ್ ಚಳವಳಿಯ ಕೀಲ ಸಡಿಲಿಸಲು ಉಗ್ರೋಪಾಯಗಳನ್ನು ಕೈಕೊಳ್ಳುತ್ತಿದೆ.

ಮೈಸೂರಿನಲ್ಲಿಯ ರಾಷ್ಟ್ರೀಯರು ತಪ್ಪುದಾರಿಯನ್ನೇ ಹಿಡಿದಿರುವರೆಂದು ಇಟ್ಟುಕೊಳ್ಳೋಣ; ನಿಂದಕರು ಮೈಸೂರು ಪ್ರಭುತ್ವವನ್ನು ಅನ್ಯಾಯವಾಗಿ ಹಳಿಯುತ್ತಿರುವರೆಂತಲೂ ಒಪ್ಪಿಕೊಳ್ಳೋಣ. ಆದರೂ ನಾಗರಿಕ ಸ್ವಾತಂತ್ರ್ಯವನ್ನು ಜನತೆಗೆ ದಯಪಾಲಿಸಲಿಕ್ಕೂ, ಪ್ರಜಾಧಿಕಾರಗಳನ್ನು ವಿಸ್ತರಿಸಲಿಕ್ಕೂ ಪ್ರಭುತ್ವಕ್ಕೆ ಯಾವ ಕಾರಣವೂ ಅಡ್ಡಬರಬೇಕಿಲ್ಲವೆಂದು ನಮ್ಮ ಅಭಿಪ್ರಾಯವಿದೆ. ಪುಣ್ಯದ ಕೆಲಸ ಮಾಡಲಿಕ್ಕೆ ಮುಹೂರ್ತ ನೋಡಬೇಕಾಗಿಲ್ಲ.

## ಸ್ವಾರ್ಥಕ್ಕಾಗಿಯೆ ಆಗಲಿ—

ಸಂಸ್ಥಾನಿಕರು ತಮ್ಮ ಪ್ರಜೆಗಳ ಅಧಿಕಾರಕ್ಷೇತ್ರವನ್ನು ವಿಸ್ತರಿಸುವುದು ಎಂತು ಅಗತ್ಯವಾಗಿದೆಯೆಂಬ ಮಾತನ್ನು ಬ್ಯಾ. ಜಮನಾದಾಸ ಮೆಹತಾ ಅವರು 'ಕಾಠೇವಾಡ ವಾಣಿಜ್ಯವಿಷಯಕ ಮತ್ತು ಆರ್ಥಿಕ ಪರಿಷತ್ತಿ'ನ ಅಧ್ಯಕ್ಷಪದವಿಯಿಂದ ಮಾಡಿದ ಭಾಷಣದಲ್ಲಿ ಸ್ಪಷ್ಟಗೊಳಿಸಿದ್ದಾರೆ. ೫೯ ಲಕ್ಷ ಜನಸಂಖ್ಯೆಯ ಮತ್ತು ಬರಿ ೨೩ ಸಾವಿರ ಚೌರಸ ಮೈಲಿನ ಈ ಪ್ರದೇಶದ ಮೇಲೆ ನಿಸರ್ಗದ ಕರುಣೆಯು ವಿಪುಲವಾದುದಾಗಿದೆ; ಸಮುದ್ರತೀರದ ವೈಶಾಲ್ಯದಿಂದ ತುಂಬಾ ಆರ್ಥಿಕ ಪ್ರಯೋಜನವನ್ನು ಪಡೆಯುವಂತಿದೆ. ಆದರೆ ಈ ಚಿಕ್ಕ ಪ್ರದೇಶದಲ್ಲಿ ಸ್ವತಂತ್ರ ಅಧಿಕಾರವುಳ್ಳ ಸಂಸ್ಥಾನಗಳದೊಂದು ಕಲಸುಮೇಲೋಗರವೆ ಇರುವುದರಿಂದ, ಆರ್ಥಿಕ ಇಲ್ಲವೆ ಔದ್ಯೋಗಿಕ ಧೋರಣೆಯನ್ನು ಏಕಸೂತ್ರತೆಯಿಂದಿಟ್ಟುಕೊಳ್ಳುವುದೆ ಅಸಾಧ್ಯವಾಗಿಬಿಟ್ಟಿದೆ. ಸಂಸ್ಥಾನಗಳೊಳಗಿನ ರೇಲ್ವೆಯು ಸಂಸ್ಥಾನಿಕರ ಒಡೆತನದ್ದೂ, ಹೆಚ್ಚಿನ ಉತ್ಪನ್ನದ ಬಾಬೂ ಆಗಿರುವುದರಿಂದ ಬೇರೆಬೇರೆ ಸಂಸ್ಥಾನಿಕರು ಈ ಬಗ್ಗೆ ಒಂದು ಸ್ಪರ್ಧೆಯನ್ನೆ ನಡೆಯಿಸಿದ್ದಾರೆ. ಇವರೆಲ್ಲ ಗುಂಪಾಗಿ, ತಮ್ಮ ಸಾಮುದಾಯಿಕ ಆರ್ಥಿಕನೀತಿಯನ್ನು ನಿಶ್ಚಯಿಸಿಕೊಂಡು ಸಾಮುದಾಯಿಕವಾಗಿ ಸಕಲರ ಲಾಭವನ್ನು ಮಾಡಿಕೊ

CC-0. Jangamwadi Math Collection. Digitized by eGangotri

ಬೇಕೆಂದು ಶ್ರೀ. ಮೆಹತಾ ಅವರು ಸೂಚಿಸಿದ್ದಾರೆ. ಎಂದರೆ ಪ್ರತಿಯೊಬ್ಬರೂ ಕೊಂಚ ಕೊಂಚ ಸ್ವಾರ್ಥತ್ಯಾಗವನ್ನು ಮಾಡಬೇಕಾಗುವುದು. ತಮ್ಮ ಉದ್ಯಮವು ಯಶಸ್ವಿಯಾಗ ಬೇಕಾದರೆ ಅವರು ತಂತಮ್ಮ ಪ್ರಜೆಗಳ ಸಹಕಾರ್ಯ ವನ್ನು ಪಡೆಯಬೇಕಾಗುವುದು; ಪ್ರಜೆಗಳನ್ನು ಸಂತುಷ್ಟ ಗೊಳಿಸಲು ಅವರು ತಂತಮ್ಮ ಸಂಸ್ಥಾನಗಳಲ್ಲಿ ಪ್ರಾತಿನಿಧಿಕ ಪ್ರಜಾಪ್ರಭುತ್ವವನ್ನು ನೆಲೆಗೊಳಿಸಬೇಕಾಗುವುದು. ಸ್ವಾರ್ಥ ಕ್ಕಾದರೂ, ತಮ್ಮ ಸಂಸ್ಥಾನದ ಅಭಿವೃದ್ಧಿಗಾಗಿಯಾದರೂ ಸಂಸ್ಥಾನಿಕರು ಏಕತಂತ್ರ ರಾಜ್ಯಪದ್ಧತಿಯನ್ನು ಬಿಟ್ಟು ಕೊಟ್ಟು ಲೋಕಪ್ರಭುತ್ವಕ್ಕೆ ಎಡೆಮಾಡಿಕೊಡಲಿ ಎಂಬುದೆ ಬ್ಯಾ. ಮೆಹತಾ ಅವರ ಬುದ್ಧಿವಾದವಾಗಿದೆ. ಇದನ್ನು ಎಲ್ಲ ಸಂಸ್ಥಾನಪತಿಗಳೂ ಗಮನಿಸುವಂತಿದೆ.

## ಕನ್ನಡ ಮಹಿಳೆಯರ ಮುಂದಡಿ

ನವಂಬರ ತಾ. ೮ನೆಯ ದಿನ ಅಖಿಲ ಕರ್ನಾಟಕ ಮಹಿಳಾ ಪರಿಷತ್ತು ಧಾರವಾಡದಲ್ಲಿ ಸಾಂಗವಾಗಿ ಜರು ಗಿತು. ಕಾರ್ಯಕಲಾಪಗಳು ಹೆಚ್ಚಾಗಿ ಮರಾಟಿಯಲ್ಲಿಯೆ ನಡೆದುದರಿಂದ, ಸ್ವಲ್ಪ ಆಭಾಸಿಕವಾಗಿಯೆ ತೋರಿದವು. ಆದರೆ ಕನ್ನಡಿತಿಯರು ಹೆಚ್ಚಾಗಿ ಸೇರಿಕೊಂಡು ಕೆಲಸ ಮಾಡದಿದ್ದುದೆ ಇದಕ್ಕೆ ಕಾರಣವೆಂದು ಕೇಳಿದ್ದೇವೆ. ಮತ್ತು ಈ ಲೋಪವು ಕಳೆಯುವಂತೆ ಎತ್ತುಗಡೆ ನಡೆದಿದೆ ಯೆಂದೂ ತಿಳಿದುಕೊಂಡಿದ್ದೇವೆ. ಅಧ್ಯಕ್ಷರಾದ ಬೆಂಗಳೂ ರಿನ ಶ್ರೀಮತಿ ಕಮಲಮ್ಮ ದಾಸಪ್ಪಾ ಅವರು ತಿಳಿಗನ್ನಡ ದಲ್ಲಿ ಸ್ತ್ರೀಯರ ಕರ್ತವ್ಯಗಳನ್ನು ವಿವರಿಸಿದರು. 'ಕಾಲಕ್ಕೆ ತಕ್ಕಂತೆ ಸ್ತ್ರೀಯರಿಗೂ ಸಾಮಾಜಿಕ ರಾಜಕೀಯ ಅಧಿಕಾರ ಗಳು ದೊರೆಯಬೇಕು; ಸ್ತ್ರೀಯರು ಹೆಚ್ಚುಹೆಚ್ಚಾಗಿ ರಾಷ್ಟ್ರೀಯ ಕಾರ್ಯಗಳಲ್ಲಿ ಮನಸ್ಸು ಹಾಕಬೇಕು; ಹಳೆಯ ಪರಂಪರಾ - ಪದ್ಧತಿಗಳನ್ನು ಬಿಡಬೇಕು' ಎಂಬುದಾಗಿ ಹೇಳಿದರು.

'ಮಕ್ಕಳ ವಿದ್ಯಾಭ್ಯಾಸವನ್ನು ಅವರು ಮುಖ್ಯವಾಗಿ ಕೈಕೊಳ್ಳಬೇಕು. ಅಲ್ಲಲ್ಲಿ ಸ್ತ್ರೀಯರ ಸಮಾಜಗಳನ್ನು ಮಾಡಿಕೊಂಡು, ಚಿಕ್ಕಮಕ್ಕಳಿಗೆ ಪಾಠಶಾಲೆಗಳನ್ನು ಇಟ್ಟು ನಡೆಯಿಸಬೇಕು. ವಾಚನಶಾಲೆ, ಪುಸ್ತಕಭಂಡಾರ, ಸಣ್ಣ ಕೈಗಾರಿಕೆಯ ತರಗತಿಗಳು, ಆಗಿಂದಾಗ್ಗೆ ಆರೋಗ್ಯ ವಿಷ ಯಕ ಭಾಷಣಗಳು, ಮಕ್ಕಳಿಗೆ ತಕ್ಕ ವ್ಯಾಯಾಮಗಳು, ಸ್ತ್ರೀಯರುಗಳು ಆಗಿಂದಾಗ್ಗೆ ಸೇರಿ ವನಭೋಜನ ಮುಂತಾದ ವುಗಳನ್ನು ಮಾಡುವುದು, ಇವೆಲ್ಲ ಪ್ರಯೋಜನಕರವಾಗಿವೆ. ಸ್ತ್ರೀಯರು ಸಂಗೀತ-ಸಾಹಿತ್ಯಕ್ಕೂ ಗಮನಕೊಟ್ಟು, ಬಾಲಕಿ ಯರ ಪಾಠಶಾಲೆಗಳನ್ನು ಸ್ಥಾಪಿಸಿ ನಡೆಯಿಸಬೇಕು. ಇದಕ್ಕೆ ವಿದ್ಯಾವತಿಯರೂ ಧನವಂತರೂ ಸೇರಿ ಬಡತನದಲ್ಲಿ ಕಷ್ಟ ಪಡುವವರ ಸೇವೆಯನ್ನು ಮಾಡಬೇಕು.' ಎಂದು ಹೇಳಿ ಮುಗಿಸಿದರು. ಅವರ ಬೋಧನೆಯಿಂದ ಕನ್ನಡ ಮಹಿಳೆ ಯರು ಚೈತನ್ಯಪಡೆಯಲಿ; ತಮ್ಮ ತೇಜಸ್ಸು-ಓಜಸ್ಸುಗಳಿಂದ ಕನ್ನಡನಾಡು ಕಳೆಗೊಳ್ಳುವಂತೆ ಚಟುವಟಿಕೆಗಳನ್ನು ಹೂಡಲಿ.

## ಏಕೀಕರಣಕ್ಕೆ ಧುರೀಣರ ಬೆಂಬಲ

ಕರ್ನಾಟಕ ಏಕೀಕರಣಕ್ಕೆ ಜನತೆಯು ಅಭೇದ್ಯ ಐಕ ಮತ್ಯದ ಪುರಸ್ಕಾರವನ್ನಿತ್ತಿದೆ; ಗಣ್ಯಮುಖಂಡರೂ ಬೆಂಬಲ ಕೊಡುತ್ತಿದ್ದಾರೆ; ಆದರೆ ಅಧಿಕಾರಿವರ್ಗವು ಮಾತ್ರ ಅನ ಪೇಕ್ಷಿತ ಉಪೇಕ್ಷೆಯನ್ನು ತಾಳಿದುದರ ವಿಚಿತ್ರದೃಶ್ಯವು ತೋರುತಲಿತ್ತು. ಅದೂ ಈಚೆಗೆ ಕಡಿಮೆಯಾಗುತ್ತಿರು ವುದು ಸುದೈವದ ಸಂಗತಿ.

ಪಂಡಿತ ಜವಾಹರಲಾಲ ನೆಹರು ಅವರು 'ಭಾರತ ವರ್ಷೀಯ ರಾಷ್ಟ್ರೀಯ ಪ್ರಕಟನಾಸಮಿತಿ'ಯನ್ನು ಇಂದಿನ ಭಾರತೀಯ ಘಟನಾತ್ಮಕ ಮತ್ತು ರಾಷ್ಟ್ರೀಯ ಕೂಟ ಪ್ರಶ್ನೆಗಳ ಅಧಿಕೃತ ಊಹಾಪೋಹೆಯನ್ನುಳ್ಳ ಉದ್ಗ್ರಂಥ ಗಳ ಪ್ರಕಟನೆಗಾಗಿ ಸ್ಥಾಪಿಸಿದ್ದಾರೆ. ಅವರೂ, ನರೇಂದ್ರ ದೇವರೂ, ಪ್ರೊ. ಕೆ. ಟಿ. ಶಹಾ ಅವರೂ ಸಂಪಾದಕ ಮಂಡಲಿಯಲ್ಲಿದ್ದಾರೆ. 'ಸಂಯುಕ್ತ ರಾಜ್ಯಘಟನೆ' ಎಂಬ ಈಚಿಯ ಪ್ರಕಟನೆಯಲ್ಲಿ ಪ್ರಾಂತೀಯ ಪುನರ್ಘಟನೆ ಯನ್ನು ಸಂಪಾದಕತ್ರಯರು ಹೃತ್ಪೂರ್ವಕವಾಗಿ ಒಪ್ಪಿ ದ್ದಾರೆ. 'ಈಗಿನ ಪ್ರಾಂತಗಳು ಆಡಳಿತದ ಆಯಾ ಕಾಲದ ಅನುಕೂಲತೆಗಾಗಿ ಏರ್ಪಟ್ಟುದರಿಂದ, ತೀರಾ ದೊಡ್ಡವಾ ಗಿವೆ. ಇದು ಈಗಿನ ಕಾಲದ ಸಾಂಸ್ಕೃತಿಕ-ಭಾಷಾವಿಷ ಯಕ-ಆರ್ಥಿಕ ಇ. ಯಾವ ದೃಷ್ಟಿಯಿಂದಲೂ ಸಮರ್ಥ ನೀಯವಾಗಿಲ್ಲ. ಮುಂಬಯಿ-ಮದ್ರಾಸ ಪ್ರಾಂತಗಳು ತೀರಾ ಸ್ಥೂಲವಾದುದರಿಂದ ಭಾಷಾನುಗುಣವಾಗಿ ಒಡೆದು ಹಾಕು ವುದರಿಂದ ಹಿತವೆ ಆಗುವುದು.' ಎಂಬುದೆ ಅವರ ಹೇಳಿ ಕೆಯ ತಾತ್ಪರ್ಯ.

ಡಾ. ಪಟ್ಟಾಭಿರಾಮಯ್ಯನವರು ಭಾಷಾನುಗುಣ ಪ್ರಾಂತ ರಚನೆಯ ವಿಚಾರವನ್ನು ಮುಂಬಯಿಯಲ್ಲಿಯ ಒಂದು ಭಾಷಣದಲ್ಲಿ ಸೂಕ್ತವಾಗಿ ವಿವೇಚಿಸಿದ್ದಾರೆ; ಮತ್ತು ಕ.ಏ. ಸಂಘದ ಕಾರ್ಯಾಧ್ಯಕ್ಷರಾದ ಶ್ರೀ. ದಾತಾರ ಬಳವಂತ

CC-0. Jangamwadi Math Collection. Digitized by eGangotri

SRI JAGADGURU VI...
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 4833



ರಾಯರಿಗೆ ಬರೆದ ಪತ್ರದಲ್ಲಿ, ಆಂಧ್ರ-ಕರ್ನಾಟಕರು ಈ ಚಳವಳಿಯನ್ನು ಒಮ್ಮುಖವಾಗಿ ಸಾಗಿಸುವುದರ ಆಗತ್ಯವನ್ನು ಒಪ್ಪಿದ್ದಾರೆ. ಅವರ ಪ್ರೇರಣೆಯಿಂದ ೨೬-೧೧-೩೬ನೆಯ ದಿನ ಬೆಝುವಾಡದಲ್ಲಿ ಸೇರಿದ ಆಂಧ್ರಮಹಾಸಭೆಯು ಈ ಯೋಜನೆಗೆ ಸಂಪೂರ್ಣವಾದ ಒಪ್ಪಿಗೆಯನ್ನು ಕೊಟ್ಟಿದೆ.

ಶ್ರೀಯುತರಾದ ದಾತಾರ ಮತ್ತು ಹುಕ್ಕೇರಿಕರ ರಾಮರಾಯರು ಕಲ್ಕತ್ತೆಯ ಅ. ಇ. ಕಾ. ಕಮಿಟಿಯ ಕಾರ್ಯಕಲಾಪ ತೀರಿಸಿ ಉತ್ಕಲಕ್ಕೆ ಹೋದಾಗ, ಕೇಂದ್ರ ಶಾಸನ ಸಭೆಯ ಸದಸ್ಯರೂ ಉತ್ಕಲದ ಮುಖಂಡರೂ ಆದ ಶ್ರೀಮಾನ್ ಬಿ. ನೀಲಕಂಠದಾಸರವರು, ಅಸೆಂಬ್ಲಿಯಲ್ಲಿ ಈ ವಿಷಯದ ಚರ್ಚೆ ಬಂದಾಗ ತಾವು ತುಂಬಾ ಬೆಂಬಲ ಕೊಡುವುದಾಗಿ ಭರವಸೆಯಿತ್ತರು.

ಶ್ರೀ. ದಾತಾರರ ಕಾರ್ಯಾಧ್ಯಕ್ಷತೆಯಲ್ಲಿ ಏ. ಸಂಘದ ಕಾರ್ಯಕಲಾಪಗಳು ತತ್ಪರತೆಯಿಂದ ಸಾಗಿದುದು ಸಂತೋಷಕರ.


## ದಿ ತರುಣ ಅಶ್ಯುರನ್ಸ್ ಕಂಪನಿ ಲಿ., ಅಹಮ್ಮದಾಬಾದ

ನಮಲ್ಲಿ ಕುಟುಂಬಸಂರಕ್ಷಕ ಯೋಜನೆ, ಮಲ್ಟಿಪಲ್ ಬೆನಿಫಿಟ್ ಪ್ಲ್ಯಾನ್, ಫಿಕ್ಸ್ಡ್ ಬೋನಸ್ ಎಂಡೌಮೆಂಟ್, ಮಕ್ಕಳ ಸುಖಭವಿಷ್ಯದ ವಿಮೆ ಮೊದಲಾದ ಹಲವು ಲಾಭದಾಯಕ ಯೋಜನೆಗಳಿವೆ.

**ತರುಣ ಡಾಯಮಂಡ್ ಪಾಲಿಸಿ**ಯಿಂದ ಸ್ವಸಂರಕ್ಷಣೆ, ಪೆನ್ಶನ್ ಮತ್ತು ಸುರಕ್ಷಿತ ಠೇವುಗಳು ಸಿಗುವವು

**ತರುಣ ಬಾಂಡ್:** ಇದೊಂದು ಅದ್ಭುತ ಕಾಣಿಕೆ. ಬರಿ ರೂ. ೧೩೮೦ರಲ್ಲಿ ನಿಮ್ಮ ಮತ್ತು ನಿಮ್ಮ ಕುಟುಂಬದ ರಕ್ಷಣೆಯಾಗುವುದಲ್ಲದೆ, ದೈವವಿದ್ದರೆ **೨೫೦೦ ರೂ.** ಸಿಗುವ ಸಂಭವವಿದೆ.

☞ ೧೯೩೭ರ ಆಗಸ್ಟ್ ತಿಂಗಳಲ್ಲಿ ತರುಣಬಾಂಡುಗಳ ಬಹುಮಾನಗಳನ್ನು ಹಂಚುವ ೩ನೆಯ ಸಮಾರಂಭವು ಜರುಗಿದೆ.

ಕರ್ನಾಟಕದಲ್ಲೆಲ್ಲಾ ಕೆಲಸಮಾಡಲು ಏಜಂಟರು ಬೇಕು. ಕೆಳಗಿನ ವಿಳಾಸಗಳಿಗೆ ಬರೆಯಿರಿ:

ಬ್ರ್ಯಾಂಚ್ ಮ್ಯಾನೇಜರ್,
**ಎ. ಡಿ. ದೇಶಪಾಂಡೆ, ಮೇನ್ ರೋಡ್, ಸಾಂಗಲಿ**

ಧಾರವಾಡ ಜಿಲ್ಲೆಯ ಚೀಫ ಏಜಂಟರು:
**ಮೇಸರ್ಸ ಲೋಖಂಡೆ ಸಿದ್ದನಗೌಡರ ಮತ್ತು ಕಂಪನಿ, ಧಾರವಾಡ**

**ಎನ್. ಗುಡಿ**
ಚೀಫ್ ಏಜಂಟ, **ಹೈದರಾಬಾದ (ದ)**

ಬೆಳಗಾಂವಿ ಜಿಲ್ಲೆಯ ಅಸಿಸ್ಟಂಟ್ ಆರ್ಗನೈಜರ್:
**ಕೆ. ಎಸ್. ಪಾವಟೆ, ಬನಹಟ್ಟಿ** (ಜಿ: ಬೆಳಗಾವಿ)

**ಎಷ್ಟು ಹಳೆಯ ಉನ್ಮಾದರೋಗವಾದರೂ, ಎಷ್ಟೇ ಭಯಂಕರವಾಗಿದ್ದರೂ, ಖಂಡಿತ ಗುಣ** ಹೊಂದುವುದರಲ್ಲಿ ಸಂಶಯವೇ ಇಲ್ಲ. **ಒಂದೇ ಒಂದು ವಾರದಲ್ಲಿ** ಗುಣ ಕಂಡುಬರುವುದು. ಅಪಸ್ಮಾರ, ಹಿಸ್ಟೀರಿಯಾಗಳಿಗೂ ನಮ್ಮಲ್ಲಿ ಸಿದ್ಧೌಷಧಗಳಿವೆ. ೧ ವಾರದ ಔಷಧಕ್ಕೆ ಕ್ರಯ ರೂ. ೩--೮--೦.

## ಉನ್ಮಾದ(ಹುಚ್ಚು)ರೋಗಕ್ಕೆ ಅಪ್ರತಿಮ ಚಿಕಿತ್ಸೆ

**ಸ್ವಪ್ನೇಂದ್ರಿಯ ಸ್ತಂಭನ:**— ಎಲ್ಲ ವಿಧದ ವೀರ್ಯದೋಷ ಮೂತ್ರ ದೋಷಗಳಿಗೆ ಸಿದ್ಧೌಷಧ. ೨ ವಾರಗಳ ಔಷಧಕ್ಕೆ ರೂ. ೩.

ವಿ. ಸೂ. ನಮ್ಮ ಔಷಧದಲ್ಲಿ ಮಾದಕ ಅಥವಾ ವಿಷದ್ರವ್ಯಗಳು ಸೇರಿರುವವೆಂದು ರುಜುಪಡಿಸುವವರಿಗೆ ಮತ್ತು ನಮ್ಮ ಔಷಧಸೇವನೆಯಿಂದ ನಾವು ಹೇಳುವ ರೋಗಗಳು ಗುಣ ಹೊಂದುವದಿಲ್ಲವೆಂದು ಸಿದ್ಧಪಡಿಸುವವರಿಗೆ ರೂ. ೧೦೦ ಬಹುಮಾನ ಕೊಡುತ್ತೇವೆ.

ಕೆಟಲಾಗಿಗಾಗಿ ಬರೆಯಿರಿ. ಏಜಂಟರು ಬೇಕು.

**ಮೂಳ ನಾರಾಯಣಭಟ್ಟ, ಸಿದ್ಧೌಷಧ ಭವನ, ಪೋಸ್ಟು, ವಿಟ್ಲ (ದ. ಕನ್ನಡ.)**


CC-0. Jangamwadi Math Collection. Digitized by eGangotri

# ಹೂಬಿಸಿಲು

**( ಜಯಕರ್ನಾಟಕ ಗ್ರಂಥಮಾಲೆಯ ೨೨ನೆಯ ಪುಷ್ಪ )**

ಶ್ರೀ. ಬೆಳಗಾಂವಿ ರಾಮಚಂದ್ರರಾಯರ ಧರ್ಮಪತ್ನಿಯವರಾದ ಸೌ. ಶ್ಯಾಮಲೆಯವರ ೧೦ ಸೊಗಸಾದ-ವಿವಿಧ ರಸಭರಿತ ಕತೆಗಳು. ಶ್ರೀ ಆನಂದಕಂದರ ಅಧಿಕಾರಯುತ ಮುನ್ನುಡಿ. ಉತ್ತರ ಕರ್ನಾಟಕದ ಸಾಹಿತ್ಯಕ್ಷೇತ್ರದಲ್ಲಿ ಪ್ರಥಮ ಪದಾರ್ಪಣ ಮಾಡುತಲಿರುವ ಪ್ರಥಮ ಸ್ತ್ರೀಲೇಖಕರ ಪರಿಪಕ್ವ ಮನೋಜ್ಞ ಶೈಲಿಯ ಸರಸಕೃತಿ. ಸೊಗಸಾದ ಚಿತ್ರವುಳ್ಳ ಹೊದಿಕೆ.

> ಒಂದೆಡೆಯಲ್ಲಿಯೆ ಎಲ್ಲವುಗಳ ಸಂಗಮವನ್ನು ಕಾಣಲರಿಯಿರಿ; ಆದರೆ ಇಲ್ಲಿ ಕಾಣುವಿರಿ. ನಗೆಯ ಬುಗ್ಗೆ, ಅಳುವಿನ ಹೊನಲು, ಸಮಾಜದ ತಿರುವು-ಮುರುವು, ಸಹೃದಯ ವಿನೋದ, ವಿವಿಧ ಪಾತ್ರಚಿತ್ರಣ– ಇವುಗಳಲ್ಲಿ ಒಂದೊಂದರಿಂದಲೆ ಕತೆಗಾರಿಕೆಗೆ ಕಳೆಯೇರುವುದು; ಆದರೆ ಇಲ್ಲಿ ಅವುಗಳ ಸರಸ–ಸಮ್ಮಿಲನವನ್ನು ಅನುಭವಿಸುವಿರಿ. * * *

**'ಜಯಕರ್ನಾಟಕ' ದಲ್ಲಿ ಶ್ರೀಮಾನ್ ಎನ್. ಕೆ. ಕುಲಕರ್ಣಿ ಬಿ. ಎ. (ಆನರ್ಸ) ಇವರು ಈ ಕಥಾಸಂಗ್ರಹವನ್ನು ಕುರಿತು ಏನೆನ್ನುವರು?'**

"ಸೌ. ಶ್ಯಾಮಲೆಯವರ ಕಥಾಭೂಮಿಕೆಗಳೆಲ್ಲವೂ ಹೆಚ್ಚಾಗಿ ಹೆಂಗುಸಿನ ಅನುಭವಕ್ಕೆ ಮಾತ್ರ ಬಂದಿರಲು ಸಾಧ್ಯವೆನ್ನುವಂತೆ 'ನನ್ನನ್ನು ನೋಡಲಿಕ್ಕೆ ಬಂದಾಗ' 'ಮೂವರು ನಾಗರಿಕರು' 'ತಾಯಿ-ಮಾತಾಯಿ' ಮೊದಲಾದುವುಗಳಲ್ಲಿ ಸುಯ್ವೆತ್ತು ಕತೆಗಾರ್ತಿಯ ವ್ಯಕ್ತಿತ್ವವನ್ನು ಸ್ಫುಟಗೊಳಿಸುತ್ತವೆ....ಸಣ್ಣಕತೆಗೆ ಪ್ರಾಮುಖ್ಯವಾಗಿ ಬೇಕಾಗುವ 'ಹಿಡಿತ'ವು ಕತೆಗಾರ್ತಿಯರಲ್ಲಿದೆಯೆಂಬುದನ್ನು 'ತಾಯಿ-ಮಾತಾಯಿ'ಯಿಂದ ಕಂಡುಕೊಳ್ಳಬಹುದಾಗಿದೆ. ಕತೆಯ ಹಿಡಿತದೊಡನೆ ಕತೆಯ 'ಆವೇಗ (Intensity)'ವೂ ಒಂದಾಗಿ, 'ತಾಯಿ-ಮಾತಾಯಿ'ಯು ಉತ್ತಮ ಕತೆಗಾರಿಕೆಯ ದೃಷ್ಟಾಂತವೆನಿಸಿಕೊಳ್ಳಲು ಅರ್ಹವಾಗಿದೆ....ಮೊದಲು ವಾಚಕರನ್ನು ಬೆರಗುಗೊಳಿಸಿ ಕೊನೆಗೆ ಬೆರಗುಗೊಂಡ ಬಗೆಯನ್ನು ಹಾಸ್ಯದ ಬೆಳ್ಗೊಳದಲ್ಲಿ ಧುಮುಕಿಸಿಬಿಡುವ ಕೈಚಳಕವು 'ನನ್ನನ್ನು ನೋಡಲಿಕ್ಕೆ ಬಂದಾಗ' ಎಂಬುದರಲ್ಲಿ ಅನೂನವಾಗಿ ಬಂದಿದೆ.... ಪಾತ್ರರಚನೆಯಲ್ಲಿ ಸೌ. ಶ್ಯಾಮಲೆಯವರು ಜೀವನದಲ್ಲಿ ಒಳಹೊಕ್ಕು ನಿರ್ಮಿಸಿದ್ದಾರೆ. ಅಂತೆಯೆ 'ದಾಜೀಬಾ' ನಂತಹ ವ್ಯಕ್ತಿ ತನ್ನ ದುಶ್ಚಟಗಳಿಂದ ಅಕ್ಷಮ್ಯನಾಗಿದ್ದರೂ ತನ್ನ ಸ್ವಾಮಿಭಕ್ತಿ—ಪ್ರಾಮಾಣಿಕತೆಗಳಿಂದ ನಮ್ಮ ಪ್ರೀತಿಗೆ ಪಾತ್ರನಾಗಿಯೆ ಉಳಿಯುವುದು...ಸೌಭಾಗ್ಯವತಿ ಶ್ಯಾಮಲೆಯವರ ಕತೆಗಳಲ್ಲಿ ಅಲ್ಲಲ್ಲಿ ಬರುವ ಹಳ್ಳಿಗಳ ಮಾತುಗಾರಿಕೆ, ಚೊಕ್ಕಚೊಕ್ಕಾದ ಸಂಭಾಷಣೆಗಳು ಹೂಬಿಸಿಲಿನ ಸಪ್ತರಂಗದ ಕಿರಣಗಳಂತೆ ಅದರ ಅಂದವನ್ನು ಇನ್ನಿಷ್ಟು ಅರಳಿಸುವಂತಾಗಿವೆ."

**ಬೆಲೆ—೧೦ ಆಣೆ**

ಈಗಲೆ ಬರೆಯಿರಿ:—

## ಜಯಕರ್ನಾಟಕ ಕಾರ್ಯಾಲಯ, ಧಾರವಾಡ.

CC-0. Jangamwadi Math Collection. Digitized by eGangotri

ಉಪಯುಕ್ತವಾಗಿರುವುದಲ್ಲದೆ ಅಲಂಕಾರಗಳಾಗಿರುವ
ಆಹ್ಲಾದಕರ ಮಿನಿಯೇಚರಗಳು





ಮಿನಿಯೇಚರ "P"
೧೮ ಕ್ಯಾರಟ್ ಗಟ್ಟಿ ಬಂಗಾರ ... ರೂ. ೯೦



ಮಿನಿಯೇಚರ "R"
ವೆ.ಎ.ಪೇಟಂಟ ಎವ್ಹರಬ್ರಾಯಿಟ ಸ್ಟೀಲ ರೂ.೪೫
೧೮ ಕ್ಯಾರಟ್ ಗಟ್ಟಿ ಬಂಗಾರ .... ರೂ. ೯೦



ಮಿನಿಯೇಚರ "R-2"
ವೆ.ಎ.ಪೇಟಂಟ ಎವ್ಹರ ಬ್ರಾಯಿಟ ಸ್ಟೀಲ ರೂ. ೫೦
೧೮ ಕ್ಯಾರಟ್ ಗಟ್ಟಿ ಬಂಗಾರ .... ರೂ. ೧೦೫



ಮಿನಿಯೇಚರ "Q-2"
ವೆ.ಎ.ಪೇಟಂಟ ಎವ್ಹರ ಬ್ರಾಯಿಟ ಸ್ಟೀಲ ರೂ.೩೫
೧೮ ಕ್ಯಾರಟ್ ಗಟ್ಟಿ ಬಂಗಾರ .... ರೂ. ೧೩೫

ಅತ್ಯುತ್ತಮ ಕಾಣಿಕೆಗಳು

ನಮ್ಮ ದೊಡ್ಡ ಕ್ಯಾಟಲಾಗಿನಲ್ಲಿ
ಬೇಕಾದಷ್ಟು ಮಾದರಿಗಳಿವೆ.
ತರಿಸಿಕೊಳ್ಳಿರಿ.

WEST END WATCH Co
BOMBAY CALCUTTA

ವೆಸ್ಟ್ ಎಂಡ್ ವಾಚ್ ಕಂಪನಿ: ಮುಂಬಯಿ, ಕಲ್ಕತ್ತೆ

CC-0. Jangamwadi Math Collection. Digitized by eGangotri

